ಪದ್ಮಪುರಾಣಾಂತರ್ಗತ

# ಪ್ರಯಾಗ ಮಾಹಾತ್ಮ್ಯಮ್

ಅನುವಾದ ಮತ್ತು ವಿವರಣೆ

ಸರೋವರ ಭೀಮಸೇನಾಚಾರ್ಯ ಕೃಷ್ಣಮೂರ್ತಿ

‘ಹರಿಪ್ರಿಯಾ’, ನಂ. ೬೧, ಹೆಚ್.ಬಿ. ಸಮಾಜ ರಸ್ತೆ,
ಬಸವನಗುಡಿ, ಬೆಂಗಳೂರು-೫೬೦ ೦೦೪



## SHRI SAROVARA B. KRISHNAMURTHY:
### *A tribute*

All great religions see the creation as an indescribable moral order. But the religious view of evolution is in conflict with the mechanistic view of the scientist. The former discerns a purpose in evolution but the latter sees evolution as a mere causative factor.

This is an age of reason, of inquiry and irreverence. Global winds of iconoclasm are sweeping over all institutions. Scientist seeks his explanation of the phenomenal world within the range of his reasoning mind. But then, all the irresolvable issues of man's eternal spiritual quest lie outside the reach of the logical mind. They cannot be resolved by logic or by resort to argument. It is only intuition that perceives them.

The methods of knowledge in the classical school of Indian learning see the process as a crucible in which the rigour, intensity and heat of the search melt and fuse the seeker and the sought, the Art and the Artist, the path and the goal into one. Western science too is now increasingly preoccupied with the search of the one great fundamental unity that unites and explains all branches of knowledge.

The author of this work on the "Divine Glory of Prayag" in a sense symbolizes this combination of the modern and the classical. He was by education and training a textile engineer.

Contd....

**Padmapuranantargata Prayaga Mahatmyam:** The Secredness and Greatness of Theertharaj Prayag. Translated into Kannada with Explanation and Published by S.B. Krishnamurthy, Haripriyaa, No. 61, H.B. Samaja Road, Basavanagudi, Bangalore - 560 004. ✆ 080-6573937. Pages: 758, Dec. 2001.



**ಪ್ರಥಮ ಮುದ್ರಣ : ಡಿಸೆಂಬರ್ 2001**
**ಬೆಲೆ : ರೂ. 220-00**

**ಅಕ್ಷರ ಜೋಡಣೆ :**
**ಡಿ.ವಿ. ಪ್ರಹ್ಲಾದ್, ವಿನ್ಯಾಸ್ ಗ್ರಾಫಿಕ್ಸ್**
ನಂ.75/1, 4ನೇ ಮುಖ್ಯ ರಸ್ತೆ
ಎಸ್.ಆರ್. ಕಾಲೋನಿ, ಬೆಂಗಳೂರು-560 019
ಮತ್ತು
**ಹೆಚ್.ಎಸ್. ಅಚ್ಯುತ**

**ಮುಖಪುಟ ವಿನ್ಯಾಸ : ಟಿ.ಕೆ. ರಾವ್**

**ಮುಖಪುಟ ಮುದ್ರಣ:**
**ಓಂಕಾರ್ ಹೈ-ಪ್ರಿಂಟ್ಸ್**
ಟಾಟಾ ಸಿಲ್ಕ್ ಫಾರ್ಮ್, ಬಸವನಗುಡಿ
ಬೆಂಗಳೂರು - 560 004 ✆ 6766810

ಮುದ್ರಕರು :
**ಪ್ರಭಾ ಮುದ್ರಣಾಲಯ**
ನಂ.124, ಡಾ|| ಡಿ.ವಿ. ಗುಂಡಪ್ಪ ರಸ್ತೆ
ಬಸವನಗುಡಿ
ಬೆಂಗಳೂರು - 560 004

Sri Digvijayaramo Vijayate

Sri Uttaradi Math


Sri Sri Satyatma Teertha Swamiji
Srimad Jagadguru Madhvacharya
Moola Maha Samsthana
**Sri Uttaradimath**
5th Cross, Shankarapuram,
Bangalore - 560 004
Ph.: 6678726/6529132





ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಶ್ರೀಮದ್ ಜಗದ್ಗುರು ಮಧ್ವಾಚಾರ್ಯ
ಮೂಲಮಹಾಸಂಸ್ಥಾನ,
**ಶ್ರೀ ಉತ್ತರಾದಿಮಠ,**
5ನೇ ಅಡ್ಡ ರಸ್ತೆ, ಶಂಕರಪುರಂ,
ಬೆಂಗಳೂರು - 560 004
ದೂರವಾಣಿ : 6678726/6529132


**ಶ್ರೀ ಉತ್ತರಾದಿಮಠ**

೩೧-೬-೨೦೦೧

# ಅನುಗ್ರಹ ಸಂದೇಶ

ನಿತ್ಯದಲ್ಲಿ ಸ್ನಾನಗೈಯುವಾಗ "प्रयागः प्रयागः प्रयागः" ಎಂದು ಪ್ರಯಾಗದ ಸ್ಮರಣೆ ಮಾಡುವದುಂಟು. ''प्रयाग'' ಅಂದರೆ ಪ್ರಕೃಷ್ಟವಾದ ಸಂಗಮ. ಗಂಗಾ ಯಮುನಾ ಸರಸ್ವತೀಗಳ ಸಂಗಮದ ಪವಿತ್ರ ಕ್ಷೇತ್ರವಿದು. ಸ್ಮರಣೆ ಮಾತ್ರದಿಂದ ಪಾಪ ಕಳೆಯುವ ಶಕ್ತಿ ಈ ಸಂಗಮಕ್ಕಿದೆ ಅಂದಮೇಲೆ ಆದರ ವಿಶೇಷ ಮಹಾತ್ಮ್ಯವನ್ನು ತಿಳಿದರೆ ಇನ್ನೆಷ್ಟು ಫಲ ಬರಬಹುದು ಅಂತ ಊಹಿಸಬಹುದು. ''ಪದ್ಮಪುರಾಣಾಂತರ್ಗತ ಪ್ರಯಾಗ ಮಾಹಾತ್ಮ್ಯ'' ಶೇಷ ದೇವರು ಸನಕಾದಿಗಳಿಗೆ ಉಪದೇಶ ಮಾಡಿದ್ದು. ನಾರಾಯಣನ ಪಾದಜಲದ ಮಹಿಮೆಯನ್ನು ನಾರಾಯಣನ ಅವತಾರವಾದ ವ್ಯಾಸರ ವಾಣಿಯಿಂದ ತಿಳಿದರೆ ಅದಕ್ಕೆ ಬೆಲೆ ಕಟ್ಟಬಹುದೆ? ಇಂತಹ ಅಪರೂಪದ ಕೃತಿಯನ್ನು ನಮ್ಮ ಪರಮ ಪ್ರಿಯ ಶಿಷ್ಯರಾದ ಶ್ರೀ ಸರೋವರ ಭೀಮಸೇನಾಚಾರ್ಯ ಕೃಷ್ಣಮೂರ್ತಿ ಅವರು ಕನ್ನಡದಲ್ಲಿ ಅನುವಾದ ಮಾಡಿದ್ದಾರೆ. ಬಹಳ ಪರಿಶ್ರಮದಿಂದ ಇಳಿವಯಸ್ಸಿನಲ್ಲಿ ಈ ಕಾರ್ಯವನ್ನು ಮಾಡಿದ್ದು ತುಂಬಾ ಶ್ಲಾಘನೀಯವಾಗಿದೆ. ದೇವರು ಇದೇ ರೀತಿ ಇವರಿಂದ ಸೇವೆಯನ್ನು ತೆಗೆದುಕೊಳ್ಳಲಿ ಎಂದು ನಮ್ಮ ಉಪಾಸ್ಯಮೂರ್ತಿ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತೇವೆ.



ಶ್ರೀ ಮೂಲರಾಮ ದಿಗ್ವಿಜಯರಾಮ ಪೂಜಾನಿರತ
ಶ್ರೀ ಉತ್ತರಾದಿಮಠ ಸಂಸ್ಥಾನಾಧೀಶರಾದ
**ಶ್ರೀ ಶ್ರೀ ಸತ್ಯಾತ್ಮ ತೀರ್ಥ ಶ್ರೀಪಾದಂಗಳವರು**

|| ಹರಿಃ ಓಂ ||

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ||
|| ಶ್ರೀವೇಣೀಮಾಧವಾಯ ನಮಃ || || ಶ್ರೀಲಕ್ಷ್ಮೀನೃಸಿಂಹಾಯ ನಮಃ ||
|| ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋ ನಮಃ ||
|| ಮಾತೃಪಿತೃಗುರುಭ್ಯೋ ನಮಃ ||



ನನ್ನ ಸಜ್ಜೀವನಕ್ಕೆ ಬೆಳಕಾದ

ಮೈಸೂರು ಅರಮನೆ ಆಸ್ಥಾನ ವಿದ್ವಾಂಸರಾದ

ನನ್ನ ತಂದೆ

ಶ್ರೀ ಸರೋವರ ಭೀಮಸೇನಾಚಾರ್ಯ ಅವರಿಗೆ

ಈ ಕೃತಿಯು ಸಮರ್ಪಿತ



ಮಹಾಕುಂಭಮೇಳ-೨೦೦೧. ಭಕ್ತಾದಿಗಳು ಪ್ರಯಾಗದ ಪವಿತ್ರ ಸಂಗಮದಲ್ಲಿ ಮೀಯುತ್ತಿರುವ ಒಂದು ದೃಶ್ಯ.

ಕೃಪೆ: ಟೈಮ್ಸ್ ಆಫ್ ಇಂಡಿಯಾ

# ಮುನ್ನುಡಿ

ಭಾರತ ದೇಶವು ತೀರ್ಥಕ್ಷೇತ್ರಗಳ ಪುಣ್ಯಭೂಮಿಯಾಗಿದೆ. ಸಾಧಕರಿಗೆ ಉತ್ತಮವಾದ ಸಾಧನಭೂಮಿಯಾಗಿದೆ. ಮುಕುಂದನ ಸೇವೆಗೆ ಉಪಯೋಗವಾಗುವಂಥ ಜನ್ಮವನ್ನೂ ಈ ಭಾರತದೇಶದಲ್ಲಿ ಪಡೆದವರು ಅದೆಷ್ಟು ಪುಣ್ಯಶಾಲಿಗಳು ಎಂದು ಭಾಗವತದಲ್ಲಿ ಉದ್ಗಾರ ತೆಗೆಯಲಾಗಿದೆ. ಇದೂ ಅಲ್ಲದೆ, ಒಂದು ಕಲ್ಪದಷ್ಟು ಆಯುಷ್ಯವಿರಬಹುದಾದ ಸ್ವರ್ಗಲೋಕದಲ್ಲಿ ಜನ್ಮ ಪಡೆಯುವುದಕ್ಕಿಂತ, ಕಲ್ಪದ ಪರಿಮಾಣದ ತುಲನೆಯಲ್ಲಿ, ಕೇವಲ ಕ್ಷಣ ಮಾತ್ರದಷ್ಟು ಆಯುಃ ಪ್ರಮಾಣವಿರುವ ಭಾರತ ದೇಶದಲ್ಲಿ ಜನ್ಮ ಪಡೆಯುವುದೇ ಲೇಸಾಗಿದೆ. ಏಕೆಂದರೆ ಭಾರತ ಭೂಮಿಯಲ್ಲಿದ್ದುಕೊಂಡು, ಕ್ಷಣ ಕಾಲ ಮಾತ್ರವಾದರೂ ಪರಮಾತ್ಮನಲ್ಲಿ ಶರಣಾಗತರಾಗಿ ಅವನನ್ನು ಧ್ಯಾನ ಮಾಡಿದರೆ, ಪರಮಾತ್ಮನ ಸಾನ್ನಿಧ್ಯರೂಪವಾದ ಮುಕ್ತಿಯನ್ನೂ ಅವಶ್ಯವಾಗಿ ಪಡೆಯುವುದು ಸಾಧ್ಯವಿದೆ ಎಂದು ಭಾಗವತಾಚಾರ್ಯರು ಘೋಷಿಸುತ್ತಾರೆ.

> ಕಲ್ಪಾಯುಷಾಂ ಸ್ಥಾನಜಯಾತ್ ಪುನರ್ಭವಾತ್
> ಕ್ಷಣಾಯುಷಾಂ ಭಾರತಭೂಜಯೋ ವರಃ।
> ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ
> ಸಂನ್ಯಸ್ಯ ಸಂಯಾತ್ಯಭಯಂ ಪದಂ ಹರೇಃ ॥ (ಭಾ. ೫-೧೯-೨೩)

ಇಂಥ ಭಾರತ ಭೂಮಿಯಲ್ಲಿ ಸಮಗ್ರ ಜ್ಞಾನ ಭಂಡಾರವಾಗಿರುವ ವೇದರಾಶಿಯ ಆವಿಷ್ಕಾರವಾಗಿದೆ. ಪರಮಾತ್ಮನೇ ವೇದವ್ಯಾಸದೇವರ ರೂಪದಲ್ಲಿ ಅವತಾರ ಮಾಡಿ ಸಾಧಕರ ಅನುಕೂಲತೆಗಾಗಿ ಅನಂತವಾಗಿರುವ ವೇದರಾಶಿಯನ್ನು ವಿಭಜನೆ ಮಾಡಿ, ವೇದಾರ್ಥ ನಿರ್ಣಾಯಕವಾಗಿರುವ ಬ್ರಹ್ಮಸೂತ್ರಗಳನ್ನು ರಚಿಸಿ, ಸಾತ್ವಿಕ ರಾಜಸ ತಾಮಸ ಜೀವಗಣಕ್ಕೆ ಅವರವರ ಸ್ವರೂಪಯೋಗ್ಯತೆಗೆ ತಕ್ಕಂತೆ ಸಾಧನೆಗೆ ಅನುಕೂಲವಾಗುವುದಕ್ಕಾಗಿ ಹದಿನೆಂಟು ಪುರಾಣಗಳನ್ನೂ ಗ್ರಥಿಸಿ ಮಾನವ ಜನಾಂಗಕ್ಕೆ ಮಹದುಪಕಾರ ಮಾಡಿದ್ದಾನೆ. ಅನೇಕ ಋಷಿಮುನಿಗಳು ಹಾಗೂ ಸಂಪ್ರದಾಯ ಪ್ರವರ್ತಕರಾದ ಆಚಾರ್ಯರುಗಳು ಜನಿಸಿ, ಆತ್ಮೋದ್ಧಾರ ಸಾಧನ ಮಾರ್ಗಕ್ಕೆ ದಾರಿದೀಪಗಳನ್ನೂ ಬೆಳಗಿಸಿ ಪ್ರಕಾಶವನ್ನೂ ಚೆಲ್ಲಿದ್ದಾರೆ. ಆತ್ಮೋದ್ಧಾರ ಸಾಧನೆಯ ಸ್ವರೂಪವೇನು ಎಂಬ ಪ್ರಶ್ನೆಯು ಅನೇಕ ಚಿಂತಕರ ಗಮನವನ್ನೂ ಸೆಳೆದಿದೆ. ಸಾಧನೆಯ ಅವಶ್ಯಕತೆ ಹಾಗೂ ಸಾಧನೆಯ ಸ್ವರೂಪವನ್ನೂ ತಿಳಿಸುವುದಕ್ಕಾಗಿ ಚತುರಧ್ಯಾಯಾತ್ಮಕವಾದ ಬ್ರಹ್ಮಸೂತ್ರಗಳಲ್ಲಿ ತೃತೀಯಾಧ್ಯಾಯವು ಸಾಧನಾಧ್ಯಾಯವೆಂದೇ ಪ್ರಥಿತವಾಗಿದೆ. ''ಭೂತಬಂಧಸ್ತು ಸಂಸಾರಃ ಮುಕ್ತಿಸ್ತೇಭ್ಯೋ ವಿಮೋಚನಂ'' ಎಂಬ ವರಾಹ ಪುರಾಣದ ವಚನವನ್ನೂ, ''ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಮ್ । ಭೂತಾನಾಂ ಸಂಪ್ರಯೋಗಶ್ಚ ಜನಿರಿತ್ಯೇವ ಪಂಡಿತೈಃ'' ಎಂಬ ಮಹಾಭಾರತದ ವಾಕ್ಯವನ್ನೂ ಜೋಡಿಸಿ ನೋಡಿದರೆ ಭೂತಬಂಧ ರೂಪವಾದ ಸಂಸಾರದಿಂದ ಮೋಚನೆಯು, ಭೂತ ಸಂಬಂಧದ ವಿನಿವೃತ್ತಿ ರೂಪವಾದ ಮರಣದಿಂದ ತಾನಾಗಿಯೇ ಆಗಿಬಿಡುವಾಗ, ಸಂಸಾರಬಂಧದ ನಿವೃತ್ತಿ ರೂಪವಾದ ಮುಕ್ತಿಗಾಗಿ ಸಾಧನೆಯನ್ನೂ ಏಕೆ ಮಾಡಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅದಕ್ಕೆ

ಉತ್ತರರೂಪವಾಗಿ ''ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ ಓಂ'', ಎಂದು ಸಾಧನಾಧ್ಯಾಯದ ಪ್ರಥಮ ಸೂತ್ರವು ಪ್ರವೃತ್ತವಾಗಿದೆ. ಪ್ರವಾಹಣರಾಜಾ ಹಾಗೂ ಶ್ವೇತಕೇತುವಿನ ಪ್ರಶ್ನೋತ್ತರದ ರೂಪದಲ್ಲಿ ಛಾಂದೋಗ್ಯ ಉಪನಿಷತ್ತಿನಲ್ಲಿ ಪ್ರಸಕ್ತವಾಗಿರುವ ವಿಷಯಗಳನ್ನೂ ಸಂಗ್ರಹಿಸಿ, ಮರಣವಾದಾಗಲೂ ಕೂಡ ಪಂಚಮಹಾಭೂತಗಳು ಒಂದು ಅಂಶದಿಂದ ಸಂಸ್ಕಾರರೂಪದಲ್ಲಿ ಜೀವನಿಗೆ ಅಂಟಿಕೊಂಡೇ ಒಂದು ಲೋಕದಿಂದ ಇನ್ನೊಂದು ಲೋಕಕ್ಕೆ ಸಂಚಾರಮಾಡಿ, ಮುಂದಿನ ಜನ್ಮದಲ್ಲಿಯೂ ಪೂರ್ವಜನ್ಮ ಸಂಸ್ಕಾರ ರೂಪದಲ್ಲಿ ಜೊತೆಗೇ ಬದ್ಧವಾಗಿ ಇರುತ್ತವೆ. ಈ ಬಂಧವನ್ನು ಸಂಪೂರ್ಣವಾಗಿ ಕಳಚಿಕೊಂಡು ಚೇತನನು ತನ್ನ ಮೂಲಸ್ವರೂಪದಲ್ಲಿ ಇರುವಿಕೆ (ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ) ಎಂಬ ಮೋಕ್ಷವನ್ನೂ ಪಡೆಯಲು ಸಾಧನೆಯನ್ನು ಮಾಡಲೇಬೇಕೆಂದು ಪ್ರಸ್ತಾಪಿಸಿ, ಸಾಧನೆಯ ಸ್ವರೂಪವನ್ನು ಸಮಗ್ರ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಪ್ರಥಮ ಪಾದದಲ್ಲಿ ವೈರಾಗ್ಯದ ಮಹತ್ವವನ್ನು ವಿವರಿಸಿ, ನಿವೃತ್ತ ಕರ್ಮಾನುಷ್ಠಾನದ ಅವಶ್ಯಕತೆಯನ್ನು ಪ್ರತಿಪಾದಿಸಿ, ಮುಂದಿನ ಪಾದಗಳಲ್ಲಿ ಭಗವದ್‌ಭಕ್ತಿ, ಉಪಾಸನೆ, ಜ್ಞಾನೋಪಾಯ, ಶ್ರವಣ, ಮನನ, ನಿದಿಧ್ಯಾಸನ, ಇತ್ಯಾದಿ ಸಾಧನ ಮಾರ್ಗದ ಅಂಗಗಳನ್ನು ವಿವರಿಸಲಾಗಿದೆ. ''ಓಂ ಅಂಬುವದಗ್ರಹಣಾತ್ತು ನ ತಥಾತ್ವಮ್ ಓಂ'' ಎಂಬ ಸೂತ್ರದಲ್ಲಿ ಬಹಳ ಮಾರ್ಮಿಕವಾದ ರೀತಿಯಲ್ಲಿ, ಸ್ನೇಹವಿಶಿಷ್ಟವಾದ ಅಂದರೆ ಭಕ್ತಿ ವಿಶಿಷ್ಟವಾದ ಜ್ಞಾನವಿಲ್ಲದಿದ್ದರೆ ಪರಮಾತ್ಮನ ಸಾನ್ನಿಧ್ಯ, ಸಾಯುಜ್ಯ, ಸಾಲೋಕ್ಯರೂಪವಾದ ಮೋಕ್ಷವು ದೊರೆಯಲಾರದು ಎಂದು ಸ್ಪಷ್ಟಪಡಿಸಲಾಗಿದೆ.

ಮಾನವನಿಗೆ ಸಾಧನಮಾರ್ಗದಲ್ಲಿ ಪ್ರವೃತ್ತಿಯುಂಟಾಗಬೇಕಾದರೆ ತ್ರಿಕರಣ ಶುದ್ಧಿಯು ಆವಶ್ಯಕವಾಗಿ ಬೇಕು. ತ್ರಿಕರಣಶುದ್ಧಿಗಾಗಿ, ಪುಣ್ಯತೀರ್ಥ ಕ್ಷೇತ್ರಗಳಲ್ಲಿ ಸಂಚಾರ, ಅಲ್ಲಿ ಉಪಲಬ್ಧವಿರುವ ದೇವಾಧಿದೇವತೆಗಳ ವಿಶೇಷ ಸನ್ನಿಧಿಯ ದರ್ಶನ ಮಾಡಿಕೊಂಡು, ಅಲ್ಲಿ ಯಾತ್ರಾರ್ಥಿಗಳಾಗಿ ಬಂದಿರುವ ಹಾಗೂ ಪುಣ್ಯ ಕ್ಷೇತ್ರದಲ್ಲಿಯೇ ವಾಸವಾಗಿರುವ ಸುಜೀವಿಗಳ ಸಂಗದಲ್ಲಿ, ಪರಮಾತ್ಮನ ಗುಣಗಾನ ಮಾಡುವುದು, ಪಂಡಿತರ ಉಪನ್ಯಾಸಗಳಿಂದ ಜ್ಞಾನಾರ್ಜನೆಯನ್ನು ಮಾಡುವುದು ಇತ್ಯಾದಿ ಕಾರ್ಯಗಳಲ್ಲಿ ಸಾಧಕನು ರತನಾಗಿರಬೇಕು. ಭಾರತ ದೇಶದಲ್ಲಿ ಸಾಧನ ಮಾರ್ಗಕ್ಕೆ ಉಪಕಾರಕವಾಗಿರುವ ಅನೇಕಾನೇಕ ತೀರ್ಥ ಕ್ಷೇತ್ರಗಳು ಉಪಸ್ಥಿತವಾಗಿವೆ. ಈ ಪುಣ್ಯ ಕ್ಷೇತ್ರಗಳ ಮಾಹಾತ್ಮ್ಯೆಯು, ಹಾಗೂ ಅವುಗಳಲ್ಲಿ ಆಚರಿಸಲ್ಪಡಬೇಕಾದ ವ್ರತನಿಯಮಾದಿಗಳ ವಿವರಣೆ, ಇಂಥ ಕರ್ಮಾಚರಣೆಯಿಂದ ಲಭಿಸಬೇಕಾಗಿದ್ದ ಫಲಗಳ ಬೋಧನೆ ಇತ್ಯಾದಿ ವಿಷಯಗಳು ಅನೇಕ ಪುರಾಣಗಳಲ್ಲಿ ಉಪಲಬ್ಧವಾಗಿವೆ. ಸ್ಕಾಂದಪುರಾಣದಲ್ಲಿರುವ ಕಾಶೀಖಂಡ, ಶ್ರೀವಾಯುಪುರಾಣದಲ್ಲಿರುವ ಗಯಾಮಾಹಾತ್ಮ್ಯ, ಸ್ಕಾಂದ ಪುರಾಣದಲ್ಲಿಯ ಬದರಿಕಾಶ್ರಮಮಾಹಾತ್ಮ್ಯ, ಭವಿಷ್ಯೋತ್ತರ ಪುರಾಣದಲ್ಲಿರುವ ವೆಂಕಟೇಶಮಾಹಾತ್ಮ್ಯ, ಇವೆಲ್ಲವೂ ತೀರ್ಥ ಕ್ಷೇತ್ರಗಳ ಮಾಹಾತ್ಮ್ಯೆಗೆ ಪ್ರಮಾಣಗಳಾಗಿವೆ.

ಪ್ರಯಾಗಕ್ಷೇತ್ರದ ಮಾಹಾತ್ಮ್ಯೆಗೆ ಪದ್ಮಪುರಾಣದ ಪಾತಾಳಖಂಡದಲ್ಲಿ ಪ್ರಯಾಗ ಮಾಹಾತ್ಮ್ಯ ಎಂಬ ಭಾಗವು ಪ್ರಮಾಣವಾಗಿ ಉಪಲಬ್ಧವಾಗಿರುವುದು ಸಂತೋಷದ

ವಿಷಯವಾಗಿದೆ. ಇದುವರೆಗೆ ಸರಳವಾಗಿ ಉಪಲಬ್ಧವಾಗದಿದ್ದಂಥ ಈ ಗ್ರಂಥವನ್ನು ಸಂಶೋಧಿಸಿ, ವಿಮರ್ಶಿಸಿ, ಕನ್ನಡದಲ್ಲಿ ಭಾಷಾಂತರಿಸಿ, ಜನಸಾಮಾನ್ಯರಿಗೆ ಉಪಲಬ್ಧವಾಗುವಂತೆ ಮಾಡಿರುವ ಶ್ರೀ ಸರೋವರ ಬಿ.ಕೃಷ್ಣಮೂರ್ತಿ ಅವರು ನಿಜವಾಗಿಯೂ ಅಭಿನಂದನಾರ್ಹರು.

ಒಂದು ನೂರು ಅಧ್ಯಾಯಗಳು ಹಾಗೂ ಐದು ಸಾವಿರ ಶ್ಲೋಕಗಳಿಂದ ಸಮೃದ್ಧವಾದ ಈ ಬೃಹದಾಕಾರದ ಗ್ರಂಥವನ್ನು ಶೋಧಿಸಿ ಶುದ್ಧಪ್ರತಿಯನ್ನು ತಯಾರಿಸಿ, ಭಾಷಾಂತರಿಸುವುದಲ್ಲದೆ, ಅವಶ್ಯವಿದ್ದಲ್ಲಿ ವಿಶೇಷ ವಿವರಣೆಗಳನ್ನು ಕೊಟ್ಟು, ಮುದ್ರಣ ಮಾಡುವುದು ಸಾಮಾನ್ಯವಾದ ಕೆಲಸವೇನಲ್ಲ; ಪ್ರಯಾಗಕ್ಷೇತ್ರದಲ್ಲಿ ಒಂದು ದೊಡ್ಡ ರಾಜಸೂಯಯಾಗ ಮಾಡುವಷ್ಟು ಪರಿಶ್ರಮದ್ದಾಗಿದೆ ಎಂದು ಹೇಳಬಹುದು. ಇಂಥ ಮಹತ್ ಕಾರ್ಯವು ರಾಜಸೂಯಯಾಗದಷ್ಟೇ ಪುಣ್ಯಕರವೂ, ಅಭಿವೃದ್ಧಿಪರವೂ ಆಗಿದೆ ಎಂದೂ ಹೇಳಬಹುದು. ಶ್ರೀವಾದಿರಾಜಸ್ವಾಮಿಗಳು ತಮ್ಮ ತೀರ್ಥಪ್ರಬಂಧದ ಉತ್ತರ ಪ್ರಬಂಧದಲ್ಲಿ ಪ್ರಯಾಗಮಾಧವನ ವಿಶಿಷ್ಟ ಮಹಿಮೆಯನ್ನು ಹೀಗೆ ಪ್ರಶಂಸಿಸುತ್ತಾರೆ.

ಪ್ರಯಾಗ ಮಾಧವೋ ಭೂಯಾದ್ದಯಾವಾರಿನಿಧಿರ್ಹೃದಿ ।
ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ ಸಂಸ್ಮೃತಿಃ ॥

ಇದುವರೆಗೆ ಪ್ರಕಟಿತವಾದ ಪದ್ಮಪುರಾಣದ ಗ್ರಂಥಗಳಲ್ಲಿ ಪಾತಾಳಖಂಡ ಎಂಬ ಭಾಗವಿದ್ದರೂ, ಅದರಲ್ಲಿ ಈಗ ಪ್ರಕಟಿತವಾಗುತ್ತಿರುವ ''ಪ್ರಯಾಗ ಮಾಹಾತ್ಮ್ಯ'' ಭಾಗವು ಉಪಲಬ್ಧವಿಲ್ಲ. ಈ ಕಾರಣದಿಂದಾಗಿ ಪ್ರಕೃತಗ್ರಂಥದ ಪ್ರಾಮಾಣ್ಯದ ಬಗ್ಗೆ ಶಂಕೆ ಬರಬಹುದು. ಆದರೆ ಹಾಗೆ ಶಂಕಿಸುವುದು ಅವಶ್ಯವಿಲ್ಲವೆಂದು ತೋರುತ್ತದೆ. ಏಕೆಂದರೆ, ಕಾಲಾಂತರದಿಂದ, ಪುರಾಣಾಂತರ್ಗತವಾದ ಅನೇಕ ಭಾಗಗಳು ಪುರಾಣಗಳಿಂದ ಬೇರ್ಪಡಿಸಲ್ಪಟ್ಟು, ಪರಂಪರಾಗತವಾದ ಪಂಡಿತರ ಮಧ್ಯದಲ್ಲಿ ಉಪಾದೇಯವಾಗಿ ಮಾನ್ಯವಾಗಿ ರೂಢಿಯಲ್ಲಿ ಬಂದಿರುವ ಅನೇಕ ನಿದರ್ಶನಗಳಿವೆ. ಪ್ರಸ್ತುತವಾದ ಪ್ರಯಾಗಮಹಾತ್ಮ್ಯ ಗ್ರಂಥವೂ ಈ ರೀತಿಯಲ್ಲಿ ರೂಢಿಯಲ್ಲಿ ಬಂದಿರುವ ಗ್ರಂಥಗಳಲ್ಲಿ ಒಂದಾಗಿದ್ದು ಪ್ರಾಮಾಣಿಕವಾಗಿಯೇ ತಿಳಿಯಬೇಕು.

ಪ್ರಯಾಗಮಾಹಾತ್ಮ್ಯ ಗ್ರಂಥದಲ್ಲಿ ಪ್ರಯಾಗಕ್ಷೇತ್ರದಲ್ಲಿರುವ ಅನೇಕಾನೇಕ ತೀರ್ಥಗಳ, ಮಂದಿರಗಳ, ಅಲ್ಲಿ ಸನ್ನಿಹಿತವಾಗಿರುವ ದೇವತೆಗಳು ಪ್ರಯಾಗಮಾಧವನ ಹಾಗೂ ಅಲ್ಲಿಯ ವಟವೃಕ್ಷದ ಮಹಿಮಾವಿಶೇಷಗಳನ್ನು ವರ್ಣಿಸುತ್ತ, ಈ ಕ್ಷೇತ್ರದಲ್ಲಿ ಆಚರಿಸಬೇಕಾದ ವ್ರತನಿಯಮಗಳು, ಅವುಗಳ ವಿಧಾನ, ಅವುಗಳ ಫಲ, ಇವುಗಳನ್ನೆಲ್ಲ ಬಹಳ ಮಾರ್ಮಿಕವಾದ ಶೈಲಿಯಲ್ಲಿ ವಿವರಿಸಲಾಗಿದೆ. ಪ್ರಯಾಗಕ್ಷೇತ್ರವು, ಇಲ್ಲಿಯ ತ್ರಿವೇಣಿ ಸಂಗಮವು, ಎಲ್ಲ ತೀರ್ಥಕ್ಷೇತ್ರಗಳಿಗಿಂತ ಉತ್ತಮೋತ್ತಮವಾಗಿದ್ದು ಅವುಗಳಿಗೆ ರಾಜಸ್ಥಾನದಲ್ಲಿದೆ ಎಂದು ಪ್ರಾರಂಭದಲ್ಲಿಯೇ ಪ್ರತಿಪಾದಿಸಲಾಗಿದೆ. ಸಮಗ್ರ ಪ್ರಯಾಗಕ್ಷೇತ್ರದ ಭೂಮಿಯು ಒಂದು ಯಜ್ಞವೇದಿಕೆಯಂತೆ ಪುಣ್ಯಕರವೂ, ಗಂಭೀರವೂ ಆಗಿದೆ ಎಂದು ಹೇಳಲಾಗಿದೆ.

ಶೃಣುಧ್ವಂ ಮುನಯಃ ಸರ್ವೇ ತಸ್ಯ ಕ್ಷೇತ್ರಸ್ಯ ಭೂಮಿಕಾಃ ।
ವೇದೀರೂಪಾ ಮಹಾಪುಣ್ಯಾಃ ಕಲ್ಪಿತಾರ್ಥವಿಧಾಯಕಾಃ ॥ (೮-೨)

ಪ್ರಯಾಗಮಾಧವನ ವರ್ಣನೆಯು ಅದೆಷ್ಟು ಸುಂದರವಾಗಿದೆಯೆಂದರೆ ಅದನ್ನು ಓದಿದರೆ ಪ್ರಯಾಗಮಾಧವನೇ ಪ್ರತ್ಯಕ್ಷವಾಗಿ ಕಣ್ಣೆದುರು ಬಂದು ನಿಂತಂತೆ ಭಾಸವಾಗುತ್ತದೆ. ಈ ಕ್ಷೇತ್ರದ ಸುತ್ತಲೂ ದಿಕ್‌ಪಾಲಕರು ಶೋಭಿಸುತ್ತಾರೆ. ಇಲ್ಲಿಯ ವಾಸ, ತ್ರಿವೇಣೀ ಸ್ನಾನ, ಇಲ್ಲಿ ಮಾಡುವ ದಾನ, ವ್ರತ, ಉದ್ಯಾಪನೆ, ಹೋಮ, ಶ್ರಾದ್ಧಕರ್ಮ, ಆಚರಿಸಬೇಕಾದ ಯಮನಿಯಮಗಳು, ಇವೆಲ್ಲವುಗಳನ್ನು ಬಹಳ ಸರಳ ಭಾಷೆಯಲ್ಲಿ ವಿವರಿಸಲಾಗಿದೆ. ಅನೇಕ ಪೌರಾಣಿಕ ಕಥೆಗಳನ್ನು ಉಲ್ಲೇಖಿಸಿ, ಇಲ್ಲಿ ಪ್ರತಿಪಾದಿತವಾದ ವಿಧಿವಿಧಾನಗಳ ಔಚಿತ್ಯವನ್ನು ಸಮರ್ಥಿಸಲಾಗಿದೆ.

ಸಾಮಾನ್ಯವಾಗಿ ಎಲ್ಲ ಶ್ಲೋಕಗಳು ಅನುಷ್ಟುಪ್ ವೃತ್ತದಲ್ಲಿದ್ದು ಸರಳ ಭಾಷೆಯಲ್ಲಿ ಬರೆಯಲ್ಪಟ್ಟಿವೆ. ಮೂಲಗ್ರಂಥದಲ್ಲಿಯ ಸರಿಯಾದ ಅರ್ಥವನ್ನೂ, ಅವುಗಳಲ್ಲಿ ಅಡಕವಾಗಿರುವ ವಿಶೇಷ ವಿಷಯಗಳನ್ನೂ, ಶ್ರೀ ಸರೋವರ ಕೃಷ್ಣಮೂರ್ತಿಯವರು ತಮ್ಮ ಕನ್ನಡ ಭಾಷಾಂತರದಲ್ಲಿ ಬಹಳ ಹೃದಯಂಗಮವಾದ ಸರಳ ಶೈಲಿಯಲ್ಲಿ ವಿವರಿಸಿ ಸಾಧಕ ಜನರಿಗೆ ಮಹದುಪಕಾರ ಮಾಡಿದ್ದಾರೆ. ಕನ್ನಡ ಭಾಷೆಯ ಭಾಷಾಂತರದಲ್ಲಿ ಉಪಯುಕ್ತವಾದ ಶಬ್ದಗಳ ಜೋಡಣೆ, ಹಾಗೂ ಭಾವಾರ್ಥದ ಮಂಡನೆಗಳು ಶ್ರೀಕೃಷ್ಣಮೂರ್ತಿಯವರ ಜ್ಞಾನಭಂಡಾರದ ಆಢ್ಯತೆಯನ್ನು ಸ್ಪಷ್ಟಗೊಳಿಸುತ್ತವೆ. ೩೧ನೆಯ ಅಧ್ಯಾಯದಲ್ಲಿ ೨೭-೨೮ನೆಯ ಶ್ಲೋಕಗಳಲ್ಲಿ ಪ್ರತೀತಾರ್ಥವು ಮಾಧವ, ಬ್ರಹ್ಮ, ಹಾಗೂ ಶಿವ, ಇವರೆಲ್ಲರೂ ಒಂದೇ ಎಂದು ಭಾಸವಾದರೂ, ಪೂರ್ವಾಪರಗಳ ವಿಮರ್ಶೆಯಿಂದ ಇಲ್ಲಿ ಮೂವರಲ್ಲಿಯೂ ಇರುವ ಭಾವೈಕ್ಯ ಅಂದರೆ ಅಭಿಪ್ರಾಯಗಳ ಸಮಾನತೆಯು ಅಭಿಪ್ರೇತವಾಗಿದೆ ಎಂದು ಶ್ರೀಕೃಷ್ಣಮೂರ್ತಿಯವರು ಸ್ಪಷ್ಟಪಡಿಸುತ್ತಾರೆ. ಇಂಥ ವಿವರಣೆಗಳುಳ್ಳ ಈ ಗ್ರಂಥವು ಶ್ರೀಮಧ್ವಸಿದ್ಧಾಂತಕ್ಕೆ ಶ್ರೀವೇದವ್ಯಾಸದೇವರ ಅಭಿಪ್ರಾಯಕ್ಕೆ ಅನುಗುಣವಾಗಿದೆಯೆಂಬುದು ಸ್ಪಷ್ಟವಾಗಿಸುವುದರಿಂದ ಈ ಗ್ರಂಥದ ಉಪಾದೇಯತೆಯು ಹಾಗೂ ಪ್ರಾಮಾಣ್ಯವು ಅಭಿವೃದ್ಧವಾಗಿವೆ. ಶ್ರೀಕೃಷ್ಣಮೂರ್ತಿಯವರ ಮಾಧ್ವತತ್ವಜ್ಞಾನದ ಅರಿವು ಬಹಳ ಆಳವಾಗಿದೆ ಎಂಬುದು ಇಂಥ ವಿವರಣೆಗಳಿಂದ ಸ್ಪಷ್ಟವಾಗುತ್ತದೆ.

ತ್ರಿವೇಣೀ ಸಂಗಮವೆಂದರೆ ಕೇವಲ ಮೂರು ನದಿಗಳ ಸಂಗಮವೆಂದು ಅಲ್ಲ. ಅಲ್ಲಿ ಅ, ಎಂದರೆ ಸರಸ್ವತೀ, ತತ್ರತ್ಯದೇವತೆ ಪ್ರದ್ಯುಮ್ನ, ಉಕಾರ ಎಂದರೆ ಯಮುನೆ, ತತ್ರತ್ಯದೇವತೆ ಅನಿರುದ್ಧ, ಮಕಾರವೆಂದರೆ ಗಂಗಾ, ತತ್ರತ್ಯದೇವತೆ ಸಂಕರ್ಷಣ, ಎಂದು ವಿವರಿಸಿ (೩೪ನೆಯ ಅಧ್ಯಾಯ, ೧೨, ೧೩, ೧೪), ತ್ರಿವೇಣೀ ಎಂದರೆ ಅ, ಉ, ಮ ಕಾರಗಳ ಸಂಗಮವಾದ ಸಮಗ್ರವೇದರಾಶಿಯ, ಅಲ್ಲಿಯ ಜ್ಞಾನ ಭಂಡಾರದ ಬೀಜರೂಪವಾಗಿದ್ದು, ಅತ್ಯಂತ ಪುಣ್ಯಕರವಾಗಿದೆ ಎಂಬುದನ್ನೂ ಗ್ರಂಥವು ಹೇಳುತ್ತದೆ. ಅದನ್ನು ವಿವರಿಸುವಾಗ, ಶ್ರೀ ಕೃಷ್ಣಮೂರ್ತಿಯವರು ಓಂಕಾರವು, ಅ, ಉ, ಮ ಹಾಗೂ ನಾದ ಎಂಬ ನಾಲ್ಕು ಪಾದಗಳಿಂದ ರಚಿತವಾಗಿದೆ, ಹಾಗೂ ಈ ವಿಷಯ ವೇದಗಳಲ್ಲಿ, ಮಾಂಡೂಕ್ಯೋಪನಿಷತ್ತಿನಲ್ಲಿ ಉಕ್ತವಾಗಿದೆ ಎಂದು ಸ್ಪಷ್ಟಪಡಿಸುತ್ತಾರೆ. ಈ ಕ್ಷೇತ್ರದಲ್ಲಿ ಮರಣ ಹೊಂದಿದವರು ನಿಜವಾಗಿಯೂ ಮೋಕ್ಷವನ್ನು ಪಡೆಯುತ್ತಾರೆ ಎಂದು ಶ್ಲೋಕದ (ಅಧ್ಯಾಯ ೩೪-೫) ಆಪಾತತಃ ಅರ್ಥವಾದರೆ, ಶ್ರೀಕೃಷ್ಣಮೂರ್ತಿಯವರು, ಮರಣ ಹಾಗೂ ಮೋಕ್ಷ ಪ್ರಾಪ್ತಿಗೆ ಕಾರಣ-ಕಾರ್ಯರೂಪ ಸಂಬಂಧವು ''ಪರಂಪರಯಾ'' ಎಂದು ಮಾರ್ಮಿಕವಾಗಿ ಸ್ಪಷ್ಟಪಡಿಸುತ್ತಾರೆ. ಇಲ್ಲಿ

ತೀರ್ಥಸ್ನಾನಾದಿಗಳನ್ನು ಮಾಡಿ ಮರಣ ಹೊಂದಿದರೆ ಮುಂದಿನ ಜನ್ಮಗಳಲ್ಲಿ ಧರ್ಮಸಾಧನೆಗೆ ಅನುಕೂಲತೆಯು ಉಂಟಾಗಿ, ಹೆಚ್ಚಿನ ಸಾಧನೆಯಾಗಿ, ಪಾಪನಿವೃತ್ತಿಯಾಗಿ, ಅಪರೋಕ್ಷಜ್ಞಾನ ಪ್ರಾಪ್ತಿಯ ನಂತರ, ಭಗವತ್ ಪ್ರಸಾದ ದೊರಕಿದ ನಂತರವೇ ಮೋಕ್ಷ ಎಂಬ ಮಾಧ್ವತತ್ವಜ್ಞಾನದ ಪ್ರಮೇಯವನ್ನು ತಿಳಿಯಪಡಿಸಿದ್ದಾರೆ.

ಮೇಲೆ ಕೊಟ್ಟ ಉದಾಹರಣೆಗಳಿಂದ ಶ್ರೀಕೃಷ್ಣಮೂರ್ತಿಯವರ ಭಾಷಾಂತರವು ಕೇವಲ ಸಂಸ್ಕೃತದಿಂದ ಕನ್ನಡದ ಭಾಷಾಂತರವಾಗಿರದೆ, ಒಂದು ತತ್ವವಿಚಾರಮಂಥನೆಗೆ ಉಪಕಾರವಾದ ಗ್ರಂಥವೇ ಆಗಿದೆ ಎಂದು ತಿಳಿಯಬಹುದು.

ಇಂಥ ತೀರ್ಥಕ್ಷೇತ್ರಗಳ ಮಾಹಾತ್ಮ್ಯೆಯನ್ನು ಓದಿದಾಗ, ಮೋಕ್ಷಸಾಧನೋಪಾಯದ ಸ್ವರೂಪವು ಕೇವಲ ವ್ರತನಿಯಮಗಳ ಪಾಲನೆ, ನಿತ್ಯನೈಮಿತ್ತಿಕ ಕರ್ಮಾಚರಣೆ, ನದೀಸ್ನಾನ, ಕ್ಷೇತ್ರವಾಸ , ದಾನ, ಉದ್ಯಾಪನೆ, ಶ್ರಾದ್ಧಾಚರಣೆ, ಇವುಗಳಿಗಷ್ಟೇ ಸೀಮಿತವಾಗಿದೆಯೋ ಎಂಬ ತಪ್ಪು ಕಲ್ಪನೆ ಬರುವ ಸಂಭವವಿದೆ. ವೇದಗಳು ಹಾಗೂ ಪುರಾಣಗಳು ಕೇವಲ ಕರ್ಮಕಾಂಡವನ್ನು ಪ್ರತಿಪಾದಿಸುವವೋ? ಜ್ಞಾನ, ಭಕ್ತಿ, ವೈರಾಗ್ಯ ರೂಪವಾದ ಸಾಧನಸ್ವರೂಪಗಳಿಗೆ ಇಲ್ಲಿ ಅವಕಾಶವೇ ಇಲ್ಲವಲ್ಲ ಎಂಬ ಸಂಶಯಕ್ಕೆ ಆಸ್ಪದವಿದೆ. ಆದರೆ ಶಾಸ್ತ್ರವಿಚಾರಗಳನ್ನು ಚೆನ್ನಾಗಿ ವಿಮರ್ಶಿಸಿದರೆ ಈ ಸಂಶಯವು ಪರಿಹೃತವಾಗುತ್ತದೆ. ತೀರ್ಥಕ್ಷೇತ್ರಗಳಿಗೆ ಭೇಟಿ ಕೊಡುವುದು, ಅಲ್ಲಿಯ ಪುಣ್ಯಕರವಾದ ಪರಿಸರದಲ್ಲಿ ವ್ರತನಿಯಮಾದಿಗಳನ್ನು ಪಾಲಿಸುವುದು, ಇತ್ಯಾದಿಗಳಿಂದ ಸಾಧಕನಲ್ಲಿ ಅಂತಃಕರಣ ಶುದ್ಧಿ ಹಾಗೂ ನಿವೃತ್ತ ಕರ್ಮಾಚರಣೆಯಲ್ಲಿ ಶ್ರದ್ಧೆಯಿಂದ ಪ್ರವೃತ್ತಿ, ಹಾಗೂ ಆದರಿಂದ ಜ್ಞಾನಸಾಧನೆ ಉಂಟಾಗುತ್ತವೆ ಎಂದು ತಿಳಿಯಬೇಕು. ಇದಕ್ಕಾಗಿಯೇ ಶ್ರೀಭಗವದ್ ಗೀತೆಯಲ್ಲಿ ''ತ್ರೈಗುಣ್ಯ-ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ'' ಎಂಬ ಶ್ಲೋಕಕ್ಕೆ, ತಮ್ಮ ಅನೇಕ ಗ್ರಂಥಗಳಿಂದ ಸಜ್ಜನರಿಗೆ ಮಹದುಪಕಾರ ಮಾಡಿದ ಕಲಿಯುಗ ಕಲ್ಪತರುವೆಂದು ಪ್ರಥಿತರಾದ ಶ್ರೀರಾಘವೇಂದ್ರ ಸ್ವಾಮಿಗಳು ಎರಡು ವಿಧವಾದ ಅರ್ಥವನ್ನು ಸ್ಪಷ್ಟಪಡಿಸುತ್ತಾರೆ. ವೇದಗಳು ಸತ್ತ್ವರಜಸ್ತಮೋರೂಪವಾದ ಗುಣತ್ರಯದ ವಿಕಾರವಾದ ಕರ್ಮಗಳನ್ನು ಪ್ರತಿಪಾದಿಸುತ್ತವೆ ಎಂಬುದು ''ತ್ರೈಗುಣ್ಯವಿಷಯಾ ವೇದಾಃ'' ಎಂಬುದಕ್ಕೆ ಮೊದಲಿನ ಅರ್ಥ. ಹಾಗಿದ್ದರೆ ''ನಿಸ್ತ್ರೈಗುಣ್ಯೋ ಭವಾರ್ಜುನ'' ಎಂದು ಬೋಧಿಸಿದ್ದೇಕೆ ಎಂಬ ಪ್ರಶ್ನೆ ಬರುತ್ತದೆ. ವೇದಗಳನ್ನು ಗ್ರಹಿಸಬೇಡ, ಅವುಗಳಿಂದ ದೂರ ಇರು ಎಂಬ ಬೋಧನೆಯೋ? ಎಂಬ ಪ್ರಶ್ನೆಯನ್ನು ಪರಿಹರಿಸುತ್ತ, ಶ್ರೀರಾಘವೇಂದ್ರ ಸ್ವಾಮಿಗಳು, ''ತ್ರೈಗುಣ್ಯಂ ಏವ ವಿಷಂ, ತದ್ಯಾಪಯಂತಿ ಇತಿ ತ್ರೈಗುಣ್ಯವಿಷಯಾಃ'' ಎಂದು ಮಾರ್ಮಿಕವಾದ ಅರ್ಥ ಹೇಳುತ್ತಾರೆ. ತ್ರಿಗುಣದ ವಿಕಾರವಾದ ಸಂಸಾರಬಂಧವೆಂಬ ವಿಷದಿಂದ ನಿರ್ವಾಪಣೆಪಡೆಯುವ ಜ್ಞಾನೋಪಾಯಗಳನ್ನು ವೇದಗಳು ಬೋಧಿಸುತ್ತವೆ, ಆದ್ದರಿಂದ ಈ ಜ್ಞಾನೋಪಾಯದಲ್ಲಿ ಪ್ರವೃತ್ತನಾಗಿ, ತ್ರಿಗುಣಾತೀತನಾಗು ಎಂಬುದು ತಾತ್ವಿಕವಾದ ಅರ್ಥವಾಗಿದೆ.

ಕರ್ಮಾಚರಣೆಯು ಅಂತಃಕರಣಶುದ್ಧಿಗೆ ಒಂದು ಉಪಾಯಮಾತ್ರವಾಗಿದೆ ಎಂಬುದನ್ನೂ ದಾಸರಾಯರು ಬಹು ಮಾರ್ಮಿಕವಾಗಿ ಬೋಧಿಸಿದ್ದಾರೆ.

''ತನುವ ನೀರೊಳಗದ್ದಿ ಫಲವೇನು ಮನದಲ್ಲಿ ದೃಢಭಕುತಿ ಇಲ್ಲದ ಮನುಜನು''

ದಾನಧರ್ಮಗಳನು ಮಾಡುವುದೇ ಸ್ನಾನ ।
ಜ್ಞಾನತತ್ವಂಗಳ ತಿಳಿಯುವುದೇ ಸ್ನಾನ ॥
ಹೀನಪಾಪಂಗಳ ಬಿಡುವುದೇ ಸ್ನಾನ ।
ಧ್ಯಾನದಿ ಮಾಧವನ ನಂಬುವುದೇ ಸ್ನಾನ ॥
ದುಷ್ಟರ ಸಂಗವ ಬಿಡುವುದೊಂದು ಸ್ನಾನ ।
ಕಷ್ಟಪಾಪಂಗಳನು ಹರಿವುದೇ ಸ್ನಾನ ॥
ಸೃಷ್ಟಿಯೊಳಗೆ ಸಿರಿ-ಪುರಂದರ ವಿಠಲನ ।
ಮುಟ್ಟಿ ಭಜಿಸಿ ಪುಣ್ಯಪಡೆವುದೇ ಸ್ನಾನ ॥

ಎಂದು ಪುರಂದರದಾಸರು ತೀರ್ಥಸ್ನಾನ ಮಾತ್ರದಿಂದ ಸಾಧನೆಯಾಗಲಾರದು ಎಂಬ ತತ್ವವನ್ನು ಉಪದೇಶಿಸಿದ್ದಾರೆ.

ಶ್ರೀಮಧ್ವಾಚಾರ್ಯರು, ಶ್ರೀಬದರೀಕ್ಷೇತ್ರವನ್ನು ಅಲ್ಲಿಯ ತೀರ್ಥವನ್ನು ವರ್ಣಿಸಿರುವ ಶ್ಲೋಕವನ್ನು ಇಲ್ಲಿ ಗಮನಿಸುವುದು ಸೂಕ್ತವಾಗಿದೆ. ಶ್ರೀಮಧ್ವಾಚಾರ್ಯರು ಕಾಷ್ಠಮೌನ ಉಪವಾಸಾದಿ ವ್ರತಗಳನ್ನು ಮಾಡಿ ಶ್ರೀ ಬದರೀ ತೀರ್ಥಯಾತ್ರೆಯನ್ನು ಮಾಡಿದರು. ಶ್ರೀಬದರೀನಾರಾಯಣನಿಗೆ ತಮ್ಮ ಶ್ರೀಭಗವದ್ ಗೀತಾಭಾಷ್ಯವನ್ನು ಅರ್ಪಣೆ ಮಾಡಿ ಅವನಿಂದ ಆಜ್ಞಪ್ತರಾಗಿ, ಶ್ರೀವೇದವ್ಯಾಸಾಶ್ರಮಕ್ಕೆ ಹೊರಟ ಬೆಳಗಿನ ಜಾವದ ಸಮಯದಲ್ಲಿ, ಉಸುಕಿನಲ್ಲಿ ಈ ಕೆಳಗಿನ ಶ್ಲೋಕವನ್ನು ಬರೆದು ಹೊರಟರು ಎಂದು ಶ್ರೀಸುಮಧ್ವವಿಜಯದಲ್ಲಿ ವರ್ಣಿಸಲಾಗಿದೆ—

ನೇದೃಶಂ ಸ್ಥಲಮಲಂ ಶಮಲಘ್ನಂ । ನಾಸ್ಯ ತೀರ್ಥಸಲಿಲಸ್ಯ ಸಮಂ ವಾಃ ॥
ನಾಸ್ತಿ ವಿಷ್ಣುಸದೃಶಂ ನನು ದೈವಂ । ನಾಸ್ಮದುಕ್ತಿಸದೃಶಂ ಹಿತರೂಪಮ್ ॥

ಈ ಶ್ಲೋಕದ ಸಾಮಾನ್ಯಾರ್ಥವು ಸ್ಪಷ್ಟವಾಗಿದೆ. ''ಈ ಕ್ಷೇತ್ರಕ್ಕೆ ಸಮಾನವಾದ ಪಾಪನಾಶಕವಾದ ಸ್ಥಳ ಬೇರೊಂದಿಲ್ಲ. ಇಲ್ಲಿಯ ತೀರ್ಥದ ನೀರಿಗೆ ಸಮಾನವಾದ ಬೇರೊಂದು ನೀರು ಇಲ್ಲ. ವಿಷ್ಣುವಿಗೆ ಸಮಾನವಾದ ದೇವತೆಯಿಲ್ಲ. ನಮ್ಮ ಉಪದೇಶಕ್ಕೆ ಸಮಾನವಾದ ಅತ್ಯಂತ ಹಿತಕರವಾದ ಬೇರೊಂದು ಮಾತು ಇಲ್ಲ''. ಶ್ರೀಮದಾಚಾರ್ಯರ ಈ ಶ್ಲೋಕಕ್ಕೆ ತತ್ವಪ್ರಮೇಯಪರವಾದ ಅರ್ಥವು ನನಗೆ ಒಮ್ಮೆ ಶ್ರೀಹರಿವಾಯು ಗುರುಗಳ ಅನುಗ್ರಹದಿಂದ ಸ್ಫುರಣವಾದದ್ದನ್ನು ಇಲ್ಲಿ ಉಲ್ಲೇಖಿಸುವುದು ಅಪ್ರಸ್ತುತವಲ್ಲವೆಂದು ಭಾವಿಸಿದ್ದೇನೆ. ಶ್ರೀಮದಾಚಾರ್ಯರು, ತಾವು ತಿರುಗಿ ಬರುವೆವೋ ಇಲ್ಲವೋ ಎಂಬುದು ನಿಶ್ಚಿತವಿಲ್ಲ (ಅವ್ರಜೇದಿಹ ನ ವಾ ಸ ಹಿ ವೇದ), ಎಂಬ ಅಭಿಪ್ರಾಯವಿದ್ದವರು, ಪ್ರೌಢವಾದ ಪ್ರಮೇಯಗಳನ್ನೇ ಈ ಶ್ಲೋಕದಲ್ಲಿ ಪ್ರತಿಪಾದಿಸಿರಬೇಕು ಎಂಬ ಮನೋಭಾವದಿಂದ ವಿಮರ್ಶಿಸುತ್ತಿರುವಾಗ ಅಂಥ ಅರ್ಥವು ಸ್ಫುರಣವಾದದ್ದು ಶ್ರೀಮದಾಚಾರ್ಯರ ಅನುಗ್ರಹವಿಶೇಷವೆಂದೇ ಭಾವಿಸಿದ್ದೇನೆ. ಇಲ್ಲಿ ''ಸ್ಥಲ್ಯತೇ'' ಎಂಬುವುದು ಯಾವ ಧಾತುವಿನ ರೂಪವೆಂಬುದು ಸ್ಪಷ್ಟವಾಗಿಲ್ಲ. ''ಅತ್ರ ಭಗವತಾ'' ಎಂಬ ಅಧಿಕರಣವ್ಯುತ್ಪತ್ತಿಯಿಂದ, ಕ್ಷೇತ್ರ

ಶಬ್ದದಂತೆ, ಸ್ಥಲ ಶಬ್ದಕ್ಕೆ ಈ ಮಾನವ ಶರೀರ ಎಂಬ ಅರ್ಥಪ್ರಾಪ್ತವಾಗುತ್ತದೆ. ಈ ಮಾನವಜನ್ಮಕ್ಕೆ ಸಮಾನವಾದ ಸಾಧನೆಗೆ ಅನುಕೂಲವಾದ ಜನ್ಮವು ಬೇರೊಂದಿಲ್ಲ. ''ಮಾನವಜನ್ಮ ದೊಡ್ಡದು, ಇದ ಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ'' ಎಂದು ದಾಸರಾಯರು ಹೇಳಿದ್ದನ್ನು ''ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಂ'' ಎಂದು ಪ್ರಲ್ಹಾದರಾಜರು ದೈತ್ಯಬಾಲಕರಿಗೆ ಉಪದೇಶ ಮಾಡಿದ್ದನ್ನುಸ್ಮರಿಸಿಕೊಳ್ಳಬಹುದು. ಹೇಗೆ ಸಾಧನೆ ಮಾಡಬೇಕು ಎಂಬ ಪ್ರಶ್ನೆ ಬಂದಾಗ ''ಅಸ್ಯ ತೀರ್ಥಸಲಿಲಸ್ಯ ಸಮಂ ವಾಃ'' ಎಂಬುದು ಉತ್ತರವಾಗಿದೆ. ''ಅಕಾರೋ ವಿಷ್ಣುರುದ್ದಿಷ್ಟಃ'' ಎಂಬ ವಾಕ್ಯದಂತೆ 'ಅ' ಎಂಬುದಕ್ಕೆ ವಿಷ್ಣು ಎಂದು ಅರ್ಥವಿದೆ. ಅಸ್ಯ ಅಂದರೆ ವಿಷ್ಣುವಿನ ವಿಷಯಕವಾದ ಎಂದು ಅರ್ಥ, ತೀರ್ಥ ಪದಕ್ಕೆ ಶಾಸ್ತ್ರವೆಂದು ಅರ್ಥ. ಸಲಿಲ ಪದಕ್ಕೆ ನೀರು, ಅಂದರೆ ನೀರಿನಲ್ಲಿರುವ ಸ್ನೇಹ ಗುಣ ಎಂದು ಅರ್ಥ (''ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ'' ಎಂಬ ಸೂತ್ರದಲ್ಲಿಯಂತೆ). ಸಲಿಲ ಪದವನ್ನು ತಂತ್ರ ಮಾಡಿದರೆ, ಸಲ್-ಗತೌ ಎಂಬ ಧಾತುವಿನಿಂದ ''ಗತ್ಯರ್ಥಧಾತೂನಾಂ ಜ್ಞಾನಾರ್ಥಕತ್ವಂ'' ಎಂಬ ನಿಯಮದಂತೆ ಸಲಿಲ ಪದಕ್ಕೆ ಜ್ಞಾನ ಎಂಬ ಅರ್ಥವು ಸೂಚಿತವಾಗಿದೆ. ವಾಃ ಅಂದರೆ ಸಂಸಾರಾವರ್ತದಿಂದ ನಿವಾರಣೋಪಾಯ ಎಂದು ಅರ್ಥ. ಅಂತೂ ತಾತ್ಪರ್ಯವು ಹೀಗಿದೆ— ವಿಷ್ಣುವಿಷಯಕವಾದ ಶಾಸ್ತ್ರಗಳಲ್ಲಿ ಉಕ್ತವಾದ ಸ್ನೇಹ ಅಂದರೆ ಭಕ್ತಿಭಾವ ಜ್ಞಾನ (ಹಾಗೂ ಅದರೊಡನೆ ವೈರಾಗ್ಯ) ಇವುಗಳಿಗೆ ಸಮಾನವಾದ ಸಂಸಾರದಿಂದ ತಾರಕವಾದ ಉಪಾಯವು ಬೇರೊಂದಿಲ್ಲ; ವಿಷ್ಣುವೇ ಸರ್ವೋತ್ತಮನಾದ ದೇವತೆಯು, ಹಾಗೂ ಮಧ್ವತತ್ವವೇ ಉತ್ತಮವಾದ ಉಪದೇಶವು ಎಂದು ಬಹು ಪ್ರಗಲ್ಭವಾದ ತತ್ತೋಪದೇಶವುಈ ಶ್ಲೋಕದಿಂದ ಪ್ರಾಪ್ತವಾಗುತ್ತದೆ.

ಇದರಿಂದ ತಿಳಿಯುವುದೇನೆಂದರೆ, ಕೇವಲ ಪುಣ್ಯ ಕ್ಷೇತ್ರಗಳ ದರ್ಶನ, ನದೀಸ್ನಾನ ಇವುಗಳಿಂದ ಮಾತ್ರ ಮೋಕ್ಷ ಸಾಧನೆಯಾಗಲಾರದು, ಇವೆಲ್ಲ ಕರ್ಮಾಚರಣೆಗಳು ಅಂತಃಕರಣಶುದ್ಧಿಗೆ ಉಪಾಯಗಳು ಮಾತ್ರ. ಇವುಗಳಿಂದ ಅಂತಃಕರಣ ಶುದ್ಧಿಯನ್ನು ಪಡೆದು ಜ್ಞಾನಾರ್ಜನೆ, ಭಕ್ತಿಯಿಂದ ಉಪಾಸನೆ, ವೈರಾಗ್ಯಪ್ರವೃತ್ತಿ ಇವುಗಳನ್ನು ಬೆಳೆಸಿಕೊಂಡರೆ ಮಾತ್ರ ಮೋಕ್ಷಸಾಧನೆ ಮಾಡಿಕೊಂಡಂತೆ ಆಗುತ್ತದೆ ಎಂಬ ಶ್ರೀಮದಾಚಾರ್ಯರ ಪ್ರಮೇಯವು, ಈ ಪ್ರಯಾಗ ಮಾಹಾತ್ಮ್ಯೆಯಂಥ ಅತ್ಯುತ್ತಮವಾದ ಗ್ರಂಥವನ್ನು ಓದಿದವರ ಅವಗಾಹನೆಗೆ ಇರಲಿ ಎಂಬ ಉದ್ದೇಶದಿಂದ ಈ ವಿಷಯವನ್ನು ವಿವರವಾಗಿ ಬರೆದಿದ್ದೇನೆ.

ಓದುಗರು ಅಪ್ರಸ್ತುತವೆಂದು ಭಾವಿಸದೆ ವಿಷಯದ ಸಾರವನ್ನು ಗಮನಿಸಬೇಕೆಂದು ಕೋರುತ್ತೇನೆ. ಶ್ರೀ ಸರೋವರ ಕೃಷ್ಣಮೂರ್ತಿಯವರು ಇಷ್ಟು ಬೃಹದಾಕಾರವಾದ ಗ್ರಂಥದ ಸುಲಲಿತವಾದ ಭಾಷಾಂತರವನ್ನು ಮಾಡುವ ಕಾರ್ಯದಲ್ಲಿ ತೊಡಗಿದಾಗ ಜ್ಞಾನದ ಸಾಗರದಲ್ಲಿ ಈಸಾಡಿಸಿದ್ದಾರೆ. ವೇದ ಪುರಾಣಗಳ ಜ್ಞಾನಭಂಡಾರವು ಸಾಗರವೇ ಆಗಿದೆ. ಸಾಗರದಲ್ಲಿ ಈಸುವುದು ಬಹಳ ಕಷ್ಟಸಾಧ್ಯ. ಆದರೆ ಸರೋವರದಲ್ಲಿ ಈಸಬಹುದು. ಆದ್ದರಿಂದ ಶ್ರೀಕೃಷ್ಣಮೂರ್ತಿಯವರು ನಮಗೆಲ್ಲ ಈಸಾಡಲು, ಸಿಹಿನೀರನ್ನು ಪಡೆಯಲು ಹಾಗೂ ಶ್ರೀಕೃಷ್ಣ ಮಹಿಮೆಯ ರುಚಿಯನ್ನು ಸೇವಿಸಲು ಅನುಕೂಲವಾಗಲೆಂದು ಸರೋವರವನ್ನು ನಿರ್ಮಿಸಿ ಅನ್ವರ್ಥನಾಮಧೇಯರಾಗಿದ್ದಾರೆಂದು ಹೇಳಬಹುದು.

C

ಈ ಉದ್ಗ್ರಂಥದ ರಚನೆಯ ಸಂದರ್ಭದಲ್ಲಿ ಶ್ರೀಕೃಷ್ಣಮೂರ್ತಿಯವರು ಪಟ್ಟ ಪರಿಶ್ರಮ ಅಸದೃಶವಾದುದು, ಅತ್ಯಂತ ಪ್ರಶಂಸನೀಯವಾದುದು, ವಿಶೇಷವಾಗಿ ಅಭಿನಂದನಾರ್ಹವಾದುದು. ಪ್ರಯಾಗ ಮಾಧವನು ತ್ರಿವೇಣೀ ಸಂಗಮಸ್ನಾನದ ಸಂಪೂರ್ಣ ಫಲವನ್ನು ಶ್ರೀ ಸರೋವರ ಕೃಷ್ಣಮೂರ್ತಿಯವರಿಗೆ ದಯಪಾಲಿಸಲಿ ಎಂದು ಹಾರೈಸುತ್ತೇನೆ.

ಗ್ರಂಥ ರಚನೆ ಮಾಡುವುದು ಒಂದು ಪರಿಶ್ರಮವಾದರೆ, ಅದನ್ನು ಶೋಧಿಸಿ ಮುದ್ರಿಸುವುದು, ಅದಕ್ಕೂ ಹೆಚ್ಚಿನ ಪರಿಶ್ರಮವಾಗಿದೆ. ಇದೆಲ್ಲವನ್ನೂ ಸಾಧಿಸಿದ ಶ್ರೀಕೃಷ್ಣಮೂರ್ತಿಯವರಿಗೆ ಆಸ್ತಿಕ ಸಮಾಜವು ಕೃತಜ್ಞತೆ ಸಲ್ಲಿಸಬೇಕು. ಈ ಉದ್ಗ್ರಂಥಕ್ಕೆ ಮುನ್ನುಡಿ ಬರೆಯುವ ಅವಕಾಶವನ್ನು ಕೊಟ್ಟಿದ್ದಕ್ಕೆ ನನ್ನನ್ನು ನಾನು ಅತ್ಯಂತ ಭಾಗ್ಯಶಾಲಿಯೆಂದು ಭಾವಿಸಿದ್ದೇನೆ.

ಸಮಸ್ತ ಆಸ್ತಿಕ ಸಮಾಜವು ಈ ಗ್ರಂಥದ ಲಾಭ ಪಡೆದು ಕೃತಕೃತ್ಯರಾಗುವರೆಂದು ಭಾವಿಸಿದ್ದೇನೆ.

ವಾ. ರಾ. ಪಂಚಮುಖಿ

ವಾದಿರಾಜಾಚಾರ್ಯ ರಾಘವೇಂದ್ರಾಚಾರ್ಯ ಪಂಚಮುಖೀ
ಕುಲಪತಿ, ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠ,
ತಿರುಪತಿ

# ಪ್ರಸ್ತಾವನೆ

ಶ್ರೀಬಾದರಾಯಣ ನಿರ್ಮಿತವಾದ ಹದಿನೆಂಟು ಪುರಾಣಗಳಲ್ಲಿ ಒಂದಾದ ಪದ್ಮಪುರಾಣವು ೫೫೦೦೦ ಗ್ರಂಥಗಳಿಂದ ಕೂಡಿದೆ. ಇದರ ಒಂದು ಭಾಗವಾದ ''ಪಾತಾಳಖಂಡದಲ್ಲಿ'' ಶತಾಧ್ಯಾಯಾತ್ಮಕವಾದ ಪ್ರಯಾಗದ ಮಾಹಾತ್ಮ್ಯವನ್ನು ಶೇಷದೇವರು ಸನಕಾದಿಗಳಿಗೆ ವರ್ಣಿಸಿರುತ್ತಾರೆ. ಸನಕಾದಿಗಳು ಶೇಷದೇವರ ಶಿಷ್ಯರೆಂದು ಶ್ರೀಮದ್ಭಾಗವತದ ತೃತೀಯ, ಪಂಚಮ, ಷಷ್ಠ ಸ್ಕಂಧಗಳಲ್ಲಿ ಉಲ್ಲೇಖವಿರುತ್ತದೆ. ಸುಮಧ್ವವಿಜಯದಲ್ಲಿಯೂ ಶೇಷದೇವರು ಸನಕಾದಿಗಳನ್ನು ಕುರಿತು ಮಾಡಿದ ವೈಕುಂಠ ವರ್ಣನೆಯು ಹನ್ನೊಂದನೇ ಸರ್ಗದಲ್ಲಿ ಇರುತ್ತದೆ. ಹೀಗಾಗಿ, ಪಾತಾಳಾಧಿಪತಿಯಾದ ಶೇಷದೇವರು ತಮ್ಮ ಸಹಜ ಶಿಷ್ಯರಾದ ಸನಕಾದಿಗಳಿಗೆ ಮಾಡಿದ ಪ್ರಯಾಗಮಾಹಾತ್ಮ್ಯೆಯ ವರ್ಣನೆಯನ್ನು ''ಪಾತಾಳ ಖಂಡ''ದಲ್ಲಿ ನಿವೇಶನ ಮಾಡಿರುವುದು ಅತ್ಯಂತ ಉಚಿತವಾಗಿರುತ್ತದೆ.

ಅಪರೂಪದ ಒಂದು ಸಾಹಿತ್ಯವು ದೊರೆತಾಗ ಅದರ ಪ್ರಾಮಾಣ್ಯದ ಬಗ್ಗೆ ಪ್ರಶ್ನೆ ಏಳುವುದು ಸಹಜ. ಪ್ರಕೃತ ಪಾತಾಳಖಂಡವು, ಬಾದರಾಯಣ ನಿರ್ಮಿತವಾದ ಪದ್ಮಪುರಾಣದ ಏಕದೇಶವಾಗಿರುವಾಗ ಅದರ ಪ್ರಾಮಾಣ್ಯದ ಬಗ್ಗೆ ಶಂಕೆಯು ಉಚಿತವಲ್ಲ. ಲೋಕೋತ್ತರ ಪುರುಷರಾದ ಶೇಷದೇವರು ತಮ್ಮ ಪ್ರಿಯಶಿಷ್ಯರ ಪ್ರಾರ್ಥನಾನುಸಾರ ಮಾಡಿದ ವರ್ಣನೆಯು ಇಲ್ಲಿರುವುದರಿಂದ ಪ್ರಾಮಾಣ್ಯಕ್ಕೆ ಉಪಯೋಗಿಯಾದ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳು ಈ ಗ್ರಂಥಕ್ಕೆ ಇವೆಯೆಂದು ಧಾರಾಳವಾಗಿ ಹೇಳಬಹುದಾಗಿದೆ. 'ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್' ಎಂಬಂತೆ, ಮೂಲಶಾಸ್ತ್ರಗಳಾದ ಸಪ್ತ ವಿದ್ಯೆಗಳೆಂದು ಪ್ರಸಿದ್ಧವಾದ, ವೇದಚತುಷ್ಟಯ, ಮಹಾಭಾರತ, ಮೂಲರಾಮಾಯಣ ಹಾಗೂ ಪಂಚರಾತ್ರಗಳಿಗೆ ಅನುಸಾರಿಯಾದ್ದರಿಂದಲೂ ಈ ಗ್ರಂಥದ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಪ್ರಯಾಗ ಮಾಹಾತ್ಮ್ಯೆಯು ಈ ಮೂಲಗ್ರಂಥಗಳಿಗೆ ಹೇಗೆ ಅನುಸಾರಿಯಾಗಿದೆ ಎಂಬುದನ್ನೇ ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಲು ಬಯಸುತ್ತೇನೆ.

'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್' ಎಂಬ ಪೈಂಗೀಶ್ರುತಿಯಂತೆ ಸರ್ವಶಾಸ್ತ್ರದ ತಾತ್ಪರ್ಯವು ವಿಷ್ಣುವಿನ ಸರ್ವೋತ್ತಮತ್ವವೇ ಆಗಿರುತ್ತದೆ. ಇಂಥಾ ಪರಮ ಪ್ರಮೇಯವಾದ ವಿಷ್ಣುವಿನ ಪಾರಮ್ಯವು ಪ್ರಯಾಗ ಮಾಹಾತ್ಮ್ಯೆಯಲ್ಲಿ ಹೆಜ್ಜೆ ಹೆಜ್ಜೆಗೂ ಸ್ಪಷ್ಟವಾಗುತ್ತದೆ. ''ದಶದಿಕ್ಪತಿಭಾವೇನ ಬ್ರಹ್ಮೇಶಾದ್ಯಾಃ ಸುರಾಃ ಸ್ಮೃತಾಃ। ಅಖಂಡಾಧಿಪತಿತ್ವಾಚ್ಚ ಸರ್ವೇಶೇ ವಿಷ್ಣುರೇವ ಹಿ'' ಎಂಬ ಶ್ರೀ ವಾದಿರಾಜಸ್ವಾಮಿಗಳವರ ನುಡಿಯಂತೆ 'ಬ್ರಹ್ಮರುದ್ರಾದಿಗಳು ದಶದಿಕ್ಕುಗಳಿಗೆ ಪತಿಗಳು. ವಿಷ್ಣುವು ಅಖಂಡಾಧಿಪತಿಯಾದ್ದರಿಂದ ಸರ್ವೋತ್ತಮನಾಗಿರುತ್ತಾನೆ, ಈ ಅಂಶವು ಪ್ರಯಾಗ ಮಾಹಾತ್ಮ್ಯೆಯಲ್ಲಿ ಸ್ಪಷ್ಟವಿದೆ. ಪ್ರಯಾಗ ಕ್ಷೇತ್ರದ ಎಂಟು ದಿಕ್ಕುಗಳಲ್ಲಿ ಇಂದ್ರಾದಿ ಅಷ್ಟದಿಕ್ಪಾಲಕರು ನೆಲೆಸಿ ಪ್ರಯಾಗಮಾಧವನ ನಾನಾ ವಿಧವಾದ ಸೇವೆಯನ್ನು ಮಾಡಿರುತ್ತಾರೆ. ಊರ್ಧ್ವಲೋಕಪಾಲಕರಾದ ಬ್ರಹ್ಮದೇವರೂ ಸಹ ಇಲ್ಲಿ ಯಜ್ಞವನ್ನು ಮಾಡಿರುತ್ತಾರೆ. ಅಧೋಲೋಕಪಾಲಕರಾದ ಶೇಷದೇವರೂ ಪ್ರಯಾಗ ಮಾಧವನ ಗರಿಷ್ಠತೆಯನ್ನು

ಸನಕಾದಿಗಳಿಗೆ ಉಪದೇಶಿಸಿದ್ದು ಮಾತ್ರವಲ್ಲದೆ, ತಾವೂ ಶ್ರೀಮಾಧವನ ಸೇವೆಗಾಗಿ ಇಲ್ಲಿ ನೆಲೆಸಿರುತ್ತಾರೆ. ಹೀಗೆ ದಶದಿಕ್ಪತಿಗಳೂ ಪ್ರಯಾಗಮಾಧವನ ಕಿಂಕರಭಾವದಿಂದ ಇಲ್ಲಿ ಇರುವುದರಿಂದ ವಿಷ್ಣುಸರ್ವೋತ್ತಮತ್ವವು ಉಪಪಾದಿತವಾಗಿರುತ್ತದೆ.

'ವ್ರತೋಪವಾಸಗಳೆಲ್ಲ ಏಕಾದಶಿಯ ಹಿಂದೆ' ಎಂಬಂತೆ ಎಲ್ಲಾ ವ್ರತಗಳಲ್ಲೂ ಏಕಾದಶಿ ವ್ರತವು ಶ್ರೇಷ್ಠವಾಗಿರುತ್ತದೆ. ಏಕಾದಶಿಯ ಮಹಿಮೆಯನ್ನು 'ಕೃಷ್ಣಾಮೃತಮಹಾರ್ಣವ' ಗ್ರಂಥದಲ್ಲಿ ಜಗದ್ಗುರುಗಳಾದ ಶ್ರೀ ಮಧ್ವಾಚಾರ್ಯರು ಸ್ಪಷ್ಟಪಡಿಸಿರುತ್ತಾರೆ. ಪ್ರಯಾಗ ಮಾಹಾತ್ಮ್ಯೆಯಲ್ಲಿ ಏಕಾದಶಿ ವ್ರತಾಚರಣೆಯ ಬಗ್ಗೆ, ಏಕಾದಶಿಯ ಉತ್ಪತ್ತಿಯ ಬಗ್ಗೆ, ಏಕಾದಶೀ ತಿಥಿ ನಿರ್ಣಯದ ಬಗ್ಗೆ ವಿಸ್ತಾರವಾದ ಮಾಹಿತಿಯಿದೆ. ಜ್ಞಾನಗಳಲ್ಲಿ ಶ್ರೇಷ್ಠವಾದದ್ದು ವಿಷ್ಣುಪಾರಮ್ಯಜ್ಞಾನ. ಕರ್ಮಗಳಲ್ಲಿ ಶ್ರೇಷ್ಠವಾದದ್ದು ಏಕಾದಶೀ ವ್ರತಾಚರಣೆ. ಇವೆರಡರ ಬಗ್ಗೆಯೂ ನಿಶ್ಚಿತ ಮಾಹಿತಿಯನ್ನು ಕೊಡತಕ್ಕದ್ದು ಪ್ರಯಾಗ ಮಾಹಾತ್ಮ್ಯೆಯೆಂದು ಹೇಳಿದಂತಾಯಿತು.

ಇಲ್ಲಿ ವರ್ಣಿತವಾಗಿರುವ ತೀರ್ಥಶ್ರಾದ್ಧವಿಧಿ, ಕರ್ತೃ-ಭೋಕ್ತೃವಿನ ನಿಯಮಗಳು, ವರ್ಜ್ಯಾವರ್ಜ್ಯ ಪದಾರ್ಥಗಳು ಇತ್ಯಾದಿಗಳ ಸಂಗ್ರಹವನ್ನು ನಿರ್ಣಯಸಿಂಧು, ಧರ್ಮಸಿಂಧು ಮೊದಲಾದ ಧರ್ಮಶಾಸ್ತ್ರನಿಬಂಧನೆ ಗ್ರಂಥಗಳಲ್ಲಿ ನಾವು ಕಾಣಬಹುದಾಗಿದೆ. ಲಕ್ಷಪುಷ್ಪಾದಿಗಳ ಉದ್ಯಾಪನೆಯ ಕ್ರಮವು ಪ್ರಯೋಗ ಗ್ರಂಥಗಳಲ್ಲಿ ಸಂಗೃಹಿತವಾಗಿದೆ. ಗೋದಾನಾದಿಗಳ ಮಹಿಮೆಯು ಅನುಶಾಸನಿಕ ಪರ್ವದಲ್ಲಿರುವ ದಾನ ಮಹಿಮೆಗಳನ್ನು ಅನುಕರಿಸಿದೆ. ಈ ಗ್ರಂಥದಲ್ಲಿ ಬಂದಿರುವ 'ಚಕ್ರವಾಕಿ'ಯ ಉಪದೇಶವು ಶ್ರೀಮದ್ಭಗವದ್ಗೀತಾ, ಮಹಾಭಾರತದ ಶಾಂತಿಪರ್ವ, ಗರುಡಪುರಾಣ ಮೊದಲಾದ ಅನೇಕ ಗ್ರಂಥಗಳಲ್ಲಿನ ಅಭಿಮಾನತ್ಯಾಗ ಹಾಗೂ ವೈರಾಗ್ಯಗಳ ಉಪದೇಶವನ್ನು ಪ್ರತಿಬಿಂಬಿಸುತ್ತದೆ. ಯಮದೇವರು ಧೂಮಪಾನ ಮಾಡಿ ತಪಸ್ಸು ಮಾಡಿದರೆಂದು 'ಅನುವ್ಯಾಖ್ಯಾನ'ದಲ್ಲಿ ಶ್ರೀಮಧ್ವಾಚಾರ್ಯರು ಹೇಳಿರುತ್ತಾರೆ. ಆ ಧೂಮಪಾನದ ವಿಧಿಯನ್ನು ಇಲ್ಲಿ ವರ್ಣಿಸಿರುವುದು ಗಮನಾರ್ಹವಾಗಿದೆ. ಮಾಧವ ಮಂದಿರದಲ್ಲಿ ಬಂದ ಸುಂದರಿಯೊಬ್ಬಳ ಸೌಂದರ್ಯವರ್ಣನೆಯು ಶ್ರೀವಾದಿರಾಜಕೃತ ರುಕ್ಮಿಣೀ ವರ್ಣನೆಯನ್ನು ಹೋಲುತ್ತದೆ. ಉಪಸಂಹಾರದಲ್ಲಿ ಜ್ಞಾನದಿಂದಲೇ ಮೋಕ್ಷವೆಂದು ಸ್ಪಷ್ಟಪಡಿಸಿರುವುದು 'ನಾನ್ಯಃ ಪಂಥಾ ಅಯನಾಯ ವಿದ್ಯತೇ', 'ವಿದ್ಯೈವ ತು ನಿರ್ಧಾರಣಾತ್', 'ಜ್ಞಾನೇನೈವ ಭವೇನ್ಮೋಕ್ಷಃ ನಾತ್ರ ಕಾರ್ಯಾ ವಿಚಾರಣಾ' ಇತ್ಯಾದಿ ಶ್ರುತಿ, ಸೂತ್ರ, ಪುರಾಣಗಳ ಸಿದ್ಧಾಂತವನ್ನು ಎತ್ತಿ ಹಿಡಿದಂತಾಗಿದೆ.

ಹೀಗೆ ಅನೇಕ ದೃಷ್ಟಿಯಿಂದ ನೋಡಿದಾಗ ಪ್ರಯಾಗ ಮಾಹಾತ್ಮ್ಯೆಯು ಪರಮ ಪ್ರಾಮಾಣಿಕವೆಂದು ಮನವರಿಕೆ ಆಗದೇ ಇರಲಾರದು. ಆದರೆ, ಪುರಾಣಗಳಲ್ಲಿ ಸಜ್ಜನರ ಅವಗಾಹನೆಗಾಗಿ ಸಾತ್ತ್ವಿಕ ಭಾಗಗಳು ಇರುವಂತೆ, ದುರ್ಜನಮೋಹನೆಗಾಗಿ ರಾಜಸ, ತಾಮಸ ಭಾಗಗಳೂ ಇರುವುದು ಸಹಜ. ಈ ಪುರಾಣಗಳ ಶೈಲಿಗೆ ಪಾತಾಳಖಂಡವೇನೂ ಹೊರತಲ್ಲ. ಪಂಚಾಯತನ ಪೂಜೆಯ ವಿವರಣೆ, ತ್ರಿವೇಣಿಯು ಬ್ರಹ್ಮಸ್ವರೂಪಳೆಂಬ ವರ್ಣನೆ, ಪ್ರಯಾಗ ಮರಣ ಮಾತ್ರದಿಂದ ಮುಕ್ತಿ — ಇವೆಲ್ಲಾ ಇದಕ್ಕೆ ಉದಾಹರಣೆಗಳಾಗಿವೆ.

ಪ್ರಯಾಗ ಮಾಹಾತ್ಮ್ಯೆಯ ವಿಷಯಗಳ ಸಂಗ್ರಹವು ಇಂತಿದೆ: ಶೌನಕಾದಿಮುನಿಗಳು

ಸೂತರನ್ನು ಕಂಡು ತೀರ್ಥರಾಜನ ಬಗ್ಗೆ ಪ್ರಶ್ನಿಸಿದಾಗ, ಸೂತರು ತಮ್ಮ ಗುರುಗಳಾದ ಭಗವಾನ್ ವ್ಯಾಸರು ತಮಗೆ ಉಪದೇಶಿಸಿದ ಪ್ರಯಾಗದ ತೀರ್ಥರಾಜತ್ವವನ್ನು ತಿಳಿಸಿರುತ್ತಾರೆ. ಶ್ರೀ ವೇದವ್ಯಾಸರು ಶೇಷ-ಸನಕಾದಿಗಳ ಸಂವಾದರೂಪವಾಗಿ ಪ್ರಯಾಗದ ಮಹಿಮೆಯನ್ನು ವರ್ಣಿಸಿರುತ್ತಾರೆ. ಪ್ರಯಾಗ ಕ್ಷೇತ್ರಕ್ಕೆ ಶಿಷ್ಯರ ಸಮೇತರಾಗಿ ಶೇಷದೇವರೂ, ಬ್ರಹ್ಮಾದಿ ದೇವತೆಗಳೂ, ನಾರದರೂ ಆಗಮಿಸಿರುತ್ತಾರೆ. ತುಲಾಮಾಪನದಿಂದ ಮೋಕ್ಷದಾಯಕವಾದ ಸಪ್ತಪುರಿಗಳಿಗಿಂತಲೂ ಪ್ರಯಾಗವೇ ಮಿಗಿಲೆಂದು ನಿಶ್ಚಯಿಸಿರುತ್ತಾರೆ. ಬ್ರಹ್ಮದೇವರು ಅಶ್ವಮೇಧಯಜ್ಞದಿಂದಲೂ, ಶಿವನು ತಾಂಡವದಿಂದಲೂ ಪ್ರಯಾಗ ಮಾಧವನನ್ನು ಮೆಚ್ಚಿಸಿ ವರಗಳನ್ನು ಪಡೆದಿದ್ದಾರೆ. ಇಂದ್ರದೇವರು ಲಕ್ಷಪುಷ್ಪಾರ್ಚನೆಯಿಂದಲೂ, ಅಗ್ನಿದೇವರು ಲಕ್ಷಹೋಮದಿಂದಲೂ, ಯಮದೇವರು ವಿವಿಧ ದಾನಗಳಿಂದಲೂ, ನಿರ್ಋತಿದೇವರು ಶ್ರಾದ್ಧಯಜ್ಞದಿಂದಲೂ, ವರುಣದೇವರು ತಟಾಕ ನಿರ್ಮಾಣ, ಜಲದಾನಗಳಿಂದಲೂ, ಕೋಣವಾಯುದೇವರು ಸ್ತೋತ್ರದಿಂದಲೂ, ಕುಬೇರರು ತಪಸ್ಸಿನಿಂದಲೂ, ಮಹದೇವರು ಜಪಯಜ್ಞದಿಂದಲೂ ಪ್ರಯಾಗ ಮಾಧವನನ್ನು ಆರಾಧಿಸಿರುತ್ತಾರೆ. ಇದಾದ ನಂತರ, ಅಕ್ಷಯವಟವೃಕ್ಷ, ತೀರ್ಥರಾಜನಾದ ಪ್ರಯಾಗದ ಸ್ಮರಣೆ, ದರ್ಶನ, ವಾಸಗಳ ಮಹಿಮೆ, ಮುಂಡನದ ಮಾಹಾತ್ಮ್ಯ ಇವುಗಳು ವರ್ಣಿತವಾಗಿದೆ. ತ್ರಿವೇಣಿಯ ವರ್ಣನೆಯು ಸ್ವರಸಸುಂದರವಾಗಿದೆ. ತ್ರಿವೇಣಿ ಸಂಗಮದಲ್ಲಿ ದೇಹತ್ಯಾಗವಿಧಿ, ತೀರ್ಥಯಾತ್ರಾ ಕ್ರಮ, ಮೌಸಲ ಮಹಾಸಂಕಲ್ಪ, ತೀರ್ಥಸ್ನಾನ, ತರ್ಪಣ, ಶ್ರಾದ್ಧಗಳ ವಿಧಿಗಳು ವಿಸ್ತಾರವಾಗಿ ಹೇಳಲ್ಪಟ್ಟಿವೆ. ವೇಣೀದಾನದ ಕ್ರಮವೂ ಅದರ ಮಾಹಾತ್ಮ್ಯೆಯೂ ವರ್ಣಿತವಾಗಿದೆ.

ಪ್ರಯಾಗದಲ್ಲಿ ಮಾಡಬಹುದಾದ ವಿವಿಧ ದಾನಗಳ ಕ್ರಮ ಹಾಗೂ ಫಲಗಳನ್ನು, ವಿಶೇಷವಾಗಿ ಗೋದಾನ, ಬ್ರಾಹ್ಮಣಸುವಾಸಿನೀ ಭೋಜನ, ಪುರಾಣಶ್ರವಣಗಳ ಕ್ರಮ ಹಾಗೂ ಫಲಗಳನ್ನೂ ವರ್ಣಿಸಿರುತ್ತಾರೆ. ತಾಂಬೂಲ ದಾನವು ಪ್ರಚಲಿತವಾದ ಬಗೆ, ಅದರ ಫಲಗಳನ್ನು ಸಹ ವರ್ಣಿಸಿರುತ್ತಾರೆ. ಮಾಘಮಾಸದಲ್ಲಿ ಪ್ರಯಾಗದ ಸೇವನೆಯು ವಿಶೇಷ ಫಲದಾಯಕವೆಂದು ತಿಳಿಸಿ, ವಿಶೇಷ ದಿನಗಳಾದ ಮಹಾಮಾಘೀ, ಅರ್ಧೋದಯ, ಕುಂದ ಚತುರ್ಥೀ, ವಸಂತ ಪಂಚಮೀ, ರಥಸಪ್ತಮೀ, ಭೀಷ್ಮಾಷ್ಟಮಿಗಳ ಆಚರಣೆಯ ಕ್ರಮವನ್ನು ಹೇಳಿರುತ್ತಾರೆ. ಪ್ರಯಾಗದಲ್ಲಿ ಆಚರಿಸಲು ಯೋಗ್ಯವಾದ ನಿತ್ಯ, ನೈಮಿತ್ತಿಕ, ಕಾಮ್ಯವ್ರತಗಳನ್ನು ವರ್ಣಿಸುತ್ತಾ ವಿಶೇಷವಾಗಿ ಏಕಾದಶಿಯ ಆಚರಣೆಯ ಬಗ್ಗೆ ವಿವರಣೆಯನ್ನು ನೀಡಿರುತ್ತಾರೆ. ಚಂಡಾಲನೂ ಸಹ ಏಕಾದಶಿಯ ಆಚರಣೆಯಿಂದ ಉತ್ತಮ ಪ್ರಗತಿಯನ್ನು ಹೊಂದಬಹುದೆಂದು ಆಖ್ಯಾಯಿಕೆಯ ಮೂಲಕ ಸ್ಪಷ್ಟಪಡಿಸಿರುತ್ತಾರೆ. ಪ್ರಯಾಗದಲ್ಲಿರುವ ಮೂಲಮಾಧವ, ಶಂಖಮಾಧವ, ಚಕ್ರಮಾಧವ, ಗದಾಮಾಧವ, ಪದ್ಮಮಾಧವ, ಅನಂತಮಾಧವ, ಬಿಂದುಮಾಧವ, ಮನೋಹರಮಾಧವ, ಅಸಿಮಾಧವ, ಸಂಕಟಹರಮಾಧವ, ಶೂಲಟಂಕೇಶ್ವರ, ತಿಲಭಾಂಡೇಶ್ವರ, ಸಾಕ್ಷೀವಿನಾಯಕ, ಲಲಿತೇಶ್ವರರ ವರ್ಣನೆಗಳೂ ಸಹ ಮಾಡಲ್ಪಟ್ಟಿವೆ.

ಪ್ರಯಾಗದಲ್ಲಿರುವ ತೀರ್ಥಗಳು ಅಸಂಖ್ಯಾತ. ಇವುಗಳಲ್ಲಿ ಪ್ರಧಾನವಾದವುಗಳೆಂದರೆ, ತೀರ್ಥರಾಜನಾದ ತ್ರಿವೇಣಿ, ಆದಿತ್ಯ ತೀರ್ಥ, ಋಣವಿಮೋಚನತೀರ್ಥ, ರಾಮತೀರ್ಥ, ಸರಸ್ವತೀ ಕುಂಡ, ಪಿಶಾಚಪೀಡಾಪರಿಹಾರಕ ತೀರ್ಥ, ಕಾಮತೀರ್ಥ, ಕಾಪಿಲತೀರ್ಥ,

ವಾಸುಕೀತೀರ್ಥ, ಬ್ರಹ್ಮಕುಂಡ, ದಶಾಶ್ವಮೇಧ ತೀರ್ಥ, ಲಕ್ಷ್ಮೀತೀರ್ಥ, ಊರ್ವಶೀತೀರ್ಥ, ಬ್ರಹ್ಮನಾಲತೀರ್ಥ, ಸೋಮತೀರ್ಥ, ಸೂರ್ಯತೀರ್ಥ, ಅನರಕತೀರ್ಥ, ವ್ಯಾಸತೀರ್ಥಗಳು. ಇದಾದ ನಂತರ ಗಂಗಾ, ಯಮುನಾ, ಸರಸ್ವತಿಗಳ ಅವತರಣೆಯ ವಿವರವು ಸುಂದರವಾಗಿ ಕೊಡಲ್ಪಟ್ಟಿದೆ. ಯಮುನೆಯು ಪ್ರವಹಿಸಿ ಬರುವಾಗ ಸಪ್ತದ್ವೀಪಗಳು, ಸಪ್ತಸಾಗರಗಳನ್ನು ದಾಟಿ ಬಂದಿರುತ್ತಾಳೆ. ಇಲ್ಲಿ ಗಮನಾರ್ಹವಾದ ಒಂದು ವಿಚಾರವೆಂದರೆ, ಐದನೆಯದಾಗಿ ದಧಿಸಾಗರವೂ, ಆರನೆಯದಾಗಿ ಕ್ಷೀರಸಾಗರವೂ ಹೇಳಲ್ಪಟ್ಟಿವೆ. ಶ್ರೀಮದ್ಭಾಗವತದಲ್ಲಿ ಐದನೆಯದಾಗಿ ಕ್ಷೀರಸಾಗರವೂ, ಆರನೆಯದಾಗಿ ದಧಿಸಾಗರವೂ ಹೇಳಲ್ಪಟ್ಟಿವೆ. ಶ್ರೀಮಧ್ವಾಚಾರ್ಯರು ಶ್ರೀಮದ್ಭಾಗತ ತಾತ್ಪರ್ಯ ನಿರ್ಣಯದಲ್ಲಿ 'ವ್ಯತ್ಯಾಸಂ ಕ್ಷೀರಸಾಗರೇ' ಎಂಬ ವಚನದಿಂದ, ಶ್ರೀಮದ್ಭಾಗವತದಲ್ಲಿ ಹೇಳಿರುವುದನ್ನು ವ್ಯತ್ಯಾಸ ಮಾಡಿಕೊಳ್ಳಬೇಕೆಂದು ತಿಳಿಸಿರುತ್ತಾರೆ. ಶ್ರೀಮದ್ಭಾಗವತದಲ್ಲಿ, 'ಕ್ಷೀರ' ಎಂಬ ಶಬ್ದದಿಂದ ಸಿಹಿ ಮೊಸರನ್ನೂ, 'ದಧಿ' ಎಂಬ ಶಬ್ದದಿಂದ ಗಟ್ಟಿ ಹಾಲನ್ನೂ ಇಟ್ಟುಕೊಳ್ಳಬೇಕೆಂದೂ ಸಹ ತಿಳಿಸಿರುತ್ತಾರೆ. 'ಅನಾಮ್ಲಂ ತು ದಧಿ ಕ್ಷೀರಂ ಸಾಂದ್ರಂ ಕ್ಷೀರಂ ತಥಾ ದಧಿ' ಇದರಿಂದ ಪ್ರಯಾಗ ಮಾಹಾತ್ಮ್ಯೆಯ ಪ್ರಾಮಾಣ್ಯಕ್ಕೆ ಮತ್ತೊಂದು ಆಚಾರ್ಯರ ಸಮ್ಮತಿಯನ್ನು ಹೇಳಿದಂತಾಗುತ್ತದೆ. ಸುಮಂಗಲಸ್ತ್ರೀಯರೂ ಸಹ ವೇಣೀದಾನರೂಪವಾದ ಮುಂಡನವನ್ನು ಅವಶ್ಯವಾಗಿ ಈ ಕ್ಷೇತ್ರದಲ್ಲಿ ಮಾಡಿಸಿಕೊಳ್ಳಬೇಕೆಂದು ವರ್ಣಿತವಾಗಿದೆ. ಈ ಪ್ರಯಾಗ ಮಾಹಾತ್ಮ್ಯೆಯಲ್ಲಿ ವರ್ಣಿತವಾದ ಅನೇಕ ಪ್ರಮೇಯಗಳನ್ನು ಮನದಟ್ಟುಮಾಡಲು ಅಲ್ಲಲ್ಲಿ ಉಪಾಖ್ಯಾನಗಳೂ ಹೇಳಲ್ಪಟ್ಟಿವೆ. ಅವುಗಳಲ್ಲಿ ವಿಕಟೆಯ, ಶುಭನ, ವಿಷ್ಣುಶರ್ಮ-ಕೃಷ್ಣಶರ್ಮರ ಶ್ರೀಪತಿ-ಜಯರ, ಗರುಡನ ಉಪಾಖ್ಯಾನ ಮತ್ತು ವಡವಾಖ್ಯಾನ ಇವುಗಳನ್ನು ಉಲ್ಲೇಖಿಸಬಹುದು. ಕಡೆಯಲ್ಲಿ ಜ್ಞಾನ-ಭಕ್ತಿಗಳೇ ಮೋಕ್ಷಸಾಧನಗಳೆಂದು ನಿರೂಪಿಸಿ, ಅಷ್ಟಾಂಗ ಯೋಗವನ್ನೂ ನಿರೂಪಿಸಿರುತ್ತಾರೆ. ಶೇಷದೇವರಿಂದ ಉಪದೇಶವನ್ನು ಪಡೆದ ಸನಕಾದಿಗಳು ಇದನ್ನು ಸ್ವರ್ಗದಲ್ಲಿ ಪ್ರಚಾರ ಮಾಡಿರುತ್ತಾರೆ. ಸೂತರು ಪ್ರಯಾಗ ಮಾಹಾತ್ಮ್ಯೆಯ ಶ್ರವಣಫಲವನ್ನು ತಿಳಿಸಿ ಉಪಸಂಹರಿಸಿರುತ್ತಾರೆ.

ಪ್ರಕೃತ ಈ ಪ್ರಯಾಗ ಮಾಹಾತ್ಮ್ಯೆಯ ಕನ್ನಡಾನುವಾದದ ಬಗ್ಗೆಯೂ ಎರಡು ಮಾತುಗಳನ್ನು ಹೇಳಬಯಸುತ್ತೇನೆ. ಈ ಭಾಷಾಂತರವು ಕೇವಲ ಕ್ರಿಯಾನ್ವಯ ತರ್ಜುಮೆಯಾಗಿರದೆ ಅಲ್ಲಲ್ಲಿ ಅವಶ್ಯಕವಾದ ವಿವರಣೆಗಳನ್ನು ನೀಡಿದೆ. ಅಲ್ಲಲ್ಲಿ ಮೂಡಬಹುದಾದ ಸಂಶಯಗಳ ನಿವಾರಣೆಯನ್ನೂ ಮಾಡಲಾಗಿದೆ. ಪ್ರಮೇಯಗಳಿಗೆ ವಿರೋಧವು ಕಂಡೆಡೆಯಲ್ಲಿ ಸೂಕ್ತವಾದ ಪರಿಹಾರವನ್ನು ನೀಡಲಾಗಿದೆ. ಮಾಧವ ಅಷ್ಟೋತ್ತರ ಶತನಾಮಗಳ ನಿರ್ವಚನೆ, ತ್ರಿವೇಣಿಯ ಪರಬ್ರಹ್ಮತ್ವ ವರ್ಣನೆಯ ವಿಶ್ಲೇಷಣೆಗಳು ಈ ಭಾಷಾಂತರ ಕಾರ್ಯದ ಮೌಲ್ಯವನ್ನು ಹೆಚ್ಚಿಸಿವೆ. ಗ್ರಂಥಕರ್ತರು ನಡೆಸಿದ ವಿವಿಧ ಮಾಧ್ವಗ್ರಂಥಗಳ ಅಧ್ಯಯನ ಹಾಗೂ ಪರಿಶೀಲನೆಗಳ ಫಲರೂಪವಾಗಿ ಈ ಬೃಹತ್ಕಾರ್ಯವು ಮೂಡಿಬಂದಿದೆ ಎಂದರೆ ಅತಿಶಯೋಕ್ತಿಯೇನಲ್ಲ.

31/7/201

ಡಾ॥ ರಘುನಂದನಾಚಾರ್ಯ

# ಲೇಖಕರ ನುಡಿ

ಸುಮಾರು ವರ್ಷಗಳ ಹಿಂದೆ ಯಾತ್ರಾರ್ಥಿಯಾಗಿ ಪ್ರಯಾಗ ಕ್ಷೇತ್ರಕ್ಕೆ ಭೇಟಿ ನೀಡಿದಾಗ ನನ್ನ ಸಹಜ ಕುತೂಹಲದಿಂದಾಗಿ ಕ್ಷೇತ್ರ ಮಾಹಾತ್ಮ್ಯೆಯ ಬಗ್ಗೆ ತಿಳಿಯುವ ಆಸಕ್ತಿಯುಂಟಾಯಿತು. ದಾರಾಗಂಜ್‌ನಲ್ಲಿ ನಾನು ತಂಗಿದ್ದ ಸ್ಥಳದಲ್ಲಿ ಸಂಪರ್ಕಕ್ಕೆ ಬಂದ ಶ್ರೀ ನಾರಾಯಣಾಚಾರ್ಯರು ನನ್ನ ಆಸಕ್ತಿಯನ್ನು ಗಮನಿಸಿ ''ಶತಾಧ್ಯಾಯೀ ಪ್ರಯಾಗ ಮಾಹಾತ್ಮ್ಯೆ''ಯ ಗ್ರಂಥವನ್ನು ಕೊಟ್ಟರು. ಗ್ರಂಥದ ಸ್ಥೂಲಾವಲೋಕನದಿಂದಲೇ ಆಸಕ್ತಿಯು ತೀವ್ರವಾಗಿ ನಂತರದ ದಿನಗಳಲ್ಲಿ ಅಮೂಲಾಗ್ರವಾಗಿ ನಡೆಸಿದ ಗ್ರಂಥಾಧ್ಯಯನದಿಂದ ಪುಲಕಿತವಾದ ಮನದ ಹರ್ಷದ ಹೊನಲನ್ನು ವೈಚಾರಿಕವಾಗಿ ಸಜ್ಜನ ವೃಂದದಲ್ಲಿ ಹಂಚಿಕೊಳ್ಳಲು ಹವಣಿಸಿದುದರ ಫಲವಾಗಿ ಗ್ರಂಥದ ಪೂರ್ವಾರ್ಧ್ಯಾಯದ ಅನುವಾದವು ಮೂಡಿ ಬಂದಿತು. ಈ ಅನುವಾದವು ಪ್ರೊ. ಕೆ.ಟಿ. ಪಾಂಡುರಂಗಿಯವರ ಅವಗಾಹನೆಗೊಳಗಾಗಿ, ಅವರಿಂದ ದೊರೆತ ಪ್ರೋತ್ಸಾಹದಿಂದ ಉತ್ತರಾರ್ಧವೂ ಸಹ ಅನುವಾದಿತವಾಗಿ ಗ್ರಂಥಾನುವಾದವು ಸಂಪೂರ್ಣವಾಯಿತು. ಸಂಪೂರ್ಣವಾದ ಗ್ರಂಥಾನುವಾದಕ್ಕೆ ಅನುಗ್ರಹ ಸಂದೇಶ ನೀಡಿ ಆಶೀರ್ವದಿಸಿ ಉತ್ತೇಜಿಸಿದ ಉತ್ತರಾದಿ ಮಠದ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳು.

ಕಾಶಿಯ ಮುದ್ರಣಾಲಯವೊಂದರಲ್ಲಿ ಕಲ್ಲಚ್ಚು ಪ್ರತಿಯಾಗಿ ಪ್ರಕಟವಾಗಿರುವ ಈ ಗ್ರಂಥರತ್ನವನ್ನು ಸನ್ಮಾನ್ಯ ಶ್ರೀ ಶಿವಶಂಕರರಾಮಶರ್ಮಶೋಕರು ಸರ್ವ ಸಜ್ಜನರಿಗೂ ಉಪಯುಕ್ತವಾಗುವುದೆಂಬ ದೃಷ್ಟಿಯಿಂದ ಪಂಡಿತ ಶ್ರೀ ಚಂದ್ರಶೇಖರ ಶಾಸ್ತ್ರಿಯವರಿಂದ ಮೂಲ ಶ್ಲೋಕಗಳಿಗೆ ಟೀಕಾವ್ಯಾಖ್ಯಾನಗಳನ್ನು ಹಿಂದಿಯಲ್ಲಿ ಬರೆಸಿ ಪ್ರಕಟಿಸುವ ಸಾಹಸ ಮಾಡಿದರು. ಸನಾತನ ಧರ್ಮದ ಕಟ್ಟಾಳಾಗಿಯೂ, ದಯಾಪರರೂ ಆಯುರ್ವೇದಿಯ ವೈದ್ಯರೂ ಮತ್ತು ಪಂಡಿತರೂ ಆಗಿದ್ದ ಇವರು ಪುಸ್ತಕವು ಪ್ರಕಟವಾಗುವ ಮೊದಲೇ ದೈವಾಧೀನರಾದುದು ದುರದೃಷ್ಟಕರ ಸಂಗತಿಯಾದರೂ ಅವರ ಪುತ್ರರ ಪ್ರಯತ್ನದಿಂದ ಪ್ರಕಟಣಾಕಾರ್ಯವು ಪೂರ್ಣವಾಗಿ ಈ ಗ್ರಂಥರತ್ನದ ಪ್ರತಿಗಳು ದೊರೆಯುವಂತಾಯಿತು. ಹಿಂದೀ ಅನುವಾದವಿದ್ದ ಈ ಗ್ರಂಥವು ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾಗಿಲ್ಲದ್ದರಿಂದಲೂ, ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಎಂ.ಎನ್. ವೆಂಕಟಾಚಲಯ್ಯ ಮತ್ತು ಶ್ರೀ ವಿ.ಆರ್. ಪಂಚಮುಖೀಯವರ ಉತ್ತೇಜನದ ಮೇರೆಗೆ ಅನುವಾದಿತ ಗ್ರಂಥದ ಪ್ರಕಟಣಾಸಾಹಸಕ್ಕೂ ನಿರ್ಧರಿಸಿದೆ. ಈ ಕಾರ್ಯಕ್ಕೆ ಬೇಕಾದ ಧನದ ಮೂಲ ಭಾಗವನ್ನು ಸ್ವತಃ ಒದಗಿಸಿಕೊಂಡು ಮಿಕ್ಕಿದ್ದನ್ನು ಪ್ರಯತ್ನಪಟ್ಟು ಆಸಕ್ತ ಬಂಧುವರ್ಗದಿಂದಲೂ ಮತ್ತು ಇಷ್ಟಮಿತ್ರರಿಂದಲೂ ಸಂಗ್ರಹಿಸಿ ಉಪಯೋಗಿಸಿದ್ದೇನೆ. ಇವರೆಲ್ಲರಿಗೂ ನಾನು ಅಭಾರಿಯಾಗಿದ್ದೇನೆ. ಶ್ರೀ ವೇಣಿಮಾಧವ - ದೇವರು ಇವರುಗಳನ್ನು ಅನುಗ್ರಹಿಸಲಿ.

ಪ್ರಯಾಗ ಮಾಹಾತ್ಮ್ಯೆಯ ಈ ಗ್ರಂಥವು ಪದ್ಮಪುರಾಣಾಂತರ್ಗತ ಆಗಿದ್ದು ಶತಾಧ್ಯಾಯಗಳು ಮತ್ತು ಸುಮಾರು ೫೦೦೦ ಶ್ಲೋಕಗಳಿಂದ ಕೂಡಿದ್ದು, ವಿಷ್ಣುಸರ್ವೋತ್ತಮತ್ವ ಮತ್ತು ಪ್ರಯಾಗ ಮಾಹಾತ್ಮ್ಯೆಯನ್ನೇ ಪ್ರಧಾನವಾಗಿ ಉಳ್ಳದ್ದಾಗಿದೆ. ಎಲ್ಲ ಪುರಾಣ ಗ್ರಂಥಗಳಂತೆಯೇ ಶ್ಲೋಕಗಳು ಸಂಸ್ಕೃತ ಭಾಷೆಯಲ್ಲಿದ್ದು ಅನುಷ್ಟುಪ್ ವೃತ್ತದಲ್ಲಿವೆ. ಕನ್ನಡಿಗರಿಗೆ ಸುಲಭವಾಗಿ ಓದಲು ಅನುಕೂಲವಾಗುವ ದೃಷ್ಟಿಯಿಂದ ಮೂಲ ಶ್ಲೋಕಗಳನ್ನು ಕನ್ನಡದಲ್ಲಿ

ಕೊಡಲಾಗಿದೆ. ಈ ಶ್ಲೋಕಗಳು ಸಂಧಿಸಮಾಸಗಳು ಛಂದಸ್ಸು ಮತ್ತು ವ್ಯಾಕರಣರೀತ್ಯ ಶುದ್ಧವಾಗಿರಲು ಸಾಕಷ್ಟು ಪರಿಶ್ರಮ ವಹಿಸಲಾಗಿದೆ. ನನಗೆ ಹಿಂದೀ ಭಾಷೆಯಲ್ಲಿರುವ ಅನುಭವ ಮತ್ತು ಸಂಪ್ರದಾಯರೀತ್ಯ ಹೆಸರಾಂತ ವಿದ್ವಾಂಸರ ಬಳಿ ಸಂಸ್ಕೃತ ಭಾಷೆ, ವೇದಾಂತ, ತರ್ಕಶಾಸ್ತ್ರ ಮತ್ತು ಕಾವ್ಯ ಇತ್ಯಾದಿಗಳ ಪಾಠವಾಗಿರುವುದು ಅನುವಾದ ಮತ್ತು ವ್ಯಾಖ್ಯಾನಸಮಯದಲ್ಲಿ ಉಪಯುಕ್ತವಾದವು. ಹೀಗೆ ನನ್ನ ಸಜ್ಜೀವನಕ್ಕೆ ಕಾರಣರಾದ ತಂದೆಯವರನ್ನು ಮತ್ತು ಗುರುವೃಂದವನ್ನು ಸ್ಮರಿಸಿ ನಮಿಸುವೆನು. ಅನುವಾದದಲ್ಲಿ ಶ್ಲೋಕದ ಪೂರ್ತಿಪದಗಳ ಭಾವವನ್ನು ಲೋಪವಿಲ್ಲದೆ ಸಾರಾಂಶಾರ್ಥದಲ್ಲಿ ತರಲಾಗಿದೆ. ಅಷ್ಟೋತ್ತರಶತನಾಮಾಧ್ಯಾಯದಲ್ಲಿ ಅನುವಾದವು ಕೇವಲ ನಾಮಾನುವಾದವಾಗಲ್ಲದೇ ಪ್ರತಿನಾಮವನ್ನು ಅರ್ಥಸಹಿತವಾಗಿ ವಿವರಿಸಲಾಗಿದೆ. ಅಲ್ಲಲ್ಲಿ ಕೆಲವೊಂದು ವಿಚಾರಗಳಲ್ಲಿ ವಿರೋಧಾಭಾಸವು ತೋರುವುದಾದರೂ ಇವುಗಳಿಗೆ ಅಲ್ಲಲ್ಲೇ ಸೂಕ್ಷ್ಮವಾದ ವಿವರಣೆಯನ್ನು ಮತ್ತು ಕೆಲವೆಡೆ ವಿಶೇಷ ವಿಷಯಗಳನ್ನು ಸಹ ಕಂಸಗಳಲ್ಲಿ ಕೊಡಲಾಗಿದೆ. ಗ್ರಂಥವು ಬೃಹತ್ತಾಗಿರುವದರಿಂದಲೂ, ಅನುವಾದವು ಮೂಲ ಶ್ಲೋಕಗಳಿಂದ ದೂರಸರಿಯಬಾರದೆಂಬ ದೃಷ್ಟಿಯಿಂದಲೂ ಈ ಶಾಸ್ತ್ರ ಪ್ರಕ್ರಿಯೆಗಳನ್ನು ಬಹಳವಾಗಿ ಬಳಸಲಾಗಿಲ್ಲ. ಇದನ್ನು ಮನವರಿಕೆ ಮಾಡಿಕೊಂಡು ಓದುಗರು ಅನುವಾದವನ್ನು ಹಂಸಕ್ಷೀರನ್ಯಾಯದಿಂದ ಸ್ವೀಕರಿಸಬೇಕೆಂದು ಕೋರುತ್ತೇನೆ.

ವೇದಾಂತ ಶಿರೋಮಣಿ ಡಾ. ರಘುನಂದನಾಚಾರ್ಯರು ಗ್ರಂಥಾನುವಾದವನ್ನು ಪರಿಷ್ಕರಿಸಿದ್ದಲ್ಲದೆ ಕರಡು ತಿದ್ದುವದರಲ್ಲೂ ಆಸಕ್ತಿಯಿಂದ ತಮ್ಮನ್ನು ತೊಡಗಿಸಿಕೊಂಡಿದ್ದಕ್ಕಾಗಿ ಅವರಿಗೆ ಆಭಾರಿಯಾಗಿದ್ದೇನೆ. ಗ್ರಂಥಾನುವಾದವನ್ನು ಅಂದ ಮತ್ತು ಸ್ಫುಟವಾಗಿಯೂ ಬರೆದುಕೊಟ್ಟ ಸಹೋದರ ಜಿ. ಎಸ್.ಬಿ. ನರಸಿಂಹಮೂರ್ತಿಗೆ, ಗ್ರಂಥದ ಡಿ.ಟಿ.ಪಿ. ಮಾಡಿದ ಶ್ರೀ ಡಿ.ವಿ.ಪ್ರಹ್ಲಾದ್ ಮತ್ತು ಹೆಚ್.ಎಸ್.ಅಚ್ಯುತ ಅವರಿಗೆ, ಗ್ರಂಥದ ಪ್ರಕಟಣೆಯಲ್ಲಿ ಆಸಕ್ತಿ ವಹಿಸಿ ಪ್ರಕಟಣಾಪೂರ್ವವಾಗಿ ಓದಿ ಪರಿಷ್ಕರಿಸಿ ಗ್ರಂಥವನ್ನು ಅಂದವಾಗಿ ಮುದ್ರಿಸಿರುವ ಪ್ರಸಿದ್ಧ ವಿದ್ವನ್ ಮನೆತನಕ್ಕೆ ಸೇರಿದವರಾದ ಪ್ರಭಾ ಮುದ್ರಣಾಲಯದ ಶ್ರೀ ಕೃಷ್ಣಾಚಾರ್ಯರಿಗೂ ಮತ್ತು ಕರಡು ಪ್ರತಿ ತಿದ್ದುವದರಿಂದ ಹಿಡಿದು ಪ್ರಕಟಣಾ ಕಾರ್ಯಗಳೆಲ್ಲದರ ಉಸ್ತುವಾರಿಯಲ್ಲಿ ಸಹಭಾಗಿಯಾದ ಶ್ರೀ ನಗರಗದ್ದೆ ವಿಜಯ ವಿಠ್ಠಲ ಇವರೆಲ್ಲರಿಗೂ ನಾನು ಕೃತಜ್ಞನು. ಈ ಕಾರ್ಯದಲ್ಲಿ ನನ್ನನ್ನು ಪ್ರೋತ್ಸಾಹಿಸಿದ ಸರ್ವೋಚ್ಚನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಎಂ.ಎನ್.ವೆಂಕಟಾಚಲಯ್ಯ, ದ್ವೈತ ವೇದಾಂತ ಪ್ರತಿಷ್ಠಾನದ ನಿರ್ದೇಶಕರಾದ ಪ್ರೊ|| ಕೆ.ಟಿ. ಪಾಂಡುರಂಗೀ ಮತ್ತು ತಿರುಪತಿಯಲ್ಲಿರುವ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠದ ಕುಲಪತಿಯಾದ ಡಾ|| ವಿ.ಆರ್. ಪಂಚಮುಖೀಯವರಿಗೂ ನನ್ನ ವಂದನೆಗಳು. ಸುಮಾರು ಎರಡು ಸಂವತ್ಸರಗಳು ಹಿಡಿದ ಈ ಅನುವಾದ ಮತ್ತು ಪ್ರಕಟಣಾ ಕಾರ್ಯದ ಸಮಯದಲ್ಲಿ ತಾಳ್ಮೆಯಿಂದಲೂ ಆಸಕ್ತಿಯಿಂದಲೂ ಪ್ರೋತ್ಸಾಹಿಸಿದ ನಮ್ಮ ಕುಟುಂಬದವರಿಗೂ ಮತ್ತು ಈ ಕಾರ್ಯದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಕರಿಸಿರುವ ಸಜ್ಜನ ವೃಂದಕ್ಕೆ ನಾನು ಆಭಾರಿಯಾಗಿದ್ದೇನೆ. ಸಜ್ಜನರು ಗ್ರಂಥವನ್ನು ಪರಾಮರ್ಶಿಸಿ, ಪರಬ್ರಹ್ಮನ ಅಚಿಂತ್ಯ ಅವ್ಯಕ್ತ ಅದ್ಭುತ ಮತ್ತು ಅನಂತ ಮಹಿಮೆಯಿಂದ ಪುಳಕಿತರಾದಲ್ಲಿ ಈ ಕೃತಿಯು ಸಾರ್ಥಕವಾಯಿತೆಂದು ತಿಳಿಯುವೆನು.

ಇತಿ ಸಜ್ಜನ ವೃಂದದ ಸೇವಕ

ಸರೋವರ ಭೀಮಸೇನಾಚಾರ್ಯ ಕೃಷ್ಣಮೂರ್ತಿ

# ಪರಿವಿಡಿ

### ಪದ್ಮಪುರಾಣೇ ಪಾತಾಳಖಂಡೇ

# ಪ್ರಯಾಗಮಾಹಾತ್ಮ್ಯಮ್

**ಪ್ರಯಾಗಮಾಧವೋ ಭೂಯಾದ್ದಯಾವಾರಿನಿಧಿರ್ಹೃದಿ ।**
**ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ ಸಂಸ್ಮೃತಿಃ ॥**

–ಶ್ರೀವಾದಿರಾಜಸ್ವಾಮಿಗಳ ತೀರ್ಥಪ್ರಬಂಧದ ಉತ್ತರಪ್ರಬಂಧದಿಂದ

**ಅನುವಾದ—**

ಯಾರ ಒಮ್ಮೆಯ ಸ್ಮರಣೆಯು ಉತ್ತಮವಾದ ಯಾಗಕ್ಕೆ ಸದೃಶವಾದ ಫಲವುಳ್ಳದ್ದೋ ಅಂತಹ ತ್ರಿವೇಣಿಯ(ಪ್ರಯಾಗದ) ಮುಖ್ಯದೇವತೆಯಾದ ದಯಾಸಮುದ್ರನಾದ ವೇಣೀ-ಮಾಧವದೇವರು ನಮ್ಮ ಹೃತ್ಕಮಲದಲ್ಲಿ ಬಂದು ನೆಲಸಲಿ, ಮನಸ್ಸಿನಲ್ಲಿಯೂ ನೆಲಸಲಿ.

**ಸಿತಾಸಿತೇ ಯತ್ರ ತರಂಗಚಾಮರೇ ನದ್ಯೌ ವಿಭಾತೇ ಮುನಿಭಾನುಕನ್ಯಕೇ ।**
**ನೀಲಾತಪತ್ರಂ ವಟ ಏವ ಸಾಕ್ಷಾತ್ಸ ತೀರ್ಥರಾಜೋ ಜಯತಿ ಪ್ರಯಾಗಃ ॥**

–ಪ್ರಯಾಗಮಾಹಾತ್ಮ್ಯೆಯ ಚತುರ್ಥಾಧ್ಯಾಯದಿಂದ

**ಅನುವಾದ—**

ಶ್ರೀಜಹ್ನುಋಷಿಯ ಮಗಳಾದ ಗಂಗೆಯು ಮತ್ತು ಸೂರ್ಯನ ಮಗಳಾದ ಯಮುನೆಯು ತಮ್ಮ ಪ್ರವಾಹಗಳಲ್ಲುದ್ಭವವಾಗುವ ಶ್ವೇತ ಮತ್ತು ಕಪ್ಪು ವರ್ಣದ ಅಲೆಗಳೆಂಬ ಚಾಮರಗಳನ್ನು ಯಾವ ಪ್ರಯಾಗದ ಮುಖ್ಯ ದೇವತೆಯಾದ ಶ್ರೀವೇಣೀಮಾಧವದೇವರಿಗೆ ಬೀಸುತ್ತಿದ್ದಾರೆಯೋ, ಮತ್ತು ಪ್ರಯಾಗದಲ್ಲಿರುವ ಅಕ್ಷಯ್ಯವಟವೃಕ್ಷವು ತನ್ನ ಹಸಿರು(ನೀಲ)ಛತ್ರವನ್ನು ಯಾವ ಕ್ಷೇತ್ರದ ಮೇಲೆ ಹಿಡಿದಿದೆಯೋ, ಅಂತಹ ಪ್ರಯಾಗಕ್ಷೇತ್ರವು 'ತೀರ್ಥರಾಜ'ಎಂಬ ಬಿರುದಾಂಕಿತವಾಗಿ ಜಯಶೀಲವಾಗಲಿ.

**ಅಭಿಪ್ರಾಯ—**

ಗಂಗೆಯ ನೀರು ಬಿಳಿಬಣ್ಣ(ಶ್ವೇತ) ಮತ್ತು ಯಮುನೆಯ ನೀರು ಕಪ್ಪು(ಕೃಷ್ಣ). ಅವುಗಳಲ್ಲಿ ಹುಟ್ಟುವ ಅಲೆಗಳೂ ಅದೇ ಬಣ್ಣಗಳದ್ದಾಗಿದ್ದು ಅವು ಮೇಲೆ ಕೆಳಗೆ ಚಲಿಸಿ, ತ್ರಿವೇಣೀ ಕ್ಷೇತ್ರದ ಮುಖ್ಯ ಆರಾಧ್ಯದೇವತೆಯಾದ ಶ್ರೀಲಕ್ಷ್ಮೀಪತಿಯಾದ ಶ್ರೀ ಮಾಧವದೇವರಿಗೆ ಚಾಮರವನ್ನು ಬೀಸುತ್ತಿವೆಯೋ ಎಂದು ತೋರುತ್ತಿದೆ. ತ್ರಿವೇಣಿಯಲ್ಲಿರುವ ಅಕ್ಷಯ ವಟವೃಕ್ಷವು ತನ್ನ ಹಸಿರು ಎಲೆಗಳಿಂದ ಪ್ರಯಾಗ ಕ್ಷೇತ್ರದ ಮೇಲೆಲ್ಲಾ ವ್ಯಾಪಿಸಿ, ಆ ಕ್ಷೇತ್ರಕ್ಕೂ ಅಲ್ಲಿನ ಮುಖ್ಯ ದೇವತೆಯಾದ ಶ್ರೀಮಾಧವದೇವರಿಗೂ ಛತ್ರದೋಪಾದಿಯಲ್ಲಿ ಇದೆ.

ಇಲ್ಲಿನ ಉಪಮಾನಗಳೆರಡೂ ಅರ್ಥಗರ್ಭಿತವಾಗಿದ್ದು ಪ್ರಯಾಗಕ್ಷೇತ್ರವು ತೀರ್ಥರಾಜ-ನೆಂದೂ, ಅವನಿಗೆ ಈ ಗಂಗೆಯಮುನೆಯರು ಚಾಮರ ಬೀಸುತ್ತಿದ್ದಾರಲ್ಲದೆ ರಾಜರಿಗೆ ಶ್ವೇತಛತ್ರದ ರೂಪದಲ್ಲಿ ಅಕ್ಷಯ್ಯವಟವೃಕ್ಷವಿದ್ದು ತನ್ನ ಹಸಿರೆಲೆಗಳ ವ್ಯಾಪ್ತಿಯಿಂದ ಇದೇ ಪ್ರಯಾಗದ ಮೇಲೆಲ್ಲಾ ವ್ಯಾಪಿಸಿ ನೀಲವರ್ಣದ (ಅಥವಾ ಹಸಿರು) ಛತ್ರವನ್ನು ಹಿಡಿದಿದೆ. ಅಂದರೆ ಪ್ರಯಾಗಕ್ಷೇತ್ರಕ್ಕೆ ಸಾರ್ವಭೌಮನ ಮರ್ಯಾದೆಯನ್ನು ಕೊಟ್ಟು ಈ ಎರಡು ನದಿಗಳೂ ಮತ್ತು ವಟವೃಕ್ಷವೂ ಪ್ರಯಾಗವು ತೀರ್ಥನಾಯಕನೆಂದು ಸಾರಿ ಹೇಳುತ್ತಿವೆ ಎಂಬ ಭಾವವು ಬರುವುದು.

## ॥ ಅಥ ಪ್ರಥಮೋಽಧ್ಯಾಯಃ ॥ ೧ ॥

**ಶ್ರೀ ವೇದವ್ಯಾಸ ಉವಾಚ—**

**ಕದಾಚಿನ್ನೈಮಿಷಾರಣ್ಯೇ ಸೂತಂ ಪರಮಕೋವಿದಮ್ ।**
**ಕೋವಿದಾಸ್ಸರ್ವಧರ್ಮೇಷು ಸರ್ವಯಜ್ಞೇಷು ಕೋವಿದಾಃ ॥ ೧ ॥**

## ॥ ಒಂದನೆಯ ಅಧ್ಯಾಯವು ॥

**ಶ್ರೀ ವೇದವ್ಯಾಸರು ಹೇಳಿದರು—**

ಹಿಂದೆ ಒಂದಾನೊಂದು ಕಾಲದಲ್ಲಿ ಅತಿಶ್ರೇಷ್ಠ ವಿದ್ವಾಂಸರೂ ಎಲ್ಲ ಧರ್ಮಗಳಲ್ಲಿ ಮತ್ತು ಎಲ್ಲ ಯಜ್ಞಗಳಲ್ಲಿಯೂ ಜ್ಞಾನಿಗಳಾಗಿರತಕ್ಕ ಶೌನಕಾದಿಗಳು ನೈಮಿಷಾರಣ್ಯದಲ್ಲಿ ಕಲೆತು ಪರಮ-ವಿದ್ವಾಂಸರಾದ ಶ್ರೀಸೂತ ಪುರಾಣಿಕರನ್ನು ಕುರಿತು ಈ ರೀತಿ ಪ್ರಶ್ನಿಸಿದರು ॥ ೧ ॥

**ಶ್ರುತಿಸ್ಮೃತಿಪುರಾಣಜ್ಞಾಸ್ಸದಾಚಾರಪರಾಯಣಾಃ ।**
**ಅನೂಚಾನಾಸ್ಸದಸ್ಯಾಶ್ಚ ಸರ್ವದಾ ಧರ್ಮವಾದಿನಃ ॥ ೨ ॥**
**ಕೇಚಿತ್ಸ್ವಾಧ್ಯಾಯನಿರತಾಃ ಕೇಚಿತ್ ವೇದಾರ್ಥತತ್ಪರಾಃ ।**
**ಕೇಚಿತ್ ಅಧ್ಯಾತ್ಮತತ್ತ್ವಜ್ಞಾಃ ಕೇಚಿದ್ಯೋಗವಿಶಾರದಾಃ ॥ ೩ ॥**
**ತರ್ಕೇಷು ನಿಪುಣಾಃ ಕೇಚಿತ್ ಮೀಮಾಂಸಾಯಾಂ ವಿಚಕ್ಷಣಾಃ ।**
**ವೇದಾಂತಜ್ಞಾನಸಿದ್ಧಾಂತಾಸ್ಸೋಽಹಮಸ್ಮಿ ಜಪೇ ರತಾಃ ॥ ೪ ॥**
**ವೇದಾಭ್ಯಾಸೇಽತಿನಿಪುಣಾಃ ತಪಸಾ ಮೌನಮಾಶ್ರಿತಾಃ ।**
**ಸರ್ವತೀರ್ಥಕೃತಸ್ನಾನಾಃ ಪೃಥ್ವೀಪರ್ಯಟನಕ್ಷಮಾಃ ॥ ೫ ॥**
**ಚತುಷ್ಷಷ್ಟಿಕಲಾಭಿಜ್ಞಾಃ ತೇಜಸಾ ಸೂರ್ಯವರ್ಚಸಃ ।**
**ತ್ರಿಕಾಲಜ್ಞಾ ಮಹಾತ್ಮಾನಸ್ಸ್ವಧರ್ಮನಿರತಾಸ್ಸದಾ ॥ ೬ ॥**
**ಹಿಮವನ್ನಿಲಯಾಃ ಕೇಚಿನ್ಮಹೇಂದ್ರನಿಲಯಾಃ ಪರೇ ।**
**ವಿಂಧ್ಯಾದ್ರಿನಿಲಯಾಶ್ಚಾನ್ಯೇ ಸಹ್ಯಾದ್ರಿನಿಲಯಾಸ್ತಥಾ ॥ ೭ ॥**
**ಶ್ರೀಶೈಲನಿಲಯಾಃ ಕೇಚಿತ್ಕುರುಕ್ಷೇತ್ರಸ್ಥಿತಾಶ್ಚ ಯೇ ।**
**ಪಂಪಾನಿವಾಸಿನೋ ಯೇ ಚ ಕುಮಾರಾಚಲವಾಸಿನಃ ॥ ೮ ॥**
**ಮಲಯಾಚಲಗಾಃ ಕೇಚಿನ್ನಿಷಾಧಾಚಲವಾಸಿನಃ ।**
**ಮಾಲ್ಯವನ್ನಿಲಯಾಃ ಕೇಚಿತ್ತ್ರಿಕೂಟಾಚಲವಾಸಿನಃ ॥ ೯ ॥**

ದಂಡಕಾರಣ್ಯನಿಲಯಾಃ ನಹುಷಾರಣ್ಯವಾಸಿನಃ ।
ಚಂಪಕಾರಣ್ಯಗಾಃ ಕೇಚಿದ್ದೀಕ್ಷಾರಣ್ಯನಿವಾಸಿನಃ ॥ ೧೦ ॥
ಧರ್ಮಾರಣ್ಯಗತಾಃ ಕೇಚಿದ್ಗುಹಾರಣ್ಯರತಾಸ್ತಥಾ ।
ಬ್ರಹ್ಮಾರಣ್ಯರತಾಶ್ಚಾನ್ಯೇಽರ್ಬುದಾರಣ್ಯನಿವಾಸಿನಃ ॥ ೧೧ ॥
ಏತೇ ಚಾನ್ಯೇ ಚ ಮುನಯಃ ಸಶಿಷ್ಯಾಃ ಬಹವೋಽಮಲಾಃ ।
ಸಂತಸ್ಸತ್ಯಧನಾಃ ದಕ್ಷಾಃ ಜಿತಮಾಯಾಃ ಜಿತೇಂದ್ರಿಯಾಃ ॥ ೧೨ ॥
ಅಹಂಕಾರವಿಹೀನಾಶ್ಚ ನಿರ್ಮಮಾಃ ಕಾಮವರ್ಜಿತಾಃ ।
ಭಗವದ್ಧ್ಯಾನನಿರತಾಃ ಲೋಕಾನುಗ್ರಹತತ್ಪರಾಃ ॥ ೧೩ ॥
ನಿರ್ಲೋಭಾಃ ಕ್ರೋಧನಿರ್ಮುಕ್ತಾಶ್ಶಾಂತಾಃ ನಿರ್ಲೋಭಮತ್ಸರಾಃ ।
ಶಮಾದಿಗುಣಸಂಪನ್ನಾಃ ದೃಢಭಕ್ತಾ ದಯಾಲವಃ ॥ ೧೪ ॥
ನಾರಾಯಣಂ ಜಗನ್ನಾಥಂ ಸರ್ವಾಧ್ಯಕ್ಷಮನಾಮಯಮ್ ।
ಯಜಂತಃ ಪರಯಾ ಭಕ್ತ್ಯಾ ತತ್ಪದಾವಿಷ್ಟಮಾನಸಾಃ ॥ ೧೫ ॥
ಕೃಷ್ಣಾಜಿನಪ್ರಾವರಣಾಃ ಜಟಿಲಾ ಬ್ರಹ್ಮಚಾರಿಣಃ ।
ಗೃಣಂತಃ ಪರಮಂ ಬ್ರಹ್ಮ ಜಗಚ್ಚಕ್ಷುರನಾಮಯಮ್ ॥ ೧೬ ॥
ಜಿತನಿದ್ರಾ ಜಿತಾಹಾರಾ ದ್ವಂದ್ವದುಃಖಸಹಿಷ್ಣವಃ ।
ಪಶ್ಯಂತೋ ವಿಷ್ಣುರೂಪೇಣ ಚರಾಚರಮಿದಂ ಜಗತ್ ॥ ೧೭ ॥
ಅಬ್ಭಕ್ಷಾ ವಾಯುಭಕ್ಷಾಶ್ಚ ಶೀರ್ಣಪರ್ಣಾಶನಾಸ್ಸದಾ ।
ನಿರಾಹಾರಾಸ್ತಥಾ ಚಾನ್ಯೇ ಕಂದಮೂಲಫಲಾಶನಾಃ ॥ ೧೮ ॥
ಕೃಚ್ಛ್ರಾತಿಕೃಚ್ಛ್ರಪಾರಾಕೈಸ್ತಪ್ತಕೃಚ್ಛ್ರೈಸ್ತಥೇಂದವೈಃ ।
ನಿತ್ಯಂ ಸಂಶೋಧಿತಾತ್ಮಾನಸ್ತಥಾ ಸಂತಾಪನಾದಿಭಿಃ ॥ ೧೯ ॥
ಧರ್ಮಾರ್ಥಕಾಮಮೋಕ್ಷಾಣಾಮುಪಾಯಂ ಜ್ಞಾತುಮಿಚ್ಛವಃ ।
ಏಕತ್ರ ಮಿಲಿತಾಸ್ಸರ್ವೇ ಪಪ್ರಚ್ಛುರಿದಮಾದರಾತ್ ॥ ೨೦ ॥

**ಈ ಶೌನಕಾದಿಗಳನ್ನು ೧೯ ಶ್ಲೋಕಗಳಲ್ಲಿ ಈ ರೀತಿ ವರ್ಣಿಸಿದ್ದಾರೆ—**

ಈ ಶೌನಕಾದಿಗಳು ವೇದಗಳು, ಪುರಾಣಗಳು ಮತ್ತು ಸ್ಮೃತಿಗಳು ಇವುಗಳ ಜ್ಞಾನವುಳ್ಳವರು, ಸದಾಚಾರವಂತರು, ವೈದಿಕ ಪರಂಪರೆಯಲ್ಲಿದ್ದು ಅದನ್ನು ಉಳಿಸಿಕೊಂಡು ಬಂದವರು, ಷಡಂಗಸಹಿತ ವೇದಗಳನ್ನು ಗುರುಮುಖೇನ ಅಧ್ಯಯನ ಮಾಡಿದವರು, ಎಲ್ಲ ರೀತಿಯ ಸಭೆಗಳಲ್ಲಿಯೂ, ಯಜ್ಞಗಳಲ್ಲಿಯೂ ಭಾಗವಹಿಸುತ್ತಿದ್ದವರು ಮತ್ತು ಎಲ್ಲ ಸಮಯದಲ್ಲಿಯೂ ತಪ್ಪದೆ ವೇದಕ್ಕೆ ಸಮ್ಮತವಾದ ಧರ್ಮಗಳನ್ನೇ ವಾದಿಸುತ್ತಿದ್ದವರು. ॥ ೨ ॥ ಅವರಲ್ಲಿ ಕೆಲವರು ಸ್ವಶಾಖಾ ಅಧ್ಯಯನದಲ್ಲಿ ಆಸಕ್ತರಾಗಿದ್ದರು, ಕೆಲವರು ವೇದಗಳ ಅರ್ಥಗಳನ್ನು ತಿಳಿಯುವದರಲ್ಲಿಯೇ ಆಸಕ್ತರಾಗಿದ್ದರು. ಕೆಲವರು ಪರಬ್ರಹ್ಮನ ವಿಷಯಕವಾದ ತತ್ವಜ್ಞಾನವನ್ನು ತಿಳಿದುಕೊಳ್ಳುವುದರಲ್ಲಿಯೂ ಮತ್ತೆ ಕೆಲವರು ಯೋಗಶಾಸ್ತ್ರಗಳಲ್ಲಿ (ರಾಜಯೋಗ ಕರ್ಮಯೋಗ ಮತ್ತು ಸಾಂಖ್ಯಯೋಗಗಳೆಂಬ ಉಪಾಯಗಳಲ್ಲಿ) ಆಸಕ್ತರಾಗಿದ್ದರು. ॥ ೩ ॥ ಕೆಲವರು ತರ್ಕಶಾಸ್ತ್ರ

ದಲ್ಲಿಯೂ ಕೆಲವರು ಶ್ರೀವೇದವ್ಯಾಸರಿಂದ ರಚಿತವಾದ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿಯೂ ಮತ್ತು ಕರ್ಮಮೀಮಾಂಸಾಶಾಸ್ತ್ರದಲ್ಲಿಯೂ ನಿಪುಣರು ಆಗಿದ್ದರು. ಮತ್ತೆ ಕೆಲವರು ವೇದಾಂತ ಜ್ಞಾನದ ಸಿದ್ಧಾಂತವಾದ ಉಪನಿಷತ್ತುಗಳಲ್ಲಿಯೂ ಪಾರಂಗತರಾಗಿದ್ದರು. ಕೆಲವರು ಭಗವಂತನು ವ್ಯಾಪ್ತನು, ಬಿಡಲು ಅಸಾಧ್ಯನು, ಪೂರ್ಣನು ಎಂಬ ಮಂತ್ರಗಳ ಜಪದಲ್ಲಿ ಆಸಕ್ತರಾಗಿದ್ದರು. ॥ ೪ ॥ ಕೆಲವರು ನಾಲ್ಕು ವೇದಗಳ ಅಧ್ಯಯನಾಭ್ಯಾಸದಲ್ಲಿಯೇ ನಿಪುಣರು ಆಗಿದ್ದರು, ಕೆಲವರು ಮೌನವ್ರತದಲ್ಲಿದ್ದು ಯಾವಾಗಲೂ ಪರಮಾತ್ಮನನ್ನೇ ಧ್ಯಾನ ಮಾಡುತ್ತಿದ್ದರು. ಕೆಲವರು ಎಲ್ಲ ತೀರ್ಥಗಳಲ್ಲಿಯೂ ಸ್ನಾನ ಮಾಡಿ ಬಂದಿದ್ದರು ಮತ್ತೆ ಕೆಲವರು ಇಡೀ ಭೂಮಂಡಲದ ಸಂಚಾರ ಮಾಡುವುದರಲ್ಲಿ ಸಮರ್ಥರಾಗಿದ್ದರು. ॥ ೫ ॥ ಕೆಲವರು ಅರವತ್ತುನಾಲ್ಕು ಕಲೆಗಳಲ್ಲಿಯೂ ಪಾರಂಗತರಾಗಿದ್ದು ಸೂರ್ಯನಂತೆ ವರ್ಚಸ್ವಿಗಳಾಗಿದ್ದರು. ಮತ್ತೆ ಕೆಲವರು ಭೂತಭವಿಷ್ಯದ್ವ ರ್ತಮಾನಗಳೆಂಬ ಮೂರು ಕಾಲಗಳ ಆಗುಹೋಗುಗಳನ್ನು ತಿಳಿದವರಾಗಿದ್ದರು ಮತ್ತು ತಮ್ಮ ಆಶ್ರಮಗಳಿಗೆ ಮತ್ತು ವರ್ಣಗಳಿಗೆ ತಕ್ಕಂತೆ ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿರುವ ಧರ್ಮ-ಗಳಲ್ಲಿಯೇ ಆಸಕ್ತರಾಗಿದ್ದರು. ॥ ೬ ॥

(ಹೀಗೆ ಆರು ಶ್ಲೋಕಗಳಲ್ಲಿ ನೈಮಿಷಾರಣ್ಯದಲ್ಲಿದ್ದ ಶೌನಕಾದಿಗಳ ಪಾಂಡಿತ್ಯ, ಜ್ಞಾನನಿಷ್ಠೆ, ಧರ್ಮನಿಷ್ಠೆ, ಮತ್ತು ಪರಬ್ರಹ್ಮನಿಷ್ಠೆ ಮುಂತಾದವನ್ನು ಹೇಳಿ ಮುಂದೆ ಇವರು ಭಾರತದ ಯಾವ ಯಾವ ಭಾಗಗಳಿಂದ ಬಂದಿದ್ದರು ಎಂಬುದನ್ನು ಹೇಳಿ ಇಲ್ಲಿ ಇಡೀ ಭಾರತದೇಶದ ಚಿತ್ರವನ್ನು ವಿವರಿಸಿದ್ದಾರೆ. ಇದರಲ್ಲಿ ಅನಾದಿಕಾಲದಿಂದಲೂ ಇಡೀ ಭಾರತವು ಹಿಮಾಲಯದಿಂದ ಪ್ರಾರಂಭಿಸಿ ದಕ್ಷಿಣದ ಸಮುದ್ರಗಳವರೆಗೆ, ಗಾಂಧಾರದೇಶದಿಂದ ಬ್ರಹ್ಮ(ಬರ್ಮ) ದೇಶದವರೆಗೂ ಹರಡಿತ್ತೆಂಬ ವಿಷಯವನ್ನು ತೋರಿಸಿದ್ದಾರೆ.)

ಕೆಲವರು ಹಿಮಾಲಯ ಪರ್ವತದಲ್ಲಿದ್ದವರು, ಕೆಲವರು ಮಹೇಂದ್ರ ಪರ್ವತದವರು, ಕೆಲವರು ವಿಂಧ್ಯಪರ್ವತದವರು, ಕೆಲವರು ಸಹ್ಯಾದ್ರಿಯವರು (ಪಶ್ಚಿಮಘಟ್ಟದವರು). ॥ ೭ ॥ ಕೆಲವರು ಶ್ರೀಶೈಲದವರು (ತಿರುಪತಿ ಮತ್ತು ಅಹೋಬಲ ನರಸಿಂಹ ಕ್ಷೇತ್ರ), ಕೆಲವರು ಕುರುಕ್ಷೇತ್ರದವರು, ಕೆಲವರು ಪಂಪಾಕ್ಷೇತ್ರದವರು (ಹಂಪೆ), ಕೆಲವರು ಕುಮಾರಪರ್ವತದವರು (ಕುಕ್ಕೆ ಸುಬ್ರಹ್ಮಣ್ಯಕ್ಷೇತ್ರ). ॥ ೮ ॥ ಕೆಲವರು ಮಲಯಾಚಲದವರು (ಈಗಿನ ಕೇರಳ ಮತ್ತು ಮಲಬಾರ್), ಕೆಲವರು ನಿಷಧಪರ್ವತಪ್ರಾಂತ್ಯದವರು. ಕೆಲವರು ಮಾಲ್ಯವಂತ ಪರ್ವತ, ತ್ರಿಕೂಟಪರ್ವತದವರು. ॥ ೯ ॥ ದಂಡಕಾರಣ್ಯ, ನಹುಷಾರಣ್ಯ, ಚಂಪಕಾರಣ್ಯ ಮತ್ತು ದೀಕ್ಷಾರಣ್ಯವಾಸಿಗಳು. ॥ ೧೦ ॥ ಗುಹೆಗಳಿಂದ ಕೂಡಿದ ಗುಹಾರಣ್ಯಗಳು, ಧರ್ಮಾರಣ್ಯವೆಂದು ಪ್ರಸಿದ್ಧವಾದ ಅರಣ್ಯಗಳು, ಬ್ರಹ್ಮಾರಣ್ಯ ಮತ್ತು ಅರ್ಬುದಾರಣ್ಯದಲ್ಲಿ ವಾಸಿಸುವರು. ಹೀಗೆ ಭಾರತದೇಶದ ನಾನಾಭಾಗಗಳಲ್ಲಿ ಪ್ರಸಿದ್ಧವಾಗಿರುವ ವನಗಳಲ್ಲಿದ್ದು ಸಾಧನೆ ಮಾಡುತ್ತಿರುವವರೆಲ್ಲರೂ ಅಲ್ಲಿ ನೈಮಿಷಾರಣ್ಯದಲ್ಲಿ ಕಲೆತಿದ್ದರು. ॥ ೧೧ ॥ ಇವುಗಳಲ್ಲದೆ ಬೇರೆ ಬೇರೆ ಕಡೆಗಳಿಂದ ಬಂದವರೂ ಅಲ್ಲಿ ಇದ್ದರು. ಇವರುಗಳೆಲ್ಲರೂ ಮನನಶೀಲರಾಗಿದ್ದರು, ಶಿಷ್ಯಸಮೇತರಾಗಿದ್ದರು, ಶುದ್ಧರಾಗಿ-ದ್ದರು, ಸಜ್ಜನರಾಗಿದ್ದರು, ಸತ್ಯದಿಂದ ಐಶ್ವರ್ಯವಂತರಾಗಿದ್ದರು, ಕುಶಲರಾಗಿದ್ದರು, ಪ್ರಾಪಂಚಿಕ ಮೋಹದಿಂದ ಬಿಡಲ್ಪಟ್ಟವರಾಗಿದ್ದರು ಮತ್ತು ಇಂದ್ರಿಯಗಳನ್ನು ಜಯಸಿದವರಾಗಿದ್ದರು. ॥೧೨॥ ಅಹಂಕಾರ ಮಮಕಾರಗಳನ್ನು ಗೆದ್ದಿದ್ದರು, ಕಾಮವನ್ನು ಗೆದ್ದಿದ್ದರು, ಸದಾ ಕಾಲದಲ್ಲಿಯೂ ಭಗವದ್ಧ್ಯಾನಾಸಕ್ತರಾಗಿದ್ದರು. ಇದಲ್ಲದೆ ಜನಗಳಿಗೆ ಅನುಗ್ರಹ ಮಾಡುವುದರಲ್ಲಿಯೇ ಆಸಕ್ತರಾಗಿದ್ದರು ॥ ೧೩ ॥ ಕ್ರೋಧ, ಲೋಭ, ಮಾತ್ಸರ್ಯಗಳನ್ನು ಬಿಟ್ಟವರೂ, ಶಾಂತರೂ, ಶಮಾದಿಗುಣ- (ಪರಮಾತ್ಮನ ವಿಷಯಕವಾದ ಬುದ್ಧಿ ಯುಳ್ಳವರೂ) ಗಳಿಂದ ಕೂಡಿದವರೂ,

ಪರಮಾತ್ಮನ ವಿಷಯಕವಾದ ಮಾಹಾತ್ಮ್ಯಜ್ಞಾನದಿಂದ ಕೂಡಿದ ಅಚಲವಾದ ಸ್ನೇಹ (ಭಕ್ತಿ) ವುಳ್ಳವರೂ ಮತ್ತು ದಯಾಳುಗಳೂ ಆಗಿದ್ದರು. ॥ ೧೪ ॥ ಇವರೆಲ್ಲರೂ ವಿಷ್ಣುಸರ್ವೋತ್ತಮತ್ವ ಜ್ಞಾನದಿಂದ ತುಂಬಿದವರೂ ಆಗಿ ಜಗತ್ತಿಗೆ ಸ್ವಾಮಿಯೂ, ಎಲ್ಲರಿಗೂ ನಿಯಾಮಕನೂ ಮತ್ತು ನಿರ್ದುಷ್ಟನೂ ಆದ ಶ್ರೀಲಕ್ಷ್ಮೀಪತಿಯಾದ, ಕ್ಷೀರಸಾಗರವಾಸಿಯಾದ ಮತ್ತು ಮೋಕ್ಷದಲ್ಲಿಯೂ ನಿಯಾಮಕನಾಗಿರುವ ನಾರಾಯಣಾಖ್ಯಪರಬ್ರಹ್ಮನನ್ನು ಧ್ಯಾನಮಾಡತಕ್ಕವರು ಮತ್ತು ನಾರಾಯಣನ ಪಾದಗಳಲ್ಲಿಯೇ ನೆಲೆಸಿರುವ ಸುದೃಢಸ್ನೇಹವುಳ್ಳವರೂ ಆಗಿದ್ದರು. ॥ ೧೫ ॥ ಇವರೆಲ್ಲರೂ ಜಿಂಕೆ (ಕೃಷ್ಣಮೃಗ)ಯ ಚರ್ಮವನ್ನು ಧರಿಸಿದ್ದರು, ಜಟೆಯನ್ನು ಹೊಂದಿದ್ದರು. ಯಾವಾಗಲೂ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದರು. ಜಗತ್ತಿಗೆ ಕಣ್ಣಿನಂತಿರುವ, ನಿರ್ದೋಷನಾದ ಶ್ರೀಹರಿಯನ್ನು ಯಾವಾಗಲೂ ಸ್ತೋತ್ರ ಮಾಡುತ್ತಿದ್ದರು. ॥ ೧೬ ॥ ಇದಲ್ಲದೆ ಇವರೆಲ್ಲರೂ ನಿದ್ದೆಯನ್ನು ಗೆದ್ದವರು, ಹಸಿವನ್ನು ಗೆದ್ದವರು. ಸುಖದುಃಖ, ಲಾಭಾಲಾಭ, ಜಯಾಜಯ ಮುಂತಾದ ದ್ವಂದ್ವಭಾವಗಳಿಂದುಂಟಾಗುವ ದುಃಖಗಳನ್ನು ಗೆದ್ದವರಾಗಿದ್ದು, ಈ ಚರಾಚರ ಜಗತ್ತು ಶ್ರೀಮಹಾವಿಷ್ಣುವಿನ ಪ್ರೇರಣೆ ಮತ್ತು ನಿಯಾಮಕತ್ವಕ್ಕೆ ಒಳಪಟ್ಟಿದ್ದೆಂಬ ಭಾವನೆಯಿಂದ ಎಲ್ಲವನ್ನೂ ಗ್ರಹಿಸತಕ್ಕವರಾಗಿದ್ದರು. ॥ ೧೭ ॥ ಕೆಲವರು ನೀರು ಕುಡಿದು ಜೀವಿಸುತ್ತಿದ್ದರು, ಕೆಲವರು ಕೇವಲ ಉಸಿರಾಡುವುದರಿಂದ ಬದುಕಿದ್ದರು, ಕೆಲವರು ಒಣಗಿದ ಎಲೆಗಳನ್ನು ತಿಂದು ಬದುಕಿದ್ದರು. ಮತ್ತೆ ಕೆಲವರು ಗೆಡ್ಡೆ, ಬೇರುಗಳನ್ನು ತಿನ್ನುತ್ತಿದ್ದರು ಹಾಗು ಕೆಲವರು ಯಾವ ಆಹಾರವೂ ಇಲ್ಲದೆಯೇ ಇರುತ್ತಿದ್ದರು.॥೧೮॥ ಕೃಚ್ಛ್ರ, ಅತಿಕೃಚ್ಛ್ರ, ಪಾರಾಕ, ತಪ್ತಕೃಚ್ಛ್ರ, ಚಂದ್ರಾಯಣ, ಸಂತಪನಕೃಚ್ಛ್ರ, ಮೊದಲಾದ ವ್ರತಗಳಿಂದ ನಿರಂತರವೂ ತಮ್ಮ ಶರೀರ ಹಾಗು ಮನಸ್ಸುಗಳನ್ನು ಶೋಧಿಸಿಕೊಂಡಿದ್ದರು.॥೧೯॥ ಈ ರೀತಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಪಡೆಯುವ ಉಪಾಯಕ್ಕಾಗಿಯೇ ಈ ನೈಮಿಷಾರಣ್ಯದಲ್ಲಿ (ದಂಡಕೀನದಿಯ ಪ್ರಾಂತ್ಯ) ಇವರೆಲ್ಲರೂ ಒಂದು ಕಡೆ ಕಲೆತು ಶ್ರೀ ಸೂತ ಪುರಾಣಿಕರನ್ನು ಈ ರೀತಿ ಪ್ರಶ್ನೆ ಮಾಡುವವರಾದರು. ॥ ೨೦ ॥

ಋಷಯ ಊಚುಃ—

ಸೂತ ಸೂತ ವಿದಾಂ ಶ್ರೇಷ್ಠ ವ್ಯಾಸಹಾರ್ದವಿಚಕ್ಷಣ ।<br>
ಪರೋಪಕಾರನಿಪುಣ ಸರ್ವಶಾಸ್ತ್ರವಿಚಕ್ಷಣ ॥ ೨೧ ॥<br>
ವ್ಯಾಸೋಕ್ತಾನಿ ಪುರಾಣಾನಿ ತ್ವಯಾಖ್ಯಾತಾನಿ ಯಾನಿ ಚ ।<br>
ತೇಷು ಚೋಕ್ತಾನಿ ತೀರ್ಥಾನಿ ಯಾನಿ ಯಾನಿ ವಿಶೇಷತಃ ॥ ೨೨ ॥<br>
ತತ್ರ ತತ್ರ ಯಥಾಕಾಲಂ ಗತ್ವಾ ವಿಧಿಪುರಸ್ಸರಮ್ ।<br>
ಸೇವಿತಾನಿ ಕ್ವಚಿನ್ಮಾಸಂ ಷಣ್ಮಾಸಂ ವತ್ಸರಂ ತಥಾ ॥ ೨೩ ॥<br>
ಮಾಹಾತ್ಮ್ಯಾನಿ ಚ ಸರ್ವೇಷಾಂ ಮೋಕ್ಷದಾನಿ ಶ್ರುತಾನಿ ಚ ।<br>
ಯಾತ್ರಾಶ್ಚ ತತ್ರ ತತ್ರೋಕ್ತಾಃ ಪುಣ್ಯಕಾಲಪ್ರಶಂಸಕಾಃ ॥ ೨೪ ॥<br>
ದೈನಂದಿನಾಃ ಪಾಕ್ಷಿಕಾಶ್ಚ ಮಾಸಿಕಾ ಋತುಜಾಸ್ತಥಾ ।<br>
ಷಾಣ್ಮಾಸಿಕಾ ವಾರ್ಷಿಕಾಶ್ಚ ಕೃತಾವಿಧಿ ವಿಧಾನತಃ ॥ ೨೫ ॥

ಮುಕ್ತಿದಾಸ್ಸಪ್ತಪುರ್ಯೋಽಪಿ ತಥಾನ್ಯಾನಿ ಬಹೂನಿ ಚ ।
ಶ್ರುತಾನಿ ಪ್ರಣಿಧಾನೇನ ಸೇವಿತಾನಿ ಯಥಾಶ್ರುತಮ್ ॥ ೨೬ ॥
ಚರದ್ಭಿಸ್ಸರ್ವದಾಸ್ಮಾಭಿಃ ಸರ್ವೈರವನಿಮಂಡಲೇ ।
ಚತುರ್ವಿಧಾನಿ ತೀರ್ಥಾನಿ ದೃಷ್ಟಾನಿ ತ್ವತ್ಕೃಪಾವಶಾತ್ ॥ ೨೭ ॥
ಕಾನಿಚಿದ್ದೇವಖಾತಾನಿ ದೈತ್ಯಖಾತಾನಿ ಕಾನಿಚಿತ್ ।
ಋಷಿಖಾತಾನಿ ಚಾನ್ಯಾನಿ ಸಿದ್ಧಖಾತಾನಿ ಕಾನಿಚಿತ್ ॥ ೨೮ ॥
ಸಾತ್ವಿಕಾನಿ ತಥಾನ್ಯಾನಿ ರಾಜಸಾನ್ಯಪರಾಣಿ ಚ ।
ತಾಮಸಾನಿ ಚ ಮಿಶ್ರಾಣಿ ಫಲದಾನಕ್ಷಮಾಣಿ ಚ ॥ ೨೯ ॥
ಕಾಮ್ಯಾನಿ ಕಾನಿಚಿದ್ಭೂಮೌ ನಿಷ್ಕಾಮ್ಯಾನ್ಯಪರಾಣಿ ಚ ।
ಪಾಪಕ್ಷಯಕರಾಣ್ಯೇವ ತಥಾ ನೈಮಿತ್ತಿಕಾನಿ ಚ ॥ ೩೦ ॥
ಭುವಿಸ್ಥಾನಿ ದಿವಿಸ್ಥಾನಿ ಹ್ಯಂತರಿಕ್ಷಸ್ಥಿತಾನಿ ಚ ।
ಪಾತಾಲಸ್ಥಾನಿ ಭಿನ್ನಾನಿ ನಾಮರೂಪವಿಭೇದತಃ ॥ ೩೧ ॥
ವೈಷ್ಣವಾನಿ ಚ ಶೈವಾನಿ ಗಾಣಪತ್ಯಾನಿ ಕಾನಿ ಚ ।
ಸೌರಾಣಿ ಶಾಕ್ತಪೀಠಾನಿ ಸದ್ಯಃಫಲಕರಾಣ್ಯಹೋ ॥ ೩೨ ॥
ಕ್ಷಮಾ ದಯಾ ಚೇಂದ್ರಿಯಾಣಾಂ ನಿಗ್ರಹೋ ಮನಸಸ್ತಥಾ ।
ಯತ್ಸೇವನಾಚ್ಚ ಸಿದ್ಧ್ಯಂತಿ ಸತ್ವಸಿದ್ಧಿಸ್ತಥಾ ನೃಣಾಮ್ ॥ ೩೩ ॥
ಏವಂ ವಿಧಾನಿ ತೀರ್ಥಾನಿ ತ್ವನ್ಮುಖಾತ್ ಶೃಣ್ವತಾಂ ಚ ನಃ ।
ಸಂದೇಹೋಽಯಂ ಸಮುತ್ಪನ್ನಸ್ತೇಷಾಂ ರಾಜಾಸ್ತಿ ವಾ ನ ವಾ ॥ ೩೪ ॥
ಇದಂ ಶ್ರೇಷ್ಠಮಿದಂ ಶ್ರೇಷ್ಠಮಿತ್ಯಾಗ್ರಹಪುರಸ್ಸರಮ್ ।
ವಿವದಾಮೋ ವಯಂ ಸರ್ವೇ ಸಂಶಯಾಪನ್ನಮಾನಸಾಃ ॥ ೩೫ ॥
ಇದಾನೀಂ ತ್ವಾಮನುಪ್ರಾಪ್ತಾಃ ಸರ್ವಸಂಶಯನಾಶನಮ್ ।
ತ್ವಮಿಮಂ ಸಂಶಯಂ ಛಿಂಧಿ ಛೇತ್ತಾ ನಾನ್ಯೋಽಸ್ತಿ ಸುವ್ರತ ॥ ೩೬ ॥
ತ್ವಮೇತದಖಿಲಂ ವೇತ್ಸಿ ವ್ಯಾಸಶಿಷ್ಯೋ ಯತಃ ಪ್ರಿಯಃ ।
ಪುರಾಣಸಂಹಿತಾಖ್ಯಾನೇ ಸಮರ್ಥೋಽಸಿ ಮಹಾಮತೇ ॥ ೩೭ ॥
ವೇದವ್ಯಾಸಮುನಿಸ್ಸಾಕ್ಷಾನ್ನಾರಾಯಣಕಲಾಧರಃ ।
ಶುಶ್ರೂಮಶ್ಚ ಪುರಾಣೇಷು ಭವಾನ್ ವೈ ತೇನ ಶಾಸಿತಃ ॥ ೩೮ ॥
ತ್ವಮೇವಾತಃ ಪುರಾಣಾರ್ಥಂ ವೇತ್ಸಿ ವ್ಯಾಸಮುಖೋದ್ಭವಮ್ ।
ನಾನ್ಯೋಽಸ್ತಿ ಭುವನೇ ತಸ್ಯ ಭವತೋಽಸ್ತಿ ವದಾಂವರಃ ॥ ೩೯ ॥
ಯಃ ಪುರಾಣಾರ್ಥವಿಲ್ಲೋಕೇ ಸರ್ವಜ್ಞಃ ಸ ಚ ಬುದ್ಧಿಮಾನ್ ।
ಸ ಶಾಂತಃ ಸರ್ವಧರ್ಮಜ್ಞಃ ಕರ್ಮಭಕ್ತಿಸಮನ್ವಿತಃ ॥ ೪೦ ॥

ವೇದವೇದಾಂಗಶಾಸ್ತ್ರಾಣಾಂ ಸಾರಮುದ್ಧೃತ್ಯ ಯತ್ನತಃ ।
ಜಗದ್ಧಿತಾರ್ಥಂ ತತ್ಸರ್ವಂ ಪುರಾಣೇಷೂಕ್ತವಾನ್ ಮುನಿಃ ॥ ೪೧ ॥
ತತ್ಕೃಪಾಪ್ತಾಖಿಲಜ್ಞಾನಂ ಸರ್ವತತ್ತ್ವಾರ್ಥಕೋವಿದಮ್ ।
ತಸ್ಮಾತ್ ತ್ವಾಮೇವ ಪೃಚ್ಛಾಮೋ ವಯಂ ಸಂದೇಹನಾಶನಮ್ ॥ ೪೨ ॥
ಯಾನಿ ಯಾನಿ ಚ ತೀರ್ಥಾನಿ ಸಂತಿ ತ್ರೈಲೋಕ್ಯಮಂಡಲೇ ।
ಸಮಸ್ತಫಲದಂ ಶ್ರೇಷ್ಠಂ ತೇಷ್ವೇಕಂ ವರ್ತತೇ ನ ವಾ ॥ ೪೩ ॥

॥ ಇತಿ ಪ್ರಥಮೋಽಧ್ಯಾಯಃ ॥

**ಋಷಿಗಳು ಕೇಳಿದರು—**

ಶ್ರೀವ್ಯಾಸರ ಮನೋಗತವನ್ನು ತಿಳಿದವರಲ್ಲಿ ಕುಶಲರಾದ, ಜ್ಞಾನಿಗಳಲ್ಲಿ ಶ್ರೇಷ್ಠರಾದ, ಪರೋಪಕಾರದಲ್ಲಿ ನಿಪುಣರಾದ ಮತ್ತು ಎಲ್ಲ ಶಾಸ್ತ್ರಗಳಲ್ಲಿಯೂ ಪಾರಂಗತರಾದ ಶ್ರೀ ಸೂತರೇ ! ॥ ೨೧ ॥ ತಮ್ಮಿಂದ ಉಕ್ತವಾಗಿರತಕ್ಕ ವ್ಯಾಸಪ್ರಣೀತವಾಗಿರತಕ್ಕ ಯಾವ ಯಾವ ಪುರಾಣಗಳು ಇವೆಯೋ ಮತ್ತು ಅವುಗಳಲ್ಲಿ ವಿಶೇಷವಾಗಿ ಯಾವ ಯಾವ ತೀರ್ಥಗಳು ಹೇಳಲ್ಪಟ್ಟಿವೆಯೋ ॥ ೨೨ ॥ ಅಂತಹ ತೀರ್ಥಕ್ಷೇತ್ರಗಳಿಗೆ ಹೋಗಿ ವಿಧಿಪೂರ್ವಕವಾಗಿ ಅವುಗಳನ್ನು ಸೇವಿಸಿದ್ದೇವೆ; ಕೆಲವೆಡೆ ಒಂದು ತಿಂಗಳು, ಕೆಲವೆಡೆ ಆರು ತಿಂಗಳು ಮತ್ತು ಕೆಲವೆಡೆ ಒಂದು ವರ್ಷಕಾಲ ಹೀಗೆ ಇದ್ದು ಸೇವಿಸಿದ್ದಾಯಿತು. ॥ ೨೩ ॥ ಅವುಗಳಿಗೆ ಸಂಬಂಧಪಟ್ಟ ಮಾಹಾತ್ಮ್ಯಗಳು ಮೋಕ್ಷಪ್ರದ-ವಾದುವುಗಳು ಎಂದು ಕೇಳಲ್ಪಟ್ಟಿವೆ. ಪುಣ್ಯಕಾಲವೆಂದು ತಾವು ತಿಳಿಸಿರುವ ಕಾಲಗಳಲ್ಲಿಯೇ ಅವುಗಳನ್ನು ಸೇವಿಸಿ ಬಂದಿದ್ದೇವೆ. ॥ ೨೪ ॥ ಒಂದು ದಿವಸ, ಪಕ್ಷ (ಹದಿನೈದು ದಿವಸ), ಮಾಸ, ಋತು, ಅಯನ, ವರ್ಷಗಳಲ್ಲಿ ಅನುಷ್ಠಾನ ಮಾಡಲು ಯೋಗ್ಯವಾದ ಧರ್ಮಗಳನ್ನು ವಿಧಾನಪೂರ್ವಕವಾಗಿ ನಡೆಸಿದ್ದೇವೆ. ॥ ೨೫ ॥ ಮುಕ್ತಿದಾಯಕಗಳೆಂದು ಪ್ರಸಿದ್ಧವಾಗಿರುವ ಶ್ರೀರಂಗ, ವೇಂಕಟಾದ್ರಿ, ನರನಾರಾಯಣಾಶ್ರಮ (ಚಿಕ್ಕ ಬದರೀ), ಕಾಶೀ, ಕಂಚೀ, ಅವಂತಿಕಾ, ಮತ್ತು ದ್ವಾರಕಾಪುರೀ ಎಂಬ ಏಳು ಕ್ಷೇತ್ರಗಳಲ್ಲಿಯೂ ಎಚ್ಚರಿಕೆಯಿಂದ ವಿಧಿವತ್ತಾಗಿ ಸೇವಾ ಮಾಡಿ ಬಂದಿದ್ದೇವೆ. ॥ ೨೬ ॥ ನಮ್ಮಿಂದ ಇಡೀ ಭೂಮಂಡಲವೇ ಸಂಚರಿಸಲ್ಪಟ್ಟಿದೆ. ಹೀಗೆ ತಮ್ಮ ದಯೆಯಿಂದ ಈ ಕೆಳಗೆ ಹೇಳಿರುವಂತೆ ನಾಲ್ಕು ವಿಧಗಳಾದ ತೀರ್ಥಕ್ಷೇತ್ರಗಳು ನಮ್ಮಿಂದ ಸಂದರ್ಶಿಸಲ್ಪಟ್ಟಿವೆ. ॥ ೨೭ ॥ ಕೆಲವು ತೀರ್ಥಗಳು ದೇವತೆಗಳಿಂದ ಆದುವು, ಕೆಲವು ದೈತ್ಯರಿಂದ ಆದುವು, ಕೆಲವು ಋಷಿಗಳಿಂದ ಆದುವು, ಮತ್ತೆ ಕೆಲವು ಸಿದ್ಧರಿಂದ ಆದುವು. ॥ ೨೮ ॥ ಕೆಲವು ಸಾತ್ವಿಕ ತೀರ್ಥಗಳಾದರೆ ಕೆಲವು ರಾಜಸ ಕ್ಷೇತ್ರಗಳು ಉಳಿದವುಗಳು ಮಿಶ್ರ ಕ್ಷೇತ್ರಗಳು, ಕೆಲವು ತಾಮಸ ಕ್ಷೇತ್ರಗಳು ಕೂಡಾ. ಇವುಗಳ ಸೇವನೆಯಿಂದ ಉಂಟಾಗುವ ಫಲಗಳೂ ಅವುಗಳಂತೆಯೇ ಸಾತ್ವಿಕ, ರಾಜಸ, ತಾಮಸ ಮತ್ತು ಮಿಶ್ರ. ಸಾತ್ವಿಕ ತೀರ್ಥಗಳ ಸೇವಾದಿಂದ ಮೋಕ್ಷಕ್ಕೆ ಸಾಧನವಾಗತಕ್ಕ ಫಲವೂ, ರಾಜಸ ತೀರ್ಥಗಳಿಂದ ಐಹಿಕ ಭೋಗಭಾಗ್ಯಾದಿಗಳೂ ಸ್ವರ್ಗವಾಸಾದಿಸುಖಗಳೂ ಸಿಕ್ಕರೆ ತಾಮಸದಿಂದ ಕೇವಲ ಭೋಗದ ಪ್ರಾಪ್ತಿಯಾಗಿ ನರಕಾದ್ಯನರ್ಥಗಳೂ ಲೆಕ್ಕವಿಲ್ಲದ ಪುನರ್ಜನ್ಮಗಳೂ ಲಭಿಸುವುವು. ॥ ೨೯ ॥ ಕೆಲವು ತೀರ್ಥಗಳು ಕಾಮ್ಯಗಳಾದರೆ, ಮತ್ತೆ ಕೆಲವು ನಿಷ್ಕಾಮಗಳಾಗಿವೆ. ಕೆಲವು ತೀರ್ಥಗಳು ಪಾಪಕ್ಷಯಕಾರಕ ಮತ್ತು ಒಳ್ಳೆಯ ಸಾಧನಗಳಿಗೆ ನಿಮಿತ್ತಗಳಾಗುವುವು. ॥ ೩೦ ॥ ಕೆಲವು ಭೂಮಿಯಲ್ಲಿವೆ, ಕೆಲವು ದೇವಲೋಕದಲ್ಲಿವೆ, ಮತ್ತೆ

ಕೆಲವು ಅಂತರಿಕ್ಷದಲ್ಲಿ ಇವೆ, ಕೆಲವು ಪಾತಾಲಲೋಕದಲ್ಲಿವೆ. ಇವುಗಳು ಬೇರೆ ಬೇರೆ ಹೆಸರು ಹಾಗೂ ರೂಪಗಳಿಂದ ವಿರಾಜಮಾನವಾಗಿವೆ. ॥ ೩೧ ॥ ಕೆಲವು ತೀರ್ಥಗಳು (ತೀರ್ಥಕ್ಷೇತ್ರಗಳು) ವೈಷ್ಣವಕ್ಷೇತ್ರಗಳು, ಕೆಲವು ಶೈವಕ್ಷೇತ್ರಗಳು, ಕೆಲವು ಗಣಪತಿಯ ಕ್ಷೇತ್ರಗಳು (ಗಾಣಪತ), ಕೆಲವು ಸೂರ್ಯಸರ್ವೋತ್ತಮತತ್ವಗಳಿಂದ ಪ್ರಸಿದ್ಧವಾದವುಗಳು. ಕೆಲವು (ವಂಗದೇಶದ ತೀರ್ಥಕ್ಷೇತ್ರಗಳಂತೆ) ಶಾಕ್ತಮತಪ್ರವರ್ತಕಗಳಾಗಿ ಶಕ್ತಿಯೇ ಜಗತ್ತನ್ನು ಸೃಷ್ಟಿ ಮಾಡುವಳೆಂಬ ತತ್ವಕ್ಕೆ ಸಂಬಂಧಪಟ್ಟವು. ವೈಷ್ಣವಕ್ಷೇತ್ರಗಳನ್ನು ಬಿಟ್ಟು ಅನ್ಯದೇವತಾಕ ತೀರ್ಥಕ್ಷೇತ್ರಗಳ ಸೇವನೆಯಿಂದ ಶೀಘ್ರಫಲಗಳುಂಟಾಗಿ ಐಹಿಕ ಭೋಗ ಭಾಗ್ಯಗಳು ಲಭಿಸಿ ಕೊನೆಗೆ ನರಕಾದ್ಯನರ್ಥಗಳಲ್ಲಿ ಪರ್ಯವಸಾನವಾಗುತ್ತದೆ ವೈಷ್ಣವಕ್ಷೇತ್ರಗಳು ಮನಃಶುದ್ಧಿಯನ್ನು ಕೊಟ್ಟು ಉತ್ತರೋತ್ತರ ಉತ್ತಮ ಫಲಪ್ರದಗಳಾದ ಸಾಧನೆಗಳಿಗೆ ಅನುಕೂಲ ಮಾಡಿಕೊಡುವುವು. ॥ ೩೨ ॥ ಉತ್ತಮ ಸಾಧನೆಗೆ ಬೇಕಾಗಿರುವುದು ಸಹಿಷ್ಣುತೆ, ಪರರ ಬಗ್ಗೆ ಅನುಕಂಪ ಮತ್ತು ಇಂದ್ರಿಯಗಳ ಮತ್ತು ಮನಸ್ಸಿನ ನಿಗ್ರಹ. ತೀರ್ಥಕ್ಷೇತ್ರಗಳ ಸೇವನೆಯಿಂದ ಇವುಗಳ ಹಾಗು ಜ್ಞಾನಬಲಗಳ ಸಿದ್ಧಿಯುಂಟಾಗುತ್ತದೆ. ॥ ೩೩ ॥ ಇಂಥಾ ಅನೇಕ ತೀರ್ಥಗಳನ್ನು ನಿಮ್ಮ ಮುಖದಿಂದ ಕೇಳಿದ್ದೇವೆ. ಆದ್ದರಿಂದ ನಮಗೆ ಈ ಕ್ಷೇತ್ರಗಳಲ್ಲೆಲ್ಲಾ ಯಾವುದು ಶ್ರೇಷ್ಠವಾದುದು ಎಂದು ತಿಳಿಯಲಿಲ್ಲ. ನಾವೆಲ್ಲರೂ ಸಂಶಯಗ್ರಸ್ತರಾಗಿ ಒಬ್ಬರಿಗೊಬ್ಬರು, ''ಇದೇ ಶ್ರೇಷ್ಠವಾದುದು, ಇದೇ ಶ್ರೇಷ್ಠವಾದುದು,'' ಎಂದು ಆಗ್ರಹಪೂರ್ವಕವಾಗಿ ವಾದವಿವಾದ ಮಾಡುತ್ತಿರುತ್ತೇವೆ.॥೩೪-೩೫॥ ಎಲ್ಲಾ ಬಗೆಯ ಸಂಶಯದ ನಿವಾರಣೆಗಾಗಿ ತಮ್ಮನ್ನು ನಾವು ಸಮೀಪಿಸಿದ್ದೇವೆ. ತಾವು ಈ ಸಂಶಯವನ್ನು ಪರಿಹಾರಮಾಡಬೇಕು. ತಮ್ಮನ್ನು ಬಿಟ್ಟು ಈ ಸಂಶಯವನ್ನು ಹೋಗಲಾಡಿಸುವವರು ಮತ್ತೊಬ್ಬರು ಇಲ್ಲ. ॥ ೩೬ ॥ ಕಾರಣ, ತಾವು ಸಾಕ್ಷಾತ್ ಶ್ರೀವೇದವ್ಯಾಸರ ಶಿಷ್ಯರಾಗಿದ್ದು ಅವರಿಗೆ ಬೇಕಾದವರಾಗಿದ್ದೀರಿ ಮತ್ತು ಪುರಾಣಗಳು ಮತ್ತು ಸಂಹಿತೆಗಳ ಬಗ್ಗೆ ತಮಗೆ ಶ್ರೀವ್ಯಾಸರು ಉಪದೇಶ ಮಾಡಿದ್ದಾರೆ ಮತ್ತು ತಾವು ಮಹಾಮೇಧಾವಿಗಳು. ॥ ೩೭ ॥ ಸಾಕ್ಷಾತ್ ನಾರಾಯಣನ ಅವತಾರರಾದ ಶ್ರೀವ್ಯಾಸರೇ ತಮಗೆ ಸಕಲ ಪುರಾಣಗಳನ್ನು ಉಪದೇಶಮಾಡಿದ್ದಾರೆಂದು ನಾವು ಕೇಳಿದ್ದೇವೆ. ॥ ೩೮ ॥ ಅದಲ್ಲದೆ ಶ್ರೀವ್ಯಾಸಮುಖದಿಂದಲೇ ತಾವು ಸಕಲಪುರಾಣಗಳನ್ನು ಉಪದೇಶಪಡೆದಿದ್ದೀರಿ. ಮೂರು ಲೋಕಗಳಲ್ಲಿ ತಮ್ಮನ್ನು ಬಿಟ್ಟರೆ ಬೇರೆ ಯಾರು ತಾನೇ ಉಪದೇಶಮಾಡುವವರಲ್ಲಿ ಸಮರ್ಥರಿದ್ದಾರೆ? ॥ ೩೯ ॥ ಇದಲ್ಲದೆ ಯಾರು ಯಥಾರ್ಥವಾಗಿ ಪುರಾಣಗಳ ಅರ್ಥವನ್ನು ತಿಳಿದಿದ್ದಾರೆಯೋ ಅವರೇ ಸರ್ವಜ್ಞರು, ಅವರೇ ಬುದ್ಧಿವಂತರು, ಅವರೇ ಶಾಂತರು, ಸಾತ್ವಿಕರು, ಎಲ್ಲ ಬಗೆಯ ಧರ್ಮದ ಜ್ಞಾನವುಳ್ಳವರು ಮತ್ತು ಪರಮಾತ್ಮವಿಷಯಕವಾದ ಸುದೃಢಭಕ್ತಿಯಿಂದಲೂ ಮತ್ತು ಸಾಧನೆಗೆ ಆವಶ್ಯಕವಾದ ಕರ್ಮ ಮತ್ತು ವೈರಾಗ್ಯದಿಂದಲೂ ಕೂಡಿರುವವರು. ॥ ೪೦ ॥ ಭಗವಾನ್ ವ್ಯಾಸರು ವೇದ, ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂಬ ಆರು ವೇದಾಂಗಗಳ ದೆಶೆಯಿಂದಲೂ, ಬ್ರಹ್ಮಮೀಮಾಂಸಾಶಾಸ್ತ್ರ, ಪಂಚರಾತ್ರ, ಮೂಲರಾಮಾಯಣ, ಭಾರತ ಇವುಗಳಿಂದಲೂ ಸಾರವನ್ನು ಸಂಗ್ರಹಿಸಿ ಪುರಾಣಗಳನ್ನು ಜಗತ್ತಿನ ಹಿತಕ್ಕೋಸ್ಕರ ರಚನೆ ಮಾಡಿದ್ದಾರೆ. ॥ ೪೧ ॥ ಆದ್ದರಿಂದ ಭಗವಾನ್ ಶ್ರೀವ್ಯಾಸರ ಕೃಪೆಗೆ ಪಾತ್ರರಾಗಿರುವ ಮತ್ತು ಸಕಲ ಯಥಾರ್ಥಜ್ಞಾನಗಳಲ್ಲಿ ಕೋವಿದರೂ ಆದ ತಮ್ಮನ್ನೇ, ನಮ್ಮ ಸಂಶಯದ ನಿವಾರಣೆಗಾಗಿ ಪ್ರಶ್ನೆ ಮಾಡುತ್ತಿದ್ದೇವೆ. ॥ ೪೨ ॥ ಅದು ಏನೆಂದರೆ—

''ಮೂರು ಲೋಕಗಳಲ್ಲಿ ಯಾವ ಯಾವ ಫಲಪ್ರದಾಯಕ ತೀಥಕ್ಷೇತ್ರಗಳು ಇವೆಯೋ ಅವುಗಳಲ್ಲಿ ಸಮಸ್ತಫಲಪ್ರದವಾದ, ಅತಿಶ್ರೇಷ್ಠವಾದ ಮತ್ತು ಶ್ರೇಷ್ಠತಮವಾದ ಒಂದೇ ಒಂದು ತೀರ್ಥವಿರುವುದೇ ? ಇದ್ದರೆ ಅದು ಯಾವುದು ?'' ಎಂದು. ॥ ೪೩ ॥

॥ ಒಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಿತೀಯೋಽಧ್ಯಾಯಃ ॥ ೨ ॥

ಶೌನಕ ಉವಾಚ—

ಅಥಾನ್ಯದಪಿ ಪೃಚ್ಛಾಮೋ ವಯಂ ಸಂದೇಹನಾಶನಮ್ ।
ಕೃಪಯಾ ಸರ್ವಜಂತೂನಾಂ ವದ ವಿದ್ವಾನ್ ಯತೋ ಭವಾನ್ ॥ ೧ ॥
ಅಷ್ಟೌ ದಿಕ್ಪತಯಃ ಸೂತ ಯೇ ಚಾನ್ಯೇ ದೇವತಾಗಣಾಃ ।
ಸರ್ವೇಷಾಂ ಶ್ರೂಯತೇ ತೇಷಾಂ ರಾಜಾ ಕಿಲ ಶತಕ್ರತುಃ ॥ ೨ ॥
ರುದ್ರಾಣಾಂ ಶಂಕರೋ ರಾಜಾ ನಕ್ಷತ್ರಾಣಾಂ ಚ ಚಂದ್ರಮಾಃ ।
ಪರ್ವತಾನಾಂ ಗಿರಿರ್ಮೇರುರ್ನದೀನಾಂ ಸಾಗರಸ್ತಥಾ ॥ ೩ ॥
ಆದಿತ್ಯಾನಾಂ ಪತಿರ್ವಿಷ್ಣುರ್ಜ್ಯೋತಿಷಾಮಶ್ವಿನೀಪತಿಃ ।
ಯಕ್ಷಾಣಾಂ ರಾಜರಾಜಶ್ಚ ಮರೀಚಿರ್ಮರುತಾಂ ಪತಿಃ ॥ ೪ ॥
ವೇದಾನಾಮಧಿಪಃ ಸಾಮ ವಸೂನಾಂ ಪಾವಕಸ್ತಥಾ ।
ಜಪಯಜ್ಞಶ್ಚ ಯಜ್ಞಾನಾಂ ಸ್ರೋತಸಾಂ ಜಾಹ್ನವೀ ತಥಾ ॥ ೫ ॥
ಪುರೋಧಸಾಂ ಗುರೂ ರಾಜಾ ದೇವರ್ಷೀಣಾಂ ಚ ನಾರದಃ ।
ಕಪಿಲಸ್ಸರ್ವಸಿದ್ಧಾನಾಂ ದ್ರುಮಾಣಾಂ ಚಲಪತ್ರಕಃ ॥ ೬ ॥
ಉಚ್ಚೈಶ್ಶ್ರವಾಸ್ತಥಾಶ್ವಾನಾಮಿಭೇಶೋಽಭ್ರಮುವಲ್ಲಭಃ ।
ಆಯುಧಾನಾಂ ವಜ್ರರಾಜೋ ಧೇನೂನಾಂ ಕಾಮಧುಕ್ತಥಾ ॥ ೭ ॥
ಅನಂತಸ್ಸರ್ವನಾಗಾನಾಂ ಸರ್ಪಾಣಾಂ ವಾಸುಕಿಸ್ತಥಾ ।
ವಿಹಂಗಾನಾಂ ವಿಷ್ಣುರಥಃ ಪಶೂನಾಂ ಕೇಸರೀ ತಥಾ ॥ ೮ ॥
ಮಾಸಾನಾಂ ಮಾರ್ಗಶೀರ್ಷಶ್ಚ ಋತೂನಾಂ ಕುಸುಮಾಕರಃ ।
ವರ್ಣಾನಾಂ ಬ್ರಾಹ್ಮಣೋ ರಾಜಾ ಆಶ್ರಮಾಣಾಂ ಚತುರ್ಥಕಃ ॥ ೯ ॥
ಹೃಷೀಕಾನಾಂ ಮನೋ ರಾಜಾ ಝುಷಾಣಾಂ ಮಕರಸ್ತಥಾ ।
ಬ್ರಹ್ಮರ್ಷೀಣಾಂ ಪತಿರ್ವ್ಯಾಸಃ ಪ್ರಹ್ಲಾದಃ ಸುರವಿದ್ವಿಷಾಮ್ ॥ ೧೦ ॥
ಅಕಾರಶ್ಚಾಕ್ಷರಾಣಾಂ ಸ್ಯಾದ್ವನಾನಾಂ ನಂದನಂ ತಥಾ ।
ಸ್ವರ್ದ್ರುಮಾಣಾಂ ಪಾರಿಜಾತಃ ನರಾಣಾಂ ಪುರುಷೋತ್ತಮಃ ॥ ೧೧ ॥
ಪುರಾಣಾನಾಂ ಭಾಗವತಂ ವರ್ಷಾಣಾಂ ಭಾರತಂ ತಥಾ ।
ಶಾಸ್ತ್ರಾಣಾಂ ಪರಮೀಮಾಂಸಾ ಸರಸಾಂ ಮಾನಸಂ ಸರಃ ॥ ೧೨ ॥
ಪ್ರಜಾಪತೀನಾಂ ದಕ್ಷಶ್ಚ ರತ್ನಾನಾಂ ಪದ್ಮರಾಗಕಃ ।
ಧಾತೂನಾಂ ಕಾಂಚನಂ ರಾಜಾ ಫಲ್ಗುನಶ್ಚ ಧನುಷ್ಮತಾಮ್ ॥ ೧೩ ॥
ಚೂಡಾಮಣಿಶ್ಚ ಭೂಷಾಣಾಂ ಸಸ್ಯಾನಾಂ ಶಾಲಯಸ್ತಥಾ ।
ಬ್ರಹ್ಮಾನಂದಶ್ಚ ಹರ್ಷಾಣಾಂ ಹೇತೂನಾಂ ಬ್ರಹ್ಮಸಾತ್ಸ್ಫುಟಮ್ ॥ ೧೪ ॥

ಏವಂ ಸರ್ವೇಷು ಭಾವೇಷು ರಾಜಾ ಸರ್ವತ್ರ ದೃಶ್ಯತೇ ।
ತಥಾ ಸಮಸ್ತತೀರ್ಥಾನಾಂ ರಾಜಾ ಕಿಂ ವರ್ತತೇ ನ ವಾ ॥ ೧೫ ॥
ರಾಜನ್ತೇ ತಾವದನ್ಯಾನಿ ಸ್ವಮಹಿಮ್ನೋ ಬಹೂನ್ಯಪಿ ।
ಯಾವನ್ನ ರಾಜತೇ ರಾಜಾ ನ ತಥಾ ತಸ್ಯ ರಾಜತೇ ॥ ೧೬ ॥
ಅರಾಜಕೇನ ನಿಷ್ಠಾ ಸ್ಯಾತ್ಪ್ರವೃತ್ತಿರ್ವಿಧಿಚೋದಿತಾ ।
ಫಲವಿಹ್ವಲತಾಜಸ್ರಂ ಸರ್ವೇಷಾಂ ಫಲಸಂಶಯಃ ॥ ೧೭ ॥
ಸದಾ ಸಮಸ್ತತೀರ್ಥಾನಾಂ ಸಮಸ್ತಫಲದಾಯಕಃ ।
ರಾಜಾ ನೈವ ಶ್ರುತೋಽಸ್ಮಾಭಿರತಃ ಸಂದೇಹಮಾಗತಾಃ ॥ ೧೮ ॥
ನಿಯಂತಾರಂ ವಿನಾ ಕಿಂಚಿತ್ಸ್ತಾರ್ಯಂ ನೈವ ಸಿದ್ಧ್ಯತಿ ।
ಅತಃ ಸರ್ವೇ ಭವಂತಂ ವೈ ಪೃಚ್ಛಾಮೋ ರೋಮಹರ್ಷಣಮ್ ॥ ೧೯ ॥
ತೀರ್ಥರಾಜಂ ವಿನಿಶ್ಚಿತ್ಯ ಸರ್ವೇಷಾಮನುಕೀರ್ತಯ ।
ವದ ನಃ ಶ್ರದ್ಧಧಾನಾನಾಂ ಗುರುಲಬ್ಧಂ ಮಹಾಮತೇ ॥ ೨೦ ॥

## ॥ ಎರಡನೆಯ ಅಧ್ಯಾಯವು ॥

**ಶೌನಕಾದಿಗಳು ಹೇಳಿದರು—**

ಸಂದೇಹ ಪರಿಹಾರವಾಗತಕ್ಕ ಬೇರೆ ಬೇರೆ ವಿಷಯಗಳನ್ನೂ ನಾವು ಕೇಳಬಯಸುತ್ತೇವೆ. ತಾವು ಎಲ್ಲವನ್ನೂ ತಿಳಿದವರು. ಎಲ್ಲ ಜೀವಿಗಳಿಗೂ ಉಪಯೋಗವಾಗುವ ಈ ವಿಷಯಗಳನ್ನು ದಯೆಮಾಡಿ ಹೇಳಿರಿ. ॥ ೧ ॥

ದಿಕ್ಪಾಲಕರು ಎಂಟು ಮಂದಿ (ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ ಮತ್ತು ಈಶಾನ) ಇವರುಗಳಿಗೂ ಮತ್ತು ಎಲ್ಲ ದೇವತಾಗಣಗಳಿಗೂ ಇಂದ್ರನೇ ರಾಜನೆಂದು ನಾವು ಕೇಳಿದ್ದೇವೆ. ॥ ೨ ॥ ಹನ್ನೊಂದು ರುದ್ರರುಗಳಿಗೆ ಮಹಾರುದ್ರದೇವರು ಅಧಿಪತಿಯು. ಚಂದ್ರನು ನಕ್ಷತ್ರಗಳಿಗೆ ರಾಜನು. ಮೇರುವು ಪರ್ವತಗಳಿಗೆ ರಾಜನು, ಸಾಗರನು ನದಿಗಳಿಗೆ ರಾಜನು. ॥ ೩ ॥ ದ್ವಾದಶಾದಿತ್ಯರಿಗೆ ಶ್ರೀಮಹಾವಿಷ್ಣುವೇ ರಾಜನು, ನಕ್ಷತ್ರ ಮತ್ತು ಗ್ರಹಾದಿಗಳಿಗೆ ಸೂರ್ಯನು(ಅಶ್ವಿನೀಪತಿಯು) ರಾಜನು. ಯಕ್ಷರಿಗೆ ಕುಬೇರನೂ, ಮರುದ್ಗಣಗಳಿಗೆ ಮರೀಚಿಯೂ ॥ ೪ ॥ ವೇದಗಳಿಗೆ ಸಾಮವೂ (ಸಾಮವೇದ), ಅಷ್ಟವಸುಗಳಿಗೆ ಅಗ್ನಿಯೂ (ಪಾವಕ), ಯಜ್ಞಗಳಿಗೆ ಜಪವೂ, ಗಂಗೆಯು ನದಿಗಳಿಗೂ ॥ ೫ ॥ ಪುರೋಹಿತರುಗಳಿಗೆ ಬೃಹಸ್ಪತಿಯೂ, ದೇವಋಷಿಗಳಿಗೆ ನಾರದರೂ, ಕಪಿಲಮಹಾಮುನಿಯು ಎಲ್ಲ ಸಿದ್ಧರಿಗೂ, ಮರಗಳಿಗೆ ಅಶ್ವತ್ಥ(ಅರಳಿ)ವೂ, ॥ ೬ ॥ ಕುದುರೆಗಳಿಗೆ ಉಚ್ಚೈಃಶ್ರವಸ್ಸೂ, ಆನೆಗಳಿಗೆ ಐರಾವತವೂ, ಆಯುಧಗಳಿಗೆ ವಜ್ರಾಯುಧವೂ, ಹಸುಗಳಿಗೆ ಕಾಮಧೇನುವೂ, ॥೭॥ ಎಲ್ಲ ಬಗೆಯ ನಾಗಗಳಿಗೆ ಶೇಷನೂ, ಸರಿಯುವ ಸರ್ಪಗಳಿಗೆ ವಾಸುಕಿಯೂ, ಪಕ್ಷಿಗಳಿಗೆ ಗರುಡನೂ, ಮೃಗಗಳಿಗೆ ಸಿಂಹವೂ, ॥ ೮ ॥ ಮಾಸಗಳಿಗೆ ಮಾರ್ಗಶಿರಮಾಸವೂ, ಋತುಗಳಿಗೆ ವಸಂತವೂ, ನಾಲ್ಕು ವರ್ಣಗಳಲ್ಲಿ (ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ) ಬ್ರಾಹ್ಮಣ ವರ್ಣವೂ, ನಾಲ್ಕು

ಆಶ್ರಮಗಳಲ್ಲಿ (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ) ನಾಲ್ಕನೆಯದಾದ ಸನ್ಯಾಸಾಶ್ರಮವೂ. ॥ ೯ ॥ ವಾಕ್, ಪಾಣಿ, ಪಾದ, ಪಾಯು ಮತ್ತು ಗುದ ಎಂಬ ಐದು ಕರ್ಮೇಂದ್ರಿಯಗಳಿಗೂ ಮತ್ತು ಕಣ್ಣು, ಮೂಗು, ನಾಲಿಗೆ, ಕಿವಿ ಮತ್ತು ಚರ್ಮ ಎಂಬ ಐದು ಜ್ಞಾನೇಂದ್ರಿಯಗಳಿಗೂ ಮನಸ್ಸು (ಇದು ಒಂದು ಇಂದ್ರಿಯ), ಜಲ ಜಂತುಗಳಿಗೆ ಮೊಸಳೆಯೂ,ಬ್ರಹ್ಮರ್ಷಿಗಳಲ್ಲಿ ಶ್ರೀವೇದವ್ಯಾಸರೂ, ಅಸುರರಲ್ಲಿ ಪ್ರಹ್ಲಾದರಾಜರೂ, ॥ ೧೦ ॥ ಅಕ್ಷರಗಳಲ್ಲಿ 'ಅ'ಕಾರವೂ, ವನಗಳಲ್ಲಿ ದೇವಲೋಕದ ನಂದನವನವೂ, ದೇವಲೋಕದ ಮರಗಳಲ್ಲಿ ಪಾರಿಜಾತವೂ, ಚೇತನರಲ್ಲಿ ಪುರುಷೋತ್ತಮನು ಆದ ಶ್ರೀರಾಮಚಂದ್ರನು (ಕ್ಷರಾ-ಕ್ಷರಪುರುಷರುಗಳಿಗಿಂತ ಉತ್ತಮನಾದ ಶ್ರೀನಾರಾಯಣನು) ॥ ೧೧ ॥ ಪುರಾಣಗಳಲ್ಲಿ ಭಾಗವತವೂ, ಭೂಭಾಗಗಳಲ್ಲಿ ಭಾರತದೇಶವೂ, ಶಾಸ್ತ್ರಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರವೂ, ಸರೋವರಗಳಲ್ಲಿ ಮಾನಸಸರೋವರವೂ ॥ ೧೨ ॥ ಪ್ರಜಾಪತಿಗಳಲ್ಲಿ ದಕ್ಷಪ್ರಜೇಶ್ವರರೂ, ರತ್ನಗಳಲ್ಲಿ ಪದ್ಮರಾಗ-ಮಣಿಯೂ ಧಾತುಗಳಲ್ಲಿ ಬಂಗಾರವೂ, ಧನುರ್ಧಾರಿಗಳಲ್ಲಿ ಅರ್ಜುನನೂ, ॥ ೧೩ ॥ ಆಭರಣ-ಗಳಲ್ಲಿ ಶಿರೋರತ್ನವೂ, ಪೈರುಗಳಲ್ಲಿ ಭತ್ತವೂ, ಹರ್ಷದಲ್ಲಿ ಬ್ರಹ್ಮಸಾಕ್ಷಾತ್ಕಾರ- ದಿಂದ ಉಂಟಾಗುವ ಬ್ರಹ್ಮಾನಂದವೂ, ಯುಕ್ತಿಗಳಲ್ಲಿ ವೇದಾಧೀನನಾದ ಯುಕ್ತಿಯು ಶ್ರೇಷ್ಠರಾಜರಂತೆ ವಿರಾಜಮಾನ-ವಾಗಿವೆ. ॥ ೧೪ ॥ ಹೀಗೆ ಎಲ್ಲ ವಸ್ತುಗಳಲ್ಲಿಯೂ ಒಂದೊಂದು ಶ್ರೇಷ್ಠವಸ್ತುಗಳನ್ನು ನೋಡಿದ್ದೇವೆ. ಇದರಂತೆ ಎಲ್ಲ ತೀರ್ಥಗಳಿಗೂ ಒಂದು ಅತಿಶ್ರೇಷ್ಠವಾದ "ರಾಜಾ" ಎಂಬ ಪದವಿಗೆ ಅರ್ಹವಾದ ಒಂದು ತೀರ್ಥರಾಜನು ಇದ್ದಾನೆಯೇ ? ಅಥವಾ ಇಲ್ಲವೇ ? ॥ ೧೫ ॥

ಎಲ್ಲಿಯವರೆಗೆ ರಾಜನು ತನ್ನ ರಾಜತ್ವದಿಂದ ಶೋಭಿಸುವುದಿಲ್ಲವೋ ಅಲ್ಲಿಯವರೆಗೆ ಬೇರೆ ವಸ್ತುಗಳು ಶೋಭಾಯಮಾನವಾಗಿ ಕಂಗೊಳಿಸುತ್ತಿರುತ್ತವೆ. ರಾಜನು ಶೋಭಿಸುತ್ತಿರಲು ಇವುಗಳ ಶೋಭೆಯು ಕಳೆಗುಂದುತ್ತವೆ. ಒಂದು ರಾಜ್ಯಕ್ಕೆ ರಾಜನಿಲ್ಲದೆ ಅರಾಜಕತೆಯು ಉಂಟಾದರೆ ಸ್ವಾಭಾವಿಕವಾಗಿ ಶಾಸ್ತ್ರೋಕ್ತವಾದ ಕರ್ಮಾಚರಣೆಗಳಲ್ಲಿ ನಿಷ್ಠೆಯು ಕಡಿಮೆಯಾಗುವುದು ಮತ್ತು ಸತ್ಕಾರ್ಯಗಳಲ್ಲಿ ಫಲವು ಸಂದೇಹಾಸ್ಪದವಾಗಿ ಪ್ರವೃತ್ತಿಯೂ ಕುಂಠಿತವಾಗುವುದು. ॥ ೧೬-೧೭॥

ಯಾವಾಗಲೂ ಎಲ್ಲ ತೀರ್ಥಗಳ ಫಲಗಳನ್ನೂ ತಾನೇ ಕೊಡತಕ್ಕ ತೀರ್ಥಕ್ಷೇತ್ರದ ಹೆಸರನ್ನು ನಾವು ಕೇಳಿಯೇ ಇಲ್ಲ; ನೋಡಿಯೂ ಇಲ್ಲ; ಆದ್ದರಿಂದ ಸಂದೇಹವುಂಟಾಗಿದೆ. ॥ ೧೮ ॥ ಒಬ್ಬ ನಿಯಂತಾ ಅಥವಾ ನಿಯಾಮಕನಿಲ್ಲದಿದ್ದರೆ ಸತ್ಕಾರ್ಯಗಳು ಸಿದ್ಧಿಸಲಾರವು. ಆದ್ದರಿಂದ ನಾವೆಲ್ಲರೂ ಸೇರಿ ತಮ್ಮನ್ನು ಪ್ರಾರ್ಥಿಸುತ್ತಿದ್ದೇವೆ. ನಿಮ್ಮ ಗುರುಗಳ ಉಪದೇಶಾನುಸಾರಿಯಾದ ಒಂದು ತೀರ್ಥರಾಜನನ್ನು ನಿಶ್ಚಯಮಾಡಿ ನಮಗೆಲ್ಲರೂ ಉಪದೇಶ ಮಾಡಿರಿ. ಹೀಗೆಂದು ಶೌನಕಾದಿಗಳು ಶ್ರೀ ಸೂತ ಪುರಾಣಿಕರನ್ನು ಕುರಿತು ಬಿನ್ನವಿಸಿದರು. ॥ ೧೯-೨೦ ॥

ಶ್ರೀಸೂತಪುರಾಣಿಕರು ಶೌನಕಾದಿಗಳಿಗೆ ಈ ರೀತಿ ಉಪದೇಶ ಮಾಡಿದರು—

ಸೂತ ಉವಾಚ—

ಗುರೂನ್ನತ್ವಾ ಗುರೂನ್ನತ್ವಾ ಗುರೂನ್ನತ್ವಾ ಮಹರ್ಷಯಃ ।
ಯದ್ವದಾಮಿ ಬುಧ್ಯೈಸ್ತತ್ರ ತಥ್ಯಂ ತಥ್ಯಂ ವಿಚಾರ್ಯತಾಮ್ ॥ ೨೧ ॥
ಗುರುಃ ಪ್ರಮಾಣಂ ಗುರುರೇವ ಕಾರಣಂ
ಜ್ಞಾನಂ ಗುರುಃ ಸರ್ವಸುಖಸ್ಯ ಸಾಧನಂ ।

ಗುರೋಃ ಪರಂ ನಾಸ್ತಿ ವಿಚಿತ್ರಭೂಷಣಂ
ತಂ ವ್ಯಾಸವರ್ಯಂ ಸ್ವಗುರುಂ ನಮಾಮಿ ॥ ೨೨ ॥
ಭವಂತಿ ತೇ ತೇ ಕೃಪಯಾಖಿಲಾರ್ಥಾ
ಯೇಽನ್ಯೈರಲಭ್ಯಾಃ ಬಹುಜನ್ಮಭಿರ್ವಾ ।
ಸರ್ವೇಽಪ್ಯನರ್ಥಾಶ್ಚ ಲಯಂ ಪ್ರಯಾಂತಿ
ತಂ ವ್ಯಾಸವರ್ಯಂ ಪ್ರಣಮಾಮಿ ಸದ್ಗುರುಮ್ ॥ ೨೩ ॥
ಮಹ್ಯಂ ಶ್ರೀವ್ಯಾಸಗುರುಣಾ ಲೋಕಾನಾಮುದ್ದಿಧೀರ್ಷಯಾ ।
ಅಷ್ಟಾದಶಪುರಾಣಾನಿ ಕಥಿತಾನ್ಯನುಕಂಪಯಾ ॥ ೨೪ ॥
ಪ್ರಸ್ತಾವೇ ತತ್ರ ಭೂತಾ ಯಾಃ ವರ್ತಮಾನಾಶ್ಚ ಭಾವಿನೀಃ ।
ಸಮಕ್ಷಂ ಪರಯಾ ಭಕ್ತ್ಯಾ ಹ್ಯಶ್ರೌಷಮನಘಾಃ ಕಥಾಃ ॥ ೨೫ ॥
ತಸ್ಮಿನ್ನವಸರೇಽತ್ರಾರ್ಥೇ ಗುರುಸ್ಸಂಪ್ರಾರ್ಥಿತೋ ಮಯಾ ।
ಸ ಹೋವಾಚ ಕ್ಷಣಂ ಧ್ಯಾತ್ವಾ ನೇತ್ರೇ ಚೋನ್ಮೀಲ್ಯಮಾಮಿತಿ ॥ ೨೬ ॥

**ಸೂತರು ಹೇಳುತ್ತಾರೆ—**

"ಗುರುಗಳನ್ನು, ಪರಮಗುರುಗಳನ್ನು, ಆದಿಮೂಲಗುರುಗಳನ್ನು ನಮಸ್ಕರಿಸಿ, ಹೇ ಮಹರ್ಷಿಗಳೇ! ನಾನು ಏನನ್ನು ಹೇಳುವೆನೋ ಅವುಗಳ ಯಾಥಾರ್ಥ್ಯವನ್ನು ವಿದ್ವಾಂಸರು-ಗಳಾಗಿರುವ ತಾವೇ ವಿಚಾರಮಾಡಿರಿ. ॥ ೨೧ ॥ ಗುರೂಪದೇಶವು ಎಲ್ಲದಕ್ಕೂ ಪ್ರಮಾಣವು. ಗುರುಗಳ ಜ್ಞಾನದ ಅಗಾಧತೆಯೇ ಇದಕ್ಕೆ ಕಾರಣ. ಗುರುಗಳೇ ನಮ್ಮ ಜ್ಞಾನ ಅಂದರೆ ಅವರ ಉಪದೇಶದಿಂದಲೇ ನಮಗೆ ಜ್ಞಾನಪ್ರಾಪ್ತಿಯಾಗುವುದು. ಗುರುಗಳಿಗಿಂತ ಶ್ರೇಷ್ಠವಾದುದು ಮತ್ತಾವುದೂ ಇಲ್ಲ. ನಮ್ಮ ಸರ್ವಸುಖಕ್ಕೆ (ಮೋಕ್ಷಸುಖಕ್ಕೂ) ಗುರುಗಳೇ ಕಾರಣ. (ಗುರುವಿಂದ ಬಂಧನ ಬಯಲು ಸರ್ವಜ್ಞ) ಆದ್ದರಿಂದ ವೇದವ್ಯಾಸರೆಂಬ ಹೆಸರಿನಿಂದ ವಿರಾಜಮಾನ-ರಾಗಿರುವ ನಮ್ಮ ಗುರುಗಳಿಗೆ ನಮಸ್ಕರಿಸುತ್ತೇನೆ". ॥ ೨೨ ॥

ಗುರುಗಳ ಕೃಪೆಯಿಂದ ಮುಕ್ತಿಯೂ ಸೇರಿ ಸಕಲ ಇಷ್ಟಾರ್ಥಗಳೂ ಲಭಿಸುತ್ತವೆ. ಬಹುಜನ್ಮಗಳ ಸಾಧನೆಯಿಂದಲೂ ಕೂಡ ಈ ಇಷ್ಟಾರ್ಥಗಳು ಒದಗಲಾರವು. ಇದಲ್ಲದೆ ಪಾಪಗಳಿಂದ ಪ್ರಾಪ್ಯವಾಗುವ ಸಕಲ ಅನರ್ಥಗಳೂ ಗುರು ಕೃಪೆಯಿಂದ ನಿವಾರಣೆಯಾಗುವುವು. ಅಂಥಾ ಉತ್ತಮಗುರುಗಳಾದ ವೇದವ್ಯಾಸರನ್ನು ನಮಸ್ಕರಿಸುತ್ತೇನೆ. ॥ ೨೩ ॥

ಜಗತ್ತನ್ನು ಉದ್ಧಾರ ಮಾಡುವ ಆಸೆಯಿಂದಲೇ ಹದಿನೆಂಟು ಪುರಾಣಗಳೂ ನನಗೆ ನಮ್ಮ ಗುರುಗಳಾದ ಶ್ರೀವ್ಯಾಸರಿಂದ ಹೇಳಲ್ಪಟ್ಟವು. ॥ ೨೪ ॥ ಆಗ ಪ್ರಸ್ತಾವವಾಗಿರುವ ಹಿಂದೆ ನಡೆದ, ಈಗ ನಡೆಯುತ್ತಿರುವ, ಮುಂದೆ ನಡೆಯುವ ಮತ್ತು ಪಾಪಪರಿಹಾರಕಗಳಾದ ಎಲ್ಲವನ್ನೂ ನಾನು ಕೇಳಿದ್ದೇನೆ. ॥ ೨೫ ॥ ಈ ಸಂದರ್ಭದಲ್ಲಿ ಯಾರು ತೀರ್ಥರಾಜ ಎಂಬುದರ ಬಗ್ಗೆ ನನ್ನಿಂದ ಗುರುಗಳು ಪ್ರಾರ್ಥಿಸಲ್ಪಟ್ಟರು, ಆಗ ಅವರು ಕ್ಷಣಕಾಲ ಕಣ್ಣನ್ನು ಮುಚ್ಚಿ ಧ್ಯಾನಿಸಿ ಅನಂತರ ನನಗೆ ಈ ರೀತಿ ಹೇಳಿದರು. ॥ ೨೬ ॥

ಶ್ರೀ ವ್ಯಾಸ ಉವಾಚ—

ಸಮ್ಯಗುಕ್ತಂ ತ್ವಯಾ ಸೂತ ಶೃಣು ತೀರ್ಥಪುರಂದರಮ್ ।
ಪರಂ ತು ಯಸ್ಯ ಕಸ್ಯಾಪಿ ನ ವಾಚ್ಯಂ ಪುರತಸ್ತಥಾ ॥ ೨೭ ॥
ದಾಂಭಿಕಾಯಾತಿಲುಬ್ಧಾಯ ವಂಚಕಾಯ ದುರಾತ್ಮನೇ ।
ಸಾರಾತ್ಸಾರತರಂ ವಸ್ತು ನಾಖ್ಯೇಯಮಿತಿ ಹಿ ಶ್ರುತಿಃ ॥ ೨೮ ॥
ಸಾರಾಂಶಭಾಗಿನೋ ಹ್ಯಗ್ರೇ ಭವಿಷ್ಯಂತಿ ಹಿ ಕೈತವಾತ್ ।
ಕ್ಷೀಣಾಯುಷಃ ಕ್ಷೀಣಸತ್ತ್ವಾಃ ಕ್ಷೀಣಪುಣ್ಯಾಃ ಕಲೌ ಯುಗೇ ॥ ೨೯ ॥
ಕೃತಂ ತ್ರೇತಾ ದ್ವಾಪರಂ ಚ ಚತುರ್ಥಂ ತು ಕಲೇರ್ಯುಗಮ್ ।
ಉತ್ತರೋತ್ತರಮೇತೇಷು ಧರ್ಮಹ್ರಾಸೋ ಭವಿಷ್ಯತಿ ॥ ೩೦ ॥
ಆದ್ಯೇ ಪ್ರವರ್ತತೇ ಧರ್ಮಶ್ಚತುಷ್ಪಾಜ್ಜನಪಾಲಿತಃ ।
ತಪಃ ಶೌಚಂ ದಯಾ ಸತ್ಯಮೇತೇ ಪಾದಾಃ ಪ್ರಕೀರ್ತಿತಾಃ ॥ ೩೧ ॥
ತದಾ ಸರ್ವೇ ಜನಾಃ ಶಾಂತಾಃ ಸಂತುಷ್ಟಾಃ ಕರುಣಾಮಯಾಃ ।
ಆತ್ಮಾರಾಮಾಸ್ತಥಾ ಮೈತ್ರಾ ದಾಂತಾಶ್ಚ ಸಮದೃಷ್ಟಯಃ ॥ ೩೨ ॥
ಉತ್ತರತ್ರಾಸ್ಯ ಧರ್ಮಸ್ಯ ಪಾದನಾಶಃ ಪ್ರಜಾಯತೇ ।
ಅಧರ್ಮಪಾದವೃದ್ಧಿಶ್ಚ ಕ್ರಮಶಃ ಸಂಪ್ರಜಾಯತೇ ॥ ೩೩ ॥
ಸ್ಮಯಸ್ಸಂಗೋ ಮದಶ್ಚೈವ ಹ್ಯಸತ್ಯಂಚರಣಾ ಅಮೀ ।
ಚತ್ವಾರ ಏವ ಬಲಿನೋ ಅಧರ್ಮಸ್ಯ ಪ್ರಕೀರ್ತಿತಾಃ ॥ ೩೪ ॥
ನ ಲಂಪಟಾ ಜಾತಿಹಿಂಸ್ರಾಃ ಕರ್ಮಠಾಶ್ಚ ತಪಸ್ವಿನಃ ।
ವಿದ್ಯಾದಿಗುಣಸಂಪನ್ನಾಸ್ತ್ರೇತಾಯಾಂ ಮನುಜೋತ್ತಮಾಃ ॥ ೩೫ ॥
ಸ್ವಾಧ್ಯಾಯಾಧ್ಯಾಪನೇ ಶಕ್ತಾಃ ಮಹಾಶೀಲಾಃ ತಪಸ್ವಿನಃ ।
ಕುಟುಂಬಿನಶ್ಚ ಧನಿನಃ ಜನಾ ವೈ ದ್ವಾಪರೇ ಯುಗೇ ॥ ೩೬ ॥
ಕಲೌ ತು ದುರ್ಭಗಾ ಲೋಕಾ ಬಹುತೃಷ್ಣಾಶ್ಚ ನಿರ್ದಯಾಃ ।
ದುರಾಚಾರಾತಿಲುಬ್ಧಾಶ್ಚ ದ್ವೇಷಿಣೋ ವ್ಯರ್ಥವೈರಿಣಃ ॥ ೩೭ ॥
ಅಧರ್ಮನಿರತಾಸ್ಸರ್ವೇ ದಾಂಭಿಕಾಃ ಕುಹಕಾಸ್ತಥಾ ।
ಅಸೂಯವೋ ಭವಿಷ್ಯಂತಿ ದೃಷ್ಟ್ವಾ ತು ಸುಪಥೋತ್ಸಕಾನ್ ॥ ೩೮ ॥
ಕಾಮಾದಿನಿಷ್ಠಾಸ್ಸತತಂ ಬ್ರಹ್ಮಕ್ಷತ್ರವಿಶೋದರಾಃ ।
ತದಾ ಸ್ವಾಧ್ಯಾಯವಿಭ್ರಂಶಾದಾಪತ್ಸ್ಯಂತೇ ಹಿ ತುರ್ಯತಾಮ್ ॥ ೩೯ ॥
ಸ್ನಾನೇ ದಾನೇ ಜಪೇ ಹೋಮೇ ಸ್ವಾಧ್ಯಾಯೇ ಯಜ್ಞಕರ್ಮಣಿ ।
ಶಿಥಿಲಾ ವಧಚೌರ್ಯಾದೌ ಉದ್ಯುಕ್ತಾಃ ಪಾಪಕರ್ಮಣಿ ॥ ೪೦ ॥
ನೀಚೋತ್ತಮಾ ವಿಪರ್ಯಂತಿ ರಾಜಾನೋ ದ್ರವ್ಯಲೋಭಿನಃ ।
ಚೌರಪ್ರಧಾನದೇಶಾಶ್ಚ ವೇದಾಃ ಪಾಷಂಡದೂಷಿತಾಃ ॥ ೪೧ ॥

ಗುರುಂ ಶಿಷ್ಯಾಃ ಸುತಾಸ್ತಾತಂ ದ್ವಿಷಂತಿ ವನಿತಾಃ ಪತಿಮ್ ।
ನಿರ್ಗುಣಾಃ ಗುಣಿನಶ್ಚೈವ ನ ತು ತತ್ಸಾಧನೋತ್ಸುಕಾಃ ॥ ೪೨ ॥
ಅನ್ಯಕರ್ಮರತಾ ವಿಪ್ರಾಃ ಶಿಶ್ನೋದರಪರಾಯಣಾಃ ।
ಕ್ಷತ್ರಿಯಾಶ್ಚ ವಿಶಶ್ಚೈವ ಶೂದ್ರಾ ಧರ್ಮಸ್ಯ ಬೋಧಕಾಃ ॥ ೪೩ ॥
ಪರದಾರಾಪರದ್ರವ್ಯಪರದ್ರೋಹರತಾಸ್ತಥಾ ।
ಅಲ್ಪಕಾಯಾ ಮಹಾಹಾರಾಸ್ತ್ರೀರಾಶ್ಚ ಬಕವೃತ್ತಯಃ ॥ ೪೪ ॥
ಆಚಾರವಂತಂ ಜಪಿನಂ ಸ್ನಾನದಾನರತೇ ನರಮ್ ।
ದೃಷ್ಟ್ವಾ ಗತ್ಯೈಷಿಣಂ ಭಕ್ತಂ ಕರಿಷ್ಯಂತ್ಯುಪಹಾಸವತ್ ॥ ೪೫ ॥
ವಾಚಾ ಧರ್ಮಪ್ರವಕ್ತಾರೋ ಮನಸಾ ಪಾಪಲೋಲುಪಾಃ ।
ನಿಮಂತ್ರಣೋತ್ಸಕಾ ವಿಪ್ರಾ ಆತ್ಮಸ್ತುತಿಪರಾಯಣಾಃ ॥ ೪೬ ॥
ಸ್ತ್ರಿಯಶ್ಚ ಬಹುಶೋ ಭ್ರಷ್ಟಾಃ ಕಾಮಾರ್ತಾ ಭೋಗಲಂಪಟಾಃ ।
ಭರ್ತೃಶ್ವಶುರವೈರಿಣ್ಯಃ ಪರುಷಾನೃತಭಾಷಣಾಃ ॥ ೪೭ ॥
ದುಃಶೀಲಾ ದುರ್ಗುಣಾಸಕ್ತಾಃ ಭಕ್ಷ್ಯಾದೌ ಭರ್ತೃವಂಚಕಾಃ ।
ಅಧರ್ಮನಿರತಾ ನಿತ್ಯಂ ಸರ್ವದಾ ಕಲಹಪ್ರಿಯಾಃ ॥ ೪೮ ॥
ಇತ್ಯಾದಿದೋಷವಿಧ್ವಸ್ತಬುದ್ಧೀನಾಂ ವೈ ಕಲೌ ಯುಗೇ ।
ತೀರ್ಥಯಾತ್ರಾ ಹರೇರ್ನಾಮ ಸ್ಮರಣಂ ತಾರಕಂ ಮತಮ್ ॥ ೪೯ ॥
ತತ್ರಾಪ್ಯನ್ಯೇಷು ತೀರ್ಥೇಷು ಯಥೋಕ್ತಕಾರಣಾತ್ತದಾ ।
ಪಾಪಾನಿ ಸಂಭವಂತ್ಯೇವ ಯಾನಿ ಯಾನಿ ಮುನೀಶ್ವರಾಃ ॥ ೫೦ ॥
ತೇಷಾಂ ಭೋಗಸ್ತು ತತ್ರೈವ ಕಾರ್ಯತೇ ತೀರ್ಥದೈವತೈಃ ।
ಭೋಗಂ ವಿನಾ ಕ್ಷಯಂ ನಾಸ್ತಿ ಸಪ್ತಪುರ್ಯ್ಯಪಿ ಕರ್ಹಿಚಿತ್ ॥ ೫೧ ॥
ಕದಾಚಿದ್ದೈವಯೋಗೇನ ತೀರ್ಥರಾಜಂ ಗತಾ ನರಾಃ ।
ಪಾಪಾನಿ ಭಸ್ಮಸಾತ್ತೇಷಾಂ ಭವಂತ್ಯಾಲೋಕಮಾತ್ರತಃ ॥ ೫೨ ॥
ತಸ್ಮಾತ್ಕ್ಷೇತ್ರೋಪಸಂದಿಗ್ಧಂ ಗೋಪ್ಯಂ ಕುರು ಮಹಾಮತೇ ।
ಪ್ರಕೃಷ್ಟಂ ಸರ್ವಯೋಗೇಭ್ಯೋ ವರಿಷ್ಠಂಕಾಮದಂ ಭುವಿ ॥ ೫೩ ॥
ವರ್ತತೇ ಸಂಗತಾ ಯತ್ರ ಗಂಗಾ ತರಣಿಕನ್ಯಯಾ ।
ಸರಸ್ವತೀಮಧ್ಯಭಾಗೇ ಕಲಿನಾಕಲಿತಾ ಸದಾ ॥ ೫೪ ॥
ಸದಾ ಸಕಲಜಂತೂನಾಂ ಭಕ್ತ್ಯಾ ಸ್ವಸ್ಮಿನ್ನುಷೇಯುಷಾಮ್ ।
ಕರ್ತರೀತಿ ಸಮಾಖ್ಯಾತಾ ಸರ್ವಪಾಪನಿಕೃಂತಿನೀ ॥ ೫೫ ॥
ತದೇವ ರಾಜಮಾನತ್ವಾತ್ತೀರ್ಥರಾಜ ಇತಿ ಸ್ಮೃತಃ ।
ಅತಸ್ತದ್ಯಸ್ಯ ಕಸ್ಯಾಪಿ ನ ಪ್ರಕಾಶ್ಯಂ ಕಥಂಚನ ॥ ೫೬ ॥

॥ ಇತಿ ದ್ವಿತೀಯೋಽಧ್ಯಾಯಃ ॥

**ಶ್ರೀವೇದವ್ಯಾಸರು ಹೇಳಿದರು—**

ಎಲೈ ಸೂತನೇ, ನಿನ್ನಿಂದ ಸರಿಯಾಗಿ ಕೇಳಲ್ಪಟ್ಟಿದೆ; ತೀರ್ಥರಾಜನ ಮಹಿಮೆಯನ್ನು ಹೇಳುತ್ತೇನೆ; ಕೇಳು. ಆದರೆ, ಈ ವಿಷಯವನ್ನು ಯಾರೆಂದರವರ ಮುಂದೆ ಯಾವಾಗಲೂ ಹೇಳಬಾರದು. ॥ ೨೭ ॥ ಆಷಾಢಭೂತಿಗಳಿಗೂ, ಲೋಭಿಗಳಿಗೂ, ಮೋಸಗಾರರಿಗೂ, ಕೆಟ್ಟಬುದ್ಧಿಯುಳ್ಳವರಿಗೂ ಮುಖ್ಯವಾದುವುಗಳಲ್ಲಿಯೂ ಅತಿಮುಖ್ಯವಾದ ವಿಷಯವನ್ನು ಹೇಳಲೇಬಾರದು ಎಂದು ವೇದಗಳು ಹೇಳುತ್ತವೆ. ॥ ೨೮ ॥ ಮುಂದೆ ವಂಚನೆಯ ದೆಶೆಯಿಂದ ಈ ಅತ್ಯಂತ ಮುಖ್ಯ ವಿಷಯವನ್ನು ದುರುಪಯೋಗಪಡಿಸಿಕೊಳ್ಳಲು ವಂಚಕರು ಪ್ರಯತ್ನನಡೆಸಿಯೇ ನಡೆಸುತ್ತಾರೆ. ಕಲಿಯುಗದಲ್ಲಿ ಜನರು ಕ್ಷೀಣಾಯುಸ್ಸುಳ್ಳವರು, ಕುಂಠಿತವಾದ ಬಲವುಳ್ಳವರೂ, ಕ್ಷೀಣಿಸಿದ ಪುಣ್ಯವುಳ್ಳವರು ಆಗಿರುವುದರಿಂದ ದೀರ್ಘಕಾಲದ ಸಾಧನೆಗೆ ಒಲವು ತೋರದೆ ಅವರು ಶೀಘ್ರಫಲಕಾರಿಯಾದ ಉಪಾಯಗಳನ್ನೇ ಹುಡುಕುತ್ತಿರುತ್ತಾರೆ. ಆದ್ದರಿಂದ ರಹಸ್ಯಕರವಾದ ಅತಿಮುಖ್ಯವಿಷಯಗಳನ್ನು ಇವರ ಎದುರಿಗೆ ಹೇಳಿದರೆ ಇವರು ಅವುಗಳನ್ನು ದುರುಪಯೋಗ ಪಡಿಸಿ ಅನರ್ಥಕ್ಕೆ ಕಾರಣರಾಗುತ್ತಾರೆ. ಕಲಿಯುಗದಲ್ಲಂತೂ ಅಂತಹವರ ಎದುರಿಗೆ ಹೇಳಲೇಬಾರದು. ॥ ೨೯ ॥ ಕೃತ, ತ್ರೇತ, ದ್ವಾಪರ ಮತ್ತು ಕಲಿಯೆಂದು ನಾಲ್ಕು ಯುಗಗಳಿರುವುವು. ಇವುಗಳಲ್ಲಿ ಕ್ರಮವಾಗಿ ಒಂದಕ್ಕಿಂತ ಇನ್ನೊಂದರಲ್ಲಿ ಯುಗಗಳು ಕಳೆಯುತ್ತಿದ್ದಂತೆ ಧರ್ಮವು ಹೆಚ್ಚು ಹೆಚ್ಚು ನಾಶವಾಗುತ್ತಾ ಬರುವುದು. ॥ ೩೦ ॥ ಕೃತಯುಗದ ಪ್ರಾರಂಭದಲ್ಲಿ ಧರ್ಮವು ಜನಗಳಿಂದ ಪಾಲಿಸಲ್ಪಡುತ್ತಿದ್ದು ನಾಲ್ಕು ಕಾಲು(ಪಾದ)ಗಳಿಂದ ಪೂರ್ಣವಾಗಿರುತ್ತದೆ. ತಪಸ್ಸು, ಒಳ್ಳೆಯ ಆಲೋಚನೆ, (ತಪ ಆಲೋಚನೇ ಎಂಬ ಧಾತುವಿನಿಂದ), ಶುದ್ಧಿ(ಶೌಚ), ದಯೆ ಮತ್ತು ಸತ್ಯ ಇವುಗಳೇ ಈ ಧರ್ಮದ ನಾಲ್ಕು ಕಾಲುಗಳು. ॥ ೩೧ ॥ ಕೃತಯುಗದಲ್ಲಿ ಜನರು ಯಾವಾಗಲೂ ಶಾಂತರೂ, ತೃಪ್ತರೂ, ಕಾರುಣ್ಯವುಳ್ಳವರೂ, ಒಳ್ಳೆಯ ಮನೋನೆಮ್ಮದಿಯುಳ್ಳವರೂ, ಪರಮಾತ್ಮನ ವಿಷಯಕ ಚಿಂತನೆಯಿಂದ ಜಪಿಸು-ತ್ತಿರುವವರೂ, ಸ್ನೇಹಭಾವಸಂಪನ್ನರೂ, ಇಂದ್ರಿಯನಿಗ್ರಹ ಉಳ್ಳವರೂ ಮತ್ತು ಎಲ್ಲರ ಬಗ್ಗೆ ಸಮತ್ವ ಭಾವವುಳ್ಳವರೂ (ಪರಮಾತ್ಮನು ಎಲ್ಲರನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಸಮತ್ವದಿಂದ ನಿಯಮನ ಮಾಡುತ್ತಾನೆಂಬ ಅರ್ಥದಲ್ಲಿ ಸಮಭಾವನೆಯುಳ್ಳವರೂ) ಆಗಿರುವರು. ॥ ೩೨ ॥ ಹಾಗೆಯೇ ಕೃತಯುಗವು ಕಳೆಯುತ್ತಿದ್ದಂತೆ ಧರ್ಮವು ಮೇಲೆ ಹೇಳಿದ ನಾಲ್ಕು ಪಾದಗಳಾದ ತಪಸ್ಸು, ದಯಾ, ಶೌಚ ಮತ್ತು ಸತ್ಯ ಇವುಗಳಲ್ಲಿ ಕಾಲುಭಾಗಗಳು ಕಡಿಮೆಯಾಗುತ್ತದೆ. ಒಟ್ಟಿನಲ್ಲಿ ಧರ್ಮವು ಒಂದು ಪಾದದಿಂದ ಕಡಿಮೆಯಾಗಿ ಇನ್ನು ಮುಕ್ಕಾಲು ಭಾಗವೇ ಉಳಿಯುವುದು. ಅಂದರೆ ಧರ್ಮವು ಮೂರು ಕಾಲುಗಳಿಂದ ಇದ್ದು ಒಂದು ಕಾಲಿನಷ್ಟು ಕುಂಟಾಗುವುದು ಮತ್ತು ಅಧರ್ಮವು ಒಂದು ಕಾಲಿನಷ್ಟು ಬೆಳೆದುಕೊಳ್ಳುವುದು. ॥ ೩೩ ॥ ಅಧರ್ಮದ ಪಾದಗಳೆಂದರೆ ಅಹಂಕಾರ (ಸ್ಮಯ), ಲೌಕಿಕವಾದ ಸಂಬಂಧ(ಸಂಗ), ಮದ ಮತ್ತು ಅಸತ್ಯ ಇವುಗಳು. ಇವುಗಳೇ ಅಧರ್ಮದ ಪಾದಗಳು. ಈ ನಾಲ್ಕೂ ಅಧರ್ಮದ ಅಂಶಗಳು ಪೂರ್ಣವಾಗಿ ಬೆಳೆದು, ಧರ್ಮದ ನಾಲ್ಕೂ ಪಾದಗಳು ಪೂರ್ಣವಾಗಿ ನಾಶವಾಗಿ ಅಧರ್ಮವು ತನ್ನ ನಾಲ್ಕು ಕಾಲುಗಳಿಂದಲೂ ವಿಜೃಂಭಿ-ಸುವುದು. ಇದು ಕಲಿಯುಗದ ಕೊನೆಯಲ್ಲಿ. ॥ ೩೪ ॥ ಇನ್ನು ತ್ರೇತಾಯುಗದಲ್ಲಿ ಜನರು ವಿಷಯೇಚ್ಛಾದಿಗಳಲ್ಲಿ ಲಂಪಟರಾಗಿರುವುದಿಲ್ಲ (ಅತಿಯಾದ ಆಸಕ್ತಿ), ಜಾತಿಗಳ ಹಿಂಸೆಯಲ್ಲಿ ತೊಡಗುವುದಿಲ್ಲ, ಕರ್ಮಾಸಕ್ತರೂ, ತಪಸ್ವಿಗಳೂ ಆಗಿರುತ್ತಾರೆ, ಮತ್ತು ವಿದ್ಯಾಪ್ರದಾನ ಮತ್ತು

ವಿದ್ಯಾಸಂಪಾದನೆ ಇವುಗಳಲ್ಲಿ ಆಸಕ್ತರಾಗಿರುತ್ತಾರೆ. ತ್ರೇತಾಯುಗದ ಜನರೂ ಉತ್ತಮರೇ. ॥ ೩೫ ॥ ಇನ್ನು ದ್ವಾಪರಯುಗದಲ್ಲಿ ಜನರು ಪಾಠ ಹೇಳುವುದರಲ್ಲಿ ಅಧ್ಯಯನ ಮಾಡುವುದರಲ್ಲಿ ತಾವು (ಸ್ವಾಧ್ಯಾಯಪ್ರವಚನೇ) ಸಾಮರ್ಥ್ಯವುಳ್ಳವರಾಗಿದ್ದು ಒಳ್ಳೆಯ ನಡತೆಯುಳ್ಳವರಾಗಿಯೂ ಇದ್ದು ಸಂಸಾರಿಗಳೂ, ಧನವಂತರೂ ಆಗಿರುವರು. ॥೩೬॥ ಕಲಿಯುಗದಲ್ಲಿ ಜನರು ಅತ್ಯಂತ ಭೋಗಲಂಪಟ- ರಾಗಿಯೂ ದುರಾಸೆಯುಳ್ಳವರಾಗಿಯೂ, ನಿರ್ದಯಿಗಳೂ, ಲೋಭಿಗಳೂ, ದ್ವೇಷಿಗಳೂ ಮತ್ತು ಕಾರಣವಿಲ್ಲದೆ ವ್ಯರ್ಥವೈರ ಮಾಡತಕ್ಕವರೂ ಆಗಿರುತ್ತಾರೆ. ॥ ೩೭ ॥ ಕಲಿಯುಗದಲ್ಲಿ ಜನರು ಅಧರ್ಮದಲ್ಲಿಯೇ ಆಸಕ್ತಿಯುಳ್ಳವರೂ ಆಷಾಢಭೂತಿತ್ವ ಉಳ್ಳವರೂ ಮತ್ತು ವಂಚಕರಾಗಿಯೂ ಇರುವುದಲ್ಲದೆ ಸನ್ಮಾರ್ಗದಲ್ಲಿ ಇರುವವರನ್ನು ನೋಡಿ ಅಸೂಯೆ ಪಡುತ್ತಾರೆ. ॥ ೩೮ ॥ ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಯಾವಾಗಲೂ ಕಾಮಾ- ಚರಣೆಯಲ್ಲಿಯೇ (ತಮ್ಮ ವರ್ಣೋಚಿತವಾದ ವೃತ್ತಿಯನ್ನು ಬಿಟ್ಟು ಇಚ್ಛಾನುಸಾರ ಅನ್ಯವರ್ಣವೃತ್ತಿಯನ್ನು ಅವಲಂಬಿಸುವರು.) ತೊಡಗಿರುತ್ತಾರೆ. ಹೀಗೆ ಉಚ್ಚವರ್ಣದವರಾದ ಇವರು ಅಧ್ಯಯನ ಅಧ್ಯಾಪನೆಗಳನ್ನು ಬಿಟ್ಟು ಬದುಕುವುದರಿಂದ ಅವರು ಶೂದ್ರರಂತೆಯೇ ಆಗಿರುತ್ತಾರೆ. ॥ ೩೯ ॥ ಇದಲ್ಲದೆ, ಈ ಯುಗದಲ್ಲಿ ಉತ್ತಮವರ್ಣದ ಜನರು ಸ್ನಾನ, ದಾನ, ಜಪ, ಹೋಮ, ಅಧ್ಯಯನ, ಅಧ್ಯಾಪನ ಮತ್ತು ಯಜ್ಞಯಾಗಾದಿಗಳಲ್ಲಿ ಸಡಿಲವಾದ ಗಮನ- ವುಳ್ಳವರಾಗಿ ಕೊಲೆ ಚೌರ್ಯ ಮುಂತಾದ ಪಾಪ ಕಾರ್ಯಗಳಲ್ಲಿಯೇ ಆಸಕ್ತರಾಗಿ ಇರುವವರು. ॥ ೪೦ ॥ ಕಲಿಯುಗದಲ್ಲಿ ನೀಚರು ಉತ್ತಮ ವರ್ಣದವರ ಕೆಲಸ ಮಾಡುವವರು ಮತ್ತು ಉತ್ತಮರು ಕೀಳುವರ್ಣದವರ ಕೆಲಸಗಳನ್ನು ಮಾಡುವರು. ರಾಜರು ಧನದ ಆಸೆಯುಳ್ಳವರಾಗುವರು. ಇಡೀ ದೇಶವು ಕಳ್ಳಕಾಕರಿಂದ ವಿಜೃಂಭಿಸುತ್ತದೆ. ನಾಸ್ತಿಕರು, ಬ್ರಹ್ಮದ್ವೇಷಿಗಳು ಮತ್ತು ಪಾಷಂಡಿಗಳು ವೇದಾರ್ಥಗಳನ್ನು ಅಪವ್ಯಾಖ್ಯಾನ ಮೊದಲಾದವುಗಳಿಂದ ಕೆಡಿಸುವರು. ॥ ೪೧ ॥ ಗುರುವನ್ನು ಶಿಷ್ಯರು, ತಂದೆಯನ್ನು ಮಕ್ಕಳು ಮತ್ತು ಹೆಂಡತಿಯರು ಗಂಡಂದಿರನ್ನು ದೂಷಣೆ ಮಾಡುವರು. ಗುಣಹೀನರು ಗುಣವಂತರ ಸಾಧನೆಗಳನ್ನು ಗಮನಿಸಿ ಮೆಚ್ಚುವುದರ ಬದಲು ಅವರನ್ನು ದ್ವೇಷ ಮಾಡುವರು. ॥ ೪೨ ॥ ಬ್ರಾಹ್ಮಣರು ಅನ್ಯಜಾತಿಯವರ ಕರ್ಮಗಳಲ್ಲಿ ಆಸಕ್ತರಾಗುವರು ಮತ್ತು ಹೊಟ್ಟೆಹೊರೆಯುವುದರಲ್ಲಿಯೂ, ಭೋಗಕಾರ್ಯಗಳಲ್ಲಿಯೂ ತೊಡಗಿರುವರು. ಕ್ಷತ್ರಿಯರೂ, ವೈಶ್ಯರೂ ಮತ್ತು ಶೂದ್ರರೂ ಧರ್ಮಬೋಧಕರಾಗುತ್ತಾರೆ. ॥ ೪೩ ॥ ಅಲ್ಲದೆ ಈ ಮೂರು ವರ್ಣದವರೂ ಪರಸ್ತ್ರೀಯರ ಸಂಭೋಗ, ಪರದ್ರವ್ಯಾಪಹರಣ ಮತ್ತು ಪರರ ದ್ರೋಹ ಇವುಗಳಲ್ಲಿಯೇ ಆಸಕ್ತರಾಗಿರುವರು ಸಣ್ಣ ದೇಹವುಳ್ಳವರೂ ಹೆಚ್ಚು ಹೆಚ್ಚು ಆಹಾರವನ್ನು ಸೇವಿಸುವರು. ಒಟ್ಟಿನಲ್ಲಿ ಬಕಪಕ್ಷಿಯಂತೆ ಮೌನವಾಗಿದ್ದು ಪರರನ್ನು ನಾಶಪಡಿಸುವುದರಲ್ಲಿಯೇ ತೊಡಗಿರುವರು. ॥ ೪೪ ॥ ಅಲ್ಲದೆ ಸದಾಚಾರಸಂಪನ್ನರನ್ನೂ, ಜಪತಪಾದಿಗಳಲ್ಲಿ ನಿರತರಾದ- ವರನ್ನೂ, ಕೀಳುವ್ಯವಹಾರಗಳಲ್ಲಿ ಆಸಕ್ತಿ ಕಳೆದುಕೊಂಡವರನ್ನೂ ಮತ್ತು ಭಗವದ್ಭಕ್ತರನ್ನೂ ಕಂಡರೆ ಅಪಹಾಸ್ಯ ಮಾಡುವರು. ॥ ೪೫ ॥ ಬ್ರಾಹ್ಮಣರು ಮತ್ತು ಧರ್ಮೋಪದೇಶಕರು ಬರೇ ಮಾತಿನಲ್ಲಿ. ಆದರೆ ಅವರ ಮನಸ್ಸಿನ ತುಂಬ ಪಾಪಕೆಲಸಗಳ ಯೋಚನೆಯು ತುಂಬಿರುತ್ತವೆ. ಇವರು ಯಾವಾಗಲೂ ತಿಥಿ ಊಟದ ಕಡೆಗೆ (ಬ್ರಾಹ್ಮಣಾರ್ಥ) ಒಲವು ತೋರಿಸುತ್ತಿರುತ್ತಾರೆ ಮತ್ತು ಆತ್ಮಸ್ತುತಿಯಲ್ಲಿಯೇ ಆಸಕ್ತರಾಗಿರುತ್ತಾರೆ. ॥ ೪೬ ॥ ಸ್ತ್ರೀಯರಾದರೋ ಬಹಳ ಮಟ್ಟಿಗೆ ಶೀಲವನ್ನು ಕಳೆದುಕೊಂಡಿರುತ್ತಾರೆ, ಕಾಮಿಗಳಾಗಿ ಇರುತ್ತಾರೆ ಮತ್ತು ಕೇವಲ ಭೋಗಾದಿಗಳಲ್ಲಿಯೇ ತಲ್ಲೀನರಾಗಿರುತ್ತಾರೆ. ಗಂಡಂದಿರನ್ನು, ಅತ್ತೆಮಾವಂದಿರನ್ನು ದ್ವೇಷಿಸುತ್ತಾರೆ, ಸುಳ್ಳಾಡುತ್ತಾರೆ ಮತ್ತು

ಕಠಿಣವಾಗಿ ನುಡಿಯುತ್ತಾರೆ. ॥ ೪೭ ॥ ಸ್ತ್ರೀಯರು ಭ್ರಷ್ಟರಾಗಿಯೂ ಕೆಡಕನ್ನು ಮಾಡುವುದರಲ್ಲಿಯೇ ಆಸಕ್ತರಾಗಿಯೂ ಭಕ್ಷ್ಯಾದಿ ವಿಷಯಗಳಲ್ಲಿ ಗಂಡನನ್ನೇ ವಂಚಿಸುವವರೂ ಆಗಿರುತ್ತಾರೆ. ಯಾವಾಗಲೂ ಅಧರ್ಮ ಮಾಡುವುದರಲ್ಲಿ ಆಸಕ್ತರಾಗಿ ಇರುತ್ತಾರೆ ಮತ್ತು ಯಾವಾಗಲೂ ಜಗಳವಾಡುತ್ತಿರುತ್ತಾರೆ. ॥ ೪೮ ॥

ಹೀಗೆ ದೋಷದಿಂದ ವಿನಾಶಗೊಂಡ ಬುದ್ಧಿಯುಳ್ಳ ಸ್ತ್ರೀಪುರುಷರುಗಳಿಗೆ ಕಲಿಯುಗದಲ್ಲಿ ತೀರ್ಥಯಾತ್ರೆಯೂ ಮತ್ತು ಹರಿನಾಮಸ್ಮರಣೆಯೂ ಉದ್ಧಾರಮಾಡತಕ್ಕವುಗಳೇ ಸರಿ ಎಂದು ನನ್ನ ಅಭಿಪ್ರಾಯ. ॥ ೪೯ ॥ ಹೇ ಋಷಿಶ್ರೇಷ್ಠರೇ ! ಕಲಿಯುಗದಲ್ಲಿ ಅನಿವಾರ್ಯವಾಗಿ ಉಂಟಾಗುವ ಮೇಲೆ ಹೇಳಿರುವ ಕಾರಣಗಳಿಂದುದ್ಭವಿಸುವ ಪಾಪಕರ್ಮಗಳ ಭೋಗವು ಆಯಾಯ ತೀರ್ಥದಲ್ಲಿರುವ ತೀರ್ಥದೇವತೆಗಳಿಂದಲೇ ಅಲ್ಲಿಯೇ ಮಾಡಿಸಲ್ಪಡುತ್ತದೆ. ಅನುಭವಿಸದೇ ಈ ಪಾಪಗಳು ಮೋಕ್ಷದಾಯಕವೆಂದು ಪ್ರಸಿದ್ಧಿ ಹೊಂದಿರುವ ಏಳು ಕ್ಷೇತ್ರಗಳಲ್ಲಿ ಸೇವಾದಿಗಳನ್ನು ಮಾಡಿದರ ಕ್ಷಯವಾಗುವುದಿಲ್ಲ. ॥ ೫೦-೫೧ ॥ ಕೆಲವೊಮ್ಮೆ ದೈವಯೋಗದಿಂದ ತೀರ್ಥರಾಜ ಎಂದು ಪ್ರಸಿದ್ಧವಾಗಿರುವ ಈ ಪ್ರಯಾಗಕ್ಷೇತ್ರಕ್ಕೆ ಬಂದು ತ್ರಿವೇಣ್ಯಾದಿಗಳ ಸಂದರ್ಶನ ಮಾತ್ರದಿಂದಲೇ ಅವರ ಪಾಪರಾಶಿಗಳು ಸುಟ್ಟು ಬೂದಿಯಾದ ನಿದರ್ಶನಗಳೂ ಉಂಟು.॥೫೨॥ ಆದ್ದರಿಂದ ಮಹಾಬುದ್ಧಿಶಾಲಿಯಾದ ಸೂತನೇ! ಈ ಪ್ರಯಾಗಕ್ಷೇತ್ರದ ಸೇವನೆಯು ಬೇರೆಲ್ಲಾ ಕ್ಷೇತ್ರಗಳಲ್ಲಿನ ಸೇವನೆಗಳಿಗಿಂತಲೂ ಅತಿ ಹೆಚ್ಚಿನದು, ಎಲ್ಲ ಸಾಧನೋಪಾಯಗಳಿಗಿಂತ ಹಿರಿದು ಮತ್ತು ಸಮಸ್ತ ಮನೋಭೀಷ್ಟಗಳನ್ನೂ ಕೊಡತಕ್ಕದ್ದು. ಆದ್ದರಿಂದ ಈ ಕ್ಷೇತ್ರದ ತೀರ್ಥರಾಜತ್ವವನ್ನೂ ಅದರ ವೈಶಿಷ್ಟ್ಯವನ್ನೂ ರಹಸ್ಯವಾಗಿ ಕಾಪಾಡಿಕೊಂಡು ಬರಬೇಕು. ॥ ೫೩ ॥ ಈ ಪ್ರಯಾಗದಲ್ಲಿ ಗಂಗೆಯೊಡನೆ ಯಮುನೆಯ ಸಂಗಮವಾಗುವುದು ಮಧ್ಯದಲ್ಲಿ ಸರಸ್ವತಿಯು ಜ್ಞಾನಿಗಳಿಂದ ಜ್ಞಾತಳಾಗಿ ಇದ್ದಾಳೆ. (ಗುಪ್ತಗಾಮಿನಿಯಾಗಿದ್ದಾಳೆ ಎಂದರ್ಥ) ॥ ೫೪ ॥ ಈ ಸಂಗಮದಲ್ಲಿ ಸ್ನಾನಾದಿಗಳನ್ನು ಮಾಡುವವರ ಸಮಸ್ತಪಾಪಗಳು ಕತ್ತರಿಸಲ್ಪಡುವುದರಿಂದ, ಸ್ಮೃತಿಗಳಲ್ಲಿ ಈ ಸಂಗಮಕ್ಕೆ ''ಕರ್ತರೀ'' ಎಂದು ಹೆಸರು ಬಂದಿದೆ. ಈ ಕಾರಣದಿಂದಲೇ ಸ್ಮೃತಿಗಳಲ್ಲಿ ಈ ಪ್ರಯಾಗಕ್ಷೇತ್ರವನ್ನು ''ಕ್ಷೇತ್ರರಾಜ'' ನೆಂದು ಹೆಸರಿಸಿ ಇದಕ್ಕೆ ರಾಜಮಾನ್ಯತ್ವವನ್ನು ಕೊಡಲಾಗಿದೆ. ಆದ್ದರಿಂದ ಈ ರಹಸ್ಯವನ್ನು ಯಾರೆಂದರವರಿಗೆ ರಟ್ಟು ಮಾಡದೆ ರಹಸ್ಯವಾಗಿಡಬೇಕು. ॥ ೫೫-೫೬ ॥

॥ ಎರಡನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ತೃತೀಯೋಽಧ್ಯಾಯಃ ॥ ೩ ॥

ಸೂತ ಉವಾಚ—

ಇತಿ ತದ್ವಾಕ್ಸುಧಾಸೇಕನಿರಸ್ತಾಖಿಲಸಂಶಯಃ ।
ತಂ ಧ್ಯಾಯೇಽಹಂ ಸದಾ ವಿಪ್ರಾ ಯತ್ರ ಕುತ್ರ ಗತೋಽಪಿ ವಾ ॥ ೧ ॥
ತಸ್ಯಾಸ್ಯ ತೀರ್ಥರಾಜಸ್ಯ ಚತುರ್ವರ್ಗಪ್ರದಸ್ಯ ಹಿ ।
ಶ್ರುತಿಸ್ಮೃತಿಪ್ರಸಿದ್ಧಸ್ಯ ಮಹಿಮಾನಂ ಬ್ರವೀತು ಕಃ ॥ ೨ ॥
ದಾರಿದ್ರ್ಯಪರಮಾಂಧಾನಾಮಯಂ ಹಿ ಪರಮಾಞ್ಜನಮ್ ।
ದುಃಖಶೋಕಭಯಾರ್ತಾನಾಂ ಕ್ಲೇಶನಿರ್ವಾಣಸಾಧನಮ್ ॥ ೩ ॥
ಸಂಸಾರೋದಧಿಮಗ್ನಾನಾಂ ಪ್ಲವೋಽಯಂ ಪಾರದರ್ಶನಃ ।
ನಿರಾಶ್ರಯಾಣಾಂ ಜಂತೂನಾಮಾಶ್ರಯೋಽಯಂ ವರಪ್ರದಃ ॥ ೪ ॥
ಅಜ್ಞಾನತಿಮಿರಾಂಧಾನಾಂ ದೀಪೋಽಯಂ ಜ್ಞಾನದೃಷ್ಟಿದಃ ।
ಸಂಸಾರೋರಗದಷ್ಟಾನಾಂ ಪಥ್ಯಂ ಹಿ ಪರಮೌಷಧಮ್ ॥ ೫ ॥
ನಾನಾಕಲುಷಚಿತ್ತಾನಾಂ ವಜ್ರಘಾತಸುದಾರುಣಃ ।
ಭರ್ಜನಂ ಕರ್ಮಬೀಜಾನಾಂ ನಿದಾನಂ ಸರ್ವಸಂಪದಾಮ್ ॥ ೬ ॥
ಮನೋವಾಕ್ಕಾಯಜಂ ಪಾಪಂ ಸರ್ವೇಷಾಂ ಸಕಲಂ ಜಯಮ್ ।
ತದತ್ರ ಲಯಮಾಪ್ನೋತಿ ವದಾಮಿ ಗುರುವಾಕ್ಯತಃ ॥ ೭ ॥
ಅನ್ಯಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಶ್ಯತಿ ।
ಪುಣ್ಯಕ್ಷೇತ್ರೇ ಕೃತಂ ಪಾಪಂ ಕುಂಭಕೋಣೇ ವಿನಶ್ಯತಿ ॥ ೮ ॥
ಕುಂಭಕೋಣೇ ಕೃತಂ ಪಾಪಂ ವಾರಾಣಸ್ಯಾಂ ವಿನಶ್ಯತಿ ।
ತತ್ರಾಪಿ ಯತ್ಕೃತಂ ಪಾಪಂ ಪ್ರಯಾಗೇ ತದ್ವಿನಶ್ಯತಿ ॥ ೯ ॥
ಪ್ರಯಾಗೇ ಯತ್ಕೃತಂ ಪಾಪಂ ಯಮುನಾಯಾಂ ವಿನಶ್ಯತಿ ।
ತತ್ರಾಪಿ ಯತ್ಕೃತಂ ಪಾಪಂ ಸರಸ್ವತ್ಯಾಂ ವಿನಶ್ಯತಿ ॥ ೧೦ ॥
ಸರಸ್ವತ್ಯಾಸ್ತು ತೀರೇಷು ಗಂಗಾಸ್ನಾನೇನ ನಶ್ಯತಿ ।
ತದ್ಭವಂ ನಾಶಮಾಯಾತಿ ಗಂಗಾಯಮುನಸಂಗಮೇ ॥ ೧೧ ॥
ಸ ಯತ್ರೈವಂವಿಧಶ್ಚಾಸ್ತೇ ಸಂಗಮಸ್ತೀರ್ಥನಾಯಕೇ ।
ಅನ್ಯೋಽಪಿ ತಾದೃಶೋ ಯತ್ರ ಕಿಂ ವರ್ಣ್ಯಂ ತಸ್ಯ ವೈಭವಮ್ ॥ ೧೨ ॥
ತತ್ರ ಜಾತಂ ಚ ಯತ್ಪಾಪಂ ಮರಣೇ ಸಮುಪಸ್ಥಿತೇ ।
ತತ್ಸರ್ವಂ ನಾಶಮಾಯಾತಿ ಸ್ವೇಪ್ಸಿತಾರ್ಥಂ ಚ ಸಿದ್ಧ್ಯತಿ ॥ ೧೩ ॥
ಏಷ ವೋ ಮುನಿಶಾರ್ದೂಲ ! ಕಥಿತಸ್ತೀರ್ಥಭೂಪತಿಃ ।
ಏತತ್ತತ್ತ್ವಂ ವಿವಿತ್ಸಂತೋ ಯೂಯಂ ಯನ್ಮಾಮಪೃಚ್ಛಥ ॥ ೧೪ ॥

## ॥ ಮೂರನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಹೇ ! ವಿಪ್ರಶ್ರೇಷ್ಠರೇ ಈ ರೀತಿಯಾಗಿ ಆ ಶ್ರೀವೇದವ್ಯಾಸರ ವಾಕ್ಯಗಳೆಂಬ ಅಮೃತದಿಂದ ತೊಯ್ದಿರತಕ್ಕ ನಾವು ಎಲ್ಲ ಬಗೆಯ ಸಂಶಯಗಳಿಂದ ರಹಿತರಾಗಿದ್ದೇವೆ. ಆದ್ದರಿಂದಲೇ ನಾವು ಎಲ್ಲೇ ಹೋಗಲಿ, ಅವರನ್ನೇ ಧ್ಯಾನಿಸುತ್ತೇವೆ. ॥ ೧ ॥ ಆದ್ದರಿಂದ ಧರ್ಮಾರ್ಥ ಕಾಮಮೋಕ್ಷ-ರೂಪ ಚತುರ್ವರ್ಗದ ಫಲವನ್ನು ಕೊಡತಕ್ಕ ಮತ್ತು ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿರತಕ್ಕ ಈ ತೀರ್ಥರಾಜನ ಮಹಿಮೆಯನ್ನು ಯಾರು ತಾನೇ ಹೇಳಿಯಾರು? ॥ ೨ ॥ ದಾರಿದ್ರ್ಯದಿಂದ ಕುರುಡಾಗಿರುವವರಿಗೆ ಇದು ದಾರಿದೀಪವು. ದುಃಖ, ಶೋಕ ಮತ್ತು ಭಯವಿಹ್ವಲರಾದವರಿಗೆ ಇದು ಕ್ಲೇಶಪರಿಹಾರಕ. ॥ ೩ ॥ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿದವರಿಗೆ ಇದು ದಡಮುಟ್ಟಿಸತಕ್ಕ ದೋಣಿಯೇ ಸರಿ. ಆಶ್ರಯವಿಲ್ಲದವರಿಗೆ ಇದು ವರಪ್ರದ ಆಧಾರವೇ ಸರಿ. ॥ ೪ ॥ ಅಜ್ಞಾನವೆಂಬ ಅಂಧಕಾರದಲ್ಲಿರುವವರಿಗೆ ಜ್ಞಾನದೃಷ್ಟಿಯನ್ನು ಕರುಣಿಸುವ ದೀಪವೇ ಸರಿ. ಸಂಸಾರವೆಂಬ ವಿಷಸರ್ಪದಿಂದ ಕಡಿಯಲ್ಪಟ್ಟವರಿಗೆ ಅತ್ಯುತ್ತಮ ವಿಷಪರಿಹಾರಕ ಔಷಧವೇ ಸರಿ. ॥ ೫ ॥ ನಾನಾವಿಧವಾದ ಪಾಪವನ್ನು ಹೊಡೆದಟ್ಟಲು ಇದು ವಜ್ರಾಯುಧದ ಪೆಟ್ಟಿನಂತೆಯೇ ಸರಿ. ಪೂರ್ವಾರ್ಜಿತವಾಗಿ ಬಂದಿರತಕ್ಕ ಎಲ್ಲ ಕರ್ಮಗಳನ್ನೂ ಇದು ನಾಶಪಡಿಸಿಬಿಡುವುದು ಮತ್ತು ಸರ್ವಸಂಪತ್ತಿಗೂ ಮೂಲ ಕಾರಣವಾಗಿದೆ. ॥ ೬ ॥ ನಾನು ಗುರುವಾಕ್ಯದ ಮೇಲೆ ಭರವಸೆಯಿಟ್ಟು ಹೇಳುತ್ತೇನೆ. ಮನಸ್ಸು ಮತ್ತು ದೈಹಿಕವಾದ ಸಕಲ ಪಾಪಗಳೂ ಇಲ್ಲಿ ನಾಶವಾಗುತ್ತದೆ ಮತ್ತು ಜಯಿಸಲ್ಪಡುತ್ತದೆ. ॥ ೭ ॥ ಅನ್ಯಕ್ಷೇತ್ರಗಳಲ್ಲಿ ಮಾಡಿದ ಪಾಪವು ಪುಣ್ಯಕ್ಷೇತ್ರದಲ್ಲಿ ಪರಿಹಾರ-ವಾಗುವುದು, ಪುಣ್ಯಕ್ಷೇತ್ರದಲ್ಲಿ ಮಾಡಿದ ಪಾಪವು ಕುಂಭಕೋಣಕ್ಷೇತ್ರದಲ್ಲಿ ಪರಿಹಾರ-ವಾಗುವುದು. ॥ ೮ ॥ ಕುಂಭಕೋಣದಲ್ಲಿ ಎಸಗಿದ ಪಾಪವು ಕಾಶಿಯಲ್ಲಿಯೂ, ವಾರಾಣಸಿಯಲ್ಲಿ ತೊಡಗಿದ ಪಾಪವು ಪ್ರಯಾಗದಲ್ಲಿಯೂ ಪರಿಹಾರವಾಗುವುದು. ॥ ೯ ॥ ಪ್ರಯಾಗದಲ್ಲಿ ಮಾಡಿದ ಪಾಪವು ಯಮುನಾಸ್ನಾನದಿಂದ ಪರಿಹಾರವಾಗುವುದು, ಯಮುನೆಯಲ್ಲಿ ಮಾಡಿದ ಪಾಪವು ಶ್ರೀಸರಸ್ವತೀನದಿಯಲ್ಲಿ ಸ್ನಾನ ಮಾಡುವುದರಿಂದ ಪರಿಹೃತವಾಗುವುದು. ॥ ೧೦ ॥ ಶ್ರೀ ಸರಸ್ವತೀತೀರದಲ್ಲಿ ಮಾಡಿದ ಪಾಪವು ಗಂಗಾಸ್ನಾನದಿಂದಲೂ ಗಂಗಾತೀರದಲ್ಲಿ ಮಾಡಿದ ಪಾಪವು ಗಂಗಾಯಮುನೆಯರ ಸಂಗಮ ಸ್ನಾನದಿಂದಲೂ ಪರಿಹಾರವಾಗುವುದು.॥ ೧೧ ॥ ತೀರ್ಥರಾಜನೂ ಸಂಗಮಗಳಲ್ಲಿ ಶ್ರೇಷ್ಠನೂ ಆಗಿರುವ ಈ ಪ್ರಯಾಗಕ್ಕೆ ಸರಿಸಮನಾದ ಮಹಿಮೆಯು ಬೇರೆ ಕ್ಷೇತ್ರಗಳಿಗಿಲ್ಲವೆಂಬುದನ್ನು ನಾನು ಹೇಗೆ ವರ್ಣಿಸಲಿ? ॥ ೧೨ ॥ ಪ್ರಯಾಗ-ಕ್ಷೇತ್ರದಲ್ಲಿ ಮಾಡಿದ ಪಾಪವು ಅಲ್ಲಿಯೇ ಮರಣ ಒದಗಿದರೆ ಪರಿಹಾರವಾಗುವುದು. ಇದಲ್ಲದೆ ಮೃತನ ಸಮಸ್ತ ಸಾತ್ವಿಕ ಅಪೇಕ್ಷೆಗಳೆಲ್ಲವೂ ನೆರವೇರುವುವು. ॥ ೧೩ ॥ ಎಲೈ ಮುನಿಶ್ರೇಷ್ಠರೇ! ಪ್ರಯಾಗಕ್ಷೇತ್ರದ ಮಹಿಮೆಯು ಈ ಬಗೆಯಾಗಿ ಇದ್ದು, ಇದನ್ನು ತಿಳಿಯಬಯಸಿದ ನಿಮಗೋ-ಸ್ಕರ ಇದನ್ನು ಹೇಳಿದ್ದೇನೆ. ॥ ೧೪ ॥

**ಶೌನಕಾದಯ ಊಚುಃ—**

> **ಸೂತ ಸೂತವಿದಾಂ ಶ್ರೇಷ್ಠ ಪೌರಾಣಿಕ ಸುಮಂಗಲ ।**
> **ಶ್ರುತ್ವಾ ತೀರ್ಥಪತಿಂ ತ್ವತ್ತಃ ಪರಂ ಹರ್ಷಮುಪಾಗತಾಃ ॥ ೧೫ ॥**

ಅತ್ರೈಕಸ್ಸಂಶಯೋ ಜಾತಃ ಸರ್ವೇಷಾಂ ನೋ ವಿವಿತ್ಸತಾಮ್ ।
ಕೃಪಯಾ ತಮಿಮಂ ಛಿಂದಿ ಕುರ್ಮಹೇ ಚ ವಯಂ ತಥಾ ॥ ೧೬ ॥
ಅನಾಖ್ಯೇಯಂ ಕುತಃ ಪ್ರೋಕ್ತಂ ಕ್ಷೇತ್ರಂ ಸರ್ವಾರ್ಥಸಾಧನಮ್ ।
ಯಸ್ಮಾತ್ಪರೋಪಕರಣಂ ಸರ್ವಪುಣ್ಯಾಧಿಕಂ ಮತಮ್ ॥ ೧೭ ॥
ಪರೋಪಕರಣೇ ದತ್ತಾ ಅಪಿ ಪ್ರಾಣಾ ನೃಭಿಃ ಪುರಾ ।
ಸುಲಭಾನ್ಯಪ್ರದಾನೇ ತು ಕೋ ನ ಕುರ್ಯಾದ್ರತಿಂ ಕೃತೀ ॥ ೧೮ ॥
ಅಷ್ಟಾದಶಪುರಾಣಾನಿ ವೇದಭಾಗಶ್ಚ ಕೃತ್ಸ್ನಶಃ ।
ಪರೋಪಕರಣಾಯೈವ ವ್ಯಾಸವರ್ಯೇಣ ವರ್ಣಿತಃ ॥ ೧೯ ॥
ಪರೋಪಕರಣೇ ಮೂಲಂ ಐಹಿಕಾಮುಷ್ಮಿಕಪ್ರದಃ ॥
ಏತದ್ಗೋಪ್ಯಂ ಕೃತಂ ಕಸ್ಮಾದಾಯುಷ್ಮನ್ತದ್ವದಸ್ವ ನಃ ॥ ೨೦ ॥

ಶೌನಕಾದಿಗಳು ಪ್ರಶ್ನಿಸಿದರು—

ಜ್ಞಾನಿಗಳಲ್ಲಿ ಶ್ರೇಷ್ಠರಾದ ಸೂತರೇ! ಪೌರಾಣಿಕರೇ! ಅತಿಮಂಗಳಸ್ವರೂಪರೇ! ತಮ್ಮಿಂದ ತೀರ್ಥರಾಜನ ಬಗ್ಗೆ ಕೇಳಿ ಬಹಳ ಸಂತೋಷವಾಗಿದೆ. ॥ ೧೫ ॥ ತಿಳಿಯಲು ಅಪೇಕ್ಷೆಯುಳ್ಳ ನಮಗೆಲ್ಲರಿಗೂ ಒಂದೇ ಒಂದು ಸಂದೇಹವು ಹುಟ್ಟಿದೆ. ತಾವು ಹೇಳಿದಂತೆಯೇ ಮಾಡುತ್ತೇವೆ. ಆದರೆ ಈ ಒಂದು ಸಂದೇಹವನ್ನು ನಿವಾರಿಸಬೇಕು. ॥ ೧೬ ॥ ಸಕಲ ಇಷ್ಟಾರ್ಥಗಳಿಗೆ ಸಾಧನವಾಗಿರತಕ್ಕ ಕ್ಷೇತ್ರದ ಬಗ್ಗೆ ಎಲ್ಲರಿಗೂ ಹೇಳಬಾರದೆಂದು ಏತಕ್ಕೋಸ್ಕರ ಹೇಳಲ್ಪಟ್ಟಿತು? ಪರೋಪಕಾರ ಮಾಡುವುದು ಎಲ್ಲಕ್ಕಿಂತ ಹೆಚ್ಚು ಪುಣ್ಯಫಲಪ್ರದವು. ॥ ೧೭ ॥ ಹಿಂದೆ ಅನೇಕರು ಪರೋಪಕಾರಕ್ಕಾಗಿ ತಮ್ಮ ಪ್ರಾಣಗಳನ್ನೇ ತೆತ್ತಿದ್ದಾರೆ. ಇನ್ನೊಬ್ಬರಿಗೆ ಉಪಕಾರ ಮಾಡುವುದು ಸುಲಭವಾಗಿರಲಿಕ್ಕಾಗಿ ಬುದ್ಧಿವಂತರು ಏತಕ್ಕಾಗಿ ಅದನ್ನು ಮಾಡಬಾರದು? ಮಾಡಿ ಕೃತಾರ್ಥರಾಗಬಾರದು? ॥ ೧೮ ॥ ಶ್ರೀ ವೇದವ್ಯಾಸರು ಇಡೀ ವೇದರಾಶಿಗಳನ್ನು ಶಾಖೋಪಶಾಖೆಗಳಾಗಿ ವಿಂಗಡಿಸಿದ್ದಲ್ಲದೆ ಹದಿನೆಂಟು ಪುರಾಣಗಳನ್ನೂ ರಚಿಸಿದರು. ಈ ಕಾರ್ಯಗಳೆಲ್ಲವೂ ಪರೋಪಕಾರಕ್ಕಾಗಿಯೇ ಎಂದು ಶ್ರೀವ್ಯಾಸರು ವರ್ಣಿಸಿದ್ದಾರೆ. ॥ ೧೯ ॥ ಮತ್ತು ಈ ರಚನೆಗಳೆಲ್ಲವೂ ಪರೋಪಕಾರವನ್ನು ಮೂಲಗುರಿಯಾಗುಳ್ಳವುಗಳು ಮತ್ತು ಈ ಲೋಕದ ಸಂಪತ್ತಿಗಲ್ಲದೆ ಪರಲೋಕದ ಪ್ರಾಪ್ತಿಗೂ ಕಾರಣವಾದವು. ದೀರ್ಘಾಯುಗಳಾದ ಸೂತರೇ! ಹೀಗಿರಲು ಇವುಗಳನ್ನು ರಹಸ್ಯವಾಗಿಟ್ಟಿರಬೇಕೆಂದು ಹೇಳಲು ಏನು ಕಾರಣ? ಅದನ್ನು ಹೇಳೋಣವಾಗಲಿ. ॥ ೨೦ ॥

ಸೂತ ಉವಾಚ—

ಅನಾಖ್ಯಾನೇ ಗುರೂಣಾಂ ಹಿ ಸಾಧನಂ ವಚ ಏವ ತತ್ ।
ನಾನ್ಯದಸ್ತ್ಯತ ಏವಾತ್ರ ಗೂಢಾರ್ಥಂ ವಿಹಿತಂ ಮಯಾ ॥ ೨೧ ॥
ಯಥಾ ವೇದಸ್ಯ ವಚನೇ ಕರಣಾಕರಣೇ ಸ್ಥಿತಿಃ ।
ನ ಲಕ್ಷ್ಯತೇ ಪುರಾ ವಿಧ್ಯಿಸ್ತಥಾಜ್ಞಾನಾದ್ಗುರೋರ್ಮತಾ ॥ ೨೨ ॥

ಸರ್ವಾಭೀಷ್ಟಪ್ರದಂ ಪಥ್ಯಂ ಪರತ್ರೇಹಾಪಿ ಮಂಗಲಮ್ ।
ತಾಪತ್ರಯಹರಂ ಪ್ರೋಕ್ತಂ ಗುರೋರ್ವಚನಮೌಷಧಮ್ ॥ ೨೩ ॥
ಸಂದಿಗ್ಧಾ ಗುರುವಾಕ್ಯೇ ಯೇ ವಿಪರ್ಯಯಪಥಂ ಗತಾಃ ।
ನೈತೇಷಾಂ ವಾ ಕಿಮಪ್ಯಸ್ತಿ ಚೈಹಿಕಾಮುಷ್ಮಿಕಂ ಫಲಮ್ ॥ ೨೪ ॥
ಅತಸ್ತೇನಾನುಯೋಕ್ತವ್ಯಾಃ ಸರ್ವಥಾ ಸರ್ವದರ್ಶಿನಃ ।
ಜ್ಞಾನದೀಪಪ್ರದಾಸ್ತೇಷಾಂ ನಿರ್ಗ್ರಂಥಾಃ ಫಲಮಿಚ್ಛತಾಮ್ ॥ ೨೫ ॥
ಯ ಏವ ಜಾನಂತಿ ನಿದಾನಮಸ್ಯ
ಯ ಏವ ಜಾನಂತಿ ರಹಸ್ಯಮಸ್ಯ ।
ತ ಏವ ಕುರ್ವಂತಿ ಮನಃಪ್ರಸಿದ್ಧ-
ಮಾಹಾತ್ಮ್ಯಜಾತಂ ಕೃಪಯಾ ಮುನೀಶ್ವರಾಃ ॥ ೨೬ ॥
ಗುರವೋ ನಿರ್ಮಮಾಶ್ಶಾಂತಾಃ ಸಾಧವೋ ಮಿತಭಾಷಿಣಃ ।
ಕಾಮಕ್ರೋಧವಿನಿರ್ಮುಕ್ತಾಃ ಸದಾಚಾರಜಿತೇಂದ್ರಿಯಾಃ ॥ ೨೭ ॥
ತಸ್ಮಾತ್ತೇವ್ಯಾಶ್ಚ ವಿಜ್ಞಾಯ ದಯಾವಂತೋ ಬ್ರುವಂತಿ ತೇ ।
ತದಾ ಸ್ಫುಟಂ ಸಮಗ್ರಂ ವೈ ಜ್ಞಾಯತೇ ಗೂಢತಾಂ ಗತಮ್ ॥ ೨೮ ॥
ಏವಂ ಜ್ಞಾತ್ವಾ ಚಿರಂ ಸಮ್ಯಗ್ಗುರವೋ ಸೇವಿತಾ ಮಯಾ ।
ತುಷ್ಟಾಃ ಪ್ರೋಚುಃ ಪುನರ್ಮಹ್ಯಂ ಗುಹ್ಯಂ ಯದ್ವೇದಪಾರಗಾಃ ॥ ೨೯ ॥
ತೀರ್ಥರಾಜಸ್ಯ ಹೃದಯಂ ತದಹಂ ಬ್ರವೀಮಿ ವಃ ।
ಶೃಣ್ವಂತು ಸಾವಧಾನೇನ ಮುನಯಃ ಪ್ರಶ್ನಕೋವಿದಾಃ ॥ ೩೦ ॥

**ಸೂತರು ಹೇಳಿದರು—**

ಈ ವಿಷಯವನ್ನು ರಹಸ್ಯದಿಂದ ಇಟ್ಟಿರಲು ನಮ್ಮ ಗುರುಗಳ ಆಜ್ಞೆಯೇ ಪ್ರಮಾಣವು ಎಂದು ತಿಳಿಯಬೇಕು. ಈ ವಿಷಯದಲ್ಲಿ ಬೇರೆ ಪ್ರಮಾಣಗಳ ಆವಶ್ಯಕತೆಯಿಲ್ಲ. ಆದ್ದರಿಂದ ಈ ಬಗ್ಗೆ ರಹಸ್ಯವನ್ನು ನಾನು ಹೇಳಿದ್ದು. ॥ ೨೧ ॥ ಹಿಂದೆಯೂ ವೇದಗಳಲ್ಲಿ ಉತ್ತಮವಾಗಿರುವ ಕಾರ್ಯಾಕಾರ್ಯಗಳಿಗೆ ಪ್ರಮಾಣಗಳನ್ನು ಹುಡುಕಿಕೊಂಡು ಹೋಗಿಲ್ಲ. ಕರ್ತವ್ಯಾಕರ್ತವ್ಯ-ಗಳಿಗೆ ಪ್ರಮಾಣಗಳ ಆವಶ್ಯಕತೆಯೂ ಇಲ್ಲ. ಕೇವಲ ಅವುಗಳನ್ನು ಪಾಲಿಸಬೇಕು, ಅಷ್ಟೆ. ವೇದವಾಕ್ಯಗಳು ಈ ಬಗ್ಗೆ ಇರುವುದೇ ಪ್ರಮಾಣಗಳು. ಗುರುಗಳ ಆಜ್ಞಾವಚನಗಳೂ ಈ ರೀತಿಯಾದುವುಗಳು. ॥ ೨೨ ॥ ಗುರುಗಳ ಮಾತುಗಳು ಎಲ್ಲ ಅಭಿಲಾಷೆಯನ್ನೂ ಪೂರೈಸತಕ್ಕ-ವುಗಳು. ರೋಗಗಳಿಗೆ ಪಥ್ಯವಿದ್ದಂತೆ ಆಚರಿಸತಕ್ಕವುಗಳು. ಇಹಪರಗಳೆರಡಕ್ಕೂ ಮಂಗಳಕರ. ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕವೆಂಬ ಮೂರು ಬಗೆಯ ತಾಪಗಳನ್ನು (ತಾಪತ್ರಯ) ಬಗೆಹರಿಸತಕ್ಕವುಗಳು ಮತ್ತು ಭವರೋಗಕ್ಕೆ ಔಷಧಿರೂಪವಾಗಿರತಕ್ಕವುಗಳು. ॥ ೨೩ ॥ ಗುರುವಿನ ಮಾತಿನಲ್ಲಿ ಸಂದೇಹಪಟ್ಟು ಯಾರು ವಿರುದ್ಧ ದಾರಿಯನ್ನು ಹಿಡಿಯುತ್ತಾರೋ ಅವರಿಗೆ ಈ ಲೋಕದ ಸಾಧನವೂ ಇಲ್ಲ ಮತ್ತು ಪರಲೋಕದ್ದೂ ಇಲ್ಲ. ॥ ೨೪ ॥ ಸರ್ವಪ್ರಕಾರದಿಂದ ಎಲ್ಲವನ್ನೂ ತಿಳಿದ ಗುರುಗಳ ವಚನಗಳ ಮೇಲೆ ವಿರೋಧಿ ಪ್ರಶ್ನೆಗಳನ್ನು ಕೇಳಬಾರದು. ದೊಡ್ಡವರು

ಅಂಥಾ ಫಲಾಪೇಕ್ಷಿಗಳಿಗೆ ಗ್ರಂಥರಹಿತರಾಗಿ ಜ್ಞಾನರೂಪದೀಪವನ್ನು ತೋರಿಸಿ ದಾರಿ ಹಿಡಿಸು-ತ್ತಾರೆ. ॥ ೨೫ ॥ ಯಾರು ಈ ರೀತಿಯಾದ ಈ ರಹಸ್ಯವನ್ನು ಅರಿಯುತ್ತಾರೋ ಮತ್ತು ಇದರ ಮೂಲವನ್ನು ತಿಳಿಯುತ್ತಾರೋ ಅವರು ಈ ಕ್ಷೇತ್ರದ ಮಾಹಾತ್ಮ್ಯೆಯನ್ನು ಕೃಪೆಯಿಂದ ಪ್ರಸಿದ್ಧಿಗೊಳಿಸುತ್ತಾರೆ. ॥ ೨೬ ॥ ಗುರುಗಳು ಅಹಂಕಾರಮಮಕಾರವರ್ಜಿತರು, ಶಾಂತರು, ಸೇವಾಸ್ವಭಾವದವರು ಸಾಧುಮಾರ್ಗಾವಲಂಬಿಗಳು, ಮಿತವಾಗಿ ಮಾತನಾಡು- ವವರು, ಕಾಮಕ್ರೋಧಾದಿಗಳನ್ನು ಬಿಟ್ಟವರು, ಸದಾಚಾರಿಗಳು ಮತ್ತು ಗೆಲ್ಲಲ್ಪಟ್ಟ ಇಂದ್ರಿಯಗಳುಳ್ಳವರು. ॥ ೨೭ ॥ ಗುರುಗಳು ದಯೆಯುಳ್ಳವರು, ಅವರನ್ನು ತಿಳಿದು ಸೇವಿಸಬೇಕು. ಆಗ ! ಕಾಲಕ್ರಮೇಣ ರಹಸ್ಯವೂ ಸೇರಿದಂತೆ ಎಲ್ಲವೂ ವಿಸ್ತಾರವಾಗಿ ತಿಳಿದೇ ತಿಳಿಯುತ್ತದೆ. ಆದ್ದರಿಂದ ಗುರುಗಳು ಸೇವ್ಯರು. ॥ ೨೮ ॥ ಈ ರೀತಿಯಾದ ತಿಳುವಳಿಕೆಯಿಂದಲೇ ನಾನು ಬಹು ಕಾಲ ಚೆನ್ನಾಗಿ ಗುರುಗಳನ್ನು ಸೇವಿಸಿದೆನು. ವೇದವೇದಾಂಗಪಾರಂಗತರಾದ ಅವರು ಸಂತುಷ್ಟರಾಗಿ ಪುನಃ ಈ ರಹಸ್ಯಗಳನ್ನೆಲ್ಲ ಬಿಡಿಸಿ ಹೇಳಿದರು. ॥ ೨೯ ॥ ಆದ್ದರಿಂದ ತೀರ್ಥರಾಜನ ಹೃದಯವನ್ನು ನಿಮಗಾಗಿ ಹೇಳುವೆನು, ಪ್ರಶ್ನೆ ಮಾಡುವುದರಲ್ಲಿ ಕುಶಲರಾದ ವಿದ್ವಾಂಸರೇ ! ಸಮಾಧಾನಮನಸ್ಕರಾಗಿ ಕೇಳೋಣವಾಗಲಿ. ॥ ೩೦ ॥

ಶ್ರೀ ವ್ಯಾಸ ಉವಾಚ—

ಸೂತ ! ಜಾನೇ ತವಾಭೀಷ್ಟಂ ವೇದಸಾರಂ ನ ಭಾಷಿತಮ್ ।
ಮಯಾ ತೇ ನಾಧಿಕಾರೇಣ ವಚ್ಮಿ ಶಬ್ದಾಂತರಾದಥ ॥ ೩೧ ॥
ವೇದೋಕ್ತಾನಿ ಸಮಸ್ತಾನಿ ತೀರ್ಥಾನಿ ಭುವನತ್ರಯೇ ।
ವೇದಾಜ್ಞಯಾ ಚ ಮಾಹಾತ್ಮ್ಯಂ ಪುರಾಣೇಷು ಪ್ರಗೀಯತೇ ॥ ೩೨ ॥
ತೇನಾಸ್ಯ ವರ್ಣ್ಯತೇ ನೂನಂ ಮಹಿಮಾ ಪರಮಾದ್ಭುತಃ ।
ಮಜ್ಜನಾತ್ಸುಸುಖಾವಾಪ್ತಿರ್ದೇಹಪಾತಾದದೇಹತಾ ॥ ೩೩ ॥
ವಿಷ್ಣ್ವಾದಯಸ್ಸುರಾಸ್ಸರ್ವೇಽನ್ಯೇಽಪಿ ತ್ರೈಲೋಕ್ಯವಾಸಿನಃ ।
ಸರ್ವದಾ ತತ್ರ ತಿಷ್ಠಂತಿ ಧರ್ಮಸಂಗ್ರಹಕಾರಣಾತ್ ॥ ೩೪ ॥
ಅಥೋಽತ್ರ ಮಾಧವಾಧೀಶೇ ಧೂರ್ತಾ ದುಷ್ಟಾಃ ಕಲೌ ನರಾಃ ।
ಬಹುವಿಘ್ನಂ ಕರಿಷ್ಯಂತಿ ತೇನೇದಂ ಗೋಪಿತಂ ಮಯಾ ॥ ೩೫ ॥
ಅತಸ್ತ್ವಯಾಪಿ ನೋ ವಾಚ್ಯಂ ಮೋಕ್ಷದಂ ತಾದೃಶಾಮಿದಮ್ ।
ಭಕ್ತಿಶ್ರದ್ಧಾವತಾಂ ನೃಣಾಂ ವಾಚ್ಯಮುದ್ಧಾರಕಾರಕಮ್ ॥ ೩೬ ॥
ವಿನೀತಾಯ ಸುಶೀಲಾಯ ಹರಿಭಕ್ತಾಯ ಸಾಧವೇ ।
ರಹಸ್ಯಮಪಿ ತತ್ಪ್ರೀತ್ಯಾ ಕಥಯಂತಿ ವಿಪಶ್ಚಿತಃ ॥ ೩೭ ॥
ವಂಚಕಾಯ ಕೃತಘ್ನಾಯ ನಾಸ್ತಿಕಾಯ ಶಠಾಯ ಚ ।
ನೈವ ಗುಹ್ಯಂ ವದಂತ್ಯೇತೇ ಪ್ರಾಣೈಃ ಕಂಠಗತೈರಪಿ ॥ ೩೮ ॥
ಇದಂ ಚ ಪರಮಂ ಗುಹ್ಯಂ ತೀರ್ಥಂ ವೇದೋಪವರ್ಣಿತಮ್ ।
ತಸ್ಮಾತ್ತೇಭ್ಯೋ ಕಥಂ ವಾಚ್ಯಂ ತತ್ತ್ವಜ್ಞಾನಫಲಪ್ರದಮ್ ॥ ೩೯ ॥

ಕದಾಚಿದಮುಮೇವಾರ್ಥಂ ಬುಭುತ್ಸಂತೋ ಹ್ಯಜಾತ್ಮಜಾಃ ।
ಸರ್ವೇಷಾಮುಪಕಾರಾರ್ಥಂ ಪಾತಾಲತಲಮಾಯಯುಃ ॥ ೪೦ ॥
ನಾನಾಮಣಿಶಿಖಾದೀಪ್ತಂ ಮಹೇಂದ್ರಭವನೋಪಮಮ್ ।
ವಜ್ರವಿದ್ರುಮವೈಡೂರ್ಯಸ್ತಂಭರಾಜಿವಿರಾಜಿತಮ್ ॥ ೪೧ ॥
ದರ್ಶನಾಹ್ಲಾದಜನಕಂ ಸರ್ವತಃ ಸಕಲಾದ್ಭುತಮ್ ।
ನಾಗನಾಗೀಗಣಾಕೀರ್ಣಂ ಮುಕ್ತಾದಾಮಭಿರುಜ್ಜ್ವಲಮ್ ॥ ೪೨ ॥
ತತ್ರಾನಿವಾರಿತಾಃ ಸತ್ವಾ ಮುನಯಃ ಸನಕಾದಯಃ ।
ಶೇಷರಾಜಂ ಸಭಾಮಧ್ಯೇ ದದೃಶುರ್ಗತವಿಸ್ಮಯಾಃ ॥ ೪೩ ॥
ಅನರ್ಘ್ಯಮಣಿಸಂಕೀರ್ಣಂ ಸ್ವರ್ಣಸಿಂಹಾಸನೇ ಸ್ಥಿತಮ್ ।
ಸದ್ರತ್ನಮುಕುಟಾಶೋಭಿಸಹಸ್ರಫಣಮಂಡಿತಮ್ ॥ ೪೪ ॥
ತೇಜಸಾದಿತ್ಯಸಂಕಾಶಂ ದುರ್ಧರ್ಷಂ ಪ್ರಲಯಾಗ್ನಿವತ್ ।
ಗೃಣಂತಂ ಭಗವದ್ಧರ್ಮಾನ್ ತದ್ಭಕ್ತಾನ್ ಪುರತಸ್ಸ್ಥಿತಾನ್ ॥ ೪೫ ॥
ಅನಂತೈರ್ಪನ್ನಗವ್ರಾತೈಸ್ತ್ರೀಕೇ ನ್ಯಸ್ತದೃಷ್ಟಿಭಿಃ ।
ಉಪಾಸಿತಂ ಪ್ರಾಂಜಲಿಭಿರ್ನಾನಾಸ್ತುತಿಪುರಸ್ಸರಮ್ ।. ೪೬ ॥
ಕಲಾಲಾವಣ್ಯತಾರುಣ್ಯವಿಲಾಸಾಲಾಪಭಾಸುರೈಃ ।
ನಾಗಾಂಗನಾಗಣೈರ್ವಿಶ್ವಗ್ವೃತಂ ನಿರುಪಮೈಸ್ಸದಾ ॥ ೪೭ ॥
ಭಕ್ತಿಪ್ರಿಯಂ ಭಕ್ತಿಗಮ್ಯಂ ಭಕ್ತಕಾಮಾಮರಾಂಘ್ರಿಪಮ್ ।
ಭಜನೀಯಂ ಭಯತ್ರಸ್ತೈರ್ಭಾವೇನ ಭಗವತ್ಪ್ರಿಯಮ್ ॥ ೪೮ ॥
ದೃಷ್ಟ್ವಾ ತಂ ದಂಡವನ್ನತ್ವೋತ್ಥಿತ್ವಾಪ್ರಾಂಜಲಯಃ ಪುರಃ ।
ಸ್ತೋತುಮಾರೇಭಿರೇ ದೇವಂ ಪ್ರಶ್ನಪಾರತಿತೀರ್ಷಯಾ ॥ ೪೯ ॥

॥ ಇತಿ ತೃತೀಯೋಽಧ್ಯಾಯಃ ॥

**ಶ್ರೀವೇದವ್ಯಾಸರು ಹೇಳಿದರು—**

ನಿನ್ನ ಅಭಿಪ್ರಾಯವನ್ನು ನಾನು ತಿಳಿದಿದ್ದೇನೆ. ತಿಳಿದೂ ವೇದಗಳ ಸಾರವನ್ನು ನಿನಗೆ ಹೇಳಲಿಲ್ಲ, ಕಾರಣ ನೀನು ಸೂತ ಕುಲದವನಾದುದರಿಂದ ವೇದಾಧಿಕಾರವಿಲ್ಲ. ಆದ್ದರಿಂದ ಈ ವಿಷಯವನ್ನೇ ಬೇರೆ ಮಾತುಗಳಲ್ಲಿ ಹೇಳುವೆನು. ॥ ೩೧ ॥ ಮೂರು ಲೋಕಗಳಲ್ಲಿರತಕ್ಕ ಎಲ್ಲ ತೀರ್ಥಗಳ ವಿಷಯವೂ ವೇದಗಳ ಆಜ್ಞಾದಿಂದಲೇ ಪುರಾಣಗಳಲ್ಲಿ ಹೇಳಲ್ಪಟ್ಟಿವೆ. ವೇದಗಳಿಗೆ ಅಧಿಕಾರವಿಲ್ಲದಿರುವವರ (ಸ್ತ್ರೀಯರು, ಶೂದ್ರರು, ಭ್ರಷ್ಟಬ್ರಾಹ್ಮಣರು) ಉದ್ಧಾರಕ್ಕಾಗಿಯೇ ವೇದಗಳ ಆಜ್ಞಾದಿಂದಲೇ ಈ ವಿಷಯವನ್ನು ಪುರಾಣಗಳಲ್ಲಿ ಹೇಳಿದೆ. ॥ ೩೨ ॥ ಆದ್ದರಿಂದಲೇ ಈ ಪ್ರಯಾಗದ ಅದ್ಭುತವಾದ ಚರಿತ್ರೆಯು ಹೇಳಲ್ಪಟ್ಟಿದೆ. ಈ ಪ್ರಯಾಗದ ತ್ರಿವೇಣೀ ಸಂಗಮದಲ್ಲಿ ಸ್ನಾನ ಮಾಡುವುದರಿಂದ ಐಹಿಕ ಆಮುಷ್ಮಿಕ ಸುಖಪ್ರಾಪ್ತಿಯಾಗುವುದು ಮತ್ತು ಸಂಸಾರಬಂಧನವೂ ಹೋಗುವುದು. ॥ ೩೩ ॥ ಆದ್ದರಿಂದ ಧರ್ಮದ ಸಂಗ್ರಹಕ್ಕೋಸ್ಕರವೇ ವಿಷ್ಣುವನ್ನೇ ಪ್ರಧಾನ-

ವಾಗುಳ್ಳ ಅನ್ಯದೇವತೆಗಳೂ ಮೂರು ಲೋಕಗಳಲ್ಲಿ ವಾಸಿಸುವ ಸಜ್ಜನರೂ ಈ ಪ್ರಯಾಗ-ದಲ್ಲಿಯೇ ಇರುತ್ತಾರೆ. ॥ ೩೪ ॥ ಧೂರ್ತರೂ ಮತ್ತು ದುಷ್ಟರೂ ಆದ ಜನರು ಕಲಿಯುಗದಲ್ಲಿ ಶ್ರೀ ಲಕ್ಷ್ಮೀಪತಿಯಾದ ಶ್ರೀ ವೇಣಿಮಾಧವದೇವರೇ ಮುಖ್ಯದೇವತೆಯಾದ ಈ ಕ್ಷೇತ್ರದಲ್ಲಿ ಬಹಳ ವಿಘ್ನಗಳನ್ನುಂಟುಮಾಡುವರು. ಈ ಕಾರಣದಿಂದಲೇ ಈ ಕ್ಷೇತ್ರದ ಮಹಾಮಹಿಮೆಯನ್ನು ನಾನು ರಹಸ್ಯದಿಂದ ಇಟ್ಟಿರುವುದು. ॥ ೩೫ ॥ ಆದ್ದರಿಂದ ನೀನೂ ಈ ರಹಸ್ಯವನ್ನು ಎಲ್ಲರಿಗೂ ತಿಳಿಸಕೂಡದು. ಹಾಗೆ ತಿಳಿಸುವುದು ದೋಷವಾಗುವುದು. ಈ ರಹಸ್ಯವು ಇಂಥಾದ್ದು. ಭಕ್ತಿ ಮತ್ತು ಶ್ರದ್ಧೆಯುಳ್ಳವರಿಗೆ ಮಾತ್ರ ಹೇಳಬೇಕು. ಅವರಿಗೆ ಇದು ಉದ್ಧಾರವನ್ನುಂಟುಮಾಡತಕ್ಕದ್ದು. ॥೩೬॥ ಜ್ಞಾನಿಗಳು ರಹಸ್ಯವಾಗಿದ್ದರೂ, ಈ ವಿಷಯಗಳನ್ನು ವಿನೀತರಿಗೂ, ಸುಶೀಲವಂತರಿಗೂ, ಹರಿಭಕ್ತರಿಗೂ ಮತ್ತು ಸಾಧುಗುಣಸಂಪನ್ನರಿಗೂ ಅವರ ಮೇಲಿನ ಪ್ರೀತಿಯಿಂದ ಅವರ ಉದ್ಧಾರಕ್ಕಾಗಿ ಹೇಳುತ್ತಾರೆ. ॥ ೩೭ ॥ ಪ್ರಾಣವಾಯುವು ಕುತ್ತಿಗೆಗೆ ಬಂದರೂ ಸರಿ, ಜ್ಞಾನಿಗಳು ಇಂತಹ ರಹಸ್ಯವನ್ನು ವಂಚಕರಿಗೂ, ಕೃತಘ್ನರಿಗೂ, ದೇವರನ್ನು ನಂಬದಿರುವವರಿಗೂ (ನಾಸ್ತಿಕರಿಗೆ) ಮತ್ತು ಮೂರ್ಖ(ಗೂಢದ್ವೇಷಿ)ರಿಗೂ ಹೇಳುವುದಿಲ್ಲ. ॥ ೩೮ ॥ ಈ ಪ್ರಯಾಗ-ಕ್ಷೇತ್ರವು ಅತಿರಹಸ್ಯವಾದುದು ಮತ್ತು ವೇದಗಳಲ್ಲಿ ವಿಶೇಷವಾಗಿ ವರ್ಣಿಸಲ್ಪಟ್ಟಿದೆ. ಹೀಗಿರುವಾಗ ಸಮಸ್ತ ಬ್ರಹ್ಮ ಜ್ಞಾನದ ಸಿದ್ಧಿಯನ್ನು ಕೊಡತಕ್ಕ ಈ ಕ್ಷೇತ್ರದ ರಹಸ್ಯವನ್ನು ಎಲ್ಲರಿಗೂ ಹೇಗೆ ತಾನೇ ಹೇಳಲು ಸಾಧ್ಯ? ॥ ೩೯ ॥ ಒಂದಾನೊಂದು ಕಾಲದಲ್ಲಿ ಈ ರಹಸ್ಯವನ್ನು ತಿಳಿಯುವ ಸಲು-ವಾಗಿಯೇ ಬ್ರಹ್ಮದೇವರ ಮಕ್ಕಳಾದ, ಆಜನ್ಮಯೋಗಿಗಳಾದ ಸನಕಾದಿಗಳು ಎಲ್ಲ ಸಜ್ಜನರ ಪ್ರಯೋಜನಕ್ಕಾಗಿ ಪಾತಾಳಲೋಕವನ್ನು ಕುರಿತು ಪ್ರಯಾಣ ಮಾಡಿದರು. ॥ ೪೦ ॥

ನಾನಾವಿಧವಾದ ರತ್ನಗಳ ಕಾಂತಿಯಿಂದ ಪ್ರಜ್ವಲಿಸುತ್ತಿದ್ದ, ಇಂದ್ರನ ಅಮರಾವತಿಯಂತೆ ಇರುವ, ವಜ್ರ ಹವಳ ಮತ್ತು ವೈಡೂರ್ಯಗಳಿಂದ ಶೃಂಗರಿಸಲ್ಪಟ್ಟ ಕಂಭಗಳಿಂದ ವಿರಾಜಮಾನವಾಗಿರತಕ್ಕ, ॥ ೪೧ ॥ ನೋಡಲು ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ, ಅತ್ಯಾಶ್ಚರ್ಯಕರವಾದ ಗಂಡು ಮತ್ತು ಹೆಣ್ಣು ನಾಗಗಳಿಂದ ತುಂಬಿರತಕ್ಕ, ಮುತ್ತಿನ ಹಾರಗಳಿಂದ ಜ್ವಲಿಸುತ್ತಿರುವ, ॥ ೪೨ ॥ ಆ ಶೇಷ ದೇವರ ಪಟ್ಟಣದಲ್ಲಿ ಕೇವಲ ತಮ್ಮ ಸಾತ್ವಿಕತ್ವದ ಬಲದಿಂದಲೇ ಯಾರಿಂದಲೂ ತಡೆಯಲ್ಪಡದವರಾಗಿ ಆ ಸನಕ, ಸನಂದನ, ಸನಾತನ ಮತ್ತು ಸನತ್ಸುಜಾತರೆಂಬ ಹೆಸರುಳ್ಳ ಮುನಿಗಳು ಆ ಸಭೆಯಲ್ಲಿ ವಿರಾಜಮಾನರಾಗಿದ್ದ ಶ್ರೀಶೇಷದೇವರನ್ನು ದರ್ಶನ ಮಾಡಿದರು ಮತ್ತು ಬಹು ಆಶ್ಚರ್ಯಪಟ್ಟರು. ॥ ೪೩ ॥

ಬೆಲೆಕಟ್ಟಲಾರದ ರತ್ನಗಳಿಂದ ತುಂಬಿರುವ, ಬಂಗಾರದ ಸಿಂಹಾಸನದಲ್ಲಿ ಕುಳಿತಿರತಕ್ಕ, ರತ್ನಖಚಿತವಾದ ಕಿರೀಟಗಳಿಂದ ಶೋಭಾಯಮಾನಗಳಾಗಿದ್ದ ಸಾವಿರ ಹೆಡೆಗಳುಳ್ಳ ॥ ೪೪ ॥ ಸೂರ್ಯನಂತೆ ತೇಜಸ್ವಿಯಾಗಿರುವ, ಯಾರಿಂದಲೂ ಎದುರಿಸಲಾಗದ ಬಲ ಹಾಗೂ ಪರಾಕ್ರಮಗಳುಳ್ಳ ಪ್ರಳಯಾಗ್ನಿಯಂತೆ ಕಂಗೊಳಿಸುತ್ತಿದ್ದ ಮತ್ತು ಎದುರಿನಲ್ಲಿರುವ ಭಕ್ತರುಗಳಿಗೆ ಭಗವದ್ಧರ್ಮಗಳನ್ನು ಉಪದೇಶಿಸುತ್ತಿರುವ ಶ್ರೀಶೇಷದೇವರನ್ನು ದರ್ಶನ ಮಾಡಿದರು. ॥ ೪೫ ॥ ಶೇಷದೇವರಲ್ಲಿಯೇ ನೆಟ್ಟ ಕಣ್ಣುಗಳುಳ್ಳ ಅನೇಕ ಹಾವುಗಳ ಗುಂಪುಗಳು ಕೈ ಜೋಡಿಸಿಕೊಂಡು ನಾನಾ ಸ್ತೋತ್ರಗಳ ಮೂಲಕ ಉಪಾಸನೆ ಮಾಡುತ್ತಿದ್ದರು. ಇಂಥಾ ಅವರ ಭಕ್ತರನ್ನೂ ದರ್ಶನ ಮಾಡಿದರು. ॥ ೪೬ ॥ ಕಲೆ, ಲಾವಣ್ಯ, ತಾರುಣ್ಯ, ವಿಲಾಸ, ಸರಸಸಲ್ಲಾಪಗಳಿಂದ ಪ್ರಕಾಶಿಸು-ತ್ತಿರುವ ಮತ್ತು ಅವರ ಸೌಂದರ್ಯಾತಿಶಯಕ್ಕೆ ಸಾಟಿಯಿಲ್ಲದ ನಾನಾ ಸ್ತ್ರೀನಾಗಗಳಿಂದ ಎಲ್ಲ

ಕಡೆಯೂ ಸುತ್ತಲ್ಪಟ್ಟಂತಹ, ॥ ೪೭ ॥ ಭಕ್ತರಿಗೆ ಪ್ರಿಯರಾದ, ಕೇವಲ ಭಕ್ತಿಗೇ ಒಲಿಯತಕ್ಕ, ಭಕ್ತರ ಅಭಿಲಾಷೆಗಳನ್ನು ಪೂರೈಸುವುದರಲ್ಲಿ ದೇವಲೋಕದ ಕಲ್ಪವೃಕ್ಷದಂತೆ ಇರತಕ್ಕ, ಭಯದಿಂದ ಹೆದರಿದವರಿಂದ ಭಜನೆ ಮಾಡಿಸಿಕೊಳ್ಳಲ್ಪಡುತ್ತಿರತಕ್ಕ, ಸಾಕ್ಷಾತ್ ವಿಷ್ಣುವಿಗೆ ಬೇಕಾಗಿದ್ದವರಾದ ಶ್ರೀಶೇಷದೇವರನ್ನು ದರ್ಶನಮಾಡಿ ಸಾಷ್ಟಾಂಗಪ್ರಣಾಮಗಳನ್ನು ಅರ್ಪಿಸಿ, ಕೈಮುಗಿದು ನಿಂತು, ತಮ್ಮ ಪ್ರಶ್ನೆಗಳ ಮಾಲಿಕೆಗೆ ದಡ ಮುಟ್ಟುವ ಇಚ್ಛೆಯಿಂದ ಆ ಶೇಷ ದೇವರನ್ನೇ ಸ್ತೋತ್ರ ಮಾಡಲು ಆರಂಭಿಸಿದರು.

॥ ಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುರ್ಥೋಽಧ್ಯಾಯಃ ॥ ೪ ॥

ಸ್ವಸ್ತಿ ಶ್ರೀಮದನಂತಾಯ ಫಣಿರಾಜಾಯ ತೇ ನಮಃ ।
ನಾಗರಾಜಾಯ ಶೇಷಾಯ ಯೋಗರಾಜಾಯ ತೇ ನಮಃ ॥ ೧ ॥
ಪವಿತ್ರಾನಂತಸಂಶೋಭಿಫಣಾಮಂಡಲಮೂರ್ತಯೇ ।
ತಕ್ಷಕಾದಿಸ್ವರೂಪಾಯ ಪಾತಾಲತಲವಾಸಿನೇ ॥ ೨ ॥
ಧರಾಮಂಡಲಧಾರಾಯ ಸೃಷ್ಟಿಸಂಹಾರಕಾರಿಣೇ ।
ವಿಶೇಷಾಯ ವಿಶಿಷ್ಟಾಯ ಸಹಸ್ರವದನಾಯ ಚ ॥ ೩ ॥
ದ್ವಿನೇತ್ರಾಯ ತ್ರಿನೇತ್ರಾಯ ಬಹುನೇತ್ರಾಯ ತೇ ನಮಃ ।
ಅನಂತನಾಮಧೇಯಾಯ ಅನಂತಗತಯೇ ನಮಃ ॥ ೪ ॥
ಅನಂತಸುಖರೂಪಾಯ ನಿತ್ಯರೂಪಾಯ ತೇ ನಮಃ ।
ನಿತ್ಯಾನಂದಸ್ವರೂಪಾಯ ಪರಾನಂದಾಯ ತೇ ನಮಃ ॥ ೫ ॥
ಅವೇದ್ಯಾಯ ಸುವೇದ್ಯಾಯ ಭಾವವೇದ್ಯಾಯ ತೇ ನಮಃ ।
ಅಣೋರಣುಸ್ವರೂಪಾಯ ಮಹತೋ ಮಹತೇ ನಮಃ ॥ ೬ ॥
ಜ್ಞಾನಿನೇ ಜ್ಞಾನಗಮ್ಯಾಯ ಜ್ಞಾನದಾಯ ನಮೋ ನಮಃ ।
ಜ್ಞಾನಹೃನ್ನಿಲಯಾಯಾಲಂ ಪ್ರಣಮಾಮಿ ಮುಹುರ್ಮುಹುಃ ॥ ೭ ॥

ಅನಂತಸಂಸಾರನಿಮಗ್ನದೇಹಿನಃ
ಸಮುದ್ಧರಾಜ್ಞಾನ್ ಪ್ರಣತಾನ್ಸಮಾಗತಾನ್ ।
ತ್ವನ್ಮಾಯಯಾ ಭ್ರಾಮಿತನಷ್ಟಚಿತ್ತಾನ್
ಪುನೀಹಿ ದೃಷ್ಟ್ಯಾ ಕೃಪಯಾ ನಮೋ ನಮಃ ॥ ೮ ॥

ಇತಿ ಶೇಷಃ ಸ್ತುತಿಂ ಶ್ರುತ್ವಾ ದೃಷ್ಟ್ವಾ ಪ್ರೋವಾಚ ತಾನ್ಮುನೀನ್ ।
ಕಿಮರ್ಥಮಾಗತಾ ಯೂಯಂ ವದಂತು ಬ್ರಹ್ಮನಂದನಾಃ ॥ ೯ ॥
ಭವಂತೋ ಜ್ಞಾನಿನಸ್ಸರ್ವೇ ಸರ್ವವಿದ್ಯಾವಿಶಾರದಾಃ ।
ನಿರ್ಮಮಾ ನಿರ್ಗತಾತಂಕಾಃ ಸಾರಾಸಾರವಿಚಕ್ಷಣಾಃ ॥ ೧೦ ॥
ಭಗವದ್ಭಕ್ತಿನಿರತಾ ಕರ್ಮಾಧ್ವವಿಗತೈಷಣಾಃ ।
ನಿರ್ಜಲಾ ನಿರ್ಗತಾಹಾರಾಸ್ತಪಸಾ ಸೂರ್ಯವರ್ಚಸಃ ॥ ೧೧ ॥
ಆತ್ಮಾರಾಮಾ ಜಿತಕ್ರೋಧಾ ಗೃಹದಾರಾವಿವರ್ಜಿತಾಃ ।
ಅತರ್ಕ್ಯಗತಯಶ್ಶಾಂತಾಃ ನಿಸ್ಸಂಗಾಸ್ಸಮದರ್ಶಿನಃ ॥ ೧೨ ॥
ನಿಷ್ಕಾಮಭೂತಾ ನಿರ್ದ್ವಂದ್ವಾಃ ನಿರಸೂಯಾದರಾಸ್ಸದಾ ।
ಚರಾಚರಾತ್ಮಕಂ ವಿಶ್ವಂ ಪಶ್ಯಂತೋ ವಿಷ್ಣುರೂಪತಃ ॥ ೧೩ ॥
ಈದೃಗ್ವಿಧಾನಾಂ ವಃ ಕೋಽರ್ಥಃ ಪರಕ್ಷೋಽಸ್ತಿ ಜಗತ್ತ್ರಯೇ ।
ಯತೋ ಹೃದಿ ಧೃತೋಽಜಸ್ರಮಖಿಲಾಘಹರೋ ಹರಿಃ ॥ ೧೪ ॥

**ಆಗಮೋ ಭವತಾಮತ್ರ ಸಂದೇಹಯತಿ ಮೇ ಮನಃ ।**
**ಬ್ರೂತಾಶು ಕಾರಣಂ ತತ್ರ ಮಾ ವಿಲಂಬೋ ವಿಧೀಯತಾಮ್ ॥ ೧೫ ॥**

## ॥ ನಾಲ್ಕನೆಯ ಅಧ್ಯಾಯವು ॥

**ಶ್ರೀಸನಕಾದಿಗಳು ಹೇಳಿದರು—**

ಕಾಂತಿಸಂಪದ್ಯುಕ್ತನೆಂದು, ಅನಂತನೆಂದು ಸಾರಿ ಹೇಳಲ್ಪಡುತ್ತಿರುವ ಹಾವುಗಳಿಗೆ ರಾಜರೇ, ತಮಗೆ ನಮಸ್ಕಾರಗಳು. ನಾಗಗಳಿಗೂ ರಾಜರಾಗಿರುವ ಶೇಷನೆಂಬ ಹೆಸರುಳ್ಳವರೇ, ಪರಮಾತ್ಮನನ್ನು ಒಲಿಸಿಕೊಳ್ಳುವ ಉಪಾಯಗಳಿಗೆ ಮುಖ್ಯದೇವತೆಯಾದ ತಮಗೆ ನಮಸ್ಕಾರಗಳು. ॥ ೧ ॥ ಅತ್ಯಂತ ಪವಿತ್ರವಾದ ಬಹುಸಂಖ್ಯಾಕ ಪ್ರಕಾಶಮಾನವಾದ ಹೆಡೆಗಳ ಸ್ತೋಮದಿಂದ ಕಂಗೊಳಿಸುವ ರೂಪವುಳ್ಳವರೇ, ಶ್ರೀತಕ್ಷಕನೇ ಮೊದಲಾದ ಸ್ವರೂಪರೇ, ಪಾತಾಳಲೋಕದಲ್ಲಿ ಆವಾಸವುಳ್ಳವರೇ, ॥ ೨ ॥ ಭೂಮಂಡಲವನ್ನು ತಮ್ಮ ಹೆಡೆಗಳ ಮೇಲೆ ಧಾರಣೆ ಮಾಡಿರುವವರೇ, ಸೃಷ್ಟಿಸಂಹಾರಗಳಿಗೆ ಕಾರಣರಾಗಿರತಕ್ಕವರೇ (ಅಂತರ್ಯಾಮಿಯಾಗಿರುವ ಸಂಕರ್ಷಣ ರೂಪದಿಂದ ಲಯಕಾರ್ಯವನ್ನೂ, ಸಂಕರ್ಷಣರಿಂದ ಅಭಿನ್ನವಾದ ಅನಿರುದ್ಧ ಪ್ರದ್ಯುಮ್ನರೂಪಗಳಿಂದ ಸೃಷ್ಟಿ ಮತ್ತು ಸ್ಥಿತಿ ಕಾರ್ಯವನ್ನೂ ಮಾಡುವವರೇ) ವಿಶಿಷ್ಟವಾದ ಗುಣಗಳುಳ್ಳವರೇ, ಸಹಸ್ರಮುಖಗಳುಳ್ಳವರೇ, ಎಲ್ಲ ದಿಕ್ಕುಗಳಲ್ಲಿಯೂ ಇರತಕ್ಕ ಕಣ್ಣುಗಳುಳ್ಳವರೇ, ಎರಡೇ ಕಣ್ಣುಗಳುಳ್ಳವರೇ (ಒಂದು ಶಿರಸ್ಸು ಅಥವಾ ಹೆಡೆಯುಳ್ಳ ತನ್ನ ರೂಪದಲ್ಲಿ), ಮೂರು ಕಣ್ಣುಗಳುಳ್ಳವರೇ (ಶೇಷಪದವಿಯನ್ನು ಹೊಂದುವ ಪೂರ್ವದಲ್ಲಿ ಇವರು ರುದ್ರರಾಗಿದ್ದು ವಾಯುದೇವರಲ್ಲಿ ನಲವತ್ತು ಕಲ್ಪದವರೆಗೆ ಉಪದೇಶ ಪಡೆದರು ಮತ್ತು ಮಹಾವಿಷ್ಣುವನ್ನು ಕುರಿತು ಹತ್ತು ಕಲ್ಪ ತಪಸ್ಸು ಮಾಡಿದ್ದರು) ಸಹಸ್ರಶೀರ್ಷರಾಗಿದ್ದು ಬಹು ಕಣ್ಣುಗಳುಳ್ಳವರಾಗಿರುವವರೇ! ತಮಗೆ ನಮಸ್ಕಾರಗಳು. ತಾವು ಅನಂತ ಎಂಬ ಹೆಸರುಳ್ಳವರು ಮತ್ತು ಎಣಿಸಲಾರದ ಹೆಸರುಗಳಿಂದ ಕೂಡಿದವರು. ನಿಮ್ಮ ಗಮನದ ಗತಿ ಎಣಿಸಲಾರದಷ್ಟು; ನಿಮ್ಮ ದೃಷ್ಟಿವಿಚಾರವೂ ಅಷ್ಟೇ. ಪರಮಾತ್ಮನ ಅನುಗ್ರಹದಿಂದ ಮೇರೆ ಮೀರಿದ ಸುಖವುಳ್ಳವರು (ಮೋಕ್ಷವನ್ನು ಪಡೆದು ತಮ್ಮ ಯೋಗ್ಯತಾನುಸಾರ ಸಮಾಪ್ತಿಯಾಗದ ಸುಖವುಳ್ಳವರು). ಮೋಕ್ಷಪಡೆದ ನಂತರ ಒಂದೇ ರೀತಿಯಾಗಿರುವ ಜ್ಞಾನಾನಂದ ರೂಪವುಳ್ಳವರೇ, ಬ್ರಹ್ಮಕಲ್ಪ ಮುಗಿಯುವವರೆಗೆ ವಿಸ್ತೃತವಾಗಿರುವ ಸುದೀರ್ಘವಾದ ರೂಪವುಳ್ಳವರೇ, ಪರಮಾತ್ಮನ ಅಪರೋಕ್ಷಜ್ಞಾನವಾದ ನಂತರ ನಿತ್ಯವಾದ ಅಂತ್ಯವಿಲ್ಲದ ಆನಂದಜ್ಞಾನವುಳ್ಳ ದೇಹವನ್ನು ಹೊಂದತಕ್ಕವರೇ! ಅತಿಹೆಚ್ಚಿನ ಆನಂದಕ್ಕೆ ಭಾಗಿಯಾಗಿರತಕ್ಕವರೇ, ಎಂತಹವರಿಂದಲೂ ಪೂರ್ಣವಾಗಿ ತಿಳಿಯಲಿಕ್ಕೆ ಆಗದ ಮಹಿಮೆ- ಉಳ್ಳವರೇ, ಜ್ಞಾನಿಗಳಿಂದ ಮಾತ್ರ ಚೆನ್ನಾಗಿ ತಿಳಿಯಲ್ಪಡತಕ್ಕವರೇ, ಕೇವಲ ಜ್ಞಾನದೃಷ್ಟಿಯಿಂದಲೇ ತಿಳಿಯಲ್ಪಡುವವರಾಗಿ ನಿಮ್ಮ ಮತ್ತು ವಿಷ್ಣುವಿನ ಭಕ್ತರಿಗೆ ಸುಜ್ಞಾನವನ್ನು ಕೊಡತಕ್ಕ ಶೇಷದೇವರೇ, ತಮಗೆ ಪ್ರಣಾಮಗಳು. ಅಣುವಿಗಿಂತ ಚಿಕ್ಕದಾದ ಮತ್ತು ದೊಡ್ಡವುಗಳಿಗಿಂತ ದೊಡ್ಡದಾದ ಸ್ವರೂಪಗಳನ್ನು ಇಚ್ಛಾಮಾತ್ರದಿಂದ ತೆಗೆದುಕೊಳ್ಳುವ ಸಾಮರ್ಥ್ಯವುಳ್ಳವರೇ, ಜ್ಞಾನಿಗಳೂ, ಜ್ಞಾನದಿಂದ ಹೊಂದಲ್ಪಡುವವರೂ, ಜ್ಞಾನವನ್ನು ಕೊಡತಕ್ಕವರೂ ಮತ್ತು ಜ್ಞಾನಿಗಳ ಹೃದಯದಲ್ಲಿ ಯಾವಾಗಲೂ ಧ್ಯಾನಸ್ಥನಾಗಿ ಇದ್ದುಕೊಂಡಿರುವವರೇ, ಇಂತಹ ತಮಗೆ ಪುನಃ ಪುನಃ ನಮಸ್ಕಾರಗಳು. ॥ ೩-೭ ॥ ಹೇ ಅನಂತ! ಸಂಸಾರಸಮುದ್ರದಲ್ಲಿ ಮುಳುಗಿರತಕ್ಕ, ಅಜ್ಞರಾಗಿರತಕ್ಕ,

ನಿಮ್ಮ ಇಚ್ಛೆಯಿಂದಾಗಿ ಭ್ರಮೆಯಿಂದ ಕುಂಠಿತವಾದ ಮನಸ್ಸುಳ್ಳ ಮತ್ತು ನಮಸ್ಕಾರ ಮಾಡಿ ಶರಣಾಗತರಾಗಿರತಕ್ಕ ನಮ್ಮನ್ನು ಚೆನ್ನಾಗಿ ಉದ್ಧಾರ ಮಾಡಿರಿ, ತಮಗೆ ನಮಸ್ಕಾರ, ನಮಸ್ಕಾರ. (ಈ ನಿವೇದನೆಯಲ್ಲಿ ಸಜ್ಜನರ ಉದ್ಧಾರಕ್ಕಾಗಿಯೂ ಸನಕಾದಿಗಳು ಶೇಷದೇವರಲ್ಲಿ ಮೊರೆಯಿಟ್ಟಿದ್ದಾರೆ ಎಂದು ಸ್ಪಷ್ಟವಾಗಿ ಕಾಣುತ್ತದೆ.) ॥ ೮ ॥

ಈ ರೀತಿಯಾಗಿ ಎಸಗಿದ ಸನಕಾದಿಗಳ ಸ್ತೋತ್ರವನ್ನು ಕೇಳಿ ಅವರುಗಳನ್ನು ಕಾರುಣ್ಯದಿಂದ ನೋಡಿ, ''ಹೇ ಬ್ರಹ್ಮದೇವರ ಮಕ್ಕಳಿರಾ, ಏತಕ್ಕಾಗಿ ಬಂದಿದ್ದೀರಿ? ಹೇಳಿರಿ'' ಎಂದು ಪ್ರಶ್ನೆ ಮಾಡಿದರು. ॥ ೯ ॥ ತಾವುಗಳೆಲ್ಲರೂ ಜ್ಞಾನಿಗಳು, ಎಲ್ಲ ವಿದ್ಯೆಗಳಲ್ಲಿಯೂ ವಿಶಾರದರು, ತಮಗೆ ಯಾವ ಬಯಕೆಯೂ ಇರುವುದಿಲ್ಲ, ಆತಂಕರಹಿತರು, ಇದಲ್ಲದೆ ಜಗತ್ತಿನ ಸಾರಾಸಾರವನ್ನು ಅಂದರೆ ಯಾವುದು ನಶ್ವರ, ಯಾವುದು ಸ್ಥಿರ ಇದರ ಜ್ಞಾನವನ್ನು ಚೆನ್ನಾಗಿ ಅರಿತವರು; ಹೀಗೆ ತಿಳಿಯುವುದರಲ್ಲಿ ಕುಶಲರು. ॥ ೧೦ ॥ ಪರಮಾತ್ಮನ ಸುದೃಢ ಸ್ನೇಹಭರಿತರು, ಕರ್ಮ ಮಾರ್ಗದ ಕಡೆ (ಐಹಿಕದ ಕಡೆ) ಯತ್ಕಿಂಚಿತ್ತೂ ಆಸೆಯಿಲ್ಲದವರು. ಪರಮಾತ್ಮನನ್ನು ಧ್ಯಾನಿಸುವುದರಲ್ಲೇ ಸುಖ ಕಾಣುವವರು, ನೀರನ್ನು ಕೂಡ ಸೇವಿಸದವರು, ಆಹಾರವೇ ಬೇಕಿಲ್ಲದವರು, ತಪಸ್ಸಿನಿಂದ ಸೂರ್ಯನಂತೆ ವರ್ಚಸ್ವಿಯಾಗಿದ್ದೀರಿ. ॥ ೧೧ ॥ ಕಾಮಕ್ರೋಧಾದಿಗಳನ್ನು ಗೆದ್ದವರು, ಹೆಂಡತಿ, ಮಕ್ಕಳು ಮನೆಯೇ ಬೇಡದವರು, ತಮ್ಮಗಳ ಗಮನವು ಯಾವ ರೀತಿಯಾಗಿ- ರುವುದೆಂದು ಊಹಿಸಲು ಅಸಾಧ್ಯ. ತಾವುಗಳು ಸೌಮ್ಯ ಸ್ವಭಾವದವರು, ಯಾವುದರಲ್ಲಿಯೂ ಆಸಕ್ತಿ ಇಲ್ಲದವರು (ಐಹಿಕದಲ್ಲಿ ಅನಾಸಕ್ತರು) ಸಮದೃಷ್ಟಿವುಳ್ಳವರು. ॥೧೨॥ ಯಾವುದನ್ನೂ ಬಯಸದವರು. ಶೀತೋಷ್ಣ, ಸುಖದುಃಖ, ಲಾಭಾಲಾಭ, ಜಯಾಜಯ, ಮಾನಾಪಮಾನ ಮುಂತಾದ ದ್ವಂದ್ವಗಳನ್ನು ಸಮದೃಷ್ಟಿಯಿಂದ ನೋಡುವವರು. ಅಸೂಯೆಯನ್ನೂ ಆಸಕ್ತಿಯನ್ನು ಬಿಟ್ಟವರು, ಈ ಜೀವಜಡಾತ್ಮಕ ಪ್ರಪಂಚವನ್ನು ಸಾಕ್ಷಾತ್ ವಿಷ್ಣುವಿನ ವಿರಾಟ್‌ರೂಪ, ಅವನ ನಿಯಾಮಕತ್ವಕ್ಕೆ ಒಳಪಟ್ಟುದೆಂದು ತಿಳಿದವರು. ॥ ೧೩ ॥ ಈ ರೀತಿಯಾಗಿರುವ ತಮಗೆ ಮೂರು ಲೋಕಗಳಲ್ಲಿಯೂ ಯಾವುದು ತಾನೇ ಸಿಗಲಾರದು? ಕಾರಣ ತಾವು ಎಲ್ಲ ಪಾಪ-ಪರಿಹಾರಕನಾದ ಶ್ರೀಮಹಾವಿಷ್ಣುವನ್ನು ಹೃದಯದಲ್ಲಿ ಧಾರಣೆ ಮಾಡಿದ್ದೀರಿ. ॥ ೧೪ ॥ ತಾವು ಇಲ್ಲಿಗೆ ಬಂದಿರುವುದೇ ನಮಗೆ ಸಂದೇಹವನ್ನು ಹೆಚ್ಚಿಸುತ್ತಿದೆ. ವಿಳಂಬ ಮಾಡದೆ ಬಂದ ಕಾರಣವನ್ನು ತಿಳಿಸಿರಿ. ॥ ೧೫ ॥ ಈ ರೀತಿ ಶೇಷದೇವರು ಪ್ರಶ್ನೆ ಮಾಡಿದರು. ಆಗ ಸನಕಾದಿಗಳು ಹೇಳುತ್ತಾರೆ.

ಸನಕ ಉವಾಚ—

ಸಾರಾತ್ಸಾರತರಂ ವಸ್ತು ಜ್ಞಾತವ್ಯಂ ಗುರುವಾಕ್ಯತಃ ।
ತಸ್ಮಾದ್ವಯಂ ಸಮಾಯಾತಾಃ ಭ್ರಮಂತೋ ಭವದಂತಿಕಮ್ ॥ ೧೬ ॥
ಕರ್ಮಶೃಂಖಲಬದ್ಧಾನಾಂ ಭ್ರಮತಾಂ ಬಹುಯೋನಿಷು ।
ಮೋಚಕಂ ಜ್ಞಾನಮೇವಾನ್ಯನ್ನೇತಿ ಸರ್ವತ್ರ ಡಿಂಡಿಮಃ ॥ ೧೭ ॥
ಕಲೌ ವಿಮಂದಬುದ್ಧೀನಾಂ ಮಂದಭಾಗ್ಯಾದಿಸಂಪದಾಮ್ ।
ಕಷ್ಟಸಾಧ್ಯಂ ಪರಂ ಜ್ಞಾನಂ ಕಥಂ ಭವಿತುಮರ್ಹತಿ ॥ ೧೮ ॥
ಖಂಡಬ್ರಹ್ಮಾಂಡವಿಜ್ಞಾನಂ ಸರ್ವೇಷಾಂ ನಾಸ್ತಿ ದೇಹಿನಾಮ್ ।
ತತ್ಫಲಪ್ರಾಪಕಂ ಕಿಂಚಿತ್ತೀರ್ಥಂ ತಿಷ್ಠತಿ ವಾ ನ ವಾ ? ॥ ೧೯ ॥

ದರ್ಶನಸ್ನಾನಪಾನೈಶ್ಚ ದಾನವಾಸನಿಷೇವಣೈಃ ।
ವಿಜ್ಞಾನಂ ಪ್ರಾಪ್ಯತೇ ಯತ್ರ ಭವಪಾಶವಿದಾರಕಮ್ ॥ ೨೦ ॥
ಲಭಂತೇ ಯತ್ರ ಮರಣಾತ್ಪುರುಷಾರ್ಥಚತುಷ್ಟಯಮ್ ।
ತದ್ವದಸ್ವ ದಯಾಪೂರ್ವಂ ಯೇನ ನಶ್ಯೇತ ಸಂಶಯಃ ॥ ೨೧ ॥
ಇತಿ ವಿಜ್ಞಾಪಿತಃ ಶೇಷಃ ಕ್ಷಣಂ ಧ್ಯಾತ್ವಾ ಬ್ರವೀನ್ಮುನೀನ್ ।
ಮೂರ್ಧಾನಂ ಕಂಪಯನ್ನಸ್ತ್ಯಮಸ್ತಿ ಸ್ವಸ್ತಿಕರಂ ನೃಣಾಮ್ ॥ ೨೨ ॥

ಸನಕಾದಿಗಳು ಹೇಳಿದರು—

ಒಳ್ಳೆಯ ಗುರುಗಳನ್ನು ಪಡೆದವನು ಗುರುಗಳ ಮೂಲಕ ಮುಖ್ಯವಾದುವುಗಳಲ್ಲಿ ಹೆಚ್ಚಿನ ಮುಖ್ಯವಸ್ತುವನ್ನು ಅವಶ್ಯ ತಿಳಿಯತಕ್ಕದ್ದು. ಆದ್ದರಿಂದ ಅಲ್ಲಲ್ಲಿ ಅಲೆಯುತ್ತಾ ತಮ್ಮ ಸಮೀಪಕ್ಕೆ ಬಂದಿದ್ದೇವೆ. ॥ ೧೬ ॥ ಕರ್ಮಗಳ ಸರಪಳಿಯು ಜೀವಿಗಳನ್ನು ಕಟ್ಟಿಹಾಕಿ ನಾನಾಯೋನಿಗಳಲ್ಲಿ ಹುಟ್ಟಿಸುತ್ತದೆ. ಇವರ ಬಿಡುಗಡೆಯು ಕೇವಲ ಜ್ಞಾನದಿಂದಲೇ ಮತ್ತು ಬೇರೆ ಯಾವುದರಿಂದಲೂ ಅಲ್ಲ ಎಂದು ನಗಾರಿಯು ಹೊಡೆಯುತ್ತಿರುವುದು ಎಲ್ಲೆಡೆಯೂ ಕೇಳಲ್ಪಡುತ್ತಿದೆ. ॥ ೧೭ ॥ ಕಲಿಯುಗದಲ್ಲಿ ನರರು ಅತ್ಯಲ್ಪಬುದ್ಧಿಯುಳ್ಳವರು; ಮಂದಭಾಗ್ಯರು; ಮಂದಸಂಪತ್ತುಳ್ಳವರು, ಜ್ಞಾನವಾದರೋ ಕಷ್ಟದಿಂದಲೇ ಪಡೆಯಲು ಸಾಧ್ಯ. ಹೀಗಿರಲು ಈ ಸಮಸ್ಯೆಯು ಬಗೆಹರಿಯು-ವುದು ತಾನೇ ಹೇಗೆ? ॥ ೧೮ ॥ ಈ ಬ್ರಹ್ಮಾಂಡದ ಅನೇಕ ಉಪಖಂಡಗಳ ಜ್ಞಾನವು ಎಲ್ಲರಿಗೂ ಇರಲು ಅಸಾಧ್ಯವು. ಆದ್ದರಿಂದ ಈ ಬ್ರಹ್ಮಾಂಡದಲ್ಲಿರುವ ಎಲ್ಲ ಲೋಕಗಳಲ್ಲಿನ ಸೇವಾಗಳಿಂದ ಒದಗುವ ಫಲವು ಸಿಗತಕ್ಕ ಒಂದೇ ಒಂದು ತೀರ್ಥವು ಈ ಜಗತ್ತಿನಲ್ಲಿ ಇದೆಯೇ ಅಥವಾ ಇಲ್ಲವೇ? ॥ ೧೯ ॥ ಯಾವ ತೀರ್ಥದಲ್ಲಿಸ್ನಾನ ಮಾಡುವುದರಿಂದ, ಯಾವುದನ್ನು ನೋಡುವುದರಿಂದ, ಎಲ್ಲಿ ವಾಸಮಾಡುವುದರಿಂದ ಮತ್ತು ಯಾವುದನ್ನು ಸೇವಿಸುವುದರಿಂದ ಸಂಸಾರದ ಬಂಧನವನ್ನೇ ಕತ್ತರಿಸತಕ್ಕ ಯಾವ ವಿಜ್ಞಾನವು ಲಭ್ಯವಾಗುವುದೋ ಅಂತಹ ತೀರ್ಥಕ್ಷೇತ್ರವೊಂದಿರುವುದಾ? ॥ ೨೦ ॥ ಮತ್ತು ಯಾವ ಕ್ಷೇತ್ರದಲ್ಲಿ ಮರಣ ಹೊಂದುವುದರಿಂದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ಪುರುಷಾರ್ಥಗಳು ಸಿಗುವುವೋ ಅಂತಹ ತೀರ್ಥಕ್ಷೇತ್ರವೊಂದಿದೆಯೇ? ಕರುಣೆ-ಯಿಂದ ಈ ಒಂದು ವಿಷಯವನ್ನು ಬಿಡಿಸಿ ಹೇಳಿರಿ. ಇದರಿಂದ ನಮ್ಮ ಸಂಶಯವೆಲ್ಲವೂ ಪರಿಹಾರ-ವಾಗುವುದು. ॥ ೨೧ ॥ ಈ ರೀತಿ ವಿಜ್ಞಾಪಿಸಲ್ಪಟ್ಟ ಶೇಷದೇವರು ಕ್ಷಣಕಾಲ ಮೌನವಾಗಿ ಧ್ಯಾನಿಸಿ ಮುನಿಗಳನ್ನು ಕುರಿತು ತಲೆಯನ್ನು ತೂಗುತ್ತಾ "ಹೌದು ಅಂತಹದೊಂದು ಇದೆ, ಅದು ಅತ್ಯಂತ ಮಂಗಳಕರವಾದುದೂ ಹೌದು" ಎಂದು ಹೇಳಿ ತಮ್ಮ ಉಪದೇಶವನ್ನು ಮುಂದುವರೆಸಿದರು.

ಶ್ರೀಶೇಷ ಉವಾಚ—

ಭವಂತೋ ಬ್ರಹ್ಮಣಃ ಪುತ್ರಾಃ ದಾಂತ್ಯಾದ್ಯಕ್ಷರಸಂಜ್ಞಿತಾಃ ।
ತತ್ಕ್ಷೇತ್ರವಾಸಿನೋ ಯೂಯಂ ಕಿಂ ಮಾಂ ಪೃಚ್ಛಥ ಪಶ್ಯಥ ॥ ೨೩ ॥
ತೀರ್ಥಂ ಹಿ ದ್ವಿವಿಧಂ ಪ್ರೋಕ್ತಂ ಕಾಮದಂ ಮೋಕ್ಷದಂ ತಥಾ ।
ಕಾಮದಂ ಮೋಕ್ಷದಂ ನೈವ ಮೋಕ್ಷದಂ ಕಾಮದಂ ನ ಚ ॥ ೨೪ ॥

ತತ್ರಾಪಿ ಸರ್ವತೀರ್ಥಾನಿ ತೀರ್ಥರಾಜಾಜ್ಞಯಾ ವಿನಾ ।
ಕಾಮದಾನೇ ಮೋಕ್ಷದಾನೇ ಸಮರ್ಥಾನಿ ಭವಂತಿ ನ ॥ ೨೫ ॥
ಸ್ತ್ರೀಪುನ್ನಪುಂಸಕಾಖ್ಯಾನಿ ಯಾನಿ ತೀರ್ಥಾನಿ ಸರ್ವತಃ ।
ತೇಭ್ಯೋ ವಿರಾಜಮಾನತ್ವಾದಾರೂಢಃ ತೀರ್ಥರಾಜತಾಮ್ ॥ ೨೬ ॥
ಸರ್ವಾಸಾಂ ತೀರ್ಥಕೋಟೀನಾಂ ಬ್ರಹ್ಮಾಂಡೇ ರಾಜತೇ ಪರಮ್ ।
ಧರ್ಮಾರ್ಥಕಾಮಮೋಕ್ಷಾಣಾಂ ದಾನೇನಾಪಿ ವಿರಾಜತೇ ॥ ೨೭ ॥
ಅಥೋಚ್ಯತೇ ತೀರ್ಥರಾಜಃ ಪ್ರಯಾಗಃ ಸರ್ವತೋಽಧಿಕಃ ।
ತಸ್ಯ ಶೃಣ್ವಂತು ಮಾಹಾತ್ಮ್ಯಂ ಮುನಯಃ ಸನಕಾದಯಃ ॥ ೨೮ ॥

ತಿಸ್ರಃ ಕೋಟ್ಯರ್ಧಕೋಟೀ ದಿವಿ ಭುವಿ ಸುತಲೇ ಸಂತಿ ತೀರ್ಥಾನಿ ತೇಷಾಂ
ರಾಜಾ ಮುಖ್ಯಃ ಪ್ರಯಾಗಃ ಸ ಜಯತಿ ಜಗತಾಂ ಭುಕ್ತಿಮುಕ್ತಿಪ್ರದಾತಾ ॥
ಅಕ್ಷಯ್ಯಂ ಕ್ಷೇತ್ರಮೇತದ್ವಟವಿಟಪನಿಭಂ ಚಾಮರೇ ಶ್ವೇತನೀಲೇ
ಗಂಗಾ ವಾಗ್ವಾದಿನೀ ಸಾ ಕಲಯತಿ ಚ ತತಃ ಕೋ ವದಾನ್ಯೋಽಸ್ತಿ ಮಾನ್ಯಃ ॥ ೨೯ ॥

ಸುರಮುನಿದಿತಿಜೇಂದ್ರೈ ಸೇವ್ಯತೇ ಯೋಽಸ್ತತಂದ್ರೈ
ಗುರುತರದುರಿತಾನಾಂ ಕಾ ಕಥಾ ಮಾನವಾನಾಮ್ ।
ಸ ಭುವಿ ಸುಕೃತಕರ್ತುರ್ವಾಂಛಿತಾವಾಪ್ತಿಹೇತು-
ರ್ಜಯತಿ ವಿಜಿತಯಾಗಸ್ತೀರ್ಥರಾಜಃ ಪ್ರಯಾಗಃ ॥ ೩೦ ॥

ಶ್ರುತಿಃ ಪ್ರಮಾಣಂ ಸ್ಮೃತಯಃ ಪ್ರಮಾಣಂ
ಪುರಾಣಮಪ್ಯತ್ರ ಪರಂ ಪ್ರಮಾಣಮ್ ।
ಯತ್ರಾಸ್ತಿ ಗಂಗಾ ಯಮುನಾ ಪ್ರಮಾಣಂ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೧ ॥

ನ ಯತ್ರ ಯೋಗಾಚರಣಪ್ರತೀಕ್ಷಾ
ನ ಯತ್ರ ಯಜ್ಞೇಷ್ಟಿವಿಶಿಷ್ಟದೀಕ್ಷಾ ।
ನ ತಾರಕಜ್ಞಾನಗುರೋರಪೇಕ್ಷಾ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೨ ॥

ಚಿರಂ ನಿವಾಸಂ ನ ಸಮೀಕ್ಷತೇ ಯೋ
ಹ್ಯುದಾರಚಿತ್ತಃ ಪ್ರದದಾತಿ ಕಾಮಾನ್ ।
ಯಃ ಕಲ್ಪಿತಾರ್ಥಾಂಶ್ಚ ದದಾತಿ ಪುಂಸಾಂ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೩ ॥

ತೀರ್ಥಾವಲೀ ಯಸ್ಯ ತು ಕಂಠಭಾಗೇ
ದಾನಾವಲೀ ವಲ್ಗತಿ ಪಾದಭಾಗೇ ।
ವ್ರತಾವಲೀ ದಕ್ಷಿಣಬಾಹುಮೂಲೇ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೪ ॥

ಅಜ್ಞಾಃ ಸುವಿಜ್ಞಾಃ ಪ್ರಭವೋಽಪಿ ಯಜ್ಞಾಃ
ಸಪ್ತಸ್ವಪಿ ದ್ವಾಸುಕೃತಾನಭಿಜ್ಞಾಃ ।
ವಿಜ್ಞಾಪಯಂತಃ ಸತತಂ ಹಿ ಕಾಲೇ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೫ ॥

ಸಿತಾಸಿತೇ ಯತ್ರ ತರಂಗಚಾಮರೇ
ನದ್ಯೌ ವಿಭಾತೇ ಮುನಿಭಾನುಕನ್ಯಕೇ ।
ನೀಲಾತಪತ್ರಂ ವಟ ಏವ ಸಾಕ್ಷಾತ್
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೬ ॥

ಪುರ್ಯಃ ಸಪ್ತ ಪ್ರಸಿದ್ಧಾಃ ಪ್ರತಿವಚನಕರೀಸ್ತೀರ್ಥರಾಜಸ್ಯ ನಾರ್ಯೋ
ನೈಕಟ್ಯೇನಾತಿಹೃದ್ಯಾಃ ಪ್ರಭವತಿ ಚ ಗುಣೈಃ ಕಾಶತೇ ಬ್ರಹ್ಮ ಯಸ್ಯಾಮ್ ।
ಸೇಯಂ ರಾಜ್ಞೀ ಪ್ರಧಾನಾ ಪ್ರಿಯವಚನಕರೀ ಮುಕ್ತಿದಾನೇನ ಯುಕ್ತಾ
ಯೇನ ಬ್ರಹ್ಮಾಂಡಮಧ್ಯೇ ಸ ಜಯತಿ ಸುತರಾಂ ತೀರ್ಥರಾಜಃ ಪ್ರಯಾಗಃ ॥ ೩೭ ॥

ತೀರ್ಥರಾಜಂ ಸಮಾಯಾಂತಿ ಹ್ಯಾತ್ಮಸಂಶುದ್ಧಿಹೇತವೇ ।
ಮಕರಸ್ಥೇ ರವೌ ಮಾಘೇ ಪ್ರಯಾಗಂ ಮಾಧವಾಜ್ಞಯಾ ॥ ೩೮ ॥

ಪ್ರಯಾಗವಾಸಿನಾಂ ನೃಣಾಂ ಸ್ಪರ್ಶಮಾತ್ರೇಣ ದೇಹಿನಃ ।
ಸ್ವರ್ಗಸ್ಥಾ ಅಪಿ ಮುಚ್ಯಂತೇ ಕಾ ಕಥಾ ಭುವಿ ವಾಸಿನಾಮ್ ॥ ೩೯ ॥

ಜಗತೀತ್ರಿತಯಸ್ಥಾನಾಂ ಪಾಪಕರ್ಮನಿವಾರಣೇ ।
ತತ್ಸಾಮರ್ಥ್ಯಬಲೇನೈವ ತೀರ್ಥಾನಾಮಸ್ತಿ ಪುಣ್ಯತಾ ॥ ೪೦ ॥

ತಮಿಮಂ ಸರ್ವತೀರ್ಥಾನಾಂ ಜಾನೀಧ್ವಮಧಿಕಂ ಪರಮಂ ।
ಪರೋಪಕೃತಯೇ ಯೂಯಂ ಯದರ್ಥಮಿಹ ಚಾಗತಾಃ ॥ ೪೧ ॥

ಏವಂ ಪ್ರಯಾಗಮಾಹಾತ್ಮ್ಯಂ ಕೇನ ವರ್ಣ್ಯಂ ಮುನೀಶ್ವರಾಃ ।
ತಥಾಪಿ ವಚ್ಮಿ ವಃ ಕಿಂಚಿತ್ ಪ್ರತಿವಾಕ್ಯವಿಧಿತ್ಸಯಾ ॥ ೪೨ ॥

॥ ಇತಿ ಚತುರ್ಥೋಽಧ್ಯಾಯಃ ॥

ಶ್ರೀಶೇಷದೇವರು ಹೇಳಿದರು—

ಸನಕಾದಿಗಳಿರೇ ! ತಾವುಗಳೆಲ್ಲರೂ ಬ್ರಹ್ಮದೇವರ ಮಕ್ಕಳಾಗಿದ್ದು ದಂತದ ಮೂಲದಲ್ಲಿ ಉತ್ಪತ್ತಿಯುಳ್ಳ ''ಸ''ಎಂಬ ಅಕ್ಷರದಿಂದ ಪ್ರಾರಂಭವಾಗುವ (ಸನಕ, ಸನಂದನ, ಸನಾತನ ಮತ್ತು ಸನತ್ಸುಜಾತ) ಹೆಸರುಗಳುಳ್ಳವರಾದ್ದರಿಂದ ತಾವು ದಾಂತ್ಯ ಅಕ್ಷರರೆಂದು ಕರೆಯಲ್ಪಟ್ಟಿದ್ದೀರಿ. ಎಲ್ಲ ಅಕ್ಷರಗಳಂತೆ 'ಸ' ಅಕ್ಷರವೂ ನಾಶರಹಿತವಾದದ್ದು. ಈ ಪ್ರಯಾಗವೂ ಅಕ್ಷಯ್ಯವಟವೃಕ್ಷದಿಂದ ವಿರಾಜಮಾನವಾಗಿದ್ದು ಅಕ್ಷಯಕ್ಷೇತ್ರ–ಅಕ್ಷಯಪ್ರಯಾಗವೆಂದೆನಿಸಿಕೊಂಡಿದೆ. (ಅಕ್ಷಯ— ಯಾವಾಗಲೂ ಇರುವಿಕೆಯುಳ್ಳದ್ದೆಂದು ಅರ್ಥ). ಅದೇ ಕ್ಷೇತ್ರವಾಸಿಗಳಾದ ನಿಮಗೆ ಅದೇ ಬಗ್ಗೆ ನಾನೇನು ತಾನೇ ಹೇಳಬಲ್ಲೆ? ॥ ೨೩ ॥ ಆದರೂ ವಿವರಿಸುವೆನು.

ತೀರ್ಥಗಳಲ್ಲಿ ಎರಡು ವಿಧಗಳು—ಅವರವರ ಅಭೀಷ್ಟಗಳನ್ನು ಕೊಡತಕ್ಕವುಗಳು, ಮೋಕ್ಷವನ್ನು ಕೊಡತಕ್ಕವುಗಳು. ಕಾಮಿತವನ್ನು ಕೊಡತಕ್ಕವುಗಳು ಮೋಕ್ಷವನ್ನು ಕೊಡುವುದಿಲ್ಲ; ಹಾಗೆಯೇ ಮೋಕ್ಷವನ್ನು ಕೊಡತಕ್ಕವುಗಳು ಕಾಮಿತಗಳನ್ನು ನೆರವೇರಿಸುವುದಿಲ್ಲ. ॥ ೨೪ ॥ ಹಾಗಿದ್ದರೂ ಈ ಎಲ್ಲ ಕ್ಷೇತ್ರಗಳು ಕಾಮಿತಗಳನ್ನೇ ಆಗಲಿ ಮೋಕ್ಷವನ್ನೇ ಆಗಲಿ ತೀರ್ಥರಾಜನೆಂದೆನಿಸಿರುವ ಶ್ರೀಪ್ರಯಾಗ ಕ್ಷೇತ್ರದ ಆಜ್ಞಾದಿಂದಲೇ ಈ ಎರಡು ಬಗೆಯ ಇಷ್ಟಾರ್ಥಗಳನ್ನು ಕರುಣಿಸುವ ಸಾಮರ್ಥ್ಯವನ್ನು ಹೊಂದಿರುವುವು. ॥ ೨೫ ॥ ಸ್ತ್ರೀಲಿಂಗ, ಪುಲ್ಲಿಂಗ ಮತ್ತು ನಪುಂಸಕಲಿಂಗಗಳಲ್ಲಿ ಪ್ರಸಿದ್ಧವಾಗಿ ಕರೆಯಲ್ಪಡುತ್ತಿರುವ ಎಲ್ಲ ತೀರ್ಥವೃಂದಗಳನ್ನು ಮೀರಿ ಅತಿಶಯ ಶೋಭೆಯಿಂದ ವಿರಾಜಮಾನವಾಗಿರುವುದರಿಂದಲೇ ಈ ಪ್ರಯಾಗಕ್ಷೇತ್ರಕ್ಕೆ ತೀರ್ಥರಾಜನೆಂಬ ಹೆಸರು ಬಂದಿದೆ. ॥ ೨೬ ॥ ಇಡೀ ಬ್ರಹ್ಮಾಂಡದಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳನ್ನು ಸುಜೀವಿಗಳಿಗೆ ಕೊಟ್ಟು ತೀರ್ಥಕೋಟಿ-ಗಿಂತಲೂ ಮಿಗಿಲಾದ ಈ ಕ್ಷೇತ್ರವು ಅತ್ಯಂತ ಶೋಭೆಯಿಂದ ಕಂಗೊಳಿಸುತ್ತಿದೆ. ॥ ೨೭ ॥ ಆದ್ದರಿಂದಲೇ ಈ ಪ್ರಯಾಗವನ್ನು "ತೀರ್ಥರಾಜ" ಎಂದು ಕರೆಯುವುದು. ಇದು ಎಲ್ಲ ತೀರ್ಥಗಳಿಗಿಂತಲೂ ಅತಿ ಹೆಚ್ಚಿನದು. ಆದ್ದರಿಂದ ಸನಕಾದಿಮುನಿಗಳೇ ! ಆ ಕ್ಷೇತ್ರದ ಮಾಹಾತ್ಮ್ಯ-ಯನ್ನು ಕೇಳಿರಿ. ॥ ೨೮ ॥ ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ಪಾತಾಳ ಸುತಲಲೋಕ-ಗಳಲ್ಲಿಯೂ, ಮೂರುವರೆ ಕೋಟಿ ತೀರ್ಥಗಳಿವೆ. ಇವುಗಳಿಗೆಲ್ಲ ಮುಖ್ಯವಾಗಿ ರಾಜನು ಪ್ರಯಾಗವೇ. ಅದು ಐಹಿಕ ಇಷ್ಟಾರ್ಥಗಳನ್ನೂ(ಭುಕ್ತಿಗಳನ್ನೂ) ಮತ್ತು ಮೋಕ್ಷವನ್ನೂ ಕರುಣಿಸಿ ವಿರಾಜಮಾನವಾಗಿದೆ. ಅಕ್ಷಯ ವಟವೃಕ್ಷದಂತೆ ಈ ಕ್ಷೇತ್ರವೂ ಅಕ್ಷಯವೆನಿಸಿದೆ ಮತ್ತು ಗಂಗೆಯ ಶಬ್ದದಿಂದ ತುಂಬಿದೆ. ಈ ಕ್ಷೇತ್ರಕ್ಕೆ ಗಂಗೆ, ಯಮುನೆಯರು ತಮ್ಮ ಶ್ವೇತ ಮತ್ತು ಕಪ್ಪು ಜಲತರಂಗಗಳಿಂದ ಶ್ವೇತ ಕೃಷ್ಣ ಚಾಮರಗಳನ್ನು ಬೀಸುತ್ತಿದ್ದಾರೆ. ಸರಸ್ವತಿಯೂ ಬಂದು ಸೇರುತ್ತಿದ್ದಾಳೆ. ಈ ರೀತಿಯಾದ ರಾಜಮಾನ್ಯತ್ವವು ದಾನಶೂರತ್ವವು ಬೇರೆ ಯಾವ ಕ್ಷೇತ್ರಕ್ಕೆ ತಾನೇ ಇದೆ? ॥ ೨೯ ॥ ದೇವಋಷಿಗಳು ದೇವಶ್ರೇಷ್ಠರುಗಳು ಆಲಸ್ಯವನ್ನು ಬಿಟ್ಟು ಇದನ್ನು ಸೇವಿಸುತ್ತಿದ್ದಾರೆ; ಹೀಗಿರಲು ಅತಿ ಪಾಪಮಾಡಿದ ಮಾನವರಿಂದ ಇದು ಸೇವಿಸಲ್ಪಡುತ್ತಿದೆ ಎಂಬುದನ್ನು ಹೇಳತಕ್ಕದ್ದೇನಿದೆ ? ಅದು ಪುಣ್ಯಕರ್ಮಗಳನ್ನಾಚರಿಸುವವರಿಗೆ ಮನೋರಥ ಪ್ರಾಪ್ತಿಗೆ ಕಾರಣವಾದ ಅಶ್ವಮೇಧಾದಿಯಾಗಗಳನ್ನು ಮೀರಿಸಿದ, ತೀರ್ಥಗಳಿಗೆ ರಾಜನಂತೆ ಇರುವ ಪ್ರಯಾಗಕ್ಷೇತ್ರವು ವಿರಾಜಮಾನವಾಗಿದೆ. ॥ ೩೦ ॥ ಈ ಬಗ್ಗೆ ಶ್ರುತಿಗಳೇ ಪ್ರಮಾಣ, ಸ್ಮೃತಿಗಳೂ ಪ್ರಮಾಣಗಳು, ಪುರಾಣಗಳು ಅತಿ ಹೆಚ್ಚಿನ ಪ್ರಮಾಣಗಳು ಮತ್ತು ಈ ಪ್ರಯಾಗಕ್ಷೇತ್ರದಲ್ಲಿ ಹರಿಯುತ್ತಿರುವ ಗಂಗಾಯಮುನೆಯರೇ ಪ್ರಮಾಣಗಳು. ॥ ೩೧ ॥ ಎಲ್ಲಿ ಯೋಗಗಳ ಆಚರಣೆಯ ನಿರೀಕ್ಷೆಯ ಆವಶ್ಯಕತೆಯಿಲ್ಲವೋ ಮತ್ತು ಎಲ್ಲಿ ಸತ್ರ, ಯಜ್ಞ ಮತ್ತು ಯಾಗ ಇವುಗಳ ಆಚರಣೆಗಳಿಗಾಗಿ ಮಹಾತ್ಮರು ದೀಕ್ಷಾಬದ್ಧರಾಗಿರುವ ಆವಶ್ಯವಿಲ್ಲವೋ ಮತ್ತು ಎಲ್ಲಿ ನಮ್ಮನ್ನು ಉದ್ಧಾರಮಾಡುವ ತಾರಕ ಮಂತ್ರಗಳ ಉಪದೇಶಕರ ಅಪೇಕ್ಷೆಯೂ ಇಲ್ಲವೋ ಅಂತಹ ತೀರ್ಥರಾಜನೆಂದು ಪ್ರಖ್ಯಾತನಾಗಿರುವ ಪ್ರಯಾಗವು ಜಯಶೀಲವಾಗಲಿ. ॥ ೩೨ ॥ ಯಾವ ಕ್ಷೇತ್ರವು ಬಹುಕಾಲ ವಾಸವನ್ನು ಅಪೇಕ್ಷಿಸುವುದಿಲ್ಲವೋ ಯಾವುದು ಮನಸ್ಸಿನಲ್ಲಿ ನೆನೆಸಿರುವ ಎಲ್ಲ ಅಪೇಕ್ಷೆಗಳನ್ನೂ ಮನುಷ್ಯರಿಗೆ ನೆರವೇರಿಸಿ ಕೊಡುತ್ತದೋ ಅಂತಹ ತೀರ್ಥರಾಜನೆಂದು ಪ್ರಸಿದ್ಧವಾಗಿರುವ ಪ್ರಯಾಗವು ಜಯಶೀಲವಾಗಲಿ. ॥ ೩೩ ॥ ಗಂಗೆ, ಯಮುನೆ ಮತ್ತು ಸರಸ್ವತೀ ಎಂಬ ಮೂರು ನದಿಗಳ ಪಂಕ್ತಿಯು ಯಾವ ಕ್ಷೇತ್ರದ ಕಂಠಭಾಗದಲ್ಲಿ

ಇದೆಯೋ, ದಾನಗಳ ರಾಶಿಗಳೇ ಯಾರ ಪಾದಭಾಗದಲ್ಲಿದೆಯೋ ಮತ್ತು ವ್ರತಗಳ ಪಂಕ್ತಿಗಳೇ ಯಾರ ಬಲಬಾಹುವಿನ ಮೂಲದಲ್ಲಿ ಇದೆಯೋ ಅಂಥಹ ತೀರ್ಥರಾಜನೆಂದು ಪ್ರಸಿದ್ಧವಾದ ಪ್ರಯಾಗವು ಜಯಶೀಲವಾಗಲಿ. ॥ ೩೪ ॥ ಅಜ್ಞಾನಿಗಳಾದ ಹಾಗು ವಿಜ್ಞಾನಿಗಳಾದ ಯಜ್ಞಾಭಿಮಾನಿ ದೇವತೆಗಳು ಸ್ವಯಂ ಸಮರ್ಥರಾದರೂ, ಏನು ಮಾಡಬೇಕೆಂದು ತಿಳಿಯದವರಾಗಿ, ಸಪ್ತದ್ವಾರಗಳಲ್ಲಿಯೂ ಕಾಲಕಾಲದಲ್ಲಿ ಯಾರಿಗೆ ವಿಜ್ಞಾಪನೆ ಮಾಡುತ್ತಾ ಇರುವರೋ ಅಂಥಾ ತೀರ್ಥರಾಜನಾದ ಪ್ರಯಾಗವು ಉತ್ಕೃಷ್ಟವಾಗಿರುತ್ತದೆ. ॥ ೩೫ ॥ ಎಲ್ಲಿ ಜಹ್ನು ಋಷಿಯ ಮಗಳಾದ ಗಂಗೆಯ ಮತ್ತು ಸೂರ್ಯನ ಮಗಳಾದ ಯಮುನೆಯರ ಜಲತರಂಗಗಳು ಶ್ವೇತ ಮತ್ತು ಕೃಷ್ಣ ಚಾಮರಗಳಾಗಿ ವಿರಾಜಮಾನವಾಗಿವೆಯೋ, ಎಲ್ಲಿ ಅಕ್ಷಯವಟವೃಕ್ಷವು ಹಸಿರುವರ್ಣದ ಛತ್ರಿಯಾಗಿದೆಯೋ ಅಂತಹ ತೀರ್ಥರಾಜನೆಂದು ಪ್ರಸಿದ್ಧವಾದ ಪ್ರಯಾಗವು ಜಯಶೀಲವಾಗಲಿ. ॥ ೩೬ ॥ ಪ್ರಸಿದ್ಧವಾಗಿರುವ ''ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಅವಂತಿಕಾ, ದ್ವಾರಾವತೀಪುರೀ ಚೈವ ಸಪ್ತೈತೇ ಮೋಕ್ಷದಾಯಕಾ'' ಎಂಬ ಉಕ್ತಿಯಂತೆ ಈ ಏಳು ಪಟ್ಟಣಗಳೂ ಮೋಕ್ಷಪ್ರದವಾದವುಗಳೇ ಆದರೂ ಅವುಗಳು ತೀರ್ಥರಾಜನಾದ ಶ್ರೀಪ್ರಯಾಗದ ಪರಿಚಾರಕರುಗಳಂತೆಯೇ, ರಾಜಾಜ್ಞಾ ಪಾಲಕರಾಗಿ ಇರುವ ಸ್ತ್ರೀಯರೇ ಸರಿ. ಕಾಶೀ ಕ್ಷೇತ್ರವು ಪ್ರಯಾಗಕ್ಷೇತ್ರದ ಸಮೀಪದಲ್ಲಿಯೇ ಇರುವುದರಿಂದ ತೀರ್ಥರಾಜನ ಆಜ್ಞಾಪಾಲನೆ ಮಾಡುವ ಪ್ರಧಾನ ಸ್ತ್ರೀಯ ಸ್ಥಾನದಲ್ಲಿದ್ದು ರಾಜನ ಆಜ್ಞಾ ಮೇರೆಗೆ ಎಲ್ಲರಿಗೂ ಮೋಕ್ಷವನ್ನು ಕೊಡುತ್ತಿದೆ. ಯಾವ ಕಾಶೀಕ್ಷೇತ್ರದಲ್ಲಿ ಭಗವಂತನು ಗುಣಾತಿಶಯದಿಂದ ಪ್ರಕಾಶಿಸುತ್ತಿದ್ದಾನೋ ಯಾವ ಕಾಶೀಕ್ಷೇತ್ರವು ಸಾಮೀಪ್ಯದಲ್ಲಿ ತೀರ್ಥ-ರಾಜನ ಇಂಗಿತವನ್ನರಿತು ಪಟ್ಟದ ರಾಣಿಯ ಪಾತ್ರವನ್ನಾಚರಿಸುತ್ತಾ ಎಲ್ಲರಿಗೂ ಮೋಕ್ಷವನ್ನು ಕರುಣಿಸುತ್ತಿರುವುದೋ ಅಂತಹ ತೀರ್ಥರಾಜನಾದ ಪ್ರಯಾಗವು ಬ್ರಹ್ಮಾಂಡದಲ್ಲಿ ಜಯಶೀಲ-ವಾಗಲಿ! ॥ ೩೭ ॥ ಶ್ರೀವೇಣೀಮಾಧವದೇವರ ಆಜ್ಞಾದಂತೆ ಪ್ರತಿ ವರ್ಷದಲ್ಲೂ ಸೂರ್ಯನು ಮಾಘಮಾಸದಲ್ಲಿ ಮಕರರಾಶಿಯಲ್ಲಿದ್ದಾಗ ಲಕ್ಷಾಂತರ ಭಕ್ತರು ಈ ತೀರ್ಥರಾಜನಲ್ಲಿ ಸ್ನಾನ ಮಾಡುವುದಕ್ಕಾಗಿ ಪ್ರಯಾಗಕ್ಕೆ ಬರುತ್ತಾರೆ. ॥ ೩೮ ॥ ಪ್ರಯಾಗದಲ್ಲಿ ವಾಸ ಮಾಡುವ ಮನುಷ್ಯರ ಸ್ಪರ್ಶಮಾತ್ರದಿಂದ ಜನಗಳ ಸ್ವರ್ಗಸ್ಥರಾದ ಪಿತೃಗಳೂ ಮೋಕ್ಷವನ್ನು ಪಡೆಯುತ್ತಾರೆ. ಹೀಗಿರಲು ಭೂಲೋಕವಾಸಿಗಳ ವಿಷಯದಲ್ಲಿ ಹೆಚ್ಚಿಗೆ ಏನು ಹೇಳುವುದು? ॥ ೩೯ ॥ ತೀರ್ಥರಾಜನಾಗಿ ಇರುವುದರ ದೆಸೆಯಿಂದಲೇ ಮೂರು ಲೋಕಗಳಲ್ಲಿ (ಸ್ವರ್ಗ, ಭೂ, ಪಾತಾಳ) ಇರುವವರ ಪಾಪಗಳನ್ನೆಲ್ಲಾ ನಾಶಮಾಡುವ ಸಾಮರ್ಥ್ಯವು ಈ ಪ್ರಯಾಗಕ್ಷೇತ್ರಕ್ಕೇ ಇದೆ. ॥ ೪೦ ॥ ಪರರ ಹಿತಕ್ಕಾಗಿ ಇಲ್ಲಿಗೆ ಪಾತಾಳಲೋಕಕ್ಕೆ ಆಗಮಿಸಿರುವ ತಾವುಗಳು ಯಾವುದಕ್ಕೋಸ್ಕರ ಬಂದಿದ್ದೀರೋ ಆ ಮುಖ್ಯ ವಿಷಯವಾದ ಇದನ್ನು ಅವಶ್ಯ ತಿಳಿಯಿರಿ. ಏನೆಂದರೆ ಮೂರು ಲೋಕಗಳಿಗೂ, ಎಲ್ಲ ತೀರ್ಥಗಳಿಗೂ ಪ್ರಯಾಗ ಕ್ಷೇತ್ರವೇ ತೀರ್ಥಗಳ ರಾಜನು. ॥ ೪೧ ॥ ಆದ್ದರಿಂದ ಯಾರು ತಾನೇ ಇಂತಹ ಪ್ರಯಾಗದ ಮಾಹಾತ್ಮ್ಯೆಯನ್ನು ವರ್ಣಿಸಿಯಾರು? ಆದರೂ ತಾವು ಪ್ರಶ್ನೆ ಮಾಡಿದ್ದರಿಂದ ಇಷ್ಟನ್ನು ಉತ್ತರ ಕೊಡುವ ಉದ್ದೇಶ್ಯದಿಂದ ಹೇಳಿದ್ದೇನೆ. ॥ ೪೨ ॥

॥ ಪ್ರಯಾಗಮಾಹಾತ್ಮ್ಯೆಯ ನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಮೋಽಧ್ಯಾಯಃ ॥ ೫ ॥

**ಋಷಯ ಊಚುಃ—**

ಸೂತ ಪ್ರತ್ಯುಪಕಾರಜ್ಞ ವದ ನೋ ವದತಾಂ ವರ ।
ಮಾಹಾತ್ಮ್ಯಂ ತೀರ್ಥರಾಜಸ್ಯ ತತ್ರ ತೃಷ್ಣಾಯತೇ ಮನಃ ॥ ೧ ॥

## ॥ ಐದನೆಯ ಅಧ್ಯಾಯವು ॥

**ಋಷಿಗಳು ಕೇಳಿದರು—**

ಪ್ರತ್ಯುಪಕಾರದ ತಿಳಿವಳಿಕೆಯುಳ್ಳ ಸೂತರೇ ! ತಾವು ನಿರ್ವಚನ ಮಾಡುವವರಲ್ಲಿ ಶ್ರೇಷ್ಠರು. ಅದರಲ್ಲಿಯೂ ತೀರ್ಥರಾಜನಾದ ಈ ಪ್ರಯಾಗದ ವಿಷಯವಾಗಿ ತಾವು ಉತ್ತಮ ವಕ್ತೃಗಳು. ನಮಗೆ ಇನ್ನೂ ತೃಪ್ತಿಯಾಗಿಲ್ಲ. ಇನ್ನೂ ಕೇಳಬೇಕೆಂದು ಅಪೇಕ್ಷೆಯಿದೆ ಆದ್ದರಿಂದ ಹೇಳುವವರಾಗಿ. ॥ ೧ ॥

**ಸೂತ ಉವಾಚ—**

ಶೃಣ್ವಂತು ತೀರ್ಥರಾಜಸ್ಯ ಮಾಹಾತ್ಮ್ಯಂ ತನ್ಮುನೀಶ್ವರಾಃ ।
ಶೇಷೇಣ ಸನಕಾದಿಭ್ಯೋ ವ್ಯಾಸೇನೋಕ್ತಂ ಮಮಾಂತಿಕೇ ॥ ೨ ॥
ಪ್ರಯಾಗಸ್ಮೃತಿಸಂಜಾತಪರಾಹ್ಲಾದಪರಿಪ್ಲುತಃ ।
ಕಂಟಕೋದ್ಭಿನ್ನಸರ್ವಾಂಗೋ ನಾಗರಾಜೋಽಬ್ರವೀತ್ಪುನಃ ॥ ೩ ॥

**ಸೂತರು ಹೇಳಿದರು—**

ಹೇ ಮುನಿಶ್ರೇಷ್ಠರೇ, ತೀರ್ಥರಾಜರ ಮಾಹಾತ್ಮ್ಯೆಯನ್ನು ಹೇಳುತ್ತೇನೆ, ಕೇಳುವವರಾಗಿ. ಯಾವ ಮಾಹಾತ್ಮ್ಯೆಯನ್ನು ಶೇಷದೇವರು ಸನಕಾದಿ ಮುನಿಗಳಿಗೆ ಹೇಳಿದರೋ ಮತ್ತು ವ್ಯಾಸ ಮುನೀಶ್ವರರು ನನಗೆ ಉಪದೇಶಿಸಿದರೋ, ಅದನ್ನೇ ಈಗ ನಾನು ತಮಗೆ ಹೇಳುತ್ತೇನೆ. ॥ ೨ ॥ ಪ್ರಯಾಗದ ಸ್ಮರಣೆಯಿಂದ ಉಂಟಾದ ಆನಂದದಿಂದ ಉಬ್ಬಿ ಕೊಬ್ಬಿ ಹೋದವರಾಗಿ, ಸಮಸ್ತ ಅಂಗಾಂಗಗಳಲ್ಲೂ ರೋಮಾಂಚಿತರಾಗಿ ಶ್ರೇಷ್ಠರಾದ ನಾಗರಾಜರು (ಶೇಷದೇವರು) ಪುನಃ ಹೇಳುವರಾದರು. ॥ ೩ ॥

**ಶೇಷ ಉವಾಚ—**

ವರ್ಣನಾತ್ತೀರ್ಥರಾಜಸ್ಯ ಹೃತ್ಕಂಠಾಕುಲಿತೇಂದ್ರಿಯಾಃ ।
ಗಚ್ಛಾಮೋಽಥ ವಯಂ ಸರ್ವೇ ಋಷಯಸ್ತಸ್ಯ ದರ್ಶನೇ ॥ ೪ ॥
ಇತ್ಯುಕ್ತ್ವಾ ವ್ಯಚರಸ್ಸರ್ವೇ ವಾಸುಕಿಪ್ರಮುಖಾದಯಃ ।
ನಾಗಾಶ್ಚ ನಾಗಕನ್ಯಾಶ್ಚ ನಾಗಲೋಕನಿವಾಸಿನಃ ॥ ೫ ॥
ಶೇಷೋಽನಂತಶ್ಚ ಕಪಿಲಃ ಕಾಲೀಯಃ ಶಂಕಪಾಲಕಃ ।
ಕಾರ್ಕೋಟಕಮಹಾಪದ್ಮಧೃತರಾಷ್ಟ್ರಧನಂಜಯಾಃ ॥ ೬ ॥
ಏತೇ ಚ ಸಪರಿವಾರಾಸ್ತಥಾ ಚಾನ್ಯೇಽಪ್ಯಶೇಷತಃ ।
ಅನೇಕರತ್ನಾಭರಣೈರ್ಭೂಷಿತಾ ದೀಪ್ತಕಾಂತಯಃ ॥ ೭ ॥

ಸಪ್ತಪಾತಾಲಸಂಸ್ಥಾನಿ ಯಾನಿ ತೀರ್ಥಾನಿ ತಾನ್ಯಪಿ ।
ಸ್ವರಾಜದರ್ಶನಾಹ್ಲಾದಪರಿಹೃಷ್ಟಾನಿ ತೈಸ್ಸಮಮ್ ॥ ೮ ॥
ಸ್ಥಾನಾದೀನಿ ಪರಿತ್ಯಜ್ಯ ವಾಹನಾದಿ ಚ ಮಂಡಲೇ ।
ಆಗತ್ಯ ದಂಡವತ್ಪೂರ್ವಂ ಪ್ರಣಿಪತ್ಯ ಪುನಃ ಪುನಃ ॥ ೯ ॥
ನೃತ್ಯಗಾಯನಸಂತೋಷಕರತಾಲಪುರಸ್ಸರಮ್ ।
ಜಯಶಬ್ದಂ ನಮಶ್ಶಬ್ದಂ ವಾದ್ಯಶಬ್ದಂ ಚ ಚಕ್ರಿರೇ ॥ ೧೦ ॥
ತತ್ಕ್ಷೇತ್ರಸ್ಯೋತ್ತರೇ ಭಾಗೇ ವಾಸುಕಿಪ್ರಮುಖಾಸ್ತತಃ ।
ಸ್ವಂ ಸ್ವಂ ಸ್ಥಾನಮಧಿಷ್ಠಾಯ ಬ್ರಹ್ಮಪುತ್ರೈಸ್ಸಮಂ ಸ್ಥಿತಾಃ ॥ ೧೧ ॥
ತತೋ ಬ್ರಹ್ಮಾದಯೋ ದೇವಾ ಆಜಗ್ಮುಃ ಸಪರಿಚ್ಛದಾಃ ।
ಮಂದಾಕಿನ್ಯಾದಯೋ ನದ್ಯಸ್ತೀರ್ಥಾನಾಂ ಯಾಶ್ಚ ಕೋಟಯಃ ॥ ೧೨ ॥
ಮಹಾನುದ್ಘೋಷ ಆಕಾಶೇ ತಾವದಾಸೀನ್ಮನೋರಮಃ ।
ತಾಲವೀಣಾಮೃದಂಗಾನಾಂ ಧ್ವನಯಸ್ಸಂಬಭೂವಿರೇ ॥ ೧೩ ॥
ಗಗನಾದವತೀರ್ಯಾಥ ಗಂಧರ್ವಾ ನನೃತುರ್ಜಗುಃ ।
ವಿಮಾನಾನಿ ಪರಿತ್ಯಜ್ಯ ಲುಲುಟುರ್ದೇವತಾಗಣಾಃ ॥ ೧೪ ॥
ಆಕಾರಾಕಾರವದ್ವೀಕ್ಷ್ಯ ಕ್ಷೇತ್ರಂ ಬ್ರಹ್ಮಾದಯೋಽಮರಾಃ ।
ಗಂಧರ್ವಪ್ರಮುಖೈಸ್ಸಾಕಮವತಸ್ಥುರ್ಯಥಾಸುಖಮ್ ॥ ೧೫ ॥
ಭುವಿಸ್ಥಾನಿ ಚ ತೀರ್ಥಾನಿ ಪುಷ್ಕರಾದೀನ್ಯನಂತರಮ್ ।
ಬ್ರಹ್ಮರ್ಷಯೋ ವಸಿಷ್ಠಾದ್ಯಾಸ್ತಥಾ ರಾಜಸುರರ್ಷಯಃ ॥ ೧೬ ॥
ಆಜಗ್ಮಿರೇ ಚ ದಿಕ್ಪಾಲಾ ಇಂದ್ರಾಗ್ನೀ ಯಮನಿರ್ಋತೀ ।
ವರುಣಃ ಪವನಃ ಸೋಮ ಈಶಾನಶ್ಚ ತಪೋಧನಾಃ ॥ ೧೭ ॥
ಪರ್ವತಾಸ್ಸಾಗರಾಸ್ಸರ್ವೇ ಸ್ಥಾನಾಧಿಪತಯಸ್ತಥಾ ।
ಸಮಾಗಮ್ಯ ಯಥಾಸ್ಥಾನಂ ಸಂಸ್ಥಿತಾ ಕ್ಷೇತ್ರಮಂಡಲೇ ॥ ೧೮ ॥
ತಸ್ಮಿನ್ ಕ್ಷೇತ್ರೇಽಥ ತೇ ಸರ್ವೇ ತೀರ್ಥರಾಜಪ್ರಭಾವತಃ ।
ಇಂದೋಃ ಪುರ ಇವೋಡೂನಿ ನಿಷ್ಪ್ರಭಾಸ್ಸಮಜಜ್ಞಿರೇ ॥ ೧೯ ॥
ತದೋಚುಸ್ತನ್ಮಿಥಃ  ಕ್ಷೇತ್ರಮಿದಂ ದೇವೇನ ವರ್ಣಿತಮ್ ।
ಸರ್ವೇಭ್ಯೋ ದೃಶ್ಯತೇ ಶ್ರೇಷ್ಠಂ ನೈತಾದೃಕ್ಕ್ವಾಪಿ ದೃಶ್ಯತೇ ॥ ೨೦ ॥
ಸರ್ವೇಷಾಮತ್ರ ತೇಜಾಂಸಿ ಲಘುತಾಂ ಯಾತಿ ಪಶ್ಯತ ।
ಸ್ವೇ ಸ್ವೇ ಸ್ಥಾನೇ ಯಥಾ ಭಾಂತಿ ನ ತಥಾಪಿ ವಿಭಾಂತಿ ವೈ ॥ ೨೧ ॥
ಅತ್ರ ಕಿಂ ಕಾರಣಂ ಸರ್ವೇ ವಿವದಂತು ಶ್ರುತೇರ್ಬಲಾತ್ ।
ಪಶ್ಚಾತ್ಸಿದ್ಧಾಂತಕರ್ತಾರಃ ಪ್ರಕುರ್ವಂತು ವಿನಿಶ್ಚಯಮ್ ॥ ೨೨ ॥
ತತೋ ನೋಚುರ್ಮಿಥಃ ಸರ್ವೇ ಸಂದೇಹಾಪನ್ನಮಾನಸಾಃ ।
ಆಪನ್ನಾಃ ಕಾಷ್ಠಮೌನಿತ್ವಂ ಸ್ಮರಂತಸ್ತೀರ್ಥನಾಯಕಮ್ ॥ ೨೩ ॥

ಮಹತೀಂ ಕ್ವಣಯನ್ ಗಾಯನ್ವರೇರ್ಗುಣಗಣಾನ್ಮುಹುಃ ।
ತಾವನ್ನಾರದದೇವರ್ಷಿರಾಜಗಾಮ ವಿಹಾಯಸಾ ॥ ೨೪ ॥
ಭ್ರಾಂತಾನಚೇಷ್ಟಾಸ್ತಾನ್ದೃಷ್ಟ್ವಾ ದ್ರಾಗ್ಗತ್ವಾ ಚ ತದಂತಿಕಮ್ ।
ಪ್ರೋವಾಚ ದೇವದೇವೇಶಾನ್ಸ್ವರ್ಗಲೋಕನಿವಾಸಿನಃ ॥ ೨೫ ॥

**ಶೇಷದೇವರು ಹೇಳಿದರು—**

ತೀರ್ಥರಾಜನ ವರ್ಣನೆಯ ದೆಸೆಯಿಂದ ನಮ್ಮ ಸಕಲ ಇಂದ್ರಿಯಗಳೂ ಉದ್ವೇಗಗೊಂಡಿವೆ ಮತ್ತು ಮನಸ್ಸು ಕಾತರಗೊಳ್ಳುತ್ತಿದೆ. ನಾವೆಲ್ಲರೂ ತೀರ್ಥರಾಜನ ದರ್ಶನಕ್ಕೆ ಹೊರಡೋಣ. ॥ ೪ ॥ ಈ ರೀತಿ ಹೇಳಿಸಿಕೊಳ್ಳಲ್ಪಟ್ಟ ಸನಕಾದಿಗಳು ಪ್ರಯಾಗಕ್ಷೇತ್ರಕ್ಕೆ ಶೇಷದೇವರ ಸಹಿತರಾಗಿ ಹೊರಟೇಬಿಟ್ಟರು. ಅವರ ಜೊತೆಗೆ ವಾಸುಕಿ, ನಾಗರು, ನಾಗ ಕನ್ಯೆಯರು ಮತ್ತು ನಾಗಲೋಕದ ನಿವಾಸಿಗಳು, ॥ ೫ ॥ ಶೇಷ, ಅನಂತ, ಕಪಿಲ, ಕಾಲಿಯ, ಶಂಕಪಾಲ, ಕಾರ್ಕೋಟಕ, ಮಹಾಪದ್ಮ, ಧೃತರಾಷ್ಟ್ರ ಮತ್ತು ಧನಂಜಯ ಈ ಹೆಸರುಳ್ಳ ನಾಗಶ್ರೇಷ್ಠರು, ॥ ೬ ॥ ತಮ್ಮ ತಮ್ಮ ಪರಿವಾರಗಳೊಡನೆ ಹೊರಟರು. ಅವರೆಲ್ಲರೂ ರತ್ನಾಭರಣಗಳಿಂದ ಅಲಂಕೃತರಾಗಿ ಇದ್ದು ಪ್ರಕಾಶಮಾನವಾಗಿ ಕಾಣುತ್ತಿದ್ದರು. ॥ ೭ ॥ ಏಳು ಪಾತಾಲದಲ್ಲಿ ಪ್ರಸಿದ್ಧವಾದ ಯಾವ ತೀರ್ಥಗಳಿವೆಯೋ ಅವುಗಳೆಲ್ಲವೂ ತಮ್ಮ ರಾಜನಾದ ತೀರ್ಥರಾಜನ ದರ್ಶನದಲ್ಲಿ ಉತ್ತೇಜಿತರಾಗಿ ಸಂತೋಷಯುಕ್ತರಾಗಿ ಅವರೊಡನೆ ಹೊರಟರು. ॥ ೮ ॥ ಇವರೆಲ್ಲರೂ ಪ್ರಯಾಗಕ್ಷೇತ್ರದ ಸಮೀಪಕ್ಕೆ ಬಂದಂತೆ ತಮ್ಮ ತಮ್ಮ ಆಸನಗಳಿಂದೆದ್ದು ತಮ್ಮ ತಮ್ಮ ವಾಹನಗಳಿಂದ ಇಳಿದು ಪ್ರಯಾಗಕ್ಷೇತ್ರಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದ್ದಲ್ಲದೇ ಪುನಃ ಪುನಃ ನಮಸ್ಕಾರ ಮಾಡಿದರು. ॥ ೯ ॥ ನೃತ್ಯಗಾಯನಗಳ ಸಂತೋಷದಲ್ಲಿ ಕರತಾಡನ ಮಾಡಿ ಜಯಕಾರ ಮಾಡುತ್ತ "ನಮಸ್ಕಾರ ನಮೋ ನಮಃ" ಎಂದು ಘೋಷಿಸುತ್ತ ವಾದ್ಯಗಳನ್ನು ಮೊಳಗಿಸಿದರು. ॥ ೧೦ ॥ ಆ ಕ್ಷೇತ್ರದ ಉತ್ತರಭಾಗದಲ್ಲಿ ವಾಸುಕಿಯೇ ಮೊದಲಾದವರು ತಮ್ಮ ತಮ್ಮ ಸ್ಥಾನಗಳನ್ನು ಅಲಂಕರಿಸಿಕೊಂಡು ಸನಕಾದಿಗಳೊಡನೆ ಕುಳಿತರು. ॥ ೧೧ ॥ ಆಗ ಬ್ರಹ್ಮಾದಿದೇವತೆಗಳು ತಮ್ಮ ತಮ್ಮ ಅನುಚರರೊಡನೆ ಆಗಮಿಸಿದರು. ಮಂದಾಕಿನಿಯೇ ಮೊದಲಾದ ಕೋಟಿನದಿಗಳೂ (ನದೀದೇವತೆಗಳೂ) ಬಂದು ಸೇರಿದವು. ॥ ೧೨ ॥ ಮನಸ್ಸಿಗೆ ಆಪ್ಯಾಯಮಾನಕರವಾದ ದೊಡ್ಡ ದೊಡ್ಡ ಜಯಘೋಷಗಳು ಆಕಾಶದಲ್ಲಿ ಮೊಳಗಿದವು. ತಾಳ, ವೀಣೆ, ಮೃದಂಗ ಇವುಗಳ ಧ್ವನಿಗಳೂ ಕೇಳಿಬಂದುವು. ॥ ೧೩ ॥ ಗಂಧರ್ವರು ಆಕಾಶದಿಂದ ಇಳಿದುಬಂದು ನರ್ತನ ಮಾಡಿದರು. ದೇವತೆಗಳು ವಿಮಾನಗಳಿಂದ ಗುಂಪುಗುಂಪಾಗಿ ಇಳಿದು ಬಂದು ಸಂತೋಷದಿಂದ ಪ್ರಯಾಗದ ಮಣ್ಣಿನಲ್ಲಿ ಹೊರಳಾಡಿದರು. ॥ ೧೪ ॥ ಅವರ ಆಕಾರಕ್ಕೆ ತಕ್ಕಂತೆ ಉಡುಪುಗಳನ್ನು ಧರಿಸಿದ್ದ ಬ್ರಹ್ಮದೇವನರೇ ಮೊದಲಾದ ದೇವತೆಗಳು ಗಂಧರ್ವರುಗಳಿಂದ ಸಹಿತರಾಗಿ ಆ ಕ್ಷೇತ್ರವನ್ನು ಸುತ್ತುವರಿದು ತಮಗೆ ಹೇಗೆ ಸುಖವೋ ಹಾಗೆ ನೆಲಸಿದರು. ॥ ೧೫ ॥ ಭೂಮಂಡಲದ ಎಲ್ಲ ತೀರ್ಥದೇವತೆಗಳೂ, ಪುಷ್ಕರಾದಿ ಕ್ಷೇತ್ರಗಳ ದೇವತೆಗಳೂ, ಅನಂತರ ವಶಿಷ್ಠರೇ ಮೊದಲಾದ ಬ್ರಹ್ಮರ್ಷಿಗಳೂ, ದೇವರ್ಷಿಗಳೂ ಮತ್ತು ರಾಜರ್ಷಿಗಳೂ ಬಂದರು. ॥ ೧೬ ॥ ಅನಂತರ ದಿಕ್ಪಾಲಕರುಗಳಾದ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು(ಪವನ), ಕುಬೇರ(ಸೋಮ), ಈಶಾನ ಇವರುಗಳು ಬಂದು ಸೇರಿದರು. ಇವರುಗಳೆಲ್ಲರೂ ತಪೋಧನರು. ॥ ೧೭ ॥ ಅನಂತರ ಪರ್ವತಾಧಿಪತಿಗಳು,

ಸಾಗರಾಧಿಪತಿಗಳು ಮತ್ತು ಅನ್ಯ ಸ್ಥಾನಾಧಿಪತಿಗಳು ಬಂದು ಆ ಕ್ಷೇತ್ರದಲ್ಲಿ ಅವರವರ ಸ್ಥಾನಗಳಲ್ಲಿ ಮಂಡಿಸಿದರು. ॥ ೧೮ ॥ ಈ ತೀರ್ಥರಾಜನ ಪ್ರಭೆಯ ಮುಂದೆ ಅವರೆಲ್ಲರೂ ಆ ಕ್ಷೇತ್ರದಲ್ಲಿ ಚಂದ್ರನ ಮುಂದೆ ನಕ್ಷತ್ರಗಳು ಕ್ಷೀಣಪ್ರಕಾಶಿಗಳಾಗಿ ತೋರುವಂತೆ ತೋರಿದರು. ॥ ೧೯ ॥ ಆಗ ಅವರೆಲ್ಲರೂ ತಮ್ಮ ತಮ್ಮಲ್ಲಿಯೇ "ಶೇಷದೇವರಿಂದ ವರ್ಣಿತವಾದ ಕ್ಷೇತ್ರವು ಇದೇ. ಎಲ್ಲ ಕ್ಷೇತ್ರಗಳಿಗಿಂತಲೂ ಇದು ಶ್ರೇಷ್ಠವೆಂದು ಕಾಣುವುದು ಮತ್ತು ಇದಕ್ಕೆ ಸಾಟಿಯಾಗುವ ಕ್ಷೇತ್ರವನ್ನು ನಾವು ಎಲ್ಲಿಯೂ ಕಂಡಿಲ್ಲ" ಎಂದುಕೊಂಡರು. ॥ ೨೦ ॥ ನಮ್ಮ ಎಲ್ಲರ ತೇಜಸ್ಸೂ ಇದರ ತೇಜಸ್ಸಿನ ಮುಂದೆ ಕಡಿಮೆಯೇ ಇದೆ. ತಮ್ಮ ತಮ್ಮ ಸ್ಥಾನಗಳಲ್ಲಿ ಎಷ್ಟೆಷ್ಟು ಬೆಳಗಿದುವೋ ಅಷ್ಟು ಕೂಡ ಇಲ್ಲಿ ಇಲ್ಲ. ॥ ೨೧ ॥ ಇದಕ್ಕೆ ಏನು ಕಾರಣವೋ ಅದನ್ನು ಜ್ಞಾನಿಗಳು ವೇದದ ಆಧಾರದಿಂದ ವಿವಾದ ಮಾಡಲಿ; ಅನಂತರ ಸಿದ್ಧಾಂತಿಗಳು ತೀರ್ಮಾನಿಸಿ ಹೇಳಲಿ. ॥ ೨೨ ॥ ಹೀಗೆ ಅಂದುಕೊಂಡು ಪರಸ್ಪರ ಮಾತನಾಡುವುದನ್ನು ನಿಲ್ಲಿಸಿ, ಸಂದೇಹಗೊಂಡ ಬುದ್ಧಿಯಲ್ಲೇ ಉಳಿದರು. ಈ ರೀತಿಯಾಗಿ ಈ ತೀರ್ಥರಾಜನನ್ನು ನೆನೆಸಿಕೊಂಡು ಮರದ ತೊಲೆಯಂತೆ (ಕಾಷ್ಠದಂತೆ) ಮೌನದಿಂದ ಇದ್ದರು. ॥ ೨೩ ॥ ಆಗ "ಮಹತೀ" ಎಂಬ ಹೆಸರಿನ ತಮ್ಮ ವೀಣೆಯನ್ನು ನುಡಿಸುತ್ತಾ ಶ್ರೀ ಹರಿಯ ಗುಣಗಳನ್ನು ಪದೇ ಪದೇ ಹಾಡುತ್ತಾ ಶ್ರೀಮನ್ನಾರದ ದೇವರ್ಷಿಯು ಆಕಾಶದಿಂದ ಅಲ್ಲಿಗೆ ಬಂದಿಳಿದರು. ॥ ೨೪ ॥ ಭ್ರಾಂತಿಯಿಂದ ಏನು ಮಾಡಲೂ ತೋಚದೆ ಕುಳಿತಿದ್ದ ಮತ್ತು ಏನನ್ನೂ ಮಾತನಾಡದೆ ಇದ್ದ ಸ್ವರ್ಗವಾಸಿಗಳಾದ ದೇವಶ್ರೇಷ್ಠರುಗಳನ್ನು ಕುರಿತು ನಾರದರು ಈ ರೀತಿ ಹೇಳಿದರು. ॥ ೨೫ ॥

ಶ್ರೀನಾರದ ಉವಾಚ—

> ಭೋ ! ಭೋ ! ವೃಂದಾರಕಾಸ್ಸರ್ವೇ ಕಾರ್ಯಾಕಾರ್ಯವಿಚಕ್ಷಣಾಃ ।
> ಕಸ್ಮಾದತ್ರ ಸಮಾಯಾತಾಃ ಕೇನ ಪುಣ್ಯೇನ ಚೋದಿತಾಃ ॥ ೨೬ ॥
> ಕಿಂ ತಪಃ ಫಲಿತಂ ಕಿಂ ವಾ ಸಮಾಜಸ್ಯ ಚ ಕಾರಣಮ್ ।
> ಕುತೋ ವಾ ಭ್ರಾಂತತಾ ವೋಽದ್ಯ ಕುತೋ ನಿರ್ಮಲತಾ ಕೃತಾ ॥ ೨೭ ॥
> ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ ।
> ಇತಿ ಶಾಸ್ತ್ರೀಯವಚನಾತ್ಸಂಶಯೋ ಮಾಂ ರುರುಕ್ಷತಿ ॥ ೨೮ ॥
> ವಿಚಿತ್ರಾಣಿ ತು ಕರ್ಮಾಣಿ ವಿಚಿತ್ರಾ ಗತಯಸ್ತಥಾ ।
> ಚಿತ್ರಾ ಪ್ರವೃತ್ತಯಸ್ತೇನ ದೇಹಿನಾಂ ಮತಯಸ್ತಥಾ ॥ ೨೯ ॥
> ಅಹೋ ! ಕಿಮಿದಮಾಶ್ಚರ್ಯಂ ಸರ್ವೇಷಾಂ ಫಲಿತಂ ತಪಃ ।
> ಯೇನ ಚಿತ್ರಾಮತಿಶ್ಚೈಕಾಕಾರಾ ಜಾತಾ ಸುರೋತ್ತಮಾಃ ॥ ೩೦ ॥
> ಅತೋ ನಿವೇದ್ಯತಾಂ ಶೀಘ್ರಂ ಅತ್ರಾಗಮನಕಾರಣಮ್ ।
> ಪ್ರಾಪ್ತೇಽರ್ಥೇಽವಿಲಂಬಂತಿ ಮನೀಷಿಣ ಇತಿ ಶ್ರುತಿಃ ॥ ೩೧ ॥

ಶ್ರೀನಾರದರು ಹೇಳಿದರು—

"ಕಾರ್ಯಾಕಾರ್ಯದಲ್ಲಿ ಕುಶಲಿಗಳಾದ ಎಲೈ ದೇವತೆಗಳಿರಾ ! ಯಾವ ಕಾರಣದಿಂದ ಇಲ್ಲಿ ಕಲೆತಿದ್ದೀರಿ ? ನೀವುಗಳು ಯಾವ ಪುಣ್ಯದಿಂದ ಪ್ರಚೋದಿತರಾಗಿದ್ದೀರಿ? ॥ ೨೬ ॥ ನೀವೆಲ್ಲರೂ

ಸಭೆ ಸೇರಿರಲು ಕಾರಣವೇನು? ನಿಮ್ಮ ತಪಸ್ಸು ಸಿದ್ಧಿಯನ್ನು ಪಡೆದಿರಬಹುದಷ್ಟೆ! ನಿಮಗೆ ಬಂದಿರುವ ಭ್ರಾಂತಿಯಾದರೂ ಏನು? ಅದು ಹೇಗೆ ತಾನೇ ನಿವಾರಣೆಯಾದೀತು? ॥ ೨೭ ॥ ಪ್ರಯೋ-ಜನವನ್ನು ಉದ್ದೇಶ್ಯವಾಗಿಟ್ಟುಕೊಳ್ಳದೇ ಮೂರ್ಖನೂ ಕೂಡ ಯಾವ ಕಾರ್ಯದಲ್ಲಿಯೂ ಪ್ರವೃತ್ತ-ನಾಗುವುದಿಲ್ಲ. ಈ ರೀತಿಯಾಗಿ ಶಾಸ್ತ್ರವಚನವಿರುವುದರಿಂದ ನಾನೂ ಸಂಶಯಗ್ರಸ್ತನಾಗಿದ್ದೇನೆ. ॥ ೨೮ ॥ ಜನರು ಆಚರಿಸುವ ಕರ್ಮಗಳೂ ಮತ್ತು ಅವಲಂಬಿಸುವ ಮಾರ್ಗಗಳೂ ನಾನಾ ಬಗೆಯದ್ದಾಗಿದ್ದು ವಿಚಿತ್ರವಾಗಿರುತ್ತದೆ. ಜೀವಿಗಳ ಯೋಚನೆಗಳೂ ಬಗೆಬಗೆಯಾಗಿರುವುವು. ಆದ್ದರಿಂದ ಅವರ ಪ್ರವೃತ್ತಿಯೂ ಬಗೆಬಗೆಯಾಗಿರುತ್ತವೆ. ॥ ೨೯ ॥ ಆಹಾ! ಇದೇನು ಆಶ್ಚರ್ಯವು! ನಿಮ್ಮೆಲ್ಲರ ತಪಸ್ಸು ಫಲಿಸಿರಬೇಕು ನಿಮ್ಮ ಬುದ್ಧಿಯು ಬೇರೆ ಬೇರೆ ವಿಧಗಳಾಗಿದ್ದರೂ ಪ್ರಸ್ತುತ ಅವುಗಳೆಲ್ಲ ಮತ್ತೈಕ್ಯದಿಂದ ಒಂದೇ ಆಕಾರವನ್ನು ಪಡೆದಿವೆ. ॥ ೩೦ ॥ ತಮ್ಮ ತಮ್ಮ ಆಸೆಗಳು ನೆರವೇರುವುದಿದ್ದರೆ ಜ್ಞಾನಿಗಳು ತಡ ಮಾಡುವುದಿಲ್ಲ; ಆದ್ದರಿಂದ ಶೀಘ್ರವಾಗಿ ಇಲ್ಲಿ ತಾವೆಲ್ಲ ಬಂದಿರುವುದರ ಕಾರಣವನ್ನು ಹೇಳಿರಿ. ॥ ೩೧ ॥ ಹೀಗೆಂದು ಕೇಳಿದರು.

**ಸೂತ ಉವಾಚ—**

**ಇತಿ ನಾರದವಾಗರ್ಥಮಾಕರ್ಣ್ಯ ವಿಬುಧಾದಯಃ ।**
**ನೈವೋತ್ತರಂ ದದುಸ್ತಸ್ಮೈ ತದ್ ಜ್ಞಾತ್ವಾ ಮುನಿರಬ್ರವೀತ್ ॥ ೩೨ ॥**

**ಸೂತರು ಹೇಳಿದರು—**

ಈ ರೀತಿಯಾಗಿ ಹೇಳಿದ ನಾರದರ ಮಾತನ್ನು ಆಲಿಸಿ ಕೇಳಿದ ದೇವತೆಗಳು ನಾರದರಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಇದನ್ನು ಅರಿತ ನಾರದರೇ ಹೇಳಿದರು. ॥ ೩೨ ॥

**ನಾರದ ಉವಾಚ—**

**ಗತಾನುಗತಿಕೋ ಲೋಕೋ ನ ಲೋಕಃ ಪಾರಮಾರ್ಥಿಕಃ ।**
**ಇತಿ ಪೌರಾಣಿಕೀ ವಾರ್ತಾ ಶ್ರುತಾ ದೃಷ್ಟಾsದ್ಯ ನಿಶ್ಚಿತಾ ॥ ೩೩ ॥**
**ಇತ್ಯುಕ್ತ್ವಾ ನಾರದಮುನಿರ್ದೇವಾದಿಗಣಸಂವೃತಃ ।**
**ಹೇತುಂ ಸರ್ವಾಗಮೇ ಜ್ಞಾತುಂ ಪಿತಾಮಹಮಥೋsನ್ವಗಾತ್ ॥ ೩೪ ॥**
**ಪಿತರಂ ಚ ತತಃ ಪ್ರಾಪ್ಯ ಪ್ರಣಮ್ಯ ವಿಧಿವನ್ಮುನಿಃ ।**
**ಕೃತಾಂಜಲಿಪುಟೋ ಭೂತ್ವಾ ವಾಗ್ಮಿಬ್ರ್ರಹ್ಮಾಣಮೈಡಯತ್ ॥ ೩೫ ॥**

**ನಾರದರು ಹೇಳಿದರು—**

''ಜನರು ಒಬ್ಬರು ಮಾಡಿದಂತೆ ಇನ್ನೊಬ್ಬರು ಮಾಡುತ್ತಾರೆ; ಆದರೆ ವಿಷಯದ ಒಳ ತತ್ತ್ವವನ್ನು ಅರ್ಥಮಾಡಿಕೊಂಡು ಯಾರೂ ಪ್ರವರ್ತಿಸುವುದಿಲ್ಲ'' ಹೀಗೆಂದು ಪುರಾಣಗಳಲ್ಲಿ ಹೇಳಿರುವ ವಾಕ್ಯವನ್ನು ಕೇಳಿದ್ದೆ ಮತ್ತು ಗಮನಿಸಿದ್ದೆ ; ಆದರೆ ಈಗ ಆ ವಾಕ್ಯದ ಸತ್ಯತೆಯು ನಿಶ್ಚಯವಾಯಿತು. ॥ ೩೩ ॥ ಹೀಗೆ ಹೇಳಿ, ನಾರದಮುನಿಗಳು ದೇವತೆಗಳಿಂದ ಕೂಡಿ ಪ್ರಯಾಗ-ಕ್ಷೇತ್ರದಲ್ಲಿ ಎಲ್ಲರೂ ಕಲೆತಿರುವ ಬಗ್ಗೆ ಕಾರಣವನ್ನು ತಿಳಿಯುವ ಸಲುವಾಗಿ ಚತುರ್ಮುಖ ಬ್ರಹ್ಮದೇವರನ್ನು ಸಂಧಿಸಿ, ॥ ೩೪ ॥ ಅನಂತರ ತಂದೆಯನ್ನು ನಮಸ್ಕರಿಸಿ ವಿಧಿವತ್ತಾಗಿ ಅರ್ಚನೆ ಮಾಡಿ ಕೈಮುಗಿದುಕೊಂಡು ಬ್ರಹ್ಮದೇವರನ್ನು ಕುರಿತು ಹೇಳುತ್ತಾರೆ—

ನಾರದ ಉವಾಚ—

ನಮಸ್ತೇ ದೇವದೇವೇಶ ಬ್ರಹ್ಮಣೇ ಪರಮಾತ್ಮನೇ ।
ಪುರುಷಾಯ ಪುರಾಣಾಯ ಶಾಶ್ವತಾಯಾಜರಾಯ ಚ ॥ ೩೬ ॥
ಸ್ವಯಂಭುವೇ ನಮಸ್ತುಭ್ಯಂ ತ್ವಷ್ಟ್ರೇ ಸರ್ವಾತ್ಮಸಾಕ್ಷಿಣೇ ।
ನಮೋ ಹಿರಣ್ಯಗರ್ಭಾಯ ವೇಧಸೇ ಪರಮಾತ್ಮನೇ ॥ ೩೭ ॥
ಹರಿಪ್ರಿಯಾಯ ದೇವಾಯ ದೇವಾನಾಂ ಹಿತಕಾರಿಣೇ ।
ಭಕ್ತೇಚ್ಛಾಕಲ್ಪವೃಕ್ಷಾಯ ಚತುರ್ವಕ್ತ್ರಾಯ ತೇ ನಮಃ ॥ ೩೮ ॥
ಸರ್ವಾಧ್ಯಾಯ ನಮಸ್ತುಭ್ಯಂ ಕೂಟಸ್ಥಾಯ ನಮೋ ನಮಃ ।
ನಮೋ ವೇದರಹಸ್ಯಾಯ ನಮಸ್ತೇ ವೇದಯೋನಯೇ ॥ ೩೯ ॥
ನಮಃ ಸ್ವಾನಂದರೂಪಾಯ ಸಾಕ್ಷಿಣೇ ಜಗತೇ ನಮಃ ।
ಅನಂತಾಯಾಪ್ರಮೇಯಾಯ ಸರ್ವಕಾರಣರೂಪಿಣೇ ॥ ೪೦ ॥
ಇತಿ ಸ್ತುತ್ವಾ ಪುನರ್ನತ್ವಾ ವಿಷ್ವಗ್ದೇವಗಣಾವೃತಃ ।
ಪ್ರಶ್ರಯಾವನತೋಽವೋಚತ್ ನಾರದೋ ಭಗವಾನೃಷಿಃ ॥ ೪೧ ॥

ನಾರದರು ಹೇಳಿದರು—

(ನಾರದರು ಚತುರ್ಮುಖ ಬ್ರಹ್ಮದೇವರನ್ನು ಸ್ತೋತ್ರ ಮಾಡಿದರು. ಈ ಅಧ್ಯಾಯದ ೩೬ ನೇ ಶ್ಲೋಕದಿಂದ ಆರಂಭಿಸಿ ೪೦ ನೇ ಶ್ಲೋಕದವರೆಗೆ ಇರುವ ಐದು ಶ್ಲೋಕಗಳಲ್ಲಿ ಕೇವಲ ಮುಖ್ಯಾರ್ಥದಲ್ಲಿ ಶ್ರೀನಾರಾಯಣದೇವರಿಗೆ ಅನ್ವಯವಾಗುವ ಪದಗಳನ್ನು ಶ್ರೀ ಚತುರ್ಮುಖಬ್ರಹ್ಮದೇವರನ್ನು ಸಂಬೋಧಿಸಲು ಪ್ರಯೋಗ ಮಾಡಿದ್ದಾರೆ. ಆದರೆ ಬ್ರಹ್ಮದೇವರ ಪರವಾಗಿ ಮುಖ್ಯಾರ್ಥದಲ್ಲಿ ಈ ಪದಗಳನ್ನು ಅರ್ಥಮಾಡಬಾರದು ಮತ್ತು ಅಮುಖ್ಯಾರ್ಥದಲ್ಲಿಯೇ ಅರ್ಥಮಾಡಬೇಕು. ಮಹಾಜ್ಞಾನಿಗಳಾದ ಶ್ರೀನಾರದರು ಅಮುಖ್ಯಾರ್ಥದಲ್ಲಿ ಈ ಪದಗಳ ಪ್ರಯೋಗವನ್ನು ಮಾಡಿರುವರು ಎಂದು ತಿಳಿಯಬೇಕು. ಬ್ರಹ್ಮಾಂತರ್ಯಾಮಿ ಪರಮಾತ್ಮನನ್ನೂ, ಬ್ರಹ್ಮದೇವರನ್ನೂ ಸಹ ಸ್ತುತಿಸಿದ್ದಾರೆ. ಈ ಕೆಳಗಿನ ಅನುವಾದದಲ್ಲಿ ಈ ದೃಷ್ಟಿಯಿಂದ ಅರ್ಥ ಹೇಳಲು ಪ್ರಯತ್ನ ಮಾಡಿದೆ. ಇದನ್ನು ಗುಣಗ್ರಾಹಿಗಳು ಸ್ವೀಕರಿಸುವರೆಂದು ಭಾವಿಸುವೆನು.)

ದೇವತೆಗಳಿಗೆ ಒಡೆಯನಾದ, ಪರಮಾತ್ಮನಾಗಿರುವ, ಪುರುಷನೆಂದು ವಾಚ್ಯನಾಗಿರುವ, ಪುರಾಣನಾಗಿರುವ, ಶಾಶ್ವತರಾಗಿರುವ, ಅಜರರಾಗಿರುವ ಶ್ರೀ ಚತುರ್ಮುಖ ಬ್ರಹ್ಮದೇವರೆ! ತಮಗೆ ನಮಸ್ಕಾರಗಳು ॥ ೩೬ ॥

(**ದೇವದೇವಃ**—ಬ್ರಹ್ಮಾಂಡದಲ್ಲಿರುವ ಎಲ್ಲ ದೇವತೆಗಳಿಗೆ ಸ್ವಾಮಿಯಾದ್ದರಿಂದ ಈ ಹೆಸರು.

**ಪರಮಾತ್ಮನೇ**—ಸರ್ವೋತ್ತಮನಾದ ಭಗವಂತನನ್ನೇ ಸ್ವಾಮಿಯಾಗಿವುಳ್ಳವರು ಆದ್ದರಿಂದ ಪರಮಾತ್ಮನೆಂದಿದ್ದಾರೆ. ಅಥವಾ ಉತ್ತಮ ಆತ್ಮರು ಜೀವೋತ್ತಮರೆಂದರ್ಥ. ವೇದೋಪನಿಷತ್ತುಗಳಲ್ಲಿ ಮತ್ತು ಶಾಸ್ತ್ರಗಳಲ್ಲಿ ವಾಯು ಮತ್ತು ಬ್ರಹ್ಮರನ್ನು ಜೀವೋತ್ತಮರು ಎಂದು ಕರೆದಿದ್ದಾರೆ. ಆದ್ದರಿಂದ ಬ್ರಹ್ಮನು ಪರಮಾತ್ಮಾ.

**ಪುರುಷಾಯ**—ವಾಯು ಮತ್ತು ಬ್ರಹ್ಮದೇವರನ್ನು ವೇದಶಾಸ್ತ್ರಗಳಲ್ಲಿ ಪುರುಷಶಬ್ದದಿಂದ ಕರೆದಿದ್ದಾರೆ. ''ಪುರಿ ಶೇತೇ ಇತಿ ಪುರುಷಃ'' ಎಂದು ಈ ಶಬ್ದಕ್ಕೆ ಮಾಯಾವಾದ ಖಂಡನದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಅಂದರೆ ಪ್ರಾಣಾಪಾನಾದಿಪಂಚಪ್ರಾಣಗಳಲ್ಲಿ ನಿಯಾಮಕನಾಗಿದ್ದು

ಜೀವಿಗಳ ದೇಹಗಳಲ್ಲಿದ್ದು ವ್ಯಾಪಾರ ಮಾಡುವುದರಿಂದ ಬ್ರಹ್ಮದೇವರೂ "ಪುರುಷ" ರು ಎಂದು ಆಯಿತು. ಈ ಭಾವನೆಯಿಂದ ನಾರದರ ಸಂಬೋಧನೆಯಾಗಿದೆ. ಬ್ರಹ್ಮದೇವರು ಮಾಯಾ ಹಾಗೂ ವಾಸುದೇವರ ಪುತ್ರರಾಗಿ ಪುರುಷನಾಮಕರಾಗಿ ಜನಿಸಿದ್ದಾರೆ.

**ಪುರಾಣಾಯ**—ಜೀವರನ್ನು ಕರೆದುಕೊಂಡು ದೇಹದಿಂದ ದೇಹಕ್ಕೆ ಹೋಗುವುದರಿಂದ ಪುರಾಣ ಎಂದಿದ್ದಾರೆ.

**ಶಾಶ್ವತಾಯ**—ಒಂದೊಂದು ಬ್ರಹ್ಮ ಕಲ್ಪದಲ್ಲಿ ಜೀವಿಗಳು ಅನೇಕ ಬಾರಿ ಹುಟ್ಟಿ ಸಾಯುವರು. ಇವರುಗಳ ಸೃಷ್ಟಿಯನ್ನು ಮಾಡುವ ಬ್ರಹ್ಮ ದೇವರು ಮಾತ್ರ ಇಡೀ ಬ್ರಹ್ಮಕಲ್ಪದಲ್ಲಿ ಪೂರ್ತಿಯಾಗಿ ಇರುವರು. ಆದ್ದರಿಂದ ಜೀವಿಗಳಿಗೆ ಹೋಲಿಸಿದರೆ ಅಮುಖ್ಯಾರ್ಥದಲ್ಲಿ ಬ್ರಹ್ಮ ದೇವರು ಶಾಶ್ವತರೇ ಸರಿ. ಬ್ರಹ್ಮದೇವರು ನಿರ್ವಿಕಾರರಾದ್ದರಿಂದ ಶಾಶ್ವತರೆನಿಸುವರು.

**ಅಜರಾಯ**—ಒಂದೊಂದು ಕಲ್ಪದಲ್ಲಿ ಹದಿನಾಲ್ಕು ಮನ್ವಂತರಗಳು ಆಗಿ ಹೋಗುವುವು. ಈ ಒಂದೊಂದು ಮನ್ವಂತರದಲ್ಲಿ ದೇವತೆಗಳು ಹುಟ್ಟಿ ಇದ್ದೂ ಕಡೆಗೆ ದೇಹ-ವಿಯೋಗವನ್ನು ಹೊಂದುವರು ; ಆದರೆ ಚತುರ್ಮುಖ ಬ್ರಹ್ಮದೇವರು ಇಡೀ ಹದಿನಾಲ್ಕು ಕಲ್ಪಗಳು ಮುಗಿಯುವವರೆಗೂ ಇದ್ದೇ ಇರುವರು. ಆ ದೃಷ್ಟಿಯಿಂದ ದೇವತಾಶ್ರೇಷ್ಠರಾದ ಇವರನ್ನು "ಅಜರ" (ಮುಪ್ಪಿಲ್ಲದವರು) ಎಂದು ನಾರದರು ಸಂಬೋಧಿಸಿದ್ದಾರೆ.)

ಸ್ವಯಂಭುವರಿಗೆ ನಮನ. ಸರ್ವಸಾಕ್ಷಿಯಾಗಿ ಸೃಷ್ಟಿಕರ್ತರಾದ ತಮಗೆ ನಮಸ್ಕಾರಗಳು. ಹಿರಣ್ಯಗರ್ಭರಾದ ಮತ್ತು ಮಹಾಜ್ಞಾನಿಗಳಾದ ಪರಮಾತ್ಮ ಎನಿಸಿಕೊಂಡ ತಮಗೆ ನಮಸ್ಕಾರಗಳು ॥ ೩೭ ॥

**ಸ್ವಯಂಭುವೇ**—"ಸ್ವಯಂಭೂ" ಎಂದು ಬ್ರಹ್ಮದೇವರ ಹೆಸರು. (ಸ್ವಯಂಭೂಃ ಚತುರಾನನಃ ಎಂದು ಅಮರಕೋಶ) ಬ್ರಹ್ಮದೇವರು ಅಯೋನಿಜರಾಗಿ ಸ್ವತಂತ್ರನಾದ ಪರಮಾತ್ಮನ ನಾಭಿಕಮಲದಿಂದ ಉದ್ಭವಿಸಿರುವುದರಿಂದ ಈ ಹೆಸರು.

**ತ್ವಷ್ಟ್ರೇ**—ಇದು ದೇವತಾ ಬಡಗಿ ವಿಶ್ವಕರ್ಮನ ಹೆಸರು.ಬ್ರಹ್ಮಾಂಡದಲ್ಲಿನ ಸಕಲ ಆಗುಹೋಗುಗಳನ್ನು ರಚಿಸುವುದರಿಂದ ಅವರನ್ನು ನಾರದರು ಈ ಅರ್ಥದಲ್ಲಿ ಕರೆದಿದ್ದಾರೆ.

**ಸರ್ವಾತ್ಮಸಾಕ್ಷಿಣೇ**—ಬ್ರಹ್ಮಾಂಡಲ್ಲಿರುವವರಿಗೂ ಮುಕ್ತರಾದವರಿಗೂ ಬಿಂಬರೂಪಿ ಆಗಿದ್ದು ಅವರನ್ನು ನಿಯಮನ ಮಾಡುವುದರಿಂದ ಜೀವಿಗಳ ಸಕಲವ್ಯಾಪಾರಗಳು ಬ್ರಹ್ಮದೇವರಿಗೆ ಪ್ರತ್ಯಕ್ಷರೂಪದಲ್ಲಿ ವೇದ್ಯವಾಗುವುದರಿಂದ ಅವರು ಸರ್ವಸಾಕ್ಷಿಯಾದರು. (ಚತುರ್ಮುಖ ಬ್ರಹ್ಮರ ನಿಯಾಮಕತ್ವವು ಈ ಬ್ರಹ್ಮಾಂಡದಲ್ಲಿ ಸೃಷ್ಟಿಗೆ ಬಂದಿರುವವರ ಮೇಲೆ ಮಾತ್ರ ಪ್ರಸರಿಸಿದೆ. ಆದರೆ ಪರಮಾತ್ಮನಷ್ಟು ತ್ರೈಕಾಲಿಕ ದೇಶಕಾಲವ್ಯಾಪ್ತಿಯುಳ್ಳದ್ದಲ್ಲ.)

**ಹಿರಣ್ಯಗರ್ಭಃ**—ಇದೂ ಬ್ರಹ್ಮದೇವರ ಹೆಸರು. ಹಿರಣ್ಮಯನಾದ ಬ್ರಹ್ಮಾಂಡದ ಮಧ್ಯದಲ್ಲಿ ಉದ್ಭವಿಸಿದವರು ಎಂದರ್ಥ.)

ಶ್ರೀಹರಿಗೆ ಅತ್ಯಂತ ಬೇಕಾದ ಏಕಾಂತಭಕ್ತನೇ, ಅತ್ಯಂತಪ್ರಕಾಶಮಯವಾದ ತೇಜೋ-ರೂಪಿಯೇ, ಯಾವಾಗಲೂ ದೇವತೆಗಳ ಹಿತವಾದುದನ್ನೇ ಎಸಗುತ್ತಿರುವವನೇ! ಭಕ್ತರ ಇಷ್ಟಾರ್ಥಗಳನ್ನು ದೇವಲೋಕದ ಕಲ್ಪವೃಕ್ಷದಂತೆ ಈಡೇರಿಸುವವನೇ, ನಾಲ್ಕು ದಿಕ್ಕಿನಲ್ಲಿ ನಾಲ್ಕು ಮುಖಗಳನ್ನು ಹೊಂದಿರುವವನೇ, ನಿನಗೆ ನಮಸ್ಕಾರಗಳು. ॥ ೩೮ ॥ ಎಲ್ಲದಕ್ಕಿಂತಲೂ ಮೊದಲು ಸೃಷ್ಟಿಯನ್ನು ಪಡೆದವನೇ, ಆಕಾಶದಂತೆ ಯಾವ ವಿಕಾರಗಳಿಗೂ ಒಳಪಡದವನೇ, ವೇದಗಳ ರಹಸ್ಯಗಳನ್ನು ಯಥಾರ್ಥವಾಗಿ ತಿಳಿದಿರುವವನೇ, ವೇದಗಳಲ್ಲಿ ಪ್ರತಿಪಾದ್ಯನೇ, ನಿಮಗೆ

ನಮಸ್ಕಾರಗಳು. ॥ ೩೯ ॥ ಮೋಕ್ಷದಲ್ಲಿ ಸ್ವರೂಪಾನಂದವೇ ಆವಿರ್ಭೂತವಾದ ರೂಪವಾಗಿ-ವುಳ್ಳವನೇ, ತನ್ನ ಶರೀರಭೂತವಾದ ಬ್ರಹ್ಮಾಂಡದ, ಸಕಲವಿಷಯಗಳ ಪ್ರತ್ಯಕ್ಷಜ್ಞಾನವುಳ್ಳವನಾಗಿ ಜಗತ್ತಿಗೆ ಸಾಕ್ಷಿಯಂತೆ ಇರತಕ್ಕವನೇ, ಪೂರಾ ಬ್ರಹ್ಮಕಲ್ಪದ ಆಯುಸ್ಸನ್ನು ಹೊಂದಿ ತನ್ನ ಕಲ್ಪದಲ್ಲಿ ಅಂತವಿಲ್ಲದವನಾದ್ದರಿಂದ ಅನಂತನೆಂಬ ಶಬ್ದವಾಚ್ಯನೇ, ತನಗಿಂತಲೂ ತಾರತಮ್ಯದಿಂದ ಕಡಿಮೆಯಾದವರಿಂದ ಸಂಪೂರ್ಣವಾಗಿ ತಿಳಿಯಲ್ಪಡದವನೇ, ಬ್ರಹ್ಮಾಂಡದೊಳಗಿನ ಸಮಸ್ತ ಕಾರ್ಯಗಳಿಗೆ ಕಾರಣೀಭೂತನಾಗಿದ್ದರಿಂದ ಸರ್ವಕಾರಣನೇ ಎಂದು ಸಂಬೋಧಿಸಲ್ಪಡುವ ನಿನಗೆ ನಮಸ್ಕಾರಗಳು. ॥ ೪೦ ॥ ಹೀಗೆ ಸ್ತೋತ್ರ ಮಾಡಿ ಪುನಃ ನಮಿಸಿ ವಿನಯದಿಂದ ಬಾಗಿದವರಾಗಿ ಭಗವಾನ್ ನಾರದರು ಪುನಃ ಕೇಳಿದರು. ॥ ೪೧ ॥

ಶ್ರೀನಾರದ ಉವಾಚ—

**ವಿಮೃಶ್ಯ ಕಾರಣಂ ತೇಽದ್ಯ ವಿಶ್ವಪೂಜ್ಯಪದಸ್ಯ ಚ ।**
**ಕುತೋತ್ರಾಗಮನಂ ಜಾತಂ ನಿದಾನಂ ತದ್ವದಸ್ವ ಮಾಮ್ ॥ ೪೨ ॥**
**ಸ್ತೋತ್ರಸಂಗಬೀಜಯುಕ್ತಂ ತದುಪಧಾರ್ಯ ಪಿತಾಮಹಃ ।**
**ಪ್ರತ್ಯುವಾಚ ಸಭಾಮಧ್ಯೇ ಹಾಸವಿಸ್ಫುರಿತಾಧರಃ ॥ ೪೩ ॥**

ನಾರದರು ಹೇಳುತ್ತಾರೆ—

ಹದಿನಾಲ್ಕು ಲೋಕಗಳಿಂದ ವಂದ್ಯವಾದ ಪಾದಗಳುಳ್ಳ, ವಿಮರ್ಶೆ ಮಾಡತಕ್ಕವರಾಗಿ, ನಿಮ್ಮ ಆಗಮನವು ಈ ಕ್ಷೇತ್ರದಲ್ಲಿ ಯಾವ ಕಾರಣಕ್ಕೆ ಆಯಿತೋ ಅದನ್ನು ಹೇಳಬೇಕು. ॥ ೪೨ ॥

ತಮ್ಮ ತೊಡೆಯಿಂದ ಹುಟ್ಟಿದ ಆ ನಾರದರ ಸಮಸ್ಯೆಯನ್ನು ಮನಸ್ಸಿಗೆ ತಂದುಕೊಂಡು ಆ ಬಗ್ಗೆ ಬ್ರಹ್ಮದೇವರು ಸಭಾಮಧ್ಯದಲ್ಲಿ ಸ್ವಲ್ಪ ತುಟಿಗಳನ್ನು ಅರಳಿಸುತ್ತಾ ಮುಗುಳ್ನಗೆಯನ್ನು ಚೆಲ್ಲಿ ಮಾತನಾಡಿದರು. ॥ ೪೩ ॥

ಬ್ರಹ್ಮೋವಾಚ—

**ಪಾತಾಲಸ್ಥಾನಿ ತೀರ್ಥಾನಿ ಪಾತಾಲಸ್ಥಾಶ್ಚ ದೇವತಾಃ ।**
**ಕಿಮರ್ಥಂ ವಾ ಸಮಾಯಾತಾಸ್ತದ್ ಜ್ಞಾತುಂ ಯೂಯಮಾಗತಾಃ ॥ ೪೪ ॥**
**ಭವತೋ ಭ್ರಾತರಸ್ಸಂತಶ್ಚತ್ವಾರಃ ಸನಕಾದಯಃ ।**
**ಶೇಷೇಣ ಸಹ ಸಂವಾದಂ ಚಿರಕಾಲಂ ಪ್ರಚಕ್ರಿರೇ ॥ ೪೫ ॥**
**ಕುತಸ್ತೇಽಪ್ಯಾಗತಾ ಹ್ಯತ್ರ ಸಶೇಷಾಸ್ತಚ್ಚ ನಾರದ ।**
**ಮತ್ಸಂಗೇನ ಮದೀಯಾ ಯೇ ಸಮಾಯಾತಾಃ ಸಮುತ್ಸುಕಾಃ ॥ ೪೬ ॥**
**ಶೇಷಾಂತಿಕಮಥೋ ಗತ್ವಾ ಮಯಾ ದೇವಾದಿಭಿಸ್ಸಹ ।**
**ಕಾರಣಂ ತತ್ರ ಕಿಂ ವಾಸ್ತಿ ವಿಚಾರ್ಯಂ ತತ್ತ್ವಯಾಧುನಾ ॥ ೪೭ ॥**

**॥ ಇತಿ ಪಂಚಮೋಽಧ್ಯಾಯಃ ॥**

ಬ್ರಹ್ಮದೇವರು ಹೇಳಿದರು—

ಪಾತಾಲದಲ್ಲಿರುವ ಸಮಸ್ತ ತೀರ್ಥಗಳು ಮತ್ತು ಸಮಸ್ತ ದೇವತೆಗಳು ಈ ಕ್ಷೇತ್ರಕ್ಕೆ ಏತಕ್ಕಾಗಿ

ಬಂದಿದ್ದಾರೆ ಎಂಬುದನ್ನು ತಿಳಿಯಲು ನೀವು (ನಾರದರು) ನನ್ನಲ್ಲಿ ಬಂದಿದ್ದೀರಿ. ।।೪೪।। ನಿಮ್ಮ ಸಹೋದರರಾದ ನಾಲ್ಕು ಮಂದಿ ಸನಕಾದಿಗಳು ಶೇಷನೊಡನೆ ಬಹುದೀರ್ಘಕಾಲ ಈ ವಿಷಯದ ಬಗ್ಗೆ ಚರ್ಚೆ ನಡೆಸಿದ್ದಾರೆ. ।। ೪೫ ।। ಶೇಷನೊಡಗೂಡಿ ಅವರೆಲ್ಲರೂ ಇಲ್ಲಿಗೆ ಏತಕ್ಕಾಗಿ ಬಂದರು ಮತ್ತು ನನ್ನವರೂ ನನ್ನೊಡನೆ ಇಲ್ಲಿಗೆ ಏತಕ್ಕಾಗಿ ಬಂದರು ಎಂಬುದರ ಬಗ್ಗೆ ಶೇಷದೇವರ ಸಮೀಪಕ್ಕೆ ನಾನು ದೇವಾದಿಗಳೊಡನೆ ಹೋಗಿ ಕಾರಣವನ್ನು ವಿಚಾರಮಾಡಬೇಕಾಗಿದೆ. ನೀವೂ ಸಹ ವಿಚಾರಮಾಡಬೇಕಾಗಿದೆ. ।। ೪೬-೪೭ ।। ಎಂದು ಬ್ರಹ್ಮದೇವರು ಹೇಳಿದರು.

।। ಐದನೆಯ ಅಧ್ಯಾಯವು ಸಮಾಪ್ತವಾಯಿತು ।।

## ॥ ಅಥ ಷಷ್ಠೋऽಧ್ಯಾಯಃ ॥ ೬ ॥

ಸೂತ ಉವಾಚ—

ಏವಂ ಬ್ರಹ್ಮವಚಃ ಶ್ರುತ್ವಾ ವಿಸ್ಮಯಾಕುಲಿತೇಂದ್ರಿಯಃ ।
ಮುನಿಃ ಪುರೋಗತಾನ್ವೀಕ್ಷ್ಯ ಜೋಷಮಾಸ ಸುಪರ್ವಣಃ ॥ ೧ ॥
ತತಃ ಪ್ರಣಮ್ಯ ಪಿತರಂ ಶೇಷಾಂತಿಕಮುಪಾಯಯೌ ।
ವಿಶೇಷತಶ್ಚ ಜಿಜ್ಞಾಸುಸ್ಸರ್ವಾಗಮನಕಾರಣಮ್ ॥ ೨ ॥
ಬ್ರಹ್ಮಾಪಿ ಚ ತತಸ್ತಸ್ಯ ದೇವರ್ಷಿಗಣಸಂವೃತಃ ।
ಜಗಾಮ ಕೌತುಕಾವಿಷ್ಟಃ ಸಹಸ್ರಫಣಸನ್ನಿಧಿಮ್ ॥ ೩ ॥
ದದರ್ಶ ತತ್ರ ತಂ ದೇವಂ ಫಣಾಮಂಡಲಮಂಡಿತಮ್ ।
ತೀರ್ಥರಾಜಸ್ಯ ಮಾಹಾತ್ಮ್ಯಂ ಗೃಣಂತಂ ಸನಕಾದಿಕಾನ್ ॥ ೪ ॥
ಪದ್ಮಾಸನಪುರೋಗಾಸ್ತೇ ನತ್ವಾ ಸಂಕರ್ಷಣಂ ಪ್ರಭುಮ್ ।
ಕೃತಾಂಜಲಿಪುಟಾಃ ಪ್ರಹ್ವಾಃ ಸ್ತೋತುಮಾರೇಭಿರೇ ಗಿರಾ ॥ ೫ ॥

## ॥ ಆರನೆಯ ಅಧ್ಯಾಯವು ॥

ಸೂತರು ಹೇಳಿದರು—

ಈ ರೀತಿ ಬ್ರಹ್ಮನ ಮಾತನ್ನು ಕೇಳಿ ಆಶ್ಚರ್ಯದಿಂದ ಕಾತರಗೊಂಡ ಮಹಾಮಹಿಮೆಯುಳ್ಳ ನಾರದಮುನಿಗಳು ಎದುರಿಗಿದ್ದ ದೇವತೆಗಳನ್ನು ನೋಡಿ ಸುಮ್ಮನಾದರು. ॥ ೧ ॥ ಅಲ್ಲಿಂದ ತಂದೆಯವರಿಗೆ ನಮಸ್ಕರಿಸಿ, ಎಲ್ಲರೂ ಪ್ರಯಾಗದಲ್ಲಿ ಕಲೆತಿರುವ ಬಗ್ಗೆ ಜಿಜ್ಞಾಸೆ ಮಾಡುವುದಕ್ಕಾಗಿ ಶೇಷದೇವರ ಸಮೀಪಕ್ಕೆ ಆಗಮಿಸಿದರು. ॥ ೨ ॥ ಅನಂತರ, ಬ್ರಹ್ಮದೇವರು ಕೂಡಾ ದೇವರ್ಷಿ-ಗಳೊಡನೆ ಬಹಳ ಕುತೂಹಲದಿಂದ ಸಹಸ್ರ ಹೆಡೆಯುಳ್ಳ ಶೇಷದೇವರ ಸಮೀಪಕ್ಕೆ ಬಂದರು. ॥ ೩ ॥ ಅಲ್ಲಿ ಸಹಸ್ರಹೆಡೆಗಳಿಂದ ವಿರಾಜಮಾನರಾಗಿದ್ದ, ತೀರ್ಥರಾಜನ ಮಾಹಾತ್ಮ್ಯವನ್ನು ವರ್ಣಿಸುತ್ತಿದ್ದ ಶೇಷದೇವರನ್ನು ನೋಡಿದರು. ॥ ೪ ॥ ಸಂಕರ್ಷಣನೆಂಬ ಹೆಸರಿನಿಂದ ವಿರಾಜಮಾನರಾಗಿರುವ (ಸಂಕರ್ಷಣನನ್ನು ಅಂತರ್ಯಾಮಿಯಾಗುಳ್ಳ) ಶೇಷದೇವರನ್ನು ಅಭಿವಂದಿಸಿ ಲೋಕ ಶಿಕ್ಷಣಾರ್ಥವಾಗಿ ಕೈಮುಗಿದುಕೊಂಡು ಸ್ತೋತ್ರ ಮಾಡಲು ಆರಂಭಿಸಿದರು. ॥ ೫ ॥

ಬ್ರಹ್ಮಾದಯ ಊಚುಃ—

ನಮಃ ಶೇಷಾಯ ದೇವಾಯ ಸಹಸ್ರವದನಾಯ ಚ ।
ಫಣಿರಾಜಾಧಿರಾಜಾಯ ನಮಸ್ಸಂಕರ್ಷಣಾಯ ಚ ॥ ೬ ॥
ಅನಂತಕೋಟಬ್ರಹ್ಮಾಂಡಧಾರಿಣೇ ಸೃಷ್ಟಿಕಾರಿಣೇ ।
ಪಾತಾಲತಲಮೂಲಾಯ ಪನ್ನಗಾಯ ನಮೋ ನಮಃ ॥ ೭ ॥
ಯಸ್ಯ ಮೂರ್ಧ್ನಿ ವಿರಾಜಂತೇ ಬ್ರಹ್ಮಾಂಡಾನಂತಕೋಟಯಃ ।
ಸರ್ಷಪಾ ಇವ ತಸ್ಯಾಂತಂ ಕೋ ವಿಜಾನಾತಿ ತತ್ತ್ವತಃ ॥ ೮ ॥

ಕುತೋಽತ್ರಾಗಮನಂ ಜಾತಂ ಜ್ಞಾನಿನೋ ದಿವ್ಯಚಕ್ಷುಷಃ ।
ಕುತೋಽತ್ರಾಖಿಲಸತ್ಸಂಗೋ ಹೇತುಮತ್ರ ವದಸ್ವ ನಃ ॥ ೯ ॥
ತ್ವಾಮತ್ರಾಗತಂ ಜ್ಞಾತ್ವಾ ದರ್ಶನಾರ್ಥಮುಪಾಗತಾಃ ।
ಪ್ರಸೀದಾನಂತ ದೇವೇಶ ದಯಾಂ ಕುರು ದಯಾನಿಧೇ ॥ ೧೦ ॥
ಸ್ತುತ್ವೈವಂ ತಂ ಸುರಾಸ್ಸರ್ವೇ ವಿರಿಂಚಿಪ್ರಮುಖಾಃ ಪರೇ ।
ಅತಿಷ್ಠನ್ನೇಕತಾನೇನ ಪುರತಸ್ತಸ್ಯ ನಿಶ್ಚಲಾಃ ॥ ೧೧ ॥
ಶೇಷೋಽಪಿ ತದ್ವಚಃ ಶ್ರುತ್ವಾ ತಯಾ ಸ್ತುತ್ಯಾತಿಹರ್ಷಿತಃ ।
ತತಃ ಪ್ರಚಕ್ರುಮಾರೇಭೇ ಸಹಸ್ರಮುಖಪಂಕಜೈಃ ॥ ೧೨ ॥

ಬ್ರಹ್ಮಾದಿಗಳು ಮಾತನಾಡಿದರು—

ತಮ್ಮದೇ ಆದ ವಿಶಿಷ್ಟ ಕ್ರೀಡಾದಿಗುಣಗಳಿಂದ ಕೂಡಿರತಕ್ಕ, ಸಹಸ್ರ ಹೆಡೆಗಳುಳ್ಳ, ಸರ್ಪಗಳಿಗೆ ಸಾರ್ವಭೌಮನಾಗಿರುವ, ಸಂಕರ್ಷಣರೂಪದ ಶ್ರೀಹರಿಯನ್ನು ಅಂತರ್ನಿಯಾಮಕನಾಗಿವುಳ್ಳ (ಪರಮಾತ್ಮನು ತನ್ನ ಏಕಾಂತ ಭಕ್ತರಾದ ಇವರಿಗೆ ಸಂಕರ್ಷಣ ಎಂಬ ಹೆಸರಿನಿಂದ ವಿರಾಜಮಾನರಾಗಿರುವ ಅನುಗ್ರಹ ಮಾಡಿ ಕೊಟ್ಟಿದ್ದರಿಂದ ಸಂಕರ್ಷಣನೆಂಬ ಹೆಸರುಳ್ಳ ತತ್ತ್ವಪ್ರಕಾಶಿಕಾ) ತಮಗೆ ನಮಸ್ಕಾರ. ॥ ೬ ॥ ಪರಮಾತ್ಮನಿಂದ ಸೃಷ್ಟಿಯಾಗಿರುವ, ಆಯಾಯಾ ಕಲ್ಪಗಳಲ್ಲಿ ಸೃಷ್ಟಿಯಾಗಲಿರುವ ಅನಂತಕೋಟಿಬ್ರಹ್ಮಾಂಡಗಳೂ ಶ್ರೀ ಶೇಷದೇವರ ಹೆಡೆಗಳ ಮೇಲೆಯೇ ಇರುವುದರಿಂದ ಅನಂತಕೋಟಿ ಬ್ರಹ್ಮಾಂಡವನ್ನು ಧರಿಸಿರುವ, ಪರಂಪರಯಾ ಜಗತ್ತಿನ ಸೃಷ್ಟಿಗೆ ಕಾರಣರಾಗಿರುವ, ಪಾತಾಳಲೋಕದಲ್ಲಿ ತಮ್ಮ ನೆಲೆಯನ್ನುಳ್ಳ ಹಾವುಗಳ ಜಾತಿಗೆ ಸೇರಿದ ಶ್ರೀ ಶೇಷದೇವರೇ, ತಮಗೆ ನಮಸ್ಕಾರಗಳು. ॥ ೭ ॥ ಯಾರ ತಲೆಯ ಮೇಲೆ ಅನಂತ ಕೋಟಿ ಬ್ರಹ್ಮಾಂಡಗಳು ಸಾಸಿವೆಯಂತೆ ವಿರಾಜಮಾನವಾಗಿವೆಯೋ ಅಂತಹ ತಮ್ಮ ಅಂತವನ್ನು ಯಾರು ತಾನೇ ಯಥಾರ್ಥವಾಗಿ ತಿಳಿದಿದ್ದಾರೆ ? ॥ ೮ ॥ ಯಾವ ಕಾರಣದಿಂದ ದಿವ್ಯ-ದೃಷ್ಟಿಯುಳ್ಳ ಮತ್ತು ಜ್ಞಾನಿಗಳಾದ ತಮ್ಮ ಆಗಮನವು ಈ ಕ್ಷೇತ್ರಕ್ಕೆ ಆಯಿತು ಮತ್ತು ಈ ಎಲ್ಲ ಸಜ್ಜನರ ಗುಂಪೇ ಇಲ್ಲಿಗೆ ಬಂದಿದ್ದೇಕೆ? ಈ ಬಗ್ಗೆ ವಿವರಿಸಬೇಕು. ತಾವು ಇಲ್ಲಿಗೆ ಬಂದಿರುವುದನ್ನು ತಿಳಿದೇ, ತಮ್ಮ ದರ್ಶನಾಕಾಂಕ್ಷಿಗಳಾಗಿ ನಾವೆಲ್ಲ ಇಲ್ಲಿಗೆ ಬಂದಿದ್ದೇವೆ. ॥ ೯ ॥ ದಯಾನಿಧಿಗಳಾದ, ದೇವೇಶರಾದ, ಅನಂತನೆಂಬ ಹೆಸರುಳ್ಳ ತಾವು ಸಂತುಷ್ಟರಾಗಿ ದಯೆ ತೋರಬೇಕು. ॥ ೧೦ ॥ ಹೀಗೆಂದು ಅಲ್ಲಿ ನೆರೆದಿದ್ದ ಸಮಸ್ತದೇವತೆಗಳು ವಿರಿಂಚಿಗಳಾದಿಯಾಗಿ ಇತರರೂ ಪ್ರಾರ್ಥನೆ-ಯನ್ನು ಮಾಡಿ ಆ ಶೇಷ ದೇವರ ಸಮ್ಮುಖದಲ್ಲಿ ಥಟ್ಟನೇ ಒಟ್ಟಿಗೆ ಎದ್ದು ಅಲುಗಾಡದೇ ನಿಂತುಕೊಂಡರು. ॥ ೧೧ ॥ ಶೇಷ ದೇವರಾದರೋ ಅವರ ಸ್ತೋತ್ರದಿಂದ ಪ್ರಸನ್ನರಾಗಿ ಅವರ ಬಿನ್ನಹವನ್ನು ಕೇಳಿ ತಮ್ಮ ಸಹಸ್ರಮುಖಕಮಲಗಳಿಂದಲೂ ಮಾತನಾಡಲು ಆರಂಭಿಸಿದರು.॥೧೨॥

ಶ್ರೀ ಶೇಷ ಉವಾಚ—

ಬ್ರಹ್ಮಾದಯಸ್ಸುರಾಸ್ಸರ್ವೇ ನಾರದಾದ್ಯಾ ಮುನೀಶ್ವರಾಃ ।
ಶೃಣುಧ್ವಂ ಸಾವಧಾನೇನ ಸಮಾಗಮನಕಾರಣಮ್ ॥ ೧೩ ॥

**ವಾಸುಕಿಪ್ರಮುಖೈರ್ನಾಗೈರನ್ವಿತೋಽಹಂ ರಸಾತಲಾತ್ ।**
**ಏತೇಷಾಂ ಸನಕಾದೀನಾಂ ಸಂಶಯಂ ಹರ್ತುಮಾಗತಃ ॥ ೧೪ ॥**
**ಪಿಂಡಬ್ರಹ್ಮಾಂಡಯೋರ್ಜ್ಞಾನಮಖಿಲಾನಾಂ ನ ವಿದ್ಯತೇ ।**
**ತತ್ಫಲಪ್ರಾಪಕಂ ಶ್ರೇಷ್ಠಂ ತೀರ್ಥಂ ತೀರ್ಥೇಷು ತದ್ವದ ॥ ೧೫ ॥**
**ಅವರ್ಣಯಂ ಪ್ರಯಾಗಾಖ್ಯಮೇಭಿರೇವಂ ಪ್ರಚೋದಿತಃ ।**
**ಪುನಃ ಪ್ರತ್ಯಯದಾರ್ಢ್ಯಾರ್ಥಂ ತಂ ದರ್ಶಯಿತುಮಾಗತಃ ॥ ೧೬ ॥**

**ಶ್ರೀ ಶೇಷದೇವರು ಉತ್ತರಿಸಿದರು—**

ಬ್ರಹ್ಮಾದಿದೇವತೆಗಳಿರಾ, ಮತ್ತು ನಾರದಾದಿ ಮುನೀಶ್ವರರೇ, ನಾವು ಇಲ್ಲಿಗೆ ಬಂದಿರುವ ಕಾರಣವನ್ನು ತಿಳಿಸುತ್ತೇನೆ. ಸಾವಧಾನದಿಂದ ಕೇಳಿರಿ. ॥ ೧೩ ॥ ಈ ಸನಕಾದಿಗಳ ಸಂದೇಹವನ್ನು ಹೋಗಲಾಡಿಸುವುದಕ್ಕಾಗಿಯೇ ವಾಸುಕಿಯೇ ಮೊದಲಾದ ನಾಗಶ್ರೇಷ್ಠರುಗಳ ಜೊತೆಗೆ ನಾವು ರಸಾತಲದಿಂದ ಇಲ್ಲಿಗೆ ಬಂದೆವು. ॥ ೧೪ ॥ "ಎಲ್ಲರಿಗೂ ಪಿಂಡಾಂಡವೆಂಬ ಈ ಶರೀರದ ಹಾಗೂ ಖಂಡೋಪಖಂಡಗಳಿಂದ ಕೂಡಿದ ಈ ಬ್ರಹ್ಮಾಂಡದ ವಿವರವಾದ ಜ್ಞಾನವು ಇರುವುದಿಲ್ಲ; ಈ ಬ್ರಹ್ಮಾಂಡದ (ಖಂಡಗಳೂ ಸೇರಿ) ಎಲ್ಲ ತೀರ್ಥಗಳ ಫಲವನ್ನೂ ಕೊಡತಕ್ಕ ಒಂದು ತೀರ್ಥವನ್ನು ತಿಳಿಸಿರಿ." ॥ ೧೫ ॥ ಹೀಗೆ ಸನಕಾದಿಗಳಿಂದ ಪ್ರಚೋದಿತನಾದ ನನ್ನಿಂದ ಈ ಸಮಯದಲ್ಲಿ ಪ್ರಯಾಗವೆಂಬ ಕ್ಷೇತ್ರವು ವರ್ಣಿಸಲ್ಪಟ್ಟಿತು. ಮತ್ತೆ ನಾನು ಹೇಳಿದ ವಿಷಯದಲ್ಲಿ ಜ್ಞಾನವನ್ನು ದೃಢಪಡಿಸಿಕೊಳ್ಳುವ ಸಲುವಾಗಿಯೇ ಪ್ರಯಾಗಕ್ಷೇತ್ರವನ್ನು ತೋರಿಸಲು ಇಲ್ಲಿಗೆ ಬಂದಿದ್ದೇನೆ. ಎಂದು ಶೇಷದೇವರು ಹೇಳಿದರು. ॥ ೧೬ ॥

**ಬ್ರಹ್ಮೋವಾಚ—**

**ಅಯಂ ಹಿ ಸಂಶಯೋಽಸ್ಮಾಕಂ ಸರ್ವೇಷಾಂ ಮನಸಿ ಸ್ಥಿತಃ ।**
**ಯಥಾ ನಿಸ್ಸಂಶಯೋ ಭೂಯಾತ್ತಥಾ ಕುರು ದಯಾನಿಧೇ ॥ ೧೭ ॥**

**ಬ್ರಹ್ಮ ದೇವರು ಹೇಳುತ್ತಾರೆ—**

ನಮ್ಮೆಲ್ಲರ ಮನಸ್ಸಿನಲ್ಲಿಯೂ ಈ ಸಂಶಯವು ಇದ್ದೇ ಇದೆ; ಆದ್ದರಿಂದ ದಯಾನಿಧಿಗಳಾದ ತಾವು ನಮ್ಮನ್ನು ಸಂಶಯರಹಿತರನ್ನಾಗಿ ಮಾಡಿ ಎಂದು ಬಿನ್ನೈಸಿದರು. ॥೧೭॥

**ಶೇಷ ಉವಾಚ—**

**ಆಚರಿಷ್ಯೇ ತಥೈವಾಹಂ ಯಥಾಭಿಲಷಿತಂ ವಚಃ ।**
**ಶ್ರೂಯತಾಮವಧಾನೇನ ಸರ್ವಸಂಶಯಭಂಜನಮ್ ॥ ೧೮ ॥**
**ತುಲಾ ಮಾನಂ ತುಲಾ ದೀವ್ಯಂ ತುಲಾ ಸಂಶಯನಾಶನಮ್ ।**
**ತುಲಾ ಪ್ರಮಾಣಂ ಸರ್ವೇಷಾಂ ವಿಹಿತಂ ಧರ್ಮನಿರ್ಣಯೇ ॥ ೧೯ ॥**
**ದಾನಾನಾಮುತ್ತಮಂ ದಾನಮಭಯಂ ಸರ್ವತೋಧಿಕಮ್ ।**
**ವ್ರತಾನಾಮುತ್ತಮಂ ಪ್ರೋಕ್ತಂ ಯಥಾ ಚೈಕಾದಶೀವ್ರತಮ್ ॥ ೨೦ ॥**

ತಪಸಾಮುತ್ತಮಃ ಪ್ರೋಕ್ತೋ ರಸನೇಂದ್ರಿಯನಿಗ್ರಹಃ ।
ತಥಾ ತುಲಾ ತು ದೀವ್ಯಾನಾಮುತ್ತಮೋತ್ತಮಮುಚ್ಯತೇ ॥ ೨೧ ॥
ವೇದಶಾಸ್ತ್ರಪ್ರಣೀತಾನಿ ಯಾನಿ ದೀವ್ಯಾನಿ ಭೂತಲೇ ।
ವೇದಮಂತ್ರೈಸ್ತಂಭಿತಾನಿ ನ ತಥೇಲ್ಯುಂ ಕ್ವಚಿತ್ತುಲಾ ॥ ೨೨ ॥
ತಸ್ಮಾದ್ಯುತ್ತುಲಿತಂ ತಚ್ಚ ಸರ್ವಶ್ರೇಷ್ಠಂ ಭವಿಷ್ಯತಿ ।
ಕಿಂ ವಾಕ್ಯಸ್ಯ ವಿಚಾರೇಣ ಪ್ರತ್ಯಕ್ಷಂ ತದ್ವಿಧೀಯತಾಮ್ ॥ ೨೩ ॥
ನ್ಯೂನಾಧಿಕಂ ಸಮಂ ಯತ್ಸ್ಯಾತ್ ತತ್ತಸ್ಯೈವ ನಿಯಾಮಕಮ್ ।
ಇದಂ ಸತ್ಯಮಿದಂ ಸತ್ಯಂ ಸರ್ವೇಷಾಂ ಸಮ್ಮತಂ ಮತಮ್ ॥ ೨೪ ॥
ಇತಿ ಶೇಷವಚಃ ಶ್ರುತ್ವಾ ಸ್ವಯಂಭೂರ್ಹೃಷ್ಟಮಾನಸಃ ।
ಕೃತ್ಸ್ನಂ ತುಲಿತುಮಾರೇಭೇ ಸರ್ವೇಷಾಮಪರೋಕ್ಷತಃ ॥ ೨೫ ॥
ತಾವತ್ಸಮೀಕೃತಕ್ರೋಡೇ ಪ್ರಯಾಗಸ್ಯ ತು ನಿರ್ಮಲೇ ।
ಆದರ್ಶಜಠರಾಭಾಸೇ ದರ್ಶನಾಹ್ಲಾದಕಾರಕೇ ॥ ೨೬ ॥
ಉಚ್ಚಸ್ಥೂಲತರೌ ತತ್ರ ಸ್ತಂಭೌ ಮಾಯಾವಿನಿರ್ಮಿತೌ ।
ವರ್ತುಲಾವಥ ಸತ್ಕರ್ಣೌ ನಿಚಖಾನ ಯಥಾವಿಧಿ ॥ ೨೭ ॥
ತತ್ಕರ್ಣಯೋರ್ದೃಢಾಂ ಋಜ್ವೀಂ ಪ್ರಸಾರ್ಯ ವಲಿಕಾಂ ತತಃ ।
ವಿಸ್ತೀರ್ಣಜಠರಸ್ನಿಗ್ಧಫಲಕದ್ವಿತಯಾನ್ವಿತಾ ॥ ೨೮ ॥
ಪ್ರೋದ್ದಾಮದೃಢಸಂಬದ್ಧದಂಡರಾಜವಿರಾಜಿತಾಮ್ ।
ತುಲಾಂ ತನ್ಮಧ್ಯಮೇ ಭಾಗೇ ಹ್ಯಾವಬಂಧಸಮಾಹಿತಃ ॥ ೨೯ ॥
ಅನೇಕಧಾ ಪ್ರಭುತ್ವೇನ ಸಂಭಾರಾನ್ಸಮಕಲ್ಪಯತ್ ।
ಸರ್ವೇಷಾಂ ದೇವತಾದೀನಾಂ ಸೌಮನಸ್ಯಮಥಾಕರೋತ್ ॥ ೩೦ ॥
ಪ್ರತ್ಯೂಹೇಶಂ ತತಃ ಪೂಜ್ಯ ಪೂಜಾಸಂಭಾರವಿಸ್ತರೈಃ ।
ತಥೈವ ಚ ಸಮಾನರ್ಚ ಖಂಡಕರ್ಪೂರನಿರ್ಮಿತಾಮ್ ॥ ೩೧ ॥
ತಾರಣಂ ತರಿಣಂ ಚೈವ ಮಹಾವಿಷ್ಣುಂ ಚ ಮಾಧವಮ್ ।
ಶ್ರದ್ಧಯಾ ಪರಯಾ ಪೂಜ್ಯ ತುಲಾಂ ಸ್ತೋತುಂ ಸಮಾರಭೇತ್ ॥ ೩೨ ॥

ಶ್ರೀ ಶೇಷದೇವರು ಹೇಳುತ್ತಾರೆ—

ತಮ್ಮ ಮಾತಿನ ಅಭಿಪ್ರಾಯದಂತೆಯೇ, ತಾವು ಇಚ್ಛಿಸಿದಂತೆಯೇ ನಡೆಯುತ್ತೇನೆ. ತಮ್ಮೆಲ್ಲರ ಸಂಶಯವನ್ನು ಪರಿಹಾರಮಾಡತಕ್ಕ ಈ ವಿಷಯವನ್ನು ಕೇಳಿರಿ. ॥ ೧೮ ॥ ತಕ್ಕಡಿಯೇ ಸರಿಯಾದ ಪ್ರಮಾಣವು ಮತ್ತು ತಕ್ಕಡಿಯೇ ಶಪಥಕ್ಕೆ ಸರಿ. ಇದರಿಂದ ತೂಕಹಾಕು (ದೀವ್ಯ)-ವುದರಿಂದ, ಎಲ್ಲ ಸಂಶಯವೂ ನಾಶವಾಗುವುದು, ಎಲ್ಲರಿಗೂ ತಕ್ಕಡಿಯು ಒಪ್ಪತಕ್ಕ ಪ್ರಮಾಣ-ವೆಂದು ಒಪ್ಪಿಗೆಯಾಗಿದೆ; ಈ ರೀತಿಯಾಗಿ ಧರ್ಮನಿರ್ಣಯಗ್ರಂಥದಲ್ಲಿಯೂ ವಿಹಿತವೆಂದು ಹೇಳಲ್ಪಟ್ಟಿದೆ. ॥ ೧೯ ॥ ಎಲ್ಲಕ್ಕಿಂತಲೂ ಉತ್ತಮವಾದ ದಾನ ಎಂದರೆ ಅಭಯ ಕೊಡುವುದು.

ವ್ರತಗಳಲ್ಲಿ ಶ್ರೇಷ್ಠವಾದುದೆಂದರೆ ಏಕಾದಶೀವ್ರತ. ॥ ೨೦ ॥ ತಪಸ್ಸುಗಳಲ್ಲಿ ಉತ್ತಮವಾದುದು (ರಸನೇಂದ್ರಿಯದ ನಿಗ್ರಹ) ಜಿಹ್ವಾಚಾಪಲ್ಯವನ್ನು ನೀಗುವುದು. ಹಾಗೆಯೇ ಶಪಥಗಳಿಗೆ ತಕ್ಕಡಿಯೇ ಉತ್ತಮೋತ್ತಮವಾದುದು. ॥ ೨೧ ॥ ವೇದ ಮತ್ತು ಶಾಸ್ತ್ರಗಳಲ್ಲಿ ಯಾವುದು ಶಪಥಗಳಿಂದು ಖಚಿತವಾಗಿವೆಯೋ, ಭೂಮಿಯಲ್ಲಿ ಅವುಗಳ ಅವಲಂಬಿಕೆಯೂ ಕಾಲಕ್ರಮೇಣ ಕ್ಷೀಣಿಸುತ್ತಿರುವುದರಿಂದ ಆ ವೇದಶಾಸ್ತ್ರಗಳೇ ಅವುಗಳಿಗೆ ಪ್ರತಿಬಂಧವನ್ನು ಹೇರುತ್ತವೆ, ಆದರೆ ತಕ್ಕಡಿಯಲ್ಲಿ ತೂಗುವುದರ ಪ್ರಾಮಾಣ್ಯದ ಬಗ್ಗೆ ಸರ್ವಶ್ರೇಷ್ಠತ್ವವನ್ನು ಎಲ್ಲರೂ ಒಪ್ಪುತ್ತಾರೆ. ॥ ೨೨ ॥ ಆದ್ದರಿಂದ ಯಾವುದು ತಕ್ಕಡಿಯಲ್ಲಿ ತೂಕ ಹಾಕಿ ತೀರ್ಮಾನವು ಆಗಿದೆಯೋ ಅದು ಎಲ್ಲ ಮಾನಕ್ಕಿಂತಲೂ ಶ್ರೇಷ್ಠವೇ ಸರಿ. ಕೇವಲ ವಾಕ್ಯದ ವಿಚಾರದಿಂದ ಏನಾದೀತು ? ಯಾವುದು ಶ್ರೇಷ್ಠ ಎಂಬುದು ಪ್ರತ್ಯಕ್ಷವಾಗಿ ತೀರ್ಮಾನಿಸಲಾಗಲಿ. ॥ ೨೩ ॥ ತಕ್ಕಡಿಯೇ ಪ್ರಯಾಗದ ಮಹತ್ವವು (ಬೇರೆ ಕ್ಷೇತ್ರಗಳಿಗಿಂತ) ಹೆಚ್ಚಿನದೋ, ಕಡಿಮೆಯದ್ದೋ ಅಥವಾ ಅವಕ್ಕೆ ಸರಿಸಮಾನವೋ ಎಂಬುದನ್ನು ತೀರ್ಮಾನಿಸಲಿ. ಇದೇ ಸತ್ಯವು, ಇದೇ ಸತ್ಯವು ಎಲ್ಲರೂ ಒಪ್ಪತಕ್ಕದ್ದು ಇದೇ ॥ ೨೪ ॥ ಈ ರೀತಿ ಹೇಳಿದ ಶೇಷದೇವರ ಮಾತನ್ನು ಕೇಳಿ ಬ್ರಹ್ಮದೇವರು ಮನಸ್ಸಿನಲ್ಲಿ ಸಂತಸಗೊಂಡು ಎಲ್ಲರ ಎದುರಿನಲ್ಲಿಯೇ ತೂಕ ಮಾಡಿಸಲು ಪ್ರಾರಂಭಿಸಿದರು. ॥ ೨೫ ॥ ಆಗ ಪ್ರಯಾಗಕ್ಷೇತ್ರದ ನಿರ್ಮಲವಾದ ಸಮತಲವಾದ ಒಂದು ಪ್ರದೇಶವನ್ನು ನೋಡಿದರು. ಅದು ಕನ್ನಡಿಯ ಮಧ್ಯಭಾಗದಂತೆ ನೋಡುವವರಿಗೆ ಆಹ್ಲಾದಕರವಾಗಿದ್ದು ಅಲ್ಲಿ ಎತ್ತರವಾದ ಮತ್ತು ದೃಢವಾದ ಮಾಯಾ ದೇವಿಯಿಂದ ನಿರ್ಮಿತವಾದ, ವರ್ತುಲಾಕಾರವಾಗಿರತಕ್ಕ ಎರಡೆರಡು ಕಿವಿಗಳುಳ್ಳಂಥ ಎರಡು ಕಂಭಗಳನ್ನು ವಿಧಿಪೂರ್ವಕ ಅಗೆದು ನಿಲ್ಲಿಸಿದರು. ॥ ೨೬-೨೭ ॥ ಮಾಯಾದೇವಿಯಿಂದ ನಿರ್ಮಿತವಾದ ಈ ತಕ್ಕಡಿಯಲ್ಲಿ ದೃಢವಾಗಿ ನಿಂತಿರುವ ಒಂದು ಕಂಭವಿತ್ತು. ಈ ಕಂಭದ ಮೇಲ್ಭಾಗದಲ್ಲಿ ಭೂಮಿಗೆ ಸಮಾನಾಂತರವಾಗಿ ಒಂದು ದೊಡ್ಡ ತೊಲೆಯನ್ನು ಕೀಲುಗಳಿಂದ ಜೋಡಿಸಿತ್ತು. ಈ ತೊಲೆಯ ಎರಡೂ ತುದಿಗಳಲ್ಲೂ ಹಿಡಿಗಳಿದ್ದವು. ಈ ಹಿಡಿಗಳಿಗೆ ಬಲವಾಗಿ-ರುವಂತಹ ಹಗ್ಗಗಳನ್ನು ಕಟ್ಟಿ ಇಳಿ ಬಿಟ್ಟಿದ್ದರು. ಈ ಹಗ್ಗಗಳೆಲ್ಲವೂ ಒಂದೇ ಸಮನಾಗಿದ್ದವು. ಈ ಹಗ್ಗಗಳ ಕೆಳತುದಿಗೆ ಚಚ್ಚೌಕವಾದ ದೊಡ್ಡ ಹಲಗೆಗಳನ್ನು ಜೋಡಿಸಿದ್ದರು. ಈ ಹಲಗೆಗಳು ತಕ್ಕಡಿಯ ತೊಲೆಯು ಚಲಿಸಿದಂತೆ ಅವುಗಳ ಕೆಳಗೆ ಮಾಡಿರುವ ಹಳ್ಳಗಳಲ್ಲಿ ಮೇಲೆ ಕೆಳಗೆ ಏರಿಳಿಯುವ ಅವಕಾಶವಿತ್ತು. ॥ ೨೮-೨೯ ॥

ಅನೇಕ ಪ್ರಕಾರದ ಅಧಿಕಾರವನ್ನು ಉಪಯೋಗಿಸಿ ಪೂಜಾಸಾಮಗ್ರಿಗಳನ್ನು ಕಲೆ ಹಾಕಿದರು ; ಮತ್ತು ಎಲ್ಲ ದೇವತೆಗಳನ್ನು, ಪೂಜಾವಿಧಾನಗಳಿಂದ ಸಂತೋಷಗೊಳಿಸಿದರು. ॥ ೩೦ ॥ ಅನೇಕ ಪ್ರಕಾರವಾದ ಪೂಜಾ ಸಾಮಗ್ರಿಗಳಿಂದ ವಿಘ್ನಪರಿಹಾರಕ್ಕಾಗಿ ಗಣೇಶನನ್ನು ಪೂಜಿಸಿ, ಅನಂತರ ಕರ್ಪೂರದಿಂದ ನಿರ್ಮಿತವಾದ ಗೌರಿಯನ್ನು ಪೂಜಿಸಿದರು. ॥ ೩೧ ॥ ಅನಂತರ ತಾರಣಿಯನ್ನು(ದುರ್ಗೆಯನ್ನು) ಸೂರ್ಯನನ್ನು ಮತ್ತು ಮಹಾವಿಷ್ಣುವಿನ ಸ್ವರೂಪನಾದ ವೇಣೀ-ಮಾಧವನನ್ನು ವಿಧಿಪೂರ್ವಕವಾಗಿ ಪೂಜಿಸಿ ಅನಂತರ ತಕ್ಕಡಿಯ ಅಂತರ್ಯಾಮಿ ಆಗಿದ್ದ ದೇವತೆಯನ್ನು ಸ್ತೋತ್ರಮಾಡಲು ಪ್ರಾರಂಭಿಸಿದರು. ॥ ೩೨ ॥

ಬ್ರಹ್ಮೋವಾಚ—

ನಮಸ್ತೇ ದೇವದೇವಾನಾಂ ಶಕ್ತೇ ತ್ವಂ ಸತ್ಯಮಾಶ್ರಿತೇ ।
ಸಾಕ್ಷೀಭೂತೇ ಜಗದ್ಧಾತ್ರಿ ನಿರ್ಮಿತಾ ಬ್ರಹ್ಮಣಾ ಮಯಾ ॥ ೩೩ ॥

ಸರ್ವಾನ್ಯತಾನಿ ಚೈಕತ್ರ ಸರ್ವಸತ್ಯಾನಿ ಚೈಕತಃ ।
ಧರ್ಮಾತ್ಮತ್ವಾ ಸಭಾಮಧ್ಯೇ ಸ್ಥಾಪಿತಾಸಿ ಜಗದ್ಧಿತೇ ॥ ೩೪ ॥
ತ್ವಂ ತುಲೇ ಸರ್ವಮಾನಾನಾಂ ಪ್ರಮಾಣಮಿಹ ಕೀರ್ತಿತಾ ।
ಧರ್ಮಸ್ವರೂಪಾಂ ಭವತೀಂ ಪ್ರವದಂತಿ ಮನೀಷಿಣಃ ॥ ೩೫ ॥
ಯೋಽಸೌ ತತ್ವಾಧಿಪೋ ದೇವಃ ಪುರುಷಃ ಪಂಚವಿಂಶತಿಃ ।
ಸ ಏಕೋಽಧಿಷ್ಠಿತೋ ದೇವಿ ತ್ವಯಿ ನಿತ್ಯಂ ನಮೋ ನಮಃ ॥ ೩೬ ॥
ತ್ವಯಾ ಧೃತಂ ಜಗತ್ಸರ್ವಂ ಸದೇವಾಸುರಮಾನುಷಮ್ ।
ಇದಾನೀಮಸ್ಮದಾದೀನಾಂ ಸಂಶಯಂ ವಿನಿವಾರಯ ॥ ೩೭ ॥

ಶ್ರೀಬ್ರಹ್ಮದೇವರು ಹೇಳುತ್ತಾರೆ—

ದೇವತೆಗಳಿಗೆ ಶಕ್ತಿಸ್ವರೂಪಳಾದ, ಸತ್ಯವನ್ನು ಆಶ್ರಯಿಸಿರತಕ್ಕ, ಎಲ್ಲದಕ್ಕೂ ಸಾಕ್ಷಿಯಾದ ಮತ್ತು ಜಗತ್ತನ್ನೇ ಧಾರಣೆ ಮಾಡಿರುವ ನಿನ್ನನ್ನು ನಾನೇ ಸೃಷ್ಟಿಸಿದೆನು. ಜಗತ್ತಿಗೆ ಹಿತವನ್ನುಂಟು ಮಾಡುವ ತುಲಾದೇವಿಯೇ, ನೀನು ಧರ್ಮವನ್ನು ಅನುಸರಿಸಿ ಎಲ್ಲ ಸುಳ್ಳನ್ನು ಒಂದು ಕಡೆ ಮತ್ತು ಎಲ್ಲ ಸತ್ಯವನ್ನು ಇನ್ನೊಂದು ಕಡೆ ವಿಭಾಗಮಾಡಿ ಸಭೆಯ ಮಧ್ಯದಲ್ಲಿ ಸ್ಥಾಪಿಸಲ್ಪಟ್ಟಿದ್ದೀಯೆ. ಅಂತಹ ನಿನಗೆ ನಮಸ್ಕಾರ. ॥ ೩೩-೩೪ ॥ ತಕ್ಕಡಿಯ ರೂಪದಲ್ಲಿರುವ ನೀನು ಎಲ್ಲ ರೀತಿಯ ಅಳೆಯುವುದು ಮತ್ತು ತೂಗುವುದು ಮುಂತಾದುವಕ್ಕೆ ಪ್ರಮಾಣವೆಂದು ಈ ಸಭೆಯಲ್ಲಿ ಹೇಳಲಾಗಿದೆ. ನಿನ್ನನ್ನು ಧರ್ಮಸ್ವರೂಪಳೆಂದು ಜ್ಞಾನಿಗಳು ಹೇಳುತ್ತಾರೆ. ॥ ೩೫ ॥ ಇಪ್ಪತ್ತನಾಲ್ಕು ತತ್ತ್ವಾಭಿಮಾನಿಗಳನ್ನು ನಿಯಮನ ಮಾಡತಕ್ಕ ಮತ್ತೆ ಇಪ್ಪತ್ತೈದನೆಯ ತತ್ವವೆಂದು ಕರೆಯಲ್ಪಟ್ಟಿರುವ, ಪುರುಷಶಬ್ದ-ವಾಚ್ಯನಾದ ಶ್ರೀಮಹಾವಿಷ್ಣುವು ನಿನ್ನಲ್ಲಿ ಯಾವಾಗಲೂ ಮುಖ್ಯವಾದ ಅಧಿಷ್ಠಾನವನ್ನು ಹೊಂದಿದ್ದಾನೆ. ಅಂತಹ ನಿನಗೆ ನಮಸ್ಕಾರಗಳು. ॥ ೩೬ ॥ ನಿನ್ನಿಂದ ಅಸುರ, ದೇವ ಮತ್ತು ಮನುಷ್ಯರಿಂದ ಕೂಡಿದ ಈ ಜಗತ್ತು ಧಾರಣೆ ಮಾಡಲ್ಪಟ್ಟಿದೆ. ಈಗ ನಮ್ಮ ಸಂಶಯವನ್ನು ಪರಿಹಾರ ಮಾಡು. ॥ ೩೭ ॥ ಹೀಗೆಂದು ಬ್ರಹ್ಮದೇವರು ಪ್ರಾರ್ಥಿಸಿದರು.

ಸೂತ ಉವಾಚ—

ಇತ್ಯುಕ್ತ್ವಾದೌ ಸಪ್ತಪುರ್ಯಸ್ತುಲಿತಾ ಬ್ರಹ್ಮಣಾ ಮಿಥಃ ।
ನ ನ್ಯೂನಾ ನಾಧಿಕಾ ಜಾತಾಸ್ತುಲಾಯಾಂ ಸಮತಾಂ ಗತಾಃ ॥ ೩೮ ॥
ತತ ಏಕತ್ರ ಪುರ್ಯಸ್ತಾ ಅಪರತ್ರ ಕುಲಾಚಲಾಃ ।
ಸಪ್ತಾಪಿ ವಿಧೃತಾಸ್ಸಾಂಗಾ ನ ಪ್ರಾಪುಸ್ತತ್ಸಮಾನತಾಮ್ ॥ ೩೯ ॥
ತತಸ್ಸಪ್ತ ಸಮುದ್ರಾಶ್ಚ ತುಲಿತಾ ನಾಭವನ್ಸಮಾಃ ।
ಸಪ್ತದ್ವೀಪಾನಿ ಖಂಡಾನಿ ನ ತಾಭಿಸ್ಸಮತಾಂ ಯಯುಃ ॥ ೪೦ ॥
ತತಸ್ಸಮಸ್ತತೀರ್ಥಾನಿ ನದನದ್ಯಾಶ್ಚ ಸರ್ವಶಃ ।
ಸ್ಥಾಪಿತಾ ಫಲಕೇ ತಸ್ಮಿಂಸ್ತಥಾಪಿ ನ ಸಮಾ ತುಲಾ ॥ ೪೧ ॥

**ತತಶ್ಚ ಸಂದಿಹಾನೈಸ್ತೈರ್ಬ್ರಹ್ಮಾದ್ಯೈರ್ವಿಬುಧೋತ್ತಮೈಃ ।**
**ಅಸಕೃತ್ತುಲಿತಂ ಪ್ರಾಗ್ವತ್ತಥಾಪಿ ನ ಸಮಾಭವತ್ ॥ ೪೨ ॥**
**ಲಬ್ಧಸ್ಮೃತಿಕಲಾಃ ಸರ್ವೇ ಮುಹೂರ್ತಾತ್ತು ಸುರಾದಯಃ ।**
**ಸಂಹತ್ಯಾಕ್ದಾಂಜಸಾ ಗತ್ವಾ ಶೇಷರಾಜಂ ವಿಜಿಜ್ಞುಃ ॥ ೪೩ ॥**

**ಸೂತರು ಹೇಳುತ್ತಾರೆ—**

ಈ ರೀತಿಯಾಗಿ ತಕ್ಕಡಿಯಲ್ಲಿದ್ದ ದೇವತೆಯನ್ನು ಪ್ರಾರ್ಥನೆ ಮಾಡಿದ ಬ್ರಹ್ಮದೇವರು ಮೊದಲು ಮೋಕ್ಷದಾಯಕಗಳೆಂದು ಪ್ರಸಿದ್ಧವಾಗಿದ್ದ ಏಳು ಪಟ್ಟಣಗಳನ್ನು ಒಂದೊಂದಾಗಿ ತಕ್ಕಡಿಯ ಎರಡು ತಟ್ಟೆಗಳಲ್ಲಿಯೂ ಇಟ್ಟು ಪರಸ್ಪರ ಅವುಗಳ ಶ್ರೇಷ್ಠತೆಯನ್ನು ತೂಕ ಹಾಕಿ ಪರೀಕ್ಷಿಸಿದರು; ಆದರೆ ಅವುಗಳು ಒಂದಕ್ಕಿಂತ ಇನ್ನೊಂದು ಹೆಚ್ಚಿನ ತೂಕವುಳ್ಳದ್ದು ಅಥವಾ ಕಡಿಮೆ ತೂಕವುಳ್ಳದ್ದೂ ಆಗದೆ ಪರಸ್ಪರ ಸರಿಸಮನಾಗಿ ತೂಗಿದವು. ॥ ೩೮ ॥ ಅನಂತರ ಒಂದು ತಟ್ಟೆಯಲ್ಲಿ ಏಳು ಪಟ್ಟಣಗಳನ್ನೂ ಮತ್ತೊಂದರಲ್ಲಿ ಕುಲಾಚಲಗಳೆಂದು ಪ್ರಸಿದ್ಧವಾಗಿರುವ ಏಳು ಪರ್ವತ-ಶ್ರೇಣಗಳನ್ನು ಇಟ್ಟು ತೂಗಿದರು. ಆದರೂ ಅವುಗಳು ಏಳು ಪಟ್ಟಣಗಳಿಗೆ ಸಮತ್ವವನ್ನು ಹೊಂದಲಿಲ್ಲ. ॥ ೩೯ ॥ ಹೀಗೆಯೇ ಇವುಗಳೊಡನೆ ಒಂದೊಂದರೊಡನೆಯೂ ಮತ್ತು ಗುಂಪು ಗುಂಪಾಗಿಯೂ ಏಳು ಸಮುದ್ರಗಳೂ ತೂಗಲ್ಪಟ್ಟುವು; ಅವೂ ಪರಸ್ಪರ ಸಮನಾಗಲಿಲ್ಲ. ಹಾಗೆಯೇ ಏಳು ದ್ವೀಪಗಳೂ ಮತ್ತು ಆ ದ್ವೀಪಗಳಲ್ಲಿರುವ ಏಳು ಭೂ ಖಂಡಗಳೂ ಒಂದೊಂದಾಗಿ ಮತ್ತು ಒಟ್ಟಿಗೆ ತೂಗಲ್ಪಟ್ಟುವು. ಅವೂ ಪರಸ್ಪರ ಸಮತೆಯನ್ನು ಹೊಂದಲಿಲ್ಲ. ॥೪೦ ॥ ಅನಂತರ ಮೂರು ಲೋಕದಲ್ಲಿನ ಎಲ್ಲ ತೀರ್ಥಗಳೂ ಮತ್ತು ಪುಲ್ಲಿಂಗ ವಾಚ್ಯಗಳಾದ ಮತ್ತು ಸ್ತ್ರೀಲಿಂಗವಾಚ್ಯಗಳಾದ ಎಲ್ಲ ನದಿಗಳೂ ಆ ತೂಗು ತಟ್ಟೆಯಲ್ಲಿ ಇಡಲ್ಪಟ್ಟವು. ಆದರೂ ಅವು ಆ ಏಳು ಪಟ್ಟಣಗಳಿಗೆ ಪರಸ್ಪರ ಸಮತ್ವವನ್ನು ಪಡೆಯಲಿಲ್ಲ. ॥ ೪೧ ॥ ಆಗ ಬ್ರಹ್ಮಾದಿದೇವತೆಗಳು ಸಂದೇಹಗ್ರಸ್ತರಾಗಿ ಅನೇಕ ಬಾರಿ ಅವುಗಳನ್ನು ಪರಸ್ಪರ ತೂಗಿದರು ; ಆದರೂ ಅವುಗಳು ತೂಕದಲ್ಲಿ ಆ ಏಳು ಪಟ್ಟಣಗಳಿಗೆ ಸಮನಾಗಲಿಲ್ಲ.॥ ೪೨ ॥ ಹೀಗೆ ಇರಲು, ಅವರಿಗೆ ತಟ್ಟನೇ ಶ್ರೀಶೇಷದೇವರ ಸ್ಮರಣೆಯಾಯಿತು; ಕೂಡಲೇ ಅವರೆಲ್ಲ ಕಲೆತು ಶೇಷದೇವರೊಡನೆ ವಿಚಾರ ಮಾಡಲು ಅವರ ಬಳಿ ಬಂದರು. ॥ ೪೩ ॥ ಶೇಷದೇವರ ಸಮ್ಮುಖದಲ್ಲಿ ಬ್ರಹ್ಮದೇವರು ಹೇಳುತ್ತಾರೆ.

**ಬ್ರಹ್ಮಾದಯಃ ಊಚುಃ—**

**ಶೇಷ ಸರ್ವವಿಧಾನಜ್ಞ ತುಲಾಯಾಂ ತುಲಿತಂ ಜಗತ್ ।**
**ನ ಸಮಂ ನಾಧಿಕಂ ಜಾತಂ ಪೂರ್ಭಿಸ್ತನ್ನ್ಯೂನತಾಂಗತಮ್ ॥ ೪೪ ॥**
**ಕಿಂ ತತ್ರ ಕಾರಣಂ ಸ್ಪಷ್ಟಂ ವಕ್ತುಮರ್ಹಸಿ ನಃ ಪ್ರಭೋ ।**
**ಸ್ಪಷ್ಟೀಕರಣಸಾಮರ್ಥ್ಯಂ ಸಂಶಯೇಷು ತಥೈವ ಹಿ ॥ ೪೫ ॥**

**ಬ್ರಹ್ಮಾದಿಗಳು ಹೇಳಿದರು—**

ಎಲ್ಲ ವಿಧಿವಿಧಾನಗಳನ್ನು ಅರಿತಿರುವ ಶ್ರೀಶೇಷದೇವರೇ, ಇಡೀ ಜಗತ್ತೇ ಮೋಕ್ಷದಾಯಕಗಳೆಂದು ಉಕ್ತವಾಗಿರುವ ಈ ಏಳು ಪಟ್ಟಣಗಳ ವಿರುದ್ಧ ಇಡೀ ಜಗತ್ತನ್ನೇ ಇಟ್ಟು

ತೂಗಿದೆವು. ಅವು ಯಾವುದೂ ಏಳು ಪಟ್ಟಣಗಳಿಗೆ ಸರಿಸಮಾನವಾಗಲಿಲ್ಲ. ಆದರೆ ಅವುಗಳಿಗಿಂತ ಮಹತ್ವದಲ್ಲಿ ಕಡಿಮೆಯೇ ಆದುವು. ॥ ೪೪ ॥ ಹೀಗಾಗಲು ಸ್ಪಷ್ಟವಾದ ಏನು ಕಾರಣ ಇದೆ ? ಸಮರ್ಥರಾದ ತಾವು ಹೇಳಬಲ್ಲಿರಿ. ಸಂಶಯಗಳ ಸುರಳಿಯಲ್ಲಿ ಸಿಲುಕಿದ ನಮಗೆ ಈ ಬಗ್ಗೆ ಸ್ಪಷ್ಟಪಡಿಸುವ ಸಾಮರ್ಥ್ಯವು ತಮಗಿರುತ್ತದೆ. ॥ ೪೫ ॥ ಎಂಬುದಾಗಿ ಹೇಳಿದರು.

**ಸೂತ ಉವಾಚ—**

**ಕಿಂ ಕರ್ತವ್ಯವಿಮೂಢಾನಾಂ ಶ್ರುತ್ವಾ ತೇಷಾಂ ವಚಸ್ತತಃ ।**
**ಊಚೇ ಸಂಕರ್ಷಣೋ ದೇವಃ ಪ್ರಹಸನ್ ದಿವ್ಯಲೋಚನಃ ॥ ೪೬ ॥**

**॥ ಇತಿ ಷಷ್ಠೋಽಧ್ಯಾಯಃ ॥**

**ಸೂತರು ಹೇಳಿದರು—**

ಏನು ಮಾಡಲೂ ತೋಚದಿರುವ ಬ್ರಹ್ಮಾದಿಗಳ ಮಾತನ್ನು ಕೇಳಿದ ಶ್ರೀಸಂಕರ್ಷಣಾಖ್ಯ ಶೇಷದೇವರು ಸ್ವಲ್ಪಮುಗುಳ್ನಕ್ಕು ಆಲೋಚಿಸಿ ಹೇಳಿದರು. ॥ ೪೬ ॥

॥ ಆರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತಮೋಽಧ್ಯಾಯಃ ॥ ೭ ॥

ಶ್ರೀ ಶೇಷ ಉವಾಚ—

ಅಹೋ ಬ್ರಹ್ಮಾದಯೋ ದೇವಾಃ ಕುತಃ ಸಂದಿಗ್ಧಮಾನಸಾಃ ।
ಭವಂತ್ಯೇವಾಧಿಕಾಸ್ತೇಭ್ಯಃ ಸಪ್ತಪುರ್ಯಸ್ತು ಮುಕ್ತಿದಾಃ ॥ ೧ ॥
ಏಕತ್ರ ತುಲಿತಂ ಸರ್ವಂ ಸಪೂರಿಕಂ ನಿಧೀಯತಾಮ್ ।
ಪ್ರಯಾಗಮಪರತ್ರೇದಂ ಸ್ಥಾಪ್ಯತಾಂ ಸಕಲಾಧಿಕಮ್ ॥ ೨ ॥
ವಿರಾಜಃ ಪುರುಷಸ್ಯೇದಂ ಉತ್ತಮಾಂಗಂ ಪ್ರಕೀರ್ತಿತಮ್ ।
ನಿರ್ಮಲಂ ತೇನ ವೋ ಗಂತಾ ಸರ್ವೇಷಾಮಪಿ ಸಂಶಯಃ ॥ ೩ ॥
ಯದೀಯಾವಯವಾ ದೇವಾಃ ಪುರ್ಯಃ ಸಪ್ತಾಪಿ ಧಾತವಃ ।
ನಾಡ್ಯೋ ನದ್ಯಃ ಜಲಧರಾ ಮೂರ್ಧಜಾ ಅಸ್ಥೀನಿ ಪರ್ವತಾಃ ॥ ೪ ॥
ತತ್ರೋತ್ತಮಾಂಗಂ ದೇವಸ್ಯ ಪ್ರಯಾಗಂ ಸರ್ವತೋಽಧಿಕಮ್ ।
ಶ್ರುತಿಸ್ಮೃತಿಷು ಸಂಗೀತಂ ಚತುರ್ವರ್ಗಫಲಪ್ರದಮ್ ॥ ೫ ॥
ಅಸೀವರುಣಯೋರ್ಮೂಲಂ ಜ್ಞಾನಿನಾಂ ಯೋಗಚಕ್ಷುಷಾಮ್ ।
ಪ್ರತ್ಯಕ್ಷಕರಣಂ ನಾನ್ಯದಸ್ತಿ ಬ್ರಹ್ಮಾಂಡಗೋಲಕೇ ॥ ೬ ॥
ಬ್ರಹ್ಮಾಂಡಾಜ್ಜಗದುತ್ಪತ್ತಿರ್ಬ್ರಹ್ಮಾಂಡೋ ಜಗತೋ ನ ಹಿ ।
ಪ್ರಯಾಗಾತ್ಸರ್ವತೀರ್ಥಾನಿ ನ ಪ್ರಯಾಗೋಽನ್ಯತೀರ್ಥತಃ ॥ ೭ ॥
ಚರಾಚರಸ್ವರೂಪೋ ಯಃ ಉದ್ಭವಸ್ಥಿತಿನಾಶಕಃ ।
ಮಾಧವೋ ವಸತೇ ಯತ್ರ ಸಲಕ್ಷ್ಮೀಕಸ್ಸದಾ ಮುದಾ ॥ ೮ ॥
ಕ್ಷೇತ್ರಚೂಡಾಮಣಿರ್ಯತ್ರ ರಾಜತೇ ವಟವೃಕ್ಷರಾಟ್ ।
ಶೂಲಿತಾಂಡವಸಂಹೃಷ್ಟಮಾಧವಾವಾಸಮಂಗಲಃ ॥ ೯ ॥
ಗಂಗಾ ಚ ಯಮುನಾ ಚೈವ ಮಧ್ಯೇ ಗುಪ್ತಾ ಸರಸ್ವತೀ ।
ತದಗ್ರಭಾಗೇ ಯಾ ಸರತಿ ಸಾ ವೇಣೀ ಯತ್ರ ಶೋಭತೇ ॥ ೧೦ ॥
ತತ್ರ ವಾಸಂ ಪ್ರಕುರ್ವಂತಿ ಜ್ಞಾನಿನೋಽಜ್ಞಾನಿನೋ ನರಾಃ ।
ಕಲ್ಪಿತಂ ಫಲಮಾಯಾಂತಿ ನ ಯಾಂತಿ ಪುನರಾಗಮಮ್ ॥ ೧೧ ॥
ಯಾ ಗತಿರ್ಯೋಗಿನಾಂ ಯೋಗಾತ್ಪಿಂಡಬ್ರಹ್ಮಾಂಡಭೇದನಾತ್
ಸಾ ಗತಿಃ ಕ್ಷೇತ್ರಸಂನ್ಯಾಸಾಜ್ಜಂತೂನಾಂ ಜಾಯತೇ ಸದಾ ॥ ೧೨ ॥
ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಂ ವೇದೋ ಜಾನಾತಿ ನಾಪರಃ ।
ಜ್ಞಾನಿನೋಽಪ್ಯತ್ರ ತತ್ಜ್ಞಾಃ ಸಂಶಯಾಪನ್ನಮಾನಸಾಃ ॥ ೧೩ ॥
ಅತ್ರ ಯಸ್ಸಂಶಯಂ ಧತ್ತೇ ವೇದೇ ತಸ್ಯಾಪಿ ಸಂಶಯಃ ।
ಅತ್ರ ಯೋ ನಿಶ್ಚಯಂ ಯಾತಿ ಸ ಸರ್ವತ್ರ ವಿನಿಶ್ಚಯಃ ॥ ೧೪ ॥

ಅತ್ರ ಯೋ ನ ಗತಿಂ ಬ್ರೂತೇ ಗತಿಸ್ತಸ್ಯ ನ ಕುತ್ರಚಿತ್ ।
ಅತ್ರ ಕಾಮಂ ನ ಯೋ ಬ್ರೂತೇ ತಸ್ಯ ಕಾಮೋ ನ ಕುತ್ರಚಿತ್ ॥ ೧೫ ॥
ಅತ್ರ ಮೋಕ್ಷಂ ನ ಯೋ ಬ್ರೂತೇ ತಸ್ಯ ಮೋಕ್ಷೋ ನ ಕುತ್ರಚಿತ್ ।
ವೈರಾಗ್ಯಂ ನಾತ್ರ ಯೋ ಬ್ರೂತೇ ತನ್ನ ತಸ್ಯಾಸ್ತಿ ಕುತ್ರಚಿತ್ ॥ ೧೬ ॥
ಅತ್ರ ಕ್ಷೇಮಂ ನ ಯೋ ಬ್ರೂತೇ ತತ್ರ ಕ್ಷೇಮಂ ನ ಕುತ್ರಚಿತ್ ।
ಯದತ್ರ ನಾಸ್ತಿ ಯೋ ಬ್ರೂತೇ ತನ್ನ ತಸ್ಯಾಸ್ತಿ ಕುತ್ರಚಿತ್ ॥ ೧೭ ॥
ಚತುರ್ವರ್ಗಪ್ರದಾನೇನ ಜಾಗರೂಕೇ ಜಗತ್ತ್ರಯೇ ।
ಯದತ್ರ ನಾಸ್ತಿ ಯೋ ಬ್ರೂತೇ ತನ್ನ ತಸ್ಯಾಸ್ತಿ ಕಿಂಚಿತ್ ॥ ೧೮ ॥
ಕ್ಷೇತ್ರೇ ಯಸ್ಯ ತು ಯತ್ಪ್ರೋಕ್ತಂ ತಾವದೇವ ನ ಚೇತರತ್ ।
ತದತ್ರ ಲಕ್ಷಗುಣಿತಂ ಹ್ಯಾಸ್ತಿಕೇನ ತು ನಾಸ್ತಿಕೇ ॥ ೧೯ ॥
ತಸ್ಮಾನ್ಮದ್ವಚಸಾ ದೇವಾಃ ನಿಶ್ಚಯಂ ಜ್ಞಾತುಮಿಚ್ಛವಃ ।
ಈದೃಗ್ಗುಣಾನ್ವಿತಂ ಪುಣ್ಯಂ ಹೃದ್ಗತಾರ್ಥಪ್ರದಾಯಕಮ್ ॥ ೨೦ ॥
ಪಂಚಕ್ರೋಶಾತ್ಮಕಂ ಕ್ಷೇತ್ರಂ ಷಟ್ಕೋಣಂ ವಿಶ್ವತೋನ್ನತಮ್।
ಪ್ರಕೃಷ್ಟಂಸರ್ವಯಾಗೇಭ್ಯಸ್ತುಲಾಯಾಮಧಿರೋಹತು ॥ ೨೧ ॥
ಇತಿ ಸಂಕರ್ಷಣವಚಸ್ಸಮಾಕರ್ಣ್ಯಾಕುಲೇಂದ್ರಿಯಾಃ ।
ಕ್ಷೇತ್ರಮೇತತ್ತುಲಾಭಾಗೇ ಸ್ಥಾಪಯಾಮಾಸುರಂಜಸಾ ॥ ೨೨ ॥
ವ್ಯಸ್ತಮಾತ್ರೇ ತದಾ ಕ್ಷೇತ್ರೇ ಪುರ್ಯಾದಿಫಲಕಂ ಫರಮ್ ।
ಧ್ರುವಮಂಡಲಮಾಕ್ರಮ್ಯ ದ್ವ್ಯಂಗುಲಂ ಚೋನ್ನತಂ ಭವತ್ ॥ ೨೩ ॥
ತದಾ ವಿಧಿಮುಖಾಸ್ಸರ್ವೇ ತುಲಾಯಾಂ ನಿಶ್ಚಯಂ ಗತಾಃ ।
ಪ್ರಯಾಗಸ್ಸರ್ವತೀರ್ಥಾನಾಮಧಿಭೂರಿತಿ ಸತ್ತಮಃ ॥ ೨೪ ॥

**॥ ಏಳನೆಯ ಅಧ್ಯಾಯವು ॥**

**ಶ್ರೀ ಶೇಷದೇವರು ಹೇಳಿದರು—**

ಇದೇನಾಶ್ಚರ್ಯ! ಬ್ರಹ್ಮಾದಿದೇವತೆಗಳಿರಾ! ಯಾವ ಕಾರಣದಿಂದ ನಿಮ್ಮ ಮನಸ್ಸಿನಲ್ಲಿ ಸಂದೇಹವುಂಟಾಯಿತು? ಸಪ್ತಪುರಿಗಳು ಬೇರೆ ಎಲ್ಲ ಪಟ್ಟಣಗಳಿಗಿಂತ ಹೆಚ್ಚಿನ ಮಹಾತ್ಮೆಯುಳ್ಳದ್ದೇನೋ ನಿಜ ಮತ್ತು ಅವುಗಳು ಮುಕ್ತಿಯನ್ನು ಕೊಡತಕ್ಕವುಗಳೇ ಸರಿ. ॥ ೧ ॥ ಒಂದೇ ತಟ್ಟೆಯಲ್ಲಿ ಈ ಏಳು ಪಟ್ಟಣಗಳನ್ನು ಸೇರಿಸಿ ಇಡೀ ಬ್ರಹ್ಮಾಂಡದ ಎಲ್ಲ ಕ್ಷೇತ್ರಗಳನ್ನು, ನದಿಗಳನ್ನು ಮತ್ತು ಕುಲಪರ್ವತಗಳನ್ನೂ ಇರಿಸಿ ಮತ್ತು ಇನ್ನೊಂದು ತಟ್ಟೆಯಲ್ಲಿ ಎಲ್ಲಕ್ಕಿಂತಲೂ ಮಾಹಾತ್ಮ್ಯೆಯಲ್ಲಿ ಅಧಿಕವಾಗಿರುವ ಪ್ರಯಾಗಕ್ಷೇತ್ರವನ್ನು ಇಡಿರಿ. (ಅಂದರೆ ಆಯಾ ಪಟ್ಟಣಗಳ, ನದಿಗಳ, ಪರ್ವತಗಳ ದೇವತೆಗಳನ್ನು ಒಂದೊಂದು ಶಿಲಾಗಳಲ್ಲಿ ಆವಾಹನಮಾಡಿ ಅವುಗಳನ್ನೆಲ್ಲಾ ಒಂದು ಕಡೆ ಇಡಿರಿ. ಹೀಗೆಯೇ ಪ್ರಯಾಗಕ್ಷೇತ್ರವನ್ನೂ ಇನ್ನೊಂದು ಹಲಗೆಯಲ್ಲಿ ಇಡಿರಿ ಎಂದು ಅಭಿಪ್ರಾಯ. ಇದೇ ರೀತಿ ಶ್ರೀಮನ್ಮಹಾಭಾರತ ಗ್ರಂಥದ ಹಿರಿಮೆಯನ್ನು ಹೋಲಿಸಿದಾಗ ಎಲ್ಲ ಗ್ರಂಥಾಭಿಮಾನಿ

ದೇವತೆಗಳನ್ನು ಶಿಲೆಯಲ್ಲಿ ಆವಾಹನ ಮಾಡಿ ಒಂದು ಹಲಗೆಯಲ್ಲಿಯೂ ಇನ್ನೊಂದು ಹಲಗೆಯಲ್ಲಿ ಮಹಾಭಾರತಗ್ರಂಥಾಭಿಮಾನಿದೇವತೆಗಳನ್ನು ಇನ್ನೊಂದು ಶಿಲೆಯಲ್ಲಿ ಆವಾಹನ ಮಾಡಿ ಇಟ್ಟು ತೂಗಿದರು ಎಂದು ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥದಲ್ಲಿ ಉಕ್ತವಾಗಿದೆ). ॥ ೨ ॥ ವಿರಾಟ್ ಪುರುಷನಾದ ಶ್ರೀಲಕ್ಷ್ಮೀನಾರಾಯಣನ ಶಿರಸ್ಸು ಈ ಪ್ರಯಾಗ ಕ್ಷೇತ್ರವಾಗಿದೆ. ಈ ರೀತಿ ತೂಕ ಮಾಡಿ ನೋಡುವುದರಿಂದ ನಿಮ್ಮ ಸಂದೇಹವು ನಿವಾರಣೆಯಾಗುವುದು. ॥ ೩ ॥ ಈ ಎಲ್ಲಾ ದೇವತೆಗಳು ಇದೇ ವಿರಾಟ್ ಪುರುಷನ ಅವಯವಗಳು. ಅವನ ಶರೀರದಲ್ಲಿರುವ ತ್ವಕ್, ಚರ್ಮ ಮುಂತಾದ ಏಳು ಧಾತುಗಳೇ ಈ ಮೋಕ್ಷದಾಯಕಗಳಾದ ಪಟ್ಟಣಗಳು. ವಿರಾಟ್ಪುರುಷನ ನಾಡಿಗಳೆಂದರೆ ನದಿಗಳೇನೇ, ಅವನ ಕೂದಲುಗಳು ಈ ಮೇಘರಾಶಿಗಳು ಮತ್ತು ಅವನ ಶರೀರದ ಅಸ್ಥಿಗಳೆಂದರೆ ಈ ಪರ್ವತಶ್ರೇಣಿಗಳು. ॥ ೪ ॥ ಈ ವಿರಾಟ್ಪುರುಷನ ತಲೆಯೆನಿಸಿರುವ ಈ ಪ್ರಯಾಗವು ಎಲ್ಲವುಗಳಿಗಿಂತ ಶ್ರೇಷ್ಠವೇ ಸರಿ. ಅಲ್ಲದೆ ಈ ಕ್ಷೇತ್ರವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ಬಗೆಯ ಪುರುಷಾರ್ಥಗಳನ್ನು ಕೊಡತಕ್ಕದ್ದೆಂದು ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ॥ ೫ ॥ ''ಅಸೀ'' ಮತ್ತು ''ವರುಣ'' ಎಂಬ ನಾಡಿಗಳು (ಇಡಾ ಮತ್ತು ''ಪಿಂಗಳಾ'' ನಾಡಿಗಳ ಮೂಲಗಳು) ಪ್ರಯಾಗಕ್ಷೇತ್ರದಲ್ಲಿರುವ ಜ್ಞಾನಿಗಳ ಯೋಗದೃಷ್ಟಿಗೆ ಗೋಚರ-ವಾಗುತ್ತವೆ. ವೇದವಾಕ್ಯಗಳನ್ನು ಬಿಟ್ಟು ಈ ಪ್ರಯಾಗಕ್ಷೇತ್ರದ ಹಿರಿಮೆಯನ್ನು ಸಾರಿ ಹೇಳುವ ಪ್ರತ್ಯಕ್ಷಕಾರಣಗಳಾವವೂ ಬ್ರಹ್ಮಾಂಡದಲ್ಲಿ ಇಲ್ಲ. ॥ ೬ ॥ ಬ್ರಹ್ಮಾಂಡದಿಂದ, ಅದರ ಒಳಗೆ ಜಗತ್ತಿನ ಉತ್ಪತ್ತಿ ಆಗಿದೆ, ಆದರೆ ಬ್ರಹ್ಮಾಂಡವು ಜಗತ್ತಿನ ದೆಶೆಯಿಂದ ಆಗಿಲ್ಲ. ಎಲ್ಲವೂ ಶ್ರೀಹರಿಯಿಂದಲೇ ಸೃಷ್ಟವಾಗಿವೆ. ಅದರಂತೆ ಪ್ರಯಾಗವೂ ಎಲ್ಲ ತೀರ್ಥಗಳ ಹಿರಿಮೆಗೆ ಮೂಲಕಾರಣ. ಆದರೆ ಬೇರೆಲ್ಲ ತೀರ್ಥಗಳು ಪ್ರಯಾಗದ ಹಿರಿಮೆಗೆ ಕಾರಣವಲ್ಲ. ॥ ೭ ॥ ಪರಮಾತ್ಮನು ಚರಾಚರ ವಸ್ತುಗಳನ್ನು ಸೃಷ್ಟಿಸಿ ಅವುಗಳನ್ನು ನಿಯಮಿಸುತ್ತಾನೆ. ಆ ಪರಮಾತ್ಮನೇ ಪ್ರಯಾಗ ಕ್ಷೇತ್ರದಲ್ಲಿ ವೇಣೀಮಾಧವನೆಂಬ ಹೆಸರುಳ್ಳವನಾಗಿ ಶ್ರೀಲಕ್ಷ್ಮೀದೇವಿಯರೊಡನೆ, ಆನಂದದಿಂದ ಸದಾ ವಿರಾಜಮಾನನಾಗಿದ್ದಾನೆ. ॥ ೮ ॥ ವಟವೃಕ್ಷವೆಂದು ಪ್ರಸಿದ್ಧವಾಗಿರುವ ಆಲದ ಮರವು ಈ ಕ್ಷೇತ್ರಕ್ಕೆ ಶಿರೋರತ್ನಪ್ರಾಯವಾಗಿದೆ. ಇಲ್ಲಿಯೇ ಈಶ್ವರನ ತಾಂಡವನೃತ್ಯದಿಂದ ಸಂತೋಷಗೊಂಡ ಶ್ರೀಮಾಧವದೇವರು ಇದ್ದಾರೆ. ॥ ೯ ॥ ಈ ಕ್ಷೇತ್ರದಲ್ಲಿ ಗಂಗಾ ಮತ್ತು ಯಮುನೆಯರು ಹರಿಯುತ್ತಿದ್ದಾರೆ. ಈ ನದಿಗಳ ಸಂಗಮಸ್ಥಳದಲ್ಲಿ, ಅಗ್ರಭಾಗದಲ್ಲಿ ಸರಸ್ವತೀನದಿಯು ಗುಪ್ತವಾಗಿ ಇದ್ದಾಳೆ. ಈ ಮೂರು ನದಿಗಳೂ ಸೇರಿ ಮುಂದೆ ''ತ್ರಿವೇಣೀ'' ಎಂಬ ಹೆಸರಿನಿಂದ (ಮೂರು ಕಾಲಿನ ಜಡೆಯೆಂದರ್ಥ) ಹರಿಯುತ್ತದೆ. ॥ ೧೦ ॥ ಜ್ಞಾನಿಗಳೂ ಮತ್ತು ಅಜ್ಞಾನಿಗಳೂ ಈ ಕ್ಷೇತ್ರವಾಸದಿಂದ ತಮ್ಮ ತಮ್ಮ ಫಲಗಳನ್ನು ಹೊಂದುವುದಲ್ಲದೆ ಕ್ರಮೇಣ ಮೋಕ್ಷವನ್ನೂ ಪಡೆಯುತ್ತಾರೆ. ॥ ೧೧ ॥ ಕರ್ಮಯೋಗಿಗಳು, ಜ್ಞಾನಯೋಗಿಗಳು ಮತ್ತು ರಾಜಯೋಗಿಗಳು ತಮ್ಮ ತಮ್ಮ ಸಾಧನೆಗಳಾದ ನಂತರ ತಮಗೆ ವಿಹಿತವಾದ ಮಾರ್ಗಗಳಿಂದ ದೇಹವನ್ನೂ, ಬ್ರಹ್ಮಾಂಡವನ್ನೂ ಭೇದಿಸಿ ಶ್ರೀಹರಿಯ ಯಾವ ಲೋಕಾದಿಗಳನ್ನು ಪಡೆಯುವರೋ, ಅಂತಹ ಉತ್ತಮ ಗತಿಯು ಪ್ರಯಾಗಕ್ಷೇತ್ರದಲ್ಲಿದ್ದು ಕ್ಷೇತ್ರಸನ್ನ್ಯಾಸ ಮಾಡಿದವರಿಗೆ ಆಗುವುದು. (ಸಂನ್ಯಾಸವೆಂದರೆ ತಮ್ಮ ಸಮಸ್ತವನ್ನು ಪರಮಾತ್ಮನಿಗೆ ಸಮರ್ಪಿಸಿ ಕೃಷ್ಣಾರ್ಪಣಭಾವದಿಂದ ಇರುವುದು. ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದಂತೆ ಕಾಮ್ಯಕರ್ಮಗಳನ್ನು ಬಿಡುವುದೂ ಸನ್ಯಾಸ. ಸಮ್ಯಕ್ ನ್ಯಾಸಃ ಸಂನ್ಯಾಸಃ. ನ್ಯಾಸ ಅಂದರೆ ಒತ್ತೆಯಿಡುವುದು, ಅಥವಾ ಈ ಕ್ಷೇತ್ರದಲ್ಲಿ

ಸಂನ್ಯಾಸಾಶ್ರಮ ಸ್ವೀಕರಿಸಿದವರಿಗೆ ಅಥವಾ ಸಂನ್ಯಾಸಿಗಳಾಗಿದ್ದು ಈ ಕ್ಷೇತ್ರದಲ್ಲಿ ದೇಹತ್ಯಾಗ ಮಾಡಿದವರಿಗೆ ಸದ್ಗತಿಯಾಗುವುದೆಂದು ತಿಳಿಯಬಹುದು. ಇಲ್ಲಿನ ಸಂನ್ಯಾಸವು ಪರಂಪರಯಾ ಉತ್ತಮೋತ್ತಮ ಸಾಧನಗಳನ್ನು ಮಾಡಿಸಿ ಕೊನೆಗೆ ಸದ್ಗತಿ ಸಿಗುವುದಕ್ಕೆ ಮೂಲ ಕಾರಣವಾಗುವುದೆಂದು ತಿಳಿಯಬೇಕು). ॥ ೧೨ ॥ ಈ ರೀತಿ ಅಭಿಪ್ರಾಯಗಳು ಶ್ರುತಿಸ್ಮೃತಿ-ಗಳಿಂದ ತಿಳಿದುಬರುವುದರಿಂದ ಇದನ್ನು ದೃಢವಾಗಿ ನಂಬಬೇಕು. ಜ್ಞಾನಿಗಳು ಕೂಡಾ ಕೆಲವೊಮ್ಮೆ ಈ ಬಗ್ಗೆ ಸಂಶಯವನ್ನು ಹೊಂದುವರು. ॥ ೧೩ ॥ ಆದ್ದರಿಂದ ಪ್ರಯಾಗದ ವಿಷಯದಲ್ಲಿ ಹೇಳಿರುವ ಈ ಬಗ್ಗೆ ಸಂಶಯವುಳ್ಳವರು ಅಪೌರುಷೇಯಗಳಾಗಿದ್ದು ಪ್ರಮಾಣತಮವೆಂದು ಸಿದ್ಧವಾಗಿರುವ ವೇದವಾಕ್ಯಗಳನ್ನೇ ಅಪನಂಬಿಕೆಯಿಂದ ಗ್ರಹಿಸಿದಂತೆ. ಈ ಸದ್ಗತಿಯು, ಪರಂಪರಯಾ ಪ್ರಾಪ್ತವಾಗುವ ಸದ್ಗತಿಗೆ ಮೂಲಕಾರಣವೆಂದು ತಿಳಿಯಬೇಕು. ಈ ವಿಷಯದಲ್ಲಿ ದಾರ್ಢ್ಯತೆ-ವುಳ್ಳವನು ಎಲ್ಲ ವೇದವಾಕ್ಯಗಳಲ್ಲಿಯೂ ದಾರ್ಢ್ಯತೆವುಳ್ಳವನಾಗಿರುತ್ತಾನೆ, ಇದು ನಿಶ್ಚಯ. ॥ ೧೪ ॥ ಇಲ್ಲಿ ಸದ್ಗತಿಯಾಗುವುದಿಲ್ಲವೆಂದು ಯಾರು ಹೇಳುವರೋ ಅವರಿಗೆ ಬೇರೆಲ್ಲಿಯೂ ಸದ್ಗತಿ ಸಿಗುವುದಿಲ್ಲ. ಈ ಕ್ಷೇತ್ರದಲ್ಲಿ ಉಂಟಾಗುವ ಅಭಿಲಾಷೆಗಳನ್ನು ಸದಭಿಲಾಷೆಯೆಂದು ಯಾರು ಹೇಳುವುದಿಲ್ಲವೋ ಅಂತಹವರಿಗೆ ಸತ್ಯಕಾಮನೆಯು ಉಂಟಾಗುವುದೇ ಇಲ್ಲ. ॥ ೧೫ ॥ ಇಲ್ಲಿ ಮೋಕ್ಷವಾಗುವುದೆಂದು ಯಾರು ಹೇಳುವುದಿಲ್ಲವೋ ಅಂತಹವರಿಗೆ ಇನ್ನೆಲ್ಲಿಯೂ ಮೋಕ್ಷ ಸಿಗುವುದಿಲ್ಲ. ಈ ಕ್ಷೇತ್ರದಲ್ಲಿ ವೈರಾಗ್ಯಪ್ರಾಪ್ತಿಯಾಗುವುದಿಲ್ಲವೆಂದು ಯಾರು ಹೇಳುತ್ತಾರೋ ಅಂತಹವರಿಗೆ ಬೇರೆಲ್ಲಿಯೂ ವೈರಾಗ್ಯವು ಉಂಟಾಗಲಾರದು. ॥ ೧೬ ॥ ಇಲ್ಲಿ ಸುಕ್ಷೇಮ-ಪ್ರಾಪ್ತಿಯು ಆಗಲಾರದೆಂದು ಹೇಳುವವರಿಗೆ ಇನ್ನೆಲ್ಲಿಯೂ ಕ್ಷೇಮ ಸಿಗಲಾರದು. ಒಟ್ಟಿನಲ್ಲಿ ಇಲ್ಲಿ ಯಾವ ಪುಣ್ಯವೂ ಇಲ್ಲವೆಂದು ಹೇಳುವವನಿಗೆ ಬೇರೆಲ್ಲಿಯೂ ಯಾವ ಪುಣ್ಯವೂ ಸಿಗುವುದಿಲ್ಲ. ॥ ೧೭ ॥ ತ್ರಿಲೋಕಗಳಲ್ಲಿಯೂ ಧರ್ಮಾರ್ಥಕಾಮಮೋಕ್ಷವೆಂಬ ಚತುರ್ವಿಧ ಪುರುಷಾರ್ಥ-ಗಳನ್ನು ಕೊಡಲು ಜಾಗರೂಕತೆಯಿಂದ ಕಾದು ನಿಂತಿರುವ ಈ ಕ್ಷೇತ್ರದಲ್ಲಿ ಏನೂ ಇಲ್ಲವೆಂದು ಹೇಳುವವರಿಗೆ ಎಲ್ಲಿಯೂ ಏನೂ ಸಿಗುವುದಿಲ್ಲ. ॥ ೧೮ ॥ ಬೇರೆ ಕ್ಷೇತ್ರದಲ್ಲಿ ಯಾವುದಕ್ಕೆ ಎಷ್ಟು ಫಲವು ಹೇಳಲ್ಪಟ್ಟಿದೆಯೋ ಅಷ್ಟೇ ಸಿಗುವುದು. ಆದರೆ ಪ್ರಯಾಗದಲ್ಲಿ ಅದೇ ಸಾಧನೆಗೆ ಲಕ್ಷದಷ್ಟು ಹೆಚ್ಚಿಗೆ ಫಲ ಸಿಗುವುದು. ಹೀಗೆ ಸಿಗತಕ್ಕದ್ದು ಆಸ್ತಿಕರಿಗೆ ಮಾತ್ರ, ನಾಸ್ತಿಕರಿಗಲ್ಲ. ॥ ೧೯ ॥ ದೇವತೆ-ಗಳಿರಾ! ನನ್ನ ಮಾತಿನಿಂದ, ಇಷ್ಟು ಗುಣಗಳಿಂದ ಕೂಡಿದ, ಮನಸ್ಸಿನ ಎಲ್ಲ ಅಪೇಕ್ಷೆಗಳನ್ನು ತೀರಿಸುವ ಈ ಕ್ಷೇತ್ರವನ್ನು ತಿಳಿದುಕೊಳ್ಳಲು ನೀವು ಅಪೇಕ್ಷಿಸುತ್ತಿದ್ದೀರಿ. ಆದ್ದರಿಂದ ಹೇಳುವೆನು. ॥ ೨೦ ॥ ಈ ಪ್ರಯಾಗ ಹತ್ತು ಮೈಲಿ ವಿಸ್ತೀರ್ಣತೆವುಳ್ಳದ್ದು. (ಐದು ಕ್ರೋಶ. ೧ ಕ್ರೋಶ=೨ ಮೈಲಿ)ಆರು ಮೂಲೆಯ ಆಕಾರವುಳ್ಳದ್ದು (ಷಟ್ಕೋಣಾಕಾರ), ಎಲ್ಲಾ ಕ್ಷೇತ್ರಗಳಲ್ಲೂ ಶ್ರೇಷ್ಠವಾದದ್ದು ಮತ್ತು ಇಲ್ಲಿ ಸಮಸ್ತ ಯಾಗಗಳಿಂದ ಬರುವ ಫಲಗಳಿಗಿಂತ ಹೆಚ್ಚಿನ ಫಲಪ್ರದ- ವಾದದ್ದು ; ಈ ವಿಷಯ ತಿಳಿದು ಈ ಪ್ರಯಾಗವನ್ನು ತಕ್ಕಡಿಯಲ್ಲಿ ಇಡಿ. ॥ ೨೧ ॥ ಈ ಪ್ರಕಾರವಾದ ಶ್ರೀ ಶೇಷದೇವರ ಮಾತನ್ನು ಕೇಳಿ ಯೋಚನೆಗೊಳಗಾಗಿದ್ದ ಬ್ರಹ್ಮಾದಿದೇವತೆಗಳು ಈ ಪ್ರಯಾಗಕ್ಷೇತ್ರವನ್ನು ತಕ್ಕಡಿಯ ಇನ್ನೊಂದು ಹಲಗೆಯ ಮೇಲೆ ಇಟ್ಟರು. ॥ ೨೨ ॥ ಆ ಪ್ರಯಾಗಕ್ಷೇತ್ರವನ್ನು ಇಟ್ಟ ಕೂಡಲೇ ತಕ್ಕಡಿಯ ಮತ್ತೊಂದು ಹಲಗೆಯು (ಯಾವುದರಲ್ಲಿ ಏಳು ಪಟ್ಟಣಗಳು, ನದಿಗಳು, ಪರ್ವತಗಳು ಇದ್ದವೋ ಅದು) ಧ್ರುವಮಂಡಲವನ್ನು ಮೀರಿ ಮೇಲಕ್ಕೆ ಎದ್ದು ಆ ಧ್ರುವಮಂಡಲಕ್ಕಿಂತ ಎರಡು ಅಂಗುಲ ಮೇಲೆ ನಿಂತುಕೊಂಡಿತು. ॥ ೨೩ ॥ ಆಗ ಬ್ರಹ್ಮದೇವರೇ

ಮೊದಲಾದ ದೇವತೆಗಳೆಲ್ಲರೂ ಸರ್ವ ತೀರ್ಥಗಳಲ್ಲಿ ಪ್ರಯಾಗವೇ ಅತಿಶ್ರೇಷ್ಠ- ವಾದುದು; ಆದ್ದರಿಂದ ಅದೇ ''ಕ್ಷೇತ್ರರಾಜನು'' ಎಂದು ತಕ್ಕಡಿಯ ಪ್ರಕಾರ ತೀರ್ಮಾನಿಸಿದರು. ॥ ೨೪ ॥

**ಶ್ರೀವೇದವ್ಯಾಸ ಉವಾಚ—**

ಏವಂ ವಿಧಮಿದಂ ಕ್ಷೇತ್ರಮಹಂ ಜಾನಾಮಿ ಶೇಷತಃ ।
ನಾವೋಚಂ ಕಲಿದೋಷೇಣ ಸೂತ ಕಸ್ಯಚಿದಂತಿಕೇ ॥ ೨೫ ॥
ಆಯುಷ್ಮನ್ ಸೂತ ಸಾರಂ ತ್ವಾಮದ್ಯ ಲಬ್ಧ್ವಾ ವಿಶೇಷತಃ ।
ಅವರ್ಣಯಂ ಸಮಾಸೇನ ಪರಾನುಗ್ರಹಕಾಮ್ಯಯಾ ॥ ೨೬ ॥

**ಶ್ರೀವೇದವ್ಯಾಸರು ಹೇಳಿದರು—**

''ಈ ಪ್ರಕಾರವಾಗಿರುವ ಈ ಕ್ಷೇತ್ರದ ವಿಷಯವನ್ನು ನಾನು ಶೇಷನಿಂದ ತಿಳಿದೆನು ; (ದೊಡ್ಡವರೂ ಸಹ ಚಿಕ್ಕವರಿಂದ ವಿನೋದಕ್ಕೋಸ್ಕರ ಕೇಳುವರೆಂದು ತಿಳಿಯಬೇಕು) ಕಲಿಯುಗವಾದ್ದರಿಂದ ದುರುಪಯೋಗವಾಗಬಾರದೆಂಬ ಉದ್ದೇಶದಿಂದ ಯಾರಿಗೂ ಈ ಕ್ಷೇತ್ರದ ಸಾರ (ಒಳ ತತ್ತ್ವವನ್ನು) ಹೇಳಿರಲಿಲ್ಲ. ॥ ೨೫ ॥ ದೀರ್ಘಾಯುವಾದ ಸೂತನೇ ! ಈಗ ಈ ಉತ್ತಮಪಾತ್ರನಾದ ನಿನ್ನನ್ನು ಪಡೆದು ಬೇರೆ ಸಜ್ಜನರ ಉದ್ಧಾರಕ್ಕೋಸ್ಕರ ಇದನ್ನು ಸಂಕ್ಷೇಪವಾಗಿ ತಿಳಿಸಿದ್ದೇನೆ'' ಎಂದು ಹೇಳಿದರು. ॥ ೨೬ ॥

**ಸೂತ ಉವಾಚ—**

ಶ್ರೀಗುರೋರ್ವ್ಯಾಸದೇವಸ್ಯ ಸಾಕ್ಷಾದಾನನಪಂಕಜಾತ್ ।
ಕಥಾರಸಾಮೃತಂ ಹ್ಯೇತದಶ್ರೌಷಮನಘಂ ಪರಮ್ ॥ ೨೭ ॥
ತದೇವೋಕ್ತಂ ಭವದ್ಭ್ಯೋಽದ್ಯ ಭಕ್ತಿಮದ್ಭ್ಯೋ ವಿಶೇಷತಃ ।
ಪ್ರಯಾಗಂ ಸರ್ವತೀರ್ಥಾನಾಂ ಜಾನೀಧ್ವಂ ಜೀವನಂ ಪರಮ್ ॥ ೨೮ ॥
ಪೋಷಣಂ ಸರ್ವಧರ್ಮಾಣಾಂ ಶೋಷಣಂ ಸಕಲಾಪದಾಮ್ ।
ಭೂಷಣಂ ತೀರ್ಥಕೋಟೀನಾಂ ತೋಷಣಂ ಭಕ್ತಚೇತಸಾಮ್ ॥ ೨೯ ॥
ಆಶ್ರಿತ್ಯ ಯಮಿಮಂ ಸರ್ವೇ ಸ್ವಾನರ್ಥಾನ್ಹೃದಯಂಗಮಾನ್ ।
ಅಸಾಧಯನ್ ಸಾಧಯಂತಿ ಸಾಧಯಿಷ್ಯಂತ್ಯಶೇಷತಃ ॥ ೩೦ ॥
ಭೂಯೋಽಪಿ ತಸ್ಯ ಮಾಹಾತ್ಮ್ಯಂ ಪ್ರವಕ್ಷ್ಯಾಮ್ಯತಿವಿಸ್ತೃತಮ್ ।
ಯಥೋಕ್ತಂ ವ್ಯಾಸಗುರುಣಾ ಶೇಷಪ್ರೋಕ್ತಂ ನಿಬೋಧತ ॥ ೩೧ ॥
ಏವಂ ತತ್ತೀರ್ಥಮಾಹಾತ್ಮ್ಯಂ ದೃಷ್ಟ್ವಾ ಪ್ರಮುದಿತಾನನಾಃ ।
ಶಕ್ರಾದಯಃ ಸುರಾಸ್ಸರ್ವೇ ಮಿಥಂ ಪ್ರೋಚುರಿದಂ ವಚಃ ॥ ೩೨ ॥
ಕಿಮಸ್ಮಾಕಂ ದೇವಲೋಕೇ ಪಾತಾಲೇ ವಾ ಭುವಸ್ತಲೇ ।
ಸರ್ವೇಽಪ್ಯತ್ರೈವ ತಿಷ್ಠಾಮಃ ಕ್ಷೇತ್ರೇ ಸರ್ವೋತ್ತಮೋತ್ತಮೇ ॥ ೩೩ ॥

**ಇತಿ ನಿಶ್ಚಿತ್ಯ ತೇ ಸರ್ವೇ ಸ್ಥಿತ್ವಾ ಸ್ಥಾನೇ ಯಥೋಚಿತೇ ।**
**ಆಚರನ್ಧರ್ಮಕರ್ಮಾಣಿ ತಸ್ಯ ಪುಣ್ಯಾಸು ಭೂಮಿಷು ॥ ೩೪ ॥**

**॥ ಇತಿ ಸಪ್ತಮೋಽಧ್ಯಾಯಃ ॥**

**ಸೂತರು ಹೇಳಿದರು—**

ಎಲೈ ಪಾಪರಹಿತ ಋಷಿವರ್ಯರೇ! ನಮ್ಮ ಗುರುಗಳಾದ ಭಗವಾನ್ ಶ್ರೀವೇದವ್ಯಾಸರ ಮುಖಕಮಲದಿಂದ ಹೊರಹೊಮ್ಮಿದ ಈ ಪ್ರಯಾಗಕ್ಷೇತ್ರ ಕಥೆಯ ಸಾರಾಮೃತವನ್ನು ನಾನು ಕೇಳಿದ್ದೆ. ಅದು ಸರ್ವೋತ್ತಮವಾದುದು. ॥ ೨೭ ॥ ನೀವು ಭಗವದ್ಭಕ್ತರಾದ್ದರಿಂದ ನಿಮಗೆ ವಿಶೇಷವಾಗಿ ಈ ಪ್ರಯಾಗದ ಮಾಹಾತ್ಮ್ಯೆಯನ್ನು ಹೇಳಿದ್ದೇನೆ. ಎಲ್ಲ ತೀರ್ಥಕ್ಷೇತ್ರಗಳಿಗೂ ಈ ಪ್ರಯಾಗವು ಜೀವವು ಎಂದು ತಿಳಿಯಿರಿ. ॥ ೨೮ ॥ ಇದಲ್ಲದೆ, ಈ ಕ್ಷೇತ್ರದಲ್ಲಿ ಯಜ್ಞಯಾಗಾದಿ ಧರ್ಮಕಾರ್ಯಗಳು ನಡೆದು ಎಲ್ಲ ಧರ್ಮಗಳ ಪೋಷಣೆಯಾಗುತ್ತದೆ ಮತ್ತು ಇದು ಎಲ್ಲ ಆಪತ್ತುಗಳ ನಿವಾರಕವೂ ಆಗಿದೆ. ಸಮಸ್ತ ತೀರ್ಥಗಳ ಗುಂಪಿಗೇ ಅಲಂಕಾರಪ್ರಾಯವಾಗಿದೆ ಮತ್ತು ಭಕ್ತರ ಮನಸ್ಸಿಗೆ ಆನಂದವನ್ನುಂಟುಮಾಡುತ್ತದೆ. ॥ ೨೯ ॥ ಈ ಕ್ಷೇತ್ರವನ್ನು ಆಶ್ರಯಿಸಿ ಎಲ್ಲರೂ ತಮ್ಮ ಮನೋಹರವಾದ ಮನಸ್ಸಿನ ಅಪೇಕ್ಷೆಗಳನ್ನೆಲ್ಲಾ ಸಾಧಿಸಿದ್ದಾರೆ, ಈಗಲೂ ಸಾಧಿಸುತ್ತಿದ್ದಾರೆ ಮತ್ತು ಮುಂದೆಯೂ ಸಾಧಿಸುವರು. ॥ ೩೦ ॥ ಮತ್ತೊಮ್ಮೆ ಶ್ರೀವ್ಯಾಸರು ನನಗೆ ಉಪದೇಶಿಸಿರುವ ಪ್ರಕಾರ, ಅವರಿಗೆ ಶ್ರೀಶೇಷದೇವರು ಹೇಳಿದ ರೀತಿಯಲ್ಲಿ ವಿಸ್ತಾರವಾಗಿ ಹೇಳುವೆನು, ತಿಳಿಯಿರಿ. ॥ ೩೧ ॥ ಈ ರೀತಿಯಾಗಿ ಈ ಪ್ರಯಾಗದ ಮಾಹಾತ್ಮ್ಯೆಯನ್ನು ಕೇಳಿ ತಿಳಿದ ಇಂದ್ರಾದಿಗಳು ಸಂತುಷ್ಟಾಂತಃಕರಣರಾಗಿ ಪರಸ್ಪರ ತಾವೇ ಮಾತನಾಡಿಕೊಂಡರು. ॥೩೨॥ ದೇವಲೋಕದಲ್ಲೇ ಆಗಲಿ, ಪಾತಾಳದಲ್ಲಾಗಲಿ ಮತ್ತು ಭೂಲೋಕದಲ್ಲಾಗಲೀ ನಮಗಿನ್ನೇನು ಕೆಲಸ? ಈ ಲೋಕ-ಗಳಲ್ಲಿದ್ದು ನಾವು ಸಾಧನೆ ಮಾಡುವುದೇನಿದೆ? ಈ ಸರ್ವೋತ್ತಮವಾದ ಪ್ರಯಾಗ ಕ್ಷೇತ್ರದಲ್ಲಿಯೇ ಇದ್ದುಬಿಡೋಣ. ॥ ೩೩ ॥ ಹೀಗೆಂದು ಅವರೆಲ್ಲರೂ ನಿಶ್ಚಯಿಸಿ, ಈ ಪ್ರಯಾಗದ ಪುಣ್ಯಸ್ಥಳಗಳಲ್ಲಿ ನೆಲೆಸಿ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಧರ್ಮಕರ್ಮಗಳನ್ನು ಆಚರಿಸುತ್ತಾ ಬಂದರು. ॥ ೩೪ ॥

॥ ಏಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಮೋಽಧ್ಯಾಯಃ ॥ ೮ ॥

**ಋಷಯ ಊಚುಃ—**

ಸೂತ ಸೂತ ಮಹಾಬುದ್ಧೇ ಕಾಸ್ತಾಃ ಕ್ಷೇತ್ರಸ್ಯ ಭೂಮಿಕಾಃ ।
ಸ್ಥಿತ್ವಾ ಯತ್ರಾಯಜನ್ಸರ್ವೇ ಮಾಧವಂ ಭಕ್ತವತ್ಸಲಮ್ ॥ ೧ ॥

## ॥ ಎಂಟನೆಯ ಅಧ್ಯಾಯವು ॥

**ಋಷಿಗಳು ಹೇಳಿದರು—**

ಮಹಾಬುದ್ಧಿಶಾಲಿಗಳಾದ ಸೂತರೇ, ಪ್ರಯಾಗಕ್ಷೇತ್ರದ ಯಾವ ಯಾವ ಪ್ರದೇಶಗಳಲ್ಲಿದ್ದು ಎಲ್ಲರೂ ವೇಣೀಮಾಧವನನ್ನು ಆರಾಧನೆ ಮಾಡಿದರೋ ಅವನ್ನು ತಿಳಿಸಿ.॥ ೧ ॥

**ಸೂತ ಉವಾಚ—**

ಶೃಣುಧ್ವಂ ಮುನಯಃ ಸರ್ವೇ ತಸ್ಯ ಕ್ಷೇತ್ರಸ್ಯ ಭೂಮಿಕಾಃ ।
ವೇದೀರೂಪಾ ಮಹಾಪುಣ್ಯಾಃ ಕಲ್ಪಿತಾರ್ಥವಿಧಾಯಕಾಃ ॥ ೨ ॥
ಅಂತರ್ವೇದೀ ಮಧ್ಯವೇದೀ ಬಹಿರ್ವೇದೀತಿ ಸಾ ತ್ರಿಧಾ ।
ಕಾಮಕಲ್ಪಲತಾರೂಪಾ ಭಕ್ತಾನಾಂ ಸ್ವನಿವಾಸಿನಾಮ್ ॥ ೩ ॥
ಷಟ್ಕೂಲಮಾದಿಮಂ ಕ್ಷೇತ್ರಂ ವೇಣೀಸಂಜ್ಞಂ ವಿನಿಶ್ಚಿತಮ್ ।
ಸಾರ್ಧಯೋಜನಮಾತ್ರಂ ತತ್ಪರಿಖಾವೇಷ್ಟನಾಕೃತಿಃ ॥ ೪ ॥
ತನ್ಮಧ್ಯೇ ವಸತಾಂ ಪುಂಸಾಂ ಕ್ಷೇತ್ರಜ್ಞಾನಂ ವಿನಾಪಿ ಚ ।
ಧರ್ಮಮಾಚರತಾಂ ಸದ್ಯಃ ಕಲ್ಪಿತಂ ಫಲಮುತ್ತಮಮ್ ॥ ೫ ॥

**ಸೂತರು ಹೇಳುತ್ತಾರೆ—**

ಎಲೈ ಮುನಿವರ್ಯರೇ, ಆ ಕ್ಷೇತ್ರದ ಸಾಧನಯೋಗ್ಯವಾದ ಸ್ಥಳಗಳನ್ನು ಹೇಳುತ್ತೇನೆ ಕೇಳಿರಿ. ಈ ಸ್ಥಳಗಳು ಜಗುಲಿಗಳ ಆಕಾರದಲ್ಲಿವೆ. ಅವುಗಳು ಮಹಾಪುಣ್ಯಕರಗಳಾಗಿದ್ದು ತಮ್ಮಲ್ಲಿ ಸಾಧನೆ ಮಾಡುವವರಿಗೆ ಕಲ್ಪವೃಕ್ಷದಂತೆ ಅಪೇಕ್ಷಿಸಿದುದನ್ನೆಲ್ಲ ಕೊಡುತ್ತವೆ. ॥ ೨ ॥ ಈ ಜಗುಲಿಗಳಲ್ಲಿ ''ಅಂತರ್ವೇದೀ(ಒಳಜಗುಲಿ), ಮಧ್ಯವೇದೀ(ಮಧ್ಯಜಗುಲಿ) ಮತ್ತು ಬಹಿರ್ವೇದೀ(ಹೊರಜಗುಲಿ)'' ಎಂದು ಮೂರು ವಿಧಗಳುಂಟು. ಇವುಗಳು ತಮ್ಮಲ್ಲಿ ವಾಸಮಾಡುವರಿಗೆ ಎಲ್ಲ ಅಪೇಕ್ಷೆಗಳನ್ನು ಕೊಡುವುವು. ॥ ೩ ॥ ಆರು ತೀರಗಳನ್ನೊಳಗೊಂಡ ಜಗುಲಿಯೇ ಮೊದಲನೆಯದು. ಇದನ್ನೇ ''ವೇಣೀ'' ಎಂಬುದಾಗಿ ನಿಶ್ಚಯಿಸಿದ್ದಾರೆ. ಇದು ಒಂದೂವರೆ ಯೋಜನದಷ್ಟು ವಿಸ್ತಾರವುಳ್ಳದ್ದು (ಹನ್ನೆರಡು ಮೈಲಿ). ಮತ್ತು ನೀರಿನಿಂದ ಕಂದಕದಂತೆ ಸುತ್ತುವರಿಯಲ್ಪಟ್ಟಿದೆ. ॥ ೪ ॥ ಇದರ ಮಧ್ಯೆ ವಾಸಿಸುವವರು ಈ ಕ್ಷೇತ್ರದ ವಿಶಿಷ್ಟಜ್ಞಾನವನ್ನು ತಿಳಿಯದಿದ್ದರೂ ಧರ್ಮಾಚರಣೆ ಮಾಡುತ್ತಿದ್ದರೆ ಅವರ ಅಪೇಕ್ಷೆಗಳೆಲ್ಲವೂ ಸಿದ್ಧಿಸುವುವು. ॥ ೫ ॥

**ಋಷಯ ಊಚುಃ—**

ಕ್ಷೇತ್ರಸನ್ನಿಹಿತಾ ಯೇ ಚ ತೇಷಾಮುಕ್ತಂ ಫಲಂ ತ್ವಯಾ ।

ದೂರಾತ್ಸಮಾಗತಾ ಯೇ ಚ ವದ ತೇಷಾಂ ಫಲಂ ಕಥಮ್ ॥ ೬ ॥
ಕೃಪಾಮೃತಪರಿಕ್ಲಿನ್ನಗಿರಾ ಮಧುರಯಾನಘ ।
ಪರೋಪಕೃತಯೇ ನೂನಮಿಮಂ ನಿಶ್ಛಿಂಧಿ ಸಂಶಯಮ್ ॥ ೭ ॥

ಋಷಿಗಳು ಕೇಳಿದರು—

ಈ ಕ್ಷೇತ್ರದ ಸಮೀಪದಲ್ಲಿರುವವರಿಗೆ ಆಗುವ ಫಲಪ್ರಾಪ್ತಿಯ ಬಗ್ಗೆ ತಾವು ಹೇಳಿದಿರಿ. ದೂರದಿಂದ ಬಂದು ಸೇವೆ ಮತ್ತು ಸಾಧನೆ ಮಾಡುವವರಿಗೆ ಆಗುವ ಫಲಗಳ ಬಗ್ಗೆ ವಿವರಿಸಿರಿ. ॥ ೬ ॥ ತಮ್ಮ ದಯೆಯೆಂಬ ಅಮೃತದಿಂದ ತೊಯ್ದಿರುವ ಮಧುರವಾದ ಮಾತುಗಳಲ್ಲಿ ಪರೋಪಕಾರಾರ್ಥವಾಗಿ ಈ ಸಂಶಯವನ್ನು ಪರಿಹರಿಸಬೇಕು. ॥ ೭ ॥

ಸೂತ ಉವಾಚ—

ದೂರಾದುಪಗತಾ ಯೇ ಚ ವತ್ಸರಾರ್ಧಾರ್ಧಮಾಸಕಮ್ ।
ಪಕ್ಷಾರ್ಧಸಪ್ತಪಂಚತ್ರಿದಿನಮೇಕಮಿಹ ಸ್ಥಿತಾಃ ॥ ೮ ॥
ಶ್ರದ್ಧಯಾಽಶ್ರದ್ಧಯಾ ಯುಕ್ತಾ ಧನಿನೋಽಧನಿನಸ್ತಥಾ ।
ತೇಷಾಮಪಿ ದದಾತ್ಯೇವ ಫಲಂ ಭಕ್ತಿಮತೋಽಧಿಕಮ್ ॥ ೯ ॥
ಅತ ಏವಾತ್ರ ದೇವಾದ್ಯಾ ಮಾಧವಪ್ರೀತಿಕಾಮ್ಯಯಾ ।
ಚಕ್ರಿರೇ ಸಾಧುಕರ್ಮಾಣಿ ತತ್ಪದಾವಿಷ್ಟಚೇತಸಃ ॥ ೧೦ ॥
ಬ್ರಹ್ಮಾ ಜ್ಞಾತ್ವಾ ಪ್ರಯಾಗಾರ್ಥಮಶ್ವಮೇಧಾಭಿಧಂ ಮಖಮ್ ।
ಪ್ರಾರೇಭೇ ಪುರತಸ್ತೇಷಾಮಂತರ್ವೇದ್ಯಾಂ ಯಥಾವಿಧಿ ॥ ೧೧ ॥
ಮಖಾರಂಭಂ ವಿಧೇರ್ಜ್ಞಾತ್ವಾ ಯಜ್ಞಾರ್ಥಂ ಕರ್ಮಸಾಕ್ಷಿಣಃ ।
ಅನಾಹೂತಾಸ್ಸಮಾಹೂತಾ ಬ್ರಹ್ಮಾಂಡಾಂತರ್ಗತಾ ನರಾಃ ॥ ೧೨ ॥
ಋಷಯೋ ದೇವತಾಸ್ಸಿದ್ಧಾ ಗಂಧರ್ವಾಪ್ಸರಸೋ ನಗಾಃ ।
ಭೂಚರಾಃ ಖೇಚರಾಸ್ಸರ್ವೇ ಪಾತಾಲತಲಚಾರಿಣಃ ॥ ೧೩ ॥
ಅಂಗಿರಃಪ್ರಮುಖಾಶ್ಚಾನ್ಯೇ ಸಪತ್ನೀಕಾಸ್ಸಪುತ್ರಕಾಃ ।
ಜಾತಹರ್ಷಾಸ್ಸಮಾಜಗ್ಮುರ್ಬ್ರಹ್ಮಯಜ್ಞದಿದೃಕ್ಷಯಾ ॥ ೧೪ ॥
ಆದೌ ಬ್ರಹ್ಮಾದಯೋ ದೇವಾಃ ಲಾಂಗಲೇನ ಮಹೀತಲಮ್ ।
ಸೌವರ್ಣೇನ ವಿಸಂಶೋಧ್ಯ ತತ್ರ ವೇದೀಮಚೀಕರನ್ ॥ ೧೫ ॥
ಆದರ್ಶತಲಭೂತಾಯಾಂ ವರ್ತುಲಾಯಾಂ ಸಮಂತತಃ ।
ವೇದ್ಯಾಂ ಮಂಟಪಮತ್ಯುಚ್ಚಂ ವ್ಯಧತ್ತ ಋಜುದಾರುಭಿಃ ॥ ೧೬ ॥
ಉಪಯುಕ್ತಾನಿ ಪಾತ್ರಾಣಿ ನಾನಾಸಂಸ್ಥಾನಿ ಸರ್ವತಃ ।
ಪಲಾಶೋದುಂಬರೋತ್ಥಾನಿ ವೈಕಂಕತಭವಾನಿ ಚ ॥ ೧೭ ॥
ಖಾದಿರಾಣಿ ತಥಾನ್ಯಾನಿ ಯಥಾಮಾನಂ ಯಥಾವಿಲಮ್ ।
ಕಾರಯಿತ್ವಾಥ ವಿಧಿನಾ ಸರ್ವಾಣಿ ಸಮಸಾದಯನ್ ॥ ೧೮ ॥

ಸೌವರ್ಣೌ ರತ್ನಖಚಿತೌ ನವರತ್ನಪ್ರಪೂರಿತೌ ।
ವಟಸ್ಯ ದಕ್ಷಿಣೇ ಭಾಗೇ ಸಂಸ್ಥಾಪ್ಯ ಕಲಶೌ ತತಃ ॥ ೧೯ ॥
ಗಾಯತ್ರೀ ದಕ್ಷಿಣೇ ಭಾಗೇ ಸಾವಿತ್ರೀ ಚೋತ್ತರೇ ಸ್ಥಿತಾ ।
ತಯೋರ್ಮಧ್ಯಗತೋ ಬ್ರಹ್ಮಾ ಚಕಾರಾರಂಭಮಂಗಲಮ್ ॥ ೨೦ ॥
ತತೋ ಯಜ್ಞೇ ಸಮೇತಾನಾಂ ವಿಪ್ರಾಣಾಂ ಋತ್ವಿಜಾಂ ತಥಾ ।
ಯಥಾಧಿಕಾರಂ ಸರ್ವೇಷಾಂ ಪಾದಕ್ಷಾಲನಮಾಚರತ್ ॥ ೨೧ ॥
ಸಂಪೂಜ್ಯ ವಸ್ತ್ರಭೂಷಾದ್ಯೈರ್ದಿವ್ಯಸ್ರಗನುಲೇಪನೈಃ ।
ಪ್ರಾರ್ಥಯಾಮಾಸ ಧರ್ಮಾತ್ಮಾ ಯಜ್ಞಷಾಡ್ಗುಣ್ಯಹೇತವೇ ॥ ೨೨ ॥
ಭೋ ! ಭೋ ! ತಪೋಧನಾಃ ಶ್ರೇಷ್ಠಾಃ ಸಾಕ್ಷಾನ್ಮಾಧವರೂಪಿಣಃ ।
ಅಸ್ಯ ಯಜ್ಞಸ್ಯ ಷಾಡ್ಗುಣ್ಯಂ ಯಥಾ ಸ್ಯಾತ್ಕುರುತಾಶು ತತ್ ॥ ೨೩ ॥
ಏವಂ ಪೂಜ್ಯಾರ್ಥಿತಾ ವಿಪ್ರಾಃ ಪ್ರಹೃಷ್ಟಾ ಯಜ್ಞಕರ್ಮಣಿ ।
ಋಗ್ಯಜುಸ್ಸಾಮಸಂಭೂತಾನ್ವೇದಮಂತ್ರಾನ್ವಾಶಿರೇ ॥ ೨೪ ॥
ಸರ್ವೇ ಲಕ್ಷಣಸಂಪನ್ನಾಃ ಸರ್ವೋಪಸ್ಕರಸಂಯುತಾಃ ।
ದೇವರ್ಷಿಸಂವೃತಾ ಸಾ ಸತ್ಸುಧರ್ಮೇವಾಬಭೌ ತಥಾ ॥ ೨೫ ॥
ಸರ್ವಾಂಗೋಪಾಂಗಸಂಯುಕ್ತಂ ಸರ್ವಲಕ್ಷಣಲಕ್ಷಿತಮ್ ।
ಭ್ರಾಮಯಿತ್ವಾಶ್ವರಾಜಂ ತಂ ಸಮಾಲಭತ ಧರ್ಮವಿತ್ ॥ ೨೬ ॥
ತಿಷ್ಠಂತೋ ಪ್ರಾಗುದಗ್ವಕ್ತ್ರಾ ಋತ್ವಿಜೋಽಧ್ವರ್ಯ್ವಾದಯಃ ।
ಸ್ರುಗ್ಗತಾನಿ ಹವೀಂಷ್ಯಗ್ನೌ ಸಶರೇ ಜುಹುವುಃ ಕ್ರಮಾತ್ ॥ ೨೭ ॥
ರುಜ್ವೀಃ ಕರಿಕರಾಕಾರಾ ಆಜ್ಯಧಾರಾಃ ಸಮಂತತಃ ।
ದೀಪ್ತವಹ್ನಿಷು ಕುಂಡೇಷು ವೇದಮಂತ್ರೈರಜೋಹವೀತ್ ॥ ೨೮ ॥
ಪಯೋದಧಿಘೃತಕ್ಷೌದ್ರಕುಲ್ಯಾಃ ಸ್ವಾದುತರಾಃ ಶುಚೀಃ ।
ನಿರ್ಮಮೇ ಯತ್ರ ಪಾನೇನ ಸರ್ವೇ ತೃಪ್ತಾ ಬಭೂವಿರೇ ॥ ೨೯ ॥
ಯಥಾಕಾಲಂ ಯಥಾದೇಶಂ ಯಥಾಮಂತ್ರೈರ್ಯಥಾರ್ತ್ವಿಜಮ್ ।
ಯಥಾದಕ್ಷಿಣಮಾರಬ್ಧಂ ಮಖರಾಜಂ ಸಮಾಪಯೇತ್ ॥ ೩೦ ॥
ತಸ್ಮಿನ್ನವಸರೇ ತತ್ರ ಮಾಧವೋ ಲಲಿತಂ ವಪುಃ ।
ದರ್ಶಯಾಮಾಸ ಯಜ್ಞಾಂತೇ ಬ್ರಹ್ಮಣೇ ಯಜ್ಞಕಾರಿಣೇ ॥ ೩೧ ॥
ಪ್ರಸನ್ನವದನಾಂಭೋಜಂ ಪದ್ಮಗರ್ಭಾರುಣೇಕ್ಷಣಮ್ ।
ಇಂದೀವರದಲಶ್ಯಾಮಂ ಶಂಖಚಕ್ರಗದಾಬ್ಜಯುಕ್ ॥ ೩೨ ॥
ವಿಕಸತ್ಕಂಜಕಿಂಜಲ್ಕಪೀತಕೌಶೇಯಭೂಷಿತಮ್ ।
ಕಾಂಚೀಗುಣಲಸಚ್ಛ್ರೋಣಿಭಕ್ತಸ್ವಾಂತಾಬ್ಜವಿಷ್ಟರಮ್ ॥ ೩೩ ॥

ಗುಂಜದ್ದ್ವಿರೇಫಕಲಯಾ ಸಂವೀತಂ ವನಮಾಲಯಾ ।
ಪರಾರ್ಘ್ಯಹಾರ ವಲಯಕಿರೀಟಾಂಗದನೂಪುರಮ್ । ॥ ೩೪ ॥
ಶ್ರೀವತ್ಸವಕ್ಷಸಂ ರಾಜತ್ಕೌಸ್ತುಭಾಶೋಭಿಕಂಧರಮ್ ।
ಪ್ರೇಕ್ಷಣೀಯತಮಂ ಶಾಂತಂ ಪರಮಾನಂದಚಿದ್ಘನಮ್ ॥ ೩೫ ॥
ಅವೇಕ್ಷ್ಯ ರೂಪಂ ತಚ್ಛಾಂತಂ ಸರ್ವಲೋಕನಮಸ್ಕೃತಮ್ ।
ಪ್ರಜಾಪತಿರಥಾಸ್ತೌಷೀದುತ್ಥಿತಸ್ಸಭಯಾ ಸಹ ॥ ೩೬ ॥

**ಸೂತರು ಹೇಳಿದರು—**

ದೂರದೂರದಿಂದ ಬಂದು ಸಂವತ್ಸರ, ಅರ್ಧಸಂವತ್ಸರ, ತಿಂಗಳು, ಪಕ್ಷ, ವಾರ, ಐದು ದಿವಸಗಳು, ಮೂರು ದಿವಸಗಳು ಮತ್ತು ಒಂದು ದಿನವಾಗಲೀ ಇಲ್ಲಿ ಇದ್ದು ಸೇವಾ ಸಾಧನೆಗಳನ್ನು ಶ್ರದ್ಧೆಯಿಂದ ಮಾಡಿದರೆ, ಅಥವಾ ಅಲ್ಪಶ್ರದ್ಧೆಯಿಂದ ಮಾಡಿದರೂ ಧನಿಕರೇ ಆಗಿರಲಿ, ಬಡವರೇ ಆಗಿರಲಿ ಎಲ್ಲರಿಗೂ ಶ್ರೀಮಾಧವನು ಫಲವನ್ನು ಕೊಡುವನು. ಇಲ್ಲಿ ಭಕ್ತಿಶ್ರದ್ಧೆಗಳೇ ಮುಖ್ಯವಾದವುಗಳು. ॥ ೮-೯ ॥ ಆದ್ದರಿಂದಲೇ ದೇವಾದಿಗಳು ಈ ಕ್ಷೇತ್ರಕ್ಕೆ ಆಗಮಿಸಿ ಶ್ರೀಲಕ್ಷ್ಮೀಪತಿಯ ಪ್ರೀತಿಗಾಗಿ ಅವನ ಪಾದಗಳಲ್ಲಿಯೇ ಆಸಕ್ತರಾಗಿ ವಿಹಿತವಾದ ಕರ್ಮಗಳನ್ನು ಮಾಡಿದರು. ॥ ೧೦ ॥ ಪ್ರಯಾಗ ಪದದ ಅರ್ಥವನ್ನು ಗ್ರಹಿಸಿದ ಬ್ರಹ್ಮದೇವರು ಆ ದೇವತೆಗಳ ಎದುರಿಗೆ ಪ್ರಯಾಗದ ಮಧ್ಯವೇದಿಕೆಯಲ್ಲಿ ಅಶ್ವಮೇಧಯಾಗವನ್ನು ಮಾಡಲು ಪ್ರಾರಂಭ ಮಾಡಿದರು. ॥ ೧೧ ॥ ಬ್ರಹ್ಮದೇವರಿಂದ ನಡೆಸಲ್ಪಡುವ ಈ ಯಜ್ಞವನ್ನು ನೋಡುವ ಉತ್ಸಾಹದಿಂದ ಕರ್ಮಕ್ಕೆ ಸಾಕ್ಷಿರೂಪರಾದ ಕರ್ಮದೇವತೆಗಳೂ ಇಡೀ ಬ್ರಹ್ಮಾಂಡದಲ್ಲಿರುವ ಆಹ್ವಾನವಿದ್ದ ಮತ್ತು ಇಲ್ಲದಿದ್ದ ಮನುಷ್ಯರೆಲ್ಲರೂ, ಋಷಿಗಳೂ, ದೇವತೆಗಳೂ, ಸಿದ್ಧರೂ, ಗಂಧರ್ವರೂ ಮತ್ತು ಭೂಮಿಯಲ್ಲಿ, ಆಕಾಶದಲ್ಲಿ ಮತ್ತು ಪಾತಾಳದಲ್ಲಿ ಸಂಚರಿಸುವ ಎಲ್ಲರೂ, ಅಂಗೀರಸರೇ ಮೊದಲಾದವರು ಸಪತ್ನೀಕರಾಗಿ ಹರ್ಷದಿಂದ ಪ್ರಯಾಗಕ್ಷೇತ್ರದಲ್ಲಿ ಬಂದು ಕಲೆತರು. ॥ ೧೨-೧೪ ॥ ಪ್ರಾರಂಭದಲ್ಲಿ ಬ್ರಹ್ಮಾದಿದೇವತೆಗಳು ಬಂಗಾರದ ನೇಗಿಲಿನಿಂದ ಭೂಮಿಯನ್ನು ಚೆನ್ನಾಗಿ ಶೋಧಿಸಿ ವೇದಿಕೆಯನ್ನು ನಿರ್ಮಿಸಿದರು. ಅನಂತರ ಕನ್ನಡಿಯಂತೆ ಹೊಳೆಯುತ್ತಿದ್ದ ವೃತ್ತಾಕಾರದ ವೇದಿಕೆಯಲ್ಲಿ ನೇರವಾಗಿರುವ ಗಳಗಳಿಂದ ಅತಿ ಎತ್ತರವಾದ ಮಂಟಪವೊಂದನ್ನು ನಿರ್ಮಿಸಿದರು. ॥ ೧೫-೧೬ ॥ ಬೇಕಾಗಿರುವ ನಾನಾವಿಧ ಪಾತ್ರೆಗಳನ್ನು ಆಯಾಯಾ ಸ್ಥಾನಗಳಲ್ಲಿರಿಸಿದರು. ಮುತ್ತಿಗ, ಅತ್ತಿ, ಅಶ್ವತ್ಥ ಖಾದಿರ (ಕಗ್ಗಲೀಮರದ ಚಕ್ಕೆ) ವೈಕಂಕತ (ಹುಳಿಬೇಲದ ಮರದ ಚಕ್ಕೆ) ಇವುಗಳನ್ನು ತಂದು ವಿಧಿಪೂರ್ವಕವಾಗಿ ಅವುಗಳನ್ನು ಕತ್ತರಿಸಿ ಎಷ್ಟು ಬೇಕೋ ಅಷ್ಟು ಸಂಖ್ಯೆಯಲ್ಲಿ ಇವುಗಳನ್ನು ಸೇರಿಸಿಟ್ಟಿದ್ದರು. ॥ ೧೭-೧೮ ॥ ವಟವೃಕ್ಷದ ಬಲಭಾಗದಲ್ಲಿ ರತ್ನಖಚಿತವಾದ ಮತ್ತು ನವರತ್ನಗಳಿಂದ ತುಂಬಿದ್ದ ಎರಡು ಕಲಶಗಳನ್ನಿಡಲಾಯಿತು. ॥ ೧೯ ॥ ಯಜ್ಞದಲ್ಲಿ ಆರಂಭಿಸುವ ಪುಣ್ಯಾಹದಲ್ಲಿ ಪೂರ್ವಾಭಿಮುಖವಾಗಿ ಕುಳಿತಿರುವ ಬ್ರಹ್ಮದೇವರ ಬಲಭಾಗದಲ್ಲಿ ಗಾಯತ್ರೀದೇವಿಯೂ, ಎಡಭಾಗದಲ್ಲಿ ಸಾವಿತ್ರೀದೇವಿಯೂ ಇದ್ದು ನಡುವೆ ಬ್ರಹ್ಮದೇವರು ಶೋಭಾಯಮಾನರಾಗಿದ್ದರು. ॥ ೨೦ ॥ ಆಗ, ಯಜ್ಞದಲ್ಲಿ ಮಂಡಿಸಿರತಕ್ಕ ಬ್ರಾಹ್ಮಣರ, ಋತ್ವಿಜರ ಅನ್ಯಾನ್ಯ ಅಧಿಕಾರಗಳಲ್ಲಿ ನಿಯೋಜಿತರಾಗಿದ್ದವರ ಕಾಲುಗಳನ್ನು ಶ್ರೀಬ್ರಹ್ಮದೇವರು ತೊಳೆದು ಅವರೆಲ್ಲರನ್ನೂ ವಸ್ತ್ರ, ಆಭರಣ, ದಿವ್ಯವಾಗಿರತಕ್ಕ ಹೂಮಾಲೆಗಳು ಮತ್ತು ಗಂಧ ಇವುಗಳಿಂದ ಸತ್ಕರಿಸಿ

ಅವರುಗಳನ್ನು ಯಜ್ಞದ ಪೂರ್ಣತೆಗಾಗಿ ಬ್ರಹ್ಮದೇವರು ಪ್ರಾರ್ಥಿಸಿದರು. ॥ ೨೧-೨೨ ॥ ''ತಪೋಧನರಾದ ಶ್ರೇಷ್ಠರೇ, ಸಾಕ್ಷಾತ್ ಮಾಧವ ಪ್ರತಿಮಾರೂಪರೇ, ಈ ಯಜ್ಞದ ಸಾರ್ಥಕ್ಯ ಬರಲು ಏನು ಮಾಡಬೇಕೋ ಹಾಗೆ ಮಾಡಿರಿ'' ಹೀಗೆಂದು ಹೇಳಿ ಅವರುಗಳನ್ನು ಪೂಜಾ ಮಾಡಿದರು. ಇದರಿಂದ ಸಂತುಷ್ಟರಾದ ಬ್ರಾಹ್ಮಣರು ಋಕ್, ಯಜುಸ್ ಮತ್ತು ಸಾಮ ವೇದ-ಮಂತ್ರಗಳನ್ನು ಘೋಷಿಸಿದರು. ॥ ೨೩-೨೪ ॥ ಈ ಯಜ್ಞಶಾಲೆಯು ಎಲ್ಲ ಬಗೆಯ ಲಕ್ಷಣ-ಗಳಿಂದ ಕೂಡಿದ್ದು ಎಲ್ಲ ಬಗೆಯ ಯಾಜ್ಞೀಯ ಪದಾರ್ಥಗಳಿಂದ ಕೂಡಿದ್ದಾಗಿ ದೇವಸಭೆಯಾದ ಸುಧರ್ಮಸಭೆಯಂತೆ ಕಂಗೊಳಿಸಿತು. ॥ ೨೫ ॥ ವೇದವಿಹಿತ ಧರ್ಮಗಳ ಸೂಕ್ಷ್ಮವನ್ನು ಬಲ್ಲ ಬ್ರಹ್ಮದೇವರು ಎಲ್ಲ ಲಕ್ಷಣಗಳಿಂದ ಕಂಗೊಳಿಸುತ್ತಿದ್ದ ಅಶ್ವರಾಜನನ್ನು ಸಂಚಾರ ಮಾಡಿಸಿ ನಂತರ ಬಲಿಕೊಟ್ಟರು. ॥ ೨೬ ॥ ಅಧ್ವರ್ಯುವೇ ಮೊದಲಾದ ಋತ್ವಿಜರು ಪೂರ್ವಾಭಿಮುಖವಾಗಿ ಮತ್ತು ಉತ್ತರಾಭಿಮುಖವಾಗಿ ನಿಂತು ಬಾಣದ ಆಕಾರದಲ್ಲಿರುವ ಸ್ರುಕ್‌ಗಳಲ್ಲಿರುವ ಹವಿಸ್ಸನ್ನು ಜ್ವಲಿಸುತ್ತಿರುವ ಅಗ್ನಿಯಲ್ಲಿ ಕ್ರಮವಾಗಿ ಹೋಮಮಾಡಿದರು. ॥ ೨೭ ॥ ಸರಳವಾದ ಆನೆಯ ಸೊಂಡಿಲನ್ನು ಹೋಲುವಂತೆ ಸುರಿಯುತ್ತಿರುವ ಆಕಳ ತುಪ್ಪದಿಂದ ಎಲ್ಲೆಡೆಯೂ ಧಗ್ಗನೆ ಉರಿಯುತ್ತಿರುವ ಅಗ್ನಿಯುಳ್ಳ ಅನೇಕ ಅಗ್ನಿಕುಂಡಗಳಲ್ಲಿ ವೇದಮಂತ್ರಗಳಿಂದ ಹೋಮ ಮಾಡಿದರು. ॥ ೨೮ ॥ ಅತಿಮಧುರವಾಗಿಯೂ ಶುಚಿಯಾಗಿಯೂ ಇರುವ ಹಾಲು, ಮೊಸರು, ತುಪ್ಪ ಮತ್ತು ಜೇನುತುಪ್ಪ ಇವುಗಳ ಕಾಲುವೆಗಳನ್ನು ಹರಿಸಿದರು. ಇವುಗಳ ಪಾನದಿಂದ ಎಲ್ಲರೂ ತೃಪ್ತರಾದರು. ॥ ೨೯ ॥ ವಿಧ್ಯುಕ್ತವಾದ ಕಾಲಗಳಲ್ಲಿ, ವಿಧ್ಯುಕ್ತ ದೇವತೆಗಳನ್ನು ಆರಾಧಿಸಿ ವಿಧ್ಯುಕ್ತ ಮಂತ್ರಗಳನ್ನು ಉಚ್ಚರಿಸಿ, ವಿಧ್ಯುಕ್ತವಾಗಿ ನಿಯಮಿತರಾದ ಋತ್ವಿಜರನ್ನು ಯಥೋಚಿತ ದಕ್ಷಿಣಾದಿ-ಗಳಿಂದ ತೃಪ್ತಿಪಡಿಸುತ್ತಾ ಈ ಶ್ರೇಷ್ಠವಾದ ಅಶ್ವಮೇಧ ಯಾಗವು ಯಾವ ರೀತಿ ಪ್ರಾರಂಭ-ವಾಯಿತೋ ಅದೇ ರೀತಿ ಪರಿಸಮಾಪ್ತಿಗೊಳಿಸಿದರು. ॥ ೩೦ ॥ ಈ ಸಮಯದಲ್ಲಿ ಸರಿಯಾಗಿ ಅಲ್ಲಿ ಶ್ರೀ ಮಾಧವದೇವರು ತನ್ನ ಮಧುರವಾದ ರೂಪವನ್ನು ಯಜ್ಞಕರ್ತೃವಾದ ಬ್ರಹ್ಮದೇವರಿಗೆ ದರ್ಶನ ಮಾಡಿಸಿದರು. ॥ ೩೧ ॥ ಈ ಮಾಧವದೇವರ ರೂಪ ಈ ರೀತಿಯಾಗಿತ್ತು—

ಅವರ ಮುಖಕಮಲವು ಹರ್ಷಯುಕ್ತವಾಗಿತ್ತು. ಅರಳಿದ ಕಮಲದ ಹೂವಿನ ಮಧ್ಯದಂತೆ ಕಂಗೊಳಿಸುವ ಕೆಂಪು ಬಣ್ಣದ ನೇತ್ರಗಳು, ದೇಹವು ಕನ್ನೈದಿಲೆಯಂತೆ ಕಾಂತಿಯುಕ್ತವಾಗಿ ಬೆಳಗುತ್ತಿದ್ದು ಶಂಖ, ಚಕ್ರ, ಗದೆ, ಕಮಲದ ಹೂವುಗಳನ್ನು ಧಾರಣೆ ಮಾಡಿದ ನಾಲ್ಕು ಹಸ್ತಗಳುಳ್ಳದ್ದು ಆಗಿತ್ತು. ॥ ೩೨ ॥ ಅರಳಿದ ಕಮಲದ ಮಧ್ಯೆಯಿರುವ ಪರಾಗದಂತೆ ಹಳದಿಯ ಬಣ್ಣದ ರೇಶ್ಮೆ ವಸ್ತ್ರವನ್ನು ಧರಿಸಿದ, ಬಂಗಾರದ ನಡುಪಟ್ಟಿಯಿಂದ ಶೋಭಿಸುತ್ತಿರುವ ಶ್ರೋಣಿಯಿಂದ (ನಿತಂಬ) ಕೂಡಿದ, ಭಕ್ತರ ಹೃದಯಕಮಲವೆಂಬ ಆಸನವುಳ್ಳ, ॥ ೩೩ ॥ ಝೇಂಕರಿಸುತ್ತಾ ಮಕರಂದ ಪಾನಕ್ಕಾಗಿ ಸ್ಪರ್ಶಿಸುತ್ತಿರುವ ಭ್ರಮರಗಳುಳ್ಳ ವನಮಾಲೆಯಿಂದ ವಿಭೂಷಿತವಾದ, ಅತ್ಯಂತ ಬೆಲೆಬಾಳುವ ನವರತ್ನ ಹಾರ, ಬಳೆಗಳು, ಕಿರೀಟ, ಬಾಹುಪುರಿ ಮತ್ತು ಕಾಲಂದಿಗೆ ಇವುಗಳನ್ನು ಧರಿಸಿರುವ, ॥ ೩೪ ॥ ಸಾಕ್ಷಾತ್ ಶ್ರೀ ಲಕ್ಷ್ಮೀದೇವಿಯ ಚಿಹ್ನೆಯಾದ ಶ್ರೀವತ್ಸಲಾಂಛನವುಳ್ಳ ವಕ್ಷಸ್ಥಳವುಳ್ಳ, ಪ್ರಕಾಶಮಾನವಾದ ಕೌಸ್ತುಭರತ್ನದಿಂದ ಶೋಭಿಸುತ್ತಿರುವ ಕಂಠವುಳ್ಳ, ಅತ್ಯಂತವಾಗಿ ನೋಡಲು ಯೋಗ್ಯವಾಗಿರುವ, ಶಾಂತವಾದ ಮತ್ತು ಜ್ಞಾನಾನಂದಾದಿ ಸಾರಸ್ವರೂಪ ಶರೀರವುಳ್ಳ, ॥ ೩೫ ॥ ಮತ್ತು ಎಲ್ಲರಿಂದಲೂ ನಮಸ್ಕಾರ ಮಾಡಿಸಿಕೊಳ್ಳುತ್ತಿರುವ ಆ ಶ್ರೀವೇಣೀ-ಮಾಧವದೇವರ ರೂಪವನ್ನು ದರ್ಶನ ಮಾಡಿದ ಕೂಡಲೇ ಶ್ರೀಬ್ರಹ್ಮದೇವರು ಸಭೆಯಲ್ಲಿದ್ದ ವರೊಡನೆ ಎದ್ದು ಪರಮಾತ್ಮನನ್ನು ಸ್ತೋತ್ರ ಮಾಡಿದರು. ॥ ೩೬ ॥

ಶ್ರೀ ಬ್ರಹ್ಮೋವಾಚ—

ಇದಂ ವಪುಸ್ತೇ ಲಲಿತಂ ಮನೋಹರಂ
ಚತುರ್ಭುಜಂ ಶ್ಯಾಮಲಕುಂತಲಾವೃತಮ್ ।
ನಾತಃ ಪರಂ ಸರ್ವಸುಖಸ್ಯ ಸಾಧನಂ
ಪಶ್ಯೇ ಪ್ರಭೋ ಮಾಧವ ವಿಶ್ವಮಂಡಲೇ ॥ ೩೭ ॥
ಪರಂ ಪರಾಣಾಮಮೃತಂ ಪುರಾಣಂ
ಪಾರಂ ಪರಂ ವಿಷ್ಣುಮನಂತವೀರ್ಯಮ್।
ನಮಾಮಿ ನಿತ್ಯಂ ಪುರುಷಂ ಪ್ರಧಾನಂ
ಹವಿರ್ಭುಜಂ ಯಜ್ಞಫಲಪ್ರದಂ ತ್ವಾಮ್ ॥ ೩೮ ॥
ತವೈವ ಭೀತ್ಯಾ ಪವನೋಽನುವಾತಿ
ತವೈವ ಭೀತ್ಯಾ ತಪತೀಹ ಭಾಸ್ವಾನ್ ।
ತವೈವ ಭೀತ್ಯಾ ಜಲಭುಜ್ಜಗತ್ಸ್ವಾಂ-
ತವೈವ ಭೀತ್ಯಾ ಭಗಣೋ ವಿಭಾತಿ ॥ ೩೯ ॥
ತವೈವ ಭೀತ್ಯೌಷಧಯೋ ಲತಾಶ್ಚ
ವನಸ್ಪತಿಪ್ರಾಥಮಿಕಾಸ್ತಥಾ ತೇ ।
ಸ್ವೇ ಸ್ವೇ ಚ ಕಾಲೇ ಫಲಪುಷ್ಪಸಂಗಂ
ವ್ರಜಂತ್ಯಧೀನಾಸ್ಸಕಲಾ ನಿಯಂತುಃ ॥ ೪೦ ॥
ತವೈವ ಭೀತ್ಯಾ ಸರಿತಃ ಸ್ರವಂತಿ
ನಾತಿಕ್ರಮಂತ್ಯಂಬುಧಯೋ ಹಿ ವೇಲಾಮ್ ।
ತವೈವ ಭೀತ್ಯಾ ಹುತಭುಕ್ಸಮಿಂಧೇ
ವನಾಭ್ಯುಪೇತಾಪಿ ನ ಮಜ್ಜತೇ ಭೂಃ ॥ ೪೧ ॥
ನಭೋ ದದಾತಿ ದ್ಯುಸದಾಂ ಪದಂ ಯತ್-
ತವೈವ ಭೀತ್ಯಾ ಸಮಯಾತ್ಮಕಸ್ಯ ಚ ।
ಚರಾಚರಂ ಯಸ್ಯ ವಶೇಽಸ್ತಿ ನಿತ್ಯಂ
ಮುಕ್ತಿಪ್ರದಂ ತ್ವಾಮಹಮಾನತೋಽಸ್ಮಿ ॥ ೪೨ ॥
ಸ್ತುತ್ವೇತ್ಥಂ ಪತಿತಂ ಪಾದೇ ಪ್ರಜಾಪತಿಮಕಲ್ಮಷಮ್ ।
ಕರಾಭ್ಯಾಂ ತಂ ಸಮುತ್ಥಾಪ್ಯ ಪರಿಷ್ವಜ್ಯೇದಮಬ್ರವೀತ್ ॥ ೪೩ ॥

ಬ್ರಹ್ಮದೇವರು ಹೇಳಿದರು—

ಎಲೈ ಭಗವಂತನೇ! ನಿನ್ನ ಶರೀರವು ಸುಕೋಮಲವಾಗಿಯೂ ಮನಸ್ಸಿಗೆ ಆಕರ್ಷಣೀಯವೂ, ಅಲ್ಲದೆ ನಾಲ್ಕು ಭುಜವುಳ್ಳದ್ದಾಗಿ ಇದೆ. ನಿನ್ನ ಶಿರಸ್ಸು ಕಪ್ಪಾದ ಕೂದಲಿನಿಂದ ಕೂಡಿದುದು. ಇಂತಹ ನಿನ್ನ ರೂಪವನ್ನು ನೋಡಿದ್ದಾಯಿತು. ಇದಕ್ಕಿಂತ ಹೆಚ್ಚಿನದಾದ ಸರ್ವಸುಖಕ್ಕೂ ಕಾರಣವಾದ ಬೇರೆ ಯಾವುದನ್ನೂ ಈ ಪ್ರಪಂಚದಲ್ಲಿಯೇ ನೋಡಲಾರೆನು ॥ ೩೭ ॥ ನೀನು

ಉತ್ತಮರಿಗಿಂತ ಉತ್ತಮನು–ಸರ್ವೋತ್ತಮನು, ನಾಶವಿಲ್ಲದೆ ಇರುವವನು, ಪುರಾಣಪುರುಷನು, ಈ ಸಂಸಾರ ಸಮುದ್ರವನ್ನು ದಾಟಿಸುವವನು, ವಿಷ್ಣುವು, ಅನಂತವೀರ್ಯನು, ನಿತ್ಯನು, ಪ್ರಧಾನ ಪುರುಷನು, ಈ ಯಜ್ಞ ಮತ್ತು ಸಕಲವಿಧವಾದ ಯಜ್ಞ ಹವಿಸ್ಸನ್ನು ಸ್ವೀಕಾರ ಮಾಡುವವನೂ ಯಜ್ಞದ ಫಲವನ್ನು ಕರುಣಿಸುವವರಾದ ಶ್ರೀಮಾಧವದೇವನೇ! ನಿನಗೆ ನಮಸ್ಕಾರಗಳು. (ವಾಯು ಬ್ರಹ್ಮಾದಿಗಳೂ, ಉತ್ತಮರಾದ ದೇವತೆಗಳಾದರೂ ಅವರು ಕ್ಷರಪುರುಷರು. ಅಂದರೆ ನಾಶ-ವುಳ್ಳವರು. ಇವರಿಗಿಂತಲೂ ಉತ್ತಮಳಾದ ಶ್ರೀರಮಾದೇವಿಯು ಅಕ್ಷರಪುರುಷಳಾಗಿದ್ದು ''ಪರಾ'' ಎಂದು ವೇದಶಾಸ್ತ್ರಾದಿಗಳಲ್ಲಿ ಕರೆಯಲ್ಪಟ್ಟಿದ್ದಾಳೆ. ಈ ಕ್ಷರಾಕ್ಷರಪುರುಷರ ದಶೆಯಿಂದ ಅತ್ಯಂತ ಉತ್ತಮನಾಗಿ ಉತ್ತಮೋತ್ತಮನಾಗಿರುವ ಪರಮಾತ್ಮನು ಉತ್ತಮ ಪುರುಷನೆಂದು, ಪರನೆಂದೂ ವೇದಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಪರರಿಗೂ ಪರನು–ಸರ್ವೋತ್ತಮನು. ಪ್ರಳಯಕಾಲದಲ್ಲಿ ಭಗವಂತನ ಅತಿಸಾಮೀಪ್ಯರೂಪ ಲಯವನ್ನು ಹೊಂದಿದ ಶ್ರೀಲಕ್ಷ್ಮೀದೇವಿಯು ಸೃಷ್ಟಿಕಾಲದಲ್ಲಿ ಒಂದಂಶದಿಂದ ಬಂದು ಜಗತ್ತಿನ ಸೃಷ್ಟಿಕಾರ್ಯದಲ್ಲಿ ಆಸಕ್ತಳಾಗುತ್ತಾಳೆ. ಇದೇ ಅವಳಿಗೆ ಸೃಷ್ಟಿ ಎಂದು ಮಹಾಭಾರತತಾತ್ಪರ್ಯನಿರ್ಣಯದ ಒಂದನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಈ ದೃಷ್ಟಿಯಿಂದ ನಾಶರಹಿತಳಾಗಿ ನಿತ್ಯಳಾಗಿದ್ದರೂ ಪರಮಾತ್ಮನಿಗೆ ಸಲ್ಲತಕ್ಕ ಸ್ವತಂತ್ರ ನಿತ್ಯತ್ವವು ಶ್ರೀಲಕ್ಷ್ಮೀದೇವಿಗಿಲ್ಲ. ಅವಳಿಗಿರುವ ನಿತ್ಯತ್ವವು ಪರಮಾತ್ಮನ ಅಧೀನ್ಯಕ್ಕೂ, ಅನುಗ್ರಹಕ್ಕೂ ಒಳಪಟ್ಟದ್ದು. ತ್ರೈಕಾಲಿಕಾ-ಬಾಧಿತವಾದ ಸ್ವಾತಂತ್ರ್ಯವೂ ನಿತ್ಯತ್ವವೂ ಶ್ರೀಹರಿಗೆ ಒಬ್ಬನಿಗೇ ಇರತಕ್ಕ ವಿಶಿಷ್ಟಗುಣ. ಆದ್ದರಿಂದ ಮರಣವಿಲ್ಲದಿರುವುದರಿಂದ ಅಮೃತನು, ಶ್ರೀಹರಿಯು ಅನಾದಿಕಾಲದಿಂದ ಇರುವುದರಿಂದ ಸನಾತನನು. ಈ ಸಂಸಾರವೆಂಬ (ಪರಂ) ಸಮುದ್ರವನ್ನು ದಾಟಿಸುವುದರಿಂದ ಪಾರನೆಂದು ಕರೆಯಲ್ಪಟ್ಟವನು. ದೇಶತಃ ಕಾಲತಃ ಎಲ್ಲೆಡೆಯೂ ಎಲ್ಲ ಕಾಲದಲ್ಲಿಯೂ ವ್ಯಾಪ್ತಿಯುಳ್ಳ-ವನಾದುದರಿಂದ ಶಾಸ್ತ್ರಗಳಲ್ಲಿ ''ವಿಷ್ಣು''ಎಂದು ಕರೆಯಲ್ಪಟ್ಟಿರುವವನು, ಎಡೆಯಿಲ್ಲದ ಶಕ್ತಿಸ್ವರೂಪ-ನಾದುದರಿಂದ ಅನಂತವೀರ್ಯನು; ಮುಕ್ತರಾದಿಯಾಗಿ ಎಲ್ಲರ ಜೀವಗಳಲ್ಲಿ ಇರುವುದರಿಂದ ಪುರುಷಶಬ್ದವಾಚ್ಯನಾಗಿರುವವನು. ಜಗತ್ತಿಗೇ ಸ್ವಾಮಿಯಾಗಿ ಇದ್ದು ನಿಯಮನ ಮಾಡುವುದರಿಂದ (ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷವೆಂಬ ಸೃಷ್ಟ್ಯಾದ್ಯಷ್ಟ-ಕರ್ತೃತ್ವವಿರುವುದರಿಂದ) ''ಪ್ರಧಾನ'' ಎಂಬ ಶಬ್ದವಾಚ್ಯನು.) ॥ ೩೮ ॥

(ತೈತ್ತಿರೀಯ ಉಪನಿಷತ್ತಿನಲ್ಲಿ ವರ್ಣಿಸಿರುವ ರೀತಿಯಲ್ಲಿಯೇ ಈ ಮುಂದಿನ ನಾಲ್ಕು ಶ್ಲೋಕಗಳಿಂದ ಬ್ರಹ್ಮದೇವರು ಶ್ರೀಮಾಧವದೇವರನ್ನು ಸ್ತೋತ್ರ ಮಾಡುತ್ತಾರೆ.)

ನಿನ್ನ ಭಯದ ದಶೆಯಿಂದಲೇ ಗಾಳಿಯು ಬೀಸುತ್ತಿದೆ ಮತ್ತು ಸೂರ್ಯನು ಜ್ವಲಿಸುತ್ತಿದ್ದಾನೆ. ನಿನ್ನ ಭಯದಿಂದಲೇ ಗಿಡ ಮರವನಸ್ಪತಿಗಳು ಭೂಮಿಯಿಂದ ನೀರನ್ನು ಹೀರಿ ಬದುಕುತ್ತಿವೆ. ನಿನ್ನ ಭಯದಿಂದಲೇ ನಕ್ಷತ್ರಗಣಗಳು ಬೆಳಗುತ್ತಿವೆ. ॥ ೩೯ ॥ ನಿಯಾಮಕನಾಗಿರುವ ನಿನ್ನ ಭಯದಿಂದ ಔಷಧಿಗಳೂ, ಬಳ್ಳಿಗಳೂ, ವನಸ್ಪತಿಗಳೂ ಬೆಳೆದು ನಿಂತು ಕಾಲಕಾಲಕ್ಕೆ ಸರಿಯಾಗಿ ಚಿಗುರಿ, ಹೂ ಬಿಟ್ಟು, ಫಲಾದಿಗಳನ್ನು ಕೊಡುತ್ತಿವೆ. ॥ ೪೦ ॥ ನಿನ್ನ ಭಯದಿಂದಲೇ ನದಿಗಳು ಹರಿಯುತ್ತಿವೆ. ನಿನ್ನ ಭಯದಿಂದಲೇ ಸಮುದ್ರಗಳು ತಮ್ಮ ದಡವನ್ನು ಮೀರದೆ ಇದ್ದು ಭೂಮಿಯನ್ನು ಕಾಪಾಡುತ್ತಿವೆ. ನಿನ್ನ ಭಯದಿಂದಲೇ ಅಗ್ನಿಯು ಕಟ್ಟಿಗೆಯನ್ನು ಸುಡುತ್ತಿದೆ. ನಿನ್ನ ಭಯದಿಂದಲೇ ಸಮುದ್ರಜಲವು ಭೂಮಿಯನ್ನು ವ್ಯಾಪಿಸಿದ್ದರೂ ಅದನ್ನು ಮುಳುಗಿಸಿಲ್ಲ. ॥ ೪೧ ॥ ಆಕಾಶವು ನಿನ್ನ ಭಯದಿಂದಲೇ ಗ್ರಹಗಳಿಗೆ ಅವಕಾಶವನ್ನು ಕೊಟ್ಟಿದೆ (ಈ ಅವಕಾಶದಿಂದಲೇ ಸೂರ್ಯನ ಉದಯಾಸ್ತಮಾನ-ವಾಗಿ ಹಗಲು, ರಾತ್ರಿ, ದಿನ, ವಾರ, ಪಕ್ಷ, ತಿಂಗಳು, ಅಯನ ಮತ್ತು ವರ್ಷ ಎಂಬ ಕಾಲದ ಜ್ಞಾನವು

ಜಗತ್ತಿನಲ್ಲಿ ಆಗುತ್ತಿದೆ.) ಒಟ್ಟಿನಲ್ಲಿ ಚರಾಚರಾತ್ಮಕವಾದ ಈ ಪ್ರಪಂಚವು ನಿನ್ನ ವಶದಲ್ಲಿ ಯಾವಾಗಲೂ ಇದ್ದೇ ಇದೆ. ಎಲ್ಲರಿಗೂ ಮೋಕ್ಷವನ್ನು ಕರುಣಿಸುವವನು ನೀನೇ. ।।೪೨ ।।

ಈ ರೀತಿಯಾಗಿ ಸ್ತೋತ್ರ ಮಾಡಿ ಕಾಲುಗಳಿಗೆರಗಿದ ನಿಷ್ಕಲ್ಮಷಮನಸ್ಸುಳ್ಳ ಆ ಬ್ರಹ್ಮದೇವರನ್ನು ಎರಡು ಕೈಗಳಿಂದಲೂ ಎಬ್ಬಿಸಿ ಆಲಿಂಗನ ಮಾಡಿಕೊಂಡು ಈ ರೀತಿಯಾಗಿ ಶ್ರೀ ಮಾಧವದೇವರು ಹೇಳಿದರು. ।। ೪೩ ।।

**ಶ್ರೀಮಾಧವ ಉವಾಚ—**

**ಬ್ರಹ್ಮನ್ ಸದಾ ಪ್ರಸನ್ನೋऽಹಮಧಿಕಂ ಯಜ್ಞಕರ್ಮಣಿ ।**
**ವರಯಸ್ವ ವರಾನ್ಕಾಮಾನ್ ಸ್ವಕರ್ಮಸಮುಪಾರ್ಜಿತಾನ್ ।। ೪೪ ।।**

**ಶ್ರೀಮಾಧವದೇವರು ಹೇಳಿದರು—**

ಎಲೈ ಬ್ರಹ್ಮನೇ, ನಿನ್ನ ಬಗ್ಗೆಯಾವಾಗಲೂ ಪ್ರಸನ್ನನಾಗಿಯೇ ಇದ್ದೇನೆ; ಈ ಯಜ್ಞದ ವಿಷಯದಲ್ಲಂತೂ ಇನ್ನೂ ಹೆಚ್ಚಿಗೆ ಪ್ರಸನ್ನನಾಗಿದ್ದೇನೆ. ನಿನ್ನ ಯಜ್ಞ ಕರ್ಮಗಳ ಮೂಲಕ ಸಂಪಾದಿಸಿದ ವರಗಳನ್ನು ಯಥೇಚ್ಛವಾಗಿ ಕೇಳು. ।। ೪೪ ।।

**ಶ್ರೀಬ್ರಹ್ಮೋವಾಚ—**

**ಶ್ರೀಮಾಧವ ದಯಾಸಿಂಧೋ ತ್ವದಾಲೋಕಃ ಪರೋ ವರಃ ।**
**ಯದರ್ಥಂ ವಿವಿಧಾಯಾಸಾಃ ಶ್ರುತಿಸ್ಮೃತಿವಿಜೃಂಭಿತಾಃ ।। ೪೫ ।।**
**ಅವತೀರ್ಣೇ ಪುರಸ್ತಸ್ಮಿನ್ತತಃ ಕೋऽನ್ಯೋऽಪರೋ ವರಃ ।**
**ತಥಾಪಿ ಯಾಚ್ಯತೇ ಸ್ವಾಮಿನ್ ಪರೋಪಕೃತಿಹೇತುನಾ ।। ೪೬ ।।**
**ತ್ವತ್ಪದಾವಿಷ್ಟಮನಸೋ ಭಕ್ತಿಮಂತೋ ದೃಢವ್ರತಾಃ ।**
**ಅತ್ರ ಕ್ಷೇತ್ರೇ ಸಮಾಯಾತಾಸ್ತೇಷಾಮೇವಂವಿಧೋ ಭವ ।। ೪೭ ।।**
**ಸ್ನಾನಂ ದಾನಂ ತಪೋ ಹೋಮಂ ಸುವ್ರತಂ ಹರಿಪೂಜನಮ್ ।**
**ಶ್ರದ್ಧಾವಿಧಿವಿಹೀನಂ ಚ ಕೃಪಯಾ ಸಫಲಂ ಕುರು ।। ೪೮ ।।**
**ಪುಮರ್ಥಸಾಧನಂ ಪುಂಸಾಂ ಖ್ಯಾತಂ ಬ್ರಹ್ಮಾಂಡಮಂಡಲೇ ।**
**ಪ್ರಯಾಗಂ ವೈಷ್ಣವಕ್ಷೇತ್ರಂ ಮನ್ನಾಮ್ನಾ ಚಿನ್ಹಿತಂ ಕುರು ।। ೪೯ ।।**
**ಇತ್ಥಂ ಬ್ರಹ್ಮವಚಃ ಶ್ರುತ್ವಾ ಪರೋಪಕೃತಿತೋಷಿತಃ ।**
**ಮಾಧವಃ ಪ್ರತ್ಯುವಾಚೇದಂ ತಥಾಸ್ತು ಚತುರಾನನಮ್ ।। ೫೦ ।।**

**ಶ್ರೀಬ್ರಹ್ಮದೇವರು ಹೇಳಿದರು—**

ದಯಾಸಮುದ್ರನಾದ ಮಾಧವನೇ! ನಿನ್ನ ಕೃಪಾದೃಷ್ಟಿಯೇ ಸರ್ವಶ್ರೇಷ್ಠವಾದ ವರವು; ಈ ನಿನ್ನ ಕೃಪಾವಲೋಕನಕ್ಕಾಗಿಯೇ ಶ್ರುತಿಸ್ಮೃತಿಗಳಲ್ಲಿ ಕಷ್ಟಕರವಾದ ಅನೇಕ ವ್ರತನೇಮನಿಷ್ಠೆ ಸಾಧನೆಗಳು ಹೇಳಲ್ಪಟ್ಟಿರುವುವು. ।। ೪೫ ।। ನೀನು ಇಲ್ಲಿಗೆ ಬಂದು ದರ್ಶನ ಕೊಟ್ಟಾಯಿತು. ಇದಕ್ಕಿಂತಲೂ ಮಿಗಿಲಾದ ಇನ್ನೇನು ವರ ಬೇಡಲಿ? ಹಾಗಿದ್ದರೂ ಪರೋಪಕಾರದ ದೃಷ್ಟಿಯಿಂದ ನನ್ನಿಂದ ವರವು ಬೇಡಲ್ಪಡುತ್ತಿದೆ. ।। ೪೬ ।। ನಿನ್ನ ಪಾದದಲ್ಲೇ ಮನಸ್ಸುಳ್ಳವರಾಗಿ, ದೃಢವಾದ

ವ್ರತವುಳ್ಳವರಾಗಿ, ನಿನ್ನ ಭಕ್ತಿಯೇ ಪ್ರಧಾನವಾಗುಳ್ಳವರಾಗಿ ಈ ಕ್ಷೇತ್ರಕ್ಕೆ ಬರುವವರೆಲ್ಲರಿಗೂ ಈ ರೀತಿಯಾಗಿಯೇ ಇದ್ದು ಅನುಗ್ರಹಿಸು. ॥ ೪೭ ॥ ಸ್ನಾನ, ದಾನ, ಹೋಮ, ಜಪ, ತಪ, ಸದ್ವ್ರತ, ಹರಿಪೂಜನ ಇವುಗಳಲ್ಲಿ ಶ್ರದ್ಧಾ ಹಾಗೂ ವಿಧಿಗಳು ಪೂರ್ತಿಯಾಗಿ ಇಲ್ಲದಿದ್ದರೂ ಅವರು ಈ ಕ್ಷೇತ್ರದಲ್ಲಿದ್ದು ಮಾಡಿದ ಸಾಧನೆಗಳನ್ನು ಕರುಣೆಯಿಂದ ಸಫಲವನ್ನಾಗಿ ಮಾಡು. ॥ ೪೮ ॥ ಇಡೀ ಬ್ರಹ್ಮಾಂಡದಲ್ಲಿಯೇ ಪ್ರಸಿದ್ಧವಾದ ಪುರುಷಾರ್ಥಪ್ರದವಾದ ಕ್ಷೇತ್ರವನ್ನಾಗಿ ಈ ಪ್ರಯಾಗವನ್ನು ಅನುಗ್ರಹಿಸು ಮತ್ತು ನನ್ನ ಹೆಸರಿನಲ್ಲಿ ಇದು ಪರಮ ವೈಷ್ಣವ ಕ್ಷೇತ್ರವೆಂದು ಚಿಹ್ನಿತವಾಗುವಂತೆ ಅನುಗ್ರಹಿಸು. ಇದೇ ನನಗೆ ತಾವು ಕೊಡತಕ್ಕ ವರ. ॥ ೪೯ ॥ ಈ ರೀತಿ ಯಾಚಿಸಿದ ಬ್ರಹ್ಮದೇವರ ಮಾತನ್ನು ಕೇಳಿ, ಅವರ ಪರೋಪಕಾರ ಬುದ್ಧಿಯಿಂದ ಸಂತುಷ್ಟರಾಗಿ ಮಾಧವದೇವರು ''ಚತುರ್ಮುಖಬ್ರಹ್ಮನೇ ! ಹಾಗೆಯೇ ಆಗಲಿ'' ಎಂದು ವರವನ್ನಿತ್ತರು. ॥ ೫೦ ॥

**ಸೂತ ಉವಾಚ—**

ಯುಕ್ತಮೇವ ಯದತ್ಯುಚ್ಚೈಃ ಫಲದಂ ಹರ್ಷವರ್ಧನಮ್ ।
ಪರೋಪಕರಣಂ ಕೇಷಾಂ ರೋಚತೇ ನ ಸುಖಪ್ರದಮ್ ॥ ೫೧ ॥
ಶಂಖಚಕ್ರಧರೋ ದೇವಃ ಸಚ್ಚಿದಾನಂದವಿಗ್ರಹಃ ।
ಇತಿ ತಸ್ಮೈ ವರಂ ದತ್ವಾ ಮಾಧವೋಽಂತರ್ದಧೇ ವಿಭುಃ ॥ ೫೨ ॥
ತದಾರಭ್ಯ ಪ್ರಯಾಗಾಖ್ಯಂ ವಿಷ್ಣುಕ್ಷೇತ್ರಮಪಿ ದ್ವಿಜಾಃ ।
ವಿಷ್ಣುಪ್ರಜಾಪತಿಕ್ಷೇತ್ರಮಿತಿ ರೂಢಿಮುಪಾಗತಮಂ ॥ ೫೩ ॥
ಏವಂ ಬ್ರಹ್ಮಾಶ್ವಮೇಧಾನಾಂ ದಶಕೇನಾಯಜದ್ಧರಿಮ್ ।
ತೀರ್ಥಮಾಹಾತ್ಮ್ಯಮಾಲೋಕ್ಯ ಮಾಧವಪ್ರೀತಯೇ ಪರಮ್ ॥ ೫೪ ॥
ಅತೋಽತ್ರ ಮಾಧವಸ್ಥಾನೇ ಅಗ್ನಿಷ್ಟೋಮಾದಿಕಂ ಮಖಮ್ ।
ಭಕ್ತ್ಯಾ ಪರಮಯಾ ಕುರ್ವನ್ನನಂತಂ ಫಲಮಶ್ನುತೇ ॥ ೫೫ ॥
ಪಂಚಯಜ್ಞಾನಸಾಮರ್ಥ್ಯೇ ಯಃ ಕರೋತಿ ನಿರಂತರಮ್ ।
ಸೋಽಪಿ ತತ್ಫಲಮಾಪ್ನೋತಿ ಭಾವಗ್ರಾಹೀ ಯತೋ ಹರಿಃ ॥ ೫೬ ॥

॥ ಇತಿ ಅಷ್ಟಮೋಽಧ್ಯಾಯಃ ॥

**ಸೂತರು ಹೇಳಿದರು—**

ಈ ಬ್ರಹ್ಮದೇವರು ಬೇಡಿದ್ದು ''ತಥಾಸ್ತು'' ಎಂದು ಮಾಧವದೇವರು ಅನುಮೋದಿಸಿದ್ದು, ಎರಡೂ ಉಚಿತವಾಗಿಯೇ ಇವೆ. ಏಕೆಂದರೆ ಈ ಎರಡು ವ್ಯಾಪಾರಗಳೂ ಸತ್ಫಲವನ್ನು ಕೊಡುವುವು ಮತ್ತು ಹರ್ಷವರ್ಧಕಗಳೂ ಆಗಿವೆ. ಸುಖಪ್ರದಾಯಕವಾದ ಪರೋಪಕಾರವು ಯಾರಿಗೆ ತಾನೇ ರುಚಿಸುವುದಿಲ್ಲ? ॥ ೫೧ ॥ ಶಂಖಚಕ್ರಧಾರಿಯಾದ, ಸಚ್ಚಿದಾನಂದಸ್ವರೂಪಿಯಾದ ವಿಗ್ರಹವುಳ್ಳ ಶ್ರೀಮಾಧವದೇವರು ಬ್ರಹ್ಮದೇವರಿಗೆ ಈ ರೀತಿಯಾದ ವರವನ್ನು ಕರುಣಿಸಿ ಅಲ್ಲಿಂದ ಅಂತರ್ಧಾನರಾದರು. ॥ ೫೨ ॥ ಈ ರೀತಿ ನಡೆದ ನಂತರ ಬ್ರಾಹ್ಮಣರು ಪ್ರಯಾಗಕ್ಷೇತ್ರವು ''ವಿಷ್ಣುಕ್ಷೇತ್ರವಾದರೂ'' ''ವಿಷ್ಣುಪ್ರಜಾಪತಿಕ್ಷೇತ್ರ'', ಎಂದು ಕರೆಯುವುದನ್ನು ರೂಢಿ ಮಾಡಿದರು. ॥ ೫೩ ॥ ಇದೇ ರೀತಿಯಾಗಿ ಶ್ರೀಬ್ರಹ್ಮದೇವರು ಪ್ರಯಾಗದಲ್ಲಿ ಆ ಕ್ಷೇತ್ರದ

ಮಾಹಾತ್ಮ್ಯೆಯನ್ನು ಗಮನಿಸಿ ಹತ್ತು ಬಾರಿ ಅಶ್ವಮೇಧಯಾಗಗಳನ್ನು ಶ್ರೀವೇಣೀಮಾಧವ-ದೇವರ ಪ್ರೀತಿಗಾಗಿ ನಡೆಸಿದರು. ॥ ೫೪ ॥ ಆದ್ದರಿಂದ ಈ ಮಾಧವ ಕ್ಷೇತ್ರದಲ್ಲಿ ಅಗ್ನಿಷ್ಟೋಮಾದಿ ಯಾಗಗಳನ್ನು ಪರಮಭಕ್ತಿಯಿಂದ ಆಚರಿಸಿದವರು ಮೇರೆ ಮೀರಿದ ಫಲಗಳನ್ನು ಪಡೆಯುತ್ತಾರೆ. ॥ ೫೫ ॥ ಜ್ಯೋತಿಷ್ಟೋಮಾದಿ ಯಾಗಗಳನ್ನು ನಡೆಸಲು ಸಾಮರ್ಥ್ಯವಿಲ್ಲದವರು ಈ ಕ್ಷೇತ್ರದಲ್ಲಿ ವಾಸ ಮಾಡಿ ''ಪಂಚಯಜ್ಞ''ವನ್ನಾದರೂ (ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ ಮತ್ತು ಮನುಷ್ಯಯಜ್ಞ—ಇವು ಗೃಹಸ್ಥರು ನಿತ್ಯವೂ ಆಚರಿಸಬೇಕಾದ ಪಂಚಯಜ್ಞಗಳು.) ನಿರಂತರವಾಗಿ ಮಾಡಿಕೊಂಡಿದ್ದರೆ ಅವರೂ ಜ್ಯೋತಿಷ್ಟೋಮಾದಿ ಯಾಗಗಳ ಫಲಗಳನ್ನು ಹೊಂದುವರು. ಕಾರಣವೇನೆಂದರೆ ಶ್ರೀಹರಿಯು ಯಾವ ಭಾವದಿಂದ ಕಾರ್ಯಗಳನ್ನು ಆಚರಿಸುತ್ತಾರೆನ್ನುವುದರಿಂದಲೇ ಪ್ರೀತನಾಗುವನು. ॥ ೫೬ ॥

॥ ಎಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ನವಮೋಽಧ್ಯಾಯಃ ॥ ೯ ॥

ಸೂತ ಉವಾಚ—

ಪರಮೋ ವೈಷ್ಣವೋ ಯೋಗೀ ಶಿವೋಽಪಿ ಶಿವಕೃತ್ತಮಾಮ್ ।
ವಟಮೂಲಂ ಸಮಾಸಾದ್ಯ ಮಾಧವಾನುಗ್ರಹೇಚ್ಛಯಾ ॥ ೧ ॥
ಏಕತಃ ಪ್ರೇಮವೇಗೇನ ನಟನ್ ಕುರ್ವನ್ ತ್ರಿಕಂಟಕಮ್ ।
ತಾಂಡವೇನಾತಿರಮ್ಯೇಣ ಮಾಧವಂ ಸಮತೋಷಯತ್ ॥ ೨ ॥
ಮಾಧವೋ ಯಜ್ಞಸಾದ್ಗುಣ್ಯಂ ವಿಧಾಯ ಪರಮೇಷ್ಠಿನಃ ।
ನೃತ್ಯಮಾನಂ ಮಹೇಶಾನಂ ಗಾಯಂತಂ ಚಾಸ್ಯರೂಪತಃ ॥ ೩ ॥
ಗತ್ವಾಥ ವಟಸಾಮೀಪ್ಯಮದ್ರಾಕ್ಷೀನ್ಮುದಿತೇಕ್ಷಣಮ್ ।
ಶೂಲಪಾಣಿಂ ರಟಂತಂ ತಂ ಮಾಧವೇತಿ ಪುನಃ ಪುನಃ ॥ ೪ ॥
ದೃಷ್ಟ್ವಾ ತತ್ಪ್ರೇಮರಭಸಂ ಪ್ರಸನ್ನಹೃದಯಾಂಬುಜಃ ।
ತತಃ ಸಂದರ್ಶಯಾಮಾಸ ಸ್ವರೂಪಮತಿದುರ್ಲಭಮ್ ॥ ೫ ॥
ಚತುರ್ಭುಜಂ ವಟಾಧಸ್ತಾದ್ಬಾಲಲೀಲಾವಿಚಕ್ಷಣಮ್ ।
ಕಂಬುಕಂಠಂ ಸುತಾಮ್ರೋಷ್ಠಮರವಿಂದದಲೇಕ್ಷಣಮ್ ॥ ೬ ॥
ನಿಮ್ನನಾಭಿಂ ಘನಶ್ಯಾಮಂ ವನಮಾಲಾವಿಭೂಷಿತಮ್ ।
ಹಾರನೂಪುರಕೇಯೂರಮುದ್ರಿಕಾಕಂಕಣೋಜ್ಜ್ವಲಮ್ ॥ ೭ ॥
ಚಂದ್ರಾರ್ಕತುಲ್ಯಕಾಂತಿಭ್ಯಾಂ ಬಿಂಬಿತಾಭ್ಯಾಂ ಕಪೋಲಯೋಃ ।
ನಾನಾಶ್ಮದ್ಯುತಿಭಿನ್ನಾಭ್ಯಾಂ ಕುಂಡಲಾಭ್ಯಾಂ ವಿರಾಜಿತಮ್ ॥ ೮ ॥
ಕರೇಣ ವಟಶಾಖಾಗ್ರಮಾಧುನ್ವನ್ನಪಲಂ ಮೃದು ।
ರೋಚನಾರುಚಿರಂ ವಿಷ್ಣುಂ ರುಚಿರಾಂಶುಕರೋಚಿತಮ್ ॥ ೯ ॥
ತದೈವ ಮನಸಿ ಧ್ಯಾಯನ್ನನ್ಮೀಲಿತಲೋಚನಃ ।
ದೃಷ್ಟ್ವಾ ತಂ ನೀಲಕಂಠೋಽಪಿ ಕಿಮೇತದಿತಿ ವಿಸ್ಮಿತಃ ॥ ೧೦ ॥
ಯಾವತ್ಪಶ್ಯತಿ ತದ್ರೂಪಂ ಕಮನೀಯಂ ಮನೋಹರಮ್ ।
ತಾವತ್ಸ ಬಾಲಕವಪುಃ ಶಾಖೋಪರಿ ನನರ್ತ ಹ ॥ ೧೧ ॥
ತಥಾವೇಕ್ಷ್ಯ ಕ್ರಿಯಾಂ ತಸ್ಯ ವಿರೂಪಾಕ್ಷಷ್ಷ ಮತ್ಕೃತಃ ।
ಭಗವಾನ್ಮಾಧವೋ ಯೋಽಸೌ ಸೋಽಸಾವಿತಿ ವಿಲಕ್ಷಯನ್ ॥ ೧೨ ॥
ತತಃ ಪುನರ್ನಮಸ್ಕಾರಂ ವಿಧಾಯ ವಿಧಿಪೂರ್ವಕಮ್ ।
ನನರ್ತ ಪ್ರೇಮರಭಸಾ ತಾಂಡವೇನ ತ್ರಿಲೋಚನಃ ॥ ೧೩ ॥
ಸಗದ್ಗದಂ ಸಾಶ್ರುಹರ್ಷಂ ರೋಮಾಂಚಿತಕಲೇವರಮ್ ।
ಕೃಷ್ಣ ವಿಷ್ಣೋ ಹೃಷೀಕೇಶ ಮಾಧವೇತಿ ರಟನ್ಮುಹುಃ ॥ ೧೪ ॥

**ಏವಂವಿಧಂ ತಮಾಲೋಕ್ಯ ಮಾಧವೋ ಭಕ್ತವತ್ಸಲಃ ।**
**ಉವಾಚ ವಚನಂ ರಮ್ಯಂ ಮೇಘಗಂಭೀರಯಾ ಗಿರಾ ॥ ೧೫ ॥**

## ॥ ಒಂಬತ್ತನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಪರಮ ವೈಷ್ಣವನೂ, ಯೋಗಿಯೂ ಆದ ಶ್ರೀರುದ್ರದೇವರು ಸಜ್ಜನರಿಗೆ ಒಳ್ಳೆಯದನ್ನು ಮಾಡುವ ಇಚ್ಛೆಯಿಂದಲೂ ಶ್ರೀಮಾಧವನ ಅನುಗ್ರಹವನ್ನು ಪಡೆಯುವ ಅಪೇಕ್ಷೆಯಿಂದಲೂ, ಅಕ್ಷಯವಟವೃಕ್ಷದ ಕೆಳಗೆ ಹೋಗಿ ಪರಮಾತ್ಮನಲ್ಲಿರುವ ಭಕ್ತಿಯ ಆವೇಶದಿಂದ ಮನೋಹರವಾದ ತಾಂಡವವನ್ನು ರಭಸವಾಗಿ ನರ್ತಿಸುತ್ತಾ ಶ್ರೀಮಾಧವನನ್ನು ಸಂತೋಷಪಡಿಸಿದರು. ॥ ೧-೨ ॥ ಬ್ರಹ್ಮದೇವರ ಅಶ್ವಮೇಧಯಾಗಕ್ಕೆ ಸಾದ್ಗುಣ್ಯವನ್ನು ಅನುಗ್ರಹಿಸಿ, ಹಾಡುತ್ತಾ ನೃತ್ಯ ಮಾಡುತ್ತಿರುವ ರುದ್ರದೇವರನ್ನು ನೋಡಲು ಮಾಧವನು ಆಲದ ಮರದ ಹತ್ತಿರ ಬಾಲಕನ ರೂಪದಿಂದ ಬಂದು ಅಲ್ಲಿ ''ಮಾಧವ ಮಾಧವ'' ಎಂದು ಪುನಃ ಪುನಃ ಒದರುತ್ತಾ ನರ್ತಿಸುತ್ತಿರುವ ಶೂಲಪಾಣಿ-ಯಾದ ಈಶ್ವರನನ್ನು ನೋಡಿದನು. ॥ ೩-೪ ॥ ಆ ರುದ್ರದೇವರ ಪ್ರೇಮದ ಅಗಾಧತೆಯನ್ನು ನೋಡಿ ಆನಂದಗೊಂಡ ಹೃತ್ಕಮಲವುಳ್ಳ ಶ್ರೀಹರಿಯು ಅತಿದುರ್ಲಭವಾದ ತನ್ನ ಸ್ವರೂಪವನ್ನು ಅವನಿಗೆ ತೋರಿಸಿದನು. ॥ ೫ ॥ ಆ ಮಾಧವದೇವರ ರೂಪವು ಈ ರೀತಿಯಾಗಿ ಇತ್ತು–ನಾಲ್ಕು ಭುಜಗಳಿದ್ದುವು. ಆಲದ ಮರದ ಕೆಳಗೆ ಇದ್ದು ಬಾಲಲೀಲಾ ವಿಲಾಸದಲ್ಲಿ ತೊಡಗಿದ್ದನು. ಶಂಖದಂತೆ ಅವನ ಕುತ್ತಿಗೆಯು ಇದ್ದಿತು. ಒಳ್ಳೆಯ ಕೆಂಪು ಬಣ್ಣವುಳ್ಳ ತುಟಿಗಳು ಕಂಗೊಳಿಸುತ್ತಿದ್ದುವು. ಅವನ ಎರಡು ಕಣ್ಣುಗಳು ಕಮಲದ ದಳದಂತೆ ಇದ್ದುವು. ಅವನ ಹೊಕ್ಕಳು ಆಳವಾಗಿತ್ತು. ನೀರು ತುಂಬಿದ ಮೇಘದಂತೆ ಅವನ ಮೈಬಣ್ಣವಿತ್ತು. ವನಮಾಲಾದಿಂದ ಅಲಂಕೃತನಾಗಿದ್ದನು. ಅವನ ಶರೀರವು ಹಾರಗಳಿಂದಲೂ, ಕಾಲಂದಿಗೆ (ಗೆಜ್ಜೆ), ಬಾಹುಪುರಿ, ಮುದ್ರೆಯುಂಗುರ ಮತ್ತು ಬಳೆಗಳಿಂದ ಉಜ್ವಲವಾಗಿತ್ತು. ಅವನ ಎರಡು ಕಿವಿಗಳಲ್ಲೂ ನಾನಾ ವಿಧವಾದ ರತ್ನಗಳಿಂದ ಕೆತ್ತಿ ಮಾಡಿದ್ದ ಕುಂಡಲಗಳಿದ್ದುವು. ಇವುಗಳಿಂದ ಹೊರಹೊಮ್ಮಿದ ಬೆಳಕು ಪರಮಾತ್ಮನ ಕೆನ್ನೆಯಲ್ಲಿ ಪ್ರತಿಬಿಂಬಿಸಿ ಸೂರ್ಯಚಂದ್ರರ ಕಾಂತಿಯನ್ನು ಮೀರಿಸಿತ್ತು. ತನ್ನ ಕೈಗಳಿಂದ ಹಣ್ಣು ಹೊತ್ತಿರುವ ಕೋಮಲಗಳಾದ ಕೊಂಬೆಗಳನ್ನು ಅಲ್ಲಾಡಿಸುತ್ತಿರುವ ಮತ್ತು ಚಂದ್ರನ ಪ್ರತಿಭೆಯನ್ನು ಹೋಲುವ ಮನಮೋಹಕ ಮೈಕಾಂತಿಯುಳ್ಳ ಆ ಪರಮಾತ್ಮನ ರೂಪವನ್ನು ಆಗ ತಾನೇ ಧ್ಯಾನದಿಂದ ಎಚ್ಚೆತ್ತ ಶ್ರೀರುದ್ರದೇವರು ನೋಡಿ ''ಏನು ಇದು'' ಎಂದು ಆಶ್ಚರ್ಯಗೊಂಡರು. ॥ ೬-೧೦ ॥ ಎಲ್ಲಿಯವರೆಗೆ ರುದ್ರದೇವರು ಆ ರೂಪವನ್ನು ನೋಡುತ್ತಿದ್ದರೋ ಅಲ್ಲಿಯವರೆಗೂ ಬಾಲಕನ ಶರೀರದಲ್ಲಿದ್ದ ಆ ಮಾಧವದೇವರು ಕುಣಿಯುತ್ತಲೇ ಇದ್ದರು. ॥ ೧೧ ॥ ಆ ರೀತಿಯಾದ ಆ ಮಾಧವನ ಚಮತ್ಕಾರವನ್ನು ನೋಡಿ ''ಇವನು (ಈ ನರ್ತನ ಮಾಡುತ್ತಿರುವವನು) ಯಾರು ಎಂದು ಯೋಚಿಸಿ ಅವನೇನೇ ಅಂದರೆ ಶ್ರೀಮಾಧವನೇ'' ಎಂದು ದೃಷ್ಟಿಸಿ, ನೋಡಿ, ತೀರ್ಮಾನಿಸಿ ವಿಧಿವತ್ತಾಗಿ ನಮಸ್ಕರಿಸಿ ಇನ್ನೂ ಹೆಚ್ಚು ಹೆಚ್ಚು ರಭಸದಿಂದ ನರ್ತನ ಮಾಡಲು ಆರಂಭಿಸಿದರು. ॥ ೧೨-೧೩ ॥ ಈ ರೀತಿ ಮಾಡುತ್ತಿರುವಾಗ, ಕಣ್ಣಿನಲ್ಲಿ ಆನಂದಬಾಷ್ಪವನ್ನು ಸುರಿಸುತ್ತ, ಗದ್ಗದ ಕಂಠದಿಂದ ''ಮಾಧವ ! ಭಕ್ತವತ್ಸಲ ! ಕೃಷ್ಣ ! ವಿಷ್ಣೋ ! ಹೃಷೀಕೇಶ ! ಎಂದು ಪುನಃ ಪುನಃ ಕೂಗುತ್ತಾ ಮೈರೋಮಾಂಚನ- ಗೊಂಡರು. ॥ ೧೪ ॥ ಈ ವಿಧವಾಗಿ ಇದ್ದ ರುದ್ರದೇವರನ್ನು ಗಮನಿಸಿದ

ಭಕ್ತವತ್ಸಲನಾದ ಮಾಧವದೇವರು ಮೇಘದಂತೆ ಗಂಭೀರವಾದ ತಮ್ಮ ಧ್ವನಿಯಲ್ಲಿ ಈ ರೀತಿಯಾಗಿ ಹೇಳಿದರು. ॥ ೧೫ ॥

ಶ್ರೀ ಮಾಧವ ಉವಾಚ—

ನೀಲಕಂಠ ತ್ವಮಸ್ಮಾಕಂ ವಲ್ಲಭೋಽಸಿ ಗುಣೈಃ ಪರೈಃ ।
ನಟನೇ ಗಾಯನೇ ತ್ವತ್ತಃ ಕೋನ್ಯೋಽಸ್ತಿ ಕುಶಲಃ ಪರಃ ॥ ೧೬ ॥
ತ್ವದೀಯತಾಂಡವೇನಾಹಂ ಪರಿತುಷ್ಟೋ ಮಹಾನಟ ।
ಕಿಮಿಚ್ಛಸಿ ವರಂ ಶೂಲಿನ್ನಂಜಸಾ ಬ್ರೂಹಿ ಮಾ ಚಿರಮ್ ॥ ೧೭ ॥
ಮಾಧವೋಕ್ತಾಮಿಮಾಂ ವಾಚಮಾಕರ್ಣ್ಯಾತಿಹರ್ಷಿತಃ ।
ಶಿವಃ ಸ್ತೋತುಂ ಸಮಾರೇಭೇ ಮಾಧವಂ ಪ್ರಯತಾಂಜಲಿಃ ॥ ೧೮ ॥

ಶ್ರೀಮಾಧವದೇವರು ಹೇಳಿದರು—

ನೀಲಕಂಠನೇ ! ನಿನ್ನ ಉತ್ತಮ ಗುಣಗಳಿಂದ ನಮಗೆ ಬೇಕಾದವನಾಗಿದ್ದಿ. ನಾಟ್ಯದಲ್ಲಾಗಲೀ ಹಾಡುವುದರಲ್ಲಾಗಲೀ ಬೇರೆಯಾರೂ ನಿನ್ನ ಸಮರಾದವರಿಲ್ಲ. ॥ ೧೬ ॥ ಹೇ ಮಹಾನ್ ನಟನೇ ! ನಿನ್ನ ತಾಂಡವ ನರ್ತನದಿಂದ ಬಹಳ ಸಂತುಷ್ಟನಾಗಿದ್ದೇನೆ. ನೀನು ಯಾವ ವರವನ್ನು ಇಚ್ಛಿಸುವಿಯೋ ಅದನ್ನು ಜಾಗ್ರತೆಯಾಗಿ ಕೇಳು. ॥ ೧೭ ॥ ಶ್ರೀಮಾಧವರ ಈ ಮಾತನ್ನು ಕೇಳಿ ಅತಿಹರ್ಷಿತನಾದ ರುದ್ರದೇವರು ಕೈಗಳನ್ನು ಮುಗಿದು ಮಾಧವರಿಗೆ ಈ ರೀತಿ ಸ್ತೋತ್ರ ಮಾಡತೊಡಗಿದರು. ॥ ೧೮ ॥

ಶ್ರೀನೀಲಕಂಠ ಉವಾಚ—

ನಾರಾಯಣಾಕ್ಷರಾನಂತ ಶರಣಾಗತಪಾಲಕ ।
ಕೃಷ್ಣ ವಿಷ್ಣೋ ರಮಾಕಾಂತ ಪಾಹಿ ಮಾಂ ಶರಣಾಗತಮ್ ॥ ೧೯ ॥
ನಮೋ ದೇವಾಧಿದೇವಾಯ ಶಂಖಚಕ್ರಗದಾಭೃತೇ ।
ನಮಃ ಸದ್ಗುಣರೂಪಾಯ ನಮೋ ಬ್ರಹ್ಮಾಂಡಹೇತವೇ ॥ ೨೦ ॥
ನಮಸ್ತೇ ದೇವದೇವೇಶ ನಮಸ್ತೇ ಲೋಕಪಾವನ ।
ಸರ್ವಸಾಕ್ಷಿನ್ನಮಸ್ತುಭ್ಯಂ ನಾಥನಾಥ ನಮೋಽಸ್ತು ತೇ ॥ ೨೧ ॥
ನಮಸ್ತೇ ಧ್ಯಾನಗಮ್ಯಾಯ ನಮಸ್ತೇ ಧ್ಯಾನಸಾಕ್ಷಿಣೇ ।
ನಮೋ ಜ್ಞೇಯಸ್ಥಾಯ ಶುದ್ಧಾಯ ನಿರ್ಗುಣಾಯ ಗುಣಾತ್ಮನೇ ॥ ೨೨ ॥
ಅರೂಪಾಯ ಸರೂಪಾಯ ಬಹುರೂಪಾಯ ತೇ ನಮಃ ।
ನಮೋ ಹಿರಣ್ಯಗರ್ಭಾಯ ನಮಸ್ಸಕಲರೂಪಿಣೇ ॥ ೨೩ ॥
ಸೋಮಸೂರ್ಯಾದಿರೂಪಾಯ ಹವ್ಯಕವ್ಯಭುಜೇ ನಮಃ ।
ನಮೋ ನಿತ್ಯಾಯ ಪೂರ್ಣಾಯ ಸದಾನಂದೈಕರೂಪಿಣೇ ॥ ೨೪ ॥
ಸ್ಮೃತ್ವಾರ್ತಿನಾಶಿನೇ ತುಭ್ಯಂ ಭೂಯೋ ಭೂಯೋ ನಮೋ ನಮಃ ॥ ೨೫ ॥

ಪದ್ಮಪತ್ರಸಮಲೋಚನ ವಿಷ್ಣೋ
ಕೇಶವಾಚ್ಯುತ ಜನಾರ್ದನ ಶೌರೇ ।
ವಾಸುದೇವ ಮಧುಸೂದನ ಶಾರ್ಙ್ಗಿನ್-
ತ್ವಾಂ ನಮಾಮಿ ಹಿ ನಮಾಮಿ ನಮಾಮಿ ॥ ೨೬ ॥
ತ್ವಾಂ ಮಾಧವೇತಿ ಜಯ ಮಾಧವ ಮಾಧವೇತಿ
ಭೋ ಮೂಲಮಾಧವ ಮನೋಹರ ಮಾಧವೇತಿ ।
ಹೇ ಬಿಂದುಮಾಧವ ಸದಾ ವಟಮಾಧವೇತಿ
ಹ್ಯಕ್ಷಯ್ಯಮಾಧವ ವದಂಲ್ಲಭತೇಽಖಿಲಾರ್ಥಾನ್ ॥ ೨೭ ॥
ಇತಿ ಸ್ತುತ್ವಾ ಪುನರ್ನತ್ವಾ ಮಾಧವಸ್ಯಾಗ್ರತಃ ಸ್ಥಿತಃ ।
ವರಂ ಯಯಾಚೇ ವರದಂ ಮಾಧವಂ ಭಕ್ತವತ್ಸಲಮ್ ॥ ೨೮ ॥
ದೇವ ದೇವ ಪ್ರಸನ್ನೋಽಸಿ ವರದೋ ಯದಿ ಮೇ ಪ್ರಭೋ ।
ಅಸ್ಯ ಕ್ಷೇತ್ರಸ್ಯ ಸಾನ್ನಿಧ್ಯಂ ನಿತ್ಯಮಸ್ತು ವರೋಽಸ್ತು ಮೇ ॥ ೨೯ ॥
ಮಾಧವಸ್ತಸ್ಯ ತದ್ವಾಕ್ಯಂ ಶ್ರುತ್ವಾ ಸ್ತುತ್ಯಾತಿಹರ್ಷಿತಃ ।
ತನ್ಮನೋಗತಮಾಲಕ್ಷ್ಯ ಪ್ರತ್ಯವೋಚದ್ವಚೋ ಹಿತಮ್ ॥ ೩೦ ॥

ಶ್ರೀರುದ್ರದೇವರು ಹೇಳಿದರು—

ತ್ರೈಕಾಲಿಕನಾಶವಿಲ್ಲದವನಾದುದರಿಂದ ಅಕ್ಷರ ಎಂದು ಕರೆಯಲ್ಪಡತಕ್ಕವನೇ, ಚತುರ್ವಿಧ-ನಾಶರಹಿತನಾಗಿ ಅನಂತನೆಂದು ಕರೆಯಲ್ಪಡತಕ್ಕವನೇ, ನಿನ್ನನ್ನು ಶರಣಾದವರನ್ನು ರಕ್ಷಿಸುವವನೇ, ಕೃಷ್ಣನೇ, ವಿಷ್ಣುವೇ, ಲಕ್ಷ್ಮೀಪತಿಯೇ, ಶರಣಾಗತನಾದ ನನ್ನನ್ನು ಕಾಪಾಡು. ॥೧೯॥ ದೇವತೆಗಳ ಅಧಿಪತಿಯಾಗಿರುವವನೇ, ಶಂಖಚಕ್ರಗದಾಗಳನ್ನು ಧರಿಸಿರುವವನೇ, ಅನಂತಕಲ್ಯಾಣಗುಣ ಪರಿಪೂರ್ಣನೇ, ಬ್ರಹ್ಮಾಂಡದ ಸೃಷ್ಟಿಗೆ ಕಾರಣನಾದವನೇ(ಸೃಷ್ಟ್ಯಾದ್ಯಷ್ಟಕ್ಕೆ ಕಾರಣ), ದೇವತೆ-ಗಳಿಗೆ ದೇವನಾಗಿರತಕ್ಕವನೇ, ಲೋಕಗಳಿಗೆಲ್ಲಾ ಅತ್ಯಂತ ಪವಿತ್ರನಾಗಿ ಇರತಕ್ಕವನೇ, ಲೋಕಕ್ಕೇ ಪಾವಿತ್ರ್ಯವನ್ನು ಉಂಟುಮಾಡತಕ್ಕವನೇ, ಎಲ್ಲವನ್ನೂ (ಭೂತ-ಭವಿಷ್ಯತ್-ವರ್ತಮಾನಗಳನ್ನು ಶ್ರೀರಮಾದಿಗಳಿಗೆ ಸಂಬಂಧಪಟ್ಟವುಗಳನ್ನೂ) ಪ್ರತ್ಯಕ್ಷವಾಗಿ ಕರತಲಾಮಲಕವಾಗಿ ತಿಳಿದು ಸಾಕ್ಷಿರೂಪನಾಗಿರತಕ್ಕವನೇ, ದೇವಶ್ರೇಷ್ಠರಿಗೂ ಸ್ವಾಮಿಯಾಗಿರುವವನೇ, ನಿನಗೆ ನಮಸ್ಕಾರ-ಗಳು. ॥ ೨೦-೨೧ ॥ ಧ್ಯಾನದಿಂದಲೇ ತಿಳಿಯಲ್ಪಡುವವನೇ, ಧ್ಯಾನಕ್ಕೆ ಪ್ರತ್ಯಕ್ಷ ಗೋಚರನೇ, ಸರ್ವೋತ್ತಮನೇ, ಅತ್ಯಂತ ಶುದ್ಧನಾಗಿದ್ದು ನಿರ್ದುಷ್ಟನಾದವನೇ, ಸತ್ವ, ರಜಸ್, ತಮಸ್ಸು ಎಂಬ ಪ್ರಕೃತಿಸಂಬಂಧಗಳಾದ ಗುಣಗಳಿಂದ ದೂರನೇ, ಅನಂತ ಕಲ್ಯಾಣ ಜ್ಞಾನಾನಂದಾದಿಗುಣಗಳೇ ಸ್ವರೂಪವಾಗುಳ್ಳವನೇ, ಸರ್ವವ್ಯಾಪಿಯಾಗಿದ್ದು ಪಂಚಭೂತ ವರ್ಜಿತನಾದ್ದರಿಂದ ಅರೂಪ-ನೆಂದು ಶಾಸ್ತ್ರಗಳಲ್ಲಿ ವಾಚ್ಯನಾಗಿರತಕ್ಕವನೇ (ಹೀಗೆಂದು ಪರಮಾತ್ಮನ ರೂಪವನ್ನು ವರ್ಣಿಸಲು ಆಗದಿದ್ದರಿಂದ ಅರೂಪನೆಂದೂ) ಸರೂಪನೇ, (ತನಗೆ ಬೇಕಾದ ರೂಪಗಳನ್ನು ಧಾರಣೆ ಮಾಡಬಲ್ಲವನಾದ್ದರಿಂದ ಸರೂಪಿ ಎಂದೂ) ಬಹುರೂಪಿ ಎಂದೂ (ಅನಂತಾಂಶಗಳಿಂದ ಅನಂತ ಜೀವರಾಶಿಗಳಲ್ಲಿ ಇದ್ದು ಬಹುರೂಪಿ ಯೆಂದೂ) ಕರೆಯಲ್ಪಡುವವನೇ, ಹಿರಣ್ಯ-

ಗರ್ಭನಾಗಿ (ಬ್ರಹ್ಮಾಂತರ್ಯಾಮಿಯಾಗಿ) ಇರುವವನೇ, ಸಕಲರೂಪಗಳನ್ನೂ ಧರಿಸಬಲ್ಲ ಶಕ್ತಿಯುಳ್ಳ ಶ್ರೀನಾರಾಯಣಾಭಿನ್ನ ಮಾಧವ ದೇವರೇ, ನಿನಗೆ ನಮಸ್ಕಾರ. ॥ ೨೨-೨೩ ॥ ವಾಸುದೇವ ಮತ್ತು ಸವಿತೃನಾಮಕ ರೂಪಗಳಲ್ಲಿ ಸೂರ್ಯಬಿಂಬದಲ್ಲಿದ್ದು ವ್ಯಾಪಾರ-ಮಾಡಿಸುವುದರಿಂದ ಸೂರ್ಯನ ರೂಪವುಳ್ಳವನೆಂದೂ, ವಾಮನ ಮುಂತಾದ ರೂಪಗಳಿಂದ ಚಂದ್ರನಲ್ಲಿದ್ದು ವ್ಯಾಪಾರ ಮಾಡಿಸುವುದರಿಂದ ಚಂದ್ರರೂಪಿಯೆಂದೂ, ಶುಭಕಾರ್ಯಗಳಲ್ಲಿ ಕೊಡತಕ್ಕ ಹವಿಸ್ಸನ್ನು ಭೋಗಿಸಿ "ಹವ್ಯಭುಕ್" ಎಂದು, ಶ್ರಾದ್ಧಾದಿ ಅಪರಕರ್ಮದಲ್ಲಿ (ಪಿತೃಯಜ್ಞಗಳಲ್ಲಿ) ಅರ್ಪಿಸುವ ಪದಾರ್ಥಗಳನ್ನು ಭೋಗಿಸು- ವುದರಿಂದ "ಕರ್ಮಭುಕ್" ಎಂದೂ ಕರೆಯಲ್ಪಡುವ, ಸೃಷ್ಟಿ ಮತ್ತು ಲಯಗಳಿಲ್ಲದೆ ನಿತ್ಯವೂ ಇರತಕ್ಕವನಾದುದರಿಂದ "ನಿತ್ಯ" ಎಂದು ವಾಚ್ಯನಾದವನೇ, ಸಮಸ್ತ ಕಲ್ಯಾಣಗುಣಗಳಿಂದಲೂ ದೇಶತಃ, ಕಾಲತಃ, ಪೂರ್ಣ-ನಾದವನೇ ಮತ್ತು ತ್ರೈಕಾಲಿಕಾಬಾಧಿತಾನಂತಾನಂದಸ್ವರೂಪಿಯೇ, ನಿನ್ನನ್ನು ಧ್ಯಾನಿಸಿದವರ ದುಃಖಗಳನ್ನು ಪರಿಹಾರ ಮಾಡುವವನೇ, ಶ್ರೀಮಾಧವನೆಂಬ ಹೆಸರುಳ್ಳ ಶ್ರೀಹರಿಯೇ, ನಿನಗೆ ಪುನಃ ಪುನಃ ನಮಸ್ಕಾರಗಳು. ॥ ೨೪-೨೫ ॥ ಕಮಲದ ಹೂವಿನ ದಳದಂತೆ ಇರತಕ್ಕ ವಿಶಾಲವಾದ ಕಣ್ಣುಗಳುಳ್ಳವನೇ, ವಿಷ್ಣುವೇ, ಚ್ಯುತಿ ಇಲ್ಲದೇ ಇರುವುದರಿಂದ ಅಚ್ಯುತನೇ, ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾಗಿದ್ದು ಕೇಶವನೆಂದು ವಾಚ್ಯನೇ, ಮುಕ್ತರಿಗೆ ಹುಟ್ಟುಸಾವಿನ ಬಂಧನವನ್ನು ನಿವಾರಣೆ ಮಾಡಬಲ್ಲವನಾದುದರಿಂದ "ಜನಾರ್ದನ" ಎಂದು ಕರೆಯಲ್ಪಡುವವನೇ, ಸರ್ವಭೂತ-ಗಳಲ್ಲಿಯೂ ಇರುವುದರಿಂದ ವಾಸುದೇವನೆಂದು ಕರೆಯಲ್ಪಡುವವನೇ, ಮಧುನಾಮಕದೈತ್ಯನನ್ನು ಸಂಹರಿಸಿ ಮಧುಸೂದನನೆಂದು ವಾಚ್ಯನಾದವನೇ, ಶಾರ್ಙ್ಗವೆಂಬ ನಾರಾಯಣಧನುಸ್ಸುಳ್ಳ-ವನಾದ್ದರಿಂದ "ಶಾರ್ಙ್ಗಿನ್" ಎಂದು ವಾಚ್ಯನಾದವನೇ, ನಿನಗೆ ನಮಸ್ಕಾರ, ನಮಸ್ಕಾರ, ನಮಸ್ಕಾರಗಳು. ॥ ೨೬ ॥ ಸಜ್ಜನರು ನಿನ್ನನ್ನು ಮಾಧವನೆಂದು, (ಸೃಷ್ಟಿಗೆ ಆದಿಯಿಂದಲೂ ಇರುವುದರಿಂದ) ಮೂಲಮಾಧವನೆಂದೂ, (ಅತ್ಯಂತ ಆಕರ್ಷಕರೂಪಗುಣಸಂಪನ್ನನಾದ್ದರಿಂದ) ಮನೋಹರಮಾಧವನೆಂದೂ, (ವಾರಾಣಸೀವಾಸಿಯಾದ್ದರಿಂದ)ಬಿಂದುಮಾಧವ ಎಂದೂ, (ಪ್ರಯಾಗದಲ್ಲಿ ಅಕ್ಷಯವಟವೃಕ್ಷದಲ್ಲಿ ನಿರಂತರ ಸನ್ನಿಹಿತನಾಗಿ ಇರುವುದರಿಂದ) ವಟಮಾಧವ-ನೆಂದೂ, ಅಕ್ಷಯ ಮಾಧವನೆಂದೂ ಸಂಬೋಧಿಸಿ ಆರಾಧನೆ ಮಾಡುವ ಮೂಲಕ ಎಲ್ಲ ಅಭೀಷ್ಟಗಳನ್ನೂ ಪಡೆಯುತ್ತಾರೆ. ॥ ೨೭ ॥

ಶ್ರೀರುದ್ರದೇವರು ಮೇಲೆ ಉಲ್ಲೇಖಿಸಿರುವ ಪರಿಯಲ್ಲಿ ಶ್ರೀಮಾಧವದೇವರನ್ನು ಸ್ತುತಿಸಿ ಪುನಃ ಪುನಃ ನಮಸ್ಕರಿಸಿ ಶ್ರೀಮಾಧವನ ಮುಂದೆ ನಿಂತವರಾಗಿ ಈ ರೀತಿಯಾಗಿ ವರವನ್ನು ಬೇಡಿದರು. ॥ ೨೮ ॥ "ದೇವದೇವನಾದ ಮಾಧವನೇ! ನೀನು ಪ್ರಸನ್ನನಾಗಿ ವರವನ್ನು ಅನುಗ್ರಹಿಸುವವನಾಗಿದ್ದರೆ ಈ ಪ್ರಯಾಗಕ್ಷೇತ್ರದಲ್ಲಿ ನನ್ನ ಸನ್ನಿಧಾನವು ನಿತ್ಯವೂ ಇರಲಿ" ಎಂಬ ವರವನ್ನು ಅನುಗ್ರಹಿಸು ಎಂದು ಬೇಡಿದನು. ॥ ೨೯ ॥ ಮಾಧವನಾದರೋ ಅವನ ಪ್ರಾರ್ಥನೆ-ಯಿಂದ ಅತಿಯಾಗಿ ಸಂತಸಗೊಂಡು, ಅವರ ಮನಸ್ಸಿನ ಭಾವವನ್ನು ತಿಳಿದು ಹಿತವಾಗಿ ಪ್ರತಿವಚನವನ್ನು ಹೇಳಿದರು. ॥ ೩೦ ॥

ಶ್ರೀಮಾಧವ ಉವಾಚ—

ಅತ್ರ ಸ್ಥಿತಿಸ್ತೇಽಸ್ತು ವಟಸ್ಯ ಸನ್ನಿಧೌ
ತಥಾಪಿ ಲೋಕಸ್ಯ ಪರೀಕ್ಷಯಾ ತ್ವಯಾ ।

ಮದಾಜ್ಞಯಾಽನಂದವನೇ ವಿಹಾರ-
ಸ್ತವಾಸ್ತು ಪೂಜಾಪಿ ತಥಾ ಮದೀಯಾ ॥ ೩೧ ॥

ಶ್ರೀಮಾಧವದೇವರು ಹೇಳಿದರು—

''ಎಲೈ ನೀಲಕಂಠನೇ, ನಿನ್ನ ವಾಸವು ಈ ವಟವೃಕ್ಷದ ಸನ್ನಿಧಿಯಲ್ಲಿಯೇ ಇರಲಿ.ವಿಚಾರ ಮಾಡುವ ಜನರ ದೃಷ್ಟಿಯಿಂದ ಆನಂದವನದಲ್ಲಿ ವಿಹಾರವಿರಲಿ. ನನಗೆ ಹೇಗೆ ಪೂಜಾದಿಗಳು ಸಲ್ಲುವುವೋ ಹಾಗೆಯೇ ನಿನಗೂ ಪೂಜಾದಿಗಳು ಸಲ್ಲಲಿ, ಇದು ನನ್ನ ಆಜ್ಞಾ'' ಹೀಗೆಂದು ಹೇಳಿದರು ॥ ೩೧ ॥

ನೀಲಕಂಠ ಉವಾಚ—

ತ್ವದಾಜ್ಞಯಾ ತತ್ರ ವಸಾಮಿ ಮಾಧವ
ಪ್ರಯೋಜನಂ ತದ್ವದ ಮೇ ಮುರಾರೇ ।
ಚತುರ್ವಿಧಸ್ಯಾಪಿ ಫಲಸ್ಯ ದಾತಾ
ತ್ವತ್ತೋ ನ ಚಾನ್ಯೋಽಸ್ತಿ ಗುಣತ್ರಯೇ ಚ ॥ ೩೨ ॥

ನೀಲಕಂಠನು ಹೇಳಿದನು—

''ಎಲೈ ಮುರನಾಮಕ ದೈತ್ಯನನ್ನು ಸಂಹರಿಸಿದ ಶ್ರೀಮಾಧವನೇ, ನಿನ್ನ ಆಜ್ಞಾ ಪ್ರಕಾರ ಅಲ್ಲಿಯೇ ವಾಸಿಸುವೆನು. ಆದರೆ ಇದರ ಪ್ರಯೋಜನವನ್ನು ನನಗೆ ತಿಳಿಸು. ನೀನು ಧರ್ಮಾರ್ಥಕಾಮಮೋಕ್ಷರೂಪ ನಾಲ್ಕು ಪುರುಷಾರ್ಥಗಳನ್ನು ಕೊಡುವವನು. ಸತ್ವರಜಸ್ತಮ-ವೆಂಬ ತ್ರಿಗುಣಾತ್ಮಕವಾದ ಈ ಜಗತ್ತಿನ ಸೃಷ್ಟಿಸ್ಥಿತ್ಯಾದಿಗಳು ನಡೆಸಿ ನೀನು ಸರ್ವಕ್ಕೂ ನಿಯಾಮಕನು ಆದುದರಿಂದ ಕೇಳುತ್ತಿದ್ದೇನೆ. ಈ ವೈಶಿಷ್ಟ್ಯವು ನಿನ್ನನ್ನು ಹೊರತು ಬೇರೆ ಯಾರಿಗೂ ಇಲ್ಲ'' ಎಂದು ಅರಿಕೆ ಮಾಡಿಕೊಂಡನು ॥ ೩೨ ॥

ಶ್ರೀಮಾಧವ ಉವಾಚ—

ಇದಂ ಮದೀಯಂ ಸ್ವಕ್ಷೇತ್ರಂ ಬ್ರಹ್ಮಾಂಡೇ ನಾಸ್ತ್ಯತೋಽಧಿಕಮ್ ।
ನಾಧಿಕಾರೋಽಸ್ತಿ ದಂಡಸ್ಯ ಪಾಪಸ್ಯ ಮಮ ಸನ್ನಿಧೌ ॥ ೩೩ ॥
ಅತ್ರ ವಾಸೀ ಸ ನಿಷ್ಪಾಪೀ ಯೋ ವಾ ಕೋ ವಾ ನರಾಧಮಃ ।
ಬಾಧ್ಯಮಾನೋಽಪಿ ವಿಘ್ನೈರ್ಯಸ್ಸಹಿಷ್ಣುರ್ಮಾಂ ಪ್ರಪದ್ಯತೇ ॥ ೩೪ ॥
ಅಸ್ಮಿನ್ ಕ್ಷೇತ್ರೇ ವಿನಾ ಜ್ಞಾನಂ ವಿನಾ ಚೇಂದ್ರಿಯನಿಗ್ರಹಮ್ ।
ವಿನಾ ಯೋಗಂ ವಿನಾ ಧ್ಯಾನಂ ವಿನಾ ವ್ರತಸಮಾಧಿಭಿಃ ॥ ೩೫ ॥
ವಿನಾ ದಾನಂ ವಿನಾ ವಿತ್ತಂ ವಿನಾ ವಹ್ನಿನಿಷೇವಣಮ್ ।
ವಿನಾ ಯಜ್ಞಂ ವಿನಾ ಸಾಂಖ್ಯಂ ವಿನಾ ಕಾಯಸ್ಯ ಶೋಷಣಮ್ ॥ ೩೬ ॥
ಕೃಚ್ಛ್ರಾತಿಕೃಚ್ಛ್ರಪಾರಾಕತಪ್ತಕೃಚ್ಛ್ರಾದಿಕಂ ವಿನಾ ।
ವಾಸಮಾತ್ರೇಣ ಮಚ್ಚಿತ್ತೈಃ ಪ್ರಾಪ್ಯತೇ ಮುಕ್ತಿರುತ್ತಮಾ ॥ ೩೭ ॥

ದೇಹತ್ಯಾಗಸ್ತು ಕೇನಾಪಿ ಕರ್ಮಣಾ ಯಸ್ಯ ಜಾಯತೇ ।
ತದಾ ಸ ಧನ್ಯೋ ಮಾನ್ಯಶ್ಚ ಮಮಾಪಿ ಭವತಾಮಪಿ ॥ ೩೮ ॥
ತಸ್ಮಾನ್ನಾತ್ರೋಪದೇಷ್ಟವ್ಯಾಃ ಜನಾಃ ಪಾಪಸ್ಯ ಕಾರಿಣಃ ।
ತವಾಸ್ತಿ ಪ್ರಕೃತಿಶ್ಶಂಭೋ ದಂಡ್ಯಾನಾಂ ದಂಡಕಾರಿಣೇ ॥ ೩೯ ॥
ತದಸ್ಮಿನ್ನಿಕಟೇ ಕ್ಷೇತ್ರಂ ಮದೀಯಂ ಲೋಕವಿಶ್ರುತಮ್ ।
ಪಂಚಕ್ರೋಶಾತ್ಮಕಂ ವಿದ್ಧಿ ಪೂರ್ವದ್ವಾರಮಪಾವೃತಮ್ ॥ ೪೦ ॥
ಅಸೀವರುಣಯೋರ್ಮಧ್ಯೇ ವನಮಾನಂದಸಂಜ್ಞಿತಮ್ ।
ತತ್ರ ಸ್ಥಿತ್ವಾ ತ್ವಯಾ ಜೀವಾಃ ದಂಡ್ಯಾಃ ಪಾಪಸ್ಯ ಕಾರಿಣಃ ॥ ೪೧ ॥
ಯಥಾದೇಶಂ ಯಥಾಕಾಲಂ ಯಥಾಪಾತಕಸಂಭವಮ್ ।
ನಾನೋಪಾಯೈಶ್ಚ ನೇತವ್ಯಾ ಯಥಾದಂಡಮಹರ್ನಿಶಮ್ ॥ ೪೨ ॥
ದಂಡಕ್ಷಾಲಿತಪಾಪಾಸ್ತೇ ತಪ್ತಕಾರ್ತಸ್ವರೋಪಮಾಃ ।
ಪಶ್ಚಾತ್ತ್ವಯೋಪದಿಷ್ಟಾಸ್ತೇ ಗಮಿಷ್ಯಂತಿ ಪರಂ ಪದಮ್ ॥ ೪೩ ॥
ಪುರ್ಯೋಽಪಿ ಸಪ್ತ ವಿಖ್ಯಾತಾಸ್ತೀರ್ಥಾನ್ಯನ್ಯಾನಿ ಯಾನಿ ಚ ।
ಮುಕ್ತಿಂ ದಾತುಂ ನ ತೇ ಶಕ್ತಾಸ್ತೀರ್ಥರಾಜಾಜ್ಞಯಾ ವಿನಾ ॥ ೪೪ ॥
ಜನ್ಮಜನ್ಮಾಂತರೇಭ್ಯಸ್ತಾಃ ಯೈರ್ವಾಸಪ್ರಮುಖಾಃ ಕ್ರಿಯಾಃ ।
ತೇಷಾಂ ಪ್ರಯಾಗೇ ಮರಣಂ ನಾನ್ಯೇಷಾಮಿತಿ ವೈ ಶ್ರುತಿಃ ॥ ೪೫ ॥
ವ್ಯರ್ಥತ್ವಾದತ್ರ ವಾಸಸ್ಯ ಗಮ್ಯತಾಂ ತತ್ರ ಧೂರ್ಜಟೇ ।
ಅತ್ರಾಪಿ ಭವತಃ ಸ್ಥಾನಂ ಭವಿಷ್ಯತಿ ಮಮ ಪ್ರಿಯಮ್ ॥ ೪೬ ॥
ಇತ್ಯುಕ್ತ್ವಾ ಮಾಧವೋ ದೇವಸ್ತತ್ರೈವಾಂತರಧೀಯತ ।
ಶೂಲಸ್ಯ ಟಂಕನಾದೇನ ಶಿವೋಽಪ್ಯಾನಂದಮನ್ವಗಾತ್ ॥ ೪೭ ॥
ತದಾದಿ ಋಷಯಸ್ತತ್ರ ಶೂಲಟಂಕೇಶ್ವರಾಭಿಧಮ್ ।
ಸ್ಥಾನಮಾಸ ಜಗದ್ವಂದ್ಯಂ ವದಿಷ್ಯೇ ತತ್ಸುವಿಸ್ತರಾತ್ ॥ ೪೮ ॥

॥ ಇತಿ ನವಮೋಽಧ್ಯಾಯಃ ॥

**ಶ್ರೀಮಾಧವದೇವರು ಹೇಳಿದರು—**

''ಈ ಪ್ರಯಾಗವು ನನ್ನದಾದ ಕ್ಷೇತ್ರವು; ಇದಕ್ಕಿಂತ ಶ್ರೇಷ್ಠವಾದ ಕ್ಷೇತ್ರವು ಬ್ರಹ್ಮಾಂಡದಲ್ಲಿಯೇ ಬೇರೊಂದು ಇಲ್ಲ. ಆದ್ದರಿಂದ ನನ್ನ ಸನ್ನಿಧಾನವಿರುವ ಈ ಕ್ಷೇತ್ರದಲ್ಲಿ ಪಾಪಕ್ಕೆ ದಂಡ ವಿಧಿಸುವ ಅಧಿಕಾರವು ಯಾರಿಗೂ ಇಲ್ಲ ॥ ೩೩ ॥ ಎಂತಹ ನರಾಧಮನೇ ಆಗಿರಲಿ ಇಲ್ಲಿ ವಾಸಿಸುವವನು ನಿಷ್ಪಾಪಿಯೇ ಸರಿ. ಕಾರಣ ಅವನು ಅನೇಕ ತೊಂದರೆಗಳಿಗೆ ಗುರಿಯಾಗಿ ಅವುಗಳನ್ನೆಲ್ಲಾ ಸಹಿಸಿಕೊಂಡು ಕೊನೆಗೆ ನನಗೆ ಶರಣುಹೊಗುವ ದೃಢ ಭಕ್ತಿಯಿಂದ ಇಲ್ಲಿಗೆ ಬಂದಿರುತ್ತಾನೆ ॥ ೩೪ ॥ ಈ ಕ್ಷೇತ್ರದಲ್ಲಿರುವವರು ಪರಮಾತ್ಮನ ವಿಶೇಷ ಜ್ಞಾನವನ್ನು ಪಡೆದಿರಬೇಕಾಗಿಲ್ಲ. ಅವರಿಗೆ ವಿಶೇಷ ಇಂದ್ರಿಯನಿಗ್ರಹವಿರಬೇಕಾಗಿಲ್ಲ. ಅವರು ಸಾಂಖ್ಯಕರ್ಮ ಮತ್ತು

ರಾಜ ಮುಂತಾದ ಯೋಗೋಪಾಯಗಳನ್ನು ಆಚರಿಸಬೇಕಾಗಿಲ್ಲ. ಪರಮಾತ್ಮನನ್ನು ಕುರಿತು ಧ್ಯಾನ ಮಾಡಬೇಕಾಗಿಲ್ಲ. ಯಾವ ಕಾಮ್ಯಕ ವ್ರತಗಳನ್ನೂ ಮಾಡಬೇಕಾಗಿಲ್ಲ. ಒಂದೆಡೆ ಕುಳಿತು ಚಿತ್ತೈಕಾಗ್ರತೆಯಿಂದ ಪರಮಾತ್ಮನನ್ನು ಧ್ಯಾನಿಸಬೇಕಾಗಿಲ್ಲ. ।।೩೫ ।। ಹಣ ವ್ಯಯ ಮಾಡಿ ದಾನ, ಅನ್ನ ಸಂತರ್ಪಣೆ ಮುಂತಾದವನ್ನು ಮಾಡಬೇಕಾಗಿಲ್ಲ; ಅಗ್ನಿಯಿಂದ ಮಾಡುವ ಯಜ್ಞಗಳನ್ನು ಆಚರಿಸಬೇಕಾಗಿಲ್ಲ. ಸಾಂಖ್ಯವನ್ನು (ಜ್ಞಾನಯೋಗ) ಅನುಸರಿಸಬೇಕಾಗಿಲ್ಲ. ದೇಹ ಶೋಷಣೆ ಮಾಡತಕ್ಕ ಯಾವ ಕಾರ್ಯವನ್ನೂ ಮಾಡಬೇಕಿಲ್ಲ. ಕೃಚ್ಛ್ರ, ಅತಿಕೃಚ್ಛ್ರ, ಪಾರಾಕ ತಪ್ತಕೃಚ್ಛ್ರಾದಿ ವ್ರತಗಳನ್ನು ಮಾಡಬೇಕಾಗಿಲ್ಲ. ನನ್ನಲ್ಲಿ ಮನಸ್ಸನ್ನಿಟ್ಟು ಇಲ್ಲಿ ವಾಸ ಮಾಡುವುದರಿಂದಲೇ ಅವನಿಗೆ ಮುಕ್ತಿಯು ದೊರಕುವುದು. (ಪ್ರಯಾಗಕ್ಷೇತ್ರದಲ್ಲಿ ವಾಸಮಾಡುವುದು ಅತಿಪುಣ್ಯಕರ ಎಂಬುವುದರಲ್ಲಿ ತಾತ್ಪರ್ಯವೇ ಹೊರತಾಗಿ ಇಂದ್ರಿಯಗಳ ನಿಗ್ರಹಾದಿಗಳು ಬೇಡವೆಂಬುದರಲ್ಲಿ ತಾತ್ಪರ್ಯವಲ್ಲ.) ।। ೩೬-೩೭ ।। ಯಾವುದೋ ಪೂರ್ವಜನ್ಮದ ಕರ್ಮಫಲದಿಂದ ಇಲ್ಲಿ ದೇಹತ್ಯಾಗ ಮಾಡಿದರೂ ಕೂಡ ಅಂಥಹವನು ಧನ್ಯನಷ್ಟೇ ಅಲ್ಲ, ನಿನಗೂ ನನಗೂ ಮಾನ್ಯನೇ ಆಗುವನು. ।। ೩೮ ।। ಆದ್ದರಿಂದ ಪಾಪಾಚರಣೆ ಮಾಡಿದವರಿಗೆ ಉಪದೇಶ ಮಾಡಬಾರದು. ಪಾಪ ಮಾಡಿದವಗೆ ಶಿಕ್ಷೆ ಕೊಡುವ ಸ್ವಭಾವವುಳ್ಳ ನಿನಗೂ ಈ ವಿಷಯವು ಅನ್ವಯಿಸುವುದು. ।। ೩೯ ।। ಇಲ್ಲಿಯೇ ಹತ್ತಿರದಲ್ಲಿ ಐದು ಕ್ರೋಶ ವಿಸ್ತಾರವಾದ ನನ್ನ ಸಂಬಂಧಿಯಾದ ಒಂದು ಕ್ಷೇತ್ರವಿದೆ. ಅದು ಬಹು ಪ್ರಸಿದ್ಧವಾದುದು. ಅದರ ಪೂರ್ವದಿಕ್ಕಿನ ಬಾಗಿಲು ಯಾವಾಗಲೂ ತೆಗೆದೇ ಇರುವುದು. ।। ೪೦ ।। ಇದು ಅಸೀ ಮತ್ತು ವರುಣ ಎಂಬ ನದಿಗಳ ಮಧ್ಯೆ ಇರತಕ್ಕದ್ದು. ಇದನ್ನೇ ''ಆನಂದವನ'' ಎಂದು ಕರೆಯುತ್ತಾರೆ. ನೀನು ಅಲ್ಲಿದ್ದುಕೊಂಡು ಪಾಪ ಮಾಡಿದವರನ್ನು ಶಿಕ್ಷಿಸು. ।। ೪೧ ।। ದೇಶ, ಕಾಲ ಮತ್ತು ಪಾಪದ ಅಗಾಧತೆ ಇವನ್ನು ಗಮನಿಸಿ ನೀನು ಅಲ್ಲಿದ್ದು ಅವರಿಗೆ ಶಿಕ್ಷೆ ಕೊಡು. ನಾನಾ ಉಪಾಯಗಳಿಂದ ಅವರನ್ನು ದಾರಿಗೆ ತಾ. ।। ೪೨ ।। ಬೆಂಕಿಯಲ್ಲಿ ಕಾಸಿದ ಬಂಗಾರದಂತೆ ಶಿಕ್ಷೆಗಳಿಂದ ತೊಳೆಯಲ್ಪಟ್ಟ ಪಾಪವುಳ್ಳ ಆ ಪಾಪಿಷ್ಠರಿಗೆ ನೀನು ನಂತರ ಉಪದೇಶವನ್ನು ಮಾಡು ; ಆಗ ಅವರು ಪರಮಪದವನ್ನು (ಮುಕ್ತಿಯನ್ನು) ಹೊಂದುವರು. ।। ೪೩ ।। ಮುಕ್ತಿದಾಯಕಗಳು ಎಂದು ಪುರಾಣಗಳಲ್ಲಿ ಉಕ್ತವಾಗಿರುವ ಏಳು ಕ್ಷೇತ್ರಗಳಾಗಲೀ, ಅನ್ಯಾನ್ಯ ಗಂಗಾದಿ ನದಿಗಳಾಗಲೀ ನೇರವಾಗಿ ಮುಕ್ತಿಯನ್ನು ಕೊಡಲಾರವು ; ತೀರ್ಥರಾಜನಾದ ಪ್ರಯಾಗಕ್ಷೇತ್ರದ ಆಜ್ಞಾದಿಂದ ಮಾತ್ರ ಅವುಗಳು ಮುಕ್ತಿಪ್ರದಗಳಾಗುವುವು ।। ೪೪ ।। ಜನ್ಮ ಜನ್ಮಾಂತರಗಳಲ್ಲಿ ಆಚರಿಸಿದ ವಾಸಾದಿ ಸತ್ಕಾರ್ಯಗಳ ಅಭ್ಯಾಸದ ಫಲವೇ ಪ್ರಯಾಗದಲ್ಲಿ ಆಗುವ ಮರಣವು. ಹೀಗೆಂದು ಶ್ರುತಿಗಳಲ್ಲಿ ಆಜ್ಞಾರೂಪವಾಗಿ ಹೇಳಲ್ಪಟ್ಟಿದೆ ।। ೪೫ ।। ಎಲೈ ಶಿವನೇ! ಈ ಆಲದ ಮರದ ಸನ್ನಿಧಾನದಲ್ಲಿ ನಿನ್ನ ವಾಸವು ನಿಷ್ಪ್ರಯೋಜನವಾಗುವುದರಿಂದ ಆನಂದವನಕ್ಕೆ ಹೋಗು. ಇಲ್ಲೂ ಸಹ ನನಗೆ ಪ್ರಿಯವಾದ ನಿನ್ನ ಸ್ಥಾನವು ಇರುತ್ತದೆ. ।। ೪೬ ।। ಈ ರೀತಿಯಾಗಿ ಶ್ರೀಮಾಧವದೇವರು ಹೇಳಿ ಅಂತರ್ಧಾನರಾದರು. ಆ ಸಮಯದಲ್ಲಿಯೇ ಶಿವನ ತ್ರಿಶೂಲದ ದೆಶೆಯಿಂದ ''ಟಂಕ'' ನಾದವು ಹೊರಟಿತು; ಇದರಿಂದ ಶಿವನಿಗೆ ಅತ್ಯಂತ ಹರ್ಷವು ಉಂಟಾಯಿತು ।। ೪೭ ।। ತದನಂತರ, ಎಲ್ಲ ಋಷಿಗಳು ಅಲ್ಲಿ ವಾಸಮಾಡಿದರು. ಆ ಕ್ಷೇತ್ರವು ಶೂಲಟಂಕೇಶ್ವರ ಎಂಬುದಾಗಿ ಜಗದ್ವಂದ್ಯವಾದ ಕ್ಷೇತ್ರವಾಯಿತು. ಹೀಗೆ ಸೂತರು ಹೇಳಿ ಈ ಶೂಲಟಂಕೇಶ್ವರ ಸ್ಥಾನದ ಬಗ್ಗೆ ಮುಂದೆ ಹೆಚ್ಚು ಹೇಳುವೆನು ಎಂದು ಅಪ್ಪಣೆ ಕೊಡಿಸಿದರು ।೪೮।।

।। ಒಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ।।

## ॥ ಅಥ ದಶಮೋಽಧ್ಯಾಯಃ ॥ ೧೦ ॥

ಶ್ರೀಸೂತ ಉವಾಚ—

ಪುನಃ ಶೃಣ್ವಂತು ವಿಪ್ರೇಂದ್ರಾಃ ಗುರುಶ್ರೇಷ್ಠೋದಿತಂ ವಚಃ ।
ಹರ್ಷದಂ ಶೃಣ್ವತಾಂ ನೃಣಾಂ ಪಥ್ಯಮಜ್ಞಾನನಾಶನಮ್ ॥ ೧ ॥
ದಿಕ್ಪಾಲಾ ಅಪಿ ಶಕ್ರಾದ್ಯಾಃ ಪ್ರಯಾಗಸ್ಯೋಪಮಂಡಲೇ ।
ಸ್ವಂ ಸ್ವಂ ಭಾಗಮವಷ್ಟಭ್ಯ ಚಕ್ರುರ್ಮಾಧವತೋಷಣಮ್ ॥ ೨ ॥
ಇಂದ್ರೋ ಮಾಧವಪೂಜಾರ್ಥಮುದ್ಯಾನಂ ನಂದನಾತಿಗಮ್ ।
ಚಕಾರ ಫಲಪುಷ್ಪಾಢ್ಯಂ ನಾನಾವೃಕ್ಷಲತಾಕುಲಮ್ ॥ ೩ ॥
ಮಂದಾರಪಾರಿಜಾತಾಮ್ರಕೋವಿದಾರಾಸನಾರ್ಜುನೈಃ ।
ಕದಂಬನಾಗಪುನ್ನಾಗಚಂಪಕಾಶೋಕಪಾಟಲೈಃ ॥ ೪ ॥
ಪ್ರಿಯಾಲಜಂಬುಖರ್ಜೂರಪೂಗೈಃ ಕುರವಕೈರಪಿ ।
ಬೀಜಪೂರೈಶ್ಚ ವಕುಲೈಸ್ತಿಲಕೈರುಪಶೋಭಿತಮ್ ॥ ೫ ॥
ಮಲ್ಲಿಕಾಮಾಧವೀಕುಂದಮಾಲತೀಬಾಣಜಾತಿಭಿಃ ।
ಕುಮುದಸ್ಥಲಕಲ್ಹಾರಶತಪತ್ರವನರ್ದ್ಧಿಭಿಃ ॥ ೬ ॥
ನಿರ್ಮಲೋದಸರೋವಾಪೀವಿಹಾರಸ್ಥಾನಭೂಷಣೈಃ ।
ಸರ್ವರ್ತುಫಲಪುಷಾದ್ಯೈಃ ಸರ್ವತಃ ಸಮಲಂಕೃತಮ್ ॥ ೭ ॥
ಮಯೂರಪಿಕಸನ್ನಾದಿ ಮಂದಾನಿಲವಿಮೂರ್ಚ್ಛಿತಮ್ ।
ಮತ್ತದ್ವಿಜಗಣೈರ್ಘುಷ್ಟಂ ಮತ್ತಭ್ರಮರಸೇವಿತಮ್ ॥ ೮ ॥
ವನರಾಜಿಶ್ರಿಯಾ ಯುಕ್ತಂ ಪಥಿಕಜ್ವರನಾಶನಮ್ ।
ಸುಸ್ನಿಗ್ಧಶೀತಲಚ್ಛಾಯಂ ದರ್ಶನಾಹ್ಲಾದಕಾರಕಮ್ ॥ ೯ ॥
ತತಸ್ತದುದ್ಭವೈರಿಂದ್ರಃ ಕುಸುಮೈಃ ಸ್ವಯಮಾಹೃತೈಃ ।
ಮಲ್ಲಿಕಾಮಾಲತೀಜಾತೀಮಂದಾರಶತಪತ್ರಕೈಃ ॥ ೧೦ ॥
ಯೂಥಿಕಾಕುಂದಕಲ್ಹಾರಕರವೀರಸಿತಾಸಿತೈಃ ।
ಹೇಮಪುಷ್ಪಕಪುನ್ನಾಗೈರ್ವಕುಲೈಃ ಪಾಟಲೈಸ್ತಥಾ ॥ ೧೧ ॥
ಸೇವಂತೀಪಾರಿಜಾತಾದ್ಯೈಃ ಸಹಸ್ರದಲನೀಪಕೈಃ ।
ಇಂದೀವರೈಃ ಪುಂಡರೀಕೈಸ್ತಥಾ ಕೋಕನದಾದಿಭಿಃ ॥ ೧೨ ॥
ಕುಮುದೈಃ ಕರ್ಣಿಕಾರೈಶ್ಚ ಶೋಭಿತೈರಿಷ್ಟಗಂಧಿಭಿಃ ।
ತ್ರಿಶಿಖೈರ್ಬಿಲ್ವಪತ್ರೈಶ್ಚ ಕೋಮಲೈಸ್ತುಲಸೀದಲೈಃ ॥ ೧೩ ॥
ಅನೇಕಮಂಜರೀಭಿಶ್ಚ ತಥಾ ದಮನಪತ್ರಕೈಃ ।
ಪ್ರತ್ಯೇಕಂ ಲಕ್ಷಸಂಖ್ಯಾಕೈಃ ಪೂಜಯಾಮಾಸ ಮಾಧವಮ್ ॥ ೧೪ ॥

ಏವಂ ಪೂಜನಸಕ್ತಾಂತಃಕರಣೇ ಸುರನಾಯಕೇ ।
ಕದಾಚಿನ್ಮಾಧವೋ ದೇವೋ ಪ್ರತ್ಯಕ್ಷಃ ಸಮಜಾಯತ ॥ ೧೫ ॥
ಅತಸೀಪುಷ್ಪಸಂಕಾಶಃ ಪದ್ಮಪತ್ರನಿಭೇಕ್ಷಣಃ ।
ಚತುರ್ಬಾಹುಃ ಪ್ರಸನ್ನಾಸ್ಯಃ ಶಂಖಚಕ್ರಗದಾಬ್ಜಧೃಕ್ ॥ ೧೬ ॥
ಪೀತಾಂಬರಧರಃ ಪೀತಚಂದನಾಲಿಪ್ತಕಂಧರಃ ।
ವನಮಾಲಾನಿವೀತಾಂಗೋ ವಾಮಪಾದಧೃತಾವನಿಃ ॥ ೧೭ ॥
ಕಂದರ್ಪದರ್ಪದಲನೋಲ್ಲಸತ್ಕುಂಡಲಭೂಷಣಃ ।
ಶ್ರೀವತ್ಸಕೌಸ್ತುಭಧರೋ ವಿಭ್ರಾಜನ್ಮುಕುಟೋಜ್ಜ್ವಲಃ ॥ ೧೮ ॥
ದೀರ್ಘಬಾಹುರುದಾರಾಂಗಃ ಸುರಾರ್ಚಿತಪದಾಂಬುಜಃ ।
ಹಾರಕೇಯೂರಸದ್ರತ್ನಮುದ್ರಿಕಾಕಂಕಣಾನ್ವಿತಃ ॥ ೧೯ ॥
ಸರ್ವಾಂಗಸುಂದರತರೋ ಲಲಿತಾಕ್ಷರಭಾಷಣಃ ।
ಸುಪರ್ಣಸ್ಕಂಧದತ್ತಾಂಗಃ ಪರಮಾನಂದಚಿದ್ಘನಃ ॥ ೨೦ ॥
ದೃಗಪಾಂಗಾವಲೋಕೇನ ಪೂರಯನ್ ಭಕ್ತಮಾನಸಮ್ ।
ದೃಷ್ಟೋ ಮಘವತಾ ತೇನ ಮಾಧವಃ ಕ್ಷೇತ್ರನಾಯಕೇ ॥ ೨೧ ॥
ದೃಷ್ಟ್ವಾ ನಿರುಪಮಂ ರೂಪಂ ಭಕ್ತಾನಾಂ ವರದಂ ಪರಮ್ ।
ಅಸ್ತಾವೀಜ್ಜಯಶಬ್ದೇನ ಬಿಡೌಜಾಃ ಪ್ರಯತಾಂಜಲಿಃ ॥ ೨೨ ॥

**॥ ಹತ್ತನೆಯ ಅಧ್ಯಾಯವು ॥**

**ಶ್ರೀಸೂತರು ಹೇಳಿದರು—**

ಹೇ ಶೌನಕಾದಿಗಳೇ ! ಗುರುಗಳಾದ ಶ್ರೀಶೇಷದೇವರ ಉಪದೇಶವನ್ನು ಸಂತೋಷ-ದಿಂದ ಕೇಳಿರಿ. ಇದು ಕೇಳುವವರಿಗೆ ಸಂತೋಷವನ್ನು ಕೊಡತಕ್ಕದ್ದು. ಮನುಷ್ಯರ ಅಜ್ಞಾನವನ್ನು ನಾಶ ಮಾಡತಕ್ಕದ್ದು ಮತ್ತು ಸಂಸಾರಾಖ್ಯ ರೋಗಕ್ಕೆ ಪಥ್ಯವು. ॥ ೧ ॥ ಇಂದ್ರನೇ ಮೊದಲಾದ ದಿಕ್ಪಾಲಕರೆಲ್ಲರೂ ಪ್ರಯಾಗಕ್ಷೇತ್ರದಲ್ಲಿ ತಮ್ಮ ತಮ್ಮ ವಸತಿಗಳನ್ನು ಮಾಡಿಕೊಂಡು ಶ್ರೀಮಾಧವ-ದೇವರನ್ನು ಸೇವಾದಿಗಳಿಂದ ಸಂತೋಷಪಡಿಸಿದರು. ॥ ೨ ॥ ಇಂದ್ರನಾದರೋ ಮಾಧವನ ಪೂಜೆಗಾಗಿ ದೇವಲೋಕದ ನಂದನವನವನ್ನು ಮೀರಿಸುವ ನಾನಾವಿಧ ಹೂವುಹಣ್ಣುಗಳಿಂದ ಕಂಗೊಳಿಸುವ ಗಿಡ ಮರ ಮತ್ತು ಲತೆಗಳನ್ನು ಹೊಂದಿರುವ ಉದ್ಯಾನವನವನ್ನು ನಿರ್ಮಿಸಿದನು. ॥ ೩ ॥ ಈ ಉದ್ಯಾನವು ಮಂದಾರ, ಪಾರಿಜಾತ, ಮಾವು, ಕೆಂಗಾಚಾಳ(ಕೋವಿದಾರ), ಅಸನ, ಅರ್ಜುನ, ಕದಂಬ, ನಾಗಪುನ್ನಾಗ, ಸಂಪಿಗೆ, ಅಶೋಕ, ಪಾಟಲ, ಮೊರಟೆ(ಪ್ರಿಯಾಲು), ನೇರಳೆ, ಖರ್ಜೂರ, ಅಡಿಕೆ, ಗೋಡಂಬಿ(ಕುರವಕ), ಚೇಪೆ ಹಣ್ಣು (ಬೀಜಪೂರ), ಬಕುಲ, ತಿಲಕ ಇವೇ ಮೊದಲಾದ ಹೂವು ಹಣ್ಣುಗಳ ಮರ ಗಿಡ ಬಳ್ಳಿಗಳಿಂದ ಶೋಭಾಯಮಾನವಾಗಿತ್ತು. ॥ ೪-೫ ॥ ಮಲ್ಲಿಗೆ, ಮಾಲತೀ, ಕುಂದ, ಮಾಧವೀ, ಬಾಣ, ಜಾಜಿ, ಸ್ಥಳೀಯ ಕಮಲ(ಕಲ್ಹಾರ), ಕನ್ನೈದಿಲೆ (ಕುಮುದ), ನೂರಾರು ದಳಗಳುಳ್ಳ ಕಮಲಪುಷ್ಪ ಇವುಗಳಿಂದ ಕೂಡಿತ್ತು. ॥ ೬ ॥

ನಿರ್ಮಲವಾದ ಸರೋವರಗಳು ಮತ್ತು ವಿಹಾರ ಸ್ಥಳಗಳಿಂದ ಭೂಷಿತವಾಗಿತ್ತು. ಇಲ್ಲಿರುವ ಮರ, ಗಿಡ ಮತ್ತು ಬಳ್ಳಿಗಳು ಎಲ್ಲ ಋತುಗಳಲ್ಲಿಯೂ ಹಣ್ಣು ಹೂವುಗಳಿಂದ ರಾರಾಜಿಸುತ್ತಿದ್ದವು ಮತ್ತು ಯಾವಾಗಲೂ ಅಲಂಕೃತವಾಗಿ ಸಜ್ಜಾಗಿದ್ದವು. ॥ ೭ ॥ ನವಿಲು, ಕೋಗಿಲೆ ಇವುಗಳ ಷಡ್ಜ ಪಂಚಮ ಸ್ವರದ ಕೂಗುಗಳಿಂದಲೂ, ಮಂದವಾಗಿ ಹಿತವಾಗಿ ಬೀಸುತ್ತಿರುವ ಗಾಳಿಯಿಂದಲೂ ಎಲ್ಲರಿಗೂ ಮೋಹವನ್ನುಂಟುಮಾಡುವಂತಿತ್ತು. ಮದಿಸಿ ಚಿಲಿಪಿಲಿಗುಟ್ಟುತ್ತಿರುವ ಹಕ್ಕಿಗಳಿಂದಲೂ, ಗುಂಜಾರವವನ್ನು ಮಾಡುತ್ತಿರುವ ಮತ್ತವಾದ ಭ್ರಮರಗಳಿಂದಲೂ ಶೋಭಿತವಾಗಿತ್ತು. ॥ ೮ ॥ ವನಸಂಪತ್ತಿನಿಂದ ಕೂಡಿದ್ದ ಈ ವನವು ಅಲ್ಲಿ ಸಂಚರಿಸುವವರ ಆಯಾಸವನ್ನು ಕಳೆಯುತ್ತಿತ್ತು. ದಟ್ಟವಾದ ಮತ್ತು ಶೀತಲವಾದ ಮರಗಳ ನೆರಳಿನಿಂದ ಆ ಪ್ರದೇಶವು ನೋಡುವವರಿಗೆ ಅತ್ಯಂತ ಆಹ್ಲಾದಮಯವಾಗಿದ್ದಿತು. ॥ ೯ ॥ ದೇವೇಂದ್ರನು ತಾನೇ ಕಿತ್ತು ತಂದ ಮಲ್ಲಿಗೆ, ಮಾಲತಿ, ಜಾಜಿ ಕಾಡುಮಲ್ಲಿಗೆ(ಶತಪತ್ರ), ದೊಡ್ಡ ಗೋರಂಟು ಮರ(ಯೂಥಿಕಾ) ಕುಂದ, ಕಲ್ಹಾರ, ಕರವೀರ, ಕುಮುದಪುಷ್ಪ(ಉತ್ಪಲ), ಕಮಲಪುಷ್ಪ, ಹಳದಿ, ಪುನ್ನಾಗ, ಬಕುಳ, ಪಾಟಲ, ಸ್ಯಾವಂತಿಗೆ, ಪಾರಿಜಾತ, ನೀಪಕ(ಸಾವಿರದಳದ ಹೂ ಬಿಡುವ ಕೆಂಪು ದಾಸವಾಳ), ತಾವರೆ, ಪುಂಡರೀಕ, ಕೆಂದಾವರೆ(ಕೋಕನದ) ಕರ್ಣಿಕಾರ, ಇವೇ ಮೊದಲಾದ ಹಿತವಾದ ಸುಗಂಧದಿಂದ ಯುಕ್ತವಾದ ಪ್ರತಿಯೊಂದು ಪುಷ್ಪಗಳಿಂದಲೂ ಲಕ್ಷ ಲಕ್ಷ ಸಂಖ್ಯೆಯಲ್ಲಿ ಶ್ರೀಮಾಧವದೇವರನ್ನು ಪೂಜೆ ಮಾಡಿದನು. ಇದಲ್ಲದೆ ಮೂರು ದಳಗಳುಳ್ಳ ತ್ರಿಶಿರವೆಂಬ ಪತ್ರೆಯನ್ನು, ಬಿಲ್ವ ಪತ್ರವನ್ನು, ಕೋಮಲವಾದ ತುಳಸೀದಳಗಳನ್ನು ಮತ್ತು ಅನೇಕ ವಿಧವಾದ ಮರುಗ, ಪಚ್ಚೆತೆನೆಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಲಕ್ಷಸಂಖ್ಯೆಯಲ್ಲಿ ಪೂಜಿಸಿದನು. ॥ ೧೦-೧೪ ॥ ಈ ರೀತಿಯಾಗಿ ಪೂಜಾಗಳಲ್ಲಿಯೇ ಇಂದ್ರನು ಆಸಕ್ತವಾದ ಮನಸ್ಸುಳ್ಳವನಾಗಿ ಇರಲು, ಒಂದು ದಿನ ಶ್ರೀಮಾಧವದೇವರು ಅವನಿಗೆ ಪ್ರತ್ಯಕ್ಷರಾದರು. ಆ ಇಂದ್ರನಿಗೆ ಗೋಚರವಾದ ಮಾಧವ ದೇವರ ರೂಪವು ಈ ರೀತಿಯಾಗಿತ್ತು. ॥ ೧೫ ॥

ಶ್ರೀಮಾಧವದೇವರ ಮೈಕಾಂತಿಯು ಅಗಸೆಯ ಹೂವಿನಂತೆ ಬಂಗಾರದ ಬಣ್ಣವಿತ್ತು. ಕಮಲದ ಹೂವಿನ ದಳದಂತೆ ಅವನ ಕಣ್ಣುಗಳು ವಿಶಾಲವಾಗಿಯೂ ಆಕರ್ಷಣೀಯವಾಗಿಯೂ ಇದ್ದುವು. ಅವನು ನಾಲ್ಕು ಬಾಹುಗಳುಳ್ಳವನಾಗಿದ್ದನು. ಮಂದಹಾಸವನ್ನು ಬೀರುತ್ತಿದ್ದ ಮುಖಕಮಲವುಳ್ಳವನಾಗಿದ್ದನು. ಶಂಖ, ಚಕ್ರ, ಗದೆ ಮತ್ತು ಪದ್ಮ ಇವುಗಳನ್ನು ಧರಿಸಿದ್ದನು. ॥ ೧೬ ॥ ಪೀತಾಂಬರಧಾರಿಯಾಗಿದ್ದನು. ಹಳದೀ ಶ್ರೀಗಂಧವನ್ನು ಲೇಪನ ಮಾಡಿದ ಹೆಗಲುಗಳೂ ಮತ್ತು ವಕ್ಷಃಸ್ಥಳವೂ ಉಳ್ಳವನಾಗಿದ್ದನು. ವನಮಾಲೆಯನ್ನು ಧರಿಸಿದ್ದನು. ಎಡಗಾಲಿನಿಂದ ಭೂಸ್ಪರ್ಶ ಮಾಡಿ ಭೂಮಿಯನ್ನು ಧಾರಣೆ ಮಾಡಿದಂತೆ ತೋರುತ್ತಿದ್ದನು. ಮನ್ಮಥನ ಸೌಂದರ್ಯಾತಿಶಯದ ದರ್ಪವನ್ನೂ ಧಿಕ್ಕಾರ ಮಾಡುವ ಹೊಳೆಯುವ ಕರ್ಣಕುಂಡಲಗಳನ್ನು ಧರಿಸಿದ್ದನು. ಶ್ರೀವತ್ಸ ಚಿಹ್ನೆಯನ್ನು ವಕ್ಷಸ್ಥಳದಲ್ಲೂ, ಕುತ್ತಿಗೆಯಲ್ಲಿ ಕೌಸ್ತುಭಾಭರಣವನ್ನು ಧರಿಸಿ ಪ್ರಕಾಶಮಾನವಾದ ರತ್ನಖಚಿತ ಕಿರೀಟದಿಂದ ಉಜ್ಜ್ವಲವಾಗಿ ಕಾಣುತ್ತಿದ್ದನು. ಇವನ ಬಾಹುಗಳು ನೀಳವಾಗಿದ್ದುವು. ಅಂಗಾಂಗಳೆಲ್ಲವೂ ಸಲ್ಲಕ್ಷಣಗಳಿಂದ ಕೂಡಿ ಉತ್ಕೃಷ್ಟವಾಗಿದ್ದುವು. ಇವನ ಪಾದಕಮಲಗಳನ್ನು ದೇವಾಧಿದೇವತೆಗಳು ಪೂಜಿಸುತ್ತಿದ್ದರು. ನಾನಾವಿಧಗಳ ನವರತ್ನಖಚಿತ ಹಾರಗಳನ್ನು ಪಾದಗಳವರೆಗೂ ಧಾರಣೆ ಮಾಡಿದ್ದು ತೋಳ ಬಂಧ, ಒಳ್ಳೆಯ ರತ್ನದಿಂದ ಕೆತ್ತಿದ ಮುದ್ರೆಯುಂಗುರ, ಬಳೆಗಳು ಮತ್ತು ಬಾಹುಪುರಿಗಳು ಇವುಗಳನ್ನು ಧರಿಸಿದ್ದು ಸರ್ವಾಂಗಸುಂದರನಾಗಿದ್ದನು.

ಆಡುತ್ತಿರುವ ಮಾತು ಅತ್ಯಂತ ಮೃದು, ಮಧುರ ಮತ್ತು ಗಂಭೀರವು. ಗರುಡ ದೇವರ ಹೆಗಲಿನಲ್ಲಿ ಕುಳಿತಿದ್ದನು. ಇವನು ಸಚ್ಚಿದಾನಂದಗಳ ಸಾರತಮ. ಕಟಾಕ್ಷ ಮಾತ್ರದಿಂದ ಭಕ್ತರ ಅಭೀಷ್ಟಗಳನ್ನು ಪೂರೈಸತಕ್ಕವನು. ಇಂತಹ ಮಾಧವದೇವರನ್ನು ಪ್ರಯಾಗವೆಂಬ ಕ್ಷೇತ್ರದಲ್ಲಿ ಇಂದ್ರನು ದರ್ಶನ ಮಾಡಿದನು. ॥ ೧೭-೨೧ ॥ ಸರ್ವೋತ್ತಮವಾದ, ಅಸದೃಶವಾದ ಮತ್ತು ಭಕ್ತರಿಗೆ ಬೇಕಾದ ವರಗಳನ್ನು ಕರುಣಿಸುವ ಈ ಮಾಧವನ ರೂಪವನ್ನು ನೋಡಿದ ಕೂಡಲೇ ಇಂದ್ರ-ದೇವರು "ಜಯ! ಜಯ !" ಶಬ್ದೋಚ್ಚಾರಣೆ ಮಾಡುತ್ತಾ ಕೈಮುಗಿದು ಸ್ತೋತ್ರ ಮಾಡಲು ಉಪಕ್ರಮಿಸಿದರು. ॥೨೨॥

ಇಂದ್ರ, ಉವಾಚ—

ಜಯ ಶ್ಯಾಮಲ ಸರ್ವಾಂಗ ಜಯ ಲಾವಣ್ಯಸಾಗರ ।
ಜಯ ಸರ್ವಗುಣೋದಾರ ಜಯ ಮಾಧವ ಮಾಧವ ॥ ೨೩ ॥
ಜಯ ಕಂದರ್ಪದರ್ಪಘ್ನ ಜಯ ಲಕ್ಷ್ಮೀಶಭೂಷಣ ।
ಜಯ ಪ್ರಣತಭೂಪಾಲ ಜಯ ಮಾಧವ ಮಾಧವ ॥ ೨೪ ॥
ಜಯ ಗೋವಿಂದ ಗೋಪಾಲ ಜಯ ದುಷ್ಟನಿಬರ್ಹಣ ।
ಜಯ ಭೂತೇಶ ದೇವೇಶ ಜಯ ಮಾಧವ ಮಾಧವ ॥ ೨೫ ॥
ಜಯ ಕೃಷ್ಣ ಮಹಾವಿಷ್ಣೋ ಜಯ ನಾರಾಯಣಾಚ್ಯುತ ।
ಜಯಾನಂತ ಹೃಷೀಕೇಶ ಜಯ ಮಾಧವ ಮಾಧವ ॥ ೨೬ ॥
ಜಯ ಯಜ್ಞಪತೇ ದೇವ ಜಯ ವೈಕುಂಠ ವಾಮನ ।
ಜಯ ಭಕ್ತ ಮಹೋದಾರ ಜಯ ಮಾಧವ ಮಾಧವ ॥ ೨೭ ॥
ಜಯ ಸರ್ವೇಶ್ವರಾನಂದ ಜಯ ಲೋಕಗುರೋ ಹರೇ ।
ಜಯ ಶಂಖಗದಾಪಾಣೇ ಜಯ ಮಾಧವ ಮಾಧವ ॥ ೨೮ ॥
ಜಯ ಯೋಗೇಶ ಯಜ್ಞೇಶ ಜಯ ಯೋಗವಿಭೂಷಣ ।
ಜಯ ಯೋಗಿಮನೋವಾಸ ಜಯ ಮಾಧವ ಮಾಧವ ॥ ೨೯ ॥
ಜಯ ಸರ್ವಸುರಾಧ್ಯಕ್ಷ ಜಯ ಸರ್ವಸುರಾರ್ಚಿತ ।
ಜಯ ಸರ್ವಗುಣಾತೀತ ಜಯ ಮಾಧವ ಮಾಧವ ॥ ೩೦ ॥
ಜಯ ನಿತ್ಯ ನಿರಾಧಾರ ಜಯ ವಿಶ್ವಂಭರಾವ್ಯಯ ।
ಜಯ ಕೋಟ್ಯರ್ಕಸಂಕಾಶ ಜಯ ಮಾಧವ ಮಾಧವ ॥ ೩೧ ॥
ಜಯ ನಾಥ ಕೃಪಾಸಿಂಧೋ ಜಯ ಭಕ್ತಾರ್ತಿಭಂಜನ ।
ಜಯ ಸಂಸಾರಸಾರಾಂಶ ಜಯ ಮಾಧವ ಮಾಧವ ॥ ೩೨ ॥
ಜಯ ಸರ್ವಜ್ಞ ಸರ್ವಾತ್ಮನ್ ಜಯ ಶಂಕರ ಶಾಶ್ವತ ।
ಜಯ ಮಾಯಾಪತೇ ಮಾಯಿನ್ ಜಯ ಮಾಧವ ಮಾಧವ ॥ ೩೩ ॥

**ಜಯ ಭೂತಪತೇ ನಾಥ ಜಯ ಭೂತವಿಭಾವನ ।**
**ಜಯ ಭೂತೇಶ ಭೂತಾದೇ ಜಯ ಮಾಧವ ಮಾಧವ ॥ ೩೪ ॥**
**ಸಂಸಾರವನದಾವಾಗ್ನೇ ಜನ್ಮಮೃತ್ಯುಜರಾಪಹ ।**
**ಸಮಸ್ತಭುವನಾಧಾರ ಜಯ ಮಾಧವ ಮಾಧವ ॥ ೩೫ ॥**
**ಅಂತರ್ಬಹಿಶ್ಚ ಸರ್ವತ್ರ ಜಯ ಮಾಧವ ಮಾಧವ ।**
**ನಿರ್ವಿಕಾರ ನಿರಾಕಾರ ಜಯ ಮಾಧವ ಮಾಧವ ॥ ೩೬ ॥**
**ಸಪ್ತಪಾತಾಲವಿವರೇ ಜಯ ಮಾಧವ ಮಾಧವ ।**
**ಆದ್ಯಂತಮಧ್ಯರಹಿತ ಜಯ ಮಾಧವ ಮಾಧವ ॥ ೩೭ ॥**
**ಮಾಧವಂ ಪರಯಾ ಭಕ್ತ್ಯಾ ಸ್ತುತ್ವೇತ್ಥಂ ಪಾಕಶಾಸನಃ ।**
**ಸಕಂಟಕಾಶ್ರುಭಿರ್ವ್ಯಾಪ್ತಃ ಪಪಾತ ಪಾದಪದ್ಮಯೋಃ ॥ ೩೮ ॥**
**ಪಾದಾನತಮಥೋ ಶಕ್ರಮುತ್ಥಾಪ್ಯಾಲಿಂಗ್ಯ ಸಾದರಮ್ ।**
**ಉವಾಚ ಮಧುರಾಂ ವಾಚಂ ಮಾಧವೋ ಭಕ್ತಭಾವನಃ ॥ ೩೯ ॥**

**ಇಂದ್ರದೇವರು ಹೇಳಿದರು—**

ಹೇ ಮಾಧವ ! ನೀನು ನೀಲವರ್ಣವಿಶಿಷ್ಟವಾದ ಸರ್ವಾಂಗವುಳ್ಳವನು, ಲಾವಣ್ಯಕ್ಕೆ ಕೊನೆಯಿಲ್ಲದ ಸಾಗರದಂತಿರುವವನು, ಉತ್ಕೃಷ್ಟವಾದ ಸಮಸ್ತಗುಣಗಳಿಂದ ಪೂರ್ಣನು, ಹೇ ಲಕ್ಷ್ಮೀಪತಿ, ಹೇ ರಮಾಪತಿ, ನಿನಗೆ ಜಯವಾಗಲಿ. ॥ ೨೩ ॥ ಮನ್ಮಥನ ಸೌಂದರ್ಯವನ್ನು ಧಿಕ್ಕರಿಸುವ ಸೌಂದರ್ಯಶಾಲಿಯೇ, ಲಕ್ಷ್ಮೀಪತಿಯೇ ಮತ್ತು ಲಕ್ಷ್ಮೀದೇವಿಗೆ ಭೂಷಣಪ್ರಾಯನಾದವನೇ, ನಿನಗೆ ಜಯವಾಗಲಿ. ರಾಜಾಧಿರಾಜರುಗಳಿಂದ ನಮಸ್ಕೃತನಾದವನೇ, ಮಾಧವನೇ, ನಿನಗೆ ಜಯವಾಗಲಿ. ॥ ೨೪ ॥ ಹೇ ಗೋವಿಂದ, ಹೇ ಗೋಪಾಲ, ದುಷ್ಟರನ್ನು ನಾಶಮಾಡಿದವನೇ, ಭೂತಗಳಿಗೆ ಸ್ವಾಮಿಯೇ, ದೇವತೆಗಳಿಗೆ ಸ್ವಾಮಿಯೇ, ಮಾಧವನೇ, ನಿನಗೆ ಜಯವಾಗಲಿ (ವೇದಪ್ರತಿಪಾದ್ಯನಾದ್ದರಿಂದ—ಗೋವಿಂದ, ವೇದವಾಕ್ಯಗಳನ್ನು ಹಯಗ್ರೀವ ಮತ್ಸ್ಯ ವೇದವ್ಯಾಸಾದಿರೂಪಗಳಿಂದ ಅಥವಾ ಆಕಳುಗಳನ್ನು ಕೃಷ್ಣಾವತಾರದಲ್ಲಿ ಕಾಪಾಡಿದವನಾದ್ದರಿಂದ—ಗೋಪಾಲ). ॥ ೨೫ ॥ ಹೇ ಕೃಷ್ಣ ಮಹಾವಿಷ್ಣೋ, ನಾರಾಯಣ, ಅಚ್ಯುತ, ಅನಂತ, ಹೃಷೀಕೇಶ, ಹೇ ಮಾಧವ ನಿನಗೆ ಜಯವಾಗಲಿ. (ಪ್ರಳಯಕಾಲದಲ್ಲಿ ಜಗತ್ತನ್ನೆಲ್ಲಾ ಆಕರ್ಷಿಸಿ ತನ್ನ ಹೊಟ್ಟೆಯಲ್ಲಿಟ್ಟುಕೊಂಡದ್ದರಿಂದ—ಕೃಷ್ಣ, ಎಲ್ಲ ಕಾಲದಲ್ಲಿಯೂ ಎಲ್ಲ ದೇಶಗಳಲ್ಲೂ ತ್ರೈಕಾಲಿಕ ವ್ಯಾಪ್ತಿಯುಳ್ಳವನಾಗಿದ್ದರಿಂದ—ವಿಷ್ಣು, ಪ್ರಳಯ ಕಾಲದಲ್ಲಿ ನೀರಿನಲ್ಲಿ ಆಶ್ರಯವುಳ್ಳವನೂ ಮುಕ್ತರಿಗೂ ಅಂತರ್ಯಾಮಿಯಾಗಿ ನಿಯಾಮಕನಾಗಿ ಇರುವುದರಿಂದ—ನಾರಾಯಣ, ತ್ರೈಕಾಲಿಕನಾಶವಿಲ್ಲದವನಾಗಿರುವುದರಿಂದ—ಅಚ್ಯುತ, ಮರಣವಿಲ್ಲದ್ದರಿಂದ—ಅನಂತ, ಇಂದ್ರಿಯಗಳಿಗೆ ಮುಖ್ಯ ನಿಯಾಮಕನಾದುದರಿಂದ—ಹೃಷೀಕೇಶ) ॥ ೨೬ ॥ ಯಜ್ಞಾಧಿಪತಿಯೇ, ದೇವಾಧಿದೇವನೇ, ಹೇ ವೈಕುಂಠನೇ, ಹೇ ವಾಮನನೇ, ಭಕ್ತರುಗಳ ವಿಷಯದಲ್ಲಿ ಉದಾರಿಯೇ, ಹೇ ಮಾಧವ, ನಿನಗೆ ಜಯವಾಗಲಿ. (ಎಲ್ಲ ಬಗೆಯ ಯಜ್ಞಗಳಿಗೆ ಮುಖ್ಯ ಭೋಕ್ತೃವಾಗಿದ್ದರಿಂದ—ಯಜ್ಞಪತಿ, ವೈಕುಂಠಾಧಿಪತಿಯಾಗಿ ಇರುವುರಿಂದ ಅಥವಾ

ವಿಕುಂಠಾದೇವಿಯ ಮಗನಾದ್ದರಿಂದ—ವೈಕುಂಠ, ಅತ್ಯಂತ ಸುಂದರವಾದ ಅವತಾರರೂಪ ಉಳ್ಳವನಾದುದರಿಂದ—ವಾಮನ)॥೨೭॥ ರಮಾಬ್ರಹ್ಮಾದಿ ಸರ್ವರಿಗೂ ಸ್ವಾಮಿಯೇ, (ಆನಂದಸ್ವರೂಪನು ಆದ್ದರಿಂದ) ಆನಂದನೇ, ಲೋಕಗುರುವೇ, ಶ್ರೀ ಹರಿಯೇ, ನಿನಗೆ ಜಯವಾಗಲಿ. ಶಂಖ ಮತ್ತು ಗದೆ ಇವುಗಳನ್ನು ಧಾರಣೆ ಮಾಡಿರುವ ಲಕ್ಷ್ಮೀಪತಿಯೇ ನಿನಗೆ ಜಯವಾಗಲಿ. ॥ ೨೮ ॥ ಯೋಗಗಳಿಗೆ ಮುಖ್ಯ ಧ್ಯಾನಾಸ್ಪದನಾದವನೇ, ಯಜ್ಞಗಳಲ್ಲಿ ಮುಖ್ಯವಾದ ಯಜ್ಞಭೋಕ್ತೃವಾಗಿರುವವನೇ, ಯೋಗ- ಭೂಷಣನೇ, ಯೋಗಿಗಳ ಮನಸ್ಸಿನಲ್ಲಿ ಸದಾ ಧ್ಯಾನ ಮಾಡಲ್ಪಡತಕ್ಕವನೇ, ಶ್ರೀಲಕ್ಷ್ಮೀಪತಿಯೇ, ನಿನಗೆ ಜಯವಾಗಲಿ. ॥ ೨೯ ॥ ಎಲ್ಲ ದೇವತೆಗಳಿಗೂ ಮುಖ್ಯ ಸ್ವಾಮಿಯಾದವನೇ, ಎಲ್ಲ ದೇವತೆಗಳಿಂದಲೂ ಅತಿಮುಖ್ಯವಾಗಿ ಪೂಜಾ ಮಾಡಿಸಿಕೊಳ್ಳಲ್ಪಡತಕ್ಕವನೇ, ಸರ್ವಗುಣ ಅತೀತನೇ, (ಪ್ರಕೃತಿಸಂಬಂಧವಾದ ಸತ್ವರಜಸ್ತಮೋ-ವ್ಯಾಪಾರಗಳಿಂದ ವರ್ಜಿತನಾದವನು), ಶ್ರೀಲಕ್ಷ್ಮೀಪತಿಯೇ, ನಿನಗೆ ಜಯವಾಗಲಿ. ॥ ೩೦ ॥ ನಿತ್ಯನೇ, ನಿರಾಶ್ರಯನೇ, ವಿಶ್ವಂಭರನೇ, ಅವ್ಯಯನೇ, ನೂರು ಕೋಟಿ (ಅನಂತ ಸೂರ್ಯರೆಂದು ತಿಳಿಯಬೇಕು) ಸೂರ್ಯರುಗಳ ಪ್ರಕಾಶವುಳ್ಳವನೇ, ಲಕ್ಷ್ಮೀಶನೇ, ನಿನಗೆ ಜಯವಾಗಲಿ. (ಯಾವಾಗಲೂ ಅಸ್ತಿತ್ವವುಳ್ಳವನಾಗಿರುವುದರಿಂದ—ನಿತ್ಯನೇ, ತನ್ನಿಂದ ಅನ್ಯವಾದ ಯಾವ ಆಶ್ರಯವೂ ಇಲ್ಲದವನಾದ್ದರಿಂದ—ನಿರಾಶ್ರಯ, ತನ್ನಿಂದ ಭಿನ್ನವಾದ ಸಕಲ ಪ್ರಪಂಚದ ಆಗುಹೋಗುಗಳಿಗೂ ನಿಯಾಮಕನಾಗಿರುವುದರಿಂದ—ವಿಶ್ವಂಭರ, ನಾಶರಹಿತ-ನಾಗಿದ್ದರಿಂದ—ಅವ್ಯಯ) ॥ ೩೧ ॥ ಎಲೈ ಸ್ವಾಮಿಯೇ, ಕೃಪೆಗೆ ಸಮುದ್ರದಂತೆ ಎಲ್ಲೆಯಿಲ್ಲ-ದವನೇ, ಭಕ್ತರ ದುಃಖಗಳನ್ನು ನಾಶಮಾಡತಕ್ಕವನೇ, ಇಡೀ ಪ್ರಪಂಚದಲ್ಲಿ ಸ್ವತಂತ್ರನೆಂದು ವೇದಗಳು ಸಾರಿ ಹೇಳುವ ಮುಖ್ಯ ತತ್ವನೇ, ಶ್ರೀಲಕ್ಷ್ಮೀರಮಣನೇ, ನಿನಗೆ ಜಯವಿರಲಿ. ॥೩೨॥ ಎಲ್ಲವನ್ನೂ ತಿಳಿದಿರತಕ್ಕವನೇ, ಸರ್ವಾಂತರ್ಯಾಮಿಯೇ, ಶಂಕರನೇ, ಶಾಶ್ವತನೇ, ಮಾಯಾ-ಪತಿಯೇ, ಮಾಯಿಯೇ, ಹೇ ಮಾಧವನೇ ನಿನಗೆ ಜಯವಾಗಲಿ. (ಶ್ರೀ ರಮಾದೇವಿ ಹಾಗು ಬ್ರಹ್ಮಾದಿಗಳೂ ಸೇರಿ ಸಕಲ ಮುಕ್ತಾಮುಕ್ತ ಜೀವರಾಶಿಗಳಿಗೆ ಸಂಬಂಧಪಟ್ಟ ಭೂತಭವಿಷ್ಯತ್-ವರ್ತಮಾನಗಳಿಗೂ ಸೇರಿದಂತೆ ಎಲ್ಲ ವಿಷಯಗಳನ್ನೂ ಆಲೋಚಿಸದೆಯೇ ಪ್ರತ್ಯಕ್ಷಿಸಿ-ಕೊಳ್ಳುವುದರಿಂದ—ಸರ್ವಜ್ಞನೇ, ಸರ್ವಜೀವಜಡಾತ್ಮಕಪ್ರಪಂಚದ ಸ್ವಾಮಿಯು ಆಗಿರುವವ-ನಾದ್ದರಿಂದ—ಸರ್ವಾತ್ಮನು, ಭಕ್ತರಿಗೆ ಮಂಗಳವನ್ನು ಉಂಟುಮಾಡುವುದರಿಂದ—ಶಂಕರ, ಶಶ್ವದೇಕಪ್ರಕಾರನಾದ್ದರಿಂದ—ಶಾಶ್ವತ, ವಾಸುದೇವರೂಪದಲ್ಲಿ ನಾರಾಯಣನು ಮುಕ್ತಿ ಕೊಡಲು ತೊಡಗಿದಾಗ ಶ್ರೀಲಕ್ಷ್ಮೀದೇವಿಯು ಅವನ ಜೊತೆ ಮಾಯಾ ಎಂಬ ರೂಪದಿಂದ ಇರುವಳು. ಆದ್ದರಿಂದ ವಾಸುದೇವನಿಂದ ಅಭಿನ್ನವಾದ ಶ್ರೀನಾರಾಯಣನೂ ಮಾಯಾ-ಪತಿಯೇ. ಅಲ್ಲದೆ ಜೀವಕೋಟಿಗಳನ್ನು ಮಾಯೆಯೆಂಬ ಆವರಕದಲ್ಲಿ ಸಿಲುಕಿಸುವುದರಿಂದ ಅವನ ಇಚ್ಛೆಗೂ ಮಾಯಾ ಎಂದು ಹೆಸರು ಇದೆ. ಹೀಗೆ ಭ್ರಮೆಯನ್ನು ಉಂಟುಮಾಡುವುದರಿಂದ—ಮಾಯಿ) ॥ ೩೩ ॥ ಜೀವರಾಶಿಗಳ ಸ್ವಾಮಿಯೇ, ಜಗತ್ತಿನ ಯಜಮಾನನೇ, ಎಲ್ಲ ಜೀವರನ್ನು ಸೃಷ್ಟಿ ಮಾಡುವವನೇ, ಎಲ್ಲ ಜೀವರ ನಿಯಾಮಕನೇ, ಎಲ್ಲ ಭೂತಗಳಿಗೆ ಮೂಲಕಾರಣನೇ, ಶ್ರೀರಮಾರಮಣನೇ, ನಿನಗೆ ಜಯವಾಗಲಿ. ॥ ೩೪ ॥ ಈ ಹುಟ್ಟು ಸಾವಿನ ಸಂಸಾರವೆಂಬ ಅರಣ್ಯಕ್ಕೆ ಕಾಡ್ಗಿಚ್ಚಿನಂತೆ ಇರುವವನೇ, ಪುನರ್ಜನ್ಮದ ಬೇಗೆಯನ್ನು ಪರಿಹಾರ ಮಾಡುವವನೇ, ಸಮಸ್ತಲೋಕಗಳಿಗೆ ಆಶ್ರಯನಾಗಿರುವವನೇ, ರಮಾರಮಣನೇ, ನಿನಗೆ ಜಯವಾಗಲಿ. ॥ ೩೫ ॥ ಬ್ರಹ್ಮಾಂಡದ ಒಳಗೂ ಹೊರಗೂ ಮತ್ತು ಸರ್ವತ್ರವೂ ವ್ಯಾಪ್ತನಾಗಿರುವವನೇ,

ನಿರ್ವಿಕಾರನೇ, ನಿರಾಕಾರನೇ, ಹೇ ಮಾಧವನೇ, ನಿನಗೆ ಜಯವಾಗಲಿ. (ಬ್ರಹ್ಮಾಂಡದ ಮತ್ತು ಜೀವಿಗಳ ಹೃದಯದ ಒಳಗೆ ಇದ್ದು ವ್ಯಾಪಾರ ಮಾಡಿಸುವುದರಿಂದ—ಅಂತಃ, ಬ್ರಹ್ಮಾಂಡದ ಹೊರಗೂ ಇದ್ದು ಅಲ್ಲಿಂದಲೇ ಬ್ರಹ್ಮಾಂಡದ ಎಲ್ಲ ವ್ಯಾಪಾರಗಳನ್ನೂ ನಡೆಸಬಲ್ಲನಾದುದರಿಂದ—ಬಹಿಃ, ಒಟ್ಟಿನಲ್ಲಿ ಸರ್ವತ್ರ ಇದ್ದು ಸರ್ವತ್ರ ವ್ಯಾಪ್ತಿಯನ್ನೂ ಹೊಂದಿರುವುದರಿಂದ—ಸರ್ವತ್ರ. ಪ್ರಕೃತಸಂಬಂಧವಾದ ರೋಗ ಜರಾಮರಣವೃದ್ಧ್ಯಾದಿ ವಿಕಾರಶೂನ್ಯನಾದುದರಿಂದ—ನಿರ್ವಿಕಾರ, ಸರ್ವತ್ರ ವ್ಯಾಪ್ತನಾಗಿದ್ದು ಯಾವುದೇ ನಿರ್ದಿಷ್ಟ ಆಕಾರವಿಲ್ಲದ್ದರಿಂದ—ನಿರಾಕಾರ) ॥ ೩೬ ॥ ಪಾತಾಳಗಳು ಎಂದು ಪ್ರಸಿದ್ಧವಾದ ಕೆಳಗಿನ ಏಳು ಲೋಕಗಳಲ್ಲಿಯೂ ಇದ್ದು ತನ್ನ ನಿಯಮನವನ್ನು ನಡೆಸುತ್ತಿರುವ ಭಗವಂತನೇ, ಸಪ್ತಲೋಕಗಳಲ್ಲೂ ನಿನಗೆ ಜಯವಾಗಲಿ. ಆದಿ, ಅಂತ ಮತ್ತು ಮಧ್ಯವೂ ಇಲ್ಲದ್ದರಿಂದ ''ಆದಿಮಧ್ಯಾಂತರಹಿತ''ನೆಂದು ಕರೆಯಲ್ಪಡುವ ಶ್ರೀಮಾಧವನಿಗೆ ಜಯವಾಗಲಿ. ॥ ೩೭ ॥ ಅತಿಶ್ರೇಷ್ಠವಾದ ಭಕ್ತಿಯಿಂದ ಇಂದ್ರನು ಶ್ರೀಮಾಧವ-ದೇವರನ್ನು ಈ ರೀತಿಯಾಗಿ ಸ್ತುತಿಸಿ ಕಣ್ಣಿನಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಾ ರೋಮಾಂಚನ-ಗೊಂಡು ಶ್ರೀಮಾಧವನ ಎರಡು ಪಾದಗಳಿಗೂ ಎರಗಿದನು. ॥ ೩೮ ॥ ಪಾದದಲ್ಲಿ ಭಕ್ತಿಭಾವದಿಂದ ಬಿದ್ದಿರುವ ಆ ಇಂದ್ರನನ್ನು ಶ್ರೀಮಾಧವದೇವರು ಎಬ್ಬಿಸಿ ಆದರದಿಂದ ಆಲಿಂಗಿಸಿಕೊಂಡು ಮೃದುಮಧುರವಾದ ಮಾತಿನಲ್ಲಿ ಈ ರೀತಿ ಹೇಳಿದರು. ॥ ೩೯ ॥

**ಶ್ರೀಮಾಧವ ಉವಾಚ—**

**ಉತ್ತಿಷ್ಠೋತ್ತಿಷ್ಠ ಮಘವನ್ ಸ್ವಸ್ಥಾನಂ ಶಾಶ್ವತಂ ಕೃತಮ್ ।**
**ಅಭೀಪ್ಸಿತಮಥಾನ್ಯಚ್ಚ ಯಾಚ್ಯತಾಂ ಸ್ವಮನೋಗತಮ್ ॥ ೪೦ ॥**

**ಶ್ರೀಮಾಧವದೇವರು ಹೇಳಿದರು—**

''ಇಂದ್ರನೇ, ಏಳು ಏಳು; ನಿನ್ನ ದೇವಪದವಿಯು ಶಾಶ್ವತವಾಯಿತು, (ನಿನ್ನ ಸ್ವರೂಪ-ಸಿದ್ಧವಾದ ದೇವೇಂದ್ರತ್ವವು ನಿನ್ನದಾಯಿತು) ಮುಕ್ತಿಪದವಿಯು ನಿನಗೆ ಮೀಸಲಾಗಿದೆ. (ಮುಕ್ತಿ-ಯಲ್ಲಿಯೂ ಈ ಸ್ಥಾನವು ಶಾಶ್ವತವು); ಹಾಗಿದ್ದರೂ ನಿನ್ನ ಮನಸ್ಸಿನಲ್ಲಿ ಬೇರೆ ಅಭೀಷ್ಟಗಳಿದ್ದರೆ ಅದನ್ನೂ ಬೇಡುವವನಾಗು.'' ॥ ೪೦ ॥

**ಇಂದ್ರ ಉವಾಚ—**

**ವಿಶ್ವಪಾವನ ಸಂಶಕ್ತ ಏವಮೇವೋಚಿತಂ ತ್ವಯಿ ।**
**ಪ್ರಸನ್ನೇ ತ್ವಯಿ ಮಾಕಾಂತೇ ಮಾ ಕಾಂತಂ ಮೇ ಪರಂ ಭವೇತ್ ॥ ೪೧ ॥**
**ನಾಕಾಧಿಪತ್ಯಂ ನೈವಾಹಂ ಕಾಮಯೇ ಭಂಗುರಂ ಫಲಮ್ ।**
**ಇದಮೇವ ಪರಂ ಯಾಚೇऽತ್ರೈವ ವಾಸೋऽಸ್ತು ಮೇ ಸದಾ ॥ ೪೨ ॥**
**ಅನ್ಯಚ್ಚ ಲಕ್ಷವಿಧಿನಾ ಕುಸುಮೈಸ್ತವ ಪೂಜನಮ್ ।**
**ಕರಿಷ್ಯಂತಿ ನರಾ ನಾರ್ಯೋ ಯೇ ತೇಷಾಂ ತು ನಿಜೇಪ್ಸಿತಮ್ ॥ ೪೩ ॥**
**ಮತ್ಕೃತಸ್ತೋತ್ರಪಾಠಂ ಯೇ ಕರಿಷ್ಯಂತ್ಯತಿಭಕ್ತಿತಃ ।**
**ಇದಮೇವ ಪರಂ ರೂಪಂ ತೇಷಾಂ ದರ್ಶಯ ಸತ್ವರಮ್ ॥ ೪೪ ॥**

**ಏತಸ್ಯಾಂ ವಾಟಿಕಾಯಾಂ ಯೇ ಸ್ನಾನಂ ದಾನಂ ಚ ಪೂಜನಮ್ ।**
**ಸ್ವಾಧ್ಯಾಯಜಪಹೋಮಾದಿಯೋಗಸಾಂಖ್ಯನಿಷೇವಣಮ್ ॥ ೪೫ ॥**
**ತ್ವತ್ಪದಾವಿಷ್ಟಮನಸೋ ಮಮ ಧ್ವಜಮಹೋತ್ಸವಮ್ ।**
**ತ್ವತ್ಪ್ರೀತಯೇ ಕರಿಷ್ಯಂತಿ ತೇಷಾಂ ದೇಹಿ ನಿಜಾಂತಿಕಮ್ ॥ ೪೬ ॥**

**ಇಂದ್ರದೇವರು ಹೇಳಿದರು—**

ಜಗತ್ಪಾಲಕನೇ, ಸರ್ವಸಮರ್ಥನೇ, ಈ ರೀತಿ ವಾಗ್ದಾನ ಮಾಡುವುದು ತಮಗೆ ಉಚಿತವೇ ಸರಿ. ಲಕ್ಷ್ಮೀಪತಿಯಾದ ನೀನು ಪ್ರಸನ್ನನಾಗುತ್ತಿರಲಾಗಿ ನನಗೆ ಮತ್ತಾವುದೂ ಮನೋಹರವು ಆಗಲಾರದು. ॥ ೪೧ ॥ ಬಣ್ಣಬಣ್ಣಗಳು ಮಿನುಗುತ್ತಿದ್ದರೂ ನೀರಿನ ಮೇಲಿನ ಗುಳ್ಳೆಯು ಒಡೆದು ಹೋಗತಕ್ಕದ್ದೇ, ಅದರಂತೆ ಆಕರ್ಷಕವಾಗಿದ್ದರೂ ಈ ದೇವಾಧಿಪತಿ ಪದವಿಯು ನನಗೆ ಬೇಡ, ಈ ಪ್ರಯಾಗದಲ್ಲಿ ವಾಸವು ನನಗೆ ಯಾವಾಗಲೂ ಇರಲಿ; ಇಷ್ಟನ್ನು ಮಾತ್ರ ಕರುಣಿಸು.'' ॥ ೪೨ ॥ ಮತ್ತೊಂದು ವರವೆಂದರೆ, ಲಕ್ಷಾರ್ಚನವಿಧಿಪೂರ್ವಕವಾಗಿ ಹೂವುಗಳಿಂದ ಈ ಕ್ಷೇತ್ರದಲ್ಲಿ ಯಾವ ಪುರುಷರಾಗಲೀ, ಸ್ತ್ರೀಯರಾಗಲೀ ನಿನ್ನನ್ನು ಪೂಜಿಸುವರೋ ಅವರಿಗೂ ಜಾಗ್ರತೆಯಾಗಿ ಅವರ ಅಭೀಷ್ಟಗಳನ್ನು ಕೊಡು. ॥ ೪೩ ॥ ನನ್ನಿಂದ ಮಾಡಲ್ಪಟ್ಟ ಈ ಸ್ತೋತ್ರದ ಪಠನವನ್ನು ಯಾರು ಮಾಡುತ್ತಾರೋ, ಅವರಿಗೂ ಈ ನಿನ್ನ ಉತ್ಕೃಷ್ಟ ರೂಪದ ದರ್ಶನ ಮಾಡಿಸು. ॥ ೪೪ ॥ ಈ ವನದಲ್ಲಿ ನಿನ್ನ ಪಾದದಲ್ಲಿಯೇ ಆಸಕ್ತವಾದ ಮನಸ್ಸುಳ್ಳವರಾಗಿ ಸ್ನಾನ, ದಾನ, ನಿನ್ನ ಪೂಜಾ, ಅಧ್ಯಯನ, ಅಧ್ಯಾಪನ ಪರಮಾತ್ಮನ ಸೇವಾರೂಪವಾಗಿ ಕರ್ಮಯೋಗ, ಸಾಂಖ್ಯಯೋಗ ಮತ್ತು ರಾಜಯೋಗಾದಿಗಳನ್ನು ಆಚರಿಸತಕ್ಕವರಾಗಿ, ನನ್ನ ಧ್ವಜಾರೋಹಣೋತ್ಸವವನ್ನು ನಿನ್ನ ಪ್ರೀತಿ-ಗೋಸ್ಕರ ಯಾರು ಮಾಡುತ್ತಾರೋ ಅವರಿಗೂ ನಿನ್ನ ಸಮೀಪದಲ್ಲಿರುವ ಸಾಮೀಪ್ಯವೆಂಬ ಮುಕ್ತಿಭಾಗ್ಯವನ್ನು ಕರುಣಿಸು. ॥ ೪೫-೪೬ ॥

**ಸೂತ ಉವಾಚ—**

**ಐಂದ್ರೀಮೇತಾಂ ಸಮಾಕರ್ಣ್ಯ ವಾಚಮುತ್ಫುಲ್ಲಲೋಚನಃ ।**
**ತಥೇತಿ ತಂ ಪ್ರತಿಶ್ರುತ್ಯ ಮಾಧವೋಽಂತರ್ದಧೇ ಪುನಃ ॥ ೪೭ ॥**
**ಇಂದ್ರೋಽಪಿ ತದುಪಧಾರ್ಯಾಂಸ್ತತ್ರೈವ ಕ್ಷೇತ್ರಮಂಡಲೇ ।**
**ಉವಾಸ ನಿಯತಂ ಭಕ್ತ್ಯಾ ಸ್ವರಾಜ್ಯಾದಿಪರಾಙ್ಮುಖಃ ॥ ೪೮ ॥**

**॥ ಇತಿ ದಶಮೋಽಧ್ಯಾಯಃ ॥**

**ಸೂತರು ಹೇಳಿದರು—**

ಇಂದ್ರನಿಂದ ಹೇಳಲ್ಪಟ್ಟ ಈ ವಚನವನ್ನು ಕೇಳಿದ ಶ್ರೀಮಾಧವನು ಅರಳಿದ ಕಣ್ಣುಗಳುಳ್ಳವನಾಗಿ ''ಹಾಗೆಯೇ ಆಗಲಿ'' ಎಂದು ಉತ್ತರಿಸಿ ಅಲ್ಲಿಂದ ಅಂತರ್ಧಾನನಾದನು. ॥ ೪೭ ॥ ಇಂದ್ರನು ಅದನ್ನು ಆಲಿಸಿ ಮನಸ್ಸಿಗೆ ತಂದುಕೊಂಡು, ತನ್ನ ದೇವರಾಜ್ಯಾಧಿಪತ್ಯದಿಂದ ಪರಾಙ್ಮುಖ-ನಾಗಿ ಅಲ್ಲಿ ತನಗೆ ನಿಯತವಾಗಿರತಕ್ಕ ನಂದನವನದಲ್ಲಿ ಪರಮಭಕ್ತಿಯುತನಾಗಿ ವಾಸಮಾಡಿ ಶ್ರೀಮಾಧವದೇವರನ್ನು ಪೂಜಾಮಾಡಿಕೊಂಡಿದ್ದನು. ॥ ೪೮ ॥

॥ ಹತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕಾದಶೋಽಧ್ಯಾಯಃ ॥ ೧೧ ॥

**ಋಷಯ ಊಚುಃ—**

ವಿಧಾನಂ ಸೂತ ಪೂಜಾಯಾ ಲಕ್ಷಪುಷ್ಪೈಃ ಫಲಂ ಚ ಯತ್ ।
ತತ್ಸರ್ವಂ ವದ ಸಂಕ್ಷಿಪ್ತಂ ಕರ್ತಾ ಯೇನ ಸುಖಂ ಲಭೇತ್ ॥ ೧ ॥

## ॥ ಹನ್ನೊಂದನೆಯ ಅಧ್ಯಾಯವು ॥

**ಋಷಿಗಳು ಹೇಳಿದರು—**

ಲಕ್ಷಪುಷ್ಪಾದಿಗಳ ಪೂಜೆಯ ವಿಧಾನವನ್ನೂ ಅದರ ಫಲವನ್ನೂ ಸಹ ಸಂಕ್ಷೇಪವಾಗಿ ಹೇಳಿರಿ; ಯಾವುದನ್ನು ಅರಿತು ಆಚರಿಸಿದರೆ ಫಲವು ಸಿಗುವುದೋ ಅದನ್ನು ಹೇಳಿರಿ. ॥ ೧ ॥

**ಸೂತ ಉವಾಚ—**

ಯಸ್ಮಿನ್ ಋತೌ ಯಾನಿ ಯಾನಿ ಮನಸ್ತೋಷಕರಾಣಿ ಚ ।
ಕುಸುಮಾನಿ ಸುಗಂಧಾನಿ ತುಲಸೀನಾಂ ದಲಾನಿ ಚ ॥ ೨ ॥
ಬಿಲ್ವಪತ್ರಾಣಿ ಚಾನ್ಯಾನಿ ಕೋಮಲಾನಿ ವಿಶೇಷತಃ ।
ತೈಸ್ತೈರ್ಲಕ್ಷಮಿತೈಃ ಪೂಜಾ ಭಕ್ತ್ಯಾ ಕಾರ್ಯಾ ಋತಾವೃತೌ ॥ ೩ ॥
ಶ್ರೀಕಾಮೋ ಬಿಲ್ವಪತ್ರೈಶ್ಚ ಶಾಂತಿಕಾಮಸ್ತು ದೂರ್ವಯಾ ।
ಆಯುಃಕಾಮೋ ಸದಾ ಕುರ್ಯಾಚ್ಚಂಪಕೈಃ ಪೂಜನಂ ಹರೇಃ ॥ ೪ ॥
ವಿದ್ಯಾಕಾಮಸ್ತು ಕುರ್ವೀತಾಽತಸಿಕಾಕುಸುಮೈರ್ನವೈಃ ।
ವಿಷ್ಣುಪ್ರಸಾದಕಾಮಸ್ತು ತುಲಸೀಮಂಜರೀದಲೈಃ ॥ ೫ ॥
ಪುತ್ರಕಾಮಶ್ಚರೇತ್ಪೂಜಾಂ ಮಲ್ಲಿಕಾದ್ಯೈಃ ಶುಭೈಶ್ಶುಭೈಃ ।
ದುಃಖಪ್ರಶಮಕಾಮಸ್ತು ಪೂಜಯೇತ್ಕುಂದಪುಷ್ಪಕೈಃ ॥ ೬ ॥
ತಿಲತಂಡುಲಮುದ್ಗೈಶ್ಚ ಯವಗೋಧೂಮಕಾದಿಭಿಃ ।
ಚಣಕದ್ವಿದಲೈಸ್ತದ್ವತ್ ಗಣಿತೈಃ ಪೂಜಯೇದ್ಧರಿಮ್ ॥ ೭ ॥
ರಂಗಬಿಲ್ವಾದಿಭಿರ್ಭಕ್ತ್ಯಾ ಮಾಧವಸ್ಯಾಗ್ರತಃ ಕೃತೈಃ ।
ಶಂಖಚಕ್ರಗದಾಪದ್ಮೈಃ ಸ್ವಸ್ತಿಕೈರ್ಲಕ್ಷಸಂಖ್ಯಯಾ ॥ ೮ ॥
ಕೃತನಿತ್ಯಕ್ರಿಯಃ ಪ್ರಾತಃ ಪೂಜಯಿತ್ವೇಷ್ಟದೇವತಾಮ್ ।
ತತ್ತನ್ನಾಮ್ನಾಂ ಸಹಸ್ರೇಣ ಸ್ವಯಂ ವಿಪ್ರೇಣ ವಾರ್ಚಯೇತ್ ॥ ೯ ॥
ಗಣಯಿತ್ವಾಥ ತೂಷ್ಣೀಂ ವಾ ಮಾಧವಾಯ ಸಮರ್ಪಯೇತ್ ।
ಪ್ರೋಕ್ತೋಽಯಂ ಮಧ್ಯಮಃ ಪಕ್ಷೋ ಜಘನ್ಯೋ ಗಣನೇ ಸ್ಮೃತಃ ॥ ೧೦ ॥
ಯಥಾಶಕ್ತಿ ಯಥಾವಿತ್ತಂ ಯಥಾಭಕ್ತಿ ಯಥಾಮತಿ ।
ಪ್ರಶಸ್ತೇನಾದಿಕಲ್ಪೇನ ಬುದ್ಧಿಮಾಂಸ್ತು ಯಜೇದ್ಧರಿಮ್ ॥ ೧೧ ॥

ಲಕ್ಷಂ ವಾ ನಿಯುತಂ ವಾಪಿ ಕೋಟಿಂ ವಾ ಸ್ವೇಚ್ಛಯಾಚರನ್ ।
ಉದ್ಯಾಪನಂ ಪ್ರಕುರ್ವೀತ ವ್ರತಸಾದ್ಗುಣ್ಯಹೇತವೇ ॥ ೧೨ ॥
ಆದೌ ಮಧ್ಯೇಽಥವಾ ಪ್ರಾಂತೇ ಯದ್ಯಪ್ಯುದ್ಯಾಪನಂ ಮತಮ್ ।
ಅಂತ ಏವ ತಥಾಪ್ಯತ್ರ ಕುರ್ಯಾದುದ್ಯಾಪನಂ ಶುಭಮ್ ॥ ೧೩ ॥

**ಸೂತರು ಹೇಳಿದರು—**

ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ (ಸುವಾಸನೆಯುಳ್ಳ) ಯಾವ ಯಾವ ಹೂವುಗಳು ಆಯಾ ಋತುಗಳಲ್ಲಿ ಸಿಗುವುವೋ ಅವುಗಳಿಂದಲೂ, ತುಲಸೀದಳಗಳಿಂದಲೂ, ಬಿಲ್ವಪತ್ರೆ ಮುಂತಾದ ಬೇರೆ ಬೇರೆ ಕೋಮಲವಾದ ಪತ್ರೆಗಳೊಂದೊಂದರಿಂದಲೂ ಲಕ್ಷ ಸಂಖ್ಯೆಗಳವರೆಗೆ ಪೂಜಿಸಬೇಕು. ॥ ೨-೩ ॥ ಸಂಪತ್ತು ಬೇಕಾದವನು ಬಿಲ್ವಪತ್ರೆಯಿಂದಲೂ, ಮನಶ್ಶಾಂತಿ ಬೇಕಾದವನು ಗರಿಕೆಯಿಂದಲೂ, ದೀರ್ಘಾಯುಷ್ಯಾಪೇಕ್ಷಿಯು ಸಂಪಿಗೆ ಹೂವುಗಳಿಂದಲೂ ಶ್ರೀಹರಿಯನ್ನು ಲಕ್ಷಸಂಖ್ಯೆಯಿಂದ ಪೂಜಿಸಬೇಕು. ॥ ೪ ॥ ವಿದ್ಯಾರ್ಜನೆಯಲ್ಲಿ ಆಸಕ್ತಿಯುಳ್ಳವನು ಅಗಸೆಯ ಹೂವುಗಳಿಂದಲೂ ಶ್ರೀವಿಷ್ಣುವಿನ ಅನುಗ್ರಹ ಬೇಕಾದವನು ತುಳಸೀ ತೆನೆಗಳಿಂದಲೂ (ದಳಗಳಿಂದಲೂ), ಪುತ್ರಪ್ರಾಪ್ತಿಯ ಆಸೆಯುಳ್ಳವನು ಮಲ್ಲಿಗೆ ಹೂವುಗಳಿಂದಲೂ, ದುಃಖವನ್ನು ಪರಿಹರಿಸಿಕೊಳ್ಳಲು ಕುಂದಪುಷ್ಪಗಳಿಂದಲೂ ಪೂಜೆ ಮಾಡಬೇಕು. ಎಳ್ಳು, ಅಕ್ಕಿ, ಕಡಲೆ, ಉದ್ದು, ಗೋಧಿಹಿಟ್ಟು, ಅಕ್ಕಿಹಿಟ್ಟು, ಕಡಲೆಬೇಳೆ, ಹೆಸರುಬೇಳೆಗಳಿಂದಲೂ ಲಕ್ಷಾರ್ಚನೆ ಮಾಡಬಹುದು. ॥ ೫-೭ ॥ ಪರಮಾತ್ಮನ ಎದುರಿಗೆ ಲಕ್ಷ ಸಂಖ್ಯೆಯಲ್ಲಿ ರಂಗವಲ್ಲಿಯಿಂದ ಶಂಖ, ಚಕ್ರ, ಗದೆ, ಸ್ವಸ್ತಿಕ ಮತ್ತು ಪದ್ಮ ಇವುಗಳನ್ನು ಬರೆದು ಶ್ರೀಹರಿಗೆ ಅರ್ಪಿಸಬಹುದು. ॥ ೮ ॥ ಉಷಃಕಾಲದಲ್ಲಿ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ ತಮ್ಮ ತಮ್ಮ ಇಷ್ಟ ದೇವತೆಗಳನ್ನು ಪೂಜಿಸಿ, ಆಯಾಯಾ ದೇವತೆಯ ಸಹಸ್ರನಾಮದಿಂದ ಪೂಜೆಯನ್ನು ಮಾಡಬೇಕು ಅಥವಾ ಬ್ರಾಹ್ಮಣರ ಮೂಲಕ ಮಾಡಿಸಬೇಕು. ॥ ೯ ॥ ಸಂಖ್ಯೆಮಾಡಿ ಅಥವಾ ಮೌನದಿಂದ, ಮಾಧವನಿಗೆ ಸಮರ್ಪಿಸಬೇಕು. ಸಹಸ್ರನಾಮ-ಗಳನ್ನು ಹೇಳುತ್ತಾ ಸಹಸ್ರಾರ್ಚನೆ ಮಾಡುವುದು ಉತ್ತಮಪಕ್ಷ. ಮೌನವಾಗಿ ಮಾಧವನಿಗೆ ಸಮರ್ಪಿಸುವುದು ಮಧ್ಯಮಪಕ್ಷ; ಕೇವಲ ಎಣಿಕೆ ಮಾಡುತ್ತಾ ಪೂಜಿಸುವುದು ಅಧಮಪಕ್ಷ. ॥ ೧೦ ॥ ಶಕ್ತ್ಯಾನುಸಾರ, ಹಣದ ಸೌಕರ್ಯವಿದ್ದಂತೆ, ತನಗೆ ಹೇಗೆ ಪ್ರೇರಣೆ ಆಗುವುದೋ ಹಾಗೆ, ತಮ್ಮ ತಮ್ಮ ಭಕ್ತ್ಯಾನುಸಾರ ಈ ಅರ್ಚನೆಯನ್ನು ಮಾಡಬಹುದು. ॥ ೧೧ ॥ ಲಕ್ಷಾರ್ಚನೆ, ಹತ್ತು ಲಕ್ಷದ ಅರ್ಚನೆ ಅಥವಾ ಕೋಟಿ ಅರ್ಚನೆಯನ್ನೂ ಮಾಡಬಹುದು. ನಂತರ ವ್ರತದ ಸಂಪೂರ್ಣ ಫಲಪ್ರಾಪ್ತಿಗಾಗಿ ಉದ್ಯಾಪನೆಯನ್ನು ಮಾಡಬೇಕು. ॥ ೧೨ ॥ ಈ ಅರ್ಚನೆಯ ಪ್ರಾರಂಭದಲ್ಲಿ, ಮಧ್ಯದಲ್ಲಿ ಅಥವಾ ಕೊನೆಯಲ್ಲಿ ಉದ್ಯಾಪನೆಯನ್ನು ಆಚರಿಸಬಹುದು. ಆದಾಗ್ಯೂ ಈ ವ್ರತದ ಕೊನೆಯಲ್ಲಿ ಉದ್ಯಾಪನೆ ಮಾಡುವುದು ಮಂಗಳಕರ. ॥ ೧೩ ॥

**ಋಷಯಃ ಊಚುಃ—**

ಸೂತ ಸೂತ ವದಾಯುಷ್ಮನ್ ಉದ್ಯಾಪನವಿಧಿಂ ಶುಭಮ್ ।
ಲಕ್ಷಪುಷ್ಪಾದಿಪೂಜಾಯಾಃ ಸರ್ವೇಷಾಮುಪಕಾರಕಮ್ ॥ ೧೪ ॥

**ಋಷಿಗಳು ಹೇಳಿದರು—**

ದೀರ್ಘಾಯುಷಿಗಳಾದ ಶ್ರೀಸೂತರೇ, ಈ ಲಕ್ಷಪುಷ್ಪಪೂಜಾದಿಗಳ ಶುಭ ಉದ್ಯಾಪನಾ ವಿಧಿಯನ್ನು ಹೇಳಿ. ಇದರಿಂದ ಎಲ್ಲರಿಗೂ ಉಪಕಾರವಾಗುವುದು. ॥ ೧೪ ॥

**ಶ್ರೀಸೂತ ಉವಾಚ—**

ಲಕ್ಷಪುಷ್ಪಾದಿಪೂಜಾನಾಂ ವದಾಮ್ಯುದ್ಯಾಪನಂ ವಿಧಿಮ್ ।
ಶ್ರೂಯತಾಮವಧಾನೇನ ಮುನಯಃ ಪ್ರಶ್ನಕೋವಿದಾಃ ॥ ೧೫ ॥
ಸಂಸ್ಕಾರಸಂಸ್ಕೃತೇ ದೇಶೇ ವಿವಿಕ್ತೇ ನಿರ್ಮಲೇ ಶುಚೌ ।
ಗಣೇಶಭೂಮಿವಾರಾಹತತ್ತ್ವಸ್ಥಾನ್ ಸಂಪೂಜ್ಯ ಸಾಧನೈಃ ॥ ೧೬ ॥
ಸಪುಷ್ಪಫಲಪತ್ರಾದಿಕದಲೀಸ್ತಂಭಮಂಡಿತಮ್ ।
ಪುಷ್ಪಮಾಲಾಫಲೋಪೇತಂ ಮಂಟಪಂ ತತ್ರ ಕಾರಯೇತ್ ॥ ೧೭ ॥
ಮಂಟಪಾಂತಃ ಪ್ರಕರ್ತವ್ಯಾ ವೇದಿಕಾ ಚ ಸುಶೋಭನಾ ।
ಸಮಾ ಶ್ಲಕ್ಷ್ಣಾ ಚ ಹಸ್ತಾ ಚ ಚತುರಸ್ರಾ ಸಮಂತತಃ ॥ ೧೮ ॥
ತಸ್ಯಾಃ ಪಶ್ಚಿಮದಿಗ್ಭಾಗೇ ಬಹಿಃ ಸಂಪೂಜಿತೈರ್ದ್ವಿಜೈಃ ।
ಪುಣ್ಯಾಹವಾಚನಂ ಕುರ್ಯಾದಾಚಾರ್ಯಂ ವರಯೇಚ್ಛುಭಮ್ ॥ ೧೯ ॥
ಗೀತವಾದಿತ್ರನಿರ್ಘೋಷೈರ್ವೇದಘೋಷೇಣ ಭೂಯಸಾ ।
ಪ್ರವಿಶ್ಯ ಮಂಟಪೇ ತಸ್ಮಿನ್ ರಾತ್ರೌ ಜಾಗರಣಂ ಚರೇತ್ ॥ ೨೦ ॥
ವೇದಿಕಾಯಾಂ ಪ್ರಕರ್ತವ್ಯಂ ಸ್ವಸ್ತಿಕಂ ವರ್ಣಚಿತ್ರಿತಮ್ ।
ತನ್ಮಧ್ಯೇ ತು ಪ್ರಕರ್ತವ್ಯಂ ಶ್ವೇತದ್ವೀಪಂ ದಲಾನ್ವಿತಮ್ ॥ ೨೧ ॥
ಕಲಶಂ ಸ್ಥಾಪಯೇತ್ತತ್ರ ತಾಮ್ರಮವ್ರಣಮುತ್ತಮಮ್ ।
ಪಂಚಪಲ್ಲವಸಂಯುಕ್ತಂ ಸ್ರಕ್ಚಂದನವಿಭೂಷಿತಮ್ ॥ ೨೨ ॥
ತಸ್ಯೋಪರಿ ನ್ಯಸೇತ್ಪಾತ್ರಂ ತಾಮ್ರಂ ವೈಣವಮೇವ ವಾ ।
ನ್ಯಸೇತ್ತತ್ರಾಹತಂ ವಾಸಃ ಕುಂಕುಮಾಷ್ಟದಲಾಚಿತಮ್ ॥ ೨೩ ॥
ಸೌವರ್ಣೀಂ ಪ್ರತಿಮಾಂ ತಸ್ಮಿನ್ನಗ್ನ್ಯುತ್ತಾರಣಪೂರ್ವಕಮ್ ।
ಸ್ಥಾಪಯೇತ್ಪರಯಾ ಭಕ್ತ್ಯಾ ಮಾಧವಸ್ಯ ಜಗತ್ಪತೇಃ ॥ ೨೪ ॥
ಪೂಜಾಂ ತಸ್ಯ ಪ್ರಕುರ್ವೀತ ಪಂಚಾಮೃತಪುರಸ್ಸರೈಃ ।
ಧೂಪೈರ್ದೀಪೈಶ್ಚ ನೈವೇದ್ಯೈಃ ಫಲತಾಂಬೂಲಮಂಗಲೈಃ ॥ ೨೫ ॥
ವೇದಶಾಸ್ತ್ರಪುರಾಣೈಶ್ಚ ಗೀತವಾದಿತ್ರನರ್ತನೈಃ ।
ಸ್ತುತಿಪಾಠನಮಸ್ಕಾರೈಃ ತ್ರಿರಾತ್ರಿಮತಿವಾಹಯೇತ್ ॥ ೨೬ ॥
ತತಃ ಪ್ರಭಾತಸಮಯೇ ಕೃತನಿತ್ಯಕ್ರಿಯಶ್ಶುಚಿಃ ।
ಸ್ಥಂಡಿಲೇಽಗ್ನಿಂ ಪ್ರತಿಷ್ಠಾಪ್ಯ ಸ್ವಶಾಖೋಕ್ತವಿಧಾನತಃ ॥ ೨೭ ॥

ಮೂಲಮಂತ್ರೇಣ ಗಾಯತ್ರ್ಯಾ ತತ್ತನ್ನಾಮಸಹಸ್ರಕೈಃ ।
ಹವನಂ ತತ್ರ ಕುರ್ವೀತ ತಿಲಾಜ್ಯಚರುಭಿಃ ಕ್ರಮಾತ್ ॥ ೨೮ ॥
ಅಷ್ಟೋತ್ತರಸಹಸ್ರಂ ತು ಸಂಖ್ಯಾ ಮಾನಂ ಪ್ರಕೀರ್ತಿತಮ್ ।
ಜುಹುಯಾತ್ತೇನ ಮಂತ್ರೇಣ ಯೇನ ಮಂತ್ರೇಣ ಪೂಜನಮ್ ॥ ೨೯ ॥
ಆಚಾರ್ಯಃ ಸ್ವಯಮನ್ಯೈರ್ವಾ ತರ್ಪಯಿತ್ವಾ ದಶಾಂಶತಃ ।
ತದನ್ಯತಮಮಂತ್ರೇಣ ಪಶ್ಚಾದ್ಧವನಮಾಚರೇತ್ ॥ ೩೦ ॥
ಚತ್ವಾರ ಋತ್ವಿಜಃ ಕಾರ್ಯಾಃ ಸಮರ್ಥಾ ವೇದವಾದಿನಃ ।
ಸಹಸ್ರನಾಮಪಾಠಾರ್ಥಂ ಪ್ರಧಾನಕಲಶೇ ಪರಃ ॥ ೩೧ ॥
ತತಃ ಸ್ವಿಷ್ಟಕೃತಂ ಹುತ್ವಾ ಪೂರ್ಣಾಹುತಿಮನಂತರಮ್ ।
ಆಚಾರ್ಯಮೃತ್ವಿಜಃ ಪೂಜ್ಯ ತೇಭ್ಯೋ ದದ್ಯಾಚ್ಚ ದಕ್ಷಿಣಾಮ್ ॥ ೩೨ ॥
ವಸ್ತ್ರಾಲಂಕಾರಭೂಷಾಂಶ್ಚ ಗಾಂ ಸವತ್ಸಾಂ ಪಯೋಽನ್ವಿತಾಮ್ ।
ಕಲಶಂ ಪ್ರತಿಮಾವಸ್ತ್ರಂ ತಥಾ ತಂಡುಲಪರ್ವತಮ್ ॥ ೩೩ ॥
ಯೇನ ಯೇನ ಕೃತಾ ಪೂಜಾ ಮಾಧವಸ್ಯ ಸದಕ್ಷಿಣಾ ।
ತತ್ತದ್ದದ್ಯಾತ್ತುವರ್ಣೇನ ನಿರ್ಮಿತಂ ಗುರವೇಽನಘಾಃ ॥ ೩೪ ॥
ತುಲಸೀಮಂಜರೀಭಿಶ್ಚೇತ್ಸಪತ್ರಾಭಿಃ ಪ್ರಪೂಜಯೇತ್ ।
ಅಯಮೇವ ವಿಧಿಸ್ತತ್ರ ವಿಶೇಷಸ್ತ್ವವಧಾರ್ಯತಾಮ್ ॥ ೩೫ ॥
ಪಂಚಖಾದ್ಯಂ ತಥಾ ಸರ್ಪಿಃ ಪಾಲಾಶಂ ಚರುಮೇವ ಚ ।
ಸಮರ್ಪಕೇಣ ಮಂತ್ರೇಣ ಜುಹುಯಾತ್ತರ್ಪಣೋತ್ತರಮ್ ॥ ೩೬ ॥
ರೌಪ್ಯಂ ವೃಂದಾವನಂ ಕೃತ್ವಾ ಸಪತ್ರಾಂತೇನ ಮಂಜರೀಮ್ ।
ಆಚಾರ್ಯಾಯ ಯಥಾಶಕ್ತಿ ಪ್ರದದ್ಯಾದ್ದಕ್ಷಿಣಾನ್ವಿತಾಮ್ ॥ ೩೭ ॥
ಸೌವರ್ಣಂ ಬಿಲ್ವಪತ್ರಂ ಸ್ಯಾದ್ಬಿಲ್ವಪತ್ರಪ್ರಪೂಜನೇ ।
ಅಶಕ್ತೋ ಸರ್ವತೋ ರೌಪ್ಯಂ ವಿತ್ತಶಾಠ್ಯಂ ನ ಕಾರಯೇತ್ ॥ ೩೮ ॥
ಸರ್ವಂ ಮನಸ್ತಃ ಕರ್ತವ್ಯಂ ಬಂಧಮೋಕ್ಷಕರಂ ಮನಃ ।
ಅಮನಸ್ತಃ ಕೃತಂ ಯದ್ಯತ್ಕೃತಂ ತದಕೃತಂ ಭವೇತ್ ॥ ೩೯ ॥
ಹೋಮಶೇಷಂ ಸಮಾಪ್ಯೈವಂ ಬ್ರಾಹ್ಮಣಾನ್ಭೋಜಯೇಚ್ಛತಮ್ ।
ಅಶಕ್ತ್ಯಾರ್ಧಂ ತದರ್ಧಂ ವಾ ಶಕ್ತೌ ದ್ವಿತ್ರಿಚತುರ್ಗುಣಮ್ ॥ ೪೦ ॥
ಶ್ರೀಮಾಧವ ದಯಾಸಿಂಧೋ ವ್ರತಮೇತನ್ಮಯಾ ಕೃತಮ್ ।
ಗೃಹಾಣ ಕೃಪಯಾ ಸ್ವಾಮಿನ್ಫಲಂ ಮೇ ದೇಹಿ ವಾಂಛಿತಮ್ ॥ ೪೧ ॥
ಬದ್ಧಾಂಜಲಿರ್ಮಾಧವಾಯ ನಿವೇದ್ಯ ಸ್ವಕೃತಂ ವ್ರತಮ್ ।
ಹೋಮಭಸ್ಮ ಸಮಾದಾಯ ಸರ್ವಾಂಗೇಷು ವಿಲೇಪಯೇತ್ ॥ ೪೨ ॥

ದೀನಾಂಧಕೃಪಣಾದಿಭ್ಯೋ ದತ್ವಾ ಭೋಜನಮುತ್ತಮಮ್ ।
ತತಃ ಸ್ವಯಂ ಹಿ ಭುಂಜೀತ ಸ್ವಜನೈರ್ಬಂಧುಭಿಸ್ಸಹ ॥ ೪೩ ॥
ಇದಂ ವ್ರತಂ ಮಹಾಪುಣ್ಯಂ ಸರ್ವಕಾಮಪ್ರಪೂರಕಮ್ ।
ವಿಷ್ಣುಪ್ರಸಾದಜನಕಂ ಸರ್ವದುಃಖವಿನಾಶಕಮ್ ॥ ೪೪ ॥
ಕುರ್ವನ್ ವ್ರತಮಿದಂ ಭಕ್ತ್ಯಾ ನಾರೀ ವಾ ಪುರುಷೋಽಪಿ ವಾ ।
ಸರ್ವಪಾಪವಿನಿರ್ಮುಕ್ತೋ ವೈಕುಂಠಭವನಂ ವ್ರಜೇತ್ ॥ ೪೫ ॥
ಇದಂ ವ್ರತಂ ಪ್ರಯಾಗೇ ಚೇದ್ವಟೇಽತೋದ್ಯಾಪನಾಚಿತಮ್ ।
ತದಾ ತತ್ಕೋಟಿಗುಣಿತಂ ಫಲಂ ಯಚ್ಛತಿ ನಿಶ್ಚಿತಮ್ ॥ ೪೬ ॥

॥ ಇತಿ ಏಕಾದಶೋಽಧ್ಯಾಯಃ ॥

**ಸೂತರು ಹೇಳಿದರು—**

ಲಕ್ಷಪುಷ್ಪಾರ್ಚನೆ ಮುಂತಾದವುಗಳ ವಿಧಿ ಉದ್ಯಾಪನೆಗಳ ವಿಧಾನವನ್ನು ಹೇಳುತ್ತೇನೆ; ಕುಶಲರಾದ ನೀವು ಗಮನವಿಟ್ಟು ಕೇಳಿರಿ. ॥ ೧೫ ॥ ಸಂಸ್ಕಾರದಿಂದ ಸಂಸ್ಕೃತವಾದ, ಯಾರೂ ತುಳಿಯದಿರುವ, ಓಡಾಡದಿರುವ ನಿರ್ಮಲ ಶುದ್ಧ ಸ್ಥಳದಲ್ಲಿ ಮೊದಲು ಗಣೇಶಪೂಜಾ ಮಾಡಿ ನಂತರ ಭೂಮಿ, ವರಾಹದೇವರು, ತ್ವಷ್ಟ್ರ ಇವರುಗಳನ್ನು ಪೂಜಿಸಿ ಎಲ್ಲ ಸಾಧನಗಳನ್ನು ಸಿದ್ಧಪಡಿಸಿಕೊಂಡು ಪೂಜಾ ಪ್ರಾರಂಭಿಸಬೇಕು. ಒಳ್ಳೆಯ ಮಂಟಪವನ್ನು ಇಟ್ಟು ಅದನ್ನು ಹೂ, ಹಣ್ಣು, ಪತ್ರೆಗಳು, ಬಾಳೆಕಂಭ ಇವುಗಳಿಂದ ಅಲಂಕರಿಸಿ, ಹೂವಿನ ಹಾರಗಳನ್ನು ಮಂಟಪಕ್ಕೆ ಹಾಕಬೇಕು. ಮಂಟಪದ ಒಳಗೆ ಮಂಗಳಕರವಾದ ಪೀಠವನ್ನು ಮಾಡಬೇಕು. ಈ ಪೀಠವು ಸಮತಲವುಳ್ಳದ್ದಾಗಿದ್ದು ಪಳಪಳ ಹೊಳೆಯುತ್ತಿದ್ದು ಎಂಟು ಮೊಳ ಉದ್ದ ಅಗಲದಿಂದ ಕೂಡಿದ್ದು ಚಚ್ಚೌಕವಾಗಿರಬೇಕು. ॥ ೧೬-೧೮ ॥ ಈ ಪೂಜೆಗೋಸ್ಕರ ಆಚಾರ್ಯರನ್ನು ಆಹ್ವಾನಿಸಿ, ಪೂಜೆ ಮಾಡಿ ಕರೆತರಬೇಕು. ಮಂಟಪದ ಪಶ್ಚಿಮದಿಗ್ಭಾಗದಲ್ಲಿ ಪೂಜಿತರಾದ ಆಚಾರ್ಯರುಗಳಿಂದ ಪುಣ್ಯಾಹವಾಚನಕಾರ್ಯಗಳನ್ನು ಮಾಡಿಸಬೇಕು. ಆಚಾರ್ಯರುಗಳನ್ನು ಮಂಗಳ ಕಾರ್ಯಕ್ಕಾಗಿ ಪ್ರಾರ್ಥಿಸಬೇಕು. ॥ ೧೯ ॥ ಹಾಡುವುದು, ವಾದ್ಯ ನುಡಿಸುವುದು, ವೇದಘೋಷಗಳಿಂದ ಈ ಮಂಟಪವನ್ನು ಪ್ರವೇಶಿಸಿ ರಾತ್ರಿಯೆಲ್ಲಾ ಜಾಗರಣೆ ಮಾಡಿ ಭಗವತ್ಕಥಾಶ್ರವಣ, ಪಾರಾಯಣ, ದೇವರನಾಮ ಸಂಕೀರ್ತನೆ ಇತ್ಯಾದಿ ಹವ್ಯಾಸಗಳಿಂದ ಕಾಲ ಕಳೆಯಬೇಕು. ॥ ೨೦ ॥ ಪೀಠದಲ್ಲಿ ಬಣ್ಣಬಣ್ಣದ ಸ್ವಸ್ತಿಕವನ್ನು ಬರೆಸಬೇಕು. ಇಂತಹ ಪೀಠದ ಮಧ್ಯೆ ಕಮಲದ ಹೂವಿನ ದಳಗಳಿಂದ ಶ್ವೇತದ್ವೀಪವನ್ನು ಬರೆಯಬೇಕು. ॥ ೨೧ ॥ ಇದರ ಮೇಲೆ ತಾಮ್ರದ ಕಳಶವನ್ನು ಇಡಬೇಕು. (ಈ ಕಳಶವು ಹೊಸದಾಗಿದ್ದರೆ ಒಳ್ಳೆಯದು) ಈ ಕಳಶದಲ್ಲಿ ಐದು ಬಗೆಯ ಚಿಗುರುಗಳನ್ನು ಹಾಕಬೇಕು. (ಕುಂಕುಮ, ಅರಿಶಿನ, ಸುಣ್ಣ, ಖರ್ಜೂರ, ಬಟ್ಟಡಿಕೆ, ಶ್ರೀಲಕ್ಷ್ಮೀನಾರಾಯಣರ ಪ್ರತಿಮಾ, ತುಳಸೀದಳ ಮತ್ತು ಹೂವು ಇವುಗಳನ್ನು ಹಾಕಬೇಕು.) ಇದನ್ನು ಹೂವಿನ ಹಾರ ಹಾಗೂ ಚಂದನದಿಂದ ಅಲಂಕರಿಸಬೇಕು. ॥ ೨೨ ॥ ಈ ಕಳಶದ ಮೇಲೆ ತಾಮ್ರದ ಅಥವಾ ಬಿದರಿನ ತಟ್ಟೆಯನ್ನು ಇಡಬೇಕು. ಕುಂಕುಮದಿಂದ ಅಷ್ಟದಳ ಪದ್ಮವನ್ನು ಬರೆದಿರತಕ್ಕ ಹೊಸ ವಸ್ತ್ರವನ್ನು ಇಡಬೇಕು. ॥ ೨೩ ॥ ಅಗ್ನ್ಯುತ್ತಾರಣಮಂತ್ರದಿಂದ ಜಗತ್ತಿಗೆ ಸ್ವಾಮಿಯಾದ ಶ್ರೀಮಾಧವದೇವರ ಬಂಗಾರದ ಪ್ರತಿಮೆಯನ್ನು ಈ ಕಳಶದ ಮೇಲೆ ಇಡಬೇಕು. ॥ ೨೪ ॥ ಪಂಚಾಮೃತಾದಿ

ಅಭಿಷೇಕಗಳಿಂದ ಈ ಕಳಶಸ್ಥ ಮಾಧವನ ಪೂಜೆ ಮಾಡಬೇಕು. ಧೂಪ, ದೀಪ, ನೈವೇದ್ಯ, ಫಲಸಮರ್ಪಣೆ, ತಾಂಬೂಲ, ಮಂಗಳಾರತಿಗಳು ಮುಂತಾದ ಹದಿನಾರು(ಷೋಡಶ) ಪೂಜಾ-ಗಳನ್ನು ಸಲ್ಲಿಸಬೇಕು. ।। ೨೫ ।। ವೇದಘೋಷ, ಶಾಸ್ತ್ರವಿಚಾರ, ಪುರಾಣಗಳ ಪಠನ, ಗೀತ, ವಾದ್ಯ, ನರ್ತನ ಮತ್ತು ಸ್ತೋತ್ರಪಠನ ಮತ್ತು ನಮಸ್ಕಾರ ಇವುಗಳನ್ನೆಲ್ಲಾ ಒಪ್ಪಿಸುತ್ತಾ ಮೂರು ರಾತ್ರಿಗಳನ್ನು ಕಳೆಯಬೇಕು. ।। ೨೬ ।। ಮರು ದಿವಸವೂ ಬೆಳಗ್ಗೆ ಸ್ನಾನ ಮಾಡಿ, ನಿತ್ಯಕರ್ಮಾನುಷ್ಠಾನಗಳನ್ನು ಮುಗಿಸಿ, ಅಕ್ಕಿಹಿಟ್ಟಿನ ಮೇಲೆ ಅಗ್ನಿಯನ್ನು ಪ್ರತಿಷ್ಠಾಪಿಸಿ ತಮ್ಮ ವೇದಶಾಖೆಗಳಿಗನುಸಾರವಾಗಿ ಮೂಲಮಂತ್ರದಿಂದಲೂ, ಗಾಯತ್ರೀಮಂತ್ರದಿಂದಲೂ ಆಯಾ ನಾಮಗಳ ಸಹಸ್ರಸಂಖ್ಯೆ-ಗಳಿಂದ ಕರಿ ಎಳ್ಳು, ಆಕಳ ತುಪ್ಪ ಮತ್ತು ಅನ್ನ ಇವುಗಳಿಂದ ಕ್ರಮವಾಗಿ ಅಗ್ನಿಯಲ್ಲಿ ಹೋಮ ಮಾಡಬೇಕು. ।। ೨೭-೨೮ ।। ಯಾವ ಮಂತ್ರದಿಂದ ಪೂಜೆಯನ್ನು ಮಾಡಿರುತ್ತೀರೋ ಅದೇ ಮಂತ್ರದಿಂದ ಸಾವಿರದ ಎಂಟು ಸಲ ಹವನ ಮಾಡಬೇಕು. ಇದು ಪ್ರಮಾಣ ಸಿದ್ಧ. ।। ೨೯ ।। ಆಚಾರ್ಯರು ತಾವೇ ಆಗಲಿ ಅಥವಾ ಅನ್ಯಾನ್ಯ ಆಚಾರ್ಯರ ಮೂಲಕವಾಗಲಿ ಮೇಲೆ ಹೇಳಿದ ಹವನ ಮಾಡಿದ ಸಂಖ್ಯೆಯ ಹತ್ತನೇ ಒಂದು ಭಾಗದ ಸಂಖ್ಯೆಗಳಷ್ಟು ತರ್ಪಣ ಮಾಡಿ ಅಥವಾ ಮಾಡಿಸಿ ಅನಂತರ ಪೂಜಾಮಂತ್ರಗಳಲ್ಲಿ ಯಾವುದಾದರೊಂದು ಮಂತ್ರದಿಂದ ಹವನ ಮಾಡಬೇಕು. ।। ೩೦ ।। ನಾಲ್ಕು ಮಂದಿ ಋತ್ವಿಜರನ್ನು ನಿಯಮಿಸಬೇಕು. ಅವರೆಲ್ಲರೂ ಸಮರ್ಥರಾಗಿದ್ದು ವೇದವಾದಿಗಳೂ ಶಾಸ್ತ್ರಜ್ಞರೂ ಆಗಿರಬೇಕು. ಪ್ರಧಾನಕಳಶದ ಸಮೀಪ ಸಹಸ್ರನಾಮವನ್ನು ಪಠಿಸಲು ಬೇರೊಬ್ಬರನ್ನು ನೇಮಿಸಬೇಕು. ।। ೩೧ ।। ಅನಂತರ ಸ್ವಿಷ್ಟಕೃತ್ ಹೋಮವನ್ನು ಆಚರಿಸಿ ಪೂರ್ಣಾಹುತಿಯನ್ನು ಕೊಡಬೇಕು. ಆಚಾರ್ಯರನ್ನೂ ಮತ್ತು ಋತ್ವಿಜರನ್ನೂ ಪೂಜಿಸಿ ಅವರಿಗೆಲ್ಲ ದಕ್ಷಿಣಾದಿಗಳನ್ನು ಕೊಡಬೇಕು. ।। ೩೨ ।। ಅವರೆಲ್ಲರನ್ನೂ ಧೋತ್ರಅಲಂಕಾರಗಳಿಂದ, ಆಭರಣಗಳಿಂದ ಅಲಂಕರಿಸಿ ಅವರಿಗೆ ಹಾಲು ಕರೆಯುವ, ಕರುವುಳ್ಳ ಆಕಳುಗಳನ್ನು ದಾನ ಮಾಡಬೇಕು. ಅವರವರು ಅರ್ಚಿಸಿರುವ ಕಳಶಗಳನ್ನು ವಸ್ತ್ರ ಮತ್ತು ಪ್ರತಿಮಾ ಸಹಿತ, ಅವುಗಳನ್ನಿಟ್ಟಿರುವ ಅಕ್ಕಿರಾಶಿಯೊಡನೆ ಅವರವರಿಗೇನೇ ದಾನ ಮಾಡಬೇಕು. ಪ್ರತಿಮೆ-ಯನ್ನು ಸದಾಚಾರಸಂಪನ್ನರಾದ ತಮ್ಮ ಗುರುಗಳಿಗೆ ಸಮರ್ಪಣ ಮಾಡಬೇಕು. ತುಳಸೀ ತೆನೆಗಳನ್ನು ಪೂಜಿಸಬೇಕಾದ ಪ್ರಸಂಗ ಬಂದರೆ ಅವುಗಳ ದಳಗಳ ಸಹಿತ ಪೂಜಿಸಬೇಕು. ಇದೇ ವಿಶೇಷವಾದ ವಿಧಿಯು. ಹೀಗೆ ನಿಶ್ಚಿತವಾಗಿದೆ. ।। ೩೩-೩೫ ।। ಪಂಚಕಜ್ಜಾಯ, ತುಪ್ಪ, ಮುತ್ತುಗದ ಸಮಿತ್ತು (ಪಾಲಾಶ) ಮತ್ತು ಚರು (ಅನ್ನ) ಇವುಗಳಿಂದಲೇ ಈ ಹವನ ಮಾಡಬೇಕು. ಸಮರ್ಪಣ-ಮಂತ್ರದಿಂದ ತರ್ಪಣಾನಂತರ ಹೋಮ ಮಾಡಬೇಕು. ।। ೩೬ ।। ಬೆಳ್ಳಿಯ ಬೃಂದಾವನವನ್ನೂ ಎಲೆಗಳುಳ್ಳ ತುಳಸ್ಯಾದಿಗಳ ಬಂಗಾರದ ತೆನೆಗಳನ್ನೂ ಮಾಡಿಸಿ ಆಚಾರ್ಯರಿಗೆ ಯಥಾಶಕ್ತಿ ದಕ್ಷಿಣೆಯೊಡನೆ ದಾನ ಮಾಡಬೇಕು. ।। ೩೭ ।। ಬಿಲ್ವಪತ್ರದಿಂದ ಶ್ರೀಮಾಧವನಿಗೆ ಲಕ್ಷ ಪೂಜೆಯನ್ನು ಮಾಡಿದ್ದರೆ ಆಗ ಬಂಗಾರದಲ್ಲಿ ಬಿಲ್ವಪತ್ರಗಳನ್ನು ಮಾಡಿಸಿ, ಧನಶಕ್ತಿಯಿಲ್ಲದಿದ್ದರೆ ಬೆಳ್ಳಿಯಿಂದಲಾದರೂ ಬಿಲ್ವಪತ್ರೆಗಳನ್ನು ಮಾಡಿಸಿ ದಕ್ಷಿಣೆ ಸಹಿತ ಬ್ರಾಹ್ಮಣರಿಗೆ ದಾನ ಕೊಡಬೇಕು. ।। ೩೮ ।। ಎಲ್ಲ ಕಾರ್ಯಗಳನ್ನೂ ಮನಸ್ಸಿಟ್ಟು ಮಾಡಬೇಕು. ಏಕೆಂದರೆ, ಸಂಸಾರ ಬಂಧನಕ್ಕಾಗಲೀ, ಅದರ ವಿಮೋಚನೆಗಾಗಲೀ, ಮನಸ್ಸೇ ಕಾರಣವು. ಮನಸ್ಸಿಲ್ಲದೆ ಮಾಡಿದ ಕಾರ್ಯ ಮಾಡದಿದ್ದಂತೆಯೇ ಸರಿ. ।। ೩೯ ।। ಹೋಮದ ಶೇಷವನ್ನು ಸಮಾಪ್ತಿಗೊಳಿಸಿ, ಅನಂತರ ನೂರು ಬ್ರಾಹ್ಮಣ-ಸುವಾಸಿನಿಯರ ಭೋಜನ ಮಾಡಿಸಬೇಕು. ಸಾಮರ್ಥ್ಯವಿಲ್ಲದಿದ್ದರೆ ಅದರ ಅರ್ಧ

(ಐವತ್ತು) ಅಥವಾ ಅದರ ಅರ್ಧ (ಇಪ್ಪತ್ತೈದು) ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ಸಾಮರ್ಥ್ಯವಿದ್ದರೆ ಎರಡು, ಮೂರು, ನಾಲ್ಕುಪಟ್ಟು (ಅಂದರೆ ಇನ್ನೂರು, ಮುನ್ನೂರು, ನಾನೂರು) ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ॥ ೪೦ ॥ ಕೊನೆಗೆ ಕೈಮುಗಿದು ನಿಂತು ಸಪತ್ನೀಕನಾಗಿ ಶ್ರೀಮಾಧವದೇವರನ್ನು ಕುರಿತು ''ಶ್ರೀಮಾಧವ, ದಯಾಸಮುದ್ರ ! ನನ್ನಿಂದ ಆಚರಿಸಲ್ಪಟ್ಟ ಈ ಲಕ್ಷ ಪುಷ್ಪಾರ್ಚನೆಯೆಂಬ ವ್ರತವನ್ನು ಸ್ವೀಕಾರ ಮಾಡಿ ನನ್ನ ಅಭೀಷ್ಟಗಳನ್ನು ದಯಪಾಲಿಸು'' ಎಂದು ನಿವೇದಿಸಿ, ಸಮರ್ಪಣೆ ಮಾಡಬೇಕು. ನಂತರ ಹೋಮ ಮಾಡಿದ ಭಸ್ಮವನ್ನು ತೆಗೆದುಕೊಂಡು ಎಲ್ಲ ಅಂಗಗಳಿಗೂ ಹಚ್ಚಿಕೊಳ್ಳಬೇಕು. ॥ ೪೧-೪೨ ॥ ದೀನರು, ದರಿದ್ರರು, ಕುರುಡರು ಮತ್ತು ಅನ್ನಕ್ಕಾಗಿ ಹಾತೊರೆಯುತ್ತಿರುವರಿಗೂ ಉತ್ತಮವಾದ ಭೋಜನವನ್ನು ಮಾಡಿಸಿ ಅನಂತರ ಬಂಧು ಬಾಂಧವರು, ಇಷ್ಟರು ಮತ್ತು ಮಿತ್ರರೊಡನೆ ತಾನೂ ಭೋಜನ ಮಾಡತಕ್ಕದ್ದು. ॥ ೪೩ ॥ ಈ ವ್ರತವು ಮಹಾಪುಣ್ಯಕರವು, ಎಲ್ಲ ಅಭೀಷ್ಟಗಳನ್ನೂ ಕೊಡತಕ್ಕದ್ದು, ಶ್ರೀಮಹಾವಿಷ್ಣುವಿನ ಅನುಗ್ರಹವನ್ನು ತಂದುಕೊಡತಕ್ಕದ್ದು ಮತ್ತು ಎಲ್ಲ ಬಗೆಯ ದುಃಖಗಳನ್ನು ನಿವಾರಿಸತಕ್ಕದ್ದು. ಗಂಡಸಾಗಲಿ, ಸ್ತ್ರೀಯರಾಗಲಿ ಈ ವ್ರತವನ್ನು ಆಚರಿಸಿದರೆ ಎಲ್ಲ ಪಾಪಗಳಿಂದ ವಿಮೋಚನೆ ಹೊಂದಿ ವೈಕುಂಠಲೋಕವನ್ನು ಹೊಂದುವರು. ॥ ೪೪-೪೫ ॥ ಈ ವ್ರತವನ್ನು ಪ್ರಯಾಗದಲ್ಲಿ, ಅದರಲ್ಲಿಯೂ ಅಕ್ಷಯವಟವೃಕ್ಷದ ಸನ್ನಿಧಾನದಲ್ಲಿ ಆಚರಿಸಿದರೆ, ಉದ್ಯಾಪನೆಯನ್ನೂ ಅಲ್ಲಿಯೇ ಆಚರಿಸಿದರೆ ಬೇರೆಡೆಯಲ್ಲಿ ಮಾಡಿದುದಕ್ಕಿಂತ ಕೋಟಿಯಷ್ಟು ಹೆಚ್ಚಿಗೆ ಫಲ ಬರುವುದು. ಇದು ನಿಶ್ಚಯವು. ॥ ೪೬ ॥

॥ ಹನ್ನೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಾದಶೋಽಧ್ಯಾಯಃ ॥ ೧೨ ॥

ಸೂತ ಉವಾಚ—

ಅಥಾನ್ಯದಪಿ ವಕ್ಷ್ಯಾಮಿ ಪ್ರಸಂಗಸ್ಮಾರಿತಂ ವಚಃ ।
ಶೃಣ್ವಂತು ಮುನಯಸ್ಸರ್ವೇ ಶ್ರುತಾರ್ಥೋ ಯಾತಿ ಪುಣ್ಯತಾಮ್ ॥ ೧ ॥
ಲಕ್ಷಂ ಪ್ರದಕ್ಷಿಣಾಃ ಕಾರ್ಯಾಃ ನಮಸ್ಕಾರಾಸ್ತಥೈವ ಚ ।
ತಥಾ ದೀಪಾಃ ಪ್ರದಾತವ್ಯಾಃ ಲಕ್ಷಂ ಮಾಧವತುಷ್ಟಯೇ ॥ ೨ ॥
ಕಾರ್ತಿಕೇ ಮಾಘಮಾಸೇ ವಾ ವೈಶಾಖೇಽಥ ಯಥಾವಿಧಿ ।
ವ್ರತತ್ರಯಮಿದಂ ಭಕ್ತ್ಯಾ ಸಮಾಪ್ಯ ಮುನಿಪುಂಗವಾಃ ॥ ೩ ॥
ಯಸ್ಮಿನ್ಮಾಸೇ ಸಮಾಪ್ತಿಸ್ಸ್ಯಾತ್ತಸ್ಮಾನ್ಮಾಸದ್ವಯಂ ಪುರಾ ।
ಪ್ರಾರಭೇಚ್ಛುಭದೇ ಮಾಸೇ ಪೌರ್ಣಮಾಸ್ಯಾಂ ಸಮಾಪಯೇತ್ ॥ ೪ ॥
ಸ್ಯಾತಾಮಾರಂಭಪರ್ಯಾಪ್ತೀ ಮಾಸಮಾತ್ರೇಽಪಿ ಚೇದಿಹ ।
ಯಥಾವಕಾಶಮಥವಾ ಕುರ್ಯಾನ್ನ ನಿಯತೈರ್ದಿನೈಃ ॥ ೫ ॥
ಸಕಾಮೋ ವಾಥ ನಿಷ್ಕಾಮೋ ನಾರೀ ವಾ ಪುರುಷೋಽಪಿ ವಾ ।
ಕೃತನಿತ್ಯಕ್ರಿಯಃ ಕುರ್ಯಾದಾಮಧ್ಯಾಹ್ನಂ ಸದಾ ಮುನಿಃ ॥ ೬ ॥
ಹಿತಮೇಧ್ಯಂ ಚ ಭುಂಜೀತ ಕುರ್ವೀತ ಲಘುಭೋಜನಮ್ ।
ಅನೃತಂ ನ ವದೇತ್ಸ್ವಾಪಿ ನ ಚ ಧ್ಯಾಯೇದಮಂಗಲಮ್ ॥ ೭ ॥
ದೇವತಾರ್ಚಾಂ ಜಪಂ ಹೋಮಂ ನ ತ್ಯಜೇಚ್ಚ ಕಥಂಚನ ।
ಅತಿಥಿಂ ಪೂಜಯೇನ್ನಿತ್ಯಂ ಯಥಾಶಕ್ತ್ಯಾ ಫಲಾದಿಭಿಃ ॥ ೮ ॥
ಗೋವಿಪ್ರಸೇವನಂ ಕುರ್ವಂಸ್ತದ್ವ್ರತತ್ರಿತಯೇಽಪಿ ಚ ।
ಸಹಸ್ರಂ ಪ್ರತ್ಯಹಂ ಕುರ್ಯಾನ್ಮುಖ್ಯಃ ಕಲ್ಪೋಽಯಮೀರಿತಃ ॥ ೯ ॥
ಅಥವಾ ಮಾಸಮಾತ್ರೇಣ ಲಕ್ಷಪೂರ್ತಿಂ ವ್ರತೀ ಚರೇತ್ ।
ಯದಾ ಸ್ವಶಕ್ತ್ಯಾ ಕುರ್ವೀತ ಪುಣ್ಯಮಾಸೇ ವಿಶೇಷತಃ ॥ ೧೦ ॥
ಸಹಸ್ರಗುಣಿತಂ ಧತ್ತೇ ವ್ರತಮೇತತ್ತು ಕಾರ್ತಿಕೇ ।
ತಸ್ಮಾತ್ಕೋಟಿಗುಣಂ ಧತ್ತೇ ಮಾಘಮಾಸ ಇದಂ ವ್ರತಮ್ ॥ ೧೧ ॥
ತಸ್ಮಾತ್ಕೋಟಿಗುಣಂ ಧತ್ತೇ ವೈಶಾಖೇ ತದ್ವ್ರತಂ ಫಲಮ್ ।
ತಸ್ಮಾದನಂತಫಲದಂ ಪ್ರಯಾಗೇ ತಪಸಿ ವ್ರತಮ್ ॥ ೧೨ ॥
ದೇವತಾಂ ಮನಸಿ ಧ್ಯಾಯನ್ಗರ್ಭಿಣೀಗತಿವಚ್ಚರನ್ ।
ಸ್ತುವನ್ವಾಚಾ ನಮನ್ಭಕ್ತ್ಯಾ ಗಣಯನ್ಮಾಲಯಾ ಕರೇ ॥ ೧೩ ॥
ಪಶ್ಯನ್ಭಗವತೋ ರೂಪಂ ದಿಶಶ್ಚಾನವಲೋಕಯನ್ ।
ಶುಚಿಸ್ಸಮಾಹಿತೋ ಭೂತ್ವಾ ವಿದಧೀತ ಪ್ರದಕ್ಷಿಣಮ್ ॥ ೧೪ ॥

ಅನೇನೈವ ಪ್ರಕಾರೇಣ ದೇವಸ್ಯ ಪುರತಃ ಸ್ಥಿತಃ ।
ಅಷ್ಟಾಂಗಸಹಿತಾನ್ಭಕ್ತ್ಯಾ ನಮಸ್ಕಾರಾನ್ಪ್ರಕಲ್ಪಯೇತ್ ॥ ೧೫ ॥
ವಚಸಾ ಮನಸಾ ದೃಷ್ಟ್ಯಾ ಶಿರಸಾ ಉರಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ ೧೬ ॥
ಸದ್ವರ್ತಿಘೃತಪಾತ್ರಾದಿಪುರಸ್ಕಾರಪ್ರಕಲ್ಪಿತಾನ್ ।
ದೀಪಾನ್ದದ್ಯಾದ್ಧರೇರಗ್ರೇ ಸಹಸ್ರಂ ಪ್ರತಿವಾಸರೇ ॥ ೧೭ ॥
ನಿರ್ಣೀತಂ ಸರ್ಪಿಷಾ ಶ್ರೇಷ್ಠಂ ಮಧ್ಯಮಂ ತಿಲತೈಲತಃ ।
ಅನ್ಯೈರ್ನಾನಾವಿಧೈಸ್ತೈಲೈರ್ನ್ಯೂನಂ ದೀಪನಿವೇದನಮ್ ॥ ೧೮ ॥
ಕಾರ್ತಿಕೇ ಮಾಘಮಾಸೇ ವಾ ವೈಶಾಖೇ ಚ ಪ್ರದೀಪದಃ ।
ಯದ್ಯತ್ಫಲಮವಾಪ್ನೋತಿ ಶೃಣುಧ್ವಂ ತದ್ಯಥೋತ್ತರಮ್ ॥ ೧೯ ॥
ಯೋ ದೀಪಮಾಲಾಂ ಕುರುತೇ ಕಾರ್ತಿಕ್ಯಾಂ ಶ್ರದ್ಧಯಾನ್ವಿತಃ ।
ಯಾವತ್ಸೋಮಾರ್ಕಬಿಂಬೇ ಸ್ತಃ ತಾವತ್ಸ್ವರ್ಗೇ ಸುಖೀ ಭವೇತ್ ॥ ೨೦ ॥
ಮಾಘಮಾಸೇ ಯಥಾ ಶಕ್ತ್ಯಾ ದೀಪಮಾಲಾಕೃತಾಂ ನೃಣಾಮ್ ।
ವೈಕುಂಠಭವನೇ ವಾಸೋ ಜಾಯತೇ ಬಹುವಾಸರಮ್ ॥ ೨೧ ॥
ವೈಶಾಖೇ ದೀಪದಾತೄಣಾಂ ಶತಕ್ರತುಪದೇ ಶುಭೇ ।
ಅನೇಕಭೋಗಸಂಪ್ರಾಪ್ತಿರ್ಜಾಯತೇ ನಾತ್ರ ಸಂಶಯಃ ॥ ೨೨ ॥
ಪ್ರಯಾಗೇ ಲಕ್ಷದೀಪಾನ್ಯೋ ದದಾತಿ ಹರಿಮಂದಿರೇ ।
ಮಾಘಮಾಸೇ ವಿಶೇಷೇಣ ಗಂಗಾತೀರೇ ಮನೋರಮೇ ॥ ೨೩ ॥
ಶಕ್ತ್ಯಾ ಕೋಟಿಮಿತಾನ್ಕುರ್ಯಾಲ್ಲಕ್ಷಸಂಖ್ಯಾಯುತೋಽಪಿ ವಾ ।
ಸಹಸ್ರಸಂಮಿತಾನ್ದೀಪಾನಶಕ್ತೌ ಶತಮೇವ ಚ ॥ ೨೪ ॥
ಅತಸೀತೈಲಸಂಭೂತಾನ್ದೀಪಾನ್ದತ್ವಾ ಹರೇರ್ಗೃಹೇ ।
ದಶಪೂರ್ವಾನ್ ದಶಪರಾನ್ಪಿತೄನುದ್ಧರತೇ ನರಃ ॥ ೨೫ ॥
ಸ್ವಸ್ಯಾತ್ಯಂತಮಸಾಮರ್ಥ್ಯೇ ಕರಣಾಪಾಟವಾದಿನಾ ।
ವಿದಧೀತ ದ್ವಿಜದ್ವಾರಾ ಹ್ಯಖಿಲಂ ಸಾವಧಾನತಃ ॥ ೨೬ ॥
ದಾರಿದ್ರ್ಯಾಂಬುಧಿನಿರ್ಮಗ್ನೋ ಭಕ್ತಿಮಾನನುತಾಪಕೃತ್ ।
ಪರದೀಪಪ್ರಬೋಧೇನ ತತ್ಫಲಂ ಸಮವಾಪ್ನುಯಾತ್ ॥ ೨೭ ॥
ಕರ್ಪೂರದೀಪದಾನೇನ ದೀಪ್ತಿಮಾನ್ಜಾಯತೇ ನರಃ ।
ಇಹ ಲೋಕೇ ಪರೇ ಚಾಪಿ ಪರಂ ಸೌಖ್ಯಂ ಚ ವಿಂದತಿ ॥ ೨೮ ॥
ಶ್ರೀಮಾಧವಾಲಯೇ ಭಕ್ತ್ಯಾ ದಶಾಂಗಾಗುರುಕೌಶಿಕೈಃ ।
ಧೂಪಯನ್ಧೂತಪಾಪೌಘೋ ಮಾಧವಪ್ರಿಯಕೃದ್ಭವೇತ್ ॥ ೨೯ ॥

ಶಾರದೇಂದುಪ್ರತೀಕಾಶಂ ಮುಕ್ತಾದಾಮವಿಭೂಷಿತಮ್ ।
ಬಧ್ನನ್ದೇವಾಲಯೇ ಮರ್ತ್ಯೋ ವಿತಾನಂ ವಿಧಿಲೋಕಗಃ ॥ ೩೦ ॥
ಕೌಶೇಯಕ್ಷೌಮವಾಸೋಭಿರ್ಯಥಾಶಕ್ತಿ ವಿನಿರ್ಮಿತಮ್ ।
ಧ್ವಜಂ ಚ ಕಲಶೋಪೇತಂ ದತ್ವಾ ವೇಣ್ಯಾಂ ನ ಸೀದತಿ ॥ ೩೧ ॥
ಏವಂವಿಧಾನಿ ಕರ್ಮಾಣಿ ಪ್ರಯಾಗೇ ಕುರ್ವತಾಂ ನೃಣಾಮ್ ।
ಇಹಲೋಕೇ ಸುಖಾವಾಪ್ತಿಃ ಪರತ್ರಾಪಿ ನ ಸಂಶಯಃ ॥ ೩೨ ॥
ಪ್ರದಕ್ಷಿಣನಮಸ್ಕಾರದೀಪಾನಾಂ ವೈ ಸಮಾಪನೇ ।
ಪ್ರಾಗೇವ ವ್ರತಸಂಪೂರ್ತ್ಯೈ ಕುರ್ಯಾದುದ್ಯಾಪನಂ ಸುಧೀಃ ॥ ೩೩ ॥
ನಿತ್ಯಕೃತ್ಯಮನುಷ್ಠಾಯ ಸಂಪೂಜ್ಯ ಚ ಗಜಾನನಮ್ ।
ಪ್ರತಿಮಾಸ್ಥಾಪನಂ ಪೂಜಾಂ ರಾತ್ರೌ ಜಾಗರಣಾದಿಕಮ್ ॥ ೩೪ ॥
ತರ್ಪಯಿತ್ವಾ ದಶಾಂಶೇನ ಪ್ರತಿಷ್ಠಾಪ್ಯ ಹುತಾಶನಮ್ ।
ಜುಹುಯಾತ್ತೇನ ಮಂತ್ರೇಣ ಸಹಸ್ರಂ ಪಾಯಸಾಹುತಿಮ್ ॥ ೩೫ ॥
ಹೋಮಶೇಷಂ ಸಮಾಪ್ಯಂ ಸ್ಯಾತ್ತತಃ ಸ್ವಿಷ್ಟಕೃದಾದಿಕಮ್ ।
ಕಪಿಲಾಂ ಗಾಂ ತತೋ ದದ್ಯಾದಾಚಾರ್ಯಾಯ ಸದಕ್ಷಿಣಾಮ್ ॥ ೩೬ ॥
ಪ್ರದಕ್ಷಿಣೋದ್ಯಾಪನೇಽಯಂ ವಿಶೇಷಃ ಪರಿಕೀರ್ತಿತಃ ।
ನಮಸ್ಕಾರೋದ್ಯಾಪನೇಽಥ ವಿಶೇಷಃ ಶ್ರೂಯತಾಂ ದ್ವಿಜಃ ॥ ೩೭ ॥
ಸಂಕಲ್ಪ್ಯ ಪೂಜನಂ ರಾತ್ರಾವತೋ ದೇವೇತಿ ಸೂಕ್ತತಃ ।
ನಾಮಭಿಃ ಕೇಶವಾದ್ಯೈಶ್ಚ ಹ್ಯಂಗಪೂಜಾ ವಿಧೀಯತೇ ॥ ೩೮ ॥
ನೈವೇದ್ಯಾಂತಂ ಸಮಭ್ಯರ್ಚ್ಯ ಪಶ್ಚಾತ್ಕುರ್ಯಾಚ್ಚ ತರ್ಪಣಮ್ ।
ನಮಸ್ಕಾರದಶಾಂಶೇನ ಹವನಂ ತದ್ದಶಾಂಶತಃ ॥ ೩೯ ॥
ಶಂಖಪೂರಿತತೋಯೇನ ತಿಲಗೋಧೂಮತಂಡುಲೈಃ ।
ಗಂಧಪುಷ್ಪಾಕ್ಷತಾದ್ಯೈಶ್ಚ ವಿಷ್ಣವೇಽರ್ಘ್ಯಂ ನಿವೇದಯೇತ್ ॥ ೪೦ ॥
ದೇವದೇವ ಜಗನ್ನಾಥ ಸರ್ವವ್ರತಫಲಪ್ರದ ।
ವ್ರತೇನಾನೇನ ಸುಪ್ರೀತೋ ಗೃಹಾಣಾರ್ಘ್ಯಂ ಸಮರ್ಪಿತಮ್ ॥ ೪೧ ॥
ಸಂಪೂಜ್ಯ ಜಾಗರಂ ಕೃತ್ವಾ ಪ್ರಾತಃ ಸ್ನಾತ್ವಾ ಯಥಾವಿಧಿ ।
ಪ್ರತಿಷ್ಠಾಪ್ಯಾನಲಂ ಸಮ್ಯಗಾಚಾರ್ಯೇಣ ಯಥಾಕ್ರಮಮ್ ॥ ೪೨ ॥
ಸಮಿಚ್ಚರುತಿಲವ್ರೀಹೀನ್ ಪ್ಲುತಾನ್ ಗವ್ಯೇನ ಸರ್ಪಿಷಾ ।
ತತಃ ಪೌರುಷಸೂಕ್ತೇನ ಸಮಾಹೃತ್ಯ ದ್ವಿಜೈರ್ಹುವೇತ್ ॥ ೪೩ ॥
ಹೋಮಶೇಷಂ ಸಮಾಪ್ಯಾಥ ಪೂರ್ಣಾಹುತಿಪುರಸ್ಸರಮ್ ।
ಆಚಾರ್ಯಂ ಪೂಜಯೇದ್ಭಕ್ತ್ಯಾ ದದ್ಯಾದ್ಗೋಮಿಥುನಂ ತತಃ ॥ ೪೪ ॥

ನಮಸ್ಕಾರವಿಸರ್ಗೇಽಸೌ ವಿಶೇಷಃ ಪರಿಕೀರ್ತಿತಃ ।
ಲಕ್ಷದೀಪವಿಸರ್ಗೇ ಸ ವಿಶೇಷಃ ಪರಿಕೀರ್ತ್ಯತೇ ॥ ೪೫ ॥
ಸ್ನಾನಂ ನಿತ್ಯಕ್ರಿಯಾಶುದ್ಧಿಃ ಪಂಚಗವ್ಯಾಶನಂ ತತಃ ।
ಗಣೇಶಾರ್ಚನಪುಣ್ಯಾಹವಾಚನಾದಿ ಯಥೋಕ್ತವತ್ ॥ ೪೬ ॥
ಕಲಶಸ್ಥಾಪನಂ ರಾತ್ರೌ ಪೂಜ್ಯದೇವಸ್ಯ ಪೂಜನಮ್ ।
ತರ್ಪಣಂ ಪೂರ್ವವತ್ಕಾರ್ಯಮಗ್ನೇ ನಯಋಚಾ ತತಃ ॥ ೪೭ ॥
ಪ್ರಾತಃ ಸ್ನಾತ್ವಾಥ ಸಂಸ್ಥಾಪ್ಯ ಹೋಮಾಯ ಚ ಹವಿರ್ಭುಜಮ್ ।
ತರ್ಪಣೋಕ್ತೇನ ಮಂತ್ರೇಣ ಪಾಯಸಂ ಘೃತಮಿಶ್ರಿತಮ್ ॥ ೪೮ ॥
ಪಲಾಶಸಮಿಧಶ್ಚೈವ ತದ್ವಿಷ್ಣೋರಿತಿ ಮಂತ್ರತಃ ।
ಘೃತಂ ಚ ವಿಷ್ಣುಗಾಯತ್ರ್ಯಾ ಸಹಸ್ರಮಿಲಿತಂ ಹುನೇತ್ ॥ ೪೯ ॥
ಹೋಮಶೇಷಂ ಸಮಾಪ್ಯಾಥ ತತಃ ಸ್ವಿಷ್ಟಕೃತಾದಿಕಮ್ ।
ಪೂಜ್ಯಾಚಾರ್ಯಂ ಸವತ್ಸಾ ಗೌರ್ದೇಯಾ ತಸ್ಮಾ ಅಲಂಕೃತಾ ॥ ೫೦ ॥
ರೌಪ್ಯಪಾತ್ರಂ ಯಥಾಶಕ್ತ್ಯಾ ಘೃತೇನ ಪರಿಪೂರಿತಮ್ ।
ಸುವರ್ಣವರ್ತಿಸಂಯುಕ್ತಮಾಚಾರ್ಯಾಯ ನಿವೇದಯೇತ್ ॥ ೫೧ ॥
ಬ್ರಾಹ್ಮಣಾನ್ಭೋಜಯೇತ್ಪಶ್ಚಾದ್ಯಥಾಶಕ್ತಿ ವ್ರತತ್ರಯೇ ।
ಸ್ವಯಂ ಭುಂಜೀತ ಮತಿಮಾನ್ ಸ್ವಜನೈರ್ಬಂಧುಭಿರ್ಯುತಃ ॥ ೫೨ ॥
ಏವಮುಕ್ತಂ ವ್ರತಂ ವಿಪ್ರಾಃ ಪವಿತ್ರಂ ಸರ್ವಕಾಮದಮ್ ।
ವಿಷ್ಣುಪ್ರಜಾಪತಿಕ್ಷೇತ್ರೇ ಯ ಆಚರತಿ ಧರ್ಮವಾನ್ ॥ ೫೩ ॥
ಪೂರ್ವಜನ್ಮಾರ್ಜಿತೈಃ ಪಾಪೈರಿಹಜನ್ಮಾರ್ಜಿತೈರಪಿ ।
ಆಗಾಮಿಜನ್ಮಜೈಶ್ಚಾಪಿ ಮುಚ್ಯತೇ ನಾತ್ರ ಸಂಶಯಃ ॥ ೫೪ ॥

॥ ಇತಿ ದ್ವಾದಶೋಽಧ್ಯಾಯಃ ॥

**॥ ಹನ್ನೆರಡನೆಯ ಅಧ್ಯಾಯವು ॥**

ಸೂತರು ಹೇಳಿದರು—

ಈ ಪ್ರಸಂಗದಲ್ಲಿ ಜ್ಞಾಪಕಕ್ಕೆ ಬಂದಿರುವ ಇನ್ನೊಂದು ವಿಚಾರವನ್ನು ಹೇಳುತ್ತೇನೆ. ಇದರ ಅಭಿಪ್ರಾಯವನ್ನು ತಿಳಿದವನು ಕೃತಾರ್ಥನಾಗಿ ಪುಣ್ಯಸಂಪಾದನೆ ಮಾಡುವನು. ॥ ೧ ॥ ಶ್ರೀಮಾಧವದೇವರ ಪ್ರೀತ್ಯರ್ಥವಾಗಿ ಒಂದು ಲಕ್ಷ ಸಲ ಪ್ರದಕ್ಷಿಣೆಗಳನ್ನು ಹಾಕಬೇಕು, ಒಂದು ಲಕ್ಷ ಸಲ ನಮಸ್ಕಾರಗಳನ್ನು ಹಾಕಬೇಕು ಮತ್ತು ಒಂದು ಲಕ್ಷ ದೀಪಗಳನ್ನು ಹಚ್ಚಬೇಕು. ॥ ೨ ॥ ಕಾರ್ತಿಕದಲ್ಲಾಗಲಿ, ಮಾಘದಲ್ಲಾಗಲಿ ಅಥವಾ ವೈಶಾಖದಲ್ಲಾಗಲಿ ಈ ವ್ರತಗಳನ್ನು ಮಾಡಿ ಮುಗಿಸಬೇಕು. ಈ ಮೂರು ವ್ರತಗಳನ್ನೂ ಯಾವ ಯಾವ ಮಾಸದಲ್ಲಿ ಮುಗಿಸಬೇಕೆಂದು ಸಂಕಲ್ಪ ಮಾಡಿಕೊಳ್ಳುತ್ತಾರೋ ಆಯಾ ಮಾಸಕ್ಕೆ ಎರಡು ತಿಂಗಳು ಮೊದಲೇ ಈ ವ್ರತಗಳನ್ನು ಪ್ರಾರಂ-ಭಿಸಬೇಕು; ಶುಭಮಾಸದಲ್ಲಿ ಇವುಗಳನ್ನು ಪ್ರಾರಂಭಿಸಬೇಕು ಮತ್ತು ಹುಣ್ಣಿಮೆಯ ದಿನ ಮುಗಿಸ-

ಬೇಕು. ॥ ೩-೪ ॥ ಆರಂಭವನ್ನೂ ಪರಿಸಮಾಪ್ತಿಯನ್ನೂ ಒಂದೇ ತಿಂಗಳಲ್ಲಿ ಮಾಡುವ ಹಾಗಿದ್ದರೆ ಆಗ ಆರಂಭ ಮಾಡುವ ದಿನದ ನಿಯಮವೇನಿಲ್ಲ. ಯಾವುದುದರೊಂದು ಅಭೀಷ್ಟದಿಂದ ಅಥವಾ ಯಾವ ಅಭೀಷ್ಟವಿಲ್ಲದೇ ಹರಿಪ್ರೀತಿಗಾಗಿ ಈ ವ್ರತನ್ನಾಚರಿಸುವ ಯಾವ ಗಂಡಸಾಗಲಿ ಅಥವಾ ಸ್ತ್ರೀಯಾಗಲಿ ಈ ವ್ರತವನ್ನು ಮಧ್ಯಾಹ್ನಕ್ಕೆ ಮೊದಲೇ ಪ್ರಾರಂಭ ಮಾಡಬೇಕು. ಶೈನ್ನ ನಿತ್ಯಕರ್ಮಗಳನ್ನು ಪೂರೈಸಿಯೇ ಪ್ರಾರಂಭಿಸಬೇಕು. ಈ ವ್ರತಗಳನ್ನು ಆಚರಿಸುತ್ತಿರುವಾಗ ಶುಚಿಯಾದ ಪವಿತ್ರವಾದ ಭೋಜನವನ್ನು ಹಿತವಾಗಿ ಹಾಗೂ ಮಿತವಾಗಿ ಮಾಡಬೇಕು. ಸುಳ್ಳಾಡಬಾರದು. ಅಮಂಗಳಕರ ಮಾತುಗಳನ್ನು ಆಡಲು ಮತ್ತು ಯೋಚಿಸಲೂ ಬಾರದು. ॥ ೫-೭ ॥ ದೇವತಾರ್ಚನೆಯನ್ನೂ, ಜಪವನ್ನೂ ಮತ್ತು ಹೋಮಾದಿಗಳನ್ನು ಬಿಡಬಾರದು. ಪ್ರತಿನಿತ್ಯವೂ ಯಥಾಶಕ್ತಿ ಅತಿಥಿಗಳನ್ನು ಹಣ್ಣುಗಳಿಂದಲಾದರೂ ಪೂಜಿಸಬೇಕು. ॥ ೮ ॥ ಈ ಮೂರು ವ್ರತಗಳಲ್ಲಿಯೂ ಆಕಳು ಮತ್ತು ಬ್ರಾಹ್ಮಣರ ಸೇವೆಯನ್ನು ಬಿಡಬಾರದು. ಈ ಮೂರು ವ್ರತಗಳಲ್ಲಿಯೂ ಪ್ರತಿದಿವಸವೂ ಸಾವಿರ ಸಂಖ್ಯೆಯಲ್ಲಿ ನಮಸ್ಕಾರಗಳನ್ನೂ, ಪ್ರದಕ್ಷಿಣೆಗಳನ್ನೂ ಹಾಕಬೇಕು ಮತ್ತು ದೀಪಗಳನ್ನು ಹಚ್ಚಬೇಕು ಇದು ಮುಖ್ಯವಾದುದು. ॥ ೯ ॥ ಈ ವ್ರತವನ್ನು ಒಂದೇ ತಿಂಗಳಿನಲ್ಲಿ ಮಾಡಿ ಮುಗಿಸಬಹುದು. ಅಥವಾ ಯಥಾಶಕ್ತಿ ಪುಣ್ಯಕರವಾದ ಒಂದು ತಿಂಗಳಿನಲ್ಲಿ ಎಷ್ಟು ಸಂಖ್ಯೆಗಳಷ್ಟಾದರೆ ಅಷ್ಟನ್ನು ಸಲ್ಲಿಸಬಹುದು. ಈ ಎರಡು ಪಕ್ಷದವರೂ ಕಾರ್ತಿಕ, ಮಾಘ ಮತ್ತು ವೈಶಾಖ ಮಾಸಗಳಲ್ಲಿ ಆಚರಿಸಿದರೆ ಉತ್ತಮವು. ಬೇರೆಯಾವೊಂದು ಪುಣ್ಯಮಾಸದಲ್ಲಿ ಆಚರಿಸುವುದಕ್ಕಿಂತ ಸಹಸ್ರದಷ್ಟು ಹೆಚ್ಚಾಗಿ ಕಾರ್ತಿಕ ಮಾಸದಲ್ಲಿ ಆಚರಿಸಿದರೆ ಫಲವು ಬರುವುದು. ಕಾರ್ತಿಕದಲ್ಲಿ ಆಚರಿಸಿದ್ದಕ್ಕಿಂತ ಒಂದು ಕೋಟಿಯಷ್ಟು ಹೆಚ್ಚು ಫಲವು ಮಾಘಮಾಸದಲ್ಲಿ ಆಚರಿಸಿದರೆ ಬರುವುದು. ಮಾಘಮಾಸಕ್ಕಿಂತ ವೈಶಾಖದ ಆಚರಣೆಯು ಒಂದು ಕೋಟಿಯಷ್ಟು ಹೆಚ್ಚು ಫಲವನ್ನು ಕೊಡುವುದು. ವೈಶಾಖದಲ್ಲಿ ಅದರಲ್ಲೂ ಪ್ರಯಾಗಕ್ಷೇತ್ರದಲ್ಲಿ ಆಚರಿಸಿದ ವ್ರತಗಳಿಗೆ ಅನಂತಪಟ್ಟು ಫಲ ಸಿಗುವುದು. ॥ ೧೦-೧೨ ॥ ಶ್ರೀಮಾಧವದೇವರನ್ನು ಅಥವಾ ಇಷ್ಟದೇವತೆಯನ್ನು (ಕೇಶವ, ಮಾಧವ, ಶ್ರೀಕೃಷ್ಣ, ರಾಮ, ವೇಂಕಟೇಶ, ನರಸಿಂಹ ಎಂದು) ಮನಸ್ಸಿನಲ್ಲಿ ನೆನೆಸಿ ಬಾಯಲ್ಲಿ ಆಯಾ ನಾಮಗಳನ್ನು ಉಚ್ಚಾರ ಮಾಡುತ್ತಾ ಜಪಮಾಲೆಯಿಂದ ಎಣಿಸುತ್ತಾ ಭಗವಂತನ ರೂಪವನ್ನು ನೋಡುತ್ತಾ, ದಿಕ್ಕುಗಳನ್ನು ನೋಡದೆ, ಶುಚಿಯಾಗಿ, ಮನಸ್ಸಮಾಧಾನವುಳ್ಳವನಾಗಿ ನಮಸ್ಕಾರ ಮತ್ತು ಪ್ರದಕ್ಷಿಣೆಗಳನ್ನು ಅವಸರಗತಿಯಿಂದ ಮಾಡದೆ, ಗರ್ಭಿಣೀಸ್ತ್ರೀಯರ ವೇಗದಲ್ಲಿ ಮಾಡಬೇಕು. ॥ ೧೩-೧೪ ॥ ಇದೇ ರೀತಿಯಲ್ಲಿ ಇಷ್ಟ ದೇವತೆಯ ಎದುರಿನಲ್ಲಿ ಅಷ್ಟಾಂಗ ಸಹಿತವಾದ ನಮಸ್ಕಾರಗಳನ್ನು ಹಾಕಬೇಕು. ॥ ೧೫ ॥ (೧. ದೇವರ ನಾಮವನ್ನು ಬಾಯಿಯಲ್ಲಿ ಉಚ್ಚರಿಸುತ್ತಾ ೨. ದೇವರನ್ನು ಮನಸ್ಸಿನಲ್ಲಿ ಕೇಂದ್ರೀಕರಿಸಿ ೩. ದೇವರನ್ನೇ ದೃಷ್ಟಿಸಿ ನೋಡುತ್ತಾ ೪. ಭೂಮಿಯಲ್ಲಿ ಪರಮಾತ್ಮನ ಪಾದಗಳನ್ನು ಅನುಸಂಧಾನ ಮಾಡಿಕೊಂಡು ಆ ಭೂಮಿಯನ್ನು ತಲೆಯಿಂದ ಸ್ಪರ್ಶಿಸಿ, ೫. ಎದೆಯಿಂದ ಭೂಮಿಯನ್ನು ಸ್ಪರ್ಶಿಸಿ (ಇದು ಪುರುಷರಿಗೆ ಮಾತ್ರ) ೬. ಎರಡು ಕೈಗಳನ್ನೂ ಚಾಚಿಕೊಂಡು ೭. ಮೊಣಕಾಲುಗಳನ್ನು ಮತ್ತು ೮. ಪಾದಗಳನ್ನು ಭೂಮಿಯಲ್ಲಿ ಚಾಚಿ ನಮಸ್ಕರಿಸಬೇಕು. ಇದೇ ಅಷ್ಟಾಂಗ ನಮಸ್ಕಾರವು). ॥ ೧೬ ॥ ಶುದ್ಧವಾಗಿ ಇರತಕ್ಕ ಹತ್ತಿಯಿಂದ ಪವಿತ್ರವಾದ ಕೈಗಳಿಂದ ಮಾಡಿದ ಹೂಬತ್ತಿಗಳನ್ನು ತುಪ್ಪದಲ್ಲಿ ತೊಯ್ದಿಸಿ ಮಾಧವನ ಮುಂದೆ ದೀಪ ಹಚ್ಚಬೇಕು. ಪ್ರತಿದಿನವೂ ಒಂದು ಸಾವಿರ ದೀಪಗಳನ್ನಾದರೂ

ನಮಸ್ಕಾರವಿಸರ್ಗೇಽಸೌ ವಿಶೇಷಃ ಪರಿಕೀರ್ತಿತಃ ।
ಲಕ್ಷದೀಪವಿಸರ್ಗೇ ಸ ವಿಶೇಷಃ ಪರಿಕೀರ್ತ್ಯತೇ ॥ ೪೫ ॥
ಸ್ನಾನಂ ನಿತ್ಯಕ್ರಿಯಾಶುದ್ಧಿಃ ಪಂಚಗವ್ಯಾಶನಂ ತತಃ ।
ಗಣೇಶಾರ್ಚನಪುಣ್ಯಾಹವಾಚನಾದಿ ಯಥೋಕ್ತವತ್ ॥ ೪೬ ॥
ಕಲಶಸ್ಥಾಪನಂ ರಾತ್ರೌ ಪೂಜ್ಯದೇವಸ್ಯ ಪೂಜನಮ್ ।
ತರ್ಪಣಂ ಪೂರ್ವವತ್ಕಾರ್ಯಮಗ್ನೇ ನಯಋುಚಾ ತತಃ ॥ ೪೭ ॥
ಪ್ರಾತಃ ಸ್ನಾತ್ವಾಥ ಸಂಸ್ಥಾಪ್ಯ ಹೋಮಾಯ ಚ ಹವಿರ್ಭುಜಮ್ ।
ತರ್ಪಣೋಕ್ತೇನ ಮಂತ್ರೇಣ ಪಾಯಸಂ ಘೃತಮಿಶ್ರಿತಮ್ ॥ ೪೮ ॥
ಪಲಾಶಸಮಿಧಶ್ಚೈವ ತದ್ವಿಷ್ಣೋರಿತಿ ಮಂತ್ರತಃ ।
ಘೃತಂ ಚ ವಿಷ್ಣುಗಾಯತ್ರ್ಯಾ ಸಹಸ್ರಮಿಲಿತಂ ಹುನೇತ್ ॥ ೪೯ ॥
ಹೋಮಶೇಷಂ ಸಮಾಪ್ಯಾಥ ತತಃ ಸ್ವಿಷ್ಟಕೃತಾದಿಕಮ್ ।
ಪೂಜ್ಯಾಚಾರ್ಯಂ ಸವತ್ಸಾ ಗೌರ್ದೇಯಾ ತಸ್ಮಾ ಅಲಂಕೃತಾ ॥ ೫೦ ॥
ರೌಪ್ಯಪಾತ್ರಂ ಯಥಾಶಕ್ತ್ಯಾ ಘೃತೇನ ಪರಿಪೂರಿತಮ್ ।
ಸುವರ್ಣವರ್ತಿಸಂಯುಕ್ತಮಾಚಾರ್ಯಾಯ ನಿವೇದಯೇತ್ ॥ ೫೧ ॥
ಬ್ರಾಹ್ಮಣಾನ್ಭೋಜಯೇತ್ಪಶ್ಚಾದ್ಯಥಾಶಕ್ತಿ ವ್ರತತ್ರಯೇ ।
ಸ್ವಯಂ ಭುಂಜೀತ ಮತಿಮಾನ್ ಸ್ವಜನೈರ್ಬಂಧುಭಿರ್ಯುತಃ ॥ ೫೨ ॥
ಏವಮುಕ್ತಂ ವ್ರತಂ ವಿಪ್ರಾಃ ಪವಿತ್ರಂ ಸರ್ವಕಾಮದಮ್ ।
ವಿಷ್ಣುಪ್ರಜಾಪತಿಕ್ಷೇತ್ರೇ ಯ ಆಚರತಿ ಧರ್ಮವಾನ್ ॥ ೫೩ ॥
ಪೂರ್ವಜನ್ಮಾರ್ಜಿತೈಃ ಪಾಪೈರಿಹಜನ್ಮಾರ್ಜಿತೈರಪಿ ।
ಆಗಾಮಿಜನ್ಮಜೈಶ್ಚಾಪಿ ಮುಚ್ಯತೇ ನಾತ್ರ ಸಂಶಯಃ ॥ ೫೪ ॥

॥ ಇತಿ ದ್ವಾದಶೋಽಧ್ಯಾಯಃ ॥

## ॥ ಹನ್ನೆರಡನೆಯ ಅಧ್ಯಾಯವು ॥

ಸೂತರು ಹೇಳಿದರು—

ಈ ಪ್ರಸಂಗದಲ್ಲಿ ಜ್ಞಾಪಕಕ್ಕೆ ಬಂದಿರುವ ಇನ್ನೊಂದು ವಿಚಾರವನ್ನು ಹೇಳುತ್ತೇನೆ. ಇದರ ಅಭಿಪ್ರಾಯವನ್ನು ತಿಳಿದವನು ಕೃತಾರ್ಥನಾಗಿ ಪುಣ್ಯಸಂಪಾದನೆ ಮಾಡುವನು. ॥ ೧ ॥ ಶ್ರೀಮಾಧವದೇವರ ಪ್ರೀತ್ಯರ್ಥವಾಗಿ ಒಂದು ಲಕ್ಷ ಸಲ ಪ್ರದಕ್ಷಿಣೆಗಳನ್ನು ಹಾಕಬೇಕು, ಒಂದು ಲಕ್ಷ ಸಲ ನಮಸ್ಕಾರಗಳನ್ನು ಹಾಕಬೇಕು ಮತ್ತು ಒಂದು ಲಕ್ಷ ದೀಪಗಳನ್ನು ಹಚ್ಚಬೇಕು. ॥ ೨ ॥ ಕಾರ್ತಿಕದಲ್ಲಾಗಲಿ, ಮಾಘದಲ್ಲಾಗಲಿ ಅಥವಾ ವೈಶಾಖದಲ್ಲಾಗಲಿ ಈ ವ್ರತಗಳನ್ನು ಮಾಡಿ ಮುಗಿಸಬೇಕು. ಈ ಮೂರು ವ್ರತಗಳನ್ನೂ ಯಾವ ಯಾವ ಮಾಸದಲ್ಲಿ ಮುಗಿಸಬೇಕೆಂದು ಸಂಕಲ್ಪ ಮಾಡಿಕೊಳ್ಳುತ್ತಾರೋ ಆಯಾ ಮಾಸಕ್ಕೆ ಎರಡು ತಿಂಗಳು ಮೊದಲೇ ಈ ವ್ರತಗಳನ್ನು ಪ್ರಾರಂ-ಭಿಸಬೇಕು; ಶುಭಮಾಸದಲ್ಲಿ ಇವುಗಳನ್ನು ಪ್ರಾರಂಭಿಸಬೇಕು ಮತ್ತು ಹುಣ್ಣಿಮೆಯ ದಿನ ಮುಗಿಸ-

ಬೇಕು. ॥ ೩-೪ ॥ ಆರಂಭವನ್ನೂ ಪರಿಸಮಾಪ್ತಿಯನ್ನೂ ಒಂದೇ ತಿಂಗಳಲ್ಲಿ ಮಾಡುವ ಹಾಗಿದ್ದರೆ ಆಗ ಆರಂಭ ಮಾಡುವ ದಿನದ ನಿಯಮವೇನಿಲ್ಲ. ಯಾವುದಾದರೊಂದು ಅಭೀಷ್ಟದಿಂದ ಅಥವಾ ಯಾವ ಅಭೀಷ್ಟವಿಲ್ಲದೇ ಹರಿಪ್ರೀತಿಗಾಗಿ ಈ ವ್ರತನ್ನಾಚರಿಸುವ ಯಾವ ಗಂಡಸಾಗಲಿ ಅಥವಾ ಸ್ತ್ರೀಯಾಗಲಿ ಈ ವ್ರತವನ್ನು ಮಧ್ಯಾಹ್ನಕ್ಕೆ ಮೊದಲೇ ಪ್ರಾರಂಭ ಮಾಡಬೇಕು. ತನ್ನ ನಿತ್ಯಕರ್ಮಗಳನ್ನು ಪೂರೈಸಿಯೇ ಪ್ರಾರಂಭಿಸಬೇಕು. ಈ ವ್ರತಗಳನ್ನು ಆಚರಿಸುತ್ತಿರುವಾಗ ಶುಚಿಯಾದ ಪವಿತ್ರವಾದ ಭೋಜನವನ್ನು ಹಿತವಾಗಿ ಹಾಗೂ ಮಿತವಾಗಿ ಮಾಡಬೇಕು. ಸುಳ್ಳಾಡಬಾರದು. ಅಮಂಗಳಕರ ಮಾತುಗಳನ್ನು ಆಡಲು ಮತ್ತು ಯೋಚಿಸಲೂ ಬಾರದು. ॥ ೫-೭ ॥ ದೇವತಾರ್ಚನೆಯನ್ನೂ, ಜಪವನ್ನೂ ಮತ್ತು ಹೋಮಾದಿಗಳನ್ನು ಬಿಡಬಾರದು. ಪ್ರತಿನಿತ್ಯವೂ ಯಥಾಶಕ್ತಿ ಅತಿಥಿಗಳನ್ನು ಹಣ್ಣುಗಳಿಂದಲಾದರೂ ಪೂಜಿಸಬೇಕು. ॥ ೮ ॥ ಈ ಮೂರು ವ್ರತಗಳಲ್ಲಿಯೂ ಆಕಳು ಮತ್ತು ಬ್ರಾಹ್ಮಣರ ಸೇವೆಯನ್ನು ಬಿಡಬಾರದು. ಈ ಮೂರು ವ್ರತಗಳಲ್ಲಿಯೂ ಪ್ರತಿದಿವಸವೂ ಸಾವಿರ ಸಂಖ್ಯೆಯಲ್ಲಿ ನಮಸ್ಕಾರಗಳನ್ನೂ, ಪ್ರದಕ್ಷಿಣೆಗಳನ್ನೂ ಹಾಕಬೇಕು ಮತ್ತು ದೀಪಗಳನ್ನು ಹಚ್ಚಬೇಕು ಇದು ಮುಖ್ಯವಾದುದು. ॥ ೯ ॥ ಈ ವ್ರತವನ್ನು ಒಂದೇ ತಿಂಗಳಿನಲ್ಲಿ ಮಾಡಿ ಮುಗಿಸಬಹುದು. ಅಥವಾ ಯಥಾಶಕ್ತಿ ಪುಣ್ಯಕರವಾದ ಒಂದು ತಿಂಗಳಿನಲ್ಲಿ ಎಷ್ಟು ಸಂಖ್ಯೆಗಳಷ್ಟಾದರೆ ಅಷ್ಟನ್ನು ಸಲ್ಲಿಸಬಹುದು. ಈ ಎರಡು ಪಕ್ಷದವರೂ ಕಾರ್ತಿಕ, ಮಾಘ ಮತ್ತು ವೈಶಾಖ ಮಾಸಗಳಲ್ಲಿ ಆಚರಿಸಿದರೆ ಉತ್ತಮವು. ಬೇರೆಯಾವೊಂದು ಪುಣ್ಯಮಾಸದಲ್ಲಿ ಆಚರಿಸುವುದಕ್ಕಿಂತ ಸಹಸ್ರದಷ್ಟು ಹೆಚ್ಚಾಗಿ ಕಾರ್ತಿಕ ಮಾಸದಲ್ಲಿ ಆಚರಿಸಿದರೆ ಫಲವು ಬರುವುದು. ಕಾರ್ತಿಕದಲ್ಲಿ ಆಚರಿಸಿದ್ದಕ್ಕಿಂತ ಒಂದು ಕೋಟಿಯಷ್ಟು ಹೆಚ್ಚು ಫಲವು ಮಾಘಮಾಸದಲ್ಲಿ ಆಚರಿಸಿದರೆ ಬರುವುದು. ಮಾಘಮಾಸಕ್ಕಿಂತ ವೈಶಾಖದ ಆಚರಣೆಯು ಒಂದು ಕೋಟಿಯಷ್ಟು ಹೆಚ್ಚು ಫಲವನ್ನು ಕೊಡುವುದು. ವೈಶಾಖದಲ್ಲಿ ಅದರಲ್ಲೂ ಪ್ರಯಾಗಕ್ಷೇತ್ರದಲ್ಲಿ ಆಚರಿಸಿದ ವ್ರತಗಳಿಗೆ ಅನಂತಪಟ್ಟು ಫಲ ಸಿಗುವುದು. ॥ ೧೦-೧೨ ॥ ಶ್ರೀಮಾಧವದೇವರನ್ನು ಅಥವಾ ಇಷ್ಟದೇವತೆಯನ್ನು (ಕೇಶವ, ಮಾಧವ, ಶ್ರೀಕೃಷ್ಣ, ರಾಮ, ವೇಂಕಟೇಶ, ನರಸಿಂಹ ಎಂದು) ಮನಸ್ಸಿನಲ್ಲಿ ನೆನೆಸಿ ಬಾಯಲ್ಲಿ ಆಯಾ ನಾಮಗಳನ್ನು ಉಚ್ಚಾರ ಮಾಡುತ್ತಾ ಜಪಮಾಲೆಯಿಂದ ಎಣಿಸುತ್ತಾ ಭಗವಂತನ ರೂಪವನ್ನು ನೋಡುತ್ತಾ, ದಿಕ್ಕುಗಳನ್ನು ನೋಡದೆ, ಶುಚಿಯಾಗಿ, ಮನಸ್ಸಮಾಧಾನವುಳ್ಳವನಾಗಿ ನಮಸ್ಕಾರ ಮತ್ತು ಪ್ರದಕ್ಷಿಣೆಗಳನ್ನು ಅವಸರಗತಿಯಿಂದ ಮಾಡದೆ, ಗರ್ಭಿಣೀಸ್ತ್ರೀಯರ ವೇಗದಲ್ಲಿ ಮಾಡಬೇಕು. ॥ ೧೩-೧೪ ॥ ಇದೇ ರೀತಿಯಲ್ಲಿ ಇಷ್ಟ ದೇವತೆಯ ಎದುರಿನಲ್ಲಿ ಅಷ್ಟಾಂಗ ಸಹಿತವಾದ ನಮಸ್ಕಾರಗಳನ್ನು ಹಾಕಬೇಕು. ॥ ೧೫ ॥ (೧. ದೇವರ ನಾಮವನ್ನು ಬಾಯಿಯಲ್ಲಿ ಉಚ್ಚರಿಸುತ್ತಾ ೨. ದೇವರನ್ನು ಮನಸ್ಸಿನಲ್ಲಿ ಕೇಂದ್ರೀಕರಿಸಿ ೩. ದೇವರನ್ನೇ ದೃಷ್ಟಿಸಿ ನೋಡುತ್ತಾ ೪. ಭೂಮಿಯಲ್ಲಿ ಪರಮಾತ್ಮನ ಪಾದಗಳನ್ನು ಅನುಸಂಧಾನ ಮಾಡಿಕೊಂಡು ಆ ಭೂಮಿಯನ್ನು ತಲೆಯಿಂದ ಸ್ಪರ್ಶಿಸಿ, ೫. ಎದೆಯಿಂದ ಭೂಮಿಯನ್ನು ಸ್ಪರ್ಶಿಸಿ (ಇದು ಪುರುಷರಿಗೆ ಮಾತ್ರ) ೬. ಎರಡು ಕೈಗಳನ್ನೂ ಚಾಚಿಕೊಂಡು ೭. ಮೊಣಕಾಲುಗಳನ್ನು ಮತ್ತು ೮. ಪಾದಗಳನ್ನು ಭೂಮಿಯಲ್ಲಿ ಚಾಚಿ ನಮಸ್ಕರಿಸಬೇಕು. ಇದೇ ಅಷ್ಟಾಂಗ ನಮಸ್ಕಾರವು). ॥ ೧೬ ॥ ಶುದ್ಧವಾಗಿ ಇರತಕ್ಕ ಹತ್ತಿಯಿಂದ ಪವಿತ್ರವಾದ ಕೈಗಳಿಂದ ಮಾಡಿದ ಹೂಬತ್ತಿಗಳನ್ನು ತುಪ್ಪದಲ್ಲಿ ತೊಯ್ಯಿಸಿ ಮಾಧವನ ಮುಂದೆ ದೀಪ ಹಚ್ಚಬೇಕು. ಪ್ರತಿದಿನವೂ ಒಂದು ಸಾವಿರ ದೀಪಗಳನ್ನಾದರೂ

ಹಚ್ಚಬೇಕು. ॥ ೧೭ ॥ ತುಪ್ಪದ ದೀಪವು ಅತಿಶ್ರೇಷ್ಠವು, ಎಳ್ಳೆಣ್ಣೆಯದು ಮಧ್ಯಮವು ಮತ್ತು ಬೇರೆ ಬೇರೆ ವಿಧದ ಎಣ್ಣೆಯ ದೀಪವು ಉತ್ತಮವಲ್ಲ. ॥ ೧೮ ॥ ಕಾರ್ತಿಕ, ಮಾಘ ಮತ್ತು ವೈಶಾಖಗಳಲ್ಲಿ ದೀಪ ಹಚ್ಚುವುದರಿಂದ ಉಂಟಾಗುವ ಫಲವನ್ನು ಕ್ರಮವಾಗಿ ಕೇಳಿರಿ. ॥ ೧೯ ॥ ಕಾರ್ತಿಕದಲ್ಲಿ ಯಾರು ಶ್ರದ್ಧೆಯಿಂದ ಸಾಲುದೀಪಗಳನ್ನು ದೇವರೆದುರು ಹಚ್ಚುವರೋ ಅವರು ಸೂರ್ಯ-ಚಂದ್ರರಿರುವವರೆಗೂ ಸ್ವರ್ಗದಲ್ಲಿ ಸುಖದಿಂದ ಇರುವರು; ॥ ೨೦ ॥ ಮಾಘಮಾಸದಲ್ಲಿ ಸಾಲು-ದೀಪವನ್ನು ಹಚ್ಚುವವರು ವೈಕುಂಠದಲ್ಲಿ ಅನಂತ ದಿವಸಗಳವರೆಗೆ ಇರುವರು; ॥ ೨೧ ॥ ವೈಶಾಖದಲ್ಲಿ ದೀಪವನ್ನು ಹಚ್ಚುವವರು ಇಂದ್ರನ ಸ್ವರ್ಗಲೋಕದಲ್ಲಿದ್ದು ಅನೇಕ ಭೋಗಗಳನ್ನು ಅನುಭವಿಸುವರು; ॥ ೨೨ ॥ ಪ್ರಯಾಗದಲ್ಲಿರುವ ಹರಿಮಂದಿರದಲ್ಲಿ ಅದರಲ್ಲೂ ಮಾಘಮಾಸ-ದಲ್ಲಿ ಯಾರು ಲಕ್ಷದೀಪವನ್ನು ಹಚ್ಚುತ್ತಾರೋ, ಅವರಿಗೆ ಬರುವ ಫಲವು ಲೆಕ್ಕಕ್ಕೆ ಸಿಗಲಾರದು; ರಮ್ಯವಾದ ಗಂಗಾನದಿಯ ತೀರದಲ್ಲಿ ಶ್ರೀಬಿಂದುಮಾಧವನ ಎದುರಿಗೆ ಮಾಘಮಾಸದಲ್ಲಿ ದೀಪ ಹಚ್ಚಿದರೂ ಅಷ್ಟೆ ಫಲ ಸಿಗುವುದು. ॥ ೨೩ ॥ ಶಕ್ತಿಯಿದ್ದವರು ಲಕ್ಷಗಟ್ಟಲೆ ಮತ್ತು ಕೋಟಿಗಟ್ಟಲೆ ದೀಪವನ್ನು ಹಚ್ಚಬಹುದು. ಶಕ್ತಿ ಇಲ್ಲದವರು ಹತ್ತು ಸಾವಿರ, ಕೊನೆಗೆ ಒಂದು ಸಾವಿರ ಅಥವಾ ನೂರು ದೀಪಗಳನ್ನಾದರೂ ಹಚ್ಚಬೇಕು. ॥ ೨೪ ॥ ಅಗಸೆಯ ಎಣ್ಣೆಯಿಂದ ಹರಿಮಂದಿರದಲ್ಲಿ ದೀಪವನ್ನು ಹಚ್ಚಿಟ್ಟರೆ ನಮ್ಮ ಹಿಂದಿನ ಹತ್ತು ಪೀಳಿಗೆಯ ಪಿತೃಗಳೂ ಮುಂದೆ ಬರತಕ್ಕ ಹತ್ತು ಪೀಳಿಗೆಯ ಪಿತೃಗಳೂ ಉದ್ಧಾರವಾಗುತ್ತಾರೆ. ॥ ೨೫ ॥ ಇಂದ್ರಿಯಗಳ ದೌರ್ಬಲ್ಯದಿಂದ ಅಸಾಮರ್ಥ್ಯವಿದ್ದರೆ ಈ ಮೇಲೆ ಉಕ್ತವಾದ ಎಲ್ಲಾ ವ್ರತಗಳನ್ನೂ ಬ್ರಾಹ್ಮಣರ ಮೂಲಕವಾದರೂ ಮಾಡಿಸಬೇಕು. ॥ ೨೬ ॥ ದಾರಿದ್ರ್ಯದ ಸಮುದ್ರದಲ್ಲಿ ಮುಳುಗಿದವನು ಭಕ್ತಿಯುಕ್ತನಾಗಿ ತನ್ನ ಅಸಹಾಯಕತೆಗೆ ಪಶ್ಚಾತ್ತಾಪ ಪಟ್ಟು ಇನ್ನೊಬ್ಬರು ಹಚ್ಚಿಟ್ಟಿರುವ ದೀಪಗಳನ್ನು ಚಾಚಿ ಬೆಳಗಿಸಿದರೆ ಈ ಸೇವಾದಿಗಳನ್ನು ತಾವೇ ಮಾಡಿದಷ್ಟು ಫಲವು ಅವರಿಗೂ ಬರುವುದು. ॥ ೨೭ ॥ ಕರ್ಪೂರ-ಖಂಡದಿಂದ ದೀಪಗಳನ್ನು ಹಚ್ಚಿದರೆ, ಹಚ್ಚಿಟ್ಟವನು ಪ್ರಕಾಶಮಾನನಾಗಿ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಉತ್ತಮ ಸೌಖ್ಯವನ್ನು ಪಡೆಯುವನು. ॥ ೨೮ ॥ ಶ್ರೀಮಾಧವ-ದೇವರ ಮಂದಿರದಲ್ಲಿ ದಶಾಂಗ, ಅಗರು ಮತ್ತು ಗುಗ್ಗುಳ ಇವುಗಳನ್ನು ಕೆಂಡದ ಮೇಲೆ ಹಾಕಿ ಧೂಪಾರ್ತಿಯನ್ನು ಮಾಡಿದರೆ ಅವನು ಪಾಪಗಳನ್ನೆಲ್ಲಾ ಕಳೆದುಕೊಂಡು ಪರಿಶುದ್ಧನಾಗುತ್ತಾನೆ. ॥ ೨೯ ॥ ಶರತ್ಕಾಲದ ಚಂದ್ರನಂತೆ ಬೆಳ್ಳಗೆ ಹೊಳೆಯುತ್ತಿರುವ ಹಾಗೂ ಮುತ್ತಿನ ಹಾರಗಳಿಂದ ಶೋಭಿಸುತ್ತಿರುವ ಹಂದರ(ವಿತಾನ)ವನ್ನು ದೇವಾಲಯದಲ್ಲಿ ಕಟ್ಟಿಸುವವನು ಸತ್ಯಲೋಕಕ್ಕೆ ಹೋಗುವುದರಲ್ಲಿ ಸಂಶಯವಿಲ್ಲ. ॥ ೩೦ ॥ ರೇಶ್ಮೆಯ ಬಟ್ಟೆಯಿಂದ ಮಾಡಿದ ಧ್ವಜವನ್ನೂ, ರೇಶ್ಮೆಯ ಧ್ವಜದ ಜೊತೆಗೆ ಕಳಶವನ್ನೂ ವಿಷ್ಣುದೇವಾಲಯಕ್ಕೆ ತ್ರಿವೇಣಿಯಲ್ಲಿ ದಾನ ಮಾಡಿದವನು ಯಾವಾಗಲೂ ಕುಂದುವುದಿಲ್ಲ. ॥ ೩೧ ॥ ಈ ರೀತಿಯಾದ ನಾನಾ ಸೇವೆಗಳನ್ನು ಪ್ರಯಾಗದಲ್ಲಿ ಯಾರು ಮಾಡುತ್ತಾರೋ ಅವರು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಹೊಂದುತ್ತಾರೆ. ॥ ೩೨ ॥ ತಿಳಿದವರು ಪ್ರದಕ್ಷಿಣೆ, ನಮಸ್ಕಾರ ಮತ್ತು ದೀಪಜ್ವಲನ ಮುಂತಾದವು ಮುಗಿದ ಮೇಲೆ ವ್ರತದ ಸಂಪೂರ್ಣಫಲಪ್ರಾಪ್ತಿಗಾಗಿ ಹಿಂದೆ ಹೇಳಿರುವಂತೆ ಉದ್ಯಾಪನೆಯನ್ನು ಮಾಡತಕ್ಕದ್ದು. ॥ ೩೩ ॥ ನಿತ್ಯಕರ್ಮಾನುಷ್ಠಾನಗಳಾದ ಮೇಲೆ, ಮಹಾ-ಗಣಪತಿಯನ್ನು ಪೂಜಿಸಿ ಶ್ರೀಮಾಧವದೇವರ ಪ್ರತಿಮೆಯನ್ನು ಇಟ್ಟು ರಾತ್ರಿಯಲ್ಲಿ ಜಾಗರಣೆ-ಯಿಂದ ಕಾಲ ಕಳೆಯಬೇಕು. ॥ ೩೪ ॥ ಸೇವಾ ಸಂಖ್ಯೆಗಳ ಹತ್ತನೇ ಒಂದು ಭಾಗದಷ್ಟು ತರ್ಪಣ

ಮಾಡಿ, ಅಗ್ನಿಯನ್ನು ಪ್ರತಿಷ್ಠಾಪಿಸಿ ಸಾವಿರ ಸಲ ಪಾಯಸದಿಂದ ಅದೇ ಮಂತ್ರದಿಂದ ಹೋಮ ಮಾಡಬೇಕು. ॥ ೩೫ ॥ ಹೋಮಶೇಷವನ್ನು ಮುಗಿಸಿ ನಂತರ ಸ್ವಿಷ್ಟಕೃತ್ ಹೋಮವನ್ನು ಮಾಡಬೇಕು. ಅನಂತರ ಆಚಾರ್ಯರಿಗೆ ಕಪ್ಪು ಬಣ್ಣದ ಆಕಳನ್ನು ದಕ್ಷಿಣೆಯೊಡನೆ ದಾನ ಮಾಡಬೇಕು. ॥ ೩೬ ॥ ಪ್ರದಕ್ಷಿಣೆಯ ಉದ್ಯಾಪನೆಯಲ್ಲಿ ವಿಶೇಷವನ್ನು ಹೇಳಿದ್ದಾಯಿತು. ಇನ್ನು ನಮಸ್ಕಾರದ ಸೇವಾ ಬಗ್ಗೆ ಕೇಳಿರಿ. ॥ ೩೭ ॥ ''ಅತೋ ದೇವಾ'' ಎಂಬ ಸೂಕ್ತದಿಂದ ರಾತ್ರಿ ಪೂಜಾ ಮಾಡುವುದು. ಕೇಶವಾದಿ ನಾಮಗಳಿಂದ ಶ್ರೀಮಾಧವನ ಅಂಗಪೂಜೆ (ಅಂಗುಷ್ಠದಿಂದ ಪ್ರಾರಂಭಿಸಿ ಶಿರಸ್ಸಿನವರೆಗಿನ ಪರಮಾತ್ಮನ ಎಲ್ಲ ಅವಯವಗಳ ಪೂಜೆ)ಯನ್ನು ಮಾಡಬೇಕು. ॥ ೩೮ ॥ ನೈವೇದ್ಯ ಸಮರ್ಪಣೆ ಮಾಡಿ ನಂತರ ನಮಸ್ಕಾರದ ದಶಾಂಶದಿಂದ ತರ್ಪಣವನ್ನು ಕೊಡಬೇಕು. ಅನಂತರ ಹವನ. ತರ್ಪಣದ ಹತ್ತನೇ ಒಂದು ಭಾಗದ ಸಂಖ್ಯೆಯಷ್ಟು ಹೋಮ ಮಾಡಬೇಕು. ॥ ೩೯ ॥ ನಂತರ, ಶಂಖದಲ್ಲಿ ನೀರನ್ನು ತುಂಬಿ ಗೋಧಿಹಿಟ್ಟು, ಅಕ್ಕಿ, ಗಂಧ, ಹೂವುಗಳು, ಅಕ್ಷತೆ ಇವುಗಳಿಂದ ಶ್ರೀಮಾಧವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು. ॥ ೪೦ ॥ ''ದೇವತೆಗಳಿಗೆ ದೇವನಾದ ದೇವದೇವನೇ! ಜಗತ್ತಿಗೆ ಸ್ವಾಮಿಯಾದ ಜಗನ್ನಾಥನೇ! ಎಲ್ಲ ವ್ರತಗಳಿಗೂ ಫಲವನ್ನು ಕೊಡತಕ್ಕವನೇ! ನನ್ನಿಂದ ಮಾಡಲ್ಪಟ್ಟ ಈ ವ್ರತದಿಂದ ಸುಪ್ರೀತನಾಗು'' ಎಂದು ಹೇಳಿ ಅರ್ಘ್ಯವನ್ನು ಸಮರ್ಪಿಸಬೇಕು. ॥ ೪೧ ॥ ಶ್ರೀಹರಿಯನ್ನು ಚೆನ್ನಾಗಿ ಪೂಜೆ ಮಾಡಿ, ಜಾಗರಣೆ ಮಾಡಿ, ಬೆಳಿಗ್ಗೆ ನಿತ್ಯಕರ್ಮಾನುಷ್ಠಾನಾನಂತರ ಆಚಾರ್ಯರಿಂದ ಅಗ್ನಿಪ್ರತಿಷ್ಠಾಪನೆ ಮಾಡಿಸಿ ಯಥಾಕ್ರಮವಾಗಿ ಆಕಳ ತುಪ್ಪದಿಂದ ಸಿಂಪಡಿಸಲ್ಪಟ್ಟ ಸಮಿತ್ತು, ಚರು, ಎಳ್ಳು, ಭತ್ತ ಇವುಗಳಿಂದ ಪುರುಷಸೂಕ್ತದಿಂದ ಬ್ರಾಹ್ಮಣರುಗಳಿಂದ ಹೋಮ ಮಾಡಿಸಬೇಕು. ॥ ೪೨-೪೩ ॥ ಹೋಮಶೇಷವನ್ನು ಮುಗಿಸಿ, ಪೂರ್ಣಾಹುತಿಯನ್ನು ಕೊಡಬೇಕು. ಅನಂತರ ಆಚಾರ್ಯರನ್ನು ಪೂಜಿಸಬೇಕು. ಹಸು ಮತ್ತು ಎತ್ತನ್ನು ದಾನ ಕೊಡಬೇಕು. ॥ ೪೪ ॥ ಲಕ್ಷನಮಸ್ಕಾರದ ಉದ್ಯಾಪನೆಯಲ್ಲಿ ಈ ವಿಶೇಷಗಳು ಹೇಳಲ್ಪಟ್ಟಿವೆ; ಲಕ್ಷದೀಪದ ಉದ್ಯಾಪನೆಯಲ್ಲೂ ಈ ಮುಂದೆ ಹೇಳುವ ವಿಶೇಷವು ಹೇಳಲ್ಪಟ್ಟಿದೆ. ॥ ೪೫ ॥ ಪ್ರಾತರ್ವಿಧಿ, ಸ್ನಾನ, ನಿತ್ಯಕರ್ಮಾನುಷ್ಠಾನ, ದೇವತಾರ್ಚನ ಮತ್ತು ಪಂಚಗವ್ಯಪ್ರಾಶನ ಇವುಗಳನ್ನು ಮಾಡಿ ಗಣೇಶನ ಪೂಜಾ, ಆಚಾರ್ಯರ ಮೂಲಕ ಪುಣ್ಯಾಹವಾಚನ ಇವುಗಳನ್ನು ಮಾಡಿ ಮುಗಿಸಬೇಕು. (ಹಿಂದೆ ಹೇಳಿರುವಂತೆಯೇ) ॥ ೪೬ ॥ ಅನಂತರ ಕಳಶಸ್ಥಾಪನ, ರಾತ್ರಿಯಲ್ಲಿ ದೇವರ ಪೂಜಾ (ಶ್ರೀವಿಷ್ಣುವಿನ) ಮಾಡಿ, ''ಅಗ್ನೇ ನಯ'' ಎಂಬ ಋಕ್ಕಿನಿಂದ ತರ್ಪಣವನ್ನು ಹಿಂದಿನಂತೆಯೇ ಕೊಡಬೇಕು. ॥ ೪೭ ॥ ಪ್ರಾತಃಕಾಲದಲ್ಲಿ ಸ್ನಾನಮಾಡಿ ಅಗ್ನಿಯನ್ನು ಸಂಸ್ಥಾಪಿಸಿ, ತರ್ಪಣಕ್ಕೆ ಉಪಯೋಗಿಸಿದ ಮಂತ್ರದಿಂದಲೇ ತುಪ್ಪ ಮಿಶ್ರಿತವಾದ ಪಾಯಸವನ್ನು, ''ತದ್ವಿಷ್ಣೋಃ'' ಎಂಬ ಮಂತ್ರದಿಂದ ಮುತ್ತುಗದ ಸಮಿತ್ತುಗಳನ್ನು ಹೋಮ ಮಾಡಬೇಕು. ವಿಷ್ಣುಗಾಯತ್ರಿಯಿಂದ ತುಪ್ಪವನ್ನು ಸಾವಿರ ಸಲ ಹೋಮ ಮಾಡಬೇಕು. ॥ ೪೮-೪೯ ॥ ಹೋಮಶೇಷವನ್ನು ಪೂರೈಸಿ, ಸ್ವಿಷ್ಟಕೃದಾದಿಗಳನ್ನೂ ಮುಗಿಸಿ, ಆಚಾರ್ಯರಿಗೆ ಅಲಂಕೃತವಾದ ಆಕಳನ್ನು ಕರುವಿನೊಡನೆ ದಾನ ಮಾಡಬೇಕು.॥೫೦॥ ಯಥಾಶಕ್ತಿ ಬೆಳ್ಳಿ ಪಾತ್ರೆಯೊಂದನ್ನು ಮಾಡಿಸಿ, ತುಪ್ಪವನ್ನು ಅದರೊಳಗೆ ತುಂಬಿ ಬಂಗಾರದ ಬತ್ತಿಗಳ ಸಮೇತ ಆಚಾರ್ಯರಿಗೆ ಕೊಡಬೇಕು. ॥ ೫೧ ॥ ನಂತರ, ಈ ಮೂರು ವ್ರತದಲ್ಲಿಯೂ ಯಥಾಶಕ್ತಿ ಬ್ರಾಹ್ಮಣಸುವಾಸಿನಿಯರ ಭೋಜನ ಮಾಡಿಸಬೇಕು. ಅನಂತರ ಬುದ್ಧಿವಂತನಾದ ಕರ್ತೃವು ಬಂಧುಮಿತ್ರರೊಡನೆ ತಾನೂ ಭೋಜನ ಮಾಡಬೇಕು. ॥ ೫೨ ॥ ಎಲ್ಲೈ ಬ್ರಾಹ್ಮಣೋ-

ತ್ತಮರೇ, ಎಲ್ಲ ಅಭೀಷ್ಟಗಳೂ ನೆರವೇರತಕ್ಕ ಮತ್ತು ಪವಿತ್ರವಾದ ಈ ಮೂರು ವ್ರತಗಳ ಬಗ್ಗೆ ಹೇಳಿದ್ದೇನೆ. ಯಾರು ವಿಷ್ಣುಪ್ರಜಾಪತಿಕ್ಷೇತ್ರವೆಂದು ಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ಈ ಮೂರು ವ್ರತಗಳನ್ನೂ ಆಚರಿಸುತ್ತಾರೋ ಅವರು ತಮ್ಮ ಹಿಂದಿನ, ಈಗಿನ ಮತ್ತು ಮುಂದಿನ ಜನ್ಮಗಳಲ್ಲಿಯೂ ಮಾಡಿ, ಮಾಡುತ್ತಾ ಮತ್ತು ಮಾಡುವ ಸಕಲ ಪಾಪಗಳಿಂದ ಮುಕ್ತರಾಗುತ್ತಾರೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ॥ ೫೩-೫೪ ॥

॥ ಹನ್ನೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಯೋದಶೋಽಧ್ಯಾಯಃ ॥ ೧೩ ॥

ಸೂತ ಉವಾಚ—

ಏವಮಿಂದ್ರಃ ಪ್ರಯಾಗೇಽಸ್ಮಿಂಸ್ತೋಷಯನ್ಮಾಧವಂ ಪ್ರಭುಮ್ ।
ಪೂಜನವ್ರತದಾನಾದ್ಯೈರಪುಷ್ಣಾದ್ಧರ್ಮಸಂಚಯಮ್ ॥ ೧ ॥
ತಸ್ಮಾದತ್ರ ವಸನ್ಮರ್ತ್ಯಃ ಸಕಾಮಃ ಕಾಮವರ್ಜಿತಃ ।
ಸ್ನಾನದಾನಾದಿಕಂ ಕುರ್ವನ್ಭುಕ್ತಿಂ ಮುಕ್ತಿಂ ಚ ವಿಂದತಿ ॥ ೨ ॥
ಇದಮೇವ ಪರಂ ಶ್ರೇಯಃ ಶ್ರುತಿಸ್ಮೃತಿವಿನಿಶ್ಚಿತಮ್ ।
ಸದ್ಭಕ್ತ್ಯಾ ಮಾಧವಕ್ಷೇತ್ರೇ ಸ್ನಾನದಾನಜಪಾದಿಕಮ್ ॥ ೩ ॥
ಕುಲೀನೋ ವಾಕುಲೀನೋ ವಾ ಪಂಡಿತೋಽಪಂಡಿತೋಽಪಿ ವಾ ।
ಸಧನೋ ನಿರ್ಧನೋ ವಾಪಿ ಫಲಮೃಚ್ಛತಿ ಮಾಧವಾತ್ ॥ ೪ ॥
ಅಯಃ ಕಾಂಚನತಾಮೇತಿ ಚಿಂತಾಮಣಿಸಮಾಗಮಾತ್ ।
ಯಥಾ ಮಾನಸವಾಸೇನ ಹಂಸತಾಂ ಯಾತಿ ವಾಯಸಃ ॥ ೫ ॥
ಯಥಾ ಜಂಬೂನದೀಂ ಪ್ರಾಪ್ಯ ಮೃತ್ತಿಕಾ ಯಾತಿ ರುಕ್ಮತಾಮ್ ।
ಯಥಾ ಪೀಯೂಷಪಾನೇನ ದೇವತ್ವಮಧಿಗಚ್ಛತಿ ॥ ೬ ॥
ಯಥಾ ಚ ಬ್ರಹ್ಮತಾಮೇತಿ ಬ್ರಹ್ಮಧ್ಯಾನೇನ ಮಾನವಃ ।
ಪಾಪೋಽಪಿ ಪುಣ್ಯತಾಮೇತಿ ತಥಾ ಮಾಧವಸೇವನಾತ್ ॥ ೭ ॥
ನ ಕಾಲನಿಯಮಶ್ಚಾತ್ರ ನ ದಾನನಿಯಮಸ್ತಥಾ ।
ವ್ರತಾದಿನಿಯಮೋ ನಾತ್ರ ಭಕ್ತ್ಯೈನಂ ಭಜತಾಂ ನೃಣಾಮ್ ॥ ೮ ॥
ಅಶಕ್ತಃ ಸ್ನಾನಮಾತ್ರೇಣ ಶಕ್ತೋ ದಾನಾದಿಕರ್ಮಣಾ ।
ಅಖಂಡಫಲಮಾಪ್ನೋತಿ ನಾನ್ಯಥೇತಿ ವಿನಿಶ್ಚಯಃ ॥ ೯ ॥
ಅತ್ರ ದಾನಂ ಯಥಾಶಕ್ತ್ಯಾ ಯ ಆಚರತಿ ಧರ್ಮವಾನ್ ।
ಅನ್ಯತ್ರ ದಾನಾಲ್ಲಕ್ಷಘ್ನಂ ಪುಣ್ಯಂ ಪ್ರಾಪ್ನೋತಿ ಮಾನವಃ ॥ ೧೦ ॥
ಅಲ್ಪದಾನಫಲಂ ಚಾತ್ರ ವರ್ಧತೇ ವಟಬೀಜವತ್ ।
ಸ್ವಪದಚ್ಯುತಿಭೀತ್ಯೈವ ದೇವಾದ್ಯಾ ವಿಘ್ನಯಂತಿ ಹಿ ॥ ೧೧ ॥
ಮತಿರ್ನೋತ್ಪಾದ್ಯತೇ ಪುಂಸಾಂ ಪ್ರಯಾಗೇ ದಾನಕರ್ಮಣಿ ।
ಪ್ರಾಚೀನಾನಿ ಚ ಪಾಪಾನಿ ಬುದ್ಧಿಭೇದಂ ನಯಂತಿ ಹಿ ॥ ೧೨ ॥
ದೇವಾ ಬ್ರಾಹ್ಮಣವೇಷೇಣ ತೀರ್ಥಾನಿ ಧನರಕ್ಷಣೈಃ ।
ವ್ರತಾನಿ ಸ್ನೇಹಭಾವೇನ ಬುದ್ಧಿಭಂಗಂ ಪ್ರಕುರ್ವತೇ ॥ ೧೩ ॥
ಅಸ್ಮಿನ್ನರ್ಥೇ ಪುರಾ ಚೈವ ಕದಾಚಿನ್ಮಾಧವಾಲಯೇ ।
ದ್ಯೋತಮಾನಾಬಲಾ ಕಾಚಿದ್ದದೃಶೇ ಸಕಲೈರ್ಜನೈಃ ॥ ೧೪ ॥

ಉತ್ಫುಲ್ಲಮಲ್ಲಿಕಾದಾಮಸುಕುಮಾರಾಂಗಯಷ್ಟಿಕಾ ।
ಲಾವಣ್ಯಪಿಂಡಸಂಭೂತಾ ಚಂದ್ರಿಕೇವ ಸಮುಜ್ಜ್ವಲಾ ॥ ೧೫ ॥
ಭಷ್ಯೈವಾಲೋಕಮಾತ್ರೇಣ ಯುವಾಕಾಮಾಗ್ನಿಬೋಧನೇ ।
ಗುಣೈಸ್ತಥಾ ವಾಗುರೇವ ವಶಿಕೃನ್ಮೃಗಯಂತ್ರಣೇ ॥ ೧೬ ॥
ಬೃಹನ್ನಿತಂಬವಿಶ್ರಾಮನೀಲಸುಸ್ನಿಗ್ಧಕುಂತಲಾ ।
ಅತಿಚಂದ್ರಾನನಾ ಶುಭ್ರಸುಭಾಲತಲದರ್ಪಣಾ ॥ ೧೭ ॥
ರತ್ನಹಾಟಕವಿಭ್ರಾಜತ್ಕರ್ಣಶಷ್ಕುಲಿರಾಜಿತಾ ।
ತಿಲಪ್ರಸೂನನಿರ್ಭರ್ತ್ಸಿಸಮುಕ್ತಾಫಲನಾಸಿಕಾ ॥ ೧೮ ॥
ಬಿಂಬಾಧರೋಷ್ಠರೋಚಿಷ್ಣುವಜ್ರಖಂಡಾತಿಗದ್ವಿಜಾ ।
ಚಲದ್ದ್ವಿರೇಫಸಂರಾಜತ್ಫುಲ್ಲಕೋಕನದೇಕ್ಷಣಾ ॥ ೧೯ ॥
ಜಿತವೀಣಾರವಾಶೋಭಿಕಂಬುಕಂಠಾ ಲಸದ್ಭುಜಾ ।
ಜಿತಚಂದ್ರಾರ್ಧರುಚಿರಾ ಸುವೃತ್ತಾಂಗುಲಿಶೋಭಿತಾ ॥ ೨೦ ॥
ಪದ್ಮರಾಗದಲಾಶೋಣವಿಲಸತ್ಪಾಣಿಪಂಕಜಾ ।
ಉನ್ನಿದ್ರಕುಚರಾಜೀವಾ ವಕ್ಷಃಪೃಷ್ಠಾಂಗಣಾಚಿತಾ ॥ ೨೧ ॥
ಸದೂರ್ವಾತತಿಸೋಪಾನನಾಭಿವಾಪೀವಿರಾಜಿತಾ ।
ಬೃಹನ್ನಿತಂಬಜಘನಾ ತನ್ವೀ ಸಂದಿಗ್ಧಮಧ್ಯಮಾ ॥ ೨೨ ॥
ಕರಭೋರುಸ್ಸುಜಾನುಶ್ಚ ಸುಜಂಘಾ ಸುಪದಾಂಬುಜಾ ।
ಸುಯೌವನಭರಾಕ್ರಾಂತಾನಂಗವೇತ್ರಮಿವ ಸ್ಥಿತಾ ॥ ೨೩ ॥
ಹರಿದ್ರಾಗೌರಸರ್ವಾಂಗೀ ಸರ್ವಾಲಂಕಾರಭೂಷಿತಾ ।
ಧೃತಶೋಣಾಂಬರಾಭೂಷಾ ಕಾಶ್ಮೀರಜವಿಲೇಪಿನಾ ॥ ೨೪ ॥
ಸುಮನೋಮಾಲ್ಯನಿರ್ಯಾತಗಂಧವಾಸಿತದಿಙ್ಮುಖಾ ।
ದೃಗಪಾಂಗಾವಲೋಕೇನ ಕರ್ಷತೀ ಸರ್ವಮಾನಸಮ್ ॥ ೨೫ ॥
ದೃಶೈವ ಜೀವಯಂತೀವ ದಗ್ಧಂ ಚೇತೋಭುವಂ ದೃಶಾ ।
ಯಾಮಾಶ್ರುತ್ಯ ಯಯುರ್ದ್ರಷ್ಟುಂ ಸುರಾಸುರನರಾದಯಃ ॥ ೨೬ ॥
ಕಿನ್ನರ್ಯೋ ನಾಗಕನ್ಯಾಶ್ಚ ದೃಷ್ಟ್ವಾ ಯಾಂ ಹರಿಮಂದಿರೇ ।
ದೇವ್ಯೋಽಪಿ ಕೃತಲಾವಣ್ಯಾ ವಿಸ್ಮಯಂ ಪರಮಂ ಯಯುಃ ॥ ೨೭ ॥
ಮಾಧವಾಲೋಕನೇ ಸಕ್ತಾ ರೂಪಸೌಂದರ್ಯಗರ್ವಿತಾ ।
ದೃಷ್ಟ್ವಾ ರಮಾಂ ಹರೇಃ ಪಾರ್ಶ್ವೇ ತಥಾಪಿ ನ ಚ ಸಾಽಬ್ರವೀತ್ ॥ ೨೮ ॥
ತಸ್ಯಾಶ್ಚಾರುತರಂ ರೂಪಂ ನಿರೂಪ್ಯ ಪರರೂಪಭಾಕ್ ।
ರಮಾ ವಿಸ್ಮಯಮಾಪನ್ನಾ ಪಪ್ರಚ್ಛ ಗರುಡಧ್ವಜಮ್ ॥ ೨೯ ॥

## ॥ ಹದಿಮೂರನೆಯ ಅಧ್ಯಾಯವು ॥

**ಶ್ರೀಸೂತರು ಹೇಳಿದರು—**

ಈ ರೀತಿಯಾಗಿ ಇಂದ್ರದೇವರು ಪ್ರಯಾಗಕ್ಷೇತ್ರದಲ್ಲಿದ್ದು ವೇಣೀಮಾಧವದೇವರನ್ನು ಪೂಜಾ, ವ್ರತ ಮತ್ತು ದಾನಾದಿಗಳಿಂದ ಸಂತೋಷಪಡಿಸುತ್ತಿದ್ದು ಧರ್ಮಾರ್ಜನೆ ಮಾಡಿದರು. ॥ ೧ ॥ ಆದ್ದರಿಂದ ಇಲ್ಲಿ ವಾಸಮಾಡುವ ಜನರು ಸಕಾಮರಾಗಲಿ, ನಿಷ್ಕಾಮರಾಗಲಿ, ಸ್ನಾನ, ದಾನಾದಿಗಳನ್ನು ಶ್ರೀಮಾಧವನ ಪ್ರೀತ್ಯರ್ಥವಾಗಿ ಮಾಡಿ ಇಹಲೋಕದ ಸುಖವನ್ನೂ, ನಂತರ ಮುಕ್ತಿಯನ್ನೂ ಪಡೆಯುತ್ತಾರೆ. ಈ ರೀತಿಯಾಗಿರುವುದೇ ಎಂದರೆ, ಶ್ರೀಮಾಧವನ ಸಂತೋಷ-ಕ್ಕೋಸ್ಕರ ಪ್ರಯಾಗದಲ್ಲಿ ಸ್ನಾನ ದಾನ ಜಪಾದಿಗಳನ್ನು ಭಕ್ತಿಯಿಂದ ಮಾಡುವುದೇ ಶ್ರೇಯಸ್ಕರ ಎಂದು ಶ್ರುತಿಸ್ಮೃತಿಗಳಲ್ಲಿ ನಿಶ್ಚಯಿಸಲ್ಪಟ್ಟಿದೆ. ॥ ೨-೩ ॥ ಒಳ್ಳೆಯ ಕುಲದಲ್ಲಿ ಹುಟ್ಟಿದವನಾಗಲೀ, ಆಗದಿರಲಿ, ಪಂಡಿತನಾಗಿರಲಿ, ಆಗದಿರಲಿ, ಶ್ರೀಮಂತನಾಗಿರಲಿ, ದರಿದ್ರನಾಗಿರಲಿ ಎಲ್ಲರೂ ಇಲ್ಲಿ ಬಂದು ಶ್ರೀಮಾಧವದೇವರಿಂದ ಒಳ್ಳೆಯ ಫಲವನ್ನು ಹೊಂದುತ್ತಾರೆ. ॥ ೪ ॥ ಚಿಂತಾ-ಮಣಿಯ ಸ್ಪರ್ಶದಿಂದ ಕಬ್ಬಿಣವು ಬಂಗಾರವಾಗುವಂತೆ, ಮಾನಸಸರೋವರದ ಸಮೀಪದಲ್ಲಿ ವಾಸಮಾಡುವುದರಿಂದ ಕಾಗೆಯೂ ಹಂಸಪಕ್ಷಿಯಾಗುವಂತೆ; ॥ ೫ ॥ ಜಂಬೂನದಿಯನ್ನು ಹೊಕ್ಕ ಮಣ್ಣು ಬಂಗಾರವಾಗುವಂತೆ, ಅಮೃತವನ್ನು ಪಾನಮಾಡುವುದರಿಂದಲೇ ದೇವತ್ವ-ಪ್ರಾಪ್ತಿಯಾಗುವಂತೆ ಪರಬ್ರಹ್ಮನನ್ನು ಧ್ಯಾನಮಾಡುವವನು ಬ್ರಹ್ಮನಾಗುವಂತೆ (ಅಂದರೆ ಮೋಕ್ಷ ಹೊಂದಿ ದುಃಖದೂರನಾಗಿ ತನ್ನ ಸ್ವರೂಪಕ್ಕೆ ಉಚಿತವಾದ ಪೂರ್ಣಾನಂದದಿಂದ ವೈಕುಂಠಾದಿ-ಗಳಲ್ಲಿ ವಾಸ ಪಡೆಯುವ ದೃಷ್ಟಿಯಿಂದ ಬ್ರಹ್ಮನ ಹಾಗೆ ಎಂದು ತಿಳಿಯಬೇಕು ಇಲ್ಲದಿದ್ದರೆ ಶ್ರುತಿಸ್ಮೃತಿಶಾಸ್ತ್ರಗಳಿಗೆ ವಿರೋಧ ಬರುವುದು) ಇಲ್ಲಿ ಮಾಧವನ ಸೇವಾ ಮಾಡಿದವರ ಪಾಪವು ಪುಣ್ಯವೇ ಆಗುವುದು. (ಅಂದರೆ ಪ್ರಯಾಗದಲ್ಲಿ ಮಾಧವಸೇವಾನಿರತರಾಗಿ ತಿಳಿದೋ ತಿಳಿಯದೆಯೋ ಪಾಪಮಾಡಿದರೂ ಆ ಪಾಪ ಲೇಪವಾಗದೇ ಪುಣ್ಯವೇ ಲಭ್ಯವಾಗುವುದು, ಎಂದು ತಿಳಿದಾಗ ''ವೇದವಿಹಿತಂ ಪುಣ್ಯಂ, ವೇದಾವಿಹಿತಂ ಪಾಪಂ'' —ಎಂಬ ಪುಣ್ಯಪಾಪಗಳ ಲಕ್ಷಣಗಳಿಗೆ ವಿರೋಧವು ಇರುವುದಿಲ್ಲ). ॥ ೬-೭ ॥ ಇಲ್ಲಿ ಭಕ್ತಿಯಿಂದ ಶ್ರೀಮಾಧವನನ್ನು ಆರಾಧಿಸುವುದೇ ಮುಖ್ಯ. ಇಲ್ಲಿ ಕಾಲದ ನಿಯಮವಿಲ್ಲ. ವ್ರತದಾನಾದಿಗಳ ನಿಯಮವಿಲ್ಲ. ಅಶಕ್ತನು ಕೇವಲ ಸ್ನಾನದಿಂದ, ಶಕ್ತನು ದಾನಾದಿಗಳಿಂದ ಅಖಂಡಫಲವನ್ನು ಹೊಂದುತ್ತಾನೆ. ಹೀಗೆಂದು ಶ್ರುತಿಸ್ಮೃತಿಗಳಲ್ಲಿ ತೀರ್ಮಾನವಾಗಿದೆ. ॥ ೮-೯ ॥ ಯಾರು ಯಥಾಶಕ್ತಿಯಾದರೂ ಇಲ್ಲಿ ದಾನಾದಿಗಳನ್ನು ಮಾಡುವರೋ, ಅವರಿಗೆ ಬೇರೆ ಕ್ಷೇತ್ರಗಳಲ್ಲಿ ಮಾಡಿದ ದಾನಾದಿಗಳಿಗಿಂತ ಲಕ್ಷಪಾಲು ಹೆಚ್ಚಿಗೆ ಪುಣ್ಯ ಬರುವುದು. ॥ ೧೦ ॥ ಆಲದ ಬೀಜ ಚಿಕ್ಕದಾಗಿದ್ದರೂ ಅದರಿಂದ ಆಲದ ಸಸಿಯು ಹುಟ್ಟಿ ದೊಡ್ಡ ಮರವಾಗುವಂತೆ ಇಲ್ಲಿ ಮಾಡಿದ ಅತ್ಯಲ್ಪ ದಾನವೂ ಬೃಹತ್ತರವಾಗಿ ಬೆಳೆಯುತ್ತದೆ. ಆದ್ದರಿಂದಲೇ ಈ ಕ್ಷೇತ್ರದಲ್ಲಿ ದಾನ ಮಾಡಿದವರ ಅಧಿಕಾಧಿಕ ಪುಣ್ಯದ ದೆಸೆಯಿಂದ ಎಲ್ಲಿ ತಮ್ಮನ್ನು ದೇವತ್ವಪದವಿಯಿಂದ ತಳ್ಳಿಬಿಡುವರೋ ಎಂಬ ಶಂಕೆಯಿಂದಲೇ ಇಲ್ಲಿ ಸಾಧನೆಗಳಿಗೆ ದೇವತೆಗಳೇ ವಿಘ್ನ ತಂದೊಡ್ಡುವರು. ॥ ೧೧ ॥ ಹಿಂದಿನ ಜನ್ಮಗಳ ಕರ್ಮಗಳ ದೆಸೆಯಿಂದ ಆರ್ಜಿಸಿದ ಪಾಪಗಳೇ ದಾನಗಳ ಬಗ್ಗೆ ವಿರುದ್ಧಬುದ್ಧಿಯನ್ನು ಉಂಟುಮಾಡು-ವುದರಿಂದ ಅಂಥವರಿಗೆ ಈ ಕ್ಷೇತ್ರದಲ್ಲಿ ದಾನಾದಿಗಳನ್ನು ಮಾಡಲು ಮನಸ್ಸೇ ಬರುವುದಿಲ್ಲ. ॥ ೧೨ ॥ ದೇವತೆಗಳು ಮತ್ತು ತೀರ್ಥಾಭಿಮಾನಿದೇವತೆಗಳು ಬ್ರಾಹ್ಮಣವೇಷದಲ್ಲಿ ಬಂದು,

ಹಣವನ್ನು ವೃಥಾ ವ್ಯಯ ಮಾಡಬಾರದೆಂಬ ಸೋಗನ್ನು ಹುಟ್ಟಿಸಿ ಮತ್ತು ವ್ರತಾಭಿಮಾನಿ ದೇವತೆಗಳು ವ್ರತ ಮಾಡುವವರ ಬಗ್ಗೆ ವೃಥಾ ಸ್ನೇಹಭಾವವನ್ನು ನಟಿಸುತ್ತಾ ಅವರ ಆಯಾ ದಾನಗಳಲ್ಲಿಯೂ ತೀರ್ಥಗಳ ಸೇವನೆಯಲ್ಲಿಯೂ ಮತ್ತು ವ್ರತಾಚರಣೆಯಲ್ಲಿಯೂ ವಿರುದ್ಧ ಬುದ್ಧಿಯನ್ನು ಹುಟ್ಟಿಸುತ್ತಾರೆ. ॥ ೧೩ ॥ ಈ ಸಂದರ್ಭದಲ್ಲಿ ಹಿಂದೆ ಮಾಧವದೇವರ ಗುಡಿಯಲ್ಲಿ ಬಂದು ಎಲ್ಲರಿಂದಲೂ ಕಾಣಿಸಿಕೊಳ್ಳಲ್ಪಟ್ಟ ಒಬ್ಬ ಸ್ತ್ರೀಯ ವೃತ್ತಾಂತವನ್ನು ಕೇಳಿ. ॥ ೧೪ ॥ ಅವಳ ರೂಪರಾಶಿಯು ಈ ರೀತಿಯಾಗಿ ರಾರಾಜಿಸುತ್ತಿತ್ತು. ಅವಳ ಇಡೀ ದೇಹವು ಅರಳಿದ ಮಲ್ಲಿಗೆಯ ದಂಡೆಯಂತೆ ಸುಕೋಮಲವಾಗಿದ್ದು ಅವಳು ಲಾವಣ್ಯದುಂಡೆಯಿಂದೆದ್ದು ಬಂದ ಬೆಳದಿಂಗಳಿ-ನಂತೆ ಉಜ್ಜ್ವಲವಾಗಿದ್ದಳು. ॥ ೧೫ ॥ ಅವಳು ದೃಷ್ಟಿಮಾತ್ರದಿಂದ ಯುವಕರ ಕಾಮವೆಂಬ ಅಗ್ನಿಯನ್ನು ಪ್ರದೀಪನಗೊಳಿಸುವ ವಿಷಯದಲ್ಲಿ ತಿದಿಯಂತಿದ್ದಳು. ಮೃಗಗಳ ಬೇಟೆಮಾಡು-ವುದರಲ್ಲಿ ಹಗ್ಗಗಳಿಂದ ನಿರ್ಮಿತವಾದ ಬಲೆಯಂತೆ, ತನ್ನ ಲಾವಣ್ಯಾದಿಗುಣಗಳಿಂದ ವಶಮಾಡಿಕೊಳ್ಳುವ ಸಾಮರ್ಥ್ಯವುಳ್ಳವಳಾಗಿದ್ದಳು. ॥ ೧೬ ॥ ಅವಳ ದೊಡ್ಡ ನಿತಂಬಗಳ ಮೇಲೆ ಅವಳ ತಲೆಯಿಂದ ಇಳಿದು ಬಂದ ಕಪ್ಪಾದ, ಸೂಕ್ಷ್ಮವಾದ ಪ್ರಕಾಶಮಾನವಾದ ಕೇಶರಾಶಿಗಳು ವಿಶ್ರಾಂತಿ ಪಡೆಯುತ್ತಿದ್ದವು. ಅವಳ ಮುಖಮಂಡಲವು ತನ್ನ ಕಾಂತಿಯಿಂದಲೂ, ಆಹ್ಲಾದಕತೆ-ಯಿಂದಲೂ ಪೂರ್ಣಚಂದ್ರನನ್ನು ಮೀರಿಸುತ್ತಿತ್ತು. ಅವಳ ಹಣೆಯು ವಿಸ್ತಾರವಾಗಿದ್ದು ಶುಭ್ರವಾದ ಕನ್ನಡಿಯಂತಿತ್ತು. ॥ ೧೭ ॥ ಚಕ್ಕುಲಿಯಂತೆ ಆಕಾರವಿದ್ದ ಅವಳ ಎರಡು ಕಿವಿಗಳೂ ರತ್ನಖಚಿತವಾದ ಕರ್ಣಾಭರಣಗಳಿಂದ ರಾರಾಜಿಸುತ್ತಿದ್ದವು. ಮುತ್ತಿನ ಮೂಗುತಿಯಿಂದ ಶೋಭಿಸುತ್ತಿದ್ದ ಅವಳ ನೀಳವಾದ ಮೂಗು ಎಳ್ಳಿನ ಹೂವಿನ ಶೋಭೆಯನ್ನು ಧಿಕ್ಕಾರ ಮಾಡುತ್ತಿತ್ತು. ॥ ೧೮ ॥ ವೃತ್ತಾಕಾರವಾಗಿ ಕೆಂಪಗಿದ್ದ ಅವಳ ತುಟಿಗಳ ಕಾಂತಿಯನ್ನು ವಜ್ರದಲ್ಲಿ ಕಡೆದಿಟ್ಟಂತಿದ್ದ ಅವಳ ದಂತ ಪಂಕ್ತಿಯು ಅತಿಶಯಗೊಳಿಸುತ್ತಿತ್ತು. ಚಲಿಸುತ್ತಿರುವ ದುಂಬಿಗಳಿಂದ ರಾರಾಜಿಸುತ್ತಿರುವ ಅರಳಿದ ಕಮಲಗಳಂತೆ ಅವಳ ವಿಶಾಲವಾದ ಕಣ್ಣುಗಳು ಇದ್ದುವು ॥ ೧೯ ॥ ಶಂಖದಂತೆ ಇದ್ದ ಅವಳ ಕಂಠವು ಇಂಪಾಗಿ ನುಡಿಯತಕ್ಕ ವೀಣಾರವವನ್ನು ಧಿಕ್ಕರಿಸುತ್ತಿತ್ತು. ಅವಳ ಎರಡು ಭುಜಗಳೂ ಹೊಳೆಯುತ್ತಿದ್ದು, ನಖಗಳು ಅರ್ಧಚಂದ್ರನನ್ನು ಮೀರಿಸುತ್ತಿದ್ದುವು. ಬೆರಳುಗಳು ದುಂಡಗೆ ಒಂದಕ್ಕೊಂದು ಒತ್ತಿಕೊಂಡು ಇದ್ದುವು. (ಮಾಂಸಲವಾಗಿದ್ದುವು) ॥ ೨೦ ॥ ಅವಳ ಕೈಕಮಲಗಳು ಪದ್ಮರಾಗದಳದಂತೆ ಕೆಂಪಗಿದ್ದುವು. ಅವಳ ವಕ್ಷಸ್ಥಳವೆಂಬ ಅಂಗಳದ ಮೇಲೆ ಮುದುಡಿದ ಕಮಲದಂತೆ ಎದ್ದು ನಿಂತಿರುವ ಎರಡು ಸ್ತನಗಳಿದ್ದುವು. ॥ ೨೧ ॥ ಗರಿಕೆಯ ಹುಲ್ಲುಗಳ ಮೆಟ್ಟಲುಗಳಿಂದ ಅಲಂಕೃತವಾದ ಆಳವಾದ ಬಾವಿಯಂತೆ ಅವಳ ಹೊಕ್ಕಳು ರೋಮ-ರಾಶಿಗಳಿಂದ ಸಿಂಗರಿಸಲ್ಪಟ್ಟಿತ್ತು. ದೊಡ್ಡದಾಗಿರುವ ನಿತಂಬಗಳನ್ನು ಹಾಗು ಸೊಂಟದ ಮುಂಭಾಗವನ್ನು ಹೊಂದಿದ್ದಳು. ಅವಳು ತೆಳ್ಳಗಿದ್ದು ಅವಳ ನಡುವು ಇದೆಯೋ ಇಲ್ಲವೋ ಎಂಬ ಅನುಮಾನವನ್ನು ಹುಟ್ಟಿಸುವಷ್ಟು ಸೂಕ್ಷ್ಮವಾಗಿತ್ತು. ॥ ೨೨ ॥ ಆನೆಯ ಸೊಂಡಲಿನಂತೆ ನೀಳವಾಗಿ ದುಂಡಗೆ ದಪ್ಪವಾಗಿರತಕ್ಕ ತೊಡೆಗಳುಳ್ಳವಳಾಗಿದ್ದಳು. ಒಳ್ಳೆಯ ಕಾಲು, ಮಂಡಿ ಹಾಗು ಮೊಣ-ಕಾಲುಗಳುಳ್ಳವಳಾಗಿದ್ದಳು. ಅವಳ ಪಾದಗಳೆರಡೂ ಸುಂದರವಾಗಿದ್ದುವು. ಒಟ್ಟಿನಲ್ಲಿ ಅವಳು ಒಳ್ಳೆಯ ನವಯೌವನಯುಕ್ತಳಾಗಿದ್ದು ಮನ್ಮಥನ ಕಬ್ಬಿನ ಬಿಲ್ಲಿನಂತೆ ಕಾಮಪ್ರಚೋದಕಳಾಗಿ ಇದ್ದಳು. ॥ ೨೩ ॥ ಅವಳ ಮೈಯೆಲ್ಲವೂ ಅರಶಿನಹಳದಿಯುಕ್ತಶ್ವೇತವರ್ಣದಿಂದ ಕೂಡಿತ್ತು. ದೇಹದ ಸಮಸ್ತ ಅವಯವಗಳಿಗೂ ಆಭರಣಗಳನ್ನು ಇಟ್ಟಿದ್ದಳು. ಕೆಂಪು ರೇಶ್ಮೆ ಸೀರೆಯನ್ನುಟ್ಟಿದ್ದಳು.

ಕಾಶ್ಮೀರದೇಶದ ಕಸ್ತೂರಿ, ಕೇಸರಿ ಮತ್ತು ಗಂಧ ಇವುಗಳನ್ನು ಲೇಪನ ಮಾಡಿಕೊಂಡಿದ್ದಳು. ॥ ೨೪ ॥ ಸುವಾಸನೆಯುಕ್ತ ಅವಳ ಹೂವಿನ ಸರಗಳಿಂದ ಹೊರಟ ಪರಿಮಳದಿಂದ ದಿಕ್ಕುಗಳೆಲ್ಲವೂ ಸುವಾಸಿತಗೊಂಡಿದ್ದುವು. ತನ್ನ ಕಡೆಗಣ್ಣುನೋಟದಿಂದ ಎಲ್ಲರ ಮನಸ್ಸನ್ನು ಸೂರೆಗೊಳ್ಳುತ್ತಿದ್ದಳು. ॥ ೨೫ ॥ ಒಟ್ಟಿನಲ್ಲಿ ಶಿವನಿಂದ ಭಸ್ಮೀಭೂತನಾಗಿರುವ ಕಾಮನನ್ನು ತನ್ನ ದೃಷ್ಟಿಯಿಂದಲೇ ಜೀವಿತ-ಗೊಳಿಸುವಷ್ಟು ಸುಂದರಳಾಗಿರುವ ಇವಳನ್ನು ನೋಡಿ ದೇವತೆಗಳು, ಅಸುರರು ಮತ್ತು ಮನುಷ್ಯರು ಶ್ರೀಮಾಧವನ ಮಂದಿರಕ್ಕೆ ಓಡಿಬಂದರು. ॥ ೨೬ ॥ ಆಕೆಯನ್ನು ಮಾಧವನ ಮಂದಿರದಲ್ಲಿ ಕಂಡ ಸುಂದರಿಯರಾದ ಕಿನ್ನರಸ್ತ್ರೀಯರೂ, ನಾಗಕನ್ನಿಕೆಯರೂ, ದೇವಸ್ತ್ರೀಯರೂ ಸಹ ಪರಮಾ-ಶ್ಚರ್ಯವನ್ನು ಹೊಂದಿದರು. (ಕೇವಲ ಪುರುಷರಲ್ಲ; ಸ್ವಯಂ ಸ್ತ್ರೀಯರೂ ಆಶ್ಚರ್ಯಪಟ್ಟರು ಎಂದರ್ಥ). ॥ ೨೭ ॥ ತನ್ನ ರೂಪ ಮತ್ತು ಸೌಂದರ್ಯದ ಬಗ್ಗೆ ಗರ್ವವುಳ್ಳ ಈ ಸ್ತ್ರೀಯು ಶ್ರೀಮಾಧವದೇವರನ್ನು ನೋಡುವುದರಲ್ಲಿಯೇ ಆಸಕ್ತಳಾದಳು ಮತ್ತು ಅವನ ಪಕ್ಕದಲ್ಲಿ ಶ್ರೀಲಕ್ಷ್ಮೀದೇವಿಯನ್ನೂ ನೋಡಿದಳು; ಆದರೂ ಆ ಸ್ತ್ರೀಯು ಏನೂ ಹೇಳಲಿಲ್ಲ. ॥ ೨೮ ॥ ಉತ್ತಮರೂಪವತಿಯಾದ ಶ್ರೀಲಕ್ಷ್ಮೀದೇವಿಯೂ ಆ ಸ್ತ್ರೀಯ ಅತ್ಯಾಶ್ಚರ್ಯಕರ ರೂಪವನ್ನು ವರ್ಣಿಸುತ್ತಾ ಆಶ್ಚರ್ಯಗೊಂಡು ಗರುಡಧ್ವಜನಾದ ಶ್ರೀಮಾಧವನನ್ನು ಪ್ರಶ್ನೆಮಾಡಿದಳು.॥೨೯॥

**ರಮೋವಾಚ—**

**ಭಗವನ್ ಸೃಷ್ಟಿನಿರ್ಮಾಣೇ ಬಹವೋ ರಚಿತಾಸ್ತ್ವಯಾ ।**
**ಪರಂ ತ್ವೇತಾದೃಶಂ ರೂಪಂ ನಾಶ್ರೌಷಮಪಿ ತೇಷ್ವಹಮ್ ॥ ೩೦ ॥**
**ಏತಜ್ಜನ್ಮಪ್ರಭೂತೇನ ಜನ್ಮಾಂತರಕೃತೇನ ವಾ ।**
**ಇಯಂ ತು ಕೇನ ಪುಣ್ಯೇನ ಪರಂ ಲಾವಣ್ಯಮಾಗತಾ ॥ ೩೧ ॥**
**ಭವಾನತ್ರ ಭವಾನೇತನ್ಮಹ್ಯಮಾಖ್ಯಾತು ತತ್ತ್ವತಃ ।**
**ಅನುಗ್ರಾಹ್ಯತಯಾ ಸ್ವಾಮಿನ್ ಶ್ರವಣೇ ಸಸ್ಪೃಹಾಸ್ಮ್ಯಹಮ್ ॥ ೩೨ ॥**

**ಶ್ರೀರಮಾದೇವಿಯರು ಹೇಳಿದರು—**

ಈ ಸೃಷ್ಟಿಯ ನಿರ್ಮಾಣಕಾರ್ಯದಲ್ಲಿ ತಮ್ಮಿಂದ ಬಹಳ ವಸ್ತುಗಳು ನಿರ್ಮಾಣವಾಗ-ಲ್ಪಟ್ಟಿವೆ. ಆದರೆ ಅವುಗಳಲ್ಲಿ ಇಂತಹ ರೂಪವಿರುವುದನ್ನು ನಾನು ಕೇಳಿಯೇ ಇಲ್ಲ. ॥ ೩೦ ॥ ಈ ಜನ್ಮದಲ್ಲಿಯೇ ಸಂಪಾದಿಸಿದ್ದೋ ಅಥವಾ ಜನ್ಮಾಂತರದಲ್ಲಿ ಅರ್ಜಿಸಿದ್ದೋ ಆದ ಪುಣ್ಯದ ಫಲವಾಗಿಯೇ ಇಂತಹ ಲಾವಣ್ಯವು ಇರಲು ಸಾಧ್ಯ. ॥ ೩೧ ॥ ಈ ವಿಷಯವನ್ನು ಅನುಗ್ರಹ ಮಾಡಿ ತಾವು ನನಗೆ ಯಥಾರ್ಥತಃ ಹೇಳಬೇಕು. ಈ ವಿಷಯವಾಗಿ ಕೇಳಬಯಸುತ್ತೇನೆ. ॥ ೩೨ ॥

**ಸೂತ ಉವಾಚ—**

**ಭೋ ಭೋ ತಪೋಧನಾಃ ಹ್ಯೇವಂ ಅವಧಾರ್ಯ ರಮಾವಚಃ ।**
**ಅಭಾಷತ ವಚೋ ರಮ್ಯಂ ಮಾಧವಃ ಸಸ್ಮಿತಾನನಃ ॥ ೩೩ ॥**

**ಸೂತರು ಹೇಳಿದರು—**

ಎಲೈ ತಪಸ್ವಿಗಳಿರಾ! ಈ ರೀತಿಯಾಗಿ ಹೇಳಲ್ಪಟ್ಟ ಶ್ರೀಲಕ್ಷ್ಮೀದೇವಿಯರ ಮಾತನ್ನು

ಗಮನಿಸಿ ಶ್ರೀಮಾಧವನು ಈ ರಮ್ಯವಾದ ಮಾತುಗಳನ್ನು ಹೇಳಿದನು. ॥ ೩೩ ॥

ಶ್ರೀಭಗವಾನುವಾಚ—

ಅಸ್ಯಾಃ ಪುಣ್ಯಸ್ಯ ಮರ್ಯಾದಾಂ ನಾಹಂ ವರ್ಣಯಿತುಂ ಪ್ರಭುಃ ।
ತಥಾಪಿ ವಚ್ಮಿ ತೇ ಕಿಂಚಿತ್ ಪ್ರತಿವಾಕ್ಯಸ್ಯ ದಿತ್ಸಯಾ ॥ ೩೪ ॥
ಗುಣಜಾತಿಕ್ರಿಯಾಶುದ್ಧೋ ಗೋಧನಾಲಂಕೃತಾಶ್ರಮಃ ।
ವಿಕಟೋ ನಾಮ ಗೋಪೇಶ ಆಸೀನ್ಮಥುರಮಂಡಲೇ ॥ ೩೫ ॥
ದೇವದ್ವಿಜರತಃ ಶ್ರೀಮಾನನಪತ್ಯತ್ವದುಃಖಿತಃ ।
ವಾರ್ಧಕೇ ವಿಕಟಾಂ ನಾಮ ಕನ್ಯಾಮಲಭತ ಪ್ರಿಯೇ ॥ ೩೬ ॥
ಪಿತುರ್ವೇಶ್ಮನಿ ಸಾ ಕನ್ಯಾ ವವೃಧೇ ಸರ್ವಲಾಲಿತಾ ।
ಸುರೂಪಾ ಚಾರುಸರ್ವಾಂಗೀ ಪಿತೃಮಾತೃಹಿತೇ ರತಾ ॥ ೩೭ ॥
ವಿವಾಹಾರ್ಥಮಥೋ ಕಾಲೇ ಕನ್ಯಕಾಮುತ್ಕಟಾಯ ತಾಮ್ ।
ಸ್ವೋಚಿತಾಚಾರವಂಶಾಯ ವಿಕಟೋಽದಾದ್ವಿಧಾನತಃ ॥ ೩೮ ॥
ಉತ್ಕಟೋಽಪಿ ಚ ತಾಂ ಲಬ್ಧ್ವಾ ಪಾರಿಬರ್ಹವತೀಂ ವಧೂಮ್ ।
ಜಗಾಮ ಶಕಟೇನಾಶು ಸಪತ್ನೀಕಃ ಸ್ವಮಾಶ್ರಮಮ್ ॥ ೩೯ ॥
ತತ್ರ ಸಂಹರ್ಷಯನ್ಸರ್ವಾನ್ಸುಹೃದೋ ವಿಕಟಾನ್ವಿತಃ ।
ಸನ್ಮಾರ್ಗನಿರತಸ್ವಾಂತೋ ಗಾರ್ಹಸ್ಥ್ಯಂ ಬುಭುಜೇ ಸುಖಮ್ ॥ ೪೦ ॥
ವಿಕಟಾಪಿ ಸದಾಚಾರಾ ಪತಿಶುಶ್ರೂಷಣೇ ರತಾ ।
ಗೃಹಕರ್ಮಣಿ ಸಂಸಕ್ತಾ ಯೌವನಂ ಬುಭುಜೇ ಸುಖಮ್ ॥ ೪೧ ॥

॥ ಇತಿ ತ್ರಯೋದಶೋಽಧ್ಯಾಯಃ ॥

ಶ್ರೀಮಾಧವದೇವರು ಹೇಳಿದರು—

ಈ ಸ್ತ್ರೀಯ ಪುಣ್ಯದ ಎಲ್ಲೆಯನ್ನು ನಾನು ವರ್ಣಿಸಲಾರೆ. ನೀನು ಬಯಸುತ್ತಿರುವುದರಿಂದ ಉತ್ತರ ಹೇಳಲು ಇಚ್ಛಿಸುತ್ತೇನೆ. ॥ ೩೪ ॥ ಹಿಂದೆ ಗುಣಗಳಿಂದಲೂ, ಜಾತಿಯಿಂದಲೂ ತನ್ನ ಕ್ರಿಯೆಗಳಿಂದಲೂ ಶುದ್ಧವಾದ ವಿಕಟನೆಂಬ ಒಬ್ಬ ಗೋಪಾಲಕರ ರಾಜನು ಮಥುರಾ-ಪ್ರಾಂತ್ಯದಲ್ಲಿ ಇದ್ದು ಸಂಪತ್ತಿನಿಂದ ಶೋಭಿಸುತ್ತಿದ್ದನು. ॥ ೩೫ ॥ ಇವನು ದೇವರಲ್ಲಿಯೂ, ಬ್ರಾಹ್ಮಣರಲ್ಲಿಯೂ ಭಕ್ತಿಯುಳ್ಳವನಾಗಿದ್ದನು. ಆದರೆ ಅವನಿಗೆ ಮಕ್ಕಳಿಲ್ಲದ ದುಃಖವಿತ್ತು. ತನ್ನ ವೃದ್ಧಾಪ್ಯದಲ್ಲಿ "ವಿಕಟಾ" ಎಂಬ ಮಗಳನ್ನು ಪಡೆದನು. ॥ ೩೬ ॥ ತಂದೆಯ ಮನೆಯಲ್ಲಿ ಇವಳು ಎಲ್ಲರಿಂದಲೂ ಲಾಲಿಸಲ್ಪಟ್ಟವಳಾಗಿ ಬೆಳೆದಿದ್ದಳು. ಅವಳು ಒಳ್ಳೆಯ ರೂಪವತಿಯೂ, ಸರ್ವಾಂಗ-ಸುಂದರಿಯೂ ಆಗಿದ್ದು ಮಾತಾಪಿತೃಗಳಿಗೆ ಹಿತವಾದುದನ್ನು ಮಾಡುವುದರಲ್ಲಿಯೇ ಆಸಕ್ತಳಾಗಿ ಇದ್ದಳು. ॥ ೩೭ ॥ ಅವಳು ವಯಸ್ಸಿಗೆ ಬರಲು, ತಮಗೆ ಯೋಗ್ಯವಾದ ಆಚಾರವುಳ್ಳ, ಒಳ್ಳೆ ವಂಶದವನಾದ ಉತ್ಕಟನಿಗೆ ಅವಳನ್ನು ಕೊಟ್ಟು ವಿಧ್ಯುಕ್ತವಾಗಿ ವಿವಾಹ ಮಾಡಿದರು. ॥ ೩೮ ॥ ವರೋಪಚಾರ ಮತ್ತು ಕನ್ಯೆಗೆ ಕೊಡಬೇಕಾದ ಉಡುಗೊರೆ ಸಹಿತ ತನ್ನ ಹೆಂಡತಿಯನ್ನು ಬಂಡಿಯಲ್ಲಿ ಕೂಡಿಸಿಕೊಂಡು ಉತ್ಕಟನು ತನ್ನ ಆಶ್ರಮಕ್ಕೆ ಬಂದನು. ॥ ೩೯ ॥ ವಿಕಟೆಯೊಡ-

ಗೂಡಿ ಸಂತೋಷಚಿತ್ತದಿಂದ ಎಲ್ಲರನ್ನೂ ಸಂತೋಷಪಡಿಸುತ್ತಾ ಸನ್ಮಾರ್ಗದಲ್ಲಿದ್ದು ತನ್ನ ಗೃಹಸ್ಥಾಶ್ರಮದ ಸುಖವನ್ನು ಅನುಭವಿಸುತ್ತಿದ್ದನು. ॥ ೪೦ ॥ ವಿಕಟೆಯಾದರೋ ಸದಾಚಾರ-ಸಂಪನ್ನಳಾಗಿ, ಪತಿಶುಶ್ರೂಷೆಯಲ್ಲಿ ತೊಡಗಿದವಳಾಗಿ ಮತ್ತು ಮನೆಗೆಲಸಗಳನ್ನು ಮಾಡಿ-ಕೊಂಡಿದ್ದು ಯೌವನಕ್ಕೆ ಸಹಜವಾದ ಸುಖವನ್ನು ಅನುಭವಿಸಿಕೊಂಡಿದ್ದಳು. ॥ ೪೧ ॥

॥ ಹದಿಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುರ್ದಶೋಽಧ್ಯಾಯಃ ॥ ೧೪ ॥

ಮಾಧವ ಉವಾಚ—

ಏವಂ ತಯೋಸ್ತು ದಂಪತ್ಯೋರ್ಗೃಹಕರ್ಮಾಣಿ ಕುರ್ವತೋಃ ।
ರೂಪಸೌಂದರ್ಯಸಂಯುಕ್ತಾವಭೂತಾಂ ದ್ವೌ ಸುತೌ ತದಾ ॥ ೧ ॥
ಜ್ಞಾತ್ವಾ ಲಕ್ಷಣಸಂಪನ್ನೌ ಉತ್ಕಟಸ್ತನಯೌ ಸ್ವಕೌ ।
ಚಕಾರ ವಿಪ್ರಸಂಮತ್ಯಾ ನಾಮ್ನಾ ಪ್ರತಿಭಟೋದ್ಭಟೌ ॥ ೨ ॥
ಕದಾಚಿನ್ನಗರೇ ತಸ್ಮಿನ್ಕಶ್ಚಿತ್ಕಾರ್ಪಟಿಕೋತ್ತಮಃ ।
ದ್ವಿಕರಂಡೇನ ಗಾಂಗೇಯಂ ವಹನ್ಜಲಮಗಾದ್ಭ್ರಮನ್ ॥ ೩ ॥
ಗತ್ವಾಽಸಾವುತ್ಕಟದ್ವಾರೇ ಕ್ಷುಧಾರ್ತಃ ಶೀತವಿಹ್ವಲಃ ।
ಯಯಾಚೇ ಶರಣಂ ಸಾಯಂ ಗದ್ಗದಾಕ್ಷರಯಾ ಗಿರಾ ॥ ೪ ॥
ಶ್ರುತ್ವಾ ದಯಾಸೀತ್ತಾಂ ವಾಣೀಮತಿದೀನಾಂ ದಯಾನ್ವಿತಾಮ್ ।
ಪ್ರಾಯಚ್ಛಚ್ಛರಣಂ ತಸ್ಮಾ ಉತ್ಕಟೇನಾನುಮೋದಿತಾ ॥ ೫ ॥
ಶಯ್ಯಾಸ್ಥಲಪಲಾಲಾನ್ನದಧಿದುಗ್ಧಜಲಾದಿಭಿಃ ।
ಇಂಧನಾಗ್ನಿಪ್ರದಾನೇನ ಪಥಿಕಂ ಸಮತೋಷಯತ್ ॥ ೬ ॥
ಸೋಽಪಿ ದೃಷ್ಟ್ವೇತಿ ಸಾಹಿತ್ಯಂ ಪಕ್ತ್ವಾ ಭುಕ್ತ್ವಾತಿಹರ್ಷಿತಃ ।
ದಧಿದುಗ್ಧಾದಿಕಂ ಪೀತ್ವಾಽಶಯಿಷ್ಟ ನಿಶಿ ತದ್ಗೃಹೇ ॥ ೭ ॥
ಪ್ರಯಾಗ ತೀರ್ಥರಾಜೇತಿ ಮಾಧವೇತಿ ವದನ್ಸದಾ ।
ವರ್ಣಯಂಸ್ತಸ್ಯ ಮಾಹಾತ್ಮ್ಯಂ ತ್ರಿಯಾಮಾಮತ್ಯವಾಹಯತ್ ॥ ೮ ॥
ಸಾ ತಸ್ಯ ಭಜನಂ ರಾತ್ರೌ ಜಾಗ್ರತೀ ಪತಿಸನ್ನಿಧೌ ।
ಶ್ರುತ್ವಾಥ ತೀರ್ಥಭೂಪಾಲೇ ರೂಢಭಕ್ತಿರ್ಬಭೂವ ಹ ॥ ೯ ॥
ವ್ಯುಷ್ಟೇ ತತಸ್ಸಮುತ್ಥಾಯ ಶುದ್ಧಃ ಕಾರ್ಪಟಿಕೋತ್ತಮಃ ।
ತೌ ದಂಪತೀ ಸಮಾಮಂತ್ರ್ಯ ಪ್ರತಸ್ಥೇ ಸದನಂ ಸ್ವಕಮ್ ॥ ೧೦ ॥
ವಿಕಟಾಪಿ ತದಾರಭ್ಯ ಸರ್ವದಾ ಗೃಹಕರ್ಮಣಿ ।
ತದುಕ್ತವಿಧಯಾ ಧ್ಯಾಯನ್ಪ್ರಯಾಗೇತಿ ಜಜಾಪ ಹ ॥ ೧೧ ॥
ದಧಿವಿಕ್ರಯಕಾಲೇಽಪಿ ಪ್ರಯಾಗತ್ರ್ಯಕ್ಷರೀ ಮುದಾ ।
ನಿರರ್ಥಕಂ ಪರಾಲಾಪೇ ನ ತತ್ಯಾಜ ಪರಾಙ್ಮುಖೀ ॥ ೧೨ ॥
ತೇನ ನಾಮಪ್ರಭಾವೇನ ವಿಕ್ರೀತೇಽಪಿ ಚ ದಧ್ಯ್ಯಹೋ ।
ಪರಿಪೂರಿತಮೇವಾಸೀದ್ದಧಿಭಾಂಡಂ ಮನೋರಮಮ್ ॥ ೧೩ ॥
ದೃಷ್ಟ್ವಾ ತತ್ಪರಮಾಶ್ಚರ್ಯಂ ಸ್ವಭರ್ತರಿ ನಿವೇದ್ಯ ಚ ।
ಪ್ರಯಾಗಸ್ಮರಣಸ್ಯೇದಂ ಬುಬುಧೇ ನಿಶ್ಚಿತಂ ಫಲಮ್ ॥ ೧೪ ॥

ತದೇವಂ ಪ್ರತ್ಯಹಂ ಭಾಂಡಂ ಗೃಹೀತ್ವಾ ಸಕಲೇ ಪುರೇ ।
ಯಥೇಚ್ಛಂ ದಧಿ ವಿಕ್ರೀಯ ಭಾಂಡಂ ಸಂಸ್ಥಾಪ್ಯ ರಕ್ಷತೀ ॥ ೧೫ ॥
ಏವಂ ತಯಾಲ್ಪಕಾಲೇನ ಭೂಯಿಷ್ಠಂ ಧನಮರ್ಜಿತಮ್ ।
ಪರಂ ಪಾರಂ ನ ಜಾನಾತಿ ಸ್ವಯಂ ತಸ್ಯ ಯಥಾ ತಥಾ ॥ ೧೬ ॥
ಏವಂ ಬಹುತಿಥೇ ಕಾಲೇ ಕಾಲವೇಗಪ್ರಚೋದಿತಃ ।
ಮಮಾರ ವಿಕಟಸ್ತತ್ರ ಮಥುರಾಪ್ರಾಂತಭೂಮಿಷು ॥ ೧೭ ॥
ಪಾವನಸ್ಥಲಮಾಹಾತ್ಮ್ಯಾತ್ಪಾತಿವ್ರತ್ಯೇನ ಚ ಸ್ತ್ರಿಯಃ ।
ಸ್ವಸ್ಯಾಪಿ ಧರ್ಮಶೀಲತ್ವಾದವಾಪ ಸ್ವರ್ಗಮಂಡಲಮ್ ॥ ೧೮ ॥
ಪತ್ಯುರ್ಮರಣಮಾತ್ರೇಣ ಶೋಕಸಂವಿಗ್ನಮಾನಸಾ ।
ಚಕಾರ ಜ್ಯೇಷ್ಠಪುತ್ರೇಣ ತದೀಯಂ ಸಾಂಪರಾಯಿಕಮ್ ॥ ೧೯ ॥
ತತಸ್ಸಂಸಾರವಿರತಾ ಸರ್ವಭೋಗಗತಸ್ಪೃಹಾ ।
ಅಹಂತಾಮಮತಾಶೂನ್ಯಾ ಹಿತಂ ಸ್ವಸ್ಯ ವ್ಯಚಾರಯತ್ ॥ ೨೦ ॥
ಸಂಸಾರೋಽಯಂ ಸುಖಾಭಾಸೋ ದುಃಖಮೂಲೋ ನ ಸಂಶಯಃ ।
ಅತೋಽಹಮಧುನಾ ನೈವ ಕಾಮಯೇ ಭಂಗುರಂ ಸುಖಮ್ ॥ ೨೧ ॥
ಪತಿಪುತ್ರಧನಾಗಾರಂ ಬಂಧುಭೃತ್ಯಜನಾದಿಕಮ್ ।
ಸ್ವಪ್ನೇಂದ್ರಜಾಲಸದೃಶಂ ಮನ್ಯೇಽಹಂ ನ ಯಥಾರ್ಥತಃ ॥ ೨೨ ॥
ಸ್ತ್ರೀಣಾಂ ಭರ್ತಾ ಪರೋ ದೇವ ಇಹಾಮುತ್ರ ಸುಖಾವಹಃ ।
ತಂ ವಿನಾ ಚ ಮೃತಪ್ರಾಯಂ ನೇಹ ಸಾಂಸಾರಿಕಂ ಸುಖಮ್ ॥ ೨೩ ॥
ತಸ್ಮಾಚ್ಛ್ರೀಮಾಧವಸ್ಥಾನಂ ಚತುರ್ವಿಧಫಲಪ್ರದಮ್ ।
ಗತ್ವಾ ಸರ್ವಧನಂ ತತ್ರ ವಿತರಿಷ್ಯೇ ಯಥಾಸುಖಮ್ ॥ ೨೪ ॥
ಮಹಾದಾನಾನ್ನದಾನಾದ್ಯೈರ್ಗುಪ್ತದಾನಾದಿನಾ ತಥಾ ।
ಕ್ಷಪಯಿಷ್ಯೇಽಪರಂ ಕಾಲಂ ನಿಯಮವ್ರತಮಜ್ಜನೈಃ ॥ ೨೫ ॥
ವಿಚಾರ್ಯೈವಂ ನಿಜಸ್ವಾಂತೇ ಗರಗ್ರಾಸೋಪಮಂ ಗೃಹಮ್ ।
ಚತುರ್ಧಾ ವ್ಯಭಜತ್ತಸ್ಮಾತ್ಸಕಲಂ ಸಂಚಿತಂ ಧನಮ್ ॥ ೨೬ ॥
ಭಾಗದ್ವಯಂ ಸ್ವಪುತ್ರಾಭ್ಯಾಂ ದತ್ವಾ ಭಾಗದ್ವಯಂ ಪರಮ್ ।
ಸ್ವಯಮಾದಾಯ ಧರ್ಮಾರ್ಥಂ ಕನಿಷ್ಠತನಯಂ ತಥಾ ॥ ೨೭ ॥
ಪ್ರಯಾಗಧ್ಯಾನನಿರತಾ ಸಂಛಿನ್ನದೃಢಬಂಧನಾ ।
ಕತಿಭಿರ್ನಾಗರೈಸ್ಸಾಕಂ ಪ್ರಚಚಾಲ ನಿಜಾಶ್ರಮಾತ್ ॥ ೨೮ ॥
ತತಃ ಕತಿಪಯಾಹೋಭಿರ್ಯಾತ್ರಾಧರ್ಮಪುರಸ್ಸರಮ್ ।
ಪ್ರಯಾಗಮಂಡಲಂ ಪ್ರಾಪ್ತಾ ಧನದಾನಾದಿಗರ್ವಿತಾ ॥ ೨೯ ॥

**ಮಂಡಲಪ್ರಾಪ್ತಿಮಾತ್ರೇಣ ಸರ್ವೇಷಾಂ ಲೋಭಿತಾ ಮತಿಃ ।**
**ವಿಪರೀತೈವ ಸಂಜಾತಾ ವ್ರತದಾನಸಮಾಧಿಷು ॥ ೩೦ ॥**
**ಅಥಾಪಿ ವಿಪ್ರರೂಪೇಣ ದೇವಾ ಮಂಡಲವಾಸಿನಃ ।**
**ನಾನಾವೇಷಧರಾ ಭೀತಾ ಆಜಗ್ಮುರ್ವಿಕಟಾಂತಿಕಮ್ ॥ ೩೧ ॥**
**ಸಾ ತಾನ್ದೃಷ್ಟ್ವಾ ನಮಸ್ಕೃತ್ಯ ಉಪವೇಶ್ಯಾಸನಾದಿಷು ।**
**ಸ್ವಾಗತೀಕೃತ್ಯ ತೀರ್ಥೇಽಸ್ಮಿನ್ನಪೃಚ್ಛನ್ಕೃತ್ಯಮುತ್ತಮಮ್ ॥ ೩೨ ॥**

## ॥ ಹದಿನಾಲ್ಕನೆಯ ಅಧ್ಯಾಯವು ॥

**ಶ್ರೀ ಮಾಧವದೇವರು ಹೇಳಿದರು—**

ಹೀಗಿರಲು, ಮನೆ ಕೆಲಸಗಳಲ್ಲಿ ಆಸಕ್ತರಾಗಿದ್ದ ಆ ದಂಪತಿಗಳಿಗೆ ರೂಪ ಮತ್ತು ಸೌಂದರ್ಯದಿಂದ ಕೂಡಿದ ಇಬ್ಬರು ಮಕ್ಕಳುಗಳಾದರು. ॥ ೧ ॥ ತನ್ನ ಇಬ್ಬರು ಮಕ್ಕಳು ಲಕ್ಷಣ-ಸಂಪನ್ನರಾಗಿರುವುದನ್ನು ತಿಳಿದು ಉತ್ಸಾಹಿತನಾದ ಉತ್ಕಟನು ಆ ಮಕ್ಕಳೀರ್ವರಿಗೆ ಬ್ರಾಹ್ಮಣರ ಒಪ್ಪಿಗೆಯಿಂದ 'ಪ್ರತಿಭಟ ಮತ್ತು ಉದ್ಭಟ' ಎಂದು ನಾಮಕರಣ ಮಾಡಿದನು. ।೨॥ ಒಂದಾನೊಂದು ದಿವಸ ಆ ನಗರದಲ್ಲಿ ಅಲೆಯುತ್ತಿದ್ದ ಒಬ್ಬ ಯಾತ್ರಿಕನು ಎರಡು ಕರಂಡಗಳಲ್ಲಿ ಗಂಗೆಯ ಜಲವನ್ನು ಹೊತ್ತಿಕೊಂಡು ತಿರುಗುತ್ತಾ ಬಂದನು. ಹಾಗೆಯೇ ತಿರುಗಾಡುತ್ತಾ ಇದ್ದ ಇವನು ಹಸಿವು ಮತ್ತು ಶೀತದಿಂದ ಘಾಸಿಗೊಂಡು ಉತ್ಕಟನ ಮನೆಯ ಬಾಗಿಲಿಗೆ ಬಂದು ಗದ್ಗದವಾದ ಅಕ್ಷರಗಳಿಂದ ಉಚ್ಚಾರ ಮಾಡುತ್ತಾ ಅಲ್ಲಿ ರಾತ್ರಿ ತಂಗಲು ಅವಕಾಶ ಬೇಡಿದನು. ॥ ೩-೪ ॥ ಅತಿದೈನ್ಯತೆಯಿಂದ ಕೂಡಿದ್ದ ಅವನ ಮಾತನ್ನು ಕೇಳಿ ಆ ಉತ್ಕಟನ ಭಾರ್ಯೆಯು ದಯೆಯನ್ನು ಹೊಂದಿ ತನ್ನ ಗಂಡನ ಸಮ್ಮತಿ ಪಡೆದು ಆ ಯಾತ್ರಿಕನಿಗೆ ಅವರ ಮನೆಯಲ್ಲಿ ತಂಗಲು ಅವಕಾಶ ನೀಡಿದಳು. ॥ ೫ ॥ ಅವನಿಗೆ ಹಾಸಿಗೆ, ಇರಲು ಸ್ಥಳ, ಹೊದ್ದಿಗೆ, ಮೊಸರು, ಹಾಲು, ಅನ್ನ, ನೀರು, ಸೌದೆ, ಅಗ್ನಿ ಇವುಗಳನ್ನು ಕೊಟ್ಟು ಸಂತೋಷಪಡಿಸಿದಳು. ॥ ೬ ॥ ಅವನಾದರೋ ಅವಳು ಒದಗಿಸಿದ ಪದಾರ್ಥಗಳನ್ನು ನೋಡಿ, ಅಡಿಗೆ ಮಾಡಿ, ಭೋಜನವನ್ನು ಮಾಡಿ, ಹಾಲು ಮೊಸರನ್ನು ಕುಡಿದು ಸಂತೋಷದಿಂದ ನಿದ್ರಿಸುತ್ತಾ ಅವರ ಮನೆಯಲ್ಲಿ ರಾತ್ರಿಯನ್ನು ಕಳೆದನು. ॥ ೭ ॥ ''ಪ್ರಯಾಗ! ತೀರ್ಥರಾಜ! ಮಾಧವ!'' ಎಂದು ಜಪಿಸುತ್ತಾ ಯಾವಾಗಲೂ ಆ ಮಾಧವನ ಮಾಹಾತ್ಮ್ಯೆಯನ್ನು ವರ್ಣಿಸುತ್ತಾ ರಾತ್ರಿಯನ್ನು ಕಳೆದನು. ॥ ೮ ॥ ವಿಕಟೆಯಾದರೋ ರಾತ್ರಿಯೆಲ್ಲಾ ನಡೆದ ಯಾತ್ರಿಕನ ಭಜನೆಯನ್ನು ಎಚ್ಚೆತ್ತಿದ್ದು ಆಲಿಸಿ ಆ ತೀರ್ಥರಾಜನಾದ ಪ್ರಯಾಗದಲ್ಲಿ ದೃಢವಾದ ಭಕ್ತಿಯನ್ನು ಹೊಂದಿದಳು. ॥ ೯ ॥ ಪ್ರಾತಃ ಕಾಲದಲ್ಲಿ ಎದ್ದು ಆ ಯಾತ್ರಿಕನು ದಂಪತಿಗಳಿಗೆ ಹೇಳಿ ಅವರಿಂದ ಅಪ್ಪಣೆ ಪಡೆದು ತನ್ನ ಊರಿಗೆ ಹೊರಟನು. ॥ ೧೦ ॥ ವಿಕಟೆಯಾದರೋ ಅಂದಿನಿಂದ ಯಾವಾಗಲೂ (ಮನೆಗೆಲಸಗಳಲ್ಲಿ ತೊಡಗಿದ್ದಾಗಲೂ ಸಹ) ಆ ಯಾತ್ರಿಕನು ಹೇಳಿದ ರೀತಿಯಲ್ಲೇ ಪ್ರಯಾಗವನ್ನು ಜಪಿಸುತ್ತಿದ್ದಳು. ॥ ೧೧ ॥ ಮೊಸರು ಮಾರುತ್ತಿದ್ದ ಕಾಲದಲ್ಲಿಯೂ ಮೂರು ಅಕ್ಷರದ ''ಪ್ರಯಾಗ''ವನ್ನು ಜಪ ಮಾಡುತ್ತಿದ್ದು ಬೇರೆಯವರ ಸಂಗಡ ಹರಟುವುದನ್ನೂ ನಿರರ್ಥಕವೆಂದು ತಿಳಿದು ಬಿಟ್ಟುಬಿಟ್ಟಳು. ॥ ೧೨ ॥ ಈ ಪ್ರಯಾಗಜಪದ ಫಲವಾಗಿ, ದಿವಸವೂ ಅವಳು ತೆಗೆದುಕೊಂಡು ಹೋಗುತ್ತಿದ್ದ

ಮೊಸರಿನ ಪಾತ್ರೆಯು ಎಷ್ಟೇ ಮೊಸರು ಮಾರಾಟವಾದರೂ ಯಾವಾಗಲೂ ತುಂಬಿಯೇ ಇರುತ್ತಿತ್ತು. ॥ ೧೩ ॥ ಈ ಪರಮಾಶ್ಚರ್ಯವನ್ನು ನೋಡಿ ಅದನ್ನು ತನ್ನ ಗಂಡನಿಗೆ ತಿಳಿಸಿ, ಪ್ರಯಾಗದ ಸ್ಮರಣೆಯ ಫಲವೇ ಇದೆಂದು ನಿಶ್ಚಯವಾಗಿ ತಿಳಿದಳು. ॥ ೧೪ ॥ ಪ್ರತಿನಿತ್ಯವೂ ಅದೇ ರೀತಿಯಾಗಿ ಊರಿನಲ್ಲೆಲ್ಲಾ ಮೊಸರನ್ನು ಮಾರಿ ಈ ಪಾತ್ರೆಯನ್ನು ಮಾತ್ರ ಸುರಕ್ಷಿತವಾಗಿ ಇಟ್ಟುಕೊಂಡಿದ್ದಳು. ॥ ೧೫ ॥ ಹೀಗೆ ಕೆಲವೇ ದಿನಗಳಲ್ಲಿ ಅವಳು ಬಹಳ ಹಣವನ್ನು ಗಳಿಸಿದಳು. ಇದರ ಮರ್ಮವನ್ನು ತಿಳಿಯದಿದ್ದರೂ ಹಣಗಳಿಕೆಯ ಪ್ರಕಾರವನ್ನಂತೂ ತಿಳಿದಿದ್ದಳು. ॥ ೧೬ ॥ ಹೀಗೆ ಬಹಳ ದಿನಗಳು ಕಳೆಯುತ್ತಿರಲು, ಕಾಲ ಪ್ರವಾಹಕ್ಕೆ ಸಿಕ್ಕಿದ ಅವಳ ಗಂಡನು ಮಥುರಾ-ರಾಜ್ಯದಲ್ಲಿ ಮೃತನಾದನು. ॥ ೧೭ ॥ ಅವನು ಮೃತವಾದ ಸ್ಥಳದ ಮಾಹಾತ್ಮ್ಯೆಯೋ, ತನ್ನ ಹೆಂಡತಿಯ ಪಾತಿವ್ರತ್ಯೆಯ ಫಲವೋ ಅಥವಾ ತನ್ನಲ್ಲಿದ್ದ ಧರ್ಮಶೀಲತೆಯ ಫಲವೋ ಅವನು ಸ್ವರ್ಗಲೋಕವನ್ನೈದಿದನು. ॥ ೧೮ ॥ ಗಂಡನ ಮರಣಮಾತ್ರದಿಂದಲೇ ಶೋಕಗೊಂಡ ಮನಸ್ಸುಳ್ಳವಳಾದ ಆ ವಿಕಟೆಯು ತನ್ನ ಹಿರಿಯ ಮಗನ ಮೂಲಕ ತನ್ನ ಗಂಡನಿಗೆ ಔರ್ಧ್ವದೇಹಿಕ(ಅಪರ)ಕ್ರಿಯೆಗಳನ್ನೆಲ್ಲಾ ಮಾಡಿಸಿದಳು. ॥ ೧೯ ॥ ಅನಂತರ ಸಂಸಾರದಲ್ಲಿ ವೈರಾಗ್ಯ ಬಂದು ಎಲ್ಲ ಬಗೆಯ ಭೋಗಗಳಲ್ಲಿ ಆಸೆ ಬಿಟ್ಟವಳಾದಳು. ಅಹಂಕಾರ ಮಮಕಾರ-ಗಳನ್ನು ಬಿಟ್ಟವಳಾಗಿ ಶ್ರೇಯಸ್ಸಿನ ಬಗ್ಗೆಯೇ ವಿಚಾರ ಮಾಡತೊಡಗಿದಳು. ॥ ೨೦ ॥ ಈ ಸಂಸಾರವು ಸುಖ ಕೊಡುವಂತೆ ತೋರತಕ್ಕದ್ದು. ಆದರೆ ಇದರ ಮೂಲವು ದುಃಖವೇ, ಈ ಬಗ್ಗೆ ಯಾವ ಅನುಮಾನವೂ ಇಲ್ಲ. ಆದ್ದರಿಂದ ಕ್ಷಣಾರ್ಧದಲ್ಲಿ ಒಡೆಯುವ ನೀರಿನ ಗುಳ್ಳೆಯಂತೆ ಈ ಸಂಸಾರವು ಕೇವಲ ನಶ್ವರ. ಆದ್ದರಿಂದ ಈಗಿನಿಂದಲೇ ಇಗರ ಆಸೆಯನ್ನು ನಾನು ತೊರೆಯು-ವೆನು. ॥ ೨೧ ॥ ಗಂಡ, ಹೆಂಡತಿ, ಮಗ, ಹಣ, ಮನೆ, ಬಂಧು ಮತ್ತು ಸೇವಕರುಗಳು ಇವರೆ-ಲ್ಲರೂ ಸ್ವಪ್ನದಲ್ಲಿ ತೋರುವ ಗಂಧರ್ವನಗರಿಯಂತೆ ಶಾಶ್ವತವಲ್ಲ (ಸ್ವಪ್ನದಲ್ಲಿ ತೋರುವ ಪದಾರ್ಥಗಳೆಲ್ಲವೂ ಸತ್ಯವೇ. ತೈಜಸನಾಮಕ ಪರಮಾತ್ಮನು ನಮ್ಮ ನಮ್ಮ ವಾಸನಾದ್ರವ್ಯಗಳನ್ನು ಉಪಯೋಗಿಸಿ ಇವುಗಳನ್ನು ಸೃಷ್ಟಿ ಮಾಡುತ್ತಾನೆ. ನಂತರ ನಾಶ ಮಾಡುತ್ತಾನೆ. ಇವುಗಳನ್ನು ಬಾಹ್ಯದಲ್ಲಿ ವೇದ್ಯವಾಗಿರುವ ಪದಾರ್ಥಗಳಿಗೆ ಸರಿ ಹೊಂದಿಸಿ ನಾವು ತಿಳಿಯುವುದು ಮಿಥ್ಯಾ ಜ್ಞಾನ). ಹೀಗೆಂದು ತಿಳಿದಳು. ॥ ೨೨ ॥ ಹೆಂಗಸರಿಗೆ ಗಂಡನು ಇಹಲೋಕದಲ್ಲೂ ಪರಲೋಕ-ದಲ್ಲೂ ಪರದೈವವೇ ಸರಿ. ಇವನಿಲ್ಲದೆ ಅವಳು ಅನುಭವಿಸುವ ಸಾಂಸಾರಿಕಸುಖವು ಮೃತಪ್ರಾಯ. ಪುರುಷಾರ್ಥಗಳನ್ನು ಕೊಡುವ ಮಾಧವನ ಸ್ಥಾನವಾದ ಪ್ರಯಾಗಕ್ಕೆ ಹೋಗುತ್ತೇನೆ. ಅಲ್ಲಿ ನನ್ನ ಹಣವನ್ನೂ ಸುಖವಾಗಿ ವಿತರಣೆ ಮಾಡುವೆ. ॥ ೨೩-೨೪ ॥ ಅಲ್ಲಿ ಮಹಾದಾನ, ಅನ್ನದಾನ ಮತ್ತು ಗುಪ್ತದಾನಾದಿಗಳಿಂದಲೂ ನಿಯಮದಿಂದ ವ್ರತ, ಸ್ನಾನಾದಿಗಳನ್ನೂ ಮಾಡಿಕೊಂಡು ಕಾಲ ಕಳೆಯುವೆನು ॥ ೨೫ ॥ ಈ ವಿಚಾರ ಮಾಡಿ, ಗೃಹವನ್ನು ವಿಷ ಬೆರೆಸಿದ ಅನ್ನಕ್ಕೆ ಸಮವೆಂದು ತಿಳಿದು ತಾನು ಗಳಿಸಿದ್ದ ಹಣವನ್ನೂ, ಮನೆ, ಗೋ, ಇವುಗಳನ್ನು ನಾಲ್ಕು ಭಾಗಗಳಾಗಿ ವಿಭಾಗಿಸಿ, ಎರಡು ಭಾಗಗಳನ್ನು ತನ್ನ ಇಬ್ಬರು ಮಕ್ಕಳಿಗೆ ಹಂಚಿ ಉಳಿದೆರಡು ಭಾಗಗಳನ್ನು ತಾನು ಮಾಡಬಯಸುವ ಧರ್ಮಕಾರ್ಯದ ಖರ್ಚುಗಳಿಗಾಗಿಯೇ ಇಟ್ಟುಕೊಂಡು, ತನ್ನ ಚಿಕ್ಕಮಗನನ್ನು ಜೊತೆಗೆ ಕರೆದುಕೊಂಡು ಪ್ರಯಾಗದ ಕಡೆಗೆ ಹೊರಟೇ ಬಿಟ್ಟಳು. ॥ ೨೬-೨೭ ॥ ಆಗ ಅವಳು ತನ್ನ ಸಂಸಾರಬಂಧನವನ್ನು ಕಡಿದುಹಾಕಿದ್ದಳು ಮತ್ತು ಪ್ರಯಾಗದ ಧ್ಯಾನದಲ್ಲಿಯೇ ಮುಳುಗಿದ್ದಳು. ಪ್ರಯಾಗಕ್ಕೆ ಹೊರಟಿದ್ದ ಕೆಲವು ಯಾತ್ರಾರ್ಥಿಗಳೂ ಅವಳ ಜೊತೆಯಾದರು. ॥ ೨೮ ॥ ಕೆಲವು

ದಿವಸಗಳಲ್ಲಿ ಪ್ರಯಾಣದ ಧರ್ಮದಿಂದ ಕೂಡಿ ಪ್ರಯಾಗಕ್ಷೇತ್ರವನ್ನು ತಲುಪಿ ಹಣವ್ಯಯ ಮಾಡಿ ''ದಾನಧರ್ಮಗಳನ್ನು ನಾನು ಮಾಡುವೆನು'' ಎಂಬ ಅಹಂಕಾರಯುಕ್ತಭಾವನೆಯಿಂದ ತುಂಬಿ ಹೋಗಿದ್ದಳು. ॥ ೨೯ ॥ ಪ್ರಯಾಗಕ್ಷೇತ್ರವನ್ನು ಮುಟ್ಟಿದ ಕೂಡಲೇ ಅವಳ ಮತ್ತು ಅವಳ ಸಂಗಡಿಗರ ಬುದ್ಧಿಯು ವಿರುದ್ಧ ದಿಕ್ಕನ್ನು ಹಿಡಿಯಿತು. ಲೋಭದ ಮನಸ್ಸು ಉಂಟಾಗಿ ದಾನ, ವ್ರತ ಮತ್ತು ಸಮಾಧಿ ಇವುಗಳಲ್ಲಿ ವಿರುದ್ಧಬುದ್ಧಿ ಹುಟ್ಟಿಕೊಂಡಿತು. ॥ ೩೦ ॥ ಈ ಪ್ರಯಾಗಕ್ಷೇತ್ರದಲ್ಲಿ ವಾಸಮಾಡುತ್ತಿದ್ದ ದೇವತೆಗಳು ತಮ್ಮ ಪದವಿಗಳು ಹೋಗುವುವೆಂಬ ಭಯದಿಂದ ಬ್ರಾಹ್ಮಣರ ರೂಪದಿಂದ ನಾನಾ ವೇಷಗಳನ್ನು ಧರಿಸಿ ಆ ವಿಕಟೆಯ ಸಮೀಪಕ್ಕೆ ಬಂದರು. ॥ ೩೧ ॥ ವಿಕಟೆಯು ಅವರನ್ನು ನೋಡಿ ನಮಸ್ಕರಿಸಿ, ಅವರನ್ನು ಆಸನಾದಿಗಳಲ್ಲಿ ಕೂಡಿಸಿ, ಸ್ವಾಗತಿಸಿ ಈ ತೀರ್ಥಕ್ಷೇತ್ರದಲ್ಲಿ ಅವಶ್ಯ ಮಾಡಬೇಕಾದ ಕರ್ತವ್ಯಗಳ ಬಗ್ಗೆ ವಿಚಾರಿಸಿದಳು. ॥ ೩೨ ॥

**ವಿಕಟೋವಾಚ—**

**ಭೋ ಭೋ ತಪಸ್ವಿನಶ್ಶಾಂತಾಸ್ತೀರ್ಥವಾಸಗತೈನಸಃ ।**
**ಅತ್ರತ್ಯಂ ಸಕಲಂ ಕೃತ್ಯಂ ಮಹ್ಯಂ ಕಥಯಥ ದ್ವಿಜಾಃ ॥ ೩೩ ॥**

**ವಿಕಟೆಯು ಹೇಳಿದಳು—**

''ಎಲೈ ತಪಸ್ವಿಗಳಾದ, ಶಾಂತರಾದ, ಬ್ರಾಹ್ಮಣೋತ್ತಮರೇ, ನೀವುಗಳೆಲ್ಲಾ ಈ ತೀರ್ಥದಲ್ಲಿ ವಾಸಮಾಡಿದ್ದರಿಂದ ಎಲ್ಲ ಪಾಪವನ್ನು ಕಳೆದುಕೊಂಡು ಶುದ್ಧರಾಗಿದ್ದೀರಿ. ಇಲ್ಲಿ ಮಾಡಬೇಕಾದ ಎಲ್ಲ ಕೃತ್ಯಗಳ ಬಗ್ಗೆ ಹೇಳಿರಿ.'' ಎಂದು ಕೇಳಿದಳು. ॥ ೩೩ ॥

**ದ್ವಿಜಾಃ ಊಚುಃ—**

**ವಿಕಟೇ ಲೋಕವಿಖ್ಯಾತೇ ಶೃಣು ತೀರ್ಥಗತಂ ವಿಧಿಮ್ ।**
**ಯಸ್ಯ ಶ್ರವಣಮಾತ್ರೇಣ ಸಮಗ್ರಂ ಜಾಯತೇ ಫಲಮ್ ॥ ೩೪ ॥**
**ಅತ್ರ ದಾನಂ ಚ ಯೋಗಂ ಚ ಸಮಾಧಿಂ ನಿಯತಂ ವ್ರತಮ್ ।**
**ಮಾಧವೋಽಪೇಕ್ಷತೇ ನೈವ ಸ್ನಾನಮಾತ್ರಫಲಪ್ರದಃ ॥ ೩೫ ॥**
**ತಸ್ಮಾತ್ತ್ವಮಪಿ ಗಚ್ಛಾಶು ವಪನಂ ಮಜ್ಜನಂ ಕುರು ।**
**ವೃಥಾ ಧನವ್ಯಯಂ ತತ್ರ ಮಾ ಕುರ್ಯಾಃ ಶೃಣು ನೋ ವಚಃ ॥ ೩೬ ॥**
**ನ ದೃಷ್ಟಸ್ತ್ವಾಯುಷಃ ಪಾರೋ ನ ಕಾಲಃ ಸಕಲಃ ಸಮಃ ।**
**ರಕ್ಷಣೀಯಂ ಧನಂ ತಸ್ಮಾದಿತಿ ನೀತಿವಿದೋ ವಿದುಃ ॥ ೩೭ ॥**
**ಮಾತಾಪಿತೃಸುತಭ್ರಾತೃಸುಹೃನ್ಮಿತ್ರಸಖಿಸ್ತ್ರಿಯಃ ।**
**ತ್ಯಜಂತಿ ನಿರ್ಧನಂ ಕಾಲೇ ಮರಾಲಾಃ ಸರಿತೋ ಯಥಾ ॥ ೩೮ ॥**
**ನ ವಿದ್ಯಾ ನ ಕುಲಂ ವರ್ಣಾ ಹ್ಯಾಶ್ರಮೋ ನ ತಥಾ ತಪಃ ।**
**ಧನೇನ ಸದೃಶಂ ಕಿಂಚಿದತಃ ಕಾರ್ಯಂ ಧನಾವನಮ್ ॥ ೩೯ ॥**
**ಉಪದಿಶ್ಯೇತಿ ತೇ ಸರ್ವೇ ಸಾಧಯಿತ್ವಾ ಪ್ರಯೋಜನಮ್ ।**
**ತಾಮಾಭಾಷ್ಯ ಯಥಾಕಾಮಂ ಜಗ್ಮಿರೇ ಸ್ವಂ ಸ್ವಮಾಶ್ರಮಮ್ ॥ ೪೦ ॥**

ತದಾಕರ್ಣ್ಯ ವಚಸ್ತೇಷಾಂ ವಿಕಟಾ ಧನಲೋಲುಪಾ ।
ಅಜನಿಷ್ಟ ಕ್ಷಣೇನೈವ ತದ್ವಾಕ್ಯಪರಿಬೋಧಿತಾ ॥ ೪೧ ॥

ಬ್ರಾಹ್ಮಣರು ಹೇಳಿದರು—

ಎಲೈ ಜಗತ್ತಿನಲ್ಲಿಯೇ ಪ್ರಸಿದ್ಧಳಾಗಿರುವ ವಿಕಟೆಯೇ! ಈ ತೀರ್ಥದಲ್ಲಿ ಇರಬೇಕಾದ ಆಚರಣೆಯನ್ನು ಹೇಳುತ್ತೇವೆ, ಕೇಳು. ಇದನ್ನು ಕೇಳುವ ಮಾತ್ರದಿಂದಲೇ ಈ ಕ್ಷೇತ್ರದ ಎಲ್ಲ ಫಲಗಳೂ ಬರುವುವು. ॥ ೩೪ ॥ ಇಲ್ಲಿ ಯಾವ ದಾನವನ್ನೂ, ಯಾವ ಯೋಗವನ್ನೂ, ಯಾವ ಸಮಾಧಿಯನ್ನೂ, ಯಾವ ನಿಯಮವನ್ನೂ, ಯಾವ ವ್ರತವನ್ನೂ ಮಾಡಬೇಕಾಗಿಲ್ಲ. ಮಾಧವ ದೇವರು ಇವುಗಳನ್ನೆಲ್ಲ ಬಯಸುವುದಿಲ್ಲ. ಅವನು ಕೇವಲ ಸ್ನಾನ ಮಾಡುವುದರಿಂದ ತೃಪ್ತ-ನಾಗುತ್ತಾನೆ. ಬೇರೆ ಯಾವುಗಳಿಂದಲ್ಲ. ॥ ೩೫ ॥ ಆದ್ದರಿಂದ ನೀನು ಜಾಗ್ರತೆಯಾಗಿ ಹೋಗಿ ತಲೆಯನ್ನು ಕ್ಷೌರ ಮಾಡಿಸಿಕೋ ಮತ್ತು ಸ್ನಾನ ಮಾಡು. ಈ ಸ್ಥಳದಲ್ಲಿ ವ್ಯಥಾ ಹಣವನ್ನು ವ್ಯಯ ಮಾಡಬೇಕಾಗಿಲ್ಲ. ನಮ್ಮ ಹಿತವಚನವನ್ನು ಕೇಳು ॥ ೩೬ ॥ "ನಮ್ಮ ಆಯುಷ್ಯದ ಕೊನೆಯು ಕಾಣಿಸದು. ಎಲ್ಲರ ಆಯುಃಕಾಲವು ಒಂದೇ ಸಮನಾಗಿರುವುದಿಲ್ಲ. ಆದ್ದರಿಂದ ಹೇಗಾದರೂ ಮಾಡಿ ಹಣವನ್ನು ಉಳಿಸಿಕೊಳ್ಳಬೇಕು" ಹೀಗೆಂದು ನೀತಿ ತಿಳಿದವರು ಹೇಳುವರು. ॥ ೩೭ ॥ ಯಾವ ರೀತಿ ಹಂಸಗಳು ನೀರಿಲ್ಲದ ನದಿಗಳನ್ನು ಬಿಟ್ಟು ಹೋಗುವುವೋ ಅದೇ ರೀತಿ ಹಣವಿಲ್ಲದ ದರಿದ್ರನನ್ನು ತಾಯಿ, ತಂದೆ, ಮಗ, ಅಣ್ಣತಮ್ಮಂದಿರು, ಇಷ್ಟರು, ಸ್ನೇಹಿತರು ಮತ್ತು ಜೊತೆಗಾರರು ಕೂಡ ಬಿಟ್ಟುಹೋಗುವರು. ॥ ೩೮ ॥ ವಿದ್ಯೆಯಾಗಲಿ, ವಂಶವಾಗಲಿ, ವರ್ಣಾಶ್ರಮಗಳೇ ಆಗಲಿ ಮತ್ತು ತಪಸ್ಸಾಗಲಿ ಇವು ಯಾವುದೂ ಉಪಯೋಗಕ್ಕೆ ಬರುವುದಿಲ್ಲ. ಹಣಕ್ಕೆ ಸಮನಾಗಿರುವುದು ಜಗತ್ತಿನಲ್ಲಿ ಯಾವುದೂ ಇಲ್ಲ; ಆದ್ದರಿಂದ ಹಣದ ರಕ್ಷಣೆ ಮಾಡಬೇಕು. ॥ ೩೯ ॥ ಈ ರೀತಿ-ಯಾಗಿ ವಿಕಟೆಗೆ ಉಪದೇಶ ಮಾಡಿ ತಮ್ಮ ತಮ್ಮ ಪ್ರಯೋಜನಗಳನ್ನು ಸಾಧಿಸಿಕೊಂಡು, ಇಷ್ಟ ಬಂದಂತೆ ಹೇಳಿ ಅವರೆಲ್ಲರೂ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ॥ ೪೦ ॥ ಅವರ ಮಾತನ್ನು ಕೇಳಿ ವಿಕಟೆಯು ಕ್ಷಣದಲ್ಲಿ ಅವರ ಮಾತಿನಿಂತ ಪರಿಣಾಮಗೊಂಡವಳಾಗಿ ಧನದಲ್ಲಿ ಆಸಕ್ತಳಾದಳು. ॥ ೪೧ ॥

ಮಾಧವ ಉವಾಚ—

ತತ ಆಗತ್ಯ ಸಾ ವೇಣ್ಯಾಂ ಸ್ನಾನಂ ಮುಂಡನಮಾಚರತ್ ।
ಸರ್ವೈಸ್ತ್ಯೈಃ ಸಂಗಿಭಿಸ್ಸಾರ್ಧಂ ದಾನಾದಿಕಮಲೋಪಯತ್ ॥ ೪೨ ॥
ಕತಿಚಿದ್ವಾಸರಾಂಸ್ತತ್ರ ನಿನ್ಯೇ ಸ್ನಾನಾರ್ಚನಾದಿಭಿಃ ।
ತಾವಜ್ಜ್ವರೋಽತಿಸಂಜಾತಸ್ತಸ್ಯಾ ದೇಹೇ ಸುಮಧ್ಯಮೇ ॥ ೪೩ ॥
ಜ್ವರದಾಹೇನ ಸಂತಪ್ತಾ ಪ್ರಾಪ್ತಕಾಲಾ ಯಶಸ್ವಿನೀ ।
ತತ್ಯಾಜ ಪ್ರಯತಾ ದೇಹಂ ಗಂಗಾಯಮುನಸಂಗಮೇ ॥ ೪೪ ॥
ಸ್ವಮಾತರಂ ಮೃತಾಂ ವೀಕ್ಷ್ಯ ಪುತ್ರಶ್ಶೋಕಪರಿಪ್ಲುತಃ ।
ತದೌರ್ಧ್ವದೈಹಿಕಂ ಕೃತ್ವಾ ಸಧನಃ ಸ್ವಪುರಂ ಯಯೌ ॥ ೪೫ ॥
ಇಯಂ ಚ ಭಾಮಿನೀ ಪುಣ್ಯಾ ತ್ರ್ಯಕ್ಷರೀಪಠನಾತ್ತದಾ ।
ಮತ್ಸಾನ್ನಿಧ್ಯಂ ಸಮಾಯಾತಾ ಸ್ನಾನೇನ ಮರಣೇನ ಚ ॥ ೪೬ ॥

ತೇನೇಯಮತಿರೂಪಾಸೀತ್ಪೂರ್ವಗರ್ವೇಣ ಗರ್ವಿತಾ ।
ಜಾತಾಬ್ಧಿಕನ್ಯಕೇ ಪಶ್ಯ ತ್ವಮಿವೇಯಂ ಮಮ ಪ್ರಿಯಾ ॥ ೪೭ ॥

**ಮಾಧವದೇವರು ಹೇಳಿದರು—**

ಅನಂತರ ಅಲ್ಲಿಂದ ಬಂದು ಅವಳು ವೇಣೀ ಸಂಗಮದಲ್ಲಿ ಸ್ನಾನ ಮುಂಡನಾದಿಗಳನ್ನು ಮಾಡಿದಳು. ಜೊತೆಗೆ ಬಂದಿದ್ದ ಎಲ್ಲ ಯಾತ್ರಿಕರಂತೆ ಇವಳೂ ದಾನಾದಿಗಳನ್ನು ಕೈಬಿಟ್ಟಳು. ॥ ೪೨ ॥ ಕೆಲವು ದಿನಗಳವರೆಗೆ ಅಲ್ಲಿಯೇ ಸ್ನಾನಾರ್ಚನಾದಿಗಳನ್ನು ಮಾಡುತ್ತಾ ಇದ್ದಳು. ಹೀಗಿರಲು ಅವಳಿಗೆ ಅತೀವ ಜ್ವರವು ಬಂದಿತು. ॥ ೪೩ ॥ ಜ್ವರದ ಕಾವಿನಿಂದ ಸಂತಪ್ತಳಾಗಿ ಆ ಯಶಸ್ವಿನಿಯಾದ ಸ್ತ್ರೀಯು ತನ್ನ ಮರಣಕಾಲವು ಸಮೀಪಿಸುತ್ತಿದ್ದಂತೆ ಪ್ರಯತ್ನಪಟ್ಟು ಗಂಗಾ-ಯಮುನಾಸರಸ್ವತಿಯರ ಸಂಗಮಸ್ಥಾನದಲ್ಲಿ ತನ್ನ ದೇಹವನ್ನು ತ್ಯಜಿಸಿದಳು. ॥ ೪೪ ॥ ಅವಳ ಜೊತೆಗೇ ಇದ್ದ ಚಿಕ್ಕಮಗನು ತನ್ನ ತಾಯಿಯು ಮರಣ ಹೊಂದಿದ್ದರಿಂದ ಅತಿದುಃಖಿತನಾಗಿ ಮೃತಳಾದ ಅವಳ ಅಂತ್ಯಕ್ರಿಯೆ ಮತ್ತು ಔರ್ಧ್ವದೈಹಿಕಕ್ರಿಯೆಗಳನ್ನು ಅಲ್ಲೇ ಮುಗಿಸಿ ತಾಯಿಯು ಉಳಿಸಿಟ್ಟಿದ್ದ ಆ ಹಣದ ಸಹಿತ ಸ್ವಗ್ರಾಮಕ್ಕೆ ತೆರಳಿದನು. ॥ ೪೫ ॥ ಹೇ ಕ್ಷೀರಾಬ್ಧಿಕುವರಿ, ನೋಡು, ಇವಳೇ ಆ ಪುಣ್ಯಶೀಲಳಾಗಿದ್ದ ಭಾಮಿನಿಯು. ಯಾವಾಗಲೂ ಮೂರು ಅಕ್ಷರವುಳ್ಳ ಪ್ರಯಾಗವನ್ನು ಜಪಿಸುತ್ತಿದ್ದುದರಿಂದಲೂ ಸಂಗಮದಲ್ಲಿ ಸ್ನಾನ ಮಾಡಿದ್ದರಿಂದಲೂ ಮತ್ತು ಸಂಗಮದಲ್ಲಿ ಮರಣ ಹೊಂದಿದ್ದರಿಂದಲೂ ನನ್ನ ಸಮೀಪಕ್ಕೆ ಈಗ ಬಂದಿದ್ದಾಳೆ. ಆ ಕಾರಣದಿಂದ ಅವಳು ಅತಿರೂಪವತಿಯಾದಳು, ಹಾಗೂ ಹಿಂದಿನ ಗರ್ವದಿಂದ ಗರ್ವಿತಳೂ ಆಗಿದ್ದಾಳೆ. ನೀನು ಹೇಗೆ ಪ್ರಿಯೆಯೋ ಹಾಗೆ ಈಕೆಯೂ ನನಗೆ ಪ್ರೀತಿಪಾತ್ರಳು.॥ ೪೬-೪೭ ॥

**ಸೂತ ಉವಾಚ—**

ಇತಿ ಶ್ರೀಭಗವದ್ವಾಕ್ಯಂ ಶ್ರುತ್ವಾ ನಿಸ್ಸಂಶಯಂ ಗತಾ ।
ಲಕ್ಷ್ಮೀರ್ವಾಸಂ ತತಶ್ಚಕ್ರೇ ಪ್ರಯಾಗೇ ತೀರ್ಥನಾಯಕೇ ॥ ೪೮ ॥
ಅತೋಽತ್ರ ತೀರ್ಥಭೂಪಾಲೇ ದಾನೇ ಬುದ್ಧಿರ್ನ ಜಾಯತೇ ।
ತತ್ರೇದಂ ಕಾರಣಂ ಪ್ರೋಕ್ತಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೪೯ ॥
ಯಸ್ಯೋಪರಿ ಭವೇದ್ದೃಷ್ಟಿಃ ಕೃಪಾಮೃತಪರಿಪ್ಲುತಾ ।
ಮಾಧವಸ್ಯ ದಯಾಸಿಂಧೋಸ್ತಸ್ಯ ದಾನೇ ಮತಿರ್ಭವೇತ್ ॥ ೫೦ ॥
ಪ್ರಸನ್ನೋ ಮಾಧವಸ್ತೇಷಾಮಿತಿ ಮೇ ನಿಶ್ಚಿತಾ ಮತಿಃ ॥ ೫೧ ॥

॥ ಇತಿ ಚತುರ್ದಶೋಽಧ್ಯಾಯಃ ॥

**ಸೂತರು ಹೇಳಿದರು—**

ಈ ರೀತಿಯಾದ ಭಗವದ್ವಾಕ್ಯವನ್ನು ಕೇಳಿದ ಶ್ರೀಲಕ್ಷ್ಮೀದೇವಿಯು ಅನುಮಾನವನ್ನು ಬಗೆಹರಿಸಿಕೊಂಡು ತೀರ್ಥರಾಜನೆಂದು ಪ್ರಸಿದ್ಧವಾದ ಪ್ರಯಾಗದಲ್ಲಿ ತಾನೂ ವಾಸ ಮಾಡಲು ಆರಂಭಿಸಿದಳು. ॥ ೪೮ ॥ ಈಗಲೂ ಈ ಪ್ರಯಾಗದಲ್ಲಿ ದಾನ ಮಾಡುವ ಬುದ್ಧಿಯು ಹುಟ್ಟುವುದಿಲ್ಲ ; ಇದರ ಕಾರಣವನ್ನು ಹೇಳಿಯಾಯಿತು. ಮತ್ತೆ ಏನನ್ನು ಕೇಳ ಬಯಸುತ್ತೀರಿ. ॥ ೪೯ ॥ ಕೃಪಾಸಮುದ್ರನಾಗಿರುವ ಶ್ರೀಮಾಧವನ ದಯಾಮೃತದಿಂದ ತೊಯ್ದಿರುವ ದೃಷ್ಟಿಯು

ಯಾರ ಮೇಲೆ ಬೀಳುವುದೋ ಅವರಿಗೆ ಮಾತ್ರ ದಾನ ಮಾಡಲು ಬುದ್ಧಿಯಾಗುವುದು. ॥೫೦॥ ಅಂಥವರಿಗೆ ಶ್ರೀಮಾಧವನು ಖಂಡಿತವಾಗಿಯೂ ಪ್ರಸನ್ನನಾಗಿಯೇ ಇದ್ದಾನೆಂದು ನನ್ನ ತೀರ್ಮಾನವು. ॥ ೫೧ ॥

॥ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚದಶೋಽಧ್ಯಾಯಃ ॥ ೧೫ ॥

ಸೂತ ಉವಾಚ—

ಅಥಾಗ್ನೇಯ್ಯಾಂ ವಸನ್ನಿತ್ಯಂ ಮಾಧವಪ್ರೀತಿಹೇತವೇ ।
ಧನಂಜಯೋಽಪ್ಯತ್ರ ಚಕ್ರೇ ಲಕ್ಷಹೋಮಂ ಮನೋರಮಮ್ ॥ ೧ ॥
ನಿರ್ಮಾಯ ದೇವಯಜನಂ ಕುಂಡಮಂಟಪಮಂಡಿತಮ್ ।
ಸರ್ವೋಪಸ್ಕರಸಂಯುಕ್ತಂ ಮುನಿವ್ರಾತವಿರಾಜಿತಮ್ ॥ ೨ ॥
ಪ್ರತ್ಯಹಂ ಲಕ್ಷಹೋಮೇನ ತಿಲಾಜ್ಯಪ್ರಚುರೇಣ ಚ ।
ತೋಷಯಾಮಾಸ ಯಜ್ಞೇಶಂ ಮಾಧವಂ ವರದಪ್ರಭುಮ್ ॥ ೩ ॥
ಏವಂ ಯದಾ ಬೃಹದ್ಭಾನುಃ ಕೋಟಿಸಂಖ್ಯಾಮಪೂರಯತ್ ।
ಯಜ್ಞೇಶೋ ಯಜ್ಞರೂಪೇಣ ಕುಂಡೇ ಪ್ರಾದುರಭೂತ್ತದಾ ॥ ೪ ॥
ತಂ ವಿಲೋಕ್ಯ ಶಶಿಕೋಟಿಶೀತಲಂ
ಕರ್ಣಮೂಲಚಲಕುಂಡಲೋಜ್ಜ್ವಲಮ್ ।
ರಾಜಮಾನಮರವಿಂದಲೋಚನಂ
ಶಂಖಚಕ್ರಸುಗದಾಬ್ಜಶೋಭಿತಮ್ ॥ ೫ ॥
ಪೀತವಸ್ತ್ರಯುಗಲೇನ ಭೂಷಿತಂ
ನೀಲಕೇಶವಿವೃತಾನನಾಂಬುಜಮ್ ।
ಇಂದ್ರನೀಲಸದೃಶಾಕೃತಿಂ ಪರ್ಯೈ-
ರಿಂದ್ರಪದ್ಮಜಭವಾದಿಭಿಃ ಸ್ತುತಮ್ ॥ ೬ ॥
ಕೌಸ್ತುಭೇನ ವನಮಾಲಯಾ ಯುತಂ
ಸತ್ವಪೋಷಿಭೃಗುಲಕ್ಷ್ಮಣಾ ತಥಾ ।
ಅಂಗದಾಂಗುಲಿವಿಭೂಷಣಾದಿಭಿ-
ರ್ಭ್ರಾಜಮಾನಮಭಯಪ್ರದಂ ಸತಾಮ್ ॥ ೭ ॥
ಕೃಶಾನುಸ್ಸಹಸೋತ್ಥಾಯ ಪ್ರೇಮನಿರ್ಭರಮಾನಸಃ ।
ಮಾಧವಂ ಪ್ರಣಿಪತ್ಯಾಹ ಏಹಿ ಮಾಧವ ಮಾಧವ ॥ ೮ ॥
ತ್ವದಾಜ್ಞಯಾ ವಯಂ ಸರ್ವೇ ಯಜ್ಞಭಾಗಾಧಿಕಾರಿಣಃ ।
ತವೈವ ಪ್ರೀತಯೇ ಕುರ್ಮೋ ಯಜ್ಞದಾನವ್ರತಾದಿಕಮ್ ॥ ೯ ॥
ತ್ವಂ ಕ್ರತುಸ್ತ್ವಂ ಹವಿರ್ಭೋಕ್ತಾ ಮಂತ್ರಸ್ತ್ವಂ ದೇವತಾ ಸ್ವಧಾ ।
ಅಗ್ನಿಹೋತ್ರಸ್ತಥಾ ಸೋಮಃ ಪಶುರಾಜ್ಯಸ್ತ್ವಮೇವ ಹಿ ॥ ೧೦ ॥
ಕರ್ಮಣಾಂ ಫಲದಾತಾ ತ್ವಂ ಸರ್ವೇಷಾಂ ಸರ್ವಕಾಮಧುಕ್ ।
ನಾನ್ಯಸ್ಸಮರ್ಥೋ ವೈ ದಾತುಂ ಫಲಂ ಕರ್ಮಸಮುದ್ಭವಮ್ ॥ ೧೧ ॥

ಅಧ್ವರಾವಧಿಕಂ ಕರ್ಮ ವಿನಾ ತ್ವಯಿ ಸಮರ್ಪಣಮ್ ।
ಕಿಂ ಫಲಂ ಕ್ಷುಲ್ಲಕರ್ಮಾರ್ಥಂ ಜಾನೇಽಹಂ ನಿಶ್ಚಿತಂ ಪ್ರಭೋ ॥ ೧೨ ॥
ದರಿದ್ರೇಣಾಪಿ ಯತ್ಕರ್ಮ ಕೃತಂ ಸ್ವಲ್ಪಮಪೀಹ ಯತ್ ।
ತದಪ್ಯನಂತಫಲದಂ ಭವತಿ ತ್ವತ್ಸಮರ್ಪಣಾತ್ ॥ ೧೩ ॥
ತತ್ರಾಪ್ಯಸ್ಮಿನ್ಮಹಾಕ್ಷೇತ್ರೇ ಕೃತಮಣ್ವಪಿ ಯಜ್ವಭಿಃ ।
ತತ್ಕೋಟಿಗುಣಿತಂ ಕರ್ಮ ಜಾಯತೇ ತವ ಸನ್ನಿಧೌ ॥ ೧೪ ॥
ಜ್ಞಾತ್ವೈವಂ ಕ್ಷೇತ್ರಮಾಹಾತ್ಮ್ಯಂ ದೃಷ್ಟ್ವಾ ಚೇಂದ್ರಾದಿಭಿಃ ಕೃತಮ್ ।
ಅಕಾರಿಷಮಹಂ ಚೈತದ್ಧವನಂ ಪ್ರೀತಯೇ ತವ ॥ ೧೫ ॥
ಭಕ್ತಾನಾಂ ಕಲ್ಪವೃಕ್ಷಾಯ ಭಕ್ತವಿಘ್ನವಿನಾಶಿನೇ ।
ಭಜನೀಯಪದಾಬ್ಜಾಯ ಮಾಧವಾಯ ನಮೋ ನಮಃ ॥ ೧೬ ॥
ಭೂಯ ಏವಂ ನಮಸ್ಕೃತ್ಯ ಬಾಷ್ಪಪೂರಿತಲೋಚನಃ ।
ಉತ್ಕಂಠಿತಃ ಕೃಷ್ಣವರ್ತ್ಮಾ ಪಪಾತ ಪಾದಯೋರ್ಹರೇಃ ॥ ೧೭ ॥
ತಥಾಭೂತಂ ತಮಾಲೋಕ್ಯ ಮಾಧವೋ ಭಕ್ತವತ್ಸಲಃ ।
ಕರಾಭ್ಯಾಂ ತಂ ಸಮುತ್ಥಾಪ್ಯ ಪರಿಷ್ವಜ್ಯೇದಮಬ್ರವೀತ್ ॥ ೧೮ ॥

## ॥ ಹದಿನೈದನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಅಗ್ನಿಪುರುಷದೇವರೂ ಪ್ರಯಾಗದ ಆಗ್ನೇಯಭಾಗದಲ್ಲಿದ್ದುಕೊಂಡು ಶ್ರೀಮಾಧವನ ಪ್ರೀತಿಗಾಗಿ ಪ್ರತಿದಿನವೂ ಒಂದು ಲಕ್ಷಸಂಖ್ಯಾಕವಾದ ಮನೋಹರವಾದ ಹೋಮಗಳನ್ನು ಮಾಡಿದರು. ॥ ೧ ॥ ಯಜ್ಞಕುಂಡ ಮತ್ತು ಯಜ್ಞಮಂಟಪದಿಂದ ಯುಕ್ತವಾದ ಯಾಗಶಾಲೆಯನ್ನು ನಿರ್ಮಿಸಿದ್ದರು. ಅದು ಎಲ್ಲ ಯಜ್ಞಸಾಮಗ್ರಿಗಳಿಂದ ತುಂಬಿತ್ತು ಮತ್ತು ಮುನಿಗಳ ವೃಂದದಿಂದ ವಿರಾಜಮಾನವಾಗಿತ್ತು. ॥ ೨ ॥ ಪ್ರತಿದಿನವೂ ಅಗ್ನಿಯು ಯಜ್ಞೇಶನಾದ ವರಪ್ರದನಾದ ಮಾಧವ-ನನ್ನು ಒಂದು ಲಕ್ಷಹೋಮದಿಂದ ಸಂತೋಷಪಡಿಸಿದನು; ಈ ಹೋಮಗಳು ಕರಿ ಎಳ್ಳು ಮತ್ತು ತುಪ್ಪಗಳಿಂದ ಪ್ರಚುರವಾಗಿದ್ದವು. ॥ ೩ ॥ ಈ ರೀತಿಯಾಗಿ ಅಗ್ನಿದೇವರು ಒಂದು ಕೋಟಿ ಯಜ್ಞಗಳನ್ನು ಮಾಡಿ ಮುಗಿಸಿದ ನಂತರ ಯಜ್ಞಗಳಿಗೆ ಮುಖ್ಯದೇವತೆಯಾದ ಶ್ರೀಮಾಧವನು ಆ ಯಜ್ಞಕುಂಡದಲ್ಲಿ ಪ್ರತ್ಯಕ್ಷನಾದನು. ಪ್ರತ್ಯಕ್ಷನಾದ ಈ ಮಾಧವನ ರೂಪವು ಈ ರೀತಿಯಾಗಿತ್ತು. ॥ ೪ ॥

ಶ್ರೀಮಾಧವನು ಕೋಟಿಚಂದ್ರರಂತೆ ಶೀತಲನಾಗಿದ್ದನು. ಅವನ ಕಿವಿಗಳಲ್ಲಿ ಉಜ್ಜ್ವಲ-ವಾಗಿ ಹೊಳೆಯುವ ಕುಂಡಲಗಳಿದ್ದುವು. ಅವನ ಕಣ್ಣುಗಳು ಪ್ರಕಾಶಮಾನವಾದ ಕಮಲಗಳಂತೆ ಇದ್ದುವು. ಅವನು ಶಂಖ, ಚಕ್ರ, ಗದೆ ಮತ್ತು ಕಮಲದ ಹೂ ಇವುಗಳಿಂದ ಕಂಗೊಳಿಸುತ್ತಿದ್ದನು. ॥ ೫ ॥ ಹಳದಿಬಣ್ಣದ ಪಂಚೆಯನ್ನೂ, ಉತ್ತರೀಯವನ್ನೂ ಧರಿಸಿದ್ದನು. ಕಪ್ಪಾದ ಕೇಶಗಳು ಹರಡಿದ್ದ ಮುಖಕಮಲವನ್ನು ಹೊಂದಿದ್ದನು. ಇಡೀ ಶರೀರವು ಇಂದ್ರಮಣಿಯಂತೆ ಇತ್ತು. ಇಂದ್ರ, ರುದ್ರ ಮತ್ತು ಬ್ರಹ್ಮಾದಿಗಳಿಂದ ಸ್ತುತ್ಯನಾಗಿದ್ದನು. ॥ ೬ ॥ ಯಥಾರ್ಥತೆಯನ್ನು

ಸ್ಥಾಪಿಸಲು ಉದ್ಯುಕ್ತನಾದ ಭೃಗುವಿನ ಪಾದತಾಡನವನ್ನು ಭರಿಸಿದ ಶ್ರೀವತ್ಸಚಿಹ್ನೆಯುಳ್ಳಂಥಾ ವಕ್ಷಸ್ಥಳದಲ್ಲಿ ಕೌಸ್ತುಭಮಣಿ ಮತ್ತು ವನಮಾಲಾವನ್ನು ಧಾರಣೆ ಮಾಡಿದ್ದನು. ಉಂಗುರಗಳು ಮತ್ತು ಬಾಹುಪುರಿ ಮೊದಲಾದವುಗಳನ್ನು ಧಾರಣೆ ಮಾಡಿದ್ದನು ಮತ್ತು ಅಭಯಪ್ರದನಾಗಿದ್ದನು. ॥ ೭ ॥ ಇಂತಹ ಶ್ರೀಮಾಧವನ ರೂಪವನ್ನು ನೋಡಿ ಅಗ್ನಿಪುರುಷದೇವರು ಥಟ್ಟನೆ ಎದ್ದು ನಿಂತು "ಓ ಮಾಧವ ! ಬಾ, ಬಾ" ಎಂದು ಹೇಳಿ ಈ ರೀತಿ ಸ್ತೋತ್ರ ಮಾಡಿದರು. ॥ ೮ ॥

"ಮಾಧವಾ! ನಿನ್ನ ಆಜ್ಞಾದಿಂದಲೇನೇ ನಾವೆಲ್ಲ ನಮ್ಮ ನಮ್ಮ ಹವಿರ್ಭಾಗಗಳನ್ನು ಯಜ್ಞಗಳಲ್ಲಿ ಪಡೆಯುತ್ತಿದ್ದೇವೆ ಮತ್ತು ಪಡೆಯಲು ಅಧಿಕಾರವನ್ನು ಹೊಂದಿದ್ದೇವೆ. ನಿನ್ನ ಪ್ರೀತಿಗೋಸ್ಕರವೇ ಯಜ್ಞ, ದಾನ ಮತ್ತು ವ್ರತಾದಿಗಳನ್ನು ಮಾಡುತ್ತೇವೆ. ॥ ೯ ॥ ನೀನೇ ಯಜ್ಞವು, ನೀನೇ ಹವಿಸ್ಸು, ಹವಿರ್ಭೋಕ್ತೃವೂ ನೀನೇ, ಮಂತ್ರವೂ ನೀನೇ, ಯಜ್ಞವನ್ನು ಮಾಡುವಾಗ "ಸ್ವಧಾ" ಎಂದು ಹೇಳಿ ಹೋಮ ಮಾಡುವ ದೇವತೆಯೂ ನೀನೇ (ಅಗ್ನಿಪುರುಷ ದೇವರ ಪತ್ನಿಯೇ ಸ್ವಧಾದೇವಿ). ಅಗ್ನಿಹೋತೃವೂ ನೀನೇ. ಹಾಗೆಯೇ ಸೋಮರಸವೂ ನೀನೇ. ಪಶುವೂ ನೀನೇ, ಘೃತವೂ ನೀನೇ. (ಎಲ್ಲವೂ ಭಗವಂತನ ಅಧೀನವಾದ್ದರಿಂದ ಎಲ್ಲವೂ ಭಗವಂತನೇ ಎಂದು ವರ್ಣಿಸಿದ್ದಾರೆ; ಅಭೇದದಿಂದಲ್ಲ. ಮೊಸರಮ್ಮನನ್ನು ಮೊಸರು ಎಂದು ಕರೆಯುವಂತೆ ಎಂದು ತಿಳಿಯಬೇಕು.) ॥ ೧೦ ॥ ನಾವು ಮಾಡತಕ್ಕ ಕರ್ಮಗಳಿಗೆ ಫಲ ಕೊಡತಕ್ಕವನೂ ನೀನೇ. ಎಲ್ಲರ ಅಪೇಕ್ಷೆಗಳನ್ನೂ ನೆರವೇರಿಸುವ ಕಾಮಧೇನುವೂ ನೀನೇ. ಸತ್ಕರ್ಮಗಳಿಂದುದ್ಭವಿಸುವ ಫಲಗಳನ್ನು ಕೊಡಲು ನಿನ್ನಿಂದ ಬೇರೆ- ಯಾದ ಯಾರಿಂದಲೂ ಸಾಧ್ಯವಿಲ್ಲ. ॥ ೧೧ ॥ ಇಡೀ ಯಾಗದ ಕಾಲದಲ್ಲಿನ ಕರ್ಮಗಳಿಗೆ ಬರುವ ಫಲವನ್ನು ನಿನಗೆ ಸಮರ್ಪಣೆ ಮಾಡದಿದ್ದರೆ ಅವು ಕ್ಷುಲ್ಲಕಗಳಾಗುತ್ತವೆ. ಇದು ನನ್ನ ನಿಶ್ಚಿತಜ್ಞಾನ. ॥ ೧೨ ॥ ದರಿದ್ರನು ಮಾಡುವ ಅಲ್ಪಕರ್ಮಗಳನ್ನೂ, ಅದರ ಫಲವನ್ನೂ ನಿನಗೆ ಸಮರ್ಪಣೆ ಮಾಡಿದರೆ, ಅದು ಅನಂತಫಲವನ್ನು ಕೊಡುತ್ತದೆ. ॥ ೧೩ ॥ ಅದರಲ್ಲಿಯೂ ಈ ಕ್ಷೇತ್ರದಲ್ಲಿ ನಿನ್ನ ಸನ್ನಿಧಾನದಲ್ಲಿ ಋತ್ವಿಜರಿಂದ ಸಮರ್ಪಿಸಿದ ಹವಿಸ್ಸು ಕೋಟಿಯಷ್ಟು ಹೆಚ್ಚು ಫಲವನ್ನು ಕೊಡತಕ್ಕದ್ದು. ॥ ೧೪ ॥ ಇದನ್ನೆಲ್ಲಾ ತಿಳಿದೇ ಇಂದ್ರಾದಿಗಳಿಂದ ಮಾಡಲ್ಪಟ್ಟ ಕೃತ್ಯಾದಿಗಳನ್ನು ನೋಡಿ ನಾನೂ ನಿನ್ನ ಪ್ರೀತಿಗಾಗಿಯೇ ಹವನವನ್ನು ಮಾಡಿದ್ದೇನೆ. ॥ ೧೫ ॥ ಭಕ್ತರ ಆಸೆಗಳನ್ನು ನೆರವೇರಿಸುವುದರಲ್ಲಿ ಕಲ್ಪವೃಕ್ಷದ ಹಾಗಿರುವವನೇ, ಭಕ್ತರಿಗೆ ಉಂಟಾಗುವ ವಿಘ್ನ- ಗಳನ್ನೆಲ್ಲಾ ನಾಶಮಾಡತಕ್ಕವನೇ ಮತ್ತು ಎಲ್ಲರಿಂದಲೂ ಸುತ್ತ್ಯಾರ್ಹಗಳಾದ ಪಾದಪದ್ಮಗಳಿಂದ ಕೂಡಿದವನೇ, ಶ್ರೀಮಾಧವನೇ, ನಿನಗೆ ನಮಸ್ಕಾರ, ನಮಸ್ಕಾರಗಳು." ಈ ರೀತಿಯಾಗಿ ಅಗ್ನಿಯು ಸ್ತೋತ್ರ ಮಾಡಿ ಪುನಃ ನಮಸ್ಕಾರ ಮಾಡಿ ಕಣ್ಣಿನಲ್ಲಿ ಆನಂದಬಾಷ್ಪಗಳನ್ನು ಸುರಿಸುತ್ತಾ ಗದ್ಗದಕಂಠ ಉಳ್ಳವನಾಗಿ ಶ್ರೀಹರಿಯ ಪಾದಗಳ ಮೇಲೆ ಬಿದ್ದನು. ॥ ೧೬-೧೭ ॥ ಆ ರೀತಿಯಾದ ಸ್ಥಿತಿಯಲ್ಲಿದ್ದ ಅಗ್ನಿಯನ್ನು ಭಕ್ತವತ್ಸಲನಾದ ಮಾಧವನು ಎರಡು ಕೈಗಳಿಂದಲೂ ಎಬ್ಬಿಸಿ, ಆಲಿಂಗನ ಮಾಡಿಕೊಂಡು ಈ ಮಾತನ್ನು ಹೇಳಿದನು. ॥ ೧೮ ॥

ಶ್ರೀಮಾಧವ ಉವಾಚ—

**ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಪ್ರಸನ್ನೋಽಹಂ ತವಾನಘ ।**
**ಮದ್ಭಕ್ತ್ಯಾ ಕರ್ಮಣಾ ಚಾಪಿ ಪುಮಾನ್ವಿಂದತಿ ವೈ ಸುಖಮ್ ॥ ೧೯ ॥**

**ತ್ವಯಾ ಯಾ ಲಕ್ಷಹೋಮಾಖ್ಯಾ ಪೂಜಾ ಸಂಪಾದಿತಾನ್ವಹಮ್ ।**
**ತಥೈವಾಹಂ ಚ ತುಷ್ಟೋಽಸ್ಮಿ ವರಂ ಪ್ರಾರ್ಥಯ ಕಾಂಕ್ಷಿತಮ್ ॥ ೨೦ ॥**

**ಶ್ರೀಮಾಧವನು ಹೇಳಿದನು—**

ಏಳೇಳು, ನಿನಗೆ ಮಂಗಳವಾಗಲಿ. ಪಾಪವಿಲ್ಲದವನೇ! ನಿನಗೆ ನಾನು ಪ್ರಸನ್ನನಾಗಿದ್ದೇನೆ. ನನ್ನ ಮೇಲಿನ ಭಕ್ತಿಯಿಂದಲೂ ಮತ್ತು ನನ್ನ ಸಂಬಂಧವಾದ ಕರ್ಮದಿಂದಲೂ ಮನುಷ್ಯನು ಸುಖವನ್ನು ಹೊಂದುವನು. ॥ ೧೯ ॥ ಲಕ್ಷಹೋಮವೆಂಬ ನನ್ನ ಪೂಜೆಯನ್ನು ಪ್ರತಿದಿನವೂ ನೀನು ಮಾಡಿದ್ದೀಯೆ. ಆದ್ದರಿಂದ ನಾನು ಸಂತುಷ್ಟನಾಗಿದ್ದೇನೆ. ಬೇಕಾದ ವರಗಳನ್ನು ಬೇಡು. ಹೀಗೆಂದು ಅಗ್ನಿದೇವರಿಗೆ ಶ್ರೀಮಾಧವನು ಹೇಳಿದನು. ॥ ೨೦ ॥

**ಸೂತ ಉವಾಚ—**

**ಋಷಯೋ ಪಾವಕಶ್ಚೈವ ಶ್ರುತ್ವಾ ಮಾಧವಭಾಷಿತಮ್ ।**
**ಉವಾಚ ವಚನಂ ರಮ್ಯಂ ಪ್ರಸನ್ನೇನಾಂತರಾತ್ಮನಾ ॥ ೨೧ ॥**

**ಸೂತರು ಹೇಳಿದರು—**

ಋಷಿಗಳೂ, ಅಗ್ನಿಯೂ ಶ್ರೀಮಾಧವನ ಭಾಷಣವನ್ನು ಆಲಿಸಿ, ಪ್ರಸನ್ನಾಂತಃಕರಣನಾಗಿ ಅಗ್ನಿಯು ಮನೋಹರವಾದ ಮಾತನ್ನು ಆಡಿದನು ॥ ೨೧ ॥

**ಅಗ್ನಿರುವಾಚ—**

**ಶ್ರೀಮಾಧವ! ಕೃಪಾಪೂರ! ಭಕ್ತಸಂಕಷ್ಟನಾಶನ! ।**
**ದರ್ಶನಂ ತವ ದೇವೇಶ ವರರೂಪಂ ನ ಚೇತರತ್ ॥ ೨೨ ॥**
**ವರಾಸ್ಸರ್ವೇಽಲ್ಪಬುದ್ಧೀನಾಂ ಕಾಮನಾಸಕ್ತಚೇತಸಾಮ್ ।**
**ಭವಂತಿ ಸರ್ವನಾಶಾಯ ಭವದ್ದರ್ಶನಮಂತರಾ ॥ ೨೩ ॥**
**ತಸ್ಮಾನ್ನ ಕಾಂಕ್ಷೇ ವರದ ಪ್ರಾಪ್ಯ ತ್ವಾಮಿತರಂ ವರಮ್ ।**
**ಅಥಾಪಿ ಯಾಚೇ ಭಗವನ್ಪರೋಪಕೃತಯೇ ವರಮ್ ॥ ೨೪ ॥**
**ದೂರಾದತ್ರ ಸಮಾಯಾತಾ ಜನಾ ವಾತ್ರೈವ ಸಂಸ್ಥಿತಾಃ ।**
**ಅಭಕ್ತಾ ಭಕ್ತಿಮಂತೋಽಪಿ ನಿರ್ಧನಾ ಧನಿನೋಽಪಿ ಹಿ ॥ ೨೫ ॥**
**ಈರ್ಷ್ಯಯಾ ಲಜ್ಜಯಾ ಚಾಪಿ ದಂಭೇನ ಮನಸಾ ತಥಾ ।**
**ವಿಧಿನಾಽವಿಧಿನಾ ವಾಪಿ ಯಾವತ್ಕ್ಲೇಶಚತುಷ್ಟಯಮ್ ॥ ೨೬ ॥**
**ಅಸ್ಮಿನ್ ಕ್ಷೇತ್ರೇ ತು ಯೇ ಹೋಮಂ ಕರಿಷ್ಯಂತೀಹ ಮಾನವಾಃ ।**
**ವಿಗುಣಂ ಚಾಪಿ ತಂ ಹೋಮಂ ಸಾಂಗಂ ಕುರು ದಯಾನಿಧೇ ॥ ೨೭ ॥**
**ಯಾವತ್ತಿಲಾನ್ಮಮ ಮುಖೇ ಯೇ ಹೋಷ್ಯಂತೀಹ ಮಾನವಾಃ ।**
**ತಾವದ್ವರ್ಷಸಹಸ್ರಾಣಿ ಸ್ವರ್ಗೇ ಲೋಕೇ ವಸಂತು ತೇ ॥ ೨೮ ॥**
**ತಥೈವ ಮಮ ಕುಂಡೇ ಯೇ ಸ್ನಾನದಾನಜಪಾದಿಕಮ್ ।**
**ಕರಿಷ್ಯಂತಿ ಶುಭಾಚಾರಾ ದೇವರ್ಷಿಪಿತೃತರ್ಪಣಮ್ ॥ ೨೯ ॥**

ಪಂಚರಾತ್ರಂ ತ್ರಿರಾತ್ರಂ ವಾ ಚೈಕರಾತ್ರಮಥಾಪಿ ವಾ ।
ವಸಿಷ್ಯಂತಿ ಚ ಯೇ ಮರ್ತ್ಯಾಸ್ತೇಷಾಂ ದೇಹಿ ಮನೋಗತಮ್ ॥ ೩೦ ॥
ಮಮಾಸ್ತು ವಸತಿಶ್ಚಾತ್ರ ಶಕ್ರವತ್ಸರ್ವದಾ ಹರೇ ।
ಶ್ರದ್ಧಾಭಕ್ತಿಯುತಸ್ಯೇಶ ತ್ವತ್ಪದಾವಿಷ್ಟಚೇತಸಃ ॥ ೩೧ ॥

ಅಗ್ನಿದೇವರು ಹೇಳಿದರು—

ಕೃಪಾಪೂರ್ಣನಾದ, ಭಕ್ತರ ಕಷ್ಟಗಳ ನಿವಾರಕನಾದ ಮತ್ತು ದೇವೇಶನಾದ ಶ್ರೀಮಾಧವನೇ, ನಿನ್ನ ದರ್ಶನವೇ ವರದಂತಿರತಕ್ಕದ್ದು. ಬೇರೆ ಯಾವುದೂ ವರವಲ್ಲ. ॥ ೨೨ ॥ ಐಹಿಕ ಆಸಕ್ತಿಯುಳ್ಳ ಜೀವಿಗಳೂ, ಮಂದಬುದ್ಧಿಯವರೂ ಕೇಳುವ, ನಿನ್ನ ದರ್ಶನ ಹೊರತಾದ ವರಗಳು ಸರ್ವನಾಶಕರಗಳು. ॥ ೨೩ ॥ ಆದ್ದರಿಂದ ವರಪ್ರದನಾದ ಸ್ವಾಮಿಯೇ, ನಿನ್ನನ್ನು ಹೊಂದಿ ಬೇರಾವ ವರವನ್ನೂ ಒಲ್ಲೆನು, ಆದರೂ ಪರೋಪಕಾರ ದೃಷ್ಟಿಯಿಂದ ವರವನ್ನು ಬೇಡುವೆನು. ॥ ೨೪ ॥ ದೂರದೂರದಿಂದ ಇಲ್ಲಿಗೆ ಬರುವವರೂ ಮತ್ತು ಇಲ್ಲಿಯೇ ನೆಲೆಸಿರುವವರೂ ಆದ ಜನರು ಭಕ್ತರಾಗಿರಲಿ, ಭಕ್ತರಾಗದಿರಲಿ, ನಿರ್ಧನಿಗಳಾಗಿರಲಿ, ಧನವುಳ್ಳವರಾಗಿರಲಿ, ಈರ್ಷ್ಯೆಯಿಂದಲಾಗಲಿ, ಲಜ್ಜೆಯಿಂದಲಾಗಲಿ, ದಂಭದಿಂದ ಕೂಡಿದ ಮನಸ್ಸಿನಿಂದಲಾಗಲಿ ವಿಧಿಪೂರ್ವಕವಾಗಿಯೋ ಅಥವಾ ವಿಧಿಗಳನ್ನು ಬಿಟ್ಟೋ ನಾಲ್ಕು ಕ್ರೋಶಗಳನ್ನೊಳಗೊಂಡ ಈ ಕ್ಷೇತ್ರದಲ್ಲಿ ಹೋಮವನ್ನು ಮಾಡಿದರೆ ಅವರು ಮಾಡಿದ ಹೋಮವು ಸಾಂಗೋಪಾಂಗಾದಿಗುಣಗಳಿಂದ ಕೂಡಿಲ್ಲದಿದ್ದರೂ ಅವುಗಳು ಸಾಂಗವಾಗುವಂತೆ ದಯಾನಿಧಿಯಾದ ನೀನು ಮಾಡು. ಯಾರು ಅಗ್ನಿಯಲ್ಲಿ ತಿಲಹೋಮಾದಿಗಳನ್ನು ಮಾಡುತ್ತಾರೋ ಅಂತಹವರು ಆ ಹೋಮಿಸಿದ ಎಳ್ಳುಗಳ ಸಂಖ್ಯೆಯ ಸಾವಿರ ಸಂಖ್ಯೆಗಳನ್ನು ಒಳಗೊಂಡ ವರ್ಷಗಳವರೆಗೆ ಸ್ವರ್ಗದಲ್ಲಿ ವಾಸಿಸಲಿ. ॥ ೨೫-೨೮ ॥ ಹಾಗೆಯೇ ನನ್ನ ಕುಂಡದಲ್ಲಿ ಸ್ನಾನ, ದಾನ, ಜಪ ಮತ್ತು ದೇವರ್ಷಿಪಿತೃತರ್ಪಣಗಳನ್ನು ಆಚರಿಸುತ್ತಾರೋ ಅಂತಹ ಸದಾಚಾರಸಂಪನ್ನರು ಈ ಕ್ಷೇತ್ರದಲ್ಲಿ ಐದು ರಾತ್ರಿಗಳಾಗಲಿ, ಮೂರು ರಾತ್ರಿಗಳಾಗಲಿ, ಕೊನೆಗೆ ಒಂದು ರಾತ್ರಿಯಾಗಲಿ ವಾಸಮಾಡಿದ್ದೇ ಆದರೆ ಅವರ ಮನೋಗತವಾದದ್ದನ್ನೆಲ್ಲಾ ದಯಪಾಲಿಸು. ॥ ೨೯-೩೦ ॥ ಸ್ವಾಮಿಯೇ, ನಿನ್ನಲ್ಲಿ ಶ್ರದ್ಧಾಭಕ್ತಿಯುಳ್ಳ ಮತ್ತು ನಿನ್ನ ಪಾದಗಳಲ್ಲಿಯೇ ಇರುವ ಮನಸ್ಸುಳ್ಳ ನನಗೂ ದೇವೇಂದ್ರನಂತೆ ಇಲ್ಲಿ ವಸತಿಯನ್ನು ಅನುಗ್ರಹಿಸು. ॥ ೩೧ ॥

ಸೂತ ಉವಾಚ—

ಮನಸ್ಸ್ಥೈರ್ಯಂ ವಿದಿತ್ವೈವಮನಲಸ್ಯ ಜಗತ್ಪತಿಃ ।
ಪ್ರತ್ಯುವಾಚ ಸ್ಮಯನ್ನೇವ ಶೌನಕಾದ್ಯಾ ಮಹರ್ಷಯಃ ॥ ೩೨ ॥

ಸೂತರು ಹೇಳಿದರು—

ಆಗ ಅಗ್ನಿದೇವರ ಮನಸ್ಥೈರ್ಯವನ್ನು ತಿಳಿದ ಮಾಧವನು ಮುಗುಳು ನಗುತ್ತಾ ಉತ್ತರ ಕೊಟ್ಟನು—ಶೌನಕಾದಿಗಳಿರಾ! ಆಲಿಸಿರಿ. ॥ ೩೨ ॥

ಮಾಧವ ಉವಾಚ—

ತಥೈವಾಸ್ತ್ವಖಿಲಂ ವಹ್ನೇ ! ಯತ್ತ್ವಯೋಕ್ತಂ ತತೋಽಧಿಕಮ್ ।
ತುಷ್ಟೇ ಮಯಿ ಜಗನ್ನಾಥೇ ದುರ್ಲಭಂ ಕಿಂ ಮಹಾತ್ಮನಾಮ್ ॥ ೩೩ ॥

ಪ್ರಯಾಗೇ ಯತ್ಕೃತಂ ಕರ್ಮ ಸಾಧ್ವಸಾಧು ಮಮ ಪ್ರಿಯಮ್ ।
ಮನ್ನಾಮಸ್ಮರಣಾದಸ್ತು ಸಾಂಗಂ ಕೋಟಿಗುಣಂ ಫಲಮ್ ॥ ೩೪ ॥
ಭೂಮಿದೋಷೋ ನ ಚಾತ್ರಾಸ್ತಿ ಪ್ರಾಚೀದೋಷೋ ನ ವಿದ್ಯತೇ ।
ಕುಂಡಮಂಟಪದೋಷೋಽಪಿ ವೇದೀದೋಷಸ್ತಥೈವ ಚ ॥ ೩೫ ॥
ಮಂತ್ರರ್ತ್ವಿಕ್ದ್ರವ್ಯದೋಷಶ್ಚ ದಕ್ಷಿಣಾದೋಷ ಏವ ಚ ।
ತಥೈವಾಹುತಿದೋಷಶ್ಚ ಸಂಖ್ಯಾದೋಷಶ್ಚ ಹವ್ಯಭುಕ್ ॥ ೩೬ ॥
ತ್ರಿವೇದೀಮಂಡಿತೇಽಮುತ್ರ ಪಂಚಕುಂಡವಿರಾಜಿತೇ ।
ತ್ರೈಲೋಕ್ಯಾಮಲಭೂಭಾಗೇ ಬ್ರಹ್ಮಮಂಟಪಮಂಡಿತೇ ॥ ೩೭ ॥
ನ ಕಶ್ಚಿದತ್ರ ದೋಷೋಽಸ್ತಿ ಭಕ್ತಿಮತ್ಕೃತಕರ್ಮಸು ।
ತಥಾಪಿ ವಿತ್ತಶಾಠ್ಯೇನ ಸರ್ವಂ ನಶ್ಯತಿ ನಾನ್ಯಥಾ ॥ ೩೮ ॥
ವಿಭವೇ ದ್ವಿಗುಣಂ ಕಾರ್ಯಂ ತ್ರಿಗುಣಂ ವಾ ಚತುರ್ಗುಣಮ್ ।
ಕಲ್ಪೋಕ್ತಮಥವಾ ಕುರ್ಯಾದನ್ಯಥಾ ನಿಷ್ಫಲಂ ಭವೇತ್ ॥ ೩೯ ॥
ದುರ್ವಿಧೇನ ಚ ಯತ್ಕಿಂಚಿತ್ಪತ್ರಪುಷ್ಪಫಲಾದಿಕಮ್ ।
ದತ್ತಂ ಮತ್ಪ್ರೀತಯೇ ತತ್ತು ಕುರ್ವೇಽಹಂ ಮೇರುಣಾಸಮಮ್ ॥ ೪೦ ॥
ಮಾಘಮಾಸೇ ವಿಶೇಷೇಣ ಕ್ಷೇತ್ರೇಽಸ್ಮಿನ್ವೈಷ್ಣವೇಽನಘ ।
ತಿಲಹೋಮಫಲಂ ವಕ್ತುಂ ನಾಹಂ ಶಕ್ತಃ ಕುತೋಽಪರಃ ॥ ೪೧ ॥
ತವಾಪ್ಯತ್ರ ನಿವಾಸೋಽಸ್ತು ಶ್ರೀಸೋಮೇಶ್ವರಪೂರ್ವತಃ ।
ಯಾವದಿಚ್ಛಂ ಮಮ ಕ್ಷೇತ್ರೇ ಕರ್ಮಿಣಾಂ ಫಲದೋ ಭವ ॥ ೪೨ ॥
ಇತಿ ದತ್ವಾ ವರಂ ವಹ್ನೇಸ್ತತ್ರೈವಾಂತರಧೀಯತ ।
ಮಾಧವೋ ವಹ್ನಿರಪ್ಯತ್ರ ತನ್ಮನಾಸ್ಸಮುವಾಸ ಹ ॥ ೪೩ ॥
ತದಾದಿ ಋಷಯಸ್ತತ್ರ ಪ್ರಸಿದ್ಧಂ ಸಮುಪಾಗತಮ್ ।
ಅಗ್ನಿತೀರ್ಥಂ ಮಹಾಪುಣ್ಯಂ ವಹ್ನಿಕುಂಡವಿರಾಜಿತಮ್ ॥ ೪೪ ॥
ಯೇ ಗತ್ವಾ ತತ್ರ ವಿಧಿನಾ ಸ್ನಾನದಾನಜಪಾದಿಕಮ್ ।
ತರ್ಪಣಂ ವಾ ಕರಿಷ್ಯಂತಿ ಪ್ರಾಪ್ಸ್ಯಂತ್ಯಾಶು ಮನೋಗತಮ್ ॥ ೪೫ ॥

॥ ಇತಿ ಪಂಚದಶೋಽಧ್ಯಾಯಃ ॥

ಶ್ರೀಮಾಧವದೇವರು ಹೇಳಿದರು—

ನಿನ್ನ ಕೋರಿಕೆಯಂತೆ ಎಲ್ಲವೂ ಹಾಗೆಯೇ ಆಗಲಿ, ಅದಕ್ಕಿಂತ ಹೆಚ್ಚಿಗೆಯೂ ಆಗಲಿ; ಜಗತ್ತಿಗೇ ಪ್ರಭುವಾಗಿರುವ ನಾನು ಸಂತುಷ್ಟನಾಗುತ್ತಿರಲಾಗಿ ಮತ್ಯಾವುದು ತಾನೇ ಉತ್ತಮರಿಗೆ ಲಭ್ಯವಾಗುವುದಿಲ್ಲ. ॥ ೩೩ ॥ ಪ್ರಯಾಗದಲ್ಲಿ ಮಾಡಲ್ಪಟ್ಟ ಎಲ್ಲ ಕರ್ಮವೂ ಅದು ಸರಿಯಾಗಿ ಆಗಿರಲಿ, ಇಲ್ಲದಿರಲಿ ಅದು ನನಗೆ ಪ್ರಿಯವಾದುದಾಗಲಿ. ನನ್ನ ನಾಮಸ್ಮರಣೆಯಿಂದ ಅದು ಕೋಟಿಯಷ್ಟು ಹೆಚ್ಚಿನ ಫಲವನ್ನು ಕೊಡುವುದಾಗಲಿ. ॥ ೩೪ ॥ ಭೂಮಿಯನ್ನು ಶುದ್ಧೀಕರಿಸದೆ

ಉಂಟಾಗುವ ಭೂಮಿದೋಷವಾಗಲಿ, ಪೂರ್ವದಿಕ್ಕಿಗೆ ಕುಳಿತುಕೊಳ್ಳದೆ ಕಾರ್ಯಮಾಡುವ ದೋಷವಾಗಲೀ, ಕುಂಡ ಮತ್ತು ಮಂಟಪಗಳ ಪಲ್ಲಟದಿಂದಾಗುವ ದೋಷವಾಗಲೀ, ವೇದೀದೋಷವಾಗಲಿ, ಮಂತ್ರ ತಂತ್ರ ಇವುಗಳನ್ನು ಕೆಡಿಸಿ ಉಚ್ಚರಿಸುವುದರಿಂದಾಗುವ ದೋಷವಾಗಲಿ, ಹೋಮಾದಿಗಳಲ್ಲಿ ಋತ್ವಿಕ್ಕರ ಅಪಾತ್ರತ್ವದಿಂದಾಗುವ ದೋಷವಾಗಲಿ, ಪೌರೋಹಿತ್ಯಾದಿಗಳಿಗೆ ಕೊಡುವ ದಕ್ಷಿಣಾದಾನಗಳಿಂದಾಗಬಹುದಾದ ದೋಷಗಳಾಗಲಿ, ಹೋಮಾದಿಗಳಲ್ಲಿ ಆಗುವ ಆಹುತಿದೋಷಗಳಾಗಲಿ ಅಥವಾ ಆಹುತಿಗಳಲ್ಲಿ ಉಂಟಾಗುವ ಸಂಖ್ಯಾದೋಷಗಳಾಗಲಿ ಇವೆಲ್ಲವೂ ಮೂರು ವೇದಿಕೆಗಳಿಂದ ಮಂಡಿತವಾದ, ಐದು ಕುಂಡಗಳಿಂದ ವಿರಾಜಮಾನವಾದ, ಮೂರು ಲೋಕದಲ್ಲಿಯೇ ಅತ್ಯಂತ ಪರಿಶುದ್ಧವಾದ ಬ್ರಹ್ಮಕುಂಡದಿಂದ ಅಲಂಕೃತವಾದ ಈ ಪ್ರಯಾಗಕ್ಷೇತ್ರರಾಜನಲ್ಲಿ ಭಕ್ತಿಯಿಂದ ಆಚರಿಸಿದ ಯಾವ ಕಾರ್ಯಕ್ಕೂ ಲೋಪವೆಂಬುದೇ ಇಲ್ಲವು. ಧನವಿದ್ದರೂ ಹಣದ ಲೋಭ ಮಾಡಿದರೆ ಎಲ್ಲವೂ ನಾಶವಾಗುವುದು. ಇಲ್ಲದಿದ್ದರಿಲ್ಲ. ॥ ೩೫-೩೮ ॥ ಶಕ್ತಿಯಿದ್ದರೆ ಕಲ್ಪ (ಶ್ರಾದ್ಧಕಲ್ಪ, ಮಂತ್ರಕಲ್ಪ, ಹವನಹೋಮಾದಿಕಲ್ಪ)ದಲ್ಲಿ ಹೇಳಿರುವುದಕ್ಕಿಂತ ಎರಡು ಪಟ್ಟು, ಮೂರು ಪಟ್ಟು ಅಥವಾ ನಾಲ್ಕು ಪಟ್ಟು ಮಾಡಬೇಕು. ಕಡೆಯಪಕ್ಷ ಕಲ್ಪದಲ್ಲಿ ಹೇಳಿದಷ್ಟಾನ್ನಾದರೂ ಮಾಡಬೇಕು. ಇಲ್ಲದಿದ್ದರೆ ನಿಷ್ಫಲವಾಗುವುದು. ॥ ೩೯ ॥ ಸ್ವಲ್ಪ ಸ್ವಲ್ಪ ವಿಧಿಯನ್ನು ಮೀರಿ ಬಡವನು ಸಮರ್ಪಿಸಿದ ಪತ್ರೆ, ಹೂ ಮತ್ತು ಫಲಾದಿಗಳನ್ನೂ ನಾನು ಸ್ವೀಕರಿಸಿ ಅದನ್ನು ಮೇರುಪರ್ವತಕ್ಕೆ ಸಮನಾಗಿ ಮಾಡಿಕೊಂಡು ಫಲವನ್ನು ಕೊಡುತ್ತೇನೆ. ॥ ೪೦ ॥ ಅದರಲ್ಲಿಯೂ ಮಾಘಮಾಸದಲ್ಲಿ ವೈಷ್ಣವಕ್ಷೇತ್ರವೆನಿಸಿರುವ ಈ ಪ್ರಯಾಗದಲ್ಲಿ ಮಾಡಿದ ಎಳ್ಳು ಹೋಮದ ಫಲವನ್ನು ವರ್ಣಿಸಲು ನಾನೇ ಶಕ್ತನಲ್ಲ. ಅಂದಮೇಲೆ ಬೇರೆ ಯಾರು ತಾನೆ ಪೂರ್ತಿಯಾಗಿ ವರ್ಣಿಸಿಯಾರು?॥೪೧॥ ನಿನ್ನ ಆವಾಸವು ಈ ಕ್ಷೇತ್ರದಲ್ಲಿ ಸೋಮೇಶ್ವರನ ಪೂರ್ವಕ್ಕೆ ಇರಲಿ. ನನ್ನ ಈ ಕ್ಷೇತ್ರದಲ್ಲಿ ನಿನ್ನ ಇಚ್ಛೆಯಿದ್ದಂತೆ ಅವರವರು ಬಯಸಿದಂತೆ ಇಲ್ಲಿ ಕರ್ಮಮಾಡಿದವರಿಗೆ ಫಲಗಳನ್ನು ಕೊಡು. ॥ ೪೨ ॥ ಈ ರೀತಿಯಾಗಿ ಅಗ್ನಿದೇವರಿಗೆ ವರವನ್ನು ಕೊಟ್ಟು ಶ್ರೀಮಾಧವನು ಅಲ್ಲಿಯೇ ಅದೃಶ್ಯನಾದನು. ಅಗ್ನಿದೇವರಾದರೋ ಒಳ್ಳೆಯ ಹರ್ಷಚಿತ್ತನಾಗಿ ಈ ಕ್ಷೇತ್ರದಲ್ಲಿ ವಾಸಮಾಡಲು ಆರಂಭಿಸಿದರು. ॥ ೪೩ ॥ ಅಲ್ಲಿಂದ ಆರಂಭವಾಗಿ ಅಲ್ಲಿ ವಹ್ನಿಕುಂಡವು ಮಹಾಪುಣ್ಯಪ್ರದವೆಂದೂ, ಅಗ್ನಿತೀರ್ಥವೆಂದೂ ಪ್ರಸಿದ್ಧವಾಗಿ ವಿರಾಜಮಾನವಾಗಿದೆ. ॥ ೪೪ ॥ ಹೇ ಋಷಿಗಳಿರಾ! ಕೇಳಿರಿ. ಯಾರು ಈ ಅಗ್ನಿಕುಂಡಕ್ಕೆ ಹೋಗಿ ವಿಧಿವತ್ತಾಗಿ ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡುತ್ತಾರೋ ಅವರು ತಮ್ಮ ಮನಸ್ಸಿನ ಅಪೇಕ್ಷೆಗಳನ್ನೆಲ್ಲಾ ಪಡೆಯುವರು.॥೪೫॥

॥ ಹದಿನೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷೋಡಶೋऽಧ್ಯಾಯಃ ॥ ೧೬ ॥

ಋಷಯ ಊಚುಃ—

ಸೂತ ! ಸೂತ ! ಮಹಾಬುದ್ಧೇ ಸರ್ವಲೋಕೋಪಕಾರಕ ।
ಲಕ್ಷಹೋಮವಿಧಿಂ ಬ್ರೂಹಿ ಕರ್ತಾ ಯೇನ ಸುಖಂ ಲಭೇತ್ ॥ ೧ ॥

## ॥ ಹದಿನಾರನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

ಮಹಾಬುದ್ಧಿವಂತರಾದ ಸೂತರೇ! ಎಲ್ಲ ಜನರಿಗೂ ಉಪಯುಕ್ತವಾಗುವ ಲಕ್ಷ-ಹೋಮದ ವಿಧಿಯನ್ನು ದಯಮಾಡಿ ಹೇಳಿರಿ; ಇದರಿಂದ ಎಲ್ಲರಿಗೂ ಸುಖವಾಗುವುದು ॥ ೧ ॥

ಸೂತ ಉವಾಚ—

ಪ್ರವಕ್ಷ್ಯಾಮಿ ಮುನಿಶ್ರೇಷ್ಠಾಃ ಲಕ್ಷಹೋಮವಿಧಿಂ ಶುಭಮ್ ।
ಕರ್ತುರ್ಯೇನ ಭವೇತ್ಸಮ್ಯಗೈಹಿಕಾಮುಷ್ಮಿಕಂ ಫಲಮ್ ॥ ೨ ॥
ಉದ್ಗತೇ ತು ಸಹಸ್ರಾಂಶೌ ಪುಣ್ಯರ್ತೌ ಪುಣ್ಯಮಾಸಿ ಚ ।
ಶುಕ್ಲಪಕ್ಷೇ ಶುಭತಿಥೌ ಸುವಾರೇ ಶೋಭನೋಡುನಿ ॥ ೩ ॥
ಸುಯೋಗಲಗ್ನಕರಣೇ ಸುಚಂದ್ರೇ ಸುಮುಹೂರ್ತಕೇ ।
ಭೂಲೋಕೇ ಚಾಗ್ನಿವಸತೌ ಸುಗ್ರಹಸ್ಥೇ ತಥಾಹುತಿಃ ॥ ೪ ॥
ವಿಚಾರ್ಯೈವಂ ತತಃ ಪ್ರಾಗ್ವತ್ತೃತೀಯೇ ಪಂಚಮೇ ದಿನೇ ।
ವಿದಧ್ಯಾದ್ಭೂಮಿಸಂಶುದ್ಧಿಂ ಶಲ್ಯೋದ್ಧಾರಪುರಸ್ಸರಮ್ ॥ ೫ ॥
ದಹನಂ ಖನನಂ ಪ್ಲಾವಃ ಶಲ್ಯೋದ್ಧಾರಃ ಸಮಾಕೃತಿಃ ।
ಪಂಚೈತಾಃ ಶುದ್ಧಯೋ ಭೂಮೇರ್ವಿದ್ವದ್ಭಿಃ ಪರಿಕೀರ್ತಿತಾಃ ॥ ೬ ॥
ಈಶಕೋಣಪ್ಲವಾ ಭೂಮಿಃ ಕರ್ತುಃ ಸರ್ವಾರ್ಥದಾಯಿನೀ ।
ಪೂರ್ವಪ್ಲವಾ ವೃದ್ಧಿಕರೀ ವರದಾ ತೂತ್ತರಪ್ಲವಾ ॥ ೭ ॥
ಸ್ಫುಟಿತಾ ಚ ಸಶಲ್ಯಾ ಚ ವಲ್ಮೀಕಾರೋಹಿಣೀ ತಥಾ ।
ಶ್ಯಾಮಾ ಚ ಪರಿವರ್ಜ್ಯಾ ಭೂಃ ಕರ್ತುರಾಯುರ್ಧನಾಪಹಾ ॥ ೮ ॥
ಏವಂ ಸಮೀಕೃತೇ ಭಾಗೇ ಪ್ರಾಚೀಂ ಸಂಶೋಧ್ಯ ಯತ್ನತಃ ।
ವೇದಿಕಾ ತತ್ರ ಕರ್ತವ್ಯಾ ದಶಹಸ್ತಾಧಿಕಾ ಕ್ರಮಾತ್ ॥ ೯ ॥
ಮಂಟಪಂ ಕಾರಯೇತ್ತತ್ರ ಯಥಾವಿಧ್ಯುಪಶೋಭಿತಮ್ ।
ಪತ್ರಪುಷ್ಪಫಲಾಕೀರ್ಣಂ ವಿತಾನಧ್ವಜಭೂಷಿತಮ್ ॥ ೧೦ ॥
ಕುರ್ಯಾತ್ತನ್ಮಧ್ಯಮೇ ಭಾಗೇ ಚತುರಸ್ರಂ ಚತುಃಕರಮ್ ।
ಮೇಖಲಾಯೋನಿಸಂಯುಕ್ತಂ ಕುಂಡಕಂಠವಿರಾಜಿತಮ್ ॥ ೧೧ ॥

ಪ್ರಧಾನದೇವತಾವೇದೀ ಕರ್ತವ್ಯಾ ತಸ್ಯ ಪೂರ್ವತಃ ।
ಹಸ್ತೋತ್ಸೇಧಾ ಸುವಿಸ್ತಾರಾ ವಪ್ರತ್ರಯಸುಶೋಭಿತಾ ॥ ೧೨ ॥
ಗ್ರಹವೇದೀ ತದೀಶಾನೇ ಪ್ರಧಾನೋತ್ತರತೋ ಭವೇತ್ ।
ನೈರ್ಋತ್ಯೇ ವಾಸ್ತುವೇದೀ ಚ ತಾವದುನ್ನತಿವಿಸ್ತರಾ ॥ ೧೩ ॥
ತತಃ ಪ್ರಾಗುಕ್ತಸಮಯೇ ಶ್ರೀಕಾಮಃ ಶಾಂತಿಕಾಮುಕಃ ।
ವೃದ್ಧಾಯುಃ ಪುಷ್ಟಿಕಾಮೋ ವಾ ಸ್ತ್ರೀಪುತ್ರೋಭಯಕಾಮನಃ ॥ ೧೪ ॥
ಸ್ವರ್ಗಕಾಮೋಽಥ ವಾ ವಿಷ್ಣುಪ್ರೀತಿಕಾಮಸ್ತಥಾ ಪುಮಾನ್ ।
ಲಕ್ಷಹೋಮಂ ಕೋಟಿಹೋಮಮಾರಭೇತ ವಿಚಕ್ಷಣಃ ॥ ೧೫ ॥
ಕೃತನಿತ್ಯಕ್ರಿಯಶ್ಶಾಂತೋಽಹತವಾಸೋದ್ವಯಃ ಶುಚಿಃ ।
ವಿಪ್ರಾನಾಹೂಯ ಧರ್ಮಜ್ಞಾಂಸ್ತತಃ ಸಂಕಲ್ಪಮಾಚರೇತ್ ॥ ೧೬ ॥
ಗಣೇಶಂ ಪೂಜಯಿತ್ವಾ ಚ ಸಪತ್ನೀಕಃ ಸಬಾಂಧವಃ ।
ಪುಣ್ಯಾಹಂ ವಾಚಯೇತ್ಪಶ್ಚಾನ್ನಾಂದೀಶ್ರಾದ್ಧಂ ತತಃ ಪರಮ್ ॥ ೧೭ ॥
ಆಚಾರ್ಯಬ್ರಹ್ಮಸಾದಸ್ಯ ಋತ್ವಿಜಾಂ ವರಣಂ ಕ್ರಮಾತ್ ।
ಕೃತ್ವಾ ತತ್ಪೂಜನಂ ಕುರ್ಯಾನ್ಮಧುಪರ್ಕವಿಧಾನತಃ ॥ ೧೮ ॥
ಸಂಪ್ರಾರ್ಥ್ಯ ತಾಂಶ್ಚ ತೈಸ್ಸಾಕಂ ಯಜಮಾನಃ ಕಲತ್ರಯುಕ್ ।
ಗೃಹೀತ್ವಾ ಕಲಶಂ ಹಸ್ತೇ ಪೂರ್ಣಪುಷ್ಪಫಲಾರ್ಚಿತಮ್ ॥ ೧೯ ॥
ಮಂಟಪಂ ದಕ್ಷಿಣೀಕೃತ್ಯ ಭದ್ರಮಂತ್ರಾದಿಘೋಷತಃ ।
ದ್ವಾರೇಣ ಪಶ್ಚಿಮೇನಾಥ ಪ್ರವಿಶೇನ್ಮಂಟಪಂ ತತಃ ॥ ೨೦ ॥
ಸ್ಥಿತ್ವಾಸನೇ ತಥಾಚಮ್ಯ ಪ್ರಾಣಾನಾಯಮ್ಯ ವಾಗ್ಯತಃ ।
ಆಚಾರ್ಯಕ್ರಿಯಮಾಣಂ ಚ ಸರ್ವಕರ್ಮ ವಿಲೋಕಯೇತ್ ॥ ೨೧ ॥
ನಿಯುಕ್ತೋ ಯಜಮಾನೇನ ಆಚಾರ್ಯಸ್ತದನಂತರಮ್ ।
ಸಕಲಂ ಕರ್ಮ ಕುರ್ವೀತ ತ್ಯಾಗಪೂಜನಮಂತರಾ ॥ ೨೨ ॥
ಆಚಾರ್ಯಃ ಸರ್ಷಪಾನ್ಗೌರಾನ್ಯದತ್ರೇತ್ಯಾದಿಮಂತ್ರತಃ ।
ವಿಕಿರೇನ್ಮಂಟಪಸ್ಯಾಂತಶ್ಚತುರ್ದಿಕ್ಷು ಯಥಾಕ್ರಮಮ್ ॥ ೨೩ ॥
ತತ್ರೈವಂ ಪ್ರೋಕ್ಷಯೇತ್ಪಶ್ಚಾತ್ಪಂಚಗವ್ಯೇನ ಸತ್ಕುಶೈಃ ।
ಅಬ್ಲಿಂಗೈಶ್ಶುಚಿಭಿರ್ಮಂತ್ರೈಃ ಪುನಶ್ಶುದ್ಧಜಲೇನ ಚ ॥ ೨೪ ॥
ತತೋ ಗೃಹೀತಸಂಭಾರೋ ಯಜ್ಞವಾಸ್ತುಸಮೀಪತಃ ।
ತನ್ಮಂಡಲಗತಾನ್ದೇವಾಂಸ್ತತ್ರಾವಾಹ್ಯ ಪ್ರಪೂಜಯೇತ್ ॥ ೨೫ ॥
ಮಂಟಪಸ್ಥಾಸ್ತತೋ ದೇವಾಃ ಪೂಜ್ಯಾಸ್ಸರ್ವೇ ಯಥಾಕ್ರಮಮ್ ।
ಆವಾಹ್ಯ ಬಲಿದಾನಾದ್ಯೈರುಪಚಾರೈಃ ಪೃಥಕ್ಪೃಥಕ್ ॥ ೨೬ ॥

ಮುಖ್ಯಪೀಠೇ ತಥಾ ಸ್ಥಿತ್ವಾ ಯಜಮಾನಯುತೇ ಶುಚೌ ।
ಸೌವರ್ಣೇ ರಜತೇ ತಾಮ್ರೇ ಮೃನ್ಮಯೇ ಕಲಶೇಽಥವಾ ॥ ೨೭ ॥
ಪಂಚಪಲ್ಲವದೂರ್ವಾಢ್ಯೇ ಗಂಧವಸ್ತ್ರಾದಿಭೂಷಿತೇ ।
ಪೂರ್ಣಪಾತ್ರಸಮಾಯುಕ್ತೇ ಕುಂಕುಮಾಷ್ಟದಲಾನ್ವಿತೇ ॥ ೨೮ ॥
ಸೌವರ್ಣೀಂ ರಾಜತೀಂ ತಾಮ್ರೀಂ ನಿಷ್ಕಾರ್ಧಾರ್ಧಪ್ರಮಾಣಕಾಮ್ ।
ಸ್ಥಾಪಯೇತ್ಪ್ರತಿಮಾಂ ಮುಖ್ಯಾಂ ಪೂಜಯಿತ್ವಾ ಯಥಾವಿಧಿ ॥ ೨೯ ॥
ಸ್ವಶಾಖಾಧ್ಯಾಯಿನಂ ತತ್ರ ವೃಣುಯಾದೇಕಮೃತ್ವಿಜಮ್ ॥ ೩೦ ॥
ಮೇಖಲಾತ್ರಿತಯೇ ಯೋನ್ಯಾಂ ವಿಷ್ಣುಬ್ರಹ್ಮೇಶಪಾರ್ವತೀಃ ।
ಆವಾಹ್ಯ ಪೂಜಯಿತ್ವಾ ಚ ಕುಂಡೇಽಗ್ನಿಂ ಪ್ರಣಯೇತ್ತತಃ ॥ ೩೧ ॥
ತದೀಶಾನ್ಯಾಮಥೋ ಗತ್ವಾ ಗ್ರಹವೇದ್ಯಾಂ ಸುರಂಗಕೈಃ ।
ವಿರಚ್ಯ ಸರ್ವತೋಭದ್ರಂ ಬ್ರಹ್ಮಾದೀಂಸ್ತತ್ರ ಪೂಜಯೇತ್ ॥ ೩೨ ॥
ತದುಪರ್ಯಥ ಸೂರ್ಯಾದೀಂಸ್ತತ್ತನ್ಮಂತ್ರೈರ್ಯಥಾಸ್ಥಲಮ್ ।
ಆವಾಹ್ಯ ಪೂಜಯೇದ್ದೇವಾನ್ಮನುಷ್ಯಾಂತಾನ್ಯಥಾಕ್ರಮಮ್ ॥ ೩೩ ॥
ಸ್ಥಾಪಯೇತ್ಕಲಶಂ ಪಶ್ಚಾದ್ವೇದೀಶಾನೇ ಸಲಕ್ಷಣಮ್ ।
ಆವಾಹ್ಯ ವರುಣಂ ತತ್ರ ಸಂಪೂಜ್ಯ ಪ್ರಾರ್ಥಯೇತ್ತತಃ ॥ ೩೪ ॥
ಅನ್ವಾಧಾಯ ಯಥಾಶಾಖಂ ಗ್ರಹನಾಮಪುರಸ್ಸರಮ್ ।
ಸ್ವಗೃಹ್ಯೋಕ್ತೇನ ಮಾರ್ಗೇಣ ಚಕ್ಷುಷ್ಮಂತಂ ಸಮಾಪಯೇತ್ ॥ ೩೫ ॥
ಹವನೀಯೇ ತತೋ ದ್ರವ್ಯೇ ಸರ್ವಾ ಉದ್ದಿಶ್ಯ ದೇವತಾಃ ।
ಯಜಮಾನೇನ ಸಂಯುಕ್ತಾ ಹೋಮಂ ಕುರ್ಯುರಥರ್ತ್ವಿಜಃ ॥ ೩೬ ॥
ಶುಚಯಸ್ಸಾವಧಾನಾಶ್ಚ ಯಜಮಾನರ್ದ್ಧಿಕಾಂಕ್ಷಿಣಃ ।
ಜಾನ್ವಾಚ್ಯದಕ್ಷಿಣಾಂಚೋಪವೀತಿನಃ ಪ್ರಹರಾವಧಿ ॥ ೩೭ ॥
ಗಣನೇ ತತ್ಪರಾಸ್ಸರ್ವೇ ಧ್ಯಾತ್ವಾ ಛಂದರ್ಷಿದೇವತಾಃ ।
ಯಜ್ಞೇಶಂ ಚ ಸಮಿದ್ಧೇಽಗ್ನೌ ಧ್ಯಾಯಂತೋ ವಾಙ್ನಿಯಂತ್ರಿತಾಃ ॥ ೩೮ ॥
ಸಮಿಚ್ಚರುತಿಲಾಜ್ಯೈಶ್ಚ ವಿನಾಯಕಪುರಸ್ಸರಮ್ ।
ಗ್ರಹಾಣಾಂ ಹವನಂ ಕುರ್ಯುರಷ್ಟಚತ್ವಾರ ಏವ ವಾ ॥ ೩೯ ॥
ಅರ್ಕಾದಿಪ್ರಭವಾಃ ಶ್ರೇಷ್ಠಾಃ ಸಮಿಧೋ ನವಧಾ ಸ್ಮೃತಾಃ ।
ಪಲಾಶಪ್ರಭವಾ ಏವ ಸ್ಯುಃ ಪರಾಸಾಮಸಂಭವೇ ॥ ೪೦ ॥
ಅಷ್ಟೋತ್ತರಸಹಸ್ರಂ ವಾ ಶತಮಷ್ಟೋತ್ತರಂ ತು ವಾ ।
ಅಷ್ಟಾವಿಂಶತಿರಷ್ಟೌ ವಾಹುತಯಃ ಪ್ರಾತಿಹೋಮಿಕಮ್ ॥ ೪೧ ॥
ಅಂಗಾನಾಮೇಕಯಾಹುತ್ಯಾ ಚರಿತಾರ್ಥತ್ವಮಿಷ್ಯತೇ ।
ಅಧಿಪ್ರತ್ಯಧಿದೇವಾನಾಂ ತತ್ತನ್ನ್ಯೂನಾಹುತಿರ್ಭವೇತ್ ॥ ೪೨ ॥

ಚರುಸ್ಥಾಲ್ಯಸ್ತ್ರಯಸ್ತ್ರಿಂಶದಥವಾ ದಶವೈಕಿಕಾಃ ।
ತತ್ರೈವ ಶ್ರಪಯೇತ್ಸಮ್ಯಗ್ಗೃಹಸಿದ್ಧಾನ್ನಮೇವ ವಾ ॥ ೪೩ ॥
ದಧಿ ಕ್ಷೌದ್ರಘೃತಾಭ್ಯಕ್ತಾ ಹೋತವ್ಯಾಸ್ಸಮಿಧೋಽಖಿಲಾಃ ।
ಪ್ರಾಙ್ಮುಖೋದಙ್ಮುಖೈರ್ವಾಮಕರಸಂಸ್ಪೃಷ್ಟಹೃದ್ಯುತೈಃ ॥ ೪೪ ॥
ಪ್ರಾದೇಶಃ ಕುಕ್ಕುಟಾಂಡಂ ಚ ಮರಾಲೀ ಶೂಕರೀ ಮೃಗೀ ।
ಶ್ರುವಮಾತ್ರಂ ಪ್ರಮಾಣಂ ಸ್ಯಾಚ್ಚತುರ್ದ್ರವ್ಯಾಹುತೌ ಕ್ರಮಾತ್ ॥ ೪೫ ॥
ಗ್ರಹಾದಿ ಹವನೇ ಜಾತೇ ತತ್ಸಂಖ್ಯಾವ್ಯತಿರೇಕತಃ ।
ಲಕ್ಷಾದ್ಯಾಹುತಯಃ ಪಶ್ಚಾದ್ಧೋತವ್ಯಾ ದ್ವಿಜಭೂಷಣೈಃ ॥ ೪೬ ॥
ವ್ಯಸ್ತಾಭಿಶ್ಚ ಸಮಸ್ತಾಭಿಃ ಸಮಸ್ತಾಭಿರಥೈವ ವಾ ।
ಕುರ್ಯುರ್ವ್ಯಾಹೃತಿಭಿರ್ಹೋಮಮೇಕಪಕ್ಷಾಶ್ರಯೇಣ ಚ ॥ ೪೭ ॥
ಬ್ರಾಹ್ಮಣಾ ಹೋಮಕರ್ತಾರಶ್ಶತಪಂಚಾಶದೇವ ವಾ ।
ಪಂಚವಿಂಶತಿರಷ್ಟೌ ವಾ ಸ್ವಯಮೇವಾಥ ವಾ ಹುನೇತ್ ॥ ೪೮ ॥
ಸ್ವಯಂ ಯದಾಹುವೇತ್ಕರ್ತಾ ಸರ್ವತ್ಯಾಗವಿವರ್ಜಿತಃ ।
ಪ್ರತ್ಯಾಹುತಿಂ ತ್ಯಜನ್ಶಕ್ತ್ಯಾ ಗೃಹ್ಯೇಽಗ್ನೌ ಸತಿ ಸಂಭವೇ ॥ ೪೯ ॥
ಹೋಮಾದೌ ಪೂಜನಂ ಕುರ್ಯಾದುಪಚಾರೈಶ್ಚ ಪಂಚಭಿಃ ।
ನಿತ್ಯಂ ಸ್ಥಾಪಿತದೇವಾನಾಂ ಪಶ್ಚಾದ್ಧವನಮಾಚರೇತ್ ॥ ೫೦ ॥
ಪ್ರತ್ಯಹಂ ತೋಷಯೇದ್ವಿಪ್ರಾನ್ದಕ್ಷಿಣಾಭಿಶ್ಚ ಭೋಜನೈಃ ।
ಲಕ್ಷಹೋಮಾದಿಕಂ ಕರ್ಮ ಸುಮುಹೂರ್ತೇ ಸಮಾಪಯೇತ್ ॥ ೫೧ ॥

॥ ಇತಿ ಷೋಡಶೋಽಧ್ಯಾಯಃ ॥

**ಸೂತರು ಹೇಳಿದರು—**

ಎಲೈ ಶೌನಕಾದಿ ಮುನಿವರ್ಯರೇ! ಲಕ್ಷನಮಸ್ಕಾರಗಳು, ಲಕ್ಷಪ್ರದಕ್ಷಿಣೆಗಳು, ಲಕ್ಷಪುಷ್ಪಾರ್ಚನೆ, ಲಕ್ಷತುಳಸ್ಯರ್ಚನೆ, ಲಕ್ಷದೀಪ, ಲಕ್ಷಸಂಖ್ಯಾಕದಾನ ಇವೆಲ್ಲವುಗಳನ್ನೂ ಶ್ರೀಹರಿಯ ಪ್ರೀತಿಗಾಗಿ ಮಾಡುವುದು. ಇವು ಪರಮಮಂಗಳಕರವು. ಇವುಗಳನ್ನು ಆಚರಣೆ ಮಾಡಿದ ನಂತರ ಹೋಮವನ್ನು ಮಾಡಿ ಶ್ರೀಮಾಧವನಿಗೂ ಅನ್ಯ ದೇವೋತ್ತಮರಿಗೂ ಸಮರ್ಪಣೆ ಮಾಡಿದರೆ ಈ ವ್ರತಗಳು ಸಾಂಗವಾಗಿ ಮುಗಿದು ಇಹಲೋಕದ ಫಲಗಳಲ್ಲದೆ ಪರಲೋಕದ ಫಲಗಳಾದ ಸ್ವರ್ಗವಾಸವೂ ಮತ್ತು ಮೋಕ್ಷಪ್ರಾಪ್ತಿಯೂ ಉಂಟಾಗುವುದು. ॥ ೨ ॥ ಈ ಹೋಮದ ವಿಧಿಯು ಈ ರೀತಿಯಾಗಿದೆ—

ಪುಣ್ಯಕರಗಳಾದ ವಸಂತ, ಶರತ್, ಶಿಶಿರ, ವರ್ಷ ಮುಂತಾದ ಋತುಗಳಲ್ಲಿ ಸಾಧ್ಯವಾದರೆ ಉತ್ತರಾಯಣದಲ್ಲಿ, ಪುಣ್ಯಕರವಾದ ವೈಶಾಖ, ಶ್ರಾವಣ, ಆಶ್ವೀಜ, ಕಾರ್ತಿಕ, ಮಾರ್ಗಶಿರ ಮತ್ತು ಮಾಘ ಮುಂತಾದ ಮಾಸಗಳಲ್ಲಿ ಶುಕ್ಲಪಕ್ಷದಲ್ಲಿ, ಸೋಮ, ಬುಧ, ಗುರು ಮತ್ತು ಶುಕ್ರವಾರಗಳಲ್ಲಿ, ಒಳ್ಳೆಯ ನಕ್ಷತ್ರಗಳಿರುವ, ಒಳ್ಳೆಯ ಯೋಗ, ಮಂಗಳಕರವಾದ ಲಗ್ನ, ಶುಭ ಕರಣ, ಚಂದ್ರನ ಕಲಾವಿಶಿಷ್ಟವಾದ ಒಳ್ಳೆಯ ಮುಹೂರ್ತವಿರುವ ದಿವಸವನ್ನು ಆರಿಸಬೇಕು. ಆ

ದಿನ ಭೂಲೋಕದಲ್ಲಿ ಅಗ್ನಿಯು ಇರಬೇಕು. ಆಹುತಿಯು ಶುಭಗ್ರಹದಲ್ಲಿರಬೇಕು. ॥ ೩-೪ ॥ ಈ ರೀತಿಯಾಗಿ ವಿಚಾರ ಮಾಡಿ, ಆ ದಿನಕ್ಕೆ ಪೂರ್ವದಲ್ಲಿ ಮೂರನೇ ಅಥವಾ ಐದನೇ ದಿನದಲ್ಲಿ ಹೋಮ ಮಾಡುವ ಜಾಗದ ಶುದ್ಧಿಯ ಕಾರ್ಯವನ್ನು ಪ್ರಾರಂಭಿಸಬೇಕು; ಅಂದರೆ ಆ ಭೂಮಿಯಲ್ಲಿರುವ ಮುಳ್ಳು ಕಲ್ಲುಗಳನ್ನು ಅಗೆದು ತೆಗೆಯಬೇಕು. ಬೇಡದ ಗಿಡಗಳನ್ನು ಸುಟ್ಟು, ನೀರು ಹಾಯಿಸಿ, ಮುಳ್ಳು ಗಿಡಗಳ ಬೇರುಗಳನ್ನು ಕಿತ್ತು ಹಾಕಿ, ಭೂಮಿಯನ್ನು ಸಮ ಮೇಲ್ಮೈಯಿರುವಂತೆ ಮಾಡಬೇಕು.(ಖನನ,ದಹನ, ಪ್ಲಾವಃ, ಶಲ್ಯೋದ್ಧಾರಃ, ಸಮಾಕೃತಿಃ) ಈ ರೀತಿಯಾಗಿ ತಿಳಿದವರು ಹೇಳುತ್ತಾರೆ. ॥ ೫-೬ ॥ ಈಶಾನ್ಯ ದಿಕ್ಕಿಗೆ ನೀರು ಹರಿಯುವಂತಿರುವ ಭೂಮಿಯು ಎಲ್ಲಾ ಪುರುಷಾರ್ಥವನ್ನು ಕೊಡತಕ್ಕದ್ದು. ಪೂರ್ವದಿಕ್ಕಿಗೆ ನೀರು ಹರಿಯುವಂತಿದ್ದರೆ ವೃದ್ಧಿಯನ್ನುಂಟುಮಾಡುತ್ತದೆ, ಉತ್ತರಕ್ಕೆ ನೀರು ಹರಿಯುವ ಭೂಮಿಯು ವರಪ್ರದವಾದದ್ದು. ॥ ೭ ॥ ಸೀಳಿರುವ, ಮುಳ್ಳು ಗಿಡಗಳಿರುವ ಮತ್ತು ಹಾವಿನ ಹುತ್ತವಿರುವ, ಕಪ್ಪಗಿರುವ ಭೂಮಿಯನ್ನು ಆರಿಸಬಾರದು. ಕಾರಣ ಈ ರೀತಿಯ ಭೂಮಿಯು ಕರ್ತೃವಿನ ಆಯುಸ್ಸನ್ನೂ, ಧನವನ್ನೂ ಅಪಹಾರ ಮಾಡುವುದು. ॥ ೮ ॥ ಈ ರೀತಿಯಾಗಿ ಪ್ರಯತ್ನಪೂರ್ವಕವಾಗಿ ಭೂಮಿಯನ್ನು ಶುದ್ಧಿಗೊಳಿಸಿ ಪೂರ್ವದಿಕ್ಕಿನಲ್ಲಿ ಹತ್ತು ಮೊಳ ಉದ್ದ ಅಗಲವಿರುವ ವೇದಿಕೆಯನ್ನು ಮಾಡಬೇಕು ॥ ೯ ॥ ಅದರಲ್ಲಿ ಶಾಸ್ತ್ರೋಕ್ತವಾಗಿ ಮಂಟಪವನ್ನು ಕಟ್ಟಬೇಕು. ಇದನ್ನು ಎಲೆಗಳು, ಹೂವುಗಳು, ಹಣ್ಣುಗಳು, ಹಂದರ(ವಿತಾನ) ಬಾವುಟ ಮತ್ತು ಪತಾಕೆ ಇವುಗಳಿಂದ ಅಲಂಕರಿಸ-ಬೇಕು. ॥ ೧೦ ॥ ಅದರ ಮಧ್ಯದಲ್ಲಿ ನಾಲ್ಕು ಹಸ್ತಗಳ ಉದ್ದ ಅಗಲಗಳುಳ್ಳ ಚೌಕವಾದ ಅಗ್ನಿಕುಂಡವನ್ನು ಮಾಡಬೇಕು. ಇದು "ಮೇಖಲಾ" "ಯೋನಿ" (ಮೇಖಲಾ ಕುಂಡದಲ್ಲಿ ಮಾಡುವ ಮೂರು ಮೆಟ್ಟಿಲುಗಳು, ಯೋನಿ-ಅರಳೀಪತ್ರದ ಆಕಾರದಲ್ಲಿ ಹನ್ನೆರಡು ಅಂಗುಲ ವಿಸ್ತಾರವಾಗಿ, ಎರಡು ಅಂಗುಲ ಕುಂಡದಲ್ಲಿ ಬಾಗಿರುವಂತೆ, ಅಗ್ನಿ ಪ್ರಕ್ಷೇಪಕ್ಕಾಗಿ ರಚಿತವಾದದ್ದು.) ಮತ್ತು ಕುಂಡಕಂಠದಿಂದ ಕೂಡಿರಬೇಕು. ॥ ೧೧ ॥ ಇದಕ್ಕೆ ಪೂರ್ವಭಾಗದಲ್ಲಿ ಪ್ರಧಾನ ದೇವತೆಯ ಪೀಠವನ್ನು ಮಾಡಬೇಕು. ಇದು ಒಂದು ಹಸ್ತದಷ್ಟು ಎತ್ತರವಿರಬೇಕು ಮತ್ತು ವಿಸ್ತಾರವಾಗಿರಬೇಕು. ಅಲ್ಲದೆ ಮೂರು ಮೆಟ್ಟಿಲುಗಳಿಂದ ಕೂಡಿರಬೇಕು. ॥ ೧೨ ॥ ಈ ದೊಡ್ಡ ವೇದಿಕೆಯ ಈಶಾನ್ಯಭಾಗದಲ್ಲಿ ಪ್ರಧಾನದೇವತಾಪೀಠದ ಉತ್ತರದಲ್ಲಿ ಗ್ರಹಗಳ (ನವಗ್ರಹ)ವೇದಿಕೆಯನ್ನು ಮಾಡಬೇಕು. ಇದರ ಎತ್ತರವೂ ಅಷ್ಟೇ (ಅಂದರೆ ಒಂದು ಹಸ್ತದಷ್ಟು) ಇರಬೇಕು. ॥ ೧೩ ॥ ಅನಂತರ ಮೊದಲೇ ತಿಳಿಸಿರುವ ಸುಮುಹೂರ್ತದಲ್ಲಿ ಸಂಪತ್ತನ್ನೂ ಶಾಂತಿಯನ್ನೂ, ದೀರ್ಘಾಯುಸ್ಸನ್ನೂ, ಆರೋಗ್ಯವನ್ನೂ ಹೆಂಡತಿಮಕ್ಕಳ ಭಾಗ್ಯವನ್ನೂ ಸ್ವರ್ಗ ಮತ್ತು ಮೋಕ್ಷವನ್ನು ಬಯಸುವವನೂ, ಎಲ್ಲಕ್ಕಿಂತ ಹೆಚ್ಚು ಶ್ರೀವಿಷ್ಣುವಿನ ಅನುಗ್ರಹವನ್ನು ಬಯಸುವವನೂ ವಿವೇಕದಿಂದ ಲಕ್ಷಹೋಮವನ್ನಾಗಲಿ ಅಥವಾ ಕೋಟಿಹೋಮವನ್ನಾಗಲಿ ಪ್ರಾರಂಭಿಸತಕ್ಕದ್ದು. ॥ ೧೪-೧೫ ॥ ತನ್ನ ನಿತ್ಯಕರ್ಮಗಳನ್ನು ಮಾಡಿ ಮುಗಿಸಿ, ಶಾಂತತೆಯಿಂದ ಒಗೆಯದ ನೂತನ ವಸ್ತ್ರಗಳನ್ನು ಧರಿಸಿ, ಶುಚಿರ್ಭೂತನಾಗಿ, ಧರ್ಮಶಾಸ್ತ್ರದಲ್ಲಿ ನಿಷ್ಣಾತರಾದ ವೇದಶಾಸ್ತ್ರಸಂಪ್ರದಾಯಾದಿಗಳಲ್ಲಿ ಕುಶಲರಾದ ಬ್ರಾಹ್ಮಣೋತ್ತಮರುಗಳನ್ನು ಆಹ್ವಾನಿಸಿ ನಂತರ ಈ ಹೋಮಗಳ ಸಂಕಲ್ಪವನ್ನು ಮಾಡಬೇಕು. ॥ ೧೬ ॥ ಪ್ರಾರಂಭದಲ್ಲಿ ವಿಘ್ನನಿವಾರಣೆಗಾಗಿ ಶ್ರೀಮಹಾಗಣಪತಿಯನ್ನು ಪೂಜಿಸಿ, ಹೆಂಡತಿ, ಬಂಧು ಮತ್ತು ಮಕ್ಕಳ ಜೊತೆಗೆ ಪುಣ್ಯಾಹವಾಚನ-ವನ್ನು ಮುಗಿಸಿ ತದನಂತರ ನಾಂದೀಶ್ರಾದ್ಧವನ್ನಾಚರಿಸಬೇಕು. ॥ ೧೭ ॥ ಪ್ರಧಾನಾಚಾರ್ಯ-

ರನ್ನೂ, ಬಹುಸದಸ್ಯರು ಹಾಗು ಋತ್ವಿಜರುಗಳನ್ನೂ ಅರ್ಘ್ಯ, ಪಾದ್ಯ, ಆಚಮನ ಮತ್ತು ಮಧುಪರ್ಕ ಅನಂತರ ಫಲನಿವೇದನವೆಂಬ ಪಂಚೋಪಚಾರಗಳಿಂದ ಪೂಜಿಸಬೇಕು. ॥ ೧೮ ॥ ಈ ಋತ್ವಿಜಾದಿಗಳನ್ನು ಹೋಮಕಾರ್ಯದ ಸಂಪೂರ್ಣತೆಗಾಗಿ ಪ್ರಾರ್ಥಿಸಬೇಕು. ಆಮೇಲೆ ಹೆಂಡತಿಯೊಡನೆ ಪೂರ್ಣಫಲದಿಂದ ಅಲಂಕರಿಸಲ್ಪಟ್ಟ (ಪ್ರಧಾನ) ಕಳಶವನ್ನು ತನ್ನ ಎರಡೂ ಕೈಗಳಿಂದ ತಟ್ಟೆಯಲ್ಲಿಟ್ಟುಕೊಂಡು ತೆಗೆದುಕೊಂಡು, ಭದ್ರಮಂತ್ರಾದಿಗಳನ್ನು ಪುರೋಹಿತರು ಘೋಷಿಸುತ್ತಿರಲು, ಹೋಮಮಂಟಪವನ್ನು ಪ್ರದಕ್ಷಿಣೆ ಮಾಡಿ ಪಶ್ಚಿಮದಿಕ್ಕಿನಲ್ಲಿರುವ ಸಭಾಂಗಣದ ದ್ವಾರದಿಂದ ಪ್ರವೇಶ ಮಾಡಿ ಆ ಮಂಟಪವನ್ನು ಪ್ರವೇಶಿಸಿ ಆ ಕಳಶವನ್ನು ಪ್ರಧಾನ ಜಗಲಿಯಲ್ಲಿಮಂಡಿಸಿ ಅನಂತರ ತನ್ನಹೆಂಡತಿಯೊಡನೆ ಆಸನದಲ್ಲಿ ಕುಳಿತು, ಆಚಮನ ಮಾಡಿ ಪ್ರಾಣಾಯಾಮ ಮಾಡಿ ಮೌನವಾಗಿ ಒಂದೇ ಮನಸ್ಸಿನಿಂದ ಶಾಂತವಾಗಿ ಕುಳಿತು-ಕೊಂಡು ಆಚಾರ್ಯರು ಮಾಡುವ ಕಾರ್ಯಗಳನ್ನು ನೋಡಿಕೊಂಡಿರುವುದು.॥೧೯-೨೧॥ ಯಜಮಾನನಿಂದ ಆದೇಶಿಸಲ್ಪಟ್ಟ ಆಚಾರ್ಯರು ಪೂಜಾ ಮತ್ತು ತ್ಯಾಗಗಳನ್ನು (ತ್ಯಾಗವೆಂದರೆ ಹೊಮಾದಿಗಳನ್ನು ಮಾಡುವಾಗ 'ನ ಮಮ' ಎಂದು ಹೇಳತಕ್ಕದ್ದು) ಬಿಟ್ಟು ಎಲ್ಲ ಕಾರ್ಯಗಳನ್ನೂ ಯಜಮಾನನ ಪರವಾಗಿ ಮಾಡಬೇಕು. ॥ ೨೨ ॥ ಆಚಾರ್ಯರು ''ಯದತ್ರ'' ಎಂಬ ಮಂತ್ರವನ್ನು ಹೇಳುತ್ತಾ ಬಿಳಿಎಳ್ಳನ್ನು ಮಂಟಪದ ಒಳಗೆ ನಾಲ್ಕು ಕಡೆಗೂ ಚೆಲ್ಲಬೇಕು. ॥ ೨೩ ॥ ಪಂಚಗವ್ಯವನ್ನು 'ಆಪೋಹಿಷ್ಠಾ' ಮೊದಲಾದ ಅಭಿಮಾನಿ ದೇವತಾ ಮಂತ್ರಗಳಿಂದ, 'ಶುಚೀ ವೋ' ಮೊದಲಾದ ಶುದ್ಧಿ ಮಂತ್ರಗಳಿಂದ ಪ್ರೋಕ್ಷಿಸಬೇಕು ಮತ್ತು ಶುದ್ಧ ನೀರನ್ನೂ ಎಲ್ಲೆಡೆಯೂ ಒಳ್ಳೆಯ ದರ್ಭೆಗಳಿಂದ ಪ್ರೋಕ್ಷಿಸತಕ್ಕದ್ದು. ॥ ೨೪ ॥ ಅನಂತರ, ಎಲ್ಲ ಮಂಗಳದ್ರವ್ಯಗಳೊಡನೆ ಯಜ್ಞವಾಸ್ತುವಿನ ಸಮೀಪದಲ್ಲಿ ಮಂಡಲದೇವತೆಗಳನ್ನು ಆವಾಹಿಸಿ ಅವರುಗಳನ್ನು ಪೂಜಾ ಮಾಡಬೇಕು. ॥ ೨೫ ॥ ಮಂಟಪದಲ್ಲಿರುವ ಎಲ್ಲ ದೇವತೆಗಳನ್ನು ಕ್ರಮವಾಗಿ ಆವಾಹನೆ ಮಾಡಿ ಬಲಿದಾನವೇ ಮೊದಲಾದ ಉಪಚಾರಗಳಿಂದ ಬೇರೆಬೇರೆಯಾಗಿ ಎಲ್ಲರನ್ನೂ ಪೂಜಿಸಬೇಕು. ॥ ೨೬ ॥ ಪ್ರಧಾನಕಳಶವು ಬಂಗಾರದ್ದಾಗಿರಬಹುದು, ಬೆಳ್ಳಿಯದೂ ಆಗಿರಬಹುದು, ತಾಮ್ರದ್ದೂ ಅಥವಾ ಮಣ್ಣಿನಿಂದ ಮಾಡಿದ್ದೂ ಕೂಡ ಆಗಿರಬಹುದು. ಇದನ್ನು ಒಂದು ಮುಚ್ಚಳದಿಂದ ಮುಚ್ಚಬೇಕು. ಅದರ ಮೇಲೆ ಕುಂಕುಮದಿಂದ ಅಷ್ಟದಳವನ್ನು ರಚಿಸಬೇಕು. ಈ ಕಳಶದೊಳಗೆ ಐದು ಬಗೆಯ ಚಿಗುರುಗಳನ್ನು, ಗರಿಕೆ ಹುಲ್ಲು, ಗಂಧ, ವಸ್ತ್ರ ಖರ್ಜೂರ, ಬಟ್ಟಡಿಕೆ, ಶ್ರೀಮಹಾಲಕ್ಷ್ಮಿ ಮತ್ತು ಮಹಾವಿಷ್ಣುವಿನ ಪ್ರತಿಮೆ ; ಬಂಗಾರದ ಕಾಸು ಅಥವಾ ಬೆಳ್ಳಿಯ ನಾಣ್ಯ, ಅರಶಿನ, ಕುಂಕುಮ, ಸುಣ್ಣ ಇವುಗಳನ್ನೆಲ್ಲಾ ಹಾಕಬೇಕು. ಕಳಶವು ವಸ್ತ್ರಯಜ್ಞೋಪವೀತಾದಿ-ಗಳಿಂದ ಭೂಷಿತವಾಗಿರಬೇಕು. ಒಂದು ತೊಲ ತೂಕದ ಅಥವಾ ಅರ್ಧ ತೊಲ ತೂಕದ ಅಥವಾ ಕಾಲು ತೊಲ ತೂಕದ ಬಂಗಾರದ, ಬೆಳ್ಳಿಯ ಅಥವಾ ತಾಮ್ರದ ಮುಖ್ಯಪ್ರತಿಮೆಯನ್ನು ಇಟ್ಟು ಅದನ್ನು ಯಥಾವಿಧಿಯಾಗಿ ಆವಾಹನಾದಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಅದರ ಹತ್ತಿರ ಸ್ವಶಾಖೆಯನ್ನು ಅಧ್ಯಯನ ಮಾಡಿರುವ ಒಬ್ಬ ಬ್ರಾಹ್ಮಣನನ್ನು ವರಿಸಬೇಕು. (ಕಲಶ ಪೂಜೆಗಾಗಿ ಒಬ್ಬ ಋತ್ವಿಜನು ಇರಬೇಕೆಂದಭಿಪ್ರಾಯ) ॥ ೨೭-೩೦ ॥ ಮೊದಲೇ ಮಾಡಿರುವ ಮೂರು ಮೇಖಲಾಗಳಲ್ಲಿ ಶ್ರೀವಿಷ್ಣು, ಬ್ರಹ್ಮ, ಮಹರುದ್ರದೇವರುಗಳನ್ನು ಮತ್ತು ಯೋನಿಯಲ್ಲಿ ಪಾರ್ವತೀದೇವಿಯನ್ನೂ ಆವಾಹನ ಮಾಡಿ ಷೋಡಶೋಪಚಾರಗಳಿಂದ ಪೂಜಾ ಮಾಡ-ಬೇಕು. ಅನಂತರ ಹೋಮಕುಂಡದಲ್ಲಿ ಅಗ್ನಿಯನ್ನು ಸ್ಥಾಪಿಸಬೇಕು. (ವೈಷ್ಣವರು ಮಾಡುವ

ಯಜ್ಞಗಳಲ್ಲಿ ಪಾರ್ವತಿಗೆ ಬದಲಾಗಿ ಶ್ರೀದೇವಿಯನ್ನು ಪೂಜಿಸುತ್ತಾರೆ) ॥ ೩೧ ॥ ಆ ಹೋಮಕುಂಡದ ಈಶಾನ್ಯಭಾಗಕ್ಕೆ ಹೋಗಿ ಅಲ್ಲಿ ರಚಿತವಾಗಿರುವ ಗ್ರಹವೇದಿಕೆಯಲ್ಲಿ (ರಂಗವಲ್ಲೀ, ಬಣ್ಣ ಬಣ್ಣದ ಕುಂಕುಮಗಳಿಂದ ಅಲಂಕೃತವಾಗಿ ಮಾಡಲ್ಪಟ್ಟಿರುವ ಸರ್ವತೋಭದ್ರದಲ್ಲಿ) ಬ್ರಹ್ಮಾದಿಗಳನ್ನು ಪೂಜಿಸತಕ್ಕದ್ದು ॥ ೩೨ ॥ ಗ್ರಹವೇದಿಕೆಯಲ್ಲಿ ಸೂರ್ಯಾದಿದೇವತೆಗಳಿಷ್ಟು ಋಷಿಗಳ ಪರ್ಯಂತ ಅವರವರಿಗೆ ಅನ್ವಯಿಸುವ ಮಂತ್ರಗಳಿಂದ ಆಯಾಯಾ ಸ್ಥಳಗಳಲ್ಲಿ ಪೂಜಿಸತಕ್ಕದ್ದು. ಅನಂತರ ವೇದಿಕೆಯ ಈಶಾನ್ಯಭಾಗದಲ್ಲಿ ಎಲ್ಲ ಲಕ್ಷಣಗಳಿಂದ ಕೂಡಿದ ಕಳಶವನ್ನು ಸ್ಥಾಪಿಸಿ ಅದರೊಳಗೆ ಶ್ರೀವರುಣದೇವರನ್ನು ಆವಾಹನ ಮಾಡಿ ಪೂಜಾ ಹಾಗು ಪ್ರಾರ್ಥನೆ ಮಾಡತಕ್ಕದ್ದು ॥ ೩೩-೩೪ ॥ ತಮ್ಮ ಶಾಖೆಗೆ ಅನುಸಾರವಾಗಿ ಗ್ರಹಗಳ ನಾಮೋಚ್ಚಾರಣ ಪೂರ್ವಕವಾಗಿ ಅನ್ವಾಧಾನ ಮಾಡಬೇಕು. (ಅನ್ವಾಧಾನವೆಂದರೆ ಮುಂದೆ ಏನೆಲ್ಲಾ ಆಹುತಿಗಳನ್ನು ಹಾಕುತ್ತಾರೋ ಅದರ ಸಂಕಲ್ಪ) ಅನಂತರ ತಮ್ಮ ಗೃಹ್ಯಸೂತ್ರಗಳಲ್ಲಿ ಹೇಳಿದ ಪ್ರಕಾರದಿಂದ (ಆಶ್ವಲಾಯನ, ಬೋಧಾಯನ ಇತ್ಯಾದಿ ಗೃಹ್ಯಸೂತ್ರಗಳು ಪ್ರತ್ಯೇಕವಾಗಿ ಇವೆ) ಚಕ್ಷುರ್ಹೋಮದ ಪರ್ಯಂತ ಮಾಡಬೇಕು (ಇದರಲ್ಲಿ ಇಧ್ಮಾಧಾನ, ಆಘಾರಹೋಮ, ಚಕ್ಷುಹೋಮ ಎಂದು ಮೂರು ಅಂಶ) ॥ ೩೫ ॥ ಅನಂತರ ಹೋಮ ಯೋಗ್ಯವಾದ ದ್ರವ್ಯಗಳಲ್ಲಿ ಎಲ್ಲಾ ದೇವತೆಗಳನ್ನು ಉದ್ದೇಶಿಸಿ, ಯಜಮಾನದಿಂದ ಕೂಡಿ ಋತ್ವಿಜರು ಹೋಮವನ್ನು ಮಾಡಬೇಕು. (ಋಗ್ವೇದಿಗಳು ಅನ್ವಾಧಾನ ಕಾಲದಲ್ಲಿಯೇ ಈ ಉದ್ದೇಶವನ್ನು ಮಾಡುತ್ತಾರೆ; ಯಜುರ್ವೇದಿಗಳು ತತ್ತತ್ಕಾಲದಲ್ಲಿ ಉದ್ದೇಶವನ್ನು ಮಾಡುತ್ತಾರೆ. ಹೀಗೆ ಶಾಖಾಭೇದದಿಂದ ಇರುವ ವ್ಯತ್ಯಾಸವನ್ನು ಈ ಎರಡು ಶ್ಲೋಕಗಳಲ್ಲಿ ಸಂಗ್ರಹಿಸಿರುವಂತೆ ಕಾಣುತ್ತದೆ.) ॥ ೩೬ ॥ ಋತ್ವಿಜರು ಹೋಮ ಮಾಡುವಾಗ ಶುಚಿರ್ಭೂತರು ಆಗಿದ್ದು, ಎಚ್ಚರಿಕೆಯಿಂದ ಗಮನಿಸುತ್ತಿರಬೇಕು. ಋತ್ವಿಜರು ಯಜಮಾನರ ಶ್ರೇಯಃಕಾಂಕ್ಷಿಗಳಾಗಿ ಇರಬೇಕು, ಒಂದು ಪ್ರಹರದ ಪರ್ಯಂತ ಜನಿವಾರವನ್ನು ಸವ್ಯದಲ್ಲಿ ಹಾಕಿಕೊಂಡು ಬಲಮಂಡಿಯನ್ನು ಬಗ್ಗಿಸಿ ಕೂತುಕೊಂಡಿರತಕ್ಕದ್ದು. ॥ ೩೭ ॥ ಋತ್ವಿಜರು ಆಹುತಿಯ ಸಂಖ್ಯೆಯನ್ನು ಲೆಕ್ಕ ಮಾಡುವುದರಲ್ಲಿ ಆಸಕ್ತರಾಗಿದ್ದು, ಆಯಾಯಾ ಮಂತ್ರಗಳ ಋಷಿ, ಛಂದಸ್ಸು, ದೇವತೆಗಳನ್ನು ಧ್ಯಾನಮಾಡುತ್ತಾ, ಪ್ರಜ್ವಲಿಸುವ ಅಗ್ನಿಯಲ್ಲಿ ಯಜ್ಞಪುರುಷನಾದ ಪರಶುರಾಮರೂಪಿಲಕ್ಷ್ಮೀನಾರಾಯಣನನ್ನು ಧ್ಯಾನಿಸುತ್ತಾ, ವಾಙ್‌ನಿಯಮವುಳ್ಳವರು ಆಗಿರಬೇಕು. ॥೩೮॥ ಸಮಿತ್ತು, ಎಳ್ಳು, ಅನ್ನ ಮತ್ತು ತುಪ್ಪ ಇವುಗಳಿಂದ ನಾಲ್ಕು ಅಥವಾ ಎಂಟು ಋತ್ವಿಜರು ಮಹಾಗಣಪತಿಯಿಂದ ಆರಂಭ ಮಾಡಿಕೊಂಡು ಗ್ರಹದೇವತೆಗಳಿಗೆ ಹವನ ಮಾಡಬೇಕು. ॥ ೩೯ ॥ ಅರ್ಕ (ಅರ್ಕ, ಪಲಾಶ, ಖಾದಿರ, ಅಪಾಮಾರ್ಗ, ಅಶ್ವತ್ಥ, ಔದುಂಬರ,ಶಮೀ, ದೂರ್ವಾ, ಕುಶ ಇವು ಒಂಭತ್ತು ಸಮಿತ್ತುಗಳು) ಮೊದಲಾದ ಒಂಬತ್ತು ಮರಗಳ ಕಾಷ್ಠಗಳು ಆಹುತಿಗೆ ಶ್ರೇಷ್ಠ. ಕೆಲವು ಮರಗಳ ಕಾಷ್ಠಗಳು ಸಿಗದಿದ್ದರೆ ಅವುಗಳ ಬದಲು ಮುತ್ತುಗದ ಗಿಡದ ಕಾಷ್ಠವನ್ನು ಹೋಮಕ್ಕೆ ಉಪಯೋಗಿಸಬಹುದು. ॥ ೪೦ ॥ ಪ್ರತಿಯೊಂದು ಹೋಮಕ್ಕೂ ಸಾವಿರದೆಂಟು, ನೂರೆಂಟು, ಇಪ್ಪತ್ತೆಂಟು ಅಥವಾ ಎಂಟು ಆಹುತಿಗಳನ್ನು ಕೊಡಬೇಕು. ॥ ೪೧ ॥ ಅಪ್ರಧಾನದೇವತೆಗಳಿಗೆ ಒಂದೊಂದೇ ಸಾರಿ ಆಹುತಿ ಕೊಟ್ಟರೂ ಸಾಕು. ಅಧಿಪ್ರತ್ಯಧಿ ದೇವತೆಗಳಿಗೆ ಕ್ರಮವಾಗಿ ಆಹುತಿಗಳನ್ನು ಸಂಖ್ಯೆಯಿಂದ ಕಡಿಮೆ ಮಾಡಿಕೊಂಡು ಕೊಡಬೇಕು. (ಗ್ರಹದೇವತೆಗೆ ಕೊಟ್ಟ ಸಂಖ್ಯೆಯ ದಶಾಂಶ) ॥ ೪೨ ॥ ಚರುವನ್ನು ಮೂವತ್ತು ಮೂರು ಪಾತ್ರೆಗಳಲ್ಲಿಯೂ ಅಥವಾ ಹತ್ತು

ಪಾತ್ರೆಗಳಲ್ಲಿಯೂ ಅಥವಾ ಒಂದೇ ಒಂದು ಪಾತ್ರೆಯಲ್ಲಿಯೇ ಅಗ್ನಿಯಲ್ಲಿಯೇ ಬೇಯಿಸುವುದು ಅಥವಾ ಗೃಹದಲ್ಲಿ ಬೇಯಿಸಿಟ್ಟಿರುವ ಅನ್ನವೇ ಸಾಕು. ॥ ೪೩ ॥ ಎಲ್ಲ ರೀತಿಯ ಕಾಷ್ಠಗಳನ್ನು ಮೊಸರು, ಹಾಲು, ತುಪ್ಪ ಮತ್ತು ಜೇನುತುಪ್ಪ ಇವುಗಳಲ್ಲಿ ಅದ್ದಿಯೇ ಹವನ ಮಾಡಬೇಕು ಮತ್ತು ಋತ್ವಿಜರು ಪೂರ್ವಾಭಿಮುಖವಾಗಿಯೋ, ಉತ್ತರಾಭಿಮುಖ- ವಾಗಿಯೋ ಕುಳಿತುಕೊಂಡೇ ಹೋಮ ಮಾಡಬೇಕು. ಹೋಮ ಮಾಡುವಾಗ ಎಡಗೈಯನ್ನು ಎದೆಗೆ ಇಟ್ಟುಕೊಂಡೇ ಹೋಮ ಮಾಡಬೇಕು. ॥ ೪೪ ॥ ಸಮಿತ್ತುಗಳನ್ನು ಪ್ರಾದೇಶ (ಚೋಟು) ಪ್ರಮಾಣದಷ್ಟು ಹೋಮಿಸಬೇಕು. ಚರುವನ್ನು ಕೋಳಿಯ ಮೊಟ್ಟೆಯ ಗಾತ್ರ ಹೋಮಿಸಬೇಕು; ತಿಲವನ್ನು ಹಂಸ, ಸೂಕರ ಅಥವಾ ಮೃಗೀ ಮುದ್ರೆಗಳಿಂದ ಹೋಮಿಸಬೇಕು, ಆಜ್ಯವನ್ನು ಸ್ರುವದ ಪ್ರಮಾಣದಷ್ಟು ಹೋಮಿಸಬೇಕು. ॥ ೪೫ ॥ ಗ್ರಹಗಳ ಹವನವು ಮುಗಿದ ನಂತರ, ಬ್ರಾಹ್ಮಣ- ಶ್ರೇಷ್ಠರು ಸಂಕಲ್ಪಿಸಿದ್ದ ಸಂಖ್ಯೆಯನ್ನು ಮೀರದೇ, ಲಕ್ಷಾದಿ ಆಹುತಿಗಳನ್ನು ಹೋಮಿಸಬೇಕು. ॥೪೬॥ ವ್ಯಸ್ತ (ಬಿಡಿಸಿದ) ಹಾಗು ಸಮಸ್ತ (ಸೇರಿಸಿದ) ವ್ಯಾಹೃತಿಗಳಿಂದ ಅಥವಾ ಕೇವಲ ಸಮಸ್ತ ವ್ಯಾಹೃತಿ- ಗಳಿಂದಾಗಲಿ ಸಾದ್ಗುಣ್ಯಕ್ಕಾಗಿ ಹೋಮಿಸಬೇಕು. ॥ ೪೭ ॥ ಹೋಮ ಮಾಡುವ ಋತ್ವಿಜರು ನೂರು ಮಂದಿ, ಐವತ್ತು ಮಂದಿ, ಇಪ್ಪತ್ತೈದು ಮಂದಿ, ಅಥವಾ ಎಂಟು ಮಂದಿ ಇರಬಹುದು ಅಥವಾ ಯಜಮಾನನೊಬ್ಬನೇ ಸಾಕು. ॥ ೪೮ ॥ ಯಜಮಾನನು ತಾನೇ ಸ್ವಯಂ ಹವನ ಮಾಡುವ ಹಾಗಿದ್ದರೆ ಒಮ್ಮೆಲೇ ಸರ್ವತ್ಯಾಗವನ್ನು ಮಾಡದೇ, ಪ್ರತಿ ಆಹುತಿಗೂ ತ್ಯಾಗವನ್ನು ಹೇಳುತ್ತಾ, ಸಾಧ್ಯವಿದ್ದಲ್ಲಿ ಗೃಹ್ಯಾಗ್ನಿಯಲ್ಲಿಯೇ (ತನ್ನ ಔಪಾಸನಾಗ್ನಿಯಲ್ಲಿಯೇ) ಹೋಮವನ್ನು ಮಾಡಬೇಕು. ॥ ೪೯ ॥ ನಿತ್ಯವೂ ಹೋಮದ ಪ್ರಾರಂಭದಲ್ಲಿ ಸ್ಥಾಪಿತವಾಗಿರತಕ್ಕ ದೇವತೆಗಳೆಲ್ಲರ ಪೂಜಾದಿಗಳಾದ ಮೇಲೆ ಹವನವನ್ನು ಮಾಡಬೇಕು. ॥ ೫೦ ॥ ಪ್ರತಿದಿನವೂ ಬ್ರಾಹ್ಮಣರನ್ನು ಭೋಜನದಕ್ಷಿಣಾದಿಗಳಿಂದ ತೃಪ್ತಿಪಡಿಸಬೇಕು ಮತ್ತು ಲಕ್ಷಹೋಮಾದಿಗಳನ್ನು ಒಳ್ಳೆಯ ಮುಹೂರ್ತದಲ್ಲಿ ಮುಗಿಸಬೇಕು. ॥ ೫೦ ॥

॥ ಹದಿನಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತದಶೋಽಧ್ಯಾಯಃ ॥ ೧೭ ॥

ಸೂತ ಉವಾಚ—

ಪೂರ್ಣಾಯಾಂ ಲಕ್ಷಸಂಖ್ಯಾಯಾಮುಪಚಾರೈಶ್ಚ ಪಂಚಭಿಃ ।
ಸ್ವಾಹಾಸ್ವಧಾಸಮಾಯುಕ್ತಮಗ್ನಿಂ ಮಂತ್ರೇಣ ಪೂಜಯೇತ್ ॥ ೧ ॥
ತತಃ ಸ್ವಿಷ್ಟಕೃತಂ ಹುತ್ವಾ ಚತುರ್ದ್ರವ್ಯೈರ್ಯಥಾವಿಧಿ ।
ಪ್ರಾಯಶ್ಚಿತ್ತಾಹುತೀರ್ಹುತ್ವಾ ಬಲಿದಾನಂ ತತಶ್ಚರೇತ್ ॥ ೨ ॥
ಸಪತ್ನೀಕಸ್ಸಹಾಮಾತ್ಯೋ ಯಜಮಾನಸ್ತತಃ ಪರಮ್ ।
ಹುನೇತ್ಪೂರ್ಣಾಹುತಿಂ ಸಮ್ಯಕ್ ಋತ್ವಿಗ್ಭಿಃ ಪರಿವಾರಿತಃ ॥ ೩ ॥
ವಸೋರ್ಧಾರಾಮಥೋ ಹುತ್ವಾ ಪೂರ್ಣಪಾತ್ರಂ ವಿಸೃಜ್ಯ ಚ ।
ಶ್ರೇಯಸ್ಸಂಪಾದನಂ ಕುರ್ಯುರಾಚಾರ್ಯಾದ್ಯಾ ಯಥಾಕ್ರಮಮ್ ॥ ೪ ॥
ಅಭಿಷಿಂಚೇಯುರುದಕೈಸ್ಸರ್ವರ್ತ್ವಿಜ ಉದಙ್ಮುಖಾಃ ।
ಕಲಶಸ್ಥೈಃ ಕಿಸಲಯೈಃ ಕರ್ತಾರಂ ಸಪರಿಚ್ಛದಮ್ ॥ ೫ ॥
ಸರ್ವೌಷಧ್ಯನುಲಿಪ್ತಾಂಗೋ ನವವಾಸಾಸ್ಸಮಸ್ತಯುಕ್ ।
ಪವಿತ್ರೈರುದಕೈಃ ಸ್ನಾತ್ವಾ ದಕ್ಷಿಣಾದಾನಮಾಚರೇತ್ ॥ ೬ ॥
ಸರ್ವೋಪಸ್ಕರಸಂಯುಕ್ತಾಂ ಸವತ್ಸಾಂ ಚ ಸದಕ್ಷಿಣಾಮ್ ।
ಆಚಾರ್ಯಾಯ ತು ಗಾಂ ದದ್ಯಾದ್ಧೋಮಸಾದ್ಗುಣ್ಯಹೇತವೇ ॥ ೭ ॥
ಬ್ರಹ್ಮಣೇ ವೃಷಭಂ ದದ್ಯಾತ್ತದಸ್ಯಾಯಾಶ್ವಮೇವ ವಾ ।
ಪರೇಭ್ಯೋ ಹೋಮಕರ್ತೃಭ್ಯೋ ದಕ್ಷಿಣಾಂ ತೋಷಕಾರಿಣೀಮ್ ॥ ೮ ॥
ಯಥೋಕ್ತದಕ್ಷಿಣಾದೇಯಾಸ್ತಸ್ಮೈ ತಸ್ಮೈ ಯಥಾವಿಧಿ ।
ಸುವರ್ಣಮೇವ ವಾ ದೇಯಂ ಸರ್ವೇಭ್ಯಸ್ತದಸಂಭವೇ ॥ ೯ ॥
ದತ್ತ್ವೈವಂ ದಕ್ಷಿಣಾಂ ವಿಪ್ರಾಃ ಸರ್ವಪೀಠಾಧಿದೇವತಾಃ ।
ಪಂಚೋಪಚಾರೈಸ್ಸಂಪೂಜ್ಯ ಪ್ರಾರ್ಥಯಿತ್ವಾ ವಿಸರ್ಜಯೇತ್ ॥ ೧೦ ॥
ಸಂಪೂಜ್ಯಾಗ್ನಿಂ ಬಹಿಸ್ಸಮ್ಯಕ್ ಗಂಧಾದ್ಯೈರುಪಚಾರಕೈಃ ।
ವಿಸೃಜ್ಯ ಗಚ್ಛ ಗಚ್ಛೇತಿ ಪ್ರಣಮೇದ್ದಂಡವದ್ಭುವಿ ॥ ೧೧ ॥
ಸರ್ವೋಪಸ್ಕರಸಂಯುಕ್ತಂ ಮಂಟಪಂ ವಿತರೇತ್ತತಃ ।
ದೇವತಾನಾಂ ಚ ಪೀಠಾನಿ ಮೇಖಲಾದಿಗತಂ ಹವಿಃ ॥ ೧೨ ॥
ಭೋಜನೀಯಾಃ ಶತಂ ವಿಪ್ರಾಃ ವೃತರ್ತ್ವಿಗ್ವ್ಯತಿರೇಕತಃ ।
ಮಿಷ್ಟಾನ್ನೇನಾಥವಾ ಶಕ್ತ್ಯಾ ಕರ್ಮಸಾದ್ಗುಣ್ಯಕಾರಣಾತ್ ॥ ೧೩ ॥
ತತೋಽನು ಭೂಯಸೀಂ ದತ್ವಾ ದ್ವಿಜಾನ್ನತ್ವಾ ಯಥಾವಿಧಿ ।
ಕರ್ಮ ಬ್ರಹ್ಮಾರ್ಪಣಂ ಕೃತ್ವಾ ಪ್ರಾರ್ಥಯೇನ್ಮುಖ್ಯದೇವತಾಮ್ ॥ ೧೪ ॥

ಶ್ರದ್ಧಾಕಾಲಕ್ರಿಯಾಹೀನಂ ದಕ್ಷಿಣಾಮಂತ್ರವರ್ಜಿತಮ್ ।
ಲಕ್ಷಹೋಮಾದಿಕಂ ಕರ್ಮ ಸಾಂಗಂ ಕುರು ದಯಾನಿಧೇ ॥ ೧೫ ॥
ಏವಂ ಪ್ರಾರ್ಥ್ಯ ದ್ವಿಜೈಃ ಪಶ್ಚಾದ್ವಾಚಯಿತ್ವಾ ಚ ಪೂರ್ಣತಾಮ್ ।
ವಿಸೃಜ್ಯ ವಿಪ್ರಾನ್ಯೇಷೇಣ ತರ್ಪಯೇತ್ಕೃಪಣಾದಿಕಾನ್ ॥ ೧೬ ॥
ಸ್ವಯಂ ಚ ಸಪರೀವಾರಃ ಸುಹೃನ್ಮಿತ್ರಾದಿಸಂಯುತಃ ।
ಭುಂಜೀತ ಯಜ್ಞಶಿಷ್ಟೇನ ಸದನ್ನೇನಾತಿಹರ್ಷಿತಃ ॥ ೧೭ ॥
ಏವಂ ವೋ ಮುನಿಶಾರ್ದೂಲಾಃ ಕಥಿತೋಽಯಂ ಸನಾತನಃ ।
ಪ್ರಕಾರೋ ಲಕ್ಷಹೋಮಾದೇಃ ಶ್ರೀಗುರೋಃ ಕೃಪಯಾ ಮಯಾ ॥ ೧೮ ॥
ಯತ್ರ ಕುತ್ರಾಪಿ ಕರ್ತ್ಯಣಾಂ ಸರ್ವಕಾಮಾಮರಾಂಘ್ರಿಪಃ ।
ಪ್ರಯಾಗೇ ತು ವಿಶೇಷೇಣ ಮಾಘಮಾಸಿ ವಿಶೇಷತಃ ॥ ೧೯ ॥
ತತ್ರಾಪಿ ವಿಮಲೇ ಪಕ್ಷೇ ಪ್ರೋಕ್ತಮಂಟಪಮಂಡಿತೇ ।
ಅಸಂಭವಾತ್ಮಕರ್ತೃತ್ವೇ ವಿನೈಷ ನಿಯಮಃ ಸ್ಮೃತಃ ॥ ೨೦ ॥
ಪ್ರಯಾಗೇ ಹೋಮಕರ್ತೃಣಾಂ ಯತ್ಫಲಂ ಜಾಯತೇ ನೃಣಾಮ್ ।
ಪ್ರಾಗೇವಾಽವಾದಿ ತತ್ಸರ್ವಂ ಮಾಧವೇನ ದಯಾಲುನಾ ॥ ೨೧ ॥
ನ ಸ್ತೋ ಯಸ್ಯ ಮುನಿಶ್ರೇಷ್ಠಾಃ ಕಾಯದ್ರವಿಣಪಾಟವೇ ।
ಸ ಕುರ್ಯಾದ್ಯಕ್ತಿಮಾನತ್ರ ತ್ರ್ಯಯುತದ್ವ್ಯಯುತಾಯುತಮ್ ॥ ೨೨ ॥
ಅಷ್ಟೋತ್ತರಸಹಸ್ರಂ ವಾ ಶತಮಷ್ಟೋತ್ತರಂ ತು ವಾ ।
ಕುರ್ವೀತಾಮುತ್ರ ಹವನಂ ನೈವ ವಿತ್ತಶಠೋ ಭವೇತ್ ॥ ೨೩ ॥
ಕುಂಡಮಾನಂ ಪ್ರಕರ್ತವ್ಯಂ ಸ್ಥಂಡಿಲೇ ವಾತ್ಯಸಂಭವೇ ।
ಮಂಟಪಸ್ಯಾಪಿ ನಾಪೇಕ್ಷಾ ಪ್ರಧಾನಂ ಸಮ್ಯಗಾಚರೇತ್ ॥ ೨೪ ॥
ಅಮುಮೇವಾರ್ಥಮಾಲಕ್ಷ್ಯ ಕೃಷ್ಣವರ್ತ್ಮಾ ಸ್ವಮಂಡಲೇ ।
ಚಕಾರ ಹವನಂ ಭಕ್ತ್ಯಾ ತೇನ ತುಷ್ಟಶ್ಚ ಮಾಧವಃ ॥ ೨೫ ॥
ತಸ್ಮಾದನೇನ ವಿಧಿನಾ ಗ್ರಹಯಜ್ಞಪುರಸ್ಸರಮ್ ।
ಲಕ್ಷಹೋಮಾದಿಕಂ ಕುರ್ವನ್ಮಾಧವಪ್ರಿಯಕೃದ್ಭವೇತ್ ॥ ೨೬ ॥
ಸರ್ವಾನ್ಕಾಮಾನವಾಪ್ನೋತಿ ರೋಗ್ಯಾರೋಗ್ಯಂ ಚ ವಿಂದತಿ ॥ ೨೭ ॥
ಭ್ರಷ್ಟರಾಜ್ಯಃ ಸ್ವಕಂ ರಾಜ್ಯಂ ಯಶಃಕಾಮೋ ಯಶೋಽಮಲಮ್ ॥ ೨೮ ॥
ಸ್ವರ್ಗಕಾಮಸ್ತಥಾ ಸ್ವರ್ಗಮಕಾಮೋ ಮೋಕ್ಷಮಾಪ್ನುಯಾತ್ ॥ ೨೯ ॥
ಕಲ್ಪಂ ವಾ ಶೃಣುಯಾದೇನಂ ಸರ್ವಥಾ ಯದ್ಯಸಂಭವಃ ।
ತಥಾಪಿ ಫಲಮಾಪ್ನೋತಿ ಭಾವವೇತ್ತಾ ಯತೋ ಹರಿಃ ॥ ೩೦ ॥
ಅನ್ಯಚ್ಚ ಶ್ರೂಯತಾಂ ವಿಪ್ರಾಃ ಪ್ರಯಾಗೇ ಸಕಲಪ್ರದೇ ।
ತೃಪ್ತ್ಯೈ ರುದ್ರವಿಧಿಂ ಕುರ್ಯಾನ್ಮಾಧವಸ್ಯ ಶಿವಾತ್ಮನಃ ॥ ೩೧ ॥

ತತ್ರಾದೌ ಪಂಚಧಾ ರುದ್ರೋ ರೂಪಂ ರುದ್ರೋ ಲಘುರ್ಮಹಾನ್ ।
ಅತಿರುದ್ರಸ್ತಥಾ ಸರ್ವೋ ರುದ್ರಪೂಜಾ ಯಥಾಕ್ರಮಮ್ ॥ ೩೨ ॥
ಪಂಚಧಾಪಿ ಪುನಸ್ತ್ರೇಧಾ ಜಪಹೋಮಾಭಿಷೇಚನೈಃ ।
ಜಪರುದ್ರಃ ಪುನರ್ದ್ವೇಧಾ ಜಪಾತ್ಮಾ ಹವನಾಂಗಕಃ ॥ ೩೩ ॥
ಏತೇಷ್ವನ್ಯತಮಂ ಪಕ್ಷಂ ಸಮಸ್ತಂ ಸತಿ ಸಂಭವೇ ।
ಕುರ್ವೀತ ಸರ್ವಕಾಮಾರ್ಥಂ ಮಾಧವಪ್ರೀತಯೇಽಥವಾ ॥ ೩೪ ॥
ರುದ್ರಾನುಷ್ಠಾನಮಾತ್ರೇಣ ಶೂಲಟಂಕೇಶ್ವರಃ ಸ್ವಯಮ್ ।
ಫಲಂ ದದಾತಿ ಸಕಲಂ ಮಾಧವಾಜ್ಞಾನಿಯಂತ್ರಿತಃ ॥ ೩೫ ॥
ಐಹಿಕಾನ್ಸಕಲಾನ್ಭೋಗಾನ್ಭುಕ್ತ್ವಾ ಬಂಧುಸಮನ್ವಿತಃ ।
ಕೈಲಾಸೇ ವಸತೇ ಪಶ್ಚಾದ್ಯಾವಚ್ಚಂದ್ರಾರ್ಕಮೇದಿನಿ ॥ ೩೬ ॥
ಶೂಲಟಂಕೇಶ್ವರೇ ವೇಶ್ಯಾಂ ತಥಾ ಸೋಮೇಶ್ವರೇಽಪಿ ಚ ।
ಅಭಿಷೇಕಂ ಪ್ರಕುರ್ವಾಣಃ ಫಲಮಾಪ್ನೋತ್ಯನುತ್ತಮಮ್ ॥ ೩೭ ॥
ತ್ರೈವರ್ಣಿಕಾಧಿಕಾರೋಽತ್ರ ನಾಬಲಾಶೂದ್ರಯೋಃ ಕ್ವಚಿತ್ ।
ದ್ವಿಜದ್ವಾರಾಥವಾ ಕಾರ್ಯಂ ಸ್ತ್ರಿಯಾ ಶೂದ್ರೇಣ ನೈವ ಹಿ ॥ ೩೮ ॥
ಅಪೃಷ್ಟಮಪಿ ವಃ ಪ್ರೋಕ್ತಂ ರುದ್ರಾನುಷ್ಠಾನಮಾದರಾತ್ ।
ಪರೋಪಕೃತಯೇ ನೂನಂ ಕಿಮನ್ಯಚ್ಛ್ರೋತುಮಿಚ್ಛಥ ॥ ೩೯ ॥

॥ ಇತಿ ಸಪ್ತದಶೋಽಧ್ಯಾಯಃ ॥

## ॥ ಹದಿನೇಳನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಲಕ್ಷಹೋಮದ ಕಾರ್ಯ ಮುಗಿಯುತ್ತಲೇ, ಶ್ರೀಸ್ವಾಹಾ ಮತ್ತು ಸ್ವಧಾದೇವಿಯರಿಂದ ಸಹಿತನಾಗಿರುವ ಶ್ರೀಅಗ್ನಿಪುರುಷನಿಗೆ (ಅಂತರ್ಗತ ಶ್ರೀಹರಿಣೇಪತಿಪರಶುರಾಮದೇವರಿಗೆ) ಪಂಚೋಪಚಾರದಿಂದ (ಪುಷ್ಪ, ಧೂಪ, ದೀಪ, ನೈವೇದ್ಯ, ನಮಸ್ಕಾರ) ಪೂಜಾ ಮಾಡಬೇಕು. ॥ ೧ ॥ ಅನಂತರ ಸಮಿತ್, ಚರು, ತಿಲ, ಆಜ್ಯ, ಇವುಗಳಿಂದ ಸ್ವಿಷ್ಟಕೃತಹೋಮವನ್ನು ಯಥಾವಿಧಿಯಾಗಿ ಮಾಡಿ ಪ್ರಾಯಶ್ಚಿತ್ತಗಳ ಆಹುತಿಗಳನ್ನು ಕೊಟ್ಟು ಅನಂತರ ಬಲಿದಾನವನ್ನು ಮಾಡಬೇಕು. ॥ ೨ ॥ ಅನಂತರ ಹೆಂಡತಿ, ಮಕ್ಕಳು, ಬಂಧುಗಳು ಸಹಾಯಕರುಗಳೊಡನೆಯೂ ಮತ್ತು ಋತ್ವಿಜರೊಡನೆಯೂ ಸೇರಿ ಪೂರ್ಣಾಹುತಿಯನ್ನು ಕೊಡಬೇಕು. ॥ ೩ ॥ ಅನಂತರ ''ವಸುಧಾರೆ''ಯನ್ನು ಹೋಮ ಮಾಡಿ, ಪೂರ್ಣಪಾತ್ರೆಯನ್ನು ವಿಸರ್ಜಿಸಿ, ಆಚಾರ್ಯರೇ ಮೊದಲಾದವರು ಕ್ರಮಬದ್ಧವಾಗಿ ಯಜಮಾನನಿಗೆ ಶ್ರೇಯಸ್ಸಂಪಾದನೆಯನ್ನು ಮಾಡಬೇಕು. ॥ ೪ ॥ ಯಜಮಾನನನ್ನು ಅವನ ಪತ್ನೀ ಮತ್ತು ಮಕ್ಕಳುಗಳೇ ಮೊದಲಾದ ಎಲ್ಲ ಬಂಧುಮಿತ್ರರೊಡನೆ ಕೂಡಿಸಿ ಅವರೆಲ್ಲರ ಮೇಲೆ ಕಳಶವನ್ನು ಅಲಂಕರಿಸಿರತಕ್ಕ ಹೂವು ಮತ್ತು ಮಾವಿನ ಚಿಗುರುಗಳಿಂದ ಋತ್ವಿಜರು ಉತ್ತರಾಭಿಮುಖವಾಗಿದ್ದು ಕಳಶದ ನೀರಿನಿಂದ ಅಭಿಷೇಕ ಮಾಡಬೇಕು. ॥ ೫ ॥ ಅನಂತರ ಯಜಮಾನ ಮತ್ತು ಅವನ ಹೆಂಡತಿಯು ಕಳಶದಲ್ಲಿ ಹಾಕಿದ್ದ

ವನಸ್ಪತಿಗಳ ಗಂಧವನ್ನು ಮೈಗೆಲ್ಲಾ ಲೇಪಿಸಿಕೊಂಡು ಎಲ್ಲರಿಂದ ಕೂಡಿ ಪವಿತ್ರವಾದ ಈ ನೀರಿನಿಂದ ಸ್ನಾನಮಾಡಿ ನೂತನವಸ್ತ್ರವನ್ನು ಧಾರಣೆ ಮಾಡಿ, ಅನಂತರ ನೆರೆದಿರುವ ಋತ್ವಿಜರಿಗೂ ಬ್ರಾಹ್ಮಣಮುತ್ತೈದೆಯರಿಗೂ ದಕ್ಷಿಣಫಲತಾಂಬೂಲಾದಿಗಳನ್ನು ಕೊಡಬೇಕು. ॥ ೬ ॥ ಈ ಲಕ್ಷಹೋಮದ ಪೂರ್ಣತೆಗಾಗಿ ಪ್ರಧಾನಪುರೋಹಿತರಿಗೆ, ಗೋವಿಗೆ ಬೇಕಾಗುವ ಎಲ್ಲಾ ಪದಾರ್ಥಗಳೊಡನೆ ಕರುವಿನಿಂದ ಕೂಡಿದ ಆಕಳನ್ನು ಪೂಜಿಸಿ ದಕ್ಷಿಣೆ ಸಹಿತ ದಾನ ಮಾಡಬೇಕು. ॥ ೭ ॥ ಬ್ರಹ್ಮಸ್ಥಾನದಲ್ಲಿ ಕೂಡಿಸಿರತಕ್ಕ ಬ್ರಾಹ್ಮಣರಿಗೆ ಒಂದು ಎತ್ತನ್ನು (ವೃಷಭ), ಸದಸ್ಯರುಗಳಿಗೆ ಒಂದೊಂದು ಕುದುರೆಯನ್ನು ಕೊಡಬೇಕು. ಇವರಲ್ಲದೆ ಹೋಮಕಾರ್ಯದಲ್ಲಿ ಭಾಗವಹಿಸಿರುವ ಎಲ್ಲರಿಗೂ ಸಂತೋಷವಾಗುವಷ್ಟು ದಕ್ಷಿಣೆಯನ್ನು ಕೊಡಬೇಕು. ॥ ೮ ॥ ಅವರೆಲ್ಲರಿಗೂ (ಆಚಾರ್ಯ, ಸದಸ್ಯ, ಋತ್ವಿಜರಿಗೆ) ಶಾಸ್ತ್ರೋಕ್ತ ಪ್ರಕಾರವಾಗಿ ವಿಧಿಪೂರ್ವಕವಾಗಿ ದಕ್ಷಿಣೆಯನ್ನು ಕೊಡಬೇಕು. ಗೋವೇ ಮೊದಲಾದ ದಾನವನ್ನು ಕೊಡಲಾಗದಿದ್ದಾಗ ಅವರೆಲ್ಲರಿಗೂ ಸುವರ್ಣವನ್ನಾಗಲಿ ದಾನವನ್ನು ಕೊಡಬೇಕು. ॥ ೯ ॥ ದಕ್ಷಿಣೆಯ ದಾನವಾದ ನಂತರ, ಎಲ್ಲ ಪೀಠಗಳಲ್ಲಿ ಆವಾಹಿತರಾಗಿರುವ ದೇವತೆಗಳನ್ನು ಪಂಚೋಪಚಾರಗಳಿಂದ ಪೂಜಿಸಿ, ಹೋಮದ ಪೂರ್ಣತೆಗಾಗಿ ಪ್ರಾರ್ಥಿಸಿ, ವಿಸರ್ಜನೆ ಮಾಡಬೇಕು. ॥ ೧೦ ॥ ಅಗ್ನಿಯನ್ನು ಕುಂಡದ ಆಚೆ ಗಂಧಾದಿಗಳಿಂದ ಪೂಜಿಸಿ ''ಹೋಗಿ ಬನ್ನಿ, ಹೋಗಿ ಬನ್ನಿ'' ಎಂದು ಪ್ರಾರ್ಥಿಸಿ, ('ಗಚ್ಛ ಗಚ್ಛ' ಎಂಬ ಮಂತ್ರದಿಂದ ವಿಸರ್ಜನೆಮಾಡಿ) ಸಾಷ್ಟಾಂಗ ನಮಸ್ಕರಿಸಬೇಕು. ॥ ೧೧ ॥ ಎಲ್ಲ ಪರಿಕರಸಾಮಗ್ರಿಗಳ ಸಹಿತವಾದ ಮಂಟಪವನ್ನು, ದೇವತಾದಿಗಳನ್ನು ಇಟ್ಟಿದ್ದ ಪೀಠಗಳನ್ನು ಮೇಖಲಾದಿಗಳನ್ನು ದಾನ ಮಾಡಬೇಕು. ॥ ೧೨ ॥ ಕರ್ಮಸಾದ್ಗುಣ್ಯಕ್ಕೋಸ್ಕರ ದೀಕ್ಷೆಯಲ್ಲಿರುವ ಋತ್ವಿಜರನ್ನು ಬಿಟ್ಟು ಬೇರೆ ನೂರು ಮಂದಿ ಬ್ರಾಹ್ಮಣರಿಗಾದರೂ ಭೋಜನ ಮಾಡಿಸಬೇಕು. ಒಳ್ಳೆಯ ಭಕ್ಷ್ಯಭೋಜ್ಯಾದಿಗಳಿಂದ ಅವರನ್ನು ಸಂತೃಪ್ತಿಗೊಳಿಸಬೇಕು. ಶಕ್ತಿಯಿಲ್ಲದಿದ್ದರೆ ಯಥಾಶಕ್ತಿ ಮಾಡಬಹುದು. ॥ ೧೩ ॥ ಅನಂತರ ಭೂರಿದಕ್ಷಿಣೆಯನ್ನು ಕೊಟ್ಟು ಬ್ರಾಹ್ಮಣರಿಗೆ ನಮಸ್ಕಾರ ಮಾಡಿ ವಿಧಿವತ್ತಾಗಿ ಎಲ್ಲ ಬ್ರಾಹ್ಮಣರನ್ನು ಹೋಮಪೂರ್ಣತೆಗಾಗಿ ಪ್ರಾರ್ಥಿಸಿ, ಕೊನೆಗೆ ಹೋಮದ ಮುಖ್ಯದೇವತೆಯನ್ನು ಪ್ರಾರ್ಥನೆ ಮಾಡಿ, ಇಡೀ ಹೋಮಕರ್ಮವನ್ನು ''ಶ್ರೀಕೃಷ್ಣಾರ್ಪಣಮಸ್ತು'' ಎಂದು ಹೇಳಿ ಸಮರ್ಪಣೆ ಮಾಡಬೇಕು. ॥ ೧೪ ॥ ನಾನು ಆಚರಿಸಿರತಕ್ಕ ಲಕ್ಷ ಹೋಮಕರ್ಮದಲ್ಲಿ ಶ್ರದ್ಧೆ, ಕಾಲ, ಕ್ರಿಯಾ, ಮಂತ್ರ, ತಂತ್ರ, ದಕ್ಷಿಣೆ ಮತ್ತು ದಾನಾದಿಗಳಲ್ಲಿ ಲೋಪಗಳಿವೆ. ಹಾಗಿದ್ದರೂ ಈ ಕರ್ಮವನ್ನು ಸ್ವೀಕಾರ ಮಾಡಿ ಈ ಹೋಮ ಕರ್ಮಕ್ಕೆ ಸಾಂಗತ್ವವನ್ನು ತಂದುಕೊಡು ಎಂದು ಆ ದಯಾನಿಧಿಯಾದ ಮಹಾವಿಷ್ಣುವನ್ನು ಪ್ರಾರ್ಥನೆ ಮಾಡಬೇಕು. ॥ ೧೫ ॥ ಈ ರೀತಿಯಾಗಿ ಬ್ರಾಹ್ಮಣರನ್ನೂ ಮುಖ್ಯದೇವತೆಯನ್ನೂ ಪ್ರಾರ್ಥಿಸಿ, ಬ್ರಾಹ್ಮಣರಿಂದ ಪೂರ್ಣಫಲವು ಬರಲೆಂದು ಆಶೀರ್ವಚನಗಳನ್ನು ಸ್ವೀಕರಿಸಿ, ಅವರನ್ನೆಲ್ಲಾ ಬೀಳ್ಕೊಟ್ಟು, ಉಳಿದ ಅನ್ನದಿಂದ ದೀನಾಂಧಕೃಪಣರಿಗೂ ಭೋಜನ ಮಾಡಿಸಬೇಕು. ॥ ೧೬ ॥ ಪರಿವಾರ, ಬಂಧು ಮತ್ತು ಸನ್ಮಿತ್ರರೊಡನೆ ತಾನೂ ಕೂಡ ಯಜ್ಞಶೇಷವಾದ ಉತ್ತಮ ಅನ್ನಾದಿಗಳನ್ನು ಹರ್ಷದಿಂದ ಭೋಜನ ಮಾಡಬೇಕು. ॥ ೧೭ ॥ ಎಲೈ ಮುನಿಶ್ರೇಷ್ಠರೇ, ಈ ರೀತಿಯಾಗಿ ಸನಾತನವಾದ ಲಕ್ಷಹೋಮದ ವಿಧಿಯನ್ನು ನಮ್ಮ ಗುರುಗಳ ಕೃಪೆಯಿಂದ ನಿಮಗಾಗಿ ಹೇಳಿದ್ದೇನೆ. ॥ ೧೮ ॥ ಎಲ್ಲಿ ಮಾಡಿದರೂ ಈ ಲಕ್ಷ ಹೋಮಾಚರಣೆಯು ಕಲ್ಪವೃಕ್ಷದಂತೆ ಫಲಕಾರಿಯಾಗಿದೆ. ಅದರಲ್ಲಿಯೂ ಮಾಘಮಾಸದಲ್ಲಿ

ಪ್ರಯಾಗಕ್ಷೇತ್ರದಲ್ಲಿ ಆಚರಿಸಿದರೆ ಇನ್ನೂ ವಿಶೇಷ ಫಲದಾಯಕವು. ॥ ೧೯ ॥ ಮೇಲೆ ವರ್ಣಿಸಿದಂತೆ ಮಂಟಪಾದಿಗಳಿಂದ ಸಿದ್ಧಮಾಡಿಕೊಂಡು ಶುಕ್ಲಪಕ್ಷ ಬಂದಾಗ ವ್ರತವನ್ನು ಮಾಡಬಹುದು. ಕರ್ತೃವಿಗೆ ಶಕ್ತಿಯು ಇಲ್ಲದಿದ್ದಾಗ ಮೇಲೆ ಹೇಳಿರುವ ನಿಯಮಗಳ ನಿರ್ಬಂಧವಿಲ್ಲದೇ ಮಾಡಬಹುದು. ॥ ೨೦ ॥ ಪ್ರಯಾಗದಲ್ಲಿ ಈ ಲಕ್ಷಹೋಮಕರ್ಮವನ್ನು ಯಾರು ಮಾಡುವರೋ ಅವರಿಗೆ ಯಾವ ಯಾವ ಫಲಗಳು ದಯಾಳುವಾದ ಶ್ರೀಮಾಧವನ ಕೃಪೆಯಿಂದ ಲಭ್ಯ ಎಂಬುದನ್ನು ಹಿಂದೆ ಶ್ರೀಪ್ರಯಾಗಮಾಧವದೇವರೇ ಹೇಳಿದ್ದಾರೆ. ॥ ೨೧ ॥ ಹೇ ಮುನಿಶ್ರೇಷ್ಠರೇ! ದ್ರವ್ಯದ ಬಲವಾಗಲೀ, ದೇಹದ ಪಾಟವತ್ವವಾಗಲೀ ಇಲ್ಲದವರು ಕೇವಲ ಭಕ್ತಿಮಾತ್ರದಿಂದಲೇ ಮೂವತ್ತು ಸಾವಿರ, ಇಪ್ಪತ್ತು ಸಾವಿರ ಅಥವಾ ಹತ್ತುಸಾವಿರ ಹೋಮಗಳನ್ನಾದರೂ ಮಾಡಬಹುದು. ॥ ೨೨ ॥ ಸಾವಿರದೆಂಟು ಅಥವಾ ನೂರೆಂಟು ಹೋಮಗಳನ್ನಾದರೂ ಮಾಡಬಹುದು. ಆದರೆ ಹಣವಿದ್ದೂ ಲೋಭ ಮಾಡಬಾರದು. ॥ ೨೩ ॥ ಹೋಮಕುಂಡವನ್ನು ಮಾಡಲು ಸಾಧ್ಯವಿಲ್ಲದಿದ್ದರೆ ಕುಂಡದಷ್ಟೇ ಅಳತೆಯ ಸ್ಥಂಡಿಲವನ್ನು ಮಾಡಿ ಹೋಮವನ್ನು ಮಾಡಬಹುದು. (ಕುಂಡ ಹಾಗೂ ಸ್ಥಂಡಿಲಗಳ ನಿರ್ಮಾಣ ಕ್ರಮವು ತಂತ್ರಗ್ರಂಥಗಳಲ್ಲಿ ಉಪಲಬ್ಧವಿದೆ) ಶ್ರೀಮಾಧವನು ಹೋಮಮಂಟಪವನ್ನೂ ಅಪೇಕ್ಷಿಸುವು-ದಿಲ್ಲ. ಮುಖ್ಯವಾದುದು ಭಕ್ತಿಯಿಂದ ಮಾಡುವ ಪ್ರಧಾನ ಕರ್ಮದ ಆಚರಣೆಯು; ॥ ೨೪ ॥ ಈ ಅಭಿಪ್ರಾಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಪ್ರಯಾಗದ ಆಗ್ನೇಯ ದಿಕ್ಕಿನಲ್ಲಿರುವ ಅಗ್ನಿಪುರುಷ-ದೇವರು ತನ್ನ ಆಶ್ರಮದಲ್ಲಿ ಯಥಾಶಕ್ತಿ ಲಕ್ಷಹೋಮವನ್ನಾಚರಿಸಿದರು. ಇದರಿಂದ ಮಾಧವನು ಸಂತುಷ್ಟನಾದನು. ॥ ೨೫ ॥ ಆದ್ದರಿಂದ ಈಗ ಇಲ್ಲಿ ಉಕ್ತವಾದ ವಿಧಿ- ವಿಧಾನಗಳಿಂದ ನವಗ್ರಹಹೋಮಸಹಿತ ಲಕ್ಷಹೋಮವನ್ನು ಮಾಡಿದವನು ಮಾಧವನಿಗೆ ಪ್ರೀತಿಯನ್ನುಂಟು-ಮಾಡುವನು. ॥ ೨೬ ॥ ಆತನು ಎಲ್ಲ ಅಪೇಕ್ಷೆಗಳನ್ನೂ ಹೊಂದುವನು; ರೋಗಿಯು ಆರೋಗ್ಯ-ವಂತನಾಗುವನು. ॥ ೨೭ ॥ ರಾಜ್ಯಭ್ರಷ್ಟನಾದವನು ರಾಜ್ಯವನ್ನು ಮತ್ತೆ ಪಡೆಯುವನು ಮತ್ತು ಕೀರ್ತಿಬಯಸುವವನು ಕೀರ್ತಿಯನ್ನು ಹೊಂದುವನು; ಸ್ವರ್ಗವನ್ನು ಬಯಸುವವನು ಸ್ವರ್ಗವನ್ನೂ, ನಿಷ್ಕಾಮಿಯು ಮೋಕ್ಷವನ್ನೂ ಪಡೆಯುವನು. ॥ ೨೮-೨೯ ॥ ಏನೂ ಸಾಧ್ಯವಿಲ್ಲದಿದ್ದರೆ, ಈ ಲಕ್ಷಹೋಮವಿಧಿವಿಧಾನಗಳನ್ನು ಹೇಳುವ ಈ ಕಲ್ಪವನ್ನು ಭಕ್ತಿಯಿಂದ ಕೇಳುವವನೂ, ಫಲಗಳನ್ನೆಲ್ಲಾ ಹೊಂದುವನು; ಇದಕ್ಕೆ ಕಾರಣವೆಂದರೆ ಶ್ರೀಮಾಧವನು ಭಕ್ತಿಯ ಭಾವಕ್ಕೆ ಒಲಿಯುವುದೇ ಆಗಿದೆ. ॥ ೩೦ ॥ ಎಲೈ! ಬ್ರಾಹ್ಮಣರೇ, ಮತ್ತೊಂದು ವಿಚಾರವನ್ನು ಕೇಳಿರಿ. ಮಂಗಳಮಯನಾದ ಶ್ರೀಮಾಧವನ ಪ್ರೀತಿಗಾಗಿ ಸಕಲಸಿದ್ಧಿಪ್ರದವಾದ ಈ ಪ್ರಯಾಗಕ್ಷೇತ್ರದಲ್ಲಿ ರುದ್ರದೇವರ ಹೋಮಸೇವಾದಿಗಳನ್ನು ಮಾಡಬೇಕು. ॥ ೩೧ ॥ ಈ ಕ್ಷೇತ್ರದಲ್ಲಿ ೧. ರೂಪರುದ್ರ ೨. ಲಘುರುದ್ರ ೩. ಮಹಾನ್‌ರುದ್ರ ೪. ಅತಿರುದ್ರ ಮತ್ತು ೫. ಸರ್ವರುದ್ರ ಎಂದು ಕ್ರಮವಾಗಿ ಐದು ಪ್ರಕಾರಗಳಲ್ಲಿ ರುದ್ರದೇವರು ಇದ್ದಾರೆ. ॥ ೩೨ ॥ ಈ ಐದು ರೂಪಗಳಿಗೂ ಪೂಜೆ, ಹೋಮ ಮತ್ತು ಅಭಿಷೇಕ ಎಂಬ ಮೂರು ವಿಧಾನಗಳಿವೆ (ಅಂದರೆ ಹದಿನೈದು ಒಟ್ಟು ವಿಧಾನಗಳು); ಅದಲ್ಲದೆ ಜಪರುದ್ರವು ಎರಡು ಪ್ರಕಾರವಿದೆ; ಜಪರೂಪವಾದದ್ದು ಹಾಗೂ ಹೋಮಾಂಗಭೂತವಾದದ್ದು. ॥ ೩೩ ॥ ಇವುಗಳಲ್ಲಿ ಯಾವ ಒಂದು ಪಕ್ಷ ಅಥವಾ ಪದ್ಧತಿಯನ್ನು ಹಿಡಿದು ಪೂಜಾ, ಹವನ ಮತ್ತು ಜಪ, ಅಭಿಷೇಕಾದಿಗಳನ್ನು ಮಾಡಬಹುದು. ಸಾಧ್ಯವಾದಲ್ಲಿ ಎಲ್ಲವನ್ನೂ ಅನುಷ್ಠಾನ ಮಾಡಬಹುದು. ಈ ರುದ್ರವಿಧಿಯನ್ನು

ಸರ್ವಕಾಮಸಿದ್ಧಿಗಾಗಲಿ, ಮಾಧವನ ಪ್ರೀತಿಗಾಗಲಿ ಮಾಡಬಹುದು. ॥ ೩೪ ॥ ಈ ರುದ್ರಾನುಷ್ಠಾನಮಾತ್ರದಿಂದ ಸ್ವತಃ ಶ್ರೀ ಶೂಲಟಂಕೇಶ್ವರನೇ ಶ್ರೀಮಾಧವನ ಆಜ್ಞೆಗೆ ಒಳಪಟ್ಟು ಸಕಲ ಅಪೇಕ್ಷೆಗಳನ್ನು ನೆರವೇರಿಸುವನು. ॥ ೩೫ ॥ ಈ ರೀತಿ ರುದ್ರಾನುಷ್ಠಾನವನ್ನು ಆಚರಿಸಿದವನು ಇಹಲೋಕದಲ್ಲಿ ಸಕಲಭೋಗಭಾಗ್ಯಗಳನ್ನು ತನ್ನ ಬಂಧುಸಮೇತನಾಗಿ ಅನುಭವಿಸುವನು ಮತ್ತು ಸೂರ್ಯ, ಚಂದ್ರ ಮತ್ತು ಭೂಲೋಕವು ಇರುವವರೆಗೂ ಕೈಲಾಸದಲ್ಲಿ ವಾಸಮಾಡುವನು. ॥ ೩೬ ॥ ಪ್ರಯಾಗದ ಆದಿವೇಣಿಯಲ್ಲಿರುವ ಶೂಲಟಂಕೇಶ್ವರನಿಗಾಗಲಿ, ಅಥವಾ ಅಂತ್ಯವೇಣಿಯಲ್ಲಿರುವ ಸೋಮೇಶ್ವರನಿಗಾಗಲಿ ಅಭಿಷೇಕಾದಿಗಳನ್ನು ಮಾಡಿಸುವವನು ಅತ್ಯುತ್ತಮವಾದ ಫಲಗಳನ್ನು ಅನುಭವಿಸುತ್ತಾನೆ. ॥ ೩೭ ॥ ಈ ಎರಡು ವೇಣಿಗಳಲ್ಲಿ ಅಭಿಷೇಕಾದಿಗಳನ್ನು ಮಾಡುವ ಅಧಿಕಾರವು ದ್ವಿಜರೆಂದು ಕರೆಯಲ್ಪಟ್ಟಿರುವ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಿಗೇನೇ ಇರುವುದು. ಸ್ತ್ರೀಯರಿಗೂ ಮತ್ತು ಶೂದ್ರರಿಗೂ ಈ ಅಧಿಕಾರವಿಲ್ಲ. ಆದರೆ ಸ್ತ್ರೀಯರು ಬ್ರಾಹ್ಮಣರುಗಳ ಮೂಲಕ ಅಭಿಷೇಕಾದಿಗಳನ್ನು ಮಾಡಿಸಬಹುದು. ಶೂದ್ರರು ಅದನ್ನೂ ಮಾಡಬಾರದು. ॥ ೩೮ ॥ ನಿಮ್ಮ ಪ್ರಾರ್ಥನೆಯಿಲ್ಲದಿದ್ದರೂ ನಾನೇ ಈ ರುದ್ರಾನುಷ್ಠಾನದ ಬಗ್ಗೆ ನಿಮ್ಮ ಮೇಲಿನ ಆದರದಿಂದಲೂ ಮತ್ತು ಪರೋಪಕಾರಬುದ್ಧಿಯಿಂದಲೂ ಹೇಳಿದ್ದೇನೆ. ಬೇರೆ ಇನ್ನೇನನ್ನು ಕೇಳಬಯಸುತ್ತೀರಿ? ॥ ೩೯ ॥

॥ ಹದಿನೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಾದಶೋಽಧ್ಯಾಯಃ ॥ ೧೮ ॥

ಋಷಯ ಊಚುಃ—

ವಿಧಾನಂ ಲಕ್ಷಹೋಮಾದೇಸ್ತ್ವಯೋಕ್ತಂ ರೌಮಹರ್ಷಣೇ ।
ಶ್ರುತ್ವಾ ಪ್ರಮುದಿತಾಸ್ಸರ್ವೇ ವಯಂ ತೀರ್ಥಕಥಾಶ್ರಯಮ್ ॥ ೧ ॥
ತೀರ್ಥರಾಜಪ್ರಯಾಗಸ್ಯ ಪ್ರಭಾವಶ್ರವಣೇಽನಘ ।
ಲೋಲಂ ಭವತಿ ನಸ್ಸ್ವಾಂತಂ ಭೂಯಸ್ತ್ವಂ ವದ ವಿಸ್ತರಾತ್ ॥ ೨ ॥

## ॥ ಹದಿನೆಂಟನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

ರೋಮಹರ್ಷಣರ ಪುತ್ರರಾದ ಸೂತರೇ! (ಶ್ರೀವೇದವ್ಯಾಸದೇವರಿಗೆ ಹರ್ಷದಿಂದ ರೋಮಾಂಚನವುಂಟಾದಾಗ ಹುಟ್ಟಿದ್ದರಿಂದ ಇವರಿಗೆ ರೋಮಹರ್ಷಣ ಎಂದು ಹೆಸರಾಯಿತು) ''ಲಕ್ಷಹೋಮ''ವೇ ಮೊದಲಾದವುಗಳ ಆಚರಣೆಯ ವಿಧಾನವನ್ನು ಕೇಳಿ ನಮಗೆಲ್ಲಾ ಸಂತೋಷವಾಗಿದೆ. ಈ ಹೋಮಾದಿಗಳನ್ನು ಈ ಪ್ರಯಾಗದಲ್ಲಿ ಆಚರಿಸಿದಾಗ ಅವುಗಳ ಫಲವೈಶಿಷ್ಟ್ಯಗಳನ್ನೂ ಆಲಿಸಲಾಯಿತು. ಇದನ್ನೂ ತಾವು ಹೇಳಿದಿರಿ. ಹೇ ಪಾಪರಹಿತರಾದ ಸೂತರೇ ! ತೀರ್ಥರಾಜನೆಂದು ಪ್ರಸಿದ್ಧನಾಗಿರುವ ಈ ಪ್ರಯಾಗದ ಪ್ರಭಾವವನ್ನು ಕೇಳಿ ನಮ್ಮ ಮನಸ್ಸು ಆಹ್ಲಾದಗೊಂಡಿದೆ. ಈ ಕ್ಷೇತ್ರದ ಮಾಹಾತ್ಮ್ಯೆಯನ್ನು ಇನ್ನೂ ವಿಸ್ತಾರವಾಗಿ ಹೇಳಿರಿ''. ॥ ೧ - ೨ ॥

ಸೂತ ಉವಾಚ—

ಪುನಃ ಶೃಣ್ವಂತು ಮುನಯಸ್ತೀರ್ಥರಾಜಸ್ಯ ಗೌರವಮ್ ।
ಪೂರ್ವಂ ಯದ್ಬ್ರಹ್ಮಪುತ್ರೇಭ್ಯಶ್ಶೇಷೇಣ ಪ್ರತಿಪಾದಿತಮ್ ॥ ೩ ॥
ಶ್ರುತ್ವಾ ಪ್ರಯಾಗಮಾಹಾತ್ಮ್ಯಂ ತ್ಯಕ್ತ್ವಾ ಸಂಯಮನೀಂ ಯಮಃ ।
ಕ್ಷೇತ್ರಸ್ಯ ದಕ್ಷಿಣೇ ಭಾಗೇ ಸಮಾಗತ್ಯ ಸ್ಥಿತಶ್ಚಿರಮ್ ॥ ೪ ॥
ಉಷಿತ್ವಾಸ್ಮಿನ್ಮಹಾಕ್ಷೇತ್ರೇಽಖಿಲಕಾಮಪ್ರವರ್ಷಿಣಿ ।
ಚಕಾರ ಸರ್ವದಾನಾನಿ ಯಥಾವಿಧಿ ಯಥಾಕ್ರಮಮ್ ॥ ೫ ॥
ದಶದಾನಾನಿ ಸಾಂಗಾನಿ ಮಹಾದಾನಾನಿ ಷೋಡಶ ।
ಗೋದಾನಾದ್ಯನ್ಯದಾನಾನಿ ದಾನಪಂಕ್ತಿಗತಾನಿ ಚ ॥ ೬ ॥
ಬ್ರಾಹ್ಮಣೇಭ್ಯೋಽತಿವೃದ್ಧೇಭ್ಯೋ ನಿಸ್ಸ್ವೇಭ್ಯೋ ವಿಧಿಪೂರ್ವಕಮ್ ।
ಕುಟುಂಬಿಭ್ಯಸ್ತಪಸ್ವಿಭ್ಯಶ್ಶ್ರುತವದ್ಭ್ಯೋ ದದೌ ಸ್ವಯಮ್ ॥ ೭ ॥
ತಸ್ಯ ತತ್ಕೃತಮಾಲಕ್ಷ್ಯ ದೇವಾಶ್ಶಕ್ರಪುರೋಗಮಾಃ ।
ಚಕಂಪಿರೇ ದ್ವಿಜಶ್ರೇಷ್ಠಾಃ! ಸ್ವಪದಚ್ಯುತಿಕಾರಣಾತ್ ॥ ೮ ॥
ತೇ ಸರ್ವೇ ಮಾಧವಂ ದೇವಂ ಸ್ತುತ್ವಾ ನತ್ವಾ ಚ ದಂಡವತ್ ।
ತತ್ಕರ್ಮ ವೇದಯಾಮಾಸುರ್ಯೇನ ಸ್ವಾಂತೇತಿ ಶಂಕಿತಾಃ ॥ ೯ ॥

ತಥಾ ತದ್ವಚನಂ ಶ್ರುತ್ವಾ ಸಭಯಂ ಭವನಾಶನಃ ।
ತಾನವೋಚದ್ವಚೋ ರಮ್ಯಮೀಷತ್ಸ್ಮಿತಮುಖಾಂಬುಜಃ ॥ ೧೦ ॥

**ಸೂತರು ಹೇಳಿದರು—**

ಶೌನಕಾದಿಮುನಿಗಳೆ ! ಹಿಂದೆ ಶ್ರೀಬ್ರಹ್ಮನ ಮಕ್ಕಳಾದ ಸನಕಾದಿಗಳಿಗೆ ಶೇಷದೇವರಿಂದ ಉಪದೇಶಿಸಲ್ಪಟ್ಟ ಈ ಪ್ರಯಾಗಾಖ್ಯ ತೀರ್ಥರಾಜನ ಘನತೆಯನ್ನು ಕೇಳಿರಿ. ॥ ೩ ॥ ಪ್ರಯಾಗದ ಮಾಹಾತ್ಮ್ಯೆಯನ್ನು ಕೇಳಿದ ಯಮಧರ್ಮರಾಜನು ತನ್ನ ರಾಜಧಾನಿಯಾದ ಸಂಯಮನೀನಗರವನ್ನು ಬಿಟ್ಟು ಪ್ರಯಾಗಕ್ಷೇತ್ರದ ದಕ್ಷಿಣಭಾಗದಲ್ಲಿ ತನ್ನ ವಾಸ್ತವ್ಯವನ್ನು ಶಾಶ್ವತವಾಗಿ ಹೂಡಿದನು. ॥ ೪ ॥ ಸಮಸ್ತ ಅಪೇಕ್ಷೆಗಳನ್ನು ಮಳೆಗರೆವಂತೆ ನೆರವೇರಿಸಲು ಸಮರ್ಥವಾದ ಈ ಕ್ಷೇತ್ರದಲ್ಲಿ ಬಹಳ ಕಾಲ ವಾಸ ಮಾಡಿ ಯಥಾವಿಧಿಯಾಗಿ ಯಥಾಕ್ರಮ- ವಾಗಿ, ದಶದಾನಗಳು, ಮಹಾದಾನಗಳೆಂದು ಹೆಸರಾದ ಹದಿನಾರು ದಾನಗಳು, ಗೋದಾನವೇ ಮೊದಲಾದ ದಾನದ ಗುಂಪಿಗೆ ಸೇರಿರುವ ಅನ್ನದಾನಗಳನ್ನೂ ಮಾಡಿ ಮುಗಿಸಿದನು. ॥ ೫-೬ ॥ ಅತಿವಯಸ್ಸಾದ, ಏನೂ ಗತಿಯಿಲ್ಲದ, ಸಂಸಾರಿಗಳಾದ, ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿದ ಬ್ರಾಹ್ಮಣರಿಗೆ ತಾನೇ ವಿಧಿಪೂರ್ವಕವಾಗಿ ದಾನ ಮಾಡಿದನು.॥೭॥ ಹೇ ಬ್ರಾಹ್ಮಣೋತ್ತಮರೇ! ಯಮನು ಮಾಡಿದ ಈ ದಾನಕಾರ್ಯಗಳನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳು ತಮ್ಮ ತಮ್ಮ ಪದವಿಗಳಿಗೆ ಇನ್ನು ಅವಸಾನ ಬಂದಿತೆಂದು ತಿಳಿದು ಹೆದರಿದರು. ॥ ೮ ॥ ಅವರೆ- ಲ್ಲರೂ ಶ್ರೀಮಾಧವನನ್ನು ಸ್ತೋತ್ರಮಾಡಿ ಸಾಷ್ಟಾಂಗವೆರಗಿ ತಮ್ಮ ಪದವಿಗಳಿಗೆ ಅವಸಾನ ತರುತ್ತಿದೆ ಎಂದು ಯಾವ ಕರ್ಮದಿಂದ ಸಂಶಯಪಟ್ಟರೋ ಅಂಥಾ ಈ ಯಮಧರ್ಮನ ದಾನಕಾರ್ಯಗಳ ಬಗ್ಗೆ ಅರುಹಿದರು. ॥ ೯ ॥ ಆಗ ಭಯದಿಂದ ಕೂಡಿದ ಅವರ ಮಾತನ್ನು ಕೇಳಿ ಭಯಪರಿಹಾರಕನಾದ ಮಾಧವನು ಸ್ವಲ್ಪ ಮುಗುಳ್ನಕ್ಕು ರಮ್ಯವಾಗಿ ಮಾತನಾಡಿದನು. ॥ ೧೦ ॥

**ಶ್ರೀಮಾಧವ ಉವಾಚ—**

ಭೋ ಭೋ ಶಕ್ರಾದಯಸ್ಸರ್ವೇ ಯೂಯಂ ಮಾ ಬೈಷ್ಟ ಕಾಲತಃ ।
ಸ ತು ಮತ್ಪ್ರೀತಯೇ ದಾನಂ ದದಾತಿ ನ ಪದೇಚ್ಛಯಾ ॥ ೧೧ ॥
ತಥಾಪಿ ವಃ ಕೃತೇ ತತ್ರ ಗತ್ವೈವಂ ಸನ್ನಿವಾರಯೇ ।
ಯಥಾ ಸ್ಯಾದತುಲೋ ಹರ್ಷೋ ಭವತಾಮಂತಕಸ್ಯ ಚ ॥ ೧೨ ॥

**ಶ್ರೀಮಾಧವನು ಹೇಳಿದನು—**

ಎಲೈ ಇಂದ್ರಾದಿ ಸರ್ವದೇವತೆಗಳಾ ! ನೀವು ಯಮನ ದೆಶೆಯಿಂದ ಹೆದರಬೇಡಿ; ಅವನು ನನ್ನನ್ನು ಸಂತುಷ್ಟಿಗೊಳಿಸಲು ದಾನವನ್ನು ಮಾಡುತ್ತಾನೆ, ಪದವಿಯ ವ್ಯಾಮೋಹದಿಂದಲ್ಲ. ॥೧೧॥ ಆದರೆ ನಿಮಗಾಗಿ ಅವನಲ್ಲಿ ಹೋಗಿ ಆತನ ಕಾರ್ಯವನ್ನು ನಿವಾರಿಸುತ್ತೇನೆ. ಇದರಿಂದ ನಿಮಗೂ ಅವನಿಗೂ ಬಹಳ ಸಂತೋಷವಾಗುವುದು. ॥ ೧೨ ॥

**ಸೂತ ಉವಾಚ—**

ಏವಮಾಶ್ವಾಸ್ಯ ಶಕ್ರಾದೀನ್ ಮಾಧವಃ ಕಾಮರೂಪಧೃಕ್ ।
ವೃದ್ಧಬ್ರಾಹ್ಮಣರೂಪೇಣ ಆಜಗಾಮ ಯಮಾಲಯಮ್ ॥ ೧೩ ॥

ದೃಷ್ಟ್ವಾ ಯಮೋಽಪಿ ತಂ ವಿಪ್ರಂ ಜರಠಂ ಸದಸಿ ಸ್ಥಿತಮ್ ।
ದುರ್ಬಲಂ ಬಲಸಂಯುಕ್ತಂ ಸರ್ವಾಂಗೇ ಸಿತಮೂರ್ಧಜಮ್ ॥ ೧೪ ॥
ದ್ರಾಘೀಯಸಾಧ್ವನಾ ಶ್ರಾಂತಂ ಧೂಲಿಧೂಸರವಿಗ್ರಹಮ್ ।
ಸ್ಫುರತ್ಕರ್ಕಶಚರ್ಮಾಣಂ ಅಸ್ಥಿಶೇಷಂ ಚ ವಾಯುನಾ ॥ ೧೫ ॥
ಸಿತಭ್ರೂಯುಗಲಚ್ಛನ್ನಂ ವಲಿತಪ್ರಾಂತಲೋಚನಮ್ ।
ಮಿಹಿಕಾಸಂಹತಿಗ್ಲಾನಪದ್ಮಪತ್ರಮಿವ ಹ್ರದಮ್ ॥ ೧೬ ॥
ಭಾರಾಕ್ರಾಂತಾನಮೈರಂಗೈರ್ಗಣಯಂತಂ ಪದೈರ್ಭುವಮ್ ।
ನಿರ್ಗುಣಂ ಗುಣವತ್ಯೇವ ಸ್ತ್ರಿಯಾ ಯಷ್ಟ್ಯಾವಲಂಬಿತಮ್ ॥ ೧೭ ॥
ವಿಜಮಾನಶಿರೋಗ್ರೀವಂ ಸರ್ವಾಲಕ್ಷಣಭಾಷಣಮ್ ।
ಚೈಲಬದ್ಧಕಟಿಂ ವಿಪ್ರಮಸಕೃಚ್ಛ್ವಾಸವರ್ಷಿಣಮ್ ॥ ೧೮ ॥
ಉದತಿಷ್ಠತ್ತಮಂ ಸರ್ವೈಶ್ಚಚಾಲ ಚ ಕಿಯತ್ಪದಮ್ ।
ಸ್ವಾಗತೀಕೃತ್ಯ ತಂ ವಿಪ್ರಮಾಸನೇ ಸನ್ನ್ಯವೇಶಯತ್ ॥ ೧೯ ॥
ವೃದ್ಧದ್ವಿಜಸ್ವರೂಪೇಣ ಗುಪ್ತೋಽಪಿ ಭಗವಾಂಸ್ತದಾ ।
ತೇನ ಸಂಭಾಸಯಾಮಾಸ ಸುಸಭಂ ಸೂರ್ಯನಂದನಮ್ ॥ ೨೦ ॥
ತತಸ್ತಂ ಪೂಜಯಾಮಾಸ ಕುಶಲಪ್ರಶ್ನಪೂರ್ವಕಮ್ ।
ನಾನೋಪಚಾರೈರ್ವಿಧಿವಚ್ಛಮನಃ ಶಂಕರಂ ಸತಾಮ್ ॥ ೨೧ ॥
ಪೂಜ್ಯೈವಂ ಪ್ರಾರ್ಥಯಾಮಾಸ ಭಸ್ಮಗೂಢಾಗ್ನಿವತ್ಸ್ಥಿತಮ್ ।
ಭಗವನ್ಪೂರ್ಣಕಾಮೋಽಹಮಭವಂಸ್ತ್ವತ್ಪ್ರಸಾದತಃ ॥ ೨೨ ॥
ಧನ್ಯೋಽಹಂ ಮೇ ಗೃಹಂ ಧನ್ಯಂ ಧನ್ಯಂ ವೈಭವಮವ್ಯಯಮ್ ।
ಶ್ರುತಂ ಧನ್ಯಂ ಕುಲಂ ಧನ್ಯಂ ಯದ್ಗೇಹೇ ಭವದಾಗಮಃ ॥ ೨೩ ॥
ಕಥ್ಯತಾಮಾಶು ಹೇ ಬ್ರಹ್ಮನ್ ಸ್ವಾಗಮನಕಾರಣಮ್ ।
ಮಂಕ್ಷು ಶ್ರುತೇನ ಯೇನಾಹಂ ಕರಿಷ್ಯೇ ಭವತಃ ಪ್ರಿಯಮ್ ॥ ೨೪ ॥
ಶ್ರುತ್ವೈವಂ ಮಾಧವೋ ವಿಪ್ರಾಸ್ತಾಮಿಮಾಂ ಯಮಭಾರತೀಮ್ ।
ಜಗಾದ ತಂ ಸದೋಮಧ್ಯೇ ತತೋ ಯಾಚಕಮುದ್ರಯಾ ॥ ೨೫ ॥

**ಸೂತರು ಹೇಳಿದರು—**

ಈ ರೀತಿಯಾಗಿ ಇಂದ್ರಾದಿಗಳನ್ನು ಸಮಾಧಾನಗೊಳಿಸಿ, ಬೇಕಾದ ರೂಪವನ್ನು ಧಾರಣ ಮಾಡಬಲ್ಲ ಶ್ರೀಮಾಧವನು ವೃದ್ಧನಾದ ಬ್ರಾಹ್ಮಣರೂಪದಿಂದ ಯಮಧರ್ಮರಾಯನ ಮನೆಗೆ ಬಂದನು. ॥ ೧೩ ॥ ಬಲವುಳ್ಳವನಾದರೂ ದುರ್ಬಲನಂತೆ ಕಾಣಿಸುತ್ತಿದ್ದ, ಮುದುಕನಾದ, ಮೈಯೆಲ್ಲ ನೆರೆತ ಕೂದಲುಗಳುಳ್ಳ, ಬಹಳವಾಗಿ ನಡೆದು ಬಂದಿರುವ ದಾರಿಯಿಂದ ಆಯಾಸ-ಗೊಂಡಂತಿದ್ದ, ಧೂಳಿನಿಂದ ತುಂಬಿದ ದೇಹವುಳ್ಳ, ಹೊಳೆಯುತ್ತಿರುವ ಒರಟೊರಟಾದ

ಚರ್ಮವುಳ್ಳ, ಗಾಳಿಯು ಬೀಸಿ ಹರಕಲು ಧೋತ್ರದ ಸಂದುಗಳಿಂದ ಕಂಡುಬರುತ್ತಿದ್ದ ಬರೇ ಎಲುಬಿನ ದೇಹವುಳ್ಳ, ನರೆತ ಕೂದಲಿನಿಂದ ಕೂಡಿದ ಜೋತುಬಿದ್ದಿರುವ ಹುಬ್ಬುಗಳಿಂದ ಮುಚ್ಚಿದ ಅಕ್ಕಪಕ್ಕದ ಪ್ರದೇಶವುಳ್ಳ, ಸುಕ್ಕುಬಿದ್ದ ಕಡೆಯುಳ್ಳ ಕಣ್ಣುಗಳುಳ್ಳ, ಮಂಜುಗಡ್ಡೆಯ ಹೊಡೆತಕ್ಕೆ ಸಿಕ್ಕಿದ ಕಮಲದ ಹೂಗಳನ್ನುಳ್ಳ ಸರೋವರದಂತಿರುವ, ಭಾರವನ್ನು ಹೊರಲಾರದೆ ಅಸಮವಾಗಿ ಇಡುತ್ತಿರುವ ಹೆಜ್ಜೆಗಳಿಂದ ಭೂಮಿಯನ್ನು ಅಳೆಯುತ್ತಿದ್ದಾನೆಯೋ ಎಂಬಂತೆ ಕಾಣಿಸುತ್ತಿರುವ, ಸೌಂದರ್ಯಯೌವನವಿಲ್ಲದ ಪುರುಷನು ಸೌಂದರ್ಯ ಯೌವನಾದಿಗಳಿಂದ ಕಂಗೊಳಿಸುತ್ತಿರುವ ಹೆಂಗಸಿನ ಕೈಹಿಡಿದು ನಡೆಯುತ್ತಿರುವಂತೆ ಒಂದು ಕೋಲಿನ ಆಸರೆಯಿಂದ ನಡೆದುಬರುತ್ತಿರುವ, ಅದರುತ್ತಿರುವ ತಲೆ ಮತ್ತು ಕುತ್ತಿಗೆಯುಳ್ಳ, ಅವಲಕ್ಷಣವಾಗಿ ಮಾತನಾಡು-ತ್ತಿರುವ, ಸೊಂಟಕ್ಕೆ ವಸ್ತ್ರವನ್ನು ಸುತ್ತಿರುವ, ನಿಟ್ಟುಸಿರು ಬಿಡುತ್ತಿರುವ ಆ ವೃದ್ಧ ಬ್ರಾಹ್ಮಣನನ್ನು ಸಭಾದಲ್ಲಿ ಕುಳಿತಿದ್ದ ಯಮನು ನೋಡಿ ಎಲ್ಲ ಸಭಿಕರೊಂದಿಗೆ ಎದ್ದು ನಿಂತು ಕೆಲವು ಹೆಜ್ಜೆಗಳನ್ನು ಆ ಬ್ರಾಹ್ಮಣನೆಡೆಗೆ ಇಟ್ಟ ನಂತರ ಅವನನ್ನು ಬರಮಾಡಿ ಆಸನದಲ್ಲಿ ಕೂಡಿಸಿದನು. ॥ ೧೪-೧೯ ॥ ವೃದ್ಧ ಬ್ರಾಹ್ಮಣವೇಷದಲ್ಲಿ ಶ್ರೀಭಗವಂತನು ನಿಗೂಢವಾಗಿದ್ದರೂ ಅಲ್ಲಿನ ಸಭಾಸದರ ಸಹಿತ ಯಮದೇವರ ಮೇಲೆಯೂ ತನ್ನ ವರ್ಚಸನ್ನು ಬೀರಿದನು. ॥ ೨೦ ॥ ಅನಂತರ ಯಮನು ಸಜ್ಜನರ ಮನಸ್ಸಿಗೆ ಸಂತೋಷವನ್ನುಂಟುಮಾಡಿ ಮಂಗಳಕರನಾಗಿರುವ ಆ ಬ್ರಾಹ್ಮಣನನ್ನು ಕುಶಲಪ್ರಶ್ನೆ ಮಾಡಿ ನಂತರ ಅರ್ಘ್ಯ, ಪಾದ್ಯ, ಆಚಮನ ಮಧುಪರ್ಕಾದಿಗಳಿಂದ ವಿಧಿವತ್ತಾಗಿ ಪೂಜಿಸಿದನು. ॥ ೨೧ ॥ ಈ ರೀತಿಯಾಗಿ ಪೂಜಾದಿಗಳನ್ನು ಮಾಡಿ, ನಂತರ ಬೂದಿ ಮುಚ್ಚಿದ ಕೆಂಡದಂತಿದ್ದ ಆ ವೃದ್ಧಬ್ರಾಹ್ಮಣನನ್ನು ಈ ರೀತಿ ಪ್ರಾರ್ಥಿಸಿದನು. ಪೂಜ್ಯರೇ! ತಮ್ಮ ಅನುಗ್ರಹ-ದಿಂದ ನಾನು ಪೂರ್ಣಕಾಮನಾದೆನು. ॥ ೨೨ ॥ ನಾನು ಧನ್ಯನಾದೆನು, ನನ್ನ ಮನೆಯು ಧನ್ಯ-ವಾಯಿತು, ನನ್ನ ವೈಭವವೂ ಹ್ರಾಸಲ್ಲದೆ ಧನ್ಯವಾಯಿತು. ನನ್ನ ಜ್ಞಾನವು ಧನ್ಯವಾಯಿತು. ನನ್ನ ಕುಲವು ಧನ್ಯವಾಯಿತು. ತಾವು ಎಲ್ಲಿ ಆಗಮಿಸಿದ್ದೀರೋ ಅಂತಹ ಈ ಮನೆಯೂ ಧನ್ಯವಾಯಿತು. ॥ ೨೩ ॥ ಹೇ ವಿಪ್ರೋತ್ತಮರೇ! ಜಾಗ್ರತೆಯಾಗಿ ತಾವು ಬಂದಿರುವ ಉದ್ದೇಶ್ಯ-ವನ್ನು ಹೇಳಿರಿ. ಕೇಳಿದ ಕೂಡಲೆ ಆ ಉದ್ದೇಶ್ಯವನ್ನು ನೆರವೇರಿಸುವೆನು. ॥ ೨೪ ॥ ಹೀಗೆಂದು ಹೇಳಿದನು. ಎಲೈ ವಿಪ್ರರೇ! ಈ ರೀತಿಯಾದ ಯಮನ ಪ್ರಾರ್ಥನೆಯನ್ನು ಕೇಳಿದ ಆ ವಿಪ್ರ-ರೂಪಿಯಾದ ಮಾಧವನು ಆ ಸಭಾಮಧ್ಯದಲ್ಲಿ ಯಾಚಕನ ಭಂಗಿಯಿಂದ ಈ ರೀತಿ ಹೇಳಿದನು. ॥ ೨೫ ॥

ಬ್ರಾಹ್ಮಣ ಉವಾಚ—

ಭೋ ಭೋ ದಾನಪತೇ ದಾನಾನ್ಯಮಿತಾನಿ ತ್ವಯಾ ಖಲು ।
ದತ್ತಾನಿ ದ್ವಿಜವರ್ಯೇಭ್ಯಃ ಶ್ರುತಮೇವ ಮಯಾ ಗೃಹೇ ॥ ೨೬ ॥
ಸೀದತ್ಕುಟುಂಬಸ್ತೇನಾಹಂ ಯಾಚಕಸ್ತ್ವಾಮುಪಾಗತಃ ।
ದೇಹಿ ದಾನಂ ಮಮಾಪ್ಯದ್ಯ ಯನ್ನ ದತ್ತಂ ತ್ವಯಾ ಯಮ ॥ ೨೭ ॥
ಇತಿ ತದ್ವಾಚಮಾಕರ್ಣ್ಯ ಯಮಶ್ಶಂಕಿತಮಾನಸಃ ।
ಅದತ್ತದಾನಂ ವಿಜ್ಞಾತುಂ ಪ್ರವಕ್ತುಮುಪಚಕ್ರಮೇ ॥ ೨೮ ॥

**ಬ್ರಾಹ್ಮಣನು ಹೇಳಿದನು—**

ದಾನ ಮಾಡುವವರಲ್ಲಿ ಶ್ರೇಷ್ಠನಾದವನೇ! ನಿನ್ನಿಂದ ಮಿತಿಯಿಲ್ಲದಷ್ಟು ದಾನಗಳು ಬ್ರಾಹ್ಮಣಶ್ರೇಷ್ಠರಿಗೆ ಕೊಡಲ್ಪಟ್ಟಿದೆಯೆಂದು ನಾನು ನನ್ನ ಮನೆಯಲ್ಲಿಯೇ ಕೇಳಿಯಾಯಿತು. ॥ ೨೬ ॥ ನಾನು ಕಷ್ಟಕ್ಕೆ ಒಳಪಟ್ಟಿರುವ ಕುಟುಂಬವುಳ್ಳವನು. ಯಾಚಕನಾಗಿ ನಿನ್ನ ಹತ್ತಿರ ಬಂದಿದ್ದೇನೆ. ಯಮನೇ ! ನಿನ್ನಿಂದ ಇದುವರೆಗೆ ಕೊಡದಿರುವ ದಾನವನ್ನು ಈಗ ನನಗೆ ಕೊಡು. ।೨೭॥ ಹೀಗೆ ಹೇಳಿದ ಅವನ ಮಾತನ್ನು ಕೇಳಿ ಆಶ್ಚರ್ಯಗೊಂಡ ಯಮನು ಇದುವರೆಗೆ ತನ್ನಿಂದ ಕೊಡಲ್ಪಡದಿರುವ ದಾನವನ್ನು ತಿಳಿಯಹೇಳಲು ಪ್ರಾರ್ಥಿಸಿದನು.॥ ೨೮ ॥

**ಯಮ ಉವಾಚ—**

**ಪುರಾಣೇಷು ಪ್ರಸಿದ್ಧಾನಿ ದಾನವಲ್ಲೀಧೃತಾನಿ ಚ ।**
**ಸರ್ವದಾನಾನಿ ದತ್ತಾನಿ ನ ದತ್ತಂ ಮಾಂ ನಿಶಾಮಯ ॥ ೨೯ ॥**

**ಯಮ ದೇವರು ಹೇಳಿದರು—**

ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ಮತ್ತು ದಾನಗಳ ಪಟ್ಟಿಗಳಲ್ಲಿ ಹೇಳಲ್ಪಟ್ಟಿರುವ ಎಲ್ಲ ದಾನಗಳು ನನ್ನಿಂದ ಕೊಡಲ್ಪಟ್ಟಿವೆ. ಈಗ ನಿನ್ನಿಂದ ಕೊಡದಿರುವ ದಾನವನ್ನು ತಿಳಿಸುವವರಾಗಿರಿ. ॥ ೨೯ ॥

**ಬ್ರಾಹ್ಮಣ ಉವಾಚ—**

**ಕಿಂಚಿದ್ದಾನಂ ನ ಕಸ್ಯಾಪಿ ತ್ವಯಾ ದತ್ತಂ ಕದಾಪಿ ಹಿ ।**
**ತನ್ಮಹ್ಯಂ ದೀಯತಾಮಾಶು ಮಾಧವಪ್ರೀತಿಕಾರಕಮ್ ॥ ೩೦ ॥**

**ಬ್ರಾಹ್ಮಣನು ಹೇಳಿದನು—**

ನಿನ್ನಿಂದ ಇದುವರೆಗೆ ಯಾರಿಗೂ ಯಾವಾಗಲೂ ಕೊಡದಿರುವ ''ಸ್ವಲ್ಪದಾನವೆಂಬ'' ದಾನವೊಂದಿದೆ. ಅದನ್ನು ಮಾಧವನ ಪ್ರೀತಿಗಾಗಿ ನನಗೆ ಜಾಗ್ರತೆಯಾಗಿ ಕೊಡು. ॥ ೩೦ ॥

**ಧರ್ಮರಾಜ ಉವಾಚ—**

**ಕಿಂಚಿದ್ದಾನಂ ಕಿಯನ್ಮಾನಂ ಕಿಂಚಿಚ್ಛಬ್ದೇನ ಯನ್ಮತಮ್ ।**
**ಕೇನ ಕಸ್ಮೈ ಕದಾ ದೇಯಂ ಕಥಂ ತದ್ವದ ಸುವ್ರತ ॥ ೩೧ ॥**

**ಧರ್ಮರಾಜ ಹೇಳಿದನು—**

ಸ್ವಲ್ಪ ದಾನವೆಂದರೆ (ಕಿಂಚಿತ್) ಅದರ ಅಭಿಪ್ರಾಯವೇನು, ಆ ದಾನದ ಅಳತೆ ಏನು (ಎಷ್ಟು ಕೊಡಬೇಕು),ಯಾರಿಂದ ಯಾರಿಗೆ ಹೇಗೆ ಕೊಡಲ್ಪಡಬೇಕು ಎಂಬುದನ್ನು ಒಳ್ಳೆಯ ವ್ರತಾಚರಣೆಯುಳ್ಳ ನೀನು ನನಗೆ ತಿಳಿಸುವವನಾಗು ಎಂದು ಯಮನು ಕೇಳಿದನು. ॥ ೩೧ ॥

**ದ್ವಿಜ ಉವಾಚ—**

**ಜಾತೋ ನರಸ್ಸಮರ್ಥಶ್ಚೇದ್ಧನಸಂಪಾದನೇ ಗೃಹೀ ।**
**ತೇನ ದೇಯಂ ಸದಾ ಕಿಂಚಿದ್ದಾನಂ ಮಾಧವತೋಷಣಮ್ ॥ ೩೨ ॥**

ಗೃಹಾಶ್ರಮೇ ನಿವಸತಾಂ ಗೃಹಕರ್ಮಾಣಿ ಕುರ್ವತಾಮ್ ।
ಪಾಪಾನಿ ಸಂಭವತ್ಯೇವ ಜ್ಞಾನಾಜ್ಞಾನಕೃತಾನಿ ಚ ॥ ೩೩ ॥
ತತ್ತತ್ಪಾಪೈಸ್ಸಮಾಯುಕ್ತಾಃ ಪಚ್ಯಂತೇ ರೌರವಾದಿಷು ।
ನಾನಾಯೋನಿಷು ಜಾಯಂತೇ ದುಃಖಮೇವಾಶ್ನುವಂತಿ ತೇ ॥ ೩೪ ॥
ತತ್ತದ್ದೋಷಾಪನುತ್ತ್ಯರ್ಥಮಿದಂ ದಾನಂ ನಿವೇದಿತಮ್ ।
ಕೃಪಯಾ ಮಾಧವೇನೈವ ಕಿಂಚಿದ್ದಾನಂ ಮಹತ್ಫಲಮ್ ॥ ೩೫ ॥
ಅಷ್ಟಮುಷ್ಟಿಮಿತಂ ಧಾನ್ಯಂ ಕಿಂಚಿಚ್ಛಬ್ದೇನ ಗೀಯತೇ ।
ದೇಯಂ ವಿಪ್ರಾಯ ವಿದುಷೇ ಯಥಾಶಕ್ತಿ ಸದಕ್ಷಿಣಂ ॥ ೩೬ ॥
ಪ್ರತ್ಯಹಂ ಜಾತಪಾಪಾನಾಂ ನಾಶಾರ್ಥೇ ಪ್ರತ್ಯಹಂ ಸ್ವಯಂ ।
ಸಾಮರ್ಥ್ಯೇ ದಾರಪುತ್ರಾಪ್ತಬಂಧುಭಿಶ್ಚಾಪಿ ಕಾರಯೇತ್ ॥ ೩೭ ॥
ಸರ್ವೇಷಾಂ ವರ್ಣಜಾತೀನಾಂ ಗೃಹಸ್ಥಾಶ್ರಮವಾಸಿನಾಮ್ ।
ಕಿಂಚಿದ್ದಾನೇಽಧಿಕಾರೋಽಸ್ತಿ ಮಾಧವಸ್ತೇನ ತುಷ್ಯತಿ ॥ ೩೮ ॥
ಅನ್ಯಾನಿ ಸರ್ವದಾನಾನಿ ವಿಧಿಹೀನಾನಿ ನಿಷ್ಫಲಮ್ ।
ಧರ್ಮರಾಜ ತಥಾ ನೇದಂ ಭಕ್ತ್ಯಾ ಚೇತ್ಪ್ರತ್ಯಹಂ ಕೃತಮ್ ॥ ೩೯ ॥
ಅಶಕ್ತೇನ ತದರ್ಧಂ ವಾ ದೇಯಂ ನಿತ್ಯಮದಕ್ಷಿಣಮ್ ।
ಮಂತ್ರೇಣಾನೇನ ಧರ್ಮಜ್ಞ ಭೋಕ್ತವ್ಯಂ ಚ ತತಃ ಪರಮ್ ॥ ೪೦ ॥
ಪ್ರಯಾಗನಿಲಯ ಸ್ವಾಮಿನ್ ಭಕ್ತಸಂಕಷ್ಟನಾಶನ ।
ಕಿಂಚಿದ್ದಾನೇನ ಮೇ ದೇವ ಪ್ರಸನ್ನೋ ಭವ ಮಾಧವ ॥ ೪೧ ॥
ಏವಂ ದದಾತಿ ಯೋ ದಾನಂ ಪ್ರತ್ಯಹಂ ತಾರಣಂ ಗೃಹೀ ।
ಸ್ವಜನೈರ್ನವಿಯುಜ್ಯೇತ ಜನ್ಮಜನ್ಮಾಂತರೇಷ್ವಪಿ ॥ ೪೨ ॥
ಸರ್ವಸೌಖ್ಯಂ ಚ ಲಭತೇ ಪುತ್ರಪೌತ್ರಧನಾದಿಕಮ್ ।
ಸೌಹಾರ್ದಂ ಚ ಲಭೇದ್ಭಕ್ತಿಂ ಮಾಧವೇ ಭಕ್ತವತ್ಸಲೇ ॥ ೪೩ ॥
ತದಿದಂ ತೀರ್ಥರಾಜೇ ಚೇದ್ವತ್ಸರಂ ಮಾಸಮೇವ ಚ ।
ಮಾಘಮಾಸೇ ವಿಶೇಷೇಣ ಯೋ ದದಾತಿ ಯಥಾವಿಧಿ ॥ ೪೪ ॥
ತಸ್ಯ ಜನ್ಮಾಂತರೀಯಾನಿ ಹ್ಯೇತಜ್ಜನ್ಮಾರ್ಜಿತಾನ್ಯಪಿ ।
ತಲ್ಲೋಪೋದ್ಭವಪಾಪಾನಿ ಹರತೇ ಮಾಧವಃ ಸ್ವಯಮ್ ॥ ೪೫ ॥
ತಸ್ಯ ನೈಮಿತ್ತಿಕಂ ಕರ್ಮ ಸರ್ವಂ ಸಾಂಗಂ ಪ್ರಜಾಯತೇ ।
ವಿಜ್ಞಾತಂ ಪಾತಕಂ ತಸ್ಯ ಶ್ರುತ್ವಾಪಿ ನ ದದಾತಿ ಯಃ ॥ ೪೬ ॥
ಕಿಂಚಿದ್ದಾನಸ್ಯ ಮಾಹಾತ್ಮ್ಯಂ ಇತಿ ತುಭ್ಯಂ ನಿವೇದಿತಮ್ ।
ದೇಹಿ ಮೇ ಧರ್ಮರಾಜ ತ್ವಂ ಮಾ ಕುರ್ವತ್ರ ವಿಲಂಬಿತಮ್ ॥ ೪೭ ॥

**ತೇನ ತೇ ಸರ್ವಕಾಮಾಪ್ತಿಃ ಸರ್ವದಾ ಸಂಭವಿಷ್ಯತಿ ।**
**ಅಕ್ಷಯ್ಯಮಾಧವೋ ದೇವಃ ಪ್ರಸನ್ನಶ್ಚ ಭವಿಷ್ಯತಿ ॥ ೪೮ ॥**

**ಬ್ರಾಹ್ಮಣನು ಹೇಳಿದನು—**

ಭೂಮಿಯಲ್ಲಿ ಹುಟ್ಟಿದ ಮನುಷ್ಯನು ಗೃಹಸ್ಥಾಶ್ರಮಿಯಾದ ಮೇಲೆ ಸಮರ್ಥನಾಗಿದ್ದರೆ ಧನವನ್ನು ಸಂಪಾದನೆ ಮಾಡಿ ಶ್ರೀಮಾಧವನ ಪ್ರೀತಿಗೋಸ್ಕರ ಯಾವಾಗಲೂ ಸ್ವಲ್ಪವನ್ನು ದಾನಮಾಡಬೇಕು. ॥ ೩೨ ॥ ತಿಳಿದೋ ತಿಳಿಯದೆಯೋ ಗೃಹಸ್ಥಾಶ್ರಮಿಗಳಿಂದ ಪಾಪಕೃತ್ಯಗಳು ಗೃಹಕೃತ್ಯಗಳನ್ನು ಮಾಡುವಾಗ ನಡದೇ ನಡೆಯುತ್ತವೆ. ॥ ೩೩ ॥ ಆ ಪಾಪಗಳಿಂದ ಕೂಡಿಯೇ ಇರುವುದರಿಂದ ದೇಹತ್ಯಾಗಾನಂತರ ರೌರವಾದಿನರಕಗಳನ್ನು ಅನುಭವಿಸುತ್ತಾರೆ, ಮತ್ತು ನಾನಾ ಜನ್ಮಗಳನ್ನು ತಾಳಿ ಕೇವಲ ದುಃಖಗಳನ್ನು ಅನುಭವಿಸುತ್ತಾರೆ. ॥ ೩೪ ॥ ಈ ಪಾಪಗಳ ದೋಷಗಳನ್ನು ಹೋಗಲಾಡಿಸುವ ಸಲುವಾಗಿಯೇ ಕಾರುಣ್ಯದಿಂದ ಶ್ರೀಮಾಧವನಿಂದ ಕೆಲವು ದಾನಗಳು ಹೇಳಲ್ಪಟ್ಟವೆ. ಇದು ಸ್ವಲ್ಪ ದಾನವಾದರೂ ಮಹತ್ಫಲವನ್ನು ಕೊಡತಕ್ಕದ್ದು. ॥ ೩೫ ॥ ಸ್ವಲ್ಪ ಎಂಬ ಪದಕ್ಕೆ ಎಂಟು ಮುಷ್ಟಿ ಧಾನ್ಯವೆಂದು ತಿಳಿಯಬೇಕು. ಇದನ್ನು ನಮಗೆ ಬೇಕಾಗಿರುವ ಬ್ರಾಹ್ಮಣ ವಿದ್ವಾಂಸರಿಗೆ ದಾನ ಮಾಡತಕ್ಕದ್ದು. ಯಥಾಶಕ್ತಿ ದಕ್ಷಿಣೆಯನ್ನು ಕೊಡತಕ್ಕದ್ದು. ॥ ೩೬ ॥ ದಿನನಿತ್ಯವೂ ಪಾಪಸಂಗ್ರಹ ಮಾಡುವುದರಿಂದ ದಿವಸವೂ ಈ ಸ್ವಲ್ಪ ದಾನವನ್ನು ಮಾಡತಕ್ಕದ್ದು. ಸಾಮರ್ಥ್ಯವಿದ್ದರೆ ಹೆಂಡತಿ, ಮಕ್ಕಳು ಮತ್ತು ಬಂಧುಗಳಿಂದಲೂ ಈ ದಾನವನ್ನು ಕೊಡಿಸತಕ್ಕದ್ದು. ॥ ೩೭ ॥ ಎಲ್ಲ ಜಾತಿಯ ಗೃಹಸ್ಥಾಶ್ರಮಿಗಳಿಗೂ ಈ ಯತ್ಕಿಂಚಿತ್ ಪದದಿಂದ ಹೇಳಿರುವ ಎಂಟು ಮುಷ್ಟಿ ಧಾನ್ಯವನ್ನು ಶ್ರೀಮಾಧವನ ಸಂತೋಷಕ್ಕಾಗಿ ದಾನಮಾಡುವ ಅಧಿಕಾರವಿದೆ. ॥ ೩೮ ॥ ಬೇರೆ ಎಲ್ಲ ದಾನಗಳೂ ವಿಧಿಯಿಂದ ಹೀನವಾಗಿದ್ದಲ್ಲಿ ಫಲಕೊಡತಕ್ಕವುಗಳಲ್ಲ. ಧರ್ಮರಾಜನೇ! ಪ್ರತಿದಿನವೂ ಭಕ್ತಿಯಿಂದ ಮಾಡಲ್ಪಡುವ ಈ ದಾನವು ಹಾಗಲ್ಲ. ॥ ೩೯ ॥ ಭಕ್ತಿಯಿದ್ದರೆ ಶಕ್ತಿಯಿಲ್ಲದವನು ಇದರ ಅರ್ಧದಷ್ಟನ್ನೂ (ಅಂದರೆ ನಾಲ್ಕು ಮುಷ್ಟಿ) ದಕ್ಷಿಣೆಯಿಲ್ಲದೆಯೂ ಕೊಡಬಹುದು. ಈ ಮಂತ್ರವನ್ನು ಉಚ್ಚರಿಸುತ್ತ ಈ ಅಲ್ಪದಾನವನ್ನು ಮಾಡಿ ನಂತರ ಭೋಜನ ಮಾಡಬೇಕು. ॥ ೪೦ ॥ ಆ ಮಂತ್ರವು ಹೀಗಿದೆ "ಪ್ರಯಾಗನಿಲಯ ಸ್ವಾಮಿನ್ ಭಕ್ತಸಂಕಷ್ಟ-ನಾಶನ । ಕಿಂಚಿದ್ದಾನೇನ ಮೇ ದೇವ ಪ್ರಸನ್ನೋ ಭವ ಮಾಧವ "; (ಪ್ರಯಾಗದಲ್ಲಿ ವಾಸ ಮಾಡುವ ಸ್ವಾಮಿಯೇ ನೀನು ಭಕ್ತರ ಕಷ್ಟಗಳನ್ನು ನಿವಾರಣೆ ಮಾಡುವವನು. ನನ್ನಿಂದ ಕೊಡಲ್ಪಟ್ಟ ಈ ಅಲ್ಪದಾನದಿಂದ ಪ್ರಸನ್ನನಾಗು ಎಂದು). ॥ ೪೧ ॥ ಈ ಪ್ರಕಾರವಾಗಿ ಪ್ರತಿದಿವಸವೂ ಗೃಹಸ್ಥಾಶ್ರಮಿಯು ಉದ್ಧಾರ ಮಾಡತಕ್ಕ ಈ ದಾನ ಮಾಡಿದರೆ ಅವನು ಜನ್ಮಜನ್ಮಾಂತರದಲ್ಲಿಯೂ ತನ್ನ ಪತ್ನೀ ಪುತ್ರ ಮತ್ತು ಬಂಧುಗಳಿಂದ ವಿಯೋಗವನ್ನು ಹೊಂದುವುದಿಲ್ಲ. ॥ ೪೨ ॥ ಅವನ ಮಕ್ಕಳು, ಮೊಮ್ಮಕ್ಕಳು ಧನಕನಕಾದಿಗಳನ್ನು ಮತ್ತು ಎಲ್ಲ ಬಗೆಯ ಸುಖವನ್ನೂ ಪಡೆಯುತ್ತಾನೆ ಹಾಗೂ ಭಕ್ತವತ್ಸಲನಾದ ಮಾಧವನಲ್ಲಿ ಒಳ್ಳೆಯ ಮನಸ್ಸನ್ನು ಮತ್ತು ಭಕ್ತಿಯನ್ನು ಪಡೆಯುವನು. ॥ ೪೩ ॥ ಈ ಸ್ವಲ್ಪದಾನವನ್ನು ಪ್ರಯಾಗದಲ್ಲಿದ್ದು ಒಂದು ವರ್ಷವಾಗಲೀ ಒಂದು ತಿಂಗಳಾಗಲೀ ಅಥವಾ ವಿಶೇಷವಾಗಿ ಮಾಘಮಾಸದಲ್ಲಾಗಲೀ ಯಾರು ಯಥಾ ವಿಧಿಯಾಗಿ ಮಾಡುತ್ತಾರೋ ಅವರು ಜನ್ಮಾಂತರಗಳಲ್ಲಿ ಮಾಡಿದ ಅಥವಾ ಈ ಜನ್ಮದಲ್ಲಿಯೇ ಮಾಡಿರಬಹುದಾದ ಮತ್ತು ಸ್ವಲ್ಪವೂ ದಾನಮಾಡದ ಲೋಪದಿಂದುದ್ಭವಿಸುವ ಅಥವಾ ಉದ್ಭವಿಸಬಹುದಾದ ಸಮಸ್ತ ಪಾಪಗಳೆಲ್ಲವೂ ಶ್ರೀಮಾಧವನಿಂದಲೇ ಪರಿಹಾರ- ವಾಗುವುವು ॥ ೪೪-೪೫ ॥ ಅವನ ನೈಮಿತ್ತಿಕ

ಕರ್ಮಗಳೆಲ್ಲವೂ ಸಾಂಗವಾಗಿ ಜರುಗುವುವು. ತಿಳಿದೂ ತಿಳಿದೂ ಯಾರು ಈ ದಾನವನ್ನು ಮಾಡುವುದಿಲ್ಲವೋ ಅವನಿಗೆ ಪಾಪಘಟನೆಯು ಖಂಡಿತ ಸಿದ್ಧವು ॥ ೪೬ ॥ ಹೇ ಧರ್ಮ-ರಾಜನೇ! ಈ ಸ್ವಲ್ಪದಾನದ ಮಹಿಮೆಯನ್ನು ನಿನಗೆ ಹೇಳಿಯಾಯಿತು. ಈಗ ವಿಳಂಬ ಮಾಡದೆ ಈ ಸ್ವಲ್ಪದಾನವನ್ನು ನನಗೆ ಕೊಡು. ॥ ೪೭ ॥ ಇದರಿಂದ ನಿನ್ನ ಎಲ್ಲ ಅಪೇಕ್ಷೆಗಳೂ ಖಂಡಿತವಾಗಿ ನೆರವೇರುವುವು. ಅಕ್ಷಯ ಮಾಧವನು ನಿನಗೆ ಖಂಡಿತವಾಗಿ ಪ್ರಸನ್ನನಾಗುವನು. ॥ ೪೮ ॥

**ಸೂತ ಉವಾಚ—**

ಇತಿ ದ್ವಿಜವಚಃ ಶ್ರುತ್ವಾ ಯಮಃ ಸಂತುಷ್ಟಮಾನಸಃ ।
ಕಿಂಚಿದ್ದಾನಂ ದದೌ ತಸ್ಮೈ ಯಥಾಶಕ್ತಿ ಸದಕ್ಷಿಣಮ್ ॥ ೪೯ ॥
ಮಾಧವೋಽಪಿ ಗೃಹೀತ್ವಾ ತತ್ಕಿಂಚಿದ್ದಾನಂ ಯಥಾವಿಧಿ ।
ಸ್ವರೂಪಂ ದರ್ಶಯಾಮಾಸ ಮುಕ್ತ್ವಾ ಬ್ರಾಹ್ಮಣರೂಪತಾಮ್ ॥ ೫೦ ॥
ಪೀತಾಂಬರಧರಂ ದೇವಂ ಘನನೀಲಂ ಚತುರ್ಭುಜಮ್ ।
ಶಂಖಚಕ್ರಗದಾಪದ್ಮಜುಷ್ಟಂ ಸರ್ವಾರ್ಥಸಾಧನಮ್ ॥ ೫೧ ॥
ಪ್ರಸನ್ನಂ ಚಾರುವದನಂ ಸಸ್ಮಿತಾಪಾಂಗವೀಕ್ಷಣಮ್ ।
ಶ್ರೀವತ್ಸಕೌಸ್ತುಭಾಭ್ಯಾಂ ಚ ಭೂಷಿತಂ ವನಮಾಲಯಾ ॥ ೫೨ ॥
ದೃಷ್ಟ್ವಾ ತದದ್ಭುತಂ ರೂಪಂ ಯಮಃ ಸಂಯಮನೀಪತಿಃ ।
ಅಪತತ್ಪಾದಯೋರ್ಭಕ್ತ್ಯಾ ಮಾಧವಸ್ಯ ಜಗತ್ಪತೇಃ ॥ ೫೩ ॥
ಮಾಧವಸ್ತಂ ಸಮುತ್ಥಾಪ್ಯ ಪದ್ಮಭೂಷಿತಪಾಣಿನಾ ।
ಉವಾಚ ವಚನಂ ಹೃದ್ಯಂ ಶ್ರಾದ್ಧದೇವಾಯ ಸುವ್ರತಃ ॥ ೫೪ ॥

**ಸೂತರು ಹೇಳಿದರು—**

ಈ ರೀತಿಯಾದ ಆ ಬ್ರಾಹ್ಮಣನ ಮಾತನ್ನು ಕೇಳಿ ಯಮನು ಸಂತೋಷಗೊಂಡ ಮನಸ್ಸುಳ್ಳವನಾಗಿ ಆ ಬ್ರಾಹ್ಮಣನಿಗೆ "ಸ್ವಲ್ಪದಾನ" ವನ್ನು ತನ್ನ ಶಕ್ತ್ಯನುಸಾರ ದಕ್ಷಿಣೆ ಸಹಿತ ದಾನಮಾಡಿದನು. ॥ ೪೯ ॥ ಶ್ರೀಮಾಧವನಾದರೋ ವಿಧಿಪೂರ್ವಕವಾಗಿ ಆ ಸ್ವಲ್ಪದಾನವನ್ನು ಸ್ವೀಕರಿಸಿ, ತನ್ನ ಬ್ರಾಹ್ಮಣ ರೂಪವನ್ನು ಬಿಟ್ಟು ಸ್ವರೂಪವನ್ನು ತೋರಿಸಿದನು. ॥ ೫೦ ॥ ಪೀತಾಂ-ಬರವನ್ನು ಧರಿಸಿದ, ಮೇಘದಂತೆ ನೀಲವರ್ಣದಿಂದ ಕೂಡಿರುವ, ಕ್ರೀಡಾದಿಗುಣ ವಿಶಿಷ್ಟನಾದ, ನಾಲ್ಕು ಭುಜಗಳಿಂದ ಶೋಭಿಸುತ್ತಿರುವ, ಶಂಖ, ಚಕ್ರ, ಗದಾ ಮತ್ತು ಪದ್ಮಧಾರಿಯಾದ ಪ್ರಸನ್ನನಾದ, ಮನೋಹರವಾದ ಮುಖವುಳ್ಳ, ಮಂದಹಾಸದಿಂದ ಕೂಡಿದ ಕಡೆಗಣ್ಣು-ನೋಟವುಳ್ಳ ಶ್ರೀವತ್ಸದಿಂದಲೂ, ವನಮಾಲೆಯಿಂದಲೂ ಮತ್ತು ಕೌಸ್ತುಭರತ್ನದಿಂದಲೂ ಭೂಷಿತವಾಗಿರುವ ಆ ಮಾಧವನ ಅದ್ಭುತ ರೂಪವನ್ನು ನೋಡಿ ಸಂಯಮನೀಪತಿಯಾದ ಯಮನು ಅವನ ಪಾದಗಳಿಗೆರಗಿದನು. ॥ ೫೧-೫೩ ॥ ಮಾಧವನು ಕಮಲಪುಷ್ಪದಿಂದ (ಅಥವಾ ಪದ್ಮರೇಖೆಯಿಂದ) ಚಿಹ್ನಿತವಾಗಿರುವ ತನ್ನ ಹಸ್ತಗಳಿಂದ ಅವನನ್ನು ಎಬ್ಬಿಸಿ, ಆ ಶ್ರಾದ್ಧದೇವನೆನಿಸುವ ಯಮನನ್ನು ಕುರಿತು ಈ ರೀತಿಯಾಗಿ ಹೇಳಿದನು. ॥ ೫೪ ॥

ಶ್ರೀ ಮಾಧವ ಉವಾಚ—

ಜಾನೇಽಹಂ ಧರ್ಮರಾಜ ತ್ವಾಂ ಮನ್ನಿಷ್ಠಸ್ತ್ವಂ ಮಮಾಶ್ರಯಃ ।
ಸರ್ವದಾನಾಧಿಕಂ ಕರ್ಮಾಕರೋಸ್ತ್ವಂ ನ ಹಿ ಕಾಮತಃ ॥ ೫೫ ॥
ಪ್ರಸನ್ನೋಽಹಂ ಸದಾ ತುಭ್ಯಂ ಇದಾನೀಂ ತು ವಿಶೇಷತಃ ।
ಧರ್ಮಾರ್ಥಕಾಮಮೋಕ್ಷಾಣಾಂ ವೃಣೀಷ್ವ ವಿವಿಧಾನ್ವರಾನ್ ॥ ೫೬ ॥

ಶ್ರೀ ಮಾಧವನು ಹೇಳಿದನು—

ಧರ್ಮರಾಜನೇ, ನಿನ್ನನ್ನು ನಾನು ಬಲ್ಲೆ. ನೀನು ನನ್ನಲ್ಲಿಯೇ ನಿಷ್ಠೆಯುಳ್ಳವನು, ನನ್ನನ್ನು ಆಶ್ರಯಿಸಿದವನು. ನೀನು ಎಲ್ಲ ದಾನದ ಕರ್ಮಗಳನ್ನು ಯಾವ ಫಲಾಪೇಕ್ಷೆಯೂ ಇಲ್ಲದೆ ಮಾಡುತ್ತಿದ್ದೀಯೆ. ॥ ೫೫ ॥ ಯಾವಾಗಲೂ ನಿನ್ನ ವಿಷಯದಲ್ಲಿ ಪ್ರಸನ್ನನಾಗಿದ್ದೇನೆ, ಈಗಂತೂ ವಿಶೇಷವಾಗಿ ಪ್ರಸನ್ನನಾಗಿದ್ದೇನೆ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ಬಗೆಯ ಪುರುಷಾರ್ಥಗಳಲ್ಲಿ ಯಾವುದು ಬೇಕೋ ಅದನ್ನು ಕೇಳು. ॥ ೫೬ ॥

ಸೂತ ಉವಾಚ—

ಮಾಧವಸ್ಯ ವಚಃ ಶ್ರುತ್ವಾ ರುದ್ಧಕಂಠಾಶ್ರುಲೋಚನಃ ।
ಹೃಷ್ಟರೋಮಾ ಹೃಷಿಕೇಶಮುವಾಚ ಪುರತಸ್ಥಿತಃ ॥ ೫೭ ॥

ಸೂತರು ಹೇಳಿದರು—

ಮಾಧವನ ಈ ಮಾತುಗಳನ್ನು ಕೇಳಿದ ಧರ್ಮರಾಜನ ಕಂಠವು ಬಿಗಿದುಕೊಂಡಿತು ಮತ್ತು ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿಕೊಂಡಿತು. ಇಡೀ ಶರೀರವೇ ರೋಮಾಂಚನಗೊಂಡಿತು. ಪರಮಾತ್ಮನ ಎದುರಿಗೆ ನಿಂತು ಯಮಧರ್ಮನು ಹೇಳಿದನು. ॥ ೫೭ ॥

ಧರ್ಮರಾಜ ಉವಾಚ—

ನ ಜಾನೇ ಪದ್ಮಪತ್ರಾಕ್ಷ ತವ ಮಾಯಾವಿಜೃಂಭಿತಮ್ ।
ಕಿಮಾಶ್ಚರ್ಯಂ ಯಯಾ ದೇವ ಬ್ರಹ್ಮಾದ್ಯಾ ಮೋಹಿತಾಸ್ತ್ವಯಾ ॥ ೫೮ ॥
ಕಾಮಯೇ ಧರ್ಮಮರ್ಥಂ ವಾ ನ ಕಾಮಂ ಮೋಕ್ಷಮೇವ ಚ ।
ಯತ್ಕಾಮಯೇ ತದಾಪ್ತಂ ಮೇ ಯನ್ನ ಕೇನಾಪಿ ಲಭ್ಯತೇ ॥ ೫೯ ॥
ತಥಾಪ್ಯಸ್ಮಿಂಸ್ತವ ಕ್ಷೇತ್ರೇ ವಸತಿರ್ಮೇಽಸ್ತು ಮಾಧವ ।
ಯಯಾ ಸಕಲದುರ್ದರ್ಶಂ ಪಶ್ಯೇ ತ್ವಾ ಮಹಮಂಜಸಾ ॥ ೬೦ ॥
ಮಾಧವಸ್ತು ತಥೇತ್ಯುಕ್ತ್ವಾ ತತ್ರೈವಾಂತರ್ದಧೇ ವಿಭುಃ ।
ಗತ್ವಾ ಸಂತೋಷಯಾಮಾಸ ದೇವಾನಿಂದ್ರಪುರೋಗಮಾನ್ ॥ ೬೧ ॥
ಯಮೋಽಪಿ ಪ್ರತ್ಯಹಂ ಚಕ್ರೇ ಮಾಧವಸ್ಯೋಪದೇಶತಃ ।
ಕಿಂಚಿದ್ದಾನಂ ಸುಪಾತ್ರೇಭ್ಯಸ್ತ್ಯಕ್ತ್ವಾ ದಾನಾಂತರಂ ದ್ವಿಜಾಃ ॥ ೬೨ ॥

ತೇನ ದಾನೇನ ಧರ್ಮಾತ್ಮಾ ದಕ್ಷಿಣೇಶ್ವರತಾಂ ಗತಃ ।
ಸರ್ವೇಷಾಂ ದಂಡದಾತಾ ಚ ಜಾತೋ ಮಾಧವವಲ್ಲಭಃ ॥ ೬೩ ॥
ತಸ್ಮಾದತ್ರೈಕವರ್ಷಂ ಯೋ ಮಾಸಂ ಪಕ್ಷಮಥಾಪಿ ವಾ ।
ಅಶಕ್ತೌ ದಿನಮೇಕಂ ವಾ ಕಿಂಚಿದ್ದಾನಂ ಕರಿಷ್ಯತಿ ॥ ೬೪ ॥
ಸಫಲಾಸ್ತಸ್ಯ ವಿಜ್ಞೇಯಾಃ ಸ್ನಾನದಾನಾದಿಕಾಃ ಕ್ರಿಯಾಃ ।
ಬಹುನೋಕ್ತೇನ ಕಿಂಚಾತ್ರ, ಶೌನಕಾದ್ಯಾ ಮಹರ್ಷಯಃ ॥ ೬೫ ॥

॥ ಇತಿ ಅಷ್ಟಾದಶೋಽಧ್ಯಾಯಃ ॥

**ಧರ್ಮರಾಜನು ಹೇಳಿದನು—**

ಪದ್ಮದ ದಳದಂತೆ ಕಣ್ಣುಗಳುಳ್ಳ ಮಾಧವನೇ! ವಿಜೃಂಭಿಸುವ ನಿನ್ನ ಮಹಿಮೆಯನ್ನು ನಾನು ತಿಳಿಯಲಾರೆನು. ಬ್ರಹ್ಮಾದಿದೇವತೆಗಳೇ ನಿನ್ನ ಮಾಯೆಯಿಂದ ಮೋಹಿತರಾಗಿರುವಾಗ ಇದೇನು ಆಶ್ಚರ್ಯವಲ್ಲ. ॥ ೫೮ ॥ ನಾನು ಧರ್ಮವನ್ನಾಗಲೀ, ಅರ್ಥವನ್ನಾಗಲೀ, ಕಾಮವನ್ನಾಗಲೀ ಅಥವಾ ಮೋಕ್ಷವನ್ನೇ ಆಗಲಿ ಅಪೇಕ್ಷಿಸುವುದಿಲ್ಲ. ನಾನು ಏನನ್ನು ಬಯಸುತ್ತೇನೋ ಯಾವುದು ಯಾರಿಂದಲೂ ಹೊಂದಲ್ಪಡುವುದಿಲ್ಲವೋ ಅದು ನನಗೆ ಸಂದಿದೆ. ॥ ೫೯ ॥ ಹಾಗಿದ್ದರೂ ನಿನ್ನದಾದ ಪ್ರಯಾಗ ಕ್ಷೇತ್ರದಲ್ಲಿ ನನ್ನ ವಸತಿಯಿರಲೆಂದು ಕರುಣಿಸು. ಇದರಿಂದ ಕಷ್ಟಸಾಧ್ಯವಾದ ನಿನ್ನ ದರ್ಶನಭಾಗ್ಯವು ನಿರಂತರವೂ ನನಗೆ ಲಭ್ಯವಾಗಲು ಸಾಧ್ಯವು. ॥ ೬೦ ॥ ಶ್ರೀ ಮಾಧವನು ''ಹಾಗೆಯೇ ಆಗಲಿ'' ಎಂದು ಹೇಳಿ ಅಲ್ಲಿಂದ ಅಂತರ್ಧಾನನಾದನು. ಅಲ್ಲಿಂದ ಹೋಗಿ ಇಂದ್ರನೇ ಮೊದಲಾದವರುಗಳನ್ನು (ಅವರ ಭಯದ ಕಾರಣವನ್ನು ಪರಿಹರಿಸಿ) ಸಂತೋಷ ಪಡಿಸಿದನು. ॥ ೬೧ ॥ ಯಮರಾಜನು ಪ್ರತಿದಿವಸವೂ ಶ್ರೀಮಾಧವನ ಉಪದೇಶದಂತೆ ಬೇರೆಯೆಲ್ಲ ದಾನಗಳನ್ನು ಬಿಟ್ಟು, ಸತ್ಪಾತ್ರರಿಗೆ ಸ್ವಲ್ಪದಾನವನ್ನು ತಪ್ಪದೇ ಮಾಡುತ್ತ ಬಂದನು. ॥ ೬೨ ॥ ಆ ದಾನದ ಫಲವಾಗಿಯೇ ಧರ್ಮಾತ್ಮನಾದ ಈ ಯಮನು ದಕ್ಷಿಣ ದಿಕ್ಕಿಗೆ ದಿಕ್ಪಾಲಕನಾದನು. ಪ್ರಯಾಗದಲ್ಲೂ ದಕ್ಷಿಣದಿಕ್ಕಿನಲ್ಲಿದ್ದು ''ದಕ್ಷಿಣೇಶ್ವರ'' ನೆಂಬುದಾಗಿ ಕರೆಯಲ್ಪಟ್ಟನು, ಮತ್ತು ಶ್ರೀಮಾಧವನ ಕೃಪೆಯಿಂದ ಪಾಪಮಾಡಿದವರಿಗೆಲ್ಲಾ ಶಿಕ್ಷೆಮಾಡುವ ದೊಡ್ಡ ಅಧಿಕಾರವನ್ನು ಹೊಂದಿದ್ದಾನೆ. ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀಮಾಧವನಿಗೆ ಪ್ರಿಯನಾದ ಭಕ್ತನು ಆದನು. ॥ ೬೩ ॥ ಎಲೈ ಶೌನಕಾದಿ ಮುನಿವರ್ಯರೇ! ಈ ಕಾರಣದಿಂದಲೇ ತೀರ್ಥರಾಜನೆಂದೆನಿಸಿರುವ ಈ ಪ್ರಯಾಗದಲ್ಲಿ ಒಂದು ವರ್ಷ, ಅಥವಾ ಒಂದು ಮಾಸವಾಗಲೀ ಅಥವಾ ಒಂದು ಪಕ್ಷವಾಗಲೀ, ಅವಕಾಶ ಅಥವಾ ಶಕ್ತಿಯಿಲ್ಲದಿದ್ದರೆ ಕೊನೆಗೆ ಒಂದು ದಿನದ ಮಟ್ಟಿಗಾದರೂ ಇದ್ದು ''ಈ ಸ್ವಲ್ಪದಾನ'' ವಾದ ಎಂಟು ಮುಷ್ಟಿ ಧಾನ್ಯ ದಾನವನ್ನು ಯಾರು ಮಾಡುವರೋ ಅವರ ಸ್ನಾನ ದಾನಾದಿ ಎಲ್ಲಾ ಕ್ರಿಯೆಗಳೂ ಸಫಲವೆಂದು ತಿಳಿಯಬೇಕು. ಹೆಚ್ಚೇನು ಹೇಳತಕ್ಕದ್ದಿದೆ ? ॥ ೬೪-೬೫ ॥

॥ ಹದಿನೆಂಟನೆಯ ಅಧ್ಯಾಯವು ಸಮಾಪ್ತಿಯಾಯಿತು ॥

## ॥ ಅಥ ಏಕೋನವಿಂಶೋಽಧ್ಯಾಯಃ ॥ ೧೯ ॥

ಸೂತ ಉವಾಚ—

ಅಥಾತಃ ಸಂಪ್ರವಕ್ಷ್ಯಾಮಿ ನೈರ್ಋತೇಶಸ್ಯ ದಿಕ್ಪತೇಃ ।
ಸಿದ್ಧಿದಂ ಸರ್ವಲೋಕಾನಾಂ ವಿಕಿರಂ ಪುಣ್ಯಸಾಧನಮ್ ॥ ೧ ॥
ಆಶ್ರಮಾ ವಿವಿಧಾ ಯತ್ರ ಮುನೀನಾಮೂರ್ಧ್ವರೇತಸಾಮ್ ।
ಅಸಂಖ್ಯಾತಾನಿ ತೀರ್ಥಾನಿ ಸಂತಿ ದೇವಾ ಯಥಾ ತಥಾ ॥ ೨ ॥
ನಾನಾಪುಷ್ಪಫಲೋಪೇತಂ ನಾನಾವೃಕ್ಷಲತಾಶ್ರಯಮ್ ।
ನಾನಾಪಕ್ಷಿಸಮಾಜುಷ್ಟಂ ವನಂ ಯತ್ರ ವಿರಾಜತೇ ॥ ೩ ॥
ಯಸ್ಯ ವೈ ದಕ್ಷಿಣೇ ಭಾಗೇ ಪುಣ್ಯತೋಯಾ ಮಲಾಪಹಾ ।
ಸರ್ವಕಾಮಪ್ರದಾ ನೃಣಾಂ ಸೌರೀ ವಹತಿ ಸರ್ವದಾ ॥ ೪ ॥
ಅಕ್ಷಯ್ಯವಟಸುಚ್ಛಾಯಾ ಹರಿತೋಪಲಶೋಭಿತಾ ।
ಹರ್ಷದಾ ದೇವತಾದೀನಾಂ ನಿತ್ಯಂ ಯತ್ರ ಪ್ರಸರ್ಪತಿ ॥ ೫ ॥
ತತ್ಕ್ಷೇತ್ರಂ ವಿಕಿರಂ ನಾಮ ಕೀರ್ತನಾದಘನಾಶನಮ್ ।
ಕಿಂ ಪುನರ್ದರ್ಶನಸ್ನಾನಪಾನವಾಸೈಃ ಫಲಪ್ರದಮ್ ॥ ೬ ॥

### ॥ ಹತ್ತೊಂಬತ್ತನೆಯ ಅಧ್ಯಾಯವು ॥

ಸೂತರು ಹೇಳಿದರು—

ಇನ್ನು ನೈಋತ್ಯ ದಿಕ್ಪಾಲಕನಾದ ನಿರ್ಋತಿಯ ಆಶ್ರಮವಾದ ''ವಿಕಿರವೆಂಬ'' ಕ್ಷೇತ್ರದ ಬಗ್ಗೆ ಹೇಳುತ್ತೇನೆ. ಇದು ಎಲ್ಲ ಜನರಿಗೆ ಸಿದ್ಧಿಯನ್ನು ತಂದುಕೊಟ್ಟು ಪುಣ್ಯಸಾಧನೆ ಮಾಡಿಕೊಡತಕ್ಕದ್ದು. ॥ ೧ ॥ ಇಲ್ಲಿ ಎಣಿಸಲಾರದಷ್ಟು ಸಂಖ್ಯೆಯಲ್ಲಿ ಊರ್ಧ್ವರೇತಸ್ಕರಾದ ಮುನಿಗಳ ನಾನಾವಿಧ-ಗಳಾದ ಆಶ್ರಮಗಳು ಇವೆ. ದೇವತೆಗಳಿರುವಂತೆ ಇಲ್ಲಿ ಲೆಕ್ಕವಿಲ್ಲದಷ್ಟು ತೀರ್ಥಗಳು ಇವೆ. ॥ ೨ ॥ ಇಲ್ಲಿ ನಾನಾವಿಧವಾದ ಹೂ ಹಣ್ಣುಗಳಿಂದಲೂ, ಮರಬಳ್ಳಿಗಳಿಂದಲೂ ಮತ್ತು ಪಕ್ಷಿಗಳಿಂದಲೂ ಕಂಗೊಳಿಸುತ್ತಿರುವ ವನವಿದೆ. ॥ ೩ ॥ ಈ ಆಶ್ರಮದ ದಕ್ಷಿಣಭಾಗದಲ್ಲಿ ಪಾಪಪರಿಹಾರ ಮಾಡತಕ್ಕ ಮತ್ತು ಅಶುದ್ಧತೆಯನ್ನು ತೊಳೆಯತಕ್ಕ ಮನುಷ್ಯರ ಎಲ್ಲ ಅಭಿಲಾಷೆಗಳನ್ನು ಈಡೇರಿಸುವ ಸೂರ್ಯನ ಮಗಳಾದ ಯಮುನೆಯು ಸದಾಕಾಲದಲ್ಲಿಯೂ ಹರಿಯುತ್ತಿರುತ್ತಾಳೆ. ॥ ೪ ॥ ಈ ಕ್ಷೇತ್ರದಲ್ಲಿ ಪಚ್ಚೆಯ ಶಿಲೆಯಂತೆಯಿರುವ ಎಲೆಗಳುಳ್ಳ ಅಕ್ಷಯ ವಟವೃಕ್ಷವು ದೇವತೆಗಳಿಗೂ ಆನಂದವನ್ನುಂಟುಮಾಡುವಂತೆ ನೆರಳನ್ನು ಚೆಲ್ಲುತ್ತಾ ವ್ಯಾಪಿಸಿದೆ. ॥ ೫ ॥ ಈ ಕ್ಷೇತ್ರವೇ ''ವಿಕಿರಾ'' ಎಂಬುದು; ಇದರ ಹೆಸರು ಹೇಳುವುದರಿಂದಲೇ ಪಾಪಗಳು ಪರಿಹಾರವಾಗುವುವು. ಇನ್ನು ಇಲ್ಲಿದ್ದು ಸ್ನಾನ, ದರ್ಶನ, ಪಾನ ಮತ್ತು ವಾಸ ಇವುಗಳು ಸತ್ಫಲದಾಯಕಗಳೆಂದು ಹೇಳತಕ್ಕದ್ದು ಏನಿದೆ! ॥ ೬ ॥

ಋಷಯಃ ಊಚುಃ—

ಕಸ್ಮಾದ್ವಿಕಿರಸಂಜ್ಞಂ ತದಭೂತ್ಕ್ಷೇತ್ರಂ ಮಹಾಮತೇ ।
ಏತದಾಖ್ಯಾಹಿ ನಃ ಸರ್ವಂ ತ್ವದನ್ಯಃ ಕೋ ವದಿಷ್ಯತಿ ॥ ೭ ॥

**ಋಷಿಗಳು ಹೇಳಿದರು—**

ಈ ಕ್ಷೇತ್ರಕ್ಕೆ ''ವಿಕಿರ'' ಎಂಬ ಹೆಸರು ಏತಕ್ಕೆ ಬಂದಿತು ? ಈ ವಿಷಯವನ್ನು ತಮ್ಮನ್ನು ಬಿಟ್ಟು ಬೇರೆಯಾರು ತಾನೇ ಹೇಳಬಲ್ಲರು? ॥ ೭ ॥

**ಸೂತ ಉವಾಚ—**

ಶೃಣ್ವಂತು ಮುನಯಸ್ಸರ್ವೇ ವಿಕಿರಾಖ್ಯಾನಮದ್ಭುತಮ್ ।
ಯಸ್ಮಾತ್ತದ್ವಿಕಿರಂ ಜಾತಂ ಬ್ರುವೇಽಹಂ ತತ್ರ ಕಾರಣಮ್ ॥ ೮ ॥
ಗಂಗಾ ಯದಾ ಸಮಾಯಾತಾ ಪ್ರಯಾಗಕ್ಷೇತ್ರಮಂಡಲೇ ।
ಮಾರ್ಗ ದಾತುಂ ತದಾ ತಸ್ಯೈ ವಿಕೀರ್ಣಾ ಶತಧಾ ಯಮೀ ॥ ೯ ॥
ಅತಸ್ತದ್ವಿಕಿರಂ ನಾಮ ತೀರ್ಥಂ ಜಾತಂ ಮಲಾಪಹಂ ।
ಪುನರಪ್ಯಸ್ಯ ಮಾಹಾತ್ಮ್ಯಂ ವರ್ಣಯಿಷ್ಯೇ ಸವಿಸ್ತರಮ್ ॥ ೧೦ ॥
ಆರಬ್ಧೇ ಬ್ರಹ್ಮಣಾ ಯಜ್ಞೇ ಸಾಮಗ್ರೀ ಯಜ್ಞಕರ್ಮಣಃ ।
ವಿಕೀರ್ಣಾ ಪತಿತಾಸ್ತತ್ರ ತತೋಽಪಿ ವಿಕಿರಂ ಸ್ಮೃತಮ್ ॥ ೧೧ ॥
ತಸ್ಮಿನ್ನೇವಂವಿಧೇ ತೀರ್ಥೇ ನಿರ್ಋತಿಃ ಶ್ರದ್ಧಯಾನ್ವಿತಃ ।
ದೃಷ್ಟ್ವಾ ಪ್ರಯಾಗಮಾಹಾತ್ಮ್ಯಂ ಚಕ್ರೇ ಸ್ವಾಶ್ರಮಮುತ್ತಮಮ್ ॥ ೧೨ ॥
ಕಾಳಿಂದೀಪುಣ್ಯಪಾನೀಯೇ ಕೃತಸ್ನಾನಾದಿಸತ್ಕ್ರಿಯಃ ।
ಮಾಧವಂ ತೋಷಯಾಮಾಸ ಶ್ರಾದ್ಧಾದ್ಯೈಸ್ತತ್ರ ಸಂವಸನ್ ॥ ೧೩ ॥
ನಿತ್ಯಶ್ರಾದ್ಧಾನಿ ಕಾಮ್ಯಾನಿ ತಥಾ ನೈಮಿತ್ತಿಕಾನಿ ಚ ।
ಅಕರೋತ್ಸರ್ವದಾ ತತ್ರ ಮಾಧವಪ್ರೀತಯೇ ಪರಮ್ ॥ ೧೪ ॥
ನಿರ್ಋತೇಃ ಕರ್ಮಕೌಶಲ್ಯಂ ಸಭಕ್ತಿಂ ಪರಮಂ ತಥಾ ।
ದೃಷ್ಟ್ವಾ ಮಾಧವದೇವೋಽಪಿ ತದೀಯಾಶ್ರಮಮನ್ವಗಾತ್ ॥ ೧೫ ॥

**ಸೂತರು ಹೇಳುತ್ತಾರೆ—**

ಎಲೈ ಋಷಿಗಳಿರಾ! ವಿಕಿರಾಶ್ರಮದ ಕಥಾನಕವನ್ನು ಹೇಳುತ್ತೇನೆ. ಗಮನಿಸಿ ಕೇಳಿ: ಈ ಆಶ್ರಮಕ್ಕೆ ''ವಿಕಿರಾ'' ಎಂದು ಹೆಸರು ಬಂದುದಕ್ಕೆ ಕಾರಣವನ್ನು ಹೇಳುವೆನು. ॥ ೮ ॥ ಗಂಗಾನದಿಯು ಪ್ರಯಾಗ ಕ್ಷೇತ್ರಕ್ಕೆ ಹರಿದು ಬಂದಾಗ ಅದಕ್ಕೆ ದಾರಿಮಾಡಿಕೊಡಲು ಯಮುನಾ ನದಿಯು ನೂರು ಭಾಗವಾಗಿ ಒಡೆಯಿತು. (ವಿಕಿರಗೊಂಡಿತು, ಚದುರಿತು). ॥ ೯ ॥ ಅಲ್ಲಿಂದ ಈ ಆಶ್ರಮವು ವಿಕಿರಾ ಎಂದು ಹೆಸರುಳ್ಳ ಪಾಪಪರಿಹಾರಕ ತೀರ್ಥಕ್ಷೇತ್ರವಾಯಿತು. ಇದರ ಮಾಹಾತ್ಮ್ಯೆಯನ್ನು ಇನ್ನೂ ವಿಸ್ತಾರವಾಗಿ ವರ್ಣಿಸುವೆನು. ॥ ೧೦ ॥ ಈ ಕ್ಷೇತ್ರದಲ್ಲಿ ಆರಂಭದಲ್ಲಿ ಶ್ರೀಬ್ರಹ್ಮದೇವರು ಯಜ್ಞಮಾಡಿದಾಗ ಯಜ್ಞದ ಸಾಮಗ್ರಿಗಳೆಲ್ಲವೂ ಈ ಭಾಗದಲ್ಲಿ ಚೆಲ್ಲಾಪಿಲ್ಲಿ-ಯಾಗಿ ಹರಡಿದ್ದವು. ಆದರಿಂದಲೂ ''ವಿಕಿರ'' ಎಂದು ಜ್ಞಾಪಿಸಿಕೊಳ್ಳಲ್ಪಡುವುದು. ॥ ೧೧ ॥ ಈ ವಿಧವಾದ ಕ್ಷೇತ್ರದಲ್ಲಿ ನೈಋತ್ಯ ದಿಕ್ಪಾಲಕನಾದ ನಿರ್ಋತಿಯು ಪ್ರಯಾಗದ ಮಾಹಾತ್ಮ್ಯೆಯನ್ನು ತಿಳಿದು ಶ್ರದ್ಧೆ ಹುಟ್ಟಿ ಉತ್ತಮವಾದ ತನ್ನ ಆಶ್ರಮವನ್ನು ಕಟ್ಟಿದನು. ॥ ೧೨ ॥ ಅಲ್ಲಿ ವಾಸಮಾಡಿಕೊಂಡಿದ್ದು ಯಮುನೆಯ ಪುಣ್ಯಜಲದಲ್ಲಿ ಮಿಂದು ಜಪತಪಾದಿಗಳನ್ನು ಆಚರಿಸಿ

ವರ್ಷಗಟ್ಟಲೇ ಇದ್ದು ಶ್ರಾದ್ಧಾದಿಗಳಿಂದ ಶ್ರೀಮಾಧವನನ್ನು ಸಂತೋಷಗೊಳಿಸಿದನು. ॥ ೧೩ ॥ ನಿತ್ಯ ಮತ್ತು ಕಾಮ್ಯಗಳಾದ ಶ್ರಾದ್ಧಗಳನ್ನೂ ಹಾಗೆಯೇ ನೈಮಿತ್ತಿಕ ಶ್ರಾದ್ಧಗಳನ್ನೂ ಅಲ್ಲಿದ್ದು ಯಾವಾಗಲೂ ಮಾಡಿಕೊಂಡೇ ಇದ್ದನು. ॥ ೧೪ ॥ ಆ ನಿರ್ಋತಿಯು ಮಾಡುತ್ತಿದ್ದ ಶ್ರಾದ್ಧಾದಿಗಳ ಕರ್ಮಗಳ ಕುಶಲತೆಗೂ ಅವನ ಭಕ್ತಿಗೂ ಸಂತುಷ್ಟನಾದ ಶ್ರೀಮಾಧವನು ಅವನ ಆಶ್ರಮಕ್ಕೆ ಬಂದನು. ॥ ೧೫ ॥

**ಭಸ್ಮೋದ್ಧೂಲಿತಸರ್ವಾಂಗಃ ಕರ್ಪೂರನಿಚಯೋಪಮಃ ।**
**ಸ್ಫುರತ್ಸೌದಾಮಿನೀಭಾಸೋ ದಧಾನಶ್ಶಿರಸಾ ಜಟಾಃ ॥ ೧೬ ॥**
**ಕುಟಿಲಭ್ರುಕುಟೀ ಕ್ರೂರಃ ಕ್ಷತಜಾರುಣಲೋಚನಃ ।**
**ಲಿಕುಡಾಲಾವುಸಂಯುಕ್ತಸ್ತೇಜಸಾ ಭಾಸ್ಕರೋಪಮಃ ॥ ೧೭ ॥**
**ಶುನಾಂ ಗಣೈರ್ಪರಿವೃತಃ ಕಂದರ್ಪಹೃತಭೂಷಣಃ ।**
**ನಗ್ನಃ ಪ್ರಮತ್ತಸಲ್ಲಾಪೀ ಪಶ್ಯತಾಂ ಭಯವರ್ಧನಃ ॥ ೧೮ ॥**
**ಬ್ರಾಹ್ಮಣೇಷೂಪವಿಷ್ಟೇಷು ಪ್ರಾರಬ್ಧೇ ಶ್ರಾದ್ಧಕರ್ಮಣಿ ।**
**ಈದೃಗ್ರೂಪೋಽನುಗ್ರಹಾರ್ಥಂ ತಸ್ಥೌ ತದ್ದ್ವಾರಮಾವೃಣನ್ ॥ ೧೯ ॥**
**ದದೌ ನ ಗಂತುಮಾಗಂತುಂ ಭುವಿಜಾನು ನಿಪಾತ್ಯ ಚ ।**
**ದೇಹ್ಯನ್ನಂ ಮಮ ದೇಹ್ಯನ್ನಂ ದೇಹ್ಯನ್ನಮಿತಿ ಚಾಬ್ರವೀತ್ ॥ ೨೦ ॥**
**ದೃಷ್ಟ್ವಾ ತಂ ನಿರ್ಋತಿಶ್ಶೀಘ್ರಮಗಾದ್ದ್ವಾರಂ ಸಸಾಧ್ವಸಃ ।**
**ತಮವೋಚತ್ಕಿಮೇತತ್ತೇ ಕರ್ಮ ಲೋಕೋಪತಾಪಕಮ್ ॥ ೨೧ ॥**
**ಅವಧೂತೋಽಪಿ ವಿಪ್ರೇಂದ್ರಾಃ ಶ್ರುತ್ವಾ ನಿರ್ಋತಿಭಾಷಿತಂ ।**
**ಜಗಾದ ವಚನಂ ಸತ್ಯಂ ಕರಮುದ್ಯಮ್ಯ ಸನ್ಮುಖಮ್ ॥ ೨೨ ॥**

ಮೈಗೆಲ್ಲಾ ವಿಭೂತಿಯನ್ನು ಹಚ್ಚಿಕೊಂಡು ಕರ್ಪೂರದ ರಾಶಿಯಂತೆ ಕಾಣುತ್ತಿದ್ದನು. ತಲೆಯಲ್ಲಿ ಜಟೆಯನ್ನು ಹೊಂದಿ ಪ್ರಕಾಶಮಾನ ಮಿಂಚಿನಂತೆ ಇದ್ದನು. ॥ ೧೬ ॥ ಅವನ ಹುಬ್ಬುಗಳೆರಡು ವಕ್ರವಾಗಿದ್ದವು. ರಕ್ತದಂತೆ ಕಣ್ಣುಗಳು ಕೆಂಪಗಿದ್ದವು. ಕೋಲನ್ನು ಹಿಡಿದಿದ್ದನು ಮತ್ತು ಭಾಸ್ಕರನಂತೆ ತೇಜೋಮಯನಾಗಿದ್ದನು. ॥ ೧೭ ॥ ನಾಯಿಗಳ ಗುಂಪಿನಿಂದ ಸುತ್ತು-ವರಿಯಲ್ಪಟ್ಟಿದ್ದನು. ಮನ್ಮಥನಿಂದ ಅಪಹರಿಸಲ್ಪಟ್ಟ ಆಭರಣಗಳುಳ್ಳವನಾಗಿದ್ದನು. ಬರಿಬತ್ತಲೆ-ಯಿದ್ದು ಹುಚ್ಚನಂತೆ ಮಾತನಾಡುತ್ತಿದ್ದನು ಮತ್ತು ನೋಡುವವರಿಗೆ ಭಯಂಕರನಾಗಿದ್ದನು. ॥೧೮॥ ಶ್ರಾದ್ಧಕರ್ಮವು ಪ್ರಾರಂಭವಾಗಿ ಬ್ರಾಹ್ಮಣರುಗಳನ್ನು ಕೂಡಿಸುತ್ತಿರುವಾಗ ಸರಿಯಾಗಿ ಮಾಧವನು ಈ ವಿಧದ ಅವಧೂತ ರೂಪವನ್ನು ತಾಳಿ ನಿರ್ಋತಿಯ ಅನುಗ್ರಹಕ್ಕಾಗಿಯೇ ಬಾಗಿಲನ್ನು ಅಡ್ಡಕಟ್ಟಿಕೊಂಡು ಅಲ್ಲಿ ನಿಂತನು. ॥ ೧೯ ॥ ಇದಲ್ಲದೆ ಮೊಳಕಾಲನ್ನೂರಿ ಕುಳಿತು-ಕೊಂಡು ಹೋಗಿಬರುವವರನ್ನು ತಡೆದು "ನನಗೆ ಅನ್ನವನ್ನು ಕೊಡಿ, ಅನ್ನವನ್ನು ಕೊಡಿ, ಅನ್ನವನ್ನು ಕೊಡಿ" ಎಂದು ಕೂಗುತ್ತಿದ್ದನು. ॥ ೨೦ ॥ ಅವನನ್ನು ನೋಡಿ ನಿರ್ಋತಿಯು ಬಾಗಿಲಿಗೆ ಓಡಿ ಬಂದು ಹೆದರಿ ಅವನನ್ನು ಕುರಿತು "ಏನಪ್ಪಾ ನಿನ್ನ ಈ ವ್ಯಾಪಾರ, ಇದು ಶ್ರಾದ್ಧಕ್ಕೆ ಕುಳಿತಿರು-ವವರಿಗೆಲ್ಲಾ ಉಪದ್ರವವನ್ನುಂಟುಮಾಡುತ್ತಿದೆ" ಎಂದು ಕೇಳಿದನು. ॥ ೨೧ ॥ ಎಲೈ ಶೌನಕಾದಿ ಬ್ರಾಹ್ಮಣೋತ್ತಮರೇ! ಆ ಅವಧೂತಮನುಷ್ಯನು ನಿರ್ಋತಿಯ ಮಾತನ್ನು ಕೇಳಿದವನಾಗಿ ಅವನ

ಮುಖವನ್ನೇ ನೋಡುತ್ತ ಕೈಮುಗಿದು ಸತ್ಯವೇ ಆಗಿದ್ದ ಈ ಮಾತನ್ನು ಹೇಳಿದನು. ॥೨೨॥

**ಅವಧೂತ ಉವಾಚ—**

ನಿರ್ಋತೇ ! ಶೃಣು ಮೇ ವಾಚಮಹಂ ಕಂಚಿನ್ನ ತಾಪಯೇ ।
ಬುಭುಕ್ಷಿತೋಽಹಂ ಸುಸ್ವಾದು ದೇಹ್ಯನ್ನಂ ಮಮ ಪಾಚಿತಮ್ ॥ ೨೩ ॥
ಮತ್ತೋಽಪ್ಯಧಿಕಮೇತೇ ವೈ ಶ್ವಾನಸ್ಸರ್ವೇ ಬುಭುಕ್ಷಿತಾಃ ।
ತೇ ಚಾಹಂ ಚ ಪರಾಂ ತೃಪ್ತಿಂ ಗಮಿಷ್ಯಾಮಸ್ತ್ವದಂಧಸಾ ॥ ೨೪ ॥
ತೇನ ತೇ ವಿಪುಲಂ ಪುಣ್ಯಂ ಭವಿಷ್ಯತಿ ನ ಸಂಶಯಃ ।
ಮಾ ಕುರುಷ್ವಾತ್ರ ಸಂದೇಹಂ ಸಂದೇಹಾತ್ಮಾ ವಿನಶ್ಯತಿ ॥ ೨೫ ॥
ಇತಿ ತನ್ನಿಗ್ರಹಂ ದೃಷ್ಟ್ವಾ ದ್ವಿಜಾನೂಚೇಽಥ ನಿರ್ಋತಿಃ ।
ವದಂತು ಬ್ರಾಹ್ಮಣಾಸ್ಸರ್ವೇ ಕಿಂ ಕರ್ತವ್ಯಂ ಮಯಾಧುನಾ ॥ ೨೬ ॥

**ಅವಧೂತನು ಹೇಳಿದನು—**

ನಿರ್ಋತಿ ! ನನ್ನ ಮಾತನ್ನು ಕೇಳು. ನಾನ್ಯಾರಿಗೂ ತಾಪವನ್ನುಂಟುಮಾಡುವುದಿಲ್ಲ. ನನಗೆ ಹಸಿವಾಗಿದೆ. ಬೆಂದಿರುವ ರುಚಿಯಾದ ಅನ್ನವನ್ನು ತಿನ್ನಲು ಕೊಡು. ॥ ೨೩ ॥ ನನಗಿಂತಲೂ ಹೆಚ್ಚಾಗಿ ಈ ಎಲ್ಲಾ ನಾಯಿಗಳು ಹಸಿದಿವೆ. ಅವುಗಳೂ ನಾನೂ ನಿನ್ನ ಅನ್ನದಿಂದ ಬಹಳ ತೃಪ್ತಿ ಹೊಂದುವೆವು. ॥ ೨೪ ॥ ಇದರಿಂದ ನಿನಗೆ ಬಹಳ ಪುಣ್ಯವು ಬರುವುದು. ಸಂದೇಹವುಳ್ಳ ಮನಸ್ಸುಳ್ಳವನು ನಾಶವಾಗುವನು. ಆದ್ದರಿಂದ ನೀನು ಈ ವಿಷಯದಲ್ಲಿ ಏನೂ ಅನುಮಾನ ಪಡಬೇಡ. ॥ ೨೫ ॥ ಈ ರೀತಿಯಾಗಿ ಆ ಅವಧೂತನು ಮಾಡುತ್ತಿರುವ ಆಗ್ರಹವನ್ನು ನೋಡಿ ನಿರ್ಋತಿಯು ಬ್ರಾಹ್ಮಣರುಗಳನ್ನು "ನಾನು ಈ ಪರಿಸ್ಥಿತಿಯಲ್ಲಿ ಏನನ್ನು ಮಾಡಬೇಕೆಂಬುದನ್ನು ನೀವೆಲ್ಲರೂ ಸೇರಿ ಹೇಳಿರಿ" ಎಂದು ಪ್ರಾರ್ಥಿಸಿದನು. ॥ ೨೬ ॥

**ಬ್ರಾಹ್ಮಣಾ ಊಚುಃ—**

ನಿರ್ಋತೇ ಕರ್ಮನಿಷ್ಣಾತ ! ತ್ವಂ ವೇತ್ಸಿ ಸಕಲಂ ವಿಧಿಮ್ ।
ಪಾಖಂಡಿನೇ ಕಥಂ ದೇಯಂ ಅಸಮಾಪ್ತೇ ಸ್ವಕರ್ಮಣಿ ॥ ೨೭ ॥
ಅಸಿಧಾರಾಸಮಃ ಪ್ರೋಕ್ತಃ ಕರ್ಮಮಾರ್ಗೋ ಮನೀಷಿಭಿಃ ।
ಅನ್ಯಥಾಕರಣಾದಾಶು ನರಃ ಪತನಮೃಚ್ಛತಿ ॥ ೨೮ ॥
ಶ್ರಾದ್ಧೋತ್ತರಂ ಪ್ರದಾತವ್ಯಂ ಭಿಕ್ಷವೇಽನ್ನಂ ನ ಪೂರ್ವತಃ ।
ಸರ್ವೇಷು ಧರ್ಮಶಾಸ್ತ್ರೇಷು ಡಿಂಡಿಮೋಽಯಂ ವಿರಾಜತೇ ॥ ೨೯ ॥
ಸರ್ವಥಾ ನಿಗ್ರಹೋಽಸ್ಮಾಕಂ ನಾಸ್ತಿ ತೇಽಧ್ವಾ ಪ್ರದರ್ಶಿತಃ ।
ಇದಾನೀಮುಚಿತಂ ದೃಷ್ಟ್ವಾ ಯಥೇಚ್ಛಸಿ ತಥಾ ಕುರು ॥ ೩೦ ॥

**ಬ್ರಾಹ್ಮಣರುಗಳು ಹೇಳಿದರು—**

ನಿರ್ಋತಿಯೇ! ನೀನು ಕರ್ಮಾಚರಣೆಯಲ್ಲಿ ಎಲ್ಲವನ್ನೂ ತಿಳಿದವನು. ನಿನ್ನ ಕರ್ಮವು ಮುಗಿಯದೇ ಇರುವಾಗ ಈ ಪಾಖಂಡಿಗೆ ಹೇಗೆ ಕೊಡಲು ಬರುವುದು ? ॥ ೨೭ ॥

ವಿದ್ವಾಂಸರಿಂದ, ಕರ್ಮಮಾರ್ಗವು ಕತ್ತಿಯ ಅಲುಗಿನ ಮೇಲೆ ನಡೆಯುವಂತೆ ಅತಿ ಸೂಕ್ಷ್ಮವಾದುದು ಎಂದು ಹೇಳಲ್ಪಟ್ಟಿದೆ. ಶಾಸ್ತ್ರದ ಹಾದಿಯನ್ನು ಬಿಟ್ಟು ಬೇರೆಯಾಗಿ ವರ್ತಿಸಿದರೆ ಮನುಷ್ಯನು ಪತನವನ್ನು ಜಾಗ್ರತೆಯಾಗಿ ಹೊಂದುವನು. ॥ ೨೮ ॥ ಶ್ರಾದ್ಧವಾದ ನಂತರ ಭಿಕ್ಷುವಿಗೆ ಅನ್ನವನ್ನು ಕೊಡತಕ್ಕದ್ದು ; ಮೊದಲೇ ಅಲ್ಲ. ಈ ಬಗ್ಗೆ ಎಲ್ಲ ಶಾಸ್ತ್ರಗಳಲ್ಲಿಯೂ ನಗಾರಿ ಬಾರಿಸಿದಂತೆ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ॥ ೨೯ ॥ ಎಲ್ಲ ರೀತಿಯಲ್ಲಿಯೂ ನಮಗೆ ಆಗ್ರಹವು ಈ ಅನ್ನದಾನಕ್ಕೆ ಇಲ್ಲ. ನಿನಗೆ ದಾರಿಯನ್ನು ತೋರಿಸಿದ್ದೇವೆ. ಈಗ ನೀನೇ ಯೋಚಿಸಿ ಯಾವುದು ಉಚಿತವೋ ಅದನ್ನು ಮಾಡು. ॥ ೩೦ ॥

**ಅವಧೂತಮಥೋವಾಚ ನಿರ್ಋತಿಃ ಕರ್ಮಲಾಲಸಃ ।**
**ಶ್ರಾದ್ಧೋತ್ತರಂ ಪ್ರದಾಸ್ಯಾಮಿ ಸರ್ವಾನ್ನಂ ಸ್ವೀಯತಾಂ ತ್ವಯಾ ॥ ೩೧ ॥**
**ಇತಿ ತದ್ವಾಚಮಾಕರ್ಣ್ಯ ಪುನರಪ್ಯಾಹ ಭಿಕ್ಷುಕಃ ।**
**ನ ಚ ಶಕ್ನೋಮ್ಯವಸ್ಥಾತುಂ ಯಾವತ್ತ್ವಂ ಪರಿಭಾಷಸೇ ॥ ೩೨ ॥**
**ಕ್ಷುಧಾ ಮಾಂ ಬಾಧತೇಽತ್ಯರ್ಥಮೇತಾನಪಿ ತತೋಽಧಿಕಮ್ ।**
**ಕ್ಷುಧಾರ್ತಾನಾಂ ದೇಹಿ ನೋಽನ್ನಂ ಪ್ರಾಣಾನ್‌ರಕ್ಷಬುಭುಕ್ಷಿತಾನ್ ॥ ೩೩ ॥**
**ಭಗವಾನ್‌ಮಾಧವೋ ದೇವೋ ವಾಸುದೇವೋ ಜನಾರ್ದನಃ ।**
**ಶುನಿ ವಿಪ್ರೇ ಶ್ವಪಾಕೇ ಚ ಸಮರೂಪೇಣ ವರ್ತತೇ ॥ ೩೪ ॥**
**ಆಬ್ರಹ್ಮಸ್ತಂಬಪರ್ಯಂತಂ ಜಗತ್ಯಸ್ಮಿನ್ ಚರಾಚರೇ ।**
**ಏಕೋ ವಸತಿ ವೈ ದೇವಃ ಪರಮಾತ್ಮಾ ಸನಾತನಃ ॥ ೩೫ ॥**
**ತಸ್ಮಾದನ್ನಪ್ರದಾನೇನ ಪ್ರಾಣಾನ್ನಸ್ತರ್ಪಯಾಧುನಾ ।**
**ಮಾ ಕೃಥಾ ಭೇದಬುದ್ಧಿಂ ಚ ಮಾ ಭೂಃ ಕರ್ಮಶಠೋ ಭವಾನ್ ॥ ೩೬ ॥**
**ಪುನರೇವಂ ವಚಃ ಶ್ರುತ್ವಾ ಪಕ್ವಾನ್ನಂ ಭಾಜನಾಂತರೇ ।**
**ಕರ್ಮಸಂಕಟಮಾಪನ್ನೋಽಭಕ್ತ್ಯಾಽದಾದಥ ನಿರ್ಋತಿಃ ॥ ೩೭ ॥**
**ಅಶ್ರದ್ಧಯಾ ಸಮಾನೀತಂ ತದನ್ನಂ ಕೃಮಿರೂಪತಾಮ್ ।**
**ಗತಂ ದೃಷ್ಟ್ವಾವಧೂತೋಽಥ ತಮೂಚೇ ಕ್ಷುತ್ಪ್ರಪೀಡಿತಃ ॥ ೩೮ ॥**

ಅನಂತರ ಕರ್ಮದಲ್ಲಿಯೇ ಆಸಕ್ತಿಯುಳ್ಳ ನಿರ್ಋತಿಯು ಅವಧೂತನನ್ನು ಕುರಿತು ಹೇಳಿದನು. ''ಶ್ರಾದ್ಧವು ಮುಗಿದ ಮೇಲೆ ಅನ್ನವನ್ನು ಕೊಡುವೆನು. ಎಲ್ಲ ಅನ್ನವೂ ನಿನ್ನಿಂದ ಸ್ವೀಕರಿಸಲ್ಪಡಲಿ''. ॥ ೩೧ ॥ ಆ ಮಾತನ್ನು ಕೇಳಿದ ಅವಧೂತನು ಪುನಃ ಹೇಳಿದನು. ಹಸಿವೆಯು ನನ್ನನ್ನು ಬಾಧಿಸುತ್ತಿದೆ ನೀನು ಹೇಳುವವರೆಗೆ ತಡೆದುಕೊಳ್ಳಲು ಶಕ್ತನಲ್ಲ. ॥ ೩೨ ॥ ಹಸಿವೆಯು ನನಗಿಂತ ಹೆಚ್ಚಿಗೆ ನಾಯಿಗಳನ್ನು ಬಾಧಿಸುತ್ತಿದೆ. ಹಸಿವಿನಿಂದ ಕಂಗೆಟ್ಟಿರುವ ನಮ್ಮಗಳಿಗೆ ಅನ್ನವನ್ನು ಕೊಟ್ಟು ನಮ್ಮಗಳ ಪ್ರಾಣಗಳನ್ನು ಉಳಿಸು. ॥ ೩೩ ॥ ಸರ್ವಭೂತಗಳಲ್ಲಿ ನಿವಾಸವುಳ್ಳ, ಜೀವಿಗಳ ಸಂಸಾರಬಂಧವನ್ನು ನಿವಾರಣೆ ಮಾಡತಕ್ಕ ವಾಸುದೇವ ಮತ್ತು ಜನಾರ್ದನನೆಸಿಕೊಂಡಿರುವ ಮಾಧವ ದೇವನು ವಿದ್ವಾಂಸರಲ್ಲಿರುವಂತೆ ನಾಯಿಗಳಲ್ಲಿಯೂ ಮತ್ತು ಮಾಂಸಬೇಯಿಸುವ ಚಂಡಾಲನಲ್ಲಿಯೂ ಒಂದೇ ಸಮನಾಗಿ ತನ್ನ ಗುಣಗಳ ಸಂಪೂರ್ಣತೆಯಿಂದ ಇರುತ್ತಾನೆ.

॥ ೩೪ ॥ ಬ್ರಹ್ಮದೇವರಿಂದ ಪ್ರಾರಂಭಿಸಿ ಹುಲ್ಲಿನವರೆಗಿನ ಸಮಸ್ತವಸ್ತುಗಳಲ್ಲಿಯೂ ಚರಾಚರ-ಗಳಲ್ಲಿಯೂ ಅವನು ಒಬ್ಬನೇ ಮುಖ್ಯವಾಗಿರುವವನು. ಅವನೇ ಸನಾತನನಾದ ಸರ್ವೋತ್ತಮ-ನಾದ ಮುಖ್ಯತತ್ವನು. ॥ ೩೫ ॥ ಇಂತಹ ಮಾಧವನು ನಮ್ಮಲ್ಲಿಯೂ ಇರುವನು. ನಮ್ಮಗಳನ್ನು ತೃಪ್ತಿಪಡಿಸು. ಈ ಪ್ರಾಣಿಗಳನ್ನು ಭೇದಬುದ್ಧಿಯಿಂದ ನೋಡಬೇಡ. ಕೇವಲ ಕರ್ಮಕ್ಕೇ ಗಂಟುಬಿದ್ದು ಕರ್ಮಶಠನಾಗಬೇಡ. ॥ ೩೬ ॥ ಪುನಃ ಈ ಮಾತನ್ನು ಕೇಳಿದ ನಿರ್ಋತಿಯು ಕರ್ಮಸಂಕಟಕ್ಕೊಳಪಟ್ಟು ಚೆನ್ನಾಗಿ ತಯಾರಿಸಿದ ಪಕ್ವಾನ್ನವನ್ನು ಪಾತ್ರಾಂತರದಲ್ಲಿ ಅಭಕ್ತಿಯಿಂದ ಅವರಿಗೆ ಕೊಟ್ಟನು. ॥ ೩೭ ॥ ಶ್ರದ್ಧೆಯಿಲ್ಲದೆ ಕೊಡಲ್ಪಟ್ಟ ಆ ಅನ್ನವು ಕ್ರಿಮಿಗಳ ರೂಪದಲ್ಲಿದ್ದವು. ಹಸಿವಿನಿಂದ ಪೀಡಿತನಾಗಿದ್ದ ಆ ಭಿಕ್ಷುವು ಅದನ್ನು ನೋಡಿ ನಿರ್ಋತಿಯನ್ನು ಕುರಿತು ಪುನಃ ಹೇಳಿದನು. ॥ ೩೮ ॥

**ಅವಧೂತ ಉವಾಚ—**

> **ಕಿಂ ಮಹ್ಯಮಿದಮಾನೀತಂ ಕೃಮಿಭಾಂಡಮಮಂಗಲಮ್ ।**
> **ಜೀವಾನಾಂ ಜೀವನಂ ದತ್ವಾ ವಿದೇಹಿ ಪಿತೃತರ್ಪಣಂ ॥ ೩೯ ॥**

**ಅವಧೂತನು ಹೇಳಿದನು—**

ಕ್ರಿಮಿಗಳಿಂದ ತುಂಬಿದ ಈ ಪಾತ್ರೆಗಳನ್ನೇಕೆ ತಂದಿದ್ದೀಯೆ. ಈ ಜೀವಿಗಳಿಗೆ ಆಹಾರವನ್ನು ಕೊಟ್ಟು ಆ ಮೂಲಕ ಪಿತೃಶ್ರಾದ್ಧವನ್ನು ಮಾಡಿ ಮುಗಿಸಿ ಅನಂತರ ಶ್ರಾದ್ಧವಾದ ಮೇಲೆ ಮಾಡತಕ್ಕ ಪಿತೃತರ್ಪಣವನ್ನು ಮಾಡು. (ಅಂದರೆ ಇವರುಗಳು ಭೋಜನಮಾಡಿದ್ದರಿಂದ ಶ್ರಾದ್ಧ ಭೋಜನಾದಿಗಳಾದಂತೆಯೇ ಸರಿ ಎಂಬ ಅಭಿಪ್ರಾಯದಿಂದ ಮಾಧವನು ಈ ರೀತಿ ಹೇಳಿದನು). ॥ ೩೯ ॥

**ಸೂತ ಉವಾಚ—**

> **ನಿರ್ಋತಿರ್ನ ತಥಾ ಚಕ್ರೇ ಕರ್ಮಪಾಶನಿಯಂತ್ರಿತಃ ।**
> **ಭಿಕ್ಷುಕೋಽಪಿ ಗತಾಶಸ್ಸನ್ ತತೋ ಯಾತಃ ಸ್ಥಲಾಂತರಮ್ ॥ ೪೦ ॥**
> **ತತೋ ನಿರ್ಋತಿರಾಚಮ್ಯ ಪ್ರಾಣಾನಾಯಮ್ಯ ವಾಗ್ಯತಃ ।**
> **ಈಶ್ವರಂ ಮನಸಾ ಧ್ಯಾತ್ವಾ ಶ್ರಾದ್ಧಯಜ್ಞಂ ಸಮಾರಭತ್ ॥ ೪೧ ॥**
> **ಪರಿವೇಷಣಪರ್ಯಂತಂ ಕೃತ್ವಾ ಕರ್ಮ ಯಥಾವಿಧಿ ।**
> **ಪರಿವೇಷಣಕಾಲೇ ತು ಸರ್ವಾನ್ನಂ ಕ್ರಿಮಯೋಽಭವನ್ ॥ ೪೨ ॥**
> **ದೃಷ್ಟ್ವಾ ತನ್ಮಹದಾಶ್ಚರ್ಯಂ ಪುನಃ ಪಾಕಂ ಚಕಾರ ಸಃ ।**
> **ತಸ್ಮಿನ್ನಪಿ ಪುನಃ ಪಾಕೇ ಕೃಮಯೋ ಬಹವೋಽಭವನ್ ॥ ೪೩ ॥**
> **ಪುನಃ ಪುನಸ್ತಥಾ ಚಕ್ರೇ ತೇಽಪಿ ಜಾತಾಃ ಪುನಃ ಪುನಃ ।**
> **ತತೋಽತಿದುಃಖೀ ನಿರ್ಋತಿಃ ಶೋಕಮೋಹವಶಂ ಗತಃ ॥ ೪೪ ॥**
> **ಕಿಂ ಕರ್ತವ್ಯಂ ಮಯಾ ವಿಪ್ರಾಃ ಶ್ರಾದ್ಧನಾಶ ಉಪಸ್ಥಿತಃ ।**
> **ಕಥಂ ವಾ ಕಸ್ಯ ವಾ ಹೇತೋರೀದೃಶಂ ಬತ ಜಾಯತೇ ॥ ೪೫ ॥**

ಪ್ರಾಯಃ ಫಲಮಿದಂ ಜಾತಮವಧೂತತಿರಸ್ಕೃತೇಃ ।
ಮಯಾ ಕರ್ಮಶತೇನಾಶು ಮಾಧವೋಽಯಂ ನಿರಾಕೃತಃ ॥ ೪೬ ॥
ಇದಾನೀಂ ತಂ ಯದಾ ದ್ರಕ್ಷ್ಯೇ ತದಾ ಭೋಕ್ಷ್ಯೇ ನ ಚಾನ್ಯಥಾ ।
ತೂಷ್ಣೀಮಿವ ಸ್ಥಿತೋ ವಿಪ್ರಾ! ಕೃತ್ವೈವಂ ದೃಢನಿಶ್ಚಯಮ್ ॥ ೪೭ ॥
ಕೃಪಾಲುರ್ಮಾಧವಶ್ಚಾಥ ಜ್ಞಾತ್ವಾ ತನ್ನಿಶ್ಚಯಂ ದೃಢಮ್ ।
ಪುನಸ್ತೇನೈವ ರೂಪೇಣ ಗತ್ವಾ ತದ್ದ್ವಾರ್ಯಯಾಚತ ॥ ೪೮ ॥

**ಸೂತರು ಹೇಳಿದರು—**

ಕರ್ಮಾಚರಣೆಯ ದೀಕ್ಷೆಯೆಂಬ ಹಗ್ಗದಿಂದ ಬಿಗಿಯಲ್ಪಟ್ಟಿದ್ದ ನಿರ್ಋತಿಯು ಆ ಭಿಕ್ಷುಕನು ಹೇಳಿದಂತೆ ಮಾಡಲಿಲ್ಲ. ಭಿಕ್ಷುಕನೂ ಕೂಡ ಹತಾಶನಾಗಿ ಅಲ್ಲಿಂದ ಬೇರೆಡೆಗೆ ತೆರಳಿದನು. ॥೪೦॥ ಆಮೇಲೆ ನಿರ್ಋತಿಯು ಆಚಮನ ಪ್ರಾಣಾಯಾಮ ಮಾಡಿ ಈಶ್ವರನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತಾ ಶ್ರಾದ್ಧವೆಂಬ ಯಜ್ಞವನ್ನು ಮಾಡಲುಪಕ್ರಮಿಸಿದನು. ॥ ೪೧ ॥ ಎಲ್ಲಾ ಕರ್ಮಗಳನ್ನು ವಿಧಿವತ್ತಾಗಿ ಮಾಡಿ ಪರಿವೇಕ್ಷಣದವರೆಗೆ ಬಂದನು. ಆಗ (ಅನ್ನವನ್ನು ಸಮರ್ಪಣ ಮಾಡಿ ಬಡಿಸುವ ಕಾಲ) ಎಲ್ಲ ಅನ್ನವೂ ಕ್ರಿಮಿಮಯವಾಯಿತು. ॥ ೪೨ ॥ ಮಹದಾಶ್ಚರ್ಯಕರವಾದ ಇದನ್ನು ನೋಡಿ ಪುನಃ ನಿರ್ಋತಿಯು ಅಡಿಗೆಯನ್ನು ಮಾಡಿಸಿದನು. ಆ ಅಡಿಗೆಯಲ್ಲಿಯೂ ಬಹಳಷ್ಟು ಕ್ರಿಮಿಗಳು ಕಂಡುಬಂದವು. ॥ ೪೩ ॥ ಹೀಗೆಯೇ ಪುನಃ ಪುನಃ ಅಡಿಗೆಯನ್ನು ಮಾಡಿಸಿದನು. ಪುನಃ ಹಾಗೆಯೇ ಅಡಿಗೆಗಳೆಲ್ಲವೂ ಕ್ರಿಮಿಮಯವಾಯಿತು. ಆಗ ನಿರ್ಋತಿಯು ಅತಿಯಾಗಿ ದುಃಖಗೊಂಡು ಶೋಕಮೋಹಗಳಿಗೆ ವಶನಾದನು. ॥ ೪೪ ॥ ಹೇ ವಿಪ್ರರೇ ! ನಾನು ಈಗ ಏನು ಮಾಡಬೇಕು. ಶ್ರಾದ್ಧದ ನಾಶವು ಸಮೀಪಿಸಿತು. ಹೇಗೋ, ಯಾವ ಕಾರಣದಿಂದಲೋ ಏನೋ ಇಂಥಾ ಪರಿಸ್ಥಿತಿಯು ಬಂದಿತು. ಬಹುಶಃ ನಾನು ಅವಧೂತನನ್ನು ತಿರಸ್ಕಾರ ಮಾಡಿದ್ದರಿಂದಲೇ ಹೀಗಾಗಿದೆ. ಕರ್ಮಕ್ಕೇ ಬದ್ಧನಾಗಿ ಭಿಕ್ಷುಕರೂಪಿಯಾದ ಮಾಧವನನ್ನು ನಾನು ತಿರಸ್ಕಾರ ಮಾಡಿದೆ. ಈಗ ಅವನನ್ನು ನೋಡುವವರೆಗೂ ನಾನು ಭೋಜನಮಾಡುವುದಿಲ್ಲ. ಹೀಗೆ ಹೇಳಿ ದೃಢವಾಗಿ ನಿಶ್ಚಯಿಸಿ ಸುಮ್ಮನೆ ನಿರ್ಋತಿಯು ಕುಳಿತು ಬಿಟ್ಟನು. ॥ ೪೫-೪೭ ॥ ಕರುಣಾಮಯನಾದ ಶ್ರೀಮಾಧವದೇವರು ಆ ನಿರ್ಋತಿಯ ದೃಢನಿಶ್ಚಯನ್ನರಿತು ತನ್ನ ಅದೇ ಅವಧೂತ ವೇಷದಿಂದ ಆ ನಿರ್ಋತಿಯ ಮಂದಿರದ ಬಾಗಿಲಿಗೆ ಬಂದು ಪುನಃ ಅನ್ನವನ್ನು ಬೇಡಿದನು. ॥ ೪೮ ॥

**ಸೂತ ಉವಾಚ—**

ನಿರ್ಋತಿಸ್ತದ್ಧ್ವನಿಂ ಶ್ರುತ್ವಾ ಶ್ರುತಪೂರ್ವಂ ಪ್ರಹರ್ಷಿತಃ ।
ಜಗಾಮಾಶು ದ್ವಿಜೈಸ್ಸಾರ್ಧಂ ದೃಷ್ಟ್ವಾ ದ್ವಾರಿ ಜಗಾದ ತಮ್ ॥ ೪೯ ॥

**ಸೂತರು ಹೇಳಿದರು—**

ನಿರ್ಋತಿಯು ಮೊದಲೇ ಕೇಳಿದ್ದ ಆ ಧ್ವನಿಯನ್ನು ಮತ್ತೆ ಕೇಳಿ ಅತ್ಯಂತ ಹರ್ಷಗೊಂಡವನಾಗಿ ಥಟ್ಟನೆ ಬ್ರಾಹ್ಮಣರೊಡನೆ ಬಾಗಿಲಿಗೆ ಬಂದು ಅವನನ್ನು ಕುರಿತು ಹೇಳಿದನು. ॥ ೪೯ ॥

**ನಿರ್ಋತಿ ಉವಾಚ—**

**ಭೋ ಭೋಽವಧೂತಾಯಾಹ್ಯನ್ನಂ ಗೃಹಾಣಾಶು ಯಥೇಪ್ಸಿತಮ್ ।**
**ಮದುಕ್ತಂ ಕ್ಷಮ್ಯತಾಂ ಸ್ವಾಮಿನ್ ದಯಾಂ ಕುರು ದಯಾನಿಧೇ ॥ ೫೦ ॥**

**ನಿರ್ಋತಿಯು ಹೇಳಿದನು—**

ಎಲೈ ಅವಧೂತರೇ ! ಬನ್ನಿ, ಬನ್ನಿ, ಬೇಗನೆ ನೀವು ಬಯಸಿದ ಅನ್ನವನ್ನು ಸ್ವೀಕರಿಸಿ. ತಿಳಿಯದೆ ನನ್ನಿಂದ ಹಿಂದೆ ಹೇಳಿದುದನ್ನು ದಯಾನಿಧಿಯಾದ ನೀವು ದಯಮಾಡಿ ಕ್ಷಮಿಸಿಬಿಡಿ ಎಂಬುದಾಗಿ ನಿರ್ಋತಿಯು ಪ್ರಾರ್ಥಿಸಿದನು. ॥ ೫೦ ॥

**ಸೂತ ಉವಾಚ—**

**ಏವಮುಕ್ತ್ವಾ ತಮಾನೀಯ ಗೃಹಾಂತ ಉಪವೇಶ್ಯ ಚ ।**
**ತದನ್ನಂ ಪ್ರದದೌ ತಸ್ಮೈ ಶ್ವಭಿಸ್ಸಾಕಂ ಸುನಿರ್ಮಲಮ್ ॥ ೫೧ ॥**
**ಭುಕ್ತ್ವಾ ತದನ್ನಮಾಕಂಠಂ ಬ್ರಾಹ್ಮಣೈಃ ಶ್ವಭಿರಾವೃತಃ ।**
**ಪೀತ್ವಾ ಜಲಮುವಾಚೈನಂ ಪಿತೃರೂಪೀ ಜನಾರ್ದನಃ ॥ ೫೨ ॥**

**ಸೂತರು ಹೇಳಿದರು—**

ಈ ರೀತಿಯಾಗಿ ಆರಿಕೆ ಮಾಡಿಕೊಂಡು ಅವಧೂತನನ್ನು ಆ ನಾಯಿಗಳೊಡನೆ ಮನೆ-ಯೊಳಕ್ಕೆ ಕರೆತಂದು ಆಸನಲ್ಲಿ ಕೂಡಿಸಿ ಅತ್ಯಂತನಿರ್ಮಲವಾಗಿದ್ದ ಅನ್ನಾದಿಗಳನ್ನು ಅವರಿಗೆ ಬಡಿಸಿದನು. ॥ ೫೧ ॥ ಆ ಅವಧೂತನಾದರೋ ಬ್ರಾಹ್ಮಣರು ಮತ್ತು ನಾಯಿಗಳೊಡಗೂಡಿ ಆ ಅನ್ನವನ್ನು ಯಥೇಚ್ಛವಾಗಿ ಭುಂಜಿಸಿದನು. ನೀರನ್ನು ಕುಡಿದನು; ನಂತರ ಪಿತ್ರಂತರ್ಯಾಮಿ ಜನಾರ್ದನನೆ ಸ್ವರೂಪನಾದ ಆ ಅವಧೂತನು ನಿರ್ಋತಿಯನ್ನು ಕುರಿತು ಹೀಗೆ ಹೇಳಿದನು.॥೫೨॥

**ಶ್ರೀ ಮಾಧವ ಉವಾಚ—**

**ತವೈತೇ ಪಿತರಸ್ಸರ್ವೇ ಪರಿಶ್ರಾಮ್ಯಸಿ ಯತ್ಕೃತೇ ।**
**ಅಹಂ ತು ಮಾಧವೋ ದೇವಃ ನಿರ್ಋತೇ ಹವ್ಯಕವ್ಯಭುಕ್ ॥ ೫೩ ॥**
**ಆಗತೋಽಸ್ಮ್ಯತ್ರ ತೇ ದ್ರಷ್ಟುಂ ದೃಢತಾಂ ಕರ್ಮವರ್ತ್ಮನಿ ।**
**ತ್ವಯಾ ಚಾತಿಪ್ರಸನ್ನೋಽಹಂ ಯಾಚಯ ಸ್ವಮನೋಗತಮ್ ॥ ೫೪ ॥**
**ಇತ್ಯುಕ್ತೇ ಶುನಕಾಸ್ಸರ್ವೇ ಪಿತೃರೂಪೇಣ ಸಂಸ್ಥಿತಾಃ ।**
**ಸ್ವಯಂ ಚ ಸ್ವೇನ ರೂಪೇಣ ಶಂಖಚಕ್ರಗದಾಭೃತಾ ॥ ೫೫ ॥**
**ದೃಷ್ಟ್ವಾ ತನ್ಮಹದಾಶ್ಚರ್ಯಂ ಹರ್ಷವ್ಯಾಕುಲಿತೇಂದ್ರಿಯಃ ।**
**ನನಾಮ ಶಿರಸಾ ಭೂಮೌ ಮಾಧವಂ ಪುನರಬ್ರವೀತ್ ॥ ೫೬ ॥**

**ಶ್ರೀ ಮಾಧವನು ಹೇಳಿದನು—**

ಎಲೈ ನಿರ್ಋತಿಯೇ ! ಯಾರಿಗೋಸ್ಕರ ನೀನು ಇಷ್ಟು ಕಷ್ಟಪಡುತ್ತಿದ್ದೀಯೋ ಆ ಪಿತೃಗಳೇ ಈ ಶ್ವಾನರೂಪಧಾರಿಗಳಾಗಿರುವರು ಮತ್ತು ಹವ್ಯಕವ್ಯಗಳನ್ನು ಸ್ವೀಕರಿಸುತ್ತಿರುವ ಮಾಧವನೇ ನಾನು. ॥ ೫೩ ॥ ಕರ್ಮಮಾರ್ಗವನ್ನು ದೃಢವಾಗಿ ಪಾಲಿಸಿಕೊಂಡಿರತಕ್ಕ ನಿನ್ನನ್ನು ನೋಡಲು

ನಾನು ಬಂದಿದ್ದೆ. ನಿನ್ನಿಂದ ನಾನು ಬಹಳ ಸಂತುಷ್ಟನಾಗಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೋರಿಕೋ. ॥ ೫೪ ॥ ಹೀಗೆ ಮಾಧವನು ಹೇಳುತ್ತಲೇ ಆ ನಾಯಿಗಳೆಲ್ಲವೂ ಪಿತೃದೇವತೆಗಳ ರೂಪದಲ್ಲಿ ಕಾಣಿಸಿಕೊಂಡರು. ಮಾಧವನೂ ಶಂಖಚಕ್ರಗಧಾಧಾರಿಯಾಗಿ ತನ್ನ ಸ್ವರೂಪದಲ್ಲಿ ಪ್ರತ್ಯಕ್ಷನಾದನು. ॥ ೫೫ ॥ ಈ ಮಹದಾಶ್ಚರ್ಯವನ್ನು ಕಂಡು ಸರ್ವ ಇಂದ್ರಿಯಗಳಿಂದ ಹರ್ಷಗೊಂಡ ನಿರ್ಋತಿಯು ಭೂಮಿಯಲ್ಲಿ ಸಾಷ್ಟಾಂಗವೆರಗಿ ಮಾಧವನನ್ನು ಕುರಿತು ಹೇಳಿದನು. ॥ ೫೬ ॥

**ನಿರ್ಋತಿ ಉವಾಚ—**

ಕರ್ಮಣಾ ದರ್ಶನೇ ಜಾತೇ ತವ ಮಾಧವ ಕಾಮದೇ ।
ಪ್ರಾಪ್ತಂ ಕರ್ಮಫಲಂ ಸರ್ವಂ ವರೇಣ್ಯಂ ಕಿಮತಃ ಪರಮ್ ॥ ೫೭ ॥
ಅಥಾಪಿ ಕಾಮಯೇ ನಾಥ ವಾಸೋ ಮೇಽತ್ರ ಯಥಾ ಭವೇತ್ ।
ತ್ವತ್ಪಾದಪಂಕಜೇ ಭಕ್ತಿಸ್ಸರ್ವದಾಸ್ತಾಮಯಂ ವರಃ ॥ ೫೮ ॥
ಕಿಂಚಾತ್ರ ಯೇ ಸಮಾಗಮ್ಯ ವಿಕಿರೇ ಪುಣ್ಯಸಾಧನೇ ।
ಕರಿಷ್ಯಂತಿ ಪಿತೃಶ್ರಾದ್ಧಂ ಲಭತಾಂ ತೇ ಮನೋಗತಮ್ ॥ ೫೯ ॥

**ನಿರ್ಋತಿಯು ಹೇಳಿದನು—**

ನಾನು ಆಚರಿಸಿದ ಕರ್ಮದಿಂದ ಸಕಲಾಭೀಷ್ಟಪ್ರದವಾಗಿರತಕ್ಕ ನಿನ್ನ ದರ್ಶನವಾದ ಮೇಲೆ ನನ್ನ ಎಲ್ಲ ಕರ್ಮಗಳ ಫಲಗಳೂ ದಕ್ಕಿತು ; ಇದಕ್ಕಿಂತ ಹೆಚ್ಚಿನದು ಇನ್ನೇನು ತಾನೇ ಇದೆ ? ॥ ೫೭ ॥ ಆದರೂ, ಮಹಾಸ್ವಾಮಿಯೇ, ಈ ವಿಕಿರ ಕ್ಷೇತ್ರದಲ್ಲಿ ನನ್ನ ವಾಸವು ಇರುವಂತೆಯೂ ಮತ್ತು ನಿನ್ನ ಪಾದ ಕಮಲಗಳಲ್ಲಿ ಯಾವಾಗಲೂ ಭಕ್ತಿಯು ಇರುವಂತೆಯೂ ಕರುಣಿಸು. ॥ ೫೮ ॥ ಯಾರು ಈ ವಿಕಿರಾಶ್ರಮಕ್ಕೆ ಬಂದು ಪಿತೃಶ್ರಾದ್ಧಾದಿಗಳನ್ನು ಮಾಡುವರೋ ಅವರ ಮನಸ್ಸಿನ ಅಭೀಷ್ಟಗಳೆಲ್ಲಾ ನೆರವೇರಲೆಂದು ಅನುಗ್ರಹಿಸು ಎಂದನು. ॥ ೫೯ ॥

**ಸೂತ ಉವಾಚ—**

ಮಾಧವಸ್ತದುಪಾಕರ್ಣ್ಯ ತಥೈವಾಸ್ತ್ವಿತಿ ತಂ ವದನ್ ।
ತತ್ರೈವಾಂತರ್ದಧೇ ದೇವಃ ಸ್ವಗಣೇನ ಸಮನ್ವಿತಃ ॥ ೬೦ ॥
ನಿರ್ಋತಿಸ್ತು ತದಾರಭ್ಯ ಸ್ವಾಶ್ರಮೇ ವಿಕಿರೇ ವಸನ್ ।
ಪೂಜಯಾ ತಪಸಾ ಭಕ್ತ್ಯಾ ತೋಷಯಾಮಾಸ ಮಾಧವಮ್ ॥ ೬೧ ॥
ತತೋ ಯೇ ಕೇಚಿದಾಗತ್ಯ ಶ್ರಾದ್ಧಂ ತತ್ರ ಪ್ರಕುರ್ವತೇ ।
ಸಂತೃಪ್ತಾಃ ಪಿತರಸ್ತೇಷಾಂ ವಸಂತಿ ಬ್ರಹ್ಮಣಃ ಪದೇ ॥ ೬೨ ॥

॥ ಇತಿ ಏಕೋನವಿಂಶೋಽಧ್ಯಾಯಃ ॥

**ಸೂತರು ಹೇಳಿದರು—**

ಶ್ರೀಮಾಧವನು ನಿರ್ಋತಿಯ ಆ ಬೇಡಿಕೆಯನ್ನು ಆಲಿಸಿ ಹಾಗೆಯೇ ಆಗಲಿ ಎಂದು ಅನುಗ್ರಹಿಸಿ ತನ್ನ ಪಿತೃಗಣಗಳೊಡನೆ ಅದೃಶ್ಯವಾದನು. ॥ ೬೦ ॥ ಅಲ್ಲಿಂದ ಪ್ರಾರಂಭಮಾಡಿ

ನಿರ್ಋತಿಯು ವಿಕಿರಾಶ್ರಮದಲ್ಲಿ ವಾಸಮಾಡಿಕೊಂಡಿದ್ದು ಪೂಜೆ, ತಪಸ್ಸು ಮತ್ತು ಭಕ್ತಿ ಇವುಗಳಿಂದ ಶ್ರೀಮಾಧವನನ್ನು ಸಂತೋಷಗೊಳಿಸಿದನು. ॥ ೬೧ ॥ ಅಲ್ಲಿಂದ ಯಾರು ಈ ವಿಕಿರಾಶ್ರಮಕ್ಕೆ ಬಂದು ಪಿತೃಶ್ರಾದ್ಧಾದಿಗಳನ್ನು ಮಾಡುತ್ತಾರೋ ಅವರ ಪಿತೃಗಳು ತೃಪ್ತರಾಗಿ ಪಾರಂಪರೆಯಾಗಿ ಸಾಧನೆ ಮಾಡಿಕೊಂಡು ಪರಮಾತ್ಮನ ಸಾಕ್ಷಾತ್ಕಾರ ಪಡೆದು ಮುಕ್ತಿಯನ್ನು ಹೊಂದುತ್ತಾರೆ. ॥ ೬೨ ॥

. ॥ ಹತ್ತೊಂಬತ್ತನೆಯ ಅಧ್ಯಾಯವು ಸಮಾಪ್ತಿಯಾಯಿತು ॥

## ॥ ಅಥ ವಿಂಶೋಽಧ್ಯಾಯಃ ॥ ೨೦ ॥

ಋಷಯಃ ಊಚುಃ—

ಭಗವಂಸ್ತ್ವನ್ಮುಖಾಂಭೋಜಾತ್ ನಿರ್ಋತ್ಯಾಖ್ಯಾನಮುತ್ತಮಮ್ ।
ಶ್ರುತ್ವಾ ನಿರ್ವೃತಿಮಾಪನ್ನಾ ಯತಸ್ತನ್ಮಾಧವಾಶ್ರಯಮ್ ॥ ೧ ॥
ಮಾಧವೋ ಗೀಯತೇ ಯಸ್ಯಾಂ ಪ್ರತಿವಾಕ್ಯಂ ತಪೋಧನ ।
ಶ್ರೇಯಸೇ ವಿಹಿತಾ ಸದ್ಭಿರಸಂಬದ್ಧಾಪಿ ಸಾ ಕಥಾ ॥ ೨ ॥
ಶೃಂಗಾರಾದಿರಸಾಪೂರ್ಣಾ ಸುಪದಾರ್ಥಾ ಚಮತ್ಕೃತಾ ।
ಛಂದೋಽಲಂಕಾರಸಂಯುಕ್ತಾ ಹರಿಹೀನಾ ಕಥಾ ವೃಥಾ ॥ ೩ ॥
ನಿರ್ಋತಿಃ ಕರ್ಮನಿಷ್ಣಾತಶ್ಚಕಾರಾತಂದ್ರಿತಸ್ಸದಾ ।
ಶ್ರಾದ್ಧಾನಿ ವಿಧಿಪೂತಾನೀತ್ಯವೋಚಿ ಭವತಾ ಖಲು ॥ ೪ ॥
ತತ್ರ ನಸ್ಸಂಶಯೋ ಜಾತಃ ಶ್ರಾದ್ಧ ವ್ಯಾಸಮಜಾನತಾಮ್ ।
ಯಥಾ ನಿಸ್ಸಂಶಯೋ ಭೂಯಾತ್ತಥಾ ಕುರು ದಯಾನಿಧೇ ॥ ೫ ॥
ಅಕಾರ್ಷೀನ್ನಿರ್ಋತಿರ್ಯಾನಿ ಯದಾ ಯತ್ರ ಯಥಾ ತಥಾ ।
ಸವ್ಯಾಸಮುಚ್ಯತಾಂ ಯೇನ ಪ್ರವೃತ್ತಿರ್ನಿರ್ಭಯಾ ಭವೇತ್ ॥ ೬ ॥

### ॥ ಇಪ್ಪತ್ತನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

ಶ್ರೀ ಸೂತರೇ, ನಿಮ್ಮ ಮುಖಕಮಲದಿಂದ ಹೊರಬಿದ್ದ ಉತ್ತಮವಾದ ನಿರ್ಋತಿಯ ಕಥೆಯನ್ನು ಕೇಳಿ ನಾವೆಲ್ಲ ಹರ್ಷಗೊಂಡೆವು; ಕಾರಣ, ಇದು ಆಮೂಲಾಗ್ರವಾಗಿ ಶ್ರೀಮಾಧವನ ಸ್ತುತಿಯನ್ನೊಳಗೊಂಡಿದೆ. ಎಲೈ ತಪೋಧನರೇ, ಮಾಧವನು ಎಲ್ಲಿ ವರ್ಣಿಸಲ್ಪಡುತ್ತಾನೋ ಅಂಥಾ ಕಥಾನಕವು ವ್ಯಾಕರಣಾದಿ ರೀತಿಯಿಂದ ಒಳ್ಳೆಯ ಮತ್ತು ಕೆಟ್ಟ ವಾಕ್ಯಗಳಿಂದ ಕೂಡಿದ್ದರೂ ಅವು ಶ್ರೇಯಸ್ಕರವೇ ಆಗಿರುವುವು. ಕಾರಣ, ಅವು ಶಾಸ್ತ್ರಗಳಿಗೆ ಸಮ್ಮತಗಳಾಗಿದ್ದು ವಿಹಿತಗಳಾಗಿ-ರುವುವು. ಯಾವ ಕಥಾನಕವು ಶೃಂಗಾರಾದಿಗಳಿಂದ ತುಂಬಿರಲಿ, ಒಳ್ಳೊಳ್ಳೆಯ ಪದಗಳನ್ನೊಳ-ಗೊಂಡು ಒಳ್ಳೆಯ ಅರ್ಥಗಳಿಂದ ಕೂಡಿರಲಿ, ಛಂದಸ್ಸು ಮತ್ತು ಅಲಂಕಾರಗಳಿಂದ ತುಂಬಿರಲಿ, ಶ್ರೀಹರಿಯ ಮಾಹಾತ್ಮ್ಯೆಯಿಂದ ಹೀನವಾಗಿದ್ದರೆ ಅವುಗಳು ವ್ಯರ್ಥವೇ ಸರಿ. ॥ ೧-೩ ॥ ನಿರ್ಋತಿಯು ಕರ್ಮಕುಶಲನಾಗಿದ್ದುಕೊಂಡು ಆಲಸ್ಯ ಬಿಟ್ಟು ವಿಧಿವತ್ತಾಗಿ ಪವಿತ್ರತೆಯಿಂದ ಶ್ರಾದ್ಧಗಳನ್ನೆಲ್ಲಾ ಮಾಡಿದನೆಂದು ತಾವು ಹೇಳಿದಿರಷ್ಟೆ. ॥ ೪ ॥ ಶ್ರಾದ್ಧದ ವಿವರಗಳನ್ನು ತಿಳಿಯದ ನಮಗೆ ಆ ವಿಷಯದಲ್ಲಿ ಸಂಶಯವಿಲ್ಲದಂತೆ ಎಲ್ಲವನ್ನೂ ವಿವರಿಸಿರಿ. ॥ ೫ ॥ ನಿರ್ಋತಿಯು ಯಾವ ಯಾವ ಶ್ರಾದ್ಧಗಳನ್ನು ಎಲ್ಲೆಲ್ಲಿ ಹೇಗೆ ಹೇಗೆ ಮಾಡಿದನು ಎಂಬುದನ್ನು ಬಿಡಿಸಿ ಹೇಳಿದರೆ ನಮಗೆ ಈ ಬಗ್ಗೆ ಭಯರಹಿತವಾದ ಪ್ರವೃತ್ತಿ ಹುಟ್ಟುತ್ತದೆ —ಹೀಗೆಂದು ಪ್ರಾರ್ಥಿಸಿದರು. ॥ ೬ ॥

ಸೂತ ಉವಾಚ—

ಭೋ ಭೋ ತಪೋಧನಾಸ್ಸರ್ವೇಽಮುಮೇವಾರ್ಥಮಜಾತ್ಮಜಾಃ ।
ಶೇಷಮಾಪೃಷ್ಟವಂತಸ್ತೇ ಸ ಯಥೋಚೇ ತಥೋಚ್ಯತೇ ॥ ೭ ॥

**ಸೂತರು ಹೇಳಿದರು—**

ಎಲೈ ಶೌನಕಾದಿಗಳೇ ! ಬ್ರಹ್ಮನ ಮಕ್ಕಳಾದ ತಪೋಧನಾರಾದ ಸನಕಾದಿಗಳೂ ಇದೇ ವಿಷಯವನ್ನು ಶ್ರೀ ಶೇಷದೇವರನ್ನು ಪ್ರಶ್ನೆ ಮಾಡಿದ್ದರು. ಶೇಷದೇವರು ಹೇಳಿದ ಹಾಗೆಯೇ ನಾನು ನಿಮಗೆ ಹೇಳುವೆನು. ॥ ೭ ॥

**ಶ್ರೀ ಶೇಷ ಉವಾಚ—**

ಶೃಣುಧ್ವಂ ಬ್ರಹ್ಮತನಯಾಃ ಶ್ರಾದ್ಧಾನಾಂ ವಿಸ್ತೃತಂ ವಿಧಿಂ ।
ಯೇನ ಚೀರ್ಣೇನ ಪಿತ್ರಾದ್ಯಾಃ ಕರ್ತ್ರೂಣಾಂ ಸರ್ವಕಾಮದಾಃ ॥ ೮ ॥
ಪಿತ್ರನುದ್ದಿಶ್ಯ ಯದ್ಭೋಜ್ಯಂ ಯತ್ತುಸ್ಯಾತ್ಪ್ರಿಯಮಾತ್ಮನಃ ।
ಶ್ರದ್ಧಯಾ ದೀಯತೇ ಯತ್ತು ತಚ್ಛ್ರಾದ್ಧಂ ಪರಿಕೀರ್ತಿತಮ್ ॥ ೯ ॥
ಸಂಬುದ್ಧ್ಯಾಕಾರಿತಾನಿತ್ವನ್ ಚತುರ್ಥ್ಯೋದ್ದಿಶ್ಯ ಯದ್ಧವಿಃ ।
ತ್ಯಜ್ಯತೇ ಶ್ರದ್ಧಯೋಪೇತೈಸ್ತಚ್ಛ್ರಾದ್ಧಮಪರೇ ವಿದುಃ ॥ ೧೦ ॥
ಅನ್ಯೇ ತೂಭಯರೂಪತ್ವಮಾಚರೇಯುಶ್ಚ ದರ್ಶನಾತ್ ।
ವಿರೋಧ ಏವಮಾಪನ್ನೋ ವ್ಯವಸ್ಥಾ ಸಂಪ್ರದೃಶ್ಯತೇ ॥ ೧೧ ॥
ಶ್ರಾದ್ಧೇ ಷೋಡಶಕೇ ಪಿಂಡಾನ್ನಿತ್ಯಂ ಬ್ರಾಹ್ಮಣಭೋಜನಮ್ ।
ಪಾರ್ವಣೇ ತು ದ್ವಯಂ ಶ್ರೇಷ್ಠಮಥ ತದ್ಭೇದ ಈರ್ಯತೇ ॥ ೧೨ ॥
ನಿತ್ಯಾನಿ ಕಾನಿಚಿತ್ತಾನಿ ಹ್ಯಪರಾಣಿ ನಿಮಿತ್ತತಃ ।
ಕಾಮ್ಯಾನಿ ಕಾನಿಚಿತ್ಸಂತಿ ದ್ವಿವಿಧಾನ್ಯಪಿ ಕಾನಿಚಿತ್ ॥ ೧೩ ॥
ನಿತ್ಯಾನ್ಯಹರಹಃ ಕುರ್ಯಾನ್ನೈಮಿತ್ತಿಕಾನಿ ನಿಮಿತ್ತತಃ ।
ಗ್ರಹಣಾದಿಷು ಕಾಮ್ಯಾನಿ ದ್ವಿವಿಧಾನಿ ಮಹಾಲಯೇ ॥ ೧೪ ॥
ಏಕೋದ್ದಿಷ್ಟಂ ಪಾರ್ವಣಂ ಚ ಶ್ರಾದ್ಧಂ ದ್ವಿವಿಧಮಿಷ್ಯತೇ ।
ಏಕಮುದ್ದಿಶ್ಯ ಯಚ್ಛ್ರಾದ್ಧಂ ತದೇಕೋದ್ದಿಷ್ಟಮುಚ್ಯತೇ ॥ ೧೫ ॥
ತ್ರೀನುದ್ದಿಶ್ಯ ತು ಯಚ್ಛ್ರಾದ್ಧಂ ತತ್ಪಾರ್ವಣಮುದಾಹೃತಮ್ ।
ಶ್ರಾದ್ಧಕಾಲಸ್ತ್ವಮಾವಾಸ್ಯಾ ಮೃತಾಹಸ್ತೀರ್ಥಮೇವ ಚ ॥ ೧೬ ॥
ವೃದ್ಧಿರ್ಮಹಾಲಯಾದಿಶ್ಚ ವರ್ತತೇ ನೈಕಧಾಪರಃ ।
ಅಥ ದೇಶಸ್ತು ವಿಜ್ಞೇಯೋ ಭೂಸಂಸ್ಕಾರಾದಿಸಂಯುತಃ ॥ ೧೭ ॥
ದಕ್ಷಿಣಾ ಪ್ರವಣಃ ಶ್ರೇಷ್ಠಃ ತೀರ್ಥಾದಿಷು ವಿಶೇಷತಃ ।
ಶಾಲಗ್ರಾಮಸಮೀಪೇ ಚ ಚಕ್ರಾಂಕಿತ ಸಮೀಪತಃ ॥ ೧೮ ॥
ತುಲಸೀಕಾನನೇ ಚೈವ ಶ್ರಾದ್ಧಮಕ್ಷಯ್ಯತಾಂ ವ್ರಜೇತ್ ।
ಪರಗೇಹೇ ಕೃತೇ ಶ್ರಾದ್ಧೇ ದತ್ವಾ ಮೂಲ್ಯಂ ಚ ಜೀವತಾ ॥ ೧೯ ॥
ಅಥವಾ ಸ್ವಾಮ್ಯನುಜ್ಞಾತೋ ನ ದೋಷಃ ಪರಭೂಮಿಜಃ ।
ಸ್ವಾಮಿತ್ವಂ ಕಸ್ಯಚಿನ್ನಾಸ್ತಿ ತೀರ್ಥಾದ್ರಿವನಭೂಮಿಷು ॥ ೨೦ ॥

ಸದೈವ ತು ಪಿತೃಶ್ರಾದ್ಧಂ ತತ್ರ ಕುರ್ಯಾದತಂದ್ರಿತಃ ।
ಋಷಯಸ್ಸಪ್ತ ಸಂಪ್ರೋಕ್ತಾ ವಿಶ್ವೇದೇವಾಸ್ತ್ರಯೋದಶ ॥ ೨೦ ॥
ತನ್ನಾಮ್ನಾಮಪರಿಜ್ಞಾಯ ಆಗಚ್ಛಂತ್ವಿತಿ ವೈ ಪಠೇತ್ ।
ಪುರುಷತ್ರಯವಿಜ್ಞಾತೋ ವೇದಾಧ್ಯಯನಶಾಲಿನಃ ॥ ೨೨ ॥
ಸ್ವಶಾಖಾಧ್ಯಾಯಿನೋ ಜೀವತ್ಪಿತೃಕಾಶ್ಶಾಂತಮಾನಸಾಃ ।
ಸಪತ್ನೀಕಾಸ್ತಥಾನ್ಯೂನಾ ನಾಧಿಕಾಂಗಂ ನಿರೋಗಿಣಃ ॥ ೨೩ ॥
ಷಟ್ಕರ್ಮನಿರತಾಃ ಪೂರ್ವವಯಸ್ಕಾ ಗತಮತ್ಸರಾಃ ।
ಏವಂವಿಧಾ ದ್ವಿಜಾಃ ಶ್ರಾದ್ಧಯೋಗ್ಯಾಸ್ಸ್ಯುಸ್ಸನಕಾದಯಃ ॥ ೨೪ ॥
ಯದ್ವಾಽಯಂ ನಿಯಮಃ ಪಿತ್ರ್ಯೇ ದೈವೇ ಯೋಜ್ಯೋ ಯಥಾ ತಥಾ ।
ಪಿತ್ರ್ಯೇಽಪ್ಯೇತಾದೃಶಾಭಾವೇ ಮಧ್ಯಮಾನ್ಯಪಿ ಯೋಜಯೇತ್ ॥ ೨೫ ॥
ದೌಹಿತ್ರೋ ಭಾಗಿನೇಯಶ್ಚ ಜಾಮಾತಾ ಶಾಲಕಸ್ತಥಾ ।
ಋತ್ವಿಗ್ಯಾಜ್ಯೌ ಮಾತುಲಶ್ಚ ಮಧ್ಯಮಾ ಪಿತೃಕರ್ಮಣಿ ॥ ೨೬ ॥
ಸಪಿಂಡೌ ಜನ್ಯಜನಕೌ ಸೂಚಕಃ ಗರ್ಭಿಣೀಪತಿಃ ।
ಪ್ರಾಗುಕ್ತವಿಪರೀತಾಶ್ಚ ವರ್ಜ್ಯಾಃ ಸ್ಯುಃ ಶ್ರಾದ್ಧಕರ್ಮಣಿ ॥ ೨೭ ॥
ಶ್ರಾದ್ಧ ಕರ್ತುಶ್ಚ ಭೋಕ್ತುಶ್ಚ ವದಾಮಿ ನಿಯಮಾನಥ ।
ಯೇಷಾಂ ಚಾಚರಣೇ ಶ್ರಾದ್ಧಂ ವಿಗುಣಂ ಸಗುಣಂ ಭವೇತ್ ॥ ೨೮॥
ತ್ರಿದಿನಂ ನಿಯಮಂ ಕರ್ತಾ ಕುರ್ಯಾತ್ತದ್ದಿನಮೇವ ವಾ ।
ಸ್ಥಲಭಾಂಡಾದಿಸಂಶುದ್ಧಿರ್ಹವಿಃಸಂಪಾದನಂ ಜಪಃ ॥ ೨೯ ॥
ಹವಿಷ್ಯಂ ಬ್ರಹ್ಮಚರ್ಯಂ ಚ ಭೂಶಯ್ಯೇತ್ಯೇವಮಾದಿಕಮ್ ।
ಬ್ರಾಹ್ಮಣೇಯಾಂಸ್ತು ನಿಯಮಾನ್ ಬ್ರಾಹ್ಮಣೈರಪಿ ಕಾರಯೇತ್ ॥ ೩೦ ॥
ಪೂರ್ವೇದ್ಯುಸ್ತದಹಃ ಪ್ರಾತಃ ಸ್ವಯಂ ಯದ್ವಾ ಸುತಾಧಿಭಿಃ ।
ಶಕ್ತ್ಯಾ ಯಥೋಕ್ತ ಸಂಖ್ಯಾಕಾನ್ ಶ್ರಾದ್ಧೇ ವಿಪ್ರಾನ್ನಿಮಂತ್ರಯೇತ್ ॥ ೩೧ ॥
ದ್ವೌ ದೇವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರವಾ ।
ಶ್ರಾದ್ಧೇ ನಿಮಂತ್ರಯೇದ್ವಿಪ್ರಾನ್ನೈವ ವಿಶ್ವಾಧಿಕಾನ್ಕ್ವಚಿತ್ ॥ ೩೨ ॥
ಕ್ರಿಯಾಂ ದೇಶಂ ಚ ಕಾಲಂ ಚ ಶುಚಿತಾಂ ದ್ರವ್ಯಸಂಪದಮ್ ।
ಪಂಚೈತಾನ್ವಿಸ್ತರೋ ಹಂತಿ ತಸ್ಮಾತ್ಕುರ್ಯಾನ್ನ ವಿಸ್ತರಮ್ ॥ ೩೩ ॥
ಅಥವಾ ದರ್ಭಬಟುಕಾನಾಸನೇಷೂಪವೇಶ್ಯಚ ।
ಪ್ರೈಷಾನುಪ್ರೈಷಸಂಯುಕ್ತಂ ಸರ್ವಂ ಶ್ರಾದ್ಧಂ ಸಮಾಚರೇತ್ ॥ ೩೪ ॥
ದಂತಾನಾಂ ಕಾಷ್ಠಸಂಯೋಗೇ ತೈಲೇನಾಭ್ಯಂಗನೇ ರತಿಮ್ ।
ಭೇಷಜಂ ಚ ಪರಾನ್ನಂ ಚ ಶ್ರಾದ್ಧಕರ್ತೈವ ವರ್ಜಯೇತ್ ॥ ೩೫ ॥

ಪುನರ್ಭುಕ್ತಿಂ ವ್ಯವಾಯಂ ಚಾಧ್ಯಯನಾಧ್ಯಾಪನೇ ತಥಾ ।
ದಾನಪ್ರತಿಗ್ರಹೌ ಶೂದ್ರಭಾಷಣಾನೃತಭಾಷಣೇ ॥ ೩೬ ॥
ದಿವಾಸ್ವಾಪಾಧ್ವಗಮನೇ ಕ್ರೋಧಂ ಚ ಕಲಹಂ ತಥಾ ।
ಏತಾನ್ಕರ್ತಾ ಚ ಭೋಕ್ತಾ ಚ ಶ್ರಾದ್ಧಾಹ್ನಿ ಪರಿವರ್ಜಯೇತ್ ॥ ೩೭ ॥
ಅಂಗೀಕೃತ್ಯ ಪರಿತ್ಯಾಗಮಾಹೂತೇ ಚ ವಿಲಂಬಿತಮ್ ।
ಸಂಧ್ಯಾಂ ಪ್ರತಿಗ್ರಹಂ ಹೋಮಂ ಶ್ರಾದ್ಧ ಭೋಕ್ತ್ರೈವ ವರ್ಜಯೇತ್ ॥ ೩೮ ॥
ಏವಂ ನಿಯಮಮಾಪನ್ನಾಃ ಶ್ರಾದ್ಧಕಾಲಪ್ರತೀಕ್ಷವಃ ।
ತಿಷ್ಠೇರನ್ಬ್ರಾಹ್ಮಣಾಸ್ಸರ್ವೇ ನಿತ್ಯಕೃತ್ಯಪರಾಯಣಾಃ ॥ ೩೯ ॥

॥ ಇತಿ ವಿಂಶೋಽಧ್ಯಾಯಃ ॥

**ಶ್ರೀ ಶೇಷದೇವರು ಹೇಳಿದರು—**

ಯಾವುಗಳ ಆಚರಣೆಯಿಂದ ಪಿತ್ರಾದಿಗಳು ಕರ್ತೃಗಳ ಸಮಸ್ತ ಅಪೇಕ್ಷೆಗಳನ್ನೂ ನೆರವೇರಿಸುವರೋ ಅಂತಹ ಶ್ರಾದ್ಧಗಳ ವಿಸ್ತಾರವಾದ ವಿಧಿಗಳನ್ನು ಹೇಳುತ್ತೇನೆ. ಸನಕಾದಿಗಳೇ ! ಕೇಳಿರಿ. ॥ ೮ ॥ ಪಿತೃದೇವತೆಗಳನ್ನುದ್ದೇಶಿಸಿ ಯಾವ ಯಾವ ತಿನ್ನುವ ವಸ್ತುಗಳನ್ನು ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತೇವೆಯೋ, ತನಗೆ ಪ್ರಿಯವಾದುವುಗಳನ್ನು ಪಿತೃಗಳಿಗೆ ಉದ್ದೇಶ್ಯ ಪಟ್ಟು ಮಾಡುತ್ತೇವೆಯೋ ಮತ್ತು ಶ್ರದ್ಧೆಯಿಂದ ಬ್ರಾಹ್ಮಣರಿಗೆ ಏನೇನು ಕೊಡುತ್ತೇವೆಯೋ (ವಸ್ತ್ರ ಥಾಲಿ, ತಂಬಿಗೆ, ತುಳಸೀಮಾಲೆ, ಪವಿತ್ರದುಂಗುರ, ತರ್ಜನೀಯುಂಗರ, ದೀಪ, ಹಲಗಾರತಿ, ದಕ್ಷಿಣೆ, ಬೀಸಣಿಕೆ ಮತ್ತು ಪಾದರಕ್ಷೆಗಳು, ಛತ್ರೀ, ಊರುಗೋಲು,ಸುವರ್ಣ, ಭೂಮಿ, ಮನೆ, ಆಕಳು, ಹಾಲು, ಮೊಸರು, ಜೇನುತುಪ್ಪ ಮತ್ತು ಹಣ್ಣುಗಳು ಉದುಕುಂಭ ಇತ್ಯಾದಿ ಇತ್ಯಾದಿಗಳು) ಇವುಗಳೆಲ್ಲವೂ ಸೇರಿ ಆಚರಿಸುವ ಕರ್ಮಕ್ಕೆ ಶ್ರಾದ್ಧವೆಂದು ಹೆಸರು. ॥ ೯ ॥ ಇನ್ನು ತಿಳಿದ ಕೆಲವು ಜ್ಞಾನಿಗಳು, ಸಂಬೋಧನೆ ಮಾಡಿ (ಚತುರ್ಥೀ ವಿಭಕ್ತಿಯಿಂದ) ಪಿತೃಗಳನ್ನು ಆಹ್ವಾನಿಸಿ, ಶ್ರದ್ಧೆಯಿಂದ ಕೂಡಿ ಏನೇನು ಪಿತೃಯಜ್ಞಕ್ಕೆ ಸಂಬಂಧಪಟ್ಟ ಕಾರ್ಯಗಳನ್ನು ಮಾಡುತ್ತಾರೆಯೋ ಅವೆಲ್ಲಕ್ಕೂ ಶ್ರಾದ್ಧವೆಂದು ಕರೆಯುತ್ತಾರೆ. ॥ ೧೦ ॥ ಮತ್ತೆ ಕೆಲವರು ಎರಡೂ ವಿಧವಾದ ಶ್ರಾದ್ಧವನ್ನು ಹೇಳುವರು, ಏಕೆಂದರೆ ಸಂಪ್ರದಾಯದಲ್ಲಿ ಎರಡು ವಿಧವೂ ಕಂಡುಬಂದಿದೆ. ಹೀಗಾದರೆ, ವಿರೋಧವು ಬರುವುದಲ್ಲವೇ ಎಂದರೆ ಇಲ್ಲ; ಸಂಪ್ರದಾಯಕ್ಕೆ ತಕ್ಕಂತೆ ವ್ಯವಸ್ಥೆ ಮಾಡಲು ಬರುತ್ತದೆ. ॥ ೧೧ ॥ ಹದಿನಾರು ಬಗೆಯ ಶ್ರಾದ್ಧಗಳಲ್ಲಿ ನಿತ್ಯವೂ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಪಿಂಡಪ್ರದಾನ ಮಾಡಿ ಶ್ರಾದ್ಧ ಮಾಡುವುದು ಶ್ರೇಷ್ಠವೆಂದು ಹೇಳಲ್ಪಡುತ್ತದೆ. ಪಾರ್ವಣ ಶ್ರಾದ್ಧದಲ್ಲಿಯೂ ಪಿಂಡಪ್ರದಾನ ಮತ್ತು ಬ್ರಾಹ್ಮಣ ಭೋಜನ ಇವೆರಡೂ ಶ್ರೇಷ್ಠಗಳು. ಈಗ ಅವುಗಳಲ್ಲಿನ ಭೇದವನ್ನು ಹೇಳುತ್ತೇನೆ, ಕೇಳಿರಿ. ॥ ೧೨ ॥ ಕೆಲವು ಶ್ರಾದ್ಧಗಳು ನಿತ್ಯಗಳು. (ತಂದೆತಾಯಿಗಳು ಮರಣಹೊಂದಿದ ದಿನ ಮಾಡುವ ಕಾಲಶ್ರಾದ್ಧದಂತೆ; ಅಥವಾ ದರ್ಶಾದಿ ಗಳಂತೆ). ಕೆಲವು ನೈಮಿತ್ತಿಕಗಳು, ಕೆಲವು ಕಾಮ್ಯಗಳು. ಕೆಲವು ಎರಡು ವಿಧವೂ (ಎಂದರೆ ನಿತ್ಯವೂ ಹಾಗು ನೈಮಿತ್ತಿಕವೂ ಅಥವಾ ದೃಷ್ಟಿಭೇದದಿಂದ ನಿತ್ಯ ಹಾಗು ಕಾಮ್ಯವೂ) ಆಗಬಹುದು. ಕೆಲವು ಯಾವುದೋ ಅಪೇಕ್ಷೆಯನ್ನಿಟ್ಟು ಕೊಂಡು ಮಾಡುವುದರಿಂದ ಕಾಮ್ಯ ಶ್ರಾದ್ಧಗಳು ಈ ನೈಮಿತ್ತಿಕ ಶ್ರಾದ್ಧವೂ ಮತ್ತು ನಿತ್ಯ ಶ್ರಾದ್ಧವೂ ಎರಡು ಪ್ರಕಾರದ್ದೂ ಆಗಿದೆ, (ಅಂದರೆ ಪಿಂಡಪ್ರದಾನ ಮತ್ತು

ಬ್ರಾಹ್ಮಣ ಭೋಜನ ಮಾಡಿಸತಕ್ಕವುಗಳು). ॥ ೧೩ ॥ ನಿತ್ಯ ಶ್ರಾದ್ಧವು ಪ್ರತಿದಿನವೂ ಮಾಡತಕ್ಕವುಗಳು. ನೈಮಿತ್ತಿಕಗಳು ಯಾವ ನಿಮಿತ್ತದಿಂದಲೋ ಮಾಡತಕ್ಕವುಗಳು. ಗ್ರಹಣಾದಿಗಳಲ್ಲಿ ಮಾಡುವ ಶ್ರಾದ್ಧವು ಕಾಮ್ಯ ಶ್ರಾದ್ಧವು. ಭಾದ್ರಪದ ಬಹುಳ ಪ್ರಯುಕ್ತ ಮಾಡುವ ಶ್ರಾದ್ಧವು ಎರಡು ವಿಧವಾದುದು. ಅಂದರೆ ನಿತ್ಯವೂ ನೈಮಿತ್ತಿಕವೂ ಆಗಬಹುದು. (ಭಾದ್ರಪದ ಕೃಷ್ಣ ಪಕ್ಷದಲ್ಲಿ ಪ್ರತಿದಿನವೂ ಮಾಡತಕ್ಕ ಮಹಾಲಯವು ನಿತ್ಯಮಹಾಲಯವು. ಘಾತಾದಿನಿಮಿತ್ತದಿಂದ ಮಾಡುವ ಘಾತಚತುರ್ದಶ್ಯಾದಿಗಳು ನೈಮಿತ್ತಿಕ.) ॥ ೧೪ ॥ ಏಕೋದ್ದಿಷ್ಟ ಮತ್ತು ಪಾರ್ವಣ ಎಂದು ಶ್ರಾದ್ಧಗಳು ಎರಡು ಬಗೆ. ಒಂದೇ ವ್ಯಕ್ತಿಯನ್ನು ಉದ್ದೇಶವಾಗಿ-ಟ್ಟುಕೊಂಡು ಮಾಡುವುದು ಏಕೋದ್ದಿಷ್ಟಶ್ರಾದ್ಧವು. ॥ ೧೫ ॥ ಮೂರು ವ್ಯಕ್ತಿ (ಪಿತೃ, ಪಿತಾಮಹ, ಪ್ರಪಿತಾಮಹ, ಅಥವಾ ಮಾತೃ, ಪಿತಾಮಹೀ, ಪ್ರಪಿತಾಮಹೀ) ಗಳಿಗೋಸ್ಕರ ಮಾಡುವ ಶ್ರಾದ್ಧವು ಪಾರ್ವಣ ಶ್ರಾದ್ಧವೆಂದು ಕರೆಯಲ್ಪಡುತ್ತದೆ. ಶ್ರಾದ್ಧ ಕಾಲಗಳು ಅಮಾವಾಸ್ಯಾ, ಮೃತದಿನ, ಮತ್ತು ತೀರ್ಥಕ್ಷೇತ್ರಗಳನ್ನು ಹೊಂದಿದ ದಿವಸಗಳು. ॥ ೧೬ ॥ ವೃದ್ಧಿ ಶ್ರಾದ್ಧವೂ ಮಹಾಲಯ ಶ್ರಾದ್ಧವೂ ಅನೇಕ ಬಗೆಯಾಗಿವೆ. ಭೂಸಂಸ್ಕಾರಾದಿಗಳಾಗಿರತಕ್ಕ ಪ್ರದೇಶವು ಶ್ರಾದ್ಧಕರ್ಮಗಳಿಗೆ ಯೋಗ್ಯವಾದವುಗಳು. ॥ ೧೭ ॥ ತೀರ್ಥಗಳಿದ್ದರೆ ಆ ಜಾಗವು ವಿಶೇಷವಾಗಿ ಯೋಗ್ಯ. ದಕ್ಷಿಣಕ್ಕೆ ಇಳಿಜಾರಾದ ಜಾಗವೂ ಶ್ರೇಷ್ಠ. ಶಾಲಗ್ರಾಮದ ಮತ್ತು ಚಕ್ರಾಂಕಿತದ ಸಾಮೀಪ್ಯವು ಶ್ರೇಷ್ಠವು. ॥ ೧೮ ॥ ತುಳಸೀವನವು ಅತಿಶ್ರೇಷ್ಠವು; ಇಲ್ಲಿ ಮಾಡಿದ ಶ್ರಾದ್ಧವು ಅಕ್ಷಯ ಫಲಪ್ರದವು. ಮತ್ತೊಬ್ಬರ ಮನೆಯಲ್ಲಿ ಶ್ರಾದ್ಧಮಾಡಿದರೆ ಆ ಮನೆಯ ಮಾಲೀಕನಿಗೆ ಆ ಮನೆಯ ಬಾಡಿಗೆಯನ್ನು ಕೊಡಬೇಕು, ಅಥವಾ ಆ ಮನೆಯ ಯಜಮಾನನ ಒಪ್ಪಿಗೆಯಿದ್ದರೆ ಬೇರೆಯವನ ಭೂಮಿಯಲ್ಲಿ ಶ್ರಾದ್ಧ ಮಾಡಿದಲ್ಲಿ ಯಾವ ದೋಷವೂ ಇಲ್ಲ. ತೀರ್ಥ, ಕ್ಷೇತ್ರ, ಆಶ್ರಮ, ಮತ್ತು ಪರ್ವತಗಳಲ್ಲಿ ಯಾರ ಸ್ವಾಮ್ಯವೂ ಇರುವುದಿಲ್ಲ. ಆದ್ದರಿಂದ ಅವುಗಳು ಶ್ರಾದ್ಧಕ್ಕೆ ಶ್ರೇಷ್ಠವೇ ಸರಿ. ॥ ೧೯-೨೦ ॥ ಇದೇ ಕಾರಣದಿಂದ ಆಲಸ್ಯವನ್ನು ತೊರೆದು ಈ ಸ್ಥಳಗಳಲ್ಲಿ ಶ್ರಾದ್ಧಗಳನ್ನು ಮಾಡಬಹುದು. ಶ್ರಾದ್ಧಗಳಿಗೆ ಆಹ್ವಾನಿಸಬೇಕಾದ ಋಷಿಗಳು ಏಳು ಮತ್ತು ಹದಿಮೂರು ವಿಶ್ವೇದೇವತೆಗಳು. ॥ ೨೧ ॥ ಈ ಏಳು ಋಷಿಗಳ ಮತ್ತು ಹದಿಮೂರು ಸಂಖ್ಯೆಯ ವಿಶ್ವೇದೇವತೆಗಳ ಹೆಸರುಗಳು ಗೊತ್ತಿಲ್ಲದಿದ್ದರೆ ''ಆಗಚ್ಛತ ವಿಶ್ವೇದೇವಾ! ಆಗಚ್ಛತ ಋಷಯಃ'' ಎಂದು ಕೂಗಿ ಆಹ್ವಾನಿಸಬೇಕು. ಶ್ರಾದ್ಧಗಳಲ್ಲಿ ನಿಮಂತ್ರಣಗೊಂಡು ಭೋಜನಕ್ಕೆ ಕೂಡುವ ಬ್ರಾಹ್ಮಣರುಗಳು ಮೂರು ತಲೆಯವರೆಗೆ ತಿಳಿದವರಾಗಿರಬೇಕು. (ಅಂದರೆ, ಆಹ್ವಾನಿತ ಬ್ರಾಹ್ಮಣ, ಅವನ ತಂದೆ, ತಾತರ ಪರಿಚಯವಿರಬೇಕು.) ॥ ೨೨ ॥ ತಮ್ಮ ತಮ್ಮ ವೇದ ಶಾಖೆಗಳನ್ನು ಅಧ್ಯಯನ ಮಾಡತಕ್ಕವರಾಗಿರಬೇಕು. ತಂದೆತಾಯಿಗಳನ್ನು ಹೊಂದಿದವರಾಗಿ ಇರಬೇಕು. ಶಾಂತರಾಗಿಯೂ ಪ್ರಸನ್ನಮನಸ್ಕರಾಗಿಯೂ ಇರಬೇಕು. ಪತ್ನಿಯನ್ನು ಹೊಂದಿದ್ದು ಅಂಗವಿಕಾರ-ವಿಲ್ಲದೇ, ಊನವಾದ ಅಂಗಗಳಿಲ್ಲದೇ ನಿರೋಗಿಯಾಗಿರಬೇಕು. ॥ ೨೩ ॥ ಷಟ್ಕರ್ಮಗಳಲ್ಲಿ ನಿರತರಾಗಿರಬೇಕು (ಆರು ಕರ್ಮಗಳೆಂದರೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳು.) ಪೂರ್ವವಯಸ್ಸಿನವರಾಗಿರಬೇಕು; ತುಂಬಾ ವೃದ್ಧರಾಗಿ ಇರಬಾರದು. ಮತ್ಸರಾದಿದೋಷರಹಿತರಾಗಿರಬೇಕು. ಎಲೈ ಸನಕಾದಿಗಳೇ! ಈ ರೀತಿಯಾಗಿರುವವರೇ ಶ್ರಾದ್ಧಕ್ಕೆ ಯೋಗ್ಯರಾದವರು. ॥ ೨೪ ॥ ಈ ನಿಯಮಗಳು ಪಿತೃಕಾರ್ಯಗಳಿಗೂ ದೈವಿಕ ಕಾರ್ಯಗಳಿಗೂ ಒಂದೇ ರೀತಿ ಅನ್ವಯಿಸುವುದು. (ಶ್ರಾದ್ಧದಲ್ಲಿ ದೇವಸ್ಥಾನ, ಪಿತೃಸ್ಥಾನವೆಂದು

ಎರಡು ಸ್ಥಾನಗಳು. ಎರಡು ಸ್ಥಾನಗಳಿಗೂ ಇಂಥಾ ಬ್ರಾಹ್ಮಣರನ್ನೇ ಆಹ್ವಾನಿಸಬೇಕೆಂದರ್ಥ) ಪಿತೃಕಾರ್ಯಗಳಿಗೆ ಇಂಥವರು ಸಿಗದಿದ್ದರೆ ಇವುಗಳಿಂದ ಸ್ವಲ್ಪ ಕಡಿಮೆಯಾದ ಮಧ್ಯಮ ದರ್ಜೆಯವರನ್ನೂ ಕರೆಯಬಹುದು. ॥ ೨೫ ॥ ಮೃತನಾದವರ ಹೆಣ್ಣು ಮಕ್ಕಳ ಮಗ, ಅಕ್ಕತಂಗಿಯ ಮಗ, ಅಳಿಯ, ಭಾವಮೈದುನ, ಸೋದರಮಾವ, ಪೌರೋಹಿತ್ಯ ಮಾಡಿಸುವವರು, ಪೌರೋಹಿತ್ಯವನ್ನು ಮಾಡಿಸಿಕೊಂಡವರು ಇವರುಗಳು ಶ್ರಾದ್ಧಭೋಜನಕ್ಕೆ ಮಧ್ಯಮ ಯೋಗ್ಯತೆಯುಳ್ಳವರು. ॥ ೨೬ ॥ ಸಪಿಂಡರು (ಅಂದರೆ ಏಳುತಲೆ ಅಥವಾ ಮೂರು ತಲೆ ಪರ್ಯಂತ ದಶದಿನ ಸೂತಕ ಸಂಬಂಧವುಳ್ಳವರು), ತಂದೆಮಕ್ಕಳು (ತಂದೆ ಮತ್ತು ಮಗನಿಗೆ ಒಟ್ಟಿಗೇ ಶ್ರಾದ್ಧಕ್ಕೆ ಆಹ್ವಾನ ಮಾಡಬಾರದೆಂದರ್ಥ), ಚಾಡಿಕೋರರು, ಗರ್ಭಿಣಿಯ ಪತಿ (ಪತ್ನಿಗೆ ಮೂರುತಿಂಗಳಿಗಿಂತ ಹೆಚ್ಚು ಗರ್ಭವಾಗಿದ್ದಾಗ ಎಂದರ್ಥ), ಹಾಗೂ ಹಿಂದೆ ಹೇಳಿದ ಗುಣಗಳಿಗೆ ವಿರುದ್ಧರಾದವರೂ ಶ್ರಾದ್ಧದಲ್ಲಿ ಬಿಡಲು ಯೋಗ್ಯರು. ॥ ೨೭ ॥ ಇನ್ನು ಶ್ರಾದ್ಧ ಕರ್ತೃಗಳು ಮತ್ತು ಭೋಕ್ತೃಗಳು ಅನುಸರಿಸಬೇಕಾದ ನಿಯಮಗಳನ್ನು ಹೇಳುವೆನು. ಇವುಗಳು ಶ್ರಾದ್ಧವನ್ನು ಗುಣಹೀನವಾಗಿದ್ದರೂ ಗುಣಸಹಿತವನ್ನಾಗಿ ಮಾಡುತ್ತವೆ. ॥ ೨೮ ॥ ಶ್ರಾದ್ಧದ ಕರ್ತೃವಾಗಲೀ ಶ್ರಾದ್ಧದ ಭೋಕ್ತೃವಾಗಲೀ ಶ್ರಾದ್ಧದಿನ, ಹಿಂದಿನ ದಿನ ಹಾಗೂ ಮಾರನೆಯ ದಿನ ಹೀಗೆ ಮೂರು ದಿವಸಗಳಲ್ಲಿ ನಿಯಮಗಳನ್ನು ಪಾಲಿಸಬೇಕು. ಶ್ರಾದ್ಧದ ದಿವಸವಾದರೂ ಈ ನಿಯಮಗಳನ್ನು ಪಾಲಿಸಲೇ ಬೇಕು. ಶ್ರಾದ್ಧಮಾಡತಕ್ಕ ಸ್ಥಳ, ಶ್ರಾದ್ಧಕ್ಕೆ ಉಪಯೋಗಿಸುವ ಪಾತ್ರೆಗಳು, ಎಲ್ಲವನ್ನೂ ಶುದ್ಧಗೊಳಿಸಬೇಕು. ಶ್ರಾದ್ಧಕ್ಕೆ ಬೇಕಾದ ಹವಿಷ್ಯಪದಾರ್ಥಗಳನ್ನು ಸಂಪಾದಿಸಬೇಕು. ಇವರು ಜಪಾದಿಗಳನ್ನು ಬಿಡಬಾರದು. ॥ ೨೯ ॥ ಹವಿಷ್ಯಾನ್ನವನ್ನು ಭೋಜಿಸ ಬೇಕು, ಭೂಮಿಯಲ್ಲಿ ಮಲಗಬೇಕು (ಚಾಪೆಯ ಮೇಲೆ, ಹಾಸಿಗೆಯಲ್ಲಲ್ಲ) ಸ್ತ್ರೀಸಂಗದ ತ್ಯಾಗ ಇತ್ಯಾದಿಗಳನ್ನು ಎಲ್ಲರೂ ಎಂದರೆ ಕರ್ತೃವೂ, ಬ್ರಾಹ್ಮಣರೂ ಪಾಲಿಸಲೇಬೇಕು. ॥ ೩೦ ॥ ಹಿಂದಿನ ದಿನದಲ್ಲಿ ಅಥವಾ ಶ್ರಾದ್ಧದ ದಿವಸದ ಬೆಳಿಗ್ಗೆಯಾಗಲೀ ತಾನೇ ಖುದ್ದಾಗಿ ಅಥವಾ ತನ್ನ ಗಂಡು ಮಗನ ಮೂಲಕವಾಗಿಯಾಗಲೀ ಶ್ರಾದ್ಧಕ್ಕೆ ಬೇಕಾಗಿರುವಷ್ಟು (ತನ್ನ ಶಕ್ತ್ಯಾನುಸಾರ) ಬ್ರಾಹ್ಮಣರುಗಳನ್ನು ಆಹ್ವಾನ ಮಾಡಬೇಕು. ॥ ೩೧ ॥ ಶ್ರಾದ್ಧದಲ್ಲಿ ದೇವಸ್ಥಾನದಲ್ಲಿ ಇಬ್ಬರು ಬ್ರಾಹ್ಮಣರುಗಳನ್ನು, ಪಿತೃಸ್ಥಾನದಲ್ಲಿ ಮೂರು ಬ್ರಾಹ್ಮಣರುಗಳನ್ನು ಅಥವಾ ಒಂದೊಂದಕ್ಕೂ ಒಬ್ಬೊಬ್ಬ ಬ್ರಾಹ್ಮಣರನ್ನಾದರೂ ಕೂಡಿಸಬೇಕು. ಹದಿಮೂರು ವಿಶ್ವೇದೇವತೆಗಳಿರುವುದರಿಂದ ಬ್ರಾಹ್ಮಣರುಗಳನ್ನು ದೇವಸ್ಥಾನಕ್ಕೆ ಹದಿಮೂರು ಮಂದಿಗಳಿಗಿಂತ ಹೆಚ್ಚಿಗೆ ಆಹ್ವಾನಿಸಬಾರದು. ॥ ೩೨ ॥ ಶ್ರಾದ್ಧಕರ್ಮದ ವಿಸ್ತಾರದಿಂದ ಶ್ರಾದ್ಧದ ಕ್ರಿಯೆ, ದೇಶ, ಕಾಲ, ದ್ರವ್ಯ ಮತ್ತು ಶುಚಿತ್ವ ಇವುಗಳಿಗೆ ನ್ಯೂನತೆಯುಂಟಾಗುವುದರಿಂದ ಶ್ರಾದ್ಧವಿಸ್ತಾರ ಮಾಡಬಾರದು. ॥ ೩೩ ॥ ಅಥವಾ ದರ್ಭೆಯ ಬ್ರಾಹ್ಮಣರನ್ನು ಆಸನಗಳಲ್ಲಿ ಕೂಡಿಸಿ ಪ್ರೈಷಾನುಪ್ರೇಷ ಸಂಯುಕ್ತವಾದ ಶ್ರಾದ್ಧವನ್ನು ಆಚರಣೆ ಮಾಡತಕ್ಕದ್ದು. (ಪ್ರೈಷವೆಂದರೆ ಬ್ರಾಹ್ಮಣರನ್ನು ಕುರಿತು ಆಡುವ ಮಾತು. ಅನುಪ್ರೈಷವೆಂದರೆ ಅವರು ಕೊಡುವ ಉತ್ತರ) ॥ ೩೪ ॥ ಶ್ರಾದ್ಧದ ದಿನ ಹಲ್ಲುಕಡ್ಡಿ, ಬೇವಿನಕಡ್ಡಿಯಿಂದ ಹಲ್ಲುಜ್ಜುವುದು, ಮೈಗೆಲ್ಲ ಎಣ್ಣೆಹಚ್ಚಿಕೊಂಡು ಅಭ್ಯಂಗನ ಸ್ನಾನ ಮಾಡುವುದು, ಸ್ತ್ರೀಸಂಭೋಗ, ಔಷಧಗಳ ಸೇವನೆ, ಮತ್ತೊಬ್ಬರ ಮನೆಯ ಅನ್ನವನ್ನು ಶ್ರಾದ್ಧಕ್ಕೆ ಉಪಯೋಗಿ-ಸುವುದಾಗಲೀ ಹಾಗು ಈ ಅನ್ನವನ್ನು ತಿನ್ನುವುದಾಗಲೀ ಇವುಗಳನ್ನು ಶ್ರಾದ್ಧ ಕರ್ತೃವು ಸರ್ವಥಾ ಬಿಡಬೇಕು. ॥ ೩೫ ॥ ಪುನಃ (ರಾತ್ರಿಭೋಜನ) ಭೋಜನಮಾಡುವುದು, ಸ್ತ್ರೀಸಂಗ,

ಶಾಸ್ತ್ರಪಾಠಗಳನ್ನು ಓದುವುದು, ಓದಿಸುವುದು ತಾನು ದಾನಗಳನ್ನು ಸ್ವೀಕರಿಸುವುದಾಗಲಿ, ಶೂದ್ರರ ಜೊತೆ ಮಾತನಾಡುವುದನ್ನಾಗಲೀ, ಸುಳ್ಳಾಡುವುದನ್ನಾಗಲೀ ಬಿಡಬೇಕು. ॥ ೩೬ ॥

ಹಗಲು ನಿದ್ರಿಸುವುದು, ಬಹಳ ದೂರ ನಡೆಯುವುದು, ಕೋಪಮಾಡಿಕೊಳ್ಳುವುದು ಮತ್ತು ಜಗಳವಾಡುವುದು ಇವುಗಳನ್ನು ಶ್ರಾದ್ಧಕರ್ತೃವೂ ಮತ್ತು ಭೋಕ್ತೃವೂ ಬಿಡಬೇಕು. ॥ ೩೭ ॥

ಶ್ರಾದ್ಧಕ್ಕೆ ಒಪ್ಪಿಕೊಂಡು ಬರದೇ ಇರತಕ್ಕದ್ದು, ಕರೆದ ಮೇಲೂ ತಡಮಾಡುವುದು. ಸಂಧ್ಯಾವಂದನೆ, ಮತ್ತೊಬ್ಬರಿಂದ ದಾನಸ್ವೀಕಾರ, ಹೋಮ ಇವುಗಳನ್ನು ಶ್ರಾದ್ಧಭೋಕ್ತೃವು ಬಿಡಬೇಕು. ॥ ೩೮ ॥

ಈ ರೀತಿಯಾಗಿ ನಿಯಮಗಳನ್ನು ಪಾಲಿಸುತ್ತಾ, ನಿತ್ಯಕರ್ಮಗಳನ್ನು ಬಿಡದೆ ಮಾಡುತ್ತಾ, ಶ್ರಾದ್ಧಕಾಲವನ್ನು ನಿರೀಕ್ಷಿಸುತ್ತಾ ಎಲ್ಲಾ ಬ್ರಾಹ್ಮಣರು ಇರಬೇಕು. ॥ ೩೯ ॥

॥ ಇಪ್ಪತ್ತನೆಯ ಅಧ್ಯಾಯವು ಸಮಾಪ್ತಿಯಾಯಿತು ॥

## ॥ ಅಥ ಏಕವಿಂಶೋಽಧ್ಯಾಯಃ ॥ ೨೧ ॥

ಸೂತ ಉವಾಚ—

ದಿವಸೇ ಪಂಚಧಾ ಭಕ್ತೇ ಯಸ್ತುರ್ಯಃ ಕಾಲ ಆಪತೇತ್ ।
ಪಾರ್ವಣಂ ಕರ್ತುಮಾರಬ್ಧಂ ತಸ್ಮಿನ್ಕಾಲೇ ಸಮಾಪಯೇತ್ ॥ ೧ ॥
ಏಕೋದ್ದಿಷ್ಟಂ ತೃತೀಯೇ ಸ್ಯಾದಾದಿಮೇ ವೃದ್ಧಿಹೇತುಕಮ್ ।
ತತ್ತತ್ಕಾಲೇ ತು ತಾನ್ಯೇವ ಯಾನಿ ಸ್ಯುರ್ಯನ್ನಿಮಿತ್ತತಃ ॥ ೨ ॥
ಕೃತ್ವಾಥ ಕರ್ತಾ ಸ್ನಾನಾದಿ ನಿತ್ಯಕರ್ಮ ಯಥೋಚಿತಂ ।
ಜಯಂ ಚ ಸೂಕ್ತಪಾಠಂ ಚ ವಿದಧೀತಾತ್ಮಶುದ್ಧಯೇ ॥ ೩ ॥
ಪೌರುಷಂ ಪಂಚರಾತ್ರಂಚ ವೈಷ್ಣವಂ ವಾಮನೀಯಕಮ್ ।
ದೈವಂ ಶುದ್ಧಿನಿಮಿತ್ತಂ ಚ ಪಠೇದ್ವಾಶ್ವಿಣಯಾದಥ ॥ ೪ ॥
ತತಃ ಶ್ರಾದ್ಧಾಯ ಸಂಭಾರಾನಾಹರೇದ್ವಿಧಿಚೋದಿತಂ ।
ಸಮೂಲಾ ಮಂತ್ರತಶ್ಛಿನ್ನಾ ಪ್ರಶಸ್ತಾ ಪೈತೃಕೇ ಕುಶಾಃ ॥ ೫ ॥
ಹವಿಸ್ತು ವ್ರೀಹಿಗೋಧೂಮಯವಮುದ್ಗಪ್ರಿಯಙ್ಗವಃ ।
ನೀವಾರಸರ್ಷಪತಿಲಾಃ ಶ್ಯಾಮಕಾಶ್ಯಾಮಮಾಷಕಾಃ ॥ ೬ ॥
ರಾಜಮಾಷಮಸೂರಾಂಶ್ಚ ಕೋದ್ರವಾನ್ಕೋರದೂಷಕಾನ್ ।
ಆಢಕೀಂ ಚಣಕಾರಾಜಸರ್ಷಪಾಂಶ್ಚ ವಿವರ್ಜಯೇತ್ ॥ ೭ ॥
ಪಿಪ್ಪಲೀ ನಾಗರಂ ಚೈಲಾ ಕರ್ಪೂರಂ ಮರಿಚಾನಿ ಚ ।
ಜೀರಕಂ ದೇವಕುಸುಮಂ ಶ್ರಾದ್ಧಸಂಸ್ಕಾರಕಂ ಭವೇತ್ ॥ ೮ ॥
ದಧಿ ತಕ್ರಂ ಪಯೋ ಗವ್ಯಂ ಘೃತಮೇವ ತು ಮಾಹಿಷಂ ।
ಗುಡಶ್ಚ ಶರ್ಕರಾಸ್ವರ್ವಾಃ ಫಣಿತಂ ಚ ವಿಶಿಷ್ಯತೇ ॥ ೯ ॥
ಕುಸ್ತುಂಬುರುಃ ಸೂರಣಶ್ಚ ಶುದ್ಧಾ ಕೋಶಾಲಕೀ ಶಿಲಾ ।
ಉರ್ವಾರುಕಂ ಪಟೋಲಂ ಚ ಜಂಭೀರಂ ಚಾಂದ್ರಕಂ ತಥಾ ॥ ೧೦ ॥
ವರಿಂಡಃ ಶರ್ಕರಾ ಕಂದೋ ವಾಸ್ತುಕಂ ಮೂಲಕಂ ತಥಾ ।
ಅಗಸ್ತಿಂ ತಂಡುಲೀಯಂ ಚ ಶಾಕಾನ್ಯೇತಾನಿ ಪೈತೃಕೇ ॥ ೧೧ ॥
ಕೂಷ್ಮಾಂಡಾ ಲಾವುವಾರ್ತಾಕ ಕೋವಿದಾರಶ್ಚ ಪಾಲಿಕೀಂ ।
ತುಂಡೀರಂ ಪೋತಮರಿಖೌ ಪಟೋಲಂ ದೀರ್ಘಮೇವ ಚ ॥ ೧೨ ॥
ಕಪಿತ್ಥಶುಗ್ರಶಾಖೀ ಚ ವರ್ಜಯೇತ್ ಶ್ರಾದ್ಧಕರ್ಮಣಿ ।
ಶಲಾದೂನಿ ಚ ಪಕ್ವಾನಿ ಶಸ್ತಾನ್ಯಾಮ್ರಫಲಾನ್ಯಲಂ ॥ ೧೩ ॥
ಲವಣಂ ಸೈಂಧವಂ ಗ್ರಾಹ್ಯಂ ಮಾನಸಂ ಚ ನ ಸಂಭರಮ್ ।
ಪರೋಕ್ಷಂ ತದಪಿ ಗ್ರಾಹ್ಯಂ ಭೂಮಿಜಾದಿ ತು ವರ್ಜಯೇತ್ ॥ ೧೪ ॥

ಕೂಪಾದಿಪ್ರಭವಂ ತೋಯಂ ಪ್ರಶಸ್ತಂ ಬ್ರಾಹ್ಮಣಾಹೃತಂ ।
ಶೂದ್ರಾಹೃತಂ ಪರ್ಯುಷಿತಂ ವರ್ಜಯೇತ್ವಲ್ವಲಾದಿಜಮ್ ॥ ೧೫ ॥
ಗಂಗಾದಿ ಪ್ರಭವಂ ತೋಯಂ ತುಳಸೀಪದ್ಮಕೈರವೇ ।
ನ ತತ್ಪರ್ಯುಷಿತಂ ಜ್ಞೇಯಂ ವಿನಿಯೋಜ್ಯಂ ಯಥಾಸುಖಮ್ ॥ ೧೬ ॥
ಖಡ್ಗ ಪಾತ್ರಂಚ ಮಧ್ಯಾಹ್ನಂ ನೈಪಾಲಃ ಕಂಬಲಸ್ತಥಾ ।
ತಿಲಾ ದರ್ಭಾಸ್ತಥಾ ರೌಪ್ಯಂ ಭಾಗಃ ಸರ್ಪಿಶ್ಚ ಕಾಪಿಲಂ ॥ ೧೭ ॥
ಕೃಷ್ಣಾಜಿನಂ ಕಾನ್ಯಕಶ್ಚ ಹರನಿರ್ಮಾಲ್ಯಛರ್ದಿತಂ ।
ಕುತಪಾ ಇತಿ ವಿಖ್ಯಾತಾಃ ಕುತ್ಸಿತಧ್ವಂಸಕಾರಿಣಃ ॥ ೧೮ ॥
ಅರಣ್ಯೇ ಯೇ ಸಮುತ್ಪನ್ನಾ ಹ್ಯಕೃಷ್ಟಫಲಿತಾಸ್ತಥಾ ।
ಶ್ರಾದ್ಧೇ ತೇ ವೈ ಪವಿತ್ರಾಃ ಸ್ಯುಃ ಶ್ಯಾಮವರ್ಣಧರಾಸ್ತಿಲಾಃ ॥ ೧೯ ॥
ಅರಣ್ಯಕಾ ಸಂಭವೇ ತು ಗ್ರಾಮ್ಯಾ ಏವಾರ್ಥಸಾಧಕಾಃ ।
ನೀಲಾಭಾವೇ ತು ಶವಲಾ ವಿನಿಯೋಜ್ಯಾಥ ವಾಸಿತಾಃ ॥ ೨೦ ॥
ಕರಂಟಃ ಕುಕ್ಕುಟೋ ಕೂಚ ವಿಡ್ವರಾಹೋ ನಪುಂಸಕಃ ।
ವೃಷಲೀ ತತ್ಪತಿಃ ಕವ್ಯೇ ವರ್ಜ್ಯಾ ನಾರೀ ರಜಸ್ವಲಾ ॥ ೨೧ ॥
ಅನ್ನಂ ತೇ ಯದಿ ಪಶ್ಯೇರನ್ ಹವ್ಯಕವ್ಯೋಪಕಲ್ಪಿತಂ ।
ಉತ್ಸಾರ್ಯಂ ತದ್ಭವೇದನ್ನಂ ಸಂಸ್ಕಾರೇಣ ಭವೇಚ್ಛುಚಿ ॥ ೨೨ ॥
ಕೂಷ್ಮಾಂಡೈಃ ಪಾವಮಾನೀಭಿಃ ಶುದ್ಧವಲ್ಯಾಸ್ತರಸ್ತಮೇ ।
ಸದರ್ಭಪಾಣಿರಾಸಿಂಚೇದ್ವಾರಿಣಾ ದೋಷಶಾಂತಯೇ ॥ ೨೩ ॥
ರಕ್ತಂ ಚಿತ್ರಾಂಬರಂ ಛತ್ರಮುಪಾನತ್ಪಾದುಕೇ ತಥಾ ।
ರಕ್ತಂ ಪುಷ್ಪಂ ಚಂದನಂ ಚ ಶ್ರಾದ್ಧ ಭೂಮೌ ವಿವರ್ಜಯೇತ್ ॥ ೨೪ ॥
ಘಂಟಾನಿನಾದಂ ಶಂಬೂಕಂ ಶಂಖಮುನ್ಮತ್ತಕಂ ತಥಾ ।
ಜಾತ್ಯರ್ಕಹಯಶತ್ರೂಂಶ್ಚ ವರ್ಜಯೇತ್ಕವ್ಯನಾಶಕಮ್ ॥ ೨೫ ॥
ಏವಂ ವಿವೇಕತೋ ಧೀಮಾನ್ ವರ್ಜ್ಯಾವರ್ಜ್ಯಪುರಸ್ಸರಮ್ ।
ಶ್ರಾದ್ಧಯಜ್ಞಂ ಶುಭೇ ಕಾಲೇ ಪ್ರಾರಭೇತ ಮುನೀಶ್ವರಾಃ ॥ ೨೬ ॥
ಉಕ್ತಸಾಧನಸಂಪನ್ನಃ ಪುನಃ ಸ್ನಾತ್ವಾ ಯಥಾವಿಧಿ ।
ವಾಸೋ ಹತಂ ಪರೀಧಾಯ ಪ್ರಾರಭೇತ್ಪಾಕಮುತ್ತಮಮ್ ॥ ೨೭ ॥
ಸೌವರ್ಣೈರ್ರಾಜತೈಸ್ತಾಮ್ರೈಃ ಕಾಂಸ್ಯೈರ್ವಾ ಪಿತ್ತಲೋದ್ಭವೈಃ ।
ನೂತನೈರವ್ರಣೈಃ ಕುರ್ಯಾದ್ದೃಢೈರ್ಮಾರ್ತಿಕಭಾಜನೈಃ ॥ ೨೮ ॥
ನ ದೂಷಿತೇಷು ಭಿನ್ನೇಷು ನಾಯಸೇಷ್ವಪಿ ಕರ್ಹಿಚಿತ್ ।
ಸ್ವಾರ್ಥಂ ಕೃತೋಪಯೋಗೇಷು ವಿದಧ್ಯಾತ್ ಮೃನ್ಮಯೇಷು ಚ ॥ ೨೯ ॥

ಸ್ವಯಂ ಪತ್ನ್ಯಥವಾ ಬಂಧು ಸ್ವಪಿಂಡಸ್ಸೋದರಸ್ತಥಾ ।
ಕೃತೋಪಕಾರಃ ಕುರ್ವೀತ ಶ್ರಾದ್ಧೀಯಂ ಪಚನಂ ದ್ವಿಜಾಃ ॥ ೩೦ ॥
ಪಾಖಂಡಾಂ ಪುಂಶ್ಚಲೀಂ ವಂಧ್ಯಾಂ ಪತಿತಾಂ ಚಾನ್ಯಗೋತ್ರಜಾಂ ।
ನ್ಯೂನಾಧಿಕಾಂಗೀಂ ಉಗ್ರಾಂಚ ಮಾತೃಭಿನ್ನಾಂ ವಿಭತೃಕಾಂ ॥ ೩೧ ॥
ಗರ್ಭಘ್ನೀಂ ಗರ್ಭಿಣೀಂ ಕನ್ಯಾಂ ಮೃತವಂಧ್ಯಾಂ ಚ ದುರ್ಮುಖೀಮ್ ।
ವರ್ಜಯೇಚ್ಛ್ರಾದ್ಧಪಾಕಾರ್ಥಂ ಮಾತೃಪಿತೃವಂಶಜಾಮ್ ॥ ೩೨ ॥
ಕೇಷಾಂಚಿತ್ತ್ವಾಚಿತಂ ಗ್ರಾಹ್ಯಂ ಲೌಕಿಕೇ ವಾನಲೇ ಶುಭೇ ।
ವಿಧುರೋಚ್ಛಿನ್ನವಹ್ನ್ಯಾದೇಃ ಪೃಷ್ಟೋದಿವಿವಿಧಾನತಃ ॥ ೩೩ ॥
ಪಾಕಮೇವಂ ಸಮಾರಭ್ಯ ಷಣ್ಮುಹೂರ್ತೇ ದಿನೇ ಗತೇ ।
ದ್ವಿಜಾನಾಕರಣೇ ತೇಷಾಂ ಪ್ರತ್ಯೇಕಂ ಪ್ರೇಷಯೇದ್ವ್ರತೀ ॥ ೩೪ ॥
ತತಃ ಸ್ನಾತ್ವಾ ಗತೇ ಕಾಲೇ ಕೃಂತಕೇಶನಖಾನ್ ದ್ವಿಜಾನ್ ।
ಅಭಿಗಮ್ಯ ಯಥಾನ್ಯಾಯಂ ಪ್ರಯಚ್ಛೇದ್ದಂತಧಾವನಂ ॥ ೩೫ ॥
ತೈಲೇನಾಮಲಕಲ್ಕೇನೋನ್ಮರ್ದಿತಾನುಷ್ಣವಾರಿಣಾ ।
ಪಾತ್ರೈರೌದುಂಬರೈಃ ಸ್ನಾಪ್ಯ ದೇವಪೂರ್ವಂ ದ್ವಿಜಾತಿಭಿಃ ॥ ೩೬ ॥
ಸ್ನಾತಾಂಸ್ತಾನ್ಕೃತಪಾಚ್ಛೌಚಾನ್ ಆಗತಾನ್ ಪಿತೃವತ್ಸ್ವಯಂ ।
ಉಪವೇಶ್ಯಾಸನೇ ಸಮ್ಯಗೂರ್ಧ್ವಪುಂಡ್ರಧರಾನ್ದ್ವಿಜಾನ್ ॥ ೩೭ ॥
ಶ್ರಾದ್ಧ ಕೃಚ್ಛುಕ್ಲ ವಾಸಾಸ್ಸ್ಯಾತ್ ನ ಸ್ಯಾದ್ದ್ವಿಗುಣ ವಸ್ತ್ರಧೃಕ್ ।
ನ ಚಾರ್ದ್ರಸ್ಯೂತವಸನೋ ವಿಕಚ್ಛೋಽದೇವವಸ್ತ್ರಧೃಕ್ ॥ ೩೮ ॥
ಸರ್ವಸಾಧನಸಂಪನ್ನೋ ಮೌನೀ ಚ ವಿಜಿತೇಂದ್ರಿಯಃ ।
ಪ್ರಾಙ್ಮುಖಃ ಪುಂಡರೀಕಾಕ್ಷಂ ಧ್ಯಾತ್ವಾ ಸಂಕಲ್ಪಮಾಚರೇತ್ ॥ ೩೯ ॥

॥ ಇತಿ ಏಕವಿಂಶೋಽಧ್ಯಾಯಃ ॥

## ॥ ಇಪ್ಪತ್ತೊಂದನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಹಗಲು ಅಂದರೆ ೧೨ ಗಂಟೆಗಳನ್ನು ಐದು ಭಾಗ ಮಾಡಿದಾಗ ಐದನೇ ಒಂದು ಭಾಗವು ೨ ಗಂ. ೨೪ ನಿ. ವಾಗುವುದು. ಐದನೇ ಮೂರು ಭಾಗವು ಮಧ್ಯಾಹ್ನ ೧ ಗಂ. ೧೨ ನಿ. ಕ್ಕೆ ಮುಗಿಯುವುದು. ನಂತರ ಪ್ರಾರಂಭವಾಗುವ ಐದನೇ ನಾಲ್ಕನೆಯ ಭಾಗದಲ್ಲಿ ಪ್ರಾರಂಭಿಸಿ ಆ ಕಾಲದಲ್ಲಿಯೇ ಆರಂಭಿಸಿದ ಪಾರ್ವಣ ಶ್ರಾದ್ಧವನ್ನು ಮಧ್ಯಾಹ್ನ ೩ ಗಂ. ೩೬ ನಿ. ಒಳಗೆ ಮುಗಿಸಬೇಕು. ॥ ೧ ॥ ಏಕೋದ್ದಿಷ್ಟ ಶ್ರಾದ್ಧವನ್ನು ಮೂರನೆಯ ಕಾಲದಲ್ಲಿ ಅಂದರೆ ಬೆಳಿಗ್ಗೆ ೧೦ ಗಂ. ೪೮ ನಿಮಿಷದ ಮೇಲೆ, ಮಧ್ಯಾಹ್ನ ಒಂದು ಗಂಟೆ ೧೨ ನಿ. ದ ಒಳಗೆ ಮುಗಿಸಬೇಕು. ವೃದ್ಧಿಶ್ರಾದ್ಧವನ್ನು ಮೊದಲನೆಯ ಭಾಗದಲ್ಲಿ ಮುಗಿಸಬೇಕು. (ಏಕೋದಿಷ್ಟ ಶ್ರಾದ್ಧ—ಒಂದೇ ಪಿತೃವನ್ನುದ್ದೇಶಿಸಿ ಮಾಡುವ ಶ್ರಾದ್ಧವು.)

ಯಾವ ಯಾವ ಶ್ರಾದ್ಧಗಳನ್ನು ಯಾವ ಯಾವ ಕಾರಣಗಳಿಂದ ಮಾಡುತ್ತೇವೆಯೋ ಅವವುಗಳನ್ನು ಆಯಾಯಾ ಕಾಲಗಳಲ್ಲೇ ಮಾಡಿಮುಗಿಸಬೇಕು. ॥ ೨ ॥ ಕರ್ತೃವು ಶ್ರಾದ್ಧಾಚಾರಣೆಯ ದಿನದಲ್ಲಿ ಬೆಳಿಗ್ಗೆ ಸ್ನಾನಾದಿ ನಿತ್ಯಕರ್ಮಗಳನ್ನು ಯಥೋಚಿತವಾಗಿ ಮಾಡಬೇಕು, ಜಪಮಾಡಬೇಕು. ಗಾಯತ್ರೀ ಜಪ, ಮಹಾಮಂತ್ರ, ವೇದಪಾಠವನ್ನು ತನ್ನ ಆತ್ಮ ಶುದ್ಧಿಗೋಸ್ಕರ ಮಾಡಬೇಕು. ॥ ೩ ॥ ಪುರುಷಸೂಕ್ತ, ಜಿತಂತೇಸ್ತೋತ್ರ, ವಿಷ್ಣುಸೂಕ್ತ, ವಾಮನಸೂಕ್ತ ದೇವಋಚ ಹಾಗೂ ಶುದ್ಧಿನಿಮಿತ್ತಕಸೂಕ್ತಗಳನ್ನು ದೇಹ ಮನಸ್ಸುಗಳ ಶುದ್ಧಿಗಾಗಿ ಯಥಾಕಾಲ ಯಥಾಶಕ್ತಿ ಸ್ವಲ್ಪ ಸ್ವಲ್ಪವಾದರೂ ಪಾರಾಯಣ ಮಾಡಬೇಕು. ತಾನೇ ಮಾಡಲು ಅಸಮರ್ಥನಾದರೆ ಇನ್ನೊಬ್ಬರ ಮೂಲಕ ಪಾರಾಯಣ ಮಾಡಿಸಿ ಅದನ್ನು ಕೇಳಬೇಕು. ॥ ೪ ॥ ಶ್ರಾದ್ಧ ವಿಧಿ ವಿಧಾನಗಳಲ್ಲಿ ಹೇಳಿರುವಂತೆ ಶ್ರಾದ್ಧ ಸಾಮಗ್ರಿಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳಬೇಕು ; ಪಿತೃ ಶ್ರಾದ್ಧಕ್ಕೆ ಬೇರು ಸಹಿತವಾಗಿ ದರ್ಭೆಗಳನ್ನು ಮಂತ್ರ ಪೂರ್ವಕವಾಗಿ ಕಿತ್ತು ತಂದಿಟ್ಟು ಕೊಳ್ಳಬೇಕು. ॥ ೫ ॥ ಭತ್ತ, ಗೋಧಿ, ಜವೆಗೋಧಿ, ಹೆಸರು, ನವಣೆ, ಹಿಪ್ಪಲಿ, ಸಾಸಿವೆ, ಎಳ್ಳು, ಸಾಮೆ, ಉದ್ದು ಇವು ಶ್ರಾದ್ಧಕ್ಕೆ ಅವಶ್ಯಕವಾದವುಗಳು. ॥ ೬ ॥ ರಾಜಉದ್ದು(ಕಾರಾಮಣಿ), ಕಡಲೆ, ಹಾರಕ, ತೊಗರಿಬೇಳೆ, ರಾಜಸರ್ಷಪ ಇವು ಶ್ರಾದ್ಧದಲ್ಲಿ ಸರ್ವಥಾ ನಿಷಿದ್ಧವಾದ ಪದಾರ್ಥಗಳು. ॥ ೭ ॥ ಹಿಪ್ಪಲಿ, ಹೇರಳೇಹಣ್ಣು, ಏಲಕ್ಕಿ, ಗುಗ್ಗುಳ, ಕರ್ಪೂರ, ಮೆಣಸು, ಜೀರಿಗೆ, ಲವಂಗ ಇವುಗಳು ಶ್ರಾದ್ಧಕ್ಕೆ ಉತ್ತಮ ಸಂಸ್ಕಾರವನ್ನು ತಂದುಕೊಡುವುದು. ಮೊಸರು, ಮಜ್ಜಿಗೆ, ಗೋವಿನ ಹಾಲು, ಎಮ್ಮೆಯ ತುಪ್ಪ, ಬೆಲ್ಲ, ಸಕ್ಕರೆ ಇವೆಲ್ಲವೂ ಶ್ರಾದ್ಧಕ್ಕೆ ವಿಶೇಷ. ॥ ೮ ॥ ಕೊತ್ತಂಬರೀ, ಸುವರ್ಣಗಡ್ಡೆ, ಹಾಗಲಕಾಯಿ, ಪಡವಲಕಾಯಿ, ಅಳಲೇಕಾಯಿ, ಸೌತೇಕಾಯಿ, ನಿಂಬೇಹಣ್ಣು, ಹಸಿಶುಂಠಿ, ಹರಳು, ಗೆಣಸು, ಚಕ್ಕೋತದಸೊಪ್ಪು, ಶ್ಯಾಮೀಗಡ್ಡೆ, ಅಗಸೇಸೊಪ್ಪು, ಚಿಲುಕೀರೆ, ಇವೇ ಮುಂತಾದ ಕಾಯಿಪಲ್ಯೆಗಳು ಪಿತೃಕಾರ್ಯಕ್ಕೆ ಸಮ್ಮತವಾದವುಗಳು. ॥ ೧೦-೧೧ ॥ ಕುಂಬಳ ಕಾಯಿ, ಬದನೇಕಾಯಿ, ಕೆಂಪಾಚಾಳಗಿಡದ ಸೊಪ್ಪು, ಪಾಲಕ್ ಸೊಪ್ಪು, ತೊಂಡೆಕಾಯಿ, ಹಸಿ ಮೆಣಸು, ಉದ್ದವಾದ ಪಡವಲಕಾಯಿ, ಬೇಲದ ಹಣ್ಣು ಮತ್ತು ನುಗ್ಗೆಕಾಯಿ ಇವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು. ಪಕ್ವವಾದ ಮಾವಿನಹಣ್ಣು ಶ್ರಾದ್ಧದಲ್ಲಿ ಪ್ರಶಸ್ತ. ॥೧೨-೧೩॥ ಸೈಂಧವಲವಣವನ್ನು ಉಪಯೋಗಿಸಬಹುದು. ಅದೂ ಸಹ ಪರೋಕ್ಷವಾಗಿ ಸ್ವೀಕಾರಾರ್ಹವೇ ಹೊರತಾಗಿ ಪ್ರತ್ಯಕ್ಷವಾಗಿ ಅಲ್ಲ. (ಅಂದರೆ ಪದಾರ್ಥದಲ್ಲಿ ಬೆರೆತ ಉಪ್ಪು ಸ್ವೀಕಾರಾರ್ಹವೇ ಹೊರತಾಗಿ, ಸಾಕ್ಷಾತ್ತಾಗಿ ಉಪ್ಪನ್ನು ಸ್ವೀಕರಿಸಬಾರದು. ಪ್ರಾಯಃ, ಇದಕ್ಕಾಗಿಯೇ ಶ್ರಾದ್ಧದಲ್ಲಿ ಉಪ್ಪನ್ನು ಬಡಿಸುವುದಿಲ್ಲ.) ॥ ೧೪ ॥ ಬ್ರಾಹ್ಮಣರಿಂದ ತರಲ್ಪಟ್ಟ ಬಾವಿಯ ನೀರು ಶ್ರಾದ್ಧಕ್ಕೆ ಪ್ರಶಸ್ತವಾಗುವುದು. ಶೂದ್ರರಿಂದ ತರಲ್ಪಟ್ಟ ಮತ್ತು ಹೊಲಸಾದ ಹಳ್ಳ ಮೊದಲಾದವುಗಳಿಂದ ತಂದ, ಹಿಂದಿನ ದಿನ ತಂದ ನೀರನ್ನು ಉಪಯೋಗಿಸಬಾರದು. ॥ ೧೫ ॥ ಗಂಗಾದಿಗಳಿಂದ ಉದ್ಭವವಾದ ನೀರು, ತುಳಸೀ, ಕಮಲಪುಷ್ಪ ಮತ್ತು ನೀಲ ಕಮಲ ಇವುಗಳು ಹಿಂದಿನ ದಿನದ್ದಾದರೂ ದೂಷಿತವಾದುದನ್ನಾಗಿ ಪರಿಗಣಿಸಬಾರದು. ॥ ೧೬ ॥ ಖಡ್ಗಮೃಗದ ಚರ್ಮದ ಚೀಲ, ಮಧ್ಯಾಹ್ನ, ನೇಪಾಲ ದೇಶದ ಕಂಬಳಿ, ಎಳ್ಳು, ದರ್ಭೆ, ಬೆಳ್ಳಿ, ಜೇನುತುಪ್ಪ, ಕರೀ ವರ್ಣದ ಆಕಳ ತುಪ್ಪವು, ಕೃಷ್ಣ ಮೃಗದ ಚರ್ಮ, ಗಂಗಾಜಲ, ದೌಹಿತ್ರ, ಕುತಪಕಾಲ ಮತ್ತು ಜೇನುತುಪ್ಪ ಇವೆಲ್ಲವೂ ಶ್ರಾದ್ಧದ ದೋಷಗಳನ್ನು ಪರಿಹಾರ ಮಾಡತಕ್ಕವುಗಳು. ॥ ೧೭-೧೮ ॥ ಅರಣ್ಯದಲ್ಲಿ ಭೂಮಿಯನ್ನು ಉಳದೇನೇ ಉತ್ಪನ್ನವಾಗಿರತಕ್ಕ ಗೆಡ್ಡೆಗೆಣಸು, ಕರಿ ಎಳ್ಳು ಕೂಡಾ ಶ್ರಾದ್ಧಕ್ಕೆ

ಪವಿತ್ರವಾದುದು. ॥ ೧೯ ॥ ಕಾಡು ಕರೀ ಎಳ್ಳು ಸಿಗದಿದ್ದರೆ ಗ್ರಾಮದಲ್ಲಿ ಬೆಳೆದಿರುವ ಎಳ್ಳೂ ಶ್ರಾದ್ಧಕ್ಕೆ ಬರುವುದು. ಇದೂ ಸಿಗದಿದ್ದರೆ ಬಿಳೀ ಎಳ್ಳು ಕೆಲಸಕ್ಕೆ ಬರುವುದು ॥ ೨೦ ॥ ನಾಸ್ತಿಕ, ಸಾಂಕರ್ಯದಿಂದ ಹುಟ್ಟಿದವನು, ಆಸೆಬುರಕ, ನಪುಂಸಕ, ವಿವಾಹದ ಮೊದಲೇ ರಸಜ್ವಲೆ ಯಾದವಳು, (ವೃಷಲೀ) ವೃಷಲೀಪತಿ, ಮತ್ತು ರಜಸ್ವಲೆಯಾಗಿರುವ ಸ್ತ್ರೀಯರು, ಇವರು ಗಳೆಲ್ಲರೂ ಶ್ರಾದ್ಧಕ್ಕೆ ವರ್ಜ್ಯರು. ॥ ೨೧ ॥ ಇವರುಗಳಿಂದ ನೋಡಲ್ಪಟ್ಟ ಅನ್ನಾದಿಗಳು ಅಶುದ್ಧ ವಾಗುವುದರಿಂದ ಪರಿತ್ಯಜಿಸಬೇಕು. ಅಥವಾ ಆಪತ್ಕಾಲದಲ್ಲಿ ಸಂಸ್ಕಾರದಿಂದ ಇವುಗಳನ್ನು ಶುದ್ಧಪಡಿಸಬಹುದು. ಶುದ್ಧವಾದ ಬಟ್ಟೆಯಲ್ಲಿ ದರ್ಭೆಯನ್ನು ಹಿಡಿದುಕೊಂಡು ಕೂಷ್ಮಾಂಡ ಸೂಕ್ತ ಮತ್ತು ಪವಮಾನ ಸೂಕ್ತಗಳಿಂದ ಈ ದರ್ಭೆಯಿಂದ ನೀರನ್ನು ಇವುಗಳ ಮೇಲೆ ಚುಮುಕಿಸಿದರೆ ಶುದ್ಧವಾಗುತ್ತವೆ. ॥ ೨೨-೨೩ ॥ ಕೆಂಪು ಬಣ್ಣದ ಚಿತ್ರಗಳುಳ್ಳ ವಸ್ತ್ರಗಳನ್ನಾಗಲೀ, ಛತ್ರಿಯನ್ನಾಗಲೀ, ಪಾದರಕ್ಷೆಗಳನ್ನಾಗಲೀ ಕೆಂಪುಹೂವುಗಳನ್ನಾಗಲೀ, ಕೆಂಪು ಚಂದನವನ್ನಾಗಲೀ ಶ್ರಾದ್ಧಸ್ಥಳಕ್ಕೆ ತರಲೇಬಾರದು. ॥ ೨೪ ॥ ಘಂಟಾನಾದ, ಶಂಬೂಕ, ಶಂಖ, ಧತ್ತೂರಪುಷ್ಪ, ಜಾಜಿಪುಷ್ಪ, ಎಕ್ಕ, ಎಮ್ಮೆ ಇವುಗಳು ಶ್ರಾದ್ಧನಾಶಕವಾದ್ದರಿಂದ ಶ್ರಾದ್ಧಸ್ಥಳದಲ್ಲಿ ವರ್ಜನೀಯ. ॥ ೨೫ ॥ ಹೇ ಮುನಿಶ್ರೇಷ್ಠರೇ! ಈ ರೀತಿಯಾಗಿ ಬುದ್ಧಿವಂತನಾದವನು ಬೇಡದವುಗಳನ್ನೆಲ್ಲಾ ಬಿಟ್ಟು ಬೇಕಾದವುಗಳನ್ನೆಲ್ಲಾ ಸಂಗ್ರಹಿಸಿಟ್ಟುಕೊಂಡು ಶುಭಕಾಲದಲ್ಲಿ ಈ ಶ್ರಾದ್ಧರೂಪವಾದ ಯಜ್ಞವನ್ನು ಪ್ರಾರಂಭಿಸತಕ್ಕದ್ದು. ॥ ೨೬ ॥ ಇದುವರೆಗೆ ಹೇಳಿದ ಸಾಧನಗಳುಳ್ಳವನಾಗಿ, ವಿಧಿವತ್ತಾಗಿ ಪುನಃ ಸ್ನಾನ ಮಾಡಿ ಒಗೆದ ಬಟ್ಟೆಗಳನ್ನುಟ್ಟುಕೊಂಡು ಶ್ರಾದ್ಧಕ್ಕೆ ಬೇಕಾದ ಅಡಿಗೆಗಳನ್ನು ತಯಾರು ಮಾಡತಕ್ಕದ್ದು. ॥ ೨೭ ॥ ಬಂಗಾರದ, ಬೆಳ್ಳಿಯ, ತಾಮ್ರದ, ಕಂಚಿನ ಅಥವಾ ಹಿತ್ತಾಳೆಯ ಪಾತ್ರೆಗಳಲ್ಲಿ ಅಥವಾ ಗಟ್ಟಿಮುಟ್ಟಾದ ಮಣ್ಣಿನ ಮಡಿಕೆಗಳಲ್ಲಾಗಲೀ ಪಾಕಗಳನ್ನು ತಯಾರಿಸಬೇಕು; ಮತ್ತು ಅಡಿಗೆ ಪಾತ್ರೆಗಳಲ್ಲಿ ಒಡುಕು ಪಚ್ಚು ಮುಂತಾದವುಗಳು ಇರಬಾರದು. ॥ ೨೮ ॥ ದೂಷಿತವಾದ ಹಾಗೂ ಬಡಕಲಾದ ಪಾತ್ರೆಗಳಲ್ಲಿ ಅಡುಗೆ ಮಾಡಬಾರದು. ಕಬ್ಬಿಣದ ಪಾತ್ರೆ ಗಳಲ್ಲಿ ಅಡಿಗೆಗಳನ್ನು ಎಂದೂ ಮಾಡಬಾರದು, ತಮಗೋಸ್ಕರ ಇಟ್ಟುಕೊಂಡಿರುವ ಪಾತ್ರೆಗಳ ಲ್ಲಾಗಲಿ ತಾವು ತಿಂದುಕುಡಿಯುವ ಪಾತ್ರೆಗಳಲ್ಲಿ ಅಥವಾ ಉಪಯೋಗಿಸಿದ ಮಣ್ಣಿನ ಪಾತ್ರೆಗಳಲ್ಲಿ ಅಡಿಗೆಗಳನ್ನು ಮಾಡಬಾರದು. (ಒಮ್ಮೆ ಉಪಯೋಗಿಸಿದ ಮಣ್ಣಿನ ಪಾತ್ರೆಗಳನ್ನು ತ್ಯಜಿಸಬೇಕು ಎಂದರ್ಥ.) ॥ ೨೯ ॥ ತಾನಾಗಲಿ, ತನ್ನ ಹೆಂಡತಿಯಾಗಲಿ, ಹತ್ತಿರದ ಬಂಧುವಾಗಲಿ, ಸಪಿಂಡರಿಗೆ ಸೇರಿದವರಾಗಲಿ, ಅಣ್ಣತಮ್ಮಂದಿರಾಗಲಿ ಅಥವಾ ತನಗೆ ಉಪಕಾರ ಮಾಡಿದ ವರಾಗಲಿ, ತನ್ನಿಂದ ಉಪಕೃತರಾದವರಾಗಲೀ ಶ್ರಾದ್ಧದ ಅಡಿಗೆಗಳನ್ನು ಮಾಡಬೇಕು. ॥ ೩೦ ॥ ಧರ್ಮಭ್ರಷ್ಟಳಾದ, ಪರಮಾತ್ಮನ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದ ವ್ಯಭಿಚಾರಿಣಿಯಾದ, ಬಂಜೆಯಾದ, ಪತಿತಳಾದ, ಜಾತಿಭ್ರಷ್ಟಳಾದ, ಬೇರೆ ಗೋತ್ರಕ್ಕೆ ಸೇರಿದ, ಊನವಾದ ಅಥವಾ ಅಧಿಕವಾದ ಅವಯವಗಳುಳ್ಳ, ಕ್ರೂರಿಯಾಗಿರುವ, ತಾಯಿಯಿಂದ ಭಿನ್ನಳಾಗಿದ್ದು ವಿಧವೆಯಾಗಿ ರುವ, ಗರ್ಭಪಾತವನ್ನು ಮಾಡಿಕೊಂಡಿರುವ, ಗರ್ಭಿಣಿಯಾಗಿರುವ, ವಿವಾಹವಾಗದೆ ಕನ್ಯೆಯಾಗಿರುವ, ಮಕ್ಕಳುಗಳು ಹುಟ್ಟುವಾಗಲೇ ಸಾಯುತ್ತಿರುವವಳಾದ, ಕೆಟ್ಟಮುಖ ವುಳ್ಳವಳಾದ, ತಂದೆ ಅಥವಾ ತಾಯಿಯ ವಂಶಗಳೆರಡಕ್ಕೂ ಸೇರಿರದ ಸ್ತ್ರೀಯನ್ನು ಶ್ರಾದ್ಧದ ಅಡಿಗೆಮಾಡಲು ನಿಯಮಿಸಬಾರದು. ॥ ೩೧-೩೨ ॥ ವಿಧುರಪುರುಷರು, ಅಗ್ನಿವಿಚ್ಛೇದವಾಗಿರತಕ್ಕವರು ಶುದ್ಧವಾದ ಲೌಕಿಕಾಗ್ನಿಯಲ್ಲಿ ಪೃಷ್ಠೋದಿವಿ ಎಂಬ ಮಂತ್ರಗಳನ್ನು ಜಪಿಸಿ ಪಾಕವನ್ನು

ಮಾಡಬಹುದು. (ಸಾಗ್ನಿಕರು ತಮ್ಮ ಔಪಾಸನಾನಂತರ, ಔಪಾಸನಾಗ್ನಿಯ ಏಕದೇಶವನ್ನು ಪಾಕಗೃಹದಲ್ಲಿ ಸ್ಥಾಪಿಸಿ ಅದರಲ್ಲಿ ಅಡುಗೆಯನ್ನು ಮಾಡಬೇಕು.) ॥ ೩೩ ॥ ಈ ರೀತಿ ಅಡಿಗೆ ಮಾಡಲು ಪ್ರಾರಂಭಿಸಿ ಹಗಲು ಆರು ಮುಹೂರ್ತಗಳು ಕಳೆದ ಮೇಲೆ ಕರ್ತೃವು ಬ್ರಾಹ್ಮಣ ರುಗಳನ್ನು ಆಹ್ವಾನಿಸಲು ಪ್ರತ್ಯೇಕವಾಗಿ ತಮ್ಮವರನ್ನು ಕಳುಹಿಸತಕ್ಕದ್ದು. ॥ ೩೪ ॥ ಅನಂತರ ಸ್ನಾನಮಾಡಿ ಕಾಲವು ಸೂಕ್ತವಾಗಿ ಇರಲಾಗಿ ಕ್ಷೌರ ಮಾಡಿಸಿಕೊಂಡಿರುವ ಮತ್ತು ಕತ್ತರಿಸಿದ ಉಗುರುಗಳುಳ್ಳಂಥಾ ಬ್ರಾಹ್ಮಣರುಗಳನ್ನು ಭೇಟಿಮಾಡಿ ಯಥಾ ಯೋಗ್ಯ ಹಲ್ಲುಜ್ಜುವ ಕಡ್ಡಿಯನ್ನು ಕೊಡಬೇಕು. ॥ ೩೫ ॥ ನೆಲ್ಲಿಕಾಯಿ ಮತ್ತು ಕಲ್ಕಪುಡಿ ಗಳಿಂದ ಕೂಡಿದ ಎಣ್ಣೆಯಿಂದ ಬ್ರಾಹ್ಮಣರ ಮೈಯನ್ನು ಮರ್ದನ ಮಾಡಿ ಅತ್ತಿಮರದ ಬಾನೆಯಲ್ಲಿರುವ ಬಿಸಿನೀರಿನಿಂದ ಸ್ನಾನಮಾಡಿಸಬೇಕು. ಹೀಗೆ ಮಾಡಿಸುವಾಗ ವಿಶ್ವೇದೇವಸ್ಥಾನಕ್ಕೆ ಆಹ್ವಾನಿಸಿದ ಬ್ರಾಹ್ಮಣರಿಗೆ ಮೊದಲು ಸ್ನಾನ ಮಾಡಿಸಬೇಕು. ॥ ೩೬ ॥ ಈ ರೀತಿಯಾಗಿ ಸ್ನಾನಮಾಡಿ ಶುದ್ಧರಾಗಿ ಬಂದಿರತಕ್ಕ ಆ ಬ್ರಾಹ್ಮಣರ ಪಾದಪ್ರಕ್ಷಾಲನೆ ಮಾಡಿ ತಮ್ಮ ಪಿತೃಗಳೋಪಾದಿಯಲ್ಲಿ ಆಸನಗಳಲ್ಲಿ ಕೂಡಿಸಬೇಕು. ॥ ೩೭ ॥ ಶ್ರಾದ್ಧಕರ್ತೃವು ಶುಭ್ರವಸ್ತ್ರವನ್ನು ಧರಿಸಬೇಕು. ಎಂದರೆ ಹರಿದ, ಸುಟ್ಟ, ಕೊಳಕಾದ ವಸ್ತ್ರಗಳನ್ನು ಉಡಬಾರದು. ವಸ್ತ್ರವನ್ನು ಎರಡು ಪದರ ಮಾಡಿ ಉಡಬಾರದು. ಒದ್ದೆ ವಸ್ತ್ರವನ್ನೂ, ಹೊಲಿದ ವಸ್ತ್ರವನ್ನೂ ಧರಿಸಬಾರದು. ಕಚ್ಚೆ ಇಲ್ಲದೇ ಇರಬಾರದು ಅಥವಾ ಪುಚ್ಛಕಚ್ಛವನ್ನು ಧರಿಸಬಾರದು, ಪಂಚಕಚ್ಛವನ್ನು ಧರಿಸಬೇಕು ಮತ್ತು ಉತ್ತರೀಯವನ್ನು ಧರಿಸದೇ ಇರಬಾರದು. ॥ ೩೮ ॥ ಈ ರೀತಿಯಾಗಿ ಎಲ್ಲ ವಿಧವಾದ ಸಾಧನೆಗಳಿಂದ ಸಜ್ಜಾಗಿದ್ದು, ಮನದಲ್ಲಿ ಪಿತ್ರಂತರ್ಯಾಮಿ ಪುಂಡರೀಕಾಕ್ಷರೂಪಿಪರಮಾತ್ಮನನ್ನೇ ಧ್ಯಾನಮಾಡುತ್ತಾ ಪೂರ್ವದಿಕ್ಕಿನ ಕಡೆಗೆ ಮುಖಮಾಡಿ ಕುಳಿತುಕೊಂಡು ಸಂಕಲ್ಪವನ್ನು ಮಾಡಬೇಕು. ॥ ೩೯ ॥

॥ ಇಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತಿಯಾಯಿತು ॥

## ॥ ಅಥ ದ್ವಾವಿಂಶೋಽಧ್ಯಾಯಃ ॥ ೨೨ ॥

ಶ್ರೀಶೇಷ ಉವಾಚ—

ಶ್ವೋಽದ್ಯೇದಾನೀಂ ಕರಿಷ್ಯೇಽಹಂ ಸಂಕಲ್ಪ್ಯಂ ತ್ರಿತಯಂ ವರಮ್ ।
ದ್ವಿತೀಯಂ ಮಧ್ಯಮಂ ಪ್ರೋಕ್ತಂ ನಿಕೃಷ್ಟಂ ತ್ವೇಕಮೇವ ಚ ॥ ೧ ॥
ಜಾನುಂ ದಕ್ಷಿಣಮಾನಮ್ಯ ದೇವಕಾರ್ಯಂ ಸಮಾಚರೇತ್ ।
ಪಾತಯಿತ್ವಾ ಜಾನುವಾಮಂ ಪಿತೃನ್ಪರಿಚರೇತ್ಸದಾ ॥ ೨ ॥
ಪ್ರದಕ್ಷಿಣಂ ಚ ದೇವಾನಾಂ ಪಿತೄಣಾಮಪ್ರದಕ್ಷಿಣಮ್ ।
ದೇವೇ ಋಜುಕುಶಾ ಭುಗ್ನಾ ದ್ವಿಗುಣಾಃ ಪಿತೃಕರ್ಮಣಿ ॥ ೩ ॥
ಸಂಕಲ್ಪೇ ಪಾದ್ಯಕಾಲೇ ಚಾಪ್ಯಾಸನಾಹ್ವಾನಯೋಸ್ತಥಾ ।
ಅರ್ಘ್ಯದಾನೇ ಚ ಗಂಧಾದ್ಯಾಚ್ಛಾದನಾಂತಾನ್ನದಾನಯೋಃ ॥ ೪ ॥
ಪಿಂಡದಾನೇಽಭ್ಯಂಜನೇ ಚಾಪ್ಯಂಜನಾಕ್ಷಯ್ಯಯೋಸ್ತಥಾ ।
ಕಾಲೇಷ್ವೇತೇಷು ಮತಿಮಾನ್ನಾಮಗೋತ್ರಂ ಪ್ರಕಾಶಯೇತ್ ॥ ೫ ॥
ಪ್ರಾಕ್ಸಂಬಂಧಂ ಸಮುಚ್ಚಾರ್ಯ ತತಸ್ತನ್ನಾಮಗೋತ್ರಕೇ ।
ತತೋ ರೂಪಂ ವದೇತ್ಕರ್ತಾ ಕರ್ಮ ಏತತ್ಸನಾತನಮ್ ॥ ೬ ॥
ಶರ್ಮ ವರ್ಮೇತಿ ಗುಪ್ತೇತಿ ದಾಸೇತ್ಯಂತೇ ಪ್ರಪೂರಯೇತ್ ।
ತತೋ ನಾಮೋಚ್ಚರೇತ್ಕರ್ತಾ ದ್ವಿಜಾದಿಷು ಯಥಾಕ್ರಮಮ್ ॥ ೭ ॥
ಆಸನೇ ಚಾಕ್ಷಯೇ ಷಷ್ಠೀ ದ್ವಿತೀಯಾವಾಹನೇ ಮತಾ ।
ಚತುರ್ಥ್ಯನ್ನಪ್ರದಾನೇ ಸ್ಯಾತ್ ಸಂಬುದ್ಧಿರಿತರತ್ರ ತು ॥ ೮ ॥
ಉಪವೀತೀ ಸದಾ ದೈವೇ ಪಿತ್ರ್ಯೇ ಪ್ರಾಚೀನವೀತಿಕಃ ।
ಅಸಂಸ್ಕೃತಶಿಶುಸ್ತ್ರೀಷು ಶೂದ್ರಾದೇರುತ್ತರೀಯತಃ ॥ ೯ ॥
ಸೂಕ್ತಸ್ತೋತ್ರಜಪೇ ಭ್ರಾಮೇ ಸ್ವಾಗತಾಹ್ವಾನಯೋಸ್ತಥಾ ।
ಅರ್ಘ್ಯೇ ಚ ಪರಿವೇಷೇ ವೈ ಚಾಘ್ರಾಣದ್ರವ್ಯದಾನಯೋಃ ॥ ೧೦ ॥
ವಿಸರ್ಗೇ ಸೌಮನಸ್ಯೇಽಪಿ ಹ್ಯಾಶಿಷಾಂ ಪ್ರಾರ್ಥನೇ ತಥಾ ।
ಸ್ವಸ್ತಿವಾಚ್ಯೇಷು ಪಿತ್ರ್ಯೇಷು ಭಾವ್ಯಂ ಕರ್ತ್ರೋಪವೀತಿನಾ ॥ ೧೧ ॥
ಆರಂಭೇ ಚ ಸಮಾಪ್ತೌ ಚ ಪಾದ್ಯಕೃತ್ಯಾರ್ಚನೇ ತಥಾ ।
ವಿಕಿರೇ ಪಿಂಡದಾನೇ ಚ ಕುರ್ಯಾದಾಚಮನಂ ಕೃತೀ ॥ ೧೨ ॥
ಆದಾವಂತೇ ಚ ತದ್ದ್ವಿಃ ಸ್ಯಾದೇಕದೈವೇತರತ್ರ ತು ।
ವಿಸರ್ಗೇ ತದ್ದ್ವಿಜಾತೀನಾಮಪಿ ಕೇಚನ ಮನ್ವತೇ ॥ ೧೩ ॥
ದಾನಂ ಚಾಧ್ಯಾಪನಂ ಪೂಜಾಜಪಹೋಮವ್ರತಾದಿಕಮ್ ।
ಶ್ರಾದ್ಧಾಹ್ನಿ ನಿತ್ಯನ್ನೋ ಕುರ್ಯಾದರ್ವಾಗ್ವಿಪ್ರವಿಸರ್ಗತಃ ॥ ೧೪ ॥

ಶಿಶುದೇವದ್ವಿಜಾತೀನಾಂ ತಪಸ್ವಿಬ್ರಹ್ಮಚಾರಿಣಾಮ್ ।
ತಾವದನ್ನಾದಿ ನೋ ದದ್ಯಾದ್ಯಾವನ್ನೋ ಪಿಂಡಪಾತನಂ ॥ ೧೫ ॥
ದೇವಾರ್ಚನಂ ದಕ್ಷಿಣಾದಿಪಾದಜಾನ್ವಂಸಮೂರ್ಧಸು ।
ಶಿರೋಂಸಜಾನುಪಾದೇಷು ಪಿತ್ರ್ಯೇ ವಾಮಾದಿ ತದ್ಭವೇತ್ ॥ ೧೬ ॥
ಪ್ರಾರಂಭೇ ವಿಪ್ರಪೃಚ್ಛೌಚೇ ಪೂಜನೋಚ್ಛಿಷ್ಟಪಿಂಡಯೋಃ ।
ಮಾರ್ಜನೋತ್ಥಾನಯೋಶ್ಚೈವ ದಾನಪ್ರಾರ್ಥನಯೋರ್ನತೌ ॥ ೧೭ ॥
ಪಾದಶೌಚೇಽಥ ಚೋಚ್ಛಿಷ್ಟಪಿಂಡಾಘ್ರಾಣಾವಸಾನಯೋಃ ।
ಪ್ರಾಗ್ದಾರಿತಕುಶತ್ಯಾಗ ಉತ್ತರೇಷಾಂ ಗ್ರಹೋ ಭವೇತ್ ॥ ೧೮ ॥
ಪಾದ್ಯೇ ಚೋಚ್ಛಿಷ್ಟಪಿಂಡೇ ಚ ಶೇಷಾಘ್ರಾಣೇ ಸಮಾಪನೇ ।
ಗ್ರಂಥಿಂ ವಿಸ್ರಂಸ್ಯ ನಿಯತಂ ಪವಿತ್ರಂ ವಿಸೃಜೇತ್ಕೃತೀ ॥ ೧೯ ॥
ವಿಚಾರ್ಯ ನಿಯಮಾನೇತಾನ್ಸ್ವಯಮಾಚಾರ್ಯಮೇವ ವಾ ।
ಸನ್ನಿಧಾಯ ತದಾಜ್ಞಾತಃ ಶ್ರಾದ್ಧಸಂಕಲ್ಪಮಾಚರೇತ್ ॥ ೨೦ ॥
ದ್ವಿಜಾಗ್ರೇ ಬ್ರಹ್ಮದಂಡಾರ್ಥಂ ಹಿರಣ್ಯಂ ಕುಶಮೇವ ಚ ।
ದ್ವಿಜಾನ್ಪ್ರದಕ್ಷಿಣೀಕೃತ್ಯ ಪ್ರಣಮೇದ್ದಂಡವದ್ಭುವಿ ॥ ೨೧ ॥
ತದನುಜ್ಞಾಂ ಸಮಾಧಾಯ ಭೂಯೋ ವಿಪ್ರಾನ್ನಿಮಂತ್ರ್ಯ ಚ ।
ಸ್ವಾಗತೀಕೃತ್ಯ ವಿಧಿವತ್ಪಾದ್ಯಂ ದದ್ಯಾದ್ಯಥಾಕ್ರಮಮ್ ॥ ೨೨ ॥
ಆಸನಾನಿ ತತೋ ದತ್ವಾ ವಿಧಿವದ್ದೇವಪೂರ್ವಕಮ್ ।
ಆವಾಹ್ಯಾರ್ಘ್ಯಪ್ರದಾನಂ ಸ್ಯಾದ್ಗಂಧಾದ್ಯೈರರ್ಚನಕ್ರಿಯಾ ॥ ೨೩ ॥
ಗಂಧಂ ಪುಷ್ಪಂ ಚ ಧೂಪಂ ಚ ದೀಪಮಾಚ್ಛಾದನಂ ತಥಾ ।
ಪ್ರದದ್ಯಾದ್ದೇವಪೂರ್ವಂ ತು ದದೇದಾದ್ಯಂತಯೋರಥ ॥ ೨೪ ॥
ಮಂಡಲೇಷ್ವಥ ಪಾತ್ರಾಣಿ ಸಮಾಸಾದ್ಯ ಯಥಾ ತಥಾ ।
ಪ್ರಾಪ್ಯಾನುಜ್ಞಾಂ ತತಃ ಕುರ್ಯಾದಗ್ನೌಕರಣಮಂಜಸಾ ॥ ೨೫ ॥
ಪರಿವೇಷ್ಯಾಥ ಪಾತ್ರೇಷು ಘೃತಪೂರ್ವಂ ಯಥಾಕ್ರಮಮ್ ।
ಗಾಯತ್ರ್ಯಾಭ್ಯುಕ್ಷ್ಯ ಮಂತ್ರೇಣ ತೇಭ್ಯಸ್ತೇಭ್ಯೋ ನಿವೇದಯೇತ್ ॥ ೨೬ ॥
ಬ್ರಹ್ಮಾರ್ಪಣಂ ತತಃ ಕೃತ್ವಾ ವಿಷ್ಣವೇಽನ್ನಂ ನಿವೇದಯೇತ್ ।
ಗಯಾಂ ಗದಾಧರಂ ವಿಷ್ಣುಂ ಪುಣ್ಯಕ್ಷೇತ್ರಂ ಜನಾರ್ದನಮ್ ॥ ೨೭ ॥
ಧ್ಯಾತ್ವಾ ಸಂಭೋಜಯೇದ್ವಿಪ್ರಾನ್ಪಠೇನ್ಮಂತ್ರಾಂಶ್ಚ ಪೈತೃಕಾನ್ ।
ಜ್ಞಾತ್ವಾ ತೃಪ್ತಿಂ ತತಃ ಕುರ್ಯಾದುಚ್ಛಿಷ್ಟಂ ವಿಕಿರೇದ್ಭುವಿ ॥ ೨೮ ॥
ಪಿಂಡದಾನಂ ತತಃ ಕುರ್ಯಾದ್ವಿಧಿನಾ ಭಕ್ತಿಮಾನ್ಸುತಃ ।
ಸಂಪೂಜ್ಯ ತಾನುಪಸ್ಥಾಯ ಪ್ರವಾಹಿಣ್ಯಾಂ ಪ್ರವಾಹಯೇತ್ ॥ ೨೯ ॥

ವಾಚಯಿತ್ವಾಥ ಸಂಪತ್ತಿಂ ದ್ವಿಜೈಃ ಶ್ರಾದ್ಧಸ್ಯ ಸಿದ್ಧಯೇ ।
ದ್ವಿಜೇಭ್ಯೋ ದಕ್ಷಿಣಾಂ ದತ್ವಾ ಪಿತೃಪೂರ್ವಂ ವಿಸರ್ಜಯೇತ್ ॥ ೩೦ ॥
ಪ್ರಾರ್ಥಯೇದದ್ಯ ಮೇತ್ಯಾದಿ ಮಂತ್ರೈಃ ಕರ್ತಾ ತತೋ ದ್ವಿಜಾನ್ ।
ವಿಸೃಜೇದ್ಭಕ್ತಿಸಂಯುಕ್ತಸ್ಸೀಮಾಂತಂ ಚಾಪ್ಯನುವ್ರಜೇತ್ ॥ ೩೧ ॥
ಮೌನ್ಯಾಗತ್ಯ ತತಃ ಪಶ್ಚಾತ್ ಕ್ಷಾಲಿತಾಂಘ್ರಿಕರಃ ಶುಚಿಃ ।
ನಿವೇದಯೇತ್ಕೃತಂ ಕರ್ಮ ವಿಷ್ಣವೇ ಪ್ರಭವಿಷ್ಣವೇ ॥ ೩೨ ॥
ಮಂತ್ರತಂತ್ರಕ್ರಿಯಾಪಾಕಶ್ರದ್ಧಾಭಕ್ತಿವಿವರ್ಜಿತಃ ।
ಮಯಾ ಕೃತಃ ಶ್ರಾದ್ಧಯಜ್ಞಸ್ತೇನ ತೃಪ್ಯೇಜ್ಜನಾರ್ದನಃ ॥ ೩೩ ॥

॥ ಇತಿ ದ್ವಾವಿಂಶೋಽಧ್ಯಾಯಃ ॥

## ॥ ಇಪ್ಪತ್ತೆರಡನೆಯ ಅಧ್ಯಾಯವು ॥

**ಶ್ರೀಶೇಷದೇವರು ಹೇಳಿದರು—**

"ನಾಳೆ ಶ್ರಾದ್ಧ ಮಾಡುವೆನು, ಇಂದು ಮಾಡುವೆನು ಮತ್ತು ಈಗಲೇ ಮಾಡುವೆನು" ಎಂದು ಮೂರು ಬಗೆಯಾಗಿಯೂ ಶ್ರಾದ್ಧಸಂಕಲ್ಪಗಳನ್ನು ಮಾಡುವುದಿವೆ; ಮೊದಲನೆಯದು ಅಧಮ ಪಕ್ಷ, ಎರಡನೆಯದು ಮಧ್ಯಮ ಪಕ್ಷ, ಮೂರನೆಯದು ಉತ್ತಮ ಪಕ್ಷ. ॥ ೧ ॥ ಬಲ ಮಂಡಿಯನ್ನು ಬಗ್ಗಿಸಿ ಕುಳಿತು ದೇವಕಾರ್ಯಗಳನ್ನು ಮಾಡಬೇಕು. ಯಾವಾಗಲೂ ಎಡ ಮಂಡಿಯನ್ನು ನೆಲಕ್ಕೆ ಊರಿ ಪಿತೃಕಾರ್ಯಗಳನ್ನು ಮಾಡತಕ್ಕದ್ದು. ॥ ೨ ॥ ದೇವತೆಗಳಿಗೆ ದರ್ಭೆಯನ್ನು ನೇರವಾಗಿಟ್ಟುಕೊಂಡು ಪಿತೃಗಳಿಗೆ ಎರಡರಷ್ಟು ದರ್ಭೆಗಳನ್ನು ಮಡಚಿ ಇಟ್ಟುಕೊಂಡು ದೇವತೆಗಳಿಗೆ ಪ್ರದಕ್ಷಿಣಾಕಾರವಾಗಿಯೂ ಪಿತೃಗಳಿಗೆ ಅಪ್ರದಕ್ಷಿಣೆಯಿಂದಲೂ ಪೂಜಾದಿಗಳನ್ನು ಮಾಡಬೇಕು. ॥ ೩ ॥ ಸಂಕಲ್ಪ ಮಾಡುವಾಗ, ಬ್ರಾಹ್ಮಣರಿಗೆ ಪಾದ್ಯ ಕೊಡುವಾಗ, ಆಸನ ಸಮರ್ಪಣೆ ಮಾಡುವಾಗ, ಆಹ್ವಾನಿಸುವಾಗ, ಅರ್ಘ್ಯಪ್ರದಾನ ಮಾಡುವಾಗ, ಗಂಧ, ಮಾಲ್ಯ, ಧೂಪ, ದೀಪ, ವಸ್ತ್ರಗಳನ್ನು ಕೊಡುವಾಗ, ಪಿಂಡಪ್ರದಾನ ಮಾಡುವಾಗ, ಪಿಂಡದಲ್ಲಿ ಆವಾಹಿತರಾಗಿರುವ ಪಿತೃಗಳಿಗೆ ಅಭ್ಯಂಜನ ಮಾಡಿಸುವಾಗ, ಅಂಜನ ಹಚ್ಚುವಾಗ, ಶ್ರೀ ವಿಷ್ಣುಪಾದದ ಪೂಜಾಮೂಲಕ ಪೂಜೆಯನ್ನು ವಟವೃಕ್ಷದಲ್ಲಿರುವ ಶ್ರೀಗಯಾಗಧಾಧರನಿಗೆ ಸಮರ್ಪಿಸಿ ಅಕ್ಷಯ್ಯವಾಗಲೆಂದು ಬೇಡುವಾಗ, ತಿಳುವಳಿಕೆಯುಳ್ಳವನು ಪಿತೃಗಳ ಹೆಸರು ಗೋತ್ರಗಳನ್ನು ಉಚ್ಚಾರ ಮಾಡಬೇಕು. ॥ ೪-೫ ॥ ಎಲ್ಲ ಸೇವಾದಿಗಳನ್ನು ಸಮರ್ಪಿಸುವಾಗ, ಕರ್ತೃವು ಯಾರ ಉದ್ದೇಶ ಸೇವಾದಿಗಳನ್ನು ಕೊಡುವನೋ ತನಗೂ ಅವರಿಗೂ ಇರುವ ಸಂಬಂಧವನ್ನು ಹೇಳಿ ಅನಂತರ ನಾಮವನ್ನೂ, ಗೋತ್ರವನ್ನೂ, ವಸ್ವಾದಿರೂಪವನ್ನು ಹೇಳಬೇಕು. ಇದು ಸನಾತನ ಪದ್ಧತಿ. ॥ ೬ ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಕ್ರಮವಾಗಿ ತಮ್ಮ ಹೆಸರಿನ ಕೊನೆಗೆ ಶರ್ಮಾ, ವರ್ಮಾ, ಗುಪ್ತ ದಾಸ ಎಂದು ಹೇಳಬೇಕು. ॥೭॥ ಆಸನ ಕೊಡುವಾಗ ಮತ್ತು "ಅಕ್ಷಯಮಸ್ತು" ಎಂದು ವಿಷ್ಣುಪಾದಕ್ಕೆ ಸಮರ್ಪಣೆ ಮಾಡುವಾಗ ಷಷ್ಠೀ ವಿಭಕ್ತಿಯನ್ನು, ಆಹ್ವಾನಿಸುವಾಗ ದ್ವಿತೀಯಾವಿಭಕ್ತಿಯನ್ನು, ಅನ್ನಸಮರ್ಪಣೆ ಮಾಡುವಾಗ ಚತುರ್ಥೀ ವಿಭಕ್ತಿಯನ್ನು, ಬೇರೆ ಎಲ್ಲ ಕಡೆಯಲ್ಲೂ ಸಂಬೋಧನಪ್ರಥಮಾವಿಭಕ್ತಿಯನ್ನು ಪ್ರಯೋಗಿಸಬೇಕು. ॥ ೮ ॥ ಜನಿವಾರವನ್ನು ದೇವಕಾರ್ಯಗಳಲ್ಲಿ ಯಾವಾಗಲೂ ಸವ್ಯ

ದಲ್ಲಿಯೂ (ಎಡಹೆಗಲ ಮೇಲೆ) ಪಿತೃಕಾರ್ಯಗಳಲ್ಲಿ ಅಪಸವ್ಯದಲ್ಲಿಯೂ (ಬಲ ಹೆಗಲಿನ ಮೇಲೆ) ಹಾಕಿಕೊಳ್ಳಬೇಕು. ವಿವಾಹವಾಗದ ಸ್ತ್ರೀಯರಿಗೆ, ಶಿಶುವಿಗೆ, ಮುಂಜಿಯಾಗದ ಗಂಡು ಮಗುವಿಗೆ, ಶೂದ್ರಾದಿಗಳು ಶ್ರಾದ್ಧ ಮಾಡುವಾಗ ಜನಿವಾರಕ್ಕೆ ಬದಲು ಉತ್ತರೀಯವನ್ನು ಸವ್ಯ, ಅಪಸವ್ಯದಲ್ಲಿ ಹಾಕಿಕೊಂಡು ಮಾಡಬೇಕು. ॥ ೯ ॥ ವೇದದ ಋಕ್ಕುಗಳನ್ನು ಮತ್ತು ಸ್ತೋತ್ರಪಾಠಗಳನ್ನು ಹೇಳುವಾಗ, ಜಪ ಮಾಡುವಾಗ, ಪ್ರದಕ್ಷಿಣೆ ಮಾಡುವಾಗ, ಬ್ರಾಹ್ಮಣರನ್ನೂ ಮತ್ತು ಪಿತೃದೇವತೆಗಳನ್ನೂ ಸ್ವಾಗತಿಸುವಾಗ, ಆವಾಹಿಸುವಾಗ ಅವರಿಗೆ ಅರ್ಘ್ಯಪ್ರದಾನ ಮಾಡುವಾಗ, ಊಟಕ್ಕೆ ಪದಾರ್ಥಗಳನ್ನು ಬಡಿಸುವಾಗ, ಪರಿಷೇಚನ ಮಾಡುವಾಗ ಪಿಂಡೋಚ್ಛಿಷ್ಟವನ್ನು ಆಘ್ರಾಣಿಸುವಾಗ, ಬ್ರಾಹ್ಮಣರನ್ನು ಪಿತೃದೇವತೆಗಳನ್ನು ಬೀಳ್ಕೊಡುವಾಗ ಆಶೀರ್ವಾದವನ್ನು ಪ್ರಾರ್ಥಿಸುವಾಗ, ಬ್ರಾಹ್ಮಣರ ಗುಣಗಾನ ಮಾಡುವಾಗಲೂ ಕರ್ತೃವು ಉಪವೀತದಲ್ಲಿಯೇ ಇರಬೇಕು. ॥ ೧೦-೧೧ ॥ ಶ್ರಾದ್ಧದ ಆರಂಭದಲ್ಲಿ ಮತ್ತು ಸಮಾಪ್ತಿಯಲ್ಲಿ ಪಾದ್ಯ ಕೊಡುವಾಗ, ಅರ್ಚನೆ ಮಾಡುವಾಗ, ವಿಕಿರದಾನ ಮಾಡುವಾಗ ಪಿಂಡಪ್ರದಾನದ ಕಾಲದಲ್ಲಿಯೂ ಕರ್ತೃವು ಪಾದ್ಯಾದಿಗಳನ್ನು ಕೊಟ್ಟ ನಂತರ ತಪ್ಪದೇ ಆಚಮನ ಮಾಡಬೇಕು. ॥ ೧೨ ॥ ಆರಂಭದಲ್ಲೂ, ಅಂತ್ಯದಲ್ಲೂ ಎರಡಾವರ್ತಿ ಆಚಮನ ಮಾಡಬೇಕು. ಮಿಕ್ಕ ಸಂದರ್ಭದಲ್ಲಿ ಒಂದಾವರ್ತಿ ಆಚಮನ ಮಾಡಬೇಕು. ಬ್ರಾಹ್ಮಣರ ವಿಸರ್ಜನೆಯಾದಮೇಲೂ ಆಚಮನ ಮಾಡಬೇಕೆಂದು ಕೆಲವರು ಹೇಳುತ್ತಾರೆ. ॥ ೧೩ ॥ ಶ್ರಾದ್ಧದ ದಿವಸ ದಾನ, ಅಧ್ಯಯನ, ಪೂಜಾ, ಜಪ, ಹೋಮ ಮತ್ತು ವ್ರತಾದಿಗಳನ್ನು ಬ್ರಾಹ್ಮಣರುಗಳನ್ನು ಕಳುಹಿಸುವುದಕ್ಕೆ ಮೊದಲೇ ಮಾಡಬಾರದು. ॥ ೧೪ ॥ ಶಿಶುಗಳಿಗೆ, ದೇವತೆಗಳಿಗೆ, ದ್ವಿಜರಿಗೆ, ತಪಸ್ವಿಗಳಿಗೆ ಮತ್ತು ಬ್ರಹ್ಮಚರ್ಯ ವ್ರತದಲ್ಲಿರುವ ಬ್ರಹ್ಮಚಾರಿಗಳಿಗೆ ಪಿಂಡವಿಸರ್ಜನೆಗೆ ಮೊದಲು ಊಟ ಮಾಡಿಸಬಾರದು. ॥ ೧೫ ॥ ಬಲ ಗಾಲು, ಬಲಮಂಡಿ ಬಲಹೆಗಲು ಮತ್ತು ತಲೆ ಈ ರೀತಿಯಾಗಿ ಕ್ರಮವಾಗಿ ಪಾದದಿಂದ ಪ್ರಾರಂಭಿಸಿ ದೇವಾರ್ಚನೆ ಮಾಡಬೇಕು. ಇದಕ್ಕೆ ವಿರುದ್ಧವಾಗಿ ಪಿತೃಗಳ ಅರ್ಚನೆಯಲ್ಲಿ ಮೊದಲು ತಲೆ, ಅನಂತರ ಎಡದ ಹೆಗಲು, ಮಂಡಿ ಮತ್ತು ಕಾಲು ಈ ರೀತಿಯಾಗಿರಬೇಕು. ॥ ೧೬ ॥ ಶ್ರಾದ್ಧದ ಪ್ರಾರಂಭದಲ್ಲಿ ಬ್ರಾಹ್ಮಣರನ್ನು ಅನುಮತಿ ಕೇಳುವುದು, ಪಿಂಡಗಳ ಪೂಜಾ, ಉಚ್ಛಿಷ್ಟಪಿಂಡಪ್ರದಾನ, ಪಿಂಡಸ್ಥಳಮಾರ್ಜನ, ಬ್ರಾಹ್ಮಣರನ್ನು ಕಳುಹಿಸಿಕೊಡಲು ಎಬ್ಬಿಸುವುದು, ವಸ್ತ್ರಾದಿದಾನ ಮತ್ತು ಪಿತೃಗಳನ್ನು ಕುರಿತು ಪ್ರಾರ್ಥನಾ, ನಮಸ್ಕಾರ, ಕಾಲು ತೊಳೆಯುವುದು, ಇವಿಷ್ಟು ಕಾರ್ಯಗಳಾದ ಮೇಲೆ ಇಲ್ಲಿಯವರೆಗೆ ಧರಿಸಿದ್ದ ಪವಿತ್ರವನ್ನು ವಿಸರ್ಜಿಸಬೇಕು. ಅನಂತರ ಮಾಡತಕ್ಕ ಕಾರ್ಯಗಳಿಗೆ ಪುನಃ ಪವಿತ್ರವನ್ನು ಧರಿಸಬೇಕು. ॥ ೧೭-೧೮ ॥ ಪಾದ ಪ್ರಕ್ಷಾಲನೆ, ಉಚ್ಛಿಷ್ಟಪಿಂಡಪ್ರದಾನ, ಪಿಂಡಶೇಷದ ಆಘ್ರಾಣ ಹಾಗೂ ಸಮಾಪ್ತಿಯಲ್ಲಿ ಪವಿತ್ರದ ಗ್ರಂಥಿಯನ್ನು ಬಿಚ್ಚಿ ವಿಸರ್ಜನೆ ಮಾಡಬೇಕು. ॥ ೧೯ ॥ ಈ ನಿಯಮಗಳನ್ನು ಚೆನ್ನಾಗಿ ವಿಚಾರ ಮಾಡಿ, ಆಚಾರ್ಯರನ್ನು ಆಹ್ವಾನಿಸಿ ಅವರ ಸನ್ನಿಧಾನದಲ್ಲಿ ಅವರ ಆಜ್ಞಾ ಪ್ರಕಾರ ಶ್ರಾದ್ಧ ಸಂಕಲ್ಪವನ್ನು ಮಾಡಬೇಕು. ॥ ೨೦ ॥ ಬ್ರಹ್ಮದಂಡಕ್ಕೋಸ್ಕರ ಬ್ರಾಹ್ಮಣರ ಮುಂದೆ ದಕ್ಷಿಣೆಯನ್ನು ದರ್ಭೆಯನ್ನು, ಮಂಡಿಸಬೇಕು ಮತ್ತು ಅವರಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಬೇಕು. ॥ ೨೧ ॥ ಅವರಿಂದ ಆಜ್ಞೆ ಪಡೆದು ಬ್ರಾಹ್ಮಣರುಗಳನ್ನು ಪುನಃ ಆಹ್ವಾನಿಸಿ, ಅವರನ್ನು ಸ್ವಾಗತಿಸಿ, ವಿಧಿವತ್ತಾಗಿ ಅವರಿಗೆ ಕ್ರಮರೀತ್ಯಾ ಪಾದ್ಯವನ್ನು ಕೊಡಬೇಕು. ॥ ೨೨ ॥ ಅನಂತರ ಮೊದಲು ದೇವತಾಸ್ಥಾನದ ಬ್ರಾಹ್ಮಣರಿಗೆ ಆಮೇಲೆ ಪಿತೃಸ್ಥಾನದ ಬ್ರಾಹ್ಮಣರಿಗೆ ಈ ರೀತಿಯಾಗಿ ಅವರಿಗೆ ಆಸನವನ್ನು ಕೊಡಬೇಕು. ಇದೇ ಕ್ರಮದಲ್ಲಿ ಆವಾಹನೆ ಮಾಡಿ ಅರ್ಘ್ಯ ಪ್ರದಾನ ಮಾಡಿ, ಗಂಧಾದಿಗಳಿಂದ ಅವರನ್ನು ಅರ್ಚನೆ ಮಾಡಬೇಕು. ॥ ೨೩ ॥ ಯಜ್ಞೋಪವೀತ, ಗಂಧ, ಪುಷ್ಪ,

ಧೂಪ, ದೀಪ, ಉಟ್ಟುಕೊಳ್ಳುವ ಮತ್ತು ಹೊದ್ದುಕೊಳ್ಳುವ ವಸ್ತ್ರಗಳನ್ನು ಕೊಡಬೇಕು. ॥ ೨೪ ॥ ದೇವಸ್ಥಾನದಲ್ಲಿ ಚೌಕವಾಗಿಯೂ ಪಿತೃಸ್ಥಾನದಲ್ಲಿ ಗುಂಡಗೂ ಮಂಡಲಗಳನ್ನು ಮಾಡಿ ಅವುಗಳ ಮೇಲೆ ಎಲೆಗಳನ್ನು ಹಾಕಬೇಕು. ಬ್ರಾಹ್ಮಣರ ಆಜ್ಞೆಯನ್ನು ಪಡೆದು 'ಅಗ್ನೌಕರಣ'ವನ್ನು ಮಾಡಬೇಕು. (ಇದು ಯಜುರ್ವೇದಿಗಳಿಗೆ; ಋಗ್ವೇದಿಗಳು ಪಾಣಿಹೋಮವನ್ನು ಮಾಡಬೇಕು.) ॥ ೨೫ ॥ ಪಾತ್ರಾಭಿಘಾರವಾಗಿ ತುಪ್ಪವನ್ನು ಮೊದಲು ಬಡಿಸಿ ಅನಂತರ ಎಲ್ಲ ಭೋಜನದ ಪದಾರ್ಥಗಳನ್ನು ಎಲೆಗಳಲ್ಲಿ ಕ್ರಮವಾಗಿ ಬಡಿಸಬೇಕು. ಗಾಯತ್ರೀಮಂತ್ರದಿಂದ ನೀರನ್ನು ಎಲೆಗಳ ಮೇಲೆ ಚಿಮುಕಿಸಿ ಅವರವರಿಗೆ ನಿವೇದನೆ ಮಾಡಬೇಕು. ॥ ೨೬ ॥ ''ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್। ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ॥'' ಎಂಬ ಮಂತ್ರದಿಂದ ಪಿತೃ/ಮಾತೃಅಂತರ್ಯಾಮಿ ಶ್ರೀಮಧ್ವವಲ್ಲಭಜನಾರ್ದನಃ ಪ್ರೀಯತಾಂ ಪ್ರೀತೋ ಭವತು ಎಂದು ಶ್ರೀವಿಷ್ಣುವಿಗೆ ಅನ್ನವನ್ನು ನಿವೇದನೆ ಮಾಡಬೇಕು. ಗಯೆಯ ಗದಾಧರ ದೇವರನ್ನೂ, ಪುಣ್ಯಕ್ಷೇತ್ರವಾದ ಪ್ರಯಾಗಕ್ಷೇತ್ರವನ್ನೂ ಶ್ರೀಜನಾರ್ದನದೇವರನ್ನೂ ಧ್ಯಾನ ಮಾಡಬೇಕು. ॥ ೨೭ ॥ ಹೀಗೆ ಶ್ರೀವಿಷ್ಣುವನ್ನು ಧ್ಯಾನಿಸುತ್ತಾ ಬ್ರಾಹ್ಮಣರಿಗೆ ಚೆನ್ನಾಗಿ ಬಡಿಸಿ ಭೋಜನಮಾಡಿಸಬೇಕು. ಅವರು ಭೋಜನ ಮಾಡುತ್ತಿರುವಾಗ ಪೈತೃಕಮಂತ್ರಗಳನ್ನು ಮತ್ತು ಅನ್ನಸೂಕ್ತಾದಿಗಳನ್ನು ಪಠಿಸಬೇಕು. ಬ್ರಾಹ್ಮಣರು ತೃಪ್ತಿಕರವಾಗಿ ಭೋಜನ ಮಾಡಿದ್ದಾರೆಂಬುದನ್ನು ದೃಢ ಮಾಡಿಕೊಂಡು ಅನಂತರ ಉಚ್ಛಿಷ್ಟವನ್ನು ಭೂಮಿಯಲ್ಲಿ ಚೆಲ್ಲಬೇಕು. (ಉಚ್ಛಿಷ್ಟವೆಂದರೆ ಬ್ರಾಹ್ಮಣರ ಎಂಜಲು ಎಂದರ್ಥವಲ್ಲ. ಬ್ರಾಹ್ಮಣರಿಗೆ ಬಡಿಸಿ ಉಳಿದ ಅನ್ನವೆಂದರ್ಥ. ಅದನ್ನು ದೇವತೆಗಳ ಹಾಗೂ ಪಿತೃಗಳ ಎಲೆಯ ಮುಂದೆ ವಿಕಿರದಾನ ಮಾಡಬೇಕು.) ॥ ೨೮ ॥ ಆಮೇಲೆ ಪಿಂಡಪ್ರದಾನವನ್ನು ವಿಧಿವತ್ತಾಗಿ ಚೆನ್ನಾಗಿ ಮಾಡಬೇಕು. ಪಿಂಡಗಳಲ್ಲಿ ಆವಾಹಿತರಾಗಿರುವ ಪಿತೃಗಳನ್ನು ಪೂಜಿಸಿ ಅನಂತರ ಅವುಗಳನ್ನು ಸ್ಥಳಾಂತರಿಸಿ ಹರಿಯುವ ನದಿಯ ಪ್ರವಾಹದಲ್ಲಿ ಬಿಡಬೇಕು. ॥ ೨೯ ॥ ಅನಂತರ ಶ್ರಾದ್ಧದ ಫಲಸಿದ್ಧಿಗೋಸ್ಕರ ಮಂತ್ರಪಠಣ ಮೂಲಕ ಬ್ರಾಹ್ಮಣರನ್ನು ಸ್ತೋತ್ರಮಾಡಿ ಅವರ ಆಶೀರ್ವಾದವನ್ನು ಮತ್ತು ಪ್ರಸನ್ನತೆಯನ್ನು ಗಳಿಸಬೇಕು. ಬ್ರಾಹ್ಮಣರಿಗೆ ದಕ್ಷಿಣೆ ತಾಂಬೂಲಾದಿಗಳನ್ನು ಕೊಟ್ಟು ಮೊದಲು ಪಿತೃಗಳನ್ನು, ನಂತರ ದೇವತೆಗಳನ್ನು ಬೀಳ್ಕೊಡಬೇಕು. ॥ ೩೦ ॥ ''ಅದ್ಯ ಮೇ ಸಫಲಂ ಜನ್ಮ ಭವತ್ಪಾದಾಬ್ಜ ವಂದನಾತ್'' ಎಂಬ ಮಂತ್ರದಿಂದಲೂ, ''ಆವಾಹನಂ ನ ಜಾನಾಮಿ ನ ಜಾನಾಮಿ ವಿಸರ್ಜನಮ್'' ''ನಾಹಂ ಕರ್ತಾ ಹರಿಃ ಕರ್ತಾ'' ಇತ್ಯಾದಿ ಸ್ತೋತ್ರಗಳಿಂದ ಶ್ರಾದ್ಧಕರ್ಮಗಳ ಲೋಪ ದೋಷಗಳ ಬಗ್ಗೆ ಪ್ರಾರ್ಥಿಸಿ ಅವರ ಕ್ಷಮೆಯನ್ನು ಬೇಡಬೇಕು. ಅನಂತರ ಕರ್ತೃವು ಬ್ರಾಹ್ಮಣರನ್ನು ಬೀಳ್ಕೊಡಬೇಕು. ಗಡಿ ದಾಟುವವರೆಗೆ ಅವರೊಡನೆ ಹೋಗಿ ಅವರು ಮರೆಯಾಗುವವರೆಗೆ ಮೌನವಾಗಿ ಅಲ್ಲಿಯೇ ಕುಳಿತಿದ್ದು ಮೌನದಿಂದ ಹಿಂತಿರುಗಿ, ಮನೆಗೆ ಬಂದ ಮೇಲೆ ಕಾಲುಗಳನ್ನು ತೊಳೆದುಕೊಂಡು, ಶುಚಿರ್ಭೂತನಾಗಿ ಮಾಡಿದ ಶ್ರಾದ್ಧಕರ್ಮಗಳನ್ನು ಶ್ರೀಹರಿಗೆ ಸಮರ್ಪಿಸಬೇಕು. ॥ ೩೧-೩೨ ॥ ಎಲೈ ಜನಾರ್ದನ ಸ್ವಾಮಿಯೇ! ''ಮಂತ್ರ, ತಂತ್ರ, ಕ್ರಿಯಾ ಕಲಾಪ, ಪಾಕ, ಸ್ಥಳ, ದ್ರವ್ಯ, ಕಾಲ ಮತ್ತು ಕರ್ಮಗಳಲ್ಲಿ ಉಂಟಾಗಿರುವ ಲೋಪದೋಷಗಳನ್ನೆಲ್ಲಾ ಮನ್ನಿಸಿ ಈ ಶ್ರಾದ್ಧಯಜ್ಞವನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡು'' ಎಂದು ಪ್ರಾರ್ಥಿಸಬೇಕು. ॥ ೩೩ ॥

॥ ಇಪ್ಪತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಯೋವಿಂಶೋಽಧ್ಯಾಯಃ ॥ ೨೩ ॥

ಶ್ರೀಶೇಷ ಉವಾಚ—

ಶ್ರಾದ್ಧಯಜ್ಞಂ ನಿವೈದ್ಯೈವಂ ವಿಷ್ಣೌ ಸದ್ಭಕ್ತವತ್ಸಲೇ ।
ಪಿಂಡಾನಾಂ ಪ್ರತಿಪತ್ತಿಂ ಚ ಸ್ವಯಂ ಕುರ್ಯಾದತಂದ್ರಿತಃ ॥ ೧ ॥
ಭೋಗಪ್ರಜೋತ್ತಮಗತಿರ್ಮೋಕ್ಷಕೀರ್ತ್ಯಾಯುಷಾಂ ಕೃತೇ ।
ಅಗ್ನಿಸ್ತ್ರೀಗೋದ್ವಿಜಜಲೇ ವಾಯಸೇಷು ನಿವೇದಯೇತ್ ॥ ೨ ॥
ದಕ್ಷಿಣಾಸ್ಯಃ ಕ್ಷಿಪೇತ್ಪಿಂಡಾನ್ಮಂತ್ರಾಮಂತ್ರವಿಭೇದತಃ ।
ಜಲ ಏವ ತು ತೀರ್ಥೇ ಸ್ಯಾದ್ವಿಕಲ್ಪೋಽನ್ಯತ್ರ ಈರಿತಃ ॥ ೩ ॥
ಶೃಗಾಲಖರಮಾರ್ಜಾರಮೂಷಕಶ್ವಭಿರಾಹತೌ ।
ಪ್ರಾಜಾಪತ್ಯಂ ತದಾ ಕುರ್ಯಾತ್ಪಿಂಡಾನ್ಸ್ವಾ ಪುನರಾಚಮೇತ್ ॥ ೪ ॥
ಶ್ವಪಚಾದ್ಯೈರ್ಯದಿ ಸ್ಪೃಷ್ಟೋ ವಿದೀರ್ಣೋ ಯದಿ ವಾ ಸ್ವಯಮ್ ।
ಪುನಃ ಪಾಕೇನ ತತ್ಕುರ್ಯಾತ್ಕಾಕಸ್ಪೃಷ್ಟಿರ್ನ ದೋಷಕೃತ್ ॥ ೫ ॥
ಯುಗಾದೌ ಪಿತೃಭೇ ವೃದ್ಧೌ ವಿಷುವತ್ಯಯನೇ ತಥಾ ।
ಭರಣೀಷು ಸುತೋತ್ಪತ್ತೌ ವ್ಯತೀಪಾತೇ ಗ್ರಹೇ ತಥಾ ॥ ೬ ॥
ರವೌ ಕುಜೇ ತಥಾನಂಗೇ ನಂದಾಸು ಚ ಭೃಗೌ ತಥಾ ।
ವೈಧೃತೌ ಚ ತಥಾ ಗಂಡೇ ಗರ್ಭಿಣ್ಯಾಂ ಸ್ವಸ್ತ್ರಿಯಾಂ ತಥಾ ॥ ೭ ॥
ವಿವಾಹವ್ರತಚೂಡಾಸು ವೃದ್ಧೌ ಪಿಂಡನಿಪಾತನಮ್ ।
ವರ್ಷಾರ್ಧಾರ್ಧೈಕಮಾಸೇಷು ನ ಕುರ್ಯಾತ್ತರ್ಪಣಂ ತಿಲೈಃ ॥ ೮ ॥
ಪಿಂಡಯಜ್ಞೇ ಮೃತಾಹೇ ಚ ತೀರ್ಥೇಷು ಚ ಮಹಾಲಯೇ ।
ಕೃತೋದ್ವಾಹೋಽಪಿ ಕುರ್ವೀತ ಪಿಂಡಾಂಶ್ಚ ತಿಲತರ್ಪಣಮ್ ॥ ೯ ॥
ಉಚ್ಛಿಷ್ಟಮಾರ್ಜನಂ ನೈವ ಯಾವದರ್ಕೋಽಸ್ತಮಾಗತಃ ।
ಗೃಹಾಂತರೇ ಭವೇದೇವಂ ವಿಸರ್ಗಾತ್ತೇಽನ್ಯಥಾ ಭವೇತ್ ॥ ೧೦ ॥
ಗರ್ತಾಯಾಂ ಜಾನುದಘ್ನಾಯಾಂ ಕ್ಷಯೋಚ್ಛಿಷ್ಟಂ ತು ನಿಕ್ಷಿಪೇತ್ ।
ನಿಯಮಃ ಕ್ಷಯ ಏವಾಸೌ ವಿಕಲ್ಪೋಽನ್ಯತ್ರ ಈರಿತಃ ॥ ೧೧ ॥
ವೈಶ್ವದೇವಂ ತತಃ ಕುರ್ಯಾಚ್ಛ್ರಾದ್ಧಶೇಷೇಣ ತಂತ್ರವಿತ್ ।
ಭಿಕ್ಷಾದಿಕಂ ತತೋ ದದ್ಯಾದ್ಧಂತಕಾರಾದಿಕಂ ಯತ್ ॥ ೧೨ ॥
ಶ್ರಾದ್ಧಾದಾವಾಹಿತಾಗ್ನೇಃ ಸ್ಯಾದ್ವೈಶ್ವದೇವಾದಿಕಾಃ ಕ್ರಿಯಾಃ ।
ಏಕಾದಶಾಹಿಕೇ ತ್ವಂತೇ ಪಾಕಭೇದೇನ ಕೀರ್ತಿತಾಃ ॥ ೧೩ ॥
ಆದೌ ಶುಭೇ ಕ್ಷಯೇ ಚಾಂತೇ ಮಾಯಾಮಧ್ಯೇ ಮಹಾಲಯೇ ।
ಭುಂಜೇದಂತೇ ನಿರಗ್ನೀನಾಮೇಕೋದ್ದಿಷ್ಟೇ ಚ ಸಾಮಕೇ ॥ ೧೪ ॥

ಸರ್ವತ್ರ ವಾಖಿಲಾಂತೇ ಸ್ಯಾದ್ವೈಶ್ವದೇವಾದಿಕಂ ಪರಮ್ ।
ತೇನೈವ ಪಾಕಶೇಷೇಣ ನಿತ್ಯಶ್ರಾದ್ಧಂ ತಥೈವ ಚ ॥ ೧೫ ॥
ತತಸ್ತು ವೈಶ್ವದೇವಾಂತೇ ಸಪಿಂಡಾದಿ ಪರೀವೃತಃ ।
ಭುಂಜೀತಾತಿಥಿಸಂಯುಕ್ತಃ ಶ್ರಾದ್ಧಶೇಷಂ ಯಥಾಸುಖಮ್ ॥ ೧೬ ॥
ಏಕಾದಶ್ಯಾದಿನಿಖಿಲವ್ರತಾಹನಿ ಭುಜಿಕ್ರಿಯಾಮ್ ।
ಆಘ್ರಾಣೇನೈವ ಕುರ್ವೀತ ಯತಸ್ತದುಭಯಾತ್ಮಕಮ್ ॥ ೧೭ ॥
ಗೋತ್ರಾಂತರಸ್ಥಾ ಯತಯೋ ವಿಧವಾವ್ರತನಿಶ್ಚಯೌ ।
ಶ್ರಾದ್ಧಾನ್ನಶೇಷಭೋಕ್ತಾರಸ್ತೇ ವೈ ನಿರಯಗಾಮಿನಃ ॥ ೧೮ ॥
ಮುಂಡನಂ ಶತಸಾಹಸ್ರಂ ಪ್ರಣವಸ್ಯ ಜಪೋ ಯತೇಃ ।
ಪ್ರಾಜಾಪತ್ಯೇನ ಶುದ್ಧಿಃ ಸ್ಯಾದನ್ಯೇಷಾಂ ಜಪರೂಪಿಣಾಮ್ ॥ ೧೯ ॥
ಸಪಿಂಡಾನಾಂ ಗೃಹೇ ಶ್ರಾದ್ಧೇ ಮಾತುಲಸ್ಯ ಗುರೋಸ್ತಥಾ ।
ಯೋಗಿನಃ ಶ್ವಶುರಸ್ಯಾಪಿ ಭೋಜನಂ ನೈವ ದೋಷಕೃತ್ ॥ ೨೦ ॥
ತದಹಃ ಶ್ರಾದ್ಧಕೃಚ್ಛೂದ್ರಂ ಭೋಜಯೇನ್ನ ಕದಾಚನ ।
ಶೇಷಂ ಚ ತಸ್ಮೈ ನೋ ದದ್ಯಾದನ್ಯಥಾ ದೋಷಭಾಗ್ಭವೇತ್ ॥ ೨೧ ॥
ತಾಂಬೂಲರಹಿತಃ ಕರ್ತಾ ಶೂದ್ರಭಾಷಾಪರಾಙ್ಮುಖಃ ।
ಭೂಮಿಶಾಯೀ ಭವೇದ್ರಾತ್ರೌ ಧ್ಯಾಯನ್ಬ್ರಹ್ಮ ಸನಾತನಮ್ ॥ ೨೨ ॥
ಕುರ್ಯಾದೇವಂವಿಧಂ ಶ್ರಾದ್ಧಂ ಭಕ್ತಿಮಾನ್ಶೌನಕಾದಯಃ ।
ಯೇ ತಸ್ಯ ಪಿತರಃ ಸರ್ವೇ ಬ್ರಹ್ಮಲೋಕೇ ಸಮಾಸತೇ ॥ ೨೩ ॥
ಅಶಕ್ತಾವೇಕವಿಪ್ರಂ ವಾ ಭೋಜಯೇತ್ಪಂಕ್ತಿಪಾವನಮ್ ।
ತೇನ ತತ್ಫಲಮಾಪ್ನೋತಿ ಶಕ್ತೌ ಸತ್ಯಾಂ ನ ತತ್ಫಲಮ್ ॥ ೨೪ ॥
ಸಾಂಕಲ್ಪಿಕಂ ವಾ ತತ್ಕುರ್ಯಾದ್ಧೇಮ್ನಾಮೇನ ಕ್ವಚಿತ್ಕ್ವಚಿತ್ ।
ಬ್ರಹ್ಮಾರ್ಪಣೇನ ವಿಧಿನಾ ಕುರ್ಯಾದ್ವಾ ಭಕ್ತಿಮಾನ್ನರಃ ॥ ೨೫ ॥
ಸ್ವಧಾಗ್ನೌಕರಣೇ ಪಿಂಡದಾನಮಾವಾಹನಂ ನ ಹಿ ।
ವಿಕಿರೇ ತು ವಿಕಲ್ಪಃ ಸ್ಯಾದ್ವಿಪ್ರಭುಜ್ಯಾಂತಮಾಚರೇತ್ ॥ ೨೬ ॥
ಆವಾಹನಾದಿ ಸರ್ವಂ ಸ್ಯಾತ್ಪಿಂಡದಾನಂ ಚ ಭೋಜನಮ್ ।
ತೇನೈವಾಗ್ನಿಕೃತಿಶ್ಚಾಪಿ ಚತುಸ್ತ್ರಿದ್ವಿಗುಣಂ ಹಿ ತತ್ ॥ ೨೭ ॥
ಪಾದಪ್ರಕ್ಷಾಲನಂ ಕೃತ್ವಾ ಪೀಠಾದಾವುಪವೇಶಯೇತ್ ।
ಪರಿವೇಷ್ಯ ತ್ಯಜೇದನ್ನಂ ಬ್ರಹ್ಮಾರ್ಪಣವಿಧಾನತಃ ॥ ೨೮ ॥
ದ್ರವ್ಯವಿಪ್ರಾದ್ಯಭಾವೇ ತು ಪಿಂಡದಾನಂ ನಿಪಾತಯೇತ್ ।
ಅಥವಾ ಶ್ರಾದ್ಧದಿವಸೇ ಭವೇನ್ನಿರಶನಃ ಸ್ವಯಮ್ ॥ ೨೯ ॥

ಉದಕುಂಭಾದಿ ವಾ ದದ್ಯಾದ್ಗವೇ ಯವಸಮೇವ ವಾ ।
ಸ್ನಾನಪೂರ್ವಂ ವಿಧಾನೇನ ಪಿತೄನ್ವಾ ತರ್ಪಯೇತ್ತಿಲೈಃ ॥ ೩೦ ॥
ಕಕ್ಷಂ ವಾ ಪ್ರದದೇತ್ಕಾಲೇಽಥವಾ ದದ್ಯಾತ್ಫಲಾದಿಕಮ್ ।
ಕಿಂಚಿದನ್ನಂ ತಿಲಾನಪಿ ದಕ್ಷಿಣಾಮಾತ್ರಮೇವ ವಾ ॥ ೩೧ ॥
ಗತ್ವಾಥ ವಾ ಮಹಾರಣ್ಯೇ ಕಕ್ಷಾಮೂಲೇ ಪ್ರದರ್ಶನಾತ್ ।
ದಕ್ಷಿಣಾಸ್ಯೋರುರುದೇವಮೂರ್ಧ್ವಬಾಹುಸ್ಸಮಾಹಿತಃ ॥ ೩೨ ॥
ನ ಮೇ ಧನಂ ನ ಮೇ ಚಾನ್ನಂ ಪಿತರಸ್ಸರ್ವಸಾಕ್ಷಿಣಃ ।
ಪ್ರಾಯಧ್ವಂ ತೃಪ್ತಿಮತುಲಾಂ ಕಕ್ಷಮೂಲಪ್ರದರ್ಶನಾತ್ ॥ ೩೩ ॥
ಅವಂಧ್ಯಂ ತದ್ದಿನಂ ನೇಯಂ ಯೇನ ಕೇನಾಪಿ ಕರ್ಮಣಾ ।
ಪೂರ್ಣಂ ಕರೋತಿ ಭಗವನ್ ಭಕ್ತ್ಯಾ ಭಕ್ತಜನಾಶ್ರಯಃ ॥ ೩೪ ॥
ತತಸ್ತು ತರ್ಪಣಂ ಕಾರ್ಯಂ ಶ್ರಾದ್ಧಾಂಗಂ ವಿಧಿಚೋದಿತಮ್ ।
ಅನ್ಯಥಾ ಶ್ರಾದ್ಧವೈಗುಣ್ಯಮಂಗಹಾನಿನಿಮಿತ್ತತಃ ॥ ೩೫ ॥
ಪೂರ್ವಂ ತೀರ್ಥಪ್ರದೇಶೇಷು ಪ್ರತ್ಯಬ್ದೇ ತು ಪರೇಽಹನಿ ।
ಪಕ್ಷಾಷ್ಟಕಾ ಹಿರಣ್ಯೇಷು ಶ್ರಾದ್ಧಾಂತೇ ತರ್ಪಣಂ ಭವೇತ್ ॥ ೩೬ ॥
ಸಕೃನ್ಮಹಾಲಯೇ ಶ್ವಃ ಸ್ಯಾನ್ಮಾಸಿಕಾದೌ ತು ನೈವ ತತ್ ।
ನಿತ್ಯಂ ಸರ್ವತ್ರ ಕರ್ತವ್ಯಮಾಬ್ದಿಕಂ ತಿಲವರ್ಜಿತಮ್ ॥ ೩೭ ॥
ಸ್ನಾತ್ವಾ ತೀರಂ ಸಮಾಗತ್ಯ ಉಪವಿಶ್ಯ ಸುಖಾಸನೇ ।
ಸಂತರ್ಪಯೇದ್ಯಥಾ ಪಿತೄನ್ ಸ್ನಾತ್ವಾ ವಸ್ತ್ರಂ ಹಿ ಧಾರಯೇತ್ ॥ ೩೮ ॥
ಗೋವಿಂದಂ ಪುಂಡರೀಕಾಕ್ಷಂ ಗಂಗಾಂ ಕಾಶೀಂ ಗಯಾಂ ತತಃ ।
ಗದಾಧರಂ ಸ್ಮರೇದ್ಭಕ್ತ್ಯಾ ಶ್ರಾದ್ಧಸಾದ್ಗುಣ್ಯಹೇತವೇ ॥ ೩೯ ॥
ಇತ್ಯೇವಂ ಮುನಿಶಾರ್ದೂಲಾಃ ಶ್ರಾದ್ಧಸ್ಯ ವಿಧಿರುತ್ತಮಃ ।
ಭವದ್ಭ್ಯಃ ಕಥಿತೋ ಯೇನ ಸರ್ವಸಿದ್ಧಿರ್ಭವೇನ್ನೃಣಾಮ್ ॥ ೪೦ ॥
ಯ ಏನಮಾಚರೇನ್ಮರ್ತ್ಯಃ ಶ್ರದ್ಧಾವಾನ್ವಿಷ್ಣುಭಕ್ತಿಮಾನ್ ।
ನ ತಸ್ಯ ಸಂತತಿಚ್ಛೇದಃ ಪರಲೋಕೇ ಪರಂ ಸುಖಮ್ ॥ ೪೧ ॥
ಪಿತೄನ್ಯಜಂತಿ ಯೇ ಶ್ರಾದ್ಧೈಸ್ತೈರ್ವಿಷ್ಣುಃ ಸುಪ್ರಸಾದಿತಃ ।
ತಸ್ಮಿಂಸ್ತೃಪ್ತೇ ಜಗನ್ನಾಥೇ ಸರ್ವಾಸ್ತುಷ್ಯಂತಿ ದೇವತಾಃ ॥ ೪೨ ॥
ಪಿತರೋ ದೇವತಾ ನಾಗಾ ಗಂಧರ್ವಾಽಪ್ಸರಸಸ್ತಥಾ ।
ಯಕ್ಷಸಿದ್ಧಮನುಷ್ಯಾಶ್ಚ ಹರಿರೇವ ಸನಾತನಃ ॥ ೪೩ ॥
ಯೇನೇದಮಖಿಲಂ ವ್ಯಾಪ್ತಂ ಜಗತ್ಸ್ಥಾವರಜಂಗಮಮ್ ।
ತಸ್ಮಾದ್ದಾತಾ ಚ ಭೋಕ್ತಾ ಚ ಸರ್ವೋ ವಿಷ್ಣುರ್ನ ಸಂಶಯಃ ॥ ೪೪ ॥

ವಿಪ್ರಾ ಯದಸ್ತಿ ಯನ್ನಾಸ್ತಿ ದೃಶ್ಯಂ ಚಾದೃಶ್ಯಮೇವ ವಾ ।
ಸರ್ವಂ ವಿಷ್ಣುಮಯಂ ಜ್ಞೇಯಂ ತಸ್ಮಾದನ್ಯನ್ನ ವಿದ್ಯತೇ ॥ ೪೫ ॥
ಆಧಾರಭೂತೋ ವಿಶ್ವಸ್ಯ ಸರ್ವಭೂತಾತ್ಮಕೋಽವ್ಯಯಃ ।
ಅನೌಪಮ್ಯಸ್ವಭಾವಶ್ಚ ಭಗವಾನ್‌ಹವ್ಯಕವ್ಯಭುಕ್ ॥ ೪೬ ॥
ಇಯಂ ಸರ್ವಪುರಾಣೋಕ್ತಾ ಸಾಮಾನ್ಯಾ ಪೈತೃಕೀ ಕ್ರಿಯಾ ।
ಕೃತ್ವೇಮಾಂ ಭಕ್ತಿಮಾನ್ಪುತ್ರೋ ಮುಚ್ಯತೇ ಪೈತೃಕಾದೃಣಾತ್ ॥ ೪೭ ॥
ಅಸಮರ್ಥ ಇಮಂ ಕಲ್ಪಂ ತದ್ದಿನೇ ಪ್ರಯತಃ ಪಠೇತ್ ।
ಶ್ರದ್ಧಾಭಕ್ತಿಯುತೋ ಮರ್ತ್ಯಃ ಶ್ರಾದ್ಧಜಂ ಫಲಮಾಪ್ನುಯಾತ್ ॥ ೪೮ ॥
ನಿರ್ಯತ್ಯಾಖ್ಯಾನಮಾಖ್ಯಾತಂ ಮಾಧವಪ್ರಾಪ್ತಿಕಾರಕಮ್ ।
ಪುನಃ ಶೇಷೋ ಯಥೋವಾಚ ವಚ್ಮಿ ತಚ್ಛೃಣುತಾಮಲಾಃ ॥ ೪೯ ॥

॥ ಇತಿ ತ್ರಯೋವಿಂಶೋಽಧ್ಯಾಯಃ ॥

## ॥ ಇಪ್ಪತ್ತಮೂರನೆಯ ಅಧ್ಯಾಯವು ॥

**ಶ್ರೀಶೇಷದೇವರು ಹೇಳಿದರು—**

ಸದ್ಭಕ್ತರಲ್ಲಿ ವಾತ್ಸಲ್ಯವುಳ್ಳ ಶ್ರೀಹರಿಯಲ್ಲಿ ಈ ರೀತಿಯಾಗಿ ಈ ಶ್ರಾದ್ಧರೂಪ ಯಜ್ಞವನ್ನು ಸಮರ್ಪಿಸಿ ತಾನೇ ಆಲಸ್ಯವನ್ನು ಬಿಟ್ಟು ಪಿಂಡಗಳ ವಿನಿಯೋಗವನ್ನು ಮಾಡಬೇಕು. ॥ ೧ ॥ ಐಹಿಕ ಸುಖ, ಸಂತಾನಪ್ರಾಪ್ತಿ, ಉತ್ತಮ ಲೋಕಗಳ ಪ್ರಾಪ್ತಿ, ಮೋಕ್ಷಪ್ರಾಪ್ತಿ, ಸತ್ಕೀರ್ತಿ ಮತ್ತು ದೀರ್ಘವಾದ ಆಯುಸ್ಸು ಇವುಗಳ ಪ್ರಾಪ್ತಿಗಾಗಿ ಪಿಂಡಗಳನ್ನು ಕ್ರಮವಾಗಿ ಅಗ್ನಿಯಲ್ಲಿ ಹಾಕಬಹುದು, ಪತ್ನಿಗೆ ಕೊಡಬಹುದು, ಆಕಳಿಗೆ ಇಡಬಹುದು, ಬ್ರಾಹ್ಮಣನಿಗೆ ಕೊಡಬಹುದು, ನೀರಲ್ಲಿ ಹಾಕಬಹುದು, ಕಾಗೆಗಳಿಗೂ ಇಡಬಹುದು. ॥ ೨ ॥ ದಕ್ಷಿಣ ದಿಕ್ಕಿಗೆ ಮುಖ ಮಾಡಿಕೊಂಡು ಕೆಲವು ಪಿಂಡಗಳನ್ನು ಮಂತ್ರಗಳೊಡನೆಯೂ ಕೆಲವನ್ನು ಮಂತ್ರವಿಲ್ಲದೆಯೇ ಈ ಮೇಲೆ ಹೇಳಿರುವುಗಳಲ್ಲಿ ಹಾಕಬೇಕು. ತೀರ್ಥಶ್ರಾದ್ಧದಲ್ಲಿ ನೀರಿಗೇ ಹಾಕಬೇಕು; ಬೇರೆಯೆಡೆ ಯಾವುದಕ್ಕೆ ಬೇಕಾದರೂ ಹಾಕಬಹುದು. ॥ ೩ ॥ ನರಿ, ಬೆಕ್ಕು, ಇಲಿ, ಕತ್ತೆ ಮತ್ತು ನಾಯಿ ಇವುಗಳಿಂದ ಪಿಂಡವು ಮುಟ್ಟಲ್ಪಟ್ಟರೆ ''ಪ್ರಾಜಾಪತ್ಯಕೃಚ್ಛ್ರ''ವನ್ನು ಮಾಡಬೇಕು. (ಪ್ರಾಜಾಪತ್ಯಕೃಚ್ಛ್ರ ಆರುದಿನಗಳಲ್ಲಿ ಮಾಡಬೇಕಾದ ವ್ರತವಿಶೇಷ) ಅಥವಾ ಪುನಃ ಪಿಂಡಪ್ರದಾನ ಮಾಡಬೇಕು. ॥ ೪ ॥ ಪಿಂಡವು ಚಂಡಾಲನಿಂದ ಸ್ಪರ್ಶವಾದರೆ ಅಥವಾ ಭಿನ್ನವಾದರೆ ಪುನಃ ಅನ್ನವನ್ನು ಮಾಡಿ ಪಿಂಡಗಳನ್ನು ತಯಾರಿಸಿ, ಅವುಗಳನ್ನು ಪುನಃ ಪ್ರದಾನ ಮಾಡಿ ಅನಂತರ ಕಾಕಾದಿಗಳಿಗೆ ಇಡಬೇಕು. ಕಾಗೆಯ ಸ್ಪರ್ಶವು ದೋಷವಲ್ಲ. ॥ ೫ ॥ ಯುಗಾದಿಗಳಲ್ಲಿಯೂ, ಪಿತೃನಕ್ಷತ್ರದಲ್ಲಿಯೂ, ವೃದ್ಧಿಶ್ರಾದ್ಧದಲ್ಲಿಯೂ ವಿಷುವತ್ಪುಣ್ಯಕಾಲದಲ್ಲಿಯೂ ಉತ್ತರಾಯಣ ದಕ್ಷಿಣಾಯನಗಳಲ್ಲಿಯೂ, ಭರಣೀ ನಕ್ಷತ್ರದಲ್ಲಿಯೂ, ಪುತ್ರಜನನದಲ್ಲಿಯೂ, ವ್ಯತೀಪಾತಯೋಗದಲ್ಲಿಯೂ, ಗ್ರಹಣಗಳಲ್ಲಿಯೂ ತ್ರಯೋದಶೀ (ಅನಂಗ), ಪಾಡ್ಯ, ಷಷ್ಠೀ, ಏಕಾದಶೀ (ನಂದಾತಿಥಿಗಳು)ಗಳಲ್ಲಿಯೂ, ಶುಕ್ರವಾರದಲ್ಲಿಯೂ, ವೈಧೃತಿಯೋಗದಲ್ಲಿಯೂ, ಗಂಡಯೋಗದಲ್ಲಿಯೂ, ಭಾನು ಮತ್ತು ಮಂಗಳವಾರಗಳಲ್ಲಿಯೂ, ತನ್ನ ಪತ್ನಿಯು ಗರ್ಭವತಿಯಾಗಿದ್ದಾಗಲೂ, ವಿವಾಹ, ಉಪನಯನ ಮತ್ತು

ಚಂಡಿಕೆಗಳಲ್ಲಿ ವೃದ್ಧಿಶ್ರಾದ್ಧವನ್ನು ಮಾಡುವಾಗಲೂ ಪಿಂಡಪ್ರದಾನ ಮಾಡಬಾರದು. ವಿವಾಹ, ಉಪನಯನ, ಚಂಡಿಕೆಗಳ ನಂತರ ಹಾಗೂ ವೃದ್ಧಿಶ್ರಾದ್ಧದ ನಂತರ ಕ್ರಮವಾಗಿ ವರ್ಷ, ಆರು ತಿಂಗಳು, ಮೂರು ತಿಂಗಳು ಹಾಗೂ ಒಂದು ತಿಂಗಳು ಎಳ್ಳಿನಿಂದ ತರ್ಪಣ ಕೊಡಬಾರದು. (ಈ ನಿಷೇಧವು ಕರೀಎಳ್ಳಿನ ತರ್ಪಣಕ್ಕೆ ಆದ್ದರಿಂದ, ಬಿಳಿ ಎಳ್ಳಿನಿಂದ ತರ್ಪಣವನ್ನು ಕೊಡಬೇಕು.) ॥ ೬-೮ ॥ ಪಿಂಡಪಿತೃಯಜ್ಞದಲ್ಲಿಯೂ, ತಂದೆತಾಯಿಯರ ಮೃತದಿವಸಗಳಲ್ಲಿಯೂ ತೀರ್ಥ ಕ್ಷೇತ್ರಗಳಲ್ಲಿಯೂ ಮತ್ತು ಮಹಾಲಯ ಪಕ್ಷದಲ್ಲಿಯೂ ವಿವಾಹಾದಿಗಳನ್ನು ಮಾಡಿದವರೂ ಸಹ ಪಿಂಡಪ್ರದಾನವನ್ನೂ ಮತ್ತು ತಿಲತರ್ಪಣವನ್ನು ಮಾಡಬೇಕು. ॥ ೯ ॥ ಉಚ್ಛಿಷ್ಟಪಿಂಡವನ್ನು ಸೂರ್ಯನು ಅಸ್ತಕ್ಕೆ ಬರುವವರೆಗೂ ತೆಗೆಯಬಾರದು; ಇದು ಗೃಹದಲ್ಲಿ ನಿಯಮ. ಅನ್ಯತ್ರದಲ್ಲಿ (ತೀರ್ಥಾದಿಗಳಲ್ಲಿ) ಬ್ರಾಹ್ಮಣವಿಸರ್ಜನೆಯ ನಂತರ ತೆಗೆಯಬೇಕು. ॥ ೧೦ ॥ ಕ್ಷಯಶ್ರಾದ್ಧದಲ್ಲಿ ಬ್ರಾಹ್ಮಣರು ಭೋಜನ ಮಾಡಿದ್ದ ಎಲೆಗಳನ್ನೂ ಉಚ್ಛಿಷ್ಟವನ್ನೂ ಮಂಡಿಯವರೆಗೆ ಭೂಮಿಯಲ್ಲಿ ಹಳ್ಳ ತೆಗೆದು ಅದರಲ್ಲಿ ಹಾಕಿ ಮಣ್ಣಿನಿಂದ ಮುಚ್ಚಿ ಬಿಡಬೇಕು; ಈ ನಿಯಮವು ಕ್ಷಯಶ್ರಾದ್ಧಕ್ಕೆ ಮಾತ್ರ. ಈ ವಿಷಯದಲ್ಲಿ ಬೇರೆ ಬೇರೆ ಅಭಿಪ್ರಾಯಗಳು ಅನ್ಯಾನ್ಯ ಗ್ರಂಥಗಳಲ್ಲಿ ಉಕ್ತವಾಗಿವೆ. ॥ ೧೧ ॥ ಶ್ರಾದ್ಧ ಮಾಡಿ ಉಳಿದಿರುವ ಅನ್ನದಿಂದ ವೈಶ್ವದೇವವನ್ನು ಮಾಡಬೇಕು. (ದೀಕ್ಷಾ ಸಂಪನ್ನರಾದವರು ಕ್ಷೀಣಿಸಿದ ಶ್ರಾದ್ಧದಲ್ಲಿ ಮಿಕ್ಕಿರುವ ಅಡಿಗೆ ಪದಾರ್ಥಗಳನ್ನು ಭೋಜನ ಮಾಡುವುದಿಲ್ಲ. ಆದ್ದರಿಂದ ಬೇರೆ ಮೀಸಲು ಅಡಿಗೆಗಳನ್ನು ಮಾಡಿ ಇದರಿಂದ ರಮಾನೈವೇದ್ಯ ಮತ್ತು ವೈಶ್ವದೇವವನ್ನು ಮಾಡಿ ಬ್ರಾಹ್ಮಣರನ್ನು ಊಟಕ್ಕೆ ಕೂಡಿಸುವ ಮುನ್ನ ಹಸ್ತೋದಕವನ್ನು ಮಾಡಿ ನಂತರ ಬ್ರಾಹ್ಮಣರಿಗೆ ಕೃಷ್ಣಾರ್ಪಣವೆನ್ನುವುದು ಸತ್ಸಂಪ್ರದಾಯವಾಗಿ ನಡೆದು ಬರುತ್ತಿದೆ. ಇಲ್ಲಿ ವೈಶ್ವದೇವಶಬ್ದದಿಂದ ಬಲಿಹರಣವನ್ನು ಇಟ್ಟುಕೊಳ್ಳಬೇಕೆಂದು ಶ್ರೀಶ್ರೀರಾಘವೇಂದ್ರ ಸ್ವಾಮಿಗಳ ಶಿಷ್ಯರಾದ ಕೃಷ್ಣಾಚಾರ್ಯರು ತಮ್ಮ ''ಸ್ಮೃತಿಮುಕ್ತಾವಲೀ'' ಎಂಬ ಗ್ರಂಥದಲ್ಲಿ ಅಭಿಪ್ರಾಯಪಟ್ಟಿರುತ್ತಾರೆ. ಅವರ ಅಭಿಪ್ರಾಯದಂತೆ ವೈಶ್ವದೇವವನ್ನು ಶ್ರಾದ್ಧಕ್ಕೆ ಪೂರ್ವ ದಲ್ಲಿಯೇ ಮಾಡಿ, ಶ್ರಾದ್ಧದ ನಂತರ ಬಲಿಹರಣವನ್ನು ಮಾಡಬೇಕು.) ನಂತರ ಯತಿಭಿಕ್ಷಾದಿ ಗಳನ್ನು ಕೊಡಬೇಕು. ಅನ್ನಾರ್ಥಿಗಳಾಗಿ ಬಂದಿರುವ ಯತ್ಯಾದಿಗಳಿಗೆ ದಯೆವಿನಯಗಳಿಂದ ಕೊಡುವ ಅನ್ನಕ್ಕೆ 'ಹಂತ' ಎನ್ನುವರು. ('ಸನಕಾದಿಮನುಷ್ಯೇಭ್ಯೋ ಹಂತಾ' ಎಂಬ ತೈತ್ತಿರೀಯ ಆರಣ್ಯಕವಾಕ್ಯವು ಈ ವಿಷಯದಲ್ಲಿ ಪ್ರಮಾಣ.) ॥ ೧೨ ॥ ಆಹಿತಾಗ್ನಿಯನ್ನು ಯಜಮಾನನು ಇಟ್ಟಿದ್ದರೆ ಆಗ ಅದರಲ್ಲಿಯೇ ವೈಶ್ವದೇವಾದಿಗಳನ್ನೂ ಮಾಡಿ ಅನಂತರ ಶ್ರಾದ್ಧವನ್ನು ಪ್ರಾರಂಭಿಸ ಬೇಕು. ಏಕಾದಶಾಹಶ್ರಾದ್ಧದಲ್ಲಿ (ಎಂದರೆ ಹನ್ನೊಂದನೇ ದಿನ ಮಾಡುವ ಶ್ರಾದ್ಧದಲ್ಲಿ) ಶ್ರಾದ್ಧದ ಅಂತ್ಯದಲ್ಲಿ ಬೇರೆಯ ಪಾಕದಿಂದ ವೈಶ್ವದೇವಾದಿಗಳನ್ನು ಮಾಡಬೇಕು. ॥ ೧೩ ॥ ಶುಭಕಾರ್ಯ ಗಳಲ್ಲಿ (ವೃದ್ಧಿಶ್ರಾದ್ಧದಲ್ಲಿ) ಮೊದಲು ವೈಶ್ವದೇವಾದಿಗಳನ್ನು ಮಾಡಿ ನಂತರ ಶ್ರಾದ್ಧವನ್ನು ಮಾಡಬೇಕು. ಆದರೆ ಕ್ಷಯದಲ್ಲಿ ಮೊದಲು ಶ್ರಾದ್ಧ, ನಂತರ ಬೇರ್ಪಡಿಸಿಟ್ಟಿರುವ ಅನ್ನದಿಂದ ವೈಶ್ವದೇವ ಹೀಗೆ ಮಾಡಬೇಕು. ದರ್ಶಶ್ರಾದ್ಧದಲ್ಲಿ ಶ್ರಾದ್ಧಮಧ್ಯದಲ್ಲಿಯೂ, ಮಹಾಲಯದಲ್ಲಿ ಪಿಂಡಪ್ರದಾನವಾದಮೇಲೂ ವೈಶ್ವದೇವವನ್ನು ಮಾಡಬೇಕು. ಹಾಗೆಯೇ ಅಗ್ನಿಹೋತ್ರಗಳಾಗ ದಿರುವವರ ಗೃಹದಲ್ಲೂ ಏಕೋದ್ದಿಷ್ಟಶ್ರಾದ್ಧದಲ್ಲಿ ಶ್ರಾದ್ಧದ ನಂತರವೇ ವೈಶ್ವದೇವವನ್ನು ಮಾಡಬೇಕು. ॥ ೧೪ ॥ ಸಾಮಾನ್ಯವಾಗಿ ಎಲ್ಲ ಶ್ರಾದ್ಧಗಳಲ್ಲಿಯೂ ಬ್ರಾಹ್ಮಣರ ಭೋಜನವಾದ ಮೇಲೆಯೇ ವೈಶ್ವದೇವಾದಿಗಳು ಮಾಡಬೇಕು. ಹಾಗೆಯೇ ಅವಶಿಷ್ಟ ಅನ್ನದಿಂದ ನಿತ್ಯ

ಶ್ರಾದ್ಧವನ್ನೂ ಮಾಡತಕ್ಕದ್ದು. ॥ ೧೫ ॥ ಶ್ರಾದ್ಧವಾದ ನಂತರ, ವೈಶ್ವದೇವ, ಹಸ್ತೋದಕ, ಬ್ರಾಹ್ಮಣಸುವಾಸಿನಿಯರ ಭೋಜನ, ಇವುಗಳಾದ ನಂತರ ಕರ್ತೃವು ತಮ್ಮ ವಂಶಕ್ಕೆ ಸೇರಿದ ಸಪಿಂಡಿಕರಿಂದಲೂ, ಬಂಧುಮಿತ್ರರಿಂದಲೂ ಕೂಡಿಕೊಂಡು, ಶ್ರಾದ್ಧಮಾಡಿ ಉಳಿದಿರುವ ಪದಾರ್ಥಗಳಿಂದ ಭೋಜನ ಮಾಡಬೇಕು. (ಸಪಿಂಡರಲ್ಲದವರು ಪಿತೃಶೇಷವನ್ನು ಭೋಜನ ಮಾಡಬಾರದೆಂದು ನಿಷೇಧವಾಕ್ಯಗಳಿವೆ. ಆದ್ದರಿಂದ, ಸಪಿಂಡರು ಮಾತ್ರ ಪಿತೃಶೇಷವನ್ನು ಸ್ವೀಕರಿಸಬೇಕು. ಉಳಿದವರಿಗೆ ಪಾಕಾಂತರದಿಂದ ಭೋಜನವನ್ನು ಮಾಡಿಸಬೇಕು ಎಂದು ತೋರುತ್ತದೆ.) ॥ ೧೬ ॥ ಏಕಾದಶೀ ಮೊದಲಾದ ಎಲ್ಲಾ ವ್ರತದಿನಗಳಲ್ಲಿ ಶ್ರಾದ್ಧಶೇಷ ಭೋಜನವನ್ನು ಆಘ್ರಾಣದಿಂದಲೇ ಮಾಡಬೇಕು. ಏಕೆಂದರೆ ಆಘ್ರಾಣಮಾತ್ರ ಮಾಡಿದರೆ ಉಪವಾಸವೂ ಇದ್ದಂತೆ ಆಯಿತು, ಭೋಜನವನ್ನೂ ಮಾಡಿದಂತೆ ಆಯಿತು. (ಇಲ್ಲಿ ತಿಳಿಯಬೇಕಾದ ವಿಷಯವೇನೆಂದರೆ, ನಿತ್ಯವ್ರತಗಳಾದ ಏಕಾದಶೀ, ಜನ್ಮಾಷ್ಟಮೀ, ಶ್ರವಣ ದ್ವಾದಶಿಗಳಲ್ಲಿ ಶ್ರಾದ್ಧಾಚರಣೆಯು ನಿಷಿದ್ಧವಾದ್ದರಿಂದ, ಅಂದು ಉಪವಾಸವೇ ಇದ್ದು ಪಾರಣೆಯ ದಿನ ಶ್ರಾದ್ಧವನ್ನು ಮಾಡಬೇಕು. ನೈಮಿತ್ತಿಕಗಳಾದ ವಿಷ್ಣುಪಂಚಕಾದಿ ಉಪವಾಸಗಳಲ್ಲಿ, ಶ್ರಾದ್ಧವನ್ನು ಮಾಡಿ, ಆಘ್ರಾಣಭಕ್ಷಣೆಯನ್ನು ಮಾಡಬೇಕು. ಅವುಗಳಲ್ಲಿಯೂ, ತಂದೆತಾಯಿಗಳ ಶ್ರಾದ್ಧವಾದ ಪಕ್ಷದಲ್ಲಿ ಭೋಜನವನ್ನೇ ಮಾಡಬೇಕು. ತಂದೆತಾಯಿಗಳ ವಿನಃ ಬೇರೆಯವರ ಶ್ರಾದ್ಧವಾದರೆ, ಶ್ರಾದ್ಧಕರ್ತೃವು ಆಘ್ರಾಣಭಕ್ಷಣೆಯನ್ನು ಮಾಡಬೇಕು. ಆಘ್ರಾಣಭಕ್ಷಣೆ ಎಂದರೆ, ಮಧ್ಯಮ ಪಿಂಡ, ತುಪ್ಪ ಅಥವಾ ಚರುಶೇಷವನ್ನು ಮೂಸಿ ನೋಡುವುದು. ॥ ೧೭ ॥ ಬೇರೆ ಗೋತ್ರಕ್ಕೆ ಸೇರಿದವರು, ಯತಿಗಳು, ವಿಧವೆಯರು ಮತ್ತು ಬ್ರಹ್ಮಚಾರಿಗಳು ಶ್ರಾದ್ಧಾನ್ನವನ್ನು ಭೋಜನ ಮಾಡಿದರೆ ನರಕಕ್ಕೆ ಹೋಗುತ್ತಾರೆ. ॥ ೧೮ ॥ ಶ್ರಾದ್ಧಶೇಷವನ್ನು ಭೋಜನ ಮಾಡಿದ ಯತಿಗಳು ತಲೆಯನ್ನು ಮುಂಡನ ಮಾಡಿಸಿಕೊಂಡು ಒಂದು ಲಕ್ಷ ಸಲ ಓಂಕಾರವನ್ನು ಜಪ ಮಾಡಿ ಶುದ್ಧಿ ಮಾಡಿಕೊಳ್ಳಬೇಕು. ಬೇರೆ ಜಪಾದಿಗಳನ್ನಿಟ್ಟುಕೊಂಡವರು, ವಿಧವಾದಿಗಳು ಪ್ರಾಜಾಪತ್ಯದಿಂದ ಶುದ್ಧಿ ಹೊಂದುವರು. ॥ ೧೯ ॥ ಸಪಿಂಡೀಕರ ಮನೆಯಲ್ಲಾಗಲಿ, ಸೋದರ ಮಾವಂದಿರ ಮನೆ ಯಲ್ಲಾಗಲಿ, ಗುರುಗಳ ಮನೆಯಲ್ಲಾಗಲಿ, ಯೋಗಿಗಳ ಮನೆಯಲ್ಲಾಗಲಿ, ಹೆಣ್ಣು ಕೊಟ್ಟಿರುವ ಮಾವನ ಮನೆಯಲ್ಲಾಗಲಿ ಶ್ರಾದ್ಧಶೇಷವನ್ನು ಭೋಜನ ಮಾಡಿದರೆ ದೋಷ ಆಗುವುದಿಲ್ಲ. ॥ ೨೦ ॥ ಶ್ರಾದ್ಧದ ದಿವಸ ಶ್ರಾದ್ಧಕರ್ತೃವು ಎಂದೆಂದಿಗೂ ಶೂದ್ರನಿಗೆ ಭೋಜನ ಮಾಡಿಸ ಬಾರದು, ಶ್ರಾದ್ಧಶೇಷವನ್ನು ಅವನಿಗೆ ತಿನ್ನಲು ಕೊಡಬಾರದು. ಕೊಟ್ಟರೆ ಅವನು ದೋಷಿಯಾಗು ತ್ತಾನೆ. ॥ ೨೧ ॥ ಶ್ರಾದ್ಧದ ದಿವಸ ಕರ್ತೃವು ತಾಂಬೂಲವನ್ನು ಸೇವಿಸಬಾರದು ಮತ್ತು ಶೂದ್ರರೊಡನೆ ಮಾತನ್ನು ಆಡಬಾರದು. ಸನಾತನನಾದ ಭಗವಂತನ ಧ್ಯಾನದಿಂದ ಭೂಮಿಯ ಮೇಲೆ ಮಲಗಿದ್ದು ರಾತ್ರಿಯನ್ನು ಕಳೆಯಬೇಕು. ॥ ೨೨ ॥ ಹೇ ಶೌನಕಾದಿಗಳೇ! ಈ ರೀತಿಯಾಗಿ ಭಕ್ತಿಯುಕ್ತವಾಗಿ ಶ್ರಾದ್ಧವನ್ನು ಆಚರಿಸಬೇಕು. ಅಂತಹವನ ಪಿತೃಗಳೆಲ್ಲರೂ ಬ್ರಹ್ಮಲೋಕವನ್ನು ಹೊಂದುವರು. ॥ ೨೩ ॥ ಶಕ್ತಿಯಿಲ್ಲದಿದ್ದರೆ ಪಂಕ್ತಿಯನ್ನು ಪಾವನಮಾಡತಕ್ಕ ಒಬ್ಬ ಬ್ರಾಹ್ಮಣನನ್ನೇ ಆಹ್ವಾನಿಸಿ ಶ್ರಾದ್ಧ ಮಾಡಬಹುದು. ಇದರಿಂದಲೂ ಅದೇ ಫಲವು ಸಿಗುವುದು. ಶಕ್ತಿಯಿದ್ದವರು ಲೋಭದಿಂದ ಒಬ್ಬ ಬ್ರಾಹ್ಮಣನನ್ನೇ ಕರೆದು ಶ್ರಾದ್ಧ ಮಾಡಿದರೆ ಶ್ರಾದ್ಧದ ಫಲ ಬರುವುದಿಲ್ಲ. ॥ ೨೪ ॥ ಶಕ್ತಿಯಿಲ್ಲದವರು ಸಂಕಲ್ಪಶ್ರಾದ್ಧವನ್ನು, ಹಿರಣ್ಯಶ್ರಾದ್ಧವನ್ನು ಅಥವಾ ಹಸಿಯಕ್ಕಿ ಶ್ರಾದ್ಧವನ್ನು (ಆಮಶ್ರಾದ್ಧ) ಕೆಲವು ಸಮಯಗಳಲ್ಲಿ ಮಾಡಬಹುದು ಅಥವಾ

ಬ್ರಹ್ಮಾರ್ಪಣವಿಧಾನದಿಂದಲೂ ಕೆಲವು ಸಮಯಗಳಲ್ಲಿ ಶ್ರಾದ್ಧಮಾಡಬಹುದು. ॥ ೨೫ ॥ ಸಂಕಲ್ಪಾದಿಶ್ರಾದ್ಧಗಳಲ್ಲಿ ಸ್ವಧಾವಚನ, ಅಗ್ನೌಕರಣ, ಪಿಂಡದಾನ, ಆವಾಹನ, ಇವುಗಳು ಇರುವುದಿಲ್ಲ. ವಿಕಿರವನ್ನು ಮಾಡಿದರೂ ಮಾಡಬಹುದು; ಬಿಟ್ಟರೂ ಬಿಡಬಹುದು. ಬ್ರಾಹ್ಮಣಭೋಜನಾಂತವಾದ ಕರ್ಮಗಳನ್ನು ಆಚರಿಸಬೇಕು. ॥ ೨೬ ॥ ಆವಾಹನಾದಿ ಎಲ್ಲಾ ಕರ್ಮವೂ, ಪಿಂಡದಾನ, ಬ್ರಾಹ್ಮಣಭೋಜನ, ಅಗ್ನೌಕರಣ ಇವುಗಳಷ್ಟೂ ಮಾಡಿದರೆ, ನಾಲ್ಕು ಪಟ್ಟು, ಮೂರು ಪಟ್ಟು, ಎರಡು ಪಟ್ಟು ಪುಣ್ಯವು ಲಭಿಸುವುದು. (ಆವಾಹನ, ಪಿಂಡದಾನ, ಬ್ರಾಹ್ಮಣಭೋಜನ, ಅಗ್ನೌಕರಣ ಇವಿಷ್ಟು ಮಾಡಿದರೆ ನಾಲ್ಕು ಪಟ್ಟು ಪುಣ್ಯ; ಆಮಪಿಂಡದಾನ, ಆಮಾನ್ನದಾನ ಮಾಡಿದರೆ ಮೂರುಪಟ್ಟು ಪುಣ್ಯ; ಪಿಂಡದಾನರಹಿತವಾಗಿ ಬ್ರಾಹ್ಮಣಭೋಜನ ರೂಪವಾದ ಸಂಕಲ್ಪಶ್ರಾದ್ಧದಲ್ಲಿ ಎರಡು ಪಟ್ಟು ಪುಣ್ಯ ಎಂದು ವಿವೇಕವಿರಬಹುದು.) ॥ ೨೭ ॥ ಬ್ರಹ್ಮಾರ್ಪಣವಿಧಿಯಲ್ಲಿ ಬ್ರಾಹ್ಮಣರನ್ನು ಆಹ್ವಾನಿಸಿ ಪಾದಪ್ರಕ್ಷಾಲನ ಮಾಡಿ ಪೀಠಾದಿಗಳಲ್ಲಿ ಕೂಡಿಸಿ ಪಾತ್ರೆಗಳಲ್ಲಿ ಅನ್ನಾದಿಗಳನ್ನು ಬಡಿಸಿ ಬ್ರಹ್ಮಾರ್ಪಣ ವಿಧಿಯಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸುವುದು. ॥ ೨೮ ॥ ದ್ರವ್ಯ ಮತ್ತು ಬ್ರಾಹ್ಮಣರುಗಳ ಅಭಾವವಿದ್ದಾಗ ಪಿಂಡಪ್ರದಾನವನ್ನಾದರೂ ಮಾಡಬೇಕು ಅಥವಾ ಶ್ರಾದ್ಧದ ದಿವಸ ಕರ್ತೃವು ಉಪವಾಸವನ್ನು ಮಾಡಬೇಕು. ॥ ೨೯ ॥ ಬ್ರಾಹ್ಮಣರಿಗೆ ಉದಕುಂಭ ದಾನವನ್ನಾದರೂ ಕೊಡಬೇಕು ಅಥವಾ ಆಕಳಿಗೆ ಹುಲ್ಲನ್ನಾದರೂ ಇಡಬೇಕು. ಅಥವಾ ಸ್ನಾನ ಮಾಡಿ ವಿಧಾನಪೂರ್ವಕ ಪಿತೃಗಳಿಗೆ ತಿಲತರ್ಪಣವನ್ನಾದರೂ ಕೊಡಬೇಕು. ॥ ೩೦ ॥ ಒಣಹುಲ್ಲನ್ನಾದರೂ ಆ ಕಾಲದಲ್ಲಿ ದಾನ ಮಾಡಬೇಕು ಅಥವಾ ಹಣ್ಣುಗಳನ್ನಾದರೂ ದಾನ ಮಾಡಬೇಕು ಅಥವಾ ದೊಡ್ಡ ಅರಣ್ಯಕ್ಕೆ ಹೋಗಬೇಕು. ಅಲ್ಲಿ ಒಣಗಿರುವ ಗಿಡ ಅಥವಾ ಒಣಗಿದ ಬಳ್ಳಿಯ ಬುಡವನ್ನು ತೋರಿಸುತ್ತಾ ದಕ್ಷಿಣಾಭಿಮುಖವಾಗಿ ನಿಂತು ಎರಡು ಬಾಹುಗಳನ್ನು ಮೇಲಕ್ಕೆ ಎತ್ತಿ ತನ್ನ ಬಾಹುಗಳ ಮೂಲ (ಕೊಂಕಳ ಸಂಧಿಯನ್ನು)ವನ್ನು ದಕ್ಷಿಣದಿಕ್ಕಿಗೆ ತೋರಿಸಬೇಕು. "ನನ್ನ ಹತ್ತಿರ ಅನ್ನದಾನ ಮಾಡಲು ಹಣವಿಲ್ಲ, ಅನ್ನವೂ ಇಲ್ಲ. ಎಲ್ಲ ಪಿತೃಗಳೂ ಇದಕ್ಕೆ ಸಾಕ್ಷಿಯಾಗಿದ್ದೀರಿ. ನನ್ನ ಕೊಂಕಳ ಸಂಧಿಯ ಪ್ರದರ್ಶನದಿಂದಲೇ ನಾನು ನಿರ್ಗತಿಕನೆಂದೂ, ಅಸಹಾಯನೆಂದೂ ತಿಳಿದು, ನನ್ನ ಕಳಕಳಿಯನ್ನು ಅರ್ಥಮಾಡಿಕೊಂಡು ಪೂರ್ಣ ತೃಪ್ತಿಯನ್ನು ಹೊಂದಿರಿ" ಈ ರೀತಿಯಾಗಿ ಗಟ್ಟಿಯಾಗಿ ಕೂಗುತ್ತಾ ಗಟ್ಟಿಯಾಗಿ ಅಳಬೇಕು. ಇದು ಕೊನೆಯ ದಾರಿ. ॥ ೩೧-೩೩ ॥ ಪಿತೃಗಳನ್ನುದ್ದೇಶಿಸಿ ಆ ದಿನ ಏನೂ ಮಾಡದೇ ಇರಬಾರದು; ಏನನ್ನಾದರೂ ಕರ್ಮವನ್ನು ಮಾಡಲೇಬೇಕು. ಕರ್ತೃವಿನ ಭಕ್ತಿಯಿಂದಲೇ ಭಗವಂತನು ತೃಪ್ತಿ ಪಡುವನು. ॥ ೩೪ ॥ ಈ ರೀತಿಯಾಗಿ ಪಿತೃಶ್ರಾದ್ಧವನ್ನು ಮಾಡಿ ಮುಗಿಸಿ ನಂತರ ಶ್ರಾದ್ಧದ ಪ್ರಮುಖ ಅಂಗವಾದ ತರ್ಪಣವನ್ನು ಕೊಡಬೇಕು. ತರ್ಪಣ ಬಿಡದಿದ್ದರೆ ಮುಖ್ಯಾಂಗವನ್ನು ಮಾಡದ ಕೊರತೆಯಿಂದ ಶ್ರಾದ್ಧಕ್ಕೆ ಗುಣಹೀನತಾದೋಷವು ಬರುವುದು. (ಶ್ರಾದ್ಧಾಂಗತರ್ಪಣವನ್ನು ಶ್ರಾದ್ಧದ ದಿನ ಮಾಡ ಬಾರದು; ಅದು ರಕ್ತಕ್ಕೆ ಸಮಾನವಾಗುತ್ತದೆ. ಆದ್ದರಿಂದ ಮಾರನೇ ದಿನ ಬೆಳಿಗ್ಗೆ ನಕ್ಷತ್ರವಿರುವಾಗಲೇ ಮಾಡಬೇಕು.) ॥ ೩೫ ॥ ತೀರ್ಥಕ್ಷೇತ್ರಗಳಲ್ಲಿ ಮೊದಲು ತರ್ಪಣ ಬಿಟ್ಟು ನಂತರ ಶ್ರಾದ್ಧ ಮಾಡಬೇಕು (ಪಿಂಡಪ್ರದಾನ, ಬ್ರಾಹ್ಮಣಭೋಜನ ಮುಂತಾದವು) ವರ್ಷೇ ವರ್ಷೇ ಮಾಡುವ ತಿಥಿಗಳಲ್ಲಿ ತಿಥಿ ಮಾಡಿದ ಮರುದಿವಸ ತರ್ಪಣ ಕೊಡಬೇಕು. ಪಿತೃಪಕ್ಷದಲ್ಲೂ, ಅಷ್ಟಕಶ್ರಾದ್ಧದಲ್ಲೂ ಮತ್ತು ಹಿರಣ್ಯಶ್ರಾದ್ಧದಲ್ಲಿಯೂ ಶ್ರಾದ್ಧವಾದ ಮೇಲೆ ತರ್ಪಣ ಕೊಡಬೇಕು. ॥ ೩೬ ॥ ಸಕೃನ್ಮಹಾಲಯ ಶ್ರಾದ್ಧದಲ್ಲಿ ಪರೇಽಹನಿ ಮಾರನೇ ದಿನ

ತರ್ಪಣವನ್ನು ಕೊಡಬೇಕು; ನಿತ್ಯಮಹಾಲಯ ಶ್ರಾದ್ಧದಲ್ಲಿ ಅಂದಂದೇ ತರ್ಪಣವನ್ನು ಕೊಡಬೇಕು. ಮೃತರಾದವರಿಗೆ ಒಂದು ವರ್ಷದೊಳಗೆ ಮಾಡುವ ಮಾಸಿಕ ಶ್ರಾದ್ಧಗಳಲ್ಲಿ ತರ್ಪಣವನ್ನು ಬಿಡಬಾರದು. ನಿತ್ಯ ತರ್ಪಣವನ್ನು ಯಾವಾಗಲೂ ಮಾಡಬೇಕು ಮತ್ತು ವಾರ್ಷಿಕತರ್ಪಣವನ್ನು (ವಿಮೋಕಶ್ರಾದ್ಧತರ್ಪಣವನ್ನು) ಎಳ್ಳು ಇಲ್ಲದೆ ಬಿಡಬೇಕು. (ವಿಮೋಕ ಶ್ರಾದ್ಧದಲ್ಲಿ ತರ್ಪಣವು ಬೇಡವೆಂದೂ ವಚನಗಳಿವೆ.) ॥ ೩೭ ॥ ತರ್ಪಣ ಬಿಡುವಾಗ ನದೀ ತೀರಕ್ಕೆ ಹೋಗಿ ಸ್ನಾನ ಮಾಡಿ, ದರ್ಭಾಸನದಲ್ಲಿ ಕುಳಿತುಕೊಂಡು ಪಿತೃಗಳನ್ನು ತರ್ಪಣದಿಂದ ತೃಪ್ತಿಪಡಿಸಿ ಪುನಃ ಸ್ನಾನ ಮಾಡಿ ಒಣಗಿದ ವಸ್ತ್ರಗಳನ್ನು ಧರಿಸಬೇಕು. ॥ ೩೮ ॥ ನಂತರ ಶ್ರಾದ್ಧದ ಪೂರ್ಣತೆಗಾಗಿ ಶ್ರೀಹರಿಯನ್ನು "ಗೋವಿಂದ, ಪುಂಡರೀಕಾಕ್ಷ, ಗದಾಧರ ಎಂದೂ, ಕಾಶೀಕ್ಷೇತ್ರವನ್ನೂ, ಗಂಗಾನದಿಯನ್ನೂ ಸ್ಮರಣೆ ಮಾಡಬೇಕು. ॥ ೩೯ ॥ ಎಲೈ ಮುನಿಶ್ರೇಷ್ಠರೇ! ಈ ರೀತಿಯಾಗಿ ನಿಮ್ಮಗಳಿಗೆ ಉತ್ತಮವಾದ ಶ್ರಾದ್ಧದ ವಿಧಿಯನ್ನು ಹೇಳಿದ್ದಾಯಿತು. ಈ ಪ್ರಕಾರವಾಗಿ ಶ್ರಾದ್ಧಾಚರಣೆಗಳಿಂದ ಕರ್ತೃಗಳಿಗೆ ಎಲ್ಲವೂ ಸಿದ್ಧಿಸುವುವು. ॥ ೪೦ ॥ ಯಾವ ಮನುಷ್ಯನು ಈ ರೀತಿಯಾಗಿ ಪಿತೃಭಕ್ತಿಯಿಂದ ಶ್ರಾದ್ಧಗಳನ್ನು ಆಚರಿಸುವನೋ, ಅವನ ವಂಶದಲ್ಲಿ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳ ಮರಣವು ಸಂಭವಿಸುವುದಿಲ್ಲ; ಅಂದರೆ ಸಂತತಿ ನಾಶವಾಗುವುದಿಲ್ಲ ಮತ್ತು ಪರಲೋಕದಲ್ಲಿ ಉತ್ತಮಸುಖವು ಪ್ರಾಪ್ತವಾಗುವುದು. ॥ ೪೧ ॥ ಯಾರು ಶ್ರಾದ್ಧದಿಂದ ಪಿತೃಗಳನ್ನು ತೃಪ್ತಿಪಡಿಸುತ್ತಾರೋ ಅವರಿಂದ ಶ್ರೀವಿಷ್ಣುವೂ ಪ್ರಸನ್ನ ನಾಗುವನು. ಜಗತ್ತಿನ ಸ್ವಾಮಿಯಾದ ಶ್ರೀವಿಷ್ಣುವು ತೃಪ್ತನಾದರೆ ಎಲ್ಲ ದೇವತೆಗಳೂ ತೃಪ್ತರಾಗುತ್ತಾರೆ. ॥ ೪೨ ॥ ಅಂದರೆ ಪಿತೃದೇವತೆಗಳು, ನಾಗದೇವತೆಗಳು, ಗಂಧರ್ವರು, ಅಪ್ಸರೆಯರು, ಯಕ್ಷರು, ಸಿದ್ಧರು ಮತ್ತು ಮನುಷ್ಯರು ತೃಪ್ತರಾಗುತ್ತಾರೆ. ॥ ೪೩ ॥ ಇಂತಹ ಸನಾತನನಾದ ಶ್ರೀಮಹಾವಿಷ್ಣುವಿನಿಂದ ಜೀವಜಡಾತ್ಮಕವಾದ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆ, ಎಲ್ಲವನ್ನೂ ಕೊಡುವವನೂ ಅವನೇ, ಸರ್ವಭೋಕ್ತನಾಗಿದ್ದು ಎಲ್ಲವನ್ನೂ ಭೋಗಿಸುವವನೂ ಅವನೇ. ॥ ೪೪ ॥ ಎಲೈ ಶೌನಕಾದಿ ವಿಪ್ರರೇ ! ಜಗತ್ತಿನಲ್ಲಿ ಕಣ್ಣಿಗೆ ಕಾಣಿಸುವ ಮತ್ತು ಕಾಣಿಸದೆಯೂ ಏನೇನು ಇವೆಯೋ ಅವೆಲ್ಲಾ ಪ್ರಧಾನವಾಗಿ ವಿಷ್ಣುಮಯವಾಗಿರತಕ್ಕವಗಳೇ ಆಗಿವೆ ; ಅವನ ನಿಯಮನಕ್ಕೆ ಒಳಪಡದಿದ್ದುದು ಯಾವುದೂ ಇಲ್ಲ. ॥ ೪೫ ॥ ಅವನೇ ಜಗತ್ತಿಗೆ ಆಧಾರ, ಎಲ್ಲ ಭೂತಗಳೊಳಗೆ ಓತಪ್ರೋತನಾಗಿ ಬೆರೆತಿರುವನು ಮತ್ತು ನಾಶರಹಿತನು. ಹವ್ಯ ಮತ್ತು ಕವ್ಯಗಳ ಆಹುತಿಗಳನ್ನೆಲ್ಲಾ ಅವನೇ ಸ್ವೀಕಾರ ಮಾಡುವನು. ಉಪಮಾನಗಳಿಗೆ ಸಿಗದ ಸ್ವಭಾವಗಳುಳ್ಳವನು. ॥ ೪೬ ॥ ಇಲ್ಲಿ ಹೇಳಿರುವುಗಳೆಲ್ಲಾ ಸಾಮಾನ್ಯವಾದ ಪುರಾಣಗಳಲ್ಲಿ ಹೇಳಿರುವ ಪೈತೃಕೀ ಕ್ರಿಯೆಯು. ಇದರಂತೆ ಭಕ್ತಿಯುತನಾಗಿ ಪೈತೃಕಕಾರ್ಯಗಳನ್ನು ಮಾಡುವ ಕರ್ತೃವು ಪಿತೃಋಣದಿಂದ ಮುಕ್ತನಾಗುವನು. ॥ ೪೭ ॥ ಶ್ರಾದ್ಧಾದಿಗಳನ್ನು ಮಾಡಲು ಅಸಮರ್ಥ ನಾದವನು ಶ್ರಾದ್ಧದ ದಿನ ಪ್ರಯತ್ನಪಟ್ಟು ಈ ಅಧ್ಯಾಯಗಳನ್ನು ಶ್ರದ್ಧಾಭಕ್ತಿಗಳಿಂದ ಓದಿದರೆ ಅವನು ಶ್ರಾದ್ಧ ಮಾಡಿದ ಫಲವನ್ನು ಹೊಂದುವನು. ॥ ೪೮ ॥ ದಿಕ್ಪಾಲಕನಾದ ನಿರ್ಋತಿಯ ಕಥೆಯು ಶ್ರೀವೇಣೀಮಾಧವನಿಗೆ ಪ್ರೀತಿಯನ್ನುಂಟುಮಾಡತಕ್ಕದ್ದು. ಎಲೈ ಶುದ್ಧರಾದ ಶೌನಕರೇ! ಶೇಷದೇವರು ಇನ್ನೇನು ಹೇಳಿದರೋ ಅದನ್ನು ಹೇಳುತ್ತೇನೆ ಕೇಳಿರಿ. ಹೀಗೆಂದು ಸೂತರು ಹೇಳಿ ಮುಗಿಸಿದರು. ॥ ೪೯ ॥

॥ ಇಪ್ಪತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುರ್ವಿಂಶೋಽಧ್ಯಾಯಃ ॥ ೨೪ ॥

ಸೂತ ಉವಾಚ—

ವರುಣಸ್ಯಾಶ್ರಮಂ ವಕ್ಷ್ಯೇ ವರುಣೋ ಯತ್ರ ತಿಷ್ಠತಿ ।
ಸ್ವೀಯಾಂ ದಿಶಂ ಸಮಾಧಾಯ ಮಾಧವಪ್ರಿಯಹೇತವೇ ॥ ೧ ॥
ವರುಣೇನ ಕೃತಸ್ತತ್ರ ತಟಾಕೋಽಕ್ಷಯ್ಯಸಂಜ್ಞಿತಃ ।
ದೇವಖಾತ ಇತಿ ಪ್ರೋಕ್ತೋ ಬ್ರಹ್ಮಖಾತ ಇತೀತರೈಃ ॥ ೨ ॥
ಸಮುದ್ರಸ್ಯೋಪಮಾಂ ಮುಷ್ಣನ್ಸರ್ವದಾಪ್ರಿಯದರ್ಶನಃ ।
ಸರ್ವತಾಪಹರಃ ಶ್ರೀಮಾನ್ಸರ್ವೇಷಾಮೀಪ್ಸಿತಾರ್ಥದಃ ॥ ೩ ॥
ಚತುರ್ದಿಕ್ಷು ಸಮಾಬದ್ಧಃ ಸುತೀರ್ಥಃ ಶೀತಲಾಮಲಃ ।
ಸಮಂತಾದ್ವಿವಿಧಗ್ರಾವಫಲಕಾಂಚಿತಕುಟ್ಟಿಮಃ ॥ ೪ ॥
ನಾನಾದ್ರುಮಲತಾಕೀರ್ಣೋ ನಾನಾಮುನಿಕೃತಾಸ್ಪದಃ ।
ನಾನಾಪುಷ್ಪಫಲವ್ಯಾಪ್ತೋ ನಾನಾಪಕ್ಷಿಸಮಾಕುಲಃ ॥ ೫ ॥
ಪ್ರಫುಲ್ಲಕುಸುಮೋದ್ಭಾಸಿಲತಾಕುಂಜಮನೋಹರಃ ।
ಮತ್ತಷಟ್ಪದನಿಸ್ವಾನಮುಖರೀಕೃತದಿಙ್ಮುಖಃ ॥ ೬ ॥
ಕಮಲಾಕರಸಂಸರ್ಗಿಮಂದವಾತಃ ಸುಗಂಧಿತಃ ।
ನಾನಾಜಲಚರಕ್ರಾಂತೋ ನಾನಾಪತಗಭೂಷಿತಃ ॥ ೭ ॥
ತಸ್ಯ ವೈ ಪಶ್ಚಿಮೇ ಭಾಗೇ ವರುಣಸ್ಯಾಶ್ರಮಂ ಶುಭಮ್ ।
ನಿವಸನ್ವರುಣಸ್ತತ್ರ ಜಲದಾನಂ ಚಕಾರ ಹ ॥ ೮ ॥
ತತ್ತಟಾಕಾಹೃತಂ ತೋಯಂ ನೂತ್ನಭಾಂಡಸ್ಥಮುತ್ತಮಮ್ ।
ಶೀತಂ ಗಂಗಾಸಮಂ ಸ್ವಾದು ಕರ್ಪೂರೋಶೀರವಾಸಿತಮ್ ॥ ೯ ॥
ಸರ್ವಕಾಲೇ ವಿಶೇಷೇಣ ವಸಂತಗ್ರೀಷ್ಮಯೋಃ ಪರಮ್ ।
ಸಕಲಾನವಿಶೇಷೇಣ ಜನಾನ್ಪಾಂಥಾನ್ವಿಶೇಷತಃ ॥ ೧೦ ॥
ತೃಷಾರ್ತಾನ್ಪಾಯಯಾಮಾಸ ಫಲಾನಿ ಚ ದದೌ ತಥಾ ।
ಶೀತಮಂಟಪವಾಸಂ ಚ ಮಾಧವಪ್ರೀತಯೇ ಪರಮ್ ॥ ೧೧ ॥
ಏವಂ ಬಹುದಿನಂ ತತ್ರ ಪ್ರಪಾದಾನಪರಾಯಣಃ ।
ಕಾಲಂ ನಿನಾಯ ವರುಣಃ ಪ್ರಯಾಗಸ್ಯೋಪಮಂಡಲೇ ॥ ೧೨ ॥
ಕದಾಚಿತ್ಸರಸಸ್ತೀರೇ ಚಕ್ರವಾಕೀ ವಿರಾಜಿತೇ ।
ಕೋಽಪಿ ಪಾಂಥಃ ಸಮಾಗತ್ಯ ಸಾಯಂ ತತ್ರೈವ ತಸ್ಥಿವಾನ್ ॥ ೧೩ ॥
ಅಪೀತ್ವಾ ಸಲಿಲಂ ರಮ್ಯಮಭುಕ್ತ್ವಾ ಚ ಫಲಾದಿಕಮ್ ।
ಮುಹುಃ ಶ್ವಾಸಗಣಂ ವರ್ಷನ್ಮುಕ್ತಕಂಠೋ ರುರೋದ ಹ ॥ ೧೪ ॥

ತಸ್ಯ ತದ್ರುದಿತಂ ಶ್ರುತ್ವಾ ಚಕ್ರವಾಕಶ್ಚ ಪಾರಗಃ ।
ಸ್ಮೃತ್ವಾ ವಿಯೋಗಜಂ ದುಃಖಂ ವಿಲಾಪಮಕರೋತ್ತದಾ ॥ ೧೫ ॥
ಚಕ್ರವಾಕ್ಯಪಿ ತಚ್ಛ್ರುತ್ವಾ ಗತ್ವಾ ತತ್ಸನ್ನಿಧೌ ತತಃ ।
ಉವಾಚ ವಚನಂ ರಮ್ಯಂ ತಸ್ಯ ದುಃಖೇನ ದುಃಖಿತಾ ॥ ೧೬ ॥

## ॥ ಇಪ್ಪತ್ತನಾಲ್ಕನೆಯ ಅಧ್ಯಾಯವು ॥

**ಸೂತರು ಹೇಳುತ್ತಾರೆ—**

ತನ್ನದೇ ಆದ ಪಶ್ಚಿಮ ದಿಕ್ಕನ್ನು ಆರಿಸಿ ಶ್ರೀವರುಣನು ಶ್ರೀ ಮಾಧವನಿಗೆ ಪ್ರಿಯವಾದ ಕಾರ್ಯಗಳನ್ನು ಮಾಡುವವದಕ್ಕಾಗಿ ತನ್ನ ಆಶ್ರಮವನ್ನು ಕಟ್ಟಿ ಅಲ್ಲಿ ವಾಸಮಾಡಿದನು. ॥ ೧ ॥ ಆ ಆಶ್ರಮದ ಸಮೀಪದಲ್ಲಿ ವರುಣನು ಒಂದು ಅಕ್ಷಯತಟಾಕ ವೆಂಬ ಹೆಸರಿನ ಕೆರೆಯೊಂದನ್ನು ಕಟ್ಟಿಸಿದನು. ಇದನ್ನೇ ದೇವಖಾತವೆಂದೂ ಕೆಲವರು ಬ್ರಹ್ಮಖಾತವೆಂದೂ ಕರೆಯುತ್ತಾರೆ. ॥ ೨ ॥ ಈ ಕೆರೆಯು ಸಮುದ್ರದಂತೆ ಹೋಲಿಕೆಯಿದ್ದು ಇದು ನೋಡಲು ಯಾವಾಗಲೂ ಹಿತವಾಗಿದ್ದಿತು, ಎಲ್ಲರ ಕಷ್ಟಗಳನ್ನು ಪರಿಹರಿಸುತ್ತಿತ್ತು ಮತ್ತು ಎಲ್ಲರ ಮನಸ್ಸಿನ ಆಸೆಗಳನ್ನೆಲ್ಲಾ ಈಡೇರಿಸುತ್ತಿತ್ತು. ॥ ೩ ॥ ಈ ಕೆರೆಯು ಚೌಕವಾಗಿ ನಾಲ್ಕು ದಿಕ್ಕುಗಳಲ್ಲಿಯೂ ಏರಿಗಳನ್ನು ಹೊಂದಿತ್ತು. ಇದರ ನೀರು ತಣ್ಣಗೂ ಮತ್ತು ಸ್ವಚ್ಛವಾಗಿಯೂ ಇರುತ್ತಿತ್ತು. ಈ ಕೆರೆಯು ಸುತ್ತಲೂ ಸಮತಳವುಳ್ಳ ಕಲ್ಲು ಚಪ್ಪಡಿಗಳಿಂದ ಮಾಡಿದ ಮೆಟ್ಟಲುಗಳನ್ನು ಹೊಂದಿತ್ತು. ॥ ೪ ॥ ಈ ಆಶ್ರಮವು ಮತ್ತು ಸರೋವರದ ಸನಿಹವು ನಾನಾವೃಕ್ಷಗಳಿಂದಲೂ, ಬಳ್ಳಿಗಳಿಂದಲೂ ಕೂಡಿದ್ದು, ನಾನಾಮುನಿ ಗಳಿಗೆ ಆಶ್ರಯವಾಗಿದ್ದಿತು. ನಾನಾವಿಧವಾದ ಹೂ, ಹಣ್ಣುಗಳ ಗಿಡಗಳಿಂದ ತುಂಬಿದ್ದು ನಾನಾ ವಿಧವಾದ ಪಕ್ಷಿಗಳು ಗುಂಪುಗುಂಪಾಗಿ ಅಲ್ಲಿ ಇದ್ದುವು. ॥ ೫ ॥ ಇಲ್ಲಿ ಅನೇಕ ಲತಾಗೃಹಗಳಿದ್ದು ಅವುಗಳು ಅರಳಿದ ಹೂವುಗಳಿಂದ ಪ್ರಕಾಶಮಾನವಾಗಿದ್ದುವು. ಆ ಹೂವುಗಳ ಸುತ್ತ ಝೆಂಕರಿ ಸುವ ಭ್ರಮರಗಳ ನಾದದಿಂದ ದಿಕ್ಕುಗಳು ಪ್ರತಿಧ್ವನಿತವಾಗುತ್ತಿದ್ದುವು. ॥ ೬ ॥ ಕಮಲಹೂಗಳ ನ್ನೊಳಗೊಂಡ ಸರೋವರಗಳ ಮೇಲೆ ಬೀಸಿ ಬರುತ್ತಿದ್ದ ಮಂದ ಮಾರುತವು ವಾತಾವರಣವನ್ನು ಸುಗಂಧಮಯವನ್ನಾಗಿ ಮಾಡಿದ್ದಿತು. ಆ ಸರೋವರದಲ್ಲಿ ನಾನಾಬಗೆಯ ಜಲಚರ ಪ್ರಾಣಿಗಳೂ ನೀರು ಹಕ್ಕಿಗಳೂ ಇದ್ದುವು. ॥ ೭ ॥ ಈ ಸರಸ್ಸಿನ ಪಶ್ಚಿಮ ಭಾಗದಲ್ಲಿ ಶ್ರೀವರುಣದೇವರ ಶುಭಕರವಾದ ಆಶ್ರಮವಿತ್ತು. ಅಲ್ಲಿ ವಾಸಮಾಡಿಕೊಂಡಿದ್ದು ಶ್ರೀವರುಣದೇವರು ಎಲ್ಲರಿಗೂ ಜಲದಾನ ಮಾಡುತ್ತಿದ್ದರು. ॥ ೮ ॥ ಈ ಸರಸ್ಸಿನಿಂದಲೇ ನೀರನ್ನು ತಂದು ಉತ್ತಮವಾದ ಹೊಸಪಾತ್ರೆಗಳಲ್ಲಿಟ್ಟಿರುತ್ತಿದ್ದ ನೀರು ತಣ್ಣಗಿದ್ದು ಕೇಸರಿ, ಪಚ್ಚ ಕರ್ಪೂರ, ಯಾಲಕ್ಕಿ ಮತ್ತು ಲಾವಂಚ ಮುಂತಾದವುಗಳ ಮಿಶ್ರಣದಿಂದ ಪರಿಮಳಯುಕ್ತವಾದದ್ದಾಗಿತ್ತು. ॥ ೯ ॥ ಎಲ್ಲ ಕಾಲಗಳಲ್ಲಿಯೂ, ವಿಶೇಷವಾಗಿ ವಸಂತ ಹಾಗೂ ಗ್ರೀಷ್ಮಋತುಗಳಲ್ಲಿಯೂ, ಸಾಮಾನ್ಯವಾಗಿ ಬಾಯಾರಿ ಬಂದ ಎಲ್ಲರನ್ನೂ, ವಿಶೇಷವಾಗಿ ಯಾತ್ರಿಕರನ್ನೂ ನೀರನ್ನು ದಾನ ಮಾಡಿ ವರುಣದೇವನು ತೃಪ್ತಿಪಡಿಸುತ್ತಿದ್ದನು ಮತ್ತು ಹಣ್ಣುಹಂಪಲುಗಳಿಂದಲೂ ತೃಪ್ತಿಪಡಿಸುತ್ತಿದ್ದನು. ಶ್ರೀಮಾಧವನ ಪ್ರೀತಿಗೋಸ್ಕರ ಅವರಿಗೆ ವಾಸಿಸಲು ತಣ್ಣನೆಯ ಆವಾಸಸ್ಥಾನವನ್ನು ಕೊಡು ತ್ತಿದ್ದನು.॥ ೧೦-೧೧ ॥ ಪ್ರಯಾಗಕ್ಷೇತ್ರದ ಈ ಭಾಗದಲ್ಲಿ ಶ್ರೀವರುಣನು ವಾಸಮಾಡಿ ಕೊಂಡಿದ್ದು ಅರವಟಿಗೆಯನ್ನು ನಡೆಸುತ್ತಾ ಜಲಫಲಾದಿದಾನಗಳಿಂದ ಯಾತ್ರಿಕರನ್ನು ತೃಪ್ತಿಪಡಿಸಿ

ಶ್ರೀಮಾಧವನನ್ನು ಸೇವಿಸುತ್ತಾ ಬಹುಕಾಲ ವಾಸಿಸಿದನು. ॥ ೧೨ ॥. ಒಂದು ಬಾರಿ ಚಕ್ರವಾಕಪಕ್ಷಿಗಳಿಂದ ವಿರಾಜಮಾನವಾದ ಈ ಸರೋವರತೀರದಲ್ಲಿ ಯಾವನೋ ಒಬ್ಬ ಪ್ರಯಾಣಿಕನು ಬಂದು ರಾತ್ರಿ ಅಲ್ಲಿಯೇ ಇದ್ದನು. ॥ ೧೩ ॥ ಅವನು ಆ ಕೆರೆಯ ನೀರನ್ನೂ ಕುಡಿಯಲಿಲ್ಲ; ಹಣ್ಣುಗಳನ್ನೂ ತಿನ್ನಲಿಲ್ಲ. ಸುಮ್ಮನೇ ಏದುಸಿರು ಬಿಡುತ್ತಾ ಕೆರೆಯ ಮೆಟ್ಟಲಿನ ಮೇಲೆ ಅಳುತ್ತಾ ಕುಳಿತನು. ॥ ೧೪ ॥ ಅವನ ಅಳುವಿನ ಶಬ್ದವನ್ನು ಕೇಳಿ ಆ ತೀರದಲ್ಲಿದ್ದ ಚಕ್ರವಾಕವು "ಇದು ಅವನಿಗೆ ಯಾವುದೋ ವಿಯೋಗದ ದೆಶೆಯಿಂದ ಆದುದೆಂದು" ಗ್ರಹಿಸಿ ತನಗೂ ಆಗಿದ್ದ ವಿಯೋಗವನ್ನು ಸ್ಮರಿಸಿಕೊಂಡು ಅಳಲು ಪ್ರಾರಂಭಿಸಿತು. ॥ ೧೫ ॥ ಒಂದು ಹೆಣ್ಣು ಚಕ್ರವಾಕವು ಅದನ್ನು ಕೇಳಿ ಆತನ ದುಃಖದಿಂದ ಸಂತಪ್ತವಾಗಿ ಅವನ ಸಮೀಪಕ್ಕೆ ಹೋಗಿ ಮನಸ್ಸಿಗೆ ಹಿತವಾಗುವಂತೆ ಈ ರೀತಿ ಮಾತನಾಡಿತು. ॥೧೬॥

**ಚಕ್ರವಾಕ್ಯುವಾಚ—**

**ಕೋಽಸಿ ತ್ವಂ ನರಶಾರ್ದೂಲ ಕಿಂ ವಿಲಾಪಸ್ಯ ಕಾರಣಮ್ ।**
**ಶ್ರಾಂತೋಽಸಿ ಭುಂಕ್ಷ್ವ ಕಂದಾದಿ ತೃಷಿತೋಽಸಿ ಜಲಂ ಪಿಬ ॥ ೧೭ ॥**

**ಹೆಣ್ಣು ಚಕ್ರವಾಕ ಪಕ್ಷಿಯು ಹೇಳಿತು—**

"ಎಲೈ ನರಶ್ರೇಷ್ಠನೇ! ನೀನು ಯಾರು? ನಿನ್ನ ಅಳುವಿನ ಕಾರಣವೇನು? ನೀನು ಹಸಿದಿದ್ದೀಯೆ, ಹಣ್ಣು, ಗೆಣಸು ಮುಂತಾದವನ್ನು ತಿನ್ನು; ನಿನಗೆ ದಾಹವಾಗಿರಬೇಕು, ನೀರನ್ನು ಕುಡಿ" ಎಂದು ಹೇಳಿತು. ॥ ೧೭ ॥

**ಪಾಂಥ ಉವಾಚ—**

**ನ ರೋಚತೇ ಕಿಮಪ್ಯದ್ಯ ಕಂದಮೂಲಂ ಫಲಾದಿಕಮ್ ।**
**ಯದ್ರೋಚತೇ ತದಪ್ರಾಪ್ಯಂ ದೈವೇನ ಪಿಹಿತಂ ಯತಃ ॥ ೧೮ ॥**

**ಯಾತ್ರಿಕನು ಹೇಳಿದನು—**

"ನನಗೆ ಹಣ್ಣು, ಬೇರು, ಗೆಡ್ಡೆ, ಗೆಣಸು ಮತ್ತು ನೀರು ಏನು ರುಚಿಸವುದಿಲ್ಲ, ಮತ್ತು ಬೇಕಾಗಿಲ್ಲ. ನನಗೆ ಬೇಕಾಗಿರುವುದನ್ನು ವಿಧಿಯು ನನ್ನಿಂದ ಕಿತ್ತುಕೊಂಡಿದೆ." ಎಂದು ಹೇಳಿದನು. ॥ ೧೮ ॥

**ಚಕ್ರವಾಕ್ಯುವಾಚ—**

**ಕಿಂ ರೋಚತೇ ತವ ಪ್ರಾಜ್ಞ ತನ್ಮೇ ವದ ದದಾಮಿ ತೇ ।**
**ಅಸ್ಯ ಕ್ಷೇತ್ರಸ್ಯ ನಿಕಟೇ ಸರ್ವಂ ಸಿದ್ಧ್ಯತಿ ಕಾಮಿಕಮ್ ॥ ೧೯ ॥**

**ಹೆಣ್ಣು ಚಕ್ರವಾಕ ಪಕ್ಷಿಯು ಹೇಳಿತು—**

"ಎಲೈ ಪ್ರಾಜ್ಞನೇ ! ನಿನಗೆ ಬೇಕಾಗಿರುವುದನ್ನು ಹೇಳು ; ಅದನ್ನು ನಿನಗೆ ಕೊಡುವೆನು. ಈ ಕ್ಷೇತ್ರದ ಹತ್ತಿರ ಅಪೇಕ್ಷಿತವಾದುದೆಲ್ಲವೂ ಸಿಗುವುದು." ॥ ೧೯ ॥

**ಪಾಂಥ ಉವಾಚ—**

**ದೈವೇನಾಪಹೃತಂ ಯತ್ತತ್ಕೋಽಪಿ ದಾತುಂ ನ ವೈ ಪ್ರಭುಃ ।**
**ಸ್ವೀಯಂ ಸರ್ವಂ ಪ್ರವಕ್ಷ್ಯಾಮಿ ತಥಾಪಿ ಪ್ರೀತಯೇ ತವ ॥ ೨೦ ॥**

ನಿವೇದ್ಯ ಸಜ್ಜನೇ ದುಃಖಂ ದುಃಖೀ ದುಃಖಾತ್ಪ್ರಮುಚ್ಯತೇ ।
ಯದಸ್ಮೈ ತು ದಯಾಂ ಕುರ್ಯಾದಶಕ್ತೌ ದುಃಖಿತೋ ಭವೇತ್ ॥ ೨೧ ॥
ದಕ್ಷಿಣಸ್ಯಾಂ ಚ ದಿಶ್ಯಾಸ್ತೇ ನಾಮ್ನಾ ಚಂದ್ರವತೀ ಪುರೀ ।
ಅರ್ಧಚಂದ್ರಪ್ರತೀಕಾಶಾ ಚಂದ್ರಿಕೇವ ಸುನಿರ್ಮಲಾ ॥ ೨೨ ॥
ಚಾತುರ್ವರ್ಣ್ಯಜನೈಃ ಕೀರ್ಣಾ ಸರ್ವಸಂಪದ್ವಿಭೂಷಣಾ ।
ಧನಧಾನ್ಯಾದಿಸಂಪೂರ್ಣಾ ಗಜಾಶ್ವರಥಗೋಗಣಾ ॥ ೨೩ ॥
ರಥ್ಯಾಚತ್ವರಸಂಕೀರ್ಣಾ ದೀರ್ಘಶೃಂಗಾಟಕಾಪಣಾ ।
ಪ್ರಾಸಾದಶಿಖರೈ ರಮ್ಯೈಃ ಸ್ಪೃಷ್ಟತಾರಾಗಣಾಪರಾ ॥ ೨೪ ॥
ತ್ರಿವಪ್ರಪರಿಖಾರಮ್ಯಾನೇಕದ್ವಾರ ಮನೋರಮಾ ।
ಸೋದ್ಯಾನವನಿಕಾರಾಮಾ ಸರೋವಾಪೀವಿಹಂಗಮಾ ॥ ೨೫ ॥
ಹರಿಶಂಭುಗಣೇಶಾನಾಂ ಪೂಷ್ಣಾಮಭ್ರಂಕಶಾಲಯೈಃ ।
ಕಲಶಧ್ವಜಶೋಭಿಷ್ಯೈಶ್ಶೋಭಿತಾ ಚ ಸಮಂತತಃ ॥ ೨೬ ॥
ಕಾರಂಡವಜಾಲಮಂಜಿಹಂಸಚಕ್ರಾಹ್ವಸಾರಸೈಃ ।
ಸೇವಿತಾ ಶೀತಲಾ ತತ್ರ ನದೀ ವಹತಿ ನಿರ್ಮಲಾ ॥ ೨೭ ॥
ನಾನಾಲಂಕಾರಶೋಭಾಢ್ಯಾ ಹೃಷ್ಟಾ ಪುಷ್ಟಾ ಚ ಸರ್ವತಃ ।
ವಿಚರಂತಿ ಜನಾ ಯಸ್ಯಾಂ ನಿತ್ಯೋತ್ಸವಸಮಾಕುಲಾಃ ॥ ೨೮ ॥
ಸುವಸ್ತ್ರವೇಷಭೂಷಾಭಿಸ್ಸುರೂಪಗತಿಶಾಲಿಭಿಃ ।
ಜಿತರಂಭಾದಿಶೋಭಾಭಿಃ ಪ್ರಮದಾಭಿರಲಂಕೃತಾ ॥ ೨೯ ॥
ವೇದಶಾಸ್ತ್ರಪುರಾಣಾನಾಂ ಘೋಷೈರುದ್ಘೋಷಿತಾ ಸದಾ ।
ನಾನಾವಾದಿತ್ರನಿಸ್ವಾನಾ ಸುರೇಂದ್ರನಗರೋಪಮಾ ॥ ೩೦ ॥
ನೃತ್ಯಗೀತಕಲಾಭಿಜ್ಞೈಸ್ಸೌಂದರ್ಯಗುಣಸೀಮಭಿಃ ।
ಹಾವಭಾವಹೃತಸ್ವಾಂತೈರ್ವೇಷ್ಟಿತಾ ವಾಣಿನೀಜನೈಃ ॥ ೩೧ ॥
ಚಂದನೋದಕಸಂಸಿಕ್ತಾ ಜಾಲೇಷ್ವಗುರುಧೂಪಿತಾ ।
ಚಿತ್ರಿತಾ ಚ ಪತಾಕಾಭಿಃ ಪುಷ್ಪಪಲ್ಲವಚರ್ಚಿತಾ ॥ ೩೨ ॥
ಮಾರ್ತಂಡಮಂಡಲಾಭಾಸಶ್ಚಂದ್ರಹಾಸೋ ಮಹಾಯಶಾಃ ।
ಯಸ್ಯಾಂ ವಿರಾಜತೇ ರಾಜಾ ರಾಜೀವದಲಲೋಚನಃ ॥ ೩೩ ॥
ಸೋಮಾನ್ವಯೋ ಮಹಾಕ್ಷತ್ರೀ ಶೂರಸ್ಸತ್ಯಪರಾಕ್ರಮಃ ।
ನಾಗಾಯುತಬಲೋ ಧೀಮಾನ್ ಶಾಸ್ತ್ರಶಸ್ತ್ರಾಸ್ತ್ರಕೋವಿದಃ ॥ ೩೪ ॥
ಸ ಮಹೇಂದ್ರೋ ಗುಣವತಾಂ ಧರ್ಮರಾಜೋ ಮಹಾತ್ಮನಾಮ್ ।
ಗೋಪ್ತಾ ಸಮಸ್ತಸೇತೂನಾಂ ಶಾಸ್ತಾ ಕುಪಥಚಾರಿಣಾಮ್ ॥ ೩೫ ॥

ಯಷ್ಟಾ ಸಮಸ್ತಯಜ್ಞಾನಾಂ ಶರಣಂ ಶರಣಾರ್ಥಿನಾಮ್ ।
ಗೋಪ್ತಾ ಸಕಲಧರ್ಮಾಣಾಂ ದಾತಾ ಸಕಲಸಂಪದಾಮ್ ॥ ೩೬ ॥
ಜೇತಾ ಸಕಲವೃಂದಾನಾಂ ಸಂಹರ್ತಾ ಸಕಲಾಪದಾಮ್ ।
ಸಂಗೋಪ್ತಾ ಪರರಂಧ್ರಾಣಾಂ ವಕ್ತಾ ಪರಗುಣಸ್ಯ ಚ ॥ ೩೭ ॥
ಪತಿಶುಶ್ರೂಷಣೇ ದಕ್ಷಾ ಸರ್ವಸದ್ಗುಣಶಾಲಿನೀ ।
ಅತಿಚಂದ್ರಾನನಾ ತಸ್ಯ ರೋಹಿಣೀ ಧರ್ಮಚಾರಿಣೀ ॥ ೩೮ ॥
ತನಯಸ್ತಸ್ಯ ವಿಖ್ಯಾತೋ ಬುದ್ಧಿಮಾನ್ನಾಮತೋಽರ್ಥತಃ ।
ವಿದ್ವದ್ವೃಂದನಿಷೇವೀ ಚ ಗುಣೈಶ್ಚಾನವಮಃ ಪಿತುಃ ॥ ೩೯ ॥
ಯದ್ಬಾಹುದಂಡಗುಪ್ತಾಯಾಂ ತಸ್ಯಾಂ ಪುರ್ಯಾಮತಿತ್ರಿಣಿ ।
ನ ಕಶ್ಚಿದ್ದುಃಖಿತೋ ಲೋಕೋ ದರಿದ್ರೋ ರೋಗಪೀಡಿತಃ ॥ ೪೦ ॥
ಧರ್ಮೇಷ್ವಭಿರತೋ ನಿತ್ಯಂ ದೇವತಾತಿಥಿಪೂಜಕಃ ।
ದೀರ್ಘಾಯುರ್ಬಲವಾನ್ಹೃಷ್ಟೋಽನಿಂದ್ಯಕರ್ಮಾ ದೃಢವ್ರತಃ ॥ ೪೧ ॥
ಸುಪ್ರಜೋ ಭೋಗಭೋಗೀ ಚ ಸ್ವದಾರರತಿಶೀಲಿತಃ ।
ಸ್ವಧರ್ಮೇ ನಿರತೋ ನಿತ್ಯಂ ಪರಧರ್ಮಪರಾಙ್ಮುಖಃ ॥ ೪೨ ॥
ನ ಚ ದಸ್ಯುಭಯಂ ತತ್ರ ವ್ಯಾಘ್ರಸಿಂಹಭಯಂ ತಥಾ ।
ಸುವೃಷ್ಟಿಸ್ಸರ್ವದಾ ತತ್ರ ತಸ್ಮಿನ್ನಾಸತಿ ರಾಜನಿ ॥ ೪೩ ॥

**॥ ಇತಿ ಚತುರ್ವಿಂಶೋಽಧ್ಯಾಯಃ ॥**

ಪ್ರಯಾಣಿಕನು ಹೇಳಿದನು—

ಅದೃಷ್ಟವು ಕಿತ್ತುಕೊಂಡಿದ್ದನ್ನು ಹಿಂತಿರುಗಿಸಲು ಯಾರಿಂದಲೂ ಸಾಧ್ಯವಿಲ್ಲ. ಹಾಗಿದ್ದರೂ ನಿನ್ನ ಸಮಾಧಾನಕ್ಕಾಗಿ ನನ್ನ ಎಲ್ಲ ವಿಷಯವನ್ನು ನಿನಗೆ ಅರುಹುತ್ತೇನೆ. ॥ ೨೦ ॥ ದುಃಖದಲ್ಲಿದ್ದವನು ಸಜ್ಜನರಲ್ಲಿ ತನ್ನ ದುಃಖವನ್ನು ಹೇಳಿಕೊಂಡರೆ ದುಃಖದಿಂದ ಬಿಡುಗಡೆ ಹೊಂದುತ್ತಾನೆ. ಇಂಥಾ ದುಃಖಿಯಾದ ಪುರುಷನಿಗೆ ಯಾರು ದಯೆಯನ್ನು ಮಾಡುತ್ತಾರೋ, ಅವರು ದುಃಖಪರಿಹಾರ ಮಾಡಲು ಅಸಮರ್ಥರಾದರೆ ಸ್ವಯಂ ದುಃಖಿತರಾಗುತ್ತಾರೆ. ॥ ೨೧ ॥ ಇಲ್ಲಿಗೆ ದಕ್ಷಿಣದಿಕ್ಕಿನಲ್ಲಿ ಅರ್ಧಚಂದ್ರಾಕೃತಿಯಲ್ಲಿರುವ ಬೆಳದಿಂಗಳಿನಂತೆ ಸ್ವಚ್ಛವಾಗಿರುವ ''ಚಂದ್ರವತೀ'' ಎಂಬ ಪಟ್ಟಣವಿದೆ. ॥ ೨೨ ॥ ಇದು ಬ್ರಹ್ಮ, ಕ್ಷತ್ರ ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣದವರಿಂದಲೂ, ಮತ್ತು ಆನೆ, ಕುದುರೆ, ರಥಗಳು ಮತ್ತು ಆಕಳುಗಳಿಂದಲೂ, ಎಲ್ಲಾ ಸಂಪತ್ತುಗಳಿಂದ ಅಲಂಕೃತವಾಗಿದ್ದು, ಧನಧಾನ್ಯಾದಿಗಳಿಂದ ತುಂಬಿದೆ. ॥ ೨೩ ॥ ರಸ್ತೆಗಳಿಂದಲೂ, ಚೌಕಗಳಿಂದಲೂ ಕೂಡಿದೆ. ನಕ್ಷತ್ರಗಳನ್ನು ಮುಟ್ಟುವಂತಿರುವ ಎತ್ತೆತ್ತರವಾದ ಶಿಖರಗಳುಳ್ಳ ಮನೆ ಮಂದಿರಗಳಿಂದಲೂ ಅಂಗಡಿಯ ಬೀದಿಗಳಿಂದಲೂ ಶೋಭಿಸುತ್ತಿದೆ. ॥ ೨೪ ॥ ಮೂರು ಸುತ್ತು ಕಂದುಕಗಳಿಂದ ರಮ್ಯವಾಗಿದೆ. ಅನೇಕ ಬಾಗಿಲುಗಳಿಂದ ಮನೋಹರವಾಗಿದೆ. ವನ, ಉಪವನ, ತೋಟ, ಸರೋವರಗಳು ಮತ್ತು ಹಕ್ಕಿ ಪಕ್ಷಿಗಳು ಇವುಗಳಿಂದ ಶೋಭಾಯಮಾನವಾಗಿದೆ.

॥ ೨೫ ॥ ಶ್ರೀವಿಷ್ಣು ಶಿವ, ಗಣೇಶ ಮತ್ತು ಸೂರ್ಯ ಮಂದಿರಗಳ ಮೇಲೆ ಎತ್ತರದಲ್ಲಿ ಕಳಶಗಳೂ ಧ್ವಜಗಳೂ ಇದ್ದು ಈ ನಗರವೂ ಎಲ್ಲೆಲ್ಲೂ ಶೋಭಾಯಮಾನವಾಗಿದೆ. ॥ ೨೬ ॥ ಕಾರಂಡವ ಜಲಾಮಂಜಿ ಹಂಸ, ಚಕ್ರವಾಕಗಳೆಂಬ ಜಲಪಕ್ಷಿಗಳಿಂದ, ಸಾರಸಗಳಿಂದಲೂ ಸೇವಿತವಾಗಿರುವ ನದಿಯು ಶೀತಲಜಲದಿಂದ ಕೂಡಿ ಇಲ್ಲಿ ಹರಿಯುತ್ತಿದೆ. ॥ ೨೭ ॥ ಇಲ್ಲಿ ಜನಗಳೆಲ್ಲಾ ನಾನಾವಿಧವಾದ ಅಲಂಕಾರಗಳಿಂದ ಶೋಭಿತರಾಗಿಯೂ, ದಷ್ಟಪುಷ್ಟರಾಗಿಯೂ ಇದ್ದು ದಿನವೂ ಒಂದಲ್ಲ ಒಂದು ಉತ್ಸವದಲ್ಲಿ ತೊಡಗಿರುತ್ತಾರೆ. ॥ ೨೮ ॥ ಇಲ್ಲಿ ಸ್ತ್ರೀಯರೆಲ್ಲರೂ ಒಳ್ಳೆಯ ವಸ್ತ್ರಭೂಷಣಗಳನ್ನು ಧರಿಸಿ, ಒಳ್ಳೆಯ ರೂಪದಿಂದಲೂ ಗಜ ಹಂಸಗಳ ನಡಿಗೆಯುಳ್ಳ ವರಾಗಿಯೂ ಇದ್ದು ರಂಭಾದಿಗಳನ್ನು ಮೀರಿಸುತ್ತಾರೆ. ಇಂತಹವರಿಂದ ಈ ಊರು ಅಲಂಕೃತ ವಾಗಿದೆ. ॥ ೨೯ ॥ ಈ ನಗರಿಯು ವೇದಘೋಷ, ಶಾಸ್ತ್ರ ಪ್ರವಚನ ಮತ್ತು ಪುರಾಣಪಠನ ಇವುಗಳ ಶಬ್ದದಿಂದ ಯಾವಾಗಲೂ ತುಂಬಿರುತ್ತದೆ ಮತ್ತು ನಾನಾವಿಧಗಳಾದ ವಾದ್ಯಗಳ ಮೊಳಗುವಿಕೆಯಿಂದ ಕೂಡಿದ್ದು ಇಂದ್ರನ ಅಮರಾವತಿಗೆ ಹೋಲಿಸುವಂತಿದೆ. ॥ ೩೦ ॥ ನೃತ್ಯ, ಸಂಗೀತ ಮತ್ತು ಕಲೆಗಳಲ್ಲಿ ಪ್ರೌಢಿಮೆಯುಳ್ಳ ಸೌಂದರ್ಯದ ಎಲ್ಲೆಯನ್ನು ಮೀರಿದ, ಹಾವಭಾವ ವಿಲಾಸಾದಿಗಳಿಂದ ಪುರುಷರ ಮನಸ್ಸನ್ನು ಅಪಹರಿಸಿದ ವೇಶ್ಯಾಸ್ತ್ರೀಯರುಗಳಿಂದಲೂ ಕೂಡಿದೆ. ॥ ೩೧ ॥ ಈ ನಗರಿಯು, ಚೆಲ್ಲಲ್ಪಟ್ಟ ಚಂದನದ ನೀರಿನಿಂದಲೂ, ಗವಾಕ್ಷಿಗಳಿಂದ ಹೊರ ಹೊಮ್ಮುತ್ತಿರುವ ಅಗರು ಮುಂತಾದವುಗಳ ಪರಿಮಳದಿಂದಲೂ ಕೂಡಿದ್ದು ಬಾವುಟಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ ಹೂವು ಚಿಗುರುಗಳಿಂದ ತುಂಬಿದ್ದಾಗಿಯೂ ಇದ್ದು ಕಂಗೊಳಿಸುತ್ತಿದೆ. ॥ ೩೨ ॥ ಈ ನಗರಿಯ ರಾಜನು ಚಂದ್ರಹಾಸನೆಂಬುವನು. ಇವನು ಮಹಾಯಶಸ್ವಿಯು ಮತ್ತು ಕಮಲದ ದಳದಂತೆ ಕಣ್ಣುಗಳುಳ್ಳವನು ಹಾಗೂ ಇವನ ಮುಖವು ಸೂರ್ಯಮಂಡಲದಂತೆ ಪ್ರಕಾಶಮಾನವಾದುದು. ॥ ೩೩ ॥ ಇವನು ಚಂದ್ರವಂಶದವನು, ಮಹಾಕ್ಷತ್ರಿಯನು, ಸತ್ವ ಮತ್ತು ಪರಾಕ್ರಮಶಾಲಿಯು, ಹತ್ತು ಸಾವಿರ ಆನೆಯ ಬಲಯುತನು, ಮಹಾಬುದ್ಧಿವಂತನು ಮತ್ತು ಸಚ್ಛಾಸ್ತ್ರಗಳಲ್ಲಿಯೂ ಶಸ್ತ್ರಾಸ್ತ್ರಗಳ ಪ್ರಯೋಗಗಳಲ್ಲಿಯೂ ನಿಷ್ಣಾತನು. ॥ ೩೪ ॥ ಅವನು ಎಲ್ಲ ಧರ್ಮಗಡಿಗಳನ್ನೂ ರಕ್ಷಿಸುತ್ತಿದ್ದನು, ಕೆಟ್ಟದಾರಿಗೆ ಹೋದವರನ್ನು ಶಿಕ್ಷಿಸುತ್ತಿದ್ದನು, ಎಲ್ಲ ರೀತಿಯ ಯಜ್ಞಗಳನ್ನು ಮಾಡತಕ್ಕವನಾಗಿದ್ದನು, ಶರಣು ಹೊಕ್ಕವರನ್ನು ರಕ್ಷಿಸುವನಾಗಿದ್ದನು, ಎಲ್ಲ ಧರ್ಮಗಳ ರಕ್ಷಕನಾಗಿದ್ದನು, ಎಲ್ಲ ಬಗೆಯ ಸಂಪತ್ತನ್ನೂ ದಾನ ಮಾಡತಕ್ಕವನಾಗಿದ್ದನು, ಶತ್ರುಗಳೆಲ್ಲರನ್ನೂ ಜಯಿಸಿದ್ದವನಾಗಿದ್ದನು. ಎಲ್ಲ ಬಗೆಯ ಆಪತ್ತನ್ನೂ ನಿವಾರಣೆ ಮಾಡುತ್ತಿದ್ದನು, ಮತ್ತೊಬ್ಬರ ದೋಷಗಳನ್ನು ರಹಸ್ಯವಾಗಿಡುತ್ತಿದ್ದನು ಮತ್ತು ಮತ್ತೊಬ್ಬರ ಗುಣಗಳನ್ನು ಹೊರಗೆಡಹುತ್ತಿದ್ದನು. ॥ ೩೫-೩೭ ॥ ರೋಹಿಣಿಯು ಈ ಚಂದ್ರಹಾಸರಾಜನ ಪತ್ನಿಯು. ಇವಳು ಪತಿಶುಶ್ರೂಷೆಯಲ್ಲಿ ಕುಶಲಳೂ, ಧರ್ಮಗಳ ಆಚರಣೆಯುಳ್ಳವಳೂ, ಎಲ್ಲ ಗುಣಗಳಿಂದ ಕೂಡಿದವಳೂ ಮತ್ತು ಚಂದ್ರನನ್ನು ಮೀರಿಸುವ ಕಾಂತಿಯುಳ್ಳವಳೂ ಆಗಿದ್ದಳು. ॥ ೩೮ ॥ ''ಬುದ್ಧಿಮಾನ್'' ಎಂಬುವನು ಇವನ ಮಗನು. ಇವನು ನಿಜವಾಗಿಯೂ ಬುದ್ಧಿಯುಳ್ಳವನೇ ಆಗಿದ್ದನು. (ಅಂದರೆ ಯುಕ್ತಾಯುಕ್ತವಿವೇಕಶಾಲಿಯು). ಇವನು ವಿದ್ವಾಂಸರನ್ನು ಪೋಷಿಸು ತ್ತಿದ್ದನು, ಗುಣಗಳಲ್ಲಿಯೂ ತಂದೆಗೆ ಕಡಿಮೆ ಇರಲಿಲ್ಲ. ॥ ೩೯ ॥ ಮೂರುಲೋಕವನ್ನು ಮೀರಿಸುತ್ತಿದ್ದ ಇವನಿಂದ ಪಾಲಿತವಾದ ಆ ನಗರಿಯಲ್ಲಿ ಯಾರೂ ದುಃಖಿತರಿರಲಿಲ್ಲ, ರೋಗಿಗಳಿರಲಿಲ್ಲ ಮತ್ತು ದರಿದ್ರರಿರಲಿಲ್ಲ. ॥ ೪೦ ॥ ರಾಜನು ದೇವತಾಪೂಜೆಯನ್ನು ಅತಿಥಿ

ಸತ್ಕಾರವನ್ನು ನಿತ್ಯವೂ ಮಾಡುತ್ತಿದ್ದು, ಧರ್ಮಪರಾಯಣನಾಗಿದ್ದನು. ಅವನು ದೀರ್ಘವಾದ ಬಾಹುಗಳುಳ್ಳವನೂ, ಬಲವುಳ್ಳವನೂ ಆಗಿದ್ದು ದೀರ್ಘಾಯುವಾಗಿದ್ದನು. ಶಾಸನದಲ್ಲಿ ದಕ್ಷನು, ಕರ್ಮಾಚರಣೆಯಲ್ಲಿ ಅನಿಂದ್ಯನೂ ಆಗಿದ್ದನು ಮತ್ತು ದೃಢವ್ರತ ಉಳ್ಳವನಾಗಿದ್ದನು. ॥ ೪೧ ॥ ಇವನ ಪ್ರಜೆಗಳೆಲ್ಲರೂ ಒಳ್ಳೆಯವರಾಗಿದ್ದರು, ತಮ್ಮ ತಮ್ಮ ಪತ್ನಿಯರೊಡನೆಯೇ ಭೋಗ ಮಾಡತಕ್ಕವರಾಗಿದ್ದರು, ತಮ್ಮ ತಮ್ಮ ಧರ್ಮದಲ್ಲಿಯೇ ಆಸಕ್ತಿ ಉಳ್ಳವರಾಗಿದ್ದರು ಮತ್ತು ಮತ್ತೊಬ್ಬರ ಧರ್ಮದ ಕಡೆಗೆ ಒಲವಿಲ್ಲದವರಾಗಿದ್ದರು. ॥ ೪೨ ॥ ಚಂದ್ರಹಾಸನು ಆಳುತ್ತಿದ್ದಾಗ ಕಳ್ಳರ ಮತ್ತು ದರೋಡೆಗಾರರ ಭಯವಾಗಲೀ, ಹುಲಿ, ಸಿಂಹ ಮುಂತಾದ ಕ್ರೂರಮೃಗಗಳ ಭಯವಾಗಲೀ ಅಲ್ಲಿ ಇರಲಿಲ್ಲ. ಯಾವಾಗಲೂ ಈ ರಾಜ್ಯದಲ್ಲಿ ಎಷ್ಟು ಬೇಕೋ ಅಷ್ಟೇ ಮಳೆಯಾಗುತ್ತಿತ್ತು. ಚಂದ್ರವತೀನಗರಿಯು ಈ ರೀತಿ ಸುಭಿಕ್ಷವಾಗಿದ್ದು ಸುಖಸಮೃದ್ಧಿಯಿಂದ ರಾರಾಜಿಸುತ್ತಿತ್ತು. ॥ ೪೩ ॥

॥ ಇಪ್ಪತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಪಂಚವಿಂಶೋಽಧ್ಯಾಯಃ ॥ ೨೫ ॥

ಪಾಂಥ ಉವಾಚ—

ಕುಲೀನಸ್ಸತ್ಕ್ರಿಯೋ ವೈಶ್ಯಸ್ತ್ವಾಮಾತ್ಯೋ ವಿವೇಕವಾನ್ ।
ಧನವಾಂಸ್ತದ್ಧನಾಧ್ಯಕ್ಷಸ್ತ್ವೈವಾಸ್ಯಖಿಲಪ್ರಿಯಃ ॥ ೧ ॥
ಶೂರಿಸ್ಸಮಮತಿಶ್ಶಾಸ್ತಾ ಶರಣ್ಯಶ್ಶಮಿತಾಹಿತಃ ।
ಋತುವಾಕ್ಯರತೋ ದಾತಾ ದ್ವಿಜಸಪ್ತಾರ್ಚಿಭಕ್ತಿಮಾನ್ ॥ ೨ ॥
ಯತ್ಸಹಾಯಶ್ಚ ಚಕ್ರಾಹ್ವೋ ಚಂದ್ರಹಾಸೋ ನೃಪೋತ್ತಮಃ ।
ಪಾದೌ ಪ್ರಸಾರ್ಯ ಸತತಂ ಸುಖಂ ಶೇತೇ ಗತವ್ಯಥಃ ॥ ೩ ॥
ತಸ್ಯಾಹಮೇಕಲಃ ಪುತ್ರಃ ಶುಭೋ ನಾಮಾತಿವಿಶ್ರುತಃ ।
ಗುಣವಾನ್ ಬುದ್ಧಿಮನ್ಮಿತ್ರಂ ಪಿತ್ರೋಃ ಪ್ರಾಣಾಧಿಕಪ್ರಿಯಃ ॥ ೪ ॥
ವಿವಾಹೈಃ ಪ್ರಾಕ್ತನೈಃ ಸರ್ವೈಸ್ಸಂಸ್ಕಾರೈರ್ಗುರ್ವನುಜ್ಞಯಾ ।
ಯಥಾವಿತ್ತಂ ಯಥಾಕಾಲಂ ಸಂಸ್ಕಾರ್ಯ ಸ ಚ ಮಾಂ ಪಿತಾ ॥ ೫ ॥
ವಿವಾಹಾರ್ಥಮಥೋ ವೀಕ್ಷ್ಯ ಮಾಂ ರಾಜ್ಞಾ ಚಾನುಮೋದಿತಃ ।
ಮನ್ಮಾತ್ರಾ ಚಾನುಸಂಮತ್ಯಾ ಮಾಮುದ್ವೋಢುಂ ಮನೋ ದಧೇ ॥ ೬ ॥
ತಸ್ಮಿನ್ನವಸರೇ ಭದ್ರೇ ಮಧ್ಯದೇಶೇ ಮಧೋಃ ಪುರೇ ।
ಕಶ್ಚಿದ್ವೈಶ್ಯವರಶ್ಚಾಸೀಜ್ಜಯನಾಮಾ ಮಹಾಧನಃ ॥ ೭ ॥
ತಸ್ಯ ಚಾಸನ್ತ್ರಯಃ ಪುತ್ರಾಃ ಕನ್ಯೈಕಾ ದಿವ್ಯರೂಪಿಣೀ ।
ಲಾವಣ್ಯರಸಸಂಸಿಕ್ತಾ ಸುಶೀಲಾ ಪಿತೃಲಾಲಿತಾ ॥ ೮ ॥
ವೈವಾಹ್ಯಾಂ ತಾಂ ಸಮಾಲೋಚ್ಯ ಜಯಗುಪ್ತೋಽಥ ತತ್ಪಿತಾ ।
ಸಧನೋ ದಕ್ಷಿಣಾಶಾಯಾಂ ವರಮಾನೇತುಮನ್ವಗಾತ್ ॥ ೯ ॥
ದೈವಾಚ್ಚಂದ್ರವತೀಂ ಪ್ರಾಪ್ತಸ್ಸ ತತ್ರ ಬಹುಧಾ ಭ್ರಮನ್ ।
ಮತ್ಪಿತುರ್ನಾಮ ಸಂಶ್ರುತ್ಯ ಗೇಹಂ ಮಾಮಕಮನ್ವಗಾತ್ ॥ ೧೦ ॥
ಪಿತರಂ ಪ್ರಾರ್ಥಯಾಮಾಸ ಯದರ್ಥೇ ರಚಿತಾಂಜಲಿಃ ।
ಕನ್ಯಾಂಗೀಕರಣೇನಾಹಂ ಭೃತ್ಯತಾಂ ನೀಯತಾಮಿತಿ ॥ ೧೧ ॥
ಶ್ರುತ್ವಾ ತದ್ವಚನಂ ಶ್ರೇಷ್ಠಂ ವಿಮೃಶ್ಯ ಕುಲಜಾಂ ವಧೂಮ್ ।
ತಥೇತಿ ಸಂಪ್ರತಿಶ್ರುತ್ಯ ತಸ್ಮೈ ಮಾಂ ಸಂನ್ಯವೇದಯತ್ ॥ ೧೨ ॥
ತತೋಽಸೌ ಮಾಂ ಸಮಾದಾಯ ಬಹುಮಾನಪುರಸ್ಸರಮ್ ।
ಪ್ರಶಂಸನ್ಕನ್ಯಕಾಭಾಗ್ಯಂ ಸ್ವದೇಶಂ ಪ್ರಚಚಾಲ ಹ ॥ ೧೩ ॥
ತಾವತ್ತದ್ಗೃಹಮಾಗತ್ಯ ಕೋಽಪ್ಯನ್ಯೋ ವೈಶ್ಯಸತ್ತಮಃ ।
ಪತ್ನ್ಯಾ ಯಾಚಿತವಾನ್ಕನ್ಯಾಂ ಸ್ವಾರ್ಥೇ ಧನಕುಲಾನ್ವಿತಃ ॥ ೧೪ ॥

ಸಾ ತದ್ವಚ ಉಪಾಶ್ರಿತ್ಯ ಧನಲೋಭೇನ ಲೋಭಿತಾ ।
ವಿಲಂಬಂ ಪತ್ಯುರಾಲಕ್ಷ್ಯ ಪ್ರತಿಶುಶ್ರಾವ ತತ್ತಥಾ ॥ ೧೫ ॥
ದೇಶಾಂತರಗತೋ ಭ್ರಾತಾ ಕನ್ಯಾಯಾಃ ಪೂರ್ವಮೇವ ಹಿ ।
ಸಾಂಯಾಂತ್ರಿಕತ್ವಂ ಸಂಪಾದ್ಯ ಗೃಹೀತ್ವಾ ವರಮಾಗತಃ ॥ ೧೬ ॥
ಅಹಮಪ್ಯತಿಸಂಹೃಷ್ಟೋ ವಧ್ವಾಲೋಕನಲಾಲಸಃ ।
ಗತ್ವಾ ಮಚ್ಛ್ವಶುರೇ ಗೇಹೇ ದೃಷ್ಟ್ವಾ ದ್ವಾವಪಿ ತೌ ವರೌ ॥ ೧೭ ॥
ಅವಾಪ ಪರಮಾಂ ಚಿಂತಾಂ ಕಿಂಕರ್ತವ್ಯಮಚಿಂತಯತ್ ।
ನಗರಸ್ಥಾ ಜನಾಸ್ಸರ್ವೇ ಅನ್ಯೋನ್ಯಮಿದಮೂಚಿರೇ ॥ ೧೮ ॥
ಪಶ್ಯತಾಂ ಚ ಮಹಾಶ್ಚರ್ಯಂ ವಧೂರೇಕಾವರಾಸ್ತ್ರಯಃ ।
ವಯಂ ಚಾನ್ಯೋನ್ಯಮಾಪನ್ನಾ ವಿವಾದಂ ಪರಮಂ ತದಾ ॥ ೧೯ ॥
ಪಿತೃದತ್ತಾಂ ಮಾತೃದತ್ತಾಂ ಭ್ರಾತೃದತ್ತಾಮಹಂ ಲಭೇ ।
ಜಯಗುಪ್ತಸ್ತದಾಽಪೃಚ್ಛದ್ಧರ್ಮಶಾಸ್ತ್ರರತಾನ್ದ್ವಿಜಾನ್ ॥ ೨೦ ॥
ಇತ್ಯೇವಂ ಸಂಕಟೇ ಪ್ರಾಪ್ತೇ ಕಿಂ ಕರ್ತವ್ಯಂ ಮಯಾಧುನಾ ।
ತತೋ ವಿಮೃಶ್ಯ ಸಂಹೃತ್ಯ ತೇಽವದನ್ನಪಿ ತಂ ದ್ವಿಜಾಃ ॥ ೨೧ ॥
ಜಯಾವರೌ ವರೌ ತೌ ದ್ವೌ ತ್ವದಾನೀತೋ ವರೋ ವರಃ ।
ಕ್ರಯವಿಕ್ರಯದಾನೇಷು ಬಾಲಾನಾಂ ಜನಕಃ ಪ್ರಭುಃ ॥ ೨೨ ॥
ಸುತೋ ಯಸ್ಮಾದ್ಧಿ ಸಂಜಾತಃ ಪತ್ಯಧೀನಾ ಯತೋಽಬಲಾ ।
ತಮೇವ ನಿಶ್ಚಯಂ ಜ್ಞಾತ್ವಾ ತಾವನುಕ್ತ್ವಾ ಯಯುಸ್ತತಃ ॥ ೨೩ ॥
ಕಲ್ಪಯಾಮಾಸ ಸಂಭಾರಾನ್ ಶುಭಾನ್ ವೈವಾಹಿಕಾನ್ ಜಯಃ ।
ನಾನಾತೂರ್ಯಾಣ್ಯವಾದ್ಯಂತ ನಾನಾಲೋಕಾಸ್ಸಮಾಗತಾಃ ॥ ೨೪ ॥
ಪೇಠುರ್ನಾನಾವಿಧಾ ವಿಪ್ರಾ ಜಗುರ್ನಾನಾವಿಧಾಽಬಲಾಃ ।
ತದಾ ತನ್ನಗರೇ ಭದ್ರೇ ಮಹಾನುದ್ಘೋಷ ಉತ್ಥಿತಃ ॥ ೨೫ ॥
ವ್ಯಾನಶೇ ಸಪದಿ ವ್ಯೋಮ ದಿಶಶ್ಚ ವಿದಿಶಸ್ತಥಾ ।
ಉತ್ಪನ್ನಃ ಪರಮೋ ಹರ್ಷಸ್ಸ್ವಂ ಸ್ವಂ ಪಾಣಿಗ್ರಹಾಶಯಾ ॥ ೨೬ ॥
ತ್ರಯಾಣಾಮಪಿ ನಃ ಸ್ವಾಂತೇ ನಮದೋ ಭೂರಿತಾಂ ಗತಃ ।
ಏವಂ ಹೃಷ್ಟೇಷು ಸರ್ವೇಷು ಸ್ವಕಾರ್ಯವ್ಯಾಪೃತೇಷು ಚ ॥ ೨೭ ॥
ಚಿತ್ರಮೇಕಂ ಮಹಜ್ಜಾತಂ ವಜ್ರಘಾತಂ ಸುದಾರುಣಮ್ ।
ಸುಮುಹೂರ್ತೇ ಶುಭೇ ಲಗ್ನೇ ಶುಭಗ್ರಹನಿರೀಕ್ಷಿತೇ ॥ ೨೮ ॥
ಜ್ಯೋತಿರ್ವಿದುಪದಿಷ್ಟೇ ಚ ಪ್ರಾರಂಭೇಽಭ್ಯಂಗಮಂಗಲೇ ।
ತಾವತ್ಸಾ ಚಾರುಸರ್ವಾಂಗೀ ಲಾವಣ್ಯಹೃತಮಾನಸಾ ॥ ೨೯ ॥

ವಧೂವೇಷಧರಾ ರಮ್ಯಾ ಕಾಲಸರ್ಪೇಣ ದಂಶಿತಾ ।
ಪಿತ್ರಾನ್ಯೈಶ್ಚ ಕೃತೋಪಾಯಾ ಮೋಘತಾಮಾಪುರೇವ ತೇ ॥ ೩೦ ॥
ದಷ್ಟಮಾತ್ರಾಹಿನಾ ತನ್ವೀ ಪ್ರಾಣಾಂಸ್ತ್ಯಾಜ ಸಾ ವಧೂಃ ।
ತತ್ಪಿತಾ ಚ ತಥಾ ಮಾತಾ ಭ್ರಾತರಶ್ಚೇತರೇ ಜನಾಃ ॥ ೩೧ ॥
ಮೃತಾಮಾಲಿಂಗ್ಯ ತಾಂ ಬಾಲಾಂ ಚುಕ್ರುಶುಃ ಶೋಕಕರ್ಶಿತಾಃ ।
ಆಬಾಲವನಿತಾಸ್ಸರ್ವೇ ರುರುದುಶ್ಶೋಕವಿಹ್ವಲಾಃ ॥ ೩೨ ॥
ದುಃಖಾರ್ತ್ತಾಃ ಕೇಚಿದುರೋ ಜಘ್ನುಃ ಶಿರೋ ಜಘ್ನುಶ್ಚ ಕೇಚನ ।
ವಿವಶಾ ಚಾಪಿ ತನ್ಮಾತಾ ಶೋಕೇನ ಮಹತಾವೃತಾ ॥ ೩೩ ॥
ಮೂರ್ಛಿತಾ ನ್ಯಪತದ್ಭೂಮೌ ಗಜಭಗ್ನೇವ ವಲ್ಲರೀ ।
ಪಿತೋವಾಚ ತದಾ ಕನ್ಯಾಂ ಪ್ರಾಣೇಭ್ಯೋಽಪ್ಯಧಿಕಪ್ರಿಯಾಮ್ ॥ ೩೪ ॥
ಆಲಿಂಗನ್ನಿಶ್ವಸನ್ವಶ್ಯನ್ಸಂಮೂರ್ಛನ್ನಿಪತನ್ರುದನ್ ।
ಇಮಾಮನಾಥಾಂ ಕೃಪಣಾಂ ತ್ವತ್ಪ್ರಾಣಾಬದ್ಧಸೌಹೃದಾಮ್ ॥ ೩೫ ॥
ಸ್ವಮಾತರಂ ಪರಿತ್ಯಜ್ಯ ಕ್ವ ಗತಾಸಿ ಸುಮಧ್ಯಮೇ ।
ಪರಮಾನುಚಿತಂ ಕೃತ್ಯಂ ವಿಧಾತುರವಿವೇಕಿನಃ ॥ ೩೬ ॥
ಪೀಯೂಷಂ ವಿಷತಾಂ ಯಾತಿ ವಿಷಂ ಪೀಯೂಷತಾಂ ಕ್ವಚಿತ್ ।
ತನ್ಮಿತ್ರಾಣಿ ಚ ಪೌರಾಶ್ಚ ತಥಾ ತದ್ದೇಶವಾಸಿನಃ ॥ ೩೭ ॥
ಹಾ ಕನ್ಯೇ ಪರಲಾವಣ್ಯೇ ಕ್ವಾಸಿ ಕ್ವಾಸೀತಿ ಬಭ್ರಮುಃ ।
ಪ್ರಾದುರ್ಭೂತಸ್ತಥಾತ್ಯುಗ್ರಸ್ತತ್ಪುರೇಽಮಂಗಲಧ್ವನಿಃ ॥ ೩೮ ॥
ಪೂರ್ವಸಂಪಾತಭೇರ್ಯಾದಿ ಮಂಗಲಧ್ವನಿಮಾವೃಣೋತ್ ।
ಅಥ ವೃದ್ಧೈಸ್ಸಮಾಶ್ವಸ್ತಾ ವದದ್ಭಿಃ ಕರ್ಮಣೋ ಗತಿಮ್ ॥ ೩೯ ॥
ಮುಕ್ತ್ವಾ ಶೋಕಂ ಚ ತೇ ತಸ್ಯಾಸ್ಸಾಂಪರಾಯಿಕಮಾಚರನ್ ॥ ೪೦ ॥

॥ ಇತಿ ಪಂಚವಿಂಶೋಽಧ್ಯಾಯಃ ॥

**॥ ಇಪ್ಪತ್ತೈದನೆಯ ಅಧ್ಯಾಯವು ॥**

**ಪ್ರಯಾಣಿಕನು ಹೇಳಿದನು—**

ಚಂದ್ರವತಿಯ ರಾಜನಾದ ಆ ಚಂದ್ರಹಾಸನ ಮಹಾಮಂತ್ರಿಯು ಒಬ್ಬ ಸತ್ಕುಲದಲ್ಲಿ ಹುಟ್ಟಿದ ವೈಶ್ಯನಾಗಿದ್ದನು. ಇವನು ಸತ್ಕರ್ಮಗಳನ್ನು ಮಾಡುವವನೂ, ವಿವೇಕಿಯೂ, ಶ್ರೀಮಂತನೂ ಮತ್ತು ರಾಜನ ಕೋಶಾಧ್ಯಕ್ಷನೂ ಆಗಿದ್ದು ಅಲ್ಲಿಯೇ ವಾಸಮಾಡುತ್ತಿದ್ದನು. ॥ ೧ ॥ ಅವನು ಶೂರನೂ ಎಲ್ಲರನ್ನು ಸಮದೃಷ್ಟಿಯಿಂದ ನೋಡತಕ್ಕವನೂ, ಶರಣು ಹೊಕ್ಕವರನ್ನು ಕಾಪಾಡ ತಕ್ಕವನೂ, ದಕ್ಷ ಆಡಳಿತಗಾರನೂ, ಶತ್ರುಮರ್ದಕನೂ, ಸತ್ಯವಾದಿಯೂ, ದಾನಿಯೂ, ಬ್ರಾಹ್ಮಣರುಗಳಲ್ಲಿ ಭಕ್ತಿ ಗೌರವವುಳ್ಳವನೂ, ಉಚಿತವಾದ ಹೋಮಾದಿಗಳನ್ನು ಮಾಡುವ ವನೂ ಆಗಿದ್ದನು. ॥ ೨ ॥ ನೃಪೋತ್ತಮನಾದ ಚಂದ್ರಹಾಸನು ಇಂತಹ ಮಂತ್ರಿಯ ಸಹಾಯ

ಮತ್ತು ಕಾರ್ಯಗಳಿಂದ ನಿಶ್ಚಿಂತನಾಗಿ ಹಾಯಾಗಿ ಕಾಲು ಚಾಚಿಕೊಂಡಿದ್ದು ಮಲಗಿದ್ದೇ ರಾಜ್ಯವನ್ನು ನಡೆಸುತ್ತಿದ್ದನು. ಮಂತ್ರಿಗೆ ನಾನೊಬ್ಬನೇ ಮಗ. ನನ್ನ ಹೆಸರು ಶುಭನೆಂದು. ನಾನೂ ತುಂಬಾ ಪ್ರಸಿದ್ಧಿಗೆ ಬಂದಿದ್ದೆ. ಗುಣವಂತನಾಗಿದ್ದೆ. ರಾಜನ ಮಗನಾದ ಬುದ್ಧಿಮಾನನಿಗೂ ಬೇಕಾದ ಮಿತ್ರನಾಗಿದ್ದೆ. ತಂದೆಗಂತೂ ಅವನ ಪ್ರಾಣಕ್ಕಿಂತಲೂ ಪ್ರಿಯನಾಗಿದ್ದೆ. ॥ ೩-೪ ॥ ತಂದೆಯು ಗುರುಗಳ ಆಜ್ಞೆಯನ್ನು ಪಡೆದು ವಿವಾಹಕ್ಕೆ ಪೂರ್ವಭಾಗಿಯಾಗಿ ಮಾಡಬೇಕಾಗಿರುವ ದೇಶ, ಕಾಲ ಮತ್ತು ತನ್ನ ಶ್ರೀಮಂತಿಕೆಗೆ ಸರಿಯಾಗಿ ಎಲ್ಲ ಸಂಸ್ಕಾರಗಳನ್ನು ಮುಗಿಸಿ, ರಾಜನ ಒಪ್ಪಿಗೆ ಪಡೆದು, ತಾಯಿಯ ಅನುಮೋದನೆಯಿಂದ ನನ್ನನ್ನು ವಿವಾಹಿತನನ್ನಾಗಿ ಮಾಡಲು ನಿಶ್ಚಯಿಸಿದನು. ॥ ೫-೬ ॥ ಅದೇ ವೇಳೆಯಲ್ಲಿ ಮಂಗಳಕರವಾದ ಮಧುಪುರ ಎಂಬ ಮಧ್ಯದೇಶದ ನಗರದಲ್ಲಿ ಒಬ್ಬ ಧನಾಢ್ಯನಾದ ''ಜಯ''ನೆಂಬ ಹೆಸರಿನ ವೈಶ್ಯನಿದ್ದನು. ॥ ೭ ॥ ಅವನಿಗೆ ಮೂರು ಗಂಡು ಮಕ್ಕಳೂ, ಒಂದು ಹೆಣ್ಣು ಮಗಳೂ ಇದ್ದರು. ಈ ಕನ್ನಿಕೆಯು ಸುಶೀಲೆಯಿದ್ದು, ಲಾವಣ್ಯರಸದಲ್ಲಿ ತೊಯ್ದಿಟ್ಟಂತಿರುವ ರೂಪಾತಿಶಯದಿಂದ ಬೆಳೆದು ತಂದೆಯ ಪಾಲನೆಯಲ್ಲಿದ್ದಳು. ॥ ೮ ॥ ವಿವಾಹಕ್ಕೆ ಮಗಳು ಯೋಗ್ಯಳಾಗುತ್ತಿರಲು ಶ್ರೀಮಂತನಾದ ಆ ಜಯಗುಪ್ತನು ವರಾನ್ವೇಷಣೆಗಾಗಿ ದಕ್ಷಿಣದೇಶಕ್ಕೆ ಬಂದನು. ॥ ೯ ॥ ದೈವಯೋಗದಿಂದ ಚಂದ್ರಾವತಿಗೂ ಬಂದು, ಅಲ್ಲೆಲ್ಲಾ ವಿಚಾರಿಸಿ ಅಲೆಯುತ್ತಿರಲು, ನಮ್ಮ ತಂದೆಯವರ ಹೆಸರನ್ನು ಕೇಳಿ ನಮ್ಮ ಮನೆಗೆ ಬಂದನು. ॥ ೧೦ ॥ ನಮ್ಮ ತಂದೆಯವರನ್ನು ಕಂಡು ಕೈಮುಗಿದು ಕನ್ಯೆಯನ್ನು ಒಪ್ಪಿಕೊಂಡು ತನ್ನನ್ನು ಭೃತ್ಯನೆಂಬುದಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ॥ ೧೧ ॥ ತಂದೆಯು ಆತನ ಮಾತನ್ನು ಕೇಳಿ, ವಿಚಾರ ಮಾಡಿ, ಕನ್ಯೆಯು ಒಳ್ಳೆಯ ಕುಲಕ್ಕೆ ಸೇರಿದವಳೆಂದು ತೀರ್ಮಾನಿಸಿ ''ಹಾಗೆಯೇ ಆಗಲಿ'' ಎಂದು ಹೇಳಿ ನನ್ನನ್ನು ಆ ಜಯಗುಪ್ತನಿಗೆ ಒಪ್ಪಿಸಿದನು. ॥ ೧೨ ॥ ಜಯಗುಪ್ತನು ಈ ಸಂಬಂಧದಿಂದ ತನಗೆ ಶ್ರೇಯಸ್ಸಾಯಿತೆಂಬ ದೃಷ್ಟಿಯಿಂದ ಬಹುಮಾನ ಪೂರ್ವಕವಾಗಿ ನನ್ನನ್ನು ಕರೆದುಕೊಂಡು ಕನ್ಯೆಯ ಭಾಗ್ಯವನ್ನು ಕೊಂಡಾಡುತ್ತಾ ತನ್ನ ದೇಶಕ್ಕೆ ಹಿಂತಿರುಗಿದನು. ॥ ೧೩ ॥ ಈ ಮಧ್ಯೆ, ಇನ್ನೊಬ್ಬ ಉತ್ತಮ ವೈಶ್ಯನು ಈ ಜಯಗುಪ್ತನ ಮನೆಗೆ ಬಂದು ಈ ಕನ್ಯೆಯನ್ನು ತನ್ನ ಮಗನಿಗೆ ಕೊಡಲು ಕೇಳಿಕೊಂಡನು. ಇವನೂ ಧನಿಕನೂ ಕುಲೀನನೂ ಆಗಿದ್ದನು. ॥ ೧೪ ॥ ಕನ್ಯೆಯ ತಾಯಿಯು ಅಳಿಯನಾಗುವವನ ಶ್ರೀಮಂತಿಕೆಗೆ ಆಸೆಗೊಂಡು, ಗಂಡನು ಬರುವುದು ನಿಧಾನವಾಗುವುದೆಂದು ಯೋಚಿಸಿ, ಈ ಸಂಬಂಧಕ್ಕೆ ಒಪ್ಪಿಗೆ ಕೊಟ್ಟಳು. ॥ ೧೫ ॥ ಈ ನಡುವೆ, ಹುಡುಗಿಯ ಅಣ್ಣನೊಬ್ಬನು ವ್ಯಾಪಾರಕ್ಕಾಗಿ ವಿದೇಶಕ್ಕೆ ತೆರಳಿದವನು ತನ್ನ ಜೊತೆ ಸಹ ಪ್ರಯಾಣಿಕನಾಗಿದ್ದೊಬ್ಬನಿಗೆ ಈ ಕನ್ಯೆಯನ್ನು ಕೊಡುವುದಾಗಿ ವಾಗ್ದಾನ ಮಾಡಿ ಅವನನ್ನೂ ಕರೆದುಕೊಂಡು ಮನೆಗೆ ಬಂದನು. ॥ ೧೬ ॥ ನಾನಾದರೋ ಅತಿಸಂತುಷ್ಟನಾಗಿ ವಧುವನ್ನು ನೋಡುವುದಕ್ಕಾಗಿ ಮಾವನವರ ಮನೆಗೆ ಬಂದರೆ ಅಲ್ಲಿ ಇನ್ನಿಬ್ಬರು ವರಗಳು ಇದ್ದರು. ॥ ೧೭ ॥ ಆಗ ತುಂಬ ಚಿಂತೆಗೆ ಒಳಪಟ್ಟು ಏನು ಮಾಡಬೇಕೆಂದು ಯೋಚಿಸಿದೆನು. ಊರಿನ ಜನರೆಲ್ಲರೂ ಒಬ್ಬರಿಗೊಬ್ಬರು ಈ ವಿಷಯವನ್ನೇ ಆಡತೊಡಗಿದರು. ॥ ೧೮ ॥ ''ನೋಡಿರಿ, ಮಹದಾಶ್ಚರ್ಯದ ಸಂಗತಿ! ವಧೂ ಒಬ್ಬಳು ಅವಳಿಗೆ ವರಗಳಾದರೋ ಮೂವರು'' ಎಂದು ಅನ್ನುತ್ತಿದ್ದರು. ನಾವು ಮೂವರು ವರಗಳೂ ನಮ್ಮನಮ್ಮೊಳಗೇ ಈ ದೊಡ್ಡ ವಿವಾಹದ ಬಗ್ಗೆ ವಿಚಾರ ಮಾಡುತ್ತಿದ್ದೆವು. ॥ ೧೯ ॥ ''ತಂದೆಯಿಂದ ಕೊಡಲ್ಪಟ್ಟಿದ್ದಾಳೆ ಆದ್ದರಿಂದ ನಾನು ವಿವಾಹವಾಗುವೆನು ಎಂದು ನಾನೂ, ತಾಯಿಯಿಂದ ಕೊಡಲ್ಪಟ್ಟಿದ್ದಾಳೆ ಆದ್ದರಿಂದ

ಅವಳನ್ನು ನಾನೇ ವಿವಾಹವಾಗುವೆನೆಂದೂ ಇನ್ನೊಬ್ಬನೂ, ಅಣ್ಣನಿಂದ ವಾಗ್ದಾನವಾಗಿರುವುದರಿಂದ ನಾನೇ ವಿವಾಹವಾಗುತ್ತೇನೆಂದು ಮತ್ತೊಬ್ಬನೂ'' ಹೀಗೆ ವಿವಾದ ಮಾಡುತ್ತಿದ್ದೆವು. ।। ೨೦ ।। ಹೀಗೆ ಸಂಕಟ ಪರಿಸ್ಥಿತಿ ಇರಲು, ನಾನು ಏನು ಮಾಡಬೇಕೆಂದರಿಯದಿರಲು ಧರ್ಮಶಾಸ್ತ್ರತಿಳಿದ ಬ್ರಾಹ್ಮಣರು ಹುಡುಗಿಯ ತಂದೆಗೆ ಹೇಳಿದರು. ।। ೨೧ ।। ''ಎಲೈ ಜಯನೇ! ನೀನು ಕರೆದುಕೊಂಡು ಬಂದಿರುವ ವರನೇ ಶ್ರೇಷ್ಠನು. ಇನ್ನಿಬ್ಬರು ವರಗಳೂ ನಿಕೃಷ್ಟರಾಗುತ್ತಾರೆ. ಯಾವ ಪದಾರ್ಥ ಕೊಳ್ಳುವುದಕ್ಕಾಗಲೀ, ಮಾರುವುದಕ್ಕಾಗಲೀ ಅಥವಾ ದಾನಕೊಡುವುದಕ್ಕೇ ಆಗಲೀ ಜನಕನೇ ಅಧಿಕಾರವುಳ್ಳವನು. ।। ೨೨ ।। ಮಗನು ತಂದೆಯಿಂದಲೇ ಉತ್ಪನ್ನವಾಗಿದ್ದಾನೆ, ನಿನ್ನ ಪತ್ನಿಯಾದರೋ ಅಬಲೆಯು ಮತ್ತು ಗಂಡನ ಅಧೀನಳು. ಆದ್ದರಿಂದ ತಂದೆಗಿರುವ ಕನ್ಯಾದಾನದ ಅಧಿಕಾರವು ಅವಳಿಗಿರುವುದಿಲ್ಲ. ಮಗನು ತಂದೆಯ ಅಧೀನ. ಆದ್ದರಿಂದ ತಂದೆಯ ತೀರ್ಪನ್ನು ಮೀರಿ ತೀರ್ಮಾನ ಮಾಡಲು ಅವನಿಗೂ ಅಧಿಕಾರವಿಲ್ಲ. ಎಂದು ಹೇಳಲು ಇದನ್ನು ತಿಳಿದ ಅವರಿಬ್ಬರು ವರಗಳು ಅಲ್ಲಿಂದ ತೆರಳಿದರು. ।। ೨೩ ।। ಅನಂತರ ವಿವಾಹಕ್ಕೆಂದು ಎಲ್ಲಾ ಸಾಮಾನುಗಳನ್ನು ಜಯನು ಸಿದ್ಧಗೊಳಿಸಿದನು. ಎಲ್ಲ ಜನಗಳೂ ಬಂದು ಸೇರಿದರು. ನಾನಾ ಮಂಗಳವಾದ್ಯಗಳು ಮೊಳಗಿದವು. ।। ೨೪ ।। ಬ್ರಾಹ್ಮಣರುಗಳು ವೇದ ಮೊದಲಾದವುಗಳನ್ನು ಘೋಷಿಸಿದರು. ಸ್ತ್ರೀಯರು ಗಾಯನ ಮಾಡಿದರು. ಹೀಗೆ ಆ ನಗರದಲ್ಲಿ ಭಾರೀ ಕೋಲಾಹಲವೇ ಜರುಗಿತು. ।। ೨೫ ।। ಈ ವಿವಾಹದ ಸಂಭ್ರಮದಿಂದ ಆಕಾಶವೂ, ದಿಕ್ಕುವಿದಿಕ್ಕುಗಳೂ ಪ್ರತಿಧ್ವನಿತವಾದುವು. ವಿವಾಹದ ಸಂಭ್ರಮದಿಂದ ನಾವೆಲ್ಲ ಪರಮ ಸಂತೋಷದಿಂದಿದ್ದು ಪಾಣಿಗ್ರಹಣದ ಶುಭ ಮೂಹೂರ್ತವನ್ನೇ ಎದುರುನೋಡಿಕೊಂಡಿದ್ದೆವು. ।। ೨೬ ।। ಹೀಗೆ ನಾನೂ, ಕನ್ಯೆಯೂ, ಕನ್ಯೆಯ ಮಾತಾಪಿತೃಗಳೂ ಸಂತಸದಿಂದಿರಲು ಮತ್ತು ಕಲೆತವರು ಅವರವರ ಕೆಲಸಗಳಲ್ಲಿ ಮಗ್ನರಾಗಿರಲು, ತಡೆಯಲಾರದ ಸಿಡಿಲಿನ ಆಘಾತದಂತಹ ಕ್ರೂರವಾದ ಒಂದು ಘಟನೆಯು ನಡೆಯಿತು. ಎಲ್ಲರೂ ಶುಭಮುಹೂರ್ತದ, ಶುಭಲಗ್ನದ ಮತ್ತು ಶುಭ ಗ್ರಹಗಳ ನಿರೀಕ್ಷಣೆಯಲ್ಲಿರುವಾಗ ಜ್ಯೌತಿಷ್ಯದಲ್ಲಿ ನಿಷ್ಣಾತರಾದವರಿಂದ ಗೊತ್ತುಮಾಡಲ್ಪಟ್ಟ ಮುಹೂರ್ತದಲ್ಲಿ ತೈಲಾಭ್ಯಂಗನವು ಪ್ರಾರಂಭವಾದಾಗ, ಮನೋಹರವಾದ ಸರ್ವಾಂಗಗಳಿಂದ ಕಂಗೊಳಿಸುತ್ತಿರುವ, ಲಾವಣ್ಯದಿಂದ ಎಲ್ಲರ ಹೃದಯವನ್ನು ಅಪಹರಿಸಿದ ಮತ್ತು ಹಸೆಮಣೆಗೆ ಬರುವ ವಧೂವೇಷದಲ್ಲಿದ್ದ ಆ ಕನ್ನಿಕೆಯನ್ನು ಥಟ್ಟನೆ ಒಂದು ಕಾಳಸರ್ಪವು ಕಚ್ಚಿತು. ತಂದೆ ಮತ್ತು ಇತರರು ಮಾಡಿದ ಎಲ್ಲ ಪ್ರಯತ್ನಗಳೂ ನಿಷ್ಫಲವಾದುವು. ।। ೨೭-೩೦ ।। ಕೇವಲ ಹಾವು ಕಚ್ಚಿದ ಕ್ಷಣದಲ್ಲಿಯೇ ಕನ್ಯೆಯು ಸತ್ತುಹೋದಳು. ಇವಳ ತಂದೆ, ತಾಯಿ, ಅಣ್ಣಂದಿರು ಮತ್ತು ಇತರರು ಮೃತವಾದ ಆ ಬಾಲಿಕೆಯ ದೇಹವನ್ನಪ್ಪಿಕೊಂಡು ಗಟ್ಟಿಯಾಗಿ ಅತ್ತರು. ಹುಡುಗರಿಂದ ವೃದ್ಧರವರೆಗೆ ಎಲ್ಲರೂ ದುಃಖದಿಂದ ಕಂಗಾಲಾದರು. ಕೆಲವರು ಎದೆ ಎದೆ ಬಡಿದುಕೊಂಡರು, ಮತ್ತೆ ಕೆಲವರು ತಲೆ ತಲೆ ಚಚ್ಚಿಕೊಂಡರು. ಅವಳ ತಾಯಿಯಾದರೋ ಬಹಳವಾದ ದುಃಖದಿಂದ ತುಂಬಿದವಳಾಗಿದ್ದಳು. ।। ೩೧-೩೩ ।। ಆಕೆಯು ಜ್ಞಾನ ತಪ್ಪಿ ಆನೆ ಕಿತ್ತು ಬಿಸುಟ ಬಳ್ಳಿಯಂತೆ ಕೆಳಕ್ಕೆ ಬಿದ್ದಳು. ತಂದೆಯೂ ಕೂಡ ಮಗಳ ಶವವನ್ನು ಆಲಿಂಗಿಸಿಕೊಂಡು, ಅದನ್ನೇ ನೋಡುತ್ತಾ ಮೂರ್ಛೆಗೊಂಡು ಅಳುತ್ತಾ ಜ್ಞಾನತಪ್ಪಿ ಬಿದ್ದು ಪುನಃ ಎಚ್ಚೆತ್ತು ''ಈ ಅನಾಥಳಾದ, ಗತಿಹೀನಳಾದ, ನಿನ್ನಲ್ಲಿಯೆ ಜೀವವಿಟ್ಟಿದ್ದ ಮತ್ತು ನಿನ್ನಲ್ಲೇ ಮನಸ್ಸುಳ್ಳ ನಿನ್ನ ತಾಯಿಯನ್ನು ಬಿಟ್ಟು ಎಲ್ಲಿಗೆ ಹೋಗುತ್ತಿದ್ದಿ? ನಿನ್ನನ್ನು ನಮ್ಮಿಂದ ಕಿತ್ತುಕೊಂಡು ಹೋಗುತ್ತಿರುವ ವಿಧಿಯು ಅತ್ಯಂತ ಮಾಡಬಾರದ

ಕೆಲಸವನ್ನು ಮಾಡಿದ್ದಾನೆ, ಅವನು ಅವಿವೇಕಿಯೇ-ಸರಿ. ಕೆಲವೊಮ್ಮೆ ಅಮೃತವೂ ವಿಷವಾಗುವುದು; ವಿಷವೂ ಅಮೃತವಾಗುವುದು; ಹೀಗೆಂದು ಪ್ರಲಾಪಿಸಿದನು. ಅವನ ಮಿತ್ರರೂ ಬೇರೆ ಪೌರರೂ ಆ ದೇಶದ ಜನರೂ ''ಹಾ ಕನ್ಯೆಯೇ! ಅತ್ಯುತ್ತಮ ಲಾವಣ್ಯವತಿಯೇ! ಈಗ ನೀನು ಎಲ್ಲಿದ್ದೀ, ಎಲ್ಲಿದ್ದೀ'' ಎಂದು ವಿಲಾಪಮಾಡಿದರು. ಹೀಗಿರಲು ಆ ಊರಿನಲ್ಲಿ ಬಹಳ ಜೋರಾಗಿ ಅಮಂಗಳ ಧ್ವನಿಗಳು ಕೇಳಿಬಂದವು. ॥ ೩೪-೩೮ ॥ ಆ ಅಮಂಗಳ ಶಬ್ದವು ಮೊದಲೇ ಮೊಳಗುತ್ತಿದ್ದ ಸಮಸ್ತ ಮಂಗಳವಾದ್ಯಗಳ ಧ್ವನಿಗಳನ್ನು ಅಡಗಿಸಿತು. ॥ ೩೯ ॥ ಅನಂತರ ವಯೋವೃದ್ಧರು ''ಪೂರ್ವದಲ್ಲಿ ಎಸಗಿರುವ ಅವರವರ ಕರ್ಮಗಳ ಮಾರ್ಗವು ಬಹಳ ಆಳವಾದದ್ದು'' ಎಂದು ಹೇಳಿ ಅವರುಗಳನ್ನು ಸಮಾಧಾನಪಡಿಸಿದರು. ಅವರುಗಳು ತಮ್ಮ ತಮ್ಮ ದುಃಖವನ್ನು ಬದಿಗಿಟ್ಟು ಆ ಕನ್ಯೆಯ ಶವಸಂಸ್ಕಾರಗಳನ್ನು ಮಾಡಿದರು. ॥ ೪೦ ॥

॥ ಇಪ್ಪತ್ತೈದನೆಯ ಅಧ್ಯಾಯವು ಸಮಾಪ್ತಿಯಾಯಿತು ॥

## ॥ ಅಥ ಷಡ್ವಿಂಶೋಽಧ್ಯಾಯಃ ॥ ೨೬ ॥

ಪಾಂಥ ಉವಾಚ—

ತತಸ್ತೇ ಶವಮಾದಾಯ ಜಗ್ಮುರ್ಯೋಷಿತ್ಸುರೋಗಮಾಃ ।
ಗ್ರಾಮಸ್ಯ ಪೂರ್ವದಿಗ್ಭಾಗೇ ವರ್ತಮಾನಂ ಸರಿತ್ತಟೇ ॥ ೧ ॥
ಶ್ಮಶಾನಂ ಘೋರಸನ್ನಾದಂ ಶಿವಾಶತನಿನಾದಿತಮ್ ।
ಶವಮಾಲ್ಯಸಮಾಕೀರ್ಣಂ ಧೂಮದುರ್ಗಂಧಸಂಕುಲಮ್ ॥ ೨ ॥
ಗೃಧ್ರಗೋಮಾಯುಸಂಕೀರ್ಣಂ ಶ್ವವೃಂದಪರಿವಾರಿತಮ್ ।
ಪಿಶಾಚಭೂತಭೇತಾಲಡಾಕಿನೀಶತಸೇವಿತಮ್ ॥ ೩ ॥
ಅಸ್ಥಿಸಂಘಸಮುತ್ತುಂಗಂ ನಾನಾದುರ್ಗಂಧವಾಸಿತಮ್ ।
ಭೂತರಾಕ್ಷಸವೇತಾಲಗಣಕೋಲಾಹಲಾಕುಲಮ್ ॥ ೪ ॥
ಹಾ ಪುತ್ರ! ಮಿತ್ರ! ಹಾ ಬಂಧೋ! ಭ್ರಾತರ್ವತ್ಸ ಪ್ರಿಯಪ್ರಿಯೇ ।
ಹಾ ಪತೇ ಭಾಗಿನೇಯಾಂಬ ಹಾ ಮಾತುಲ! ಪಿತಾಮಹ ॥ ೫ ॥
ಮಾತಾಮಹ ಪಿತಃ ಪೌತ್ರ ಕ್ವ ಗತೋಽಸೀತಿ ಬಾಂಧವಾಃ ।
ಏವಂ ಪ್ರವರ್ಧಿತೋ ಯತ್ರ ಧ್ವನಿಸ್ಸಂಶ್ರೂಯತೇ ಮಹಾನ್ ॥ ೬ ॥
ಜ್ವಲನ್ಮಾಂಸವಸಾಪಂಕಮೇದೋಽಸೃಗ್ಘ್ರಾರುಸಂಕುಲಮ್ ।
ನಾನಾಕಪಾಲಸಂಲಗ್ನಘಟೀಪಟನಿರಂತರಮ್ ॥ ೭ ॥
ಮಹಾಮಹಿಷಕಾರೀಷಗೋಶಕೃದ್ರಾಶಿಸಂಕುಲಮ್ ।
ತದುಪ್ತಭಸ್ಮನಾಂ ಕೂಟೈರ್ವೃತಂ ಸಕ್ಥಿಭಿರುನ್ನತೈಃ ॥ ೮ ॥
ಅರ್ಧದಗ್ಧಶವಸ್ಥಾನವಿಕಸದ್ದಂತಪಂಕ್ತಯಃ ।
ಹಸಂತೀ ವಾಗ್ನಿಮಧ್ಯಸ್ಥಾ ಕಾಯಸ್ಯೇಯಂ ದಶಾ ತ್ವಿತಿ ॥ ೯ ॥
ಗೃಧ್ರಗೋಮಾಯುನಾದಾರ್ತಾ ನಷ್ಟಕ್ಷುದ್ರವಿಹಂಗಮಮ್ ।
ವಿನಾ ಧೂಮರುಚಾತ್ಯಂತನೀಲೀಕೃತದಿಗಂತರಮ್ ॥ ೧೦ ॥
ಕುಣಪಾಸ್ವಾದನಾಸಕ್ತಸಂಪ್ರಹೃಷ್ಟನಿಶಾಚರಮ್ ।
ಭಸ್ಮಾಂಗಾರಾರ್ಧದಗ್ಧಾಸ್ಥಿಮಂಜಸಂಘಟ್ಟಭೀಷಣಮ್ ॥ ೧೧ ॥
ತತ್ರ ಗತ್ವಾಥ ತೇ ಸರ್ವೇ ಪ್ರವಿಲಾಪಪುರಸ್ಸರಮ್ ।
ಚಿತಾಯಾಂ ಶವಮಾಸಾದ್ಯ ದಾಹಯಾಮಾಸುರಂಜಸಾ ॥ ೧೨ ॥
ವಯಂ ತತ್ರ ಗತಾಸ್ಸರ್ವೇ ಸಾಕಂ ನಗರವಾಸಿಭಿಃ ।
ವಧೂಂ ತಥಾವಿಧಾಂ ದೃಷ್ಟ್ವಾ ನಿಮಗ್ನಾ ದುಃಖಸಾಗರೇ ॥ ೧೩ ॥
ದಹನೋದಕದಾನಾದಿ ಪ್ರೇತಕೃತ್ಯಂ ನಿವರ್ತ್ಯ ತೇ ।
ಸರ್ವೇ ಸ್ವಂ ಸ್ವಂ ಗೃಹಂ ಜಗ್ಮುರ್ವಯಂ ತತ್ರಾವಶೇಷಿತಾಃ ॥ ೧೪ ॥

ತದ್ರೂಪಮೇವ ಧ್ಯಾಯಂತಸ್ತದ್ಗುಣಾಕೃಷ್ಟಚೇತಸಃ ।
ಪೂರ್ವಾಪರಮಪಶ್ಯಂತಃ ಪರಂ ವೈರಾಗ್ಯಮಾಗತಾಃ ॥ ೧೫ ॥
ಕಿಂ ಪ್ರದರ್ಶ್ಯಂ ಮುಖಂ ಗೇಹೇ ಕಿಂ ವಾ ವಕ್ತವ್ಯಮುತ್ತರಮ್ ।
ಕಿಂ ಕರ್ತವ್ಯಂ ಚ ಗಂತವ್ಯಮತೋ ಗೇಹಾದ್ವನಾಂತರಮ್ ॥ ೧೬ ॥
ಸ್ವಕಾರ್ಯಸಂಪ್ರವೃತ್ತಾನಾಂ ಕಾರ್ಯನಾಶ ಉಪಸ್ಥಿತೇ ।
ಶ್ರೇಷ್ಠಂ ಮರಣಮೇವೈಷಾಂ ನ ಸ್ವೇಭ್ಯೋ ಮುಖದರ್ಶನಮ್ ॥ ೧೭ ॥
ತಸ್ಮಾದ್ವಯಮಟಿಷ್ಯಾಮಸ್ತೀರ್ಥೇಷು ಚ ವನೇಷು ಚ ।
ಗೃಹಂ ನೈವ ಗಮಿಷ್ಯಾಮ ಇತಿ ನಿಶ್ಚಯಮಾಗತಾಃ ॥ ೧೮ ॥
ತತಸ್ತೌ ದ್ವೌ ತತೋ ಯಾತೌ ಮಾಮಾಮಂತ್ರ್ಯ ಯಥೇಚ್ಛಯಾ ।
ತತೋಽಹಮೇಕಲಸ್ತಸ್ಮಿನ್ಶ್ಮಶಾನೇ ಚ ವಿಚಾರಯನ್ ॥ ೧೯ ॥
ಸತಾಂ ಸಾಪ್ತಪದೀ ಮೈತ್ರೀ ಸರ್ವಶಾಸ್ತ್ರೇಷು ನಿಶ್ಚಿತಾ ।
ತದ್ವಿಚಿಂತ್ಯಾಹಮೇತಸ್ಯಾ ಪ್ರಿಯಂ ಕರ್ತುಂ ಸ್ವಶಕ್ತಿತಃ ॥ ೨೦ ॥
ವಿಚಾರ್ಯೈವಂ ತದಾ ತಸ್ಯಾ ಗೃಹೀತ್ವಾಸ್ಥೀನಿ ಸರ್ವಶಃ ।
ಪ್ರಸ್ಥಿತಂ ತೀರ್ಥಮುದ್ದಿಶ್ಯ ಪ್ರಾಪ್ತಮತ್ರಾಟತಾ ಮಯಾ ॥ ೨೧ ॥
ಏವಂ ಸಾಂಸಾರಿಕಂ ದುಃಖಂ ಮಯಾ ತ್ವಯಿ ನಿವೇದಿತಮ್ ।
ವಿರಲಃ ಸಜ್ಜನೋ ಲೋಕೇ ಯತ್ರ ದುಃಖಂ ನಿವೇದ್ಯತೇ ॥ ೨೨ ॥
ವದ ತೇ ಯದ್ಯುಪಾಯೋಽಸ್ತಿ ಕರ್ತವ್ಯಮವಿಲಂಬಿತಮ್ ।
ಯದ್ರೋಚತೇ ತದಪ್ರಾಪ್ಯಮತ ಏವ ಮಯೋದಿತಮ್ ॥ ೨೩ ॥

॥ ಇಪ್ಪತ್ತಾರನೆಯ ಅಧ್ಯಾಯವು ॥

ಪ್ರಯಾಣಿಕನು ಹೇಳಿದನು—

ಅನಂತರ ತಂದೆಯವರೇ ಮೊದಲಾದ ಅವರೆಲ್ಲರೂ ಶವವನ್ನು ತೆಗೆದುಕೊಂಡು ಆಶ್ರಮದ ಪೂರ್ವದಿಕ್ಕಿನಲ್ಲಿ ನದೀತೀರದಲ್ಲಿದ್ದ ಸ್ಮಶಾನಕ್ಕೆ ಹೊರಟರು. ॥ ೧ ॥ ಸ್ಮಶಾನವಾದರೋ ನೂರಾರು ಗೂಬೆಗಳ ಕೂಗಾಟದಿಂದ ಪ್ರತಿಧ್ವನಿಗೊಳ್ಳುತ್ತಾ ಭಯಂಕರವಾಗಿತ್ತು. ಶವಗಳು ಒಂದರ ಪಕ್ಕದಲ್ಲೊಂದು ಇಡಲ್ಪಟ್ಟಿದ್ದವು ಮತ್ತು ಹೊಗೆಯ ಕೆಟ್ಟವಾಸನೆಯಿಂದ ತುಂಬಿಹೋಗಿತ್ತು. ॥ ೨ ॥ ಹದ್ದುಗಳ, ನರಿಗಳ ಮತ್ತು ನಾಯಿಗಳ ಪರಿವಾರವು ತುಂಬಿದ್ದವು. ನೂರಾರು ಪಿಶಾಚಿಗಳು, ಭೂತಗಳು, ಭೇತಾಳಗಳು, ಡಾಕಿನೀಯರುಗಳಿಂದ ತುಂಬಿತ್ತು. ॥ ೩ ॥ ಅಸ್ಥಿಗಳ ಗುಡ್ಡೆಗಳು ಎತ್ತೆತ್ತರವಾಗಿ ಬಿದ್ದಿದ್ದು ನಾನಾಬಗೆಯ ದುರ್ಗಂಧದಿಂದ ತುಂಬಿತ್ತು. ಭೂತ, ಬ್ರಹ್ಮರಾಕ್ಷಸ ಮತ್ತು ಭೇತಾಳಗಳು ಗುಂಪುಗುಂಪಾಗಿ ಅಟ್ಟಹಾಸ ಮಾಡುತ್ತಿದ್ದವು. ॥ ೪ ॥ ''ಎಲೈ ಮಗನೇ, ಸ್ನೇಹಿತನೇ, ಎಲೈ ಬಂಧುವೇ, ಅಣ್ಣನೇ, ಮಗುವೇ, ಪ್ರಿಯನೆ, ಪ್ರಿಯಳೇ, ಹೇ ಪತಿಯೇ, ಸೋದರಳಿಯನೇ, ತಾಯಿಯೇ, ಸೋದರಮಾವನೇ, ಅಜ್ಜನೇ, ತಾತನೇ, ತಂದೆಯೇ, ಮೊಮ್ಮಗನೇ, ಎಲ್ಲಿಗೆ ಹೋದಿ'' ಹೀಗೆಂದು ಬಂಧುಗಳೆಲ್ಲಾ ಕೂಗುತ್ತಿದ್ದ ಶಬ್ದಗಳು

ಹೆಚ್ಚು ಹೆಚ್ಚು ಕೇಳಿಬರುತ್ತಿತ್ತು. ॥ ೫-೬ ॥ ಬೇಯುತ್ತಿರುವ ಮಾಂಸಗಳಲ್ಲಿದ್ದ ಮಜ್ಜೆ ಮೇದಸ್ಸು ಮತ್ತು ನರ ರಕ್ತಾದಿಗಳು ಉರಿಯುತ್ತಿದ್ದವು ಮತ್ತು ನಾನಾ ತಲೆಬುರುಡೆಗಳ ಸಂಬಂಧವುಳ್ಳ ಮಡಕೆಗಳಿಂದಲೂ, ಬಟ್ಟೆಗಳಿಂದಲೂ ನಿರಂತರವಾಗಿ ತುಂಬಿದ್ದಿತು. ॥ ೭ ॥ ಎಮ್ಮೆಗಳ, ಎತ್ತುಗಳ, ಹಸುಗಳ ಬೆರಣಿಯ ಎತ್ತರದ ರಾಶಿಯಿಂದ ಮಾಡಿದ ಶವಸಂಸ್ಕಾರದಿಂದ ಆದ ಬೂದಿಯ ರಾಶಿಗಳು ಸುಟ್ಟಿಲುಬುಗಳೊಡನೆ ಬಿದ್ದಿದ್ದವು. ॥ ೮ ॥ ಅರ್ಧ ಅರ್ಧ ಸುಟ್ಟ ಶವಗಳಲ್ಲಿ ಇದ್ದ ದಂತಪಂಕ್ತಿಗಳು ''ದೇಹದ ಸ್ಥಿತಿಯು ಇಷ್ಟೇನೇ'' ಎಂದು ನಕ್ಕು ಹೇಳುವಂತೆ ಕಾಣುತ್ತಿದ್ದವು. ॥ ೯ ॥ ಹದ್ದು ಮತ್ತು ನರಿಗಳು ಮಾಡುತ್ತಿದ್ದ ಶಬ್ದಗಳಿಗೆ ಹೆದರಿ ಸಣ್ಣ ಪುಟ್ಟ ಹಕ್ಕಿಗಳು ಹಾರಿ ಹೋಗುತ್ತಿದ್ದವು. ಶವಗಳಿಂದ ಹೊರಟ ಹೊಗೆಯಿಂದ ದಿಗ್ದಿಗಂತಗಳೆಲ್ಲವೂ ಕಪ್ಪಿಟ್ಟಿದ್ದವು. ॥ ೧೦ ॥ ಹೆಣಗಳನ್ನು ತಿಂದು ಸವಿಯುತ್ತಿರುವ ರಾಕ್ಷಸರು ಸಂತೋಷದಿಂದಿದ್ದರು. ಬೂದಿ, ಕೆಂಡಗಳು, ಅರ್ಧಸುಟ್ಟ ದೇಹಗಳು, ಮಾಂಸ, ಮಜ್ಜೆ ಮುಂತಾದವುಗಳಿಂದ ಆ ಸ್ಮಶಾನವು ತುಂಬಿ ಹೋಗಿ ಭಯಂಕರವಾಗಿತ್ತು. ॥ ೧೧ ॥ ಇಂತಹ ಸ್ಮಶಾನದೊಳಗೆ ಅವರೆಲ್ಲರೂ ಹೋಗಿ ಗಟ್ಟಿಯಾಗಿ ರೋದನಮಾಡುತ್ತಾ ಚಿತೆಯಲ್ಲಿ ಆ ಕನ್ನಿಕೆಯ ಶವವನ್ನಿಟ್ಟು ಸುಟ್ಟರು. ॥ ೧೨ ॥ ನಗರದ ಜನರೊಡನೆ ಹೊರಟು ಬಂದಿದ್ದ ನಾವೆಲ್ಲರೂ ಆ ರೀತಿಯಾಗಿ ದುಃಖದಲ್ಲಿ ಮುಳುಗಿದ್ದ ಆ ಕನ್ನಿಕೆಯ ಬಂಧುಗಳನ್ನು ನೋಡಿ ದುಃಖದ ಕಡಲಿನಲ್ಲಿ ಮುಳುಗಿದೆವು. ॥ ೧೩ ॥ ದಹನೋದಕ, ದಾನಾದಿ ಪ್ರೇತ ಕಾರ್ಯಗಳನ್ನೆಲ್ಲ ಮುಗಿಸಿ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು. ನಾವು ಮಾತ್ರ ಅಲ್ಲಿ ಉಳಿದುಕೊಂಡೆವು. ॥ ೧೪ ॥ ಮೃತಳಾದ ಆ ಕನ್ಯೆಯ ರೂಪವನ್ನೇ ಧ್ಯಾನಿಸುತ್ತ ಮತ್ತು ಅವಳ ಸದ್ಗುಣಗಳಿಂದ ಆಕರ್ಷಿತರಾಗಿದ್ದ ನಮಗೆ ಹಿಂದೆ ಮುಂದೆ ಏನು ಮಾಡಬೇಕೆಂಬುದು ತಿಳಿಯದೆ ಕೇವಲ ವೈರಾಗ್ಯವು ಹುಟ್ಟಿತು. ॥ ೧೫ ॥ ನಾವು ಮೂವರು ಹೀಗೆ ಯೋಚಿಸಿದೆವು. ಮನೆಗೆ ಹೋಗಿ ಏಕೆ ನಮ್ಮ ಮುಖಗಳನ್ನು ತೋರಿಸಬೇಕು? ಅವರಿಗೆಲ್ಲ ಏನೆಂದು ಉತ್ತರ ಕೊಡಬೇಕು, ನಾವು ಏನು ತಾನೇ ಮಾಡೋಣ, ಇಲ್ಲಿಂದ ಕಾಡಿಗಾದರೂ ಹೋಗೋಣ. ನಮ್ಮ ನಮ್ಮ ಉದ್ಯೋಗಗಳಲ್ಲಿ ನಿರತರಾಗಿದ್ದ ನಮ್ಮ ಕಾರ್ಯಗಳೆಲ್ಲವೂ ಕೆಟ್ಟುಹೋದ ಮೇಲೆ ಮರಣವೇ ನಮಗೆ ಉತ್ತಮವು. ನಮ್ಮ ಬಂಧುಗಳಿಗೆ ಮುಖಗಳನ್ನು ತೋರಿಸುವುದಕ್ಕಿಂತ ಇದೇ ಮೇಲು. ಆದ್ದರಿಂದ ನಾವು ತೀರ್ಥಕ್ಷೇತ್ರಗಳಲ್ಲಿಯೋ, ವನಗಳಲ್ಲಿಯೋ ಅಲೆದುಕೊಂಡು ಇರೋಣ. ಮನೆಯ ಕಡೆ ಹೋಗುವುದೇ ಬೇಡ. ಹೀಗೆ ನಿಶ್ಚಯಿಸಿಬಿಟ್ಟೆವು. ॥ ೧೬-೧೮ ॥ ಅನಂತರ ಅವರಿಬ್ಬರೂ ನನಗೆ ಹೇಳಿ ಅಲ್ಲಿಂದ ತಮಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೊರಟುಹೋದರು. ಆಮೇಲೆ ನಾನೊಬ್ಬನೇ ಆ ಸ್ಮಶಾನದಲ್ಲಿದ್ದು ಯೋಚಿಸಿದೆನು. ॥ ೧೯ ॥ ಎಲ್ಲಾ ಶಾಸ್ತ್ರಗಳಲ್ಲಿ ಏಳು ಹೆಜ್ಜೆ ಸೇರಿ ನಡೆದರೂ ಮೈತ್ರಿಯು ಹುಟ್ಟಿ ಬೆಳೆಯುತ್ತದೆಂದು ಹೇಳಲ್ಪಟ್ಟಿದೆ. ಈ ವಿಷಯವನ್ನು ಮನಸ್ಸಿನಲ್ಲಿ ವಿಚಾರಮಾಡಿ ಆ ಸ್ವರ್ಗಸ್ಥಳಾದ ಕನ್ನಿಕೆಗೆ ನನ್ನ ಶಕ್ತ್ಯಾನುಸಾರ ಪ್ರಿಯವಾದುದನ್ನು ಮಾಡಲು ನಿಶ್ಚಯಿಸಿ ಅವಳ ಅಸ್ಥಿಗಳನ್ನೆಲ್ಲಾ ಒಂದನ್ನು ಬಿಡದಂತೆ ತೆಗೆದುಕೊಂಡೆನು. ಅಲ್ಲಿಂದ ಹೊರಟು ಅಲೆಯುತ್ತಾ ಇಲ್ಲಿ ಬಂದು ಸೇರಿದೆನು. ॥ ೨೦-೨೧ ॥ ಈ ರೀತಿಯಾದ ಈ ಬಾಳಿಗೆ ಸಂಬಂಧಪಟ್ಟ ಕಥೆಯನ್ನು ನಿನಗೆ ಹೇಳಿದ್ದೇನೆ. ಯಾರ ಮುಂದೆ ನಮ್ಮ ದುಃಖವನ್ನು ತೋಡಿಕೊಳ್ಳಬಹುದೋ ಅಂತಹ ಸಜ್ಜನರು ಲೋಕದಲ್ಲಿ ಬಹಳ ಕಮ್ಮಿ. ॥ ೨೨ ॥ ನನ್ನ ಪರಿಸ್ಥಿತಿಯಲ್ಲಿ ಏನಾದರು ಪರಿಹಾರವು ಇದೆಯೇ? ಅದನ್ನು ಹೇಳು, ಇನ್ನು ತಡಮಾಡಲಾಗದು. ಈಗಂತೂ ನಾನು ಬಯಸಿದ್ದು ನನ್ನ ಕೈಗೆ ಎಟುಕದಾಗಿದೆ. ॥ ೨೩ ॥

ಚಕ್ರವಾಕ್ಯುವಾಚ—

ಕಿಮರ್ಥಂ ಖಿದ್ಯಸೇ ವ್ಯರ್ಥಂ ವಧ್ವರ್ಥಂ ವೈಶ್ಯಸತ್ತಮ ।
ಸ್ತ್ರಿಯೋ ಬಹ್ವ್ಯಃ ಪ್ರಜಾಯಂತೇ ಪುಂಸ ಇತ್ಯಾಹ ವೈ ಶ್ರುತಿಃ ॥ ೨೪ ॥
ತಸ್ಮಾದನ್ಯಾಂ ಸ್ತ್ರಿಯಂ ಸಮ್ಯಗ್ವರಯಸ್ವ ಮನೋರಮಾಮ್ ।
ಗತಾರ್ಥೇ ನ ಹಿ ಶೋಚಂತೇ ವ್ಯರ್ಥಮರ್ಥವಿದೋ ಜನಾಃ ॥ ೨೫ ॥

ಚಕ್ರವಾಕಪಕ್ಷಿಯು ಹೇಳಿತು—

ಎಲೈ ವೈಶ್ಯಶ್ರೇಷ್ಠನೇ ! ಈ ಕನ್ನಿಕೆಗೋಸ್ಕರ ಏಕೆ ಮರುಗುತ್ತೀ ? ಮನೋಹರಳಾದ ಇನ್ನೊಂದು ಕನ್ಯೆಯನ್ನು ಮದುವೆಯಾಗು. ಯಥಾರ್ಥವನ್ನು ತಿಳಿದವರು ಆಗಿಹೋದುದನ್ನು ನೆನೆಸುವುದು ವ್ಯರ್ಥವೆಂದು ಹೇಳುತ್ತಾರೆ. ಅಲ್ಲದೆ ಶ್ರುತಿಗಳೂ ಕೂಡ ಒಬ್ಬೊಬ್ಬ ಪುರುಷನಿಗಾಗಿ ಅನೇಕ ಸ್ತ್ರೀಯರು ಹುಟ್ಟಿಕೊಂಡೇ ಇರುತ್ತಾರೆಂದು ಹೇಳುತ್ತವೆ. ಆದ್ದರಿಂದ ಇನ್ನೊಂದು ಕನ್ಯೆಯನ್ನು ವರಿಸು ಎಂದು ಹೇಳಿತು. ॥೨೪-೨೫॥

ವೈಶ್ಯ ಉವಾಚ—

ಯದಿ ಸಾ ಮಮ ತನ್ವಂಗೀ ನ ಸ್ಯಾದ್ಭಾರ್ಯಾ ಮದಾಲಸಾ ।
ಅಸ್ಮಿನ್ಜನ್ಮನಿ ನಾನ್ಯಾ ಮೇ ಭವಿತ್ರೀ ಸಹಚಾರಿಣೀ ॥ ೨೬ ॥
ತಾಮೃತೇ ಮೃಗಶಾವಾಕ್ಷೀಂ ಪೂರ್ಣಚಂದ್ರಾನನಾಮಹಮ್ ।
ನ ಭೋಕ್ಷ್ಯೇ ಯೋಷಿತಂ ಕಾಂಚಿತ್ತಾಕ್ಷಾತ್ಸುರವಧೂಮಪಿ ॥ ೨೭ ॥
ಮತ್ತಕೋಕಿಲಸನ್ನಾದಾಂ ತಾಂ ತ್ಯಕ್ತ್ವಾ ಗಜಗಾಮಿನೀಮ್ ।
ನಾನ್ಯಾಮಹಂ ವರಿಷ್ಯಾಮಿ ಸಂಕಲ್ಪೋ ನಾನ್ಯಥಾ ಮಮ ॥ ೨೮ ॥

ವೈಶ್ಯನು ಹೇಳಿದನು—

ಮದದಿಂದ ಆಯಾಸಗೊಂಡ ಈ ತೆಳು ದೇಹದ ಕನ್ನಿಕೆಯು ದೊರಕದಿದ್ದರೆ ಈ ಜನ್ಮದಲ್ಲಿ ಬೇರೆಯಾವಳೂ ನನ್ನ ಹೆಂಡತಿಯಾಗಳು. ॥ ೨೬ ॥ ಜಿಂಕೆಯ ಮರಿಯ ಕಣ್ಣಿನಂತೆ ಕಣ್ಣಿರುವ ಮತ್ತು ಪೂರ್ಣಚಂದ್ರನಂತೆ ಮುಖವಿರುವ ಈ ಹೆಣ್ಣು ನನಗೆ ಲಭ್ಯವಾಗದಿದ್ದರೆ ನಾನು ಬೇರಾವ ಹೆಣ್ಣನ್ನು ವರಿಸೆನು. ಇದು ನನ್ನ ದೃಢಸಂಕಲ್ಪವು. ಮದಿಸಿದ ಕೋಗಿಲೆಯ ಸ್ವರದಿಂದ ಕೂಡಿರುವ ಮತ್ತು ಆನೆಯಂತೆ ಗಂಭೀರ ನಡಿಗೆಯುಳ್ಳ ಇವಳನ್ನು ಬಿಟ್ಟು, ಬೇರೆ ಯಾವಳಾದರೂ ಅವಳು ದೇವತಾ ಸ್ತ್ರೀಯೇ ಆಗಿರಲಿ, ಅವಳನ್ನು ನಾನು ವರಿಸುವುದಿಲ್ಲ. ॥೨೭-೨೮॥

ಚಕ್ರವಾಕ್ಯುವಾಚ—

ಹಿತಂ ಪಥ್ಯಂ ಚ ತೇ ವಚ್ಮಿ ಸಖೇ ಶೃಣು ವಚೋ ಮಮ ।
ಪಶ್ಚಾದ್ವಿಚಾರ್ಯ ಮನಸಾ ದುಃಖಂ ವ್ಯತಿತರಿಷ್ಯತಿ ॥ ೨೯ ॥
ಕಃ ಪಿತಾ ಕಾ ಚ ಜನನೀ ಕಾ ಯೋಷಾ ಕಃ ಪತಿಃ ಸುತಃ ।
ಭ್ರಾತಾ ಕಃ ಕಾ ಚ ಭಗಿನೀ ತಥ್ಯಂ ಬ್ರೂಹಿ ಸುನಿಶ್ಚಿತಮ್ ॥ ೩೦ ॥
ಲೋಕೇ ಕಃ ಪ್ರಥಮಂ ಜಾತೋ ಮೃತಃ ಕೋ ವರ್ತತೇ ಚ ಕಃ ।
ವದ ನಿಶ್ಚಿತ್ಯ ಕಃ ಪಾಂಥ ಭವಿಷ್ಯತಿ ಮರಿಷ್ಯತಿ ॥ ೩೧ ॥

ಅಮೀ ದೇಹಾದಯೋ ಭಾವಾಸ್ತೋಯಫೇನಸಧರ್ಮಿಣಃ ।
ಕ್ವಚಿದ್ಯಾಂತಿ ಕ್ವಚಿದ್ಭಾಂತಿ ಕ್ವಚಿದುದ್ಯಂತಿ ವಾ ಪುನಃ ॥ ೩೨ ॥
ಅತೋಽಸ್ಮಿನ್ಫೇನಸದೃಶೇ ದೇಹೇ ಪಂಚತ್ವಮಾಗತೇ ।
ಶೋಕಸ್ಯಾನವಕಾಶತ್ವಾನ್ನ ಶೋಚಂತಿ ವಿಪಶ್ಚಿತಃ ॥ ೩೩ ॥
ಕಃ ಕಸ್ಯ ಹೇತುರ್ದುಃಖಸ್ಯ ಕಸ್ಯ ಹೇತುಸ್ಸುಖಸ್ಯ ಚ ।
ಸ್ವಪೂರ್ವಾರ್ಜಿತಕರ್ಮೈವ ಕಾರಣಂ ಸುಖದುಃಖಯೋಃ ॥ ೩೪ ॥
ಸುಖಂ ವಾ ಯದಿ ವಾ ದುಃಖಂ ಸ್ವಕರ್ಮವಶಗೋ ನರಃ ।
ಯದ್ಯದ್ಯಥಾ ಗತಂ ತತ್ತದ್ಭುಕ್ತ್ವಾ ಸ್ವಸ್ಥಮನಾ ಭವೇತ್ ॥ ೩೫ ॥
ಯಸ್ಮಿನ್ದೇಶೇ ಚ ಕಾಲೇ ಚ ತಸ್ಮಾದ್ವಾ ಯೇನ ಕೇನಚಿತ್ ।
ಕೃತಂ ಶುಭಾಶುಭಂ ಕರ್ಮ ಭೋಜ್ಯಂ ತತ್ತತ್ರ ನಾನ್ಯಥಾ ॥ ೩೬ ॥
ಅಲಂ ಹರ್ಷವಿಷಾದಾಭ್ಯಾಂ ಶುಭಾಶುಭಫಲೋದಯೇ ।
ವಿಧಾತ್ರಾ ವಿಹಿತಂ ಯಚ್ಚ ತದಲಂಘ್ಯಂ ಸುರಾಸುರೈಃ ॥ ೩೭ ॥
ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ ।
ದ್ವಯಮೇತದ್ಧಿ ಜಂತೂನಾಮಲಂಘ್ಯಂ ದಿನರಾತ್ರಿವತ್ ॥ ೩೮ ॥
ಸುಖಮಧ್ಯೇ ಸ್ಥಿತಂ ದುಃಖಂ ದುಃಖಮಧ್ಯೇ ಸ್ಥಿತಂ ಸುಖಮ್ ।
ದ್ವಯಮನ್ಯೋನ್ಯಸಂಯುಕ್ತಂ ವರ್ತತೇ ಜಲಪಂಕವತ್ ॥ ೩೯ ॥
ಮಾಯಯೋತ್ಪತ್ತಿಮಾಯಾಂತಿ ಗುಣಾಃ ಸತ್ವಾದಯಸ್ತ್ರಯಃ ।
ತೈರೇವ ದೇಹಾ ಜಾಯಂತೇ ಗುಣಾಸ್ತಲ್ಲಕ್ಷಣಾಶ್ರಯಾಃ ॥ ೪೦ ॥
ದೇವತ್ವಂ ಯಾತಿ ಸತ್ವೇನ ರಜಸಾ ಚ ಮನುಷ್ಯತಾಮ್ ।
ವಾಸನಾನುಗತೋ ಯಾತಿ ತಿರ್ಯಕ್ತ್ವಂ ತಮಸಾವೃತಃ ॥ ೪೧ ॥
ಯಾದೃಶಂ ಪ್ರಾಕ್ಕೃತಂ ಕರ್ಮ ತಾದೃಶಂ ವಿಂದತೇ ವಪುಃ ।
ಭುಂಕ್ತೇ ತದನುರೂಪಾಣಿ ಸುಖದುಃಖಾನಿ ದೇಹ್ಯಸೌ ॥ ೪೨ ॥
ಅಪಿ ಕಲ್ಪಾಯುಷಾಂ ವೈಶ್ಯ ದೇವತಾನಾಂ ವಿಪರ್ಯಯಃ ।
ಅನೇಕಾಮಯಬದ್ಧಾನಾಂ ಕಾ ಕಥಾ ನರದೇಹಿನಾಮ್ ॥ ೪೩ ॥
ಕಾಲಕರ್ಮಗುಣಾಧೀನಂ ಪಂಚಾತ್ಮಕಮಿದಂ ವಪುಃ ।
ಜಾತಂ ದೃಷ್ಟ್ವಾ ನ ಹೃಷ್ಯಂತಿ ನ ಶೋಚಂತಿ ಮೃತಂ ಬುಧಾಃ ॥ ೪೪ ॥
ಗರ್ಭಸ್ಥಾ ಏವ ನಶ್ಯಂತಿ ಜಾತಮಾತ್ರಾಸ್ತಥಾಪರೇ ।
ಕೇಚಿದ್ಯುವಾನೋ ನಶ್ಯಂತಿ ಮ್ರಿಯಂತೇ ಕೇಽಪಿ ವಾರ್ಧಕೇ ॥ ೪೫ ॥
ಆಯುಸ್ಸುಖಂ ಚ ದುಃಖಂ ಚ ಪುಣ್ಯಂ ಪಾಪಂ ಸುತಂ ಧನಮ್ ।
ಲಲಾಟೇ ಲಿಖಿತಂ ಧಾತ್ರಾ ವಹಞ್ಜಂತುಃ ಪ್ರಜಾಯತೇ ॥ ೪೬ ॥

ಕರ್ಮಣಾಮವಿಲಂಘ್ಯತ್ವಾತ್ಕಾಲಸ್ಯಾಪ್ಯನತಿಕ್ರಮಾತ್ ।
ಅನಿತ್ಯತ್ವಾಚ್ಚ ಭಾವಾನಾಂ ನ ಶೋಕಂ ಕರ್ತುಮರ್ಹಸಿ ॥ ೪೭ ॥
ಕ್ವ ಸ್ವಪ್ನೇ ನಿಯತಂ ಸ್ಥೈರ್ಯಮಿಂದ್ರಜಾಲೇ ಕ್ವ ಸತ್ಯತಾ ।
ಕ್ವ ನಿತ್ಯತಾ ಶರನ್ಮೇಘೈಃ ಕ್ವ ಶಾಶ್ವತ್ಯಂ ಕಲೇವರೇ ॥ ೪೮ ॥
ತಪಸಾ ವಿದ್ಯಯಾ ಬುದ್ಧ್ಯಾ ಮಂತ್ರೌಷಧಿರಸಾಯನೈಃ ।
ಅತಿಯಾತಿ ಪರಂ ಮೃತ್ಯುಂ ನ ಕಶ್ಚಿದಪಿ ಪಂಡಿತಃ ॥ ೪೯ ॥
ತವ ಜನ್ಮಾನ್ಯತೀತಾನಿ ಶತಕೋಟ್ಯಯುತಾನಿ ಚ ।
ಮಮಾಪಿ ತದ್ವದೇವೇದಮನಾದೀನಿ ಸ್ಮೃತಾನಿ ಹ ॥ ೫೦ ॥
ಜನ್ಮನಾಮಯುತಂ ಸಾಗ್ರಂ ಮಮ ಸ್ಮೃತಿ ಯಥಾಗತಮ್ ।
ಸುಖಂ ದುಃಖಂ ಮಯಾ ಭುಕ್ತಂ ಬಹುಧಾ ಜನ್ಮಜನ್ಮನಿ ॥ ೫೧ ॥
ನಿರ್ವೇದಾ ಪರಿತೋಷಾಶ್ಚ ಕ್ಷಯವೃದ್ಧ್ಯುದಯೈರಿತಾಃ ।
ಶತ್ರುಮಿತ್ರಕಲತ್ರಾಣಾಂ ವಿಯೋಗಃ ಸಂಗಮಾಸ್ತಥಾ ॥ ೫೨ ॥
ಮಾತರೋ ವಿವಿಧಾ ದೃಷ್ಟ್ವಾ ಯಾತಾ ನಾನಾವಿಧಾ ತನುಃ ।
ಗರ್ಭದುಃಖಾನಿ ಭುಕ್ತಾನಿ ಬಾಲ್ಯಯೌವನವೃದ್ಧತಾಃ ॥ ೫೩ ॥
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಮಪಿ ಜನ್ಮಸು ।
ಪಶೂನಾಂ ಚೈವ ಕೋಷ್ಟೇಷು ಮೃಗಾಣಾಮಪಿ ಪಕ್ಷಿಣಾಮ್ ॥ ೫೪ ॥
ಭೃತ್ಯತಾಂ ದಾಸತಾಂ ಚಾಪಿ ಗತೋಽಸ್ಮಿ ಬಹುಶೋ ನೃಣಾಮ್ ।
ಸ್ವಾಮಿತ್ವಮೀಶ್ವರತ್ವಂ ಚ ದರಿದ್ರತ್ವಂ ಸಭಾಗ್ಯತಾಮ್ ॥ ೫೫ ॥
ಪ್ರಾಗ್ಭವೇ ಮಗಧೇಶಸ್ಯ ಮಹಿಷ್ಯಾಸಮಹಂ ಪ್ರಿಯಾ ।
ಸಾಂಪ್ರತಂ ಪಕ್ಷಿಣೀ ಜಾತಾ ಜಾತಿಸ್ಮೃತಿಮತೀ ಪರಮ್ ॥ ೫೬ ॥
ತೀರ್ಥರಾಜಪ್ರಭಾವೇನ ವರುಣಾಶ್ರಮವಾಸತಃ ।
ಗೃಹೀತ್ವಾ ಮಾನುಷಂ ಜನ್ಮ ಮುಕ್ತಿಮೇಷ್ಯಾಮಿ ನಿಶ್ಚಿತಮ್ ॥ ೫೭ ॥
ವೈಶ್ಯವರ್ಯ ಮಹಾಬುದ್ಧೇ ತಸ್ಮಾತ್ತ್ವಮಪಿ ಮಾ ಶುಚಃ ।
ಮಾಯಾವಿಲಸಿತಂ ಜ್ಞಾತ್ವಾ ಸಂತರಸ್ವ ಭವಾರ್ಣವಮ್ ॥ ೫೮ ॥
ಲೋಕೇ ಜನ್ಮಮೃತೀ ಜೇತುಮೇಕಮೇವೌಷಧಂ ಮಹತ್ ।
ಲೋಕದ್ವಯಹಿತಂ ಪುಂಸೋ ವಿಷ್ಣುಧ್ಯಾನರಸಾಯನಮ್ ॥ ೫೯ ॥
ತಸ್ಮಾದಿದಂ ಮನೋ ಭದ್ರ ವಿಷ್ಣುಧ್ಯಾನೈಕಸಾಧನಮ್ ।
ಶೋಕಮೋಹಸಮಾವಿಷ್ಟಂ ಮಾ ಕುರುಷ್ವ ಹರಿಂ ಭಜ ॥ ೬೦ ॥
ಇತ್ಯೇವಂ ಸರ್ವಮಾಖ್ಯಾತಂ ಭೂತಂ ಭವ್ಯಂ ಭವಚ್ಚ ತೇ ।
ತೀರ್ಥರಾಜಸ್ಯ ಸಾಮರ್ಥ್ಯಾತ್ಕಿಮನ್ಯತ್ಪ್ರಷ್ಟುಮಿಚ್ಛಸಿ ॥ ೬೧ ॥

॥ ಇತಿ ಷಡ್ವಿಂಶೋಽಧ್ಯಾಯಃ ॥

**ಚಕ್ರವಾಕ ಪಕ್ಷಿಯು ಹೇಳಿತು—**

ಎಲೈ ವೈಶ್ಯೋತ್ತಮನೇ ! ನನ್ನ ಮಾತನ್ನು ಕೇಳು. ಇದು ನಿನ್ನ ಮನೋವ್ಯಥೆಗೆ ಪಥ್ಯರೂಪ ವಾಗಿಯೂ ನಿನಗೆ ಹಿತಕರವಾಗಿಯೂ ಇರತಕ್ಕದ್ದು. ಇದನ್ನು ಕೇಳಿ ವಿಚಾರಮಾಡಿದರೆ ನಿನ್ನ ಮನಸ್ಸಿನ ದುಗುಡವೆಲ್ಲ ಪರಿಹಾರವಾಗುವುದು. ॥ ೨೯ ॥ ತಂದೆಯು ಯಾರು? ತಾಯಿಯು ಯಾರು? ಹೆಂಡತಿಯು ಯಾರು? ಮಗನು ಯಾರು? ಅಣ್ಣನು ಯಾರು? ಅಕ್ಕ ಯಾರು? ಎಂಬುದನ್ನು ಸರಿಯಾಗಿ ನಿಶ್ಚಯಮಾಡಿ ಯಥಾರ್ಥವಾಗಿ ಹೇಳು. ॥ ೩೦ ॥ ಇಡೀ ಜಗತ್ತಿನ ಸೃಷ್ಟಿಯನ್ನು ಪರಿಗಣಿಸಿದಾಗ ಜಗತ್ತಿನಲ್ಲಿ ಯಾರು ಮೊದಲು ಹುಟ್ಟಿದವರು, ಯಾವಾಗಲೂ ಇರತಕ್ಕವನಾದರೂ ಯಾರು? ನಿಶ್ಚಯಿಸಿ ಯಾರು ಮುಂದೆ ಹುಟ್ಟುತ್ತಾರೆ ಮತ್ತು ಸಾಯುತ್ತಾರೆ ಎಂದು ಹೇಳಬಲ್ಲೆಯಾ? ॥ ೩೧ ॥ ಈ ನಮಗೆ ಕಾಣತಕ್ಕ ದೇಹಾದಿಗಳ ಇರುವಿಕೆಯು ನೀರಿನ ನೊರೆಯ ಮೇಲೆ ಕಾಣುವ ನೀರು ಗುಳ್ಳೆಯಂತೆಯೇ ಅದರ ಧರ್ಮವನ್ನೇ ಹೊಂದಿರ ತಕ್ಕವುಗಳು. ಈ ಜೀವಿಗಳೆಲ್ಲ ಎಲ್ಲಿ ಹೋಗುತ್ತವೆ, ಎಲ್ಲಿ ಬೆಳಗುತ್ತವೆ ಮತ್ತು ಪುನಃ ಎಲ್ಲಿ ಹುಟ್ಟುತ್ತವೆ? ॥ ೩೨ ॥ ಆದ್ದರಿಂದ ನೀರು ಗುಳ್ಳೆಗೆ ಸಮನಾಗಿರುವ ಈ ದೇಹವು ನಾಶವಾದರೆ ಇದು ಒಂದು ಅನಿವಾರ್ಯವಾದ ಮತ್ತು ಅಪರಿಹಾರ್ಯವಾದ ಘಟನೆಯಾದ್ದರಿಂದ ವಿದ್ವಾಂಸರು ಈ ಬಗ್ಗೆ ಎಂದೂ ದುಃಖಿಗೊಳ್ಳುವುದಿಲ್ಲ. ॥ ೩೩ ॥ ಯಾವನ ಸುಖಕ್ಕೆ ಯಾರು ಕಾರಣರು ? ಹಾಗೆಯೇ ಯಾರ ದುಃಖಕ್ಕೆ ಯಾರು ಕಾರಣರು? ಅವರವರ ಪೂರ್ವ ಜನ್ಮಗಳಲ್ಲಿ ಮಾಡಿರುವ ಕರ್ಮಗಳ ಫಲವೇ ಸುಖದುಃಖಗಳು. ॥ ೩೪ ॥ ಜೀವಿಯು ಸುಖವೇ ಆಗಲಿ, ದುಃಖವೇ ಆಗಲಿ ತನ್ನ ತನ್ನ ಕರ್ಮಗಳಿಗೆ ವಶವಾಗಿರುತ್ತಾನೆ. ಆದ್ದರಿಂದ ಯಾವುದು ಹೇಗೆ ಹೇಗೆ ಸಂಭವಿಸುವುದೋ ಅದನ್ನು ಹಾಗಾಗಿಯೇ ಅನುಭವಿಸಿ ಸ್ವಸ್ಥಮನಸ್ಕರಾಗಿರಬೇಕು. ॥ ೩೫ ॥ ಯಾವ ದೇಶದಲ್ಲಿ, ಯಾವ ಕಾಲದಲ್ಲಿ ಯಾರಿಂದ ಏನೇನು ಮಾಡಲ್ಪಟ್ಟಿರುತ್ತದೋ, ಅದರದರ ಒಳ್ಳೆಯ ಕೆಟ್ಟ ಫಲಗಳನ್ನು ಅಲ್ಲಲ್ಲಿಯೇ ಆಗಾಗಲೇ ಅವನಿಂದಲೇ ಅನುಭವಿಸಬೇಕಾಗುವುದು. ॥ ೩೬ ॥ ಆದ್ದರಿಂದ ಕೆಟ್ಟದ್ದು ಒಳ್ಳೆಯದು ನಡೆದಾಗ ದುಃಖಗೊಳ್ಳುವುದಾಗಲೀ ಹರ್ಷಗೊಳ್ಳುವುದಾಗಲೀ ನರನು ನಿಲ್ಲಿಸಬೇಕು. ವಿಧಿಯು ಹಣೆಯಲ್ಲಿ ಬರೆದಿದ್ದಂತೆಯೇ ನಡೆಯುವುದು. ಇದನ್ನು ದೇವದಾನವರೂ ಮೀರಲಾರರು. ॥ ೩೭ ॥ ಹಗಲು ರಾತ್ರಿಗಳು ಒಂದಾದ ಮೇಲೆ ಒಂದು ಬರುವಂತೆ ಸುಖವಾದ ಮೇಲೆ ದುಃಖ, ದುಃಖದ ನಂತರ ಸುಖ ಇವೆರೆಡು ಬಂದೇ ಬರುತ್ತವೆ. ಇದನ್ನು ಯಾರೂ ತಪ್ಪಿಸಿ ಕೊಳ್ಳಲಾರರು. ॥ ೩೮ ॥ ಸುಖದ ಮಧ್ಯೆ ದುಃಖ ಮತ್ತು ದುಃಖದ ಮಧ್ಯೆ ಸುಖ ಹೀಗೆ ಇವೆರಡೂ ನೀರು ಮತ್ತು ಕೆಸರಿನಂತೆ ಸೇರಿಕೊಂಡೇ ಇರುವುವು. ॥ ೩೯ ॥ ಮಾಯಾ ಎಂಬ ಹೆಸರುಳ್ಳ ಲಕ್ಷ್ಮೀದೇವಿಯು ಚಿತ್ಪ್ರಕೃತಿ ಮತ್ತು ಜಡಪ್ರಕೃತಿಗೆ ಅಭಿಮಾನಿ ದೇವತೆಯು. ಆ ಜಡಪ್ರಕೃತಿಯಿಂದ ಸತ್ವ, ರಜ, ತಮಗಳೆಂಬ ಮೂರು ಗುಣಗಳು ಹುಟ್ಟುತ್ತವೆ. ಹೀಗೆ ಸತ್ವ, ರಜ ಮತ್ತು ತಮಸ್ಸು ಗಳಿಂದ ಸಾತ್ವಿಕರು, ರಾಜಸರು, ಮತ್ತು ತಾಮಸರ ದೇಹಗಳು ಕ್ರಮವಾಗಿ ಸೃಷ್ಟಿಯಾಗುತ್ತವೆ. ಈ ಪಂಚಭೂತಗಳಾದ ಪೃಥಿವೀ, ಅಪ್, ತೇಜಸ್ಸು, ವಾಯು ಮತ್ತು ಆಕಾಶ ಇವುಗಳೇ ವಿಕಾರ ಹೊಂದಿ ದೇಹಾದಿಗಳು ಸೃಷ್ಟಿಯಾಗುತ್ತದೆ, ಈ ಮೂರು ಗುಣಗಳ ಪ್ರಮಾಣಗಳ ಮೇಲೆ ಆಯಾಯಾ ಜೀವಿಗಳ ದೇಹಲಕ್ಷಣಗಳೂ ಮನೋವ್ಯಾಪಾರಗಳೂ ನಡೆಯುತ್ತವೆ. ॥ ೪೦ ॥ ಸತ್ವಗುಣಪ್ರಧಾನರಾದವರು ದೇವತ್ವವನ್ನೂ ರಜೋಗುಣಪ್ರಧಾನರಾದವರು ಮನುಷ್ಯತ್ವವನ್ನೂ ಮತ್ತು ತಮೋಗುಣಪ್ರಧಾನರಾದವರು ದಾನವತ್ವವನ್ನೂ ಹೊಂದುವರು. ಪ್ರಾಣಿಗಳು

ತಮೋಗುಣವನ್ನೇ ಹೆಚ್ಚಾಗಿವುಳ್ಳವುಗಳು. ॥ ೪೧ ॥ ಜೀವಿಯು ಎಂತಹ ಕರ್ಮಗಳನ್ನು ಮಾಡುವನೋ ಅಂತಂತಹ ದೇಹಗಳನ್ನೇ ಹೊಂದುವನು. ಅಂದರೆ ಅವರಿಗಿರುವ ದೇಹವು ಅವರುಗಳೇ ಹಿಂದೆ ಎಸಗಿರುವ ಕರ್ಮಗಳ ಪ್ರಕಾರ ಸತ್ವ, ರಜ ಮತ್ತು ತಮಗಳ ಪ್ರಮಾಣಗಳನ್ನು ಹೊಂದಿರುತ್ತದೆ. ಅದಕ್ಕೆ ಅನುಸಾರವಾಗಿಯೇ ಜೀವಿಯು ಸುಖದುಃಖಾದಿಗಳನ್ನು ಅನುಭವಿಸುತ್ತಾನೆ. ॥ ೪೨ ॥ ಕಲ್ಪಾಯುಸ್ಸುಳ್ಳ ದೇವತೆಗಳಿಗೇ ಅನೇಕ ಬಗೆಯ ಭವಣೆಗಳು ಬಂದು ಹೋಗುತ್ತವೆ ; ಹೀಗಿರಲು ಅನೇಕ ಕಾಯಿಲೆಗಳಿಂದ ನರಳುವ ಮನುಷ್ಯನ ಪಾಡೇನು? ॥ ೪೩ ॥ ಆದ್ದರಿಂದ ಕಾಲ, ಕರ್ಮ ಮತ್ತು ಪ್ರಕೃತಿ ಸಂಬಂಧವಾದ ಮಾರ್ಪಾಡುಗಳಿಗೆ ಈ ದೇಹವು ಬದ್ಧವಾಗಿದೆ. ಆದ್ದರಿಂದ ಕೇವಲ ಜನ್ಮತಾಳಿದ್ದರಿಂದಲೇ ಜ್ಞಾನಿಗಳು ಹೇಗೆ ಸಂತುಷ್ಟರಾಗುವುದಿಲ್ಲವೋ ಅದರಂತೆ ಮರಣ ಹೊಂದುವುದರಿಂದಲೂ ದುಃಖಪಡುವುದಿಲ್ಲ. ॥ ೪೪ ॥ ಕೆಲವರು ಗರ್ಭದಲ್ಲಿರುವಾಗಲೇ ಮರಣಹೊಂದುವರು; ಕೆಲವರು ಹುಟ್ಟಿದ ಕೂಡಲೇ ಮೃತರಾಗುತ್ತಾರೆ; ಮತ್ತೆ ಕೆಲವರು ಯೌವನಾವಸ್ಥೆಯಲ್ಲಿ ಅಸು ನೀಗುವರು. ಅನೇಕರು ವೃದ್ಧಾಪ್ಯದಲ್ಲಿ ಸಾಯುವರು. ॥ ೪೫ ॥ ಆಯುಸ್ಸು, ಸುಖ, ದುಃಖ, ಪುಣ್ಯ, ಪಾಪ, ಮಕ್ಕಳು, ಹಣ ಮುಂತಾದವು ಬ್ರಹ್ಮನ ಬರಹದಂತೆ ಸಿಗುವುವು. ಈ ವಿಧಿಯ ಬರಹವನ್ನು ಹೊತ್ತುಕೊಂಡೇ ಜೀವಿಗಳು ಹುಟ್ಟುತ್ತಾರೆ. ॥ ೪೬ ॥ ಕರ್ಮದ ಫಲವನ್ನು ಯಾರೂ ಅನುಭವಿಸದೆ ಇರಲಾರರು, ಹಾಗೆಯೇ ಕಾಲದ ತೀರ್ಪನ್ನು ಯಾರೂ ದಾಟಲಾರರು. ದೇಹಿಗಳು ಅನಿತ್ಯರು—ಅಂದರೆ ಎಂದಾದರೂ ಸಾಯುವವರೇ. ಹೀಗಿರುವುದರಿಂದ ಈ ಬಗ್ಗೆ ನೀನು ದುಃಖಪಡಬಾರದು. ॥ ೪೭ ॥ ಸ್ವಾಪ್ನ ಪದಾರ್ಥಗಳನ್ನು ಯಾರು ತಾನೇ ಅವಲಂಬಿಸುತ್ತಾರೆ ಮತ್ತು ಇಂದ್ರಜಾಲದಿಂದ ಆದದ್ದನ್ನು ಯಾರು ತಾನೇ ಸತ್ಯವೆಂದು ತಿಳಿಯುತ್ತಾರೆ? ಶರತ್ಕಾಲದ ಮೋಡವನ್ನು ಮಳೆಗಾಗಿ ಯಾರು ತಾನೇ ನಂಬುತ್ತಾರೆ? ಹಾಗೆಯೇ ಈ ದೇಹದ ಶಾಶ್ವತತ್ವದಲ್ಲಿ ಯಾರು ತಾನೇ ವಿಶ್ವಾಸ ವಿಡುತ್ತಾರೆ? ॥ ೪೮ ॥ ಎಂತಹ ಪಂಡಿತನೂ, ತಪಸ್ಸು, ವಿದ್ಯೆ, ಬುದ್ಧಿ, ಮಂತ್ರ, ಔಷಧಿ ಮತ್ತು ರಸಾಯನಾದಿಗಳಿಂದಲೂ ಮೃತ್ಯುವನ್ನು ತಡೆಗಟ್ಟಲಾರನು. ॥ ೪೯ ॥ ನಿನ್ನ ಜನ್ಮಗಳು ಲೆಕ್ಕವಿಲ್ಲದಷ್ಟು ಆಗಿಹೋಗಿವೆ. ಮುಂದೆ ಇರುವ ಜನ್ಮಗಳೂ ಅಷ್ಟೆ. ನೂರು ಕೋಟಿ, ಶತಕೋಟಿ, ಹತ್ತುಸಾವಿರ ಕೋಟಿಯಷ್ಟು. ಅದರಂತೆ ನನಗೂ ಆಗಿಹೋದ, ಆಗಿಹೋಗುವ ಜನ್ಮಗಳಿವೆ. ॥ ೫೦ ॥ ನನಗೆ ಅನೇಕ ಜನ್ಮಗಳ ಸ್ಮರಣೆಯು ಸಮಗ್ರವಾಗಿಯೂ ಒಂದೊಂದರಂತೆಯೂ ಇದೆ. ಹೇಗೆ ಬಂದು ಹೋಗಿದೆಯೋ ಹಾಗೆಯೇ ನನ್ನ ಸ್ಮರಣೆಗೆ ಬರುತ್ತದೆ. ಅನೇಕ ಜನ್ಮಗಳಲ್ಲಿ ನನ್ನಿಂದ ಬಹುರೀತಿಯಲ್ಲಿ ಸುಖದುಃಖಗಳು ಅನುಭವಿಸಲ್ಪಟ್ಟಿವೆ. ॥ ೫೧ ॥ ದುಃಖಗಳು, ಸಂತೋಷಗಳು, ನಾಶ, ವೃದ್ಧಿ, ಹೆಂಡತಿಯಾಗಿದ್ದಾಗಿನ ವಿಯೋಗ ಮತ್ತು ಸಂಗಮ ಇವುಗಳೆಲ್ಲವನ್ನೂ ಮತ್ತು ಬೇರೆ ಬೇರೆ ರೀತಿಯ ತಾಯಂದಿರು, ತಂದೆಯರು ಶತ್ರುಗಳು, ಮಿತ್ರರು ಇವರೆಲ್ಲರನ್ನೂ ನೋಡಿದ್ದೇನೆ. ನಾನಾವಿಧಗಳಾದ ಶರೀರಗಳನ್ನು ಧರಿಸಿದ್ದೇನೆ. ಗರ್ಭದ ದುಃಖಗಳನ್ನೂ ಅನುಭವಿಸಿದ್ದೇನೆ. ಬಾಲ್ಯ, ಯೌವನ, ವೃದ್ಧಾಪ್ಯ ಇವುಗಳನ್ನೂ ಅನುಭವಿಸಿದ್ದೇನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಜನ್ಮಗಳನ್ನೆತ್ತಿದ್ದೇನೆ. ಪಶುಗಳ, ಮೃಗಗಳ ಮತ್ತು ಪಕ್ಷಿಗಳ ಜನ್ಮಗಳನ್ನೂ ಹೊಂದಿದ್ದೆನು. ಕೆಲವು ಜನ್ಮಗಳಲ್ಲಿ ದಾಸನಾಗಿದ್ದೆ. ಕೆಲವು ಜನ್ಮಗಳಲ್ಲಿ ಮನುಷ್ಯರ ಸ್ವಾಮಿತ್ವವನ್ನು ಹೊಂದಿದ್ದೆ. ಕೆಲವು ಜನ್ಮಗಳಲ್ಲಿ ದಾರಿದ್ರ್ಯವನ್ನೂ ಕೆಲವು ಜನ್ಮಗಳಲ್ಲಿ ಭಾಗ್ಯವಂತಿಕೆಯನ್ನೂ ಹೊಂದಿದ್ದೆ. ॥ ೫೨-೫೫ ॥ ಇದಕ್ಕೆ ಮುಂಚಿನ ಜನ್ಮದಲ್ಲಿ ಮಗಧದೇಶದ ಮಹಾರಾಜನ

ಪ್ರಿಯಪತ್ನಿಯಾಗಿ ಮಹಾರಾಣಿಯೂ ಆಗಿದ್ದೆ. ಈಗ ಹೆಣ್ಣು ಪಕ್ಷಿಯಾಗಿ ಹುಟ್ಟಿದ್ದೇನೆ. ಹಿಂದಿನ ಮತ್ತು ಮುಂದಿನ ಜನ್ಮಗಳ ಸ್ಮರಣೆಯು ನನಗೆ ಬರುತ್ತಿರುತ್ತದೆ. ॥ ೫೬ ॥ ಇಲ್ಲಿನ ತೀರ್ಥರಾಜನ ಪ್ರಭಾವದಿಂದಲೂ, ಶ್ರೀವರುಣಾಶ್ರಮದಲ್ಲಿ ವಾಸಮಾಡಿಕೊಂಡು ಇರುವುದರಿಂದಲೂ ಭವಿಷ್ಯದಲ್ಲಿ ಮನುಷ್ಯನ ಜನ್ಮತಾಳಿ ಮುಕ್ತಿಯನ್ನು ಪಡೆಯುತ್ತೇನೆ. ಇದು ಖಂಡಿತವು. ॥ ೫೭ ॥ ಮಹಾಬುದ್ಧಿಶಾಲಿಯಾದ ವೈಶ್ಯಶ್ರೇಷ್ಠನೇ! ಆದ್ದರಿಂದ ನೀನೂ ಕೂಡ ದುಃಖಪಡಬೇಡ. ನನ್ನಿಂದ ವಿಸ್ತರಿಸಲ್ಪಟ್ಟ ಉಪದೇಶವನ್ನು ಅರ್ಥಮಾಡಿಕೊಂಡು ಸಂಸಾರಸಮುದ್ರವನ್ನು ದಾಟಿ ಉತ್ತರೋತ್ತರ ಮುಕ್ತಿಯನ್ನು ಪಡೆ. ॥ ೫೮ ॥ ಲೋಕದಲ್ಲಿ ಜನನಮರಣಗಳನ್ನು ದಾಟಲು ಒಂದೇ ಒಂದು ಉಪಾಯವಿರುವುದು. ಅದೇನೆಂದರೆ ಶ್ರೀವಿಷ್ಣುವನ್ನು ಸರ್ವೋತ್ತಮತ್ವದ ಅನುಸಂಧಾನದಿಂದ ಸ್ಮರಣೆ ಮಾಡುವುದು. ಇದು ನರರಿಗೆ ಇಹಪರಗಳೆರಡಕ್ಕೂ ಹಿತಕಾರಿಯಾದ ಲೇಹ್ಯವು. ॥ ೫೯ ॥ ಈ ರೀತಿಯಾಗಿ ಹಿಂದಿನದು, ಈಗಿನದು ಮತ್ತು ಮುಂದಾಗತಕ್ಕದ್ದನ್ನೆಲ್ಲಾ ಹೇಳಿದ್ದೇನೆ. ಈ ತೀರ್ಥರಾಜನ ಮತ್ತು ಶ್ರೀಮಾಧವನ ಅನುಗ್ರಹದ ದಶೆಯಿಂದ ಇಷ್ಟನ್ನು ಹೇಳಲು ಸಮರ್ಥಳಾದೆನು. ಆದ್ದರಿಂದ, ಮಂಗಳಾಂಗನೇ, ಶ್ರೀವಿಷ್ಣುಧ್ಯಾನವೇ ಮುಖ್ಯವಾಗಿ ಸಾಧಿಸುವುದರ ಕಡೆ ನಿನ್ನ ಗಮನವನ್ನು ಹರಿಸು. ಶೋಕ, ಮೋಹಗಳನ್ನು ಬಿಡು. ಶ್ರೀಹರಿಯನ್ನು ಭಜಿಸು. ಇಷ್ಟು ಹೇಳಿಯಾಯಿತು. ಈಗ ಇನ್ನೇನು ಹೇಳಲಿ? ॥ ೬೦-೬೧ ॥

॥ ಇಪ್ಪತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತವಿಂಶೋಽಧ್ಯಾಯಃ ॥ ೨೭ ॥

ಪಾಂಥ ಉವಾಚ—

ಕಿಂ ವಕ್ತವ್ಯಂ ಮಯಾ ತುಭ್ಯಂ ಧನ್ಯಾ ತ್ವಮಸಿ ಪಕ್ಷಿಣಿ ।
ಪಕ್ಷಿರೂಪತ್ವಪ್ರಾಪ್ತಾಯಾಸ್ತವ ಯನ್ಮತಿರೀದೃಶೀ ॥ ೧ ॥
ಮಾತಸ್ತ್ವಯಾ ಕೃತೋ ಬೋಧೋ ಲೋಕದ್ವಯಹಿತೋಽಪಿ ಸನ್ ।
ಆಸ್ಪದಂ ಮಯಿ ನಾಧತ್ತೇ ಜಲಂ ನ್ಯುಬ್ಜಘಟೇ ಯಥಾ ॥ ೨ ॥
ಪುರತಃ ಪೃಷ್ಠತಶ್ಚಾಧಃ ಪಾರ್ಶ್ವಯೋರೂರ್ಧ್ವಮೇವ ಚ ।
ಸೈವ ಮೇ ಭಾತಿ ಬಿಮ್ಬೋಷ್ಠೀ ಜಾಗ್ರತ್ಸ್ವಪ್ನಸುಷುಪ್ತಿಷು ॥ ೩ ॥
ಅಶನಂ ಶಯನಂ ವಾಸಃ ಪಾನಂ ಭಾಷಣಮಾಸನಮ್ ।
ಸರ್ವಂ ವಿಷವದಾಭಾತಿ ತಾಮೃತೇ ಮದಿರೇಕ್ಷಣಾಮ್ ॥ ೪ ॥
ಜೀವೇತ್ಸಾ ಯದಿ ತನ್ವಂಗೀ ಪ್ರಾಣಪ್ರಿಯತರಾ ಮಮ ।
ತದಾ ಮಜ್ಜೀವನಂ ಸತ್ಯಂ ನಾನ್ಯಥಾ ಜೀವನಂ ಮಮ ॥ ೫ ॥

### ॥ ಇಪ್ಪತ್ತೇಳನೆಯ ಅಧ್ಯಾಯವು ॥

ಪ್ರಯಾಣಿಕನು ಹೇಳಿದನು—

ನಿನಗೆ ನಾನು ಏನನ್ನು ತಾನೇ ಹೇಳಲಿ? ಪಕ್ಷಿಯಾಗಿದ್ದರೂ ನೀನು ಧನ್ಯಳು. ಪಕ್ಷಿಯ ರೂಪದಲ್ಲಿರುವ ನಿನಗೆ ಇಂಥಹ ಯೋಗ್ಯ ಮನಸ್ಸು ಇದೆ ॥ ೧ ॥ ನೀನು ನನಗೆ ತಾಯಿ ಇದ್ದಂತೆ. ನಿನ್ನ ಉಪದೇಶವು ಈ ಲೋಕ-ಪರಲೋಕಗಳೆರಡಕ್ಕೂ ಹಿತಕಾರಿಯಾದುದು; ಆದರೆ ನನಗೆ ನಿನ್ನ ಉಪದೇಶವು ಒಡಕು ಪಾತ್ರೆಯಲ್ಲಿ ಸುರಿದ ನೀರಿನಂತೆ ವ್ಯರ್ಥ. ॥ ೨ ॥ ಆದರೆ ನನ್ನ ಹಿಂದೆ, ಮುಂದೆ, ಕೆಳಗೆ, ಪಕ್ಕದಲ್ಲಿ, ಮೇಲೆ ಹೀಗೆ ಎಲ್ಲೆಲ್ಲಿಯೂ ಆ ಕೆಂಪು ತುಟಿಯುಳ್ಳ ಕನ್ನಿಕೆಯೇ ನನಗೆ ಕಾಣಿಸುತ್ತಿದ್ದಾಳೆ. ನನ್ನ ಜಾಗ್ರದವಸ್ಥೆಯಲ್ಲಿ, ಸ್ವಪ್ನಾವಸ್ಥೆಯಲ್ಲಿ ಮತ್ತು ಗಾಢನಿದ್ರೆಯಲ್ಲಿ ಅವಳೇ ಕಾಣುತ್ತಿದ್ದಾಳೆ. (ಗಾಢನಿದ್ರೆಯಲ್ಲಿ-ಅಂದರೆ ಸುಷುಪ್ತಿಯಲ್ಲಿ ಯಾವ ಇಂದ್ರಿಯಗಳೂ ವ್ಯಾಪಾರ ಮಾಡುವುದಿಲ್ಲ. ಅಂದಮೇಲೆ ಆ ಕನ್ನಿಕೆಯು ಕಾಣುವುದೆಂತು ? ಆದ್ದರಿಂದ ಸುಷುಪ್ತಿಯಲ್ಲಿ ಕಾಣುತ್ತಾಳೆ ಎಂಬ ಹೇಳಿಕೆಯಲ್ಲಿ ಅವನ ಭಾವನೆಯ ತೀವ್ರತೆಯು ತೋರುತ್ತದೆ-ಅಷ್ಟೆ) ॥ ೩॥ ಅವಳಿಲ್ಲದೆ ಊಟ, ನಿದ್ರೆ, ವಾಸ, ಪಾನ, ಭಾಷಣ ಮತ್ತು ಆಸನ ಇವುಗಳೆಲ್ಲವೂ ನನಗೆ ವಿಷದಂತೆ ಅಪಥ್ಯವಾಗಿದೆ ॥ ೪ ॥ ಪ್ರಾಣಕ್ಕಿಂತಲೂ ನನಗೆ ಹೆಚ್ಚು ಪ್ರಿಯವಾಗಿರತಕ್ಕ ಆ ಕನ್ನಿಕೆಯು ಬದುಕಿದರೆ ನನ್ನ ಬದುಕು ಇದ್ದಂತೆ, ಇಲ್ಲದಿದ್ದರೆ ಬದುಕಿದ್ದರೂ ಇಲ್ಲದಂತೆಯೇ ಸರಿ. ॥ ೫ ॥

ಚಕ್ರವಾಕ್ಯುವಾಚ—

ಅಹೋ ಬಲವತೀ ಮಾಯಾ ದೇವಾಸುರವಿಮೋಹಿನೀ ।
ಯಯಾ ವ್ಯಾಪ್ತಂ ಜಗತ್ಸರ್ವಂ ಸ್ವಹಿತಂ ನೈವ ಪಶ್ಯತಿ ॥ ೬ ॥
ಕಸ್ತೇ ವೈಶ್ಯಾಪರಾಧೋಽಸ್ತಿ ಮಾಯೇಯಂ ಪ್ರವಿಲೇಶಿತುಃ ।
ವದಾಮ್ಯನ್ಯಮುಪಾಯಂ ತೇ ಕುರು ಕಾರ್ಯಂ ಸುಸಾಂಪ್ರತಮ್ ॥ ೭ ॥

ಮಯಿ ಸಂಜೀವಿನೀ ವಿದ್ಯಾ ವರ್ತತೇ ಬಹು ದುರ್ಲಭಾ ।
ತುಭ್ಯಂ ದದಾಮಿ ತಾಂ ವಿದ್ಯಾಂ ಲಬ್ಧಾ ಮೇ ಪೂರ್ವಜನ್ಮನಿ ॥ ೮ ॥
ತಯಾ ಜೀವಯ ಚಾರ್ವಂಗೀಂ ಪ್ರಾಣೇಭ್ಯೋಽಪ್ಯಧಿಕಪ್ರಿಯಾಮ್ ।
ಸಾ ಪತ್ನೀ ತು ಕಥಂ ತೇ ಸ್ಯಾಜ್ಜೀವದಾತಾ ಪಿತಾ ಸ್ಮೃತಃ ॥ ೯ ॥

ಚಕ್ರವಾಕಪಕ್ಷಿಯು ಹೇಳಿತು—

ಜೀವವು ಯಾವಾಗಲೂ ಒಂದು ಆವರಕದಿಂದ ಸುತ್ತುವರಿಯಲ್ಪಟ್ಟಿರುವುದು. ಶ್ರೀಹರಿಯ ಸಂಕಲ್ಪದಿಂದ ಈ ಆವರಕವಿರುವವರಿಗೆ ಮಾಯಾವು ಇದ್ದೇ ಇರುವುದು. ಇದರಿಂದ ಜೀವನಿಗೆ ನಾನು ನನ್ನದು ಎಂಬ ಅಹಂಕಾರ-ಮಮಕಾರಗಳು ಇರುವುವು. ಆ ಜೀವನನ್ನು ಸುತ್ತುವರೆದಿರುವ ಮಾಯೆಯು ಬಹು ಬಲಿಷ್ಠವಾದುದು. ದೇವಾಸುರರೂ ಇದರ ಹಿಡಿತದಿಂದ ತಪ್ಪಿಸಿಕೊಳ್ಳಲಾರರು. ಇದರ ವ್ಯಾಪ್ತಿಗೆ ಒಳಪಟ್ಟ ಇಡೀ ಜಗತ್ತು ತನಗೆ ಆವಶ್ಯಕವಾದ ಹಿತವನ್ನು ನೋಡಬಯಸುವುದಿಲ್ಲ. ॥ ೬ ॥ ಎಲ್ಲ ವೈಶ್ಯನೇ, ಇಂತಹ ಮಾಯೆಯು ನಿನ್ನನ್ನು ಪ್ರವೇಶಿಸಿರಲು ನಿನ್ನದು ಏನು ತಪ್ಪು? ಇದು ಭಗವಂತನ ಮಾಯೆ. ನಿನಗೆ ಇನ್ನೊಂದು ಉಪಾಯವನ್ನು ಹೇಳುವೆನು. ಆದರಂತೆ ಕಾರ್ಯವೊಂದನ್ನು ಸಮರ್ಪಕವಾಗಿ ಮಾಡು. ॥ ೭ ॥ ಪೂರ್ವಜನ್ಮದಲ್ಲಿ ಸಂಪಾದಿಸಲ್ಪಟ್ಟ ಬಹಳ ದುರ್ಲಭವಾಗಿರತಕ್ಕ ಸಂಜೀವಿನೀವಿದ್ಯೆ ನನ್ನಲ್ಲಿದೆ. ಆ ವಿದ್ಯೆಯನ್ನು ನಿನಗೆ ಹೇಳಿಕೊಡುತ್ತೇನೆ. ॥ ೮ ॥ ಈ ಮಂತ್ರದ ಸಹಾಯದಿಂದ ನಿನ್ನ ಪ್ರಾಣಕ್ಕಿಂತಲೂ ಪ್ರಿಯಳಾದ ಮನೋಹರವಾದ ಅಂಗಾಂಗಗಳುಳ್ಳ ನಾರಿಯನ್ನು ಬದುಕಿಸಿಕೋ. ಆದರೆ ನೀನು ಅವಳನ್ನು ಬದುಕಿಸಿ ಅವಳಿಗೆ ಜೀವದಾತನಾಗಿ ತಂದೆಗೆ ಸಮಾನನಾಗುವುದರಿಂದ ಅವಳು ನಿನ್ನನ್ನು ಹೇಗೆ ವರಿಸುವಳು? ॥ ೯ ॥

ವೈಶ್ಯ ಉವಾಚ—

ಮಮ ಮಾಸ್ತು ಸುಖಂ ಪತ್ನೀ ಯಸ್ಮೈ ಕಸ್ಮೈ ಪ್ರದೀಯತಾಮ್ ।
ಜೀವಯಿತ್ವಾ ತು ಚಾರ್ವಂಗೀಂ ಪಶ್ಯಾಮಿ ನಯನಾಂಚಲೈಃ ॥ ೧೦ ॥
ತಾವತೈವ ಕೃತಾರ್ಥೋಽಸ್ಮಿ ಕಿಮಪ್ಯನ್ಯನ್ನ ಕಾಮಯೇ ।
ನಾನ್ಯಥಾ ವಚನಂ ಮೇಽಸ್ತಿ ಶಪಾಮಿ ಪದಯೋಸ್ತವ ॥ ೧೧ ॥

ವೈಶ್ಯನು ಹೇಳಿದನು—

ಹೇ ಪಕ್ಷಿಯೇ! ಆಕೆಯು ನನ್ನ ಪತ್ನಿಯಾಗಿ ನನಗೆ ಸುಖವಾಗುವುದು ಬೇಡ. ಅವಳನ್ನು ಯಾರಿಗಾದರೂ ಕೊಟ್ಟುಬಿಡಿ. ಆ ಸುಂದರಾಂಗಿಯನ್ನು ನನ್ನ ಕಡೆಗಣ್ಣಿನಿಂದ ನೋಡಿಕೊಂಡೇ ಇದ್ದುಬಿಡುತ್ತೇನೆ. ॥ ೧೦ ॥ ಇಷ್ಟರಿಂದಲೇ ನಾನು ಕೃತಾರ್ಥನಾಗುವೆನು. ಇದನ್ನು ಬಿಟ್ಟು ನಾನು ಬೇರೆ ಏನನ್ನು ಬಯಸುವುದಿಲ್ಲ. ಈಗ ನಾನು ಹೇಳುತ್ತಿರುವುದು ನಿನ್ನ ಪಾದಗಳ ಆಣೆಗೂ ಸುಳ್ಳಲ್ಲವೆಂದನು. ॥ ೧೧ ॥

ಸೂತ ಉವಾಚ—

ತಸ್ಯ ನಿಶ್ಚಯಮಾಲಕ್ಷ್ಯ ದೃಢಮೇವ ಪತತ್ರಿಣೀ ।
ತಟಾಕೇ ವಾರುಣೇ ತಸ್ಮಿನ್ಸ್ನಾತ್ವಾ ತೇನ ಸಹಾಚರಮ್ ॥ ೧೨ ॥

ಉದಙ್ಮುಖೋಪವಿಷ್ಟಸ್ಯ ವೈಶ್ಯವರ್ಯಸ್ಯ ದಕ್ಷಿಣೇ ।
ಕರ್ಣೇ ಜಜಾಪ ತಾಂ ವಿದ್ಯಾಂ ವಿಧಿಂ ಚಾವದದವ್ಯಯಮ್ ॥ ೧೩ ॥
ತತೋ ವೈಶ್ಯಸ್ತದಸ್ಥೀನಿ ತೀರ ಏವಂ ಯಥಾಯಥಮ್ ।
ವಿರಚ್ಯ ವಿದ್ಯಯಾ ನೀರಮಾಸಿಂಚದಭಿಮಂತ್ರಿತಮ್ ॥ ೧೪ ॥
ಸಿಕ್ತಮಾತ್ರಾಥ ಸಾ ಬಾಲಾ ಯಥಾ ಸುಪ್ತೋತ್ಥಿತಾ ತಥಾ ।
ಬಭೂವ ಪ್ರಮದಾ ಪೂರ್ವಾ ಪೂರ್ವಸ್ಮಾದಧಿಕಾಕೃತಿಃ ॥ ೧೫ ॥
ತಾಂ ನಿಪೀಯಾನಿಮೇಷಾಭ್ಯಾಮಕ್ಷಿಭ್ಯಾಂ ದೇವರೂಪಿಣೀಮ್ ।
ಆಪಾದಮಸ್ತಕಂ ವೈಶ್ಯಃ ಪರಾಂ ನಿರ್ವೃತಿಮಾಗತಃ ॥ ೧೬ ॥
ಪಕ್ಷಿಣೀಮಥ ತುಷ್ಟಾವ ಪುರತೋ ರಚಿತಾಂಜಲಿಃ ।
ತವೋಪಕರಣಂ ದೇವಿ ವಿಸ್ಮರೇ ನ ಕದಾಪ್ಯಹಮ್ ॥ ೧೭ ॥
ಏವಂ ವದತಿ ವೈ ತಸ್ಮಿನ್ ತೌ ವರೌ ಪೂರ್ವಸಂಗತೌ ।
ಚರಂತಾವಾಗತೌ ತತ್ರ ಸ್ವವಧೂಂ ತಾಮಪಶ್ಯತಾಮ್ ॥ ೧೮ ॥
ದೃಷ್ಟ್ವಾ ತಾಮಥ ಚಾರ್ವಂಗೀಂ ಕಾಮಬಾಣೇನ ತಾಡಿತೌ ।
ಮೃತಸಂಜೀವನಂ ವಧ್ವಾಸ್ತಾದರಂ ತಮಪೃಚ್ಛತಾಮ್ ॥ ೧೯ ॥
ಸ ಸರ್ವಂ ಕಥಯಾಮಾಸ ಪೂರ್ವವೃತ್ತಂ ಸಹೇತುಕಮ್ ।
ಶ್ರುತ್ವಾ ತಾವಥ ತಸ್ಯಾಂ ಚ ರೂಢಭಾವೌ ಬಭೂವತುಃ ॥ ೨೦ ॥
ಅಹಂ ಲಭೇ ಭ್ರಾತೃದತ್ತಾಂ ಮಾತೃದತ್ತಾಮಹಂ ಲಭೇ ।
ಉಭಯೋರಭವದ್ವಾದಸ್ಸಾ ಕನ್ಯಾ ಮಧ್ಯತಃ ಸ್ಥಿತಾ ॥ ೨೧ ॥
ತಯೋರೇವಂ ವಿವದತೋರ್ಮತ್ತಮಾತಂಗಯೋರಿವ ।
ಪ್ರೋವಾಚ ಚಕ್ರವಾಕ್ಯೇತೌ ವಿವದೇತಾಂ ನ ವೈ ಯುವಾಮ್ ॥ ೨೨ ॥
ಶ್ರೂಯತಾಂ ಮದ್ವಚಸ್ತಥ್ಯಂ ತಥೈವ ಕ್ರಿಯತಾಂ ಪರಮ್ ।
ಇಯಂ ಯಸ್ಯಾನುಕೂಲಾ ಸ್ಯಾತ್ಪ್ರಿಯಸ್ಸೋಽಸ್ಯಾಭವೇದ್ಧ್ರುವಮ್ ॥ ೨೩ ॥
ಇತ್ಯುಕ್ತ್ವಾ ಚಾಥ ಸಂಹೃಷ್ಟೌ ತತಸ್ತೌ ತಾಮಪೃಚ್ಛತಾಮ್ ।
ಆವಯೋರ್ವರಯೈಕಂ ದ್ರಾಗ್ಯಸ್ತೇ ಮನಸಿ ವರ್ತತೇ ॥ ೨೪ ॥

**ಸೂತರು ಹೇಳಿದರು—**

ಆ ವೈಶ್ಯನ ದೃಢನಿಶ್ಚಯವನ್ನು ತಿಳಿದು ಚಕ್ರವಾಕಪಕ್ಷಿಯು ಆ ವರುಣತೀರ್ಥದಲ್ಲಿ ಅವನೊಡನೆ ಸ್ನಾನಮಾಡಿತು. ॥ ೧೨ ॥ ನಂತರ ತಾನು ಉತ್ತರಾಭಿಮುಖವಾಗಿ ಕುಳಿತು ಆ ವೈಶ್ಯವರ್ಯನ ಬಲಕಿವಿಯೊಳಗೆ ಸಂಜೀವಿನೀವಿದ್ಯೆಯನ್ನು ಶಾಶ್ವತವಾಗಿರುವಂತೆ ವಿಧಿವತ್ತಾಗಿ ಉಪದೇಶಮಾಡಿತು ಮತ್ತು ಅದರ ವಿಧಿವಿಧಾನಗಳನ್ನು ತಿಳಿಸಿತು. ॥ ೧೩ ॥ ಅನಂತರ ಆ ವೈಶ್ಯನು ಆ ಕನ್ನಿಕೆಯ ಅಸ್ಥಿಗಳನ್ನು ಹೇಗೆ ಹೇಗೆ ಇಡಬೇಕೋ ಹಾಗೆ ಹಾಗೆಯೇ ಇಟ್ಟು ಸಂಜಿವಿನೀ ಮಂತ್ರ ದಿಂದ ಅಭಿಮಂತ್ರಿತವಾದ ನೀರನ್ನು ಆ ಅಸ್ಥಿಗಳ ಮೇಲೆ ಚಿಮುಕಿಸಿದನು. ॥ ೧೪ ॥ ಹಾಗ

ಚಿಮುಕಿಸಿದ ಕೂಡಲೇ ಆ ಬಾಲೆಯು ನಿದ್ದೆಯಿಂದೆದ್ದವಳಂತೆ ಎದ್ದಳು. ಆಗ ಆ ಬಾಲೆಯು ಮೊದಲಿದ್ದದಕ್ಕಿಂತ ಹೆಚ್ಚಾದ ರೂಪವುಳ್ಳ ಆಕೃತಿಯಿಂದ ಶೋಭಿಸುತ್ತಿದ್ದಳು. ॥ ೧೫ ॥ ವೈಶ್ಯನು ಕಣ್ಣಿನ ರೆಪ್ಪೆಯನ್ನು ಬಡಿಯದೆಯೇ ಆ ಕನ್ನಿಕೆಯನ್ನು ಕಾಲಿನಿಂದ ಶಿರಸ್ಸಿನವರೆಗೂ ದೃಷ್ಟಿಸಿ ನೋಡಿ ಪರಮಾನಂದಪಟ್ಟನು. ॥ ೧೬ ॥ ಅನಂತರ ಆ ಪಕ್ಷಿಯ ಮುಂದೆ ಕೈಜೋಡಿಸಿ ನಿಂತು "ದೇವಿಯೇ, ನಿನ್ನ ಉಪಕಾರವನ್ನು ನಾನು ಎಂದೂ ಮರೆಯೆನು" ಎಂದು ಸ್ತೋತ್ರಮಾಡಿ ಸಂತೋಷಪಡಿಸಿದನು. ॥ ೧೭ ॥ ಅವನು ಹೀಗೆ ಹೇಳುತ್ತಿರಲಾಗಿ ಮೊದಲೇ ನಿಶ್ಚಿತರಾಗಿದ್ದ ವರಗಳು ಅಲ್ಲಿಗೆ ಬಂದು ತಮಗೆ ಗೊತ್ತಾಗಿದ್ದ ಆ ಕನ್ಯೆಯನ್ನು ನೋಡಿದರು. ॥ ೧೮ ॥ ಮನೋಹರ ಶರೀರವುಳ್ಳ ಅವಳನ್ನು ನೋಡಿ ಕಾಮಪೀಡಿತರಾದ ಅವರು ಆ ವಧುವು ಮೃತಳಾಗಿ ಬದುಕಿದ ವಿಚಾರವಾಗಿ ಈ ವೈಶ್ಯನನ್ನು ಅತ್ಯಾದರದಿಂದ ಪ್ರಶ್ನಿಸಿದರು. ॥ ೧೯ ॥ ಅವನು ನಡೆದು ದ್ದೆಲ್ಲವನ್ನು ಕಾರ್ಯಕಾರಣಭಾವಗಳೊಂದಿಗೆ ಅವರಿಗೆ ಹೇಳಿದನು. ಇದನ್ನು ಕೇಳಿ ಅವರಿಗೆ ಅವಳಲ್ಲಿ ಅನುರಾಗವು ಇನ್ನೂ ಹೆಚ್ಚಾಗಿ ಆರೂಢವಾಯಿತು. ॥ ೨೦ ॥ "ಅಣ್ಣನಿಂದ ನನಗೆ ಕೊಡಲ್ಪಟ್ಟಿದ್ದಾಳೆ, ಆದ್ದರಿಂದ ನಾನೇ ವರಿಸುತ್ತೇನೆ, ತಾಯಿಯಿಂದ ಕೊಡಲ್ಪಟ್ಟವಳನ್ನು ನಾನೇ ವರಿಸುತ್ತೇನೆ" ಎಂದು ಹೇಳುತ್ತಾ ಅವರಿಬ್ಬರಿಗೂವಾದವು ನಡೆಯುತ್ತಿರಲು ಆ ಕನ್ನಿಕೆಯು ಈ ಮಧ್ಯೆ ಮಾತನಾಡದೆ ನಿಂತುಬಿಟ್ಟಳು. ॥ ೨೧ ॥ ಇವರಿಬ್ಬರೂ ಈ ರೀತಿಯಾಗಿ ಎರಡು ಸಲಗ ಗಳಂತೆ ಹೋರಾಡುತ್ತಿರಲು ಚಕ್ರವಾಕಪಕ್ಷಿಯು "ನೀವು ವಿವಾದ ಮಾಡಬೇಡಿ" ಎಂದು ಹೇಳಿತು. ॥ ೨೨ ॥ "ನಾನು ಸತ್ಯವಾದುದನ್ನು ಹೇಳುತ್ತೇನೆ, ಕೇಳಿರಿ, ಆಮೇಲೆ ಅದರಂತೆ ಮಾಡಿರಿ. ಯಾರಲ್ಲಿ ಅವಳ ಮನಸ್ಸು ಇದೆಯೋ ಅವನನ್ನು ಅವಳು ಖಂಡಿತವಾಗಿ ವರಿಸಲಿ" ಎಂದು ಹೇಳಿತು. ॥ ೨೩ ॥ ಈ ರೀತಿ ಆ ಪಕ್ಷಿಯು ಹೇಳಿದ ಮೇಲೆ ಅವರಿಬ್ಬರೂ ಸಂತೋಷ ಗೊಂಡು "ನಿನ್ನ ಮನಸ್ಸು ಯಾವನಲ್ಲಿದೆಯೋ ಅವನನ್ನು ಜಾಗ್ರತೆಯಾಗಿ ವರಿಸು" ಎಂದು ಹೇಳಿದರು. ॥ ೨೪ ॥

ಕನ್ಯೋವಾಚ—

ಯತ್ಪ್ರಸಾದಾದಹಂ ಜಾತಾ ಯೋನಿಜಾ ಚಾತಿಮಾನುಷೀ ।
ನ ವೃಣೋಮಿ ಪತಿಂ ತ್ವನ್ಯಂ ಮಾಧವಾತ್ಪುರುಷೋತ್ತಮಾತ್ ॥ ೨೫ ॥
ಅತ್ರೈವ ನಿವಿಶಿಷ್ಯೇಽಹಂ ಕ್ಷಪಯಿಷ್ಯೇ ನವಂ ವಯಃ ।
ಯತಿಷ್ಯೇ ಮಾಧವಪ್ರಾಪ್ತ್ಯೈ ಪತಿಷ್ಯೇ ವಾ ಹುತಾಶನೇ ॥ ೨೬ ॥
ಜ್ಞಾತ್ವಾ ತನ್ನಿಶ್ಚಯಂ ಗಾಢಂ ತ್ಯಕ್ತ್ವಾಶಾಂ ಮನಸಿ ಸ್ಥಿತಾಮ್ ।
ತತಸ್ತೌ ಜಗ್ಮತುಸ್ತೀರ್ಥಂ ಸಾ ತು ತತ್ರೈವ ಸಂಸ್ಥಿತಾ ॥ ೨೭ ॥
ವ್ರತೋಪವಾಸನಿಯಮೈಃ ಪರಿಕ್ಷೀಣಕಲೇವರಾ ।
ಮಾಧವಂ ಪೂಜಯಾಮಾಸ ತ್ರಿಕಾಲಂ ಧ್ಯಾನನಿಶ್ಚಲಾ ॥ ೨೮ ॥
ಅತಿಚಿಂತಾಮಣಿಂ ದಿವ್ಯಂ ಭಕ್ತಕಾಮಪ್ರವರ್ಷಿಣಮ್ ।
ಕಾಲೇನ ಮಾಧವಂ ಪ್ರಾಪ್ಯ ಯಥಾ ಶ್ರೀಸ್ಸಾ ತಥಾಭವತ್ ॥ ೨೯ ॥
ವೈಶ್ಯೋಽಪಿ ಜಾತನಿರ್ವೇದೋ ನಿರಸ್ತಸಕಲೈಷಣಃ ।
ಪ್ರಯಾಗಸೇವನಂ ಮೇನೇ ಸಮಸ್ತಸುಖಸಾಧನಮ್ ॥ ೩೦ ॥

ತತ್ರೈವ ನಿವಸನ್ಭಕ್ತ್ಯಾ ಮಾಧವಾಂಘ್ರಿಯುಗಂ ಭಜನ್ ।
ಸ್ತುವನ್ಧ್ಯಾಯನ್ನಮನ್ನಿತ್ಯಮಕ್ರಮೀದ್ಬಹುವತ್ಸರಮ್ ॥ ೩೧ ॥
ದೇಹಂ ತತ್ಯಾಜ ಕಾಲೇನ ಪ್ರಯಾಗಸ್ಯೋಪಮಂಡಲೇ ।
ಸ್ವರ್ಗೇ ನಾನಾವಿಧಾನ್ಭೋಗಾನ್ಭುಕ್ತ್ವಾ ಮೋಕ್ಷಮವಾಪ ಸಃ ॥ ೩೨ ॥
ಚಕ್ರವಾಕ್ಯಪಿ ತಂ ದೃಷ್ಟ್ವಾ ಪರಮಾಶ್ಚರ್ಯಮಾದಿತಃ ।
ಸ್ವಭರ್ತ್ರೇ ಕಥಯಾಮಾಸ ಪ್ರಾತಃ ಶ್ರುತ್ವಾತಿಹರ್ಷಿತಃ ॥ ೩೩ ॥
ಶ್ರುತ್ವಾದ್ಭುತಮಿದಂ ಸೋಽಪಿ ಪ್ರಯಾಗಂ ಪ್ರಶಶಂಸ ಹ ।
ಧನ್ಯಂ ತೀರ್ಥಮಿದಂ ಧನ್ಯಂ ಪ್ರಯಾಗಂ ಭುಕ್ತಿಮುಕ್ತಿದಮ್ ॥ ೩೪ ॥
ತತ್ರಾಪಿ ವಾರುಣಂ ತೀರ್ಥಂ ಧನ್ಯಂ ಧನ್ಯೋಽಸ್ಯ ಸಂಗಮಃ ।
ಧನ್ಯಾವಾವಾಂ ಚ ಲೋಕೇಽಸ್ಮಿನ್ ಪಕ್ಷಿಯೋನಿಂ ಗತಾವಪಿ ॥ ೩೫ ॥
ತೀರ್ಥರಾಜನಿವಾಸೇನ ಪರಮಾಸಾದ್ಯ ಜನ್ಮ ವೈ ।
ಮುಕ್ತಿಂ ಚಾನುಭವಿಷ್ಯಾಮೋ ನಿಯತಂ ಸಹಚಾರಿಣೀಮ್ ॥ ೩೬ ॥
ಅನ್ಯೋನ್ಯಮೇವಮಾಭಾಷ್ಯ ರಥಾಂಗಾಹ್ವೌ ಮುನೀಶ್ವರಾಃ ।
ಪ್ರಾರಬ್ಧಂ ಕರ್ಮಭೋಗೇನ ಕ್ಷಪಯಾಮಾಸತುಸ್ತದಾ ॥ ೩೭ ॥
ಏವಂ ಮುನೀಶ್ವರಾ ನೂನಂ ವಾರುಣಂ ತೀರ್ಥಮುತ್ತಮಮ್ ।
ಯುಷ್ಮಭ್ಯಂ ವರ್ಣಿತಂ ಯಸ್ಮಿನ್ನುವಾಸ ವರುಣಸ್ಸ್ವಯಮ್ ॥ ೩೮ ॥
ಕದಾಚಿನ್ಮಾಧವಸ್ತಸ್ಮೈ ಪ್ರತ್ಯಕ್ಷಸ್ಸಮಜಾಯತ ।
ನೋವಾಚ ಸನ್ನಕಂಠೋಽಸೌ ಪಪಾತ ಪದಯೋಃ ಪರಮ್ ॥ ೩೯ ॥
ಮಾಧವಸ್ತಂ ಸಮುತ್ಥಾಪ್ಯ ದದೌ ನಾನಾವಿಧಾನ್ವರಾನ್ ।
ಸರ್ವದಾತ್ರ ನಿವಾಸಂ ಸ್ವಂ ತಥಾ ತಚ್ಚರಣೇ ರತಿಮ್ ॥ ೪೦ ॥
ತಥಾ ಚ ವಾರುಣೇ ಕ್ಷೇತ್ರೇ ಸ್ನಾನದಾನಜಪಾದಿಕಮ್ ।
ಕುರ್ವತಃ ಪೂರ್ತಿಮಿಚ್ಛಾಯಾ ದರ್ಶನಂ ಚೇದೃಶಂ ತಥಾ ॥ ೪೧ ॥
ಶ್ರುತ್ವಾ ತನ್ಮಾಧವಃ ಸರ್ವಂ ತಥೇತ್ಯುಕ್ತ್ವಾ ತಿರೋಹಿತಃ ।
ಉವಾಸ ವರುಣಸ್ತತ್ರ ಸ್ವಭಾಗ್ಯಂ ಪ್ರಶಶಂಸ ಹ ॥ ೪೨ ॥
ಕ್ಷೇತ್ರಸ್ಯ ಪಶ್ಚಿಮೋ ಭಾಗಃ ಸಾಂಗೋಽಯಂ ವಿನಿರೂಪಿತಃ ।
ಅಥಾನ್ಯದಪಿ ವಕ್ಷ್ಯೇಽಥ ತತ್ ಶ್ರುಣುಧ್ವಂ ಸಮಾಹಿತಾಃ ॥ ೪೩ ॥

॥ ಇತಿ ಸಪ್ತವಿಂಶೋಽಧ್ಯಾಯಃ ॥

**ಆ ಕನ್ಯೆಯು ಹೇಳಿದಳು—**

ನಾನು ನನ್ನ ತಾಯಿಯ ಗರ್ಭದ ದಶೆಯಿಂದ ಹುಟ್ಟಿದವಳಾಗಿದ್ದರೂ ಯಾರ ಅನುಗ್ರಹದ ದಶೆಯಿಂದ ಈಗ ಅತಿಮಾನುಷಳಾದೆನೋ ಅಂತಹ ಪುರುಷೋತ್ತಮನಾದ ಮಾಧವನನ್ನು ಬಿಟ್ಟು

ಬೇರೆ ಯಾವನನ್ನೂ ನಾನು ವರಿಸುವುದಿಲ್ಲ. ॥ ೨೫ ॥ ನಾನು ಇಲ್ಲಿಯೇ ಇರುವೆನು. ನನಗೆ ಹೊಸದಾಗಿ ಸಂದಿರುವ ಆಯುಷ್ಯವನ್ನು ಇಲ್ಲಿಯೇ ಕಳೆಯುವೆನು. ಇಲ್ಲಿಯೇ ಇದ್ದು ಶ್ರೀಮಾಧವನನ್ನು ಪಡೆಯಲು ಯತ್ನಿಸುವೆನು ಅಥವಾ ಅಗ್ನಿಪ್ರವೇಶವನ್ನು ಮಾಡುವೆನು. ॥ ೨೬ ॥ ಅವಳ ಆ ಗಾಢ ನಿಶ್ಚಯವನ್ನು ತಿಳಿದು ಆ ಇಬ್ಬರು ವರಗಳು ತಮ್ಮ ಮನಸ್ಸಿನಲ್ಲಿದ್ದ ಆಸೆಯನ್ನು ತೊರೆದು ಅಲ್ಲಿಂದ ತೀರ್ಥಯಾತ್ರೆಗಾಗಿ ಹೊರಟರು. ಆ ಕನ್ನಿಕೆಯು ಅಲ್ಲಿಯೇ ನಿಂತಳು. ॥ ೨೭ ॥ ಆ ಸಂಗಮದಲ್ಲಿ ತ್ರಿಕಾಲ ಸ್ನಾನ ಮಾಡುತ್ತಿದ್ದು ವ್ರತ, ಉಪವಾಸಾದಿ ನಿಯಮಗಳಿಂದ ದೇಹವನ್ನು ಶೋಷಿಸುತ್ತಿದ್ದು ತ್ರಿಕಾಲದಲ್ಲಿಯೂ ಮಾಧವನನ್ನು ಪೂಜಿಸಿದಳು ಮತ್ತು ನಿಶ್ಚಲವಾದ ಮನಸ್ಸಿನಿಂದ ಮಾಧವನನ್ನು ಧ್ಯಾನಿಸಿದಳು. ॥ ೨೮ ॥ ಕೊನೆಗೆ, ಚಿಂತಾಮಣಿಯನ್ನು ಅತ್ಯಂತವಾಗಿ ಮೀರಿಸುವ ಮತ್ತು ಭಕ್ತರ ಆಸೆಗಳನ್ನೆಲ್ಲಾ ಮಳೆಗರೆದಂತೆ ಪೂರೈಸುವ ಶ್ರೀಮಾಧವನನ್ನು ಹೊಂದಿ ಶ್ರೀಲಕ್ಷ್ಮೀದೇವಿಯು ಹೇಗೋ ಹಾಗೆಯೇ ಆದಳು. (ಯಾರು ಎಂದೂ ಲಕ್ಷ್ಮೀದೇವಿಗೆ ಸಮನಾಗಲಾರರು. ಪರಮಾತ್ಮನ ಸಾಮೀಪ್ಯಸ್ಥಿತಿ, ಜ್ಞಾನಾನಂದಶರೀರಪ್ರಾಪ್ತಿ, ತನ್ನ ಯೋಗ್ಯತೆಗೆ ತಕ್ಕಷ್ಟು ದುಃಖವಿಲ್ಲದ ಆನಂದಪ್ರಾಪ್ತಿ, ಪರಮಾತ್ಮನ ಲೋಕಗಳಲ್ಲಿ ಶಾಶ್ವತ ಸ್ಥಿತಿ, ಸಂಸಾರದಿಂದ ಬಿಡುಗಡೆ ಇತ್ಯಾದಿಗಳನ್ನು ಪಡೆದಳೆಂದು ತಿಳಿಯಬೇಕು.) ॥ ೨೯ ॥ ವೈಶ್ಯನಾದರೋ ವೈರಾಗ್ಯವನ್ನು ಹೊಂದಿ ಆ ಪ್ರಯಾಗಕ್ಷೇತ್ರದಲ್ಲಿಯೇ ಇರಲು ನಿಶ್ಚಯಿಸಿದನು. ತನ್ನ ಇಹಲೋಕದ ಆಸೆಗಳನ್ನೆಲ್ಲ ಬಿಟ್ಟನು. ಪ್ರಯಾಗದಲ್ಲಿ ಸ್ನಾನಾದಿ ಸೇವೆಯನ್ನು ಮಾಡತಕ್ಕದ್ದು ಎಲ್ಲಾ ಸುಖಕ್ಕೂ ಸಾಧನವೆಂದು ತಿಳಿದನು. ॥ ೩೦ ॥ ಅಲ್ಲಿಯೇ ವಾಸಮಾಡುತ್ತಾ ಶ್ರೀಮಾಧವನ ಪಾದಪದ್ಮಗಳನ್ನು ಧ್ಯಾನಮಾಡುತ್ತಾ ಶ್ರೀಮಾಧವನನ್ನು ನಮಿಸುತ್ತಾ, ಧ್ಯಾನಿಸುತ್ತಾ ಮತ್ತು ಭಜಿಸುತ್ತಾ ಬಹು ಸಂವತ್ಸರಗಳನ್ನು ಅಲ್ಲಿಯೇ ಕಳೆದನು. ॥ ೩೧ ॥ ಕೊನೆಗೆ ಪ್ರಯಾಗದ ಸಂಗಮಸ್ಥಾನದಲ್ಲಿ ತನ್ನ ದೇಹವನ್ನು ಬಿಟ್ಟು, ಸ್ವರ್ಗದಲ್ಲಿ ನಾನಾವಿಧವಾದ ಭೋಗಗಳನ್ನನುಭವಿಸಿ, ಸ್ವರ್ಗದಲ್ಲಿಯೂ ಸಾಧನೆಗಳನ್ನು ಮಾಡುತ್ತಿದ್ದು ಸಾಧನದ್ವಾರಾ ಮೋಕ್ಷಾರ್ಹನಾದನು. ॥ ೩೨ ॥ ಆ ಹೆಣ್ಣು ಚಕ್ರವಾಕ ಪಕ್ಷಿಯೂ ಕೂಡ ತುಂಬ ಸಂತೋಷಗೊಂಡು ತನ್ನ ಗಂಡನಿಗೆ ಬೆಳಿಗ್ಗೆ ಈ ವೃತ್ತಾಂತವನ್ನೆಲ್ಲಾ ಹೇಳಿತು. ॥ ೩೩ ॥ ಇದನ್ನೆಲ್ಲಾ ಕೇಳಿ ಆ ಚಕ್ರವಾಕಿಯ ಗಂಡನು ಆ ಪ್ರಯಾಗದ ಅದ್ಭುತ ಮಾಹಾತ್ಮ್ಯೆಯನ್ನು ತನ್ನ ಹೆಂಡತಿಯೊಡನೆ ಹೊಗಳಿದನು. ''ಈ ತೀರ್ಥವು ಧನ್ಯ, ಪ್ರಯಾಗವು ಧನ್ಯವಾದುದು—ಭುಕ್ತಿ ಮತ್ತು ಮುಕ್ತಿ ಎರಡನ್ನು ಕೊಡತಕ್ಕದ್ದು. ॥ ೩೪ ॥ ಅದರಲ್ಲೂ ವರುಣನಿಂದ ನಿರ್ಮಿತವಾದ ವಾರುಣೀ ತೀರ್ಥವು ಧನ್ಯವಾದುದು. ಈ ಸಂಗಮವೂ ಧನ್ಯವಾದುದು. ಪಕ್ಷಿಜನ್ಮವನ್ನು ಹೊಂದಿ ಈ ಪ್ರಯಾಗಕ್ಷೇತ್ರದಲ್ಲಿ, ಇಲ್ಲಿರುವ ತೀರ್ಥಗಳಲ್ಲಿ ವಾಸಿಸಿಕೊಂಡಿರತಕ್ಕ ಮಾಧವನ ಅನುಗ್ರಹಕ್ಕೆ ಪಾತ್ರರಾದ ನಾವೂ ಧನ್ಯರು. ॥ ೩೫ ॥ ಇಲ್ಲಿನ ಸಾಧನೆಗಳಿಂದ ಉತ್ತಮ ಜನ್ಮಗಳು ಬಂದು ಕೊನೆಗೆ ನಾವಿಬ್ಬರೂ ನಿಯತಪತಿಪತ್ನಿಯರನ್ನು ಪಡೆದು ಮುಕ್ತಿಲೋಕಗಳಲ್ಲಿ ವಿಹಾರ ಮಾಡುವೆವು. ಆದ್ದರಿಂದ ನಾವೂ ಧನ್ಯರು ॥ ೩೬ ॥ ಹೇ ಶೌನಕಾದಿ ಮುನೀಶ್ವರರಾ! ಈ ರೀತಿಯಾಗಿ ಆ ಚಕ್ರವಾಕ ದಂಪತಿಗಳೀರ್ವರೂ, ತಾವಾಗಲೇ ಪರಸ್ಪರ ಮಾತನಾಡಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದಿದ್ದು ಒಳ್ಳೆಯ ಜ್ಞಾನವುಳ್ಳವರಾಗಿದ್ದರೂ ಪಕ್ಷ್ಯಾದಿಜನ್ಮಗಳಲ್ಲಿದ್ದು ಅವು ಅನುಭವಿಸಲೇಬೇಕಾದ ಪ್ರಾರಬ್ಧಕರ್ಮಗಳನ್ನೆಲ್ಲಾ ಅನುಭವದಿಂದ ತೀರಿಸಿಕೊಂಡರು, ಕೊನೆಗೆ ಮೋಕ್ಷವನ್ನು ಪಡೆದರು. ॥ ೩೭ ॥ ಈ ರೀತಿಯಾಗಿ ಈ ವರುಣತೀರ್ಥವೂ ಅತ್ಯುತ್ತಮವಾದುದು. ಇದನ್ನು ನಿಮಗೆ

ವರ್ಣಿಸಿದ್ದಾಯಿತು. ಅಲ್ಲಿ ವರುಣದೇವರು ತಾವೂ ವಾಸ ಮಾಡಿಕೊಂಡಿದ್ದು ಶ್ರೀಮಾಧವನನ್ನು ಸೇವೆ ಮಾಡುತ್ತಿದ್ದರು. ॥ ೩೮ ॥ ಕಡೆಗೊಮ್ಮೆ, ಶ್ರೀಮಾಧವನು ವರುಣನಿಗೆ ಪ್ರತ್ಯಕ್ಷನಾದನು. ಅವನ ದರ್ಶನವಾಗುತ್ತಲೇ ವರುಣನಿಗೆ ಕೊರಳುಬ್ಬಿ ಮಾತೇ ಹೊರಡಲಿಲ್ಲ, ಕೇವಲ ಶ್ರೀಮಾಧವನ ಪಾದಗಳಲ್ಲಿ ಬಿದ್ದನು. ॥ ೩೯ ॥ ಶ್ರೀಮಾಧವನು ಅವನನ್ನು ಎಬ್ಬಿಸಿ ನಾನಾ ವಿಧಗಳಾದ ವರಗಳನ್ನಿತ್ತನು. ವರುಣನು ಸದಾ ಆ ಕ್ಷೇತ್ರನಿವಾಸಿಯಾಗಿರುವುದು ಮತ್ತು ಶ್ರೀಮಾಧವನ ಚರಣಗಳಲ್ಲಿ ಭಕ್ತಿಯನ್ನು ಹೊಂದಿರುವುದು ಮತ್ತು ಈ ವರುಣನಿರ್ಮಿತಕ್ಷೇತ್ರದಲ್ಲಿ ವಾಸಮಾಡಿಕೊಂಡಿದ್ದು ಈ ತೀರ್ಥದಲ್ಲಿ ಸ್ನಾನ, ಜಪಾದಿಗಳನ್ನು ಮಾಡಿದವರಿಗೆ ತನಗಿತ್ತಂತೆ ಶ್ರೀಮಾಧವನು ಅವರಿಗೂ ಒಳ್ಳೆಯ ಜ್ಞಾನವನ್ನು ಕೊಟ್ಟು ಅವರ ಆಸೆಗಳನ್ನು ಪೂರೈಸುವುದು ಇತ್ಯಾದಿಗಳನ್ನು ಬೇಡಿದನು. ॥ ೪೦-೪೧ ॥ ವರುಣನ ಬೇಡಿಕೆಗಳನ್ನೆಲ್ಲಾ ಆಲಿಸಿ ಶ್ರೀಮಾಧವನು ''ಹಾಗೆಯೇ ಆಗಲಿ'' ಎಂದು ಕರುಣಿಸಿ ಅಂತರ್ಧಾನನಾದನು. ತನ್ನ ಭಾಗ್ಯವನ್ನು ಪ್ರಶಂಸೆ ಮಾಡಿಕೊಂಡ ವರುಣನು ಅಲ್ಲಿಯೇ ನೆಲಸಿದನು. ॥ ೪೨ ॥ ಎಲೈ ಮುನಿಗಳಿರಾ ! ಈ ಕ್ಷೇತ್ರದ ಪಶ್ಚಿಮ ದಿಗ್ಭಾಗದ ಕಥೆಯನ್ನು ಸಾಂಗೋಪಾಂಗವಾಗಿ ನಿರೂಪಿಸಲಾಯಿತು. ಇನ್ನು ಉಳಿದ ವಿಷಯಗಳನ್ನೂ ಹೇಳುವೆನು. ತಾವೆಲ್ಲರೂ ಸಾವಧಾನವಾಗಿ ಕೇಳಿರಿ. ಹೀಗೆಂದು ಶ್ರೀಸೂತರು ಅಪ್ಪಣೆ ಕೊಡಿಸಿದರು ॥ ೪೩ ॥

॥ ಇಪ್ಪತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಾವಿಂಶೋಽಧ್ಯಾಯಃ ॥ ೨೮ ॥

ಸೂತ ಉವಾಚ—

ಅಥ ವಾಯವ್ಯದಿಗ್ಭಾಗೇ ಕ್ಷೇತ್ರಂ ವಾಯೋಸ್ಸುಖಪ್ರದಮ್ ।
ತ್ರಿಕೋಣಂ ಕೋಟಿತೀರ್ಥೈಶ್ಚ ಸಂಮಿಶ್ರಿತಜಲಾಶಯಮ್ ॥ ೧ ॥
ಏಕರಾತ್ರಂ ತ್ರಿರಾತ್ರಂ ವಾ ಸಪ್ತರಾತ್ರಮಥಾಪಿ ವಾ ।
ಯತ್ರ ವಾಸೇನ ಸಂಸಿದ್ಧಿಃ ಕಾಮಾನಾಂ ಜಾಯತೇ ನೃಣಾಮ್ ॥ ೨ ॥
ನಾನಾಪುಷ್ಪವನಾಕೀರ್ಣಂ ನಾನಾವೃಕ್ಷಲತಾಶ್ರಯಮ್ ।
ನಾನಾವಿಹಂಗಶಬ್ದಾಢ್ಯಂ ನಾನಾಮುನಿಕೃತಾಸ್ಪದಮ್ ॥ ೩ ॥
ವಸತಾಂ ಸರ್ವಜಂತೂನಾಂ ಮಂದಶೀತಲವಾಸಿತಃ ।
ವಾಯುರ್ವಾತಿ ಚತುರ್ದಿಕ್ಷು ಕುರ್ವನ್ನಾನಂದಮಕ್ಷಯಮ್ ॥ ೪ ॥
ಕಾಮಕ್ರೋಧಾದಿಜಂ ದುಃಖಂ ದುಃಖಂ ಕ್ಷುತ್ತೃಟ್ಸಮುದ್ಭವಮ್ ।
ಬಾಹ್ಯಮಾಭ್ಯಂತರಂ ಚೈವ ದುಃಖಂ ಯತ್ರ ಕದಾಪಿ ನ ॥ ೫ ॥
ಏವಂ ತೀರ್ಥವರೇ ತಸ್ಮಿನ್ದಿವ್ಯರೂಪಧರೋ ಮರುತ್ ।
ನ್ಯವಸನ್ಮಾಧವಂ ಧ್ಯಾಯನ್ಭಕ್ತಿವಾಸಿತಚೇತಸಾ ॥ ೬ ॥
ತತ್ರ ಯಾತಾ ಯದಾ ಗಂಗಾ ತದಾ ವಾಯುಶ್ಚ ಸಮ್ಮುಖಃ ।
ಗಂಗಾಯಾಃ ಸ್ತವನೇ ತಸ್ಥೌ ತತ್ರ ಗಂಗಾ ಸ್ಥಿರಾಽಭವತ್ ॥ ೭ ॥

## ॥ ಇಪ್ಪತ್ತೆಂಟನೆಯ ಅಧ್ಯಾಯವು ॥

ಸೂತರು ಹೇಳಿದರು—

ಪ್ರಯಾಗಕ್ಷೇತ್ರದ ವಾಯವ್ಯ ದಿಕ್ಕಿನಲ್ಲಿ ದಿಕ್ಪಾಲಕನಾದ ವಾಯುವಿನ ಸುಖಕರವಾದ ಕ್ಷೇತ್ರವಿದೆ. ಇದು ತ್ರಿಕೋಣಾಕಾರವಾಗಿದ್ದು ಕೋಟಿತೀರ್ಥಗಳ ನೀರು ಈ ಜಲಾಶಯದಲ್ಲಿ ಸನ್ನಿಹಿತವಾಗಿದೆ. ॥ ೧ ॥ ಇಲ್ಲಿ ಒಂದು ರಾತ್ರಿ, ಮೂರು ರಾತ್ರಿಗಳು ಅಥವಾ ಏಳು ರಾತ್ರಿಗಳು ತಂಗುವ ಮನುಷ್ಯರ ಸಕಲ ಆಸೆಗಳೂ ಪೂರೈಸುವುವು. ॥ ೨ ॥ ಇದು ನಾನಾವಿಧವಾದ ಹೂವುಗಳ, ಮರಗಳ ಮತ್ತು ಬಳ್ಳಿಗಳ ವನಗಳಿಂದ ತುಂಬಿಹೋಗಿದೆ. ನಾನಾವಿಧ ಪಕ್ಷಿಗಳಿಗೆ ಇಲ್ಲಿ ಆಶ್ರಯವಿದೆ ಮತ್ತು ಅನೇಕ ಋಷಿಗಳು ಇಲ್ಲಿ ವಾಸಿಸುತ್ತಾರೆ. ॥ ೩ ॥ ನಾಲ್ಕು ದಿಕ್ಕುಗಳಿಂದಲೂ ಬೀಸುವ ಗಾಳಿಯು ಇಲ್ಲಿರುವ ಎಲ್ಲ ಪ್ರಾಣಿಗಳಿಗೂ ಮೆಲ್ಲಮೆಲ್ಲನೆ ತಣ್ಣನೆ ಬೀಸಿ ಹಿತವನ್ನುಂಟುಮಾಡುತ್ತದೆ. ॥ ೪ ॥ ಈ ಕ್ಷೇತ್ರದಲ್ಲಿ ಕಾಮಕ್ರೋಧಗಳಿಂದ ಉಂಟಾಗುವ, ಹಸಿವು-ನೀರಡಿಕೆಯಿಂದಾಗುವ ಅಥವಾ ಬಾಹ್ಯ ಕಾರಣಗಳಿಂದಾಗುವ ದುಃಖಗಳಾಗಲೀ ಯಾವಾಗಲೂ ಇಲ್ಲ. ॥ ೫ ॥ ಈ ಶ್ರೇಷ್ಠವಾದ ತೀರ್ಥದಲ್ಲಿ ವಾಯವ್ಯ ದಿಕ್ಪಾಲಕನಾದ ವಾಯುವು ದಿವ್ಯವಾದ ಶರೀರವನ್ನು ಹೊಂದಿ ಭಕ್ತಿಯಿಂದ ಕೂಡಿರುವ ತನ್ನ ಮನಸ್ಸಿನಿಂದ ಯಾವಾಗಲೂ ಶ್ರೀಮಾಧವದೇವರನ್ನು ಸ್ತೋತ್ರ ಮಾಡುತ್ತಾ ವಾಸಿಸುವನು. ॥ ೬ ॥ ಅಲ್ಲಿ ಗಂಗೆಯು ಹರಿದು ಬರುತ್ತಿರುವಾಗ ಅವಳನ್ನು ಎದುರು ಗೊಂಡು ವಾಯುವು ಗಂಗಾಸ್ತವನದಲ್ಲಿ ತೊಡಗಿದಾಗ ಆ ಗಂಗೆಯು ಅಲ್ಲಿಯೇ ನೆಲಸಿದಳು. ॥ ೭ ॥

ವಾಯುರುವಾಚ—

ಗಂಗೇ ದೇವಿ ನಮಸ್ತೇಽಸ್ತು ನಮಸ್ತ್ರಿಪಥಗಾಮಿನಿ ।
ವಿಷ್ಣುಪಾದಸಮುತ್ಪನ್ನೇ ಶಿವಚೂಡಾವಿರಾಜಿತೇ ॥ ೮ ॥
ಪವಿತ್ರಾಣಾಂ ಪವಿತ್ರಾಸಿ ಮಂಗಲಾನಾಂ ಚ ಮಂಗಲಾ ।
ಮೋಕ್ಷದಾ ಸರ್ವಜೀವಾನಾಂ ಮಹಾಪಾತಕನಾಶಿನೀ ॥ ೯ ॥
ಜನ್ಮಜನ್ಮಾನ್ತರಸ್ಥಾನಾಂ ಮಹಾಪಾತಕಭೂರುಹಾಮ್ ।
ತ್ವಾಂ ವಿನಾಽನ್ಯಾ ನ ಲೋಕೇಽಸ್ಮಿನ್ ಛೇದನೈಕಾ ಕುಠಾರಿಕಾ ॥ ೧೦ ॥
ನಿರ್ಗೀರ್ಯ ಗರಮತ್ಯುಗ್ರಂ ಶಿವೋ ಯೋಗ್ಯೋಽಬ್ಧಿಮಂಥನೇ ।
ತದ್ದಾಹಶಾಂತಯೇ ಶೀಘ್ರಂ ಶಿರಸಾ ತ್ವಾಂ ದಧಾರ ಹ ॥ ೧೧ ॥
ಸಂಸಾರಸರ್ಪದಷ್ಟಾನಾಂ ವಿಷಬಾಧಾನಿವಾರಣಮ್ ।
ತ್ವದಂಭಃಕಣಿಕಾಪಾನಂ ಪರಮೇಕಂ ರಸಾಯನಮ್ ॥ ೧೨ ॥
ಸ ದೇಶಸ್ತದ್ವನಂ ಸಾ ಭೂಸ್ಸ ಶೈಲಃ ಪತ್ತನಂ ಚ ತತ್ ।
ಮನ್ಯೇ ಪುಣ್ಯತರಂ ಲೋಕೇ ಯತ್ರ ತ್ವಂ ಭಾಸಿ ಜಾಹ್ನವಿ ॥ ೧೩ ॥
ಭಗೀರಥೋಽಪಿ ಧನ್ಯೋಽಯಂ ಧನ್ಯಾಃ ಸ್ಯುಃ ಪಿತರಸ್ತಥಾ ।
ಯತ್ಪೃಷ್ಠೇಽನುಚರೀವತ್ತ್ವಂ ಗಚ್ಛಸ್ಯಮೃತವಾಹಿನಿ ॥ ೧೪ ।
ಧನ್ಯಂ ದಿಷ್ಟಂ ಮಮಾಪ್ಯದ್ಯ ತೀರ್ಥರಾಜೈಕವಾಸಿನಃ ।
ಯತ್ತ್ವಂ ದೃಷ್ಟಿಪಥಂ ಯಾತಾ ದರ್ಶನಾದಘನಾಶಿನೀ ॥ ೧೫ ॥
ಕೃತಾರ್ಥೋಽಹಂ ಕೃತಾರ್ಥೋಽಹಂ ಕೃತಾರ್ಥೋಽಹಂ ನ ಸಂಶಯಃ ।
ಗೃಹಾಣ ಮತ್ಕೃತಾಂ ಪೂಜಾಂ ಪಾವಿತೋಽದ್ಯ ಮಮಾಶ್ರಮಃ ॥ ೧೬ ॥
ಇತ್ಯುಕ್ತ್ವಾ ಪೂಜಯಾಮಾಸ ಪ್ರಣಿಪಾತಪುರಸ್ಸರಮ್ ।
ಷೋಡಶೈರುಪಚಾರೈಶ್ಚ ಗಂಗಾಂ ಗಗನಮೇಖಲಾಮ್ ॥ ೧೭ ॥
ದೃಢಂ ತದ್ಭಾವಮಾಲಕ್ಷ್ಯ ಪೂಜಿತಾ ಜಾಹ್ನವೀ ಚ ತಮ್ ।
ದದೌ ವರಾನ್ಯಥಾಕಾಮಂ ವಚನಂ ಚೇದಮಬ್ರವೀತ್ ॥ ೧೮ ॥

ವಾಯುವು ಹೇಳಿದನು—

ಸ್ವರ್ಗ, ಭೂಮಿ ಮತ್ತು ಪಾತಾಳವೆಂಬ ಮೂರು ಲೋಕಗಳಲ್ಲಿ ಹರಿಯುತ್ತಿದ್ದು "ತ್ರಿಪಥಗಾ" ಎಂಬ ಹೆಸರುಳ್ಳವಳೇ, ಮಹಾವಿಷ್ಣುವಿನ ಪಾದ ತೊಳೆದಾಗ ಉದ್ಭವವಾದವಳೇ, ಮತ್ತು ಚಂದ್ರನನ್ನು ತಲೆಯಲ್ಲಿಟ್ಟುಕೊಂಡಂಥಾ ಶಿವನ ತಲೆಯ ಮೇಲೆ ವಿರಾಜಮಾನಳಾಗಿ ಇರುವವಳೇ, ನಿನಗೆ ನಮಸ್ಕಾರಗಳು. ॥ ೮ ॥ ನೀನು ಪವಿತ್ರವಾಗಿರುವ ವಸ್ತುಗಳೆಲ್ಲದಕ್ಕಿಂತ ಪವಿತ್ರವಾದವಳು, ಮಂಗಳಕರವಾದುದೆಲ್ಲದಕ್ಕಿಂತ ಮಂಗಳಕರಳಾದವಳು, ಮಹಾಮಹಾ ಪಾತಕಗಳಿಂದ ಉಂಟಾಗುವ ಪಾಪಗಳನ್ನೂ ಪರಿಹಾರ ಮಾಡತಕ್ಕವಳು ಮತ್ತು ಎಲ್ಲ ಜೀವಿಗಳಿಗೂ ಮೋಕ್ಷಪ್ರಾಪ್ತಿಗೆ ಪರಂಪರಯಾ ಕಾರಣೀಭೂತಳು. ॥ ೯ ॥ ಜೀವಿಗಳ ಜನ್ಮ ಜನ್ಮಾಂತರಗಳಿಂದ

ಬೆಳೆದು ನಿಂತಿರುವ ಮಹಾಪಾತಕಗಳೆಂಬ ಹೆಮ್ಮರಗಳನ್ನು ಕಡಿದು ಬಿಸಾಡಲು ಈ ಲೋಕದಲ್ಲಿ ನೀನಲ್ಲದೆ ಯಾರು ತಾನೇ ಕೊಡಲಿಯಾಗಬಲ್ಲರು ? ॥ ೧೦ ॥ ಸಮುದ್ರಮಥನಕಾಲದಲ್ಲಿ ಕಲಿಯು ಹಾಲಾಹಲ ವಿಷರೂಪದಲ್ಲಿ ಹುಟ್ಟಿ ಭೂಮ್ಯಾಕಾಶಗಳನ್ನು ವ್ಯಾಪಿಸಿಕೊಂಡಾಗ ಶಿವನು ಆ ವಿಷವನ್ನು ಪಾನಮಾಡಿ ಅದರಿಂದುಂಟಾದ ಉರಿಯ ಉಪಶಮನಕ್ಕೋಸ್ಕರ ನಿನ್ನನ್ನು ತನ್ನ ತಲೆಯಲ್ಲಿ ಧರಿಸಿದನು. (ವಾಸ್ತವವಾಗಿ ಶ್ರೀಗಂಗೆಯು ವಿಷ್ಣುವಿನ ಪಾದದ ದಶೆಯಿಂದ ಬಂದ ನಿರ್ಮಲೋದಕವೆಂದು ಶಿರಸಾ ಧಾರ್ಯವೆಂದೇ ತಿಳಿದು ಅದನ್ನು ಭಗೀರಥನ ಪ್ರಾರ್ಥನೆಗೆ ಓಗೊಟ್ಟು ಶಿವನು ತನ್ನ ಶಿರಸ್ಸಿನಲ್ಲಿ ಧಾರಣೆ ಮಾಡಿದನು.) ॥ ೧೧ ॥ ಸಂಸಾರವೆಂಬ ಹಾವಿನಿಂದ ಕಡಿಯಲ್ಪಟ್ಟವರಿಗೆ ಆ ವಿಷದ ಬಾಧೆಯ ನಿವಾರಣೆಗೆ ನಿನ್ನ ನೀರಿನ ಹನಿಗಳ ಪಾನವು ಅತ್ಯುತ್ತಮವಾದ ಔಷಧವೇ ಸರಿ. ॥ ೧೨ ॥ ನೀನು ಎಲ್ಲೆಲ್ಲಿ ಹರಿಯುತ್ತಾ ಕಾಣಿಸಿಕೊಳ್ಳುತ್ತೀಯೋ ಆ ದೇಶವೇ ದೇಶವು, ವನವೇ ವನವು, ಭೂಪ್ರದೇಶವೇ ಭೂಮಿಯು, ಪರ್ವತವೇ ಪರ್ವತವು, ಪಟ್ಟಣವೇ ಪಟ್ಟಣವು. ಒಟ್ಟಿನಲ್ಲಿ ನೀನು ಹರಿಯುವ ಸ್ಥಳಗಳೆಲ್ಲ ಅತ್ಯಂತ ಪುಣ್ಯತಮವಾದವುಗಳು. ॥ ೧೩ ॥ ಎಲೈ ದೇವನದಿಯೇ, ನೀನು ಅಮೃತವಾಹಿನಿಯಾಗಿ ಭಗೀರಥನು ಹೋದೆಡೆಯೆಲ್ಲಾ ಅವನ ಹಿಂದೆ ಹಿಂದೆಯೇ ಹರಿದು ಬಂದಿರುವೆ. ಅಂಥಹ ಭಗೀರಥನು ಧನ್ಯನು. ಅವನ ಪಿತೃಗಳು ನಿನ್ನ ಸ್ಪರ್ಶದಿಂದ ಉದ್ಧೃತರಾದ್ದರಿಂದ ಅವರೂ ಧನ್ಯರು. ॥ ೧೪ ॥ ತೀರ್ಥರಾಜನಾದ ಪ್ರಯಾಗದಲ್ಲಿ ವಾಸಮಾಡುವ ನನ್ನ ಅದೃಷ್ಟವೂ ಧನ್ಯವಾದದ್ದು. ಏಕೆಂದರೆ ದರ್ಶನಮಾತ್ರದಿಂದ ಪಾಪವನ್ನು ನಾಶಮಾಡತಕ್ಕ ನೀನು ನನ್ನ ದೃಷ್ಟಿಗೆ ವಿಷಯಳಾಗಿದ್ದೀಯ. ॥ ೧೫ ॥ ನಾನು ಸಾಧಿಸಿದ ಪ್ರಯೋಜನವುಳ್ಳ ಕೃತಾರ್ಥನು, ನಾನು ಕೃತಾರ್ಥನು, ನಾನು ಕೃತಾರ್ಥನು. ಇದರಲ್ಲಿ ಏನೂ ಸಂಶಯವಿಲ್ಲ. ನೀನು ನನ್ನ ಪೂಜಾವನ್ನು ಸ್ವೀಕರಿಸು ; ಈಗ ನನ್ನ ಆಶ್ರಮವು ಪವಿತ್ರವಾಯಿತು. ॥ ೧೬ ॥ ಹೀಗೆಂದು ಪ್ರಾರ್ಥಿಸಿ ಗಂಗಾದೇವಿಯನ್ನು ಪೂಜಿಸಿ ಅವಳಿಗೆ ನಮಸ್ಕಾರ ಮಾಡಿದನು. ಆಕಾಶಕ್ಕೆ ಡಾಬಿನಂತೆ ಪ್ರಕಾಶಿಸುತ್ತಿರುವ ಅವಳನ್ನು ಷೋಡಶೋಪಚಾರ ಪೂಜೆಗಳಿಂದ ಅರ್ಚಿಸಿದನು. ॥ ೧೭ ॥ ಈ ರೀತಿಯಾಗಿ ವಾಯುವಿನಿಂದ ಪೂಜಿತಳಾದ ಆ ಗಂಗೆಯು ಅವನ ಭಕ್ತಿಭಾವದ ದಾರ್ಢ್ಯತೆಯನ್ನು ತಿಳಿದು ಅವನಿಗೆ ಬೇಕಾದ ವರಗಳನ್ನು ಕೊಡುತ್ತಾ ಈ ರೀತಿಯಾಗಿ ಹೇಳಿದಳು. ॥ ೧೮ ॥

**ಶ್ರೀಗಂಗೋವಾಚ—**

**ತವ ಭಕ್ತ್ಯಾ ಪ್ರಸನ್ನಾಸ್ಮಿ ಪವಮಾನ ವಿಶೇಷತಃ ।**
**ವೃಣೀಷ್ವ ವಿವಿಧಾನ್ಕಾಮಾನ್ಕಾಮಪೂರಾಸ್ಮ್ಯಹಂ ಕಿಲ ॥ ೧೯ ॥**

**ಗಂಗೆಯು ಹೇಳಿದಳು—**

ಎಲೈ ವಾಯುವೇ, ನಿನ್ನ ಭಕ್ತಿಯಿಂದ ನಾನು ವಿಶೇಷವಾಗಿ ಪ್ರಸನ್ನಳಾಗಿದ್ದೇನೆ. ನಿನ್ನ ಬಗೆ ಬಗೆಯ ಅಪೇಕ್ಷೆಗಳನ್ನು ಕೋರು. ಅವುಗಳನ್ನು ನಾನು ಕೊಡುವೆನು. ॥ ೧೯ ॥

**ವಾಯುರುವಾಚ—**

**ಕಿಂ ಚಿತ್ರಂ ತವ ಸಾಮರ್ಥ್ಯೇ ಸ್ವರ್ಗಸೋಪಾನಪದ್ಧತೇ ।**
**ವರೇಶ್ಯಾಸಿ ಸುರಾದೀನಾಂ ಜಗತ್ತ್ರಯಪಾವನಿ ॥ ೨೦ ॥**

ವರವೃಂದಮಯಂ ದೇವಿ ದುರ್ಲಭಂ ತವ ದರ್ಶನಮ್ ।
ತನ್ಮಮಾದ್ಯಾಭವನ್ನಿಂ ವಾ ವರಾಂತರಮತಃ ಪರಮ್ ॥ ೨೧ ॥
ಅಥಾಪಿ ಕಾಮಯೇ ಗಂಗೇ ಸಾನ್ನಿಧ್ಯಂ ತವ ಸರ್ವದಾ ।
ಇತ್ಯುಕ್ತೇ ಬಾಢಮಿತ್ಯುಕ್ತ್ವಾ ನೋ ಚಚಾಲ ತತಃ ಪದಮ್ ॥ ೨೨ ॥

ವಾಯುವು ಹೇಳಿದನು—

ಸ್ವರ್ಗಪ್ರಾಪ್ತಿಗೆ ಮೆಟ್ಟಲಿನ ದಾರಿಯಂತೆ ಇರುವ (ಪರಂಪರಯಾ ವಿಷ್ಣುಲೋಕಪ್ರಾಪ್ತಿಗೆ) ನಿನ್ನ ಸಾಮರ್ಥ್ಯಕ್ಕೆ ಏನು ತಾನೇ ಆಶ್ಚರ್ಯವು? ನೀನು ದೇವಾದಿಗಳಿಗೂ ಭಜನೀಯ-ಳಾಗಿದ್ದೀಯೆ. ಮೂರು ಲೋಕವನ್ನು ಪಾವನಗೊಳಿಸತಕ್ಕ ಶ್ರೇಷ್ಠಳಾಗಿದ್ದೀಯೆ. ॥ ೨೦ ॥ ನೀ ಪಾಲಿಸುವ ವರವೆಲ್ಲವೂ ನೀನು ಕೊಟ್ಟಿರುವ ದರ್ಶನದಿಂದಲೇ ಸಂದಂತೆ ಆಯಿತು. ಈ ವರದ ದಶೆಯಿಂದ ಬೇರೆಯಾದ ವರದಿಂದ ನನಗೆ ಏನಾಗಬೇಕಾಗಿದೆ? ॥ ೨೧ ॥ ಹಾಗಿದ್ದರೂ, ಎಲೈ ಗಂಗಾ-ದೇವಿಯೇ, ಇಲ್ಲಿ ಸರ್ವದಾ ನಿನ್ನ ಸಾನ್ನಿಧ್ಯವಿರಲು ಬೇಡುತ್ತೇನೆ. ಹೀಗೆ ವಾಯುವು ಹೇಳುತ್ತಿರಲು, ಗಂಗೆಯು ''ಹಾಗೆಯೇ ಆಗಲಿ'' ಎಂದು ಹೇಳಿ ಆ ವಾಯುವಿನ ಆಶ್ರಮದಲ್ಲಿಯೇ ನೆಲಸಿಬಿಟ್ಟಳು. ॥ ೨೨ ॥

ಸೂತ ಉವಾಚ—

ತತೋ ಭಗೀರಥೋ ರಾಜಾ ಚಿಂತಾವ್ಯಾಕುಲಿತೇಂದ್ರಿಯಃ ।
ವಾಯುಂ ಪ್ರಣಮ್ಯ ಸಾಷ್ಟಾಂಗಮಿದಮಾಹ ಮುನೀಶ್ವರಾಃ ॥ ೨೩ ॥

ಸೂತರು ಹೇಳಿದರು—

ಗಂಗಾದೇವಿಯು ವಾಯ್ವಾಶ್ರಮದಲ್ಲಿಯೇ ಶಾಶ್ವತವಾಗಿ ನಿಂತುಬಿಟ್ಟಿದ್ದರಿಂದ ಭಗೀರಥ ರಾಜನು ಚಿಂತೆಯಿಂದ ಮನಸ್ಸಿನಲ್ಲಿ ವ್ಯಥೆಪಟ್ಟು ವಾಯುದೇವರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಈ ರೀತಿಯಾಗಿ ಹೇಳಿದನು. ॥ ೨೩ ॥

ಭಗೀರಥ ಉವಾಚ—

ಶರಣಂ ತ್ವಾಂ ಪ್ರಪನ್ನೋಽಸ್ಮಿ ಶರಣಾಗತವತ್ಸಲ ।
ಪಾಹಿ ಮಾಂ ಸಂಕಟಾದಸ್ಮಾದ್ಗಂಗಾದಾನೇನ ಸತ್ವರಮ್ ॥ ೨೪ ॥
ಕಾಪಿಲಕ್ರೋಧದಗ್ಧಾನಾಂ ಪಿತೄಣಾಂ ಮಮ ಮುಕ್ತಯೇ ।
ಯತ್ನೇನ ಮಹತಾ ನೀತಾ ಪ್ರಾರ್ಥಯಿತ್ವಾ ವಸೌ ಮಯಾ ॥ ೨೫ ॥
ಸಚ್ಚಿದಾನಂದರೂಪೇಯಂ ಗಂಗಾನಂಗಾರಿಪೂಜಿತಾ ।
ಅಂತರಾನಂತರಂ ಭಕ್ತ್ಯಾ ಭವತಾ ನಿಶ್ಚಲೀಕೃತಾ ॥ ೨೬ ॥
ಏನಾಮಾಜ್ಞಾಪಯ ಕ್ಷಿಪ್ರಮಹಂ ನೇಷ್ಯಾಮಿ ಸಾಗರಮ್ ।
ಮಾ ವಿಘ್ನಃ ಕ್ರಿಯತಾಂ ವಾಯೋ ಗೃಹಾಣೇದಂ ಯಶೋಽಮಲಮ್॥೨೭॥

ಭಗೀರಥನು ಹೇಳಿದನು—

ಹೇ ಶರಣುಹೋದವರನ್ನು ಕಾಪಾಡುವ ವಾಯುವೇ, ನಾನು ನಿನಗೆ ಶರಣಾಗಿದ್ದೇನೆ.

ನನ್ನನ್ನು ಕಾಪಾಡು. ಕಪಿಲನಾಮಕ ಪರಮಾತ್ಮನ ಕ್ರೋಧಾಗ್ನಿಯಿಂದ ಬೂದಿಯಾಗಿರತಕ್ಕ ನನ್ನ ಪಿತೃಗಳ ಉದ್ಧಾರಕ್ಕಾಗಿ ಭೂಮಿಯಲ್ಲಿ ತಪಸ್ಸುಮಾಡಿ ಮಹಾಪ್ರಯತ್ನದಿಂದ ತಪಸ್ಸು ಪ್ರಾರ್ಥನೆಗಳಿಂದ ಈ ಗಂಗಾದೇವಿಯನ್ನು ಭೂಲೋಕಕ್ಕೆ ತರಲಾಯಿತು. ಇವಳು ವಿಷ್ಣುವಿನ ಪಾದದಿಂದ ಬಂದವಳಾದ್ದರಿಂದ ಇವಳನ್ನು ಮಹಾರುದ್ರದೇವರು ತನ್ನ ಶಿರಸ್ಸಿನಲ್ಲಿಯೇ ಇಟ್ಟುಕೊಂಡು ಕೆಳಗೇ ಬಿಡಲಿಲ್ಲ. ಆ ರುದ್ರದೇವರನ್ನು ಪ್ರಾರ್ಥಿಸಿ ಹೇಗೋ ಇಲ್ಲಿಯವರೆಗೆ ಆಕೆಯನ್ನು ಕರೆತರಲಾಯಿತು. ಈಗ ನೀವು ಆಕೆಯನ್ನು ನಿಮ್ಮಲ್ಲಿಯೇ ಉಳಿಸಿಕೊಂಡಿ-ರುವುದರಿಂದ ನಮ್ಮ ಪಿತೃಗಳ ಉದ್ಧಾರ ಮಾಡುವ ಕಾರ್ಯದಲ್ಲಿ ಪುನಃ ವಿಘ್ನ ಉಂಟಾಗಿ ನನಗೆ ಮಹಾಸಂಕಟಪ್ರಾಪ್ತಿಯಾಗಿದೆ. ಈ ಗಂಗೆ ಸಚ್ಚಿದಾನಂದರೂಪಳು. (ವಿಷ್ಣುವಿನ ಮುಖ್ಯ ಸನ್ನಿಧಾನವುಳ್ಳವಳು.) ಇವಳನ್ನು ದಯಮಾಡಿ ಬಿಟ್ಟುಕೊಡಿ. ಇವಳನ್ನು ತಡೆಯಬೇಡಿರಿ. ಇವಳನ್ನು ಸಾಗರಕ್ಕೆ ಕರೆದುಕೊಂಡು ಹೋಗುವೆನು. (ಅಂದರೆ ಸಗರನ ಮಕ್ಕಳ ಅಸ್ಥಿಗಳ ಸಮೀಪಕ್ಕೆ ಎಂದು ಅರ್ಥ) ಈ ಕಾರ್ಯದಲ್ಲಿ ನೀವು ವಿಘ್ನವನ್ನು ಮಾಡಬೇಡಿ. ಅವಳನ್ನು ಬಿಟ್ಟುಕೊಟ್ಟು ಶುದ್ಧ ಯಶಸ್ಸಿಗೆ ಭಾಗಿಯಾಗಿರಿ, ಎಂದು ಪ್ರಾರ್ಥಿಸಿದನು. ॥ ೨೪-೨೭ ॥

**ಸೂತ ಉವಾಚ—**

ಏವಮಭ್ಯರ್ಥಿತೋ ರಾಜ್ಞಾ ವಾಯುರಾಜ್ಞಾಂ ದದೌ ತದಾ ।
ಗಂಗೇ ಗಚ್ಛಾಶು ಭದ್ರಂ ತೇ ಪಿತೃನ್ ರಾಜ್ಞಃ ಸಮುದ್ಧರ ॥ ೨೮ ॥
ತತೋ ಗಂಗಾತಿವೇಗೇನ ಭಗೀರಥಪುರಸ್ಸರಾ ।
ರವಿಜಾಸಹಿತಾ ಸಾಗಾತ್ಸಗರಾಶ್ರಮಮಾದರಾತ್ ॥ ೨೯ ॥
ತದಾದಿ ವಾಯುತೀರ್ಥಂ ತದ್ವಿಖ್ಯಾತಂ ತೀರ್ಥನಾಯಕೇ ।
ಕಾಮಕಲ್ಪದ್ರುಮವನಂ ಮಹಾದುರಿತಭಂಜನಮ್ ॥ ೩೦ ॥
ವರುಣಾಶ್ರಮಮಾರಭ್ಯ ಯಾವದ್ವಾಯವ್ಯಮಂಡಲಮ್ ।
ಸಶಿಷ್ಯಾ ಋಷಯಸ್ಸಪ್ತ ಕಶ್ಯಪಾದ್ಯಾಃ ಪ್ರತಿಷ್ಠಿತಾಃ ॥ ೩೧ ॥
ಬಹವಃ ಪಾಪಿನೋ ಜೀವಾ ದೇಶದೇಶಾಂತರಾಗತಾಃ ।
ಯದ್ವಾಯುಸ್ಪರ್ಶನಾದೇವ ಬಭೂವುರ್ಗತಕಲ್ಮಷಾಃ ॥ ೩೨ ॥
ತಸ್ಮಿನ್ನೇವಂವಿಧೇ ತೀರ್ಥೇ ವಾಯುರುತ್ಕಂಠಿತಾಶಯಃ ।
ಮಾಧವಾರಾಧನಂ ಚಕ್ರೇ ಮನೋವಾಕ್ಕಾಯಸಾಧನೈಃ ॥ ೩೩ ॥
ಇತ್ಥಂ ತದ್ಭಾವಮಾಲಕ್ಷ್ಯ ಕೃಪಾಲುರ್ಮಾಧವಃ ಪ್ರಭುಃ ।
ಆವಿರ್ಬಭೂವ ತಸ್ಯಾಗ್ರೇ ವಹನ್ರೂಪಮಲೌಕಿಕಮ್ ॥ ೩೪ ॥
ಇಂದೀವರದಲಶ್ಯಾಮಮಿಂದಿರಾಯತನಂ ಶುಭಮ್ ।
ಆಕರ್ಣನಯನಾಂಭೋಜಂ ದ್ವಿಭುಜಂ ಪೀತವಾಸಸಮ್ ॥ ೩೫ ॥

ಕಾಂಚೀಕಟಕಮಂಜೀರಮುದ್ರಿಕಾಂಗದರೋಚಿಭಿಃ ।
ಭಾಸಯನ್ನಾಶುಗಂ ಚಾಪಂ ದಧತ್ಸಾರಮಣಿಂ ಹೃದಾ ॥ ೩೬ ॥
ಜಯಂತ್ಯಾ ವೈಜಯಂತ್ಯಾ ಚ ಪರೀತಂ ಸಸ್ಮಿತಾನನಮ್ ।
ಪಾರ್ಷದಪ್ರವರೈರ್ಜುಷ್ಟಂ ಗೃಣದ್ಭಿರಭಿತಸ್ಸ್ತವೈಃ ॥ ೩೭ ॥
ದೃಷ್ಟ್ವಾ ಧ್ಯಾನಗತೋ ವಾಯುಃ ಸ್ವರೂಪಂ ತದಲೌಕಿಕಮ್ ।
ಉತ್ಥಾಯ ಸಹಸಾ ಸ್ತುತ್ವಾ ನನಾಮ ಚ ಮುಹುರ್ಮುಹುಃ ॥ ೩೮ ॥
ಮಾಧವಶ್ಚ ತಮುತ್ಥಾಪ್ಯ ಜಗಾದೇತಿ ವಚೋಽಮೃತಮ್ ।
ತುಷ್ಟೋಽಸ್ಮಿ ತಪಸಾ ತೇಽಹಮರ್ಥಯಾಶು ಮನೋಗತಮ್ ॥ ೩೯ ॥
ಇತ್ಯುಕ್ತಃ ಪ್ರಾರ್ಥಯಾಮಾಸ ಸ್ವಸ್ಥಿತಿಂ ಕ್ಷೇತ್ರನಾಯಕೇ ।
ಸ್ವಾಶ್ರಮಂ ಸಂಪ್ರವಿಷ್ಟಾನಾಮಘನಾಶಂ ಚ ದರ್ಶನಮ್ ॥ ೪೦ ॥
ತಥೋಮಿತಿ ಪ್ರತಿಶ್ರುತ್ಯ ಸ್ವಯಮಂತರ್ದಧೇ ವಿಭುಃ ।
ಧ್ಯಾಯಂಸ್ತದೇವ ತದ್ರೂಪಂ ತತ್ರ ವಾಯುರುವಾಸ ಹ ॥ ೪೧ ॥
ತಸ್ಮಾದೃಷಯ ಏತಸ್ಮಿನ್ನಾಶ್ರಮೇ ಯಾತ್ರಿಕಾ ಜನಾಃ ।
ಗತ್ವಾ ಸ್ನಾನಾದಿ ಕುರ್ವಂತಿ ತೇ ಲಭಂತೇ ನಿಜೇಪ್ಸಿತಮ್ ॥ ೪೨ ॥
ಇತ್ಯೇವಂ ವಾಯುಭಾಗೋಽಯಂ ವರ್ಣಿತಶ್ಶೌನಕಾದಯಃ ।
ವರ್ಣಯಿಷ್ಯೇ ಯದನ್ಯತ್ತಚ್ಛ್ರೂಯತಾಂ ತೀರ್ಥಗೌರವಮ್ ॥ ೪೩ ॥

॥ ಇತಿ ಅಷ್ಟಾವಿಂಶೋಽಧ್ಯಾಯಃ ॥

**ಸೂತರು ಹೇಳಿದರು—**

ಈ ರೀತಿಯಾಗಿ ಭಗೀರಥರಾಜನಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ ವಾಯುವು ಗಂಗಾದೇವಿಯನ್ನು ಕುರಿತು "ಗಂಗೆಯೇ! ನೀನು ಜಾಗ್ರತೆಯಾಗಿ ಹೋಗು. ಈ ರಾಜನ ಪಿತೃಗಳನ್ನು ಉದ್ಧರಿಸು" ಎಂದು ಹೇಳಿದನು. ॥ ೨೮ ॥ ಕೂಡಲೇ ಗಂಗೆಯು ಅತಿವೇಗದಿಂದ ಯಮುನಾ ನದಿಯೊಡಗೂಡಿ, ಭಗೀರಥನನ್ನು ಮುಂದಿಟ್ಟುಕೊಂಡು ಅಲ್ಲಿಂದ ಮುಂದೆ ಮುಂದೆ ಹರಿದು ಸಗರಾಶ್ರಮಕ್ಕೆ ಬಂದು ಸೇರಿದಳು. ॥ ೨೯ ॥ ಇದರ ನಂತರ ಆ ವಾಯುವಿನ ಆಶ್ರಮದ ಹತ್ತಿರ ಇರುವ ಗಂಗೆಯು ವಾಯುತೀರ್ಥವೆಂದು ಪ್ರಯಾಗಕ್ಷೇತ್ರದಲ್ಲಿ ಪ್ರಖ್ಯಾತವಾಯಿತು. ಇದು ಎಲ್ಲರ ಆಸೆಗಳನ್ನು ಪೂರೈಸುವುದೂ, ಮಹಾಪಾಪಗಳನ್ನು ಪರಿಹಾರ ಮಾಡತಕ್ಕದ್ದೂ ಆಗಿದೆ. ॥ ೩೦ ॥ ವರುಣಾಶ್ರಮದಿಂದ ಆರಂಭವಾಗಿ ಪ್ರಯಾಗದ ವಾಯವ್ಯಭಾಗದವರೆಗೆ ಇರುವ ಈ ಪ್ರದೇಶದಲ್ಲಿ ಕಶ್ಯಪಾದಿ ಸಪ್ತಋಷಿಗಳು ತಮ್ಮ ತಮ್ಮ ಶಿಷ್ಯರುಗಳೊಂದಿಗೆ ನೆಲಸಿದ್ದಾರೆ. ॥ ೩೧ ॥ ದೇಶದೇಶಾಂತರಗಳಿಂದ ಬಹಳ ಪಾಪ ಮಾಡಿ ಬಂದ ಜನರು ಇಲ್ಲಿನ ಗಾಳಿಯ ಸಂಪರ್ಕದಿಂದಲೇ ಎಲ್ಲ ಪಾಪಗಳಿಂದ ವಿಮುಕ್ತರಾಗುತ್ತಾರೆ. ॥ ೩೨ ॥ ಈ ವಿಧವಾಗಿರುವ ಕ್ಷೇತ್ರದಲ್ಲಿ ವಾಯುವು ತೀವ್ರವಾದ ಅಪೇಕ್ಷೆಯುಳ್ಳವನಾಗಿ ಮನಸ್ಸು, ವಾಕ್ ಮತ್ತು ಶರೀರ ಇವುಗಳಿಂದ ಶ್ರೀಮಾಧವನ ಆರಾಧನೆ ಮಾಡಿದನು. ॥ ೩೩ ॥ ಈ ರೀತಿಯಾಗಿದ್ದ ವಾಯುವಿನ ಭಕ್ತಿಭಾವವನ್ನು ತಿಳಿದ ಶ್ರೀಮಾಧವನು ತನ್ನ ಅಲೌಕಿಕರೂಪದಿಂದ ಆ ವಾಯುವಿನ ಮುಂದೆ ಪ್ರತ್ಯಕ್ಷನಾದನು.

॥ ೩೪ ॥ ಆ ಮಾಧವನು ಕನ್ನೈದಿಲೆಯ ಬಣ್ಣದಂತೆ ನೀಲವರ್ಣದಿಂದ ಕೂಡಿದ್ದನು, ಶ್ರೀಲಕ್ಷ್ಮೀದೇವಿಯ ಚಿಹ್ನೆಯಾದ ಶ್ರೀವತ್ಸವನ್ನು ಎದೆಯಲ್ಲಿ ಧರಿಸಿದ್ದನು, ಮಂಗಳಮಯನಾಗಿದ್ದನು, ಕಿವಿಗಳನ್ನು ಮುಟ್ಟುವಷ್ಟು ವಿಶಾಲವಾದ ಕಣ್ಣುಗಳನ್ನು ಹೊಂದಿದ್ದನು. ಅವನಿಗೆ ಎರಡು ಕೈಗಳಿದ್ದುವು ಮತ್ತು ಪೀತಾಂಬರವನ್ನು ಧರಿಸಿದ್ದನು. ॥ ೩೫ ॥ ನಡುಪಟ್ಟಿ, ಕಡಗಗಳು, ಮುದ್ರೆಯುಂಗುರ ಮತ್ತು ಬಾಹುಪುರಿಗಳು ಇವುಗಳಿಂದ ಶೋಭಿಸುತ್ತಿದ್ದನು. ಹೆಗಲಿನ ಮೇಲೆ ಧನುಸ್ಸನ್ನು ಹೊಂದಿದ್ದನು. ವೇಗವಾಗಿ ಚಲಿಸುವ ಬಾಣಗಳಿರುವ ಬತ್ತಳಿಕೆಯನ್ನು ಕಟ್ಟಿದ್ದನು. ಎದೆಯಲ್ಲಿ ಕೌಸ್ತುಭಮಣಿಯನ್ನು ಧರಿಸಿದ್ದನು. ॥ ೩೬ ॥ ಜಯಂತೀ ಮತ್ತು ವೈಜಯಂತೀಮಾಲೆಯನ್ನು ಧರಿಸಿದ್ದನು. ಅವನ ಮುಖವು ಮುಗುಳ್ನಗೆಯನ್ನು ಚೆಲ್ಲುತ್ತಿತ್ತು. ಸ್ತೋತ್ರಗಳನ್ನು ಗಾಯನ ಮಾಡುತ್ತಿರುವ ಉತ್ತಮ ಪರಿವಾರಜನರಿಂದ ಕೂಡಿದ್ದನು. ॥ ೩೭ ॥ ಧ್ಯಾನಮಗ್ನನಾದ ವಾಯುವು ಈ ಅಲೌಕಿಕವಾದ ಮೂರ್ತಿಯನ್ನು ನೋಡಿ ಮೇಲೆ ಎದ್ದು ಸ್ತೋತ್ರ ಮಾಡುತ್ತ ಮತ್ತೆ ಮತ್ತೆ ನಮಸ್ಕಾರ ಮಾಡಿದನು. ॥ ೩೮ ॥ ಶ್ರೀಮಾಧವನು ಅವನನ್ನು ಎಬ್ಬಿಸಿ ಅಮೃತದಿಂದ ತುಂಬಿರುವ ಈ ಮಾತುಗಳನ್ನು ಹೇಳಿದನು. ''ನಾನು ನಿನ್ನ ತಪಸ್ಸಿನಿಂದ ತುಷ್ಟನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವುದನ್ನು ಕೇಳು.'' ಎಂದನು. ॥ ೩೯ ॥ ಹೀಗೆ ಹೇಳಿಸಿಕೊಳ್ಳಲ್ಪಟ್ಟ ವಾಯುವು ಶ್ರೀಮಾಧವನನ್ನು ತಾನು ಈ ಕ್ಷೇತ್ರದಲ್ಲಿ ವಾಸಮಾಡಿಕೊಂಡಿರಲು ಅನುಮತಿಯನ್ನು ಕೊಡೆಂದು ಬೇಡಿದನು ಮತ್ತು ತನ್ನ ಆಶ್ರಮಕ್ಕೆ ಸೇವಾರ್ಥವಾಗಿ ಬಂದವರ ಪಾಪಗಳನ್ನು ಪರಿಹರಿಸಿ ಅವರಿಗೆ ದರ್ಶನ ಕೊಡಬೇಕೆಂದು ಪ್ರಾರ್ಥಿಸಿದನು. ॥ ೪೦ ॥ ''ಆಗಲಿ'' ಎಂದು ಹೇಳಿ ಶ್ರೀಮಾಧವನು ಅಂತರ್ಧಾನನಾದನು. ಮಾಧವನ ಅದೇ ರೂಪವನ್ನು ಧ್ಯಾನ ಮಾಡಿಕೊಂಡು ಶ್ರೀವಾಯುವು ಅಲ್ಲಿ ಉಳಿದುಕೊಂಡನು. ॥ ೪೧ ॥ ಆದ್ದರಿಂದಲೇ, ಋಷಿಗಳಿರಾ! ಈ ಸ್ಥಳಕ್ಕೆ ಬಂದ ಯಾತ್ರಿಕರು ಸ್ನಾನಾದಿಗಳಿಂದ ಮಾಧವನನ್ನು ಪ್ರಸನ್ನೀಕರಿಸಿ ತಮ್ಮ ಅಭೀಷ್ಟಗಳನ್ನು ಹೊಂದುವರು. ॥ ೪೨ ॥ ಹೇ ಶೌನಕಾದಿಗಳೇ! ಈ ರೀತಿಯಾಗಿ ಈ ಪ್ರಯಾಗದ ವಾಯವ್ಯ ಭಾಗವನ್ನು ಹೇಳಿಯಾಯಿತು. ಇನ್ನು ಗಹನವಾಗಿರತಕ್ಕ ಪ್ರಯಾಗದ ಅನ್ಯಭಾಗಗಳನ್ನೂ ಹೇಳುತ್ತೇನೆ, ಕೇಳಿರಿ, ಹೀಗೆಂದು ಸೂತರು ಹೇಳಿದರು. ॥ ೪೩ ॥

॥ ಇಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನತ್ರಿಂಶೋಽಧ್ಯಾಯಃ ॥ ೨೯ ॥

ಸೂತ ಉವಾಚ—

ಅಥ ಕೌಬೇರದಿಗ್ಭಾಗೇ ಕುಬೇರಕ್ಷೇತ್ರಮುತ್ತಮಮ್ ।
ಯದಾಸಾದ್ಯ ಕುಬೇರೋಽಪಿ ಸ್ವೇಷ್ಟಮಾಪ ಚ ಮಾಧವಾತ್ ॥ ೧ ॥
ಭ್ರಾತೃಸಂಕಟನಿರ್ಮುಕ್ತಸ್ಸಂಪ್ರಾಪ್ಯ ಚ ಧನೇಶತಾಮ್ ।
ಕ್ಷೇತ್ರೇಽಸ್ಮಿನ್ನಧ್ಯುವಾಸಾದ್ಯ ಆಶ್ರಮಂ ಮುನಿಮಂಡಿತಮ್ ॥ ೨ ॥

ಸೂತರು ಹೇಳಿದರು—

ಉತ್ತರ ದಿಕ್ಕಿನಲ್ಲಿ ಕುಬೇರನ ಕ್ಷೇತ್ರವಿದೆ. ಇಲ್ಲಿಗೆ ಬಂದು ಕುಬೇರನು ಶ್ರೀಮಾಧವನ ದಶೆಯಿಂದ ತನ್ನ ಇಷ್ಟಸಿದ್ಧಿಯನ್ನು ಪಡೆದನು. ॥ ೧ ॥ ಕುಬೇರನು ತನ್ನ ತಮ್ಮನಾದ ರಾವಣನಿಂದ ಉಂಟಾದ ಸಂಕಟದಿಂದ ಬಿಡುಗಡೆ ಹೊಂದಿ "ಧನಪತಿತ್ವ" ವನ್ನು ಹೊಂದಿ ಇಲ್ಲಿ ವಾಸಮಾಡಿದನು. ಈ ಕ್ಷೇತ್ರವು ಋಷಿಗಳಿಂದ ಅಲಂಕೃತವಾಗಿದೆ. ॥ ೨ ॥

ಋಷಯ ಊಚುಃ—

ಕಿಮರ್ಥಂ ಸಂಕಟಂ ಪ್ರಾಪ್ತಂ ಕಥಂ ಮುಕ್ತೋ ಬಭೂವ ಹ ।
ಏತದಾಚಕ್ಷ್ವ ನಃ ಸೂತ ಚರಿತಂ ನರಧರ್ಮಣಃ ॥ ೩ ॥

ಋಷಿಗಳು ಹೇಳಿದರು—

ಏತಕ್ಕಾಗಿ ಕುಬೇರನಿಗೆ ಸಂಕಟ ಬಂದಿತು; ಆದರಿಂದ ಹೇಗೆ ಪಾರಾದನು? ನರವಾಹನ-ನಾದ ಕುಬೇರನ ಈ ವೃತ್ತಾಂತವನ್ನು, ಸೂತರೇ ! ದಯಮಾಡಿ ಹೇಳಿರಿ. ॥೩॥

ಸೂತ ಉವಾಚ—

ಋಷಯಸ್ಸಾಧು ಪೃಷ್ಟೋಽಹಂ ಕಥಾಂ ಪರಮಪಾವನೀಮ್ ।
ಯಸ್ಯಾಃ ಶ್ರವಣಮಾತ್ರೇಣ ಸಂಬಾಧಾನ್ಮುಚ್ಯತೇ ನರಃ ॥ ೪ ॥
ಪುರಾ ಕೃತಯುಗೇ ವಿಪ್ರಃ ಪ್ರಜಾಪತಿಸಮಪ್ರಭಃ ।
ಪುಲಸ್ತ್ಯೋ ನಾಮ ವಿಪ್ರರ್ಷಿರಾಸೀತ್ಸರ್ವನಮಸ್ಕೃತಃ ॥ ೫ ॥
ಶ್ರುತಿಸ್ಮೃತಿಸದಾಚಾರವಿಹಿತಾಚರಣೇ ರತಃ ।
ಯೋಗೇ ಸಾಂಖ್ಯೇ ಚ ನಿಷ್ಣಾತಶ್ಶೀತೋಷ್ಣಾಸಾರಸಾಧ್ಯಮೀ ॥ ೬ ॥
ಭಕ್ತ್ಯಾ ನಿರ್ಮಥಿತಾಶೇಷಕಷಾಯಧಿಷಣಶ್ಶಮೀ ।
ಪ್ರತ್ಯಾಹೃತೇಂದ್ರಿಯಗ್ರಾಮೋ ನೈರ್ಗುಣ್ಯೇ ಪರಿನಿಷ್ಠಿತಃ ॥ ೭ ॥
ಸರ್ವಭೂತಸುಹೃನ್ಮಾನ್ಯೋ ಮಹಾಕಾರುಣಿಕಃ ಕವಿಃ ।
ಹರಿಭಾವನಯಾಧ್ವಸ್ತಾಖಿಲಕಾಮಜಟೋ ಜಟೀ ॥ ೮ ॥
ಮೇರೌ ತಪಸ್ಯತಸ್ತಸ್ಯ ಸ್ವಾಧ್ಯಾಯನಿರತಾತ್ಮನಃ ।
ಸಮಾಯಮ್ಯಾಶ್ರಮಪದಂ ದೇವ್ಯೋ ವಿಘ್ನೇ ಮನೋ ದಧುಃ ॥ ೯ ॥

ತಸ್ಮಿನ್ನೇವ ವನೋದ್ದೇಶೇ ವಸಂತಗುಣಭೂಷಿತೇ ।
ಸುವೇಷಾ ನನೃತುಃ ಸ್ನಿಗ್ಧಂ ಗಾಯಂತ್ಯಃ ಸ್ವರಮಂಡಲಮ್ ॥ ೧೦ ॥
ಏವಮನ್ವಹಮಾಚೇರುರ್ಮುನಿಮುದ್ದಿಶ್ಯ ತತ್ಪುರಃ ।
ಹಾವಭಾವಕಟಾಕ್ಷೈಶ್ಚ ಸ್ತನಪ್ರಥಿತದರ್ಶನೈಃ ॥ ೧೧ ॥
ವೀಣಾವೇಣುಮೃದಂಗಾದಿವಾದ್ಯನೈಪುಣ್ಯಶಾಲಿಭಿಃ ।
ಮಲಯಾನಿಲಗಂಧರ್ವಕಾಮಸೈನ್ಯೈಸ್ಸಮಾವೃತಾಃ ॥ ೧೨ ॥
ತಥಾಪಿ ನಿರ್ವಿಕಾರೇಽಸ್ಮಿನ್ಮಲಯಾನಿಲಸನ್ನಿಭೇ ।
ಮೋಘತಾಂ ಪ್ರಾಪ್ಯ ಸರ್ವಾಸ್ತಾ ನಿರ್ವೃತಾಶ್ಚಾಪಸಾಧ್ವಸಾತ್ ॥ ೧೩ ॥
ತೇಜಸಾ ದುಸ್ಸಹೇನಾಸ್ಯ ಪ್ರಜಜ್ವಾಲ ಧರಾಧರಃ ।
ಗತವೈರಾಣಿ ಭೂತಾನಿ ಸಮಜಾಯಂತ ತದ್ವನೇ ॥ ೧೪ ॥
ತಸ್ಯ ಪುತ್ರೋಽತಿತೇಜಸ್ವೀ ವಿಶ್ರವಾ ಮುನಿಪುಂಗವಃ ।
ತಸ್ಯ ವೈಶ್ರವಣಃ ಪುತ್ರೋ ಬಭೂವಾನವಮಃ ಪಿತುಃ ॥ ೧೫ ॥
ಚರಿಷ್ಯೇ ನಿಯತೋ ಧರ್ಮಂ ಧರ್ಮೋ ಹಿ ಪರಮಾ ಗತಿಃ ।
ಇತಿ ನಿಶ್ಚಿತ್ಯ ಮನಸಾ ತಪೋವನಮಗಾತ್ತದಾ ॥ ೧೬ ॥
ಜಲಶಾಯೀ ಮಾರುತಾದೋ ನಿರಾಹಾರಸ್ತಪಸ್ತಪನ್ ।
ಅವರ್ಧತಾಹುತಿಹುತೋ ಮಹಾತೇಜಾ ಯಥಾನಲಃ ॥ ೧೭ ॥
ಏವಂ ವರ್ಷಸಹಸ್ರಾಣಿ ಜಗ್ಮುಸ್ತಸ್ಯೈಕವರ್ಷವತ್ ।
ತದಾ ತದಾಶ್ರಮಂ ಬ್ರಹ್ಮಾ ಸಸುರೋಽಭ್ಯೇತ್ಯ ತಮಬ್ರವೀತ್ ॥ ೧೮ ॥

**ಸೂತರು ಹೇಳಿದರು—**

ಎಲೈ ಶೌನಕಾದಿ ಋಷಿಗಳಿರಾ ! ನನ್ನನ್ನು ಚೆನ್ನಾಗಿ ಪ್ರಶ್ನೆ ಮಾಡಿದಿರಿ. ಯಾವುದನ್ನು ಕೇವಲ ಕೇಳುವುದರಿಂದಲೇ ಮನುಷ್ಯನು ಸಕಲ ಬಾಧೆಗಳಿಂದ ಮುಕ್ತರಾಗುತ್ತಾನೋ ಅಂತಹ ಕಥೆಯನ್ನು ಹೇಳಲು ಪ್ರಶ್ನಿಸಿದ್ದೀರಿ. ॥ ೪ ॥ ಹಿಂದೆ ಕೃತಯುಗದಲ್ಲಿ ಪುಲಸ್ತ್ಯನೆಂಬ ಬ್ರಾಹ್ಮಣೋತ್ತಮ ನಿದ್ದನು. ಬ್ರಹ್ಮದೇವರಂತೆ ವರ್ಚಸ್ಸುಳ್ಳ ಇವನನ್ನು ಎಲ್ಲರೂ ನಮಸ್ಕರಿಸುತ್ತಿದ್ದರು. ॥ ೫ ॥ ಇವನು ಶ್ರುತಿಗಳು, ಸ್ಮೃತಿಗಳು ಇವುಗಳಿಗೆ ಒಪ್ಪುವಂತೆ ಸದಾಚಾರಗಳ ಆಚರಣೆಗಳಲ್ಲಿ ಆಸಕ್ತನಾಗಿದ್ದನು. ಯೋಗ ಶಾಸ್ತ್ರದಲ್ಲಿಯೂ ಸಾಂಖ್ಯಯೋಗದಲ್ಲಿಯೂ ನಿಪುಣನಾಗಿದ್ದು, ಛಳಿ, ಬಿಸಿಲು, ಮಳೆಗಳನ್ನು ಸಹಿಸುತ್ತಿದ್ದನು. ಇಂದ್ರಿಯನಿಗ್ರಹವುಳ್ಳವನಾಗಿದ್ದನು. ॥ ೬ ॥ ಇವನು ಪರಮಾತ್ಮನಲ್ಲಿಯೇ ನಿಷ್ಠ ವಾದ ಬುದ್ಧಿಯುಳ್ಳವನಾಗಿದ್ದು ಆವನಲ್ಲಿನ ಭಕ್ತಿಯಿಂದ ಎಲ್ಲಾ ಪಾಪಗಳನ್ನು ಪರಿಹಾರ ಮಾಡಿ ಕೊಂಡಿದ್ದನು. ಇಂದ್ರಿಯಗಳನ್ನೆಲ್ಲಾ ಗೆದ್ದು ತನ್ನ ವಶದಲ್ಲಿಟ್ಟುಕೊಂಡು ಸತ್ವರಜಸ್ತಮಗುಣಗಳಿಲ್ಲದ ಪರಮಾತ್ಮನಲ್ಲಿಯೇ ಮನಸುಳ್ಳವನಾಗಿದ್ದನು, ಹಾಗೂ ಮೂರು ಗುಣಗಳನ್ನು ಮೀರಿದ ನಿರ್ಗುಣಾ ವಸ್ಥೆಯನ್ನು ತಲುಪಿದ್ದನು. ॥ ೭ ॥ ತುಂಬಾ ಕರುಣೆಯುಳ್ಳವನಾಗಿದ್ದು ಎಲ್ಲ ಪ್ರಾಣಿಗಳನ್ನು ಸಹೃದಯತೆಯಿಂದ ನೋಡುತ್ತಿದ್ದನು, ಮತ್ತು ಎಲ್ಲರಿಂದಲೂ ಗೌರವಾರ್ಹನಾಗಿದ್ದನು.

ಶ್ರೀ ವಿಷ್ಣುವಿನಲ್ಲಿಯೇ ರತವಾದ ಭಾವನೆಯಿಂದ ನಾಶವಾದ ಸಕಲ ಕಾಮನೆಗಳುಳ್ಳವನಾಗಿದ್ದನು. ಜಟಾಧಾರಿಯಾಗಿದ್ದನು. ॥ ೮ ॥ ಈ ವಿಪ್ರೋತ್ತಮನು ಮೇರು ಪರ್ವತದಲ್ಲಿದ್ದು ಅಧ್ಯಯನ ಅಧ್ಯಾಪನದಲ್ಲಿ ನಿರತನಾಗಿದ್ದನು. ಈ ರೀತಿಯಾದ ತಪಸ್ಸಿನಲ್ಲೇ ಆಸಕ್ತನಾಗಿರಲು ದೇವಲೋಕದ ಅಪ್ಸರಸ್ತ್ರೀಯರು ಇವನ ಕಾರ್ಯದಲ್ಲಿ ವಿಘ್ನವನ್ನುಂಟು ಮಾಡಲು ನಿರ್ಧಾರಮಾಡಿದರು. ॥ ೯ ॥ ವಸಂತ ಋತುವಿನ ಎಲ್ಲ ಗುಣಗಳೂ ಇರುವ ಸಮಯದಲ್ಲಿ ಒಳ್ಳೆಯ ವೇಷಭೂಷಣಗಳನ್ನು ಧರಿಸಿ, ಆ ಮೇರುಪರ್ವತದಲ್ಲಿ ಇವನಿದ್ದ ಪ್ರದೇಶಕ್ಕೆ ಬಂದು ಇವನ ಸನಿಹದಲ್ಲಿ ಸಪ್ತಸ್ವರ ರಂಜಿತವಾಗಿ ಗಾಯನ ನರ್ತನಾದಿಗಳನ್ನು ಮಾಡಿದರು. ॥ ೧೦ ॥ ಈ ಋಷಿಯ ಸಮ್ಮುಖದಲ್ಲಿ ಇದೇ ರೀತಿಯಾಗಿ ನಿತ್ಯವೂ ಮಾಡಿದರು. ತಮ್ಮ ಸ್ತನಾದಿ ಪ್ರದರ್ಶನಗಳಿಂದ ಕೂಡಿದ ಹಾವಭಾವಗಳಿಂದಲೂ ಕಡೆಗಣ್ಣ ನೋಟಗಳಿಂದಲೂ ಋಷಿಯನ್ನು ಪ್ರಚೋದಿಸಲು ಯತ್ನಿಸಿದರು. ॥ ೧೧ ॥ ಇವರು ವೀಣಾ, ಕೊಳಲು, ಮೃದಂಗ ವಾದ್ಯಗಳಲ್ಲಿ ನಿಪುಣರಾದವರಿಂದಲೂ ಮಲಯಮಾರುತ ಹಾಗೂ ಗಂಧರ್ವರೆಂಬ ಮನ್ಮಥನ ಸೈನ್ಯದಿಂದಲೂ ಕೂಡಿದವರಾಗಿದ್ದರು. ॥ ೧೨ ॥ ಹೀಗೆ ಅವರು ವಿಜೃಂಭಿಸಿದರೂ ಆ ಬ್ರಾಹ್ಮಣೋತ್ತಮನು ಪ್ರಳಯಾಗ್ನಿಯಂತೆ ದುಃಸ್ಸಹನಾಗಿಯೇ ಇದ್ದನು. ಅವರೆಲ್ಲರೂ ಇವನ ತೇಜಸ್ಸನ್ನು ತಾಳಲಾರದೆ ಇವನ ಶಾಪಕ್ಕೆ ಭಯಗೊಂಡು ಭ್ರಷ್ಟ ಪ್ರಯತ್ನ ಶೀಲರಾಗಿ ಅಲ್ಲಿಂದ ಹೊರಟುಹೋದರು. ॥ ೧೩ ॥ ಸಹಿಸಲಾಗದ ಇವನ ತೇಜಸ್ಸಿನಿಂದ ಭೂಮಿಯೇ ಪ್ರಜ್ವಲಿಸಿತು. ಅಲ್ಲಿನ ಕಾಡು ಮೃಗಗಳೆಲ್ಲವೂ ಕೂಡ ಪರಸ್ಪರ ವೈರವನ್ನು ಬಿಟ್ಟು ಸ್ನೇಹಭಾವದಿಂದ ನಡೆದುಕೊಂಡವು. ॥ ೧೪ ॥ ವಿಶ್ರವಸನೆಂಬುವನು ಇವನ ಮಗನಾಗಿದ್ದು ತಂದೆಯಂತೆಯೇ ತೇಜಸ್ವಿಯಾದ ಮುನಿ ಶ್ರೇಷ್ಠನಾಗಿದ್ದನು. ಇವನ ಮಗನಾದ ವೈಶ್ರವಣನು ತಂದೆಗೆ ಸಮಾನನಾಗಿದ್ದನು. ॥ ೧೫ ॥ ''ಧರ್ಮದಿಂದಲೇ ನಮ್ಮ ಅಂತಿಮಗತಿಯು ಪ್ರಾಪ್ತವಾಗುವುದು. ಆದ್ದರಿಂದ ವೇದಶಾಸ್ತ್ರವಿಹಿತ ಧರ್ಮಗಳನ್ನು ಆಚರಿಸುತ್ತೇನೆ'' ಎಂದು ನಿಶ್ಚಯಿಸಿ, ತಪಸ್ಸಿಗಾಗಿ ವನಕ್ಕೆ ಬಂದನು. ॥ ೧೬ ॥ ಅಲ್ಲಿ ನೀರಿನಲ್ಲಿ ಮಲಗುವುದು, ಕೇವಲ ಗಾಳಿ ಸೇವನೆ ಮಾಡಿಕೊಂಡಿರುವುದು ಈ ರೀತಿಯಾಗಿ ತಪಸ್ಸು ಮಾಡುತ್ತಾ ಆಹುತಿಗಳಿಂದ ಹೋಮಿಸಲ್ಪಟ್ಟ ಮಹಾತೇಜಸ್ವಿಯಾದ ಬೆಂಕಿಯಂತೆ ಇದ್ದನು. ॥ ೧೭ ॥ ಹೀಗೆ ಅವನ ಸಹಸ್ರವರ್ಷಗಳ ತಪಸ್ಸು ಒಂದು ವರ್ಷದಂತೆ ಕಳೆಯಿತು. ಆಗ ದೇವತೆಗಳಿಂದ ಕೂಡಿಕೊಂಡು ಶ್ರೀ ಚತುರ್ಮುಖ ಬ್ರಹ್ಮದೇವರು ಇವನ ಆಶ್ರಮಕ್ಕೆ ಆಗಮಿಸಿ ಮಾತನಾಡಿದರು. ॥ ೧೮ ॥

ಬ್ರಹ್ಮೋವಾಚ—

ಪರಿತುಷ್ಟೋऽಸ್ಮಿ ತೇ ವತ್ಸ ಕರ್ಮಣಾನೇನ ಸುವ್ರತ ।
ವರಂ ವರಯ ಭದ್ರಂ ತೇ ವರಾರ್ಹಸ್ತ್ವಂ ಹಿ ನಿಶ್ಚಿತಮ್ ॥ ೧೯ ॥
ಅಥಾಬ್ರವೀದ್ವೈಶ್ರವಣಃ ಪಿತಾಮಹಮುಪಸ್ಥಿತಮ್ ।
ಭಗವನ್ಲೋಕಪಾಲತ್ವಮಿಚ್ಛೇಯಂ ವಿತ್ತರಕ್ಷಣಮ್ ॥ ೨೦ ॥
ಬ್ರಹ್ಮಾಬ್ರವೀತ್ತತೋ ಬಾಢಂ ಪರಿತುಷ್ಟೇನ ಚೇತಸಾ ।
ಇಂದ್ರಾದೀನಾಂ ಚತುರ್ಥಸ್ತ್ವಂ ಧನೇಶಶ್ಚ ಭವಾನಘ ॥ ೨೧ ॥
ಏತಚ್ಚ ಪುಷ್ಪಕಂ ನಾಮ ವಿಮಾನಂ ಸೂರ್ಯಸನ್ನಿಭಮ್ ।
ಪ್ರತಿಗೃಹ್ಣೀಷ್ವ ಯಾನಾರ್ಥಂ ತ್ರಿದಶೈಸ್ಸಮತಾಂ ವ್ರಜ ॥ ೨೨ ॥

ಬ್ರಹ್ಮದೇವರು ಹೇಳಿದರು—

''ವತ್ಸ ! ನಿನ್ನ ತಪಸ್ಸಾಧನೆಗಳಿಂದ ನಾನು ತೃಪ್ತನಾದೆನು. ನೀನು ವರವನ್ನು ಪಡೆಯಲು ಅರ್ಹನಿದ್ದಿ. ಬೇಕಾದ ವರಗಳನ್ನು ಕೇಳಿಕೋ ನಿನಗೆ ಮಂಗಳವಾಗಲಿ'' ಎಂದು ಹೇಳಿದರು. ॥ ೧೯ ॥ ಅನಂತರ ವೈಶ್ರವಣನು ಎದುರಿಗೆ ನಿಂತಿರತಕ್ಕ ಬ್ರಹ್ಮದೇವರನ್ನು ಕುರಿತು ಹೇಳಿದನು. ''ಎಲೈ ಭಗವನ್, ನಾನು ಒಂದು ದಿಕ್ಕಿನ ಲೋಕಪಾಲತ್ವವನ್ನು ಬಯಸುತ್ತೇನೆ; ಜೊತೆಗೆ ಹಣ ರಕ್ಷಣೆಮಾಡುವ ವಿತ್ತಾಧೀಶತ್ವವನ್ನೂ'' ಎಂದನು. ॥ ೨೦ ॥ ಆಗ ಸಂತುಷ್ಟಾಂತರಂಗತನಾದ ಬ್ರಹ್ಮನು ''ಹಾಗೆಯೇ ಆಗಲಿ, ಇಂದ್ರಾದಿಗಳಿಗೆ ನೀನು ನಾಲ್ಕನೆಯವನೂ ದಿಕ್ಪಾಲಕನೂ ಮತ್ತು ಧನೇಶನೂ ಆಗು'' ಎಂದು ಹೇಳಿದನು. ॥ ೨೧ ॥ ''ಪುಷ್ಪಕ'' ವೆನ್ನುವ ಈ ವಿಮಾನವು ಸೂರ್ಯನಂತೆ ಪ್ರಕಾಶಮಯವಾದುದು. ನಿನ್ನ ಸಂಚಾರಕ್ಕಾಗಿ ಇದನ್ನು ಇಟ್ಟುಕೋ ಎಂದು ಅದನ್ನು ವೈಶ್ರವಣನಿಗೆ ಕೊಟ್ಟು ದೇವತೆಗಳೊಡನೆ ಅಂತರ್ಧಾನವಾದರು. ॥ ೨೨ ॥

ಸೂತ ಉವಾಚ—

**ಗತೇಷು ಬ್ರಹ್ಮಪೂರ್ವೇಷು ದೇವೇಷ್ವಥ ನಭಃ ಸ್ಥಲಮ್ ।**
**ಧನೇಶಃ ಪ್ರಾಹ ಪಿತರಂ ಪ್ರಣತೋ ವಿನಯಾದ್ವಚಃ ॥ ೨೩ ॥**
**ಭಗವನ್ ಲಬ್ಧವಾನಸ್ಮಿ ವರೌ ಕಮಲಯೋನಿತಃ ।**
**ನಿವಾಸಂ ತು ನ ಮೇ ದೇವಃ ವಿದಧೇ ಸ ಪ್ರಜಾಪತಿಃ ॥ ೨೪ ॥**
**ತನ್ಮೇ ವದ ಸುನಿಶ್ಚಿತ್ಯ ಸರ್ವೋಪದ್ರವನಾಶನಮ್ ।**
**ಸ್ಥಾನೇ ತತ್ರ ವಸಿಷ್ಯಾಮಿ ಭುಂಜಾನಃ ಕರ್ಮಣಃ ಫಲಮ್ ॥ ೨೫ ॥**
**ಏವಮುಕ್ತಸ್ತು ಪುತ್ರೇಣ ವಿಶ್ರವಾ ಮುನಿಪುಂಗವಃ ।**
**ವಿಚಾರ್ಯ ನಿರ್ಭಯಂ ಸ್ಥಾನಂ ಸುತಂ ವಚನಮಬ್ರವೀತ್ ॥ ೨೬ ॥**

ಸೂತರು ಹೇಳಿದರು—

ಬ್ರಹ್ಮದೇವರು ಮತ್ತು ದೇವತೆಗಳು ಅಂತರಿಕ್ಷಕ್ಕೆ ಪ್ರಯಾಣಮಾಡುತ್ತಿರಲಾಗಿ, ಇತ್ತ ವೈಶ್ರವಣನು ತನ್ನ ತಂದೆಯವರಾದ ವಿಶ್ರವಸ ಮುನಿಗಳಿಗೆ ವಿನಯದಿಂದ ನಮಸ್ಕಾರ ಮಾಡಿ ''ಭಗವನ್, ನಾನು ಶ್ರೀಬ್ರಹ್ಮದೇವರಿಂದ ಎರಡು ವರಗಳನ್ನು ಪಡೆದಿದ್ದೇನೆ, ಆದರೆ ಬ್ರಹ್ಮನು ನನಗೆ ವಾಸಮಾಡಲು ಜಾಗವನ್ನು ಹೇಳಿಲ್ಲ. ಆದ್ದರಿಂದ ತಾವು ಚೆನ್ನಾಗಿ ಯೋಚಿಸಿ ಯಾವ ವಿಧವಾದ ತೊಂದರೆಗಳೂ ಇಲ್ಲದ ಸ್ಥಾನವನ್ನು ನನಗೆ ಹೇಳಿರಿ. ಅಲ್ಲಿ ನಾನು ಇದ್ದುಕೊಂಡು ನನ್ನ ಕರ್ಮಗಳ ಫಲವನ್ನು ಅನುಭವ ಮಾಡುತ್ತೇನೆ ಎಂದನು. ॥ ೨೩-೨೫ ॥ ಈ ಮಾತನ್ನು ಕೇಳಿದ ವಿಶ್ರವಸ ಮುನಿಯು ವಿಚಾರಮಾಡಿ ನಿರ್ಭಯವಾದ ಸ್ಥಳವನ್ನು ಸೂಚಿಸುತ್ತಾ ಹೀಗೆ ಹೇಳಿದನು. ॥ ೨೬ ॥

ವಿಶ್ರವಾ ಉವಾಚ—

**ಲಂಕಾ ನಾಮ ಪುರೀ ರಮ್ಯಾ ನಿರ್ಮಿತಾ ವಿಶ್ವಕರ್ಮಣಾ ।**
**ರಾಕ್ಷಸಾನಾಂ ನಿವಾಸಾರ್ಥಂ ಯಥೇಂದ್ರಸ್ಯಾಮರಾವತೀ ॥ ೨೭ ॥**
**ರಮಣೀಯತಮಾ ಸಾ ಹಿ ವಜ್ರವೈಡೂರ್ಯತೋರಣಾ ।**
**ರಸಾತಲಗತೈಸ್ತ್ಯಕ್ತಾ ರಕ್ಷೋಭಿರ್ವಿಷ್ಣುನಾರ್ದಿತೈಃ ॥ ೨೮ ॥**

ತತ್ರ ತ್ವಂ ಪುತ್ರ ನಿವಸ ಸರ್ವಬಾಧಾವಿವರ್ಜಿತೇ ।
ವಿಮಾನ ವರಮಾರುಹ್ಯ ವ್ರಜಾಶು ಸ್ವಸ್ತಿ ತೇಽಸ್ತು ಹಿ ॥ ೨೯ ॥

**ವಿಶ್ರವಸನು ಹೇಳಿದನು—**

ವಿಶ್ವಕರ್ಮನಿಂದ ನಿರ್ಮಿತವಾದ ಲಂಕಾ ಎಂಬ ನಗರಿಯಿದೆ. ಇದು ಇಂದ್ರನ ಅಮರಾವತಿಗೆ ಸಮನಾದುದು. ಇದು ರಾಕ್ಷಸರ ವಾಸಕ್ಕೋಸ್ಕರ ನಿರ್ಮಾಣವಾಯಿತು. ॥ ೨೭ ॥ ಇದು ಅತ್ಯಂತ ರಮಣೀಯವಾದುದು. ವಜ್ರ ವೈಡೂರ್ಯಾದಿಗಳಿಂದ ಮಾಡಿದ ತೋರಣ ಗಳಿಂದ ಸಜ್ಜಾಗಿದೆ. ವಿಷ್ಣುವಿನಿಂದ ಮರ್ದನ ಮಾಡಲ್ಪಟ್ಟ ರಾಕ್ಷಸರು ಇದನ್ನು ಬಿಟ್ಟು ಪಾತಾಲಕ್ಕೆ ಹೋಗಿದ್ದಾರೆ. ಪುಷ್ಪಕ ವಿಮಾನವನ್ನು ಹತ್ತಿಕೊಂಡು ಜಾಗ್ರತೆಯಾಗಿ ಅಲ್ಲಿಗೆ ಹೋಗಿ ಅದನ್ನು ನಿನ್ನ ಆವಾಸವನ್ನಾಗಿ ಮಾಡಿಕೋ. ನಿನಗೆ ಮಂಗಳವಾಗಲಿ. ॥ ೨೮-೨೯ ॥

**ಸೂತ ಉವಾಚ—**

ಪ್ರಿಯಂ ವಚ ಇತಿ ಶ್ರುತ್ವಾ ತಥೇತ್ಯುಕ್ತ್ವಾ ಪಿತುಃ ಪದಮ್ ।
ನತ್ವಾ ಪುಷ್ಪಕಮಾರುಹ್ಯ ಲಂಕಾಮಾಶು ಜಗಾಮ ಹ ॥ ೩೦ ॥
ಸ ತಸ್ಯಾಂ ಸ್ವಾಂತಹಾರಿಣ್ಯಾಂ ಹಾರಿಣ್ಯಾ ರಾಮಯಾ ಸಹ ।
ಉವಾಸ ಬಹುಕಾಲಂ ವೈ ಭುಂಜನ್ಭೋಗಾನನೇಕಧಾ ॥ ೩೧ ॥

॥ ಇತಿ ಏಕೋನತ್ರಿಂಶೋಽಧ್ಯಾಯಃ ॥

**ಸೂತರು ಹೇಳಿದರು—**

ವೈಶ್ರವಣನು ಪ್ರಿಯವಾದ ಈ ಮಾತನ್ನು ಕೇಳಿ ''ಹಾಗೆಯೇ ಆಗಲಿ'' ಎಂದು ಉತ್ತರಿಸಿ ತಂದೆಯ ಕಾಲುಗಳಿಗೆ ಎರಗಿ ಪುಷ್ಪಕವನ್ನು ಹತ್ತಿಕೊಂಡು ಬೇಗನೆ ಲಂಕೆಗೆ ಬಂದನು. ॥ ೩೦ ॥ ಅಲ್ಲಿ ತನ್ನ ಮನಸ್ಸಿಗೆ ಆಪ್ಯಾಯಮಾನವಾದ ಅನೇಕ ಭೋಗಭಾಗ್ಯಗಳನ್ನು ಅನುಭವಿಸುತ್ತಾ ಮನೋಹರ ಸ್ತ್ರೀಯರಿಂದ ಕೂಡಿಕೊಂಡು ಅನೇಕ ಕಾಲಗಳವರೆಗೆ ವಾಸಮಾಡಿದನು. ॥ ೩೧ ॥

॥ ಇಪ್ಪತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಿಂಶೋಽಧ್ಯಾಯಃ ॥ ೩೦ ॥

ಸೂತ ಉವಾಚ—

ಚತುಸ್ಸನರುಷಾ ಶಪ್ತೌ ವೈಕುಂಠನಿಲಯಾವುಭೌ ।
ಭಗವದ್ದ್ವಾರಪೌ ಪೂರ್ವೇ ಕಾಶ್ಯಪೇಯೌ ಬಭೂವತುಃ ॥ ೧ ॥
ಹಿರಣ್ಯಕಶಿಪುರ್ಜ್ಯೇಷ್ಠೋ ಹಿರಣ್ಯಾಕ್ಷಸ್ತಥಾನುಜಃ ।
ಬಲವೀರ್ಯಮದೋನ್ನದ್ಧೌ ದೇವತಾದಿಭಯಾವಹೌ ॥ ೨ ॥
ಪೌತ್ರೇಣೋದ್ಧರತಾಂ ಪೂರ್ವಂ ರಸಾತಲಗತಾಮಹೀಮ್ ।
ಹಿರಣ್ಯಾಕ್ಷೋ ಹತೋ ಯುದ್ಧೇ ಹರಿಣಾ ಕ್ರೋಡಮೂರ್ತಿನಾ ॥ ೩ ॥
ಭಕ್ತಸಂಕಟನಾಶಾಯ ನೃಹರಿತ್ವಮವಾಪ್ಯ ಚ ।
ನಖೈರ್ವಿದಾರಯಾಮಾಸ ಹಿರಣ್ಯಕಶಿಪೋರುರಃ ॥ ೪ ॥
ತತಸ್ತೌ ಪುನರುತ್ಪನ್ನೌ ಕುಂಭಶ್ರವಣರಾವಣೌ ।
ಲಂಕಾಧಿಪೌ ವನಂ ಗತ್ವಾ ತೇಪಾತೇ ದಾರುಣಂ ತಪಃ ॥ ೫ ॥
ಮನುಷ್ಯಾನ್ಯಭಯಾಭಾವಂ ತಪಸ್ತೋಷಿತವೇಧಸಃ ।
ಸಂಪ್ರಾಪ್ಯ ದಂಶಿತೌ ದೇವೈರ್ಯುಯುಧಾತೇಽತಿದಾರುಣೌ ॥ ೬ ॥
ಇಂದ್ರಾದ್ಯಾ ಲೋಕಪಾಲಾಶ್ಚ ಸಾಕಂ ಕಮಲಯೋನಿನಾ ।
ತಯೋಶ್ಛಂದಾನುವರ್ತಿತ್ವಮಾಚೇರುರ್ಜಾತಸಾಧ್ವಸಾಃ ॥ ೭ ॥
ತದಾ ವೈಶ್ರವಣೇನಾಪಿ ಕಲಹಸ್ಸಮಜಾಯತ ।
ಸರ್ವಸ್ವಂ ಚ ಹೃತಂ ತಸ್ಯ ದೇವಯಾನಂ ಚ ಪುಷ್ಪಕಮ್ ॥ ೮ ॥
ರಾಜರಾಜಸ್ತತೋ ದಧ್ಯೌ ಭಯಪ್ರಚಲಿತೇಂದ್ರಿಯಃ ।
ಮಯಾಧುನಾ ಕ್ವ ಗಂತವ್ಯಮಿತಃ ಪ್ರಾಣರಿರಕ್ಷುಣಾ ॥ ೯ ॥
ಯತ್ರಾಮುಷ್ಮಾದ್ಭಯಂ ನ ಸ್ಯಾಲ್ಲೋಕಪಾಲಭಯಾವಹಾತ್ ।
ತಾದೃಶಂ ಮಾಧವಾಧೀಶಂ ಪ್ರಯಾಗಂ ರಕ್ಷಕಂ ಮಮ ॥ ೧೦ ॥
ದೃಢಮೇವಂ ವಿನಿಶ್ಚಿತ್ಯ ನರಧರ್ಮಾ ಯಯೌ ನಿಶಿ ।
ದುದ್ರಾವ ಪೃಷ್ಠತಃ ಪಶ್ಯನ್ ಪ್ರಾಪ ಮಾಧವಪತ್ತನಮ್ ॥ ೧೧ ॥
ಸ ಭೋಗಂ ಸಮವಷ್ಟಭ್ಯ ಸರ್ವಭೋಗಪರಾಙ್ಮುಖಃ ।
ಮಾಧವಾರಾಧನಂ ಚಕ್ರೇ ತಪೋಧ್ಯಾನಾರ್ಚನಾದಿಭಿಃ ॥ ೧೨ ॥
ತಸ್ಯೈವಂ ಕುರ್ವತೋ ಧ್ಯಾನಂ ನಖರಾದಿಶಿಖಾವಧಿ ।
ತದ್ಧ್ಯೇಯರೂಪಭಾಗಗ್ರೇ ಪ್ರಾದುರಾಸೀದ್ರಮಾಪತಿಃ ॥ ೧೩ ॥
ತಥಾಪಿ ಧ್ಯಾನನಿರ್ಮಗ್ನಸ್ಸದಾಶಿವಸಖಸ್ತದಾ ।
ಧ್ಯಾನಸ್ಖಲನಮಾಪೇದೇ ದದೃಶೇ ತಂ ಪುರಸ್ಥಿತಮ್ ॥ ೧೪ ॥

ಉನ್ಮೀಲ್ಯ ನಯನೇಽಥಾಗ್ರೇ ತೇಜಸಾ ದ್ಯೋತಿತಾಶ್ರಮಮ್ ।
ಅಪಶ್ಯದ್ವರದಂ ದೇವಂ ಮಾಧವಂ ಭಕ್ತವತ್ಸಲಮ್ ॥ ೧೫ ॥
ಕೃತಪಾದಂ ಸುವರ್ಣಾಂಸೇ ಪ್ರಲಂಬಭುಜಭೂಷಣಮ್ ।
ಶಂಖಚಕ್ರಗದಾಪದ್ಮಭೂಷಿತಂ ಪೀತವಾಸಸಮ್ ॥ ೧೬ ॥
ಸ್ನಿಗ್ಧಜೀಮೂತರುಚಿರಂ ಪ್ರಸನ್ನವದನೇಕ್ಷಣಮ್ ।
ವನಮಾಲಾನಿವೀತಾಂಗಂ ಲಸಚ್ಛ್ರೀವತ್ಸಕೌಸ್ತುಭಮ್ ॥ ೧೭ ॥
ಮಹಾಕಿರೀಟಕಟಕಂ ಸ್ಫುರನ್ಮಕರಕುಂಡಲಮ್ ।
ಕಾಂಚ್ಯಂಗುಲೀಯವಲಯಂ ನೂಪುರಾಂಗದಭೂಷಿತಮ್ ॥ ೧೮ ॥
ತ್ರೈಲೋಕ್ಯಮೋಹನಂ ರೂಪಂ ಬಿಭ್ರತಂ ಸ್ವೇಷ್ಟವಿಗ್ರಹಮ್ ।
ಕೃತಂ ನಾರದನಂದಾದ್ಯೈಃ ಪಾರ್ಷದೈಃ ಸುರಯೂಥಪೈಃ ॥ ೧೯ ॥
ಸ್ತೂಯಮಾನಂ ಚ ಗಾಯದ್ಭಿಸ್ಸಿದ್ಧಗಂಧರ್ವಚಾರಣೈಃ ।
ಪೇಪೀಯಮಾನಸೌಂದರ್ಯಭಾರ್ಗವ್ಯಾ ಕಂಜಹಸ್ತಯಾ ॥ ೨೦ ॥
ರೂಪಂ ತನ್ಮಹದಾಶ್ಚರ್ಯಂ ಚಿಚಕ್ಷ್ಯ ಗತಸಂಭ್ರಮಃ ।
ನನಾಮ ದಂಡವದ್ಭೂಮೌ ಪ್ರಹೃಷ್ಟಾತ್ಮಾ ಧನೇಶ್ವರಃ ॥ ೨೧ ॥
ನ ಕಿಂಚನೋದೀರಯಿತುಮಶಕತ್ತೀವ್ರಯಾ ಮುದಾ ।
ಪುಲಕಾಂಚಿತಸರ್ವಾಂಗಃ ಪ್ರೇಮಬಾಷ್ಪಾಕ್ಷರಾಕುಲಃ ॥ ೨೨ ॥
ತಂ ತಥಾವನತಂ ಭಕ್ತಮಲಕೇಶಮಮಾಯಿನಮ್ ।
ಚಿತ್ತಜ್ಞಸ್ಸರ್ವಭೂತಾನಾಮಿತ್ಯಭಾಷತ ಮಾಧವಃ ॥ ೨೩ ॥

## ॥ ಮೂವತ್ತನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಶ್ರೀ ವೈಕುಂಠದ ದ್ವಾರಪಾಲಕರಾಗಿದ್ದ ಜಯವಿಜಯರೆಂಬುವರು ಆಜನ್ಮ ಸನ್ಯಾಸಿಗಳಾಗಿದ್ದ ಸನಕ, ಸನಂದನ, ಸನಾತನ ಮತ್ತು ಸನತ್ಸುಜಾತರೆಂಬ ನಾಲ್ವರಿಂದ ಶಾಪಗ್ರಸ್ತರಾಗಿ ಕೃತಯುಗದಲ್ಲಿ ಕಶ್ಯಪಋಷಿಗಳ ಹೆಂಡತಿಯಾದ ದಿತಿದೇವಿಯಲ್ಲಿ ದೈತ್ಯರಾಗಿ ಹುಟ್ಟಿದರು. ॥ ೧ ॥ ಇವರಲ್ಲಿ ಹಿರಣ್ಯಕಶಿಪು ದೊಡ್ಡವನು. ಇವನ ತಮ್ಮನೇ ಹಿರಣ್ಯಾಕ್ಷನು. ಇವರಿಬ್ಬರು ಬಲವೀರ್ಯ ಉಳ್ಳವರಾಗಿ ಮದೋನ್ಮತ್ತರಾಗಿದ್ದು ದೇವಾದಿಗಳಿಗೆ ಭಯಂಕರರಾಗಿದ್ದರು. ॥ ೨ ॥ ಹಿರಣ್ಯಾಕ್ಷನಿಂದ ಭೂಮಿಯು ಕಿತ್ತಲ್ಪಟ್ಟು ರಸಾತಲ ಲೋಕದಲ್ಲಿ ಇಡಲ್ಪಟ್ಟಾಗ ಶ್ರೀ ವಿಷ್ಣುವು ವರಾಹ ರೂಪವನ್ನು ಧರಿಸಿ ಹಿರಣ್ಯಾಕ್ಷನನ್ನು ಸಂಹರಿಸಿ ಭೂಮಿಯನ್ನು ಮತ್ತೆ ಸ್ವಸ್ಥಾನದಲ್ಲಿ ಇಟ್ಟನು. ॥ ೩ ॥ ತನ್ನ ಭಕ್ತನಾದ ಬಾಲಕ ಪ್ರಹ್ಲಾದನ ವಿಪತ್ತನ್ನು ಪರಿಹಾರ ಮಾಡುವುದಕ್ಕಾಗಿ ಶ್ರೀ ಹರಿಯು ನೃಸಿಂಹಾವತಾರವನ್ನೆತ್ತಿ ಕೇವಲ ತನ್ನ ಉಗುರುಗಳಿಂದಲೇ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದು ಸಂಹರಿಸಿದನು. ॥ ೪ ॥ ಅನಂತರ ಆ ಜಯವಿಜಯರು ತ್ರೇತಾಯುಗದಲ್ಲಿ ರಾವಣ ಮತ್ತು ಕುಂಭಕರ್ಣರೆಂಬ ಹೆಸರಿನ ಮಹಾರಾಕ್ಷಸರಾಗಿ ಭೂಮಿಯಲ್ಲಿ ಪುನಃ ಹುಟ್ಟಿದರು ಮತ್ತು ಕಾಡಿಗೆ ಹೋಗಿ ಅವರಿಬ್ಬರೂ

ಕ್ರೂರವಾದ ತಪಸ್ಸನ್ನು ಮಾಡಿದರು. ॥ ೫ ॥ ಅವರು ಮನುಷ್ಯರನ್ನು ಬಿಟ್ಟು ಬೇರೆಯಾರಿಂದಲೂ ಮೃತ್ಯು ಭಯವಿಲ್ಲದಂತಹ ವರವನ್ನು ಶ್ರೀ ಬ್ರಹ್ಮದೇವರಿಂದ ಪಡೆದರು. ನಂತರ ಆ ಕ್ರೂರಿಗಳು ದೇವತೆಗಳೊಡನೆ ಯುದ್ಧಮಾಡಿ ಅವರನ್ನು ಸೋಲಿಸಿದರು. ॥ ೬ ॥ ಅನಂತರ ಶ್ರೀಬ್ರಹ್ಮದೇವರ ಆದಿಯಾಗಿ ಎಲ್ಲ ದೇವತೆಗಳೂ ಭಯದಿಂದ ಈ ರಾವಣ ಕುಂಭಕರ್ಣರ ಇಚ್ಛೆಯನ್ನು ಅನುಸರಿಸು ವವರಾಗಿದ್ದರು. (ತಾವೇ ವರವನ್ನಿತ್ತ ಬ್ರಹ್ಮದೇವರು ರಾವಣನ ಅನುವರ್ತಿಯಾಗಿರಬೇಕಾದ ಪ್ರಸಂಗವೇ ಬರುವುದಿಲ್ಲ. ಆದರೆ, ಭಗವಂತನು ಮೂರು ಜನ್ಮಗಳಲ್ಲಿಯೂ ಜಯವಿಜಯರನ್ನು ಕೊಲ್ಲುವುದಾಗಿ ವರವಿತ್ತಿದ್ದರಿಂದ ಅದನ್ನು ಅನುಸರಿಸಿ ಬ್ರಹ್ಮದೇವರು ಸುಮ್ಮನಿದ್ದರು. ಮಹದೇವರು ಭಗವಂತನ ವಿಶೇಷಾನುಗ್ರಹದಿಂದ ರಾವಣನನ್ನು ಗೆದ್ದಿದ್ದರು. ಇಂದ್ರಾದಿಗಳು ಬ್ರಹ್ಮವರವನ್ನು ಮೀರಲಾಗದೆ ಅನುವರ್ತಿಗಳಾಗಿದ್ದರು.) ಆಗ ಇವರ ಅಣ್ಣನಾದ ವೈಶ್ರವಣನ ಜೊತೆಗೂ ಜಗಳ ವಾಗಿ ರಾವಣನು ಅವನ ದಿಕ್ಪಾಲಕತ್ವವನ್ನೂ, ಪುಷ್ಪಕ ವಿಮಾನವನ್ನೂ ಕಿತ್ತುಕೊಂಡನು. ॥ ೭-೮ ॥ ಅನಂತರ ವೈಶ್ರವಣನು ಭಯದಿಂದ ಜರ್ಝರಿತವಾದ ಮನಸ್ಸು ಉಳ್ಳವನಾಗಿ ''ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ತಾನು ಏನು ಮಾಡಬೇಕು'' ಎಂದು ಯೋಚಿಸಿದನು. ॥ ೯ ॥ ''ಎಲ್ಲಿದ್ದರೆ ಈ ಲೋಕಪಾಲಕರಿಗೆಲ್ಲಾ ಭಯವನ್ನುಂಟುಮಾಡುತ್ತಿರುವ ಈ ರಾವಣಕುಂಭಕರ್ಣರ ಭಯ ವಿಲ್ಲವೋ ಅಂಥ ಶ್ರೀ ವೇಣೀಮಾಧವನು ಅಧೀಶನಾಗಿರತಕ್ಕ ಪ್ರಯಾಗ ಕ್ಷೇತ್ರಕ್ಕೆ ಹೋಗುತ್ತೇನೆ. ಅದೇ ನನ್ನನ್ನು ರಕ್ಷಿಸುವುದು.'' ॥ ೧೦ ॥ ಹೀಗೆಂದು ದೃಢನಿರ್ಧಾರಕ್ಕೆ ಬಂದು ರಾತ್ರಿಯಲ್ಲಿ ಭಯದಿಂದ ಹಿಂದೆ ಹಿಂದೆ ನೋಡುತ್ತ ಓಡಿಹೋಗಿ ಪ್ರಯಾಗಕ್ಷೇತ್ರವನ್ನು ಸೇರಿದನು. ॥ ೧೧ ॥ ಭೋಗದಿಂದ ಮಾಡಿದ ಜೀವನ ಕ್ರಮವನ್ನು ತೊರೆದು ಎಲ್ಲ ರೀತಿಯ ಭೋಗಗಳಿಂದ ದೂರಸರಿದ ಮನಸ್ಸುಳ್ಳವನಾಗಿ, ಧ್ಯಾನಾರ್ಚನಾದಿಗಳಿಂದ ಶ್ರೀ ಮಾಧವನನ್ನು ಆರಾಧಿಸಲು ಪ್ರಾರಂಭಿಸಿದನು. ॥ ೧೨ ॥ ಪರಮಾತ್ಮನ ಯಾವ ರೂಪವನ್ನು ನಖಶಿಖಾಪರ್ಯಂತ ಧ್ಯಾನಿಸುತ್ತಿದ್ದನೋ ಆ ಮಾಧವನು ಅದೇ ರೂಪವನ್ನು ತಾಳಿ ಈ ವೈಶ್ರವಣನ ಮುಂದೆ ಪ್ರತ್ಯಕ್ಷನಾದನು. ॥ ೧೩ ॥ ಈಶ್ವರನಿಗೆ ಮಿತ್ರನಾದ ಈ ಕುಬೇರನು (ವೈಶ್ರವಣನು) ತನ್ನ ಧ್ಯಾನದಿಂದ ಎಚ್ಚೆತ್ತು ತನ್ನ ಎದುರಿಗೆ ನಿಂತಿರುವ ತನ್ನ ಆಶ್ರಮವನ್ನೆಲ್ಲಾ ಬೆಳಗುತ್ತಿರುವ ಭಕ್ತವತ್ಸಲನಾದ ಮತ್ತು ಬೇಕಾದ ವರಗಳನ್ನು ಕರುಣಿಸುವ ಶ್ರೀ ಮಾಧವನನ್ನು ನೋಡಿದನು. ॥ ೧೪-೧೫ ॥ ಗರುಡನ ಮೇಲೆ ಪಾದಗಳನ್ನಿಟ್ಟು ಕುಳಿತಿರುವ ನೀಳವಾದ ಭುಜಗಳಿಂದ ಶೋಭಿಸುತ್ತಿರುವ, ಶಂಖ, ಚಕ್ರ, ಗದೆ ಮತ್ತು ಪದ್ಮಗಳಿಂದ ಕಂಗೊಳಿಸುತ್ತಿರುವ, ಪೀತಾಂಬರಧಾರಿಯಾದ, ದಟ್ಟಮೇಘದಂತೆ ನೀಲವರ್ಣವುಳ್ಳ, ಮನೋಹರವಾಗಿದ್ದ ಪ್ರಸನ್ನತೆಯಿಂದ ಕೂಡಿದ ಕಣ್ಣುಗಳು ಮತ್ತು ಮುಖವುಳ್ಳ, ವನಮಾಲೆಯನ್ನು ಹಾಕಿಕೊಂಡಿರುವ, ಶ್ರೀವತ್ಸಚಿಹ್ನೆಯುಳ್ಳ, ಅಮೋಘವಾದ ಕಿರೀಟ ಮತ್ತು ಕಡಗಗಳುಳ್ಳ, ಹೊಳೆಯುತ್ತಿರುವ ಮೊಸಳೆಯ ಆಕಾರದ ಕರ್ಣಕುಂಡಲಗಳುಳ್ಳ, ನಡುಪಟ್ಟಿ ಉಂಗುರಗಳು, ಬಳೆಗಳುಳ್ಳ, ಬಾಹುಪುರಿ ಮತ್ತು ಕಾಲಂದಿಗೆಯಿಂದ ಕೂಡಿದ, ನಾರದ ಮತ್ತು ದ್ವಾರಪಾಲಕರಾದ ನಂದಾದಿಗಳಿಂದಲೂ ದೇವತೆಗಳಿಂದಲೂ ಸ್ತೋತ್ರ ಮಾಡಿಸಿಕೊಳ್ಳಲ್ಪಡು ತ್ತಿರುವ, ಸ್ತೋತ್ರ ಮಾಡುತ್ತಿರುವ ಸಿದ್ಧ ಗಂಧರ್ವಚಾರಣಾದಿಗಳಿಂದ ಸುತ್ತುವರಿಯಲ್ಪಟ್ಟ, ಪರಮಾತ್ಮನ ರೂಪವನ್ನು ಆಸ್ವಾದನೆ ಮಾಡುತ್ತಿರುವ ಪದ್ಮಹಸ್ತೆಯಾದ ಶ್ರೀಲಕ್ಷ್ಮೀದೇವಿಯನ್ನು ಪಕ್ಕದಲ್ಲಿ ಹೊಂದಿರುವ, ತಾನು ಧ್ಯಾನಿಸುತ್ತಿದ್ದ ಆಕಾರಕ್ಕೆ ಅನುಗುಣವಾದ ಮತ್ತು ಮೂರು ಲೋಕಗಳಿಗೂ ಮೋಹವನ್ನು ಉಂಟುಮಾಡುವ ಶ್ರೀ ಮಾಧವನ ರೂಪವನ್ನು ವೈಶ್ರವಣನು

ನೋಡಿ, ಮಹದಾಶ್ಚರ್ಯದಿಂದ ಗಾಬರಿಗೊಂಡು, ಸಂಭ್ರಮಹೊಂದಿದವನಾಗಿ ಸಂತುಷ್ಟಾಂತರಂಗದಿಂದ ಭೂಮಿಯಲ್ಲಿ ಸಾಷ್ಟಾಂಗವೆರಗಿದನು. ॥ ೧೬-೨೧ ॥ ಅವನ ದೇಹದಲ್ಲೆಲ್ಲಾ ರೋಮಾಂಚನ ಉಂಟಾಯಿತು. ತೀವ್ರವಾದ ಆನಂದದಿಂದ ಏನನ್ನೂ ಹೇಳಲಾಗಲಿಲ್ಲ. ಕಣ್ಣಿನಲ್ಲಿ ಆನಂದ ಬಾಷ್ಪ ಚಿಮ್ಮಿತು ಮತ್ತು ಕುತ್ತಿಗೆಯು ಭಕ್ತಿಭಾವದಿಂದ ಬಿಗಿಯಿತು. ॥ ೨೨ ॥ ಎಲ್ಲ ರೀತಿಯ ಸಾಂಸಾರಿಕ ಭ್ರಮೆಗಳಿಂದ ದೂರನಾಗಿರುವ ತನ್ನ ಭಕ್ತನಾದ, ನತಮಸ್ತಕನಾದ ಆ ಅಲಕಾಪುರೀಶನನ್ನು (ಅಲಕಾಪುರಿಯು ಕುಬೇರನ ರಾಜಧಾನಿಯು) ಎಬ್ಬಿಸಿ ಎಲ್ಲರ ಮನಸ್ಸಿನಲ್ಲಿರುವುದನ್ನು ತಿಳಿದಿರುವ ಶ್ರೀಮಾಧವನು ಈ ರೀತಿಯಾಗಿ ಹೇಳಿದನು. ॥ ೨೩ ॥

ಶ್ರೀಮಾಧವ ಉವಾಚ—

ಯಕ್ಷರಾಜ ಮಹಾಭಾಗ ಸಂಸಿದ್ಧಸ್ತಪಸಾ ಭವಾನ್ ।
ಯಚ್ಛ್ರದ್ಧಯಾ ಮತ್ಪರಯಾ ಮಯಿ ಭಾವಂ ಪರಂ ಗತಃ ॥ ೨೪ ॥
ಪ್ರೀತೋಽಹಂ ತೇಽಲಕಾನಾಥ ಸರ್ವಕಾಮವರೇಶ್ವರಃ ।
ವರಯಸ್ವ ವರಾನ್ದಿವ್ಯಾನುತ್ತಿಷ್ಠೋತ್ತಿಷ್ಠ ಸತ್ವರಮ್ ॥ ೨೫ ॥
ಏವಂ ಭಗವತಾದಿಷ್ಟೋ ವರಾನ್ವರದಮೌಲಿನಾ ।
ತಥಾಪ್ಯೇಕಾಂತಭಕ್ತೋಽಸೌ ನ ಚಚಾಲಾರ್ಥತತ್ತ್ವವಿತ್ ॥ ೨೬ ॥
ಮಾಧವಸ್ತಮಭಿಪ್ರೇತ್ಯ ರಥಾಂಗಾಂಕಿತಪಾಣಿನಾ ।
ಪರಿರೇಭೇಽಭ್ಯುಪಾಕೃಷ್ಯ ಪ್ರೀತಃ ಪ್ರಣತವತ್ಸಲಃ ॥ ೨೭ ॥
ಉವಾಚ ಸದಯಂ ನೇತ್ರೇ ತದೀಯೇ ಪಾಣಿನಾ ಮೃಜನ್ ।
ಅವೈಮಿ ನಿಜಭಕ್ತಂ ತ್ವಾಮಾದಾವೇವಾಲಕಾಪತೇ ॥ ೨೮ ॥
ಏವಮುಕ್ತೋ ಭಗವತಾ ಕುಬೇರೋ ಹರ್ಷಪೂರಿತಃ ।
ಬದ್ಧಾಂಜಲಿರುವಾಚಾಗ್ರೇ ಮಾಧವಸ್ಯ ಜಗತ್ಪತೇಃ ॥ ೨೯ ॥

ಶ್ರೀ ಮಾಧವನು ಹೇಳಿದನು—

ಮಹಾಭಾಗ್ಯಶಾಲಿಯಾದ ಯಕ್ಷರಾಜನೇ! ನೀನು ತಪಸ್ಸಿನಿಂದ ಸಿದ್ಧಿಪಡೆದಿದ್ದೀಯೆ. ನನ್ನ ಪರವಾದ ಶುದ್ಧವಾದ ಶ್ರದ್ಧೆಯಿಂದ ನನ್ನಲ್ಲಿ ಉತ್ತಮವಾದ ಭಕ್ತಿಭಾವವನ್ನು ನೀನು ಹೊಂದಿದ್ದೀಯೆ. ॥ ೨೪ ॥ ಹೇ ಅಲಕಾನಾಥನೇ, ನಿನ್ನ ತಪಶ್ಚರಣೆಯಿಂದ ನಾನು ಸಂತೋಷಗೊಂಡೆನು. ಬೇಗ ಏಳು, ನಿನಗೆ ಬೇಕಾದ ವರವನ್ನು ಕೇಳಿಕೋ. ॥ ೨೫ ॥ ಈ ರೀತಿಯಾಗಿ ಮಾಧವನಿಂದ ಆಜ್ಞಪ್ತನಾದರೂ ಏಕಾಂತಭಕ್ತನಾದ ಇವನು ತತ್ತ್ವದ ಯಥಾರ್ಥಜ್ಞಾನವನ್ನು ತಿಳಿದವನಾದ್ದರಿಂದ (ಐಹಿಕ ವರಗಳ ಅಶಾಶ್ವತೆಯ ಜ್ಞಾನವುಳ್ಳವನಾದ್ದರಿಂದ) ಯಾವ ವರವನ್ನೂ ಬೇಡಲಿಲ್ಲ. ॥ ೨೬ ॥ ಪ್ರೀತನಾದ ಶರಣಾಗತವತ್ಸಲನಾದ ಮಾಧವನು ಅವನ ಅಭಿಪ್ರಾಯವನ್ನು ತಿಳಿದು ಅವನನ್ನು ಸೆಳೆದುಕೊಂಡು ಆಲಂಗಿಸಿದನು. ॥ ೨೭ ॥ ದಯಾನ್ವಿತನಾಗಿ ಅವನ ಕಣ್ಣುಗಳ ಬಾಷ್ಪಜಲವನ್ನು ತನ್ನ ಚಕ್ರಾಂಕಿತ ಕೈಯಿಂದ ವರೆಸಿ, ''ಹೇ ಅಲಕಾಪುರಿಶನೇ, ನಿನ್ನನ್ನು ಮೊದಲೇ ನನ್ನ ನಿಜವಾದ ಭಕ್ತನೆಂದು ನಾನು ತಿಳಿದಿದ್ದೇನೆ.'' ॥ ೨೮ ॥ ಈ ರೀತಿಯಾಗಿ ಭಗವಂತನಿಂದ ಹೇಳಿಸಿಕೊಳ್ಳಲ್ಪಟ್ಟ ಕುಬೇರನು ಹರ್ಷದಿಂದ ತುಂಬಿದವನಾಗಿ ಕೈಜೋಡಿಸಿಕೊಂಡು ಶ್ರೀಮಾಧವದೇವರಿಗೆ ಹೇಳಿದನು. ॥ ೨೯ ॥

**ಕುಬೇರ ಉವಾಚ—**

ನಾನಾಕಾಮಜನಾಸ್ಸರ್ವೇ ಭಜಂತಿ ತ್ವಾಂ ತದಿಚ್ಛಯಾ ।
ನಾಮರೂಪಧರಂ ಶುದ್ಧಂ ಸಗುಣಾಗುಣಭೇದತಃ ॥ ೩೦ ॥
ಕೇಚಿತ್ ಜ್ಞಾನೇನ ಯೋಗೇನ ಭಕ್ತ್ಯಾ ಕೇಚನ ಕರ್ಮಣಾ ।
ಯಜಂತೋಽನೇಕಧಾ ಲೋಕೇ ಯಜಂತಿ ತ್ವಾಮಸಂಶಯಮ್ ॥ ೩೧ ॥
ಯಥಾದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾಃ ಪ್ರಭೋ ।
ವಿಶಂತಿ ಸರ್ವತಸ್ಸಿಂಧುಮಧ್ವಾನಸ್ತ್ವಾಂ ತಥಾಖಿಲಾಃ ॥ ೩೨ ॥
ಭಗವನ್ ಜೀವಲೋಕೋಽಯಂ ಲೋಭಿತಸ್ತವ ಮಾಯಯಾ ।
ಅಹಂ ಮಮೇತ್ಯಸದ್ಗ್ರಾಹೋ ಭ್ರಾಮ್ಯತೇ ಕರ್ಮವರ್ತ್ಮಸು ॥ ೩೩ ॥
ಅಹಂ ಚಾತ್ಮಾತ್ಮಜಾಗಾರದಾರಾದಿಸ್ವಜನಾದಿಷು ।
ಭ್ರಮಾಮಿ ಸ್ವಪ್ನಕಲ್ಪೇಷು ಮೂಢಃ ಸತ್ಯಧಿಯಾ ವಿಭೋ ॥ ೩೪ ॥
ನೋತ್ಸಹೇಽಹಂ ಕೃಪಣಧೀಃ ಕಾಮಕರ್ಮಹತಂ ಮನಃ ।
ರೋದ್ಧುಂ ಪ್ರಮಾಥಿಭಿಶ್ಚಾಕ್ಷೈರ್ಹ್ರಿಯಮಾಣಮಿತಸ್ತತಃ ॥ ೩೫ ॥
ತಮೋಽಪಗಮಮಿಚ್ಛೇಽಹಂ ಭವತೋ ಜ್ಞಾನಭಾಸ್ವತಃ ।
ಹೃಷೀಕೇಶ ನಮಸ್ತುಭ್ಯಂ ಪ್ರಪನ್ನಂ ಪಾಹಿ ಮಾಂ ಪ್ರಭೋ ॥ ೩೬ ॥
ತ್ವದ್ಧ್ಯಾನಲಹರೀಮಗ್ನಃ ಕ್ಷೇತ್ರೇ ತ್ವತ್ಪದಭೂಷಿತೇ ।
ಯಥಾ ವಸಾಮ್ಯಹಂ ವಿಷ್ಣೋ ಜಗದೀಶ ತಥಾ ಕುರು ॥ ೩೭ ॥
ಕಿಂ ಚಾತ್ರ ಯೇ ಸಮಾಯಾತಾ ನೈಕದೇಶಗತಾ ನರಾಃ ।
ಶ್ರೀಮತಾ ಮೋಚನೀಯಾಸ್ತೇ ಪಾಪಿನೋಽಪ್ಯಂಗಸಂಸ್ಪೃತೇಃ ॥ ೩೮ ॥
ಅರ್ಥಯೇಽಮುಂ ವರಂ ದೇವ ನಾನ್ಯತ್ಕಿಮಪಿ ಕಾಮಯೇ ।
ಆಸ್ತಾಂ ತವಾತ್ರ ಸಾನ್ನಿಧ್ಯಂ ಮದೀಯಾಶ್ರಮಮಂಡಲೇ ॥ ೩೯ ॥

**ಕುಬೇರನು ಹೇಳಿದನು—**

ಕಾಮಾಪೇಕ್ಷಿಗಳಾದ ನಾನಾಜನರು ಅವರವರ ಕಾಮನೆಗಳು ಸಿದ್ಧಿಸುವುದಕ್ಕಾಗಿಯೇ ನಿನ್ನನ್ನು ಸೇವಿಸುತ್ತಾರೆ. ನೀನು ನಾನಾ ನಾಮವುಳ್ಳವನು, ನಾನಾ ರೂಪವುಳ್ಳವನು. ನೀನು ತ್ರಿಗುಣಾತೀತ. ನಾನಾದರೋ ನಿನ್ನನ್ನು ಸಗುಣನೆಂದು ಉಪಾಸಿಸುವವನು. ॥ ೩೦ ॥ ಕೆಲವರು ಜ್ಞಾನಯೋಗದಿಂದಲೂ (ಸನಕಾದಿಗಳಂತೆ) ಕೆಲವರು ಕರ್ಮಯೋಗದಿಂದಲೂ (ಜನಕಾದಿಗಳಂತೆ) ಕೆಲವರು ಭಕ್ತಿಯಿಂದಲೂ (ಮಾಹಾತ್ಮ್ಯಜ್ಞಾನವಿರುವ ಸುದೃಢಸ್ನೇಹ) ನಿನ್ನನ್ನು ಭಜಿಸುತ್ತಾರೆ. ನಿನ್ನನ್ನು ಆರಾಧಿಸುವವರಲ್ಲಿ ನಾನಾ ರೀತಿಗಳಿವೆ. ಇದರಲ್ಲಿ ಯಾವ ಸಂದೇಹವಿಲ್ಲ. ॥ ೩೧ ॥ ಬೆಟ್ಟಗಳಲ್ಲಿ ಹುಟ್ಟಿದ ನದಿಗಳು ಮಳೆಯ ನೀರಿನಿಂದ ತುಂಬಿ ಹರಿದು ಹೇಗೆ ಸಮುದ್ರವನ್ನು ಸೇರುತ್ತವೆಯೋ ಹಾಗೆಯೇ ನಿನ್ನನ್ನು ಅನೇಕ ರೀತಿಯವರು ಅನೇಕ ವಿಧಗಳಲ್ಲಿ ಆರಾಧಿಸಿ ಕೊನೆಗೆ ನಿನ್ನ ಲೋಕವನ್ನು ಮುಟ್ಟುತ್ತಾರೆ. ॥ ೩೨ ॥ ಹೇ ಭಗವನ್, ಈ ಜೀವಲೋಕವು ತನ್ನ ಸ್ವರೂಪದ ಆವರಕದಿಂದ

ಅಜ್ಞಾನ ಹೊಂದಿ ''ನಾನು ನನ್ನದು'' ಎಂಬ ಅಸತ್ಯಗ್ರಹಿಕೆಯನ್ನು ತಾಳಿ ಈ ಸಂಸಾರದಲ್ಲಿ ಹುಟ್ಟು-ಸಾವಿನ ಚಕ್ರದಲ್ಲಿ ತೊಳಲುತ್ತಿರುತ್ತಾರೆ. ಈ ಆವರಕವು ನಿನ್ನ ಜ್ಞಾನದಿಂದಲೇ ಪರಿಹಾರವಾಗಬೇಕು. ಅಲ್ಲಿಯವರೆಗೆ ಈ ಮೋಹವು ಜೀವಿಯನ್ನು ಕಾಡುತ್ತಲೇ ಇರುವುದು. ॥ ೩೩ ॥ ಈ ಆವರಕವಿರುವವರೆಗೆ, ಜೀವಿಗಳು ಸಂಸಾರದಲ್ಲಿ ಹುಟ್ಟಿ, ನಾನು, ನನ್ನ ಮಗ, ನನ್ನ ಮನೆ, ನನ್ನ ಹೆಂಡತಿ ಮತ್ತು ನನ್ನ ನೆಂಟರು ಎಂಬ ಭ್ರಮೆಗೆ ಸಿಲುಕಿ ಈ ಸುಳ್ಳಾದ ಗ್ರಹಿಕೆಯಿಂದಲೇ ಈ ಸಂಸಾರ ಚಕ್ರದಲ್ಲಿ ಹುಟ್ಟು-ಸಾವುಗಳ ಮಾರ್ಗದಲ್ಲಿ ಸುತ್ತುತ್ತಾ ತೊಳಲುತ್ತಿರುತ್ತಾರೆ ಮತ್ತು ವಿವಿಧ ಕರ್ಮಗಳನ್ನು ಮಾಡುತ್ತಾ ಹೋಗುತ್ತಾರೆ. ಇವರಂತೆ ನನಗೂ ಈ ಆವರಕವಿರುವುದರಿಂದ ನಾನೂ ಈ ಅಸತ್ಯಕ್ಕೆ ಸಿಕ್ಕಿಬಿದ್ದು ಅಶಾಶ್ವತವಾದ ಸಂಸಾರವನ್ನು ಶಾಶ್ವತವೆಂದು ತಿಳಿಯುತ್ತಾ ಬರುತ್ತಿದ್ದೇನೆ. ಇದಕ್ಕೆ ನಿನ್ನ ಮಾಯೆಯೇ ಕಾರಣ. ॥ ೩೪ ॥ ಈ ಕಾಮ್ಯಕರ್ಮಗಳಲ್ಲಿಯೇ ನಿರಂತರವೂ ಆಸಕ್ತನಾಗಿದ್ದು ಕೃಪಣಬುದ್ಧಿಯುಳ್ಳವನಾಗಿ ಕಾಮಾಪೇಕ್ಷೆಯಿಂದ ಕಾಮ್ಯಕರ್ಮಾದಿಗಳನ್ನೇ ಎಸಗುತ್ತ ಬಂದಿದ್ದೇನೆ. ಆದರಿಂದ ನನ್ನ ಮನಸ್ಸೂ ಹತವಾಗಿ ಇಂದ್ರಿಯಗಳು ಬಲವಂತವಾಗಿ ನನ್ನ ಮನಸ್ಸನ್ನು ಎಲ್ಲೆಂದರಲ್ಲಿಗೆ ಎಳೆದುಕೊಂಡು ಹೋಗುತ್ತವೆ. ॥ ೩೫ ॥ ತಮಸ್ಸಿನಲ್ಲಿ ಸಿಕ್ಕಿರತಕ್ಕ ಈ ನನ್ನ ಮನಸ್ಸನ್ನು ಓ ಮಾಧವ! ನಿನ್ನ ಸಂಬಂಧವಾದ ಜ್ಞಾನದ ಬೆಳಕಿನಿಂದ ಹೊಡೆದೆಬ್ಬಿಸಲು ಬಯಸುತ್ತೇನೆ. ಇಂದ್ರಿಯಗಳಿಗೆ ನಿಯಾಮಕನಾದ ಸ್ವಾಮಿಯೇ ನಿನಗೆ ನಮಸ್ಕಾರಗಳು. ನಿನ್ನ ಪಾದಗಳಲ್ಲಿ ಶರಣು ಹೊಕ್ಕಿರುವ ನನ್ನನ್ನು ಕಾಪಾಡು. ॥ ೩೬ ॥ ನಿನ್ನ ಚರಣಗಳಿಂದ ಅಲಂಕೃತವಾದ ಈ ಪ್ರಯಾಗ ಕ್ಷೇತ್ರದಲ್ಲಿ ವಾಸಮಾಡಿಕೊಂಡಿದ್ದು ನಿನ್ನ ಜ್ಞಾನವೆಂಬ ಅಲೆಗಳಲ್ಲಿ ಮುಳುಗಿಕೊಂಡಿರಲು ಬಯಸುವ ನನಗೆ ನಿನಗೆ ತೋರಿದಂತೆ ಅನುಗ್ರಹಿಸು. ॥ ೩೭ ॥ ಅಲ್ಲದೆ, ನಾನಾ ದೇಶಗಳಿಂದ ಇಲ್ಲಿಗೆ ಬರುವ ಜನರು ಪಾಪಿಗಳಾಗಿದ್ದರೂ ಅವರನ್ನು, ನೀನು ಸಂಸಾರದಿಂದ ವಿಮೋಚನೆ ಮಾಡಿ ಉದ್ಧರಿಸು. ॥ ೩೮ ॥ ನನ್ನ ಆಶ್ರಮದಲ್ಲಿ ನಿನ್ನ ಸಾನ್ನಿಧ್ಯವು ಇರಬೇಕೆಂದಷ್ಟೇ ವರವನ್ನು ನಾನು ಅಪೇಕ್ಷಿಸುವುದು. ಬೇರೆನೂ ಇಲ್ಲ. ॥ ೩೯ ॥

ಸೂತ ಉವಾಚ—

ರಾಜರಾಜವಚಃ ಶ್ರುತ್ವಾ ತಥೇತ್ಯುಕ್ತ್ವಾಥ ಮಾಧವಃ ।
ಜಗಾಮ ಸಪರೀವಾರೋ ವಟದ್ರುನಿಕಟಸ್ಥಿತಿಮ್ ॥ ೪೦ ॥
ಮಾಧವೇಽಂತರ್ಹಿತೇ ವಿಪ್ರಾಃ ಕುಬೇರಃ ಪ್ರಾಗ್ವದಾದೃತಃ ।
ತೇನೈವ ಧ್ಯಾನಯೋಗೇನ ಪ್ರಾಪ ಮಾಧವರೂಪತಾಮ್ ॥ ೪೧ ॥
ತದಾರಭ್ಯಾಶ್ರಮೋಽಯಂ ವೈ ಕುಬೇರಾಶ್ರಮ ಈರಿತಃ ।
ಯತ್ರ ಸಂವಸತಾಂ ನೃಣಾಂ ಭಯಂ ನೈವ ಭವೇದ್ಧ್ರುವಮ್ ॥ ೪೨ ॥
ಯಾತ್ರಿಕಾ ಯೇ ಸಮಾಯಾತಾ ಕೌಬೇರಂ ತೀರ್ಥಮಾಶ್ರಿತಾಃ ।
ಸರ್ವಪಾಪವಿನಿರ್ಮುಕ್ತಾ ಧನಿನಸ್ಸ್ಯುಃ ಪುನಃ ಪುನಃ ॥ ೪೩ ॥
ಏವಮುತ್ತರದಿಗ್ಭಾಗೋ ವರ್ಣಿತೋ ವೋ ಮುನೀಶ್ವರಾಃ ।
ಭಾಗಾಂತರಮಥೋ ವಕ್ಷ್ಯೇ ಶ್ರೂಯತಾಮವಧಾನತಃ ॥ ೪೪ ॥

॥ ಇತಿ ತ್ರಿಂಶೋಽಧ್ಯಾಯಃ ॥

**ಸೂತರು ಹೇಳಿದರು—**

ಕುಬೇರನ ಮಾತನ್ನು ಕೇಳಿ ''ಹಾಗೆಯೇ ಆಗಲಿ'' ಎಂದು ಹೇಳಿ ಶ್ರೀ ಮಾಧವನು ತನ್ನೊಡನಿದ್ದ ಪರಿವಾರ ಸಹಿತನಾಗಿ ಅಲ್ಲಿಂದ ವಟವೃಕ್ಷದ ಹತ್ತಿರವಿದ್ದ ತನ್ನ ನಿವಾಸಕ್ಕೆ ಹೊರಟು ಹೋದನು. ॥ ೪೦ ॥ ಎಲೈ ವಿಪ್ರೋತ್ತಮರೇ ! ಮಾಧವನು ಅಂತರ್ಧಾನನಾಗುತ್ತಲೇ ಪ್ರಯಾಗ ಮಾಧವನಿಂದ ಪ್ರೇರಿತನಾಗಿ, ಆದರವುಳ್ಳವನಾಗಿ ಕೇವಲ ಅವನ ಧ್ಯಾನದಲ್ಲಿಯೇ ಇದ್ದು ಅವನಂತೆಯೇ ಮುಕ್ತಿಯಲ್ಲಿ ಜ್ಞಾನಾನಂದ ಭಾಗ್ಯವನ್ನು (ಮಾಧವನ ಅನುರೂಪತ್ವವನ್ನು) ಪಡೆದನು. ॥ ೪೧ ॥ ಅಲ್ಲಿಂದ ಮೊದಲ್ಗೊಂಡು ಈ ವೈಶ್ರವಣರ ಆಶ್ರಮವು ಕುಬೇರಾಶ್ರಮವೆಂದು ಕರೆಯಲ್ಪಡುತ್ತಿದೆ. ಅಲ್ಲಿ ವಾಸಮಾಡುವವರಿಗೆ ಯಾವ ಭಯವೂ ಇರುವುದಿಲ್ಲ. ॥ ೪೨ ॥ ಈ ಕುಬೇರ ಕ್ಷೇತ್ರಕ್ಕೆ ಬಂದು ಈ ಕುಬೇರ ತೀರ್ಥವನ್ನು ಆಶ್ರಯಿಸಿದವರ ಸಮಸ್ತ ಪಾಪಗಳೂ ಪರಿಹಾರವಾಗಿ ಅವರೂ ಪುನಃ ಪುನಃ ಕುಬೇರನಂತೆ ಧನಿಕರಾಗುವರು. ॥ ೪೩ ॥ ಹೇ ಮುನಿಶ್ವರರೇ! ಈ ರೀತಿಯಾಗಿ ಪ್ರಯಾಗದ ಉತ್ತರದಿಗ್ಭಾಗವು ನಿಮಗಾಗಿ ನನ್ನಿಂದ ವರ್ಣಿತವಾಗಿದೆ. ಬೇರೆ ಭಾಗದ ವಿಷಯವನ್ನು ಹೇಳುವೆನು. ತಾವು ಗಮನಿಸಿ ಕೇಳುವುದು. ॥ ೪೪॥

॥ ಮೂವತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕತ್ರಿಂಶೋಽಧ್ಯಾಯಃ ॥ ೩೧ ॥

ಸೂತ ಉವಾಚ—

ಅಥೈಶಾನಕ್ಷೇತ್ರಭೂಮಿಃ ಪ್ರಯಾಗಸ್ಯೋಪವರ್ಣ್ಯತೇ ।
ಯಸ್ಯಾಃ ಸಂಶ್ರಯಮಾತ್ರೇಣ ಬಹವಸ್ಸಿದ್ಧಿಮಾಗತಾಃ ॥ ೧ ॥
ಈಶಾನಃ ಸರ್ವದೇವಾನಾಮೀಶ್ವರಸ್ಸರ್ವಸಂಪದಾಮ್ ।
ಯಾಮಧ್ಯುವಾಸ ಸಂಹೃಷ್ಟಶ್ಶಂಕರೋ ಲೋಕಶಂಕರಃ ॥ ೨ ॥
ತತ್ರಾಶ್ರಮಪದಂ ತಸ್ಯ ರಾಜತೇ ಗಿರಿಜಾಪತೇಃ ।
ಅತಿನಂದನಮಾನಂದಮತಿಚೈತ್ರರಥಂ ಶಿವಮ್ ॥ ೩ ॥
ಯತ್ರಾಧಿವಸತಾಂ ಪುಂಸಾಂ ಸಾನಂದಪ್ರಸರಃ ಪರಃ ।
ಸರ್ವದೋಷಾನ್ನಿರಸ್ಯದ್ಧಾ ನಿರ್ವಾಣಪದವೀಮಪಿ ॥ ೪ ॥
ಕೃತಾವಾಸೋಽಥ ಏತಸ್ಮಿನ್ನರಿತ್ಯಜ್ಯಾದ್ರಿಮಂಡಲಮ್ ।
ತೋಷಯಾಮಾಸ ಗಿರಿಶೋ ಜಪಯಜ್ಞೇನ ಮಾಧವಮ್ ॥ ೫ ॥
ಏವಮಾಚರತೋಽತೀತೇಷ್ವದಭ್ರೇಷು ದಿನೇಷ್ವಪಿ ।
ವೈಷ್ಣವಸ್ಯ ಗಿರೀಶಸ್ಯ ಪುರಃ ಪ್ರಾದುರಭೂದ್ಧರಿಃ ॥ ೬ ॥
ಸ್ನಿಗ್ಧಪ್ರಾವೃಟ್ಘನಶ್ಯಾಮಸ್ಸರ್ವಸೌಂದರ್ಯಸಂಗ್ರಹಃ ।
ಕುಟಿಲಾಲಕಸಂವೀತಪುಲ್ಲಾಬ್ಜರುಚಿರಾನನಃ ॥ ೭ ॥
ಚಾರ್ವಾಯತಚತುರ್ಬಾಹುಶಂಖಚಕ್ರಗದಾಬ್ಜಭೃತ್ ।
ಶೋಣಪದ್ಮಪಲಾಶಾಕ್ಷಸ್ಸುದ್ವಿಜಶ್ಶುಭ್ರನಾಸಿಕಃ ॥ ೮ ॥
ಸಮಕರ್ಣಾಂಘ್ರಿಜಂಘೋರುನಿಮ್ನಜಾನುಸ್ಸುದರ್ಶನಃ ।
ಲಸತ್ಪಂಕಜಕಿಂಜಲ್ಕದುಕೂಲೋ ಮೃಷ್ಟಕುಂಡಲಃ ॥ ೯ ॥
ತದಾ ಸೇಚನಕಂ ರೂಪಂ ದೃಷ್ಟ್ವಾ ಸ್ಥಾಣೋ ನೀಲಲೋಹಿತಃ ।
ಪ್ರಯಾಗನಿಲಯಂ ದೇವಂ ಮಾಧವಂ ವರದಂ ಗೃಣನ್ ॥ ೧೦ ॥

## ॥ ಮೂವತ್ತೊಂದನೆಯ ಅಧ್ಯಾಯವು ॥

ಸೂತರು ಹೇಳಿದರು—

ಈಗ ನನ್ನಿಂದ ಪ್ರಯಾಗ ಕ್ಷೇತ್ರದ ಈಶಾನ್ಯ ಭಾಗವು ವರ್ಣಿಸಲ್ಪಡುತ್ತದೆ. ಈ ಭಾಗವನ್ನು ಆಶ್ರಯಿಸಿ ಬಹಳ ಜನರು ಸಿದ್ಧಿಯನ್ನು ಹೊಂದಿದ್ದಾರೆ. ॥ ೧ ॥ ಎಲ್ಲ ದೇವತೆಗಳ ಯಜಮಾನನಾದ, ಎಲ್ಲ ಐಶ್ವರ್ಯಗಳ ಪ್ರದಾಯಕನಾದ, ಲೋಕಕ್ಕೆ ಮಂಗಳಕರನಾದ, ಶ್ರೀ ರುದ್ರದೇವರು ಪ್ರಯಾಗದ ಈ ಈಶಾನ್ಯ ಭಾಗದಲ್ಲಿ ಸಂತೋಷದಿಂದ ಇದ್ದಾರೆ. ॥ ೨ ॥ ಪ್ರಯಾಗದಲ್ಲಿ ಈ ಪಾರ್ವತೀಪತಿಯ ಆಶ್ರಮವು ಈಶಾನ್ಯ ಭಾಗದಲ್ಲಿ ಕಂಗೊಳಿಸುತ್ತದೆ. ಈ ಆಶ್ರಮವು ನಂದನವನವನ್ನೂ ಮತ್ತು ಕುಬೇರನ ಚೈತ್ರರಥವನವನ್ನೂ ಮೀರಿಸುವಷ್ಟು ಮಂಗಳಕರ-

ವಾಗಿದೆ. ॥ ೩ ॥ ಇಲ್ಲಿ ವಾಸಮಾಡುವ ಮನುಷ್ಯರಿಗೆ ಶ್ರೇಷ್ಠವಾದ ಆನಂದವು ಪ್ರಾಪ್ತವಾಗುವುದಲ್ಲದೆ ಸರ್ವದೋಷಗಳೂ ನಿವಾರಣೆಯಾಗಿ ಮೋಕ್ಷವೂ ದೊರಕುವುದು. ॥ ೪ ॥ ಕೈಲಾಸ ಪತಿಯಾದ ಈಶ್ವರನು ಕೈಲಾಸವನ್ನು ಬಿಟ್ಟು ಈ ಭಾಗದಲ್ಲಿ ವಾಸಮಾಡಿಕೊಂಡಿದ್ದು ಶ್ರೀ ಪ್ರಯಾಗ ಮಾಧವದೇವರನ್ನು ಜಪಯಜ್ಞಾದಿಗಳಿಂದ ಸಂತೋಷಪಡಿಸಿಕೊಂಡು ಇದ್ದನು. ॥ ೫ ॥ ಈ ರೀತಿಯಾಗಿ ಶಿವನು ಅಲ್ಲಿ ಇರುತ್ತಿರಲಾಗಿ ಎಷ್ಟೋ ದಿನಗಳು ಕಳೆದುಹೋದವು. ಆಗ ಈ ವೈಷ್ಣವಾಗ್ರೇಸರನ ಮುಂದೆ ಶ್ರೀ ಮಾಧವನು ಪ್ರಾದುರ್ಭೂತನಾದನು. ॥ ೬ ॥ ಶ್ರೀ ಈಶ್ವರನಿಗೆ ಕಂಡುಬಂದ ಶ್ರೀ ಮಾಧವನ ರೂಪವು ಈ ರೀತಿಯಾಗಿತ್ತು. – ಶ್ರೀ ಮಾಧವನು ದಟ್ಟ ವರ್ಷಾಕಾಲದ ಮೇಘದಂತಿರುವ ನೀಲವರ್ಣ ವಿಶಿಷ್ಟವಾಗಿದ್ದನು. ಒಟ್ಟುಗೂಡಿಸಿರುವ ಸಕಲ ಸೌಂದರ್ಯದ ಗಟ್ಟಿಯಂತೆ ಇದ್ದನು. ಇವನ ಮುಖವು ಅರಳಿದ ಕಮಲದಂತಿದ್ದು ಗುಂಗುರು ಕೂದಲಿನಿಂದ ಆವರಿಸಲ್ಪಟ್ಟಿತ್ತು. ॥ ೭ ॥ ದೀರ್ಘವಾದ ಮನೋಹರವಾದ ನಾಲ್ಕು ಕೈಗಳಿಂದ ಕೂಡಿದ್ದನು. ಶಂಖ, ಚಕ್ರ, ಗದೆ ಮತ್ತು ಪದ್ಮ ಇವುಗಳನ್ನು ತನ್ನ ಕೈಗಳಲ್ಲಿ ಧರಿಸಿದ್ದನು. ಕೆಂಪುಕಮಲದ ಹೂವಿನ ದಳದಂತೆ ವಿಶಾಲವಾದ ಕಣ್ಣುಗಳುಳ್ಳವನಾಗಿದ್ದನು. ಒಳ್ಳೆಯ ಹಲ್ಲುಗಳು ಮತ್ತು ಮೂಗನ್ನು ಹೊಂದಿದ್ದನು. ॥ ೮ ॥ ಒಂದಕ್ಕೊಂದು ಸರಿಸಮನಾಗಿರುವ ಕಿವಿಗಳು, ಪಾದಗಳು, ತುಟಿಗಳು ಮತ್ತು ಮೊಣಕಾಲು ಇವುಗಳಿಂದ ನೋಡಲು ಆಕರ್ಷಣೀಯವಾಗಿದ್ದನು. ಕಮಲಪುಷ್ಪದ ಪರಾಗದಂತೆ ಪ್ರಕಾಶಮಾನ ವಾದ ಹಳದೀಬಣ್ಣದ ಪೀತಾಂಬರವನ್ನು ಧರಿಸಿದ್ದನು. ಮತ್ತು ಹೊಳೆಯುತ್ತಿರುವ ಕರ್ಣಕುಂಡಲ ಗಳನ್ನು ಧರಿಸಿದ್ದನು. ॥ ೯ ॥ ತನ್ನ ಸಕಲ ಅಭೀಷ್ಟಗಳನ್ನು ಸುರಿಸಬಲ್ಲ ಲಕ್ಷ್ಮೀಪತಿಯಾದ ವರಪ್ರದನಾದ ಈ ಮಾಧವದೇವರನ್ನು ನೋಡಿದ ನೀಲಕಂಠನು ಈ ರೀತಿಯಾಗಿ ಸ್ತೋತ್ರ ಮಾಡಲಾರಂಭಿಸಿದನು. ॥ ೧೦ ॥

ಶಂಕರ ಉವಾಚ—

ಜ್ಞಾತೋಽಸಿ ಮೇ ಮಾಧವ ದಿವ್ಯಮೂರ್ತೇ
ಸುರಾಸುರೈರೀಡಿತಸರ್ವಶಕ್ತೇ ।
ವಿಶ್ವಸ್ಯ ರೂಪೋಽಸ್ಯತ ಏವ ವಿಶ್ವೇ
ವಿಶ್ವಾತ್ಮಕಂ ತ್ವಾಂ ಪ್ರಗೃಣಂತಿ ಸಂತಃ ॥ ೧೧ ॥
ಪಾತಾಲಪದ್ಮೂಲವಿರಾಜಿತಂ ರಸಾ-
ತಲಾಗ್ರಾ ಪರಭಾಗಮಾದ್ಯಮ್ ।
ಮಹಾತಲಾಭೂಷಿತವಲ್ಗುಗುಲ್ಫಂ
ತಲಾತಲಂ ಜಂಘಮಜಂ ನತೋಽಸ್ಮಿ ॥ ೧೨ ॥
ಸುತಲಾತ್ಮಕಗ್ರಥಿತಜಾನುಮವ್ಯಯಂ
ವಿತಲಾತಲೋರುಯುಗಲಂ ಜಗದ್ಗುರುಮ್ ।
ಅವನೀತಲೋರುಜಘನಂ ರಮೇಶ್ವರಂ
ಸುರವರ್ತ್ಮನಾಭಿಮಭಯಂ ನತೋಽಸ್ಮ್ಯಹಮ್ ॥ ೧೩ ॥
ಸ್ವರುರಸ್ಥಲಭಾಸಿತಂ ತಮೀಡ್ಯಂ
ಮಹಸ್ಸುಗ್ರೀವಮಹಂ ಜನಾನನಮ್ ।

ಸುತಪಸ್ತು ಲಲಾಟಮದ್ಭುತಂ
ಶರಣಂ ಯಾಮಿ ಚ ಸತ್ಯಮಸ್ತಕಮ್ ॥ ೧೪ ॥
ಇಂದ್ರಾದಯಃ ಕ್ರತುಭುಜೋ ಹ್ಯುರುಬಾಹವಸ್ತೇ
ಕರ್ಣೌ ದಿಶಃ ಶ್ರವಣಮಿಂದ್ರಿಯಮಸ್ತಿ ಶಬ್ದಃ ।
ನಾಸಾವಿಲೇಽತಿರುಚಿರೇ ತವ ಚಾಶ್ವಿನೇಯೌ
ಗಂಧಸ್ತ್ವದಿಂದ್ರಿಯಮಹೋ ಮುಖಮಗ್ನಿರಿದ್ಧಃ ॥ ೧೫ ॥
ಅಕ್ಷಿದ್ವಯಂ ದ್ಯೌಸ್ಸವಿತಾ ಚ ಚಕ್ಷು-
ರಹಸ್ತ್ರಿಯಾ ಮೇ ತವ ಪದ್ಮಮಾಲೇ ।
ಭ್ರುವೌ ತು ವೈರಿಂಚ್ಯಪದಂ ತಥಾಪ-
ಸ್ತಾಲೂ ರಸಜ್ಞಾ ರಸ ಏವ ಸರ್ವಃ ॥ ೧೬ ॥
ತ್ವದ್ಬ್ರಹ್ಮರಂಧ್ರಂ ಸಕಲಾಶ್ಚ ವೇದಾ
ದಂಷ್ಟ್ರಾಂತಕಃ ಸ್ನೇಹಲವಾಶ್ಚ ದಂತಾಃ ।
ಮಾಯಾ ತ್ರಿವರ್ಣಾ ಹಸಿತಂ ತವೇಶ
ಹ್ಯನಂತಸೃಷ್ಟಿಃ ಕಥಿತಾ ಕಟಾಕ್ಷಾ ॥ ೧೭ ॥
ಲೋಕತ್ರಯೇ ತೇ ಹ್ಯಧರೋತ್ತರೋಷ್ಠೌ
ಧರ್ಮಃ ಸ್ತನೌ ಪೃಷ್ಠಮಧರ್ಮಮಾರ್ಗಃ ।
ಪ್ರಜಾಪತಿರ್ಮೇಂಢ್ರಮಥಾಂಡಯುಗ್ಮಂ
ಮಿತ್ರೌ ಚ ಕುಕ್ಷೀ ಜಲರಾಶಯಸ್ತೇ ॥ ೧೮ ॥
ಭೂಭೃತೋಽಸ್ಥಿ ಸರಿತಸ್ತವ ನಾಡ್ಯೋ
ಭೂರುಹಾಸ್ತನುರುಹಾಃ ಶ್ವಸಿತಂ ತು ।
ಮಾರುತಃ ಸಕಲಜೀವಸಂಸ್ಕೃತಿಃ
ಕರ್ಮ ತೇ ಗತಿರಹೋ ವಯಃ ಪರಮ್ ॥ ೧೯ ॥
ಧಾರಾಧರಾಸ್ತವ ಕಚಾ ವಸನಂ ತು ಸಂಧ್ಯಾ
ಚಂದ್ರೋ ಮನಶ್ಚ ಹೃದಯಂ ಭಗವನ್ಪ್ರಧಾನಮ್ ।
ಚಿತ್ತಂ ಮಹದ್ಭವದಹಂಕರಣಂ ಶಿವೋಽಹ-
ಮುಷ್ಟ್ರಾ ವಿಭಾತಿ ಚ ಮಹಿಷಖಡ್ಗಮೃಗಾ ನಖಾಸ್ತೇ ॥ ೨೦ ॥
ಪಯಾಂಸಿ ರೇತೋಽಸ್ಯ ಸುರರ್ಷಭಸ್ಮೃತಿ-
ಸ್ತ್ವನನ್ಯಲಭ್ಯಾ ಕಮಲಾ ಚ ವಕ್ಷಃ ।
ವಿಪ್ರಾನನಂ ಕ್ಷತ್ರಭುಜಂ ವಿಡೂರುಂ
ಶೂದ್ರಾದಿಪಾದಂ ಭಗವತ್ತಂಮೀಡೇ ॥ ೨೧ ॥

ನಿರುಕ್ತಮನಿರುಕ್ತಂ ವಾ ಭೂತಂ ಭವ್ಯಂ ಭವಚ್ಚ ಯತ್ ।
ತ್ವಯಿ ವಿಶ್ವಾತ್ಮಕೇ ಸರ್ವಂ ಭಾತಿ ನ ವ್ಯತಿರೇಕತಃ ॥ ೨೨ ॥
ಪ್ರಯಾಗಮಂಡನಂ ದೇವಂ ಮಾಧವಂ ವರದಂ ವಿಭುಮ್ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ಪಾಹಿ ಮಾಂ ಪರಮೇಶ್ವರ ॥ ೨೩ ॥

**ರುದ್ರದೇವರು ಹೇಳಿದರು—**

ಹೇ ಲಕ್ಷ್ಮೀಪತಿಯಾದ ಮಾಧವನೇ! ನಾನು ನಿನ್ನನ್ನು ಈ ರೀತಿಯಾಗಿ ತಿಳಿದುಕೊಂಡಿದ್ದೇನೆ. ಹೇಗೆಂದರೆ, ಈಗ ನನಗೆ ತೋರುತ್ತಿರುವ ಈ ರೂಪವು ಕ್ರೀಡಾದಿಗುಣ ವಿಶಿಷ್ಟವಾದ ಅಲೌಕಿಕ ರೂಪವು, ದೇವತೆಗಳು ಮತ್ತು ಅಸುರರಿಂದ ಸ್ತೋತ್ರಮಾಡಲ್ಪಟ್ಟದ್ದು. ನೀನು ಸರ್ವವನ್ನೂ ಮಾಡಬಲ್ಲ ಶಕ್ತಿಯುಳ್ಳವನು. ಇಡೀ ವಿಶ್ವವು ನಿನ್ನ ಪ್ರತಿಮಾರೂಪವಾಗಿದೆ. ಆದ್ದರಿಂದಲೇ ನಿನ್ನನ್ನು ಸಜ್ಜನರು ''ವಿಶ್ವ'' ಎಂದು ಕರೆಯುತ್ತಾರೆ. ॥ ೧೧ ॥ ಪಾತಾಲವು ನಿನ್ನ ಪಾದಮೂಲದಿಂದಲೂ ರಸಾತಲವು ಪಾದದ ಮೇಲ್ಭಾಗದಿಂದಲೂ ವಿರಾಜಮಾನವಾಗಿದ್ದು ಮಹಾತಲವು ಸುಂದರವಾದ ಗುಲ್ಫದಿಂದಲೂ(ಹಿಮ್ಮಡಿಯ ಮೇಲ್ಭಾಗ) ತಲಾತಲವು ಮೊಣಕಾಲಿನಿಂದಲೂ (ಜಂಘ) ಭೂಷಿತವಾಗಿರುವ ನಿನಗೆ ನಮಸ್ಕಾರಗಳು. ॥೧೨॥ ಎರಡು ಮಂಡಿಗಳಲ್ಲಿ ಸುತಲ ಲೋಕವನ್ನು ಹೊಂದಿರುವ ನಾಶರಹಿತನೇ, ತೊಡೆಗಳಲ್ಲಿ ವಿತಲ ಮತ್ತು ಅತಲ ಲೋಕವುಳ್ಳ ಜಗದ್ಗುರುವೇ, ಉತ್ಕೃಷ್ಟವಾದ ಸೊಂಟವೇ ಭೂಲೋಕವಾಗುಳ್ಳ ಲಕ್ಷ್ಮೀಪತಿಯೇ, ಭುವರ್ಲೋಕವೇ(ಆಕಾಶ) ನಾಭಿಯಾಗುಳ್ಳ ಅಭಯ ಪ್ರದನೇ, ನಿನಗೆ ನಮಸ್ಕಾರಗಳು. ॥ ೧೩ ॥ ಶ್ಲಾಘನೀಯವಾದ ವಕ್ಷಃಸ್ಥಲದಲ್ಲಿ ಸ್ವರ್ಗಲೋಕವನ್ನೂ, ಅತಿ ಸಮರ್ಥವಾದ ನಿನ್ನ ಕಂಠದಲ್ಲಿ ಮಹರ್ಲೋಕವನ್ನೂ, ಮುಖಕಮಲದಲ್ಲಿ ಜನೋಲೋಕವನ್ನೂ ಸತ್ಯಲೋಕವೇ ಶಿರಸ್ಸಾಗುಳ್ಳ ನಿನ್ನನ್ನು ಶರಣು ಹೊಂದುತ್ತೇನೆ. ॥ ೧೪ ॥ ಇಂದ್ರಾದಿದೇವತೆಗಳೇ ಉತ್ಕೃಷ್ಟವಾದ ಬಾಹುಗಳು, ದಿಗ್ದೇವತೆಗಳು, ಶ್ರವಣೇಂದ್ರಿಯ ಹಾಗೂ ಶಬ್ದಗಳೇ ಕಿವಿಗಳು(ಆಯಾಯಾ ಸ್ಥಳಗಳಿಂದ ಅವವುಗಳು ಹುಟ್ಟಿವೆ ಮತ್ತು ಆಯಾಯಾ ಸ್ಥಳಗಳನ್ನು ಆಶ್ರಯಿಸಿವೆ ಎಂದರ್ಥ) ಅಶ್ವಿನೀದೇವತೆಗಳು, ಘ್ರಾಣೇಂದ್ರಿಯ ಹಾಗೂ ಗಂಧಗಳೇ ನಾಸಿಕಗಳು(ಮೂಗಿನ ಹೊಳ್ಳೆಗಳು), ಮುಖವೇ ಅಗ್ನಿಯು, ಪದ್ಮಮಾಲಾ ಧರನೇ, ದ್ಯುಲೋಕವು, ಸೂರ್ಯನು ಮತ್ತು ಚಕ್ಷುರಿಂದ್ರಿಯಗಳೇ ನಿನ್ನ ಎರಡು ಕಣ್ಣುಗಳು, ದಿವಾರಾತ್ರಿಗಳು ಕಣ್ಣಿನ ರೆಪ್ಪೆಗಳು, ಬ್ರಹ್ಮವಾಸಸ್ಥಾನವಾದ ಸತ್ಯಲೋಕವೇ ಭ್ರೂವಿಜೃಂಭವು, ಜಲವೇ ಅಂಗಳಾಗಿಯೂ, ರಸನೇಂದ್ರಿಯಗ್ರಾಹ್ಯ ಷಡ್ರಸಗಳೇ ಜಿಹ್ವೆಯು, ನಿನ್ನ ನೆತ್ತಿಯ ಮಧ್ಯ ದಲ್ಲಿರುವ ಬ್ರಹ್ಮರಂಧ್ರವೇ ಸಕಲವೇದಗಳ ರಾಶಿಯೂ, ಕೋರೆಹಲ್ಲುಗಳೇ ಯಮಧರ್ಮನು, ಸ್ನೇಹರಸವೇ ಇತರ ಹಲ್ಲುಗಳು ಸಕಲರನ್ನು ಮೋಹಿಸುವ ಮಾಯೆಯೇ ನಿನ್ನ ಮಂದಹಾಸವು ಮತ್ತು ಅಂತ್ಯವಿಲ್ಲದ ಜಗತ್ ಸೃಷ್ಟಿಯೇ ನಿನ್ನ ಕುಡಿನೋಟವೆಂದು ಹೇಳಲ್ಪಟ್ಟಿದೆ. ॥ ೧೫-೧೬ ॥ ಲೋಕತ್ರಯವನ್ನು ಆವರಿಸಿದ ಲೋಭಲಜ್ಜೆಗಳೇ ನಿನ್ನ ಕೆಳ ಮತ್ತು ಮೇಲ್ತುಟಿಗಳು, ಸ್ತನಗಳೇ ಧರ್ಮವು, ಅಧರ್ಮವೇ ಬೆನ್ನು, ಪ್ರಜಾಪತಿಯೇ ಜನನೇಂದ್ರಿಯವು, ಎರಡು ಅಂಡಕೋಶಗಳೇ ಮಿತ್ರನಾಮಕ ಸೂರ್ಯನು, ಸಮುದ್ರವೇ ಹೊಟ್ಟೆಯು, ಗಿರಿಪರ್ವತಗಳೇ ಅಸ್ಥಿಗಳು, ನದಿಗಳು ನಿನ್ನ ನಾಡಿಗಳು, ವೃಕ್ಷಲತಾದಿಗಳೇ ನಿನ್ನ ರೋಮಗಳು, ನಿನ್ನ ಶ್ವಾಸೋಚ್ಛ್ವಾಸಗಳೇ ಮಾರುತನು, ಸಕಲಗುಣ ಪ್ರವಾಹವೇ ನಿನ್ನ ಕರ್ಮಮಾರ್ಗವು, ಗಮನವೇ ವಯಃಕಾರಣವು,

(ಊಹಾತೀತವಾದ ವಯಸ್ಸು) ಶಿರೋಕೇಶಗಳೇ ಮೇಘಗಳು, ಧರಿಸುವ ಬಟ್ಟೆಗಳು ತ್ರಿಸಂಧ್ಯಾ ಕಾಲಗಳು, ಮನಸ್ಸೇ ಚಂದ್ರನು, ನಿನ್ನ ಹೃದಯವು ಪ್ರಧಾನ ತತ್ವವು (ಮೂಲ ಪ್ರಕೃತಿ), ಚಿತ್ತವೇ ಮಹತ್‌ತತ್ವವು, ಅಹಂಕಾರವೇ ಸೃಷ್ಟಿಯಲ್ಲಿರತಕ್ಕ ಶಿವನಾದ ನಾನು, ನಖಗಳೇ ಒಂಟೆ, ಎಮ್ಮೆ, ಖಡ್ಗಮೃಗ ಮುಂತಾದವುಗಳು ಉಗುರುಗಳು. ಜಲವೇ ನಿನ್ನ ವೀರ್ಯವು. ಸ್ಮರಣಶಕ್ತಿಯೇ ದೇವತಾಶ್ರೇಷ್ಠರು, ಅನ್ಯರಿಗೆ ಲಭ್ಯವಲ್ಲದ ಶ್ರೀ ಲಕ್ಷ್ಮೀದೇವಿಯೇ ನಿನ್ನ ವಕ್ಷಃಸ್ಥಳವು, ಬ್ರಾಹ್ಮಣರು ನಿನ್ನ ಬಾಯಿಯು, ಕ್ಷತ್ರಿಯರು ನಿನ್ನ ಭುಜಗಳು, ವೈಶ್ಯರು ನಿನ್ನ ತೊಡೆಗಳು ಮತ್ತು ಶೂದ್ರರೇ ನಿನ್ನ ಕಾಲುಗಳಾಗಿಯೂ ಉಳ್ಳಂತಹ ನಿನಗೆ ನಮಸ್ಕಾರಗಳು. ॥ ೧೭-೨೧ ॥ ಈ ವರ್ಣಿಸಲ್ಪಟ್ಟ ಮತ್ತು ವರ್ಣಿಸದೇ ಇರುವಂಥ ವರ್ಣನೆಗೆ ಸಿಲುಕಿರುವ, ಸಿಲುಕದಿರುವ ಭೂತ, ಭವಿಷ್ಯತ್ ಮತ್ತು ವರ್ತಮಾನಗಳಿಗೆ ಸಂಬಂಧಪಟ್ಟ ಎಲ್ಲವೂ ನಿನ್ನಲ್ಲಿ ಪ್ರಕಾಶಿಸಿದುವು, ಪ್ರಕಾಶವಾಗುತ್ತಿರುವುವು ಮತ್ತು ಪ್ರಕಾಶವಾಗುವುವು. ಆದ್ದರಿಂದ ನೀನು ''ವಿಶ್ವಾತ್ಮಕ''ನೆಂದು ಹೇಳಲ್ಪಟ್ಟಿದೆ. ನಿನ್ನನ್ನು ಬಿಟ್ಟು ಜಗತ್ತು ಇರಲಾರದು. ॥ ೨೨ ॥ ಎಲೈ ಪ್ರಯಾಗ ಕ್ಷೇತ್ರಕ್ಕೆ ಭೂಷಣಪ್ರಾಯನಾಗಿರತಕ್ಕ, ಸರ್ವಸಮರ್ಥನಾಗಿರುವ ಮತ್ತು ಭಕ್ತರಿಗೆ ವರಗಳನ್ನು ದಯಪಾಲಿಸತಕ್ಕ ಶ್ರೀಮಾಧವನೇ! ನಿನಗೆ ನಾನು ಶರಣುಹೊಕ್ಕಿದ್ದೇನೆ. ನನ್ನನ್ನು ಕಾಪಾಡು ಎಂದು ಪ್ರಾರ್ಥಿಸಿದರು. ॥ ೨೩ ॥

[ಶ್ರೀರುದ್ರದೇವರು ಶ್ರೀಪ್ರಯಾಗ ಮಾಧವರನ್ನು ಸ್ತೋತ್ರಮಾಡಿರುವುದರಲ್ಲಿ ಈ ಕೆಳಗಿನ ವಿಷಯಗಳು ಅಡಕವಾಗಿವೆ.—ಪರಮಾತ್ಮನ ವಿರಾಟ್‌ರೂಪವು ಭೂಃ, ಭುವಃ, ಸುವಃ, ಮಹಃ, ಜನ, ತಪಃ, ಸತ್ಯ ಎಂಬ ಮೇಲಿನ ಏಳು ಲೋಕಗಳೂ, ಅತಳ, ವಿತಳ, ಸುತಳ, ತಳಾತಳ, ಮಹಾತಳ, ರಸಾತಳ, ಪಾತಾಳವೆಂಬ ಕೆಳಗಿನ ಏಳು ಲೋಕಗಳೂ ಒಟ್ಟಿನಲ್ಲಿ ಬ್ರಹ್ಮಾಂಡದಲ್ಲಿ ಅಂತರ್ಗತ ವಾಗಿರುವ ಹದಿನಾಲ್ಕು ಲೋಕಗಳಲ್ಲೂ ವ್ಯಾಪ್ತವಾಗಿ ಈ ಹದಿನಾಲ್ಕು ಲೋಕಗಳ ಸೃಷ್ಟಿಸ್ಥಿತಿ ಮತ್ತು ನಿಯಮನವನ್ನು ಮಾಡುತ್ತಿದೆ. ಇದಲ್ಲದೆ ಪರಮಾತ್ಮನಿಂದಲೇ ಪ್ರಚೋದಿಸಲ್ಪಟ್ಟ ಶ್ರೀಲಕ್ಷ್ಮೀದೇವಿ ಯರಿಂದ ಸೃಷ್ಟವಾದ ಮಹತ್ತತ್ವ, ಅಹಂಕಾರತತ್ವ, ಬುದ್ಧಿ ಮನಸ್ಸು, ಪಂಚ ಇಂದ್ರಿಯಗಳು, ಪಂಚತನ್ಮಾತ್ರಾಗಳು, ಪಂಚಭೂತಗಳು ಮತ್ತು ಪಂಚಕಮೇಂದ್ರಿಯಗಳು ಒಟ್ಟಿನಲ್ಲಿ ಈ ಇಪ್ಪತ್ತನಾಲ್ಕು ತತ್ವಗಳಲ್ಲಿಯೂ ವ್ಯಾಪಿಸಿ ಈ ತತ್ವಗಳ ಅಭಿಮಾನಿಗಳಾದ ಇಪ್ಪತ್ತನಾಲ್ಕು ತತ್ವಾಭಿಮಾನಿಗಳಲ್ಲಿಯೂ ಅಂತರ್ಯಾಮಿಯಾಗಿ ನಿಂತು ಎಲ್ಲಕ್ಕೂ ನಿಯಾಮಕನಾಗಿದ್ದು ''ವಿಶ್ವ'' ಎಂಬ ಹೆಸರಿನಿಂದ ವೇದಶಾಸ್ತ್ರಗಳಲ್ಲಿ ಕರೆಯಲ್ಪಟ್ಟಿದ್ದಾನೆ. ಈ ವಿಷಯದಿಂದ ವಿಷ್ಣು ಸರ್ವೋತ್ತಮತ್ವವು ಚೆನ್ನಾಗಿ ವೇದ್ಯವಾಗುವುದು.]

ಸೂತ ಉವಾಚ—

> ಸ್ತುತ್ವೈವಂ ದರ್ಶನಾಹ್ಲಾದನಿರ್ವೃತಾತ್ಮೇಪ್ಸಿತಾಶಯಃ ।
> ಹೃಷ್ಟರೋಮಾಶ್ರುಪೂರ್ಣಾಕ್ಷೋ ಜೋಷಮಾಸ ಮಹೇಶ್ವರಃ ॥ ೨೪ ॥
> ಏವಂ ಸ್ತುತಸ್ಸ ಭಗವಾನಾದಿದೇವಸ್ಸತಾಂ ಗತಿಃ ।
> ಪರಿತುಷ್ಟಃ ಪ್ರಸನ್ನಾತ್ಮಾ ಪ್ರಹಸಂಸ್ತಮಭಾಷತ ॥ ೨೫ ॥

ಸೂತರು ಹೇಳಿದರು—

ಈ ರೀತಿಯಾಗಿ ಸ್ತೋತ್ರಮಾಡಿದ ಶ್ರೀಪರಮೇಶ್ವರನು (ರುದ್ರದೇವರಿಗೆ) ಶ್ರೀಮಾಧವನ ದರ್ಶನದಿಂದ ಆನಂದದಿಂದ ತುಂಬಿಹೋದರು. ಅವರ ಇಂದ್ರಿಯಗಳಿಗೆಲ್ಲಾ

ತೃಪ್ತಿಯಾಯಿತು. ಸಂತಸದಿಂದ ಅವರಿಗೆ ರೋಮಾಂಚನ ಉಂಟಾಯಿತು. ತೃಪ್ತಿಯಿಂದ ಮಾತೇ ಹೊರಡದೆ ಸುಮ್ಮನಾದರು. ॥ ೨೪ ॥ ಸಜ್ಜನರಿಂದ ಪ್ರಾಪ್ಯನಾದ ಆದಿದೇವನಾದ ಭಗವಾನ್ ಮಾಧವನು ಈ ಸ್ತೋತ್ರದಿಂದ ಪ್ರಸನ್ನಗೊಂಡು ಶ್ರೀರುದ್ರದೇವರನ್ನು ಕುರಿತು ಹೀಗೆ ಹೇಳಿದರು. ॥ ೨೫ ॥

**ಶ್ರೀಮಾಧವ ಉವಾಚ—**

> **ಪರಿತುಷ್ಟೋಽಸ್ಮಿ ತೇ ದೇವ ಜಪಯಜ್ಞೇನ ಧೂರ್ಜಟೇ ।**
> **ವರಂ ವೃಣೀಷ್ವ ಮೇ ಕಾಮಮಮೋಘಂ ದರ್ಶನಂ ಮಮ ॥ ೨೬ ॥**
> **ತ್ವಯಿ ಮಯ್ಯಬ್ಜನಾಭೌ ಚ ಭಿದಾಮಣ್ವಪಿ ಚಕ್ಷತೇ ।**
> **ಯೇ ತೇ ಪಾತಕಿನಸ್ಸತ್ಯಮಂತೇ ನಿರಯವಾಸಿನಃ ॥ ೨೭ ॥**
> **ಅಹಂ ತ್ವಂ ತ್ವಮಹಂ ಧಾತಾ ತ್ವಮಹಂ ಚೇತಿ ಧೀಜುಷಃ ।**
> **ವೃಣುತೇ ಸಕಲಾನ್ಕಾಮಾನ್ ತ್ರಿನೇತ್ರ ತ್ವಂ ತು ಕಿಂ ಪುನಃ ॥ ೨೮ ॥**

**ಶ್ರೀ ಮಾಧವನು ಹೇಳಿದನು—**

''ಹೇ ಧೂರ್ಜಟಿಯೇ ನೀನು ಮಾಡಿದ ಜಪಯಜ್ಞಾದಿಗಳಿಂದ ನಾನು ಸಂತುಷ್ಟನಾದೆನು. ನನ್ನ ಅಮೋಘವಾದ ದರ್ಶನದ ದಶೆಯಿಂದ ಯಥೇಚ್ಛವರವನ್ನು ಕೇಳಿಕೋ. ॥ ೨೬ ॥ ನಿನ್ನಲ್ಲಿಯೂ, ನನ್ನಲ್ಲಿಯೂ ಹಾಗೂ ಬ್ರಹ್ಮನಲ್ಲಿಯೂ ಯಾರು ಭೇದವನ್ನು ಹೇಳುತ್ತಾರೋ ಅವರೆಲ್ಲರೂ ಪಾಪಿಷ್ಠರು ಮತ್ತು ಸತ್ಯವಾಗಿಯೂ ಅವರೆಲ್ಲರೂ ನರಕವನ್ನು ಹೊಂದುತ್ತಾರೆ. ॥ ೨೭॥ ''ನಾನು ನೀನೇ, ನೀನೂ ನಾನೇ, ಚತುರ್ಮುಖ ಬ್ರಹ್ಮನೂ ನಾನೇ, ನೀನೂ ಕೂಡ'' ಈ ರೀತಿಯ ಭಾವನೆಯುಳ್ಳವರು ಎಲ್ಲ ಅಭೀಷ್ಟಗಳನ್ನೂ ಪಡೆಯುವರು. ಹೀಗಿರುವಾಗ ಎಲೈ ಮೂರು ಕಣ್ಣುಳ್ಳ ರುದ್ರನೇ! ನೀನು ನಿನ್ನ ಮನೋಭೀಷ್ಟವನ್ನು ಪಡೆದೇ ಪಡೆಯುವೆ ಎಂಬ ವಿಷಯದಲ್ಲಿ ಹೇಳತಕ್ಕದ್ದೇನಿದೆ ?'' ಎಂದು ಹೇಳಿದರು. ॥ ೨೮ ॥

೨೭-೨೮ ನೇ ಶ್ಲೋಕಗಳಲ್ಲಿ ತೋರಿಬರುವ ಅಭಿಪ್ರಾಯದ ವಿಷಯದಲ್ಲಿ ವಿಮರ್ಶೆ -

ಈ ಮೇಲಿನ ಎರಡು ಶ್ಲೋಕಗಳಲ್ಲಿ ಶ್ರೀಮಾಧವನು (ಅಂದರೆ ಪರಮಾತ್ಮನು) ಈಶ್ವರನೂ ಒಂದೇ ಎಂದೂ ಇವರಿಬ್ಬರಿಗೆ ಭೇದ ಹೇಳುವವರಿಗೆ ನರಕಾದ್ಯನರ್ಥಗಳಾಗುತ್ತವೆಂದೂ ಮತ್ತು ಶ್ರೀ ಹರಿಯು, ಬ್ರಹ್ಮನೂ ಮತ್ತು ಶಿವನೂ ಒಂದೇ ಎಂದೂ, ತ್ರಿಮೂರ್ತಿಗಳಲ್ಲಿ ಅಭೇದಜ್ಞಾನ ವುಳ್ಳವರಿಗೆ ಸಕಲ ಇಷ್ಟಾರ್ಥಗಳೂ ನೆರವೇರುವುದೆಂದೂ ಮೇಲ್ನೋಟಕ್ಕೆ ಅತಿರಮಣೀಯವಾಗಿ ತೋರುವುದು. ಇವು ಶ್ರೀಮಾಧವದೇವರ ಅಭಿಪ್ರಾಯಕ್ಕೆ ನೇರ ವಿರುದ್ಧವು. ಈ ಅಧ್ಯಾಯದಲ್ಲಿ ಶ್ರೀರುದ್ರದೇವರು ಶ್ರೀಮಾಧವನನ್ನು ಜಪಯಜ್ಞಾದಿಗಳಿಂದ ಆರಾಧಿಸಿದ್ದೂ ಮತ್ತು ಪೂರ್ವಾಧ್ಯಾಯಗಳಲ್ಲಿ ಶ್ರೀಬ್ರಹ್ಮದೇವರು ಶ್ರೀಮಾಧವನನ್ನು ದಶಾಶ್ವಮೇಧಗಳಿಂದ ಸಂತೋಷಪಡಿಸಿದ್ದು ಶ್ರೀ ಮಾಧವದೇವರ ಅನುಗ್ರಹಾಪೇಕ್ಷೆಯಿಂದಲೇ. ಈ ಅನುಗ್ರಹದಿಂದಲೇ ಪ್ರಯಾಗದಲ್ಲಿ ಅವರ ವಾಸಕ್ಕೆ ಶ್ರೀಮಾಧವದೇವರ ಅನುಮತಿಯೂ ಒದಗಿತು. ಶಿವಬ್ರಹ್ಮರಿಬ್ಬರೂ ಶ್ರೀಮಾಧವನೇ ಆಗಿದ್ದಲ್ಲಿ ಅವರು ಶ್ರೀಮಾಧವನ ಅನುಗ್ರಹಕ್ಕಾಗಿ ಜಪತಪಾದಿಗಳನ್ನು ಮಾಡುವ ಪ್ರಮೇಯವೇ ಬರುತ್ತಿರಲಿಲ್ಲ. ಆದ್ದರಿಂದ ಇಲ್ಲಿ ''ನಾವಿಬ್ಬರೂ, ನಾವು ಮೂವರೂ ಒಂದೇ''

ಎಂಬ ಮಾತನ್ನು ಭಾವೈಕ್ಯದಲ್ಲಿ(ಏಕಾಭಿಪ್ರಾಯ) ಗ್ರಹಿಸಬೇಕು. ಅಂದರೆ ಈ ಪ್ರಯಾಗಕ್ಷೇತ್ರದಲ್ಲಿದ್ದು ಶ್ರೀ ಮಾಧವದೇವರ ಸೇವಾ ಮಾಡಿದವರಿಗೆ ಶ್ರೀಮಾಧವದೇವರ ಅನುಗ್ರಹ ಯಥೇಷ್ಟ ದೊರಕುವುದು ಎಂಬ ವಿಷಯದಲ್ಲಿ ಈ ಮೂವರ ಅಭಿಪ್ರಾಯವೂ ಒಂದೇ ಎಂದು ತಿಳಿಯಬೇಕು. ಆದ್ದರಿಂದ ತ್ರಿಮೂರ್ತಿಗಳಲ್ಲಿ ಸರ್ವಥಾ ಅಭೇದವನ್ನು ತಿಳಿಯಲಾಗದು.

**ಸೂತ ಉವಾಚ—**

ಪ್ರಸನ್ನಂ ಮಾಧವಂ ವೀಕ್ಷ್ಯ ಕೃತಕೃತ್ಯಸ್ಸತೀಪತಿಃ ।
ಬದ್ಧಾಂಜಲಿಪುಟಃ ಪ್ರೀತ್ಯಾ ಪ್ರಾವೋಚನ್ಮಾಧವಂ ಪ್ರಭುಮ್ ॥ ೨೯ ॥

**ಸೂತರು ಹೇಳಿದರು—**

ಪ್ರಯಾಗಕ್ಷೇತ್ರದ ಬಗ್ಗೆಯೂ, ಇಲ್ಲಿ ಸೇವಾಮಾಡತಕ್ಕವರಿಗೆ ಶ್ರೀಮಾಧವರಿಂದಾಗುವ ವಿಶೇಷ ಅನುಗ್ರಹದ ಬಗ್ಗೆಯೂ ಶ್ರೀಮಾಧವದೇವರ ಅಭಿಪ್ರಾಯವನ್ನು ಗ್ರಹಿಸಿದ ಪಾರ್ವತೀಪತಿಯಾದ ಶ್ರೀರುದ್ರದೇವರು ತನಗೆ ಪ್ರತ್ಯಕ್ಷನಾಗಿರುವ ಶ್ರೀ ಮಾಧವನನ್ನು ನೋಡಿ ಕೃತಾರ್ಥನಾಗಿ, ಕೈಮುಗಿದು ಶ್ರೀಮಾಧವ ಪ್ರಭುವನ್ನು ಕುರಿತು ಈ ರೀತಿ ಹೇಳಿದನು. ॥ ೨೯ ॥

**ಶಿವ ಉವಾಚ—**

ಕಂ ವೃಣೇ ನು ಪರಂ ಭೂಮನ್ವರಂ ತ್ವದ್ವರದರ್ಶಭಾತ್ ।
ವರೇಣ್ಯೋ ತಾವತಾಲಂ ಮೇ ಯದ್ಭವಾನ್ ಸಮದೃಶ್ಯತ ॥ ೩೦ ॥
ಕೃತ್ವಾ ಬ್ರಹ್ಮಾದಯೋಽಪ್ಯಸ್ಯ ಶ್ರೀಮದ್ಪಾದಾಬ್ಜದರ್ಶನಮ್ ।
ಕೃತಕೃತ್ಯಾಃ ಪ್ರಜಾಯಂತೇ ಸ ಭವಾನ್ಮೇಽಕ್ಷಿಗೋಚರಃ ॥ ೩೧ ॥
ವರಮೇಕಂ ವೃಣೇಽಥಾಪಿ ಪೂರ್ಣಾತ್ಕಾಮಾಭಿವರ್ಷಣಾತ್ ।
ತ್ವತ್ಪಾದಾಬ್ಜೇಽಚ್ಯುತಾಂ ಭಕ್ತಿಂ ತ್ವತ್ಪರೇಷು ಚ ನಿತ್ಯಶಃ ॥ ೩೨ ॥
ಅಥಾಪಿ ಕಾಮಯೇಽನ್ಯಚ್ಚ ಪರೋಪಕರಣಂ ಪ್ರಭೋ ।
ಮದಾವಾಸೇ ತವಾವಾಸೋ ನಿರಂತಃ ಸ್ಯಾದ್ದಯಾನಿಧೇ ॥ ೩೩ ॥
ಯಾತ್ರಾರ್ಥಮಾಗತಾ ಮರ್ತ್ಯಾ ಮತ್ವೇದಂ ಯಾಂತಿ ಯೇ ಸಕೃತ್ ।
ಭವತಾ ಮೋಚನೀಯಾಸ್ತೇ ಪಾಪರಾಶಿಕೃತೋಽಪಿ ಹಿ ॥ ೩೪ ॥
ಅನೇಕಫಲದಾ ಭೂಯಾದಿದಮೀಶಾನಭೂಮಿಕಾ ।
ಧರ್ಮಕರ್ಮಕೃತಾಂ ಪುಂಸಾಂ ತ್ವತ್ಪ್ರಸಾದೇನ ಮಾಧವ ॥ ೩೫ ॥
ರುದ್ರಾಧ್ಯಾಯಸ್ಯ ಪಾಠೇನ ಪಂಚಾಕ್ಷರಜಪೇನ ಚ ।
ಶತೇನ ಲಭತಾಂ ಸಾಂಗವೇದಪಾರಾಯಣಂ ಫಲಮ್ ॥ ೩೬ ॥
ಸ್ನಾನಂ ದಾನಂ ಜಪಂ ಪಾಠಂ ತಪೋ ಹೋಮಂ ಮದರ್ಚನಮ್ ।
ಯತ್ಕಿಂಚಿತ್ಸುಕೃತಂ ಕುರ್ವನ್ಕೈಲಾಸೇ ವಸತಾಂ ನರಃ ॥ ೩೭ ॥

**ರುದ್ರದೇವರು ಹೇಳಿದರು—**

''ಅನಂತ ಕಲ್ಯಾಣಗುಣಗಳಿಂದ ಪೂರ್ಣನಾದ ಶ್ರೀಮಾಧವನೇ! ವರಗಳನ್ನು ಕರುಣಿಸುವವರಲ್ಲಿ ಶ್ರೇಷ್ಠನಾಗಿರತಕ್ಕವನೇ, ನಿನ್ನ ದರ್ಶನಭಾಗ್ಯವನ್ನು ನನಗೆ ಕರುಣಿಸಿದ್ದೀಯೆ, ಇಷ್ಟೇ ಸಾಕು; ಇದಕ್ಕಿಂತ ಹೆಚ್ಚಿಗೆಯಾದ ಇನ್ಯಾವ ವರಗಳನ್ನು ಕೇಳಲಿ? ।। ೩೦ ।। ಯಾವ ನಿನ್ನ ಚರಣಕಮಲಗಳ ದರ್ಶನದಿಂದ ಬ್ರಹ್ಮಾದಿದೇವತೆಗಳು ಕೃತಕೃತ್ಯರಾಗಿದ್ದಾರೆಯೋ ಅಂತಹ ನೀನು ನನಗೆ ದರ್ಶನವನ್ನು ಕೊಟ್ಟಿದ್ದೀಯೆ. ।। ೩೧ ।। ಆದರೂ ಗುಣಪೂರ್ಣನಾದ ಸರ್ವರ ಸರ್ವ ಅಭೀಷ್ಟಗಳನ್ನೂ ಸುರಿಸುವ ನಿನ್ನಿಂದ ಒಂದು ವರವನ್ನು ಯಾಚಿಸುತ್ತೇನೆ. ಅದು ಏನೆಂದರೆ ನಿನ್ನ ಪಾದಕಮಲಗಳಲ್ಲಿ ಸ್ಥಿರವಾದ ಭಕ್ತಿಯು ಮತ್ತು ನಿನ್ನವರಾದ ಭಕ್ತರಲ್ಲಿಯೂ ಯಥಾಯೋಗ್ಯಸುದೃಢ ಸ್ನೇಹವು. ।। ೩೨ ।। ಪರೋಪಕಾರಕ್ಕೋಸ್ಕರ ಮತ್ತೊಂದು ವರವನ್ನು ಬೇಡುತ್ತೇನೆ. ಈ ನನ್ನ ವಾಸಸ್ಥಳದಲ್ಲಿ ನಿರಂತರ ನಿನ್ನ ವಾಸವೂ ಇರಲಿ. ಈ ಪ್ರಯಾಗಕ್ಷೇತ್ರಕ್ಕೆ ಯಾತ್ರಾರ್ಥಿಗಳಾಗಿ ಬಂದು ನನ್ನ ಸ್ಥಾನದಲ್ಲಿ ಒಂದುಸಲವಾದರೂ ವಾಸ ಮಾಡಿದವರನ್ನು ನೀನು ಅವರು ಪಾಪ ಮಾಡಿದವರಾಗಿದ್ದರೂ ಕೂಡ ಈ ಸಂಸಾರಬಂಧನದಿಂದ ವಿಮೋಚನೆಮಾಡು. ।। ೩೩-೩೪ ।। ಈ ಭಾಗದಲ್ಲಿ ಬಂದು ಇದ್ದು ಧರ್ಮಕರ್ಮಗಳಲ್ಲಿ ನಿರತರಾದವರಿಗೆ ನಿನ್ನ ಅನುಗ್ರಹದಿಂದ ಅನೇಕ ಸತ್ಫಲಗಳು ಲಭ್ಯವಾಗಲಿ. ।। ೩೫ ।। ರುದ್ರಾಧ್ಯಾಯದ ಪಾಠದಿಂದ ಐದು ಅಕ್ಷರಗಳಿಂದ ಕೂಡಿದ ಶಿವಪಂಚಾಕ್ಷರೀ ಮಂತ್ರವನ್ನು ನೂರು ಸಾರಿಯಾದರೂ ಜಪಮಾಡುವುದರಿಂದ ನಿನ್ನ ಅನುಗ್ರಹದಿಂದ ಇಡೀ ವೇದಗಳ ಪಾರಾಯಣದಿಂದ ಬರುವಷ್ಟು ಫಲವು ಬರಲಿ. ।। ೩೬ ।। ಈ ಭಾಗದಲ್ಲಿ ವಾಸಮಾಡಿ ಸ್ನಾನ, ದಾನ, ಜಪ, ಪಾಠಪ್ರವಚನ, ತಪಸ್ಸು, ಹೋಮ, ನನ್ನ ಪೂಜಾ ಮತ್ತು ಏನೇ ಅಲ್ಪಸ್ವಲ್ಪವಾದರೂ ಪುಣ್ಯಕಾರ್ಯವೆಸಗಿದವರಿಗೆ ನನ್ನ ಸ್ಥಾನವಾದ ಕೈಲಾಸದಲ್ಲಿ ವಾಸಮಾಡುವ ಭಾಗ್ಯವನ್ನು ಕರುಣಿಸು.'' ಹೀಗೆಂದು ರುದ್ರದೇವರು ಶ್ರೀಮಾಧವನನ್ನು ಕೇಳಿಕೊಂಡರು. ।। ೩೭ ।।

**ಸೂತ ಉವಾಚ—**

ತಥೇತ್ಯೋಮಿತಿ ಸಂಪೂಜ್ಯ ಚಂದ್ರಮೌಲೇರ್ವಚಸ್ತತಃ ।
ಮಾಧವೋಽಂತರ್ದಧೇ ಸದ್ಯಃ ಪೂರಯಿತ್ವಾ ಮನೋರಥಮ್ ।। ೩೮ ।।
ಗಂಗಾಧರೋಽಪಿ ತತ್ಕ್ಷೇತ್ರೇ ಹಿತ್ವಾ ಕೈಲಾಸಪರ್ವತಮ್ ।
ಹೈಮವತ್ಯಾ ಸಹಾವಾತ್ಸೀತ್ ಪೂರಯನ್ಕಾಮಮರ್ಥಿನಾಮ್ ।। ೩೯ ।।
ತದಾದಿ ಋಷಯಸ್ತತ್ರ ಯತ್ಕಿಂಚಿತ್ಸುಕೃತಂ ನರಾಃ ।
ಭಕ್ತಿಮಂತಃ ಕರಿಷ್ಯಂತಿ ತತ್ತೇಷಾಮಕ್ಷಯಂ ಭವೇತ್ ।। ೪೦ ।।
ಯದ್ಭೂಮಿಸೇವನೇನಾಶು ದಿವೋದಾಸೋ ಮಹೀಪತಿಃ ।
ವಾರಾಣಸ್ಯಾಧಿಪತ್ಯಂ ವೈ ಗತಂ ಪುನರವಾಪ್ತವಾನ್ ।। ೪೧ ।।
ಏವಮಿಂದ್ರಾದಯೋ ಹೃಷ್ಟಾ ಲೋಕಪಾಲಾ ಯಥಾದಿಶಮ್ ।
ಸ್ವಂ ಸ್ವಂ ಲೋಕಂ ಪರಿತ್ಯಜ್ಯ ಸ್ಥಿತಾಸ್ಮಿಂಸ್ತೀರ್ಥನಾಯಕೇ ।। ೪೨ ।।
ತಸ್ಯ ಮಾಹಾತ್ಮ್ಯಕಥನೇ ತೀರ್ಥರಾಜಸ್ಯ ಕಃ ಪ್ರಭುಃ ।
ತಥಾಪ್ಯುಕ್ತಂ ಭವತ್ಪ್ರೀತ್ಯಾ ಕಿಮನ್ಯತ್ಕಥಯಾಮಿ ವಃ ।। ೪೩ ।।

।। ಇತಿ ಏಕತ್ರಿಂಶೋಽಧ್ಯಾಯಃ ।।

**ಸೂತರು ಹೇಳಿದರು—**

ಶ್ರೀ ಮಾಧವನು ರುದ್ರದೇವರ ಪ್ರಾರ್ಥನೆಯನ್ನು ಹಾಗೆಯೇ ಆಗಲೆಂದು ಮನ್ನಣೆ ಮಾಡಿ ಅದೃಶ್ಯರಾದರು; ಅವನ ಅಪೇಕ್ಷೆಯೂ ನೆರವೇರಿತು. ॥ ೩೮ ॥ ರುದ್ರದೇವರಾದರೋ ಕೈಲಾಸವನ್ನು ಒಂದಂಶದಿಂದ ಬಿಟ್ಟು ಭಕ್ತರ ಅಪೇಕ್ಷೆಗಳನ್ನೆಲ್ಲಾ ನೆರವೇರಿಸಲು, ಈ ಪ್ರಯಾಗದ ಈಶಾನ್ಯ ಭಾಗದಲ್ಲಿ ಪಾರ್ವತೀ ದೇವಿಯರೊಡನೆ ನೆಲಸಿದರು. ॥ ೩೯ ॥ ಇಲ್ಲಿಂದ ಮೊದಲ್ಗೊಂಡು ಋಷಿಗಳು ಮತ್ತು ಭಕ್ತಿಯಿಂದ ಕೂಡಿದ ಮನುಷ್ಯರು ಮತ್ತು ಭಕ್ತಿಯುಳ್ಳವರು ಯಾರೇ ಆಗಲೀ ಅವರೆಲ್ಲರೂ ಈಶಾನ್ಯ ಭಾಗದಲ್ಲಿ ಮಾಡಿದ ಅಲ್ಪ ಸ್ವಲ್ಪ ಸತ್ಕಾರ್ಯಗಳಿಗೂ ಅಕ್ಷಯವಾದ ಫಲವೂ ಸಿಗಲಾರಂಭಿಸಿತು. ॥ ೪೦ ॥ ಯಾವ ಕ್ಷೇತ್ರದಲ್ಲಿದ್ದು ಸೇವಾದಿಗಳನ್ನು ಮಾಡಿ ಕಳೆದುಹೋಗಿದ್ದ ತನ್ನ ರಾಜ್ಯವನ್ನು ದಿವೋದಾಸರಾಜನು ಪುನಃ ಹೊಂದಿದನೋ, ಇಂದ್ರನೇ ಮೊದಲಾದ ಅಷ್ಟದಿಕ್ಪಾಲಕರುಗಳು ತಮ್ಮ ತಮ್ಮ ಲೋಕವನ್ನು ಬಿಟ್ಟು ಒಂದೊಂದು ಅಂಶದಿಂದ ಎಲ್ಲಿ ಬಂದು ನೆಲೆಸಿದ್ದಾರೆಯೋ, ಅಂಥ ತೀರ್ಥರಾಜನಾದ ಪ್ರಯಾಗದ ಮಹಿಮೆಯನ್ನು ಹೇಳಲು ಯಾರು ತಾನೇ ಸಮರ್ಥರಿದ್ದಾರೆ ? ಹಾಗಿದ್ದರೂ ನಿಮ್ಮ ಮೇಲಿನ ಸ್ನೇಹದಿಂದ ಇಷ್ಟನ್ನು ಹೇಳಿದ್ದೇನೆ. ಇನ್ನೇನು ಹೇಳಲಿ ? ॥ ೪೧-೪೩॥

॥ ಮೂವತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಾತ್ರಿಂಶೋಽಧ್ಯಾಯಃ ॥ ೩೨ ॥

ಋಷಯ ಊಚುಃ—

ಸೂತ ಸೂತ ಗುಣಾಧಾರ ಸರ್ವಲೋಕೋಪಕಾರಕ ।
ತೀರ್ಥರಾಜಕಥಾಪಾನೈರ್ಭವತಾ ಪಾವಿತಾ ವಯಮ್ ॥ ೧ ॥
ಭೂಯಃ ಶ್ರಾವಯ ಮಾಹಾತ್ಮ್ಯಂ ತೀರ್ಥರಾಜಸ್ಯ ವಿಸ್ತೃತಿಮ್ ।
ಸ್ಮೃತಿಕೀರ್ತನದರ್ಶಾದ್ಯೈರ್ಯತ್ಫಲಂ ಲಭತೇ ನರಃ ॥ ೨ ॥
ದೂರಸ್ಥಾನಾಂ ದರಿದ್ರಾಣಾಂ ತೀರ್ಥರಾಜಸ್ಯ ದರ್ಶನಮ್ ।
ನಿವಾಸಸ್ನಾನಪಾನಾದಿ ಘಟೇತ ಸುಖತಃ ಕಥಮ್ ॥ ೩ ॥
ಅತಃ ಪ್ರಯಾಗಮಾಹಾತ್ಮ್ಯಂ ಶ್ರವಣಾದಿಫಲಾನ್ವಿತಮ್ ।
ವಕ್ತುಮರ್ಹಸಿ ಸರ್ವಜ್ಞ ಸರ್ವೇಷಾಮುಪಕಾರಕಮ್ ॥ ೪ ॥

## ॥ ಮೂವತ್ತೆರಡನೆಯ ಅಧ್ಯಾಯವು ॥

ಋಷಿಗಳು ಹೇಳುತ್ತಾರೆ—

ಶ್ರೀ ಸೂತರೇ ! ತಾವು ಎಲ್ಲ ಗುಣಗಳ ಗಣಿಯು ಮತ್ತು ಎಲ್ಲ ಜನರಿಗೂ ಉಪಕಾರಿಗಳು. ತಾವು ಉಪದೇಶ ಮಾಡಿದ ತೀರ್ಥರಾಜನ ಕಥೆಯನ್ನು ಆಸ್ವಾದನೆ ಮಾಡಿ ನಾವುಗಳು ಪವಿತ್ರರಾದೆವು. ॥ ೧ ॥ ಈ ತೀರ್ಥರಾಜನ ಸ್ಮರಣೆ, ಕೀರ್ತನೆ ಮತ್ತು ದರ್ಶನವೇ ಮೊದಲಾದವುಗಳಿಂದ ಮನುಷ್ಯರು ಏನು ಫಲವನ್ನು ಹೊಂದುವರು ಎಂಬ ವಿಷಯವನ್ನೊಳಗೊಂಡ ಪ್ರಯಾಗದ ಮಾಹಾತ್ಮ್ಯೆಯನ್ನು ಇನ್ನೂ ವಿಸ್ತಾರವಾಗಿ ನಮಗೆ ಹೇಳಿರಿ. ॥ ೨ ॥ ದೂರದೂರದಲ್ಲಿರುವ ದರಿದ್ರರಿಗೆ ಈ ಪ್ರಯಾಗ ಕ್ಷೇತ್ರದ ವಾಸ, ಸ್ನಾನ ಮತ್ತು ಈ ತೀರ್ಥದ ಪಾನ ಮುಂತಾದವುಗಳು ಹೇಗೆ ಕಷ್ಟವಿಲ್ಲದೆ ದೊರಕೀತು? ॥ ೩ ॥ ಪ್ರಯಾಗ ಮಾಹಾತ್ಮ್ಯೆಯನ್ನು ಕೇಳುವ ಮಾತ್ರದಿಂದಲೇ ಒಳ್ಳೆಯ ಫಲ ಪ್ರಾಪ್ತಿಯಾಗುವುದು; ಆದ್ದರಿಂದ ಎಲ್ಲರಿಗೂ ಉಪಯುಕ್ತವಾಗಿರುವ ಈ ಮಾಹಾತ್ಮ್ಯೆಯನ್ನು ತಾವು ಮತ್ತಷ್ಟು ಹೇಳೋಣವಾಗಲಿ. ॥ ೪ ॥

ಸೂತ ಉವಾಚ—

ಪುನರನ್ಯತ್ಪ್ರವಕ್ಷ್ಯಾಮಿ ಗುಹ್ಯಂ ಸರ್ವಜನಪ್ರಿಯಮ್ ।
ಧರ್ಮಿಣಾಂ ಸುಲಭಂ ವಿಪ್ರಾ ದುರ್ಲಭಂ ಪಾಪಕರ್ಮಣಾಮ್ ॥ ೫ ॥
ವಟಮೂಲೇತಿ ವಿಖ್ಯಾತಂ ಸರ್ವದೇವರ್ಷಿಸಮ್ಮತಮ್ ।
ಯತ್ರೇಷ್ಟಂ ಬ್ರಹ್ಮದೇವೇನ ಕ್ರತೂನಾಂ ದಶಕೇನ ಚ ॥ ೬ ॥
ಯತ್ರ ಚೈಕಾರ್ಣವೇ ಶೇತೇ ನಷ್ಟೇ ಸ್ಥಾವರಜಂಗಮೇ ।
ಸರ್ವತ್ರ ಜಲಸಂಪೂರ್ಣೇ ವಟೇ ಬಾಲವಪುರ್ಹರಿಃ ॥ ೭ ॥
ತದಾಕ್ಷಯ್ಯವಟಸ್ತತ್ರ ಪಂಚಯೋಜನವಿಸ್ತೃತಃ ।
ಸುವರ್ಣಪತ್ರಿತಃ ಸ್ವಾದುಫಲಾದಿಭಿರಲಂಕೃತಃ ॥ ೮ ॥

ತತ್ಪರ್ಣಪುಟಕೇ ಬಾಲಂ ಸ್ವಪಂತಂ ಗಿರಿಶಾದಯಃ ।
ಬದ್ಧಾಂಜಲಿಪುಟಾಸ್ಸಂತಸ್ತುವಂತಿ ಜಗದೀಶ್ವರಮ್ ॥ ೯ ॥
ತದಾಧಾರೇಣ ತತ್ಕ್ಷೇತ್ರಂ ತತ್ಕಾಲೇ ಕಕುದಾಕೃತಿಃ ।
ವಿರಾಜತೇ ಮುನಿಶ್ರೇಷ್ಠಾ ಜಗದಾಧಾರಕಾರಣಾತ್ ॥ ೧೦ ॥
ಬ್ರಹ್ಮಾದ್ಯಾ ದೇವತಾಸ್ಸರ್ವಾ ಮುನಯೋ ಮಾನವಾಸ್ತಥಾ ।
ಇಂದ್ರಾದ್ಯಾ ಲೋಕಪಾಲಾಶ್ಚ ಯಕ್ಷಗಂಧರ್ವಕಿನ್ನರಾಃ ॥ ೧೧ ॥
ಅಂಗಿರಃಪ್ರಮುಖಾಶ್ಚಾನ್ಯೇ ಪಿತೃಣಾಂ ಚ ಗಣಾಸ್ತಥಾ ।
ದೇವಪತ್ನ್ಯಪ್ಸರೋ ನಾಗಾಃ ಘೃತಾಚ್ಯಾದ್ಯಾಸ್ಸುರಸ್ತ್ರಿಯಃ ॥ ೧೨ ॥
ಸರಿತಸ್ಸಾಗರಾಶ್ಶೈಲಾಸ್ತೀರ್ಥಾನಿ ಜಲದಾ ನದಾಃ ।
ಸ್ವಸ್ವರೂಪೇಣ ತೇ ಸರ್ವೇ ಪ್ರಯಾಗೇ ಯಾಂತಿ ನಿಶ್ಚಿತಮ್ ॥ ೧೩ ॥
ತ್ರಿಶೂಲಾಗ್ರೇ ಸಮಾಧಾಯ ಶಿವೋಽಪ್ಯಾನಂದಕಾನನೇ ।
ತಿಷ್ಠತೇ ತಾಂಡವಂ ಕುರ್ವನ್ಮಾಧವಾಗ್ರೇ ವಿಶೇಷತಃ ॥ ೧೪ ॥
ವಿರಾಜತೇ ಪರೋ ಯತ್ರ ಗಂಗಾಯಮುನಸಂಗಮಃ ।
ಸರಸ್ವತ್ಯಾ ಸಮಾಯುಕ್ತಸ್ಸುರಾಸುರಸುಪೂಜಿತಃ ॥ ೧೫ ॥
ಶ್ರವಣಾತ್ತೀರ್ಥರಾಜಸ್ಯ ನಾಮಸಂಕೀರ್ತನಾದಪಿ ।
ಮೃತ್ತಿಕಾಲಂಭನಾದ್ವಾಪಿ ನರಃ ಪಾಪಾತ್ಪ್ರಮುಚ್ಯತೇ ॥ ೧೬ ॥
ಯಥಾ ಸರ್ವೇಷು ದೇವೇಷು ವಿಷ್ಣುಃ ಶ್ರೇಷ್ಠತ್ವಮರ್ಹತಿ ।
ತಥಾ ಸರ್ವೇಷು ತೀರ್ಥೇಷು ಪ್ರಯಾಗಃ ಶ್ರೇಷ್ಠ ಉಚ್ಯತೇ ॥ ೧೭ ॥
ತೀರ್ಥರಾಜಂ ಸಮಾಸಾದ್ಯ ನ ಚಾನ್ಯತ್ಕಿಂಚಿದಿಚ್ಛತಿ ।
ಕೋ ಹಿ ದೇವತ್ವಮಾಸಾದ್ಯ ಮಾನುಷತ್ವಂ ಚಿಕೀರ್ಷತಿ ॥ ೧೮ ॥
ಬ್ರಹ್ಮಾಪಿ ಸ್ಮರತೇ ನಿತ್ಯಂ ಪ್ರಯಾಗಂ ತೀರ್ಥನಾಯಕಮ್ ।
ತಸ್ಯಾನುಭೂತವಿಭವಸ್ಸತ್ಯಲೋಕಸ್ಥಿತಸ್ಸದಾ ॥ ೧೯ ॥
ನೈಮಿಷಂ ಪುಷ್ಕರಂ ಚೈವ ಗೋತೀರ್ಥಂ ಸಿಂಧುಸಾಗರಮ್ ।
ಗಯಾ ಚ ಧೇನುಕಂ ಚೈವ ಗಂಗಾಸಾಗರಸಂಗಮಃ ॥ ೨೦ ॥
ಯೇ ಚಾನ್ಯೇ ಬಹವಸ್ತೀರ್ಥಾ ಯೇ ಚ ಪುಣ್ಯಾಶ್ಶಿಲೋಚ್ಚಯಾಃ ।
ದಶತೀರ್ಥಸಹಸ್ರಾಣಿ ತ್ರಿಂಶತ್ಕೋಟ್ಯಸ್ತಥಾಪರಾಃ ॥ ೨೧ ॥
ಭೂಪಾತಾಲಕಕುಬ್ವ್ಯೋಮಗತಾಸ್ಸರ್ವೇಽಧಿಕಾರಿಣಃ ।
ಪ್ರಯಾಗೇ ಸಂಸ್ಥಿತಾ ನಿತ್ಯಮೇವಮಾಹುರ್ಮನೀಷಿಣಃ ॥ ೨೨ ॥
ಪ್ರಯಾಗಮಂಡಲಗತಾ ಯಾವಂತಸ್ಸಿಕತಾಕಣಾಃ ।
ತಾವತ್ತೀರ್ಥಾನಿ ಸೇವಂತೇ ಲಿಂಗದೇಹೇನ ಮಾಧವಮ್ ॥ ೨೩ ॥

ಲಿಂಗಭಂಗಂ ಪ್ರತೀಕ್ಷಂತೇ ಪ್ರಾರ್ಥಯಂತೀಪ್ಸಿತಂ ಪ್ರಭುಮ್ ।
ಕದಾ ಮುಕ್ತಿಮಪ್ಯೇಷ್ಯಾಮಸ್ತೀರ್ಥರಾಜ ತವಾಜ್ಞಯಾ ॥ ೨೪ ॥
ದಿವಿ ಭುವ್ಯಂತರಿಕ್ಷೇ ಚ ಪಾತಾಲವಿವರೇಷು ಚ ।
ತೀರ್ಥಾನಿ ವ್ರತದಾನಾನಿ ತಪೋಯಜ್ಞಫಲಾನಿ ಚ ॥ ೨೫ ॥
ಸಂತಿ ಶ್ರೇಯಸ್ಸಾಧನಾನಿ ತಾನಿ ಸರ್ವಾಣಿ ಸರ್ವದಾ ।
ಪ್ರಯಾಗಗುಣಲೇಶಾನಾಂ ಕಲಾಂ ನಾರ್ಹಂತಿ ಷೋಡಶೀಮ್ ॥ ೨೬ ॥
ಅನ್ಯತೀರ್ಥಸಮಾನಂ ಯಃ ಪ್ರಯಾಗಂ ಮನುತೇ ನರಃ ।
ರೌರವಾದಿಷು ಘೋರೇಷು ಪತತ್ಯೇವ ನ ಸಂಶಯಃ ॥ ೨೭ ॥
ಅನ್ಯಕ್ಷೇತ್ರೇ ಕೃತಂ ಪಾಪಂ ತತ್ಕ್ಷಣಾದೇವ ಸುವ್ರತಾಃ ।
ಪ್ರಯಾಗೇ ವಿಲಯಂ ಯಾತಿ ಪಾಪಂ ತತ್ರ ಕೃತಂ ವಿನಾ ॥ ೨೮ ॥
ಪುರಾತ್ರೈವ ಮಹಾಯಜ್ಞಾನ್ವಿಧಾತಾ ಸೃಷ್ಟಿಕಾಮ್ಯಯಾ ।
ಕೃತ್ವಾ ಪ್ರಾಪ್ಯ ಚ ಸಾಮರ್ಥ್ಯಂ ಸಸೃಜೇ ಸಕಲಾಃ ಪ್ರಜಾಃ ॥ ೨೯ ॥
ಸಸ್ನೌ ನಾರಾಯಣೋಽಪ್ಯತ್ರ ಪತ್ನೀಮಿಚ್ಛನ್ಮನೋರಮಾಮ್ ।
ಲೇಭೇ ಚಿರಂ ತತೋ ಲಕ್ಷ್ಮೀಂ ಸಿಂಧೋಃ ಪೀಯೂಷಮಂಥನೇ ॥ ೩೦ ॥
ಶಿವೋಽಪ್ಯತ್ರ ವಸನ್ಕ್ಷೇತ್ರೇ ಕಾಮಯಾನೋ ರಿಪುಕ್ಷಯಮ್ ।
ಕ್ಷಣಾರ್ಧ ಏಕ ಏವಾಸೌ ತ್ರಿಪುರಂ ಸಮಪಾತಯತ್ ॥ ೩೧ ॥
ಗರ್ವೇಣೇಂದ್ರಸ್ಯ ಶಾಪೇನ ಶೀಘ್ರಂ ಸ್ವರ್ಗಚ್ಯುತೋರ್ವಶೀ ।
ವೇಣ್ಯಾಂ ತತ್ಕಾಮುಕೋ ಸಸ್ನೌ ಸ್ವರ್ಗಂ ಪ್ರಾಪ ತತೋಽಚಿರಾತ್ ॥ ೩೨ ॥
ಪ್ರಯಾಗೇ ನಹುಷೋ ರಾಜಾ ಪುತ್ರಮಿಚ್ಛನ್ಸಿತಾಸಿತೇ ।
ಸ್ನಾತ್ವಾ ಯಯಾತಿಮಚಿರಾಲ್ಲೇಭೇ ವಂಶಪ್ರವರ್ತಕಮ್ ॥ ೩೩ ॥
ಧನಕಾಮಃ ಪುರೇಂದ್ರೋಽಪಿ ಸ್ನಾತ್ವಾತ್ರೈವ ದ್ವಿಜೋತ್ತಮಾಃ ।
ಸರ್ವದ್ರವ್ಯಾಧಿಪಸ್ಯಾಪಿ ಧನದಸ್ಯಾಧಿಪೋಽಭವತ್ ॥ ೩೪ ॥
ಶರದಾಮಯುತಂ ಪೂರ್ವಮನಾಹಾರೌ ತಪಸ್ವಿನೌ ।
ನರನಾರಾಯಣೌ ಸಮ್ಯಕ್ಚಕ್ರತುರ್ಧರ್ಮಸಂಗ್ರಹಮ್ ॥ ೩೫ ॥
ಭರದ್ವಾಜೋಽಪಿ ನಿವಸನ್ಪ್ರಯಾಗೇ ಸ್ನಾನಪೂರ್ವಕಮ್ ।
ಷಟ್ಕೇಽಭೂತ್ಕಶ್ಯಪಾದೀನಾಂ ಸಪ್ತಮೋ ಮಾಧವಾಜ್ಞಯಾ ॥ ೩೬ ॥
ಅಸ್ಮಿನ್ ಕ್ಷೇತ್ರೇ ಪುರಾ ವಿಪ್ರಾಃ ಕ್ಷೇತ್ರಜ್ಞಸ್ಯಾಪರೋಕ್ಷತಾಮ್ ।
ಯೋಗಸ್ಯ ಪರಮಾಂ ಸಿದ್ಧಿಂ ಲೇಭಿರೇ ಸನಕಾದಯಃ ॥ ೩೭ ॥
ದೀರ್ಘಾಯುಷೋ ಧನಾಢ್ಯಾಶ್ಚ ವಿದ್ಯಾವಂತಸ್ತಪಸ್ವಿನಃ ।
ರಾಜಾನಃ ಪುತ್ರವಂತಶ್ಚ ಮುಕ್ತಾಶ್ಚ ಬಹವೋಽಭವನ್ ॥ ೩೮ ॥

ಅತಿಚಿಂತಾಮಣಿಂ ಚಾತಿಕಲ್ಪವೃಕ್ಷಮಮುಂ ನರಃ ।
ಅತಿಕಾಮದುಘಂ ಪ್ರಾಪ್ಯಂ ಕಂ ಕಾಮಂ ನಾಧಿಗಚ್ಛತಿ ॥ ೩೯ ॥
ಪಂಚಯೋಜನವಿಸ್ತೀರ್ಣಂ ಪ್ರಯಾಗಸ್ಯ ತು ಮಂಡಲಮ್ ।
ಪ್ರವಿಷ್ಟಸ್ಯೈವ ತದ್ಭೂಮಾವಶ್ವಮೇಧಃ ಪದೇ ಪದೇ ॥ ೪೦ ॥
ಆಪ್ರಯಾಗಂ ಪ್ರತಿಷ್ಠಾನಂ ಯತ್ತುರ್ರೋ ವಾಸುಕೇರ್ಹ್ರದಾತ್ ।
ಕಮ್ಬಲಾಶ್ವತರೌ ನಾಗೌ ನಾಗಶ್ಚ ಬಹುಮೂಲಕಃ ॥ ೪೧ ॥
ಏತತ್ಪ್ರಜಾಪತೇಃ ಕ್ಷೇತ್ರಂ ತ್ರಿಷು ಲೋಕೇಷು ವಿಶ್ರುತಮ್ ।
ಯತ್ರ ಸ್ಥಿತಾ ನ ತಪ್ಯಂತೇ ಜನಾ ಮೃತ್ಯುದವಾಗ್ನಿನಾ ॥ ೪೨ ॥
ಅವಿಮುಕ್ತೇ ವಿಮುಚ್ಯಂತೇ ತಾರಕಜ್ಞಾನಜನ್ಮನಾ ।
ವಿನಾ ಜ್ಞಾನಂ ಪ್ರಯಾಗೇಽಸ್ಮಿನ್ಮುಚ್ಯಂತೇ ಸರ್ವಜಂತವಃ ॥ ೪೩ ॥
ಧರ್ಮಾರ್ಥಕಾಮಮೋಕ್ಷಾಣಾಂ ಕರಂಡೋಽಯಂ ವಿರಾಜತೇ ।
ಅತ ಏವಾಖಿಲೈಃ ಶ್ರೇಷ್ಠಃ ಮಹೀಮಂಡಲಮಂಡನಃ ॥ ೪೪ ॥
ತೀರ್ಥರಾಜಸ್ಯ ಮಾಹಾತ್ಮ್ಯಂ ಬ್ರಹ್ಮವಿಷ್ಣುಮಹೇಶ್ವರಾಃ ।
ಜಾನಂತಿ ತತ್ತ್ವತೋಽನ್ಯೇ ಚ ಶೇಷವ್ಯಾಸಮೃಕಂಡಜಾಃ ॥ ೪೫ ॥
ಸ್ವಯಮೇವಾಖಿಲಶ್ರೇಷ್ಠಸ್ತತೋಽಕ್ಷಯ್ಯವರಾನ್ವಿತಃ ।
ಕಾಲಿಂದ್ಯಾ ಗಂಗಯಾ ವಾಣ್ಯಾ ಯಥೋತ್ತರಸಮನ್ವಿತಃ ॥ ೪೬ ॥
ಇಂದ್ರಾದಿದೇವತಾಜುಷ್ಟೋ ಧರ್ಮಕಾಮಾರ್ಥಮೋಕ್ಷದಃ ।
ತೀರ್ಥಶ್ರೇಣೀಮಣಿಶ್ಚಾತಃ ಕಿಂ ಚಿತ್ರಂ ತಸ್ಯ ವೈಭವೇ ॥ ೪೭ ॥
ತೀರ್ಥರಾಜಂ ಪರಿತ್ಯಜ್ಯ ಯೋಽನ್ಯಸ್ಮಾತ್ಕಾಮಮಿಚ್ಛತಿ ।
ಭಾರತಾಖ್ಯೇ ಮಹಾವರ್ಷೇ ನ ಕಾಮಂ ಪ್ರಾಪ್ನುಯಾತ್ಸ್ಫುಟಮ್ ॥ ೪೮ ॥
ಸಿತಾಸಿತೇ ಸರಿಚ್ಛ್ರೇಷ್ಠೇ ಯತ್ರಾಸಾತೇ ಸುದುರ್ಲಭಮ್ ।
ತತ್ರಾಪ್ಲುತಾನಾಂ ಜಂತೂನಾಂ ಕೈವಲ್ಯಂ ಕೋಽತ್ರ ಸಂಶಯಃ ॥ ೪೯ ॥
ಕ್ಷೇತ್ರಂ ಪ್ರಜಾಪತೇಃ ಪುಣ್ಯಂ ಸರ್ವೇಷಾಮೇವ ದುರ್ಲಭಮ್ ।
ಪ್ರಾಪ್ಯತೇ ಪುಣ್ಯಸಂಭಾರೈರ್ನಾನ್ಯಥಾರ್ಥಸ್ಯ ರಾಶಿಭಿಃ ॥ ೫೦ ॥
ಯಜ್ವನಾಂ ಪುನರಾಯಾತೋ ನ ಪ್ರಯಾಗಾದ್ರ್ರವರ್ಷ್ಮಣಾಮ್ ।
ಶ್ರೀಮಾಧವಸ್ವರೂಪೇಣ ವೈಕುಂಠಂ ನಯತೇ ಹರಿಃ ॥ ೫೧ ॥
ದಿವಾಂಗನಾಃ ಪ್ರಾರ್ಥಯಂತಿ ತೀರ್ಥರಾಜಾನಿಲಾನಪಿ ।
ತೇಽಪಿ ನಃ ಪಾವಯಿಷ್ಯಂತಿ ಕಿಂ ಕುರ್ಮಃ ಪಂಗವೋ ವಯಮ್ ॥ ೫೨ ॥
ಅಶ್ವಮೇಧಾದಿಯಜ್ಞಾಶ್ಚ ಪ್ರಯಾಗಸ್ಯ ರಜಃ ಪುನಃ ।
ಬ್ರಹ್ಮಣಾ ತುಲಿತಂ ಪೂರ್ವಂ ನ ತೇ ತದ್ರಜಸಾ ಸಮಾಃ ॥ ೫೩ ॥

ಬ್ರಹ್ಮಹತ್ಯಾದಿಪಾಪಾನಿ ತಾವದ್ಗರ್ಜಂತಿ ದೇಹಿಷು ।
ಯಾವನ್ನಮಜ್ಜತಿ ನೋ ಜಂತುಃ ಪ್ರಯಾಗೇ ಪಾಪಹಾರಿಣಿ ॥ ೫೪ ॥
ವೈಕುಂಠೇ ನ ತಥಾ ಹ್ಯಷ್ಟೋ ವಸತೇ ಮಾಧವಃ ಪ್ರಭುಃ ।
ಪ್ರಸನ್ನಸ್ತೀರ್ಥರಾಜೇಽಸೌ ಯಥಾಸ್ತೇಽಕ್ಷಯ್ಯಪಾದಪೇ ॥ ೫೫ ॥
ನ ಮಾಧವಸಮೋ ದೇವೋ ನ ಚ ಗಂಗಾಸಮಾ ನದೀ ।
ನ ತೀರ್ಥರಾಜಂ ಸದೃಶಂ ತೀರ್ಥಮಸ್ತಿ ಜಗತ್ತ್ರಯೇ ॥ ೫೬ ॥
ಇತ್ಥಂ ಶ್ರೀತೀರ್ಥರಾಜಸ್ಯ ಮಹಿಮಾ ವರ್ಣಿತೋ ಮಯಾ ।
ಗುರುಪ್ರಸಾದಾದ್ಗೋಪ್ಯೋಽಪಿ ಪರೋಪಕೃತಯೇಽಮಲಾಃ ॥ ೫೭ ॥

॥ ಇತಿ ದ್ವಾತ್ರಿಂಶೋಽಧ್ಯಾಯಃ ॥

**ಸೂತರು ಹೇಳಿದರು—**

ಈಗ ಬೇರೊಂದನ್ನು ಹೇಳುವೆನು, ಇದು ಅತಿ ರಹಸ್ಯವಾದದ್ದು. ಎಲ್ಲರಿಗೂ ಪ್ರಿಯವಾದದ್ದು. ಧರ್ಮಾತ್ಮರಿಗೆ ಸಾಧಿಸಲು ಸುಲಭವಾದದ್ದು ಮತ್ತು ಪಾಪಿಷ್ಠರಿಗೆ ಅಸಾಧ್ಯವಾದದ್ದು. ॥ ೫ ॥ ''ವಟಮೂಲ'' ಎಂದು ಪ್ರಖ್ಯಾತವಾದುದೊಂದಿದೆ. ಇದನ್ನು ಎಲ್ಲ ದೇವತೆಗಳೂ ಋಷಿಗಳೂ ಒಪ್ಪಿದ್ದಾರೆ. ಇಲ್ಲಿಯೇ ಬ್ರಹ್ಮದೇವರು ಹತ್ತು ಅಶ್ವಮೇಧ ಯಾಗಗಳನ್ನು ಮಾಡಿದರು. ॥ ೬ ॥ ಮಹಾಪ್ರಳಯದಲ್ಲಿ ಶ್ರೀ ಹರಿಯು ಜೀವಜಡಾತ್ಮಕವಾದ ಎಲ್ಲವನ್ನು ತನ್ನ ಹೊಕ್ಕಳಿನಿಂದ ಸೆಳೆದುಕೊಂಡು ತನ್ನಹೊಟ್ಟೆಯಲ್ಲಿಟ್ಟುಕೊಂಡು ತಾನು ಚಿಕ್ಕ ಬಾಲಕನ ರೂಪವನ್ನುತಾಳಿ ಈ ಆಲದ ಮರದ ಬುಡದಲ್ಲಿಯೇ ಮಲಗಿರುವನು. ಆಗ ಎಲ್ಲೆಲ್ಲಿಯೂ ಎಲ್ಲವೂ ಜಲಮಯವಾಗಿದ್ದು ಇದೊಂದು ವಟವೃಕ್ಷವು ಮಾತ್ರ ಇದ್ದಿತು. ॥ ೭ ॥ ಹೀಗೆ ಎಲ್ಲವೂ ನಾಶವಾದರೂ ಇದೊಂದು ನಾಶವಾಗದೆ ಇದ್ದಿದ್ದರಿಂದ ಇದಕ್ಕೆ ಅಕ್ಷಯ ವಟವೃಕ್ಷ ಎಂದು ಹೆಸರಾಯಿತು. ಈ ಮರದ ಸುತ್ತ ಇರುವ ಐದು ಯೋಜನ ವಿಸ್ತೀರ್ಣವುಳ್ಳ ಕ್ಷೇತ್ರಕ್ಕೆ ಅಕ್ಷಯ ಎಂದು ಹೆಸರಾಯಿತು. ಈ ಅಕ್ಷಯ ವಟವೃಕ್ಷವು ಬಂಗಾರದಂತೆ ಹೊಳೆಯುವ ಎಲೆಗಳಿಂದಲೂ ಸಿಹಿಯಾದ ಹಣ್ಣುಗಳಿಂದಲೂ ಅಲಂಕೃತವಾಗಿದೆ. ॥ ೮ ॥ ಈ ಮರದ ಚಿಕ್ಕ ಎಲೆಯ ಮೇಲೆ ಬಾಲಕನ ರೂಪದಲ್ಲಿ ಮಲಗಿಕೊಂಡು ಯೋಗನಿದ್ರೆ ಮಾಡುತ್ತಿರುವ ಜಗದೀಶ್ವರನಾದ ಶ್ರೀ ಹರಿಯನ್ನು ಶ್ರೀ ರುದ್ರದೇವರೇ ಮೊದಲಾದ ಸಂತರು ನೋಡಿ ಕೈಜೋಡಿಸಿಕೊಂಡು ಸ್ತೋತ್ರಮಾಡುತ್ತಾರೆ. ॥ ೯ ॥ ಜಗತ್ತಿನ ನಿಯಾಮಕನಾದ ಶ್ರೀ ಹರಿಯು ಇಲ್ಲಿ ವಿರಾಜಮಾನರಾಗಿರುವ ಕಾರಣದಿಂದಲೇ ಈ ಕ್ಷೇತ್ರವು ಶಿಖರಾಕಾರವಾಗಿದ್ದು ಎಲ್ಲ ಕ್ಷೇತ್ರಗಳಿಗಿಂತಲೂ ಶ್ರೇಷ್ಠತೆಯನ್ನು ಹೊಂದಿ ವಿರಾಜಮಾನವಾಗಿದೆ. ॥ ೧೦ ॥ ನಿಶ್ಚಯವಾಗಿಯೂ ಬ್ರಹ್ಮಾದಿದೇವತೆಗಳು, ಎಲ್ಲ ಋಷಿಗಳು, ಮಾನವರು, ಇಂದ್ರಾದಿ ದಿಕ್ಪಾಲಕರು, ಗಂಧರ್ವರು, ಕಿನ್ನರರು, ಅಂಗೀರಸಾದಿ ಋಷಿಗಳು, ಪಿತೃಗಣಗಳು, ದೇವತೆಗಳ ಪತ್ನಿಯರು, ಅಪ್ಸರೆಯರು, ಘೃತಾಚಿಯೇ ಮೊದಲಾದ ದೇವತಾಸ್ತ್ರೀಯರುಗಳು, ಎಲ್ಲ ನದಿಗಳು, ಸಾಗರಗಳು, ಪರ್ವತಗಳು, ತೀರ್ಥಗಳು ಮತ್ತು ಮೇಘಗಳು ತಮ್ಮ ತಮ್ಮ ಸ್ವರೂಪಗಳಿಂದ ಪ್ರಯಾಗ ಕ್ಷೇತ್ರಕ್ಕೆ ಹೋಗುತ್ತಾರೆ. ॥ ೧೧-೧೩ ॥ ಇಂದ್ರನ ಆನಂದವನದಲ್ಲಿ ತ್ರಿಶೂಲವನ್ನು ಹಿಡಿದು ರುದ್ರದೇವರೂ ಮಾಧವನ ಪ್ರೀತಿಗಾಗಿ ತಾಂಡವ ನರ್ತನ ಮಾಡುವರು. ॥ ೧೪ ॥

ದೇವಾಸುರರಿಂದ ಪೂಜಿಸಲ್ಪಡುವ ಗಂಗೆ, ಯಮುನೆ ಮತ್ತು ಸರಸ್ವತಿಯರ ಸಂಗಮವು ಈ ಕ್ಷೇತ್ರದಲ್ಲಿಯೇ ಆಗುವುದು. ॥ ೧೫ ॥ ಇಂತಹ ತೀರ್ಥರಾಜನ ನಾಮಸಂಕೀರ್ತನೆಗಳನ್ನು ಕೇಳುವುದರಿಂದಲೂ ಮತ್ತು ಇಲ್ಲಿಯ ಮಣ್ಣನ್ನು ಹಣೆಗೆ ಹಚ್ಚಿಕೊಳ್ಳುವುದರಿಂದಲೂ ಮನುಷ್ಯನು ಎಲ್ಲಾ ಪಾಪಗಳನ್ನು ಕಳೆದುಕೊಳ್ಳುವನು. ॥ ೧೬ ॥ ಯಾವ ರೀತಿಯಾಗಿ ದೇವತೆಗಳಲ್ಲೆಲ್ಲಾ ಶ್ರೀ ವಿಷ್ಣುವು ಶ್ರೇಷ್ಠನೋ ಅದೇ ರೀತಿ ಪ್ರಯಾಗವು ಎಲ್ಲ ತೀರ್ಥಗಳಿಗೂ ಶ್ರೇಷ್ಠವು ಎಂದು ಹೇಳಲ್ಪಡುತ್ತದೆ. ॥ ೧೭ ॥ ದೇವತ್ವವನ್ನು ಹೊಂದಿದವನು ಹೇಗೆ ಮನುಷ್ಯತ್ವವನ್ನು ಅಪೇಕ್ಷಿಸುವುದಿಲ್ಲವೋ, ಹಾಗೆಯೇ ಈ ತೀರ್ಥರಾಜನನ್ನು ಹೊಂದಿದವರು ಇದನ್ನು ಬಿಟ್ಟು ಬೇರೆ ಯಾವುದನ್ನೂ ಬಯಸುವುದಿಲ್ಲ. ॥ ೧೮ ॥ ಬ್ರಹ್ಮದೇವರು ತೀರ್ಥನಾಯಕನಾದ ಪ್ರಯಾಗವನ್ನು ನಿತ್ಯವೂ ಸ್ಮರಿಸುತ್ತಿರುತ್ತಾರೆ. ಅದರ ವೈಭವವನ್ನು ತಿಳಿದಂಥ ಅವರು ಸರ್ವದಾ ಸತ್ಯಲೋಕದಲ್ಲಿದ್ದು ಪ್ರಯಾಗವನ್ನು ಸ್ಮರಿಸುತ್ತಾರೆ. ॥ ೧೯ ॥ ''ನೈಮಿಷಾರಣ್ಯವು, ಪುಷ್ಕರ ಕ್ಷೇತ್ರವು, ಗೋತೀರ್ಥವು, ಸಿಂಧು ಸಾಗರವು, ಗಯಾಕ್ಷೇತ್ರವು, ಧೇನುಕಾಕ್ಷೇತ್ರವು, ಗಂಗೆಯು ಸಮುದ್ರಕ್ಕೆ ಸೇರುವ ಗಂಗಾ ಸಾಗರವೆಂಬ ತೀರ್ಥವು, ಇನ್ನೂ ಬೇರೆ ಬೇರೆ ಬಹಳಷ್ಟು ತೀರ್ಥಗಳು, ಬಹಳಷ್ಟು ಪರ್ವತಗಳು, ದಶತೀರ್ಥಗಳೆಂದು ಪ್ರಸಿದ್ಧವಾದವುಗಳು, ಸಹಸ್ರತೀರ್ಥಗಳೆಂದು ಪ್ರಸಿದ್ಧವಾದವುಗಳು, ಮೂವತ್ತು ಕೋಟಿ ತೀರ್ಥಗಳೆಂದು ಪ್ರಸಿದ್ಧವಾದುವುಗಳು, ಭೂಮಿ, ಆಕಾಶ ಮತ್ತು ಪಾತಾಳದಲ್ಲಿದ್ದು ತೀರ್ಥಗಳೆಂದು ಕರೆಸಿಕೊಳ್ಳುವ ಅಧಿಕಾರ ಹೊಂದಿದವುಗಳು ಇವೆಲ್ಲವೂ ನಿತ್ಯವೂ ಪ್ರಯಾಗಕ್ಷೇತ್ರದಲ್ಲಿಯೇ ಇರುವುವು'' ಹೀಗೆಂದು ಜ್ಞಾನಿಗಳು ಹೇಳುವರು. ॥ ೨೦-೨೨ ॥ ಪ್ರಯಾಗ ಕ್ಷೇತ್ರದಲ್ಲಿ ಎಷ್ಟೆಷ್ಟು ಮರಳು ಕಣಗಳಿವೆಯೋ ಅಷ್ಟಷ್ಟು ಸಂಖ್ಯೆಯಲ್ಲಿ ತೀರ್ಥಗಳು ತಮ್ಮ ಲಿಂಗ ದೇಹದಿಂದಲೇ ಪ್ರಯಾಗದಲ್ಲಿದ್ದುಕೊಂಡು ಮಾಧವನನ್ನು ಸೇವಾ ಮಾಡುತ್ತಿವೆ. ॥ ೨೩ ॥ ತಮಗೆ ಲಿಂಗಭಂಗವಾಗಿ ಯಾವಾಗ ಮಾಧವನ ಆಜ್ಞೆಯಾಗಿ ತಮಗೆ ಮುಕ್ತಿಯು ದೊರಕುವುದೋ ಎಂಬ ಕಳಕಳಿಯಿಂದ ಶ್ರೀ ಮಾಧವನನ್ನು ಪ್ರಾರ್ಥನೆ ಮಾಡುತ್ತಿವೆ. ॥ ೨೪ ॥ ಸ್ವರ್ಗದಲ್ಲಿ, ಭೂಮಿಯಲ್ಲಿ, ಅಂತರಿಕ್ಷದಲ್ಲಿ ಮತ್ತು ಪಾತಾಳದಲ್ಲಿ ಎಷ್ಟೆಷ್ಟು ತೀರ್ಥಗಳು, ವ್ರತಗಳು ಮತ್ತು ತಪಸ್ಸುಗಳಿವೆಯೋ ಮತ್ತು ಅವುಗಳಿಗೆ ಯಾವ ಯಾವ ಶ್ರೇಯಸ್ಸು ಮತ್ತು ಸಾಧನಗಳಿವೆಯೋ ಅವೆಲ್ಲಾ ಪ್ರಯಾಗ ಕ್ಷೇತ್ರದ ಶ್ರೇಯಸ್ಸಿನಲ್ಲಿ ಮತ್ತು ಸಾಧನೆಯಲ್ಲಿ ಒಂದಂಶವನ್ನೂ ಹೊಂದಲಾರವು. ॥ ೨೫-೨೬ ॥ ಪ್ರಯಾಗ ಕ್ಷೇತ್ರಗಳಿಗೆ ಸರಿಸಮವೆಂದು ಬೇರೆ ತೀರ್ಥಗಳನ್ನು ಪರಿಗಣಿಸತಕ್ಕವರು ಖಂಡಿತ ರೌರವಾದಿ ನರಕಗಳಲ್ಲಿ ಬೀಳುವರು. ॥ ೨೭ ॥ ಬೇರೆ ಬೇರೆ ಕ್ಷೇತ್ರಗಳಲ್ಲಿ ಎಸಗಿರುವ ಪಾಪಗಳೆಲ್ಲವೂ ಅಕ್ಷಯ ಕ್ಷೇತ್ರವೆಂದು ಪ್ರಸಿದ್ಧವಾಗಿರುವ ಈ ಪ್ರಯಾಗದಲ್ಲಿ ಸದಾಚಾರ ಸಂಪನ್ನತೆಯಿಂದಯಿದ್ದು, ಯಾವ ಪಾಪಾಚರಣೆಯನ್ನು ಮಾಡದೆ ಸೇವಾದಿಗಳನ್ನು ಮಾಡಿದರೆ ಅಂಥವರ ಪಾಪವೆಲ್ಲವೂ ನಾಶವಾಗುವುದು. ಪ್ರಯಾಗದಲ್ಲಿಯೇ ಮಾಡಿರುವ ಪಾಪಗಳು ನಾಶವಾಗುವುದಿಲ್ಲ. ॥ ೨೮ ॥ ಹಿಂದೆ ಬ್ರಹ್ಮಾಂಡದೊಳಗೆ ಸೃಷ್ಟಿಮಾಡಲು ಬಯಸಿದ ಬ್ರಹ್ಮದೇವರು ಈ ಕ್ಷೇತ್ರದಲ್ಲಿದ್ದು ಮಹಾಯಜ್ಞಗಳನ್ನು ಮಾಡಿ ತನ್ನ ಸೃಷ್ಟಿಕಾರ್ಯಕ್ಕೆ ಬೇಕಾಗುವ ಸಾಮರ್ಥ್ಯವನ್ನು ಸಂಪಾದಿಸಿದನು. ॥ ೨೯ ॥ ಶ್ರೀಹರಿಯು ಲೋಕವಿಡಂಬನೆಗಾಗಿ ಪತ್ನಿಯನ್ನು ಹೊಂದಲು ಇಷ್ಟವುಳ್ಳವನಾಗಿ ಪ್ರಯಾಗದ ವೇಣೀ ಸಂಗಮದಲ್ಲಿ ಸ್ನಾನಮಾಡಿ ದೇವಾಸುರರು ಸಮುದ್ರಮಥನ ಮಾಡಿದಾಗ ಕ್ಷೀರಸಾಗರದಲ್ಲಿ ಆವಿರ್ಭೂತಳಾದ ಸಾಗರನ ಮಗಳಾದ ಶ್ರೀ ಲಕ್ಷ್ಮೀದೇವಿಯನ್ನು ಹೊಂದಿ ವಿವಾಹಿತನಾದನು. ॥ ೩೦ ॥ ಶಿವನು ಈ ಕ್ಷೇತ್ರದಲ್ಲಿ

ವಾಸಮಾಡಿಕೊಂಡಿದ್ದು ತ್ರಿಪುರಾಸುರನನ್ನು ಗೆಲ್ಲುವದಕ್ಕಾಗಿ ಸೇವಾದಿಗಳನ್ನು ಮಾಡಿ ಆವಶ್ಯಕವಾದ ಸಾಮರ್ಥ್ಯವನ್ನು ಪಡೆದು ತನ್ನ ಶತ್ರುವನ್ನು ಕ್ಷಣಾರ್ಧದಲ್ಲಿ ಸಂಹರಿಸಿದನು. ॥ ೩೧ ॥ ಊರ್ವಶಿಯು ತನ್ನ ಗರ್ವಕ್ಕಾಗಿ ಇಂದ್ರನಿಂದ ಶಾಪವನ್ನು ಹೊಂದಿ ಭೂಲೋಕಕ್ಕೆ ಬಂದು ಚಂದ್ರವಂಶದ ಚಕ್ರವರ್ತಿಯಾಗಿದ್ದ ಪುರೂರವನೊಡನೆ ಸಂಸಾರ ಮಾಡಿಕೊಂಡಿದ್ದು, ಕೊನೆಗೆ ತನ್ನ ಪ್ರಿಯನೊಡನೆ ಈ ಸಂಗಮದಲ್ಲಿ ಸ್ನಾನಮಾಡಿ ನಂತರ ಸ್ವರ್ಗಕ್ಕೆ ಹಿಂದಿರುಗಿದಳು. ॥ ೩೨ ॥ ಚಂದ್ರವಂಶದ ಚಕ್ರವರ್ತಿ ನಹುಷನು ಪುತ್ರಾಪೇಕ್ಷಿಯಾಗಿ ಈ ಸಂಗಮದಲ್ಲಿ ಸ್ನಾನಮಾಡಿ ತನ್ನ ವಂಶವನ್ನು ಬೆಳಗಿಸತಕ್ಕ ಯಯಾತಿರಾಜನನ್ನು ಮಗನನ್ನಾಗಿ ಪಡೆದನು. ॥ ೩೩ ॥ ಐಶ್ವರ್ಯವನ್ನು ಹೊಂದುವುದಕ್ಕಾಗಿ ಇಂದ್ರನು ಈ ಸಂಗಮದಲ್ಲಿ ಸ್ನಾನಮಾಡಿ ಸಮಸ್ತ ಐಶ್ವರ್ಯಕ್ಕೂ ಅಧಿಪತಿಯಾಗಿ ಧನರಾಜನೆಂದು ಪ್ರಸಿದ್ಧನಾದ ಕುಬೇರನನ್ನೂ ಮೀರಿಸುವಷ್ಟು ಐಶ್ವರ್ಯವನ್ನು ಪಡೆದನು. ॥ ೩೪ ॥ ಹತ್ತುಸಾವಿರ ವರ್ಷಗಳ ಹಿಂದೆ ನರ ಮತ್ತು ನಾರಾಯಣರು ಇದೇ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಿ ಧರ್ಮಸಂಗ್ರಹಣೆಯನ್ನು ಮಾಡಿದರು. ॥ ೩೫ ॥ ಶ್ರೀಭಾರದ್ವಾಜ ಋಷಿಗಳು ಈ ಕ್ಷೇತ್ರದಲ್ಲಿಯೇ ತಪಸ್ಸನ್ನು ಮಾಡಿ ಮಾಧವನ ಅನುಗ್ರಹದಿಂದ ಸಪ್ತ ಋಷಿಗಳಲ್ಲಿ ಒಬ್ಬರಾದರು. ॥ ೩೬ ॥ ಎಲೈ ಶೌನಕಾದಿಗಳೇ! ಈ ಕ್ಷೇತ್ರದಲ್ಲಿದ್ದು ತಪಸ್ಯಾದಿಗಳನ್ನು ಮಾಡಿದ್ದರಿಂದಲೇ ಶ್ರೀಸನಕಾದಿಗಳು ಅಪರೋಕ್ಷಜ್ಞಾನವನ್ನು ಮತ್ತು ಸಾಂಖ್ಯಯೋಗದ ಪರಮ ಸಿದ್ಧಿಯನ್ನು ಪಡೆದರು. ॥ ೩೭ ॥ ಅನೇಕ ರಾಜರುಗಳು ಇಲ್ಲಿ ತಪಸ್ಸು ಮಾಡಿದ್ದರಿಂದಲೇ ದೀರ್ಘಾಯುಗಳೂ, ಐಶ್ವರ್ಯವಂತರೂ, ವಿದ್ಯಾವಂತರೂ ಮತ್ತು ಪುತ್ರವಂತರೂ ಆಗಿದ್ದು ಕೊನೆಗೆ ಮುಕ್ತಿಯನ್ನು ಹೊಂದಿದರು. ॥ ೩೮ ॥ ದೇವಲೋಕದಲ್ಲಿರುವ ಚಿಂತಾಮಣಿಯನ್ನು, ಕಲ್ಪವೃಕ್ಷವನ್ನು ಮತ್ತು ಕಾಮಧೇನುವನ್ನು ಮೀರಿಸತಕ್ಕ ಈ ಕ್ಷೇತ್ರವನ್ನು ಹೊಂದಿ ಮನುಷ್ಯರು ಏನನ್ನು ತಾನೇ ಸಂಪಾದಿಸುವುದಿಲ್ಲ? ॥ ೩೯ ॥ ಪಂಚಯೋಜನವಿಸ್ತಾರವಾದ, ಪಂಚಕ್ರೋಶವನ್ನುಳ್ಳ ಈ ಪ್ರಯಾಗಕ್ಷೇತ್ರವನ್ನು ಪ್ರವೇಶಿಸಿ ಇಡುವ ಒಂದೊಂದು ಹೆಜ್ಜೆಗೂ ಅಶ್ವಮೇಧಯಾಗದ ಫಲವು ದೊರಕುವುದು ॥ ೪೦ ॥ ಪ್ರಯಾಗದಲ್ಲಿ ಪ್ರಾರಂಭವಾಗಿ ಪ್ರತಿಷ್ಠಾನದವರೆಗೆ ಮತ್ತು ಅಲ್ಲಿಂದ ಮುಂದೆ ವಾಸುಕೀಸರಸ್ಸಿನಿಂದ ಆರಂಭಿಸಿ ಕಂಬಲ ಮತ್ತು ಅಶ್ವತರ ನಾಗಗಳು ಮತ್ತು ಬಹುಮೂಲಕನೆಂಬ ನಾಗ ಈವರೆಗಿನ ಪ್ರದೇಶಕ್ಕೆ ಪ್ರಜಾಪತಿಕ್ಷೇತ್ರವೆಂದು ಕರೆಯುತ್ತಾರೆ. ಇದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದುದು. ಇಲ್ಲಿ ವಾಸಿಸುವವರು ಮೃತ್ಯುವೆಂಬ ಕಾಡ್ಗಿಚ್ಚಿಗೆ ಹೆದರಬೇಕಾಗಿಲ್ಲ. ॥ ೪೧-೪೨ ॥ ಅವಿಮುಕ್ತ ಎಂಬ ಕಾಶೀ ಮುಂತಾದ ಕ್ಷೇತ್ರಗಳಲ್ಲಿರುವವರು ತಾರಕಮಂತ್ರಗಳನ್ನು ಜಪಿಸುತ್ತಿದ್ದು ಅದರ ಜ್ಞಾನವನ್ನು ಪಡೆದಮೇಲೆ ಮೋಕ್ಷವನ್ನು ಪಡೆಯುತ್ತಾರೆ. ಆದರೆ ಯಾವ ತಾರಕಮಂತ್ರದ ಜ್ಞಾನವೂ ಇಲ್ಲದೇನೇ ಪ್ರಯಾಗದಲ್ಲಿ ಇರುವವರು ಮೋಕ್ಷವನ್ನು ಪಡೆಯುತ್ತಾರೆ. (ಇದು ಪ್ರಯಾಗದ ಸ್ತುತಿಯೇ ಹೊರತಾಗಿ ಜ್ಞಾನವಿಲ್ಲದೆ ಮೋಕ್ಷವಾಗುತ್ತದೆಂದು ಅರ್ಥವಲ್ಲ.) ॥ ೪೩ ॥ ಈ ಪ್ರಯಾಗವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ಸಂಪುಟದಂತೆ ಇರತಕ್ಕದ್ದು. ಆದ್ದರಿಂದಲೇ ಇದು ಎಲ್ಲ ಕ್ಷೇತ್ರಗಳಿಗಿಂತ ಶ್ರೇಷ್ಠತೆಯನ್ನು ಹೊಂದಿ ಇಡೀ ಭೂಮಂಡಲಕ್ಕೇ ಅಲಂಕಾರಪ್ರಾಯವಾಗಿದೆ. ॥ ೪೪ ॥ ತೀರ್ಥರಾಜನೆಂದು ಪ್ರಸಿದ್ಧವಾಗಿರುವ ಈ ಪ್ರಯಾಗದ ಮಾಹಾತ್ಮ್ಯೆಯನ್ನು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಯಥಾರ್ಥವಾಗಿ ತಿಳಿದಿದ್ದಾರೆ. ಶ್ರೀಶೇಷದೇವರು, ಶ್ರೀವೇದವ್ಯಾಸದೇವರು ಮತ್ತು ಮಾರ್ಕಂಡೇಯ ಋಷಿಗಳೂ ಯಥಾರ್ಥವಾಗಿ ತಿಳಿದಿದ್ದಾರೆ. (ಮಾರ್ಕಂಡೇಯ ಋಷಿಗಳಿಗೆ ಶ್ರೀಹರಿಯು ಪ್ರಳಯವನ್ನು

ತೋರಿಸಿದಾಗ ಶ್ರೀಮಾರ್ಕಂಡೇಯರು ಅಕ್ಷಯವಟವೃಕ್ಷದ ಎಲೆಯಲ್ಲಿ ಮಲಗಿದ್ದ ಬಾಲಕ ಶ್ರೀ ಹರಿಯನ್ನು ನೋಡಿದ್ದರಿಂದ ಅವರಿಗೆ ಈ ಅಕ್ಷಯ ಕ್ಷೇತ್ರದ ಯಥಾರ್ಥಜ್ಞಾನವು ಪ್ರತ್ಯಕ್ಷವಾಗಿ ಆಯಿತು) ॥ ೪೫ ॥ ಅಕ್ಷಯವಟವಿರುವ ಈ ಪ್ರಯಾಗ ಕ್ಷೇತ್ರವು ಸ್ವರೂಪದಿಂದಲೇ ಎಲ್ಲ ತೀರ್ಥಗಳಿಕ್ಕಿಂತ ಶ್ರೇಷ್ಠವಾದುದು. ಗಂಗೆ, ಯಮುನೆ ಮತ್ತು ಸರಸ್ವತಿಯರ ಸಂಗಮದಿಂದ ಶ್ರೇಷ್ಠತ್ವ ಬಂದಂತೆ ಶಾಶ್ವತವಾಗಿರತಕ್ಕ ಅಕ್ಷಯವಟ ವೃಕ್ಷದಿಂದಲೇ ಇದಕ್ಕೆ ಸ್ವಾಭಾವಿಕವಾದ ನಿತ್ಯತ್ವದ ಹೆಗ್ಗಳಿಕೆ ಇದೆ. ॥ ೪೬ ॥ ಇಂದ್ರಾದಿ ದೇವತೆಗಳಿಂದ ಸೇವ್ಯವಾಗಿದ್ದು ಈ ಕ್ಷೇತ್ರವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವನ್ನು ಕರುಣಿಸತಕ್ಕದ್ದಾಗಿದೆ ಮತ್ತು ಇದು ತೀರ್ಥ ಕ್ಷೇತ್ರಗಳ ಗುಂಪಿಗೇ ಶ್ರೇಷ್ಠವಾಗಿದೆ. ಆದ್ದರಿಂದ ಇದಕ್ಕೆ ಇಷ್ಟು ವೈಭವವಿರುವುದರಲ್ಲಿ ಏನು ಆಶ್ಚರ್ಯ ? ॥ ೪೭ ॥ ಈ ತೀರ್ಥರಾಜನನ್ನು ಬಿಟ್ಟು ಬೇರೆಯವುಗಳಿಂದ ಯಾರು ತಮ್ಮ ಇಷ್ಟಾರ್ಥಗಳನ್ನು ಗಳಿಸಲು ಇಚ್ಛಿಸುವರೋ ಅವರು ಇಂತಹ ಮಹಾನ್ ಭಾರತ ದೇಶದಲ್ಲಿ ಏನನ್ನೂ ಹೊಂದಲಾರರು ಇದು ಸ್ಪಷ್ಟ. ॥ ೪೮ ॥ ಗಂಗೆ ಯಮುನೆಯರೆಂಬ ಎರಡು ಶ್ರೇಷ್ಠ ನದಿಗಳು ಎಲ್ಲಿ ಒಂದಾಗುವುವೋ ಅಂತಹ ಸಂಗಮ ಸ್ಥಾನದಲ್ಲಿ ಸ್ನಾನ ಮಾಡಿದವರಿಗೆ ಮೋಕ್ಷವಾಗುವುದೆಂಬ ವಿಷಯದಲ್ಲಿ ಏನು ಸಂಶಯವಿದೆ ? ॥ ೪೯ ॥ ಪುಣ್ಯಕರವಾದ ಈ ಪ್ರಜಾಪತಿ ಕ್ಷೇತ್ರವು ಎಲ್ಲರಿಗೂ ದುರ್ಲಭವೇ. ಪುಣ್ಯ ಸಂಪಾದನೆ ಮಾಡಿದವರಿಗೆ ಮಾತ್ರಾ ಇದು ಲಭ್ಯವು. ಇದರ ಮುಂದೆ ಐಶ್ವರ್ಯಗಳೆಷ್ಟಿದ್ದರೂ ನಿಷ್ಪ್ರಯೋಜಕವೇ ಸರಿ. ॥ ೫೦ ॥ ಯಜ್ಞವನ್ನು ಮಾಡತಕ್ಕವರಿಗೆ ಪುನರ್ಜನ್ಮವುಂಟು; ಆದರೆ ಪ್ರಯಾಗ ಕ್ಷೇತ್ರದಲ್ಲಿ ಸ್ನಾನಮಾಡಿದರೆ ಪುನರ್ಜನ್ಮವಿರುವುದಿಲ್ಲ. (ಇದೂ ಸಹ ಪ್ರಯಾಗದ ಸ್ತುತಿ) ಶ್ರೀ ಮಾಧವನು ಅವನಿಗೆ ಅವನ ಜೀವಸ್ವರೂಪವಾದ ಜ್ಞಾನಾನಂದಾದಿಶರೀರವನ್ನು ಕೊಟ್ಟು ತನ್ನ ಅಪರೋಕ್ಷದರ್ಶನಾನಂತರ ಮೋಕ್ಷಕ್ಕೆ ಕಳುಹಿಸುವನು. ॥ ೫೧ ॥ ದೇವತಾ ಸ್ತ್ರೀಯರು ಕೂಡಾ ಈ ತೀರ್ಥರಾಜನ ಮೇಲೆ ಬೀಸಿ ಬರುವ ಗಾಳಿಯನ್ನು ಸೇವಿಸಲು ಆಸೆಪಡುತ್ತಾರೆ. ಈ ವಾಯುವಿನ ಸ್ಪರ್ಶದಿಂದಲೇ ನಾವು ಪವಿತ್ರರಾಗುತ್ತೇವೆ. ಇದಿಲ್ಲದ ಹೊರತು ನಾವು ಹೆಳವರು ಏನೂ ಮಾಡಲಾಗದವರು ಎಂದು ಯೋಚಿಸುತ್ತಾರೆ. ॥ ೫೨ ॥ ಅಶ್ವಮೇಧಾದಿ ಯಜ್ಞಗಳನ್ನು ಈ ತೀರ್ಥರಾಜನ ಧೂಳಿನೊಡನೆ ಚತುರ್ಮುಖ ಬ್ರಹ್ಮನು ತೂಗಿದಾಗ ಈ ಯಜ್ಞಗಳ ಫಲಗಳೂ ಯಾವ ತೂಕದ ಲೆಕ್ಕಕ್ಕೂ ಬಾರದೆ ಜೆಳ್ಳಾದುವು. ॥ ೫೩ ॥ ಬ್ರಹ್ಮಹತ್ಯಾದಿಗಳಿಂದ ಉಂಟಾಗುವ ಪಾಪಗಳು ಎಲ್ಲಿಯವರೆಗೆ ದೇಹಿಗಳು ಪಾಪವನ್ನು ಕಳೆಯುವ ಪ್ರಯಾಗ ಕ್ಷೇತ್ರದಲ್ಲಿ ಸ್ನಾನ ಮಾಡುವುದಿಲ್ಲವೋ ಅಲ್ಲಿಯವರೆಗೆ ಅವರನ್ನು ಕಾಡಿಸುತ್ತಿರುತ್ತವೆ. ಸ್ನಾನ ಮಾಡಿದ ಮೇಲೆ ಕಾಡಿಸುವುದೇ ಇಲ್ಲ. ॥ ೫೪ ॥ ಅಕ್ಷಯ ವಟವೃಕ್ಷವಿರುವ ಈ ಪ್ರಯಾಗಕ್ಷೇತ್ರದಲ್ಲಿ ಸಂತಸದಿಂದ ವಾಸಮಾಡಲು ಇಷ್ಟಪಡುವಂತೆ ವೈಕುಂಠದಲ್ಲಿಯೂ ಸಹ ವಾಸಿಸಲು ಶ್ರೀಹರಿಗೆ ಇಷ್ಟವಿರುವುದಿಲ್ಲ. ॥ ೫೫ ॥ ಶ್ರೀ ಮಾಧವನಿಗೆ ಸಮನಾದ ದೇವತೆಯಿಲ್ಲ. ಹಾಗೆಯೇ ಗಂಗೆಗೆ ಸಮನಾದ ಬೇರೆಯಾವ ನದಿಯೂ ಇಲ್ಲ. ಅದರಂತೆ ತೀರ್ಥರಾಜನಿಗೆ ಸದೃಶವಾದ ಬೇರಾವ ಕ್ಷೇತ್ರವೂ ಈ ಮೂರು ಲೋಕಗಳಲ್ಲಿಯೂ ಇಲ್ಲ. ॥ ೫೬ ॥ ಎಲೈ ಪರಿಶುದ್ಧರಾದ ಶೌನಕಾದಿಗಳಾ ! ಕೇವಲ ಪರೋಪಕಾರ ಬುದ್ಧಿಯಿಂದ ನಮ್ಮ ಗುರುಗಳಾದ ಶ್ರೀ ವೇದವ್ಯಾಸರ ಅನುಗ್ರಹದಿಂದ ಈ ತೀರ್ಥರಾಜನ ಮಹಿಮೆಯು ನನ್ನಿಂದ ವರ್ಣಿಸಲ್ಪಟ್ಟಿತು. ॥ ೫೭ ॥

॥ ಮೂವತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಯಸ್ತ್ರಿಂಶೋಽಧ್ಯಾಯಃ ॥ ೩೩ ॥

ಸೂತ ಉವಾಚ—

ಅಥೋವಾಚ ಪುನಃ ಶೇಷಸ್ಸನಕಾದೀನ್ಮುನೀಶ್ವರಾನ್ ।
ಶೃಣ್ವಂತು ತೀರ್ಥರಾಜಸ್ಯ ನಾಮಸ್ಮರಣಜಂ ಫಲಮ್ ॥ ೧ ॥
ಬಹು ಚಾಲ್ಪತರಂ ವಾಪಿ ದೂರಸ್ಥಸ್ಯ ಚ ಪಾತಕಮ್।
ಪ್ರಯಾಗಂ ಸ್ಮರಮಾಣಸ್ಯ ಸರ್ವಮಾಯಾತಿ ಸಂಕ್ಷಯಮ್ ॥ ೨ ॥
ಪ್ರಯಾಗಂ ಸ್ಮರಮಾಣಸ್ತು ಸ್ವಪ್ರಾಣಾನ್ಯಃ ಪರಿತ್ಯಜೇತ್ ।
ಬ್ರಹ್ಮಲೋಕಮವಾಪ್ನೋತಿ ವದಂತಿ ಮುನಿಪುಂಗವಾಃ ॥ ೩ ॥
ತೀರ್ಥಾನಿ ತೀರ್ಥರಾಜಸ್ಯ ನಾಮಸ್ಮರಣಮಾತ್ರತಃ ।
ಪ್ರಭವಂತಿ ವಿಶೇಷೇಣ ಸ್ವಗತಾಘನಿವಾರಣೇ ॥ ೪ ॥
ಬ್ರಹ್ಮಾಪಿ ಸ್ಮರತೇ ನಿತ್ಯಂ ಸತ್ಯಲೋಕಸ್ಥಿತೋಽಪಿ ಸನ್ ।
ಪ್ರಯಾಗರಾಜಂ ನಿವಸನ್ ಶಿವೋಽಪ್ಯಾನಂದಕಾನನೇ ॥ ೫ ॥
ಕಿಂಚ ಸರ್ವೇಷು ತೀರ್ಥೇಷು ಸ್ಮರ್ತವ್ಯಸ್ತೀರ್ಥನಾಯಕಃ ।
ನ ಸ್ಮರ್ತವ್ಯಾನ್ಯನ್ಯತೀರ್ಥಾನಿ ಪ್ರಯಾಗೇ ತೀರ್ಥನಾಯಕೇ ॥ ೬ ॥
ಸಾಮಂತಸ್ತವನಂ ನೇಷ್ಟಂ ಪುರತಶ್ಚಕ್ರವರ್ತಿನಃ ।
ತಥಾನ್ಯತೀರ್ಥಸ್ತವನಂ ಪುರಸ್ತೀರ್ಥಶಿಖಾಮಣೇಃ ॥ ೭ ॥
ತಸ್ಮಾತ್ಸರ್ವೇಷು ತೀರ್ಥೇಷು ತೀರ್ಥರಾಜಾಯ ತೇ ನಮಃ ।
ಇತ್ಯುಕ್ತ್ವಾ ಪ್ರಣಮೇತ್ಪಶ್ಚಾತ್ಕುರ್ಯಾತ್ಸ್ನಾನಾದಿಕಾಃ ಕ್ರಿಯಾಃ ॥ ೮ ॥
ತತಃ ಸ್ನಾನಫಲಂ ಸಮ್ಯಗಾಪ್ನೋತಿ ಶ್ರುತಿಚೋದಿತಮ್ ।
ತಸ್ಮಾತ್ಪ್ರಯಾಗರಾಜಸ್ಯ ತೀರ್ಥೇಽನ್ಯತ್ರ ಜಲಾಶಯೇ ॥ ೯ ॥
ಭಸ್ಮಾದಿ ಮಜ್ಜನೇ ಗೇಹೇ ಭಾಂಡಸ್ನಾನೇ ವಿಶೇಷತಃ ।
ಕುರ್ವೀತ ಮತಿಮಾನ್ಭಕ್ತ್ಯಾ ನಾಮೋಚ್ಚಾರಂ ಮುನೀಶ್ವರಾಃ ॥ ೧೦ ॥
ಮಜ್ಜಾಗತಾನಿ ಪಾಪಾನಿ ಬಹುಜನ್ಮಾರ್ಜಿತಾನ್ಯಪಿ ।
ಪ್ರಯಾಗನಾಮಸ್ಮರಣಾತ್ಕ್ಷೀಯಂತೇ ತಾನಿ ಕೃತ್ಸ್ನಶಃ ॥ ೧೧ ॥
ತ್ರಿಕಾಲಂ ಕುರ್ವತಃ ಪುಂಸೋ ನಾಮಸ್ಮರಣಮನ್ವಹಮ್ ।
ಭಕ್ತ್ಯಾ ಶರೀರೇ ನೋ ಜಾತು ಜಾಯತೇ ಪಾಪಸಂಭವಃ ॥ ೧೨ ॥
ದೃಷ್ಟ್ವಾ ಪ್ರಕೃಷ್ಟಂ ಯಾಗೇಭ್ಯಃ ಪುಷ್ಟೇಭ್ಯೋ ದಕ್ಷಿಣಾದಿಭಿಃ ।
ಪ್ರಯಾಗಮಿತಿ ತನ್ನಾಮ ಕೃತಂ ಹರಿಹರಾದಿಭಿಃ ॥ ೧೩ ॥
ನಿತ್ಯನೈಮಿತ್ತಿಕಾಃ ಕಾಮ್ಯಾ ಯಾಗಾಸ್ತೇಷಾಮಮುತ್ರ ವೈ ।
ಪ್ರಕೃಷ್ಟತ್ವಾತ್ಪ್ರಯಾಗೋಽಸೌ ಪ್ರಾಧಾನ್ಯಾದ್ರಾಜಶಬ್ದವಾನ್ ॥ ೧೪ ॥

ಏತಮಾಶ್ರಿತ್ಯ ತೀರ್ಥಾನಿ ರಾಜಸೇವಕವನ್ನೃಣಾಮ್ ।
ಪಾಪಾದೀನ್ನಾಶಯೇತ್ಪುಣ್ಯತೀರ್ಥರಾಜ ಇತಿ ಸ್ಮೃತಃ ॥ ೧೫ ॥
ಸಾರ್ಧತ್ರಿಕೋಟಿತೀರ್ಥಾನಾಂ ತ್ರಿವಿಷ್ಟಪನಿವಾಸಿನಾಮ್ ।
ರಾಜಾ ವಿರಾಜಮಾನತ್ವಾತ್ತೀರ್ಥರಾಜ ಇತಿ ಸ್ಮೃತಃ ॥ ೧೬ ॥
ತಸ್ಮಾತ್ಸ್ನಾನೇ ಚ ದಾನೇ ಚ ಜಪಹೋಮಾರ್ಚನಾದಿಷು ।
ತಪೋಯಜ್ಞಾದಿಕಾಲೇಷು ತೀರ್ಥರಾಜಂ ಸ್ಮರೇನ್ನರಃ ॥ ೧೭ ॥
ದೇಶಕಾಲಕ್ರಿಯಾಭಕ್ತಿಮಂತ್ರತಂತ್ರರ್ತ್ವಿಗಾದಿಭಿಃ ।
ವಿಗುಣಂ ಸಗುಣಂ ಕರ್ಮ ಜಾಯತೇಽಮುಷ್ಯ ಕೀರ್ತನಾತ್ ॥ ೧೮ ॥
ಅಶ್ರಾಂತಂ ಜಪತೋ ನಾಮ ತೀರ್ಥರಾಜೇತಿ ನಿಶ್ಚಿತಮ್ ।
ಫಲಂ ಪ್ರಯಾಗವಾಸಸ್ಯ ಸಾಂಗಂ ಭಕ್ತಿಮತೋಽಧಿಕಮ್ ॥ ೧೯ ॥
ಪ್ರಯಾಗತ್ರ್ಯಕ್ಷರೀ ಯೇಷಾಂ ಮುಖೇ ವಸತಿ ನಿತ್ಯಶಃ ।
ದ್ವ್ಯಕ್ಷರದ್ವಿತಯೀ ತೇಷಾಮಿಹಾಮುತ್ರ ಚ ನಿಶ್ಚಿತಾ ॥ ೨೦ ॥
ಪ್ರಯಾಗಂ ಯೇಽಭಿಗಚ್ಛಂತಿ ಮನಸಾ ವಚಸಾಥವಾ ।
ತುರ್ಯಾಂಶಭಾಗಿನಸ್ತೇಽಪಿ ಭವಂತ್ಯತ್ರ ನ ಸಂಶಯಃ ॥ ೨೧ ॥
ಸಂಛಿದ್ಯ ಮಮತಾಜಾಲಂ ಪ್ರಯಾಗಂ ಯೋಽಧಿಗಚ್ಛತಿ ।
ಶ್ರೀಮಾಧವದಯಾ ತಸ್ಮಿನ್ಪರಿಪೂರ್ಣಾ ಲಸತ್ಯಹೋ ॥ ೨೨ ॥
ಪ್ರಯಾಗಗಮನೇ ವಿಘ್ನಂ ಯಃ ಕರೋತಿ ನರಾಧಮಃ ।
ದತ್ತ್ವಾ ಸ್ವಸುಕೃತಂ ತಸ್ಮೈ ಸ್ವಯಂ ತತ್ಪಾಪಭಾಗಸೌ ॥ ೨೩ ॥
ಪ್ರಯಾಗಗಮನಂ ಯೇ ವೈ ಪುಷ್ಪಾಸ್ತದನುಮನ್ವತೇ ।
ನೋದಯಂತಿ ಚ ಯೇ ತೇಽಪಿ ಭವೇಯುಃ ಪಾದಭಾಗಿನಃ ॥ ೨೪ ॥
ಸ್ವಾಸಂಭವೇ ಸುತಂ ಬಂಧುಂ ಸುಹೃದಂ ವಾನುಜೀವಿನಮ್ ।
ಬ್ರಾಹ್ಮಣಂ ವಾ ಧನಂ ದತ್ತ್ವಾ ಯಾತ್ರಾರ್ಥಂ ಪ್ರೇಷಯಂತಿ ಯೇ ॥ ೨೫ ॥
ಯಾತ್ರಾಫಲಂ ಭವೇತ್ತೇಷಾಂ ಕಲಾಹೀನಂ ಮುನೀಶ್ವರಾಃ ।
ನ ತು ಗಂತೃಕೃತಾನೇಕಶಾರೀರಸುಕೃತೋದ್ಭವಮ್ ॥ ೨೬ ॥
ಜನ್ಮಾಂತರೇಷ್ವಗಣ್ಯೇಷು ಕೃತೋ ಯಃ ಪಾಪಸಂಚಯಃ ।
ವ್ರತದಾನಾದ್ಯನಾಶಶ್ಚ ಜಾಗರೂಕಃ ಶರೀರಗಃ ॥ ೨೭ ॥
ಪ್ರಯಾಗಮುದ್ಯತಸ್ಯೇಹ ಗಂತುಂ ಸುಕೃತಯೋಗತಃ ।
ಅತ್ಯರ್ಥಂ ವೇಪತೇ ಪಾಪಃ ತರುರ್ವಾತೇರಿತೋ ಯಥಾ ॥ ೨೮ ॥
ಪ್ರಯಾಗಗಮನಂ ಶ್ರೇಷ್ಠಂ ನರಾಣಾಂ ಪುಣ್ಯಕರ್ಮಣಾಮ್ ।
ಸರ್ವಪಾಪವಿನಾಶಶ್ಚ ಫಲಂ ಚಾನಾಶಕಂ ಭವೇತ್ ॥ ೨೯ ॥
ಪ್ರಯಾಗಾಭಿಮುಖೋ ಭೂತ್ವಾ ಪದಮೇಕಮಪಿ ದ್ವಿಜಾಃ ।
ಪ್ರಯಾಗಂ ಸಂಸ್ಮರನ್ನೇವಂ ಸರ್ವಪಾಪೈಃ ಪ್ರಮುಚ್ಯತೇ ॥ ೩೦ ॥

ಗೃಹೀತ್ವಾ ಯಾತ್ರಿಕಾನ್ಯಸ್ತು ದೀನಾಂಧಕೃಪಣಾನಪಿ ।
ಮಾರ್ಗೇ ಸಂರಕ್ಷಣಂ ಕುರ್ವನ್ ಪ್ರಯಾಗಂ ಪ್ರಾಪಯೇತ್ಸುಖಮ್ ॥ ೩೦ ॥
ಕರ್ಮಣಾ ಮನಸಾ ವಾಚಾ ಸಂಭವೇದ್ ದ್ರವ್ಯದಾನತಃ ।
ಹಿತಂ ಸಮಾಚರೇತ್ತೇಷಾಂ ತಸ್ಯ ಪುಣ್ಯಮನಂತಕಮ್ ॥ ೩೨ ॥
ಬ್ರಹ್ಮಹತ್ಯಾದಿಪಾಪಾನಿ ಜನ್ಮಜನ್ಮಕೃತಾನ್ಯಪಿ ।
ದರ್ಶನಾದೇವ ನಶ್ಯಂತಿ ತೀರ್ಥರಾಜಸ್ಯ ತತ್ಕ್ಷಣಾತ್ ॥ ೩೩ ॥
ನೃಣಾಂ ಪ್ರಾಕ್ತನಪುಣ್ಯೌಘಾತ್ಪ್ರಯಾಗೇ ದೃಷ್ಟಿಗೋಚರೇ ।
ಪಲಾಯಂತೇ ಮಹಾಘೌಘಾಸ್ತಮಸ್ಸೂರ್ಯೋದಯೇ ಯಥಾ ॥ ೩೪ ॥
ತೀರ್ಥಸಿಂಹಾವಲೋಕೇನ ರುದಂತ್ಯಘಮೃಗಾಃ ಪರಮ್ ।
ಪಲಾಯಂತೇ ಮೃಗೇಂದ್ರಸ್ಯಾಲೋಕೇ ವನಮೃಗಾ ಯಥಾ ॥ ೩೫ ॥
ಇತ್ಥಂ ದೃಷ್ಟ್ವಾ ತು ತತ್ತೀರ್ಥಂ ಪ್ರಯಾಗಂ ಪರಮಂ ಪದಮ್ ।
ಮುಚ್ಯತೇ ಸರ್ವಪಾಪೇಭ್ಯಶ್ಶಶಾಂಕ ಇವ ರಾಹುಣಾ ॥ ೩೬ ॥
ತೀರ್ಥರಾಜಪ್ರಯಾಗಸ್ಯ ದರ್ಶನಂ ಭುವಿ ದುರ್ಲಭಮ್ ।
ಕಿಂ ಪುನಃ ಸ್ನಾನಪಾನಾನಾಂ ಫಲಂ ಜಾನಂತಿ ಯೇ ಬುಧಾಃ ॥ ೩೭ ॥
ನ ತೇ ಜೀವಂತಿ ಲೋಕೇಽಸ್ಮಿನ್ಜೀವಂತೋಽಪಿ ಮುನೀಶ್ವರಾಃ ।
ಯೇ ಪ್ರಯಾಗಂ ನ ಸಂಪ್ರಾಪ್ತಾಸ್ತ್ರಿಷು ಲೋಕೇಷು ವಂಚಿತಾಃ ॥ ೩೮ ॥
ನ ತೇಷಾಂ ಜೀವಸಾಮರ್ಥ್ಯಂ ತಪೋವಿದ್ಯಾಧನಾನ್ವಿತಮ್ ।
ಸ್ವಜನ್ಮನ್ಯೇಕದಾ ಯೇಷಾಂ ಪ್ರಯಾಗೋ ನಾಕ್ಷಿಗೋಚರಃ ॥ ೩೯ ॥
ಪ್ರಾಯಶ್ಚಿತ್ತಂ ನ ಪಶ್ಯಂತಿ ಯಸ್ಮಿನ್ಪಾಪೇ ಬಹುಶ್ರುತಾಃ ।
ಪ್ರಯಾಗೇಽಕ್ಷಿಪಥಂ ಪ್ರಾಪ್ತೇ ನ ಸ್ಯಾತ್ತದಪಿ ನಿಶ್ಚಿತಮ್ ॥ ೪೦ ॥
ಮಂಡಲೇ ಚ ಪ್ರಯಾಗೇ ಚ ವೇಣೀಕ್ಷೇತ್ರಸ್ಯ ಗಚ್ಛತಃ ।
ಜಾಯತೇ ಪುರುಷಸ್ಯೇಹ ಪಾಪಹಾನಿರ್ವಿಶೇಷತಃ ॥ ೪೧ ॥
ಪಂಚಕುಂಡಾನಿ ಮುನಯಸ್ತೇಷಾಂ ಮಧ್ಯೇ ತು ಜಾಹ್ನವೀ ।
ವಹತ್ಯರ್ಕಜಯಾ ಸಾರ್ಧಂ ಸರಸ್ವತ್ಯಾ ಚ ಸಂಗತಾ ॥ ೪೨ ॥
ತತ್ರ ಯಾ ದೇವತಾಃ ಪ್ರಾಪ್ತಾಃ ಪ್ರಯಾಗೇ ಮಾಧವಪ್ರಿಯೇ ।
ತೇ ವೈಕುಂಠಗತಾ ನೂನಮವಿಕುಂಠಚತುರ್ಗುಣೈಃ ॥ ೪೩ ॥

॥ ಇತಿ ತ್ರಯಸ್ತ್ರಿಂಶೋಽಧ್ಯಾಯಃ ॥

## ॥ ಮೂವತ್ತಮೂರನೆಯ ಅಧ್ಯಾಯವು ॥

**ಸೂತರು ಹೇಳಿದರು—**

ನಂತರ ಶ್ರೀ ಶೇಷದೇವರು ಸನಕಾದಿ ಮುನೀಶ್ವರರನ್ನು ಕುರಿತು ಈ ತೀರ್ಥರಾಜನ ನಾಮಸ್ಮರಣದಿಂದ ಬರುವ ಫಲವನ್ನು ಮತ್ತೆ ಹೇಳಿದರು. ॥ ೧ ॥ ದೂರದಲ್ಲಿರುವವರಾಗಲಿ

ಹತ್ತಿರದಲ್ಲಿರುವವರಾಗಲೀ, ಶ್ರೀ ಪ್ರಯಾಗದ ಸ್ಮರಣೆ ಮಾಡಿದರೆ ಅವರ ಪಾಪಗಳೆಲ್ಲವೂ ಪರಿಹಾರವಾಗುವುದು. ॥ ೨ ॥ "ಪ್ರಯಾಗದ ಸ್ಮರಣೆ ಮಾಡುತ್ತಾ ಯಾರು ದೇಹತ್ಯಾಗ ಮಾಡುತ್ತಾರೋ ಅವರಿಗೆ ಬ್ರಹ್ಮಲೋಕವು ಪ್ರಾಪ್ತವಾಗುವುದು" ಎಂದು ಋಷಿಶ್ರೇಷ್ಠರು ಹೇಳುತ್ತಾರೆ. ॥ ೩ ॥ ಈ ತೀರ್ಥರಾಜನ ನಾಮಸ್ಮರಣೆ ಮಾಡಿಕೊಂಡಿರುವುದರಿಂದಲೇ ಬೇರೆ ತೀರ್ಥಗಳು ತಮ್ಮಲ್ಲಿ ಬರುವವರ ಪಾಪಗಳನ್ನು ಹೋಗಲಾಡಿಸಲು ಸಮರ್ಥವಾಗುತ್ತವೆ. ॥ ೪ ॥ ಚತುರ್ಮುಖಬ್ರಹ್ಮದೇವರು ಕೂಡ ತಾವು ಸತ್ಯಲೋಕದಲ್ಲಿದ್ದರೂ ಪ್ರಯಾಗವನ್ನು ಸ್ಮರಣೆ ಮಾಡುತ್ತಲೇ ಇರುತ್ತಾರೆ. ಶ್ರೀಮಹಾರುದ್ರದೇವರೂ ಪ್ರಯಾಗಕ್ಕೆ ಸೇರಿದ ಆನಂದವನದಲ್ಲಿ ವಾಸಮಾಡಿಕೊಂಡಿದ್ದು ಈ ಪ್ರಯಾಗವನ್ನು ಸ್ಮರಣೆ ಮಾಡಿಕೊಂಡೇ ಇದ್ದಾರೆ. ॥ ೫ ॥ ಎಲ್ಲ ತೀರ್ಥಗಳಿದ್ದರೂ ತೀರ್ಥನಾಯಕನಾದ ಈ ಪ್ರಯಾಗವನ್ನು ಯಾವಾಗಲು ಸ್ಮರಣೆ ಮಾಡತಕ್ಕದ್ದು. ಪ್ರಯಾಗದಲ್ಲಿ ಬೇರೆ ತೀರ್ಥಗಳನ್ನು ಸ್ಮರಣೆಮಾಡಬಾರದು. ॥ ೬ ॥ ಚಕ್ರವರ್ತಿಗಳು ತಮ್ಮ ಸಮ್ಮುಖದಲ್ಲಿ ಸಾಮಂತ ರಾಜರ ಸ್ತೋತ್ರವನ್ನು ಯಾವ ರೀತಿ ಅಪೇಕ್ಷಿಸುವುದಿಲ್ಲವೋ ಅದರಂತೆ ಪ್ರಯಾಗದಲ್ಲಿಯೂ ಅನ್ಯ ತೀರ್ಥಗಳ ಸ್ತೋತ್ರವು ಅಪೇಕ್ಷಿತವಲ್ಲ. ॥ ೭ ॥ ಆದ್ದರಿಂದಲೇ, ಬೇರೆಲ್ಲ ತೀರ್ಥಗಳಲ್ಲಿ ಸ್ನಾನ ಮಾಡುವಾಗಲೂ (ತೀರ್ಥರಾಜಾಯ ತೇ ನಮಃ) ತೀರ್ಥನಾಯಕನಾದ ನಿನಗೆ ನಮಸ್ಕಾರ ಎಂದು ಪ್ರಾರಂಭದಲ್ಲಿ ಹೇಳಿಯೇ ಅವುಗಳಲ್ಲಿ ಸ್ನಾನಾದಿಗಳನ್ನು ಮಾಡಬೇಕು. ॥ ೮ ॥ ಹಾಗೆ ಮಾಡಿದರೇನೇ ಆಯಾ ತೀರ್ಥಗಳಲ್ಲಿ ಮಾಡಿದ ಸ್ನಾನಾದಿಗಳ ಫಲವು ಲಭ್ಯವಾಗುವುದು; ಹೀಗೆಂದು ಶ್ರುತಿಗಳಲ್ಲಿ ಆದೇಶವಿದೆ. ಆದ್ದರಿಂದಲೇ ಅನ್ಯತೀರ್ಥಕ್ಷೇತ್ರ ಗಳಲ್ಲಿಯಾಗಲಿ, ಭಸ್ಮಸ್ನಾನಮಾಡುವಾಗಲೀ, ಮನೆಯಲ್ಲಿ ಹಂಡೆಯಲ್ಲಿ ತುಂಬಿಟ್ಟಿರುವ ನೀರಿನಿಂದ ಸ್ನಾನ ಮಾಡುವಾಗಲೀ ಉದ್ದೇಶ ಪೂರ್ವಕವಾಗಿ ಭಕ್ತಿಯಿಂದ ಕೂಡಿದ ಮನಸ್ಸಿನಿಂದ ಈ ತೀರ್ಥರಾಜನ ಹೆಸರನ್ನು ಉಚ್ಚರಿಸಿಯೇ ಸ್ನಾನಮಾಡಬೇಕು. ॥ ೯-೧೦ ॥ ಅಸ್ಥಿಗತವಾಗಿರತಕ್ಕ ಜನ್ಮಜನ್ಮಾಂತರಗಳಿಂದ ಬಂದಿರತಕ್ಕ ಪಾಪಗಳೂ ಕೂಡಾ ಪ್ರಯಾಗದ ನಾಮ ಸ್ಮರಣದಿಂದಲೇ ನಿಶ್ಶೇಷವಾಗಿ ಪರಿಹಾರವಾಗುತ್ತವೆ. ॥ ೧೧ ॥ ತ್ರಿಕಾಲದಲ್ಲಿ ತಪ್ಪದೇ ಪ್ರತಿನಿತ್ಯವೂ ಭಕ್ತಿಯಿಂದ ಪ್ರಯಾಗದ ಹೆಸರನ್ನು ಸ್ಮರಿಸುವವನ ದೇಹದಲ್ಲಿ ಪಾಪಗಳು ಸೇರುವುದೇಯಿಲ್ಲ. ॥ ೧೨ ॥ ದಕ್ಷಿಣೆ ದಾನಾದಿಗಳಿಗಿಂತ ಶ್ರೇಷ್ಠವಾಗಿರುವ ಎಲ್ಲ ಯಾಗಗಳಿಗಿಂತ ಅತ್ಯಂತ ಹಿರಿದಾಗಿರುವುದರಿಂದ ಶ್ರೀಹರಿಹರಾದಿಗಳು ಇದನ್ನು "ಪ್ರಯಾಗ" (ಪ್ರಕೃಷ್ಟವಾದ ಯಾಗಕ್ಕೆ ಸಮನಾದುದು) ಎಂದು ಕರೆದರು. ॥ ೧೩ ॥ ಈ ಪ್ರಯಾಗದಲ್ಲಿ ಆಚರಿಸಲ್ಪಟ್ಟ ನಿತ್ಯಗಳಾದ ಅಗ್ನಿಹೋತ್ರ, ವೈಶ್ವದೇವ, ಬ್ರಹ್ಮಯಜ್ಞ, ಔಪಾಸನ ಮುಂತಾದವುಗಳೂ, ನೈಮಿತ್ತಿಕವಾದ ಜ್ಯೋತಿಷ್ಟೋಮಾದಿಯಾಗಗಳೂ ಉದ್ದೇಶ್ಯದ ಸಾಧನೆಗಾಗಿ ಮಾಡುವ ಪುತ್ರಕಾಮೇಷ್ಟಿ ಮೊದಲಾದ ಕಾಮ್ಯಯಾಗಗಳೂ ಹಿರಿಮೆಯನ್ನು ಹೊಂದಿ ಫಲಪ್ರದವಾಗುವುದರಿಂದ "ಪ್ರಯಾಗ"ವೆಂದೂ; ಇತರ ತೀರ್ಥಗಳು ಈ ತೀರ್ಥರಾಜನನ್ನು ಆಶ್ರಯಿಸಿರುವುದರಿಂದಲೇ, ರಾಜಸೇವಕರು ಶತ್ರುನಿಗ್ರಹ ಮಾಡುವಂತೆ, ತಮ್ಮಲ್ಲಿ ಬಂದವರ ಪಾಪಗಳನ್ನು ಪರಿಹಾರ ಮಾಡುವ ಅಧಿಕಾರವನ್ನು ಹೊಂದಿರುವುದರಿಂದ ತೀರ್ಥಗಳಲ್ಲಿ ಶ್ರೇಷ್ಠವಾಗಿ "ತೀರ್ಥರಾಜ"ನೆಂದೂ ಈ ಕ್ಷೇತ್ರವು ರಾಜಮಾನ್ಯತ್ವವನ್ನು ಪಡೆದಿದೆ. ॥ ೧೪-೧೫ ॥ ದೇವತೆಗಳಿಗೆ ಸೇರಿದ ಮೂರೂವರೆಕೋಟಿ ತೀರ್ಥಗಳ ಮೇಲ್ಪಟ್ಟು ಇದು ವಿರಾಜಮಾನವಾಗುತ್ತಿರುವುದರಿಂದಲೇ ಇದಕ್ಕೆ "ತೀರ್ಥರಾಜ"ನೆಂಬ ಹೆಸರು ಬಂದಿದೆ. ॥ ೧೬ ॥ ಆದ್ದರಿಂದಲೇ ಮನುಷ್ಯರು ಸ್ನಾನ, ದಾನ, ಜಪ, ಹೋಮ ಮತ್ತು ಪೂಜೆ, ತಪಸ್ಸು ಮತ್ತು

ಯಜ್ಞಾದಿಗಳನ್ನು ಮಾಡುವ ಕಾಲಗಳಲ್ಲಿ ತೀರ್ಥರಾಜನನ್ನು ಸ್ಮರಿಸುವುದು. ॥ ೧೭ ॥ ಈ ಕಾರ್ಯಗಳನ್ನು ಆಚರಿಸುವ ಮುನ್ನ ತೀರ್ಥರಾಜನನ್ನು ಸ್ಮರಿಸಿದರೆ, ಈ ಕಾರ್ಯಗಳಿಗೆ ಅನ್ವಯಿಸಿರುವ ದೇಶ, ಕಾಲ, ಕ್ರಿಯಾ, ಭಕ್ತಿ ಮಂತ್ರ, ತಂತ್ರ ಮತ್ತು ಋತ್ವಿಕ್ ಇತ್ಯಾದಿಗಳಲ್ಲಿರುವ ನ್ಯೂನತೆಯು ಪರಿಹಾರವಾಗಿ ಕರ್ಮಗಳು ಗುಣ ಪೂರ್ಣವಾಗುವುವು. ॥ ೧೮ ॥ ಯಾವಾಗಲೂ ತಪ್ಪದೆ ನಿತ್ಯವೂ "ತೀರ್ಥರಾಜ"ನೆಂದು ಜಪಿಸುವವರಿಗೆ ಭಕ್ತಿಪುರಸ್ಸರವಾಗಿ ಸ್ನಾನಾದಿ ಅಂಗಗಳನ್ನು ಪಾಲಿಸಿಕೊಂಡು ಪ್ರಯಾಗ ಕ್ಷೇತ್ರದಲ್ಲಿ ವಾಸಿಸುವವರಿಗಿಂತ ಹೆಚ್ಚು ಫಲವು ಸಿಗುವುದು. ॥ ೧೯ ॥ "ಪ್ರಯಾಗ" ಎಂಬ ಈ ಮೂರು ಅಕ್ಷರವು ಯಾರ ಬಾಯಲ್ಲಿ ನಿತ್ಯವೂ ಇರುವುದೋ ಇಂತಹ ಈ ತ್ರ್ಯಕ್ಷರ ಯುಕ್ತನಾದವನಿಗೆ ಇಲ್ಲಿ ಮತ್ತು ಪರಲೋಕದಲ್ಲಿ ಎರಡಕ್ಷರಗಳ ಎರಡು (ಎಂದರೆ ಭುಕ್ತಿ ಮತ್ತು ಮುಕ್ತಿಯು) ನಿಶ್ಚಯವು. ॥ ೨೦ ॥ ಯಾರು ಮಾತಿನಿಂದಲಾಗಲೀ ಮನಸ್ಸಿನಿಂದಾಲಾಗಲೀ ಪ್ರಯಾಗವನ್ನು ಕುರಿತು ಯಾತ್ರೆ ಮಾಡಲು ತೀರ್ಮಾನಿಸುವನೋ ಅಂತಹವನಿಗೆ ಪ್ರಯಾಗಕ್ಕೆ ಹೋಗಿಬಂದವರ ಕಾಲುಭಾಗ ಫಲವು ಸಿಗುವುದು, ಈ ವಿಷಯದಲ್ಲಿ ಸಂಶಯ ಬೇಡ. ॥ ೨೧ ॥ ತನ್ನ ಮನೆ ಮಕ್ಕಳು ಮುಂತಾದವುಗಳಲ್ಲಿನ ಮಮತೆಯನ್ನು ತೊರೆದು ಯಾರು ಪ್ರಯಾಗಕ್ಕೆ ಹೋಗುವರೋ ಅವರಿಗೆ ಶ್ರೀ ಮಾಧವದೇವರ ದಯೆಯು ಪರಿಪೂರ್ಣವಾಗಿರುತ್ತದೆ. ॥ ೨೨ ॥ ಪ್ರಯಾಗ ಯಾತ್ರಿಕರಿಗೆ ವಿಘ್ನವನ್ನುಂಟು ಮಾಡುವವರಿಗೆ ಆ ಯಾತ್ರಿಕರ ಪಾಪಗಳೆಲ್ಲವೂ ಬಂದು ಸೇರಿಕೊಳ್ಳುವುದಲ್ಲದೆ, ಅವರು ಈವರೆಗೆ ಆರ್ಜಿಸಿದ ಪುಣ್ಯರಾಶಿಯೆಲ್ಲವೂ ಆ ಯಾತ್ರಿಕರಿಗೇ ವರ್ಗಾವಣೆಯಾಗುತ್ತದೆ. ॥ ೨೩ ॥ ಯಾರು ಪ್ರಯಾಗ ಯಾತ್ರೆಗಾಗಿ ಅನುಮತಿ ಕೇಳುತ್ತಾರೋ ಅವರಿಗೆ ಅನುಮತಿಯನ್ನಿತ್ತು ಪ್ರೋತ್ಸಾಹಿಸುವರೋ ಮತ್ತು ಪ್ರೇರಿಸುವರೋ ಅವರಿಗೆ ಈ ಯಾತ್ರೆ ಮಾಡಿದವರ ಪುಣ್ಯದಲ್ಲಿ ಕಾಲು ಭಾಗವು ಬರುವುದು. ॥ ೨೪ ॥ ತನಗೆ ಪ್ರಯಾಣ ಮಾಡಲು ಸಾಧ್ಯವಾಗದಿದ್ದಾಗ ತನ್ನ ಮಗ, ಬಂಧು, ಸ್ನೇಹಿತ, ತನ್ನನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವವನು ಮತ್ತು ಸದ್ಬ್ರಾಹ್ಮಣ ಇವರುಗಳಿಗೆ ಯಾತ್ರೆಗಾಗಿ ಬೇಕಾಗುವ ಹಣವನ್ನು ಕೊಟ್ಟು ಯಾರು ಕಳುಹಿಸುವರೋ ಅವರಿಗೆ ಈ ಯಾತ್ರೆ ಮಾಡಿದವರ ಹದಿನಾರನೇ ಹದಿನೈದು ಭಾಗ ಪುಣ್ಯವು ಬರುವದು, ಆದರೆ ಯಾತ್ರಿಕನಿಂದ ಸಾಧಿಸಲ್ಪಟ್ಟ ಅನೇಕ ಶಾರೀರಿಕ ಸಾಧನೆಗಳಿಂದ ಉಂಟಾಗುವ ಪುಣ್ಯವು ಇವನಿಗೆ ಲಭಿಸುವುದಿಲ್ಲ. ॥ ೨೫-೨೬ ॥ ವ್ರತದಾನಾದಿಗಳಿಂದ ಪರಿಹಾರವಾಗದೆ ದೇಹಕ್ಕೆ ಅಂಟಿಕೊಂಡು ಬಂದಿರುವ ಜನ್ಮಾಂತರಗಳಲ್ಲಿ ಗಳಿಸಿದ ಪಾಪರಾಶಿಗಳೂ ಕೂಡ ಪ್ರಯಾಗ ಯಾತ್ರೆಗಾಗಿ ತೆಗೆದುಕೊಂಡ ತೀರ್ಮಾನದಿಂದಲೇ ಬಿರುಗಾಳಿಗೆ ಸಿಕ್ಕಿದ ಮರಗಳಂತೆ ನಡುಗಿಹೋಗುತ್ತವೆ. ॥ ೨೭-೨೮ ॥ ಈ ಶ್ರೇಷ್ಠವಾದ ಪ್ರಯಾಗ ಯಾತ್ರೆಯು ಪುಣ್ಯವಂತರಿಗೇ ಲಭ್ಯವಾಗುವುದು. ಈ ಯಾತ್ರೆಯು ಎಲ್ಲ ಪಾಪಗಳನ್ನು ಪರಿಹರಿಸಿ ಅವಿನಾಶಿಯಾದ ಫಲವನ್ನೂ ಕೊಡತಕ್ಕದ್ದು. ॥ ೨೯ ॥ ಈ ರೀತಿಯಾದ ಅನುಸಂಧಾನಗಳಿಂದ ಪ್ರಯಾಗದ ಕಡೆಗೆ ಮುಖಮಾಡಿ ಒಂದು ಹೆಜ್ಜೆಯನ್ನಿಟ್ಟರೂ ಅಂತಹವನ ಎಲ್ಲ ಪಾಪಗಳೂ ಪರಿಹಾರವಾಗುವುವು. ॥ ೩೦ ॥ ಯಾರು ಯಾತ್ರಿಕರಾಗಿರುವ ದೀನರನ್ನು, ಕುರುಡರನ್ನು ಮತ್ತು ಕಷ್ಟದಲ್ಲಿರುವವರನ್ನು ಮಾರ್ಗದಲ್ಲಿ ಸಂರಕ್ಷಣೆ ಮಾಡಿ ಅವರನ್ನು ಸುಖವಾಗಿ ಪ್ರಯಾಗವನ್ನು ತಲುಪಿಸುವರೋ, ಅವರಿಗೆ ಹಣವನ್ನು ಕೊಟ್ಟು ಅವರಿಗೆ ಮಾನಸಿಕವಾಗಿಯೂ ಮತ್ತು ದೈಹಿಕವಾಗಿಯೂ ಸಹಾಯಮಾಡುತ್ತಾರೋ ಅಂತಹವರ ಪುಣ್ಯವು ಅನಂತವಾದುದು. ॥ ೩೧-೩೨ ॥ ಈ ತೀರ್ಥರಾಜನ ದರ್ಶನದಿಂದ ತಕ್ಷಣವೇ ಬ್ರಹ್ಮಹತ್ಯಾದಿಗಳು ಜನ್ಮಾಂತರದಲ್ಲಿ

ಮಾಡಿದ್ದ ಪಾಪಗಳೆಲ್ಲವೂ ನಾಶವಾಗುವುವು. ॥ ೩೩ ॥ ಸೂರ್ಯೋದಯವಾದ ಕೂಡಲೇ ಕತ್ತಲೆಯು ತೊಲಗುವಂತೆ ಪೂರ್ವಜನ್ಮದ ಪುಣ್ಯದಿಂದ ಮನುಷ್ಯರಿಗೆ ಪ್ರಯಾಗವು ದೃಷ್ಟಿಗೆ ಬಿದ್ದ ಕೂಡಲೇ ಅವರ ಮಹಾಪಾಪಗಳೆಲ್ಲವೂ ಕೂಡ ನಾಶವಾಗುತ್ತವೆ. ॥ ೩೪ ॥ ವನದಲ್ಲಿ ಮೃಗೇಂದ್ರನಾದ ಸಿಂಹವನ್ನು ಕಂಡಕೂಡಲೇ ಜಿಂಕೆಗಳು ಹೆದರಿ ಓಡಿಹೋಗುವಂತೆ ಪ್ರಯಾಗವು ಕಣ್ಣಿಗೆ ಬಿದ್ದಕೂಡಲೇ ಅವರ ಮಹಾಪಾಪಗಳೆಲ್ಲವೂ ಓಡಿಹೋಗುತ್ತವೆ. ॥ ೩೫ ॥ ಪರಮಶ್ರೇಷ್ಠವಾದ ಪ್ರಯಾಗ ಕ್ಷೇತ್ರವನ್ನು ಈ ದೃಷ್ಟಿಯಿಂದ ಅರ್ಥಮಾಡಿಕೊಂಡವನು ಎಲ್ಲ ಪಾಪಗಳಿಂದಲೂ ರಾಹುವಿನಿಂದ ವಿಮೋಚನೆಗೊಂಡ ಚಂದ್ರಬಿಂಬದಂತೆ ತನ್ನ ಸಮಸ್ತ ಪಾಪಗಳಿಂದಲೂ ವಿಮೋಚನೆಗೊಳ್ಳುವನು. ॥ ೩೬ ॥ ತೀರ್ಥರಾಜನಾದ ಪ್ರಯಾಗದ ದರ್ಶನವೇ ದುರ್ಲಭವೆಂದ ಮೇಲೆ ಇನ್ನು ಇಲ್ಲಿ ಮಾಡುವ ಸ್ನಾನ, ಜಲಪಾನ, ದಾನಾದಿಗಳ ಫಲವೇನು ಎಂಬುದನ್ನು ಜ್ಞಾನಿಗಳೇ ತಿಳಿಯಬಲ್ಲರು. ॥ ೩೭ ॥ ಯಾರು ಪ್ರಯಾಗಕ್ಕೆ ಹೋಗಿಲ್ಲವೋ ಅವರು ಬದುಕಿದ್ದರೂ ಬದುಕಿಲ್ಲದಂತೆಯೇ ಸರಿ; ಅಂಥಹವರು ನಿಜವಾಗಿಯೂ ವಂಚಿತರೇ ಸರಿ. ॥ ೩೮ ॥ ತಮ್ಮ ಇಡೀ ಜೀವನದಲ್ಲಿ ಒಂದು ಬಾರಿಯಾದರೂ ಪ್ರಯಾಗವನ್ನು ದರ್ಶನಮಾಡದವರು ತಪಸ್ಸು, ವಿದ್ಯೆ ಮತ್ತು ಹಣದಿಂದ ಕೂಡಿದ್ದರೂ ಜೀವನದ ಸಾರ್ಥಕ್ಯವನ್ನು ಕಳೆದುಕೊಂಡವರೇ ಸರಿ. ॥ ೩೯ ॥ ಎಂತಹ ವಿದ್ವಾಂಸರೂ ತಮ್ಮ ಪಾಪಗಳಿಗೆ ಪ್ರಾಯಶ್ಚಿತ್ತ ಸಿಗದೆ ತೊಳಲುತ್ತಿರುವಾಗ, ಅಂತಹವರ ಪಾಪಗಳು ಪ್ರಯಾಗ ಕ್ಷೇತ್ರವು ಕಣ್ಣಿಗೆ ಬೀಳುತ್ತಲೇ ನಾಶವಾಗುವುವು. ॥ ೪೦ ॥ ಈ ಪ್ರಯಾಗ ಮಂಡಲದಲ್ಲಿಯೂ ತ್ರಿವೇಣಿ ಸಂಗಮ ಕ್ಷೇತ್ರದಲ್ಲಿಯೂ ಹೋಗಿ ಇರುವವನಿಗೆ ವಿಶೇಷವಾಗಿ ಪಾಪ ಪರಿಹಾರವಾಗುವದು. ॥ ೪೧ ॥ ಹೇ ಶೌನಕಾದಿ ಮುನಿಗಳೇ ! ಪಂಚಕುಂಡಗಳ ಮಧ್ಯದಲ್ಲಿ ಶ್ರೀ ಗಂಗೆಯು ಯಮುನಾ ಮತ್ತು ಸರಸ್ವತೀ ನದಿಗಳೊಡನೆ ಸೇರಿ ಹರಿಯುತ್ತಾಳೆ. ಶ್ರೀ ವೇಣೀ ಮಾಧವನಿಗೆ ಪ್ರಿಯವಾದ ಈ ತ್ರಿವೇಣೀ ಸಂಗಮಕ್ಕೆ ಯಾವ ದೇವತೆಗಳು ಹೋಗುತ್ತಾರೋ ಅವರಿಗೂ ಮುಕ್ತಿಯಾಗಿ ವೈಕುಂಠ ಪ್ರಾಪ್ತಿಯಾಗುವುದೆಂಬುದು ನಿಶ್ಚಯ. ॥ ೪೨-೪೩ ॥

॥ ಮೂವತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುಸ್ತ್ರಿಂಶೋಽಧ್ಯಾಯಃ ॥ ೩೪ ॥

ಸೂತ ಉವಾಚ—

ಅಥ ವೇಣೀಂ ಪ್ರವಕ್ಷ್ಯಾಮಿ ಸಗುಣಾಗುಣರೂಪಿಣೀಮ್ ।
ಯಸ್ಯಾ ದರ್ಶನಮಾತ್ರೇಣ ಪೂತೋ ಭವತಿ ಪಾತಕೀ ॥ ೧ ॥
ಧನುಸ್ತ್ರಿಂಶತ್ತು ವಿಸ್ತೀರ್ಣಾಃ ಸಿತನೀಲಾಂಬುಸಂಗಮಃ ।
ತಾಂ ತು ವೇಣೀಂ ವಿಜಾನೀಯಾತ್ಪಿಂಡಬ್ರಹ್ಮಾಂಡಚಾರಿಣೀಮ್ ॥ ೨ ॥
ವೇಣೀಪ್ರಮಾಣಮುದಿತಂ ಬ್ರಹ್ಮಣಾ ಪೂರ್ವಮೇವ ತು ।
ಶೇಷಸ್ಯ ಚ ಮುಖಾಜ್ಜ್ಞಾತಂ ಸಾ ವೇಣೀ ತ್ರಿವಿಧಾ ಸ್ಮೃತಾ ॥ ೩ ॥
ಅಕ್ಷಯ್ಯವಟಸಂಲಗ್ನಾ ಮೂಲವೇಣೀ ಪ್ರಕೀರ್ತಿತಾ ।
ಮಧ್ಯವೇಣೀ ದ್ವಯೋರ್ಧಾರಾ ಪ್ರಾಂತ್ಯಾ ಸೋಮೇಶ್ವರಾವಧಿಃ ॥ ೪ ॥
ಅತಸ್ತ್ರಿವೇಣೀ ವಿಖ್ಯಾತಾ ಸಾ ವೇಣೀ ಭುವನತ್ರಯೇ ।
ತತ್ರಾಪ್ಲುತಾ ದಿವಂ ಯಾಂತಿ ಮೃತಾ ಧೀರಾಸ್ತು ತೇಽಮೃತಾಃ ॥ ೫ ॥
ಸಿತಾಸಿತೇ ಸರಿಚ್ಛ್ರೇಷ್ಠೇ ಸಂಗತೇ ಯತ್ರ ದುರ್ಲಭೇ ।
ತತ್ರಾಪ್ಲುತಾ ದಿವಂ ಯಾಂತಿ ಮೃತಾ ಧೀರಾಸ್ತು ತೇಽಮೃತಾಃ ॥ ೬ ॥
ಯತ್ರ ಗಂಗಾ ಚ ಯಮುನಾ ಯತ್ರ ಪ್ರಾಚೀ ಸರಸ್ವತೀ ।
ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧಿ ॥ ೭ ॥
ಶ್ರುತಿಸ್ಮೃತಿಪುರಾಣೇಷು ವರ್ಣಿತೈವಂ ತ್ರಿವೇಣಿಕಾ ।
ಜ್ಞಾತ್ವೈವಂ ವೇಣಿಕಾರೂಪಂ ಕೃತಕೃತ್ಯೋ ಭವೇನ್ನರಃ ॥ ೮ ॥
ಏತತ್ಸ್ಥಾನಂ ತು ಜೀವಾನಾಂ ಜೀವನಂ ಸುಖಸಂಪದಾಮ್ ।
ನಿದಾನಂ ಜ್ಞಾನಯೋಗಾನಾಂ ಧ್ಯಾಯಿನಾಂ ಮೋಕ್ಷಕಾಂಕ್ಷಿಣಾಮ್ ॥ ೯ ॥
ವ್ರತಾನಾಂ ಜಪಯಜ್ಞಾನಾಂ ಕಾಮ್ಯಾನಾಂ ಸದನಂ ಮಹತ್ ।
ತ್ರಿವೇಣೀಸದೃಶಂ ಸ್ಥಾನಂ ನಾಸ್ತಿ ಬ್ರಹ್ಮಾಂಡಮಂಟಪೇ ॥ ೧೦ ॥
ಕಾಮಪ್ರದಾನಿ ತೀರ್ಥಾನಿ ತ್ರೈಲೋಕ್ಯೇ ಯಾನಿ ಕಾನಿ ಚ ।
ತಾನಿ ಸರ್ವಾಣಿ ಸೇವಂತೇ ಗಂಗಾಯಮುನಸಂಗಮೇ ॥ ೧೧ ॥
ಓಮಿತ್ಯೇಕಾಕ್ಷರಂ ಬ್ರಹ್ಮ ಪರಬ್ರಹ್ಮಾಭಿಧಾಯಕಮ್ ।
ತದೇವ ವೇಣೀ ವಿಜ್ಞೇಯಾ ನ ಪೃಥಗ್ಭಾವಮಾಚರೇತ್ ॥ ೧೨ ॥
ಅಕಾರಃ ಶಾರದಾ ಪ್ರೋಕ್ತಾ ಪ್ರದ್ಯುಮ್ನಸ್ತತ್ರ ದೇವತಾ ।
ಉಕಾರೋ ಯಮುನಾ ಪ್ರೋಕ್ತಾನಿರುದ್ಧಸ್ತಜ್ಜಲಾತ್ಮಕಃ ॥ ೧೩ ॥
ಮಕಾರೋ ಜಾಹ್ನವೀ ಗಂಗಾ ತತ್ರ ಸಂಕರ್ಷಣೋ ಹರಿಃ ।
ಏವಂ ತ್ರಿವೇಣೀ ವಿಖ್ಯಾತಾ ವೇದಬೀಜಂ ನಿರೂಪಿತಾ ॥ ೧೪ ॥

ವೇದಮಾತಾ ತು ಸಾವಿತ್ರೀ ತ್ರಿಪದಾ ಚ ಚತುಷ್ಪದಾ ।
ಸ ಏವ ತೀರ್ಥರಾಜೋ ವೈ ತ್ರಿವೇಣ್ಯಾ ಯತ್ರ ಸಂಗಮಃ ॥ ೧೫ ॥
ಕ್ಷೇತ್ರಾಣಾಂ ಪರಮಂ ಕ್ಷೇತ್ರಂ ತೀರ್ಥಾನಾಂ ತೀರ್ಥಮುತ್ತಮಮ್ ।
ಗಂಗಾಯಮುನಯೋರ್ಯೋಗಂ ಪ್ರವದಂತಿ ಮಹರ್ಷಯಃ ॥ ೧೬ ॥
ಸಿತಾಸಿತೋದಕೇ ತೀರ್ಥೇ ಬ್ರಹ್ಮಾದ್ಯಾಸ್ಸರ್ವದೇವತಾಃ ।
ಮುನಯೋ ಮನವಶ್ಚೈವ ವಸಂತೇ ಮೋಕ್ಷಕಾಂಕ್ಷಿಣಃ ॥ ೧೭ ॥
ಧನ್ವಿಷಷ್ಟಿಸಹಸ್ರಾಣಿ ರಕ್ಷಂತಿ ಸುರನಿಮ್ನಗಾಮ್ ।
ಯಮುನಾಂ ರಕ್ಷತಿ ಸದಾ ಸವಿತಾ ಸಪ್ತವಾಹನಃ ॥ ೧೮ ॥
ಪ್ರಯಾಗಂ ತು ವಿಶೇಷೇಣ ಸ್ವಯಂ ರಕ್ಷತಿ ವಾಸವಃ ।
ಮಂಡಲಂ ರಕ್ಷತಿ ಹರಿರ್ದೈವತೈಸ್ಸಹ ಸಂಗತಃ ॥ ೧೯ ॥
ತಂ ವಟಂ ರಕ್ಷತಿ ಸದಾ ಶೂಲಪಾಣಿರ್ಮಹೇಶ್ವರಃ ।
ಸ್ಥಾನಂ ರಕ್ಷತಿ ವೈ ದೇವಾಸ್ಸರ್ವಪಾಪಹರಂ ಶುಭಮ್ ॥ ೨೦ ॥
ಯದ್ ಬ್ರಹ್ಮಕರಕೋದ್ಭೂತಾ ವಿಷ್ಣುಪಾದಾಬ್ಜಸಂಗತಾ ।
ಭಗೀರಥತಪಸ್ಸಿದ್ಧಿಃ ಶಿವಮೌಲಿಕೃತಾಸ್ಪದಾ ॥ ೨೧ ॥
ನಾನಾಜನಪದಾನ್ಮಾರ್ಗೇ ವನಾನಿ ಗಿರಿಭೂಮಿಕಾಃ ।
ತೀರ್ಥಾನ್ಕುರ್ವತ್ಯಪಾಪಾನಿ ನಪಾಪಾನ್ದರ್ಶನಾದಿಭಿಃ ॥ ೨೨ ॥
ಸ್ವರ್ಗಮೋಕ್ಷಪ್ರದಾ ಹ್ಯೇಷಾ ಮಹಾಪಾತಕಭೇಷಜಮ್ ।
ಏಕಾ ಕಲೌ ವಿಶೇಷೇಣ ಶಕ್ತಾ ಪಾತಕಮೋಚನೇ ॥ ೨೩ ॥
ತನ್ನಾಸ್ತಿ ಭುವನೇಷ್ವನ್ಯಾಽನನ್ಯಾ ಕಾಪಿ ದಯಾನಿಧಿಃ ।
ಸಾ ಗತಾ ಯತ್ರ ಸಂಹೃಷ್ಟಾ ದ್ರವಬ್ರಹ್ಮಸ್ವರೂಪಿಣೀ ॥ ೨೪ ॥
ಅಸ್ತಾಚಲಸಮುತ್ಪನ್ನಾ ಮಾರ್ತಂಡತನಯಾಮಲಾ ।
ಬ್ರಹ್ಮಾದಿಸಂಸ್ತುತಾ ಯಾತಾ ತೀವ್ರವೇಗಾ ಯಮಸ್ವಸಾ ॥ ೨೫ ॥
ಸಪ್ತದ್ವೀಪಸಮುದ್ರಾಂಶ್ಚ ಭಿತ್ವಾ ತತ್ರತ್ಯಸಂಸ್ತುತಾ ।
ಕಲಿಂದಕೃತವಿಖ್ಯಾತಾ ಶ್ರೀಕೃಷ್ಣದಯಿತಾ ನರಾ ॥ ೨೬ ॥
ಪಿತೃದೇವರ್ಷಿತೀರ್ಥಾದ್ಯೈಃ ಕೂಲದ್ವಯನಿಷೇವಿತಾ ।
ಮಹಾಮರಕತಶ್ಯಾಮಾ ನದೀನಾಮುತ್ತಮಾ ನದೀ ॥ ೨೭ ॥
ದೃಷ್ಟಮಾತ್ರಾಖಿಲಾಘೌಘಾನ್ನಾಶಯಂತ್ಯಮಲೋದಕಾ ।
ಸ್ನಾನಮಾತ್ರೇಣ ದದತೀ ವಿಕರ್ತನಸಲೋಕತಾಮ್ ॥ ೨೮ ॥
ಗೃಹೀತದೀಕ್ಷಾ ಮರ್ತ್ಯಾನಾಮಘೌಘಶಮನಾಧ್ವರೇ ।
ಸಕಲಾನ್ನಿರಯಾನ್ ಶೂನ್ಯಾನ್ ಕುರ್ವಂತೀ ಭ್ರಾತುರೀರ್ಷ್ಯಯಾ ॥ ೨೯ ॥

ಯಮುನ್ಯೆವಂವಿಧಾ ಯತ್ರ ವರ್ತತೇಽಖಿಲದುರ್ಲಭಾ ।
ಅನಯೋಃ ಪುಣ್ಯನದ್ಯೋಸ್ತು ಸಂಗಮಃ ಸುರದುರ್ಲಭಃ ॥ ೩೦ ॥
ಪರಸ್ವರೂಪಾ ಪಶ್ಯಂತೀ ಮಧ್ಯಮಾ ವೈಖರೀತಿ ಚ ।
ನಾದವರ್ಣಾತ್ಮಿಕಾ ದೇವೀ ಬ್ರಹ್ಮಪುತ್ರೀ ಸರಸ್ವತೀ ॥ ೩೧ ॥
ಮಹತ್ತ್ವಂ ತೀರ್ಥರಾಜಸ್ಯ ಶ್ರುತ್ವೋತ್ಕಲಿತಮಾನಸಾ ।
ಕಾರ್ಯಾಂತರಮಿಷೇಣಾಸೌ ಬ್ರಹ್ಮಲೋಕಾದವಾತರತ್ ॥ ೩೨ ॥
ಪಾಶಾಂಕುಶಧರಾ ದೇವೀ ವೀಣಾಪುಸ್ತಕಧಾರಿಣೀ ।
ಹಾರಿಣೀ ಸರ್ವಮನಸಾಂ ನೇತ್ರೇಷ್ವಾನಂದಕಾರಿಣೀ ॥ ೩೩ ॥
ಬಂಧೂಕಾಂಬರಧರಾ ಮುಕ್ತಾಭರಣಭೂಷಿತಾ ।
ಕಚ್ಛಪೀವಾದನೇ ದಕ್ಷಾ ಜಗಾಮಾವನಿಮಂಡಲೇ ॥ ೩೪ ॥
ದೇವಕಾರ್ಯಂ ಸಮಾಸಾದ್ಯ ನಿವೃತ್ತಾ ವಿಧಿಕನ್ಯಕಾ ।
ಮೋಹಯಂತ್ಯಖಿಲಾನ್ನಾದ್ಯೈಃ ಪ್ರಯಾಗಂ ಸಮುಪಾಗಮತ್ ॥ ೩೫ ॥
ಶ್ರುತ್ವಾ ತಾಮಾಗತಾಂ ದೇವೀಂ ಗೃಹೀತ್ವಾರ್ಘ್ಯಾದಿಸತ್ಕ್ರಿಯಾಮ್ ।
ಜಗ್ಮತುಃ ಸವಿಧೇ ತಸ್ಯಾಃ ಪ್ರಹೃಷ್ಟೇ ಮುನಿಭಾನುಜೇ ॥ ೩೬ ॥
ಸ್ವಾಗತೀಕೃತ್ಯ ಸಂಪೂಜ್ಯ ಸುರಜ್ಯೇಷ್ಠಸುತಾಂ ಶುಭಾಮ್ ।
ಗೃಹೀತ್ವಾ ಪಾಣಿನಾ ಪಾಣಿಂ ಮಂಜುಲಂ ವಾಕ್ಯಮೂಚತುಃ ॥ ೩೭ ॥

## ॥ ಮೂವತ್ತನಾಲ್ಕನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಈಗ ಯಾರ ದರ್ಶನದಿಂದಲೇ ಪಾತಕಿಯು ಪವಿತ್ರನಾಗುವನೋ ಅಂತಹ ತ್ರಿವೇಣಿಯ ಬಗ್ಗೆ ವಿವರಿಸುವೆನು. ಈ ವೇಣಿಯು ಕಲ್ಯಾಣ ಗುಣವುಳ್ಳವಳೂ ಮತ್ತು ನಿರ್ಗುಣಳೂ ಕೂಡ. ಈ ವೇಣಿಯ ದರ್ಶನಮಾತ್ರದಿಂದಲೇ ಪಾಪಿಗಳು ಪುನೀತರಾಗುತ್ತಾರೆ. (ಮುಂದೆ ಹನ್ನೆರಡು, ಹದಿಮೂರು ಮತ್ತು ಹದಿನಾಲ್ಕನೇ ಶ್ಲೋಕಗಳಲ್ಲಿ ಓಂಕಾರವೇ ವೇಣಿಯ ಸ್ವರೂಪವೆಂದೂ ಮತ್ತು ತದಂತರ್ಗತವಾದ ಪ್ರದ್ಯುಮ್ನ ಅನಿರುದ್ಧ ಮತ್ತು ಸಂಕರ್ಷಣರನ್ನು ಅಭಿಮಾನಿದೇವತೆಗಳಾಗಿ ಹೊಂದಿರುವಳೆಂದೂ ವರ್ಣಿತವಾಗಿದೆ. ಈ ಮೂರು ಭಗವದ್ರೂಪಗಳಾದ ಪ್ರದ್ಯುಮ್ನ, ಅನಿರುದ್ಧ ಮತ್ತು ಸಂಕರ್ಷಣರು ಅನಂತ ಕಲ್ಯಾಣಗುಣಪೂರ್ಣರಾಗಿರುವುದರಿಂದ ಸಗುಣರೆಂದು, ಸತ್ತ್ವರಜಸ್ತಮೋಗುಣಗಳು ಇಲ್ಲದವರಾದ್ದರಿಂದ ಅಗುಣರೆಂದು ಈ ಮೂರು ಪರಬ್ರಹ್ಮನ ರೂಪಗಳನ್ನು ತನ್ನಲ್ಲಿರುವ ಮೂರು ನದಿಗಳಲ್ಲಿ ನಿಯಾಮಕದೇವತೆಗಳನ್ನಾಗಿ ಹೊಂದಿರುವ ತ್ರಿವೇಣಿಯು ''ಸಗುಣಾಗುಣ'' ಮೂರ್ತಿಯಾಗಿದ್ದಾಳೆಂದು ಇಲ್ಲಿ ಅರ್ಥಮಾಡಿಕೊಳ್ಳಬೇಕು.) ॥ ೧ ॥ ಈ ವೇಣಿಯು ಸ್ವಚ್ಛ ನೀರುಳ್ಳ ಗಂಗೆ ಮತ್ತು ಕಪ್ಪು ನೀರುಳ್ಳ ಯಮುನೆ ಇವರುಗಳ ಸಂಗಮವೇ. ಈ ಸಂಗಮವು ಮೂವತ್ತು ಧನಸ್ಸುಗಳ ವಿಸ್ತೀರ್ಣ ಉಳ್ಳದ್ದಾಗಿದ್ದು, ಬ್ರಹ್ಮಾಂಡದಲ್ಲೂ ದೇಹದಲ್ಲೂ ವ್ಯಾಪಿಸಿಕೊಂಡಿದೆಯೆಂದು ಜ್ಞಾನಿಗಳು ಹೇಳುತ್ತಾರೆ. ಹೇಗೆಂದರೆ ಇದರ ಮುಖ್ಯ

ಅಭಿಮಾನಿ ದೇವತೆಯಾದ ಶ್ರೀ ಹರಿಯು ಇಡೀ ಬ್ರಹ್ಮಾಂಡದಲ್ಲೆಲ್ಲಾ ವ್ಯಾಪಿಸಿ ಅದರ ನಿಯಾಮಕನಾಗಿ ಇರುವುದರಿಂದ ಮತ್ತು ದೇಹದಲ್ಲಿ ಇಡಾ, ಪಿಂಗಳಾ, ಸುಷುಮ್ನಾನಾಡಿಗಳಲ್ಲಿ ಗಂಗಾ, ಯಮುನಾ, ಸರಸ್ವತೀನದಿಗಳು ಪ್ರವಹಿಸುತ್ತಿರುವುದರಿಂದ. ॥ ೨ ॥ ಈ ವೇಣಿಯ ಪ್ರಮಾಣವನ್ನು ಬ್ರಹ್ಮದೇವರು ಮೊದಲೇ ನಿರೂಪಿಸಿದ್ದಾರೆ. ಅದನ್ನು ಶ್ರೀ ಶೇಷದೇವರ ಬಾಯಿಂದ ನಾನು ಕೇಳಿದ್ದ ಹಾಗೆ ವರ್ಣಿಸುತ್ತೇನೆ. ಈ ವೇಣಿಯು ಮೂರು ವಿಧಗಳಲ್ಲಿಯೆಂದು ಸ್ಮೃತಿಗಳಲ್ಲಿ ಉಕ್ತವಾಗಿದೆ. ॥ ೩ ॥ ಅಕ್ಷಯ ಮರದಿಂದ ಪ್ರಾರಂಭಿಸಿ ಈ ಸಂಗಮವೂ ಸೇರಿ ಇರುವ ಪ್ರದೇಶವು ''ಮೂಲವೇಣಿ''ಯು, ಗಂಗೆ ಯಮುನೆಯ ಸಂಗಮ ಪ್ರದೇಶವು ''ಮಧ್ಯವೇಣಿ''ಯು, ಸಂಗಮದಿಂದ ಪ್ರಾರಂಭಿಸಿ ಸೋಮೇಶ್ವರನ ಸನ್ನಿಧಾನದ ತನಕ ವ್ಯಾಪಿಸಿರುವ ಭಾಗವೇ ''ಅಂತ್ಯವೇಣಿ''ಯು. ಈ ಮೂರು ಬಗೆಯ ವೇಣಿಗಳು ಸೇರಿ ''ತ್ರಿವೇಣಿ''ಯಾಗಿದೆ. ॥ ೪ ॥ ಈ ರೀತಿಯಾಗಿ ಆ ವೇಣಿಯು ತ್ರಿವೇಣಿ ಎಂದು ಕರೆಯಲ್ಪಡುತ್ತಾಳೆ ಮತ್ತು ಮೂರುಲೋಕಗಳಲ್ಲಿಯೂ ತ್ರಿವೇಣೀ ಎಂದು ಪ್ರಸಿದ್ಧವಾಗಿದೆ. ಈ ತ್ರಿವೇಣಿಯಲ್ಲಿ ಸ್ನಾನ ಮಾಡಿದವರು ನೇರವಾಗಿ ಸ್ವರ್ಗಕ್ಕೆ ತೆರಳುವರು ಮತ್ತು ಇಲ್ಲಿ ಮರಣಹೊಂದಿದವರು ನಿಜವಾಗಿಯೂ ಮೋಕ್ಷವನ್ನೇ ಪಡೆಯುವರು. (ಪರಂಪರಯಾ ಮೋಕ್ಷವನ್ನು ಹೊಂದುವರು ಎಂದು ತಿಳಿಯಬೇಕು.) ॥ ೫ ॥ ಕಪ್ಪು ಮತ್ತು ಬಿಳಿ ನೀರುಳ್ಳ ಶ್ರೇಷ್ಠವಾದ ಎರಡು ನದಿಗಳ ಸಂಗಮವು ಅತಿದುರ್ಲಭವು. ಆದ್ದರಿಂದಲೇ ಅದರಲ್ಲಿ ಸ್ನಾನ ಮಾಡಿದವರು ಮೋಕ್ಷವನ್ನು ಹೊಂದುವರು. ॥ ೬ ॥ ಶ್ರುತಿಸ್ಮೃತಿಗಳಲ್ಲಿ ಹೇಳಿರುವಂತೆ ಈ ಸಂಗಮದಲ್ಲಿ ಸ್ನಾನ ಮಾಡುವವವರು ''ಎಲ್ಲಿ ಗಂಗೆ, ಯಮುನೆ, ಪೂರ್ವ ದಿಕ್ಕಿಗೆ ಹರಿಯುವ ಸರಸ್ವತೀನದಿಯು ಮತ್ತು ಸೋಮೇಶ್ವರನ ಸನ್ನಿಧಾನವಿದೆಯೋ ಅಲ್ಲಿ ನನಗೆ ಮರಣವನ್ನು ಕೊಟ್ಟು ಮೋಕ್ಷವನ್ನು ಕರುಣಿಸಿ'' ಎಂದು ಸಾತ್ವಿಕರು ತ್ರಿವೇಣಿ ತೀರ್ಥಾಭಿಮಾನಿಯಾದ ಪರಬ್ರಹ್ಮನನ್ನು ಪ್ರಾರ್ಥಿಸುತ್ತಾರೆ. ॥ ೭ ॥ ಈ ರೀತಿಯಾಗಿ ಶ್ರುತಿಸ್ಮೃತಿಗಳಲ್ಲಿ ವರ್ಣಿತವಾಗಿರತಕ್ಕ ತ್ರಿವೇಣಿಯ ಸ್ವರೂಪವನ್ನು ತಿಳಿಯುವವನು ಕೃತಕೃತ್ಯನಾಗುತ್ತಾನೆ. ॥ ೮ ॥ ಈ ಸ್ಥಾನವಾದರೋ ಪ್ರಾಣಿಗಳಿಗೆ ಜೀವನ ಸ್ವರೂಪ, ಸುಖ ಸಂಪತ್ತುಗಳ ಆಗರ, ಜ್ಞಾನಾದಿಯೋಗಗಳಿಗೆ ಮೂಲಭೂತ ಕಾರಣವು ಮತ್ತು ಇದನ್ನು ಧ್ಯಾನಿಸುವವರು ಕೇವಲ ಮೋಕ್ಷಾಪೇಕ್ಷಿಗಳೇ. ॥ ೯ ॥ ಜಪ, ಯಜ್ಞ, ವ್ರತ ಮತ್ತು ಕಾಮ್ಯಕರ್ಮಾಚರಣೆಗಳಿಗೆ ಇದು ಅತಿ ದೊಡ್ಡ ಸ್ಥಾನವು. ಇಡೀ ಬ್ರಹ್ಮಾಂಡದಲ್ಲಿ ತ್ರಿವೇಣಿಗೆ ಸದೃಶವಾದ ಬೇರೊಂದು ಸ್ಥಾನವಿಲ್ಲ. ॥ ೧೦ ॥ ನಮ್ಮ ಮನೋಭಿಲಾಷೆಗಳನ್ನು ನೆರವೇರಿಸಬಲ್ಲ ಮೂರು ಲೋಕದಲ್ಲಿರುವ ಎಲ್ಲಾ ತೀರ್ಥಗಳೂ ಈ ಗಂಗಾಯಮುನೆಯರ ಸಂಗಮದಲ್ಲಿರುವ ತ್ರಿವೇಣಿಯನ್ನು ಸೇವಿಸಿಕೊಂಡೇ ಇವೆ. ॥ ೧೧ ॥ ''ಓಂ-ಓಂ'' ಎಂಬ ಒಂದಕ್ಷರದಲ್ಲಿ ನಿರೂಪಿತ ವಾಗಿರತಕ್ಕದ್ದು ಪರಬ್ರಹ್ಮ ಸ್ವರೂಪವು. ತ್ರಿವೇಣಿಯೇ ಈ ಓಂಕಾರ ವಾಚ್ಯ ಪರಬ್ರಹ್ಮ ಎಂದು ತಿಳಿಯಬೇಕೇ ಹೊರತು ಬೇರೆ ಯಾವ ಭಾವನೆಗಳನ್ನು ತಾಳಲಾಗದು. (ಪರಬ್ರಹ್ಮಸ್ವರೂಪವಾದ ''ಓಂ''ಕಾರವು ಅ, ಉ, ಮ ಮತ್ತು ನಾದ ಎಂಬ ನಾಲ್ಕು ಪಾದಗಳಿಂದ ರಚಿತವಾಗಿದೆಯೆಂದು ವೇದಗಳಲ್ಲಿ ಮತ್ತು ಮಾಂಡೂಕೋಪನಿಷತ್ತಿನಲ್ಲಿಯೂ ಹೇಳಲ್ಪಟ್ಟಿದೆ.) ॥ ೧೨ ॥ ''ಅ'' ಕಾರವೇ ಶಾರದೆಯು, ಮತ್ತು ಪ್ರದ್ಯುಮ್ನನು ಇದರ ದೇವತೆಯು. ''ಉ''ಕಾರವು ಯಮುನೆಯು ಮತ್ತು ಇದರ ದೇವತೆಯು ಅನಿರುದ್ಧನು. ॥ ೧೩ ॥ ಜಹ್ನುಋಷಿಗಳ ಮಗಳಾದ ಗಂಗೆಯೇ ''ಮ'' ಕಾರವು ಮತ್ತು ಇದರ ದೇವತೆಯು ಸಂಕರ್ಷಣನು. (ಈ ಮೂರೂ ಬ್ರಹ್ಮಾಂಡದ ಸೃಷ್ಟಿಗಾಗಿ

ಶ್ರೀ ನಾರಾಯಣನು ತೆಗೆದುಕೊಂಡ ರೂಪಗಳು) ಈ ರೀತಿಯೂ ಇಡೀ ವೇದರಾಶಿಗೆ ಬೀಜ ಸ್ವರೂಪವಾಗಿರತಕ್ಕ "ಓಂ" ಕಾರವೇ ಈ ತ್ರಿವೇಣಿಯು. ಈ ರೀತಿ ಶ್ರುತಿ ಸ್ಮೃತಿಗಳಲ್ಲಿ ನಿರೂಪಿತವಾಗಿದೆ. ॥ ೧೪ ॥ ವೇದಮಾತೆಯಾದ ಸಾವಿತ್ರಿಯು, ಮೂರು ಪಾದಗಳುಳ್ಳವಳು ಮತ್ತು ಓಂಕಾರಸಹಿತ ನಾಲ್ಕು ಪಾದಗಳುಳ್ಳವಳು. ತ್ರಿವೇಣಿಯಲ್ಲಿ, ಎಲ್ಲಿ ಮೂರು ನದಿಗಳೂ ಸೇರುವುವೋ ಅಲ್ಲಿಯೇ ತೀರ್ಥರಾಜನು ಇರುವನು. ॥ ೧೫ ॥ ಗಂಗೆ ಮತ್ತು ಯಮುನೆಯರ ಸಂಗಮವು ಇರುವ ಈ ಕ್ಷೇತ್ರವು ಕ್ಷೇತ್ರಗಳಲ್ಲಿಯೇ ಪರಮೋತ್ತಮವಾದ ಕ್ಷೇತ್ರವು ಮತ್ತು ತೀರ್ಥಗಳಲ್ಲಿಯೇ ಪರಮೋತ್ತಮವಾದ ತೀರ್ಥವು. ಈ ರೀತಿಯಾಗಿ ಮಹರ್ಷಿಗಳ ಹೇಳಿಕೆಗಳಿವೆ. ॥ ೧೬ ॥ ಗಂಗಾಯಮುನೆಯರ ಸಂಗಮ ಸ್ಥಳದಲ್ಲಿ ಬ್ರಹ್ಮಾದಿದೇವತೆಗಳೂ, ಸಮಸ್ತ ಋಷಿಗಳೂ ಮತ್ತು ಮನುಗಳೂ ಮೋಕ್ಷಾಪೇಕ್ಷಿಗಳಾಗಿ ಶ್ರೀಮಾಧವನನ್ನು ಆರಾಧಿಸುತ್ತಾ ಇದ್ದಾರೆ. ॥ ೧೭ ॥ ಅರವತ್ತು ಸಾವಿರ ಧನುರ್ಧಾರಿಗಳು ಗಂಗೆಯನ್ನು, ಏಳು ಕುದುರೆಗಳ ರಥದಲ್ಲಿ ಸಂಚಾರ ಮಾಡುತ್ತಿರುವ ಸೂರ್ಯನು ಯಮುನೆಯನ್ನು ಕಾಯುತ್ತಿದ್ದಾರೆ. ॥ ೧೮ ॥ ಪ್ರಯಾಗ ಕ್ಷೇತ್ರವನ್ನು ಇಂದ್ರನೇ ವಿಶೇಷವಾಗಿ ರಕ್ಷಿಸುತ್ತಿದ್ದಾನೆ. ಈ ಪ್ರಯಾಗ ಮಂಡಲವನ್ನು ಅಷ್ಟದಿಕ್ಪಾಲಕಾದಿ ದೇವತೆಗಳೊಡನೆ ಶ್ರೀ ಮಾಧವನು ರಕ್ಷಿಸುತ್ತಿದ್ದಾನೆ. ॥ ೧೯ ॥ ಶ್ರೀ ಮಹರುದ್ರದೇವರು ಶೂಲಪಾಣಿಯಾಗಿದ್ದು ಯಾವಾಗಲೂ ಆ ಅಕ್ಷಯವಟವೃಕ್ಷವನ್ನು ರಕ್ಷಿಸುತ್ತಿದ್ದಾನೆ. ಒಟ್ಟಿನಲ್ಲಿ ದೇವತೆಗಳೆಲ್ಲರೂ ಈ ಸ್ಥಾನವನ್ನು ರಕ್ಷಿಸುತ್ತಿದ್ದಾರೆ. ॥ ೨೦ ॥ ಯಾವುದು ಬ್ರಹ್ಮದೇವರ ಕಮಂಡಲುವಿನ ದಶೆಯಿಂದ ಹುಟ್ಟಿ ಶ್ರೀ ತ್ರಿವಿಕ್ರಮಾವತಾರದಲ್ಲಿದ್ದ ಶ್ರೀ ಮಹಾವಿಷ್ಣುವಿನ ಪಾದದ ಸಂಬಂಧವನ್ನು ಹೊಂದಿ ಭೂಲೋಕಕ್ಕೆ ಭಗೀರಥನ ತಪಸ್ಸಿನ ಫಲವಾಗಿ ಇಳಿದು ಬರುವಾಗ ಶ್ರೀ ಮಹರುದ್ರದೇವರಿಂದ ವಿಷ್ಣುಪಾದೋದಕವೆಂಬ ಅನುಸಂಧಾನದಿಂದ ಶಿರಸಾ ಧಾರಣೆ ಮಾಡಲ್ಪಟ್ಟಿತೋ, ಭೂಲೋಕದಲ್ಲಿ ಗಂಗೋತ್ರಿಯಿಂದ ಹರಿದು ಬರುತ್ತಾ ದಾರಿಯುದ್ದಕ್ಕೂ ನಾನಾರಾಜ್ಯಗಳನ್ನೂ ವನಗಳನ್ನೂ ಪರ್ವತ ಪ್ರದೇಶಗಳನ್ನೂ ಅದರಲ್ಲಿರುವ ಜೀವಿಗಳನ್ನು ತನ್ನ ದರ್ಶನಮಾತ್ರದಿಂದಲೇ ಪಾಪ ಪರಿಹೃತವಾದುವುಗಳನ್ನಾಗಿಯೂ ಮಾಡುತ್ತಿರುವ ಈ ಗಂಗೆಯು ಸ್ವರ್ಗವನ್ನೂ ಮುಕ್ತಿಯೋಗ್ಯರಿಗೆ ಮೋಕ್ಷವನ್ನು ಕರುಣಿಸುವ, ಮಹಾಮಹಾ ಪಾಪಗಳೆಂಬ ರೋಗಗಳಿಂದ ನರಳುತ್ತಿರುವವರಿಗೆ ಔಷಧಿ ರೂಪದಲ್ಲಿರುವಳಾಗಿಯೂ ಇದ್ದು ಈ ಕಲಿಯುಗದಲ್ಲಿ ಅತಿ ಪ್ರಮುಖಳಾದ ಪಾಪಪರಿಹಾರಕ ಶಕ್ತಿಯಾಗಿದ್ದಾಳೆ. ॥ ೨೧-೨೩ ॥ ಇಷ್ಟು ಕಾರುಣ್ಯಕ್ಕೆ ನಿಧಿಯಂತಿರುವವಳು ಈ ಭೂಮಿಯಲ್ಲಿ ಬೇರೆಯಾರೂಯಿಲ್ಲ. ಈ ತ್ರಿವೇಣಿಯಲ್ಲಿ ಭಗವಂತನೇ ದ್ರವರೂಪದಿಂದ ಸಂತೋಷವಾಗಿ ಇರುತ್ತಾನೆ. (ಜಲದಲ್ಲಿ ಜಲರೂಪದಿಂದ ಇರುತ್ತಾನೆ; ಅವನೇ ಜಲವಲ್ಲ) ॥ ೨೪ ॥ ಸೂರ್ಯನ ಮಗಳಾದ ಹಾಗೂ ಯಮಧರ್ಮರಾಯನ ತಂಗಿಯಾದ ಯಮುನೆಯು ಅಸ್ತಾಚಲದಲ್ಲಿ ಉಗಮಿಸಿ, ಬ್ರಹ್ಮಾದಿಗಳಿಂದ ಸ್ತುತ್ಯಳಾಗಿ ತೀವ್ರವೇಗದಿಂದ ಹರಿಯುತ್ತಾಳೆ. ॥ ೨೫ ॥ ಇವಳು ಉಗಮಿಸುವ ಪೂರ್ವದಲ್ಲಿ ಏಳು ದ್ವೀಪಗಳನ್ನು ಏಳು ಸಮುದ್ರಗಳನ್ನು ಭೇದಿಸಿಕೊಂಡು ಅಲ್ಲಿರುವವರಿಂದ ಸ್ತುತಳಾಗಿ ಕಳಿಂದ ಪರ್ವತದಲ್ಲಿ ಧರೆಗೆ ಇಳಿದಿದ್ದಾಳೆ. ಕಳಿಂದ ಪರ್ವತದಲ್ಲಿ ಹುಟ್ಟುವುದರಿಂದಲೇ "ಕಾಳಿಂದೀ" ಎಂಬ ಹೆಸರನ್ನು ಹೊಂದಿ, ಶ್ರೀಕೃಷ್ಣನಿಗೆ ಪ್ರಿಯಳಾಗಿದ್ದಾಳೆ. ಈ ಯಮುನೆಯ ಎರಡೂ ತೀರಗಳಲ್ಲಿಯೂ ಪಿತೃಗಳೂ ದೇವತೆಗಳೂ ಋಷಿಗಳೂ, ತೀರ್ಥಾಭಿಮಾನಿದೇವತೆಗಳೂ ಇದ್ದು ಇವಳನ್ನು ಸೇವಿಸುತ್ತಿದ್ದಾರೆ. ಇವಳು ಮರಕತ ರತ್ನದಂತೆ ನೀಲವರ್ಣ ವಿಶಿಷ್ಟಳು ಮತ್ತು ನದಿಗಳಲ್ಲೆಲ್ಲಾ

ಸರ್ವೋತ್ತಮಳು. ॥ ೨೬-೨೭ ॥ ನಿರ್ಮಲವಾದ ನೀರುಳ್ಳ ಇವಳು ತನ್ನ ದರ್ಶನಮಾತ್ರದಿಂದಲೇ ಪಾಪಿಜನರ ಸಮಸ್ತ ಪಾಪಗಳನ್ನು ಪರಿಹಾರ ಮಾಡುತ್ತಾಳೆ, ಸ್ನಾನ ಮಾಡಿದವರನ್ನು ಸೂರ್ಯ ಲೋಕಕ್ಕೆ ಕಳುಹಿಸುತ್ತಾಳೆ. ॥ ೨೮ ॥ ಅಣ್ಣನಾದ ಯಮರಾಜನ ಮೇಲಿನ ಈರ್ಷೆಯಿಂದಲೋ, ಪಾಪ ಪರಿಹಾರದ ಬಗ್ಗೆ ಯಜ್ಞದೀಕ್ಷಾವುಳ್ಳವಳೋ ಎಂಬಂತೆ ಎಲ್ಲರ ಪಾಪಗಳನ್ನು ಪರಿಹಾರ ಮಾಡಿ ನರಕಗಳೆಲ್ಲವೂ ಖಾಲಿಯಿರುವಂತೆ ಮಾಡುತ್ತಾಳೆ. ॥ ೨೯ ॥ ಇಂತಹ ಯಮುನೆಯು ಎಲ್ಲರಿಗೂ ದುರ್ಲಭಳು ಮತ್ತು ಈ ಗಂಗೆಯಮುನೆಯರ ಸಂಗಮವು ಅತಿದುರ್ಲಭವು. ॥ ೩೦ ॥ ಚತುರ್ಮುಖಬ್ರಹ್ಮನ ಮಗಳಾದ ಸರಸ್ವತಿಯು ಓಂಕಾರದ ನಾಲ್ಕನೇ ಪಾದವಾದ ನಾದದ ಸ್ವರೂಪಳು ಮತ್ತು ವರ್ಣಗಳಗೂ ಅಭಿಮಾನಿ ದೇವತೆಯು. ಇವಳು ಪರಸ್ವರೂಪಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಹೆಸರುಗಳಿಂದಲೂ ಉಕ್ತಾಗಿದ್ದಾಳೆ.

(ಸರಸ್ವತೀ— ಇವಳು ಚತುರ್ಮುಖ ಬ್ರಹ್ಮನಿಂದ ಸೃಷ್ಟಿಯಾದವಳಾದ್ದರಿಂದ ಲೌಕಿಕ ದೃಷ್ಟಿಯಿಂದ ಬ್ರಹ್ಮನ ಮಗಳು. ಆದರೆ ಋಜುಗುಣಕ್ಕೆ ಸೇರಿ ನಿತ್ಯನಿಯತ ಬ್ರಹ್ಮಪತ್ನಿ ಆಗಿರುವುದರಿಂದ ಶ್ರೀ ಮಹಾವಿಷ್ಣುವಿನ ಆಜ್ಞಾಪ್ರಕಾರ ಬ್ರಹ್ಮದೇವರು ಇವಳನ್ನು ತನ್ನ ಹೆಂಡತಿಯಾಗಿಯೂ ಪಟ್ಟದ ರಾಣಿಯಾಗಿಯೂ ಸ್ವೀಕಾರ ಮಾಡಿದರು. ಇದು ಮಹಾಭಾರತ ತಾತ್ಪರ್ಯನಿರ್ಣಯದ ಪ್ರಯೋಗದಂತೆ ಸರಸ್ವತೀ ಅಂದರೆ ಸುಖ ಸ್ವರೂಪಿಣಿಯೂ ಹೌದು. ಅಥವಾ ಸುಖದ ಮುಖ್ಯ ಕಾರಣರಾದ ಬ್ರಹ್ಮದೇವರ ಪತ್ನಿಯೂ ಹೌದು.

ಪರಸ್ವರೂಪಾ—ತನ್ನ ಉದ್ದಿಷ್ಟ ವಿಷಯವನ್ನು ಪರರಿಗೆ ತಿಳಿಯಪಡಿಸಲು ಶಬ್ದೋಚ್ಚಾರಣೆಯು ಆವಶ್ಯಕ. ಈ ರೀತಿಯಾದ ಶಬ್ದೋಚ್ಚಾರಣೆಗಾಗಿ ಚೇತನನಿಂದ ಪ್ರೇರಿತವಾದ ಮನಸ್ಸು ಮೂಲಾಧಾರದಲ್ಲಿರುವ ಅನಲವನ್ನು ಚಲಿಸುವಂತೆ ಮಾಡುವುದು. ಈ ಅನಲವು ನಾಭಿಯಲ್ಲಿರುವ ಅನಿಲವನ್ನು ಚಲಿಸುವಂತೆ ಮಾಡುವುದು. ಈ ರೀತಿ ಚಲಿತವಾದ ವಾಯುವಿನಿಂದ ಅಲ್ಲೆ ಸೂಕ್ಷ್ಮವಾಗಿ ನಾದವು ಉತ್ಪತ್ತಿಯಾಗುವುದು. ಈ ರೀತಿ ಉತ್ಪತ್ತಿಯಾದ ಸೂಕ್ಷ್ಮರೂಪ ನಾದಕ್ಕೆ ''ಪರಾ'' ಎಂದು ಹೆಸರು. ಈ ಪರದ ಸ್ವರೂಪವುಳ್ಳವಳು ಸರಸ್ವತೀದೇವಿಯು. ಇದು ಸೂಕ್ಷ್ಮರೂಪದಲ್ಲಿ ಇರುವುದರಿಂದ ಇದಕ್ಕೆ ''ಸೂಕ್ಷ್ಮ'' ಎಂದೂ ಕರೆಯುತ್ತಾರೆ.

ಪಶ್ಯಂತೀ—ಮೇಲೆ ಹೇಳಿದ ಈ ಸೂಕ್ಷ್ಮರೂಪನಾದವು ನಾಭಿಯವರೆಗೆ ಚಲಿಸಿದಾಗ ಅದರ ಸಂಬಂಧದಿಂದ ಉತ್ಪತ್ತಿಯಾಗುವ ಶಬ್ದವೇ ''ಪಶ್ಯಂತೀ'' ಎಂದು ಕರೆಯಲ್ಪಟ್ಟಿದೆ. ಈ ಪಶ್ಯಂತಿಗೆ ಸರಸ್ವತಿಯೇ ಮುಖ್ಯಾಭಿಮಾನಿದೇವತೆಯು. ಆದ್ದರಿಂದ ಅವಳಿಗೆ ಪಶ್ಯಂತೀ ಎಂದು ಹೆಸರು.

ಮಧ್ಯಮಾ—ಈ ಪಶ್ಯಂತೀ ಎಂಬ ಹೆಸರಿನ ನಾದವು ಹೃದಯದೇಶಕ್ಕೆ ಪ್ರವೇಶಿಸಿದಾಗ ಹುಟ್ಟುವ ಶಬ್ದವು ಮಧ್ಯಮಾ ಎನ್ನಿಸಿಕೊಳ್ಳುವುದು. ಈ ಮಧ್ಯಮವೆಂಬ ಶಬ್ದಕ್ಕೆ ಶ್ರೀಸರಸ್ವತಿಯೇ ಮುಖ್ಯಾಭಿಮಾನಿಯಾದ್ದರಿಂದ ಮಧ್ಯಮಾ ಎಂದು ಹೆಸರು.

ವೈಖರೀ—ಈ ರೀತಿಯಾಗಿ ಉತ್ಪತ್ತಿಯಾದ ಮಧ್ಯಮಾಶಬ್ದವು ಕಂಠಪ್ರದೇಶಕ್ಕೆ ಹೋಗಿ ಅಲ್ಲಿಂದ ತಲೆಗೆ ಹೊಡೆದು, ಆ ತಲೆಯ ಹೊಡೆತದಿಂದ ಹಿಂತಿರುಗಿ ಬಾಯಿಯಲ್ಲಿ ತಾನು ಉತ್ಪತ್ತಿ ಆಗುವ ಎಂಟು ಸ್ಥಾನಗಳಲ್ಲಿ ಅಭಿಹತವಾಗಿ ಸಮಸ್ತವರ್ಣ ಮತ್ತು ಧ್ವನ್ಯಾತ್ಮಕವಾದ ಶಬ್ದೋತ್ಪತ್ತಿಯು ಆಗುವುದು. ಇದಕ್ಕೆ ''ವೈಖರೀ''ಎಂದು ಹೆಸರು. ಈ ವೈಖರಿಯಿಂದಲೇ ಶಬ್ದಬೋಧನೆ ಆಗುವುದು. ಈ ವೈಖರಿಗೆ ಅಭಿಮಾನಿಯಾಗಿರುವುದರಿಂದ ಸರಸ್ವತೀದೇವಿಗೂ ''ವೈಖರೀ'' ಎಂದು ಹೆಸರಿದೆ.) ॥ ೩೦ ॥

ಸರಸ್ವತಿಯು ಈ ತೀರ್ಥರಾಜನ ಮಹಾತ್ಮ್ಯೆಯನ್ನು ಕೇಳಿ ಈ ಕ್ಷೇತ್ರದ ಬಗ್ಗೆ ತೀವ್ರವಾದ ಆಸೆಯುಳ್ಳವಳಾಗಿ ಯಾವುದೋ ಉದ್ದೇಶದ ದಶೆಯಿಂದ ಬ್ರಹ್ಮಲೋಕದಿಂದ ಭೂಲೋಕಕ್ಕೆ ಬಂದು ಈ ಪ್ರಯಾಗವನ್ನು ಸಂದರ್ಶಿಸಿದಳು. ॥ ೩೨ ॥ ಸರಸ್ವತಿಯು ಒಂದು ಕೈಯಲ್ಲಿ ಪಾಶವನ್ನೂ ಇನ್ನೊಂದು ಕೈಯಲ್ಲಿ ಅಂಕುಶವನ್ನೂ, ಮತ್ತೊಂದರಲ್ಲಿ ವೀಣೆಯನ್ನೂ ನಾಲ್ಕನೆಯ ದರಲ್ಲಿ ಪುಸ್ತಕವನ್ನೂ ಧಾರಣೆ ಮಾಡಿದ್ದಾಳೆ. ತನ್ನ ರೂಪಗುಣಚಾರಿತ್ರ್ಯಾದಿಗಳಿಂದ ಎಲ್ಲರ ಮನಸ್ಸನ್ನೂ ಅಪಹಾರ ಮಾಡಿರುವ ಇವಳು ಎಲ್ಲರ ಕಣ್ಣುಗಳಿಗೂ ಸಂತಸವನ್ನುಂಟುಮಾಡುವಳು. ॥ ೩೩ ॥ ಇವಳು ಬಿಳಿದಾಸವಾಳದ ಹೂವಿನಂತೆ ಬೆಳ್ಳಗಿರುವ ಸೀರೆಯನ್ನು ಧರಿಸಿದ್ದಾಳೆ, ಮುತ್ತಿನ ಆಭರಣಗಳಿಂದ ಭೂಷಿತಳಾಗಿದ್ದಾಳೆ. ಇವಳು "ಕಚ್ಛಪಾ" ಎಂಬ ಹೆಸರುಳ್ಳ ತನ್ನ ವೀಣೆಯನ್ನು ನುಡಿಸುವುದರಲ್ಲಿ ಅತಿಕುಶಲಳು. ಇಂತಹವಳು ಭೂಮಂಡಲಕ್ಕೆ ಬಂದಿಳಿದಳು. ॥ ೩೪ ॥ ಈ ಬ್ರಹ್ಮನ ಹೆಂಡತಿಯು ದೇವತಾ ಕಾರ್ಯಗಳನ್ನು ಮುಗಿಸಿಕೊಂಡು, ಕಾರ್ಯಗೌರವದಿಂದ ವಿಶ್ರಾಂತಿ ಹೊಂದಿ ತನ್ನ ವೀಣಾವಾದನದಿಂದ ಸರ್ವರನ್ನೂ ಸಮ್ಮೋಹನಗೊಳಿಸುತ್ತಾ ಪ್ರಯಾಗ ಕ್ಷೇತ್ರಕ್ಕೆ ಬಂದಳು. ॥ ೩೫ ॥ ಆಗಮಿಸಿರತಕ್ಕ ಆ ಸರಸ್ವತೀದೇವಿಯರನ್ನು ಅರ್ಘ್ಯಪಾದ್ಯಾದಿ ಪೂಜಾಸಾಮಾಗ್ರಿಗಳಿಂದ ಗಂಗೆಯಮುನೆಯರು ಎದುರುಗೊಂಡು ಸ್ವಾಗತವನ್ನು ಬಯಸಿ, ಶೋಡಶೋಪಚಾರ ಪೂಜಾವನ್ನು ಸಮರ್ಪಿಸಿ ನಂತರ ಈ ದೇವೋತ್ತಮರಾದ ಬ್ರಹ್ಮನ ಮಗಳ ಕೈಯಲ್ಲಿ ತಮ್ಮ ಕೈಯ್ಗಳನ್ನಿಟ್ಟು ಮನೋಹರವಾಗಿ ಆಕೆಯೊಡನೆ ಮಾತನಾಡಲು ಪ್ರಾರಂಭಿಸಿದರು. ॥ ೩೬-೩೭ ॥

ಗಂಗಾಯಮುನೇ ಊಚತುಃ—

ತವಾತ್ರಾಗಮನಂ ಜಾತಮಪೂರ್ವಂ ದರ್ಶನಂ ಚ ನೌ ।<br>
ದಿಷ್ಟ್ಯಾ ವಸಾತ್ರ ಮಾ ಯಾಹಿ ಕ್ವಾಪೀತಸ್ತೀರ್ಥರಾಜತಃ ॥ ೩೮ ॥<br>
ನೇದೃಶಂ ವಸತಿ ಸ್ಥಾನಮಸ್ತಿ ಬ್ರಹ್ಮಾಂಡಗೋಲಕೇ ।<br>
ಕಾಮಯಂತೇ ಚ ತತ್ರಸ್ಥಾಸ್ತೀರ್ಥರಾಜಮಹರ್ನಿಶಮ್ ॥ ೩೯ ॥<br>
ಆವಾಮತ್ರ ವಸಾವೋಽತ್ರ ವಸ ತ್ವಮಪಿ ಸಾಂಪ್ರತಮ್ ।<br>
ಮಜ್ಜತಾಂ ದುರ್ಲಭಃ ಕೋಽರ್ಥಸ್ತ್ರಯಾಣಾಂ ನಃ ಸಮಾಗಮೇ ॥ ೪೦ ॥<br>
ತ್ರಿವೇಣೀತಿ ಚ ವಿಖ್ಯಾತಿಸ್ಸರ್ವತ್ರ ಚ ಭವಿಷ್ಯತಿ ।<br>
ತ್ರಿಭಿಃ ಫಲೈರ್ಭವೇದ್ವೇಣೀ ರಾಮಾಣಾಂ ಶಿರಸಿ ಸ್ಥಿತಾ ॥ ೪೧ ॥<br>
ಆವಯೋಃ ಕರ್ತರೀ ಪುಣ್ಯಾಶೇಷಪಾಪನಿಕೃಂತನೀ ।<br>
ಭವತ್ಯಾ ಭವಿತಾನ್ವರ್ಥಾಂತರ್ಗಯಾ ಕೀಲರೂಪಯಾ ॥ ೪೨ ॥<br>
ಇತಃ ಪ್ರಭೃತಿ ಯಾ ನಾರ್ಯಶ್ಚಿರಂಟನ್ಯಃ ಪತಿವ್ರತಾಃ ।<br>
ಸ್ವವೇಣಿಕಾಂ ಪ್ರದಾಸ್ಯಂತಿ ಗ್ರಥಿತಾಂ ಪುಷ್ಪಲಂಬಿನೀಮ್ ॥ ೪೩ ॥<br>
ಸೌಭಾಗ್ಯಪುತ್ರಪೌತ್ರಾಯುರ್ಧನಧಾನ್ಯಸಮಾಕುಲಾಃ ।<br>
ಭೋಗಾನ್ಭುಕ್ತ್ವೇಹ ವೈಕುಂಠೇ ಸ್ಥಾಸ್ಯಂತಿ ಪತಿಭಿಸ್ಸಹ ॥ ೪೪ ॥

ತನುಂ ತ್ಯಜಂತಿ ಯೇ ಧೀರಾಸ್ಸ್ವಭಾವಾದಾಗ್ರಹಾದಪಿ ।
ಮುಕ್ತಿಃ ಕರಗತಾ ತೇಷಾಂ ತ್ರಿವರ್ಗಸ್ಯ ತು ಕಾ ಕಥಾ ॥ ೪೫ ॥
ತದ್ಭವತ್ಯಾತ್ರ ಸಂಸ್ಥೇಯಂ ಗುಪ್ತಯಾ ನೌ ಸಮಾಗಮೇ ।
ಅನ್ಯತ್ರ ದುರ್ಲಭಂ ನಿತ್ಯಮತ್ರ ಮಾಧವದರ್ಶನಮ್ ॥ ೪೬ ॥

**ಗಂಗೆ ಮತ್ತು ಯಮುನೆಯರು ಹೇಳಿದರು—**

ಅಪೂರ್ವವಾದ ನಿನ್ನ ಆಗಮನವು ಇಲ್ಲಿಗೆ ಆಯಿತು. ನಿನ್ನ ಅಪೂರ್ವದರ್ಶನವೂ ಲಭ್ಯವಾಯಿತು. ಇವೆಲ್ಲವೂ ನಮ್ಮ ಅದೃಷ್ಟದಿಂದಲೇ ಆಯಿತಷ್ಟೆ. ನೀನು ಇಲ್ಲಿಯೇ ಇದ್ದುಬಿಡು. ಈ ತೀರ್ಥರಾಜನ ಕ್ಷೇತ್ರದಿಂದ ಎಲ್ಲಿಗೂ ತೆರಳಬೇಡ. ॥ ೩೮ ॥ ನೀನು ವಾಸಿಸಲು ಇಡೀ ಬ್ರಹ್ಮಾಂಡದಲ್ಲಿಯೇ ಇಂತಹ ಕ್ಷೇತ್ರವು ಮತ್ತೊಂದು ಸಿಗಲಾರದು. ಈ ಕ್ಷೇತ್ರದಲ್ಲಿರುವವರೆಲ್ಲರೂ ಶ್ರೀ ತೀರ್ಥರಾಜನನ್ನೇ ಹಗಲೂ ರಾತ್ರಿಯೂ ಬಯಸುತ್ತಾರೆ. ॥ ೩೯ ॥ ನಾವಿಬ್ಬರೂ ಇಲ್ಲಿಯೇ ವಾಸಮಾಡಿಕೊಂಡಿದ್ದೇವೆ. ಈಗ ನೀನೂ ಇಲ್ಲಿಯೇ ಇದ್ದುಬಿಡು. ನಾವು ಮೂವರು ಇರುವ ಸಂಗಮದಲ್ಲಿ ಸ್ನಾನ ಮಾಡುವವರಿಗೆ ಯಾವ ಪುರುಷಾರ್ಥವು ತಾನೇ ಲಭ್ಯವಾಗುವುದಿಲ್ಲ. ॥ ೪೦ ॥ ಈ ಕ್ಷೇತ್ರವು ''ತ್ರಿವೇಣೀ'' ಎಂದು ಎಲ್ಲೆಡೆಯು ಪ್ರಸಿದ್ಧವಾಗುವುದು. ಮುತ್ತೈದೆಯರ ಶಿರಸ್ಸಿನಲ್ಲಿ ತ್ರಿವೇಣೀ ಇರುವುದರಿಂದಲೇ ಅವರ ಮೂರುಕಾಲಿನ ಜಡೆಗೆ ವೇಣೀತ್ವವು ಇರುವುದು. ॥ ೪೧ ॥ ನಮ್ಮಿಬ್ಬರ ಪುಣ್ಯವೆಂದರೆ ಇಲ್ಲಿಗೆ ಬರುವ ಯಾತ್ರಿಕರ ಎಲ್ಲ ಪಾಪಗಳನ್ನು ನಾಶಮಾಡುವ ಕಾರ್ಯವೇ ಆಗಿದೆ. ಇಲ್ಲಿ ಸಂಗಮದ ಒಳಗೆ ಗುಪ್ತಗಾಮಿಯಾಗಿ ಹರಿದು ನೀನು ಈ ಕ್ಷೇತ್ರವು ''ಪಾಪ ಪರಿಹಾರಕ'' ಎಂಬುದನ್ನು ಅರ್ಥವುಳ್ಳದ್ದನ್ನಾಗಿ ಮಾಡು. ॥ ೪೨ ॥ ಇನ್ನು ಮೇಲೆ ಶಾಶ್ವತವಾದ ಪಾತಿವ್ರತ್ಯವನ್ನು ಬಯಸುವ ನಾರಿಯರು ತಮ್ಮ ಶಿರಸ್ಸಿನಲ್ಲಿ ಇದ್ದು ತಮ್ಮ ಬೆನ್ನಿನ ಮೇಲೆ ಇಳಿದಿರುವ ಹೆರಳನ್ನು ಈ ತ್ರಿವೇಣೀ ಕ್ಷೇತ್ರದ ಪ್ರೀತಿಗಾಗಿ ದಾನಮಾಡುವವರಾಗುತ್ತಾರೆ. ॥ ೪೩ ॥ ಈ ರೀತಿಯಾಗಿ ವೇಣಿಯನ್ನು ದಾನಮಾಡುವ ನಾರಿಯರು ಮಕ್ಕಳು, ಮೊಮ್ಮಕ್ಕಳು, ಆಯಸ್ಸು, ಐಶ್ವರ್ಯ ಮತ್ತು ಧಾನ್ಯಾದಿಗಳಿಂದ ಇಹಲೋಕದಲ್ಲಿ ಭೋಗವನ್ನು ಅನುಭವಿಸಿ ತಮ್ಮ ತಮ್ಮ ನಿಯತಪತಿಗಳೊಡನೆ ವೈಕುಂಠದಲ್ಲಿ ಸುಖವಾಗಿರುವರು. ॥ ೪೪ ॥ ಈ ತ್ರಿವೇಣಿಯಲ್ಲಿ ಯಾವ ಧೀರರು ತಮ್ಮ ಸ್ವಭಾವಕ್ಕೆ ಅನುಸಾರಿಯಾಗಿಯೋ ಅಥವಾ ಆಗ್ರಹದಿಂದಲೋ ತ್ರಿವೇಣೀ ಕ್ಷೇತ್ರದಲ್ಲಿ ದೇಹತ್ಯಾಗ ಮಾಡಿದರೆ ಅವರಿಗೆ ಮುಕ್ತಿಯು ಕೈಯಲ್ಲಿಯೇ ಇರುವದು; ಅಂದಮೇಲೆ ಇನ್ನು ಧರ್ಮ, ಅರ್ಥ ಮತ್ತು ಕಾಮಗಳು ಲಭ್ಯವಾಗೇ ಆಗುವುವೆಂಬುದನ್ನು ಹೇಳತಕ್ಕದ್ದೇನಿದೆ? (ಮುಕ್ತಿಯೆಂದರೆ ಪಾಪಮುಕ್ತಿ; ಅಥವಾ ಜ್ಞಾನದ್ವಾರಾ ಕಾಲಾಂತರದಲ್ಲಿ ಮುಕ್ತಿ) ॥ ೪೫ ॥ ನೀನು ಗುಪ್ತಗಾಮಿಯಾಗಿ ಇಲ್ಲಿ ಇರಬೇಕು. ಇಂಥಾ ನಿನ್ನಿಂದ ಈ ನಮ್ಮಗಳ ಸಂಗಮ ಸ್ಥಳದಲ್ಲಿ ನಿತ್ಯವೂ ಬೇರೆಯೆಲ್ಲಿಯೂ ಸಿಗಲಾರದ ಶ್ರೀ ಮಾಧವನ ದರ್ಶನವು ಲಭ್ಯವಾಗುವುದು. ॥ ೪೬ ॥

**ಸೂತ ಉವಾಚ—**

ಗಂಗಯಾ ರವಿಪುತ್ರ್ಯಾ ಚ ಪ್ರಾರ್ಥಿತ್ತೈವಂ ಸರಸ್ವತೀ ।
ಗುಪ್ತೋವಾಸ ತಯೋರ್ಮಧ್ಯೇ ಕೀಲರೂಪಾ ಮುನೀಶ್ವರಾಃ ॥ ೪೭ ॥

**ತತಸ್ತ್ರಿವೇಣೀ ವಿಖ್ಯಾತಾ ತಿಸೃಣಾಂ ಸಂಗಮಾದಪಿ ।**
**ಮಾಹಾತ್ಮ್ಯಂ ತೂದಿತಂ ತಸ್ಯಾ ವದಿಷ್ಯಾಮಿ ಚ ವಿಸ್ತೃತಮ್ ॥ ೪೮ ॥**

**॥ ಇತಿ ಚತುಸ್ತ್ರಿಂಶೋಽಧ್ಯಾಯಃ ॥**

**ಸೂತರು ಹೇಳಿದರು—**

ಈ ರೀತಿಯಾಗಿ ಗಂಗೆ ಮತ್ತು ಸೂರ್ಯಪುತ್ರಿಯಾದ ಯಮುನೆ ಇವರುಗಳಿಂದ ಪ್ರಾರ್ಥಿಸಲ್ಪಟ್ಟ ಸರಸ್ವತಿಯು ಅವರೀರ್ವರ ಮಧ್ಯೆ ಗುಪ್ತವಾಗಿದ್ದು ಬೆಸುಗೆಯಂತೆ ಮುಖ್ಯಳಾಗಿ ಇದ್ದಾಳೆ. ॥ ೪೭ ॥ ಹೇ ಮುನೀಶ್ವರರೇ! ಈ ಮೂರು ದೇವತೆಗಳ ಸಂಗಮವಾಗುವುದರಿಂದಲೇ ಈ ಕ್ಷೇತ್ರವು "ತ್ರಿವೇಣಿ" ಎಂದು ಪ್ರಸಿದ್ಧವಾಗಿದೆ. ಈ ತ್ರಿವೇಣಿಯಿಂದ ಉದ್ಭವವಾಗಿರುವ ಇನ್ನೂ ಅನೇಕ ಮಾಹಾತ್ಮ್ಯೆಗಳನ್ನು ನಾನು ವಿಸ್ತಾರವಾಗಿ ಹೇಳುವೆನು. ॥ ೪೮ ॥

॥ ಮೂವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚತ್ರಿಂಶೋಽಧ್ಯಾಯಃ ॥ ೩೫ ॥

ಸೂತ ಉವಾಚ—

ಏವಂ ಶೇಷವಚಃ ಶ್ರುತ್ವಾ ಪ್ರಹೃಷ್ಟಾ ಬ್ರಹ್ಮನಂದನಾಃ ।
ತ್ರಿವೇಣೀವರ್ಣನಂ ಭೂಯಃ ಶ್ರೋತುಕಾಮಾಸ್ತಮಬ್ರುವನ್ ॥ ೧ ॥

## ॥ ಮೂವತ್ತೈದನೆಯ ಅಧ್ಯಾಯವು ॥

ಸೂತರು ಹೇಳಿದರು—

ಬ್ರಹ್ಮನ ಪುತ್ರರಾದ ಸನಕಾದಿಗಳು ಈ ರೀತಿಯಾದ ಶ್ರೀ ಶೇಷದೇವರ ಉಪದೇಶವನ್ನು ಕೇಳಿ ಸಂತುಷ್ಟರಾಗಿ ತ್ರಿವೇಣಿಯ ವರ್ಣನೆಯನ್ನು ಮತ್ತೂ ಕೇಳಲಪೇಕ್ಷೆಯುಳ್ಳವರಾಗಿ ಶ್ರೀ ಶೇಷದೇವರನ್ನು ಕುರಿತು ಹೇಳಿದರು. ॥ ೧ ॥

ಸನಕ ಉವಾಚ—

ಮನಃ ಪ್ರಶಾಂತಂ ನಃ ಶ್ರಾಂತಂ ಶ್ರುತ್ವಾ ಮಾಹಾತ್ಮ್ಯಮುತ್ತಮಮ್ ।
ತಥಾಪಿ ಜಾಯತೇ ತೃಷ್ಣಾ ಪುನರ್ದಾರ್ಢ್ಯಾಯ ತದ್ವದ ॥ ೨ ॥
ಏಕವಾರಂ ದ್ವಿವಾರಂ ವಾ ತ್ರಿವಾರಂ ಶ್ರವಣೇನ ವೈ ।
ಇದಂ ಶೇಷಂ ಹೃದಿಸ್ಥಂ ಚೇತ್ ಜ್ಞಾನೇ ಯತ್ನೋಽತಿನಿಷ್ಫಲಃ ॥ ೩ ॥
ಅಸ್ಯ ಕ್ಷೇತ್ರಸ್ಯ ಕಾ ಶಕ್ತಿಸ್ಸರ್ವೋತ್ಕೃಷ್ಟಾ ನಿರೂಪಿತಾ ।
ತ್ರಿವೇಣೀ ನಾಮ ವಿಖ್ಯಾತಾ ಕ್ಷೇತ್ರಬೀಜಮಯೀ ತ್ವಯಾ ॥ ೪ ॥
ಭೂಯೋ ವರ್ಣಯತಾಂ ಸ್ವಾಮಿನ್ ಶೇಷಾಶೇಷಶಿಖಾಮಣೇ ।
ತದ್ಗುಣಶ್ರವಣೇಽಸ್ಮಾಕಂ ಲಾಲಸಾ ಬಹು ಜಾಯತೇ ॥ ೫ ॥

ಸನಕನು ಹೇಳಿದನು—

ಆಯಾಸಗೊಂಡಿದ್ದ ನಮ್ಮ ಮನಸ್ಸಿಗೆ ಈ ಪ್ರಯಾಗದ ಉತ್ತಮವಾದ ಮಾಹಾತ್ಮೆಯನ್ನು ಕೇಳಿ ಸಂತಸವುಂಟಾಗಿದೆ. ಆದರೆ ಈ ಬಗ್ಗೆ ದಾರ್ಢ್ಯತೆಯನ್ನು ಹೊಂದಲು ನಮಗೆ ದಾಹವಾಗುತ್ತಿದೆ. ಆದ್ದರಿಂದ ಈ ತ್ರಿವೇಣೀ ಮಾಹಾತ್ಮ್ಯೆಯನ್ನು ಇನ್ನೂ ಹೇಳಿರಿ. ॥ ೨ ॥ ಒಂದು ಬಾರಿ, ಎರಡು ಬಾರಿ, ಅಥವಾ ಮೂರು ಬಾರಿ ಕೇಳುವುದರಿಂದಲೇ ಈ ಪ್ರಯಾಗದ ಮಾಹಾತ್ಮ್ಯೆಯು ಪೂರ್ಣವಾಗಿ ಹೃದ್ಗತವಾಗುವ ಹಾಗಿದ್ದರೆ ಜ್ಞಾನಕ್ಕಾಗಿ ಪ್ರಯತ್ನಪಡುವುದರಿಂದ ಪ್ರಯೋಜನವೇ ಇರುವುದಿಲ್ಲ. ॥ ೩ ॥ ಈ ಕ್ಷೇತ್ರವು ಸರ್ವೋತ್ಕೃಷ್ಟವೆಂದು ತಮ್ಮಿಂದ ನಿರೂಪಿಸಲ್ಪಟ್ಟಿತು. ಇಂತಹ ಕ್ಷೇತ್ರಕ್ಕೆ ಇರುವ ಶಕ್ತಿಯಾದರೂ ಯಾವುದು? ಈ ಕ್ಷೇತ್ರಕ್ಕೆ ತ್ರಿವೇಣೀ ಎಂಬ ಹೆಸರು ಬೀಜ ರೂಪವಾಗಿ ಪ್ರಸಿದ್ಧವಾಗಿದೆ ಎಂದು ತಮ್ಮಿಂದ ಹೇಳಲ್ಪಟ್ಟಿತು. ॥ ೪ ॥ ಇದರ ಮಾಹಾತ್ಮ್ಯೆಯ ಬಗ್ಗೆ ಉಳಿದೆಲ್ಲಾ ವಿಷಯಗಳನ್ನೂ ವರ್ಣಿಸೋಣವಾಗಲಿ. ಇದರ ಗುಣ ವೈಶಿಷ್ಟ್ಯಗಳನ್ನು ಕೇಳಲು ನಮಗೆ ಹೆಚ್ಚು ಹೆಚ್ಚು ಆಸೆಯುಂಟಾಗುತ್ತಿದೆ. ಹೀಗೆಂದು ಶೇಷದೇವರನ್ನು ಪ್ರಾರ್ಥಿಸಿದರು. ॥ ೫ ॥

ಶೇಷ ಉವಾಚ—

ಮಂತ್ರಾಣಾಂ ಪ್ರಣವಂ ಬೀಜಂ ಜೀವಾನಾಂ ಜೀವನಂ ಯಥಾ ।
ತಥಾ ತ್ರಿವೇಣೀ ತೀರ್ಥಾನಾಂ ಜೀವನಂ ವೀರ್ಯವರ್ಧನಮ್ ॥ ೬ ॥

ಜ್ಞಾನಸಿದ್ಧಿಕರೀ ವೇಣೀ ಮೋಕ್ಷಸಿದ್ಧಿಕರೀಶ್ವರೀ ।
ಸರ್ವಸಂಪತ್ಕರೀ ದೇವೀ ತ್ರಿವೇಣೀ ಸೇವ್ಯತಾಂ ಸದಾ ॥ ೭ ॥
ವೇಣೀ ಕೃಂತತಿ ಪಾಪಾನಿ ಪುಣ್ಯಂ ತ್ವಹನಿ ವರ್ಧತೇ ।
ವಿಶೇಷತೋ ಭಕ್ತಮತಾಂ ಕಾರ್ಯಾಕಾರ್ಯಂ ವಿಜಾನತಾಮ್ ॥ ೮ ॥
ನ ವೇಣೀಸದೃಶೀ ಕಾಶೀ ನ ವೇಣೀಸದೃಶೀ ಗಯಾ ।
ನ ವೇಣೀಸದೃಶೀ ಶಕ್ತಿಸ್ತೀರ್ಥೇಽನ್ಯತ್ರಾಸ್ತಿ ಕುತ್ರಚಿತ್ ॥ ೯ ॥
ಕಾಮಧೇನುರಿಯಂ ವೇಣೀ ಕಾಮಕಲ್ಪಲತಾ ಸ್ಮೃತಾ ।
ವೇಣೀ ಮೋಕ್ಷಸ್ಯ ವಿಖ್ಯಾತಾ ಸಪ್ತಪುರ್ಯೋಽಷ್ಟಮೀ ಪುರೀ ॥ ೧೦ ॥
ತ್ರಿವಿಧಾಗತಿಜಾತಘ್ನೀ ಪಾಪತ್ರೈವಿಧ್ಯನಾಶಿನೀ ।
ತ್ರೈಲೋಕ್ಯಾಶೇಷದೋಷಘ್ನೀ ನ ಸಮಾನ್ಯಾಸ್ತಿ ಕುತ್ರಚಿತ್ ॥ ೧೧ ॥
ಸರಸ್ವತೀ ರಜೋರೂಪಾ ತಮೋರೂಪಾ ಕಲಿಂದಜಾ ।
ಸತ್ವರೂಪಾ ಚ ಗಂಗಾ ಚ ನಯಂತಿ ಬ್ರಹ್ಮ ನಿರ್ಗುಣಮ್ ॥ ೧೨ ॥
ಗಂಗಾ ವಿಷ್ಣುಪದೀ ಜ್ಞೇಯಾ ಯತೋ ವಿಷ್ಣುಪದೋದ್ಭವಾ ।
ರವಿಜಾ ಯಮುನಾ ಪುಣ್ಯಾ ತಯೋರ್ಯೋಗೋ ಹ್ಯನುತ್ತಮಃ ॥ ೧೩ ॥
ಏವಂ ತ್ರಿವೇಣೀಸಾಮೀಪ್ಯಾತ್ಪರಮಾನಂದಮೀಯುಷಃ ।
ಮನೋ ಮೇ ನೈತಿ ಪಾತಾಲೇಽಪ್ಯರಿಕ್ತಾಖಿಲಸಂಪದಿ ॥ ೧೪ ॥
ಶೃಣ್ವಂತು ನಯನಾನಂದಕಾರಿಣೀಂ ಭವತಾರಿಣೀಮ್ ।
ತ್ರಿವೇಣೀಂ ನಿರ್ಗುಣಾಂ ಸ್ತೌಮಿ ಸನಕಾದ್ಯಾ ಮಹರ್ಷಯಃ ॥ ೧೫ ॥

**ಶ್ರೀ ಶೇಷದೇವರು ಹೇಳಿದರು—**

ವೇದಮಂತ್ರಗಳಿಗೆ ಪ್ರಣವವು ಹೇಗೆ ಬೀಜವೋ ಮತ್ತು ಜೀವಿಗಳಿಗೆ ನೀರು ಹೇಗೋ ಆ ರೀತಿಯಾಗಿ ಎಲ್ಲ ತೀರ್ಥಗಳಿಗೂ ತ್ರಿವೇಣಿಯೇ ಜೀವವು ಮತ್ತು ಅವುಗಳ ಶಕ್ತಿಯನ್ನು ಬೆಳಸ-ತಕ್ಕದ್ದು. ॥ ೬ ॥ ತ್ರಿವೇಣಿಯು ಜ್ಞಾನಸಿದ್ಧಿಯನ್ನೂ ಮೋಕ್ಷಸಿದ್ಧಿಯನ್ನೂ ಕೊಡತಕ್ಕವಳು. ಕಾರಣಳು ಮತ್ತು ಎಲ್ಲ ಸಂಪತ್ತನ್ನೂ ಕರುಣಿಸುವಂತಹ ಸ್ವಾಮಿನಿಯು ಇಂತಹ ತ್ರಿವೇಣಿಯೂ ಯಾವಾಗಲೂ ಸೇವ್ಯಳು. ॥ ೭ ॥ ವೇಣಿಯು ಪಾಪಗಳನ್ನು ಕತ್ತರಿಸುತ್ತದೆ ಮತ್ತು ದಿನದಿನಕ್ಕೆ ಪುಣ್ಯವನ್ನು ಬೆಳಸುತ್ತದೆ. ಯಾವುದನ್ನು ಮಾಡಬೇಕು ಮತ್ತು ಯಾವುದನ್ನು ಮಾಡಬಾರದು ಎಂಬ ಜ್ಞಾನವುಳ್ಳ ಭಕ್ತಜನರಿಗೆ ಇವಳು ವಿಶೇಷವಾಗಿ ಪಾಪಪರಿಹಾರಮಾಡಿ ಪುಣ್ಯವನ್ನು ವೃದ್ಧಿ ಮಾಡುವಳು. ॥ ೮ ॥ ಕಾಶೀಕ್ಷೇತ್ರವಾಗಲೀ, ಗಯೆಯಾಗಲೀ ವೇಣೀಕ್ಷೇತ್ರಕ್ಕೆ ಸದೃಶವಲ್ಲ. ವೇಣಿಗೆ ಸರಿಸಮನಾದ ಶಕ್ತಿಯುಳ್ಳ ಬೇರಾವ ತೀರ್ಥಕ್ಷೇತ್ರವೂ ಎಲ್ಲೆಲ್ಲಿಯೂ ಇಲ್ಲ. ॥ ೯ ॥ ಕಾಮಧೇನು ಮತ್ತು ಕಲ್ಪವೃಕ್ಷದಂತೆ ತ್ರಿವೇಣಿ ಮನಸ್ಸಿನ ಆಸೆಗಳನ್ನೆಲ್ಲಾ ಪೂರೈಸುವುದು. ಮೋಕ್ಷಪ್ರದಗಳಾದವು ಎಂದು ವಿಖ್ಯಾತವಾದ ಪಟ್ಟಣಗಳು ಏಳೇ ಆದರೂ ಎಂಟನೆಯ ಪಟ್ಟಣದಂತೆ ಇವುಗಳನ್ನು ಮೀರಿಸಿ ಮೋಕ್ಷವನ್ನು ಕೊಡುವ ಕೀರ್ತಿ ತ್ರಿವೇಣಿಗಿದೆ. ॥ ೧೦ ॥ ಮೂರು ವಿಧವಾದ ಪಾಪಗಳನ್ನು

ನಾಶಮಾಡುವುದಲ್ಲದೆ ಮೂರು ಲೋಕದಲ್ಲಿ ಮಾಡಿದ ಸಮಸ್ತ ಪಾಪಗಳನ್ನೂ ನಾಶಮಾಡುವ ಈ ತ್ರಿವೇಣಿಗೆ ಸಮಾನವಾದದ್ದು ಬೇರೊಂದಿಲ್ಲ. ॥ ೧೧ ॥ ಈ ತ್ರಿವೇಣಿಯಲ್ಲಿ ಸರಸ್ವತಿಯು ರಜೋಗುಣರೂಪಳು, ಯಮುನೆಯು ತಮೋಗುಣರೂಪಳು ಮತ್ತು ಗಂಗೆಯು ಸತ್ವಗುಣರೂಪಳು ಆಗಿದ್ದು ಪ್ರಾಕೃತಿಕ ಗುಣವ್ಯಾಪಾರವಿಲ್ಲದ ಶ್ರೀ ಹರಿಯ ಲೋಕಕ್ಕೆ ಜೀವಿಗಳನ್ನು ಒಯ್ಯುತ್ತಾರೆ. (ಸರಸ್ವತಿಯ ನೀರು ಕೆಂಪು, ಯಮುನೆಯ ನೀರು ಕಪ್ಪು, ಗಂಗೆಯ ನೀರು ಬಿಳುಪು. ರಜಸ್ಸತ್ತ್ವತಮೋಗುಣಗಳೂ ಇದೇ ಬಣ್ಣ) ॥ ೧೨ ॥ ಬ್ರಹ್ಮದೇವರು ತ್ರಿವಿಕ್ರಮ ದೇವರ ಕಾಲುಗಳನ್ನು ನೀರಿನಿಂದ ತೊಳೆದಾಗ ಆ ನೀರೇ ಮಂದಾಕಿನಿಯಾಗಿ ವಿಷ್ಣುಪಾದದಿಂದ ಉದ್ಭವವುಳ್ಳದ್ದಾಗಿ ಕೆಳಗಿನ ಲೋಕಗಳಲ್ಲೆಲ್ಲಾ ಹರಿದುಬಂದಳು. ಯಮುನೆಯು ಸೂರ್ಯನ ಮಗಳು. ಇವರಿಬ್ಬರ ಸಂಗಮವು ಅತ್ಯುತ್ತಮ ಕ್ಷೇತ್ರವಾದ ತ್ರಿವೇಣಿಯಲ್ಲಿ ಆಗುವದು. ॥ ೧೩ ॥ ಈ ರೀತಿಯಾಗಿ ತ್ರಿವೇಣಿಯ ಸಮೀಪದಲ್ಲಿದ್ದು ಉತ್ತಮವಾದ ಆನಂದವನ್ನು ಹೊಂದುವ ಬಯಕೆ-ಯುಳ್ಳ ನನಗೆ ಎಲ್ಲ ಬಗೆಯ ಐಶ್ವರ್ಯಗಳಿಂದ ತುಂಬಿದ್ದರೂ ಪಾತಾಳದಲ್ಲಿ ಇರಲು ಮನಸ್ಸು ಒಪ್ಪುತ್ತಿಲ್ಲ. ॥ ೧೪ ॥ ಆದ್ದರಿಂದ ಸನಕಾದಿ ಮಹರ್ಷಿಗಳೇ! ಕೇಳಿರಿ, ಕಣ್ಣಿಗೆ ಆನಂದವನ್ನುಂಟು ಮಾಡಿ ಹರಿಯುತ್ತಿರುವ ಸಂಸಾರಸಮುದ್ರವನ್ನು ದಾಟಿಸುವ ಮತ್ತು ಪ್ರಾಕೃತಿಕ ಗುಣಗಳಿಲ್ಲದ ಪ್ರದ್ಯುಮ್ನ ಅನಿರುದ್ಧ ಮತ್ತು ಸಂಕರ್ಷಣರೆಂಬ ಶ್ರೀಮಹಾವಿಷ್ಣುವಿನ ಈ ಮೂರು ರೂಪಗಳನ್ನು ತನ್ನ ಮೂರು ವಿಧ ಧಾರಾಗಳಲ್ಲಿ ಹೊಂದಿರುವ ಈ ತ್ರಿವೇಣಿಯನ್ನು ವರ್ಣಿಸುವೆನು. ॥ ೧೫ ॥

ಶೇಷ ಉವಾಚ—

ದೇಹೇಂದ್ರಿಯಪ್ರಾಣಮನೋಮನೀಷಾ
ಚಿತ್ತಾಹಮಜ್ಞಾನವಿಭಿನ್ನರೂಪಾ ।
ತತ್ಸಾಕ್ಷಿಣೀ ಯಾ ಸ್ಫುರತಿ ಸ್ವಭಾಸಾ
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೧೬ ॥

ಜಾಗ್ರತ್ಪದಂ ಸ್ವಪ್ನಪದಂ ಸುಷುಪ್ತಂ
ವಿದ್ಯೋತಯಂತೀ ವಿಕೃತಿಂ ತದೀಯಾಮ್ ।
ಯಾ ನಿರ್ವಿಕಾರೋಪನಿಷತ್ಪ್ರಸಿದ್ಧಾ
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೧೭ ॥

ಸುಪ್ತೇ ಸಮಾಸಾತ್ಸಕಲಪ್ರಕಾರ-
ಜ್ಞಾನಕ್ಷಯೇ ಚೇಂದ್ರಿಯಜಾರ್ಥಬೋಧೇ ।
ಸಾ ಪ್ರತ್ಯಭಿಜ್ಞಾಯತ ಏವ ಸರ್ವೈ-
ಸ್ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೧೮ ॥

ಯಸ್ಯಾಂ ಸಮಸ್ತಂ ಜಗದೇತಿ ನಿತ್ಯ-
ಮೇಕಾಪರಸ್ಮೈ ಭವತಿ ಸ್ವಯಂ ನಃ ।
ಯಾತ್ಯಂತಸತ್ಪ್ರೀತಿಪದತ್ವಮಾಗಾತ್
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೧೯ ॥

ಅವ್ಯಕ್ತವಿಜ್ಞಾನವಿರಾಟ್ಪ್ರಭೇದಾತ್ಮ-
ದೀಪಯಂತೀ ನಿಜದೀಪ್ತಿದೀಪಾತ್ ।
ಆದಿತ್ಯವದ್ವಿಶ್ವವಿಭಿನ್ನರೂಪಾ
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೨೦ ॥
ಬ್ರಹ್ಮಾಣಮಾದೌ ಜಗತೋಽಸ್ಯ ಮಧ್ಯೇ
ವಿಷ್ಣುಂ ತಥಾಂತೇ ಕಿಲ ಚಂದ್ರಚೂಡಮ್ ।
ಯಾ ಭಾಸಯಂತೀ ಸ್ವವಿಭಾಸಮಾನಾ
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೨೧ ॥
ಅಕಾರವಾಚ್ಯಾ ಚತುರಾಸ್ಯವಿಶ್ವಾ
ವೈಶ್ವಾನರಾತ್ಮೈವ ಮಕಾರವಾಚ್ಯಾ ।
ಯಾ ತೂಚ್ಯತೇ ತೈಜಸಸೂತ್ರಸಂಜ್ಞಾ
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೨೨ ॥
ಅವ್ಯಾಕೃತಪ್ರಾಜ್ಞಗಿರೀಶ್ವರಾಂಗೀ
ಯಾ ಮುಕ್ತಿಭಾಜ್ಞಾನಸಮಸ್ತಶೂನ್ಯಾ ।
ಓಂಕಾರಲಕ್ಷ್ಯಾ ತು ತುರೀಯತತ್ತ್ವಾ
ಸಾಕ್ಷಾತ್ತ್ರಿವೇಣೀ ಮಮ ಸಿದ್ಧಿದಾಸ್ತು ॥ ೨೩ ॥
ಅನೇನ ಸ್ತವನೇನೈನಾಂ ತ್ರಿಸಂಧ್ಯಂ ಯಃ ಸ್ಮರೇನ್ನರಃ ।
ತಸ್ಯ ವೇಣೀ ಸುಪ್ರಸನ್ನಾ ಭವಿಷ್ಯತಿ ನ ಸಂಶಯಃ ॥ ೨೪ ॥
ಮಂತ್ರಸಾರಮಿದಂ ನಾಮ ವ್ಯಾಸೋಕ್ತಂ ಸ್ತೋತ್ರಮುತ್ತಮಮ್ ।
ತಸ್ಯ ಜಾಪ್ಯೇನ ಸಾ ದೇವೀ ಪ್ರತ್ಯಕ್ಷಂ ಮಮ ಸರ್ವದಾ ॥ ೨೫ ॥
ಯತ್ರ ಯತ್ರ ಚ ಗಚ್ಛಾಮಿ ತತ್ರ ತತ್ರಾಸ್ತಿ ಸಮ್ಮುಖೀ ।
ತಂ ತಂ ಕಾಮಂ ದದಾತೀಯಂ ಯಂ ಯಂ ಕಾಮಂ ಚ ಕಾಮಯೇ॥ ೨೬ ॥
ಕಿಂ ತೀರ್ಥೈಸ್ತೈಸ್ತೈರನ್ಯೈರ್ಬಹ್ವಾಯಾಸಫಲಪ್ರದೈಃ ।
ತ್ರಿವೇಣೀ ಸೇವ್ಯತಾಂ ಸರ್ವೈರ್ಧರ್ಮಕಾಮಾರ್ಥಮೋಕ್ಷದಾ ॥ ೨೭ ॥
ಸಗುಣಾಂ ಕಾಮತಸ್ತೋಷ್ಯೇ ಶ್ರೂಯತಾಂ ಬ್ರಹ್ಮನಂದನಾಃ ।
ಯಸ್ಯ ಶ್ರವಣಮಾತ್ರೇಣ ಸರ್ವಸ್ವಾಂತಂ ಪ್ರಸೀದತಿ ॥ ೨೮ ॥

ಶ್ರೀ ಶೇಷದೇವರು ಹೇಳಿದರು—

ಜೀವಿಗಳ ದೇಹ, ಹತ್ತು ಇಂದ್ರಿಯಗಳು, ಪಂಚಪ್ರಾಣಗಳು, ಮನಸ್ಸು, ಬುದ್ಧಿ, ಚಿತ್ತ ಅಹಂಕಾರ ಮತ್ತು ವಿಜ್ಞಾನ ಇವುಗಳ ರೂಪಗಳನ್ನು ಹೊಂದಿ ಅವುಗಳಿಗೆ ಸಾಕ್ಷಿಭೂತಳಾಗಿದ್ದು ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಶ್ರೀತ್ರಿವೇಣಿಯೇ, ನನಗೆ ಮೋಕ್ಷರೂಪ ಸಿದ್ಧಿಯನ್ನು

ಕರುಣಿಸು. ॥ ೧೬ ॥ (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ—ಪಂಚಪ್ರಾಣಗಳು, ಚಕ್ಷು, ಘ್ರಾಣ, ರಸನ, ತ್ವಕ್ ಮತ್ತು ಶ್ರವಣ—ಜ್ಞಾನೇಂದ್ರಿಯಗಳು, ವಾಕ್, ಪಾಣಿ, ಪಾದ, ಪಾಯು, ಉಪಸ್ಥ—ಕರ್ಮೇಂದ್ರಿಯಗಳು) ವಿಶ್ವಾತ್ಮಕನಾಗಿ ಚಕ್ಷುರಿಂದ್ರಿಯದ ಅಗ್ರಭಾಗ ದಲ್ಲಿದ್ದು ಜೀವಿಗಳಿಗೆ ಬಾಹ್ಯವಸ್ತುಗಳ ಸಂಪರ್ಕವನ್ನುಂಟುಮಾಡಿ ಅವುಗಳ ವಿಕಾರಗಳನ್ನು ತೋರಿಸುತ್ತಿರುವ, ತೈಜಸರೂಪದಿಂದ ಜೀವಿಯ ಕಂಠದಲ್ಲಿದ್ದು ಜೀವಿಗೆ ಸ್ವಪ್ನಾವಸ್ಥೆಯಲ್ಲಿನ ವಿಕಾರಗಳನ್ನು ತೋರಿಸುತ್ತಿರುವ ಮತ್ತು ಪ್ರಾಜ್ಞರೂಪದಿಂದ ಜೀವಿಯ ಹೃದಯಸ್ಥಾನದಲ್ಲಿದ್ದು ತನ್ನ ಆಲಿಂಗನ ದಿಂದ ಜೀವಿಗೆ ಗಾಢನಿದ್ರೆಯಲ್ಲಿ ಆನಂದವನ್ನುಂಟುಮಾಡುವ ಮತ್ತು ಇವೆಷ್ಟನ್ನು ಯಾವ ರೀತಿಯಾದ ಪ್ರಕೃತಿಸಂಬಂಧವಾದ ವಿಕಾರಗಳಿಗೆ ಸಂಬಂಧಪಡದಂತೆ ಮಾಡುತ್ತಿದ್ದು ನಿರ್ವಿಕಾರ ದಿಂದಿರುವ ಮತ್ತು ಉಪನಿಷತ್ತುಗಳಲ್ಲಿ ಆಮೂಲಾಗ್ರ ವರ್ಣಿಸಲ್ಪಟ್ಟು ತನ್ಮೂಲಕ ಪ್ರಸಿದ್ಧವಾಗಿರುವ ಪರಮಾತ್ಮನ ಸನ್ನಿಧಾನಕ್ಕೆ ಪಾತ್ರಳಾದ ಸಾಕ್ಷಾತ್ ತ್ರಿವೇಣಿಯೇ, ನನಗೆ ಮೋಕ್ಷಾಖ್ಯ ಸಿದ್ಧಿಯನ್ನು ಕರುಣಿಸು. ॥ ೧೭ ॥ ನಿದ್ರಾವಸ್ಥೆಯಲ್ಲಿರುವಾಗ ಸಕಲ ಇಂದ್ರಿಯಗಳೂ ತಮ್ಮ ವಿಷಯಗ್ರಹಣದ ಶಕ್ತಿಯನ್ನು ಕಳೆದುಕೊಂಡಿರುವುವು; ನಿದ್ರೆಯು ಮುಗಿದು ಜೀವಿಯು ಜಾಗ್ರದವಸ್ಥೆಗೆ ಬಂದಾಗ ಇಂದ್ರಿಯಗಳು ಪುನಃ ತಮ್ಮ ತಮ್ಮ ವಿಷಯಗಳನ್ನು ''ಪ್ರತ್ಯಭಿಜ್ಞಾನ''ದ ರೂಪದಲ್ಲಿ ಮೊದಲು ನೋಡಿ, ಗ್ರಹಿಸಿ ತಿಳಿದುಕೊಂಡಿದ್ದಂತೆಯೇ ಈಗಲೂ ತಿಳಿದುಕೊಳ್ಳುವುವು. ಈ ರೀತಿಯಾಗಿ ಸುಪ್ತಾವಸ್ಥೆಯಲ್ಲಿ ಇಂದ್ರಿಯಗಳ ವ್ಯಾಪಾರವನ್ನು ಉಪರಮಗೊಳಿಸಿ ನಿದ್ರಾವಸ್ಥೆಯು ಮುಗಿದ ಮೇಲೆ ಎಲ್ಲ ವಿಷಯಗಳ ಜ್ಞಾನವುಂಟಾಗಲು ಕಾರಣೀಭೂತವಾದ ಎಲೈ ತ್ರಿವೇಣಿಯೇ, ನನಗೆ ಮೋಕ್ಷವನ್ನು ಕರುಣಿಸು. ॥ ೧೮ ॥ ನಿತ್ಯವೂ ಇಡೀ ಜಗತ್ತು ಪರಮಾತ್ಮನ ವ್ಯಾಪ್ತಿಗೆ ಒಳಪಟ್ಟು ಅವನಲ್ಲಿ ಒಂದಾದಂತೆ ಏಕೀಭೂತವಾಗುತ್ತದೋ ಮತ್ತು ಯಾವುದು ಪರಮಾತ್ಮನ ಪ್ರೀತಿಗೆ ಪಾತ್ರವಾಗಿರುವುದೋ ಅಂತಹ ತ್ರಿವೇಣಿಯು ಸಾಕ್ಷಾತ್ತಾಗಿ ನನ್ನ ಮುಕ್ತಿರೂಪ ಸಿದ್ಧಿಗಾಗಿ ಆಗಲಿ. ॥ ೧೯ ॥ ಅವ್ಯಕ್ತ, ವಿಜ್ಞಾನ ಮತ್ತು ವಿರಾಟ್ ಎಂಬ ವಿಶಿಷ್ಟಪದಗಳಿಂದವೇದ್ಯನಾಗಿ ತನ್ನ ಕಾಂತಿಯುಕ್ತ ಪ್ರಭೆ ಮತ್ತು ಪ್ರತಿಭೆಯಿಂದ ಸೂರ್ಯನಂತೆ ಪ್ರಕಾಶಮಾನನಾಗಿರತಕ್ಕ ಸಾಕ್ಷಾತ್ ತ್ರಿವೇಣಿಯೇ, ನನಗೆ ಸದ್ಗತಿಯನ್ನು ಕರುಣಿಸಲಿ. (ಅವ್ಯಕ್ತ—ತಾನು ಇಷ್ಟಪಟ್ಟರೆ ವ್ಯಕ್ತನಾಗುವ, ಇಲ್ಲದಿದ್ದರೆ ರಮಾಬ್ರಹ್ಮಾದಿಗಳಿಗೂ ವ್ಯಕ್ತನಾಗದಿರುವ ಅಥವಾ ಎಲ್ಲ ಪದಾರ್ಥಗಳಲ್ಲಿಯೂ ಮತ್ತು ಎಲ್ಲ ಜೀವಿಗಳಲ್ಲಿಯೂ ಅಂತರ್ಯಾಮಿಯಾಗಿ ನಿಯಾಮಕನಾಗಿದ್ದರೂ ಯಾರಿಗೂ ವ್ಯಕ್ತನಾಗದೆ ಇರುವ ಮತ್ತು ಯಾರ ಮನಸ್ಸಿಗೂ ಸಾಕಲ್ಯೇನ ವ್ಯಕ್ತನಾಗದೇ ಇರತಕ್ಕ ಅಪ್ರಾಪ್ಯ ಮನಸಾ ಸಹ) ಆದ್ದರಿಂದ ಅವ್ಯಕ್ತನೆಂದೆನಿಸಿಕೊಂಡಿರುವನು. ವಿಜ್ಞಾನ—ಬ್ರಹ್ಮರುದ್ರೇಂದ್ರಾದಿಗಳ ಅನೇಕ ಜನ್ಮಗಳ ಜ್ಞಾನಗಳನ್ನೂ, ಶ್ರೀಲಕ್ಷ್ಮೀವಿಷಯಕ ಅರಿವನ್ನೂ ಸಮಸ್ತ ಅನಂತಕೋಟಿಬ್ರಹ್ಮಾಂಡದ ಒಳಗೂ ಹೊರಗೂ ಇರತಕ್ಕ ಸಮಸ್ತ ಪದಾರ್ಥಗಳ ಮತ್ತು ಜೀವರಾಶಿಗಳ, ಸೃಷ್ಟಿಗೆ ಬಂದಿರುವ ಮತ್ತು ಬರಬಹುದಾದ ಎಲ್ಲ ಜೀವಿಗಳ ಮತ್ತು ಸಮಸ್ತ ವೇದರಾಶಿಗಳ, ಶಾಸ್ತ್ರರಾಶಿಗಳ, ಪುರಾಣೇತಿಹಾಸಗಳ ಪರಿಪೂರ್ಣಜ್ಞಾನಸಂಪನ್ನನಾದ್ದರಿಂದ ವಿಜ್ಞಾನ. ವಿರಾಟ್—ಸಮಸ್ತ ಬ್ರಹ್ಮಾಂಡಲ್ಲಿಯೂ ಇದ್ದು ವ್ಯಾಪಾರ ಮಾಡಿಸುವವನಾಗಿ ''ವಿರಾಟ್'' ಎಂಬ ಹೆಸರಿನಿಂದ ವೇದಾದಿಗಳಲ್ಲಿ ಸಂಬೋಧಿತನಾಗಿರುವ.) ॥ ೨೦ ॥ ಯಾರು ಚತುರ್ಮುಖ ಬ್ರಹ್ಮದೇವರಲ್ಲಿ

ವಾಸುದೇವ ರೂಪದಿಂದ ನಿಯಾಮಕನಾಗಿದ್ದು ಸೃಷ್ಟಿಕಾರ್ಯವನ್ನು ಮಾಡಿಸುತ್ತಿದ್ದಾನೋ, ತಾನೇ ವಿಷ್ಣುರೂಪದಿಂದ ಜಗತ್ತಿನಲ್ಲಿ ವ್ಯಾಪಿಸಿ ಜೀವಜಡಾತ್ಮಕಪ್ರಪಂಚದ ನಿಯಮನ ಮಾಡುತ್ತಿದ್ದಾನೋ ಮತ್ತು ಶ್ರೀಸಂಕರ್ಷಣರೂಪದಿಂದ ಶ್ರೀಮಹರುದ್ರದೇವರಲ್ಲಿ ಅಂತರ್ನಿಯಾಮಕನಾಗಿದ್ದು ಜಗತ್ತಿನ ಸಂಹಾರಕಾರ್ಯವನ್ನು ಮಾಡಿ ಮಾಡಿಸುತ್ತಿದ್ದಾನೋ, ಅಂತಹ ತ್ರಿವೇಣಿಯು ನನ್ನ ಸದ್ಗತಿಗೆ ಮುಖ್ಯಕಾರಣನಾಗಲಿ. ॥ ೨೧ ॥ ಯಾವ ಶ್ರೀಹರಿಯೇ ವಿಶ್ವ, (ವೈಶ್ವಾನರ-ನಿತ್ಯನೂ), ತೈಜಸ,ಪ್ರಾಜ್ಞ ಮತ್ತು ತುರೀಯವೆಂಬ ನಾಲ್ಕು ರೂಪಗಳನ್ನು ಧರಿಸಿ ಓಂಕಾರದ ಅಂಶಗಳಾದ ಅ, ಉ, ಮ ಮತ್ತು ನಾದ ಇವುಗಳನ್ನು ಪ್ರತಿನಿಧಿಸುತ್ತಿದ್ದಾನೆಯೋ ಅಂತಹ ಶ್ರೀಹರಿಯೇ ಆದ ತ್ರಿವೇಣಿಯು ನನ್ನನ್ನು ಸದ್ಗತಿಗೆ ಒಯ್ಯಲಿ. ॥ ೨೨ ॥ ಯಾರು ಅವ್ಯಾಕೃತತತ್ತ್ವಾಭಿಮಾನಿಯೂ (ಜಡಪ್ರಕೃತಿಗೆ ಅಭಿಮಾನಿ ಆಗಿರುವ ಶ್ರೀಲಕ್ಷ್ಮೀದೇವಿಯಲ್ಲಿಯೂ, ಪ್ರಾಜ್ಞನೆಂದು ವೇದಾದಿಗಳಲ್ಲಿ ಪ್ರಸಿದ್ಧನಾಗಿರುವ ಶ್ರೀಬ್ರಹ್ಮದೇವರಲ್ಲಿಯೂ ಮತ್ತು ಮಹಾರುದ್ರದೇವರಲ್ಲಿಯೂ ಇದ್ದು ಅವರಲ್ಲಿ ಅಂಗಭೂತನು ಆಗಿದ್ದು ಅವರ ವ್ಯಾಪಾರಾದಿಗಳನ್ನು ಮಾಡಿಸುತ್ತಿದ್ದಾನೋ, ಯಾರು ಅಜ್ಞಾನಾದಿ ಸಮಸ್ತತಮೋಗುಣವ್ಯಾಪಾರಗಳಿಂದ ವರ್ಜಿತನಾಗಿದ್ದಾನೋ, ಯಾರು ಓಂಕಾರದ ನಾಲ್ಕನೇ ಪಾದವಾದ ನಾದದಲ್ಲಿದ್ದು ತುರೀಯನೆಂದು ವೇದಾದಿಗಳಲ್ಲಿ ವರ್ಣಿಸಲ್ಪಟ್ಟಿದ್ದಾನೋ, ಅಂತಹ ಶ್ರೀಹರಿಯ ರೂಪವೇ ಆದ ತ್ರಿವೇಣಿಯು ನನ್ನ ಸದ್ಗತಿಗೆ ಕಾರಣವಾಗಲಿ. ॥ ೨೩ ॥ ಈ ಸ್ತೋತ್ರದಿಂದ ಮೂರು ಸಂಧ್ಯಾಕಾಲಗಳಲ್ಲಿಯೂ ಯಾರು ಸ್ತೋತ್ರ ಮಾಡುತ್ತಾರೋ ಅವರಿಗೆ ವೇಣೀಯು ಸುಪ್ರಸನ್ನಳಾಗುವಳು. ಈ ವಿಷಯದಲ್ಲಿ ಸಂಶಯ ಬೇಡ. ॥ ೨೪ ॥ ಈ ವೇಣೀ ಸ್ತೋತ್ರವು ಶ್ರೀ ವೇದವ್ಯಾಸರಿಂದ ಹೇಳಲ್ಪಟ್ಟಿದ್ದು; ಇದು ಮಂತ್ರಗಳಲ್ಲಿ ಬಹಳ ಫಲಪ್ರದವಾದುದು. ಇದನ್ನು ನಿತ್ಯವೂ ಜಪಿಸುವುದರಿಂದ ಆ ವೇಣಿಯು ನನಗೆ ಯಾವಾಗಲೂ ಪ್ರತ್ಯಕ್ಷಳಾಗಿದ್ದಾಳೆ. ॥ ೨೫ ॥ ನಾನು ಎಲ್ಲೆಲ್ಲಿ ಹೋದರೂ ಅಲ್ಲಲ್ಲಿ ವೇಣಿಯು ಹಸನ್ಮುಖಿಳಾಗಿ ನನಗೆ ಕಾಣುತ್ತಾಳೆ ಮತ್ತು ನಾನು ಯಾವು ಯಾವುದನ್ನು ಬಯಸುತ್ತೇನೋ ಅವುಗಳನ್ನೆಲ್ಲಾ ಕೊಡುತ್ತಾಳೆ. ॥ ೨೬ ॥ ಬಹಳ ಪ್ರಯಾಸದಿಂದ ಫಲಪ್ರದಗಳಾಗಿರತಕ್ಕ ಬೇರೆ ಬೇರೆ ತೀರ್ಥಗಳ ಸೇವನೆಯಿಂದ ಏನು ಪ್ರಯೋಜನ ? ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಕೊಡುವ ತ್ರಿವೇಣಿಯನ್ನು ಎಲ್ಲರೂ ಸೇವಿಸಲಿ. ॥ ೨೭ ॥ ಎಲೈ ಬ್ರಹ್ಮನ ಮಕ್ಕಳುಗಳಾದ ಸನಕಾದಿಗಳೇ ! ಅನಂತಗುಣ ಸಂಪೂರ್ಣರಾದ ಪ್ರದ್ಯುಮ್ನ ಅನಿರುದ್ಧ ಮತ್ತು ಸಂಕರ್ಷಣರನ್ನು ಅಭಿಮಾನ ದೇವತೆಗಳಾಗಿ ಹೊಂದಿರುವ ಈ ಮೂರು ನದಿಗಳ ಸಂಗಮವಾಗಿ ತ್ರಿವೇಣಿ ಎಂದು ಪ್ರಖ್ಯಾತವಾಗಿರುವ ಈ ಕ್ಷೇತ್ರವನ್ನು ನಾನು ಸ್ತೋತ್ರಾದಿಗಳಿಂದ ಸಂತೋಷಪಡಿಸುತ್ತೇನೆ. ಕೇವಲ ಇದರ ಶ್ರವಣದಿಂದಲೇ ಎಲ್ಲರ ಮನಸ್ಸು ಪ್ರಸನ್ನಗೊಳ್ಳುತ್ತದೆ. ॥ ೨೮ ॥

ಸೂತ ಉವಾಚ—

ಇತಿ ಶೇಷೋಕ್ತವಚನೈರ್ಹರ್ಷಿತಾಸ್ಸನಕಾದಯಃ ।
ವೇಣೀಸ್ತುತಿಂ ಸ್ತೋತುಕಾಮಾಃ ಪ್ರಣೇಮುಸ್ತಂ ಪುನಃ ಪುನಃ ॥ ೨೯ ॥
ಯಾಮುವಾಚ ಸ್ತುತಿಂ ವೇಣ್ಯಾಃ ಶೇಷಸ್ತೇಭ್ಯೋ ವಿಚಕ್ಷಣಃ ।
ತಾಂ ಪ್ರವಕ್ಷ್ಯಾಮಿ ಶೃಣುತ ಜ್ಞಾನದೃಷ್ಟಿವಿಚಕ್ಷಣಾಃ ॥ ೩೦ ॥

**ಸೂತರು ಹೇಳಿದರು—**

ಈ ರೀತಿಯಾದ ಶ್ರೀಶೇಷದೇವರ ಉಪದೇಶವಚನಗಳಿಂದ ಸನಕಾದಿಗಳು ಹರ್ಷ-ಗೊಂಡು ವೇಣೀ ಸ್ತೋತ್ರವನ್ನು ಪಠಿಸುವ ಇಚ್ಛೆಯುಳ್ಳವರಾಗಿ ಆ ಶೇಷದೇವರನ್ನು ಪದೇ ಪದೇ ನಮಿಸಿದರು. ॥೨೯॥ ಜ್ಞಾನ ದೃಷ್ಟಿಯಿಂದ ವಿವೇಕಿಗಳೂ ಕುಶಲರೂ ಆಗಿರುವ ಶೌನಕಾದಿಗಳೇ! ವೇಣಿಯ ಯಾವ ಸ್ತೋತ್ರವನ್ನು ಶ್ರೀ ಶೇಷದೇವರು ಸನಕಾದಿಗಳಿಗೆ ಉಪದೇಶ ಮಾಡಿದರೋ ಅದನ್ನು ಹೇಳುವೆನು ಕೇಳಿರಿ. ॥೩೦॥

**ಶೇಷ ಉವಾಚ—**

ಪುರಾ ಕಲ್ಪಾಪಾಯೇ ಭಗವತಿ ಶಯಾನೇ ವಟಪುಟೇ
ಯದಾ ಸರ್ವಾನ್ ಲೋಕಾನ್ ಜಠರಪಿಠರೇ ಸ ಹೃತವತಿ ।
ತದಾ ಕ್ಷೇತ್ರಂ ವೇಣೀ ಜಯತಿ ಜಗದೀಶಸ್ಯ ವಸತಿಃ
ಪ್ರಯಾಗೇ ಬ್ರಹ್ಮಾಂಡೇ ನ ಹಿ ಸಮಗುಣಾನ್ಯಾ ವಿಜಯತೇ ॥ ೩೧ ॥
ತ್ರಿಕೂಟಾದುದ್ಭೂತಾ ತ್ರಿಗುಣರಚಿತಾ ತ್ರ್ಯಕ್ಷರಮಯೀ
ತ್ರಿಧಾ ಮಾತ್ರಾ ಭೂತ್ವಾ ತ್ರಿವಿಧಪಥಗಾ ತ್ರ್ಯಂಬಕಮತೀ ।
ತ್ರಿವೇಣೀ ನಿಃಶ್ರೇಣೀ ಹರಿಚರಣಸಾನ್ನಿಧ್ಯಜನನೀ
ಪುನಂತೀ ತ್ರೈಲೋಕ್ಯಂ ತ್ರಿಭುವನವಿಭೂಷಾ ವಿಜಯತೇ ॥ ೩೨ ॥
ವೇಣೀಂ ಧ್ಯಾಯೇತ್ತ್ರಿವರ್ಣಾಂ ಸಿತಹರಿತಲಸದ್ರಕ್ತವಸ್ತ್ರಾಂ ತ್ರಿನೇತ್ರಾಂ
ದೋರ್ಭಿಃಶಂಖಾಬ್ಜಚಕ್ರಕ್ರಮಧೃತಸುಗದಾಂ ಶ್ವೇತಪದ್ಮಾಸನಸ್ಥಾಮ್ ।
ಬಾಲಾಂ ಭಾಲೇಂದುಮಾಲಾಂ ಕೃತಧೃತಮುಕುಟಾಂ ಬ್ರಹ್ಮರುದ್ರೇಂದ್ರವಂದ್ಯಾಂ
ಸ್ನಾನೇ ಕಾಲತ್ರಯೇ ಯಃ ಸ್ಮರತಿ ಸ ಹಿ ಪುಮಾನ್ ಭುಕ್ತಿಮುಕ್ತೀ ಲಭೇತ ॥ ೩೩ ॥
ಬ್ರಹ್ಮರುದ್ರೇಂದ್ರನಮಿತೇ ಸರ್ವಸಿದ್ಧಿಸುಸೇವಿತೇ ।
ತ್ರಿಕೂಟಮಿಲಿತೇ ಮಾತರ್ನಮೋ ವೇಣ್ಯೈ ನಮೋ ನಮಃ ॥ ೩೪ ॥
ಗಂಗಾಯಮುನಯೋರ್ಮಧ್ಯೇ ಗೋಚರೇ ಸಂಧಿಬಂಧುರೇ ।
ಅಕ್ಷಯ್ಯಮೋಕ್ಷಲತಿಕೇ ತುಭ್ಯಂ ವೇಣ್ಯೈ ನಮೋ ನಮಃ ॥ ೩೫ ॥
ಪ್ರಯಾಗತೀರ್ಥರಾಜಸ್ಯ ಕರಪಲ್ಲವಮಾಲಿಕೇ ।
ಅಕ್ಷಯ್ಯಾಕ್ಷರಜಾಪ್ಯಸ್ಯ ವಿಧಾನಫಲದೇ ನಮಃ ॥ ೩೬ ॥
ಧರ್ಮಾರ್ಥಕಾಮಮೋಕ್ಷಾಣಾಂ ಭೂಮಿಕೇ ಭುವಿ ವಿಶ್ರುತೇ ।
ವೇಣಿ ತ್ವಂ ಪಾಹಿ ಮಾಂ ಸಾಕ್ಷಾದ್ದೃಷ್ಟೇ ಸ್ಪೃಷ್ಟೇಽವಗಾಹಿತೇ ॥ ೩೭ ॥
ಸರ್ವಾಗಮೇಷು ವಿಖ್ಯಾತೇ ಸರ್ವತೀರ್ಥವರಪ್ರದೇ ।
ಜೀವಾನಾಂ ಕಲ್ಪಲತಿಕೇ ವೇಣೀಮಾತರ್ನಮೋ ನಮಃ ॥ ೩೮ ॥
ತ್ವಂ ಮೋಕ್ಷಲಕ್ಷ್ಮೀಸ್ತ್ವಮತಿಪ್ರಭಾಸಿ
ತ್ವಂ ಬ್ರಹ್ಮನಾಡೀಚರನಾಡಿಗಾಸಿ ।

ತ್ವಂ ಬ್ರಹ್ಮಮಾಯಾಸಿ ವಿಚಿತ್ರಗಾಸಿ
ಪ್ರತ್ಯಕ್ಷರೂಪಾಸಿ ನಮೋ ನಮಸ್ತೇ ॥ ೩೯ ॥

**ಶ್ರೀ ಶೇಷದೇವರು ಹೇಳಿದರು—**

ಹಿಂದೆ ಬ್ರಹ್ಮಕಲ್ಪದ ಅಂತ್ಯದಲ್ಲಿ ಶ್ರೀ ಲಕ್ಷ್ಮೀನಾರಾಯಣನು ಶಿಶುರೂಪ ತಾಳಿ ಆಲದೆಲೆಯ ಮೇಲೆ ಮಲಗಿರುವಾಗ ಇಡೀ ಜಗತ್ತನ್ನು ತನ್ನ ಹೊಕ್ಕಳು ಮೂಲಕ ಸೆಳೆದು ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಂಡನು. ಇಂತಹ ಪ್ರಳಯ ಕಾಲದಲ್ಲಿಯೂ ಇಡೀ ಬ್ರಹ್ಮಾಂಡದಲ್ಲೇ ಈ ಪ್ರಯಾಗ ಕ್ಷೇತ್ರವೊಂದೇ ಒಂದು ಅಕ್ಷಯ ವಟ ವೃಕ್ಷದೊಡನೆ ಇದ್ದು ಶ್ರೀ ಹರಿಗೆ ಆಶ್ರಯವಾಯಿತು. ಆದ್ದರಿಂದ ಈ ಬ್ರಹ್ಮಾಂಡದಲ್ಲಿ ಈ ಪ್ರಯಾಗ ಕ್ಷೇತ್ರಕ್ಕೆ ಸರಿಸಮನಾದ ಗುಣಾಢ್ಯವಾದ ಬೇರೆಯಾವುದೂ ಇಲ್ಲ. ॥ ೩೧ ॥ ಈ ಪ್ರಯಾಗ ಕ್ಷೇತ್ರವು ತ್ರಿಕೂಟ ಪರ್ವತದ ದಶೆಯಿಂದ ಉದ್ಭವಿಸಿದ್ದು, ಓಂಕಾರದ ಮೂರು ಮಾತ್ರಾಗಳುಳ್ಳದ್ದು, ಅಂದರೆ ಈ ಮೂರು ಮಾತ್ರೆಗಳಿಂದ ಪ್ರತಿಪಾದ್ಯರಾದ ಶಾರದಾ, ಯಮುನಾ ಮತ್ತು ಗಂಗೆಯರಿಂದ ಕೂಡಿದ್ದು, ತ್ರಿಲೋಕದಲ್ಲಿ ತನ್ನ ಹರಿವುವುಳ್ಳದ್ದಾಗಿ, ಮೂರು ಕಣ್ಣುಗಳುಳ್ಳ ಶ್ರೀ ಮಹಾರುದ್ರದೇವರನ್ನು ಹೊಂದಿರುವುದು. ಶ್ರೀ ಮಾಧವದೇವರ ಸಾನ್ನಿಧ್ಯಕ್ಕೆ ಕಾರಣೀಭೂತಳಾಗಿದ್ದು, ಮೂರು ಅಕ್ಷರಗಳಿಂದ ಕೂಡಿದ ತ್ರಿವೇಣಿಯು ಮೂರು ಲೋಕಗಳನ್ನು ಪವಿತ್ರಗೊಳಿಸಿ ಮೂರು ಲೋಕಗಳಿಗೂ ಭೂಷಣ ಪ್ರಾಯಳಾಗಿದ್ದಾಳೆ. ॥ ೩೨ ॥ ಮೂರು ಬಗೆಯಾಗಿರುವಳೆಂದು ವರ್ಣಿಸಲ್ಪಟ್ಟ ಬಿಳಿಯ, ಹಸಿರು ಮತ್ತು ರಕ್ತವಸ್ತ್ರಗಳನ್ನು ಧರಿಸಿರತಕ್ಕ ಮೂರು ಕಣ್ಣುಗಳುಳ್ಳ, ಬಾಹುಗಳಿಂದ ಕ್ರಮವಾಗಿ ಶಂಖ, ಕಮಲಪುಷ್ಪ, ಚಕ್ರ ಮತ್ತು ಗದೆಗಳನ್ನು ಧರಿಸಿರುವ, ಬಿಳಿಯ ಕಮಲದ ಮೇಲೆ ಕುಳಿತಿರುವ ಮತ್ತು ಹಣೆಯ ಮೇಲೆ ಚಂದ್ರಮಾಲೆಯನ್ನು ಧರಿಸಿರುವ, ಕಿರೀಟವನ್ನು ಧರಿಸಿರುವ, ಬ್ರಹ್ಮರುದ್ರ ಮತ್ತು ಇಂದ್ರನೇ ಮೊದಲಾದವರಿಂದ ನಮಸ್ಕರಿಸಲ್ಪಟ್ಟ ಈ ವೇಣಿಯನ್ನು ಯಾರು ತ್ರಿಸಂಧ್ಯೆಗಳಲ್ಲಿಯೂ ಧ್ಯಾನಿಸುತ್ತಾ ಸ್ನಾನ ಮಾಡುತ್ತಾರೋ ಅವರು ಈ ಲೋಕದ ಐಶ್ವರ್ಯಗಳನ್ನೆಲ್ಲಾ ಹೊಂದಿ ಕೊನೆಗೆ ಮೋಕ್ಷವನ್ನೂ ಪಡೆಯುತ್ತಾರೆ. ॥ ೩೩ ॥ ಬ್ರಹ್ಮರುದ್ರೇಂದ್ರಾದಿಗಳಿಂದ ವಂದ್ಯಳೇ, ಸಿದ್ಧಿಗಾಗಿ ಮಾಡುವ ಎಲ್ಲ ಕಾರ್ಯಗಳಲ್ಲಿ ಸೇವಿತಳೇ ಮೂರು ನದಿಗಳ ಸಂಗಮದಲ್ಲಿ ಸಿಗತಕ್ಕವಳೇ, ಮಾತೃಸ್ವರೂಪಳೇ ಮತ್ತು ವೇಣೀನಾಮಧೇಯ ಉಳ್ಳವಳೇ ನಿನಗೆ ನಮಸ್ಕಾರಗಳು. ॥ ೩೪ ॥ ಗಂಗಾ ಮತ್ತು ಯಮುನೆಯರ ಸಂಗಮಸ್ಥಾನದಲ್ಲಿ ಕಾಣಬರುವ ಮಡುವುಗಳಿಂದ ಕೂಡಿದ ಮತ್ತು ವಕ್ರಗತಿಯಿಂದ ಸಾಗುವ ಶಾಶ್ವತವಾದ ಮುಕ್ತಿಯನ್ನು ಕರುಣಿಸತಕ್ಕವಳಾದ ಶ್ರೀತ್ರಿವೇಣಿ ನಾಮಧೇಯಳೇ, ನಿನಗೆ ನಮಸ್ಕಾರಗಳು. ॥ ೩೫ ॥ ಪ್ರಯಾಗದ ತೀರ್ಥರಾಜನ ಹಸ್ತಗಳ ಚಿಗುರುಗಳಲ್ಲಿ ಮಾಲಾಸ್ವರೂಪಳೇ, ನಾಶರಹಿತವಾದ ಮೂರು ಅಕ್ಷರವುಳ್ಳ ''ಪ್ರಯಾಗ'' ಅಥವಾ ''ತ್ರಿವೇಣಿ''ಯನ್ನು ಜಪ ಮಾಡುವವರಿಗೆ ನಾನಾ ಬಗೆಯ ಫಲಗಳನ್ನು ಕರುಣಿಸತಕ್ಕ ತ್ರಿವೇಣಿದೇವಿಯೇ, ನಿನಗೆ ನಮಸ್ಕಾರಗಳು. ॥ ೩೬ ॥ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವುಗಳಿಗೆ ಆಗರವಾಗಿ ಇರುವವಳೇ ಮತ್ತು ಜಗತ್ತಿನಲ್ಲಿ ಪ್ರಸಿದ್ಧಳಾಗಿರತಕ್ಕ ಶ್ರೀ ವೇಣಿಯೇ ನನ್ನನ್ನು ರಕ್ಷಿಸು. ಎಲ್ಲರಿಂದಲೂ ದರ್ಶನ ಹೊಂದುವ, ಸ್ಪರ್ಶಮಾಡಲ್ಪಡುವ, ಸ್ನಾನ ಮಾಡುವ, ಎಲ್ಲ ವೇದಾದಿ ಆಗಮ ಶಾಸ್ತ್ರಗಳಲ್ಲಿ ಪ್ರಸಿದ್ಧಳಾಗಿರುವ, ಬೇರೆ ಬೇರೆ ತೀರ್ಥಗಳಿಗೆ ಪಾಪಪರಿಹಾರ ಮಾಡುವ ವರಗಳನ್ನು ಕರುಣಿಸತಕ್ಕ, ಜೀವರುಗಳಿಗೆ ಕಲ್ಪವೃಕ್ಷದ ಬಳ್ಳಿಯಂತಿರುವ, ವೇಣೀ ಎಂಬ ತಾಯಿಯೇ, ನಿನಗೆ ನಮಸ್ಕಾರಗಳು. ॥ ೩೭-೩೮ ॥ ನೀನು ಮೋಕ್ಷವನ್ನು ಕರುಣಿಸಬಲ್ಲ

ಶ್ರೀ ಮಹಾಲಕ್ಷ್ಮಿಯು, ಸೂರ್ಯ, ಚಂದ್ರ, ಅಗ್ನಿ ಮತ್ತು ನಕ್ಷತ್ರಾದಿಗಳನ್ನು ಮೀರಿಸುವ ಕಾಂತಿ ಉಳ್ಳವಳು, ನೀನು ಬ್ರಹ್ಮನಾಡಿಯು, ಚರನಾಡಿಯು ಮತ್ತು ಪರಬ್ರಹ್ಮನ ಇಚ್ಛಾ ಸ್ವರೂಪಳು. ನೀನು ವಿಚಿತ್ರವಾದ ಪ್ರವಾಹಗತಿಯುಳ್ಳವಳು ಮತ್ತು ಪ್ರತ್ಯಕ್ಷವಾಗಿ ಜಲದ ರೂಪದಲ್ಲಿ ಕಣ್ಣಿಗೆ ಕಾಣಬರುತ್ತಿರುವವಳು. ಅಂತಹ ನಿಮಗೆ ನಮಸ್ಕಾರಗಳು. ॥ ೩೯ ॥

ಸೂತ ಉವಾಚ—

ಇತಿ ಶೇಷೇಣ ಮುನಯಸ್ಸನಕಾದಿಭ್ಯ ಈರಿತಮ್ ।
ಸ್ತೋತ್ರಂ ದಿವಾಥವಾ ನಕ್ತಂ ಪಠನಾತ್ಸರ್ವಕಾಮದಮ್ ॥ ೪೦ ॥
ಪಠಿತವ್ಯಂ ಪಠಿತವ್ಯಂ ಪಠಿತವ್ಯಂ ಪುನಃ ಪುನಃ ।
ಸರ್ವಸಿದ್ಧಿಕರಂ ನೃಣಾಂ ನಾಖ್ಯೇಯಂ ಯಸ್ಯ ಕಸ್ಯಚಿತ್ ॥ ೪೧ ॥
ತದಿದಂ ಕಥಿತಂ ಸ್ತೋತ್ರಂ ವ್ಯಾಸೇನಾನುಗ್ರಹೇಣ ಮೇ ।
ಪುನರಪ್ಯಾಹ ಯಚ್ಛೇಷಸ್ತದ್ವದಾಮಿ ಮುನೀಶ್ವರಾಃ ॥ ೪೨ ॥

ಸೂತರು ಹೇಳಿದರು—

ಈ ರೀತಿ ಸನಕಾದಿಗಳಿಗಾಗಿ ಶ್ರೀಶೇಷದೇವರಿಂದ ಉಪದಿಷ್ಟವಾಗಿರತಕ್ಕ ಸ್ತೋತ್ರವನ್ನು ಹಗಲು ಅಥವಾ ರಾತ್ರಿಯಲ್ಲಿ ಪಠಿಸಿದರೆ ಸಕಲ ಇಷ್ಟಾರ್ಥಗಳೂ ನೆರವೇರುವುವು. ಇದನ್ನು ಖಂಡಿತವಾಗಿಯೂ ಪಠಿಸಬೇಕು, ಪಠಿಸಬೇಕು ಮತ್ತು ಪಠಿಸಬೇಕು. ಇದು ಮನುಷ್ಯರ ಎಲ್ಲ ಅಭಿಲಾಷೆಗಳನ್ನೂ ಕೊಡತಕ್ಕದ್ದು. ಇದನ್ನು ನಾಸ್ತಿಕರಿಗೆ ಉಪದೇಶಿಸಕೂಡದು. ॥ ೪೦-೪೧ ॥ ನನಗೆ ಅನುಗ್ರಹ ಮಾಡುವ ಸಲುವಾಗಿ ಶ್ರೀವೇದವ್ಯಾಸರು ಇದನ್ನು ನನಗೆ ಉಪದೇಶಿಸಿದರು. ಮತ್ತು ಶ್ರೀ ಶೇಷದೇವರು ಇನ್ನು ಏನನ್ನು ಹೇಳಿದರೋ ಅದನ್ನು ಹೇಳುತ್ತೇನೆ ಮುನಿಶ್ವರರೇ ಕೇಳಿರಿ. ॥ ೪೨ ॥

ಶೇಷ ಉವಾಚ—

ಅಥ ವಕ್ಷ್ಯೇ ಪುನಃ ಸ್ತೋತ್ರಂ ವೇಣ್ಯಾಃ ಪಾಪಪ್ರಣಾಶನಮ್ ।
ಅತರ್ಕ್ಯತರ್ಕರುಚಿರಂ ಸರ್ವತರ್ಕಸಮನ್ವಿತಮ್ ॥ ೪೩ ॥
ಪ್ರಯಾಗೇ ವೇಣಿಕಾರೂಪಮೇಕರೂಪಂ ಕದಾಪಿ ನ ।
ಅತಸ್ತಥಾಹಮುತ್ಪ್ರೇಕ್ಷೇ ಭಾಸತೇಽಸೌ ಯಥಾ ಯಥಾ ॥ ೪೪ ॥
ಮುಕ್ತಾ ನೀಲೇಂದ್ರಗೋಪ್ಯೈರಿವ ಕಿಮು ಚರಿತಾ ಭಾತಿ ವೇಣೀವ ಮುಕ್ತೇಃ
ಶ್ರೇಣೀಭೂತಾತಿರಮ್ಯಾ ಕರಜಸುರಚಿತಾ ಮಾಧವೇನ ಪ್ರಯತ್ನಾತ್ ।
ದೃಷ್ಟಿರ್ವಾ ಜೀವಾನ್ವಿಷಯವಿಷಹತಾನ್ ಜೀವಯಂತೀ ವಿಧಾತ್ರಾ
ಕಿಂ ವಾ ಚಕ್ರೇ ಸ್ವಕೀಯಾ ತನುರಸಿತಸಿತಾ ಪಾವನೀ ನಃ ಪುನಾತು ॥ ೪೫ ॥
ಕ್ವಚಿತ್ಸರಲವೇಣಿಕಾ ಕ್ವಚಿದುಪಾಸನಾಮಾಲಿಕಾ
ಕ್ವಚಿನ್ನಿಯಮಕಾಲಿಕಾ ಕ್ವಚಿದುದಾರಭಾವಾತ್ಮಿಕಾ ।

ಕ್ವಚಿತ್ಪ್ರಚಿತವೇಣಿಕಾ ಕ್ವಚಿದುಪಾಸಿತಾದೇವಿಕಾ
ಕ್ವಚಿತ್ಸಲಿಲಮಾತೃಕಾ ಮಮ ತು ಭಾಸತೇ ವೇಣಿಕಾ ॥ ೪೬ ॥
ಮಹಾಕಲುಷಕರ್ತರೀ ವಿಷಯವಾಸನಾತುರ್ಘರೀ
ಸಮಸ್ತಸುಖಪರ್ಘರೀ ಸೃಣಿರಿವಾವಧೇಸ್ಸರ್ಜರೀ ।
ನಿತಾಂತಸುಖಶರ್ಕರೀ ಸುಖಲತಾಲಸನ್ಮಂಜರೀ
ವಿನೋದಯತಿ ಮಾಧುರೀ ಗ್ರಥಿತವೇಣಿಕಾಚಾತುರೀ ॥ ೪೭ ॥
ಕ್ವ ಚೇಂದ್ರಧನುಷೋಪಮಾ ಕ್ವಚಿದಿಭೇಂದ್ರರಾಗೋಪಮಾ
ಪುನಾತು ನಿಗಮೋಪಮಾ ಸಿತಸಿತೇಂದ್ರಗೋಪೋಪಮಾ ।
ಕ್ವಚಿದ್ದರವರೋಪಮಾ ಕ್ವ ಚ ರಥಾಂಗಲಬ್ಧೋಪಮಾ
ಕ್ವ ಚಾಪಿ ಸುಗದೋಪಮಾ ಕ್ವ ಚ ನ ಕಂಜಲಬ್ಧೋಪಮಾ ॥ ೪೮ ॥
ಕ್ವಚಿನ್ನವನಿಧಿಸ್ಥಲೀ ಕ್ವಚಿದಹೀಂದ್ರವಕ್ಷಸ್ಥಲೀ
ಕ್ವಚಿದ್ವರನಖಿಸ್ಥಲೀ ಕ್ವಚಿದುಪಾಸ್ಯಮಂತ್ರಸ್ಥಲೀ ।
ಕ್ವಚಿತ್ಸುಖಭುವಸ್ಥಲೀ ಕ್ವಚಿದಗಾಧಯೋಗಸ್ಥಲೀ
ಮಮಾಸ್ತು ದೃಶಿ ಸರ್ವದಾ ನಿಗಮವೇಣಿಕಾ ಸುಸ್ಥಲೀ ॥ ೪೯ ॥
ಮಹೇಶ್ವರಲಸಜ್ಜಟಾ ಕಿಮು ಭುಜಂಗಲೋಲಾಘಟಾ
ನೃಸಿಂಹತನುರುದ್ಭಟಾ ಸಕಲಮುಕ್ತಿದಾ ಪ್ರಸ್ಫುಟಾ ।
ಅನೇಕಜನಿದುರ್ಘಟಾ ವಿಹಿತಸಾಧನೇ ಲಂಪಟಾ
ಕಟಾಕ್ಷಯತು ಚಿತ್ಪಟಾ ವಿಹರಣೇಽಸ್ತು ಮೇ ಷಟ್ಪಟಾ ॥ ೫೦ ॥
ಅನೇಕಮತಿದೂಷಿಕಾ ವಿಶದಭೇದಸಂಪಾದಿಕಾ
ಪ್ರಯಾಗಗ್ರಹದೀರ್ಘಿಕಾ ಮಧುರಿಪೋಃ ಕಿಮಾಂದೋಲಿಕಾ ।
ಸುರದ್ರುಮಸುವೇದಿಕಾ ಭಗವತಃ ಪದೋಪಾದುಕಾ
ತ್ರಿವರ್ಣಕೃತವರ್ಣಿಕಾ ಮಮ ತು ಭಾಸತೇ ವೇಣಿಕಾ ॥ ೫೧ ॥
ಕಿಮೂರ್ಧ್ವರೇಖಾ ಭಗವತ್ಪದಸ್ಥಾ
ಧ್ವಜಾಬ್ಜವಜ್ರಾಂಕುಶಭೂಮಿಸಂಸ್ಥಾ ।
ಮಂದಾಕಿನೀ ವಾ ಗಗನೋತರಸ್ಥಾ
ವಿಭಾತಿ ವೇಣೀ ಮಮ ಮಾನಸಸ್ಥಾ ॥ ೫೨ ॥
ಬ್ರಹ್ಮೇಂದ್ರರುದ್ರಾದಿನಮಸ್ಕೃತಾಯೈ
ವಿಚಿತ್ರವರ್ಣಾಕೃತಿಭೂಷಣಾಯೈ ।
ಪರಾತ್ಪರಾಯೈ ಪರದೇವತಾಯೈ
ನಮಸ್ತ್ರಿವೇಣ್ಯೈ ಸಕಲಾರ್ಥದಾಯೈ ॥ ೫೩ ॥

ವಿಷ್ಣುಪ್ರಿಯಾಯೈ ಪರದೇವತಾಯೈ
ನಮೋಽಸ್ತು ವೇಣ್ಯೈ ಪ್ರಣವಾಭಿಧಾಯೈ ।
ಚತುರ್ಭುಜಾಯೈ ಚತುರಾಯುಧಾಯೈ
ವಿಚಿತ್ರಮಾಲಾಭರಣಾಂಬರಾಯೈ ॥ ೫೪ ॥
ಇತಿ ತ್ರಿವೇಣೀಸ್ತವನಂ ಪಠಂತಿ
ಸ್ನಾತ್ವಾ ತ್ರಿಕಾಲಂ ಜಲಮಧ್ಯಸಂಸ್ಥಾಃ ।
ತೇಷಾಂ ಕರಸ್ಥಾ ಭವತೀಹ ಮುಕ್ತಿ-
ರ್ಭುಕ್ತಿಶ್ಚ ವೇಣೀಸ್ತವನಪ್ರಸಾದಾತ್ ॥ ೫೫ ॥
ಇತಿ ವೇಣೀಸ್ತವಂ ತೇಭ್ಯಃ ಶ್ರಾವಯಿತ್ವಾ ಪತಂಜಲಿಃ ।
ಪುನಃ ಪ್ರೋವಾಚ ಮಾಹಾತ್ಮ್ಯಂ ತದಕ್ಷ್ಯೇ ಶೌನಕಾದಯಃ ॥ ೫೬ ॥

॥ ಇತಿ ಪಂಚತ್ರಿಂಶೋಽಧ್ಯಾಯಃ ॥

**ಶ್ರೀ ಶೇಷದೇವರು ಹೇಳಿದರು—**

ಪಾಪಪರಿಹಾರ ಮಾಡತಕ್ಕ ವೇಣೀಯ ಸ್ತೋತ್ರವನ್ನು ಹೇಳುವೆನು. ಇವಳ ವ್ಯಾಪಾರಗಳು ಚರ್ಚೆಗೆ ಎಟಕದೇ ಇರುವುವು. ಹಾಗೆಂದು ಚರ್ಚೆ ಮಾಡಲಾಗುವುದಿಲ್ಲವೆಂದಲ್ಲ. ಈ ಚರ್ಚೆಗೆ ಕೊನೆಯೇ ಇರುವುದಿಲ್ಲ. ತರ್ಕಮಾಡಿದಷ್ಟೂ ಮನಸ್ಸಿಗೆ ರಮಣೀಯವಾಗಿರುವುದು. ಮತ್ತು ಇವಳ ವ್ಯಾಪಾರವು ಎಲ್ಲ ವಿಧ ತರ್ಕಗಳಿಂದಲೂ ಕೂಡಿರತಕ್ಕದ್ದೂ ಹೌದು. ॥ ೪೩ ॥ ಪ್ರಯಾಗದಲ್ಲಿ ವೇಣಿಯೂ ಒಂದೇ ರೀತಿಯಾಗಿಯೇ ಸದಾಕಾಲದಲ್ಲಿಯೂ ಇರುವುದಿಲ್ಲ. ಆದ್ದರಿಂದ ಅವಳು ನನ್ನ ಕಣ್ಣುಗಳಿಗೆ ಹೇಗೆ ತೋರುತ್ತಾಳೋ ಹಾಗೆ ಯಥಾವತ್ತಾಗಿ ವರ್ಣಿಸಿದ್ದೇನೆ. ॥ ೪೪ ॥ ಶ್ರೀ ಮಾಧವ ದೇವರು ಮುಕ್ತಿ ಕೊಡುವುದಕ್ಕಾಗಿಯೇ ಮುತ್ತು, ನೀಲ ಮತ್ತು ಪುಷ್ಯರಾಗ ಇವುಗಳನ್ನು ಉಪಯೋಗಿಸಿ ತನ್ನ ಕೈಬೆರಳುಗಳ ಉಗುರುಗಳಿಂದಲೇ ಪ್ರಯತ್ನ ಪೂರ್ವಕವಾಗಿ ಇದನ್ನು ಹೆಣೆದಿದ್ದಾನೆಯೋ ಅನ್ನುವಂತೆ ಒಂದರ ಮೇಲೆ ಒಂದು ಜಡೆಯಂತೆ ಕಾಣಬಂದು ಅತಿ ರಮ್ಯವಾಗಿದೆ. ಅಥವಾ ಸಂಸಾರದಲ್ಲಿ ವಿಷಯಾಸಕ್ತಿ ಎಂಬ ವಿಷದಿಂದ ಜರ್ಝರಿತರಾದ ಜೀವಿಗಳನ್ನು ಉದ್ಧಾರಮಾಡುವ ಸಲುವಾಗಿಯೇ ಬೀರಿರುವ ಬ್ರಹ್ಮದೇವರ ನೋಟವೋ ಎಂಬಂತಿರುವ, ಅಥವಾ ಚತುರ್ಮುಖ ಬ್ರಹ್ಮನೇ ನೀಲಿ, ಶ್ವೇತ ಮತ್ತು ಕೆಂಪು ಬಣ್ಣಗಳಲ್ಲಿ ತನ್ನ ಶರೀರವನ್ನೇ ಬೆಳಗುತ್ತಿದ್ದಾನೆಯೋ ಯಾವುದೂ ಸ್ಪಷ್ಟವಾಗಿ ತಿಳಿಯಲಾರದು. ಒಟ್ಟಿನಲ್ಲಿ ಹೀಗಿರುವ ಪರಮ ಪಾವನಳಾದ ಈ ವೇಣಿಯು ನಮ್ಮನ್ನು ಕಾಪಾಡಲಿ. ॥ ೪೫ ॥ ಕೆಲವೆಡೆಗಳಲ್ಲಿ ನೇರವಾದ ಜಡೆಯಂತಿರುವಳು, ಕೆಲವೆಡೆ ಮಾಧವನಿಗೆ ಸಮರ್ಪಿಸುವ ಹಾರದಂತಿರುವಳು, ಕೆಲವೆಡೆ ನಿಯಮಗಳ ಪರಂಪರೆಯಂತಿದ್ದಾಳೆ. ಕೆಲವೆಡೆ ಔದಾರ್ಯದ ಭಾವವನ್ನು ಬೀರುತ್ತಿದ್ದಾಳೆ. ಕೆಲವು ಕಡೆ ರಚಿತವಾದ ಜಡೆಯಂತಿದ್ದಾಳೆ, ಕೆಲವು ಕಡೆ ಋಷಿಗಳಿಂದ ಉಪಾಸ್ಯವಾದ ದೇವತೆಯಂತಿದ್ದಾಳೆ. ಕೆಲವು ತೀರ್ಥದೇವತೆಗಳ ತಾಯಿಯಂತೆಯೂ ಇದ್ದಾಳೆ. ॥ ೪೬ ॥ ಮಹಾಪಾಪಗಳನ್ನು ನಾಶಮಾಡುವುದರಲ್ಲಿ ಕತ್ತರಿಯಂತೆಯೂ, ವಿಷಯಸುಖದ ಇಚ್ಛೆಗಳನ್ನು ಸುಡುವುದರಲ್ಲಿ ಅಗ್ನಿಯಂತೆಯೂ, ಎಲ್ಲ ಸುಖಗಳನ್ನು ಕೊಡುವ ಆಗರದಂತೆಯೂ, ಸಂಸಾರಕ್ಕೆ

ಸಮಾಪ್ತಿಯನ್ನುಂಟುಮಾಡುವ ಅಂಕುಶದಂತೆಯೂ, ಎಲ್ಲ ಸುಖಗಳ ಉತ್ಕಟತೆಯನ್ನುಂಟು ಮಾಡಲು ರಸನೇಂದ್ರಿಯಗ್ರಾಹ್ಯ ಸಕ್ಕರೆಯಂತಿರುವ, ಸುಖವೆಂಬ ಲತೆಯಲ್ಲಿ ಅರಳಿ ವಿರಾಜಿಸುತ್ತಿರುವ ಪುಷ್ಪಗುಚ್ಛದಂತೆ ಇರುವ ಮಲ್ಲಿಗೆಯ ದಂಡೆಯ ವೈಖರಿಯುಳ್ಳ ಈ ವೇಣಿಯು ಚಮತ್ಕರಿಪ ಜಡೆಯನ್ನು ಹೆಣೆದು ವಿನೋದವೆಸಗುತ್ತಿದ್ದಾಳೆ. ॥ ೪೭ ॥ ಕೆಲವೆಡೆ ಕಾಮನ ಬಿಲ್ಲಿನಂತೆ ಕಾಣುವಳು. ಕೆಲವೆಡೆ ಗಜರಾಜನ ಕುಂಭಸ್ಥಳದಲ್ಲಿ ಕಂಗೊಳಿಸುವ ಬಣ್ಣದಂತೆ ಕಾಣುವಳು. ಕೆಲವೆಡೆ ಶ್ರೇಷ್ಠನಾದ ಪಾಂಚಜನ್ಯ ಶಂಖದಂತೆ ಕಾಣುವಳು. ಕೆಲವೆಡೆ ಚಕ್ರದಂತೆ ಕಾಣುವಳು. ಕೆಲವೆಡೆ ಗದೆಯಂತೆ ಕಾಣುವಳು. ಕೆಲವೆಡೆ ಕಮಲದಂತೆ ಕಾಣುವಳು (ಅಂದರೆ ಶಂಖ, ಚಕ್ರ, ಗದಾ ಮತ್ತು ಪದ್ಮ ಧಾರಿಯಾದ ಶ್ರೀ ಮಾಧವನಂತೆ ಕಾಣುವಳು) ಬಣ್ಣದಲ್ಲಿ ಮುತ್ತು, ನೀಲಾ ಮತ್ತು ಗೋಮೇಧಿನೀ ಇವುಗಳನ್ನು ಕೆಲವೆಡೆ ಹೋಲುತ್ತಿದ್ದಾಳೆ. ಈ ರೀತಿಯಾಗಿ ಪರಬ್ರಹ್ಮನನ್ನು ಪ್ರತಿಪಾದಿಸುವ ವೇದರಾಶಿಯಂತೆ ತೋರುವ ಶ್ರೀ ವೇಣೀದೇವಿಯು ನನ್ನನ್ನು ರಕ್ಷಣೆಮಾಡಲಿ. ॥ ೪೮ ॥ ಕೆಲವೆಡೆ ನವನಿಧಿಗೆ ಆಗರದಂತಿರುವ, ಕೆಲವೆಡೆ ಶೇಷದೇವರ ಎದೆಯಂತೆಯೂ, ಕೆಲವೆಡೆ ರುದ್ರದೇವರ ಉಗುರುಗಳಂತೆಯೂ, ಕೆಲವೆಡೆ ಉಪಾಸನೆಗೆ ಯೋಗ್ಯ ಆವಾಸ ಸ್ಥಾನದಂತೆಯೂ, ಕೆಲವಡೆ ಸುಖದ ಉತ್ಪತ್ತಿ ಸ್ಥಾನದಂತೆಯೂ, ಕೆಲವಡೆ ಅಗಾಧ ಯೋಗದ ಆಕಾರದಂತೆಯೂ ಮತ್ತು ವೇದಗಳ ವೇಣಿಯಂತೆಯೂ ಇರುವ ಈ ಸುಂದರ ಸ್ಥಾನಗಳುಳ್ಳ ವೇಣಿಯು ಯಾವಾಗಲೂ ನನ್ನ ದೃಷ್ಟಿಗಳಲ್ಲಿಯೇ ಇರಲಿ. ॥ ೪೯ ॥ ಮಹರುದ್ರದೇವರಂತೆ ಪ್ರಕಾಶಮಾನವಾದ ಜಟೆಯಂತಿರುವ, ಚಲಿಸುತ್ತಿರುವ ಹಾವಿನ ಹೆಡೆಯಂತಿರುವ, ಶ್ರೀ ನೃಸಿಂಹ ದೇವರ ದೇಹದಿಂದ ಹೊರಟ ಸ್ಪಷ್ಟವಾಗಿ ಎಲ್ಲರಿಗೂ ಮೋಕ್ಷವನ್ನು ಕೊಡತಕ್ಕಂಥಾ, ಎಷ್ಟೋ ಜನ್ಮಗಳಲ್ಲಿಯೂ ಲಭ್ಯವಾಗದಿರುವ ಮತ್ತು ವೇದವಿಹಿತವಾದ ಸಾಧನೆಗಳಲ್ಲಿ ತೀವ್ರಾಸಕ್ತಿಯಿರುವ ಈ ವೇಣಿಯು ಅವಳ ಕಡೆಗಣ್ಣಿನ ನೋಟವನ್ನು ನನ್ನ ಮೇಲೆ ಬೀರಲಿ ಮತ್ತು ನನ್ನ ಮನಸ್ಸು ಯಾವಾಗಲೂ ಈ ತ್ರಿವೇಣಿಯ ಆರು ತೀರಗಳಲ್ಲಿಯೇ ಇರಲಿ. ॥ ೫೦ ॥ ದುರ್ಜನರ ಮನಸ್ಸನ್ನು ದೋಷಯುಕ್ತವಾದುದನ್ನಾಗಿ ಮಾಡತಕ್ಕಂಥಾ, ಸಜ್ಜನರಿಗೆ ವಿಸ್ತಾರವಾದ ಪಂಚಭೇದ ಮತ್ತು ತಾರತಮ್ಯಜ್ಞಾನವನ್ನು ಹುಟ್ಟಿಸತಕ್ಕಂಥಾ, ಪ್ರಯಾಗ ಮಾಧವನೆಂಬ ಆಗ್ರಹದಿಂದ ಕೂಡಿರತಕ್ಕ, ಮಧುನಾಮ ಆದಿದೈತ್ಯನನ್ನು ಸಂಹಾರ ಮಾಡಿರುವ ಶ್ರೀ ಮಾಧವ ದೇವರ ಉಯ್ಯಾಲೆ ಮಣೆಯಂತಿರುವ ಸಜ್ಜನರ ಇಷ್ಟಾರ್ಥಗಳನ್ನು ನೆರವೇರಿಸುವುದರಲ್ಲಿ ಕಲ್ಪವೃಕ್ಷದ ವೇದಿಕೆಯಂತೆ ಇರುವ, ಶ್ರೀ ಮಾಧವ ದೇವರ ಪಾದಗಳಿಗೆ ಪಾದುಕೆಯಂತೆ ಇರುವ ಮತ್ತು ಮೂರು ಬಣ್ಣಗಳಿಂದ ಮಾಡಿದ ವಸ್ತ್ರವನ್ನುಳ್ಳಂತೆ ಶ್ರೀವೇಣೀದೇವಿಯು ನನಗೆ ತೋರುತ್ತಾಳೆ. ॥ ೫೧ ॥ ಶ್ರೀಮಾಧವನ ಪದತಳಗಳಲ್ಲಿರುವ ಊರ್ಧ್ವರೇಖೆಯಂತೆಯೂ, ಮತ್ತು ಧ್ವಜ, ಕಮಲ, ವಜ್ರಾಯುಧ, ಅಂಕುಶ ಇವುಗಳಿಗೆ ಆಶ್ರಯಳಾಗಿ ಶೋಭಿಸುತ್ತಿರುವ, ಗಗನದಿಂದ ಇಳಿದು ಬರುತ್ತಿರುವ ಗಂಗೆಯನ್ನೂ ಹೊಂದಿ ವಿರಾಜಮಾನಳಾಗಿರುವ ವೇಣಿಯು ನನ್ನ ಮನಸ್ಸನ್ನು ಬಿಟ್ಟು ಹೋಗದಿರಲಿ. ॥ ೫೨ ॥ ಬ್ರಹ್ಮ, ರುದ್ರ ಮತ್ತು ಇಂದ್ರಾದಿಗಳಿಂದ ನಮಸ್ಕೃತಳಾದ ನಾನಾ ಬಗೆಯ ವರ್ಣ ಮತ್ತು ಆಕಾರಗಳಿಂದ ಭೂಷಿತಳಾದ, ಶ್ರೇಷ್ಠರಿಗಿಂತಲೂ ಶ್ರೇಷ್ಠಳಾದ, ಉತ್ತಮದೇವತೆಯಾದ ಸಕಲೇಷ್ಟಾರ್ಥದಾಯಕಳಾದ ತ್ರಿವೇಣಿಗೆ ನಮಸ್ಕಾರ. ॥ ೫೩ ॥ ಶ್ರೀ ಮಹಾವಿಷ್ಣುವಿಗೆ ಪ್ರಿಯಳಾದ ಶ್ರೀ ಲಕ್ಷ್ಮೀಸ್ವರೂಪಳಾದ (ಶ್ರೀಲಕ್ಷ್ಮೀದೇವಿಯನ್ನೂ ಒಳಗೊಂಡಿರತಕ್ಕ) ಓಂಕಾರ ವಾಚ್ಯಳಾದ, ನಾಲ್ಕುಭುಜಗಳಿಂದ ಮತ್ತು ಆಯುಧಗಳಿಂದ ವಿರಾಜಮಾನಳಾಗಿರುವ ಮತ್ತು ಚಿತ್ರವಿಚಿತ್ರವಾದ

ದಿವ್ಯ ಮಾಲಾಗಳು ಮತ್ತು ಆಭರಣಗಳಿಂದ ಅಲಂಕೃತಳಾದ ತ್ರಿವೇಣೀ ಎಂಬ ಲಕ್ಷ್ಮಿಯಿಂದ ಅಭಿನ್ನವಾದ ಸ್ವರೂಪಳಾದ ಶ್ರೀ ತ್ರಿವೇಣಿಗೆ ನಮಸ್ಕಾರಗಳು. ॥ ೫೪ ॥ ಈ ರೀತಿಯಾದ ವೇಣೀ ಸ್ತುತಿಯನ್ನು ಸ್ನಾನಾನಂತರ ತ್ರಿಕಾಲದಲ್ಲಿ ಜಲಮಧ್ಯದಲ್ಲಿ ನಿಂತುಕೊಂಡು ಯಾರು ಹೇಳುತ್ತಾರೋ ಅಂತಹವರಿಗೆ ಐಹಿಕ ಭೋಗಭಾಗ್ಯಗಳೂ ಸೇರಿ ಮುಕ್ತಿಯೂ ಕರಗತವಾಗುವುದು. ॥ ೫೫ ॥ ಸೂತರು ಈ ರೀತಿಯಾಗಿ ವೇಣೀಸ್ತೋತ್ರವನ್ನು ಶ್ರವಣ ಮಾಡಿಸಿ, ಎಲೈ ಶೌನಕಾದಿಗಳೇ, ಈ ವೇಣಿಯ ಮಾಹಾತ್ಮ್ಯೆಯನ್ನು ಮತ್ತೆ ಹೇಳುವೆನು ಎಂಬುದಾಗಿ ಪುನರುಚ್ಚರಿಸಿದರು. ॥ ೫೬ ॥

॥ ಮೂವತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಟ್ತ್ರಿಂಶೋಽಧ್ಯಾಯಃ ॥ ೩೬ ॥

ಶೇಷ ಉವಾಚ—

ಯತ್ರೈವಂ ತ್ರಿಗುಣಾ ವೇಣೀ ರಾಜತೇ ವಿಶ್ವತಾರಿಣೀ ।
ಶ್ರೀಮಾಧವೋಽಕ್ಷಯ್ಯವಟಸ್ತಸ್ಯ ಕೋ ವರ್ಣನೇ ಕ್ಷಮಃ ॥ ೧ ॥
ತಥಾಪಿ ಭವತಾಂ ಭಕ್ತ್ಯಾ ಪ್ರೇರಿತೋಽಹಂ ಮುನೀಶ್ವರಾಃ ।
ತಮಹಂ ವರ್ಣಯೇ ಭೂಯೋ ಯಥಾಶಕ್ತಿ ಯಥಾಮತಿ ॥ ೨ ॥
ತ್ರೈಲೋಕ್ಯದುರ್ಲಭಂ ಸ್ನಾನಂ ವಪನೇ ತು ತತೋಽಧಿಕಮ್ ।
ತಸ್ಮಾಚ್ಚ ಮುಂಡನಂ ಕಾರ್ಯಂ ಸತತಂ ಶ್ರುತಿಚೋದಿತಮ್ ॥ ೩ ॥
ಸ್ನಾನೇನ ಮುಂಡನೇನಾತ್ರ ಸರ್ವಪಾಪಕ್ಷಯೋ ಯತಃ ।
ಸಪ್ತಧಾತುಮಯೇ ದೇಹೇ ಯಾನಿ ಪಾಪಾನಿ ಸಂತಿ ವೈ ॥ ೪ ॥
ಕೇಶೇಷು ತಾನಿ ಸರ್ವಾಣಿ ಯತ್ರ ನಶ್ಯಂತಿ ಮುಂಡನಾತ್ ।
ಕಿಂ ಗಯಾ ಪಿಂಡದಾನೇನ ಕಾಶ್ಯಾಂ ವಾ ಮರಣೇನ ಕಿಮ್ ॥ ೫ ॥
ಕಿಂ ಕುರುಕ್ಷೇತ್ರದಾನೇನ ಪ್ರಯಾಗೇ ವಪನಂ ಯದಿ ।
ಬಾಲೋ ವಾಥ ಯುವಾ ವಾಪಿ ವೃದ್ಧೋ ವಾ ಸ್ತ್ರೀ ಸಭರ್ತೃಕಾ ॥ ೬ ॥
ಗರ್ಭಿಣೀ ಪತಿಹೀನಾ ವಾ ಪ್ರಯಾಗೇ ವಪನಾಚ್ಛುಚಿಃ ।
ದೇವೋ ವಾ ದಾನವೋ ವಾಥ ಮೂರ್ಖೋ ವಾ ವೇದನಿಂದಕಃ ॥ ೭ ॥
ಪ್ರಯಾಗೇ ವಪನಾದೇವ ಸದ್ಯಃ ಪಾಪೈಃ ಪ್ರಮುಚ್ಯತೇ ।
ಕೇಶಮೂಲಮುಪಾಶ್ರಿತ್ಯ ಸಂತಿ ಪಾಪಾನಿ ದೇಹಿನಾಮ್ ॥ ೮ ॥
ವಿಲಯಂ ಯಾಂತಿ ಸರ್ವಾಣಿ ತೀರ್ಥರಾಜೇ ತು ಮುಂಡನಾತ್ ।
ಅನ್ಯತೀರ್ಥೇಷು ಪಾಪಾನಿ ವಪನಾನಂತರಂ ಪುನಃ ॥ ೯ ॥
ಪ್ರರೋಹಂತಿ ನ ರೋಹಂತಿ ಪ್ರಯಾಗೇ ತೀರ್ಥನಾಯಕೇ ।
ಅಕಾಲೇಽಪ್ಯಥವಾ ಕಾಲೇ ರಾತ್ರಾವಹನಿ ಸಂಧ್ಯಯೋಃ ॥ ೧೦ ॥
ನಿಷಿದ್ಧೇಽಪಿ ದಿನೇ ಕುರ್ಯಾತ್ಪ್ರಯಾಗೇ ವಪನಂ ಸದಾ ।
ಏಕವಾರಂ ದ್ವಿವಾರಂ ವಾ ಜಾತಕ್ಷೌರೋಽಪಿ ಕಾರಯೇತ್ ॥ ೧೧ ॥
ಮುಂಡನಂ ಮಂಡನಂ ಯತ್ರ ಪ್ರಯಾಗೇ ತೀರ್ಥನಾಯಕೇ ।
ದಶಮಾಸೋತ್ತರಂ ತೀರ್ಥಾಂತರೇ ಕ್ಷೌರಂ ಸಮಾಚರೇತ್ ॥ ೧೨ ॥
ಪ್ರಾಯಶ್ಚಿತ್ತಂ ವಿನಾ ತತ್ತು ನಿಮಿತ್ತಾನಂತರಂ ಭವೇತ್ ।
ಯೋಜನತ್ರಿತಯಾದೂರ್ಧ್ವಮಾಗತೇನಾತ್ರ ಮುಂಡನಮ್ ॥ ೧೩ ॥
ಯಾತ್ರೋದ್ದೇಶೇನ ವೈ ಕಾರ್ಯಂ ನಾನ್ಯದಾವಶ್ಯಕಂ ಭವೇತ್ ।
ರಾಜಾ ವಾ ರಾಜಪುತ್ರೋ ವಾ ಗರ್ಭಿಣೀಪತಿರೇವ ವಾ ॥ ೧೪ ॥

ಪುರಶ್ಚರ್ಯಾರತೋ ವಾಪಿ ಪ್ರಯಾಗೇ ಕ್ಷೌರಮಾಚರೇತ್ ।
ಅಜಾನಚೌಲೋ ಬಾಲೋಽಪಿ ಬ್ರಹ್ಮಚಾರೀ ಕುಮಾರಿಕಾ ॥ ೧೫ ॥
ಜೀವತ್ಪಿತಾಪಿ ಕುರ್ವೀತ ವಪನಂ ತೀರ್ಥನಾಯಕೇ ।
ತೀರ್ಥರಾಜಂ ಸಮಾಸಾದ್ಯ ಮುಂಡನಂ ಯೋ ನ ಕಾರಯೇತ್ ॥ ೧೬ ॥
ಸ ಕೋಟಿಕುಲಸಂಯುಕ್ತೋ ರೌರವಂ ನರಕಂ ವ್ರಜೇತ್ ।
ಸಧವಾಪ್ಯತ್ರ ಕುರ್ವೀತ ಪತ್ಯಾ ಸಹ ಸಮಾಗತಾ ॥ ೧೭ ॥
ಮುಂಡನಂ ಮಂಡನಂ ವೇಣ್ಯಾಂ ಪತಿಮಂಡನಕಾಮ್ಯಯಾ ।
ಯಸ್ಯಾ ವೇಣೀ ಭವೇದ್ದೇವೀ ತ್ರಿವೇಣೀ ತಟಲಂಬಿನೀ ॥ ೧೮ ॥
ಸುಭಗಾ ಸುಪ್ರಜಾಢ್ಯಾ ಸಾ ಭವಿಷ್ಯತಿ ಪುನಃ ಪುನಃ ।
ದ್ವ್ಯಂಗುಲಾ ತ್ರ್ಯಂಗುಲಾ ವಾಪಿ ಪ್ರದೇಯಾ ಚತುರಂಗುಲಾ ॥ ೧೯ ॥
ಚಿವುಕಾಂತಾಥವಾ ದೇಯಾ ಕೇಶಾಂತಾ ವಾ ಯಥೇಚ್ಛಯಾ ।
ವೇಣೀಪ್ರದಾನಾತ್ಸಿದ್ಧ್ಯಂತಿ ಸರ್ವ ಏವ ಮನೋರಥಾಃ ॥ ೨೦ ॥
ಚಿರಂಟನೀಭಿರ್ದೇಯಾತ್ರ ವೇಣ್ಯಾಚಾರಾದ್ಯಥಾ ತಥಾ ।
ದೇವರ್ಷಿನಾಗಪತ್ನ್ಯಶ್ಚ ಪ್ರಯಾಗೇ ಪತಿಭಿಸ್ಸಹ ॥ ೨೧ ॥
ವೇಣ್ಯಾಂ ವೇಣೀಪ್ರದಾನಂ ಚ ಚಕ್ರುರಾಗತ್ಯ ಸುವ್ರತಾಃ ।
ಏವಂವಿಧೋಽತ್ರ ಮಹಿಮಾ ಮುಂಡನೇ ಜಗದುತ್ತರೇ ॥ ೨೨ ॥
ಸ್ನಾನಮಾಹಾತ್ಮ್ಯಮುಕ್ತಂ ಪ್ರಾಗ್ವಾಸಮಾಹಾತ್ಮ್ಯಮುಚ್ಯತೇ ।
ಪ್ರಯಾಗಮನುಗಚ್ಛೇದ್ವಾ ವಸತೇ ವಾಪಿ ಯೋ ನರಃ ॥ ೨೩ ॥
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕೇ ಮಹೀಯತೇ ।
ತೀರ್ಥಾಭಿಲಾಷಿಭಿರ್ಭೂತ್ಯೈಸ್ಸೇವ್ಯಂ ತೀರ್ಥಾಂತರಂ ನ ವೈ ॥ ೨೪ ॥
ಅನ್ಯತ್ರ ಭೂಮಿವಲಯೇ ತೀರ್ಥರಾಜಾತ್ಪ್ರಯಾಗತಃ ।
ಬ್ರಹ್ಮಹತ್ಯಾದಿಪಾಪಾನಾಂ ಪ್ರಾಯಶ್ಚಿತ್ತಂ ಚಿಕೀರ್ಷುಣಾ ॥ ೨೫ ॥
ಪ್ರಯಾಗೋ ವಿಧಿವತ್ಸೇವ್ಯೋ ವ್ಯಾಸವಾಕ್ಯಾನ್ಮುನೀಶ್ವರಾಃ ।
ಬಹುನೋಕ್ತೇನ ಕಿಂ ಚಾತ್ರ ಭುಕ್ತಿಮುಕ್ತಿಮಭೀಪ್ಸುನಾ ॥ ೨೬ ॥
ಸೇವ್ಯಂ ಸಿತಾಸಿತಂ ತೀರ್ಥಂ ಪ್ರಕೃಷ್ಟಂ ಜಗತೀತಲೇ ।
ವ್ರತದಾನತಪೋಹೋಮಜಪಸ್ವಾಧ್ಯಾಯಪೂಜನೇ ॥ ೨೭ ॥
ಮಾಧವೋಽಪೇಕ್ಷತೇ ನೈವ ವಾಸಮಾತ್ರೇಣ ತುಷ್ಯತಿ ।
ವಿಭವೇ ಸತಿ ದಾನಾದಿ ಕುರ್ಯಾಚ್ಛಾಠ್ಯವಿವರ್ಜಿತಃ ॥ ೨೮ ॥
ಮಾಧವೋಽಂತರ್ಬಹಿರ್ಯಸ್ಮಾತ್ಪಶ್ಯತ್ಯಮಲಚಕ್ಷುಷಾ ।
ಪ್ರಯಾಗಂ ಸಮತಿಕ್ರಮ್ಯ ಗಚ್ಛೇತ್ತೀರ್ಥಾಂತರಂ ತು ಯಃ ॥ ೨೯ ॥

ತದ್ದೇಹಸ್ಥಾನಿ ಪಾಪಾನಿ ಸಮಾಕೃಷ್ಯನಯಂತಿ ಹಿ ।
ರಾಜದರ್ಶನಸಾಕಾಂಕ್ಷಾ ವಾರ್ಯತೇ ಸೇವಕೈರ್ಯಥಾ ॥ ೩೦ ॥
ತಥಾ ಪ್ರಯಾಗವಾಸಾರ್ಥೀ ಪಾಪೈರಾಕೃಷ್ಯತೇ ಬಲಾತ್ ।
ಯೇ ಪ್ರಯಾಗೇ ಸಮುತ್ಪನ್ನಾಃ ಪ್ರಯಾಗೇ ಯೇ ಚ ದೀಕ್ಷಿತಾಃ ॥
ಪ್ರಯಾಗೇ ಜಾತಸಂಸ್ಕಾರಾಸ್ತೇ ಸರ್ವೇ ಬ್ರಾಹ್ಮಣೋತ್ತಮಾಃ ॥ ೩೧ ॥
ಭೋ ಯಜ್ಞಾ ಯೋಗಯಜ್ಞಾ ಶಮದಮಚತುರಾಃ ಕರ್ಮಯಜ್ಞಾ ಭವಂತೋ
ದೂರೇ ತಿಷ್ಠಂತು ತೂಷ್ಣೀಂ ಸಹಚರಸಹಿತಾ ದಕ್ಷಿಣಾದ್ಯಂಗನಾಭಿಃ ।
ಮಾ ದಾರಾಗಾರಪುತ್ರಾ ದ್ರವಿಣಫಲವತೀ ವಾಗಿಯಂ ವಾ ವದೀತು
ಪ್ರೋಚ್ಚೈಃ ಶ್ರೋತಾ ಚ ದಾತಾ ಹ್ಯಗತಿಗತಿಮತಾಂ ವರ್ತತೇ ತೀರ್ಥರಾಜಃ॥೩೨॥
ಪ್ರಯಾಗೇ ಯದಿ ಶಾಕಾಶೀ ಮಿಷ್ಟಾಶೀತ್ಯಭಿಧೀಯತೇ ।
ಮಿಷ್ಟಾಶೀ ರೌರವೇ ರೌತಿ ಶಾಕಾಶೀ ಕಾಶತೇ ದಿವಿ ॥ ೩೩ ॥
ನಿಯಮಃ ಕಥಿತೋಽಶಕ್ಯಸ್ಸರ್ವತೀರ್ಥನಿವಾಸಿನಾಮ್ ।
ಪ್ರಯಾಗವಾಸಿನಾಂ ನೄಣಾಂ ನಿಯಮೋ ನಾಸ್ತಿ ಕೋಽಪಿ ಹಿ ॥ ೩೪ ॥
ಪ್ರಯಾಗೇ ಯೇಽಧಿವಾಸಾರ್ಥಂ ಬುದ್ಧಿಂ ಕುರ್ವಂತಿ ಮಾನವಾಃ ।
ತೀರ್ಥಾನೀಂದ್ರಾದಯೋ ದೇವಾಸ್ತೇಷಾಂ ವಿಘ್ನಾನ್ಪ್ರಕುರ್ವತೇ ॥ ೩೫ ॥
ಪ್ರಯಾಗೇ ಯೇ ಮಹಾದಾನಂ ದೇವಾಗಾರಂ ದ್ವಿಜಾಲಯಮ್ ।
ಕರ್ತುಮಿಚ್ಛಂತಿ ತಂ ದೃಷ್ಟ್ವಾ ಕಂಪಂತೇ ತ್ರಿದಿವೌಕಸಃ ॥ ೩೬ ॥
ಕುಂಡಂ ವಾ ಮಂಟಪಂ ವಾಪಿ ಹೋಮಂ ವಾ ಜಪಮೇವ ವಾ ।
ಯತ್ಕಿಂಚಿತ್ಪುಣ್ಯಜಾತಂ ವಾ ಕರ್ತುರ್ಬುದ್ಧಿಂ ನಿಹಂತಿ ಹಿ ॥ ೩೭ ॥
ದೇವಾ ಬ್ರಾಹ್ಮಣವೇಷೇಣ ತೀರ್ಥಾನಿ ಧನರಕ್ಷಣೈಃ ।
ವ್ರತಾನಿ ಸ್ನೇಹಭಾವೇನ ಮನೋಭಂಗಂ ನಯಂತಿ ಹಿ ॥ ೩೮ ॥
ಯಸ್ಯ ಪ್ರಯಾಗೇ ಬುದ್ಧಿಸ್ಸ್ಯಾದ್ವಾಸೇ ವಾ ದಾನಕರ್ಮಣಿ ।
ತಂ ವೈ ಪದಚ್ಯುತಂ ವಿಂದ್ಯಾದಮರಂ ಚತುರಾನನಮ್ ॥ ೩೯ ॥
ಪ್ರಯಾಗಂ ಸುಖದುಃಖಾಭ್ಯಾಂ ಪೀಡಿತೋಽಪಿ ನ ಮುಂಚತಿ ।
ತಂ ಯೋಗಿನಂ ವಿಜಾನೀಯಾದ್ಯೋಗಭ್ರಷ್ಟಂ ತಪೋಧನಮ್ ॥ ೪೦ ॥
ಪ್ರಯಾಗೇ ಮಾಧವಂ ದೇವಂ ಸ್ಪೃಷ್ಟ್ವಾ ದೃಷ್ಟ್ವಾ ಚ ಯತ್ಫಲಮ್ ।
ಪ್ರಯಾಗವಾಸಿನಂ ಪೂಜ್ಯ ತತ್ಫಲಂ ಪ್ರಾಪ್ನುಯಾನ್ನರಃ ॥ ೪೧ ॥
ಪ್ರಯಾಗವಾಸೀ ಸಕಲತ್ರ ವಾಸೀ ಸಂಸಾರವಾಸೀ ಸ ಚ ದೇವವಾಸೀ ।
ಕೈಲಾಸವಾಸೀ ಸ ವಿಮಾನವಾಸೀ ವೈಕುಂಠವಾಸೀ ನ ಚ ಪಾಪವಾಸೀ॥ ೪೨ ॥
ಸ ಏವ ದೇವಗಂಧರ್ವೈಃ ಪೂಜನೀಯೋ ಮಹರ್ಷಿಭಿಃ ।
ಯಃ ಪ್ರಯಾಗಂ ಸಮಾಶ್ರಿತ್ಯ ಸುಖಂ ತಿಷ್ಠತಿ ನಿರ್ಭಯಃ ॥ ೪೩ ॥

ಪ್ರಯಾಗೇ ಭೈಕ್ಷ್ಯವೃತ್ತ್ಯಾ ವಾ ತಿಷ್ಠತೇ ದೃಢಭಕ್ತಿಮಾನ್ ।
ಜೀವನ್ಮುಕ್ತಸ್ಸ ಏವೇಹ ಕೃತಕೃತ್ಯೋ ನ ಸಂಶಯಃ ॥ ೪೪ ॥
ಏಕರಾತ್ರಂ ತ್ರಿರಾತ್ರಂ ವಾ ಪಂಚರಾತ್ರಮಥಾಪಿ ವಾ ।
ಸಪ್ತರಾತ್ರಂ ಚ ಪಕ್ಷಂ ವಾ ಮಾಸಂ ವಾ ಋತುಮೇವ ವಾ ॥ ೪೫ ॥
ತ್ರಿಮಾಸಂ ವಾಥ ಷಣ್ಮಾಸಂ ವತ್ಸರಂ ಮಾಧವಾಜ್ಞಯಾ ।
ಯಾವಜ್ಜೀವಮವಿಚ್ಛಿನ್ನಂ ಯದ್ವಾ ವಸತಿ ಧರ್ಮತಃ ॥ ೪೬ ॥
ವಾಸೋಽಯಂ ದಶಧಾ ಪ್ರೋಕ್ತಸ್ತತ್ರ ತತ್ರ ಯಥೋತ್ತರಮ್ ।
ಕಾಮಿತಂ ಫಲಮಾಪ್ನೋತಿ ಮುಕ್ತಿರೇಕಾದಶೇ ಭವೇತ್ ॥ ೪೭ ॥
ಅಂತರಾಪಿ ಚ ಯೋ ಮರ್ತ್ಯಃ ಪುರುಷಾರ್ಥಚತುಷ್ಟಯೇ ।
ಯಮಿಚ್ಛೇಂತ್ಯಕ್ತೇ ದೇಹೇ ಸ ತಮಾಪ್ನೋತಿ ನಿಶ್ಚಿತಮ್ ॥ ೪೮ ॥

॥ ಇತಿ ಷಟ್ತ್ರಿಂಶೋಽಧ್ಯಾಯಃ ॥

## ॥ ಮೂವತ್ತಾರನೆಯ ಅಧ್ಯಾಯವು ॥

**ಶ್ರೀ ಶೇಷದೇವರು ಹೇಳಿದರು—**

ಈ ಪ್ರಯಾಗ ಕ್ಷೇತ್ರದಲ್ಲಿರುವ ತ್ರಿಗುಣಾತ್ಮಕಳೆಂದು ಪ್ರಸಿದ್ಧಳಾಗಿರುವ ತ್ರಿವೇಣಿಯು ಇಡೀ ಬ್ರಹ್ಮಾಂಡದ ಸಕಲ ಮುಮುಕ್ಷುಗಳಿಗೂ ಮೋಕ್ಷಪ್ರದಳಾಗಿ ಭವಸಾಗರದಿಂದ ದಾಟಿಸುವವಳಾಗಿದ್ದಾಳೆಯೋ ಮತ್ತು ಎಲ್ಲಿ ಶ್ರೀವೇಣೀಮಾಧವನೂ ಮತ್ತು ಅಕ್ಷಯ ವಟವೃಕ್ಷವೂ ವಿರಾಜಮಾನವಾಗಿ ಇರುವದೋ ಅಂತಹ ತ್ರಿವೇಣಿಯನ್ನು ಯಾರು ತಾನೇ ವರ್ಣಿಸಿಯಾರು. ॥ ೧ ॥ ಹಾಗಿದ್ದರೂ ನಾನು ಮತ್ತೆ ನನ್ನ ಬುದ್ಧಿ ಶಕ್ತಿಗೆ ಅನುಸಾರವಾಗಿ ಯಥಾಶಕ್ತಿ ಇದನ್ನು ನಿಮ್ಮ ಮೇಲಿನ ಪ್ರೀತಿಯಿಂದ ವರ್ಣಿಸುವೆನು. ॥ ೨ ॥ ಈ ಪ್ರಯಾಗ ಕ್ಷೇತ್ರದಲ್ಲಿ ಸ್ನಾನ ಮಾಡುವುದರಿಂದ ಉಂಟಾಗುವ ಪುಣ್ಯ ಫಲವೂ, ಹಾಗೆಯೇ ಈ ಕ್ಷೇತ್ರದಲ್ಲಿ ಮುಂಡನ ಮಾಡಿಸಿ ಕೊಳ್ಳುವುದರಿಂದ ಉಂಟಾಗುವ ಪುಣ್ಯವೂ ಮೂರು ಲೋಕಗಳಲ್ಲಿ ಬೇರೆಲ್ಲಿಯೂ ಲಭ್ಯವಾಗುವುದಿಲ್ಲವೆಂಬ ಬಗ್ಗೆ ವೇದಾದಿಗಳಲ್ಲಿಯೂ ನಿರ್ದೇಶನವಿದೆ. ॥ ೩ ॥ ದೇಹಿಗಳು ಸಂಪಾದಿಸಿಕೊಂಡಿರುವ ಸರ್ವ ಪಾಪಗಳು ಸಪ್ತಧಾತುಮಯವಾದ ದೇಹದ ಕೂದಲುಗಳ ಮೂಲದಲ್ಲಿ ಸೇರಿಕೊಂಡಿರುತ್ತವೆ. ಪ್ರಯಾಗದ ತ್ರಿವೇಣಿಯಲ್ಲಿ ಮುಂಡನ ಮಾಡಿಸಿಕೊಳ್ಳುವುದರಿಂದ ಮತ್ತು ಸ್ನಾನ ಮಾಡುವುದರಿಂದಲೂ ಎಲ್ಲಾ ಪಾಪಗಳು ಪರಿಹಾರವಾಗುವುದು. ಗಯೆಯಲ್ಲಿ ವಿಷ್ಣುಪಾದದಲ್ಲಿ ಪಿಂಡಪ್ರದಾನ ಮಾಡುವುದರಿಂದ, ಕಾಶೀ ಕ್ಷೇತ್ರದಲ್ಲಿ ಮರಣ ಹೊಂದುವುದರಿಂದ ಮತ್ತು ಕುರುಕ್ಷೇತ್ರದಲ್ಲಿ ದಾನಾದಿಗಳನ್ನು ಮಾಡುವುದರಿಂದ ಏನೇನು ಫಲಗಳು ಲಭ್ಯವಾಗುವವೋ ಅವೆಲ್ಲವೂ ತ್ರಿವೇಣಿಯಲ್ಲಿ ಮುಂಡನ ಮಾಡಿಸಿಕೊಳ್ಳುವುದರಿಂದ ಲಭ್ಯವಾಗುವದು. ಆದ್ದರಿಂದ ಆ ಕ್ಷೇತ್ರಗಳಲ್ಲಿ ಪಿಂಡದಾನ, ಮರಣ ಮತ್ತು ದಾನಾದಿಗಳು ತ್ರಿವೇಣಿಯ ಮುಂದೆ ನಿಷ್ಪ್ರಯೋಜಕವೆಂದಾಯಿತು. ಬಾಲಕನಾಗಲೀ, ಮುದುಕರಾಗಲೀ, ಗಂಡನಿರುವ ಸ್ತ್ರೀಯರೇ ಆಗಲೀ, ಗರ್ಭಿಣೀಸ್ತ್ರೀಯರಾಗಲೀ, ವಿಧವೆಯಾಗಲೀ ಮತ್ತು ದೇವತೆಯಾಗಲೀ ದಾನವರಾಗಲೀ ಮತ್ತು ಏನು ತಿಳಿಯದ ಮೂರ್ಖರೇ ಆಗಲಿ ಅವರೆಲ್ಲರುಗಳ ಪಾಪವು ತ್ರಿವೇಣಿಯಲ್ಲಿ ಕ್ಷೌರದ

ದಶೆಯಿಂದ ನಾಶವಾಗುವುದು. ॥ ೪-೭ ॥ ಪ್ರಯಾಗದಲ್ಲಿ ಕ್ಷೌರ ಮಾಡಿಸಿಕೊಳ್ಳುವುದರಿಂದ ತಕ್ಷಣವೇ ಪಾಪಗಳು ನಾಶವಾಗುತ್ತವೆ. ಕಾರಣ ಪಾಪಗಳೆಲ್ಲವೂ ದೇಹಿಗಳ ಕೂದಲಿನ ಬುಡದಲ್ಲಿರುವುದೇನೆ. ॥ ೮ ॥ ಅನ್ಯತೀರ್ಥಗಳಲ್ಲಿ ಕ್ಷೌರ ಮಾಡಿಸಿಕೊಂಡ ನಂತರ ಪಾಪಗಳು ಪುನಃ ವೃದ್ಧಿಯಾಗಲು ಸಾಧ್ಯ. ಆದರೆ ಪ್ರಯಾಗದಲ್ಲಿನ ಮುಂಡನದಿಂದ ಪುನಃ ಬೆಳೆಯದಂತೆ ಪಾಪಗಳು ಸಂಪೂರ್ಣ ನಿರ್ಮೂಲವಾಗುವುದು. ಅಕಾಲದಲ್ಲಿಯಾಗಲೀ ಅಥವಾ ಸಕಾಲದಲ್ಲಿ ಯಾಗಲೀ, ರಾತ್ರಿಯಲ್ಲಾಗಲೀ, ಹಗಲಿನಲ್ಲಾಗಲೀ, ಸಂಧ್ಯಾ ಸಮಯದಲ್ಲಾಗಲೀ ಮತ್ತು ನಿಷಿದ್ಧ ದಿವಸಗಳಲ್ಲಿಯೂ ಪ್ರಯಾಗದಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬಹುದು. ಒಮ್ಮೆ ಅಥವಾ ಎರಡು ಬಾರಿ ಇಲ್ಲಿ ಕ್ಷೌರವನ್ನು ಮಾಡಿಸಿಕೊಂಡವರೂ ಪುನಃ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ॥ ೯-೧೧ ॥ ಪ್ರಯಾಗಕ್ಷೇತ್ರದಲ್ಲಿ ಕ್ಷೌರವೂ ಒಂದು ಶೋಭಾಯಮಾನ- ವಾದ ಕರ್ಮವೇ ಸರಿ. ಕ್ಷೌರ ಮಾಡಿಸಿಕೊಂಡು ಹತ್ತು ತಿಂಗಳಾದ ಮೇಲೆಯೇ ಬೇರೆ ತೀರ್ಥಗಳಲ್ಲಿ ಪುನಃ ಕ್ಷೌರ ಮಾಡಿಸಿಕೊಳ್ಳಬಹುದು. ॥ ೧೨ ॥ ಪ್ರಾಯಶ್ಚಿತ್ತಕ್ಕೋಸ್ಕರ ಮಾಡಿಸಿಕೊಳ್ಳುವ ಮುಂಡನವಾದರೆ, ಈ ಹತ್ತು ತಿಂಗಳ ನಿಯಮವಿಲ್ಲ; ಪ್ರಾಯಶ್ಚಿತ್ತಕ್ಕೆ ಏನು ನಿಮಿತ್ತವೋ, ಅದರ ನಂತರವೇ ಮುಂಡನ ಮಾಡಿಸಿಕೊಳ್ಳಬಹುದು. ಪ್ರಯಾಗಕ್ಷೇತ್ರಕ್ಕೆ ಮೂರುಯೋಜನದಷ್ಟು ದೂರದ ಒಳಗೆ ಬಂದರೆ ಮುಂಡನವನ್ನು ಮಾಡಿಸಿಕೊಳ್ಳಬೇಕು. ಬೇರೆಯ ಕಾಲದಲ್ಲಿ ಮುಂಡನವು ಆವಶ್ಯಕವಲ್ಲ. ॥ ೧೩ ॥ ಮಹಾರಾಜನಾಗಲಿ, ರಾಜಪುತ್ರನಾಗಲಿ, ಗರ್ಭಿಣಿಪತಿಯಾಗಲಿ ಇಲ್ಲಿ ಯಾತ್ರಾರ್ಥಿ ಯಾಗಿ ಬಂದಿರುವ ಕಾರಣವೊಂದರಿಂದಲೇ ಮುಂಡನ ಮಾಡಿಸಿಕೊಳ್ಳಬೇಕು. ॥ ೧೪ ॥ ಪುರಶ್ಚರಣ ವ್ರತದಲ್ಲಿರುವವನೂ ಪ್ರಯಾಗದಲ್ಲಿ ಮುಂಡನ ಮಾಡಿಸಿಕೊಳ್ಳಬೇಕು. ವಿಧುರನೂ, ಚಂಡಿಕೆ ಆಗದಿರುವ ಬಾಲಕನೂ, ಬ್ರಹ್ಮಚಾರಿಯೂ ಮತ್ತು ಅವಿವಾಹಿತಳಾದ ಕನ್ಯೆಯೂ ಮುಂಡನ ಮಾಡಿಸಿಕೊಳ್ಳಬೇಕು. ॥ ೧೫ ॥ ಜೀವತ್ಪಿತೃಗಳೂ ಮುಂಡನ ಮಾಡಿಸಿಕೊಳ್ಳಬೇಕು. ಗಂಡನಿರುವ ಹೆಂಡತಿಯೂ ತನ್ನ ಗಂಡನ ಜೊತೆಗೆ ಮುಂಡನವನ್ನು ಮಾಡಿಸಿಕೊಳ್ಳಬೇಕು. ಈ ತೀರ್ಥರಾಜನಲ್ಲಿ ಬಂದೂ ಯಾರು ಮುಂಡನ ಮಾಡಿಸಿಕೊಳ್ಳುವುದಿಲ್ಲವೋ ಅವನು ತನ್ನ ಕುಲಕೋಟಿಯೊಡನೆ ರೌರವಾದಿ ನರಕಕ್ಕೆ ಬೀಳುವನು. ॥ ೧೬-೧೭ ॥ ಗಂಡನಿಗೆ ಮಂಗಳವನ್ನು ಬಯಸುವ ಗೃಹಿಣಿಯು ತ್ರಿವೇಣಿಯ ದಡದಲ್ಲಿ ಮುಂಡನ ಮಾಡಿಸಿಕೊಳ್ಳಬೇಕು. ॥ ೧೮ ॥ ಹೀಗೆ ಮುಂಡನ ಮಾಡಿಸಿಕೊಂಡವಳು ಒಳ್ಳೆ ಭೋಗವನನ್ನುಭವಿಸಿ ಅನೇಕ ಒಳ್ಳೆಯ ಸಂತಾನವನ್ನು ಪಡೆಯುತ್ತಾಳೆ. ಎರಡಂಗುಲ, ಮೂರು ಅಂಗುಲ ಅಥವಾ ನಾಲ್ಕು ಅಂಗುಲದಷ್ಟು ಜಡೆಯನ್ನು ಕತ್ತರಿಸಿ ವೇಣಿಗೆ ಕೊಡಬೇಕು. ॥ ೧೯ ॥ ಒಂದು ಚೋಟುದ್ದ ಅಥವಾ ಜಡೆಯ ಕೊನೆಭಾಗವನ್ನಾದರೂ ಕೊಡಬಹುದು. ಒಟ್ಟಿನಲ್ಲಿ ಅವರಿಗೆ ಎಷ್ಟೆಷ್ಟು ಪ್ರೇರಣೆಯಾಗುವುದೋ ಅಷ್ಟಷ್ಟು ಕೂದಲನ್ನು ಕೊಡಬಹುದು. ಈ ರೀತಿಯಾಗಿ ವೇಣೀಯನ್ನು ಸಂತುಷ್ಟಗೊಳಿಸಿದರೆ ಅವರ ಸಕಲ ಇಷ್ಟಗಳೂ ನೆರವೇರುವುವು. ॥ ೨೦ ॥ ತ್ರಿವೇಣಿಯ ಸಂಪ್ರದಾಯದಂತೆ ವಯಸ್ಸಿನ ಯುವತಿಯರೂ, ದೇವತಾ ಸ್ತ್ರೀಯರು, ಋಷಿಸ್ತ್ರೀಯರು ನಾಗಪತ್ನಿಯರೂ ಕೂಡ ವೇಣಿಯಲ್ಲಿ ತಮ್ಮ ಗಂಡಂದಿರೊಡನೆ ಇಲ್ಲಿ ಬಂದು ವ್ರತಸ್ಥರಾಗಿದ್ದು ತಮ್ಮ ಜಡೆಯನ್ನು ಕೊಡುವರು. ಈ ರೀತಿಯಾದ ಜಗದೋತ್ತರವಾದ ಮುಂಡನದ ಮಹಿಮೆಯು ತ್ರಿವೇಣಿಯಲ್ಲಿದೆ. ॥ ೨೧-೨೨ ॥ ಪ್ರಯಾಗದ ತ್ರಿವೇಣಿಯಲ್ಲಿನ ಸ್ನಾನದ ಮಾಹಾತ್ಮ್ಯೆಯು ಆಗಲೇ ಹೇಳಲ್ಪಟ್ಟಿದೆ. ಯಾವನು ಪ್ರಯಾಗಕ್ಕೆ ಹೋಗುವನೋ ಮತ್ತು ಅಲ್ಲಿ ವಾಸ ಮಾಡುವನೋ ಅವನು ಎಲ್ಲ ಪಾಪಗಳಿಂದ

ವಿಮುಕ್ತನಾಗಿ ವಿಷ್ಣು ಲೋಕಕ್ಕೆ ಪ್ರಯಾಣ ಮಾಡಿ ಅಲ್ಲಿಯೂ ಸ್ತೋತ್ರ ಮಾಡಿಸಿ ಕೊಳ್ಳಲ್ಪಡುತ್ತಾನೆ. ತಮ್ಮ ಮಂಗಳಕ್ಕಾಗಿ ತೀರ್ಥ ಕ್ಷೇತ್ರಗಳನ್ನು ಕುರಿತು ಯಾತ್ರೆ ಮಾಡುವವರು ಅನ್ಯ ತೀರ್ಥಗಳಿಗೆ ಹೋಗಬೇಕಾಗಿಲ್ಲ ; ಪ್ರಯಾಗಕ್ಕೆ ಬಂದು ಅಲ್ಲಿ ವಾಸ ಮಾಡಿದರೆ ಸಾಕು. ॥ ೨೩-೨೪ ॥ ಬ್ರಹ್ಮಹತ್ಯಾದಿ ಪಾಪವೆಸಗಿದವರು ಪ್ರಾಯಶ್ಚಿತ್ತಕ್ಕಾಗಿ ಬೇರೆ ಬೇರೆ ಕ್ಷೇತ್ರಗಳಿಗೆ ಹೋಗಬೇಕಾಗಿಲ್ಲ, ಪ್ರಯಾಗಕ್ಕೆ ಬಂದು ಇಲ್ಲಿ ವಾಸಮಾಡಿ ವಿಧಿವತ್ತಾಗಿ ತ್ರಿವೇಣಿಯನ್ನು, ಶ್ರೀ ಮಾಧವನನ್ನು ಸೇವೆಮಾಡಿದರೆ ಸಾಕು; ಅವರ ಎಲ್ಲ ಪಾಪಗಳೂ ಪರಿಹಾರವಾಗುವುವು. ತ್ರಿವೇಣಿಯ ವಿಧಿವತ್ತಾದ ಸೇವೆಯಿಂದ ಭುಕ್ತಿಮುಕ್ತಿ ಮತ್ತು ಅಭೀಷ್ಟಗಳನ್ನು ಪಡೆಯಬಹುದೆಂಬ ವಿಷಯವು ಸಾಕ್ಷಾತ್ ಶ್ರೀ ವೇದವ್ಯಾಸ ದೇವರಿಂದಲೇ ದೃಢೀಕರಿಸಲ್ಪಟ್ಟಿದೆ. ಇನ್ನು ಹೆಚ್ಚಿಗೆ ಹೇಳುವುದರಿಂದ ಏನು ಪ್ರಯೋಜನ ? ಮೂರು ಲೋಕಗಳಲ್ಲಿ ಅತಿ ಶ್ರೇಷ್ಠವಾದ ಗಂಗೆ, ಯಮುನೆ, ಸರಸ್ವತಿ ಇವರು ಸೇರುವ ತ್ರಿವೇಣಿಯಲ್ಲಿ ಶ್ರೀ ಮಾಧವನನ್ನು ಸೇವಾ ಮಾಡಬೇಕು. ವ್ರತ, ದಾನ, ತಪಸ್ಸು, ಹೋಮ, ಜಪ, ಪಾಠ ಪ್ರವಚನ ಮತ್ತು ದೇವಪೂಜಾ ಇವುಗಳ್ಯಾವುದನ್ನೂ ಶ್ರೀ ಮಾಧವನು ಅಪೇಕ್ಷಿಸುವುದಿಲ್ಲ. ಪ್ರಯಾಗದಲ್ಲಿ ವಾಸ ಮಾಡುವುದರಿಂದಲೇ ಅವನು ಸಂತುಷ್ಟನಾಗುವನು. ಅಲ್ಲಿದ್ದು ತನಗೆ ಐಶ್ವರ್ಯವಿದ್ದರೆ ಮಾಧವನ ಸಂತೋಷಕ್ಕಾಗಿ ದಾನಾದಿಗಳನ್ನು ಮಾಡಬಹುದು ; ಆದರೆ ಭಕ್ತಿಯಿಂದ ಪ್ರಯಾಗದಲ್ಲಿ ವಾಸಮಾಡುವುದು ಅತಿ ಮುಖ್ಯವಾದುದು. ॥ ೨೫-೨೮ ॥ ಮಾಧವನು ತನ್ನ ನಿಷ್ಪಕ್ಷಪಾತವಾದ ದೃಷ್ಟಿಯಿಂದ ಅಲ್ಲಿ ವಾಸಮಾಡುತ್ತಿರುವ ಸಕಲಯಾತ್ರಿಕರ ಮನಸ್ಸಿನ ಒಳಗೂ ಮತ್ತು ಹೊರಗೂ ಗಮನಿಸುತ್ತಿರುತ್ತಾನೆ. ಪ್ರಯಾಗವನ್ನು ಮೀರಿ ಯಾರು ಬೇರೆ ಬೇರೆ ಕ್ಷೇತ್ರಗಳಿಗೆ ಫಲಾಪೇಕ್ಷಿಗಳಾಗಿ ಹೋಗುವರೋ ಅವರು ತಮ್ಮ ತಮ್ಮ ದೇಹಗಳಲ್ಲಿರುವ ಸಕಲ ಪಾಪಗಳ ರಾಶಿಯನ್ನು ತಮ್ಮೊಡನೆ ಎಳೆದು ಕೊಂಡೇ ಹೋಗುವರು. ರಾಜರ ದರ್ಶನಕ್ಕೆಂದು ಹೋಗುವವರನ್ನು ಅಲ್ಲಿಯ ಸೇವಕರು ರಾಜರ ಸಮೀಪಕ್ಕೆ ಬಿಡದೆ ಅವರನ್ನು ಹೊರಕ್ಕೆ ದಬ್ಬುವಂತೆ ಪ್ರಯಾಗವಾಸಿಗಳಲ್ಲಿ ಅಡಗಿರುವ ಪಾಪಗಳು ಅವರನ್ನು ಮಾಧವ ದರ್ಶನಕ್ಕೆ ಬಿಡದೆ, ಮನಸ್ಸನ್ನು ಕೆಡಿಸಿ ಅನ್ಯಕ್ಷೇತ್ರಗಳಿಗೆ ಹೋಗುವಂತೆ ಮಾಡುತ್ತವೆ. (ಇದು ಕಲಿಯ ವ್ಯಾಪಾರವೇ ಸರಿ) ॥ ೨೯-೩೦ ॥ ಪ್ರಯಾಗದಲ್ಲಿಯೇ ಯಾರು ಹುಟ್ಟಿದ್ದಾರೋ, ಮತ್ತು ಯಾರಿಗೆ ಪ್ರಯಾಗ ಕ್ಷೇತ್ರದಲ್ಲಿ ದೀಕ್ಷೆಗಳಾಗಿವೆಯೋ, ಜಾತಕರ್ಮಾದಿ ಸಂಸ್ಕಾರವಾಗಿಯೋ ಅವರೆಲ್ಲರೂ ಉತ್ತಮ ಬ್ರಾಹ್ಮಣರು. ॥ ೩೧ ॥ ಯಜ್ಞಗಳಿರಾ, ಯೋಗಯಜ್ಞಗಳಿರಾ, ಶಮದಮಗಳಲ್ಲಿ ಕುಶಲರುಗಳಿರಾ, ಕರ್ಮಯಜ್ಞಗಳಿರಾ! ನೀವೆಲ್ಲರೂ ಸಹಚರಸಹಿತರಾಗಿಯೂ, ದಕ್ಷಿಣಾದಿಸ್ತ್ರೀಯರಿಂದಲೂ (ಯಜ್ಞಕ್ಕೆ ದಕ್ಷಿಣೆಯೇ ಅಂಗನೆಯೆಂದು ಭಾವ) ಸುಮ್ಮನೆ ದೂರ ನಿಲ್ಲಿರಿ. ಈ ಯಜ್ಞಾದಿಗಳಿಂದ ಹೆಂಡತಿ, ಮಕ್ಕಳು, ಮನೆ, ದ್ರವ್ಯ ಮೊದಲಾದ ಫಲಗಳು ಬರುತ್ತವೆಯೆಂದು ಗಟ್ಟಿಯಾಗಿ ಹೇಳಬೇಡಿರಿ. ಜ್ಞಾನವಿದ್ದವರಿಗೂ, ಇಲ್ಲದಿದ್ದವರಿಗೂ ಸರ್ವಪುರುಷಾರ್ಥಗಳನ್ನು ಕೊಡಲು ತೀರ್ಥರಾಜನಾದ ಪ್ರಯಾಗನಿದ್ದಾನೆ. ॥ ೩೨ ॥ ಪ್ರಯಾಗಕ್ಷೇತ್ರದಲ್ಲಿ ಶಾಕಾಹಾರಿಯು ಮೃಷ್ಟಾನ್ನಭೋಜಿಯೆಂದು ಕರೆಸುತ್ತಾನೆ. ಈ ಕ್ಷೇತ್ರದಲ್ಲಿ ಭೋಗಕ್ಕಾಗಿ ಮೃಷ್ಟಾನ್ನಭೋಜನವನ್ನು ಮಾಡತಕ್ಕವನು ರೌರವನರಕದಲ್ಲಿ ಬಿದ್ದು ಕೂಗುತ್ತಾನೆ. ಶಾಕಾಹಾರಿಯಾದವನು ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಾನೆ. ॥ ೩೩ ॥ ಎಲ್ಲಾ ತೀರ್ಥಗಳಲ್ಲಿ ವಾಸಮಾಡುವವರಿಗೆ ಹೇಳಲ್ಪಟ್ಟ ನಿಯಮಗಳು ನಡೆಸಲು ಕಷ್ಟಸಾಧ್ಯ. ಆದರೆ, ಪ್ರಯಾಗದಲ್ಲಿ ವಾಸ ಮಾಡುವವರ ನಿಯಮವು ಯಾವುದೂ ಇಲ್ಲ. ॥ ೩೪ ॥ ಪ್ರಯಾಗದಲ್ಲಿ ಇರಲು ಯಾರು ಮನಸ್ಸನ್ನು

ಮಾಡುವರೋ ಅವರನ್ನು ಕುರಿತು ಇಂದ್ರಾದಿ ದೇವತೆಗಳೂ ವಿಘ್ನಗಳನ್ನು ಉಂಟುಮಾಡುವರು. ॥ ೩೫ ॥ ಪ್ರಯಾಗದಲ್ಲಿ ಯಾರು ಗೋಶಾಲೆ, ದ್ವಿಜಾಗಾರ, ದೇವಮಂದಿರಗಳು, ಕೆರೆ, ಸರೋವರ, ಔಷಧಾಲಯ ಮುಂತಾದವುಗಳನ್ನು ಮಾಡಲು ಇಚ್ಛಿಸುತ್ತಾರೋ, ಅಂತಹವರನ್ನು ನೋಡಿ ಇಂದ್ರಾದಿಗಳೂ ನಡಗುತ್ತಾರೆ. ಪ್ರಯಾಗದಲ್ಲಿ ಸರೋವರ, ಹೋಮಕುಂಡ, ಮಂಟಪಗಳು, ಹೋಮ, ಜಪ, ತಪ ಮತ್ತು ಪುಣ್ಯದಾಯಕವಾದ ಯಾವ ಕೆಲಸವನ್ನೂ ಮಾಡಲು ಬಿಡದಂತೆ ಈ ಇಂದ್ರಾದಿದೇವತೆಗಳು ಬುದ್ಧಿಯನ್ನು ಕೆಡಿಸುತ್ತಾರೆ. ॥ ೩೬-೩೭ ॥ ದೇವತೆಗಳು ಬ್ರಾಹ್ಮಣರುಗಳ ವೇಷದಿಂದ ಬಂದು ತೀರ್ಥ ಯಾತ್ರಿಕರಲ್ಲಿ ಅತಿ ಸ್ನೇಹ ಭಾವವನ್ನು ನಟಿಸಿ ''ಹಣವ್ಯಯ, ಹಣವ್ಯರ್ಥ'' ಮುಂತಾದ ಉಪದೇಶಗಳಿಂದಲೂ ವ್ರತಾದಿಗಳನ್ನು ''ವ್ಯಥಾ ದೇಹಶ್ರಮ-ಆರೋಗ್ಯ ಕ್ಷಯಕಾರಕ'' ಮುಂತಾಗಿ ಹೇಳಿ ಅವರನ್ನು ಯಾತ್ರೆಗಳಿಂದ ಪರಾಙ್ಮುಖಗೊಳಿಸುತ್ತಾರೆ. ॥ ೩೮ ॥ ಹೀಗಿರುವಾಗ ಯಾರಿಗಾದರೂ ಪ್ರಯಾಗದಲ್ಲಿ ದಾನಾದಿ ಗಳಲ್ಲಾಗಲೀ ಅಥವಾ ವಾಸಮಾಡುವುದಕ್ಕಾಗಲೀ ಬುದ್ಧಿಯುಂಟಾಗಿ ಅವರು ಈ ಸುತ್ತ್ಯ ಕಾರ್ಯಗಳಲ್ಲಿ ಪ್ರವೃತ್ತರಾಗುತ್ತಿದ್ದರೆ ಅವರು ತನ್ನ ಬ್ರಹ್ಮಪಟ್ಟದಿಂದ ಚ್ಯುತರಾಗಿ ಭೂಮಿಗೆ ಬಂದ ಬ್ರಹ್ಮದೇವರೆಂದೇ ತಿಳಿಯಬೇಕು. (ಒಟ್ಟಿನಲ್ಲಿ ಪ್ರಯಾಗವಾಸವು ಅತಿದುರ್ಲಭವೆಂಬುವುದರಲ್ಲಿ ತಾತ್ಪರ್ಯ) ॥ ೩೯ ॥ ನಿಜವಾದ ಜ್ಞಾನಿಯು ಪ್ರಯಾಗವನ್ನು ಸುಖದ ದಶೆಯಿಂದಲಾಗಲೀ ದುಃಖದ ದಶೆಯಿಂದಲಾಗಲೀ ಎಂದೂ ಬಿಟ್ಟು ಬರುವುದಿಲ್ಲ. ಅಂತಹವನನ್ನು ತಪಸ್ಸಿನ ದಶೆಯಿಂದಲೋ ಯೋಗದ ದಶೆಯಿಂದಲೋ ಹಿಂದಿನ ಜನ್ಮಗಳಲ್ಲಿ ಭ್ರಷ್ಟನಾಗಿದ್ದು ಈಗ ಸಾಧನೆ ಮಾಡಿಕೊಳ್ಳಲು ಶ್ರೀ ಮಾಧವನ ಸನ್ನಿಧಾನವಿರುವ ಪ್ರಯಾಗ ಕ್ಷೇತ್ರದಲ್ಲಿ ವಾಸಿಸುತ್ತಿದ್ದಾನೆಂದು ತಿಳಿಯಬೇಕು. (ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ । ಶುಚೀನಾಂ ಶ್ರೀಮತಾಂ ಗೇಹೇ ಯೋಗಿಚೇವತಿ ಭಾರತ ಎಂಬ ಗೀತೋಕ್ತಿಯಂತೆ) ॥ ೪೦ ॥ ಪ್ರಯಾಗದಲ್ಲಿ ಶ್ರೀ ಮಾಧವನನ್ನು ಸ್ಪರ್ಶಿಸಿ ಮತ್ತು ದರ್ಶನ ಮಾಡಿದರೆ ಯಾವ ಪುಣ್ಯವು ಲಭಿಸುತ್ತದೋ ಅದೇ ಪುಣ್ಯವು ಪ್ರಯಾಗದಲ್ಲಿ ವಾಸಮಾಡುವವರನ್ನು ಸೇವೆ ಮಾಡಿದರೆ ಬರುವುದು. ॥ ೪೧ ॥ ಹೆಂಡತಿಯೊಡನೆ ಪ್ರಯಾಗದಲ್ಲಿ ವಾಸಮಾಡುವವನೇ ನಿಜವಾಗಿ ಈ ಸಂಸಾರದಲ್ಲಿ ಇರುವವನು. ಅವನು ದೇವಲೋಕದಲ್ಲಿ ವಾಸಿಸುವವರಿಗೆ ಸರಿಸಮ. ಅವನೇ ಕೈಲಾಸವಾಸಿಗಳಿಗೂ ಮತ್ತು ವಿಮಾನಗಳಲ್ಲಿ ಸಂಚರಿಸುವ ದೇವಶ್ರೇಷ್ಠರುಗಳಿಗೂ ಸಮನು ಮತ್ತು ಅವನು ವೈಕುಂಠದಲ್ಲಿ ವಾಸಿಸುತ್ತಿರುವ ಮುಕ್ತಜೀವರಿಗೂ ಸಮ. ಅವನಿಗೆ ಪಾಪವು ಸ್ಪರ್ಶಿಸುವುದಿಲ್ಲ. ॥ ೪೨ ॥ ಈ ಪ್ರಯಾಗವಾಸಿಯೇ ದೇವತೆಗಳಿಂದಲೂ, ಗಂಧರ್ವರಿಂದಲೂ ಮತ್ತು ಮಹರ್ಷಿಗಳಿಂದಲೂ ಪೂಜನೀಯನು. ಪ್ರಯಾಗದಲ್ಲಿ ಭಿಕ್ಷಾವೃತ್ತಿಯಿಂದಲಾದರೂ ಶ್ರೀ ಮಾಧವನಲ್ಲಿ ಭಕ್ತಿಯಿಟ್ಟು ಸುಖವಾಗಿ ಧೈರ್ಯವಾಗಿ ವಾಸಿಸುವವನೇ ಜೀವನ್ಮುಕ್ತನು ಮತ್ತು ಕೃತಕೃತ್ಯನು, ಇದರಲ್ಲಿ ಸಂಶಯವೇ ಇಲ್ಲ. ॥ ೪೩-೪೪ ॥ ಒಂದು ರಾತ್ರಿ, ಮೂರು ರಾತ್ರಿಗಳು, ಐದು ರಾತ್ರಿಗಳೂ ಒಂದು ವಾರ, ಒಂದು ಪಕ್ಷ, ಒಂದು ಋತು, ಮೂರು ತಿಂಗಳು ಅಥವಾ ಆರು ತಿಂಗಳುಗಳು ಅಥವಾ ಒಂದು ಸಂವತ್ಸರ ಅಥವಾ ಜೀವನಪರ್ಯಂತ ಯಾರು ಶ್ರೀ ಮಾಧವನ ಆಜ್ಞಾದಿಂದ ಮಾಧವನ ಮೇಲಿನ ಭಕ್ತಿಪುರಸ್ಸರನಾಗಿ ಧರ್ಮದಿಂದ ಪ್ರಯಾಗದಲ್ಲಿ ವಾಸಿಸಬಹುದು. ॥ ೪೫-೪೬ ॥ ಪ್ರಯಾಗದಲ್ಲಿನ ವಾಸವು ಮೇಲೆ ಹೇಳಿದಂತೆ ಹತ್ತು ಬಗೆಯವುಗಳೆಂದು ಹೇಳಲ್ಪಟ್ಟಿದೆ. ಹೆಚ್ಚು ಹೆಚ್ಚು ದಿವಸಗಳ ವಾಸದಿಂದ ಹೆಚ್ಚು ಹೆಚ್ಚು ಅಪೇಕ್ಷಿತ ಫಲ ಪ್ರಾಪ್ತಿಯಾಗುವುದು; ಹತ್ತನೆಯದಾದ

ಯಾವಜ್ಜೀವವಾಸದಿಂದ ಮುಕ್ತಿಯೇ ದೊರಕುವುದು. ನಾಲ್ಕು ವಿಧ ಪುರುಷಾರ್ಥಗಳಲ್ಲಿ ಏನೇನು ಮನುಷ್ಯನು ಬಯಸುತ್ತಾನೋ ಅವು ಅವನಿಗೆ ಪ್ರಾಪ್ತವಾಗುತ್ತವೆ. ॥ ೪೭-೪೮ ॥

॥ ಮೂವತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತತ್ರಿಂಶೋಽಧ್ಯಾಯಃ ॥ ೩೭ ॥

ಶೇಷ ಉವಾಚ—

ಯಥಾ ಕಥಂಚಿತ್ತೀರ್ಥೇಽಸ್ಮಿನ್ಪ್ರಾಣತ್ಯಾಗಂ ಕರೋತಿ ಯಃ ।
ನಾತ್ಮಘಾತಕೃತೋ ದೋಷಸ್ತಸ್ಯ ಸ್ಯಾದೀಪ್ಸಿತಂ ಫಲಮ್ ॥ ೧ ॥

ವಪನಕರಣಮಾತ್ರೇಣೈವ ಮೋಕ್ಷಪ್ರದಾತಾ
ಯಮನಿಯಮದಮಾನಾಪೇಕ್ಷತೇ ಪಾಪಹಂತಾ ।
ತನುನಿಯಮನಕಾಲೇ ಜ್ಞಾನದಾತುರ್ನ ಚೇಚ್ಛಾ
ವಿಜಯತಿ ನ ತಥಾನ್ಯಸ್ತೀರ್ಥರಾಜಪ್ರಯಾಗಾತ್ ॥ ೨ ॥

ಕ್ವಚಿತ್ಕರ್ಮಾಪೇಕ್ಷಾ ಕ್ವಚಿದಪಿ ಚ ಯಾತ್ರಾನುಗಮನಂ
ಕ್ವಚಿದ್ದಾನಂ ಧ್ಯಾನಂ ನಿಯಮಕರಣಂ ದೇಹಪತನಮ್ ।
ಕ್ವಚಿತ್ಕಾಲಾಪೇಕ್ಷಾ ಕ್ವಚಿದಪಿ ಚ ತತ್ತ್ವಾನುಕಥನಂ
ಪ್ರಯಾಗೇ ನೈವೈತತ್ಕಿಮಪಿ ಶರಣಂ ದೇಹಪತನಮ್ ॥ ೩ ॥

ಸ ತಪಸ್ವೀ ಸ ಮನಸ್ವೀ ಸ ಯಶಸ್ವೀ ನರೋತ್ತಮಃ ।
ಭೋಗೀ ಸ ಏವ ಯೋಗೀಶೋ ಯಃ ಪ್ರಯಾಗೇ ತನುಂ ತ್ಯಜೇತ್॥ ೪ ॥
ತಸ್ಯೈವ ಸಫಲೋ ದೇಹಸ್ತಸ್ಯೈವ ಸಫಲಂ ವಯಃ ।
ತಸ್ಯೈವ ಸಫಲಂ ಶಾಸ್ತ್ರಂ ಯಃ ಪ್ರಯಾಗೇ ತನುಂ ತ್ಯಜೇತ್ ॥ ೫ ॥
ಯಸ್ಯ ಭಾಗ್ಯವತಶ್ಚಾತ್ರ ತಿಷ್ಠಂತ್ಯಸ್ಥೀನ್ಯಪಿ ದ್ವಿಜಾಃ ।
ನ ತಸ್ಯ ದುಃಖಲೇಶೋಽಸ್ತಿ ಸಪ್ತಜನ್ಮಸು ನಿಶ್ಚಿತಮ್ ॥ ೬ ॥
ದೇಹತ್ಯಾಗಂ ತು ಯೇ ವೀರಾ ವೇಣ್ಯಾಂ ಮಾಧವಸನ್ನಿಧೌ ।
ಕುರ್ವಂತಿ ಮಾಧವತನುಂ ವಿಶಂತ್ಯಪುನರಾಗಮಮ್ ॥ ೭ ॥
ವ್ಯಾಧಿತೋ ಯದಿ ವಾ ದೀನಃ ಕ್ರುದ್ಧೋ ವಾ ದುಃಖಿತೋಽಪಿ ವಾ ।
ಗಂಗಾಯಮುನಯೋರ್ಯೋಗೇ ಯಸ್ತು ಪ್ರಾಣಾನ್ಪರಿತ್ಯಜೇತ್ ॥ ೮ ॥
ಸಪ್ತಕಾರ್ತಸ್ವರಾಕಾರೈರ್ದೇವಯಾನೈರ್ಮಹಾದ್ಯುತಿಃ ।
ಇಂದ್ರಾದಿದೇವಲೋಕೇಷು ಕ್ರೀಡತ್ಯಾಸುಕೃತಂ ನರಃ ॥ ೯ ॥
ತತಃ ಸ್ವರ್ಗಚ್ಯುತೋ ಭೂಮೌ ಧನಧಾನ್ಯಸಮಾಕುಲೇ ।
ಸತ್ಕುಲೇ ಬ್ರಾಹ್ಮಣೋ ಭೂತ್ವಾ ಭುಂಕ್ತೇ ಭೋಗಾನ್ಯಥೇಚ್ಛಯಾ ॥ ೧೦ ॥
ಪುನರ್ಗಚ್ಛತಿ ತತ್ತೀರ್ಥಂ ಪೂರ್ವಸಂಸ್ಕಾರಯೋಜಿತಃ ।
ಸ್ವಭಾವಾನ್ಮರಣಂ ಪ್ರಾಪ್ಯ ಪರಂ ಬ್ರಹ್ಮಾಧಿಗಚ್ಛತಿ ॥ ೧೧ ॥
ಅಕಾಮಮರಣೇ ಸದ್ಯೋ ಮುಕ್ತಿರೇವಮುದಾಹೃತಾ ।
ಕಾಮನಾಯಾಂ ಕ್ರಮೋ ನೈವ ಕಾಮ್ಯಸಿದ್ಧಿರನಂತರಮ್ ॥ ೧೨ ॥

ವಟಮೂಲೇ ಸಮಾಸಾದ್ಯ ಯಸ್ತು ಪ್ರಾಣಾನ್ಪರಿತ್ಯಜೇತ್ ।
ಸರ್ವಲೋಕಾನತಿಕ್ರಮ್ಯ ರುದ್ರಲೋಕಂ ಸ ಗಚ್ಛತಿ ॥ ೧೩ ॥
ಯಾ ಗತಿರ್ಯೋಗಯುಕ್ತಸ್ಯ ಸತ್ಯಸ್ಥಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಮುನಸಂಗಮೇ ॥ ೧೪ ॥
ಜಲಪ್ರವೇಶಂ ಯಃ ಕುರ್ಯಾತ್ಸಂಗಮೇ ಲೋಕವಿಶ್ರುತೌ ।
ರಾಹುಗ್ರಸ್ತೋ ಯಥಾ ಸೋಮೋ ಮುಚ್ಯತೇ ಸರ್ವಪಾತಕೈಃ ॥ ೧೫ ॥
ಅಕಾಮೋ ವಾ ಸಕಾಮೋ ವಾ ವಟಮೂಲೇ ಮುನೀಶ್ವರಾಃ ।
ಶೀಘ್ರಂ ಪ್ರಾಣಾನ್ಪ್ರಮುಚ್ಯೇತ ಯದೀಚ್ಛೇತ್ಪರಮಾಂ ಗತಿಮ್ ॥ ೧೬ ॥
ಉರ್ವಶೀತೀರ್ಥಮಾಸಾದ್ಯ ಸ್ವಾಸೂನ್ಮುಂಚತಿ ಯೋ ನರಃ ।
ಸ ವೈ ಗತ್ವೋರ್ವಶೀಲೋಕಮುರ್ವಶ್ಯಾ ಸಹ ಮೋದತೇ ॥ ೧೭ ॥
ಕೋಟಿತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ಪರಿತ್ಯಜೇತ್।
ಕೋಟಿವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೧೮ ॥
ಪಂಚಯೋಜನವಿಸ್ತೀರ್ಣೇ ಪ್ರಯಾಗಸ್ಯ ತು ಮಂಡಲೇ ।
ಪರಿತ್ಯಜತಿ ಯಃ ಪ್ರಾಣಾಂಸ್ತಸ್ಯ ಪುಣ್ಯಂ ವದಾಮಿ ವಃ ॥ ೧೯ ॥
ಅತೀತಾನ್ಪುರುಷಾನ್ಸಪ್ತ ಭಾವಿನಶ್ಚ ಚತುರ್ದಶ ।
ಸ ತಾರಯತಿ ಚಾತ್ಮಾನಂ ಪರಂ ಸೌಖ್ಯಂ ಚ ವಿಂದತಿ ॥ ೨೦ ॥
ಮಂಡಲೇಽದಃ ಕಿಮಾಶ್ಚರ್ಯಂ ಪುರುಷಾಣಾಮಿದಂ ಫಲಮ್ ।
ಯತ್ಕೀಟೋಽಪಿ ಮೃತೋ ಯಾತಿ ಸ್ವರ್ಗಲೋಕಮಸಂಶಯಮ್ ॥ ೨೧ ॥
ಮಾಧವಾಂಘ್ರಿಯುಗಂ ಧ್ಯಾಯನ್ಮಾಘಮಾಸೇ ತು ಯೋ ನರಃ ।
ಪ್ರಯಾಗೇ ಮುಂಚತಿ ಪ್ರಾಣಾಂಸ್ತಸ್ಯ ಮುಕ್ತಿರ್ನ ಸಂಶಯಃ ॥ ೨೨ ॥
ಅಗ್ನಿನಾ ಪಾಶಸೂತ್ರೇಣ ಶಸ್ತ್ರೇಣಾನಾಶಕೇನ ಚ ।
ಜಲಪ್ರವೇಶತೋ ವಾಪಿ ಪ್ರಾಣತ್ಯಾಗಂ ಕರೋತಿ ಯಃ ॥ ೨೩ ॥
ಪಾಂಡಿತ್ಯಂ ಜಗತೀರಾಜ್ಯಂ ಭೋಗಾನುಚ್ಚಾವಚಾಂಸ್ತಥಾ ।
ಜಾತಿಸ್ಮರತ್ವಂ ಸ್ವರ್ಭೋಗಾನ್ಮೋಕ್ಷಂ ವಾಭಿಲಷೇನ್ನರಃ ॥ ೨೪ ॥
ನಿಶ್ಚಿತಂ ತಂ ತಮಾಪ್ನೋತಿ ಶ್ರುತಿಸ್ಮೃತಿವಚೋಬಲಾತ್ ।
ವರ್ಜಯಿತ್ವಾ ಮುನಿಶ್ರೇಷ್ಠಾಃ ಪರೋದ್ದೇಶವಿಷಾದನೇ ॥ ೨೫ ॥
ದೇಹತ್ಯಾಗೇ ವಿಧಿಃ ಪ್ರೋಕ್ತಸ್ತಂ ನಿಬೋಧತ ಸುವ್ರತಾಃ ।
ಯಸ್ಯ ಶ್ರವಣಮಾತ್ರೇಣ ಮಾಧವೇ ಭಕ್ತಿಮಾನ್ಭವೇತ್ ॥ ೨೬ ॥
ಆದೌ ಸ್ವಶಕ್ತಿತಃ ಸರ್ವಂ ಪ್ರಾಯಶ್ಚಿತ್ತಂ ವಿಧಾಯ ಚ ।
ಜೀವಚ್ಛ್ರಾದ್ಧವಿಧಿಂ ಕುರ್ಯಾದನನ್ಯತ್ವೇ ಯಥಾವಿಧಿ ॥ ೨೭ ॥

ದಂಪತೀಪೂಜನಂ ಕಾರ್ಯಂ ಶಕ್ತ್ಯಾ ಬ್ರಾಹ್ಮಣಭೋಜನಮ್ ।
ದೀನಾಂಧಕೃಪಣಾನನ್ನೈಸ್ತರ್ಪಯಿತ್ವಾ ತತಸ್ಸ್ವಯಮ್ ॥ ೨೮ ॥
ತಚ್ಛೇಷಪಾರಣಂ ಕೃತ್ವಾ ವಿಪ್ರಾನುಜ್ಞಾಮವಾಪ್ಯ ಚ ।
ರಾತ್ರೌ ಜಾಗರಣಂ ಕುರ್ಯಾತ್ಸ್ಮರನ್ಮಾಧವಮವ್ಯಯಮ್ ॥ ೨೯ ॥
ಪ್ರಾತಃ ಸ್ನಾತ್ವಾ ವಿಧಾನೇನ ಕೃತನಿತ್ಯಕ್ರಿಯಶ್ಶುಚಿಃ ।
ನಾನೋಪಚಾರೈಃ ಕುರ್ವೀತ ವೇಣೀಮಾಧವಪೂಜನಮ್ ॥ ೩೦ ॥
ಪ್ರಣಮ್ಯ ಚ ತತೋ ವಿಪ್ರಾನ್ಫಲಮುದ್ದಿಶ್ಯ ವಾಂಛಿತಮ್ ।
ವೇಣೀಂ ಪ್ರಣಮ್ಯ ಪ್ರವಿಶೇದ್ಗಂಗಾಯಮುನಸಂಗಮಮ್ ॥ ೩೧ ॥
ದೃಷ್ಟ್ವೈವಂ ತಂ ನಮಸ್ಕೃತ್ಯಂ ಗಂಗಾಯಮುನಸಂಗಮೇ ।
ಅನೇನ ವಿಧಿನಾ ವೇಣ್ಯಾಂ ದೇಹತ್ಯಾಗಂ ಕರೋತಿ ಯಃ ॥ ೩೨ ॥
ಭುಕ್ತಿಮುಕ್ತಿಫಲಂ ತಸ್ಯ ಕರಸ್ಥಂ ನಾತ್ರ ಸಂಶಯಃ ।
ವಿಧಿನಾವಿಧಿನಾ ವಾಪಿ ಸ್ವಭಾವಾದಾಗ್ರಹಾದಪಿ ॥ ೩೩ ॥
ಯಥಾಕಥಂಚಿತ್ತೀರ್ಥೇಽಸ್ಮಿನ್ಪ್ರಾಣತ್ಯಾಗೋ ವಿಶಿಷ್ಯತೇ ।
ಕುರ್ವಂಸ್ತೀರ್ಥಾಂತರೇ ತ್ಯಾಗಮಾತ್ಮಹಾ ಜಾಯತೇ ನರಃ ॥ ೩೪ ॥
ಶ್ರುತಿಸ್ಮೃತಿಪುರಾಣೋಕ್ತಸ್ಸದೋಷೋ ನಾತ್ರ ಸಂಶಯಃ ।
ಪರಂತು ವೃದ್ಧೌ ಪಿತರಾವನನ್ಯತನಯೌ ಸತೀಮ್ ॥ ೩೫ ॥
ಅಪುತ್ರಾಂ ಗರ್ಭಿಣೀಭಾರ್ಯಾಮನನ್ಯಶರಣಂ ಶಿಶುಮ್ ।
ಪರಿತ್ಯಜ್ಯಾಧಿಕಾರೋಽತ್ರ ದೇಹತ್ಯಾಗೇ ನ ಹಿ ಸ್ಮೃತಃ ॥ ೩೬ ॥
ಅಪುತ್ರಾ ಗರ್ಭಿಣೀ ನಾರೀ ಭರ್ತ್ರಾ ನಾನುಮತಾ ಚ ಯಾ ।
ಬಾಲಾಪತ್ಯಾ ಚ ವಿಧವಾ ನ ಕುರ್ಯಾದ್ದೇಹಪಾತನಮ್ ॥ ೩೭ ॥
ಏವಂವಿಧೋಽತ್ರ ಮಹಿಮಾ ಮರಣೇ ವರ್ಣಿತೋ ಮಯಾ ।
ಅನ್ಯತ್ರ ನಾಸ್ತಿ ಕುತ್ರಾಪಿ ಪೃಥಿವ್ಯಾಂ ಸನಕಾದಯಃ ॥ ೩೮ ॥
ಈದೃಶಸ್ತೀರ್ಥರಾಜೋಽಯಂ ಧರ್ಮಕಾಮಾರ್ಥಮೋಕ್ಷದಃ ।
ಅತಸ್ಸಂಸೇವ್ಯತೇ ಸರ್ವೈಸ್ಸ್ವರ್ಗಪಾತಾಲವಾಸಿಭಿಃ ॥ ೩೯ ॥
ಮರ್ತ್ಯಲೋಕಗತೈಶ್ಚಾಪಿ ಸ್ವಸ್ವಾಭಿಲಷಿತಾಪ್ತಯೇ ।
ಅತೋಽತ್ರ ಯೇ ಸಮಾಯಾಂತಿ ದೂರಸ್ಥಾ ಯಾತ್ರಿಕಾ ಜನಾಃ ॥ ೪೦ ॥
ದರಿದ್ರಾ ಧನಿನೋ ಮೂರ್ಖಾಃ ಪಂಡಿತಾ ರೋಗಿಣೋ ಜಡಾಃ ।
ಪಶವೋ ಹ್ಯಬಲಾ ಬಾಲಾ ಭಕ್ತಿಮಂತಸ್ಸಹಿಷ್ಣವಃ ॥ ೪೧ ॥
ಪ್ರಯಚ್ಛತಿ ಫಲಂ ತೇಷಾಂ ದಯಾಲುರ್ಮಾಧವೋಽಖಿಲಮ್ ॥ ೪೨ ॥

॥ ಇತಿ ಸಪ್ತತ್ರಿಂಶೋಽಧ್ಯಾಯಃ ॥

## ॥ ಮೂವತ್ತೇಳನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಹೇಗಾದರೂ ಆಗಲಿ, ಈ ಪ್ರಯಾಗಕ್ಷೇತ್ರದಲ್ಲಿ ಸ್ವಯಂ ಪ್ರಾಣತ್ಯಾಗವನ್ನು ಮಾಡಿದವರಿಗೆ ಆತ್ಮಹತ್ಯೆಯ ದೋಷವು ಬರುವುದಿಲ್ಲ ಮತ್ತು ಅವರ ಮನಸ್ಸಿನಲ್ಲಿರುವ ಇಚ್ಛೆಗಳೆಲ್ಲವೂ ನೆರವೇರುವುವು. ॥ ೧ ॥ ಕೇವಲ ಮುಂಡನ ಮಾಡಿಸಿಕೊಂಡಿದ್ದರಿಂದಲೇ ಪ್ರಯಾಗವು ಮೋಕ್ಷವನ್ನು ಕೊಡುವುದು; ನಿಯಮದಿಂದಿದ್ದು ಕಾಮಾದಿಗಳನ್ನೂ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವದನ್ನೂ ಈ ಕ್ಷೇತ್ರವು ಬಯಸುವುದಿಲ್ಲ ಮತ್ತು ಶರೀರತ್ಯಾಗಕಾಲದಲ್ಲಿ ಜ್ಞಾನೋಪದೇಶವನ್ನೂ ಈ ಕ್ಷೇತ್ರವು ಅಪೇಕ್ಷಿಸುವುದಿಲ್ಲ. ಈ ವೈಶಿಷ್ಟ್ಯಾದಿಗಳಿಂದಲೇ ಬೇರಾವ ತೀರ್ಥವೂ ತೀರ್ಥರಾಜನೆಂದೆನಿಸಿರುವ ಈ ಪ್ರಯಾಗದಂತೆ ವಿರಾಜಮಾನವಾಗಿಲ್ಲ. ॥ ೨ ॥ ಕೆಲವು ತೀರ್ಥಗಳಲ್ಲಿ ಕರ್ಮಾಚರಣೆಯ ಅಪೇಕ್ಷೆಯಿದೆ, ಕೆಲವುಗಳಲ್ಲಿ ಯಾತ್ರೆಗಳ ಆವಶ್ಯಕತೆ ಇದೆ. ಇನ್ನಿತರೆ ಕೆಲವು ತೀರ್ಥಗಳು ದಾನಾದಿಗಳನ್ನು, ಧ್ಯಾನಾದಿಗಳನ್ನೂ ಬಯಸುತ್ತವೆ. ಕೆಲವು ನಿಶ್ಚಿತ ಮುಹೂರ್ತಗಳಲ್ಲೇ ಮಾಡಬೇಕಾದ ಕರ್ಮಗಳನ್ನು ಅಪೇಕ್ಷಿಸುತ್ತವೆ. ಕೆಲವೆಡೆ ತತ್ತ್ವಬೋಧನೆಯ ಅವಶ್ಯಕತೆಯಿದೆ, ಕೆಲವೆಡೆ ದೇಹಪತನವಾಗುವವರೆಗೂ ಯಮನಿಯಮಗಳನ್ನು ಅನುಸರಿಸ ಬೇಕಾಗುತ್ತದೆ. ಆದರೆ ಇವುಗಳ್ಯಾವುದರ ಅಗತ್ಯವೂ ಪ್ರಯಾಗದಲ್ಲಿ ಇಲ್ಲ. ಮೋಕ್ಷಕ್ಕಾಗಿ ಕೇವಲ ದೇಹತ್ಯಾಗವೊಂದೇ ಅಲ್ಲಿ ಮಾಡಬೇಕಾಗಿರುವುದು. ಇದೊಂದರಿಂದಲೇ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ॥ ೩ ॥ ಯಾರು ಪ್ರಯಾಗದಲ್ಲಿ ದೇಹತ್ಯಾಗ ಮಾಡುವನೋ ಅವನೇ ತಪಸ್ವಿಯು, ಇಂದ್ರಿಯಗಳನ್ನು ಗೆದ್ದ ಮನಸ್ವಿಯು, ಯಶಸ್ವಿಯು, ಭೋಗಿಯು ಮತ್ತು ಎಲ್ಲ ಉಪಾಯಗಳನ್ನೂ ಹೊಂದಿರುವ ಯೋಗಿಯು. ॥ ೪ ॥ ಯಾರು ಪ್ರಯಾಗದಲ್ಲಿ ದೇಹತ್ಯಾಗ ಮಾಡುವರೋ ಅಂತಹವನದ್ದೇ ಸರಿಯಾಗಿ ಬಾಳಿದ ಬಾಳು ಅವನು ಇದುವರೆಗೆ ಬದುಕಿದ್ದೇ ಸಾರ್ಥಕವಾಗಿ ಕಳೆದ ಆಯಸ್ಸು, ಗಳಿಸಿದ ಶಾಸ್ತ್ರಜ್ಞಾನವೇ ನಿಜವಾದ ಶಾಸ್ತ್ರಜ್ಞಾನವು. ॥ ೫ ॥ ಯಾವ ಭಾಗ್ಯವಂತನ ಅಸ್ಥಿಗಳನ್ನು ತೆಗೆದುಕೊಂಡು ಬಂದು ಬ್ರಾಹ್ಮಣರು ಈ ಪ್ರಯಾಗದಲ್ಲಿ ವಿಸರ್ಜನೆ ಮಾಡುವರೋ ಅಂಥವನ ಏಳೇಳು ಜನ್ಮಗಳಲ್ಲಿಯೂ ನಿಶ್ಚಯವಾಗಿಯೂ ಸ್ವಲ್ಪವೂ ದುಃಖವಿರುವುದಿಲ್ಲ. ॥ ೬ ॥ ಯಾವ ಧೈರ್ಯಶಾಲಿಯು ವೇಣಿಯಲ್ಲಿ ಶ್ರೀಮಾಧವನ ಸನ್ನಿಧಿಯಲ್ಲಿ ತನ್ನ ದೇಹವನ್ನು ಬಿಡುವನೋ ಅವನು ಪುನರ್ಜನ್ಮಗಳಿಲ್ಲದಂತೆ ಮಾಧವನ ಶರೀರವನ್ನು ಪ್ರವೇಶಮಾಡುವನು. ॥ ೭ ॥ ಸಹಿಸಲಾಗದ ವ್ಯಾಧಿಯಿಂದಲೋ ಅಥವಾ ಸಹಿಸಲಾಗದ ದುಃಖದಿಂದಲೋ ಅಥವಾ ದೈನ್ಯಸ್ಥಿತಿಯಿಂದಲೋ ಇಲ್ಲಾ ಕೋಪದಿಂದಲೋ ಯಾವನು ಗಂಗಾಯಮುನೆಯರ ಸಂಗಮ ಸ್ಥಾನವಾದ ವೇಣಿಯಲ್ಲಿ ಬಿದ್ದು ದೇಹ ಬಿಡುವನೋ ಅವನು ಮಹಾಪ್ರಕಾಶಯುಕ್ತನಾಗಿ ದೇವಲೋಕದ ಬಂಗಾರದ ರಥದಲ್ಲಿ ಕುಳಿತು ಇಂದ್ರಾದಿಲೋಕಗಳಲ್ಲಿ ವಿಹಾರಮಾಡುತ್ತಾನೆ. ಅಲ್ಲಿ ತನ್ನ ಪುಣ್ಯದಿಂದ ಸಂಪಾದಿಸಿದ ಸುಖಗಳೆಲ್ಲವನ್ನೂ ಅನುಭವಿಸಿದ ಮೇಲೆ ಭೂಮಿಯಲ್ಲಿ ಶುದ್ಧವಾಗಿರತಕ್ಕ ಶ್ರೀಮಂತರ ಮನೆಯಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಅನೇಕ ಭೋಗಭಾಗ್ಯಗಳನ್ನು ಅನುಭವಿಸುವದಲ್ಲದೇ ತನ್ನ ಹಿಂದಿನ ಜನ್ಮದ ಸಂಸ್ಕಾರದ ದಶೆಯಿಂದ ಪುನಃ ಪ್ರಯಾಗಕ್ಷೇತ್ರಕ್ಕೆ ಬಂದು ಅಲ್ಲಿ ಸಾಧನೆಗಳನ್ನು ಮಾಡಿ ಮಾಧವನ ಸನ್ನಿಧಾನದಲ್ಲಿ ಸ್ವಾಭಾವಿಕವಾದ ಮರಣವನ್ನು ಪಡೆದು ಮುಕ್ತನಾಗುವನು. ॥ ೮-೧೧ ॥ ಮರಣ ಹೊಂದಬೇಕೆಂಬ ಇಚ್ಛೆಯಿಲ್ಲದೆ ಸ್ವಾಭಾವಿಕ

ಮರಣವಾದರೆ ಕೂಡಲೇ ಮುಕ್ತಿಯೆಂದು ಹೇಳಲ್ಪಟ್ಟಿದೆ. ಕಾಮನೆಯಿಂದ ದೇಹವನ್ನು ಬಿಡುವುದಾದರೆ ಅದಕ್ಕೆ ಕ್ರಮವೇನೂ ಇಲ್ಲ; ಮರಣಾನಂತರ ಕಾಮ್ಯಸಿದ್ಧಿಯಾಗುವುದು. ॥ ೧೨ ॥ ಇನ್ನು, ಅಕ್ಷಯ ವಟವೃಕ್ಷದ ಮೂಲದಲ್ಲಿರುವ ವೇಣಿಯಲ್ಲಿ ಯಾರು ದೇಹತ್ಯಾಗ ಮಾಡುವರೋ ಅವರು ಎಲ್ಲ ಉತ್ತಮ ಲೋಕಗಳನ್ನು ದಾಟಿ ರುದ್ರಲೋಕಕ್ಕೆ ಪ್ರಯಾಣ ಮಾಡುವರು. ॥ ೧೩ ॥ ಯೋಗಯುಕ್ತರಾದವರಿಗೆ ಯಾವ ಗತಿಯು ಹೇಳಿದೆಯೋ ಮತ್ತು ಸತ್ಯವಾದಿಗಳಿಗೆ ಯಾವಾವ ಫಲಗಳು ಲಭ್ಯಗಳೋ ಅವೆಲ್ಲವೂ ಗಂಗಾಯಮುನಾಸಂಗಮದಲ್ಲಿ ದೇಹತ್ಯಾಗ ಮಾಡಿದವರಿಗೆ ಲಭ್ಯವಾಗುವುವು. ॥ ೧೪ ॥ ಈ ಸಂಗಮದಲ್ಲಿ ದೇಹತ್ಯಾಗ ಮಾಡುವುದಕ್ಕಾಗಿ ಯಾರು ನೀರನ್ನು ಪ್ರವೇಶಿಸುವರೋ ಅವರು ರಾಹುವಿನಿಂದ ಬಿಡಲ್ಪಟ್ಟ ಚಂದ್ರನಂತೆ ಎಲ್ಲ ಪಾಪಗಳಿಂದಲೂ ಬಿಡಲ್ಪಡುವರು. ॥ ೧೫ ॥ ಕಾಮನೆಗಳಿಂದ ಕೂಡಿರಲಿ ಅಥವಾ ಬಿಟ್ಟಿರಲಿ, ಯಾರು ಅಕ್ಷಯ್ಯ ವಟದ ಬುಡದಲ್ಲಿರುವ ವೇಣೀಯಲ್ಲಿ ಪ್ರವೇಶ ಮಾಡಿ ಶೀಘ್ರವಾಗಿ ಪ್ರಾಣಗಳನ್ನು ಬಿಡುವರೋ, ಅವರು ತಾವು ಅಪೇಕ್ಷಿಸುವ ಸದ್ಗತಿಗಳನ್ನು ಪಡೆಯುವರು. ॥ ೧೬ ॥ ಊರ್ವಶೀ ತೀರ್ಥಕ್ಕೆ ಬಂದು ಅಲ್ಲಿ ತಮ್ಮ ಪ್ರಾಣವನ್ನು ಬಿಡುವವರು ಊರ್ವಶೀ ಲೋಕಕ್ಕೆ ತೆರಳಿ ಅಲ್ಲಿ ಊರ್ವಶಿಯೊಡನೆ ಆನಂದಪಡುವರು. (ಇವರ ಪತ್ನಿಯೇ ಊರ್ವಶಿಯಂತೆ ರೂಪ ತಾಳಿ ಪರಲೋಕದಲ್ಲಿ ರಮಿಸುವಳೆಂದರ್ಥ; ಊರ್ವಶಿಯ ಭೋಗವಾಗುತ್ತದೆಯೆಂದರ್ಥವಲ್ಲ.) ॥ ೧೭ ॥ ಕೋಟಿ ತೀರ್ಥವನ್ನು ಹೊಂದಿ ಅಲ್ಲಿ ಪ್ರಾಣ ಬಿಡುವವರು ಕೋಟಿ ಸಹಸ್ರ ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ವಿರಾಜಮಾನರಾಗಿರುವರು. ॥ ೧೮ ॥ ಐದು ಯೋಜನ ವಿಸ್ತಾರವುಳ್ಳ ಪ್ರಯಾಗ ಮಂಡಲದಲ್ಲಿ ದೇಹತ್ಯಾಗ ಮಾಡುವವರ ಪುಣ್ಯದ ಬಗ್ಗೆ ನಿಮಗೆ ಹೇಳುವೆನು, ಕೇಳಿ. ॥ ೧೯ ॥ ಇಂಥಹವರು ತಮ್ಮ ಹಿಂದಿನ ಏಳು ತಲೆ ಮಾರಿನವರನ್ನು ಮುಂದೆ ಬರತಕ್ಕ ಹದಿನಾಲ್ಕು ತಲೆಮಾರಿನವರನ್ನು ಸಂಸಾರ ಸಾಗರದಿಂದ ದಾಟಿಸಿ, ತಾವು ಭವಸಾಗರವನ್ನು ದಾಟಿ ಪರಮ ಸೌಖ್ಯವನ್ನು ಅನುಭವಿಸುವರು. ॥ ೨೦ ॥ ಈ ಮಂಡಲದಲ್ಲಿ ಮೃತವಾದ ಒಂದು ಕೀಟಕ್ಕೂ ಸಂದೇಹವಿಲ್ಲದೆ ಸ್ವರ್ಗಲೋಕ ಪ್ರಾಪ್ತಿಯಾಗುತ್ತದೆ, ಹೀಗಿರುವಾಗ ಇಲ್ಲಿ ದೇಹತ್ಯಾಗವನ್ನು ಸಮರ್ಪಣ ಬುದ್ಧಿಯಿಂದ ಮಾಡುವ ಮನುಷ್ಯರ ವಿಷಯವಾಗಿ ಇನ್ನು ಏನು ಹೇಳುವುದು? ॥ ೨೧ ॥ ಶ್ರೀ ವೇಣೀ ಮಾಧವನ ಪಾದಗಳನ್ನು ಧ್ಯಾನ ಮಾಡುತ್ತಾ ಮಾಘಮಾಸದಲ್ಲಿ ಈ ಪ್ರಯಾಗದಲ್ಲಿ ದೇಹತ್ಯಾಗ ಮಾಡುವವರಿಗೆ ಮುಕ್ತಿಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ॥ ೨೨ ॥ ಪ್ರಯಾಗದಲ್ಲಿ ಶ್ರೀ ಮಾಧವನ ಪಾದಯುಗಳಗಳಲ್ಲಿ ಭಕ್ತಿಯನ್ನಿಟ್ಟು ಅಗ್ನಿಯಿಂದಾಗಲೀ, ಹಗ್ಗದಿಂದಾಗಲೀ, ಮಾರಕ ಶಸ್ತ್ರಗಳಿಂದಾಗಲೀ ಅಥವಾ ಸಂಗಮದ ಜಲದ ಪ್ರವೇಶ ದಿಂದಾಗಲೀ, ಪ್ರಯಾಗ ಕ್ಷೇತ್ರದಲ್ಲಿ ದೇಹತ್ಯಾಗ ಮಾಡಿದರೆ ಮುಕ್ತಿಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ॥ ೨೩ ॥ ಮುನೀಶ್ವರರೇ! ಕೇಳಿರಿ, ಪಾಂಡಿತ್ಯವನ್ನಾಗಲೀ, ಸಾರ್ವಭೌಮತ್ವ ವನ್ನಾಗಲೀ, ಅತ್ಯುತ್ಕೃಷ್ಟ ಭೋಗಗಳನ್ನಾಗಲೀ ತಮ್ಮ ಇಡೀ ಜನಾಂಗದಿಂದಲೇ ಜ್ಞಾಪಿಸಿ ಕೊಳ್ಳಲ್ಪಡುವ ಭಾಗ್ಯವನ್ನಾಗಲೀ ಮತ್ತು ಸ್ವರ್ಗದಲ್ಲಿ ಲಭ್ಯವಾಗತಕ್ಕ ಭೋಗಾದಿಗಳನ್ನಾಗಲೀ ಅಪೇಕ್ಷೆಪಟ್ಟು ತ್ರಿವೇಣೀ ಸಂಗಮದಲ್ಲಿ ಮೃತನಾದರೆ ಅವನ ಈ ಅಪೇಕ್ಷೆಗಳೆಲ್ಲವೂ ನೆರವೇರುವುವು. ಇದು ನಿಶ್ಚಯವಾದ ಮಾತು. ಇದನ್ನೇ ಶ್ರುತಿ ಸ್ಮೃತಿ ವಚನಗಳು ಪುಷ್ಟೀಕರಿಸಿವೆ. ಶ್ರೀ ಮಾಧವನನ್ನು ಪ್ರಸನ್ನಗೊಳಿಸುವ ದೃಷ್ಟಿಯಿಂದ ಅಲ್ಲದೆ ಬೇರೆಯಾದ ಕಾರಣದಿಂದ ವಿಷಪಾನ ಮಾಡಿದರೆ ಅಂತಹವನಿಗೆ ಮಾತ್ರಾ ಅಪೇಕ್ಷೆಗಳು ಈಡೇರುವುದಿಲ್ಲ. ॥ ೨೪-೨೫ ॥ ಈ ರೀತಿಯಾಗಿ

ಪ್ರಯಾಗದಲ್ಲಿ ದೇಹತ್ಯಾಗ ಮಾಡುವದಕ್ಕೂ ವಿಧಿವಿಧಾನಗಳು ಹೇಳಲ್ಪಟ್ಟಿವೆ. ಒಳ್ಳೆಯ ದೀಕ್ಷೆಯುಳ್ಳವರೇ! ನೀವು ಇದನ್ನು ತಿಳಿದುಕೊಳ್ಳಿರಿ. ಇದನ್ನು ಕೇಳುವ ಮಾತ್ರದಿಂದಲೇ ಮಾಧವನಲ್ಲಿ ಭಕ್ತಿಯುಳ್ಳವರಾಗುತ್ತೀರಿ. ॥ ೨೬ ॥ ಮೊದಲು ಸರ್ವವಿಧಗಳಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ತಮ್ಮ ವಂಶದಲ್ಲಿ ಯಾರೂ ವಾರುಸುದಾರರು ಇಲ್ಲದಿದ್ದರೆ ತಾನೇ ವಿಧಿವತ್ತಾಗಿ ''ಜೀವಶ್ರಾದ್ಧ'' ವನ್ನು ಮಾಡಿಕೊಳ್ಳಬೇಕು. ॥ ೨೭ ॥ ದಂಪತಿಪೂಜೆಯನ್ನು ಮಾಡಬೇಕು. ತನ್ನ ಶಕ್ತ್ಯಾನುಸಾರ ಬ್ರಾಹ್ಮಣಸುವಾಸಿನಿಯರ ಭೋಜನವನ್ನು ಮಾಡಿಸಬೇಕು. ದೀನರು, ಕುರುಡರು, ಅನ್ನಕ್ಕಾಗಿ ಹಾತೊರೆಯುತ್ತಿರುವವರು ಇವರುಗಳನ್ನೂ ಅನ್ನದಿಂದ ತೃಪ್ತಿಪಡಿಸಬೇಕು. ॥ ೨೮ ॥ ಇವರೆಲ್ಲರೂ ಭೋಜನಮಾಡಿ ಮಿಕ್ಕ ಅನ್ನಾದಿಗಳನ್ನು ಬ್ರಾಹ್ಮಣರ ಆಜ್ಞೆಯನ್ನು ಪಡೆದು ತಾನೂ ಭೋಜನ ಮಾಡಬೇಕು. ರಾತ್ರಿ ಇಡೀ ಶ್ರೀ ಮಾಧವನ, ಹರಿಗುರುಗಳ ಸ್ಮರಣೆ ಮಾಡುತ್ತಾ ಜಾಗರಣೆ ಮಾಡಬೇಕು. ॥ ೨೯ ॥ ಪ್ರಾತಃ ಕಾಲವಾಗುತ್ತಲೇ ಸಂಗಮದಲ್ಲಿ ಸ್ನಾನ ಮಾಡಬೇಕು. ಅನಂತರ ನಿತ್ಯಕರ್ಮಗಳ ಅನುಷ್ಠಾನವನ್ನು ಮಾಡಿ ಶುಚಿರ್ಭೂತನಾಗಬೇಕು. ನಾನಾ ವಿಧವಾದ ಪೂಜಾದಿಗಳಿಂದ ಶ್ರೀವೇಣೀಮಾಧವನ ಪೂಜೆಯನ್ನು ಮಾಡಬೇಕು. ॥ ೩೦ ॥ ತನ್ನ ಮನಸ್ಸಿನ ಅಪೇಕ್ಷೆಯನ್ನು ಉದ್ದೇಶಿಸಿ, ಬ್ರಾಹ್ಮಣ ಮುತ್ತೈದೆಯರಿಗೆ ನಮಸ್ಕಾರ ಮಾಡಿ ಅವರ ಆಶೀರ್ವಾದಗಳನ್ನು ಸ್ವೀಕರಿಸಬೇಕು. ವೇಣಿಯನ್ನು ನಮಸ್ಕರಿಸಿ ವೇಣಿಯನ್ನೇ ನೋಡುತ್ತಾ ಮತ್ತು ಧ್ಯಾನಿಸುತ್ತಾ ಗಂಗಾ, ಯಮುನೆಯರ ಸಂಗಮದಲ್ಲಿ ಪ್ರವೇಶಿಸಿ ದೇಹವನ್ನು ತೇಲಿಬಿಡಬೇಕು. ಈ ರೀತಿಯಾದ ಎಲ್ಲ ವಿಧಿಗಳನ್ನು ಅನುಸರಿಸಿ ತ್ರಿವೇಣೀ ಸಂಗಮದಲ್ಲಿ ಯಾರು ದೇಹತ್ಯಾಗ ಮಾಡುವರೋ ಅಂಥಹವರಿಗೆ ಇಹಪರಲೋಕಗಳ ಭೋಗಗಳೂ ಮತ್ತು ಮುಕ್ತಿಯೂ ಕರಗತವಾಗುವುದು. ಇದರಲ್ಲಿ ಯಾವ ಸಂದೇಹವೂ ಬೇಡ. ಪರಮಾತ್ಮನ ಸಂಕಲ್ಪದಿಂದಲಾಗಲೀ, ತನ್ನ ಸ್ವಭಾವದಿಂದಲಾಗಲೀ ಅಥವಾ ತನ್ನಲ್ಲಿ ಹುಟ್ಟಿರುವ ಆಗ್ರಹದಿಂದಲಾಗಲೀ ಪ್ರಯಾಗದ ತೀರ್ಥದಲ್ಲಿ ಮಾಡಿದ ಪ್ರಾಣತ್ಯಾಗಕ್ಕೆ ವಿಶೇಷ ಪ್ರಾಮುಖ್ಯತೆಯಿದೆ. ಆದೇ ಬೇರೆ ತೀರ್ಥಗಳಲ್ಲಿ ಮಾಡಿದ ದೇಹತ್ಯಾಗವು ಆತ್ಮಹತ್ಯೆ ಎಂದೆನಿಸಿಕೊಳ್ಳಲ್ಪಡುವುದು. ಶ್ರುತಿ ಸ್ಮೃತಿ ಪುರಾಣಗಳಲ್ಲಿ ಪರಿಗಣಿಸಲ್ಪಟ್ಟ ಆತ್ಮಹತ್ಯೆಯೆಂಬ ದೋಷವು ಬೇರೆ ತೀರ್ಥಗಳಿಗೆ ಅನ್ವಯಿಸುವುದು. ॥ ೩೧-೩೩ ॥ ಬೇರೆ ಮಕ್ಕಳಿಲ್ಲದ ವೃದ್ಧರಾದ ತಂದೆ-ತಾಯಿಗಳು, ಮಕ್ಕಳಿಲ್ಲದ ಪತ್ನಿ, ಗರ್ಭಿಣಿಯಾದ ಪತ್ನಿ, ಬೇರೆ ರಕ್ಷಕರಿಲ್ಲದ ಮಗು ಇವರನ್ನು ಪರಿತ್ಯಾಗ ಮಾಡಿ ದೇಹವನ್ನು ಬಿಡಲು ಅಧಿಕಾರವಿಲ್ಲ. ॥ ೩೬ ॥ ಪುತ್ರಹೀನಳು, ಗರ್ಭಿಣಿಯು, ಗಂಡನಿಂದ ಅನುಮತಿ ಪಡೆಯದ ಸ್ತ್ರೀ, ಸಣ್ಣಮಕ್ಕಳಿರುವ ವಿಧವಾಸ್ತ್ರೀ ಇವರುಗಳು ಸಂಗಮದಲ್ಲಿ ದೇಹತ್ಯಾಗ ಮಾಡಕೂಡದು. ॥ ೩೭ ॥ ಎಲೈ ಸನಕಾದಿಗಳೇ! ಈ ರೀತಿಯಾಗಿ ನನ್ನಿಂದ ವರ್ಣಿಸಲ್ಪಟ್ಟ ದೇಹತ್ಯಾಗದ ಮಹಿಮೆಯು ಇಡೀ ಭೂಮಂಡಲದಲ್ಲಿಯೇ ಎಲ್ಲಿಯೂ ಇಲ್ಲ. ॥ ೩೮ ॥ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವುಗಳನ್ನು ಕೊಡಬಲ್ಲ ಕ್ಷೇತ್ರವೇ ಈ ಪ್ರಯಾಗವೆಂಬ ತೀರ್ಥರಾಜನು. ಆದ್ದರಿಂದಲೇ ಸ್ವರ್ಗ ಮತ್ತು ಪಾತಾಳ ಲೋಕಗಳಲ್ಲಿರುವವರೂ ಇದನ್ನು ಸೇವಿಸುತ್ತಾರೆ. ॥ ೩೯ ॥ ಈ ಮನುಷ್ಯ ಲೋಕದಲ್ಲಿರುವವರೂ ಕೂಡ ತಮ್ಮ ತಮ್ಮ ಅಪೇಕ್ಷೆಗಳು ಈಡೇರಲು ಈ ಪ್ರಯಾಗ ಕ್ಷೇತ್ರಕ್ಕೆ ಬರುತ್ತಾರೆ. ದೂರದೂರದ ದೇಶಗಳ ಯಾತ್ರಿಕರೂ ಕೂಡ ಅವರು ದರಿದ್ರರೇ ಆಗಿರಲಿ, ಶ್ರೀಮಂತರೇ ಆಗಿರಲಿ, ಮೂರ್ಖರೇ ಆಗಿರಲಿ, ರೋಗಗ್ರಸ್ತರೇ ಆಗಿರಲಿ ಅಥವಾ ಪಂಡಿತರೇ ಆಗಿರಲಿ, ಪಶುಗಳಾಗಿರಲಿ, ಸ್ತ್ರೀಯರಾಗಿರಲೀ ಮತ್ತು ಮಕ್ಕಳೇ ಆಗಿರಲಿ ಅವರೆಲ್ಲರೂ ಪ್ರಯಾಗಕ್ಕೆ

ಬಂದು ಕಷ್ಟಸಹಿಷ್ಣುತೆಯಿಂದ ಶ್ರೀ ಮಾಧವನನ್ನು ಭಕ್ತಿಯಿಂದ ಸೇವಿಸಿ ಪೂಜಿಸಿ ಕೃತಾರ್ಥ ರಾಗುತ್ತಾರೆ. ॥ ೪೦-೪೧ ॥ ದಯಾಮಯನಾದ ಅಖಿಲ ವ್ಯಾಪ್ತನಾದ ಶ್ರೀ ವೇಣೀಮಾಧವ ದೇವರಿಂದ ತಮ್ಮ ಸರ್ವ ಫಲಗಳನ್ನೂ ಪಡೆಯುತ್ತಾರೆ. ॥ ೪೨ ॥

॥ ಮೂವತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟತ್ರಿಂಶೋಽಧ್ಯಾಯಃ ॥ ೩೮ ॥

ಋಷಯ ಊಚುಃ—

ಶೇಷಾಶೇಷಮಹಾಬುದ್ಧೇ ಜೀವ ತ್ವಂ ಶಾಶ್ವತೀಸ್ಸಮಾಃ ।
ತ್ವನ್ಮುಖಾಂಭೋಜನಿರ್ಯಾತಕಥಯಾ ಪಾವಿತಾ ವಯಮ್ ॥ ೧ ॥
ಇದಾನೀಂ ಸಂಶಯೋಽಸ್ಮಾಕಮತ್ರಾರ್ಥೇಽಭೂನ್ಮಹಾಮತೇ ।
ತೀರ್ಥಯಾತ್ರಾವಿಧಿಃ ಕೀದೃಗ್ಯಾತ್ರಿಕಾಣಾಂ ಫಲಪ್ರದಃ ॥ ೨ ॥
ಕೇಷಾಂ ತತ್ರಾಧಿಕಾರೋಽಸ್ತಿ ಕೇಷಾಮನಧಿಕಾರಿತಾ ।
ಪೂರ್ಣಯಾತ್ರಾಫಲಂ ಕೇಷಾಂ ನ್ಯೂನಂ ಕೇಷಾಂ ತಥಾ ಭವೇತ್ ॥ ೩ ॥
ಕಥಂ ತೀರ್ಥಾಭಿಗಮನಂ ಕರ್ತವ್ಯಂ ಭಕ್ತಿಮನ್ನರೈಃ ।
ಕೃತೇ ಚ ಕಿಂ ಫಲಂ ತೇಷಾಂ ತನ್ನೋ ವದ ಸುವಿಸ್ತರಮ್ ॥ ೪ ॥

## ॥ ಮೂವತ್ತೆಂಟನೆಯ ಅಧ್ಯಾಯವು ॥

ಶೌನಕಾದಿ ಋಷಿಗಳು ಹೇಳಿದರು—

ಉಳಿದವರಿಗಿಂತ ಹೆಚ್ಚು ಬುದ್ಧಿಯುಳ್ಳ ಶ್ರೀ ಶೇಷದೇವರೇ! ನೀವು ಶಾಶ್ವತವಾಗಿ ಬಹುವರ್ಷ ಜೀವಿಸಿರಿ. ನಿಮ್ಮ ಮುಖ ಕಮಲದ ದೆಶೆಯಿಂದ ಹೊರ ಹೊರಟ ಕಥಾನಕಗಳಿಂದ ನಾವು ಪವಿತ್ರರಾದೆವು. ॥ ೧ ॥ ಈಗ ಒಂದು ವಿಷಯದಲ್ಲಿ ನಮಗೆ ಸಂಶಯವು ಉದ್ಭವವಾಗಿದೆ. ಅದೆಂದರೆ ಯಾತ್ರಿಕರಿಗೆ ಫಲಕೊಡತಕ್ಕ ತೀರ್ಥಯಾತ್ರೆಯ ವಿಧಿಯು ಎಂಥದು? ॥ ೨ ॥ ಯಾರಿಗೆ ತೀರ್ಥಯಾತ್ರೆಯಲ್ಲಿ ಅಧಿಕಾರವಿದೆ? ಯಾರಿಗೆ ಇಲ್ಲ? ಯಾರಿಗೆ ಯಾತ್ರೆಯ ಪೂರ್ಣಫಲವು ದಕ್ಕುವುದು? ಮತ್ತು ಯಾರಿಗೆ ಕಡಿಮೆಯಾಗುವುದು? ॥ ೩ ॥ ಭಕ್ತಿಯುಳ್ಳ ಜನರು ಹೇಗೆ ಯಾತ್ರೆಗೆ ಹೊರಡಬೇಕು? ವಿಧಿವಿಧಾನಗಳಿಂದ ಹೋಗಿ ಬಂದದ್ದರಿಂದ ಏನು ಫಲ ಉಂಟಾಗುವುದು? ಇವುಗಳನ್ನು ವಿಸ್ತಾರವಾಗಿ ಹೇಳಿರಿ. ॥ ೪ ॥

ಶೇಷ ಉವಾಚ—

ಯೂಯಂ ಧರ್ಮೈಕನಿರತಾ ನೂನಂ ಭಾಗವತಾಮಲಾಃ ।
ಯದೀದೃಶೀ ಮತಿರ್ಜಾತಾ ಭವತಾ ವಿಶ್ವತಾರಿಣೀ ॥ ೫ ॥
ನಹ್ಯಸಂಚಿತಪುಣ್ಯಾನಾಂ ಜಾತ್ವೇವಂ ಜಾಯತೇ ಮತಿಃ ।
ಶ್ರೋತೃಪೃಚ್ಛಕವಕ್ತೄಣಾಂ ಯತಃ ಶ್ರೇಯೋ ಹ್ಯನುತ್ತಮಮ್ ॥ ೬ ॥
ಶೃಣ್ವಂತು ಬ್ರಹ್ಮಣಃ ಪುತ್ರಾಸ್ತೀರ್ಥಯಾತ್ರಾವಿಧಿಂ ಶುಭಮ್ ।
ಯಸ್ಯ ಶ್ರವಣಮಾತ್ರೇಣ ತೀರ್ಥೇ ಭಕ್ತಿಃ ಪ್ರಜಾಯತೇ ॥ ೭ ॥
ಅನಾಯಾಸೇನ ಸುಕರೋ ದರಿದ್ರೈರಪಿ ಯೋ ವಿಧಿಃ ।
ಮಖಾಧಿಕಂ ಫಲಂ ಯತ್ರ ಪ್ರಾಪ್ಯ ಯಾತ್ರಾವಿಧಿಸ್ತಥಾ ॥ ೮ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ದ್ವಿಜಸೇವಿನಾಮ್ ।
ಚತುರ್ಣಾಮಾಶ್ರಮಾಣಾಂ ಚ ಯಾತ್ರಾಯಾಮಧಿಕಾರಿತಾ ॥ ೯ ॥
ಗುರೋರನುಜ್ಞಯೈವ ಸ್ಯಾತ್ತೀರ್ಥದಾನವ್ರತಾದಿಕಮ್ ।
ಸ್ವಾತಂತ್ರ್ಯಾನ್ನ ಕದಾಪ್ಯಸ್ಯ ವರ್ತತೇ ಬ್ರಹ್ಮಚಾರಿಣಃ ॥ ೧೦ ॥
ಯಜ್ಞೇಷ್ವನಧಿಕಾರೀ ಚ ಯಜ್ಞಾಶಕ್ತಶ್ಚ ಸಾಗ್ನಿಕಃ ।
ಸಪತ್ನೀಕಸ್ತೀರ್ಥಯಾತ್ರಾಂ ಗೃಹೀ ಕುರ್ಯಾದ್ಯಥಾವಿಧಿ ॥ ೧೧ ॥
ಪ್ರಾಯಶ್ಚಿತ್ತಂ ವ್ರತೀ ತೀರ್ಥೇ ಸಪತ್ನೀಕೋಽಪಿ ಸಂಯುತಃ ।
ಯಜ್ಞಾಧಿಕಾರವಿರಹಾದ್ವಿಧುರಶ್ಚ ತಥಾ ವ್ರಜೇತ್ ॥ ೧೨ ॥
ಋಣತ್ರಯಮಪಾಸ್ಯೈವ ಸ್ತ್ರಿಯಂ ಪುತ್ರೇ ನಿಯೋಜ್ಯ ಚ ।
ವನಸ್ಥೋ ನಿರ್ಮಮಃ ಪಶ್ಚಾತ್ಕುರ್ಯಾತ್ತೀರ್ಥಸ್ಯ ಸೇವನಮ್ ॥ ೧೩ ॥
ಖೇಟಖರ್ವಟವನ್ಯಾಸು ತೀರ್ಥಸತ್ಪತ್ತನಾದ್ರಿಷು ।
ಸರ್ವದಾ ಭ್ರಮಮಾಣಸ್ಯ ಯತೇರಪ್ಯಧಿಕಾರಿತಾ ॥ ೧೪ ॥
ರಾಜನ್ಯಸ್ಯ ವಿಧಿಜ್ಞಸ್ಯ ಧರ್ಮಕರ್ಮ ಚಿಕೀರ್ಷತಃ ।
ಪುರೋಧಸಂ ಪುರಸ್ಕೃತ್ಯ ತೀರ್ಥಯಾತ್ರಾದಿಕೋ ಭವೇತ್ ॥ ೧೫ ॥
ಪತಿಸೇವಾನುರೋಧೇನ ತೀರ್ಥಯಾತ್ರಾ ಸ್ತ್ರಿಯೋ ಭವೇತ್ ।
ವಿಧವಾಯಾಸ್ಸುತೇಭ್ಯಾತೋ ನ ಸ್ತ್ರಿ ಸ್ವಾತಂತ್ರ್ಯಮರ್ಹತಿ ॥ ೧೬ ॥
ದ್ವಂದ್ವಸಂಗವಿಮುಕ್ತಾನಾಂ ಬ್ರಹ್ಮಧ್ಯಾನೈಕಚೇತಸಾಮ್ ।
ಸಂವಿದಾ ತೀರ್ಥಭೂತಾನಾಂ ನ ತೀರ್ಥಗಮನಂ ಮತಮ್ ॥ ೧೭ ॥
ಇಷ್ಟ್ವಾ ನಾನಾವಿಧೈರ್ಯಜ್ಞೈಃ ಶ್ರೇಷ್ಠೈಸ್ಸರ್ವಸ್ವದಕ್ಷಿಣೈಃ ।
ನಾಪ್ನೋತಿ ತತ್ಫಲಂ ಮರ್ತ್ಯೋ ಯದ್ಭವೇತ್ತೀರ್ಥಯಾತ್ರಯಾ ॥ ೧೮ ॥
ಅಜ್ಞಾನೇನಾಪಿ ಯಸ್ಯೇಹ ತೀರ್ಥಯಾತ್ರಾದಿಕಂ ಭವೇತ್ ।
ಸರ್ವಕಾಮಸಮೃದ್ಧಸ್ತು ಸ್ವರ್ಗಲೋಕೇ ಮಹೀಯತೇ ॥ ೧೯ ॥
ಅಂತರಾ ತೀರ್ಥಗಮನಂ ತ್ರಿರಾತ್ರಾದಿವ್ರತೈರ್ವಿನಾ ।
ಕಾಂಚನಂ ಗಾಮದತ್ವಾ ಚ ದರಿದ್ರೋ ಜಾಯತೇ ನರಃ ॥ ೨೦ ॥
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯುತಮ್ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೨೧ ॥
ಪ್ರತಿಗ್ರಹಾನ್ನಿವೃತ್ತಿಶ್ಚ ಕಸ್ಯಚಿತ್ತಾಡನಾದ್ವೃಥಾ ।
ದೃಷ್ಟಿಪೂತಾಧ್ವಗಮನಂ ದ್ವಿಜೇ ತೀರ್ಥೇ ಶ್ರುತೌ ರತಿಃ ॥ ೨೨ ॥
ತೀರ್ಥಮಾಹಾತ್ಮ್ಯವಿಜ್ಞಾನಂ ಕೃಚ್ಛ್ರಚಾಂದ್ರಾಯಣಾದಿಕಮ್ ।
ಸದಾಚಾರಾದಿನಾ ಖ್ಯಾತಿರ್ವಿಜ್ಞೇಯಾಃ ಸಂಯಮಾಃ ಕೃತೇ ॥ ೨೩ ॥

ಪ್ರತಿಗ್ರಾಹೀ ದಯಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ।
ಅಹಂಕಾರವಿಮುಕ್ತಶ್ಚ ಸ ತೀರ್ಥಫಲಮಶ್ನುತೇ ॥ ೨೪ ॥
ಶ್ರದ್ಧಾವಾಂಶ್ಚ ನಿರಾರಂಭೋ ಜಿತಾಹಾರೋ ಜಿತೇಂದ್ರಿಯಃ ।
ಸರ್ವಸಂಗವಿನಿರ್ಮುಕ್ತಸ್ಸ ತೀರ್ಥಫಲಮಶ್ನುತೇ ॥ ೨೫ ॥
ಯಸ್ಯ ಚಿತ್ತಂ ದ್ರವೀಭೂತಂ ಕೃಪಯಾ ಸರ್ವಜಂತುಷು ।
ಕಾರ್ಯಾಕಾರ್ಯವಿವೇಕೀ ಚ ಸ ತೀರ್ಥಫಲಮಶ್ನುತೇ ॥ ೨೬ ॥
ಪರಾಪವಾದವಿಮುಖೋ ವಕ್ತಾ ಪರಗುಣಸ್ಯ ಚ ।
ಭಗವತ್ಯರ್ಪಿತಸ್ವಾಂತಸ್ಸ ತೀರ್ಥಫಲಮಶ್ನುತೇ ॥ ೨೭ ॥
ನೃಣಾಂ ಪಾಪಕೃತಾಂ ತೀರ್ಥೇ ಪಾಪಸ್ಯ ಶಮನಂ ಫಲಮ್ ।
ಯಥೋಕ್ತಫಲದಂ ತೀರ್ಥಂ ಭವೇಚ್ಛ್ರದ್ಧಾತ್ಮನಾಂ ಪರಮ್ ॥ ೨೮ ॥
ಏವಂ ಜ್ಞಾತ್ವಾ ನರಃ ಕುರ್ಯಾದ್ವಿಧಿನಾ ಗಮನಾದಿಕಮ್ ।
ಯಥಾಶಕ್ತಿ ಯಥಾವಿತ್ತಂ ಫಲಂ ತಸ್ಯ ಚತುರ್ಗುಣಮ್ ॥ ೨೯ ॥
ದಿನಶುದ್ಧಿಂ ವಿಚಾರ್ಯಾದೌ ಪಂಚಾಂಗೈಃ ಶಾಸ್ತ್ರವರ್ತ್ಮನಾ ।
ಚಂದ್ರಾದೀನಾಂ ಬಲಂ ತದ್ವನ್ಮೌಢ್ಯಾದಿ ನ ವಿಚಾರಯೇತ್ ॥ ೩೦ ॥
ಗಂಗಾಯಾಂ ಚ ಗಯಾಯಾಂ ಚ ಗೋದಾಶ್ರೀಶೈಲಯೋಸ್ತಥಾ ।
ಅಧಿಮಾಸೋ ನ ದೋಷಾಯ ಮೌಢ್ಯಂ ಚ ಗುರುಶುಕ್ರಯೋಃ ॥ ೩೧ ॥
ಪ್ರಥಮೇಽಹನ್ಯೇಕಭುಕ್ತೋ ಹವಿಷ್ಯಮಪರೇಽಹನಿ ।
ಉಪೋಷ್ಯಂ ಚ ತೃತೀಯೇಽಹ್ನಿ ಕ್ಷೌರಂ ಕುರ್ಯಾದ್ಯಥಾವಿಧಿ ॥ ೩೨ ॥
ಚತುರ್ಥದಿವಸೇ ಪ್ರಾತಃ ಸ್ನಾತ್ವಾ ಸಮ್ಯಕ್ಕೃತಾಹ್ನಿಕಃ ।
ತತಸ್ಸಂಪೂಜಯೇದ್ಭಕ್ತ್ಯಾ ಗಣೇಶಂ ಚೇಷ್ಟದೇವತಾಮ್ ॥ ೩೩ ॥
ಪಾರ್ವಣೇನ ವಿಧಾನೇನ ತೀರ್ಥಶ್ರಾದ್ಧೀಯದೇವತಾಃ ।
ಉದ್ದಿಶ್ಯ ವಿಧಿನಾ ಪಶ್ಚಾದ್ಘೃತಶ್ರಾದ್ಧಂ ಸಮಾಚರೇತ್ ॥ ೩೪ ॥
ಸಂಪೂಜ್ಯ ಬ್ರಾಹ್ಮಣಾನ್ಭಕ್ತ್ಯಾ ಸಂಭೋಜ್ಯ ಚ ಘೃತಪ್ಲುತಮ್ ।
ವಿಧಾಯ ಕಾರ್ಪಟೀವೇಷಂ ಯಾತ್ರಾಸಂಕಲ್ಪಮಾಚರೇತ್ ॥ ೩೫ ॥
ಶ್ರೇಷ್ಠಾನಾಂ ಗುಣವೃದ್ಧಾನಾಂ ಸುಹೃದಾಂ ಗ್ರಾಮವಾಸಿನಾಮ್ ।
ಗೃಹೀತ್ವಾಜ್ಞಾಂ ಸುಸಮಯೇ ನಿರ್ಗಚ್ಛೇದ್ಗ್ರಾಮತೋ ಬಹಿಃ ॥ ೩೬ ॥
ಗ್ರಾಮಂ ಪ್ರದಕ್ಷಿಣೀಕೃತ್ಯ ತತಃ ಕ್ರೋಶಾಂತರೇ ಸ್ವಯಮ್ ।
ಪವಿತ್ರಃ ಪಾರಣಂ ಕುರ್ಯಾಚ್ಛ್ರಾದ್ಧಶೇಷಘೃತಾದಿನಾ ॥ ೩೭ ॥
ಆಗತ್ಯ ಚೈವಂ ಕುರ್ವೀತ ಶ್ರಾದ್ಧಂ ಬ್ರಾಹ್ಮಣಭೋಜನಮ್ ।
ತೇನ ಯಾತ್ರಾಫಲಂ ಪೂರ್ಣಂ ಮಾನವಃ ಪ್ರತಿಪದ್ಯತೇ ॥ ೩೮ ॥

ಮಾರ್ಗೀಯಾನ್ನಿಯಮಾನ್ವಕ್ಷ್ಯೇ ಯಾತ್ರಿಕಾಣಾಂ ಮುನೀಶ್ವರಾಃ ।
ಯದಾಚರಣಮಾತ್ರೇಣ ಸಮ್ಯಗ್ಯಾತ್ರಾಫಲಂ ಭವೇತ್ ॥ ೩೯ ॥
ಪ್ರಾತರ್ನಿತ್ಯಂ ಕೃತಸ್ನಾನಃ ಕೃತನಿತ್ಯಕ್ರಿಯಶ್ಶುಚಿಃ ।
ಅಸ್ಪೃಶ್ಯಸ್ಪರ್ಶವಿಜ್ಞಾನೇ ಪುನಃ ಸ್ನಾತೋ ವಿಚಕ್ಷಣಃ ॥ ೪೦ ॥
ಕಾಮಕ್ರೋಧಪರಿತ್ಯಾಗೀ ಶಮಾದಿನಿರತಃ ಕ್ಷಮೀ ।
ಶೀತಾದಿದ್ವಂದ್ವಸಹನೋಽದುಷ್ಟಭಾವಶ್ಚ ಭಕ್ತಿಮಾನ್ ॥ ೪೧ ॥
ಅನೃತೋ ಬ್ರಹ್ಮಚಾರೀ ಚಾಪ್ರತಿಗ್ರಾಹೀ ದೃಢವ್ರತಃ ।
ತ್ಯಕ್ತಾಹಂಕಾರಲೋಭಾಶ್ಚ ಭಗವನ್ನಾಮಕೀರ್ತನಃ ॥ ೪೨ ॥
ನಿಂದಾಪೈಶುನ್ಯರಹಿತಸ್ಸತ್ಯವಾಙ್ಮಿತಭೋಜನಃ ।
ಏಕಭುಗ್ಭೂಮಿಶಯನೋ ನಿರೂಪಾನತ್ಕ ಏವ ಚ ॥ ೪೩ ॥
ಅಶಸ್ತ್ರಶ್ಚ ನಿರುಷ್ಣೀಷೋ ವೃಥಾಲಾಪವಿವರ್ಜಿತಃ ।
ನಿರ್ದಂಭೋ ನಿರ್ಮಮಶ್ಶಾಂತಸ್ತೀರ್ಥಂ ಗಚ್ಛೇದಕಲ್ಮಷಃ ॥ ೪೪ ॥
ಆಶೌಚಾದೌ ಪಥಿ ಪ್ರಾಪ್ತೇ ದ್ವಿವಿಧೇ ಚ ರಜಸ್ಯಪಿ ।
ಆಶೌಚಾಂತಂ ಪ್ರತೀಕ್ಷ್ಯೈವ ಪುನರ್ಗಚ್ಛೇದತಂದ್ರಿತಃ ॥ ೪೫ ॥
ನ ಪುನಃ ಪರಿವರ್ತೇತ ಯಾತ್ರಾಸಂಕಲ್ಪಕೃನ್ನರಃ ।
ಸಂಕಟೇ ಸ ನಿವೃತ್ತಶ್ಚೇತ್ಪ್ರಾಯಶ್ಚಿತ್ತಂ ಸಮಾಚರೇತ್ ॥ ೪೬ ॥
ಮಧ್ಯೇ ಮಾರ್ಗೇ ರುಜಾ ಗ್ರಸ್ತೋಽನಶನವ್ರತತೋಽಪಿ ವಾ ।
ಮ್ರಿಯತೇ ತೀರ್ಥಸಾಮರ್ಥ್ಯಾದೃಷೀಣಾಂ ಮಂಡಲಂ ವ್ರಜೇತ್ ॥ ೪೭ ॥
ಪಾದಚಾರೀ ವ್ರಜೇತ್ತೀರ್ಥಂ ಸಮಗ್ರಫಲಕಾಮ್ಯಯಾ ।
ಪದ್ಭ್ಯಾಂ ಗಂತುಂ ಸಮರ್ಥಶ್ಚೇದ್ಯೋಜನದ್ವಿತಯಾವಧಿ ॥ ೪೮ ॥
ಗೋಯಾನೇನ ತು ಯೋ ಗಚ್ಛೇದ್ಗೋಹತ್ಯಾಮಾಪ್ನುಯಾದಸೌ ।
ಯದ್ಯತ್ಕರೋತಿ ಸುಕೃತಂ ತತ್ತದ್ಭವತಿ ಭಸ್ಮಸಾತ್ ॥ ೪೯ ॥
ಗೋರಥೇನ ತು ಯೋ ಗಚ್ಛೇದಸೌ ಪೂರ್ವಾರ್ಧಪಾತಕೀ ।
ಜಾಯತೇ ತರ್ಪಣಂ ಶ್ರಾದ್ಧಂ ಪಿತೄಣಾಂ ನೋಪತಿಷ್ಠತಿ ॥ ೫೦ ॥
ಸರ್ವಥಾ ವರ್ಜಯೇದ್ಧೀಮಾನ್ಗೋಯಾನಂ ತು ಯಥಾ ತಥಾ ।
ಅಶಕ್ತಃ ಪಾದಚಾರೇ ಚೇದನ್ಯಂ ಯಾನಂ ನಿಯೋಜಯೇತ್ ॥ ೫೧ ॥
ಗಜಾಶ್ವನರಯಾನಂ ಚ ತಥಾ ಹಯಯುತೋ ರಥಃ ।
ಅಶಕ್ತಸ್ಯ ನ ದೋಷಾಯ ನೌಕಾಯಾನಂ ತಥಾಗತೌ ॥ ೫೨ ॥
ತತ್ಪಾದ್ಭ್ಯಾಮನುಪಾನದ್ಭ್ಯಾಂ ಛತ್ರಯಷ್ಟ್ಯಾದಿಕಂ ವಿನಾ ।
ಗಮನೇನ ಫಲಂ ಕೃತ್ಸ್ನಂ ಪ್ರಾಪ್ನುಯಾತ್ಪಾತಕಂ ವಿನಾ ॥ ೫೩ ॥

॥ ಇತಿ ಅಷ್ಟತ್ರಿಂಶೋಽಧ್ಯಾಯಃ ॥

**ಶ್ರೀ ಶೇಷದೇವರು ಹೇಳಿದರು—**

ನೀವುಗಳೆಲ್ಲರೂ ನಿಜವಾಗಿಯೂ ಧರ್ಮದಲ್ಲಿಯೇ ಆಸಕ್ತಿಯಿರುವ, ಶುದ್ಧರಾದ ಭಾಗವತೋತ್ತಮರಾದ್ದರಿಂದಲೇ ಭವಸಾಗರವನ್ನು ದಾಟಿಸುವ ವಿಚಾರವನ್ನು ತಿಳಿಯಬೇಕೆಂಬ ಬುದ್ಧಿಯು ನಿಮಗೆ ಹುಟ್ಟಿದೆ. ॥ ೫ ॥ ಪುಣ್ಯಗಳಿಸದೆಯಿರುವವರಿಗೂ ಸಹ ಎಂದೂ ಇಂತಹ ಬುದ್ಧಿಯು ಹುಟ್ಟುವುದಿಲ್ಲ. ಇಂತಹ ವಿಷಯವು ಕೇಳುವವರಿಗೆ ಪ್ರಶ್ನಿಸುವವರಿಗೆ ಮತ್ತು ಉಪದೇಶಕರಿಗೆ ಅತ್ಯಂತ ಉತ್ತಮವಾದ ಶ್ರೇಯಸ್ಸನ್ನು ತಂದುಕೊಡುವುದು.॥ ೬ ॥ ಎಲೈ ಸನಕಾದಿಮುನಿಶ್ರೇಷ್ಠರೇ! ಮಂಗಳಕರವಾದ ತೀರ್ಥಯಾತ್ರೆಯ ವಿಧಿಯನ್ನು ಹೇಳುವೆನು ಆಲಿಸಿರಿ; ಇದನ್ನು ಕೇಳುವುದರಿಂದಲೇ ತೀರ್ಥರಾಜನಲ್ಲಿ ಭಕ್ತಿಯು ಹುಟ್ಟುವುದು. ॥ ೭ ॥ ಇದನ್ನು ಕೇಳುವ ಮಾತ್ರದಿಂದಲೂ ಮತ್ತು ಅನುಸರಿಸುವುದರಿಂದಲೂ ಯಜ್ಞಯಾಗಾದಿಗಳನ್ನು ಮಾಡಿದಷ್ಟು ಫಲವು ಬರುವುದು. ಅನಾಯಾಸದಿಂದ ಆಚರಿಸಬಹುದಾದ ಈ ವಿಧಿಯನ್ನು ದರಿದ್ರರೂ ಸುಲಭವಾಗಿ ಆಚರಿಸಬಹುದಾಗಿದೆ. ॥ ೮ ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣದವರಿಗೂ, ನಾಲ್ಕು ಆಶ್ರಮದಲ್ಲಿರುವವರಿಗೂ ತೀರ್ಥಯಾತ್ರೆ ಮಾಡುವ ಅಧಿಕಾರವಿದೆ. ॥ ೯ ॥ ತೀರ್ಥಯಾತ್ರೆ, ದಾನಾದಿಗಳು ಮತ್ತು ವ್ರತಾದಿಗಳನ್ನು ಗುರುಗಳ ಆಜ್ಞೆಯನ್ನು ಪಡೆದೇ ಮಾಡಬೇಕು. ಬ್ರಹ್ಮಚಾರಿಗಳಿಗೆ ಈ ಕಾರ್ಯದಲ್ಲಿ ಗುರುಗಳ ಅನುಮತಿಯಿಲ್ಲದೆ ಮಾಡುವ ಅಧಿಕಾರವು ಮತ್ತು ಸ್ವಾತಂತ್ರ್ಯವೂ ಇಲ್ಲ. ॥ ೧೦ ॥ ಯಜ್ಞಾದಿಗಳಲ್ಲಿ ಅಧಿಕಾರವಿಲ್ಲದವರೂ, ಯಜ್ಞಮಾಡಲು ಶಕ್ತಿಯಿಲ್ಲದವರೂ ಅಗ್ನಿಹೋತ್ರಿಗಳಾಗಿರತಕ್ಕವರೂ ಸಹ ತಮ್ಮ ತಮ್ಮ ಪತ್ನಿಯರೊಡನೆ ವಿಧಿಪೂರ್ವಕವಾಗಿ ಯಾತ್ರೆಗೆ ತೆರಳಬಹುದು. ॥ ೧೧ ॥ ಪತ್ನಿಯಿಂದೊಡಗೂಡಿ ಪ್ರಾಯಶ್ಚಿತ್ತವಿಧಿಗಳಾದ ಮೇಲೆ ಯಾತ್ರೆ ಮಾಡಬಹುದು. ಯಜ್ಞಾಧಿಕಾರ ಇಲ್ಲದಿರುವ ವಿಧುರನು ಪ್ರಾಯಶ್ಚಿತ್ತದ ನಂತರ ತೀರ್ಥಯಾತ್ರೆಯನ್ನು ಕೈಗೊಳ್ಳಬಹುದು. ॥ ೧೨ ॥ ದೇವಋಣ, ಪಿತೃಋಣ, ಋಷಿಋಣ ಎಂಬ ಋಣತ್ರಯಗಳಿಂದ ಮುಕ್ತನಾಗಿ ತನ್ನ ಹೆಂಡತಿಯನ್ನು ನೋಡಿಕೊಳ್ಳಲು ಮಗನಿಗೆ ಒಪ್ಪಿಸಿ ವಾನಪ್ರಸ್ಥನಾಗಿ ವನದಲ್ಲಿರುವವನೂ ಕೂಡ ತೀರ್ಥಯಾತ್ರೆಗೆ ಹೊರಡಬಹುದು. ॥ ೧೩ ॥ ಗ್ರಾಮ, ಕಸಬ, ವನ, ತೀರ್ಥಸ್ಥಳಗಳು, ದೊಡ್ಡಪಟ್ಟಣಗಳು ಇತ್ಯಾದಿಗಳಲ್ಲಿ ಸಂಚಾರ ಮಾಡುತ್ತಿರುವ ಯತಿಗಳೂ ಕೂಡ ತೀರ್ಥಯಾತ್ರೆಯನ್ನು ಮಾಡಬಹುದು. ॥ ೧೪ ॥ ಸರ್ವಕರ್ಮಗಳ ಮತ್ತು ವಿಧಿವಿಧಾನಗಳ ಅರಿವಿರುವ ರಾಜನೂ ಕೂಡಾ ತನ್ನ ಪುರೋಹಿತರಿಂದ ಕೂಡಿ ತೀರ್ಥಯಾತ್ರೆಗೆ ಹೊರಡಬಹುದು. ॥ ೧೫ ॥ ಸ್ತ್ರೀಯರಿಗೆ ಸ್ವತಂತ್ರವಾಗಿ ಕಾರ್ಯಗಳಲ್ಲಿ ಸ್ವಾತಂತ್ರ್ಯವಿಲ್ಲವಾದ ಕಾರಣ ಪತಿಸೇವೆಗೆ ಬಾಧೆಯಾಗದಂತೆ ಗೃಹಿಣಿಯೂ ಮತ್ತು ಮಗನ ಅನುಮತಿಯಿಂದ ವಿಧವೆಯು ಸಹ ತೀರ್ಥಯಾತ್ರೆ ಮಾಡಬಹುದು. ॥ ೧೬ ॥ ಸುಖದುಃಖ ಲಾಭಾಲಾಭ, ಜಯಾಜಯವೆಂಬ ದ್ವಂದ್ವಗಳ ಹಿಡಿತದಿಂದ ಬಿಡುಗಡೆಯನ್ನು ಹೊಂದಿ ಕೇವಲ ಬ್ರಹ್ಮಧ್ಯಾನದಲ್ಲಿಯೇ ಮುಖ್ಯವಾದ ನಿಷ್ಠೆಯನ್ನು ಹೊಂದಿರುವ ಮತ್ತು ಜಗತ್ತಿನ ಎಲ್ಲ ತತ್ವಗಳನ್ನೂ ಸಾರಾಸಾರವಾಗಿ ತಿಳಿದಿರುವವನು ತೀರ್ಥಯಾತ್ರೆಗೆ ತೆರಳಬೇಕಿಲ್ಲ. ॥ ೧೭ ॥ ಭೂರಿದಕ್ಷಿಣಾದಿಗಳಿಂದ ಆಚರಿಸಲ್ಪಟ್ಟ ನಾನಾವಿಧವಾದ ಅತಿ ಶ್ರೇಷ್ಠವಾದ ಯಜ್ಞಗಳನ್ನು ಆಚರಿಸಿದವರಿಗೂ ಸಿಗದ ಫಲವು ತೀರ್ಥಯಾತ್ರೆಯಲ್ಲಿದೆ. ॥ ೧೮ ॥ ಏನೂ ಜ್ಞಾನವಿಲ್ಲದ ಅಜ್ಞಾನಿಯೂ ಕೂಡ ತೀರ್ಥಯಾತ್ರೆಯನ್ನು ಮಾಡುವುದರಿಂದ ಸರ್ವ ಅಭೀಷ್ಟಗಳಿಂದ ಕೂಡಿದವನಾಗಿ ಸ್ವರ್ಗಲೋಕದಲ್ಲಿ ವಿಜೃಂಭಿಸುತ್ತಾನೆ. ॥ ೧೯ ॥ ತೀರ್ಥಕ್ಷೇತ್ರದಲ್ಲಿ ಮೂರು

ದಿವಸಗಳಾದರೂ ವಾಸಮಾಡಲೇಬೇಕೆಂಬ ನಿಯಮವನ್ನು ಪಾಲಿಸದವನು, ಬಂಗಾರ ಮತ್ತು ಆಕಳುಗಳನ್ನು ದಾನ ಮಾಡದೆ ಇರುವವನು ದರಿದ್ರನಾಗಿ ಹುಟ್ಟುತ್ತಾನೆ. ॥ ೨೦ ॥ ಯಾರ ಕೈಗಳು, ಕಾಲ್ಗಳು, ಮನಸ್ಸು ಚೆನ್ನಾಗಿ ನಿಯತವಾಗಿವೆಯೋ, ವಿದ್ಯಾ, ತಪಸ್ಸು ಹಾಗೂ ಕೀರ್ತಿವುಳ್ಳವನೋ ಅವನು ತೀರ್ಥದ ಫಲವನ್ನು ಪಡೆಯುತ್ತಾನೆ. ॥ ೨೧ ॥ ದಾನಸ್ವೀಕಾರವನ್ನು ಮಾಡದಿರುವುದು, ಯಾರನ್ನೂ ಹೊಡೆದು ಬಡಿದು ಮಾಡದಿರುವುದು, ದೃಷ್ಟಿಯಿಟ್ಟು ನೋಡಿ ದಾರಿಯಲ್ಲಿ ನಡೆಯುವುದು, ಬ್ರಾಹ್ಮಣರು, ತೀರ್ಥಕ್ಷೇತ್ರಗಳು ಮತ್ತು ವೇದಗಳು ಇವುಗಳಲ್ಲಿ ತೀವ್ರವಾದ ಆಸಕ್ತಿ ತೀರ್ಥಕ್ಷೇತ್ರಗಳ ಮಾಹಾತ್ಮ್ಯೆಯ ತಿಳುವಳಿಕೆ, ಕೃಛ್ರಚಾಂದ್ರಾಯಣಾದಿ ವ್ರತಗಳ ಆಚರಣೆ ಮತ್ತು ಸದಾಚಾರಸಂಪನ್ನತೆ ಇವುಗಳಿಂದ ಕೂಡಿದವರಿಗೆ "ಸಂಯಮ" ಇದೆ ಎಂದು ತಿಳಿಯಬೇಕು. ಈ ರೀತಿಯಾದ ಸಂಯಮವನ್ನು ಹೊಂದಿದವರಿಗೆ ತೀರ್ಥಯಾತ್ರೆಯ ಫಲವು ಲಭ್ಯವಾಗುವುದು. ॥ ೨೨-೨೩ ॥ ದಾನ ಮಾಡುವುದು, ದಯಾಶೀಲತೆ, ದೇವರು ಕೊಟ್ಟಷ್ಟರಿಂದಲೇ ತೃಪ್ತನಾಗುವುದು ಮತ್ತು ಅಹಂಕಾರವನ್ನು ಬಿಡುವುದು, ಈ ರೀತಿಯಿರುವವರಿಗೆ ತೀರ್ಥಯಾತ್ರೆಯ ಫಲವು ಲಭಿಸುವುದು. ॥ ೨೪ ॥ ಒಳ್ಳೆಯ ಕಾರ್ಯಗಳಲ್ಲಿ ಶ್ರದ್ಧೆಯುಳ್ಳವನು ವೈಷ್ಣವೇತರ ವ್ಯಾಪಾರಗಳನ್ನು ಆರಂಭಮಾಡದೇ ಇರುವವನು, ಮಿತವಾಗಿ ಆಹಾರ ಸ್ವೀಕರಿಸುವವನು, ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವವನು ಮತ್ತು ಎಲ್ಲ ಬಗೆಯ ಸಂಗಗಳಿಂದಲೂ ದೂರವಿರುವವನು, ಇಂಥವನಿಗೆ ತೀರ್ಥಯಾತ್ರೆಯ ಫಲವು ಲಭ್ಯವಾಗುವುದು. ॥ ೨೫ ॥ ಯಾರ ಮನಸ್ಸು ಎಲ್ಲ ಪ್ರಾಣಿಗಳ ಬಗ್ಗೆ ಕನಿಕರದಿಂದ ಕರಗುತ್ತದೋ ಮತ್ತು ಯಾರಿಗೆ ಮಾಡಬೇಕಾದ್ದು ಮತ್ತು ಮಾಡಬಾರದ್ದು ಇವುಗಳ ವಿವೇಚನೆಯಿದೆಯೋ ಅಂತಹವರಿಗೆ ತೀರ್ಥಯಾತ್ರೆಯ ಫಲವು ಸಿಗುವುದು. ॥ ೨೬ ॥ ಯಾರು ಇತರರಲ್ಲಿ ಮಿಥ್ಯಾಪವಾದವನ್ನು ಹೊರಿಸದಿರುವವರೋ, ಮತ್ತೊಬ್ಬರಲ್ಲಿರುವ ಸದ್ಗುಣಗಳನ್ನು ಯಾರು ಎತ್ತಿ ಹೇಳುವರೋ ಮತ್ತು ಭಗವಂತನಿಗೆ ಸಮರ್ಪಿತವಾದ ಬುದ್ಧಿಯು ಯಾರಿಗೆ ಇದೆಯೋ ಇಂತಹವರಿಗೆ ತೀರ್ಥಯಾತ್ರೆಯ ಫಲವು ಲಭ್ಯವಾಗುವುದು. ॥ ೨೭ ॥ ತೀರ್ಥಯಾತ್ರೆಯಿಂದ ಪಾಪಿಗಳಿಗೆ ಪಾಪಪರಿಹಾರವಾಗುವುದೇ ಫಲವು. ಆದರೆ ಶುದ್ಧಜೀವಿಗಳಿಗೆ ಯಥೋಚಿತವಾಗಿ ಕ್ಷೇತ್ರಮಾಹಾತ್ಮ್ಯೆಯಲ್ಲಿ ಉಕ್ತವಾದ ಫಲವು ದೊರಕುವುದು. ॥ ೨೮ ॥ ಈ ರೀತಿಯಾಗಿ ಸರ್ವವನ್ನೂ ತಿಳಿದುಕೊಂಡು ವಿಧಿಪೂರ್ವಕವಾಗಿ ತನ್ನ ಶಕ್ತಿ ಹಾಗೂ ವಿತ್ತಕ್ಕೆ ಅನುಸಾರವಾಗಿ ಯಾತ್ರೆಯನ್ನು ಮಾಡತಕ್ಕದ್ದು. ಅವನಿಗೆ ನಾಲ್ಕರಷ್ಟು ಫಲಗಳು ದೊರಕುವುವು. ॥ ೨೯ ॥ ಮೊದಲು, ಪಂಚಾಂಗದಿಂದ ಶಾಸ್ತ್ರದ ಪ್ರಕಾರ ದಿನಶುದ್ಧಿಯನ್ನು ನೋಡಿ ಚಂದ್ರಬಲ, ತಾರಾಬಲ, ಗ್ರಹನಕ್ಷತ್ರಾದಿಗಳ ಬಲಾಬಲಗಳನ್ನು ವಿಚಾರ ಮಾಡಿ ಪ್ರಯಾಣದ ದಿನವನ್ನು ಗೊತ್ತು ಮಾಡಬೇಕು. ಗ್ರಹಗಳ ಮೌಢ್ಯವನ್ನು ವಿಚಾರ ಮಾಡಬೇಕಾದ್ದಿಲ್ಲ. ॥ ೩೦ ॥ ಗಂಗೆಯಲ್ಲಿಯೂ, ಯಮುನೆಯಲ್ಲಿಯೂ ಮತ್ತು ಗೋದಾವರೀ ಕೃಷ್ಣಾನದಿಗಳಲ್ಲಿಯೂ ಶ್ರೀಶೈಲಕ್ಷೇತ್ರದಲ್ಲಿ ಅಧಿಕಮಾಸವು ಗುರುಶುಕ್ರರ ಮೌಢ್ಯವೂ ದೋಷಕಾರಕವಾಗುವುದಿಲ್ಲ. ॥ ೩೧ ॥ ಪ್ರಯಾಣದ ದಿವಸ ನಿಶ್ಚಯವಾದ ಮೇಲೆ, ಅದಕ್ಕೆ ಮನಸ್ಸಿನಲ್ಲಿ ದೀಕ್ಷಾಸ್ವೀಕಾರವನ್ನು ಮಾಡಿದ ನಂತರ, ಮೊದಲನೆಯ ದಿವಸ ಒಪ್ಪತ್ತು ಭೋಜನ ಮಾಡಬೇಕು, ಎರಡನೇ ದಿನ ಕೇವಲ ಹವಿಸ್ಸನ್ನು ತಿನ್ನಬೇಕು. ಮೂರನೇ ದಿವಸ ಉಪವಾಸ ಮಾಡಬೇಕು ಮತ್ತು ಕ್ಷೌರವನ್ನು ಮಾಡಿಸಿಕೊಳ್ಳಬೇಕು. ॥ ೩೨ ॥ ನಾಲ್ಕನೆಯ ದಿವಸ ಉಷಃಕಾಲದಲ್ಲಿಯೇ ಎದ್ದು ಸ್ನಾನಾದಿಗಳ ನಂತರ ಆಹ್ನಿಕಾದಿಗಳನ್ನು ಮಾಡಿ ಭಕ್ತಿಯಿಂದ ಶ್ರೀ ಗಣಪತಿಯನ್ನು, ನಂತರ ತಮ್ಮ ತಮ್ಮ

ಇಷ್ಟದೇವತೆಯನ್ನು ಪೂಜೆ ಮಾಡಬೇಕು. ॥ ೩೩ ॥ ನಂತರ ಪಾರ್ವಣವಿಧಾನದಿಂದ ತೀರ್ಥ ಶ್ರಾದ್ಧಕ್ಕೆ ಸಂಬಂಧಪಟ್ಟ ದೇವತೆಗಳನ್ನು ಸಂತೋಷಗೊಳಿಸಿ ಘೃತಶ್ರಾದ್ಧವನ್ನು ಆಚರಿಸಬೇಕು. ಈ ಘೃತಶ್ರಾದ್ಧ ಮಾಡುವಾಗ ತುಪ್ಪದಿಂದ ಮಾಡಿಸಲ್ಪಟ್ಟ ಭಕ್ಷ್ಯಗಳಿಂದ ಬ್ರಾಹ್ಮಣರುಗಳನ್ನು ಪೂಜಿಸಿ ಭೋಜನ ಮಾಡಿಸಬೇಕು. ಆ ದಿನವೇ ಯಾತ್ರಿಕನ ವೇಷವನ್ನು ಧರಿಸಿ, ತೀರ್ಥಯಾತ್ರೆಯ ಸಂಕಲ್ಪವನ್ನು ಮಾಡಬೇಕು. ॥ ೩೪-೩೫ ॥ ಶ್ರೇಷ್ಠರೂ, ಜ್ಞಾನವಯೋವೃದ್ಧರೂ ಮತ್ತು ಹಿತೈಷಿಗಳೂ ಆಗಿರತಕ್ಕ ಗ್ರಾಮವಾಸಿಗಳಿಂದ ನಮಸ್ಕಾರಮಾಡಿ ಯಾತ್ರೆಗಾಗಿ ಆಜ್ಞೆಯನ್ನು ಸ್ವೀಕಾರ ಮಾಡಿ, ಒಳ್ಳೆಯ ಶುಭಮುಹೂರ್ತದಲ್ಲಿ ಮನೆಯಿಂದ ಹೊರಟು ಗ್ರಾಮದ ಹೊರಗೆ ನಡೆದು ಬರಬೇಕು. ॥ ೩೬ ॥ ಹೀಗೆ ಇಡೀ ಗ್ರಾಮವನ್ನು ಪ್ರದಕ್ಷಿಣೆ ಮಾಡಿ ಒಂದು ಕ್ರೋಶ ದೂರವಾದರೂ ನಡೆದು ಅನಂತರ ಶುಚಿರ್ಭೂತನಾಗಿ ಘೃತಶ್ರಾದ್ಧದ ಶೇಷದಿಂದ ಪಾರಣೆ ಮಾಡಬೇಕು. ॥ ೩೭ ॥ ಯಾತ್ರೆ ಮಾಡಿ ಹಿಂತಿರುಗುವಾಗಲೂ ಇದೇ ರೀತಿಯಾಗಿ ಪಾರ್ವಣ ಶ್ರಾದ್ಧ ಘೃತಶ್ರಾದ್ಧಾದಿಗಳನ್ನು ಮಾಡಿ ಬ್ರಾಹ್ಮಣ ಮುತ್ತೈದೆಯರ ಭೋಜನವನ್ನು ಮಾಡಿಸಬೇಕು. ಹೀಗೆ ಮಾಡುವದರಿಂದ ತೀರ್ಥಯಾತ್ರೆಯ ಪೂರ್ಣಫಲವು ಲಭಿಸುವುದು. ॥ ೩೮ ॥ ಹೇ ಸನಕಾದಿ ಮುನಿಗಳೇ ! ಇನ್ನು ಮುಂದೆ ತೀರ್ಥಯಾತ್ರೆಯಲ್ಲಿರುವವರು ದಾರಿಯಲ್ಲಿ ಅನುಸರಿಸಬೇಕಾಗಿರುವ ನಿಯಮಗಳನ್ನು ಹೇಳುವೆನು. ಇದು ಯಾತ್ರಿಕರೆಲ್ಲರಿಗೂ ಉಪಯುಕ್ತವಾದುದು. ಇದನ್ನು ತಿಳಿದು ಇದರಂತೆ ಆಚರಣೆ ಮಾಡುವುದರಿಂದ ಯಾತ್ರೆಯ ಫಲವು ಚೆನ್ನಾಗಿ ಸಿಗುವುದು. ॥ ೩೯ ॥ ದಿವಸವೂ ಉಷಃಕಾಲದಲ್ಲಿಯೇ ಸ್ನಾನಾದಿಗಳನ್ನು ಮಾಡಿ ಶುಚಿರ್ಭೂತನಾಗಿ ನಿತ್ಯಕ್ರಿಯೆಗಳನ್ನು ದೈನಂದಿನ ಆಹ್ನಿಕಾದಿಗಳನ್ನು ತಪ್ಪದೆ ಮಾಡಬೇಕು. ಅಸ್ಪೃಶ್ಯರ ಸ್ಪರ್ಶವಾಯಿತೆಂದು ತಿಳಿದರೆ ಪುನಃ ಸ್ನಾನ ಮಾಡಿ ಶುದ್ಧರಾಗಬೇಕು. ॥ ೪೦ ॥ ಯಾತ್ರಿಕನು ಕಾಮಕ್ರೋಧಗಳನ್ನು ಬಿಟ್ಟು ಕ್ಷಮಾಗುಣಸಂಪನ್ನನಾಗಿ ಪರಮಾತ್ಮನಲ್ಲಿ ಆಸಕ್ತಿಯನ್ನೂ, ಇಂದ್ರಿಯನಿಗ್ರಹವನ್ನೂ ಹೊಂದಿರಬೇಕು. ದುಷ್ಟಭಾವಗಳನ್ನು ಬಿಡಬೇಕು, ಶೀತೋಷ್ಣ ಲಾಭಾಲಾಭ, ಜಯಾಪಜಯ, ಮಾನಾಪಮಾನ ಮತ್ತು ಕಷ್ಟಸುಖಗಳ ಸಂಬಂಧವಾದ ದ್ವಂದ್ವ ಭಾವನೆಗಳನ್ನು ಬಿಡಬೇಕು. ಪರಮಾತ್ಮನಲ್ಲಿ ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢಸ್ನೇಹ ವಿರಬೇಕು. ॥ ೪೧ ॥ ಯಾತ್ರಿಕನು ಸುಳ್ಳು ಹೇಳಬಾರದು, ಬ್ರಹ್ಮಚರ್ಯವನ್ನು ಪಾಲಿಸಬೇಕು, ದಾನಾದಿಗಳನ್ನು ಸ್ವೀಕರಿಸಬಾರದು, ಯಾತ್ರಾವ್ರತದಲ್ಲಿ ದಾರ್ಢ್ಯವಿರಬೇಕು. ಅಹಂಕಾರವನ್ನು, ದುರಾಸೆಯನ್ನು ಬಿಡಬೇಕು. ಯಾವಾಗಲೂ ಭಗವನ್ನಾಮಗಳನ್ನು ಕೀರ್ತನೆ ಮಾಡುತ್ತಿರಬೇಕು. ॥ ೪೨ ॥ ಪರನಿಂದೆ, ಚಾಡಿಯನ್ನು ಹೇಳುವುದು ಇವುಗಳನ್ನು ಬಿಡಬೇಕು. ಸತ್ಯವಾದಿ ಯಾಗಿರಬೇಕು. ಮಿತಭೋಜನ ಮಾಡುವವನಾಗಿ, ಒಪ್ಪತ್ತು ಮಾತ್ರ ಭೋಜನ ಮಾಡಬೇಕು, ನೆಲದ ಮೇಲೆ ಮಲಗಬೇಕು ಮತ್ತು ಪಾದರಕ್ಷೆಗಳಿಲ್ಲದೆ ಪ್ರಯಾಣ ಮಾಡಬೇಕು. ॥ ೪೩ ॥ ತಲೆಗೆ ರುಮಾಲನ್ನು ಧರಿಸಬಾರದು, ಆಯುಧಗಳನ್ನು ಧರಿಸದೆ, ವ್ಯರ್ಥಾಲಾಪ ಮಾಡದೆ, ಅಹಂ ಮಮಕಾರಗಳನ್ನು ಬಿಟ್ಟು ದೊಡ್ಡಸ್ತಿಕೆಯಿಲ್ಲದೆ ಪರಿಶುದ್ಧನಾಗಿದ್ದು ಶಾಂತತೆಯಿಂದ ಯಾತ್ರೆ ಮಾಡಬೇಕು. ॥ ೪೪ ॥ ಜಾತಾಶೌಚ, ಮೃತಾಶೌಚರೂಪವಾದ ಎರಡು ವಿಧವಾದ ಮೈಲಿಗೆಯಾಗಲೀ, ರಜಸ್ವಲಾಸಂಬಂಧವಾದ ಮೈಲಿಗೆಯಾಗಲೀ ಉಂಟಾದರೆ ಮೈಲಿಗೆಯು ತೀರುವವರೆಗೆ ಒಂದೇ ಜಾಗದಲ್ಲಿದ್ದು ಅದು ತೀರಿದ ಮೇಲೆ ಸ್ನಾನಾದಿಗಳಿಂದ ಶುಚಿಯಾಗಿ ನಂತರ ಪ್ರಯಾಣವನ್ನು ಮುಂದುವರೆಸಬೇಕು. ॥ ೪೫ ॥ ಯಾತ್ರೆಗಾಗಿ ಸಂಕಲ್ಪ ಮಾಡಿದವನು ಪುನಃ

ಅದನ್ನು ಬದಲಾಯಿಸಬಾರದು. ಅನಿವಾರ್ಯದ ಸಂಕಟ ಪರಿಸ್ಥಿತಿ ಒದಗಿ ಒಂದು ವೇಳೆ ಯಾತ್ರೆಯನ್ನು ಬದಲಾಯಿಸುವ ಪ್ರಸಂಗ ಬಂದಾಗ ಈ ಬಗ್ಗೆ ಪ್ರಾಯಶ್ಚಿತ್ತವನ್ನು ಮಾಡಿ ಕೊಳ್ಳಬೇಕು. ॥ ೪೬ ॥ ಪ್ರಯಾಣಮಧ್ಯದಲ್ಲಿ ಅನಾರೋಗ್ಯದಿಂದಾಗಲೀ ಅಥವಾ ಏಕಾದಶ್ಯಾದಿಗಳಲ್ಲಿ ಆಚರಿಸಿದ ಉಪವಾಸಾದಿಗಳ ಕಾರಣದಿಂದ ಯಾತ್ರಿಕನಿಗೆ ಮರಣಪ್ರಾಪ್ತಿ ಆದರೆ ಅವನು ತಾನು ಕೈಗೊಂಡ ಯಾತ್ರೆಯ ತೀರ್ಥದೇವತೆಯ ಸಾಮರ್ಥ್ಯದಿಂದ ಋಷಿಮಂಡಲಕ್ಕೆ ಹೋಗಿ ಸೇರುವನು. ॥ ೪೭ ॥ ಯಾತ್ರಿಕನು ನಡೆದೇ ಹೋಗಬೇಕು. ಸಾಮರ್ಥ್ಯವಿದ್ದರೆ ಒಂದು ಅಥವಾ ಎರಡು ಎರಡು ಯೋಜನ ದೂರಗಳನ್ನು ನಿತ್ಯವೂ ನಡೆದು ಯಾತ್ರೆಯನ್ನು ಪೂರ್ಣ ಮಾಡಬೇಕು. ॥ ೪೮ ॥ ಯಾರು ಎತ್ತಿನ ಬಂಡಿಯಲ್ಲಿ ಹೋಗುವರೋ ಅವರಿಗೆ ಗೋಹತ್ಯೆಯ ಪಾಪ ಬರುವುದು ಮತ್ತು ಅವನು ಮಾಡಿ ಸಂಪಾದಿಸಿರುವ ಪುಣ್ಯವೆಲ್ಲವೂ ಸುಟ್ಟು ಬೂದಿ ಯಾಗುವುದು. ॥ ೪೯ ॥ ಎತ್ತಿನ ಬಂಡಿಯಲ್ಲಿ ಪ್ರಯಾಣ ಮಾಡಿ ಯಾತ್ರೆ ಮಾಡುವವನು ಆ ಪಾಪ ರಾಶಿಯನ್ನು ಮೊದಲೇ ಗಳಿಸಿಟ್ಟುಕೊಳ್ಳುವನು. ಇಂತಹವನು ಬಿಡುವ ತರ್ಪಣವನ್ನು ಕೊಡುವ ಪಿಂಡವನ್ನೂ ಪಿತೃಗಳು ಸ್ವೀಕಾರ ಮಾಡುವುದಿಲ್ಲ. ॥ ೫೦ ॥ ಎತ್ತಿನ ಬಂಡಿಯ ಪ್ರಯಾಣವನ್ನು ಸರ್ವಥಾ ಮಾಡಬಾರದು, ನಡೆದು ಪ್ರಯಾಣ ಮಾಡಲು ಶಕ್ತಿಯಿಲ್ಲದಿದ್ದರೆ ಕುಮರೆ, ಕುದುರೆಯ ಬಂಡಿ, ಆನೆಯಿಂದ ಎಳೆಯಲ್ಪಟ್ಟ ಗಾಡಿ, ಪಲ್ಲಕ್ಕಿಗಳನ್ನು, ನೀರಿನಲ್ಲಿ ಹೋಗುವಾಗ ದೋಣಿ ಮತ್ತು ನೌಕೆಗಳನ್ನು ಉಪಯೋಗಿಸಬಹುದು. ॥ ೫೧-೫೨ ॥ ಪಾದರಕ್ಷೆಗಳಿಲ್ಲದೆ, ಛತ್ರ, ಊರುಗೋಲು ಮುಂತಾದವುಗಳ ಸಹಾಯವಿಲ್ಲದೇ ನಡೆದು ಹೋಗುವ ಯಾತ್ರಿಕನಿಗೆ ಪೂರ್ಣಫಲವು ಸಿಗುವುದು. ಆಗ ತಾನೇ ಗುರುಕುಲದಿಂದ ವಿದ್ಯಾಭ್ಯಾಸ ಮಾಡಿಕೊಂಡು ಹಿಂದಿರುಗಿದವನೂ, ಆಗ ತಾನೇ ವಿವಾಹಿತನಾದವನು ಈ ರೀತಿಯಾದ ತೀರ್ಥಯಾತ್ರೆಗೆ ಸಾಹಸ ಮಾಡಬಾರದು. ॥ ೫೩ ॥

॥ ಮೂವತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನಚತ್ವಾರಿಂಶೋಽಧ್ಯಾಯಃ ॥ ೩೯ ॥

ಶೇಷ ಉವಾಚ—

ಗಚ್ಛನ್ನೇವಂ ವಿಧಾನೇನ ಮಧ್ಯೇಮಾರ್ಗಂ ನದೀ ಯದಿ ।
ಪ್ರಾಪ್ನುಯಾತ್ತಾಂ ಸಮುತ್ತೀರ್ಯ ಸ್ನಾನಂ ಸಂಧ್ಯಾದಿಕಂ ಚರೇತ್ ॥ ೧ ॥
ಸರಸ್ವತೀಂ ನದೀಂ ತ್ವರ್ವಾಕ್ ಸ್ನಾತ್ವೈವಾತಿಕ್ರಮೇತ್ಕೃತೀ ।
ಯತ್ರ ಕ್ವಾಪ್ಯುಭಯತ್ರಾಪಿ ಸ್ನಾನಂ ತೀರ್ಥಾದಿಸಂಭವೇ ॥ ೨ ॥
ಉದ್ದಿಷ್ಟತೀರ್ಥಪ್ರಾಪ್ತೌ ಚ ವಸೇತ್ ತಸ್ಮಾತ್ತು ಯೋಜನೇ ।
ಸುಮುಹೂರ್ತಂ ವಿಚಾರ್ಯಾಥ ಚಂದ್ರತಾರಾನುಕೂಲತಾಮ್ ॥ ೩ ॥
ಅಜಾತನಿಯಮಃ ಪ್ರಾಜ್ಞಸ್ತೋಽಪಿ ತಸ್ಮಿನ್ದಿನೇ ಶುಭೇ ।
ನಿರುಷ್ಣೀಷೋ ನಿರಾಹಾರೋ ನಿರುಪಾನತ್ಕ ಏವ ಚ ॥ ೪ ॥
ಶಿರಸಾ ಮನಸಾ ವಾಚಾ ನಮನ್ಧ್ಯಾಯಂಸ್ತುವನ್ಬಹು ।
ತತ್ತೀರ್ಥದೇವತಾಂ ಭಕ್ತ್ಯಾ ಪ್ರವಿಶೇತ್ತೀರ್ಥಮಂಡಲೇ ॥ ೫ ॥
ಇತಿ ಸಾಧಾರಣೋ ಧರ್ಮಸ್ಸರ್ವತೀರ್ಥಪ್ರಯೋಜಕಃ ।
ತೀರ್ಥರಾಜೇ ವಿಶೇಷೋ ಯಸ್ಸ ಇದಾನೀಂ ನಿರೂಪ್ಯತೇ ॥ ೬ ॥
ತೀರ್ಥೇ ದೃಷ್ಟಿಪಥಂ ಯಾತೇ ಸಾಷ್ಟಾಂಗಂ ಪ್ರಣಿಪತ್ಯ ಚ ।
ಉತ್ಥಿತ್ವಾ ಲೋಲಿನೀಂ ಭೂಮಾವುತ್ಥಾಯಾಂಜಲಿಮಾಚರೇತ್ ॥ ೭ ॥
ಫಲಪುಷ್ಪಾದಿಸಾಮಗ್ರೀಂ ಗೃಹೀತ್ವಾಥ ತಟಂ ಗತಃ ।
ಪುನಃ ಪ್ರಣಮ್ಯ ಸಾಷ್ಟಾಂಗಂ ತ್ರಿವೇಣೀಂ ಪ್ರಾರ್ಥಯೇತ್ತತಃ ॥ ೮ ॥
ವಿಷ್ಣುಪಾದೋದ್ಭವೇ ದೇವಿ ಮಾಧವಪ್ರಿಯದೇವತೇ ।
ದರ್ಶನೇ ತವ ಪಾಪಂ ಮೇ ದಹತ್ವಗ್ನಿರಿವೇಂಧನಮ್ ॥ ೯ ॥
ಲೋಕತ್ರಯೇಽಪಿ ತೀರ್ಥಾನಿ ಯಾನಿ ಸಂತಿ ಚ ದೇವತಾಃ ।
ತತ್ಸ್ವರೂಪಾ ತ್ವಮೇವಾಸಿ ಪಾಹಿ ನಃ ಪಾಪಸಂಕಟಾತ್ ॥ ೧೦ ॥
ಗಂಗೇ ದೇವಿ ನಮಸ್ತುಭ್ಯಂ ಶಿವಚೂಡಾವಿರಾಜಿತೇ ।
ಶರಣತ್ರಾಣಸಂಪನ್ನೇ ತ್ರಾಹಿ ಮಾಂ ಶರಣಾಗತಮ್ ॥ ೧೧ ॥
ಸ್ತುತ್ವೈವಂ ಜಾಹ್ನವೀಂ ಪಶ್ಚಾತ್ಕುರ್ವೀತ ಯಮುನಾಸ್ತವಮ್ ।
ತೇನ ಸಾ ಯಮುನಾ ದೇವೀ ಪ್ರತ್ಯಕ್ಷಾ ಜಾಯತೇ ನೃಣಾಮ್ ॥ ೧೨ ॥
ಇಂದ್ರನೀಲೋತ್ಪಲಾಕಾರೇ ಇನಕನ್ಯೇ ಯಶಸ್ವಿನಿ ।
ಸರ್ವದೇವಸ್ತುತೇ ಮಾತರ್ಯಮುನೇ ತ್ವಾಂ ನಮಾಮ್ಯಹಮ್ ॥ ೧೩ ॥
ಸರ್ವತೀರ್ಥಕೃತಾವಾಸೇ ಸರ್ವಕಾಮವರಪ್ರದೇ ।
ಸರ್ವಪಾಪಕೃತಿಧ್ವಂಸೇ ನಮಸ್ತೇ ವಿಶ್ವಪೂಜಿತೇ ॥ ೧೪ ॥

ಸಂಜ್ಞಾಗರ್ಭಸಮುದ್ಭೂತೇ ಸಂಜ್ಞೋಚ್ಚಾರಣಪುಣ್ಯದೇ ।
ವಿಷ್ಣುಪ್ರಿಯತಮೇ ದೇವಿ ಯಮಜ್ಯೇಷ್ಠೇ ನಮೋ ನಮಃ ॥ ೧೫ ॥
ಸ್ತುತ್ವೈವಂ ಯಮುನಾಂ ದೇವೀಂ ಭಕ್ತಿಭಾವಿತಚೇತಸಾ ।
ಸರಸ್ವತೀಂ ಸ್ತುವೀತಾಥ ಗುಪ್ತರೂಪಾಂ ಫಲಪ್ರದಾಮ್ ॥ ೧೬ ॥
ಪ್ರಜಾಪತಿಮುಖೋದ್ಭೂತೇ ಪ್ರಣತಾರ್ತಿಪ್ರಭಂಜನಿ ।
ಪ್ರಯಾಗಮಿಲಿತೇ ದೇವಿ ಸರಸ್ವತಿ ನಮೋಽಸ್ತು ತೇ ॥ ೧೭ ॥
ಪದ್ಮರಾಗದಲಾಭಾಸೇ ಪದ್ಮಗರ್ಭಾರುಣೇಕ್ಷಣೇ ।
ಪದ್ಮಮಾಲವಿನೀತಾಂಗೇ ಪಾಪಘ್ನ್ಯೈ ತೇ ನಮೋ ನಮಃ ॥ ೧೮ ॥
ವೀಣಾವಾದರಸಾಭಿಜ್ಞೇ ವೀಣಯಾ ಸಮಲಂಕೃತೇ ।
ಗೀತವೀಣಾರವೇ ಮಾತಃ ಪಾಹಿ ಮಾಂ ಶರಣಾಗತಮ್ ॥ ೧೯ ॥
ಏವಂ ಸರಸ್ವತೀಂ ಸ್ತುತ್ವಾ ಗಂಗಾಯಮುನಸಂಧಿಗಾಮ್ ।
ಸಮಷ್ಟ್ಯಾ ಪ್ರಾರ್ಥಯೇತ್ಪಶ್ಚಾತ್ತ್ರಿವೇಣೀಂ ತ್ರಾಣತತ್ಪರಾಮ್ ॥ ೨೦ ॥
ತ್ರಿವರ್ಣೇ ತ್ರ್ಯಂಬಕೇ ದೇವಿ ತ್ರಿವಿಧಾಘವಿನಾಶಿನಿ ।
ತ್ರಿಮಾರ್ಗೇ ತ್ರಿಗುಣೇ ತ್ರಾಹಿ ತ್ರಿವೇಣಿ ಶರಣಾಗತಮ್ ॥ ೨೧ ॥
ಸಂಸಾರಾನಲಸಂತಪ್ತಂ ಕಾಮಕ್ರೋಧಾದಿವೇಷ್ಟಿತಮ್ ।
ಪತಿತಂ ತ್ವತ್ಪದಾಬ್ಜೇ ಮಾಂ ಶೀತಲಂ ಕುರು ವೇಣಿಕೇ ॥ ೨೨ ॥
ತೀರ್ಥರಾಜೇ ಪ್ರಯಾಗೇಽಸ್ಮಿನ್ನಿತ್ಯಕ್ಷಾಸಿ ಜಗದ್ಧಿತೇ ।
ನಾನಾಜನ್ಮಕೃತಾಭ್ಯಾಸಾತ್ಪಾತಕಾದುದ್ಧರಸ್ವ ಮಾಮ್ ॥ ೨೩ ॥
ಸ್ತುತ್ವಾ ವೇಣೀಂ ಸ್ತುವೀತಾಥ ಮಹಾಕ್ಷಯ್ಯವಟಂ ಕೃತೀ ।
ಯಸ್ಯ ಸ್ತವನಮಾತ್ರೇಣ ಸ್ತುತಾಃ ಸರ್ವೇ ನ ಸಂಶಯಃ ॥ ೨೪ ॥
ಜಠರೇಽಖಿಲಮಾಧಾಯ ತ್ವಯಿ ಸ್ವಪಿತಿ ಮಾಧವಃ ।
ಕೃತ್ವಾ ಮುಖಾಂಬುಜೇ ಪಾದೌ ನಮೋಽಕ್ಷಯ್ಯವಟಾಯ ತೇ ॥ ೨೫ ॥
ತ್ವನ್ಮೂಲೇ ವಸತೇ ಬ್ರಹ್ಮಾ ತವ ಮಧ್ಯೇ ಜನಾರ್ದನಃ ।
ತ್ವದಗ್ರೇ ವಸತೇ ಶೂಲೀ ತಾದೃಶಂ ತ್ವಾಂ ನಮಾಮ್ಯಹಮ್ ॥ ೨೬ ॥
ಸೌವರ್ಣಾನಿ ದಲಾನ್ಯಸ್ಯ ಸಪ್ತಪಾತಾಲಗಾ ಜಟಾಃ ।
ಯಾವನ್ಮಂಡಲವಿಸ್ತಾರೋ ವಟರಾಜಾಯ ತೇ ನಮಃ ॥ ೨೭ ॥
ವಟರಾಜಮಿತಿ ಸ್ತುತ್ವಾ ಮಾಧವಂ ಕ್ಷೇತ್ರದೇವತಾಮ್ ।
ಪ್ರಾರ್ಥಯೇದ್ವಿಧಿವದ್ಭಕ್ತ್ಯಾ ಸಕಲಾರ್ಥಪ್ರದಂ ನೃಣಾಮ್ ॥ ೨೮ ॥
ನೀಲಜೀಮೂತಸಂಕಾಶ ಪೀತಕೌಶೇಯಭೂಷಿತ ।
ಪ್ರಯಾಗನಿಲಯ ಸ್ವಾಮಿನ್ವೇಣೀಮಾಧವ ತೇ ನಮಃ ॥ ೨೯ ॥

ಶಂಖಚಕ್ರಗದಾಪದ್ಮವಿಭೂಷಿತಚತುರ್ಭುಜ ।
ಚತುರ್ವರ್ಗಫಲಾಧಾರ ವೇಣೀಮಾಧವ ತೇ ನಮಃ ॥ ೩೦ ॥
ತ್ವತ್ಪಾದಪ್ರಣತಂ ಮಾಂ ತ್ವಂ ಕಮಲಶ್ರೀಮುಷಾ ದೃಶಾ ।
ಉದ್ಧರಸ್ವ ಮಹೋದಾರ ವೇಣೀಮಾಧವ ತೇ ನಮಃ ॥ ೩೧ ॥
ಬಧ್ವಾಂಜಲಿಶ್ಶಿರಸ್ಯೇವಂ ಮಾಧವಂ ಪ್ರಾರ್ಥ್ಯ ಭಕ್ತಿತಃ ।
ಪ್ರಣವೇನ ಜಲಂ ಸ್ಪೃಷ್ಟ್ವಾ ಪ್ರಾರ್ಥಯೇದ್ಭೈರವಾದಿಕಾನ್ ॥ ೩೨ ॥
ತೀರ್ಥಾದುದಕಮಾದಾಯ ತ್ಯಕ್ತ್ವಾ ಚಾಪಮಿತಾಂ ಭುವಮ್ ।
ಪಾಣಿಪಾದಾಸ್ಯಮುತ್ಕ್ಷಾಲ್ಯ ಗಂಡೂಷಾನ್ದ್ವಾದಶಾನ್ ಕ್ಷಿಪೇತ್ ॥ ೩೩ ॥
ಪುನಸ್ತೀರಂ ಸಮಾಗತ್ಯ ದ್ವಿರಾಚಮ್ಯ ಪವಿತ್ರಧೃಕ್ ।
ಗಂಧಾಕ್ಷತಫಲೈರ್ಯುಕ್ತೋ ಜಲೇನಾರ್ಘ್ಯಾಣಿ ನಿಕ್ಷಿಪೇತ್ ॥ ೩೪ ॥
ವಿಧಾತೃಕರಕೋದ್ಭೂತೇ ಭಾಗೀರಥ್ಯಘನಾಶಿನಿ ।
ತ್ರೈಲೋಕ್ಯವಂದಿತೇ ದೇವಿ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೩೫ ॥
ಗಭಸ್ತಿತನಯೇ ದೇವಿ ಯಮುನೇ ತ್ವಂ ಮಹಾನದಿ ।
ಋಷಿಸಿದ್ಧಸುರೈರ್ಜುಷ್ಟೇ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೩೬ ॥
ವಿರಿಂಚಿಕನ್ಯಕೇ ದೇವಿ ಬ್ರಹ್ಮರಂಧ್ರಕೃತಾಲಯೇ ।
ಸರಸ್ವತಿ ಜಗನ್ಮಾತರ್ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೩೭ ॥
ಏಕಾರ್ಣವೇ ಮಹಾಕಲ್ಪೇ ಸುಷುಪ್ತೋರ್ಮಾಧವಪ್ರಭೋಃ ।
ಪರ್ಯಂಕ ವಟರಾಜ ತ್ವಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೩೮ ॥
ವೇಣೀಮಾಧವ ಸರ್ವಜ್ಞ ಭಕ್ತೇಪ್ಸಿತಫಲಪ್ರದ ।
ಸಫಲಾಂ ಕುರು ಮೇ ಯಾತ್ರಾಂ ಗೃಹಾಣಾರ್ಘ್ಯಂ ನಮೋಽಸ್ತು ತೇ॥ ೩೯ ॥
ಪುನರಾಚಮ್ಯ ಸಂಕಲ್ಪ್ಯ ಸಚ್ಚೈಲಂ ಮಂತ್ರವರ್ಜಿತಮ್ ।
ಸ್ನಾನಂ ಕೃತ್ವಾ ಮೌಸಲಾಖ್ಯಂ ಮಹಾಸಂಕಲ್ಪಮಾಚರೇತ್ ॥ ೪೦ ॥

॥ ಇತಿ ಏಕೋನಚತ್ವಾರಿಂಶೋಽಧ್ಯಾಯಃ ॥

॥ ಮೂವತ್ತೊಂಬತ್ತನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಇದುವರೆಗೆ ಹೇಳಿದ ವಿಧಾನಗಳನ್ನೆಲ್ಲಾ ಗಮನಿಸಿಕೊಳ್ಳುತ್ತಾ ಹೋಗುತ್ತಿರುವಾಗ ದಾರಿಯಲ್ಲಿ ನದಿಯು ಸಿಕ್ಕಿದರೆ, ನದಿಯನ್ನು ದಾಟಿ ಸ್ನಾನಸಂಧ್ಯಾವಂದನಾದಿಗಳನ್ನು ಮಾಡಬೇಕು. ॥ ೧ ॥ ದಾರಿಯಲ್ಲಿ ಸರಸ್ವತೀನದಿಯು ಸಿಕ್ಕಿದರೆ, ಮೊದಲು ಸ್ನಾನ ಮಾಡಿಯೇ ಮುಂದೆ ಹೋಗಬೇಕು. ಕೆಲವು ತೀರ್ಥಾದಿ ನದಿಗಳಲ್ಲಿ ಎರಡೂ ದಡಗಳಲ್ಲಿಯೂ ಸ್ನಾನ ಮಾಡಬಹುದು. ॥ ೨ ॥ ಉದ್ದಿಷ್ಟವಾದ ತೀರ್ಥವು ಪ್ರಾಪ್ತವಾದಾಗ, ಒಂದು ಯೋಜನ ಹಿಂದೆಯೇ ತಂಗಬೇಕು.

ಚಂದ್ರಬಲ, ತಾರಾಬಲ ಮೊದಲಾದ ಅನುಕೂಲವುಳ್ಳ ಸುಮುಹೂರ್ತವನ್ನು ವಿಚಾರಿಸಬೇಕು. ॥ ೩ ॥ ಯಾರಿಗೆ ನಿಯಮಗಳನ್ನು ಪಾಲಿಸಲು ಆಗಲಿಲ್ಲವೋ ಅಂಥಾ ಪ್ರಾಜ್ಞನೂ ಸಹ(ಎಂದರೆ ಛತ್ರಾದಿಗಳನ್ನು ಧರಿಸಬಾರದು ಇತ್ಯಾದಿ ನಿಯಮಗಳನ್ನು ಯಾತ್ರಾಪೂರ್ತಿ ಪಾಲಿಸಲು ಆಗದಿದ್ದವನೂ ಸಹ) ಆ ಶುಭದಿನದಲ್ಲಿ ರುಮಾಲು ಧರಿಸದೆ, ನಿರಾಹಾರಿಯಾಗಿ, ಪಾದರಕ್ಷೆ ರಹಿತನಾಗಿಯೇ, ಆ ತೀರ್ಥದೇವತೆಯನ್ನು ಶಿರಸಾ ನಮಸ್ಕರಿಸುತ್ತಾ, ಮನಸಾ ಧ್ಯಾನಿಸುತ್ತಾ, ಬಾಯಿಂದ ಸ್ತೋತ್ರಮಾಡುತ್ತಾ ತೀರ್ಥಮಂಡಲದಲ್ಲಿ ಪ್ರವೇಶಿಸಬೇಕು. ॥ ೪-೫ ॥ ಇಲ್ಲಿ ಹೇಳಿರುವುದು ಎಲ್ಲ ತೀರ್ಥಕ್ಷೇತ್ರಗಳಲ್ಲೂ ಅನುಸರಿಸಬೇಕಾದ ಧರ್ಮಗಳು; ತೀರ್ಥರಾಜನಾದ ಪ್ರಯಾಗಕ್ಷೇತ್ರವನ್ನು ಪ್ರವೇಶ ಮಾಡುವಾಗ ಕೆಲವು ವಿಶೇಷಗಳಿವೆ. ಅವುಗಳನ್ನು ಹೇಳುವೆನು, ಕೇಳಿರಿ. ॥ ೬ ॥ ಈ ತೀರ್ಥವು ಕಣ್ಣಿಗೆ ಬೀಳುತ್ತಲೆ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರವೆರಗಿ ಭಕ್ತಿಪಾರವಶ್ಯತೆಯಿಂದ ಹೊರಳಾಡಬೇಕು, ಎದ್ದು ತಲೆಯ ಮೇಲೆ ಕೈಜೋಡಿಸಿ ಇಟ್ಟುಕೊಳ್ಳಬೇಕು. ॥ ೭ ॥ ಹಣ್ಣು, ಹೂವು ಮತ್ತು ತಾಂಬೂಲಾದಿಗಳನ್ನು ತೆಗೆದುಕೊಂಡು ನದಿಯ ತೀರಕ್ಕೆ ಹೋಗಬೇಕು, ಅಲ್ಲಿ ಪುನಃ ತ್ರಿವೇಣಿಯನ್ನು ಸಾಷ್ಟಾಂಗಪೂರ್ವಕವಾಗಿ ನಮಿಸಿ ಪ್ರಾರ್ಥಿಸಬೇಕು. ॥ ೮ ॥ "ಶ್ರೀಮಹಾವಿಷ್ಣುವಿನ ಪಾದದಲ್ಲಿ ಹುಟ್ಟಿದವಳೇ! ಗಂಗೆಯೇ! ಮಾಧವನಿಗೆ ಪ್ರಿಯವಾಗಿ ರತಕ್ಕ ದೇವತೆಯೇ! ನಿನ್ನ ದರ್ಶನಮಾತ್ರದಿಂದ ಬೆಂಕಿಯು ಕಟ್ಟಿಗೆಯನ್ನು ಸುಡುವಂತೆಯೇ ನನ್ನ ಪಾಪಗಳೆಲ್ಲವೂ ನಾಶವಾಗಿಹೋಗಲಿ. ॥ ೯ ॥ ಮೂರು ಲೋಕಗಳಲ್ಲಿರುವ ಎಲ್ಲ ತೀರ್ಥಗಳ ಮತ್ತು ಆ ತೀರ್ಥದೇವತೆಗಳ ಸ್ವರೂಪವು ನೀನೇ ಆಗಿದ್ದಿ. ಅಂತಹ ನೀನು ನನ್ನನ್ನು ಪಾಪವೆಂಬ ಸಂಕಟದಿಂದ ಪಾರುಮಾಡು. ॥ ೧೦ ॥ ಮಹರುದ್ರದೇವರ ಜಟೆಯಲ್ಲಿ ವಿರಾಜಮಾನಳಾಗಿ ಇಲ್ಲಿಗೆ ಹರಿದು ಬಂದಿರುವ ಗಂಗೆಯೇ ಮತ್ತು ಮೊರೆಹೊಕ್ಕವರನ್ನು ರಕ್ಷಿಸುವ ದೀಕ್ಷೆಯಿಂದ ಕೂಡಿದವಳೇ ಆದ ಗಂಗೆಯೇ, ನಿನಗೆ ನಮಸ್ಕಾರಗಳು. ॥ ೧೧ ॥ ಈ ರೀತಿಯಾಗಿ ಜಹ್ನು ಋಷಿಗಳ ತೊಡೆಗಳಿಂದ ಹೊರಗೆ ಹರಿದು ಬಂದಿರತಕ್ಕ ಗಂಗೆಯನ್ನು ಸ್ತುತಿಸಿ ನಂತರ ಯಮುನೆಯನ್ನು ಸ್ತೋತ್ರ ಮಾಡುವದರಿಂದ ಯಮುನಾದೇವಿಯು ಅವರಿಗೆ ಪ್ರತ್ಯಕ್ಷಳಾಗುವಳು. ॥ ೧೨ ॥ ಇಂದ್ರನೀಲಮಣಿಯ ಬಣ್ಣದವಳೇ! ಕನ್ನೈದಿಲೆಯ ಕಾಂತಿಯುಳ್ಳವಳೇ! ಮಹಾಯಶಸ್ವಿನಿಯಾದ ಸೂರ್ಯದೇವರ ಮಗಳೇ! ಎಲ್ಲ ದೇವತೆಗಳಿಂದ ಸ್ತುತ್ಯಳಾಗಿರತಕ್ಕ ದೇವತೆಯೇ, ಮಾತೃ ಸ್ವರೂಪಳಾದ ಯಮುನೆಯೇ, ನಿನಗೆ ನಮಸ್ಕಾರಗಳು. ॥ ೧೩ ॥ ಎಲ್ಲ ತೀರ್ಥಗಳಲ್ಲಿಯೂ ಸನ್ನಿಧಾನಹೊಂದಿರುವವಳೇ, ಎಲ್ಲರ ಎಲ್ಲ ಅಪೇಕ್ಷೆಗಳನ್ನು ಕರುಣಿಸತಕ್ಕವಳೇ! ಎಲ್ಲರ ಎಲ್ಲ ಪಾಪಗಳನ್ನೂ ನಾಶಮಾಡತಕ್ಕವಳೇ! ಜಗತ್ತಿಗೇ ಪೂಜ್ಯಳಾಗಿರತಕ್ಕ ಯಮುನಾದೇವಿಯೇ, ನಿನಗೆ ನಮಸ್ಕಾರಗಳು. ॥ ೧೪ ॥ ಸೂರ್ಯನ ಪತ್ನಿಯಾದ ಸಂಜ್ಞಾದೇವಿಯ ಗರ್ಭದಿಂದ ಬಂದವಳೇ ! ನಿನ್ನ ನಾಮಸ್ಮರಣೆ ಮಾಡಿದವರ ಪುಣ್ಯಕ್ಕೆ ಕಾರಣಳೇ, ಯಮಧರ್ಮರಾಜನ ತಂಗಿಯೇ! ಶ್ರೀಮಹಾವಿಷ್ಣುವಿಗೆ ಪ್ರಿಯಳಾದವಳೇ! ನಿನಗೆ ನಮಸ್ಕಾರಗಳು. ॥ ೧೫ ॥ ಈ ರೀತಿಯಾಗಿ ಭಕ್ತಿಯಿಂದ ತುಂಬಿದ ಭಾವನೆಯಿಂದ ಯಮುನಾದೇವಿಯನ್ನು ಸ್ತೋತ್ರ ಮಾಡಿ, ಸಂಗಮದಲ್ಲಿ ಗುಪ್ತರೂಪದಲ್ಲಿ ಇರುವ ಫಲಪ್ರದಳಾದ ಶ್ರೀಸರಸ್ವತೀದೇವಿಯನ್ನು ಸ್ತೋತ್ರ ಮಾಡಬೇಕು. ॥ ೧೬ ॥ ಚತುರ್ಮುಖಬ್ರಹ್ಮದೇವರ ಬಾಯಿಯಿಂದ ಹುಟ್ಟಿದವಳೇ! ನಿನಗೆ ನಮಸ್ಕರಿಸಿದವರ ದುಃಖಗಳನ್ನು ನಾಶಮಾಡುವವಳೇ! ಪ್ರಯಾಗಕ್ಷೇತ್ರಸಂಗಮದಲ್ಲಿ ಸಂಗಮಿಸುವಳೇ, ಶ್ರೀಸರಸ್ವತಿ ದೇವಿಯೇ ನಿನಗೆ ನಮಸ್ಕಾರಗಳು. ॥ ೧೭ ॥ ಕಮಲದ ಹೂವಿನ ದಳದಂತೆ ಕಾಂತಿಯುಳ್ಳವಳೇ!

ಕಮಲದ ಮಧ್ಯಭಾಗದಂತೆ ಕೆಂಪಾದ ಕಾಂತಿಯುಳ್ಳ ಕಣ್ಣುಗಳುಳ್ಳವಳೇ! ಕಮಲಹಾರಗಳ ಭಾರಕ್ಕೆ ಬಾಗಿರುವವಳೇ! ಪಾಪಗಳನ್ನು ನಾಶಮಾಡುವವಳೇ! ನಿನಗೆ ನಮಸ್ಕಾರಗಳು. ॥ ೧೮ ॥ ವೀಣಾವಾದ್ಯದ ಮತ್ತು ವೀಣಾವಾದನದ ರಸದಲ್ಲಿ ಪ್ರಾಗಲ್ಭ್ಯತೆಯುಳ್ಳವಳೇ! ವೀಣೆಯಿಂದ ಅಲಂಕೃತಳಾದವಳೇ! ವೀಣೆಯಿಂದ ಸಂಗೀತವನ್ನು ನುಡಿಸುತ್ತಿರುವವಳೇ ! ಜಗನ್ಮಾತೆಯಾದ ಶ್ರೀಸರಸ್ವತಿಯೇ, ಶರಣು ಹೊಕ್ಕಿರುವ ನನ್ನನ್ನು ರಕ್ಷಿಸು." ॥ ೧೯ ॥ ಗಂಗೆಯಮುನೆಯರ ಸಂಗಮದಲ್ಲಿ ಅದೃಶ್ಯಳಾಗಿ ಸನ್ನಿಹಿತಳಾಗಿರತಕ್ಕ ಶ್ರೀಸರಸ್ವತೀದೇವಿಯನ್ನು ಸ್ತೋತ್ರಮಾಡಿ ಇವರೆಲ್ಲರನ್ನೂ ಅಂತರ್ಗತ ಮಾಡಿಕೊಂಡಿರುವ ಶ್ರೀತ್ರಿವೇಣಿಯನ್ನು ಪ್ರಾರ್ಥನೆ ಮಾಡಬೇಕು. ॥ ೨೦ ॥ ಮೂರು ಕಣ್ಣುಗಳುಳ್ಳವಳೇ, ತ್ರಿವರ್ಣಳೇ, ತ್ರಿವಿಧವಾದ ಪಾಪಗಳನ್ನು ಹೋಗಲಾಡಿಸತಕ್ಕವಳೇ! ತ್ರಿಲೋಕಗಳಲ್ಲಿ ಪ್ರವಾಹವುಳ್ಳವಳೇ! ತ್ರಿಗುಣಾತ್ಮಕಳೇ! ಶರಣಾಗತನಾಗಿ ಬಂದಿರತಕ್ಕ ನನ್ನನ್ನು ಕಾಪಾಡು. ॥ ೨೧ ॥ ಕಾಮಕ್ರೋಧಾದಿಗಳಿಂದ ತುಂಬಿರತಕ್ಕ ಸಂಸಾರವೆಂಬ ಬೆಂಕಿಯಿಂದ ಸುಡಲ್ಪಡುತ್ತಿರುವ, ನಿನ್ನ ಪಾದಕಮಲಗಳಲ್ಲಿ ಶರಣು ಹೊಕ್ಕಿರತಕ್ಕ, ನನ್ನ ಬೇಗೆಯನ್ನು ತ್ರಿವೇಣೀ-ದೇವಿಯೇ, ತಂಪಾಗಿಸು. ॥ ೨೨ ॥ ಜಗತ್ತಿನ ಕಲ್ಯಾಣಕ್ಕೋಸ್ಕರ ನೀನು ತೀರ್ಥರಾಜನೆಂದು ಖ್ಯಾತಿ ಪಡೆದ ಈ ಪ್ರಯಾಗದಲ್ಲಿ ಕಾಣಬರುತ್ತಿದ್ದಿ. ನಾನಾಜನ್ಮಗಳ ಕೆಟ್ಟ ಅಭ್ಯಾಸಗಳಿಂದ ಮಾಡಿರುವ ನನ್ನ ಪಾತಕಗಳನ್ನೆಲ್ಲಾ ಪರಿಹರಿಸಿ ನನ್ನನ್ನು ಉದ್ಧರಿಸು. ॥ ೨೩ ॥ ಈ ರೀತಿಯಾಗಿ ವೇಣಿಯನ್ನು ಸ್ತೋತ್ರಮಾಡಿ ಕೃತಕೃತ್ಯನಾದವನು ಮಹಾಅಕ್ಷಯವಟವೃಕ್ಷವನ್ನು ಸ್ತೋತ್ರ ಮಾಡಬೇಕು. ಇದೊಂದು ಸ್ತೋತ್ರದಿಂದ ಎಲ್ಲಾ ದೇವತೆಗಳು ಎಲ್ಲಾ ತೀರ್ಥಗಳೂ ನಮಸ್ಕರಿಸಲ್ಪಟ್ಟಂತೆಯೇ ಸರಿ. ಇದರಲ್ಲಿ ಯಾವ ಸಂದೇಹವೂ ಬೇಡ. ॥ ೨೪ ॥ ಪ್ರಳಯಕಾಲದ ಆರಂಭದಲ್ಲಿ ಶ್ರೀಮಾಧವನು ಜೀವ ಜಡಾತ್ಮಕವಾದ ಇಡೀ ವಿಶ್ವವನ್ನು ತನ್ನ ಹೊಟ್ಟೆಯಲ್ಲಿಟ್ಟುಕೊಂಡು ತನ್ನ ಪಾದವನ್ನು ಮುಖಕಮಲದಲ್ಲಿಟ್ಟುಕೊಂಡು ನಿನ್ನ ಪರ್ಯಂಕದಲ್ಲಿ ಮಲಗಿ ಯೋಗನಿದ್ರೆ ಮಾಡುವನು. ಅಂತಹ ಕ್ಷಯವಿಲ್ಲದ ಮತ್ತು ಕಾಲಾತೀತವಾದ, ಶಾಶ್ವತವಾಗಿರುವ ಅಕ್ಷಯ ಎಂಬ ಹೆಸರಿನಿಂದ ವಿರಾಜಮಾನವಾಗಿರತಕ್ಕ ನಿನಗೆ ನಮಸ್ಕಾರಗಳು. (ಎಲ್ಲಾ ವಟವೃಕ್ಷಗಳಂತೆ ಇದೂ ಪ್ರಾಕೃತವೇ ಆದ್ದರಿಂದ, ಈ ವಟವೃಕ್ಷವು ಪ್ರಳಯಕಾಲದಲ್ಲಿ ಇರುವುದು ಅಸಂಭಾವಿತ. ಭಗವಂತನು ಪ್ರಳಯಕಾಲದಲ್ಲಿ ಲಕ್ಷ್ಮ್ಯಾತ್ಮಕವಾದ ವಟಪತ್ರದಲ್ಲಿ ಮಲಗುತ್ತಾನೆ. ಈ ದೃಷ್ಟಿಯಿಂದ ವಟವು ಅಕ್ಷಯವೆಂದು ಹೇಳಲ್ಪಟ್ಟಿದೆ) ॥ ೨೫ ॥ ಹೇ ವಟವೃಕ್ಷವೇ, ನಿನ್ನ ಬೇರುಗಳಲ್ಲಿ ಚತುರ್ಮುಖ ಬ್ರಹ್ಮದೇವರು, ಕಾಂಡದಲ್ಲಿ ಮಹಾವಿಷ್ಣುವು, ಅಗ್ರಭಾಗದಲ್ಲಿ ಶ್ರೀಮಹಾರುದ್ರದೇವರು ವಾಸವಾಗಿದ್ದು ಸಾದೃಶ್ಯವಿಲ್ಲದ ನಿನಗೆ ನಮಸ್ಕಾರಗಳು. ॥ ೨೬ ॥ ನಿನ್ನ ಎಲೆಗಳು ಬಂಗಾರದ ಬಣ್ಣದಿಂದ ಕಂಗೊಳಿಸುತ್ತವೆ. ನಿನ್ನ ಬಿಳಿಲು ಕೆಳಗಿನ ಏಳು ಲೋಕಗಳಿಗೂ ಇಳಿದುಹೋಗಿದೆ. ನೀನು ಇಡೀ ಪ್ರಯಾಗಮಂಡಲದಲ್ಲೆಲ್ಲಾ ಹರಡಿಕೊಂಡಿದ್ದೀಯೆ. ಅಂತಹ ವೃಕ್ಷರಾಜನಾದ ನಿನಗೆ ನಮಸ್ಕಾರಗಳು. ॥ ೨೭ ॥ ಹೀಗೆ ವಟರಾಜನನ್ನು ಸ್ತೋತ್ರಮಾಡಿ ನಂತರ ಮೋಕ್ಷಾದಿಯಾಗಿ ಎಲ್ಲವನ್ನು ಕೊಡತಕ್ಕ, ಪ್ರಯಾಗದ ಕ್ಷೇತ್ರದೇವತೆ ಆದ ಶ್ರೀವೇಣೀಮಾಧವನನ್ನು ವಿಧಿಪೂರ್ವಕವಾಗಿ ಭಕ್ತಿಯಿಂದ ಪ್ರಾರ್ಥಿಸಬೇಕು. ॥ ೨೮ ॥ ದಟ್ಟವಾದ ಕಪ್ಪು ಮೋಡದಂತೆ ಪ್ರಕಾಶ ಉಳ್ಳವನೇ, ಹಳದಿಬಣ್ಣದ ರೇಷ್ಮೆ ವಸ್ತ್ರವನ್ನು ಧಾರಣೆ ಮಾಡಿದವನೇ, ಪ್ರಯಾಗದಲ್ಲಿ ವಾಸವುಳ್ಳ ಸ್ವಾಮಿಯೇ, ವೇಣೀಮಾಧವನಾಮಾಂಕಿತನೇ, ನಿನಗೆ ನಮಸ್ಕಾರ. ॥ ೨೯ ॥ ಶಂಖ, ಚಕ್ರ, ಗದಾ ಮತ್ತು ಪದ್ಮಗಳಿಂದ ಅಲಂಕೃತವಾದ ನಾಲ್ಕು ಭುಜವುಳ್ಳವನೇ, ಧರ್ಮ, ಅರ್ಥ, ಕಾಮ ಮತ್ತು

ಮೋಕ್ಷವೆಂಬ ನಾಲ್ಕುವಿಧವಾದ ಪುರುಷಾರ್ಥಗಳ ಪ್ರಾಪ್ತಿಗೆ ಆಧಾರನಾದ ವೇಣೀಮಾಧವನೇ, ನಿನಗೆ ನಮಸ್ಕಾರ. ॥ ೩೦ ॥ ನಿನ್ನ ಪಾದಗಳಿಗೆ ನಮಸ್ಕರಿಸುತ್ತಿರುವ ನನ್ನನ್ನು ಕಮಲಪುಷ್ಪದ ಶೋಭೆಯನ್ನು ಧಿಕ್ಕಾರ ಮಾಡತಕ್ಕ ನಿನ್ನ ಕಣ್ಣುಗಳಿಂದ ಈಕ್ಷಿಸಿ ಉದ್ಧಾರಮಾಡು. ಸ್ವಾಮಿ ವೇಣೀಮಾಧವ ! ನಿನಗೆ ನಮಸ್ಕಾರಗಳು'' ಹೀಗೆ ಸ್ತೋತ್ರ ಮಾಡುತ್ತಾ ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟುಕೊಂಡು ಮಾಧವನನ್ನು ಭಕ್ತಿಯಿಂದ ಪ್ರಾರ್ಥಿಸಬೇಕು. ನಂತರ ''ಓಂ''ಕಾರಮಂತ್ರವನ್ನು ಉಚ್ಚರಿಸಿ ಜಲವನ್ನು ಸ್ಪರ್ಶಮಾಡಿ ಭೈರವಾದಿಗಳನ್ನು ಪ್ರಾರ್ಥನೆ ಮಾಡಬೇಕು. ॥ ೩೧-೩೨ ॥ ನಂತರ ಈ ತೀರ್ಥದಿಂದ ನೀರು ತೆಗೆದುಕೊಂಡು, ಅಲ್ಲಿಂದ ಒಂದು ಬಿಲ್ಲಿನಷ್ಟು ದೂರ ಸರಿದು ಕೈಕಾಲು ಮತ್ತು ಮುಖ ತೊಳೆದು ಹನ್ನೆರಡು ಬಾರಿ ಬಾಯಿ ಮುಕ್ಕಳಿಸಬೇಕು. ॥ ೩೩ ॥ ಪುನಃ ನದೀತೀರವನ್ನು ಸಮೀಪಿಸಿ ಎರಡು ಬಾರಿ ಆಚಮನ ಮಾಡಿ, ಪವಿತ್ರವನ್ನು ಧಾರಣೆ ಮಾಡಿಕೊಂಡು ಗಂಧ, ಅಕ್ಷತೆ, ಹಣ್ಣು ಇವುಗಳಿಂದ ಕೂಡಿದ ನೀರಿನಿಂದ ಅರ್ಘ್ಯವನ್ನು ಕೊಡಬೇಕು. ''ಬ್ರಹ್ಮನ ಕಮಂಡಲದಿಂದ ಹುಟ್ಟಿದವಳೇ, ಭಗೀರಥನ ಕುಮಾರಿಯೇ, ಗಂಗಾದೇವಿಯೇ, ನನ್ನ ಅರ್ಘ್ಯವನ್ನು ಸ್ವೀಕರಿಸು, ನಿನಗೆ ನಮಸ್ಕಾರಗಳು.'' ಎಂಬ ಮಂತ್ರದಿಂದ ಗಂಗಾದೇವಿಗೆ ಅರ್ಘ್ಯವನ್ನು ಕೊಡಬೇಕು. ॥ ೩೪-೩೫ ॥ ಸೂರ್ಯನ ಮಗಳಾದವಳೇ! ನೀನು ಮಹಾನದಿಯು, ಋಷಿಗಳು, ಸಿದ್ಧರು ಮತ್ತು ದೇವತೆಗಳಿಂದಲೂ ಸೇವ್ಯಳು, ಇಂತಹ ಯಮುನಾದೇವಿಯೇ, ನಿನಗೆ ನಮಸ್ಕಾರಗಳು. ''ಈ ಮಂತ್ರದಿಂದ ಯಮುನಾದೇವಿಗೆ ಅರ್ಘ್ಯವನ್ನು ಕೊಡಬೇಕು. ॥ ೩೬ ॥ ''ಬ್ರಹ್ಮದೇವರ ಮಗಳಾದವಳೇ, ಬ್ರಹ್ಮರಂಧ್ರದಲ್ಲಿ ವಾಸಿಸುವಳೇ, ಜಗತ್ತಿಗೆ ತಾಯಿಯಾದವಳೇ, ಸರಸ್ವತೀದೇವಿಯೇ, ನಿನಗೆ ನಮಸ್ಕಾರಗಳು'' ಈ ಮಂತ್ರದಿಂದ ಸಂಗಮದಲ್ಲಿ ಅದೃಶ್ಯಳಾಗಿ ಸನ್ನಿಹಿತಳಾಗಿರುವ ಶ್ರೀಸರಸ್ವತಿದೇವಿಗೆ ಅರ್ಘ್ಯವನ್ನು ಕೊಡಬೇಕು. ॥ ೩೭ ॥ ''ಮಹಾಪ್ರಳಯಕಾಲದಲ್ಲಿ ಎಲ್ಲೆಲ್ಲಿಯೂ ಪ್ರಳಯೋದಕವೇ ಆಗಿರುವಾಗ, ಯೋಗನಿದ್ರಾಸಕ್ತನಾದ ಶ್ರೀವೇಣೀಮಾಧವದೇವರು ನಿನ್ನ ಎಲೆಯನ್ನೇ ತನ್ನ ಯೋಗನಿದ್ರೆಗೆ ಮಂಚವನ್ನಾಗಿ ಮಾಡಿಕೊಂಡಂತಹ ಹೇ ವೃಕ್ಷರಾಜನೇ, ನಿನಗೆ ನಮಸ್ಕಾರ. ಈ ಮಂತ್ರದಿಂದ ಅಕ್ಷಯವಟವೃಕ್ಷಕ್ಕೆ ಅರ್ಘ್ಯವನ್ನು ಕೊಡಬೇಕು. ॥ ೩೮ ॥ ''ಸರ್ವಜ್ಞನಾಗಿರುವ, ಭಕ್ತರ ಸಕಲಫಲಗಳನ್ನೂ ಕರುಣಿಸುವ ಶ್ರೀವೇಣೀಮಾಧವದೇವರೇ, ಈ ನನ್ನ ಯಾತ್ರೆಗೆ ಸಾಫಲ್ಯವನ್ನು ಕರುಣಿಸು'' ಎಂದು ಹೇಳಿ ಮಾಧವದೇವರಿಗೆ ಅರ್ಘ್ಯವನ್ನು ಕೊಡಬೇಕು. ॥ ೩೯ ॥ ಅನಂತರ ಪುನಃ ಆಚಮನ ಮಾಡಿ, ಸಂಕಲ್ಪವನ್ನು ಮಾಡಿ, ಮಂತ್ರವಿಲ್ಲದೆ ಉಟ್ಟ ಬಟ್ಟೆಯಲ್ಲಿ ಸ್ನಾನವನ್ನು ಮಾಡಬೇಕು. ನಂತರ ಮೌಸಲಾಖ್ಯ ಮಹಾಸಂಕಲ್ಪವನ್ನು ಮಾಡಿ ಸ್ನಾನ ಮಾಡಬೇಕು. ॥ ೪೦ ॥

॥ ಮೂವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತ್ವಾರಿಂಶೋಽಧ್ಯಾಯಃ ॥ ೪೦ ॥

ಶೇಷ ಉವಾಚ—

ವಿದ್ಯಮಾನೇಽದ್ಯ ದಿವಸೇ ತಿಥಿವಾಸರಸಂಯುತೇ ।
ನಕ್ಷತ್ರಯೋಗಕರಣೇ ಪುಣ್ಯಕಾಲಸಮನ್ವಿತೇ ॥ ೧ ॥
ಜನ್ಮಜನ್ಮಾಂತರೇ ತದ್ವದಿಹ ಜನ್ಮನಿ ಜನ್ಮತಃ ।
ಆರಭ್ಯೈತತ್ ಕ್ಷಣಂ ಯಾವದ್ಬಾಲ್ಯಯೌವನವಾರ್ಧಕೇ ॥ ೨ ॥
ರಹಸಿ ಪ್ರಕಟಂ ವಾಪಿ ಕಾಮಾಕಾಮಕೃತಿಂ ತಥಾ ।
ಸಕೃದಭ್ಯಾಸತೋ ವಾಪಿ ಮನೋವಾಕ್ಕಾಯಕರ್ಮಭಿಃ ॥ ೩ ॥
ಬ್ರಹ್ಮಹತ್ಯಾ ಸುರಾಪಾನಂ ಗುರುತಲ್ಪಗತಿಸ್ತಥಾ ।
ರುಕ್ಮಚೌರ್ಯಂ ಚ ತತ್ಸಂಗೋ ಮಹಾಪಾತಕಪಂಚಕಮ್ ॥ ೪ ॥
ಮಹಾಪಾತಕತುಲ್ಯಾನಿ ಪಾಪಾನ್ಯನ್ಯಾನಿ ಯಾನಿ ಚ ।
ಅತಿಪಾತಕಸಂಜ್ಞಾನಿ ತನ್ನ್ಯೂನಮುಪಪಾತಕಮ್ ॥ ೫ ॥
ಇಂಧನಾರ್ಥೇ ದ್ರುಮಚ್ಛೇದಸ್ತಥೈವೇಂಧನವಿಕ್ರಯಃ ।
ಅಕಾಲೇ ವೃಕ್ಷವಿಚ್ಛೇದಸ್ತಥೈವೌಷಧಜೀವನಮ್ ॥ ೬ ॥
ಸ್ತ್ರೀಹಿಂಸಾ ಯಂತ್ರನಿರ್ಮಾಣಂ ಭ್ರೂಣಹತ್ಯಾದಿಕಂ ತಥಾ ।
ಸಂಕರೀಕರಣಂ ಚೈವ ಮಲಿನೀಕರಣಂ ತಥಾ ॥ ೭ ॥
ಅಪಾತ್ರೀಕರಣಂ ಚೈವ ಜಾತಿಭ್ರಂಶಕರಂ ತಥಾ ।
ಪ್ರಕೀರ್ಣಕಂ ಚ ಗೋಹಿಂಸಾ ಪಶುಹಿಂಸಾ ತಥೈವ ಚ ॥ ೮ ॥
ಬ್ರಾಹ್ಮಣೀವಿಧವಾಶೂದ್ರೀದಾಸೀವೇಶ್ಯಾರತಂ ತಥಾ ।
ಅಭಕ್ಷ್ಯವಸ್ತುನೋ ಭಕ್ಷೋ ಹ್ಯಭಕ್ಷಸ್ಯ ಚ ಭೋಜನಮ್ ॥ ೯ ॥
ಅಪೇಯವಸ್ತುನಃ ಪಾನಮಲೇಹ್ಯಸ್ಯ ಚ ಲೇಹನಮ್ ।
ಅಲೇಪ್ಯಲೇಪನಂ ತದ್ವದಚೋಷ್ಯಸ್ಯ ಚ ಚೋಷಣಮ್ ॥ ೧೦ ॥
ಅಸ್ಪೃಶ್ಯಸ್ಪರ್ಶನಂ ಚೈವ ತಥೈವಾವಾಚ್ಯವಾಚನಮ್ ।
ಪರಮರ್ಮೋದ್ಘಾಟನಂ ಚ ದ್ವಿಜವೃತ್ತಿವಿಲೋಪನಮ್ ॥ ೧೧ ॥
ಪಂಕ್ತಿಭೇದಸ್ತಥಾ ವಿಷ್ಣೋ ರೂಪಾಣಾಮಪಿ ಭೇದಧೀಃ ।
ದ್ವಿಜಾನಾಥಾಬಲಾದ್ರವ್ಯಸ್ಯಾಪಹಾರಸ್ತಥೈವ ಚ ॥ ೧೨ ॥
ನಿಷಿದ್ಧಾನ್ನಂ ಪತಿತಾನ್ನಂ ಗಣಿಕಾನ್ನಂ ತಥೈವ ಚ ।
ಕೃಛ್ರಾನ್ನಂ ಚ ಗಣಾನ್ನಂ ಚ ಸೂತೀಶೂದ್ರಾನ್ನಮೇವ ಚ ॥ ೧೩ ॥
ಸಾಧುಭಾರ್ಯಾವಿಸರ್ಗಶ್ಚ ಮಾತಾಪಿತ್ರತಿರಸ್ಕೃತಿಃ ।
ಸ್ತುತಿಃ ಸ್ವಸ್ಯಾನ್ಯನಿಂದಾ ಚ ದ್ವಿಜಸ್ಯ ಚ ಗುರೋಸ್ತಥಾ ॥ ೧೪ ॥

ಯತಿಸಾಧ್ವಬಲಾಮಾತಾಪಿತೃನಿಂದಾ ತಥೈವ ಚ ।
ಬ್ರಹ್ಮದ್ವೇಷಶ್ಚ ತೇನೈವ ತ್ರಿರಾತ್ರಾಭಾಷಣಂ ತಥಾ ॥ ೧೫ ॥
ಕೃತಘ್ನತಾ ಚ ಪೈಶುನ್ಯಂ ಪಾಖಂಡಾಚರಣಂ ತಥಾ ।
ಉದಕ್ಯಾ ಸೂತಕೀ ವೇಶ್ಯಾ ರಜಕೀ ಚರ್ಮಕಾರಿಕಾ ॥ ೧೬ ॥
ಏತಾಭಿಸ್ಸಹ ಸಂವಾಸಃ ಸ್ಪರ್ಶನಂ ಭಾಷಣಂ ಮಿಥಃ ।
ತದ್ವಸ್ತ್ರಮಾರುತಸ್ಪರ್ಶಃ ಛಾಯಾಸಂಸ್ಪರ್ಶ ಏವ ಚ ॥ ೧೭ ॥
ಶವಸ್ಯ ಚಿತಿಕಾಷ್ಠಸ್ಯ ಯೂಪಸ್ಯಾಸ್ಥ್ನೋಽನ್ತ್ಯಜಸ್ಯ ಚ ।
ಸ್ಪರ್ಶನಂ ಸಹವಾಸಶ್ಚ ಮಹಾಪಾತಕಿಚೋರಯೋಃ ॥ ೧೮ ॥
ಕುಗ್ರಾಮೇ ವಸತಿಃ ಸ್ವಸ್ಥೇ ಕುಶೌಚಂ ಚ ಕುಭೋಜನಮ್ ।
ದುರ್ಭಾಂಡಭೋಜನಂ ಪಾನಂ ದುಷ್ಪ್ರತಿಗ್ರಹ ಏವ ಚ ॥ ೧೯ ॥
ಅಸಾಕ್ಷಿಭೋಜನಂ ಸರ್ವಂ ತಾಂಬೂಲಕೃಶರಾನ್ನಯೋಃ ।
ಅಧಿಕಂ ಮಂಚಭುಕ್ತಿಶ್ಚ ಶಯಿತ್ವಾ ಭುಕ್ತಿರೇವ ಚ ॥ ೨೦ ॥
ಪಕ್ಷೇಣ ಕೂಟಸಾಕ್ಷಿತ್ವಮಹಸ್ಸಂಗಮನಂ ತಥಾ ।
ಸ್ವಪ್ನೇ ರತಿರ್ವೃಥಾಲಾಪೋ ಬ್ರಾಹ್ಮಣಾನಮನಂ ಮದಾತ್ ॥ ೨೧ ॥
ವಿದ್ಯಾಪುಸ್ತಕದಾಸೀನಾಂ ಕನ್ಯಾರಸಚತುಷ್ಪದಾಮ್ ।
ಶ್ರುತಿಸ್ಮೃತಿಪುರಾಣಾನಾಂ ವಿಕ್ರಯೋ ಧನಲೋಭತಃ ॥ ೨೨ ॥
ಗಾಯತ್ರ್ಯಾ ರುದ್ರಜಾಪ್ಯಸ್ಯ ವೇದಪಾರಾಯಣಸ್ಯ ಚ ।
ಸ್ವೇಷ್ಟಮಂತ್ರಜಪಸ್ಯಾಪಿ ಲೋಭಾತ್ ಶ್ರೇಯಃಸಮರ್ಪಣಮ್ ॥ ೨೩ ॥
ವೃಥಾ ವೀರ್ಯನಿಪಾತಶ್ಚ ತಥಾ ಪುರುಷಮೈಥುನಮ್ ।
ಮಾನಸಂ ವಾಚಿಕಂ ಚಾಪಿ ಪರ್ವಮೈಥುನಮೇವ ಚ ॥ ೨೪ ॥
ಪಲಾಂಡುಲಸುನಾಲಾವುಗೃಂಜನಾನಾಂ ಚ ಭಕ್ಷಣಮ್ ।
ಸ್ನಾನಸಂಧ್ಯೋಪಾಸನಾದಿರಹಿತಂ ಭೋಜನಂ ಚ ಯತ್ ॥ ೨೫ ॥
ವೈಶ್ವದೇವವಿಹೀನಂ ಚಾಹನ್ಯೇವಾಪರಭೋಜನಮ್ ।
ಕುಪಂಕ್ತಿಭೋಜನಂ ಚೈವ ಸ್ತ್ರ್ಯಾದಿಭಿಸ್ಸಹ ಭೋಜನಮ್ ॥ ೨೬ ॥
ವಟಾರ್ಕಾಶ್ವತ್ಥಪತ್ರೇಷು ಪರಕಾಂಸ್ಯೇ ತಥಾಯಸೇ ।
ಆಪೋಶನಾದಿರಹಿತಂ ಭೋಜನಂ ಸತಿ ಸಂಭವೇ ॥ ೨೭ ॥
ಏಕಾದಶೇ ಭೋಜನಂ ಚ ಏಕಾದಶ್ಯಾಂ ಚ ಸಂಧ್ಯಯೋಃ ।
ಮ್ಲೇಚ್ಛಾದೀನಾಂ ಚ ಜಾತೀನಾಂ ಸೇವನಂ ಯದಿ ಲೋಭತಃ ॥ ೨೮ ॥
ಜಲೇ ಶೌಚಂ ಶುದ್ಧಭೂಮೌ ಮಲಮೂತ್ರವಿಸರ್ಜನಮ್ ।
ಕಾಮತಃ ಕ್ರೋಧತೋ ವಾಪಿ ಲೋಭತೋ ಮೋಹತಸ್ತಥಾ ॥ ೨೯ ॥

ದಂಭತೋಽಹಂಕೃತೇಶ್ಚಾಪಿ ನಿಷಿದ್ಧಾಚರಣಂ ಚ ಯತ್ ।
ಗರದಾನಾಗ್ನಿದಾನೇ ಚ ಹ್ಯಾಕ್ಷೇಪಃ ಕ್ರೋಧತೋ ಗುರೋಃ ॥ ೩೦ ॥
ಪ್ರತಿಶ್ರುತಾಪ್ರದಾನಂ ಚ ಕರ್ಮಣಾ ವಚಸಾ ಧಿಯಾ ।
ವಿವಾಹೇ ಧರ್ಮಕಾರ್ಯೇ ಚ ವಿಘ್ನಾಚರಣಮೀರ್ಷ್ಯಯಾ ॥ ೩೧ ॥
ಕಪಿಲಾಪಯಸಃ ಪಾನಂ ಪುಷ್ಪಿಣೀಗಮನಂ ತಥಾ ।
ಮಾತುಲಾನೀ ಸ್ವಸಾ ಶ್ವಶ್ರೂರನುಜಾಚಸ್ನುಷಾ ತಥಾ ॥ ೩೨ ॥
ಆಚಾರ್ಯಭಾರ್ಯಾ ಸಾಧ್ವೀ ಚ ಸ್ವವರ್ಣಾದ್ಯುತ್ತಮಾಂಗನಾ ।
ತನಯಾ ಶರಣಪ್ರಾಪ್ತಾ ಸಪತ್ನಜನನೀ ತಥಾ ॥ ೩೩ ॥
ಗುರುತಲ್ಪಗತುಲ್ಯಂ ಚ ಏತಾಸು ಗಮನಂ ಹಿ ಯತ್ ।
ಭೂತತ್ರಾಧ್ಯಾಪನಂ ಚೈವ ಪರಿವೇತೃತ್ವಮೇವ ಚ ॥ ೩೪ ॥
ಪಾರ್ಧುರ್ಷ್ಯಂ ವ್ರತಲೋಪಶ್ಚಾತಯಾಜ್ಯಯಾಜನಮೇವ ಚ ।
ನಕ್ಷತ್ರಸೂಚಿತಾ ಗ್ರಾಮುಪೌರೋಹಿತ್ಯಂ ತಥೈವ ಚ ॥ ೩೫ ॥
ಪಿತೃಮಾತೃಸುತಸ್ತ್ರೀಣಾಮುಪಾಧ್ಯಾಯಸ್ಯ ಸದ್ಗುರೋಃ ।
ತ್ಯಾಗಾದಾತ್ರಮವಾಸಶ್ಚ ಪರಾನ್ನಪರಿಪುಷ್ಟತಾ ॥ ೩೬ ॥
ಗುಣಾನಾಂ ಗರ್ಹಣಂ ಚೈವ ದೋಷಸ್ಯೋದ್ಭಾವನಂ ತಥಾ ।
ನಿಷ್ಠುರಂ ಭಾಷಣಂ ನಿತ್ಯಂ ತಥೈವಾನೃತಭಾಷಣಮ್ ॥ ೩೭ ॥
ವೇದಾನಧ್ಯಯನಂ ಚೈವ ಪಠಿತಾನಾಂ ಚ ವಿಸ್ಮೃತಿಃ ।
ಮಾತಾಪಿತ್ರೋರಶುಶ್ರೂಷಾ ತದಾಜ್ಞಾಕರಣಂ ತಥಾ ॥ ೩೮ ॥
ಅನಾಹಿತಾಗ್ನಿನಾ ಚಾಪಿ ತಥಾ ವಿಷ್ಣೋರಪೂಜನಮ್ ।
ಪಾಣಿಗ್ರಹಣಮಾರಭ್ಯ ಸ್ವಧರ್ಮಾಪರಿಪಾಲನಮ್ ॥ ೩೯ ॥
ಸಾಧೂನಾಂ ಪೀಡನಂ ದುಷ್ಟಪತಿತಾನಾಂ ಚ ಪಾಲನಮ್ ।
ಪರಕಾರ್ಯಾಪಕರಣಂ ಪರದ್ರವ್ಯೋಪಜೀವನಮ್ ॥ ೪೦ ॥
ಇತ್ಯಾದಿಸರ್ವಪಾಪಾನಾಂ ಸಕೃದಾವೃತ್ತಿತೋಽಪಿ ವಾ ।
ಅದ್ಭಿಃ ಸ್ನಾನಂ ಯಥಾಸಂಖ್ಯಂ ಸರ್ವೇಷಾಮಪನುತ್ತಯೇ ॥ ೪೧ ॥
ಅಂತಃಕರಣಶುದ್ಧ್ಯರ್ಥಂ ಮಾಧವಪ್ರೀತಿಕಾಮ್ಯಯಾ ।
ಷಡಬ್ದಂ ತ್ರ್ಯಬ್ದಕಂ ವಾಪಿ ಹ್ಯಬ್ದಂ ಸಾರ್ಧಾಬ್ದಮೇವ ವಾ ॥ ೪೨ ॥
ಏಕಾಬ್ದಕೃಚ್ಛ್ರರೂಪಂ ವಾ ಯಥಾಶಕ್ತಿ ಯಥಾವಿಧಿ ।
ಯಾತ್ರಾಹೋಮಜಪಸ್ನಾನದ್ವಿಜದ್ರವ್ಯಾದಿಮಾರ್ಗತಃ ॥ ೪೩ ॥
ಸವಿಧೇ ಮಾಧವಸ್ಯಾದ್ಯ ಬ್ರಾಹ್ಮಣಾನಾಮನುಜ್ಞಯಾ ।
ಏತದನ್ಯತಮಪ್ರಾಯಶ್ಚಿತ್ತಾಚರಣಪೂರ್ವಕಮ್ ॥ ೪೪ ॥

**ಅಹಂ ಸ್ನಾನಂ ಕರಿಷ್ಯೇ ಚ ಗಂಗಾಯಮುನಸಂಗಮೇ ।**
**ಇತಿ ಸಂಕಲ್ಪ್ಯ ತ್ರಿಃ ಸ್ನಾಯಾತ್ಪ್ರವಾಹಾಭಿಮುಖಂ ಕೃತೀ ॥ ೪೫ ॥**

**॥ ಇತಿ ಚತ್ವಾರಿಂಶೋಽಧ್ಯಾಯಃ ॥**

## ॥ ನಲವತ್ತನೆಯ ಅಧ್ಯಾಯವು ॥

ಶ್ರೀಗುರುಭ್ಯೋ ನಮಃ, ಪರಮಗುರುಭ್ಯೋ ನಮಃ, ಆಚಾರ್ಯೇಭ್ಯೋ ನಮಃ, ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ, ಮಾತೃಭ್ಯೋ ನಮಃ, ಪಿತೃಭ್ಯೋ ನಮಃ, ಆಚಮ್ಯ, ಪವಿತ್ರಂ ಧೃತ್ವಾ, ಪುನರಾಚಮ್ಯ, ಪ್ರಾಣಾನಾಯಮ್ಯ, ಸಂಕಲ್ಪ್ಯ, ಶುಭೇ ಶೋಭನೇ ಮುಹೂರ್ತೇ ......ಅಮುಕಸಂವತ್ಸರೇ, ಅಮುಕರ್ತೌ, ಅಮುಕಮಾಸೇ, ಅಮುಕಪಕ್ಷೇ, ಅಮುಕಶುಭತಿಥೌ, ಅಮುಕಶುಭವಾಸರೇ, ವಿದ್ಯಮಾನನಕ್ಷತ್ರಯೋಗಕರಣ ಯುಕ್ತಾಯಾಂ, ಪುಣ್ಯಕಾಲಸಮನ್ವಿತಾಯಾಂ ಅದ್ಯ ಅಸ್ಯಾಂ ಶುಭತಿಥೌ ಶುಭಸಮಯೇ ಶೋಭನ ದೇವತಾಂತರ್ಯಾಮಿಭಾರತೀರಮಣಮುಖ್ಯಪ್ರಾಣಾಂತರ್ಗತ ಅನಿರುದ್ಧಪ್ರದ್ಯುಮ್ನ ಸಂಕರ್ಷಣವಾಸುದೇವೇತಿ ಚತುರ್ಮೂರ್ತ್ಯಾತ್ಮಕ ಶ್ರೀಲಕ್ಷ್ಮೀನಾರಾಯಣಾತ್ಮಕ ಶ್ರೀಗಂಗಾ ಸರಸ್ವತೀಯಮುನಾತ್ಮಕ ಶ್ರೀತ್ರಿವೇಣೀಕ್ಷೇತ್ರಮುಖ್ಯಾಭಿಮಾನಿಶ್ರೀವೇಣೀಮಾಧವಾತ್ಮಕ ಕುಲ ದೇವತಾಭೂತ ಶ್ರೀಲಕ್ಷ್ಮೀವೇಂಕಟೇಶಶ್ರೀಲಕ್ಷ್ಮೀನೃಸಿಂಹಪ್ರೇರಣಯಾ ಶ್ರೀಲಕ್ಷ್ಮೀನೃಸಿಂಹಪ್ರೀತ್ಯರ್ಥಂ, ಅಸ್ಮಿನ್ ತ್ರಿವೇಣ್ಯಭಿಖ್ಯ ಪ್ರಯಾಗಕ್ಷೇತ್ರನಾಯಕೇ, ತ್ರಿವೇಣೀಸಂಗಮೇ ಅಕ್ಷಯ್ಯವಟವೃಕ್ಷಸ್ಯ ಮೂಲೇ, ನೀಲಟಂಕೇಶ್ವರಸೋಮೇಶ್ವರಕಾಲಭೈರವೇಂದ್ರಾದ್ಯಷ್ಟದಿಕ್ಪಾಲಕಾನಾಂ ಸನ್ನಿಧಾನೇ ....ಗೋತ್ರೋದ್ಭವಃ, ಅಮುಕಶಾಖಾಧ್ಯಾಯೀ ಅಹಂ ..... ನಾಮ ಮಮ ಪತ್ನೀಭೂತ .... ನಾಮ್ನ್ಯಾ ಸಹಿತಃ ಮೌಸಲಾಖ್ಯಂ ಮಹಾಸಂಕಲ್ಪಂ ಕರಿಷ್ಯೇ—ಇತಿ ಸಂಕಲ್ಪ್ಯ. ॥ ೧ ॥ ಜನ್ಮಾಂತರಗಳಲ್ಲಿ ನಮ್ಮ ಜನ್ಮಾರಭ್ಯ ಈ ಕ್ಷಣದವರೆವಿಗೂ ಬಾಲ್ಯ, ಯೌವನ ಮತ್ತು ವೃದ್ಧಾಪ್ಯ ದಶೆಗಳಲ್ಲಿ ಗುಪ್ತವಾಗಿಯೂ ಬಹಿರಂಗವಾಗಿಯೂ ಬಯಸದೆಯೂ ಬಯಸಿಯೂ ಮಾಡಿರುವ ನನ್ನ ಕಾರ್ಯಗಳು, ಕೆಲವು ಒಮ್ಮೆಯೂ ಕೆಲವು ಮತ್ತು ಮತ್ತೂ, ಮಾನಸಿಕವಾಗಿಯೂ, ದೈಹಿಕವಾಗಿಯೂ ಮತ್ತು ವಾಚನಿಕವಾಗಿಯೂ ಆಚರಿಸಲ್ಪಟ್ಟಿವೆ. ॥ ೨-೩ ॥ ಬ್ರಹ್ಮಹತ್ಯೆಯು, (ಬ್ರಾಹ್ಮಣರನ್ನು ಸಂಹರಿಸಿರುವುದು, ನಾನೇ ಪರಬ್ರಹ್ಮ ಅಥವಾ ಪರಬ್ರಹ್ಮನೇ ಇಲ್ಲ ಅಥವಾ ಪರಬ್ರಹ್ಮನಿಗೆ ಸರಿಸಮಾನರಾದ ಅನೇಕ ದೇವತೆಗಳು ಇದ್ದಾರೆಂದು ವಾದ ಮಾಡಿ ಮುಖ್ಯನಾಗಿ ರತಕ್ಕ ವಿಷ್ಣುರೂಪನಾದ ಜಗಜ್ಜನ್ಮಾದಿಕರ್ತನಾದ ಪರಬ್ರಹ್ಮನ ಅಸ್ತಿತ್ವವನ್ನು ಇಲ್ಲದಂತೆ ಮಾಡುವ ಪ್ರಯತ್ನನಡೆಸುವುದು.) ಹೆಂಡ ಕುಡಿಯುವುದು, ಗುರುಪತ್ನಿಯೊಡನೆ ಸಂಭೋಗಮಾಡುವುದು, ಬಂಗಾರವನ್ನು ಅಪಹರಿಸುವುದು ಮತ್ತು ಈ ನಾಲ್ಕು ಪಾಪಮಾಡಿದವರ ಸಹವಾಸವನ್ನು ಹೊಂದಿರುವುದು ಈ ಐದೂ ಮಹಾಪಾತಕಗಳು. ॥ ೪ ॥ ಮಹಾಪಾತಕಗಳಿಗೆ ಸರಿಸಮನಾದ ಪಾತಕಗಳು ಅತಿಪಾತಕಗಳು, ಈ ಮಹಾಪಾತಕಗಳಿಗಿಂತ ಕಮ್ಮಿಯಾಗಿದ್ದವುಗಳು ಉಪಪಾತಕಗಳು. ॥ ೫ ॥ ಸೌದೆಗಾಗಿ ಮರಗಳನ್ನು ಕಡಿಯುವುದು, ಸೌದೆ ಮಾರುವುದು, ಅಕಾಲದಲ್ಲಿ ವೃಕ್ಷಗಳನ್ನು ಕಡಿಯುವುದು, ಔಷಧಿ ಮಾರಿ ಜೀವನ ಮಾಡುವುದು. ॥ ೬ ॥ ಸ್ತ್ರೀಯರನ್ನು ಹಿಂಸಿಸುವುದು, ಯಂತ್ರನಿರ್ಮಾಣ, ಗರ್ಭದಲ್ಲಿರುವ ಭ್ರೂಣಹತ್ಯೆ ಮಾಡುವುದು, ವರ್ಣಸಾಂಕರ್ಯ ಮಾಡುವುದು, ಜಾತಿ, ಊರು ಮುಂತಾದವನ್ನು ಕೆಡಿಸುವುದು. ॥ ೭ ॥ ಸತ್ಪಾತ್ರರನ್ನು ಕೆಡಿಸಿ

ಅಪಾತ್ರರನ್ನಾಗಿ ಮಾಡುವುದು, ಜಾತಿಯನ್ನು ಬಲಾತ್ಕಾರದಿಂದ ಕೆಡಿಸುವುದು, ಪದಾರ್ಥಗಳನ್ನು ಬೆರಿಕೆ ಮಾಡುವುದು, ಆಕಳು ಮತ್ತು ಎತ್ತುಗಳ ಹಿಂಸೆಯು, ಪ್ರಾಣಿಗಳ ಹಿಂಸೆಯು. ॥ ೮ ॥ ಬ್ರಾಹ್ಮಣಸ್ತ್ರೀ, ವಿಧವೆ, ಶೂದ್ರಸ್ತ್ರೀ, ದಾಸಿಯು ಮತ್ತು ವೇಶ್ಯಾಸ್ತ್ರೀ ಇವರಲ್ಲಿ ಆಸಕ್ತನಾಗಿರುವುದು, ತಿನ್ನಬಾರದುದನ್ನು ತಿನ್ನುವುದು, ಅಭಕ್ಷ್ಯವನ್ನು ಊಟಮಾಡುವುದು. ॥ ೯ ॥ ಕುಡಿಯಬಾರದ್ದನ್ನು ಕುಡಿಯುವುದು, ನೆಕ್ಕಬಾರದ್ದನ್ನು ನೆಕ್ಕುವುದು, ಲೇಪಮಾಡಬಾರದುದನ್ನು ಮೈಕೈಕೂದಲುಗಳಿಗೆ ಹಚ್ಚಿಕೊಳ್ಳುವುದು, ಹೀರಬಾರದ್ದನ್ನು ಹೀರುವುದು. ॥ ೧೦ ॥ ಅಸ್ಪೃಶ್ಯದ ಸ್ಪರ್ಶವು, ಅವಾಚ್ಯ ಮಾತುಗಳನ್ನಾಡುವುದು, ಮತ್ತೊಬ್ಬರ ರಹಸ್ಯಗಳನ್ನು ಪ್ರಕಾಶಪಡಿಸುವುದು, ದ್ವಿಜವೃತ್ತಿಗೆ ಲೋಪ ತರುವುದು. ॥ ೧೧ ॥ ಊಟಕ್ಕೆ ಕೂತವರಲ್ಲಿ ಕೆಲವರಿಗೆ ಹೆಚ್ಚು ಕಡಿಮೆ ಬಡಿಸುವುದು, ವಿಷ್ಣುವಿನ ಮೂಲರೂಪಕ್ಕೆ ಮತ್ತು ನಾನಾ ಅವತಾರಗಳ ರೂಪಗಳಿಗೂ ಭೇದವನ್ನು ಹೇಳುವುದು, ಬ್ರಾಹ್ಮಣರುಗಳ, ಅನಾಥರ, ಹೆಂಗಸರ ಮತ್ತು ಬಾಲಕರ ಹಣವನ್ನೂ ಸ್ವತ್ತನ್ನೂ ಅಪಹರಿಸುವುದು. ॥ ೧೨ ॥ ನಿಷಿದ್ಧವಾದ ಅನ್ನದ ಭೋಜನ (ವಾಯುದೇವರಿಂದ ತಾರತಮ್ಯದಲ್ಲಿ ಕೆಳಗಿನವರಿಗೆ ನಿವೇದನವಾದುದು), ಪತಿತಾನ್ನ, ಕದನ್ನ, ಗಣಾನ್ನ, ವೇಶ್ಯಾಸ್ತ್ರೀಯರ ಅನ್ನ, ಸೂಲಗಿತ್ತಿಯ ಅನ್ನ, ಶೂದ್ರಾದಿಗಳಿಂದ ತಯಾರಾದ ಅನ್ನ ಇವುಗಳನ್ನು ಸ್ವೀಕಾರ ಮಾಡುವುದು. ॥ ೧೩ ॥ ಸಾತ್ವಿಕಳಾದ ಹೆಂಡತಿಯನ್ನು ಬಿಡುವುದು, ತಂದೆತಾಯಿಗಳನ್ನು ತಿರಸ್ಕರಿಸುವದು, ಆತ್ಮಪ್ರಶಂಸೆ, ಪರನಿಂದಾ, ಗುರು ಮತ್ತು ಬ್ರಾಹ್ಮಣರ ನಿಂದೆ ಮಾಡುವುದು. ॥ ೧೪ ॥ ಯತಿಗಳ, ಸಭ್ಯಹೆಂಗಸಿನ ಮತ್ತು ತಂದೆತಾಯಿಯರ ನಿಂದೆ, ಬ್ರಹ್ಮದ್ವೇಷ ಮತ್ತು ಬ್ರಹ್ಮದ್ವೇಷಿಗಳೊಡನೆ ಮೂರು ದಿವಸ ಇರುವುದು ಅಥವಾ ಮಾತನಾಡುವುದು. ॥ ೧೫ ॥ ಉಪಕಾರದ ವಿಸ್ಮರಣೆ, ಛಾಡಿ ಹೇಳುವುದು, ವೇದವಿರುದ್ಧವಾದ ಆಚರಣೆ, ಬಹಿಷ್ಠಳಾದವಳು, ಸೂತಕೀ, ವೇಶ್ಯಾ, ಅಗಸರ ಹೆಂಗಸು ಮತ್ತು ಚಮ್ಮಾರಸ್ತ್ರೀ ಇವರುಗಳ ಜೊತೆ ಸಂಭೋಗಮಾಡುವುದು, ಅವರನ್ನು ಮುಟ್ಟುವುದು, ಅವರೊಡನೆ ಮಾತನಾಡುವುದು, ಅವರುಟ್ಟ ಬಟ್ಟೆಯ ಮೇಲಿಂದ ಬರುವ ಗಾಳಿಯ ಸೇವನೆ ಅಥವಾ ಸ್ಪರ್ಶ, ಅವರ ನೆರಳುಗಳ ಸ್ಪರ್ಶವು. ॥ ೧೬-೧೭ ॥ ಶವದ ಸ್ಪರ್ಶ, ಶವಸಂಸ್ಕಾರಕ್ಕಾಗಿ ಇಟ್ಟಿರುವ ಕಟ್ಟಿಗೆಯ ಸ್ಪರ್ಶ, ಪಶುಗಳನ್ನು ಬಲಿಕೊಡುವುದಾಗಿ ಮಾಡಿರುವ ಯೂಪಸ್ತಂಭದ ಸ್ಪರ್ಶ, ಬಲಿಪಶುವಿನ ಅಸ್ಥಿಸ್ಪರ್ಶ, ಅಂತ್ಯಜನ ಸ್ಪರ್ಶ, ಮಹಾಪಾತಕಿಗಳೊಡನೆ ಚೋರರೊಡನೆ ಸಹವಾಸ. ॥ ೧೮ ॥ ಕುಗ್ರಾಮದಲ್ಲಿ ವಾಸ ಮಾಡೋಣ, ದೇಹದಾರ್ಢ್ಯತೆ ಇದ್ದರೂ ಅಶುದ್ಧತೆಯಿಂದ ಇರುವುದು, ಕೆಟ್ಟ ಅನ್ನಾದಿಗಳ ಭಕ್ಷಣ ಮತ್ತು ಕೆಟ್ಟಪಾತ್ರೆಗಳಲ್ಲಿಟ್ಟಿರುವ ನೀರನ್ನು ಕುಡಿಯುವುದು, ದುಷ್ಟರಿಂದ ದಾನಾದಿ ಸ್ವೀಕಾರ. ॥ ೧೯ ॥ ಕದ್ದು ಭೋಜನ ಮಾಡುವುದು, ಆಪತ್ತಿನಲ್ಲಿ ಸಿಲುಕಿದವರ ಅನ್ನವನ್ನು ತಿನ್ನುವುದು, ಯಜಮಾನನ ಅನುಪಸ್ಥಿತಿಯಲ್ಲಿ ಭೋಜನ, ಹಾಸಿಗೆಯಲ್ಲಿ ಮಲಗಿಕೊಂಡೇ ತಿನ್ನುವುದು, ಮಂಚದಲ್ಲಿ ಕುಳಿತು ತಿನ್ನುವುದು. ॥ ೨೦ ॥ ಒಂದು ಪಕ್ಷವನ್ನು ವಹಿಸಿ ಸುಳ್ಳು ಸಾಕ್ಷಿ ಹೇಳುವುದು, ಹಗಲು ಸಂಭೋಗ ಮಾಡುವುದು, ನಿದ್ರೆಯಲ್ಲಿಯೇ ಆಸಕ್ತಿ, ವ್ಯರ್ಥವಾಗಿ ಮಾತನಾಡುವುದು, ಮದದಿಂದ ಬ್ರಾಹ್ಮಣ ರನ್ನು ನಮಸ್ಕರಿಸದಿರುವುದು. ॥ ೨೧ ॥ ವಿದ್ಯೆ, ಪುಸ್ತಕ, ದಾಸಿಯರು, ಕನ್ಯೆಯರು, ರಸ, ಮಜ್ಜಿಗೆ, ಸಿಹಿ ತಿಂಡಿ ಇವುಗಳನ್ನು, ನಾಲ್ಕು ಪಾದಗಳನ್ನೊಳಗೊಂಡ ಪ್ರಾಣಿಗಳನ್ನಾಗಲೀ, ವೇದಗಳನ್ನಾಗಲೀ, ಸ್ಮೃತಿಗ್ರಂಥಗಳನ್ನಾಗಲೀ ಮತ್ತು ಪುರಾಣಗಳನ್ನಾಗಲೀ ಹಣದ ಆಸೆಗಾಗಿ ಮಾರುವುದು. ॥ ೨೨ ॥ ಗಾಯತ್ರೀಜಪ, ರುದ್ರಜಪ, ವೇದಪಾರಾಯಣ ಮತ್ತು ಇಷ್ಟದೇವತೆಯ ಜಪ ಇವುಗಳಿಂದ ಸಂಪಾದಿಸಿರುವ ಶ್ರೇಯಸ್ಸನ್ನು ಹಣಕ್ಕಾಗಿ ಮತ್ತೊಬ್ಬರಿಗೆ

ವಿಕ್ರಯ ಮಾಡುವುದು. ॥ ೨೩ ॥ ವ್ಯರ್ಥವಾಗಿ ವೀರ್ಯಸ್ಖಲನ ಮಾಡುವುದು, ಪುರುಷಸಂಭೋಗ ಮಾಡುವುದು, ಮಾನಸಿಕವಾಗಿಯೂ ವಾಚನಿಕವಾಗಿಯೂ ಮತ್ತು ಪರ್ವಕಾಲದಲ್ಲೂ ಮೈಥುನ ಮಾಡುವುದು. ॥ ೨೪ ॥ ಈರುಳ್ಳಿ, ಸುನಾಲಾವು, ಬೆಳ್ಳುಳ್ಳಿ, ಇವುಗಳನ್ನು ತಿನ್ನುವುದು, ಸ್ನಾನಸಂಧ್ಯಾವಂದನಾದಿಗಳಿಲ್ಲದೆಯೂ ಭೋಜನ ಮಾಡುವುದು. ॥ ೨೫ ॥ ವೈಶ್ವದೇವಾದಿಗಳಿಲ್ಲದ ಭೋಜನ ಮಾಡುವುದು, ಹಗಲಿನಲ್ಲಿ ಎರಡು ಬಾರಿ ಭೋಜನ ಮಾಡುವುದು, ಕೆಟ್ಟವರ ಪಂಕ್ತಿಯಲ್ಲಿ ಕುಳಿತು ಭೋಜನ ಮಾಡುವುದು, ಹೆಣ್ಣುಮಕ್ಕಳ ಜೊತೆಗೆ ಕುಳಿತು ಭೋಜನ ಮಾಡುವುದು. ॥ ೨೬ ॥ ಆಲ, ಎಕ್ಕೆ ಮತ್ತು ಅರಳೀ ಎಲೆಗಳಲ್ಲಿ ಭೋಜನ ಮಾಡುವುದು, ಕಬ್ಬಿಣದ (ಸ್ಟೀಲ್)ತಟ್ಟೆಯಲ್ಲಿ, ಭೋಜನ ಮಾಡಿರುವುದು, ಅವಕಾಶವಿದ್ದರೂ ಆಪೋಶನವಿಲ್ಲದೇ ಪ್ರಾಣಾಹುತಿ ಕೊಡದೇ ಊಟ ಮಾಡುವುದು. ॥ ೨೭ ॥ ಹನ್ನೊಂದನೇ ದಿವಸ ಮಾಡುವ ''ಏಕಾಹ''ಶ್ರಾದ್ಧದಲ್ಲಿ ಭೋಜನ ಮಾಡುವುದು. ಏಕಾದಶೀ ದಿವಸ ಭೋಜನ ಮಾಡುವುದು, ಸಂಧ್ಯಾಕಾಲದಲ್ಲಿ ಭೋಜನ, ಮ್ಲೇಚ್ಛಾದಿಗಳ ಸೇವನೆಯನ್ನು ಹಣದಾಸೆಗಾಗಿ ಮಾಡುವುದು. ॥ ೨೮ ॥ ಕೆರೆನದೀನೀರಿನ ಒಳಗೆ ಶೌಚ ಮಾಡುವುದು, ಶುದ್ಧವಾಗಿರುವ ಭೂಮಿ ಯಲ್ಲಿ ಮಲಮೂತ್ರವಿಸರ್ಜನೆ ಮಾಡುವುದು, ದುರಾಶೆಯಿಂದಲೋ, ಕಾಮದಿಂದಲೋ, ಕ್ರೋಧದಿಂದಲೋ, ಲೋಭದಿಂದಲೋ ಅಲ್ಲ ಅಜ್ಞಾನಾದಿಗಳಿಂದಲೋ, ಡಂಭದಿಂದಲೋ ಅಥವಾ ಅಹಂಕಾರದಿಂದಲೋ ನಿಷಿದ್ಧಕರ್ಮವನ್ನು ಆಚರಿಸುವುದು, ವಿಷವನ್ನು ಹಾಕುವುದು, ಬೆಂಕಿಯಿಂದ ಹೊಲಮನೆಗದ್ದೆಗಳನ್ನು ಸುಡುವುದು ಮುಂತಾದ ನಿಷಿದ್ಧ ಕೆಲಸ ಮಾಡುವುದು, ಕ್ರೋಧದಿಂದ ಗುರುಗಳನ್ನೇ ಆಕ್ಷೇಪಮಾಡುವುದು. ॥ ೨೯-೩೦ ॥ ವಾಗ್ದಾನ ಮಾಡಿದ ಪ್ರಕಾರ ದೈಹಿಕವಾಗಿಯೂ, ಮಾತಿನಿಂದಲೂ ಮತ್ತು ಮನಸ್ಸಿನಿಂದಲೂ ನಡೆದುಕೊಳ್ಳದಿರುವದು, ಹೊಟ್ಟೆಕಿಚ್ಚಿನಿಂದ ವಿವಾಹ ಮತ್ತು ಧರ್ಮಕಾರ್ಯಗಳಲ್ಲಿ ವಿಘ್ನವನ್ನುಂಟುಮಾಡುವುದು. ॥ ೩೧ ॥ ಕಪ್ಪುಬಣ್ಣದ ಆಕಳ ಹಾಲನ್ನು ಕುಡಿಯುವುದು, ರಜಸ್ವಲೆಯೊಡನೆ ಸಂಭೋಗ ಮಾಡುವುದು, ಸೋದರತ್ತೆ ಅಕ್ಕತಂಗಿಯರು, ಹೆಂಡತಿಯ ತಾಯಿ, ತಂಗಿಯು, ಸೊಸೆಯು, ಆಚಾರ್ಯರ ಪತ್ನೀ, ಪತಿವ್ರತಾ ಸ್ತ್ರೀ, ತನ್ನ ವರ್ಣಕ್ಕಿಂತ ಉತ್ತಮವರ್ಣಕ್ಕೆ ಸೇರಿದಸ್ತ್ರೀ, ಮಗಳು, ಮೊರೆಹೊಕ್ಕು ಬಂದಿರುವ ಸ್ತ್ರೀ, ಮಲತಾಯಿ ಇವರೊಡನೆ ಗಮನ, ಗುರುಪತ್ನಿಯೊಡನೆ ಸಂಭೋಗ ಮಾಡುವುದಕ್ಕೆ ಸರಿಸಮನಾಗಿ- ಇರುವ ಪಾಪಕಾರ್ಯಗಳು, ಇವುಗಳಲ್ಲಿ ತೊಡಗುವುದು, ಹಣದ ನಿಗದಿಯಿಂದ ಪಾಠ ಹೇಳಿಕೊಡುವುದು ಮತ್ತು ಅಣ್ಣಂದಿರಿಗಿಂತ ಮೊದಲೇ ವಿವಾಹ ಮಾಡಿಕೊಳ್ಳುವುದು. ಎಣ್ಣೆಗಾಣವನ್ನು ಇಡುವುದು, ಏಕಾದಶೀಚತುರ್ಮಾಸ್ಯಾದಿ ವ್ರತಗಳನ್ನು ಆಚರಿಸದೆ ಇರುವುದು, ಸಮಾಜ ಬಾಹಿರರಿಗೆ ಯಜ್ಞಮಾಡಿಸುವುದು, ಅಧಿಕವಾದ ಬಡ್ಡಿ ಸಂಪಾದಿಸುವುದು, ತಂದೆ, ತಾಯಿ, ಮಗ, ಹೆಂಡತಿ ಇವರುಗಳನ್ನೂ, ಸದ್ಗುರುಗಳನ್ನೂ ಮತ್ತು ಉಪಾಧ್ಯಾಯರನ್ನು ತ್ಯಜಿಸಿ ಆಶ್ರಮವನ್ನು ಸೇರಿಕೊಳ್ಳುವುದು, ಮತ್ತೊಬ್ಬರು ನೀಡುವ ಅನ್ನದಿಂದ ದೇಹವನ್ನು ಬೆಳೆಸುವುದು. ॥ ೩೨-೩೬ ॥ ಮತ್ತೊಬ್ಬರ ಗುಣಗಳನ್ನು ತೆಗಳಿ ಅವರಲ್ಲಿರುವ ದೋಷಗಳನು ಎತ್ತಿತ್ತೋರಿಸುವುದು. ಪ್ರತಿನಿತ್ಯವೂ ಎಲ್ಲರೊಡನೆ ನಿಷ್ಠುರವಾಗಿ ಮಾತನಾಡುವುದು ಮತ್ತು ಸುಳ್ಳಾಡುವುದು. ॥ ೩೭ ॥ ವೇದಾಧ್ಯಯನ ಮಾಡದಿರುವುದು, ಓದಿದ್ದನ್ನು ಮರೆಯುವುದು, ತಾಯಿ ತಂದೆಯರ ಸೇವಾ ಮಾಡದಿರುವುದು ಮತ್ತು ಅವರ ಮಾತನ್ನು ನಡೆಸಿಕೊಡದಿರುವುದು. ॥ ೩೮ ॥ ಅಗ್ನಿಹೋತ್ರಾದಿಗಳನ್ನು ಮಾಡದಿರುವುದು, ವಿಷ್ಣುವಿನ ಪೂಜಾ ಮಾಡದಿರುವುದು.

ಪಾಣಿಗ್ರಹಣವಾದ ದಿನದಿಂದಲೂ ಸ್ವಧರ್ಮಪರಿಪಾಲನೆ ಮಾಡದಿರುವುದು, ॥ ೩೯ ॥ ಸಾಧುಸಜ್ಜನರನ್ನು ಹಿಂಸಿಸುವುದು, ದುಷ್ಟರನ್ನೂ ಪತಿತರನ್ನೂ ಕಾಪಾಡುವುದು, ಬೇರೆಯವರಿಗೆ ಅಪಕಾರವೆಸಗುವುದು ಮತ್ತು ಮತ್ತೊಬ್ಬರ ಹಣದಿಂದ ಜೀವಿಸುವುದು. ॥ ೪೦ ॥ ಒಂದು ಬಾರಿ ಅಥವಾ ಅನೇಕ ಬಾರಿ ಎಸಗಿರುವ ಪಾಪಗಳನ್ನೇ ಮತ್ತೆ ಮತ್ತೆ ಮಾಡಿದ್ದೇನೆ. ಈ ಪಾಪಗಳನ್ನು ಹೋಗಲಾಡಿಸಲು ಎಷ್ಟು ಬಾರಿ ಸ್ನಾನ ಮಾಡಬೇಕೋ ಅಷ್ಟು ಸಲ ಈ ಜಲದಲ್ಲಿ ಸ್ನಾನ ಮಾಡುವೆನು. ॥ ೪೧ ॥ ''ನನ್ನ ಅಂತಃಕರಣದ ಶುದ್ಧಿಗೋಸ್ಕರ ಮತ್ತು ಶ್ರೀಮಾಧವನ ಪ್ರೀತಿಗೋಸ್ಕರ ಆರು ವರ್ಷಗಳು, ಮೂರು ವರ್ಷಗಳು, ಒಂದು ವರ್ಷ, ಕಡೆಗೆ ಆರು ತಿಂಗಳು ಕೃಚ್ಛ್ರರೂಪ ಪ್ರಾಯಶ್ಚಿತ್ತವನ್ನು ಒಂದು ವರ್ಷ ಅಥವಾ ಯಥಾಶಕ್ತಿಯಿಂದಲೂ ವಿಧಿವತ್ತಾಗಿ ಯಾತ್ರಾ, ಹೋಮ, ಜಪ, ಸ್ನಾನ, ಬ್ರಾಹ್ಮಣರಿಗೆ ದಾನ ಈ ಯಾವುದಾದರೊಂದು ಪ್ರಕಾರ ಪ್ರಾಯಶ್ಚಿತ್ತಪೂರ್ವಕವಾಗಿ, ಶ್ರೀಮಾಧವನ ಆಜ್ಞಾಪ್ರಕಾರ, ಬ್ರಾಹ್ಮಣರುಗಳ ಅನುಜ್ಞೆಯೊಂದಿಗೆ ವಿಧಿವತ್ತಾಗಿ ಗಂಗಾಯಮುನೆಯರ ಸಂಗಮಸ್ಥಳವಾದ ತ್ರಿವೇಣೀಕ್ಷೇತ್ರದಲ್ಲಿ ಸ್ನಾನ ಮಾಡುತ್ತೇನೆ.'' ಎಂದು ಮೌಸಲಾಖ್ಯ ಮಹಾಸಂಕಲ್ಪ ಮಾಡಿ ತ್ರಿವೇಣೀಸಂಗಮ ಪ್ರವಾಹದ ಎದುರಿಗೆ ನಿಂತು ಮೂರು ಬಾರಿ ಸ್ನಾನ ಮಾಡಬೇಕು. ॥ ೪೨-೪೫॥

॥ ನಲವತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕಚತ್ವಾರಿಂಶೋಽಧ್ಯಾಯಃ ॥ ೪೧ ॥

**ಶೇಷ ಉವಾಚ—**

ತತಃ ಸಂಧ್ಯಾಮುಪಾಸೀತಾನರ್ಹಃ ಕರ್ಮಸು ತದ್ವಿನಾ ।
ಕೃತನಿತ್ಯಕ್ರಿಯಃ ಪೂರ್ವಂ ನೈವ ಸಂಧ್ಯಾದಿಕಂ ಚರೇತ್ ॥ ೧ ॥
ತತಸ್ತೀರಂ ಸಮಾಗತ್ಯ ಕ್ಷೌರಸಂಕಲ್ಪಮಾಚರೇತ್ ।
ಪ್ರಾಗುಕ್ತಪಾಪನಾಶಾರ್ಥಮಾತ್ಮನಶ್ಶುದ್ಧಿಕಾಮ್ಯಯಾ ॥ ೨ ॥
ಸರ್ವೇಷಾಂ ಪಿತೃಣಾಂ ಮುಕ್ತ್ಯೈ ತ್ರಿವೇಣೀತೀರಸನ್ನಿಧೌ ।
ಕೇಶಮೂಲಕೃತಾವಾಸಸರ್ವಪಾಪನಿಷೂದನಮ್ ॥ ೩ ॥
ಪ್ರಾಯಶ್ಚಿತ್ತನಿದಾನಂ ಚ ಕರಿಷ್ಯೇ ಕ್ಷೌರಮಾತ್ಮನಃ ।
ಸಂಕಲ್ಪ್ಯೈವಂ ತಟೇ ಸ್ಥಿತ್ವಾ ಪ್ರಾಙ್ಮುಖೋ ವಾಪ್ಯುದಙ್ಮುಖಃ ॥ ೪ ॥
ಶ್ಮಶ್ರ್ವಾದಿಪ್ರಾಗುದಕ್ಸಂಸ್ಥಾ ಕ್ಷೌರಕುರ್ಯಾತ್ತ್ವದಕ್ಷಿಣಮ್ ।
ಶ್ಮಶ್ರೂಪಪಕ್ಷಕೇಶಾನಂ ಕ್ರಮೇಣ ಪರಿವಾಪನಮ್ ॥ ೫ ॥
ಶಿರಸಃ ಕೇಚಿದಿಚ್ಛಂತಿ ಪ್ರಾಯಶ್ಚಿತ್ತಸ್ವರೂಪತಃ ।
ಕೇಶಶ್ಮಶ್ರೂಲೋಮನಖಾನ್ಯುದಕಸ್ಯ ನಿವಾಪಯೇತ್ ॥ ೬ ॥
ಕಕ್ಷೋಪಸ್ಥಶಿಖಾವರ್ಜಂ ಸಕೃದೇವಾನುಲೋಮತಃ ।
ಕೃತ್ವೈವಂ ನಾಪಿತಂ ತೋಷ್ಯ ದ್ರವ್ಯವಸ್ತ್ರಾದಿದಾನತಃ ॥ ೭ ॥
ಸ್ನಾತ್ವಾಚಮ್ಯೋಕ್ತಕಾಷ್ಠೇನ ದಂತಧಾವನಮಾಚರೇತ್ ।
ಆಯುರ್ಬಲಂ ಯಶೋ ವರ್ಚಃ ಪ್ರಜಾಪಶುವಸೂನಿ ಚ ॥ ೮ ॥
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವನ್ನೋ ದೇಹಿ ವನಸ್ಪತೇ ।
ಮುಖದುರ್ಗಂಧನಾಶಾಯ ದಂತಾನಾಂ ಚ ವಿಶುದ್ಧಯೇ ॥ ೯ ॥
ಷ್ಠೀವನಾಯ ಚ ಗಾತ್ರಾಣಾಂ ಕುರ್ವೇಽಹಂ ದಂತಧಾವನಮ್ ।
ವಿತಸ್ತಿಕಾಷ್ಠಂ ಮಂತ್ರೇಣಾಭಿಮಂತ್ರ್ಯ ರದಧಾವನೇ ॥ ೧೦ ॥
ಸ್ನಾತ್ವಾ ಸಂಕಲ್ಪ್ಯ ಕುರ್ವೀತ ದಶಸ್ನಾನಾದಿಮಂತ್ರತಃ ।
ಭಸ್ಮಗೋಮಯಮೃತ್ಸ್ನಾಭಿಃ ಪಂಚಗವ್ಯೈಃ ಪೃಥಕ್ ಪೃಥಕ್ ॥ ೧೧ ॥
ಶುದ್ಧಂ ಮೌಶಲಮಿತ್ಯೇವಂ ದಶಸ್ನಾನಾದಿ ವೈ ವಿದುಃ ।
ಗವ್ಯಂ ಭಸ್ಮ ಸಮಾದಾಯ ಯಥಾಲಾಭಂ ಚ ದಾವಜಮ್ ॥ ೧೨ ॥
ಗಂಗಾಮೃದಂ ಸಮಾದಾಯ ದಶಯಜ್ಞಸಮುದ್ಭವಾಮ್ ।
ಮಾನಸ್ತೋಕೇತಿ ಮಂತ್ರೇಣ ಕರೇ ಕೃತ್ವಾಭಿಮಂತ್ರ್ಯ ಚ ॥ ೧೩ ॥
ಅಗ್ನಿರಿತ್ಯಾದಿಭಿರ್ಮಂತ್ರೈಃ ಷಡ್ಭಿಸ್ತದಭಿಮಂತ್ರ್ಯ ಚ ।
ನಮೋಽಂತೈಸ್ಸಕಲೈರ್ವಾಪಿ ಸದ್ಯೋ ಜಾತಾದಿಪಂಚಭಿಃ ॥ ೧೪ ॥

ಶಿರಸ್ಯಾಸ್ಯೇ ಚ ಹೃದಯೇ ಗುಹ್ಯೇ ಚರಣಯೋಃ ಕ್ರಮಾತ್ ।
ಲೇಪಯಿತ್ವಾಥ ತಾರೇಣ ಸಕಲಾಂಗೇಷು ಲೇಪಯೇತ್ ॥ ೧೫ ॥
ಪುನಃ ಸ್ನಾತ್ವಾ ಚ ಸಂಕಲ್ಪ್ಯ ಕುರ್ಯಾದ್ಗೋಮಯಮಜ್ಜನಮ್ ।
ಕೃಷ್ಣಾಯ ಗೋಮಯಂ ಪಾತ್ರೇ ಧೃತ್ವಾ ಭೂಮಾವಸಂಗತಃ ॥ ೧೬ ॥
ಉದಕಸ್ಸಂಸ್ಥಸ್ತ್ರಿಧಾ ಸವ್ಯೇ ಭಕ್ತ್ವಾ ವ್ಯಾಹೃತಿಭಿಃ ಕರೇ ।
ದಕ್ಷಿಣಾದಿಕ್ಷುತಾರೇಣ ಪ್ರಾಗಾದೌ ಕ್ಷೇಪಯೇತ್ಪುನಃ ॥ ೧೭ ॥
ಉತ್ತರಂ ಸಕಲಂ ಭಾಗಂ ತೂಷ್ಣೀಂ ತೀರ್ಥೇ ವಿನಿಕ್ಷಿಪೇತ್ ।
ಗಂಧದ್ವಾರೇತಿ ಮಂತ್ರೇಣ ಮಧ್ಯಮಂ ಚಾಭಿಮಂತ್ರ್ಯ ಚ ॥ ೧೮ ॥
ಶಿರಃಪ್ರಭೃತಿಸರ್ವಾಂಗೇ ಲೇಪಯೇದಗ್ರಮಗ್ರತಃ ।
ಸರ್ವತ್ರ ಲೇಪನಂ ಕುರ್ಯಾನ್ನ ಕಿಂಚಿದವಶೇಷಯೇತ್ ॥ ೧೯ ॥
ಸ್ನಾತ್ವಾಽಽಚಮ್ಯ ಚ ಸಂಕಲ್ಪ್ಯ ಮೃತ್ತಿಕಾಸ್ನಾನಮಾಚರೇತ್ ।
ಪಾರ್ಥಿವಂ ಖಾತ್ವಾ ಗೃಹೀತ್ವಾ ತಾಂ ದಕ್ಷಿಣೇ ತು ಕರೇ ನ್ಯಸೇತ್ ॥ ೨೦ ॥
ಸದೂರ್ವಾಂ ಮೃದಮಭ್ಯುಕ್ಷ್ಯ ತ್ರಿಧಾ ಮಂತ್ರ್ಯ ಚ ಪೂರ್ವವತ್ ।
ತತ್ತಲ್ಲಿಂಗಕಮಂತ್ರೈಶ್ಚ ಕ್ಷಿಪ್ತ್ವಾ ದಿಕ್ಷು ಚ ದಕ್ಷಿಣಾಮ್ ॥ ೨೧ ॥
ತೀರ್ಥೇ ಕ್ಷಿಪ್ತ್ವೋತ್ತರಂ ಮಧ್ಯಾಂ ತತ್ತನ್ಮಂತ್ರೈರ್ಯಥಾಕ್ರಮಮ್ ।
ಮಸ್ತಕೇ ಚ ಮುಖೇ ಕಂಠೇ ಹೃದಿ ನಾಭೌ ಭುಜದ್ವಯೇ ॥ ೨೨ ॥
ಕಕ್ಷಯೋಶ್ಚ ತಥಾ ಕುಕ್ಷ್ಯೋಃ ಪೃಷ್ಠ ಊರ್ವೋಶ್ಚ ಜಾನುನೋಃ ।
ಪಾದಯೋರ್ಹಸ್ತಯೋಃ ಪಶ್ಚಾತ್ಸರ್ವಾಂಗೇಷು ವಿಲೇಪಯೇತ್ ॥ ೨೩ ॥
ಅಶ್ವಕ್ರಾಂತೇತಿ ಸರ್ವಾಂಗಮಶಕ್ತೌ ಲೇಪಯೇನ್ಮೃದಾ ।
ತೀರ್ಥಂ ಪ್ರಾಪ್ಯ ತತೋ ಮಂತ್ರೈರ್ವರುಣಂ ಜಲದೇವತಾಮ್ ॥ ೨೪ ॥
ಉಭಾಭ್ಯಾಮಭಿಮಂತ್ರಾಭ್ಯಾಂ ಭೈರವಂ ಪ್ರಾರ್ಥಯೇತ್ತತಃ ।
ಉಗ್ರದಂಷ್ಟ್ರ ಮಹಾಕಾಯ ಕಲ್ಪಾಂತದಹನೋಪಮ ॥ ೨೫ ॥
ಭೈರವಾಯ ನಮಸ್ತುಭ್ಯಮನುಜ್ಞಾಂ ದಾತುಮರ್ಹಸಿ ।
ಸಮುದ್ರಭೀಷಣಾರಾವ ದಂಡಿನ್ನಸುರಭೀಷಣ ॥ ೨೬ ॥
ಸೃಷ್ಟಿಸ್ಥಿತಿಲಯಾಧಾರ ಮಜ್ಜನೇಽನುಗೃಹಾಣ ಮಾಮ್ ।
ಪ್ರಾರ್ಥ್ಯೈವಂ ಭೈರವಂ ದೇವಂ ಸ್ನಾನಾನುಜ್ಞಾಪ್ರದಂ ನೃಣಾಮ್ ॥ ೨೭ ॥
ವೇದಮಂತ್ರೈಶ್ಚ ಪೌರಾಣೈಸ್ತ್ರಿವೇಣೀಂ ಪ್ರಾರ್ಥಯೇತ್ತತಃ ।
ತ್ವಂ ವೈ ವೇದಶಿರೋಮುಷ್ಟಾ ತ್ರಿಮಾರ್ಗಾ ತ್ರಿಗುಣಾಪಗಾ ॥ ೨೮ ॥
ತೀರ್ಥರಾಜ ಪ್ರಯಾಗೇಽಸ್ಮಿನ್ಪ್ರತ್ಯಕ್ಷಾ ಭವ ವೇಣಿಕೇ ।
ತ್ರಿವಿಧಂ ಯದ್ಯದಭ್ಯಸ್ತಂ ನಾನಾಜನ್ಮನಿ ವೈ ಮಯಾ ॥ ೨೯ ॥

ತತ್ಪಾಪಂ ಶತಧಾ ಯಾತು ಕ್ಷಣೇನ ತವ ಸನ್ನಿಧೌ ।
ಸ್ಮರಣಾತ್ಪಾತಕಂ ಹಂತಿ ದರ್ಶನಾತ್ಸರ್ವಕಾಮದಾ ॥ ೩೦ ॥
ನಮನಾಚ್ಛುದ್ಧಿದಾಸಿ ತ್ವಂ ಸ್ನಾನಾದ್ವಿಷ್ಣುಪದಪ್ರದಾ ।
ಸಂಪ್ರಾರ್ಥ್ಯ ವೇಣಿಕಾಮೇವಂ ಭಕ್ತಿಭಾವಿತಚೇತಸಾ ॥ ೩೧ ॥
ಪ್ರವಾಹಾಭಿಮುಖಂ ಸಮ್ಯಕ್ತನ್ನಿಮಜ್ಜನಮಾಚರೇತ್ ।
ತತಃ ಪ್ರಾಙ್ಮುಖಮಾಚಮ್ಯ ಮಂತ್ರೈರೇತೈಃ ಕುಶೋದಕೈಃ ॥ ೩೨ ॥
ಮಾರ್ಜಯೇತ್ಸರ್ವಗಾತ್ರಾಣಿ ಮಸ್ತಕಾದೀನಿ ಸರ್ವತಃ ।
ಕೃತ್ವೈವಂ ಮಾರ್ಜನಂ ಪಶ್ಚಾನ್ಮಂತ್ರೇಣಾಲೋಢ್ಯ ತಜ್ಜಲಮ್ ॥ ೩೩ ॥
ಏಕ ದ್ವಿ ತ್ರಿ ಯಥಾ ಮಂತ್ರೈಃ ಕುರ್ಯಾತ್ತತ್ರಾಘಮರ್ಷಣಮ್ ।
ತತಃ ಸವ್ಯಾದಿನಾ ಕೃತ್ವಾ ಸ್ನಾನಾಂಗಂ ಜಲತರ್ಪಣಮ್ ॥ ೩೪ ॥
ತೀರಮಾಗತ್ಯ ನಿಷ್ಪೀಡ್ಯ ಶಿಖಾವಸ್ತ್ರೋದಕಂ ತತಃ ।
ಅಹತೇ ವಾಸಸೀ ಚಾಥ ಪರಿಧಾಯ ದ್ವಿರಾಚಮೇತ್ ॥ ೩೫ ॥
ಮಾಧವಂ ಪುಂಡರೀಕಾಕ್ಷಂ ಕೇಶವಂ ಚ ಹರಿಂ ಸ್ಮರೇತ್ । ॥ ೩೬ ॥

॥ ಇತಿ ಏಕಚತ್ವಾರಿಂಶೋಽಧ್ಯಾಯಃ ॥

## ॥ ನಲವತ್ತೊಂದನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ದೈನಂದಿನ ಕರ್ಮಾಚರಣೆಗೆ ಮೊದಲೇ ಸಂಧ್ಯಾವಂದನೆಯನ್ನು ಮಾಡಿರಬೇಕು. ಸಂಧ್ಯಾವಂದನೆಯನ್ನು ಮಾಡದೆ ಯಾವನೂ ತನ್ನ ತನ್ನ ಕರ್ಮಗಳನ್ನು ಮಾಡಲು ಅಧಿಕಾರಿಯಾಗುವುದಿಲ್ಲ. ॥ ೧ ॥ ಅನಂತರ ತ್ರಿವೇಣಿಯ ತೀರಕ್ಕೆ ಬಂದು ಮೌಸಲಾಖ್ಯ ಮಹಾಸಂಕಲ್ಪದಲ್ಲಿ ಉಕ್ತವಾಗಿರತಕ್ಕ ಪಾಪಗಳ ನಾಶಕ್ಕಾಗಿ ಮತ್ತು ತನ್ನ ಶುದ್ಧಿಗಾಗಿಯೂ ತಾನು ಮಾಡಿಸಿಕೊಳ್ಳಬೇಕಾಗಿರುವ ಕ್ಷೌರಕರ್ಮದ ಸಂಕಲ್ಪವನ್ನು ಮಾಡತಕ್ಕದ್ದು. ॥ ೨ ॥ ತ್ರಿವೇಣಿಯ ದಡದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತುಕೊಂಡು, ಪ್ರಾಯಶ್ಚಿತ್ತದ ನಿಮಿತ್ತ "ಕೂದಲುಗಳ ಬುಡದಲ್ಲಿ ಇರತಕ್ಕ ಎಲ್ಲ ಪಾಪಗಳ ನಾಶಕ್ಕೋಸ್ಕರ ಕೇಶಕ್ಷೌರವನ್ನು ಮಾಡಿಸುವೆನು" ಎಂದು ತಮ್ಮ ತಮ್ಮ ಸರ್ವಪಿತೃಗಳ ಮುಕ್ತಿಗಾಗಿ ಸಂಕಲ್ಪ ಮಾಡಬೇಕು. ॥ ೩-೪ ॥ ವೇಣೀತೀರದಲ್ಲಿ ಉತ್ತರ ಅಥವಾ ಪೂರ್ವಾಭಿಮುಖವಾಗಿ ಕುಳಿತು ಮೀಸೆ ಮೊದಲಾದ ಮೊದಲೇ ಉಲ್ಲೇಖಿತ-ವಾಗಿರುವ ಕೂದಲುಗಳನ್ನೆಲ್ಲಾ ಪ್ರದಕ್ಷಿಣಾಕಾರವಾಗಿ ಕ್ಷೌರ ಮಾಡಿಸಿಕೊಳ್ಳಬೇಕು. ॥ ೫ ॥ ತಲೆಯ ಕೂದಲನ್ನೆಲ್ಲಾ ಕೆಲವರು ಪ್ರಾಯಶ್ಚಿತ್ತರೂಪದಲ್ಲಿ ಕ್ಷೌರ ಮಾಡಿಸಿಕೊಳ್ಳಲು ಬಯಸುತ್ತಾರೆ. ತಲೆಯ ಕೂದಲು, ಉದರದ ಮೇಲಿನ ಕೂದಲು, ಮೀಸೆಯ ಕೂದಲು, ಉಗುರುಗಳನ್ನು ಕ್ಷೌರ ಮಾಡಿಸಿಕೊಳ್ಳುವಾಗ ತೆಗೆಸಿಕೊಳ್ಳಬೇಕು. ॥ ೬ ॥ ಕೊಂಕಳ ಸಂದಿಗಳು, ಗುಹ್ಯಪ್ರದೇಶ, ಜುಟ್ಟು ಇವುಗಳನ್ನು ಕ್ಷೌರದಿಂದ ಬಿಡಬೇಕು. ಈ ರೀತಿಯಾಗಿ ಕ್ಷೌರವನ್ನು ಮಾಡಿಸಿಕೊಂಡು ಕ್ಷೌರಿಕನಿಗೆ ಸಂಭಾವನೆ, ವಸ್ತ್ರ, ಅಕ್ಕಿ ಮುಂತಾದ ಪದಾರ್ಥಗಳನ್ನು ಕೊಟ್ಟು ಸಂತೋಷಪಡಿಸಬೇಕು. ॥ ೭ ॥ ನಂತರ ಸ್ನಾನ ಮಾಡಿ, ಆಚಮನ ಮಾಡಿ, "ಆಯುಸ್ಸು, ಬಲ, ಯಶಸ್ಸು, ವರ್ಚಸ್ಸು, ಸಂತಾನ,

ಪಶುಸಂಪತ್ತಿ, ಬಂಗಾರ, ಬ್ರಹ್ಮಜ್ಞಾನ, ಧಾರಣಾಶಕ್ತಿ ಇವುಗಳನ್ನು ಹೇ ವನಸ್ಪತಿಯೇ ನನಗೆ ಕೊಡು ಎಂದು ಆ ಕಾಷ್ಠಸಂಬಂಧವಾದ ವೃಕ್ಷವನ್ನು ಪ್ರಾರ್ಥಿಸಿ ಮುಖ, ಬಾಯಿಗಳ ದುರ್ಗಂಧದ ನಾಶಕ್ಕಾಗಿಯೂ,ಹಲ್ಲುಗಳ ಶುದ್ಧತೆಗಾಗಿಯೂ ಒಂದು ಚೋಟು ಉದ್ದದ ಹಲ್ಲುಕಡ್ಡಿಯಿಂದ ಹಲ್ಲುಜ್ಜತಕ್ಕದ್ದು. ॥ ೮-೧೦ ॥ ನಂತರ ಮಂತ್ರದಿಂದ ಸಂಕಲ್ಪ ಮಾಡಿ, ದಶವಿಧ ಸ್ನಾನವನ್ನು ಮಾಡಬೇಕು. ಭಸ್ಮ, ಗೋಮಯ, ಮೃತ್ತಿಕೆ ಮತ್ತು ಪಂಚಗವ್ಯಗಳನ್ನು ಬೇರೆ ಬೇರೆಯಾಗಿ ಹಚ್ಚಿಕೊಳ್ಳುತ್ತಾ ಸ್ನಾನ ಮಾಡಬೇಕು. ॥ ೧೧ ॥ ಭಸ್ಮ, ಗೋಮಯ, ಮೃತ್ತಿಕೆಗಳಿಂದ (೩), ಪಂಚಗವ್ಯಗಳಿಂದ(೫), ಶುದ್ಧೋದಕದಿಂದ(೧) ಮೌಸಲಸಂಕಲ್ಪದಿಂದ(೧) ಹತ್ತುಸ್ನಾನವೆಂದು ವಿದ್ವಾಂಸರು ಹೇಳುತ್ತಾರೆ. ಆಕಳ ಸೆಗಣಿಯನ್ನು ಸುಟ್ಟು ಭಸ್ಮವನ್ನು ತಯಾರು ಮಾಡಬೇಕು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಕಾಡ್ಗಿಚ್ಚಿನ ಭಸ್ಮವನ್ನು ಉಪಯೋಗಿಸಬೇಕು. ॥ ೧೨ ॥ ಗಂಗಾನದಿಯ ಮಣ್ಣನ್ನು ದಶಾಶ್ವಮೇಧದ ಸ್ಥಳದಿಂದ ತರಬೇಕು. ಇದನ್ನು ''ಮಾನಸ್ತೋಕೇ'' ಎಂಬ ಮಂತ್ರದಿಂದ ಕೈಯಲ್ಲಿ ತೆಗೆದುಕೊಂಡು ಅಭಿಮಂತ್ರಿಸಿ ''ಅಗ್ನಿರಿತಿ ಭಸ್ಮ'' ಮೊದಲಾದ ಆರು ಮಂತ್ರಗಳಿಂದ ಪುನಃ ಆ ಭಸ್ಮವನ್ನು ಅಭಿಮಂತ್ರಿಸಿ 'ವಾಸುದೇವಾಯ ನಮೋ' ಇತ್ಯಾದಿ ನಮೋಽಂತ್ಯವಾದ ಮಂತ್ರಗಳಿಂದಾಗಲೀ, 'ಸದ್ಯೋ ಜಾತಂ ಪ್ರಪದ್ಯಾಮಿ' ಇತ್ಯಾದಿ ಎಲ್ಲಾ ಐದು ಮಂತ್ರಗಳಿಂದಲಾಗಲೀ ಕ್ರಮವಾಗಿ ಶಿರಸ್ಸಿನಲ್ಲಿ, ಮುಖದಲ್ಲಿ, ಹೃದಯದಲ್ಲಿ, ಗುಹ್ಯದಲ್ಲಿ ಮತ್ತು ಕಾಲುಗಳಿಗೆ ಹಚ್ಚಿಕೊಂಡು, ಪ್ರಣವಮಂತ್ರದಿಂದ ಎಲ್ಲ ಅಂಗಗಳಲ್ಲಿಯೂ ಈ ಭಸ್ಮವನ್ನು ಹಚ್ಚಿಕೊಳ್ಳಬೇಕು. ॥ ೧೩-೧೫ ॥ ಅನಂತರ ಸ್ನಾನ ಮಾಡಬೇಕು. ಪುನಃ ಗೋಮಯ ಸ್ನಾನಕ್ಕಾಗಿ ಸಂಕಲ್ಪ ಮಾಡಬೇಕು. ಕರಿಬಣ್ಣದ ಆಕಳ ಸೆಗಣಿಯನ್ನು ಪಾತ್ರೆಯಲ್ಲಿ ತರಬೇಕು. ಇದನ್ನು ಭೂಮಿಗೆ ಮುಟ್ಟಿಸಬಾರದು. ಉತ್ತರಾಭಿಮುಖವಾಗಿ ನಿಂತು ವ್ಯಾಹೃತಿಮಂತ್ರದಿಂದ ಈ ಸೆಗಣಿಯನ್ನು ಎಡಗೈಯಲ್ಲಿ ಇಟ್ಟುಕೊಂಡು ದಕ್ಷಿಣದಿಂದ ಉತ್ತರಕ್ಕೆ ಮೂರು ಭಾಗ ಮಾಡಿ, ಅನಂತರ ದಕ್ಷಿಣದ ಭಾಗವನ್ನು ಮೊದಲು ''ಓಂ '' ಎಂದು ಗಟ್ಟಿಯಾಗಿ ಕೂಗುತ್ತಾ ದಕ್ಷಿಣದಿಕ್ಕಿಗೆ ಎಸೆಯಬೇಕು. ಅನಂತರ ಉತ್ತರ ದಿಕ್ಕಿನ ಒಂದು ಭಾಗವನ್ನು ಏನನ್ನು ಉಳಿಸದೆ ಮೌನವಾಗಿ ವೇಣೀಜಲದಲ್ಲಿ ಹಾಕಬೇಕು. ಗಂಧದ್ವಾರಾಂ ಎಂಬ ಮಂತ್ರದಿಂದ ಮಧ್ಯದಲ್ಲಿರುವ ಭಾಗವನ್ನು ಅಭಿಮಂತ್ರಿಸಿ ಅದನ್ನು ತಲೆಯಿಂದ ಪ್ರಾರಂಭಿಸಿ ಶರೀರದಲ್ಲೆಲ್ಲಾ ಪೂರ್ತಿಯಾಗಿ ಹಚ್ಚಿಕೊಳ್ಳಬೇಕು ಮತ್ತು ಸ್ವಲ್ಪವನ್ನೂ ಉಳಿಸಬಾರದು. ॥ ೧೬-೧೯ ॥ ಅನಂತರ ಸ್ನಾನ ಮಾಡಿ, ಆಚಮನ ಮಾಡಿ, ಸಂಕಲ್ಪ ಮಾಡಿ, ಮೃತ್ತಿಕಾಸ್ನಾನವನ್ನು ಮಾಡಬೇಕು. ಈ ಮೃತ್ತಿಕಾಸ್ನಾನವು ಈ ರೀತಿಯಾಗಿದೆ. ತ್ರಿವೇಣೀತೀರದ ಮಣ್ಣನ್ನು ಅಗೆದು ತೆಗೆದುಕೊಂಡು ಅದನ್ನು ಬಲಗೈಯಲ್ಲಿ ಹಿಡಿದುಕೊಳ್ಳಬೇಕು. ॥ ೨೦ ॥ ಈ ಮಣ್ಣಿನ ಜೊತೆಗೆ ಗರಿಕೆಯನ್ನು ಇಟ್ಟುಕೊಳ್ಳಬೇಕು. ಆ ತ್ರಿವೇಣೀನೀರಿನಿಂದ ಮೂರು ಬಾರಿ ಪ್ರೋಕ್ಷಿಸಬೇಕು. 'ಉದ್ಧೃತಾಸಿ' ಇತ್ಯಾದಿಮಂತ್ರದಿಂದ ಅಭಿಮಂತ್ರಿಸಿ ಮೊದಲಿನಂತೆಯೇ ಮೂರು ಭಾಗ ಮಾಡಿ ದಕ್ಷಿಣಭಾಗವನ್ನು ದಕ್ಷಿಣದಿಕ್ಕಿಗೂ, ಉತ್ತರಭಾಗವನ್ನು ವೇಣೀಜಲ-ದಲ್ಲಿಯೂ ವಿಸರ್ಜಿಸಿ ಉಳಿದ ಮಧ್ಯಭಾಗವನ್ನು ತಲೆ, ಮುಖ, ಕುತ್ತಿಗೆ, ಎದೆ, ಹೊಕ್ಕುಳು, ಎರಡು ಭುಜಗಳು, ಎರಡು ಕೊಂಕಳ ಸಂಧಿ, ಹೊಟ್ಟೆ, ಬೆನ್ನು, ತೊಡೆಗಳು, ಎರಡು ಮಂಡಿಗಳು, ಮೊಣಕಾಲು, ಕೈಗಳು ಮತ್ತು ಪಾದಗಳು ಮತ್ತು ಎಲ್ಲ ಅಂಗಾಂಗಗಳಿಗೂ ಆಯಾಯಾ ಮಂತ್ರಗಳಿಂದ (ಯಕ್ಷ್ಮನಾಶನಸೂಕ್ತ) ಹಚ್ಚಿಕೊಳ್ಳಬೇಕು. ॥ ೨೧-೨೩ ॥ ಅಶಕ್ತರಾದವರು ''ಅಶ್ವಕ್ರಾಂತೇ'' ಎಂಬ ಮಂತ್ರದಿಂದ ಈ ಗಂಗಾತೀರದ ಮೃತ್ತಿಕೆಯನ್ನು ಸರ್ವಾಂಗಗಳಿಗೂ

ಹಚ್ಚಿಕೊಳ್ಳಬಹುದು. ಅನಂತರ ತ್ರಿವೇಣೀತೀರ್ಥವನ್ನು ತಲುಪಿ ಜಲದೇವತೆಯಾದ ವರುಣನನ್ನು ಪ್ರಾರ್ಥನೆ ಮಾಡುವುದು. ॥ ೨೪ ॥ ಮುಂದೆ ಬರುವ ಮಂತ್ರಗಳೆರಡರಿಂದ ಭೈರವನನ್ನು ಪ್ರಾರ್ಥಿಸತಕ್ಕದ್ದು. ''ಭೈರವನೇ ! ನೀನು ಚೂಪಾದ ಕೋರೆಹಲ್ಲು ಮತ್ತು ಅದ್ಭುತವಾದ ಶರೀರ ಹೊಂದಿ ಪ್ರಳಯಾಗ್ನಿಯಂತೆ ಭಯಂಕರನು, ಸಮುದ್ರದಂತೆ ಭೀಷಣವಾದ ಗರ್ಜನೆವುಳ್ಳವನು, ಅಸುರರಿಗೆ ಭಯಂಕರನು, ದಂಡಧಾರಿಯು; ತ್ರಿವೇಣಿಯಲ್ಲಿ ಸ್ನಾನ ಮಾಡಲು ನನಗೆ ಅನುಮತಿಯನ್ನು ಕೊಡು, ನಿನಗೆ ನಮಸ್ಕಾರವು. ॥ ೨೫ - ೨೬ ॥ ನೀನು ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ನಾಶಕ್ಕೆ ಕಾರಣನು (ಗೌಣಕಾರಣ, ಮುಖ್ಯಕಾರಣನಲ್ಲ). ಈ ತ್ರಿವೇಣಿಯಲ್ಲಿ ಮುಳುಗಿ ಸ್ನಾನ ಮಾಡಲು ಅಪ್ಪಣೆ ಕೊಡು.'' ಹೀಗೆ ಸ್ನಾನಕ್ಕೆ ಅನುಮತಿಸುವ ಅಧಿಕಾರವುಳ್ಳ ಭೈರವನನ್ನು ಪ್ರಾರ್ಥಿಸತಕ್ಕದ್ದು. ॥ ೨೭ ॥ ವೇದಮಂತ್ರಗಳಿಂದಲೂ ಸ್ಮೃತಿಪುರಾಣೋಕ್ತ ಮಂತ್ರಗಳಿಂದಲೂ ತ್ರಿವೇಣಿಯನ್ನು ಪ್ರಾರ್ಥಿಸತಕ್ಕದ್ದು. ''ನೀನು ವೇದಗಳ ಶಿರೋಭಾಗಗಳಾದ ಉಪನಿಷತ್ತುಗಳ ವೈಶಿಷ್ಟ್ಯವನ್ನು ಅರ್ಥಮಾಡಿಕೊಂಡವಳು. ಸ್ವರ್ಗ, ಮರ್ತ್ಯ ಮತ್ತು ಪಾತಾಳಲೋಕಗಳಲ್ಲಿ ಪ್ರವಹಿಸುತ್ತಿರುವ ಗಂಗೆಯನ್ನೊಳಗೊಂಡಿದ್ದಿ. ಸತ್ವ, ರಜಸ್, ತಮೋಗುಣಗಳಿಗೆ ಅಭಿಮಾನಿನಿಯರಾದ ಗಂಗೆ, ಸರಸ್ವತಿ ಮತ್ತು ಯಮುನೆಯರನ್ನು ಒಳಗೊಂಡಿದ್ದಿ. ॥ ೨೮ ॥ ಅಂತಹ ಗುಣವಿಶಿಷ್ಟಳಾದ ನೀನು ಈ ತೀರ್ಥನಾಯಕನಾದ ಪ್ರಯಾಗಕ್ಷೇತ್ರದಲ್ಲಿ ನನಗೆ ಪ್ರತ್ಯಕ್ಷಳಾಗಿ ಅನುಗ್ರಹಿಸು, ನಾನು ಜನ್ಮಜನ್ಮಾಂತರಗಳಿಂದ ಅಭ್ಯಾಸಮಾಡಿಕೊಂಡು ಬಂದಿರುವ, ಎಸಗುತ್ತಿರುವ ನನ್ನ ಪಾಪರಾಶಿಗಳನ್ನು ನೂರಾರು ಹೋಳುಗಳಾಗಿ ಒಡೆದು ನಾಶಮಾಡು. ನಿನ್ನನ್ನು ಸ್ಮರಣೆ ಮಾಡಿದವರ ಸಕಲಪಾಪಗಳೂ ಪರಿಹಾರವಾಗುವುದು, ನಿನ್ನ ದರ್ಶನ ಮಾಡಿದವರ ಸಕಲ ಇಷ್ಟಾರ್ಥಗಳೂ ನೆರವೇರುವುವು. ನಿನಗೆ ನಮಸ್ಕರಿಸಿದವರು ಪರಿಶುದ್ಧರಾಗುವರು ಮತ್ತು ನಿನ್ನಲ್ಲಿ ಸ್ನಾನ ಮಾಡಿದವರಿಗೆ ವಿಷ್ಣುವಿನ ಸ್ಥಾನವಾದ ವೈಕುಂಠವು ಲಭ್ಯವಾಗುವುದು'' ಈ ರೀತಿಯಾಗಿ ಭಕ್ತಿಯಿಂದ ತುಂಬಿದ ಮನಸ್ಸಿನಿಂದ ವೇಣೀಕಾದೇವಿಯನ್ನು ಪ್ರಾರ್ಥಿಸಿ ಪ್ರವಾಹಾಭಿಮುಖವಾಗಿ ನಿಂತು ತ್ರಿವೇಣಿಯಲ್ಲಿ ಸ್ನಾನವನ್ನು ಮಾಡತಕ್ಕದ್ದು. ಅನಂತರ ಪೂರ್ವಾಭಿಮುಖವಾಗಿ ನಿಂತು ಆಚಮನ ಮಾಡಿ ತ್ರಿವೇಣೀಸ್ತೋತ್ರದಿಂದ ದರ್ಭೆಯಿಂದ ತ್ರಿವೇಣೀ ನೀರನ್ನು ತೆಗೆದುಕೊಂಡು ಶಿರ ಆದಿ ದೇಹದಲ್ಲೆಲ್ಲಾ ಚಿಮುಕಿಸಿಕೊಳ್ಳಬೇಕು. ಅನಂತರ ತ್ರಿವೇಣೀಜಲವನ್ನು ಪ್ರಣವ ಮಂತ್ರದಿಂದ ಕಲಕಿ ಶಕ್ತ್ಯನುಸಾರ ಒಂದು, ಎರಡು ಅಥವಾ ಮೂರು ಮಂತ್ರಗಳಿಂದ (ಅಘಮರ್ಷಣ ಸೂಕ್ತದಲ್ಲಿ ಒಟ್ಟು ಮೂರು ಮಂತ್ರಗಳಿವೆ) ಅಘಮರ್ಷಣಸ್ನಾನವನ್ನು ಮಾಡಬೇಕು. ಅನಂತರ ಸ್ನಾನದ ಅಂಗವಾದ ಜಲತರ್ಪಣವನ್ನು ಸವ್ಯಾದಿಗಳಿಂದ ಕೊಡಬೇಕು. ॥ ೨೯ - ೩೪ ॥ ಅನಂತರ ದಡಕ್ಕೆ ಬಂದು ಶಿಖೆಯನ್ನೂ ಉಟ್ಟ ಬಟ್ಟೆಯನ್ನೂ ಹಿಂಡಿ ಈ ಹಿಂಡಿದ ನೀರನ್ನು ಪಿತೃಗಳ ತೃಪ್ತಿಗಾಗಿ ಬಿಡಬೇಕು. ಅನಂತರ ಒಣಗಿದ ಬಟ್ಟೆಗಳನ್ನು ಧರಿಸಿ, ಎರಡು ಬಾರಿ ಆಚಮನ ಮಾಡಬೇಕು. ॥ ೩೫ ॥ ಅನಂತರ ''ಮಾಧವ, ಪುಂಡರೀಕಾಕ್ಷ, ಕೇಶವ ಮತ್ತು ಹರಿ'' ಇವರುಗಳನ್ನು ಸ್ಮರಿಸತಕ್ಕದ್ದು. ॥ ೩೬ ॥

॥ ನಲವತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಿಚತ್ವಾರಿಂಶೋಽಧ್ಯಾಯಃ ॥ ೪೨ ॥

ಶೇಷ ಉವಾಚ—

ಊರ್ಧ್ವಪುಂಡ್ರಾದಿಕಂ ಧೃತ್ವಾ ಬ್ರಹ್ಮಯಜ್ಞಾಂಗತರ್ಪಣಮ್ ।
ದೇವರ್ಷೀಣಾಂ ವಿಧಾಯಾಥ ಪಿತೄನ್ಸಂತರ್ಪಯೇತ್ತಿಲೈಃ ॥ ೧ ॥
ಪಿತೃಮಾತೃತ್ರಯಂ ಪೂರ್ವಂ ಸಪತ್ನಜನನೀಂ ತತಃ ।
ಮಾತಾಮಹತ್ರಯಂ ಸಸ್ತ್ರಿ ಸ್ವಸ್ತ್ರೀಸುತಸುತಾದಿಕಮ್ ॥ ೨ ॥
ಪಿತೃಮಾತೃಸ್ವಸಹಜಾಸ್ತದಪತ್ಯಾದಿಕಂ ತತಃ ।
ಪಿತೃಮಾತೃಸ್ವಭಗಿನೀಸಧವಾಪತ್ಯಕಾಸ್ತತಃ ॥ ೩ ॥
ಪೂಜ್ಯಂ ಗುರುತ್ರಯಂ ಚಾಪ್ತಸಖಿದ್ರವ್ಯದಶಿಷ್ಯಕಾಃ ।
ಜಾಮಾತಾ ಶಾಲಕಶ್ಚಾಥ ಋತ್ವಿಕ್ಸದಸ್ಯಯೋಷಿತಃ ॥ ೪ ॥
ತೀರ್ಥೇ ಮಹಾಲಯೇ ಲಭ್ಯೇ ಯೋಗೇ ಚ ತಿಲತರ್ಪಣೇ ।
ಪೂಜನೀಯಾಃ ಪ್ರಯತ್ನೇನ ಸನಕಾದ್ಯಾ ಮಹರ್ಷಯಃ ॥ ೫ ॥
ದಕ್ಷಿಣಾಭಿಮುಖೋ ದದ್ಯಾತ್ತತ್ತತ್ಕಾಮೋದಕಾಂಜಲಿಮ್ ।
ಅಪಸವ್ಯೇನ ಸತಿಲೈಸ್ಸಲಿಲೈರಪಿ ತೀರ್ಥತಃ ॥ ೬ ॥
ದೇವಾಸುರಾಸ್ತಥಾ ನಾಗಾ ಯಕ್ಷಗಂಧರ್ವರಾಕ್ಷಸಾಃ ।
ಪಿಶಾಚಾ ಗುಹ್ಯಕಾಸ್ಸಿದ್ಧಾಃ ಕೂಷ್ಮಾಂಡಾಸ್ತರವಃ ಖಗಾಃ ॥ ೭ ॥
ಜಲಸ್ಥಲಚರಾಸ್ಸರ್ವೇ ನಿರಾಧಾರಾಶ್ಚ ಜಂತವಃ ।
ಗಂಗೋದಕೇನ ತೇ ಸರ್ವೇ ತೃಪ್ತಿಮಾಯಾಂತು ಶಾಶ್ವತೀಮ್ ॥ ೮ ॥
ನರಕೇಷು ಸಮಸ್ತೇಷು ಯಾತನಾಸು ಚ ಯೇ ಸ್ಥಿತಾಃ ।
ತೇಷಾಮಾಪ್ಯಾಯನಾಯೈತದ್ದೀಯತೇ ಸಲಿಲಂ ಮಯಾ ॥ ೯ ॥
ಯೇ ಬಾಂಧವಾಬಾಂಧವಾ ವಾ ಯೇಽನ್ಯಜನ್ಮನಿ ಬಾಂಧವಾಃ ।
ತೇ ಸರ್ವೇ ತೃಪ್ತಿಮಾಯಾಂತು ಯೇ ಚಾಸ್ಮತ್ತೋಯಕಾಂಕ್ಷಿಣಃ ॥ ೧೦ ॥
ಯತ್ರ ಕ್ವಾಪಿ ಸ್ಥಿತಾನಾಂ ಚ ಕ್ಷುತ್ತೃಡಾಕುಲಿತಾತ್ಮನಾಮ್ ।
ಇದಮಕ್ಷಯ್ಯತಾಂ ಯಾತು ಮಯಾ ದತ್ತಂ ತಿಲೋದಕಮ್ ॥ ೧೧ ॥
ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ।
ತೇ ಸರ್ವೇ ತೃಪ್ತಿಮಾಯಾಂತು ತೀರ್ಥಸಂತರ್ಪಿತಾ ಮಯಾ ॥ ೧೨ ॥
ಪ್ರಾಗುಕ್ತಕರಣಾಶಕ್ತಾವೇತನ್ಮಂತ್ರೇಣ ಭಕ್ತಿಮಾನ್ ।
ಅನಾವೃತ್ತ್ಯಾಥ ವೃತ್ತ್ಯಾ ವಾ ಪ್ರದದ್ಯಾತ್ತ್ರೀನ್ ಜಲಾಂಜಲೀನ್ ॥ ೧೩ ॥
ನಾತ್ರ ಸ್ನಾನನಿಷೇಧಶ್ಚ ಪ್ರತ್ಯಾವೃತ್ತೋದಕಾದಿಷು ।
ರಜೋದೋಷಶ್ಚ ಗಂಗಾಯಾಂ ನ ಪ್ರಯಾಗೇ ವಿಶೇಷತಃ ॥ ೧೪ ॥

ಅವೀರಾ ತು ಸ್ವಯಂಕುರ್ಯಾದ್ಭರ್ತ್ರಾದೀನಾಂ ಚ ತರ್ಪಣಮ್ ।
ಪ್ರಮೀತಮಾತೃಕಾಶ್ಚಾಪಿ ಯಥಾಧಿಕೃತನಿತ್ಯಶಃ ॥ ೧೫ ॥
ಸಂಕಲ್ಪಿತಂ ತತಃ ಕುರ್ಯಾತ್ಪ್ರಾಯಶ್ಚಿತ್ತಂ ಯಥಾವಿಧಿ ।
ಸದ್ಯಃ ಕಾಲಾಂತರೇ ವಾಪಿ ಶಕ್ತ್ಯಶಕ್ತ್ಯನುಸಾರತಃ ॥ ೧೬ ॥
ಯಾತ್ರಾಯಾಸ್ಸಾಂಗತಾಸಿದ್ಧ್ಯೈ ಪ್ರತ್ಯಕ್ಷಂ ನಿಷ್ಕ್ರಯೇಣ ವಾ ।
ವಿದಧ್ಯಾದ್ದಶದಾನಾನಿ ಸದ್ಯಃ ಕಾಲಾಂತರೇಽಪಿ ವಾ ॥ ೧೭ ॥
ಗೋಭೂತಿಲಹಿರಣ್ಯಾಜ್ಯಂ ವಾಸೋ ಧಾನ್ಯಂ ಗುಡಂ ತಥಾ ।
ರಜತಂ ಲವಣಂ ಚೇತಿ ದಶದಾನಾನ್ಯನುಕ್ರಮಾತ್ ॥ ೧೮ ॥
ಭೂ ನಿವರ್ತನಮಾನಸ್ಸ್ಯಾ ದ್ರೋಣತ್ರಯಮಿತಾಸ್ತಿಲಾಃ ।
ನಿಷ್ಕಮಾನಂ ಸುವರ್ಣಂ ಸ್ಯಾದಾಜ್ಯಂ ಪ್ರಸ್ಥಮಿತಂ ತಥಾ ॥ ೧೯ ॥
ವಾಸೋಯುಗ್ಮಂ ಸಮೀಚೀನಂ ಧಾನ್ಯಂ ಸಾರ್ಧದ್ವಿಖಾರಿಕಮ್ ।
ದಶದಾನಪ್ರಮಾಣಂ ಹಿ ಜ್ಞೇಯಮೇತನ್ಮುನೀಶ್ವರಾಃ ॥ ೨೦ ॥
ಅಶಕ್ತಾವರ್ಧಮರ್ಧಂ ತು ಶಕ್ತೋ ದ್ವಿತ್ರಿಚತುರ್ಗುಣಮ್ ।
ಕುರ್ಯಾನ್ನಾಧವತೋಷಾರ್ಥಂ ವಿತ್ತಶಾಠ್ಯವಿವರ್ಜಿತಃ ॥ ೨೧ ॥
ಅನ್ಯಾನ್ಯಪಿ ಚ ದಾನಾನಿ ಭೂರಿದಾನಮಥಾಪಿ ವಾ ।
ಪಂಗ್ವಂಧಬಾಲವೃದ್ಧೇಭ್ಯೋ ದದ್ಯಾದ್ಯಾತ್ರಾಫಲಾಪ್ತಯೇ ॥ ೨೨ ॥
ತತಸ್ಸಂಕಲ್ಪಯೇದ್ವಿದ್ವಾನುಪವಾಸಂ ವಿಧಾನತಃ ।
ಯೇನಾಗ್ರಿಮಾಣಿ ಕರ್ಮಾಣಿ ವಿಶುದ್ಧಾನಿ ಭವಂತಿ ಹಿ ॥ ೨೩ ॥
ಅದ್ಯ ಸ್ಥಿತ್ವಾ ನಿರಾಹಾರಸ್ತೀರ್ಥರಾಜ ತವಾಜ್ಞಯಾ ।
ಶ್ವೋಭೂತೇಽಹಂ ಪುನರ್ಭೋಕ್ಷ್ಯೇ ಪ್ರಸನ್ನೋ ಭವ ಮಾಧವ ॥ ೨೪ ॥
ತೀರ್ಥಪ್ರಾಪ್ತೇಸ್ತು ಪೂರ್ವೇಽಹ್ನಿ ತದ್ದಿನೇ ಚೋಪವಾಸಕಮ್ ।
ಮುಖ್ಯಾನುಕಲ್ಪತಃ ಕುರ್ಯಾದ್ವಿಶುದ್ಧಿಜನಕಂ ನರಃ ॥ ೨೫ ॥
ತತಸ್ತತ್ರೈವ ತದಹಃ ಪಿತೄಣಾಂ ತೃಪ್ತಿಕಾರಕಮ್ ।
ಶ್ರಾದ್ಧಮಾಮೇನ ಹೇಮ್ನಾ ವಾ ಪ್ರಕುರ್ವಂತಿ ಯಥಾವಿಧಿ ॥ ೨೬ ॥
ಭುಕ್ತೋಽಭುಕ್ತೋಽಥವಾ ರಾತ್ರೌ ಶುಚಿರ್ವಾಪ್ಯಶುಚೌ ದಿನೇ ।
ಗಂಗಾಂ ಪ್ರಾಪ್ಯ ಸರಿಚ್ಛ್ರೇಷ್ಠಾಂ ಶ್ರಾದ್ಧಂ ಕುರ್ಯಾತ್ತದೈವ ಹಿ ॥ ೨೭ ॥
ನಾತ್ರ ಸ್ಥಲಾದಿದೋಷೋಽಸ್ತಿ ತೀರ್ಥಾದ್ರಿವನಭೂಮಿಷು ।
ಬ್ರಾಹ್ಮಣಾನಾಂ ಪರೀಕ್ಷಾ ಚ ಪಾತಿತ್ಯಾದಿಕಮಂತರಾ ॥ ೨೮ ॥
ಆಮಂ ಚತುರ್ಗುಣಂ ದದ್ಯಾದ್ದ್ವಿಗುಣಂ ವಾಥವಾ ಸಮಮ್ ।
ಹಿರಣ್ಯಂ ಚಾಷ್ಟಗುಣಿತಂ ಚತುರ್ದ್ವಿಸಮಮೇವ ವಾ ॥ ೨೯ ॥

ಅನ್ನಶ್ರಾದ್ಧಂ ತು ವಿಧಿನಾ ಪರೇಽಹ್ನಿ ವಿದಧೀತ ವೈ ।
ಅಶೌಚೇ ಬುದ್ಧಿಮಾನ್ ಶ್ರಾದ್ಧಮಾಶೌಚಾಪಗಮೇ ಸತಿ ॥ ೩೦ ॥
ಆವಾಹನಂ ವಿಸರ್ಗಶ್ಚ ದ್ವಿಜಾಂಗುಷ್ಠನಿಷೇವಣಮ್ ।
ಅರ್ಘ್ಯಂ ವಿಕಿರದಾನಂ ಚ ದಿಗ್ಬಂಧೋಽಗ್ನಿಕೃತಿಸ್ತಥಾ ॥ ೩೧ ॥
ತೃಪ್ತಿಪ್ರಶ್ನಶ್ಚ ದಿಗ್ದೋಷಃ ಪರಿವಿಷ್ಟಾನ್ನರಕ್ಷಣಮ್ ।
ಏತೈರ್ವಿರಹಿತಂ ಕಾರ್ಯಂ ತೀರ್ಥಶ್ರಾದ್ಧಂ ಮುನೀಶ್ವರಾಃ ॥ ೩೨ ॥
ಭರ್ತ್ರಾದಿತ್ರಿತಯಂ ತದ್ವತ್ಪಿತ್ರಾದಿತ್ರಯಮೇವ ಚ ।
ಶ್ವಶ್ರ್ವಾದಿತ್ರಿತಯಂ ತದ್ವನ್ಮಾತ್ರಾದಿತ್ರಿತಯಂ ತಥಾ ॥ ೩೩ ॥
ಮಾತಾಮಹಾದಿತ್ರಿತಯಂ ಮಾತಾಮಹ್ಯಾದಿಕಂ ತ್ರಯಮ್ ।
ಚತ್ವಾರಿ ಪಾರ್ವಣಾನ್ಯೇತಾನ್ಯುಪದಿಶ್ಯ ದ್ವಯಂ ತಥಾ ॥ ೩೪ ॥
ನಾಮಮಂತ್ರೈಃ ಸ್ವಯಂ ಕುರ್ಯಾದ್ವಿಧವಾ ಶ್ರಾದ್ಧಮಾದೃತಾ ।
ಅಥವಾ ಬ್ರಾಹ್ಮಣದ್ವಾರಾ ವಿದಧ್ಯಾತ್ ಶ್ರಾದ್ಧಮುತ್ತಮಮ್ ॥ ೩೫ ॥
ತೇನ ಶ್ರಾದ್ಧಫಲಂ ಸಮ್ಯಗಾಪ್ನೋತಿ ವಿಧಿಚೋದಿತಮ್ ।
ಆಮೇನ ಚ ಸದಾ ಶೂದ್ರಃ ಶ್ರಾದ್ಧಂ ಕುರ್ವೀತ ನಾಮಭಿಃ ॥ ೩೬ ॥
ಅನ್ಯಥಾ ಕರ್ಮವೈಗುಣ್ಯಾನ್ನಿರಯಂ ಯಾತಿ ನಿಶ್ಚಿತಮ್ ।
ತೀರ್ಥಸ್ಥ ಬ್ರಾಹ್ಮಣಾ ಭೋಜ್ಯಾ ತೀರ್ಥಶ್ರಾದ್ಧೇ ವಿಶೇಷತಃ ॥ ೩೭ ॥
ಸಗುಣಾ ನಿರ್ಗುಣಾ ವಾಪಿ ಏಕಂ ವಾ ಪಂಕ್ತಿಪಾವನಮ್ ।
ಯೇಷು ತೀರ್ಥೇಷು ಯೇ ದೇವಾ ಯೇಷು ತೀರ್ಥೇಷು ಯೇ ದ್ವಿಜಾಃ ॥ ೩೮ ॥
ಯೇಷು ತೀರ್ಥೇಷು ಯಾ ಆಪೋ ವಿಚಿಕಿತ್ಸೇನ್ನ ತತ್ಕ್ವಚಿತ್ ।
ದೇಯಮಾಚ್ಛಾದನಂ ಶ್ರಾದ್ಧೇಽನ್ಯಥಾ ಭಗ್ನಮುಚ್ಯತೇ ॥ ೩೯ ॥
ಭೋಜನಾಭರಣಾದೀನಿ ದೇಯಾನಿ ಸತಿ ಸಂಭವೇ ।
ತೀರ್ಥ ಏವ ತ್ಯಜೇತ್ಪಿಂಡಾಂಸ್ತೀರ್ಥಶ್ರಾದ್ಧೇ ವಿಚಕ್ಷಣಾಃ ॥ ೪೦ ॥
ವಿಶೇಷನಿವಹಶ್ಚಾನ್ಯಃ ಪ್ರಾಗೇವ ವಿನಿರೂಪಿತಃ ।
ಏವಂ ಶ್ರಾದ್ಧವಿಧಿಂ ಕೃತ್ವಾ ವರ್ಜ್ಯಾವರ್ಜ್ಯವಿವೇಕತಃ ॥ ೪೧ ॥
ಗಯಾಶ್ರಾದ್ಧಭವಂ ಪುಣ್ಯಂ ಭಕ್ತ್ಯಾ ಪ್ರಾಪ್ನೋತಿ ಮಾನವಃ ॥ ೪೨ ॥

॥ ಇತಿ ದ್ವಿಚತ್ವಾರಿಂಶೋಽಧ್ಯಾಯಃ ॥

## ॥ ನಲವತ್ತೆರಡನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ತ್ರಿವೇಣಿಯಲ್ಲಿ ವಿಧ್ಯುಕ್ತಪ್ರಕಾರ ಸ್ನಾನಾದಿಗಳಾದ ಮೇಲೆ, ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಪಂಚಮುದ್ರೆಯನ್ನು ವಿಧಿವತ್ತಾಗಿ ಹಾಕಿಕೊಳ್ಳಬೇಕು. ಸಂಧ್ಯಾವಂದ-

ನಾದಿಗಳ ನಂತರ ಬ್ರಹ್ಮಯಜ್ಞಾಂಗವಾದ ದೇವಋಷಿ ತರ್ಪಣಗಳನ್ನು ದರ್ಭೆಯನ್ನಿಟ್ಟುಕೊಂಡು ಪವಿತ್ರದೊಡನೆ ಕೊಡಬೇಕು. ದಕ್ಷಿಣಾಭಿಮುಖವಾಗಿ ಕುಳಿತುಕೊಂಡು ಎಡ ಮೊಣಕಾಲನ್ನು ನೆಲಕ್ಕೆ ಮುಟ್ಟಿಸಿ ಬಲ ಮಂಡಿಯನ್ನು ವೀರಾಸನದಲ್ಲಿ ಇಟ್ಟುಕೊಂಡು ಅಪಸವ್ಯದಿಂದ ಎಳ್ಳಿನಿಂದ ಸಹಿತವಾಗಿ(ಪಿತೃತರ್ಪಣವನ್ನು) ಕೊಡಬೇಕು. ಈ ಪಿತೃತರ್ಪಣವು ಈ ರೀತಿಯಾಗಿದೆ. ॥ ೧ ॥ ಮೊದಲು ತಂದೆ, ತಾತ, ಮುತ್ತಾತ, (ಪಿತೃ, ಪಿತಾಮಹ, ಪ್ರಪಿತಾಮಹ) ಆಮೇಲೆ ತಾಯಿ, ಅಜ್ಜಿ ಮುತ್ತಜ್ಜಿ(ಮಾತೃ, ಪಿತಾಮಹೀ, ಪ್ರಪಿತಾಮಹೀ) ಅನಂತರ ಮಲತಾಯಿ(ಸಾಪತ್ನೀಕ ಮಾತಾ), ತಾಯಿಯ ತಂದೆ, ಅವರ ತಂದೆ, ಅವರ ತಂದೆ(ಮಾತಾಮಹ, ಮಾತುಃ ಪಿತಾಮಹ, ಮಾತುಃ ಪ್ರಪಿತಾಮಹ), ತಾಯಿಯ ತಾಯಿ, ಅವರ ಅತ್ತೆ ಅವರ ಅತ್ತೆಯ ಅತ್ತೆ(ಮಾತಾಮಹೀ, ಮಾತುಃ ಪಿತಾಮಹೀ, ಮಾತುಃ ಪ್ರಪಿತಾಮಹೀ), ತನ್ನ ಹೆಂಡತಿ, ಮಗ, ಮಗಳು ಮುಂತಾದವರು, ತಂದೆಯ ಅಣ್ಣಂದಿರು ತಮ್ಮಂದಿರು(ಪಿತೃವ್ಯರು) ಅವರ ಹೆಂಡತಿಯರು ಮತ್ತು ಮಕ್ಕಳು, ತಾಯಿಯ ಅಣ್ಣತಮ್ಮಂದಿರು (ಸೋದರಮಾವಂದಿರು ಮತ್ತು ಅವರ ಹೆಂಡತಿಯರು), ತನ್ನ ಅಣ್ಣ ತಮ್ಮಂದಿರು, ಅವರ ಹೆಂಡತಿಮಕ್ಕಳು, ತಂದೆಯವರ ಅಕ್ಕ ತಂಗಿಯರು,(ಪಿತೃಶ್ವಸಾ) ಅವರ ಗಂಡಂದಿರು ಮತ್ತು ಮಕ್ಕಳುಗಳು, ತಾಯಿಯ ಅಕ್ಕತಂಗಿಯರು(ಮಾವಸೀ, ಚಿಕ್ಕಮ್ಮ ದೊಡ್ಡಮ್ಮಂದಿರು) ಮತ್ತು ಅವರ ಗಂಡಂದಿರು(ಚಿಕ್ಕಪ್ಪ ದೊಡ್ಡಪ್ಪಂದಿರು) ಅವರ ಮಕ್ಕಳುಗಳು, ತನ್ನ ಅಕ್ಕತಂಗಿಯರು, ಅವರ ಗಂಡಂದಿರು ಮತ್ತು ಮಕ್ಕಳು, ಹೆಣ್ಣು ಕೊಟ್ಟಿರುವ ಮಾವ(ಶ್ವಶುರ), ಹೆಂಡತಿಯ ತಾಯಿ, ಭಾವಮೈದುನಂದಿರು ಅವರ ಹೆಂಡತಿಯರು, ಪೂಜ್ಯರಾದ ಮೂವರು ಗುರುಗಳು (ಮಂತ್ರೋಪದೇಶಕರು, ಶಾಂತಿಪೂರ್ವಕಶಾಸ್ತ್ರಪಾಠ ಹೇಳಿದವರು, ವೇದಾಧ್ಯಯನ ಮಾಡಿಸಿದವರು), ಆಪ್ತರುಗಳು, ಸ್ನೇಹಿತರು, ಹಣಸಹಾಯ ಮಾಡಿದವರು, ಅಳಿಯಂದಿರು, ಋತ್ವಿಜರು, ಯಜ್ಞಯಾಗಾದಿಗಳಲ್ಲಿ ನೇರಭಾಗಿಯಾಗಿರುವ ಸದಸ್ಯರು, ಅವರ ಸ್ತ್ರೀಯರು— ಇವರಿಗೆಲ್ಲ ತರ್ಪಣ ಬಿಡಬೇಕು. ಇವರುಗಳೆಲ್ಲರ ತಿಲತರ್ಪಣ ಮುಗಿದ ಮೇಲೆ ಉಳಿದಿರುವ ಎಳ್ಳಷ್ಟನ್ನೂ ಹಾಕಿಕೊಂಡು "ಅತೀತಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಮ್ । ಆಬ್ರಹ್ಮ-ಭುವನಾಂಲ್ಲೋಕಾನಿದಮಸ್ತು ತಿಲೋದಕಮ್ ॥" ಎಂದು ಹೇಳಿ ನೀರನ್ನು ಹಾಕಿಕೊಂಡು ಬಲಗೈ ಹೆಬ್ಬೆರಳು ಮೂಲಕ ಬಿಡಬೇಕು. ಅನಂತರ ನಮ್ಮ ಕಾಲದಲ್ಲಿ ಹುಟ್ಟಿರುವ ಮಕ್ಕಳಿಲ್ಲದ, ನಮ್ಮ ಗೋತ್ರಕ್ಕೆ ಸೇರಿದ ಮೃತರಾಗಿರುವವರೆಲ್ಲರೂ ಈ ಯಜ್ಞೋಪವೀತವನ್ನು ಹಿಂಡಿಕೊಡುತ್ತಿರುವ ಎಳ್ಳುಸಹಿತವಾದ ನೀರು ತೃಪ್ತಿಯನ್ನುಂಟು ಮಾಡಲಿ ಎಂದು "ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಜಾ ಮೃತಾಃ । ತೇ ಗೃಹ್ಣಂತು ಮಯಾ ದತ್ತಂ ಸೂತ್ರನಿಷ್ಪೀಡನೋದಕಮ್ ॥" ಎಂದು ಹೇಳಿ ವನಮಾಲಿಕೆಯಿಂದ ಜನಿವಾರವನ್ನು ನೀರಿನಲ್ಲಿ ಹಿಂಡಿ ಅದನ್ನು ಕಣ್ಣಿಗೆ ಒತ್ತಿಕೊಳ್ಳಬೇಕು. ಇದುವರೆಗೆ ಕಳೆದಿರುವ ನಮ್ಮ ಕುಲದ ಗುಂಪಿಗೆ ಸೇರಿದ ಮತ್ತು ಏಳು ದ್ವೀಪಗಳಲ್ಲಿ ವಾಸಿಸುತ್ತಿರುವ ಈ ತರ್ಪಣ ಜಲಕ್ಕಾಗಿ ಹಾತೊರೆಯುತ್ತಿರುವವರಿಗೆ ಈಗ ನಾನು ಬಿಡುತ್ತಿರುವ ಎಳ್ಳುಸಹಿತವಾದ ನೀರು ತೃಪ್ತಿಯನ್ನುಂಟುಮಾಡಲಿ" ಎಂದು. ॥ ೨-೪ ॥ ಮಹಾಲಯದಲ್ಲಿ ದುರ್ಲಭವಾಗಿರುವ ಯೋಗದಲ್ಲಿ, ತೀರ್ಥದಲ್ಲಿ ಹಾಗೂ ತಿಲತರ್ಪಣದಲ್ಲಿ ಈ ಮೇಲೆ ಹೇಳಿದ ಪಿತೃಗಳನ್ನು ಹಾಗೂ ಸನಕಾದಿ ಮಹಾಋಷಿಗಳನ್ನು ಪ್ರಯತ್ನಪಟ್ಟಾದರೂ ಪೂಜಿಸಬೇಕು. ॥ ೫ ॥ ದಕ್ಷಿಣಾಭಿಮುಖವಾಗಿ ನೀರಿನಲ್ಲಿ ನಿಂತು ಈ ಪಿತೃಗಳನ್ನು ಉದ್ದೇಶಿಸಿ ಅಪಸವ್ಯದಿಂದ ಜಲಾಂಜಲಿಯನ್ನಾಗಲೀ, ತಿಲಾಂಜಲಿಯನ್ನಾಗಲೀ ಕೊಡಬೇಕು. ॥ ೬ ॥ ಹಾಗೆಯೇ ತೀರ್ಥದ

ಜಲದಲ್ಲಿ ಅಪಸವ್ಯದಿಂದ ದಕ್ಷಿಣಾಭಿಮುಖವಾಗಿ ನಿಂತು "ದೇವತೆಗಳು, ಅಸುರರು, ಸರ್ಪಗಳು, ಯಕ್ಷರು, ಗಂಧರ್ವರು, ರಾಕ್ಷಸರು, ಪಿಶಾಚಗಳು, ಗುಹ್ಯಕರು, ಸಿದ್ಧರು, ಕೂಶ್ಮಾಂಡವೆಂಬ ಪಿಶಾಚಗಳು, ಮರಗಳು, ಪಕ್ಷಿಗಳು, ಜಲಚರಪ್ರಾಣಿಗಳು, ಭೂಮಿಚರಪ್ರಾಣಿಗಳು ಮತ್ತು ಯಾವ ರೀತಿಯಾದ ಆಧಾರವಿಲ್ಲದೆ ಇರುವವರು, ನಾನು ಕೊಡುತ್ತಿರುವ ಈ ಜಲಾಂಜಲಿಯಿಂದ ಶಾಶ್ವತವಾದ ತೃಪ್ತಿಯನ್ನು ಹೊಂದಲಿ. ॥ ೭-೮ ॥ ಎಲ್ಲ ನರಕಗಳಲ್ಲಿ ಮತ್ತು ಎಲ್ಲ ಬಗೆಯ ಯಾತನೆಗಳಲ್ಲಿ ಇರತಕ್ಕವರು ಇವರುಗಳ ಹಿತಕ್ಕೋಸ್ಕರ ಈ ಜಲಾಂಜಲಿಗಳು ನನ್ನಿಂದ ಕೊಡಲ್ಪಟ್ಟಿವೆ, ಇವರೆಲ್ಲರೂ ತೃಪ್ತರಾಗಲಿ. ॥ ೯ ॥ ಬೇರೆ ಬೇರೆ ಜನ್ಮಗಳಲ್ಲಿ ಹುಟ್ಟಿ ನನ್ನಿಂದ ಕೊಡುವ ಈ ನೀರಿಗಾಗಿ ಹಾತೊರೆಯುತ್ತಿರುವ ನನ್ನ ಎಲ್ಲ ಬಂಧುಗಳೂ ಮತ್ತು ಬಂಧುಗಳಲ್ಲದವರೂ ನಾನು ಕೊಡುವ ಈ ಜಲಾಂಜಲಿಗಳಿಂದ ತೃಪ್ತರಾಗಲಿ. ॥ ೧೦ ॥ ಎಲ್ಲೆಲ್ಲಿಯೂ ಇದ್ದು ಹಸಿವು ಬಾಯಾರಿಕೆಯಿಂದ ಕಂಗಾಲಾಗಿರುವ ಸಮಸ್ತ ಜೀವಿಗಳಿಗೂ ನಾನು ಕೊಡುತ್ತಿರುವ ಈ ತಿಲೋದಕದಿಂದ ಶಾಶ್ವತವಾದ ತೃಪ್ತಿಯನ್ನು ಪಡೆಯಲಿ. ॥ ೧೧ ॥ ಇಡೀ ಬ್ರಹ್ಮಾಂಡದಲ್ಲಿರುವ ದೇವತೆಗಳು, ಋಷಿಗಳು, ಪಿತೃಗಳು, ಮನುಷ್ಯರು ಮತ್ತು ಇತರರೂ ನಾನು ಕೊಡುತ್ತಿರುವ ಈ ತ್ರಿವೇಣೀತೀರ್ಥದ ಜಲದಿಂದ ತೃಪ್ತರಾಗಲಿ. ಹೀಗೆಂದು ಹೇಳಿ ತ್ರಿವೇಣೀ ಜಲವನ್ನು (ಎಳ್ಳು ಸಹಿತವಾಗಿ ಅಥವಾ ಎಳ್ಳಿಲ್ಲದೆ ಬರೀ ಜಲದಿಂದ) ಮೂರು ಸಾರಿ ಬೊಗಸೆಯಿಂದ ಎತ್ತಿ ಸುರಿದು ಕೊಡಬೇಕು. ॥ ೧೨ ॥ ಅನೇಕ ಕಾರಣಗಳಿಂದ ಅಶಕ್ತರಾದವರುಗಳು ಈ ಮೇಲೆ ಹೇಳಿದ ವಿಸ್ತಾರತರ್ಪಣವನ್ನು ಮಾಡಲಾಗದಿದ್ದರೆ, 'ಆಬ್ರಹ್ಮಸ್ತಂಬಪರ್ಯಂತಂ' ಎಂಬ ಮಂತ್ರದಿಂದ ಮಂತ್ರವನ್ನು ಆವೃತ್ತಿ ಮಾಡಿ ಅಥವಾ ಒಂದೇ ಸಲ ಉಚ್ಚರಿಸಿ ಮೂರು ಜಲಾಂಜಲಿಯನ್ನು ಕೊಡಬೇಕು. ॥ ೧೩ ॥ ಗಂಗೆಯಲ್ಲಿಯೂ ಮತ್ತು ಪ್ರಯಾಗದಲ್ಲಿಯೂ ನದೀ ರಜಸ್ವಲಾ ದೋಷವು ಸ್ನಾನಕ್ಕೆ ಅಡ್ಡಿ ಮಾಡುವುದಿಲ್ಲ. ಮತ್ತು ಹಿಂತಿರುಗಿ ಹರಿಯುತ್ತಿರುವ ನೀರಿನಲ್ಲಿ ಸ್ನಾನ ಮಾಡುವ ದೋಷವು ಪ್ರಯಾಗದಲ್ಲಂತೂ ಇಲ್ಲವೇ ಇಲ್ಲ. ॥ ೧೪ ॥ ಮಕ್ಕಳಿಲ್ಲದ ವಿಧವೆಯು ತನ್ನ ಗಂಡ ಮುಂತಾದವರಿಗೆ ತಾನೇ ತರ್ಪಣವನ್ನು ಕೊಡಬೇಕು. ತಾಯಿಯು ಮೃತರಾದವರೂ ಅಧಿಕಾರಾನುಸಾರವಾಗಿ ತರ್ಪಣ ಕೊಡಬಹುದು.॥ ೧೫ ॥ ಸಂಕಲ್ಪಿತವಾದ ಪ್ರಾಯಶ್ಚಿತ್ತವನ್ನು ಆಗಲೇ ಆಗಲಿ ಕಾಲಾಂತರದಲ್ಲಿ ಆಗಲೀ ಶಕ್ತಿ ಅಶಕ್ತಿಗೆ ಅನುಸಾರವಾಗಿ ವಿಧಿವತ್ತಾಗಿ ಮಾಡಿಕೊಳ್ಳಬೇಕು. ॥ ೧೬ ॥ ಪ್ರಯಾಗಯಾತ್ರೆಯ ಸಂಪೂರ್ಣ ಫಲ ಪ್ರಾಪ್ತಿಗಾಗಿ ಪ್ರತ್ಯಕ್ಷವಾಗಿಯಾಗಲೀ ಅಥವಾ ಬದಲೀ ಏರ್ಪಾಡು ಮೂಲಕವಾಗಿಯಾಗಲೀ ದಶದಾನಗಳನ್ನು ಕೊಡಬೇಕು. ಇದನ್ನು ಕಾಲಾಂತರದಲ್ಲಿಯೂ ಕೊಡಬಹುದು. ॥ ೧೭ ॥ ಹಸು, ಭೂಮಿ, ಬಂಗಾರ, ಎಳ್ಳು, ತುಪ್ಪ, ವಸ್ತ್ರ, ಧಾನ್ಯ, ಬೆಲ್ಲ, ಬೆಳ್ಳಿ ಮತ್ತು ಉಪ್ಪು—ಇವೇ ದಶದಾನದ ವಸ್ತುಗಳು. ॥ ೧೮ ॥ ದಶದಾನಗಳ ಪ್ರಮಾಣವೆಷ್ಟೆಂದರೆ, ಭೂಮಿಯು 'ನಿವರ್ತನ' ಎಂಬ ಪ್ರಮಾಣದಷ್ಟು(ನೂರು ಗೋವುಗಳು ಮಲಗುವಷ್ಟು ಎಂದು ಗರುಡಪುರಾಣದಲ್ಲಿದೆ); ಎಳ್ಳು ಮೂರು ದೊನ್ನೆಗಳಷ್ಟು; ಭಂಗಾರವು ಒಂದು ತೊಲದಷ್ಟು; ತುಪ್ಪವು ಒಂದು ಸೇರಿನಷ್ಟು; ವಸ್ತ್ರಗಳು ಎರಡು; ಧಾನ್ಯವು ಎರಡುವರೆ ಖಂಡುಗದಷ್ಟು ಎಂದು ತಿಳಿಯತಕ್ಕದ್ದು ॥ ೧೯-೨೦ ॥ ಅಸಮರ್ಥರಾದವರು ಈ ಪ್ರಮಾಣದಲ್ಲಿ ಅರ್ಧ ಅಥವಾ ಅರ್ಧದಲ್ಲಿ ಅರ್ಧವಾದರೂ ಕೊಡಬಹುದು. ಶಕ್ತಿಯಿದ್ದವರು ಎರಡರಷ್ಟು ಮೂರರಷ್ಟು ಅಥವಾ ನಾಲ್ಕರಷ್ಟೂ ದಾನ ಮಾಡಬಹುದು. ಮಾಧವನ ಸಂತೋಷಕ್ಕಾಗಿ ಈ ದಾನಗಳನ್ನು ಮಾಡುವುದರಿಂದ ಹಣದ ಕಾರ್ಪಣ್ಯವನ್ನು ಮಾಡಬಾರದು. ॥ ೨೧ ॥

ಯಾತ್ರೆಯ ಪೂರ್ಣಫಲಪ್ರಾಪ್ತಿಗಾಗಿ ಭೂರಿ ದಾನಗಳನ್ನೂ, ಹೆಳವರು, ಕುರುಡರು, ಬಾಲಕರಿಗೆ ಮತ್ತು ವೃದ್ಧರಿಗೆ ಬೇರೆ ಬೇರೆ ದಾನಗಳನ್ನು ಕೊಡಬಹುದು. ॥ ೨೨ ॥ ಅನಂತರ ತಿಳಿದವರು ವಿಧಿವತ್ತಾಗಿ ಸಂಕಲ್ಪಮಾಡಿ ಉಪವಾಸ ಮಾಡತಕ್ಕದ್ದು; ಇದರಿಂದ ಮುಂದೆ ಮಾಡುವ ಕರ್ಮಗಳಿಗೆ ಪವಿತ್ರತೆಯು ಬರುವುದು. ॥ ೨೩ ॥ "ಎಲೈ ತೀರ್ಥರಾಜನೇ! ನಿನ್ನ ಆಜ್ಞೆಯ ಪ್ರಕಾರ ಇವತ್ತು ಉಪವಾಸವಿದ್ದು ನಾಳೆ ಪಾರಣೆ ಮಾಡುವೆನು; ಇದರಿಂದ ನೀನು ಪ್ರಸನ್ನನಾಗು" ಎಂದು ಮಾಧವನಿಗೆ ಪ್ರಾರ್ಥನೆ ಮಾಡಬೇಕು. ॥ ೨೪ ॥ ತೀರ್ಥಪ್ರಾಪ್ತಿಯ ಹಿಂದಿನ ದಿನ ಹಾಗೂ ತೀರ್ಥಪ್ರಾಪ್ತಿಯ ದಿನದಲ್ಲಿಯೂ ಮುಖ್ಯಕಲ್ಪದಿಂದ ಅಥವಾ ಅನುಕಲ್ಪದಿಂದ(ಸಂಪೂರ್ಣ ಉಪವಾಸಮಾಡುವುದು ಮುಖ್ಯಕಲ್ಪ; ಉಪಾಹಾರಮಾಡುವುದು ಅನುಕಲ್ಪ) ಉಪವಾಸವನ್ನು ಮಾಡಬೇಕು; ಈ ಉಪವಾಸವು ಶುದ್ಧಿಯನ್ನು ಉಂಟುಮಾಡತಕ್ಕದ್ದು. ॥ ೨೫ ॥ ಯಾತ್ರಾಸ್ಥಳವನ್ನು ತಲುಪಿದ ದಿವಸವೇ ಅಲ್ಲಿಯೇ ಪಿತೃಗಳಿಗೆ ತೃಪ್ತಿಯನ್ನು ಕೊಡುವ ಶ್ರಾದ್ಧವನ್ನು ಹಸೀ ಅಕ್ಕಿ ಅಥವಾ ಬಂಗಾರದಿಂದ ಯಥಾವಿಧಿ ಮಾಡಬೇಕು. ॥ ೨೬ ॥ ಊಟ ಮಾಡಿರಲಿ, ಮಾಡದಿರಲಿ, ರಾತ್ರಿಯೇ ಆಗಿರಲಿ, ಶುಚಿಯಾಗಿರಲಿ, ಅಶುಚಿಯಾಗಿರಲಿ, ಗಂಗಾನದಿಯನ್ನು ತಲುಪಿದ ದಿವಸವೇ ಆಗಲೇ ಶ್ರಾದ್ಧವನ್ನು ಮಾಡಬೇಕು. ॥ ೨೭ ॥ ತೀರ್ಥಗಳಲ್ಲಿ, ವನಗಳಲ್ಲಿ, ಬೆಟ್ಟಗಳಲ್ಲಿ ಸ್ಥಳಗಳ ಅಶುದ್ಧ್ಯಾದಿ ದೋಷಗಳಿಲ್ಲ. ಪತಿತರಾದ ಬ್ರಾಹ್ಮಣರನ್ನು ಬಿಟ್ಟು ಮಿಕ್ಕವರ ಆಚಾರ ವ್ಯವಹಾರಗಳ ಬಗ್ಗೆ ಪರೀಕ್ಷೆ ಮಾಡಲು ಹೋಗಬಾರದು. ॥ ೨೮ ॥ ಆಮಶ್ರಾದ್ಧ ಮಾಡುವಾಗ ಬ್ರಾಹ್ಮಣರ ಭೋಜನ ಮಾಡಿಸಿದ್ದರೆ ಬೇಕಾಗಿದ್ದಷ್ಟಕ್ಕಿಂತ ನಾಲ್ಕು ಪಟ್ಟು ಅಕ್ಕಿಯನ್ನು ದಾನ ಕೊಡಬೇಕು. ಅಥವಾ ಎರಡರಷ್ಟು ಅಥವಾ ಸರಿಸಮನಾದ ಅಕ್ಕಿಯನ್ನು ದಾನ ಮಾಡಬೇಕು. ಬ್ರಾಹ್ಮಣರ ಭೋಜನ ಮಾಡಿಸಲಿಕ್ಕೆ ತಗಲುವ ಖರ್ಚಿನ ಎರಡರಷ್ಟು, ನಾಲ್ಕರಷ್ಟು ಅಥವಾ ಸರಿಸಮನಾದಷ್ಟಾದರೂ ಬಂಗಾರವನ್ನು ಹಿರಣ್ಯ ಶ್ರಾದ್ಧದಲ್ಲಿ ದಾನ ಮಾಡಬೇಕು. ॥ ೨೯ ॥ ತೀರ್ಥಕ್ಷೇತ್ರವನ್ನು ತಲುಪಿದ ಮಾರನೆಯ ದಿನವೇ ಅನ್ನಶ್ರಾದ್ಧವನ್ನು (ಪಾರ್ವಣಶ್ರಾದ್ಧ) ವಿಧಿವತ್ತಾಗಿ ಮಾಡಬೇಕು. ಬುದ್ಧಿವಂತನಾದವನು ಆಶೌಚಾದಿಗಳು ಬಂದಿದ್ದರೂ ಆಶೌಚ ಕಳೆದ ಕೂಡಲೇ ಮಾಡಬೇಕು. ॥ ೩೦ ॥ ಎಲೈ ಮುನೀಶ್ವರರೇ! ತೀರ್ಥಶ್ರಾದ್ಧದಲ್ಲಿ ಆವಾಹನೆ, ವಿಸರ್ಜನೆ, ದ್ವಿಜಾಂಗುಷ್ಠನಿವೇಶನ, ಅರ್ಘ್ಯ, ವಿಕಿರದಾನ, ದಿಗ್ಬಂಧನ, ಅಗ್ನೌಕೃತಿ, ತೃಪ್ತಿಪ್ರಶ್ನೆ, ದಿಗ್ದೋಷ ಮತ್ತು ಬಡಿಸಿದ ಅನ್ನದ ರಕ್ಷಣೆ ಇವುಗಳು ಇರುವುದಿಲ್ಲ. ॥ ೩೧-೩೨ ॥ ವಿಧವೆಯು ಶ್ರಾದ್ಧ ಮಾಡುವಾಗ ಪಾರ್ವಣಕ್ಕೆ ಬರತಕ್ಕವರೆಂದರೆ ಗಂಡ, ಗಂಡನ ತಂದೆ, ಗಂಡನ ತಂದೆಯ ತಂದೆ; ಅತ್ತೆ, ಅತ್ತೆಯ ಅತ್ತೆ, ಅತ್ತೆಯ ಅತ್ತೆಯ ಅತ್ತೆ; ತಂದೆ, ತಂದೆಯ ತಂದೆ, ತಂದೆಯ ತಂದೆಯ ತಂದೆ; ತಾಯಿ, ತಾಯಿಯ ಅತ್ತೆ, ತಾಯಿಯ ಅತ್ತೆಯ ಅತ್ತೆ—ಈ ರೀತಿಯಾಗಿ ದ್ವಾದಶ ಪಿತೃಗಳು ವಿಧವೆಯು ಇವರುಗಳ ಹೆಸರನ್ನು ಮಾತ್ರ ಹೇಳಿ ಶ್ರಾದ್ಧವನ್ನು ಮಾಡಬೇಕು ಅಥವಾ ಬ್ರಾಹ್ಮಣರ ಮೂಲಕ ಶ್ರಾದ್ಧವನ್ನು ಮಾಡಿಸತಕ್ಕದ್ದು. ಇದು ಶುದ್ಧವಾದುದು ಮತ್ತು ಉತ್ತಮವಾದುದು. ॥ ೩೩-೩೫ ॥ ಬ್ರಾಹ್ಮಣರ ಮೂಲಕ ಮಾಡಿಸುವುದರಿಂದಲೂ ಶಾಸ್ತ್ರದಲ್ಲಿ ಹೇಳಿರುವಂತೆ ಎಲ್ಲ ಫಲಗಳೂ ಲಭ್ಯವಾಗುವುವು. ಶೂದ್ರನು ಯಾವಾಗಲೂ ಹಸೀ ಅಕ್ಕಿಯಿಂದಲೇ ಶ್ರಾದ್ಧವನ್ನು ಮಾಡಬೇಕು ಮತ್ತು ಹೆಸರುಗಳನ್ನು ಹೇಳಿ ಶ್ರಾದ್ಧ ಮಾಡಬೇಕು. ॥ ೩೬ ॥ ಹಾಗೆ ಮಾಡದಿದ್ದರೆ ಶ್ರಾದ್ಧಕರ್ಮಕ್ಕೆ ವೈಗುಣ್ಯ ಬಂದು ಪಿತೃಗಳು ನರಕದಲ್ಲಿ ಬೀಳುತ್ತಾರೆ. ತೀರ್ಥ-ಶ್ರಾದ್ಧದಲ್ಲಿ ವಿಶೇಷವಾಗಿ ತೀರ್ಥದಲ್ಲಿರುವ ಬ್ರಾಹ್ಮಣರಿಗೇ ಭೋಜನ ಮಾಡಿಸಬೇಕು. ॥ ೩೭ ॥

ತೀರ್ಥವಾಸಿಗಳಾದ ಬ್ರಾಹ್ಮಣರು ಅವಶ್ಯವಾದ ಗುಣಗಳಿಂದ ಕೂಡಿರಲಿ, ಕೂಡದಿರಲಿ, ಎರಡೂ ಒಂದೇ; ಅವರೇ ಪಂಕ್ತಿಪಾವನರು, ಯಾವಾಗಲೂ ಕರ್ತೃವು ಯಾವ ಯಾವ ತೀರ್ಥಗಳಲ್ಲಿ ಯಾವ ದೇವತೆಗಳಿದ್ದಾರೋ, ಯಾವ ಯಾವ ತೀರ್ಥಗಳಲ್ಲಿ ಯಾವ ಯಾವ ಬ್ರಾಹ್ಮಣರುಗಳಿದ್ದಾರೆ, ಯಾವ ಯಾವ ತೀರ್ಥದಲ್ಲಿ ಯಾವ ಯಾವ ಜಲವಿದೆ ಎಂಬುದನ್ನು ಎಂದೂ ಹುಡುಕುವ ಪ್ರಯತ್ನ ಮಾಡಬಾರದು, ಬ್ರಾಹ್ಮಣರಿಗೆ ಯಾವಾಗಲೂ ಉಟ್ಟುಕೊಳ್ಳುವ ಮತ್ತು ಹೊದ್ದುಕೊಳ್ಳುವ ವಸ್ತ್ರವನ್ನು ಕೊಡಲೇಬೇಕು. ಇಲ್ಲದಿದ್ದರೆ ಶ್ರಾದ್ಧಭಂಗವಾಗುತ್ತದೆ. ॥ ೩೮-೩೯ ॥ ಶಕ್ತಿ ಇದ್ದರೆ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಮತ್ತು ಆಭರಣಾದಿಗಳನ್ನು ಕೊಡಬೇಕು. ವಿವೇಕಿಯು ಯಾವಾಗಲೂ ಕ್ಷೇತ್ರದ ತೀರ್ಥದಲ್ಲಿಯೇ ಪಿಂಡವನ್ನು ವಿಸರ್ಜಿಸಬೇಕು. ॥ ೪೦ ॥ ಸಂಬಂಧಪಟ್ಟ ಎಲ್ಲ ವಿಷಯಗಳೂ ಮೊದಲೇ ಹೇಳಲ್ಪಟ್ಟವೆ. ಈ ರೀತಿಯಾಗಿ ಮಾಡಬೇಕಾದ್ದನ್ನು, ಬಿಡಬೇಕಾದ್ದನ್ನು ವಿವೇಚಿಸಿ ಭಕ್ತಿಯಿಂದ ಶ್ರಾದ್ಧಮಾಡಿದರೆ ಗಯಾಶ್ರಾದ್ಧದ ಫಲವು ಪ್ರಾಪ್ಯವಾಗುವುದು. ॥ ೪೧-೪೨ ॥

॥ ನಲವತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಿಚತ್ವಾರಿಂಶೋಽಧ್ಯಾಯಃ ॥ ೪೩ ॥

ಶೇಷ ಉವಾಚ—

ಸ್ತ್ರೀಭಿಶ್ಚೇದ್ವೇಣಿಕಾದಾನಂ ಯತ್ಕೃತಂ ಪ್ರಥಮೇಽಹನಿ ।
ಶುಕ್ಲಪಕ್ಷೇ ತದಾ ಕಾರ್ಯಂ ಸುದಿನೇ ಪತ್ಯುರಾಜ್ಞಯಾ ॥ ೧ ॥
ತತಃ ಶುಭೇಽಹ್ನಿ ಕುರ್ವೀತ ವೇಣೀಮಾಧವಪೂಜನಮ್ ।
ಐಹಿಕಾಮುಷ್ಮಿಕಂ ಯೇನ ಫಲಂ ವಿಂದತಿ ಮಾನವಃ ॥ ೨ ॥
ಶುಚಿಸ್ಸಂಭೃತಸಂಭಾರಸ್ಸಪತ್ನೀಕಸ್ಸುಖಾಸನೇ ।
ಉಪವಿಶ್ಯ ಸಮಾಚಮ್ಯ ಸ್ಮೃತ್ವಾ ಗಣಪತಿಂ ತತಃ ॥ ೩ ॥
ತ್ರಿವೇಣೀಂ ಮಾಧವಂ ಸೋಮಂ ಭಾರದ್ವಾಜಂ ಚ ವಾಸುಕಿಮ್ ।
ವಂದೇಽಕ್ಷಯ್ಯವಟಂ ಶೇಷಂ ಪ್ರಯಾಗಂ ತೀರ್ಥನಾಯಕಮ್ ॥ ೪ ॥
ಸ್ನಾನೇ ದಾನೇ ಜಪೇ ಹೋಮೇ ಸ್ವಾಧ್ಯಾಯೇ ಯಜ್ಞಕರ್ಮಣಿ ।
ಇಮಂ ಮಂತ್ರಂ ಪಠೇದ್ವಿಪ್ರಾ ಭಕ್ತ್ಯಾ ಪೂರ್ಣಫಲಾಪ್ತಯೇ ॥ ೫ ॥
ದೇಶಕಾಲಾವನುಸ್ಮೃತ್ಯ ಫಲಂ ಚೋಲ್ಲಿಖ್ಯ ಮಾನಸಮ್ ।
ಗಣೇಶಂ ಕರ್ತರೀಂ ಪೂಜ್ಯ ಕಲಶಾರಾಧನಾದಿಕಮ್ ॥ ೬ ॥
ಗಾಯತ್ರ್ಯಾ ಪ್ರೋಕ್ಷ್ಯ ಸಂಭಾರಾನ್ಪುರುಷಸೂಕ್ತಾಂಗವೇಶನಮ್ ।
ಕೃತ್ವಾ ತೇನೈವ ಸೂಕ್ತೇನ ಇಮಂ ಮೇ ಗಂಗ ಇತ್ಯೃಚಾ ॥ ೭ ॥
ಷೋಡಶೈರುಪಚಾರೈಶ್ಚ ಗಂಗಾಯಮುನಸಂಗಮೇ ।
ಶೂದ್ರಾಃ ಸ್ತ್ರೀ ನಾಮಮಂತ್ರೇಣ ಭಕ್ತ್ಯಾ ಕುರ್ವೀತ ಪೂಜನಮ್ ॥ ೮ ॥
ಆವಾಹನಂ ನ ಕುರ್ವೀತ ಜಾಗ್ರದ್ರೂಪೌ ಯತೋಽತ್ರ ತೌ ।
ದತ್ವಾ ಪುಷ್ಪಾಂಜಲಿಂ ಪೂರ್ವಂ ಧ್ಯಾಯೇದ್ವೇಣೀಂ ಚ ಮಾಧವಮ್ ॥ ೯ ॥

ನವಾಂಬುದಸಮದ್ಯುತಿಂ ಖಚಿತಭೂಷಣೈರ್ಭೂಷಿತಂ
ಸುಗೌರವಸನಾವೃತಂ ಸಕಲದೇವತಾಸಂಸ್ತುತಮ್ ।
ಭುಜೈರ್ದಧತಮಬ್ಧಿಜಂ ರಥಾಂಗಗದಾಪಂಕಜಂ
ಪ್ರಯಾಗನಿಲಯಂ ಸದಾ ಮನಸಿ ಮಾಧವಂ ಭಾವಯೇ ॥ ೧೦ ॥
ಸಿತಾಸಿತಲಸದ್ದ್ಯುತಿಂ ತ್ರಿನಯನಾಂ ವಿಚಿತ್ರಾಂಬರಾಂ
ದರಾರಿಜಲಜಂ ಗದಾಂ ಧೃತವತೀಂ ಸ್ವದೋರ್ಭಿಃ ಸ್ಫುಟಮ್ ।
ಸಮಸ್ತಜನಕಾಮಿತಾಂ ವಿವಿಧಭೂಷಣೈರ್ಭೂಷಿತಾಂ
ಪ್ರಯಾಗವಸತೀಂ ಸದಾ ಮನಸಿ ವೇಣಿಕಾಂ ಭಾವಯೇ ॥ ೧೧ ॥

ನಮೋ ವೇಣ್ಯೈ ನಮೋವೇಣ್ಯೈ ನಮೋ ವೇಣ್ಯೈ ನಮೋ ನಮಃ ।
ಮಾಧವಾಯ ನಮಸ್ತುಭ್ಯಂ ಫಲದಾಯ ನಮೋ ನಮಃ ॥ ೧೨ ॥

ಸ್ತ್ರೀಶೂದ್ರಪೂಜನೇ ನಾಮಮಂತ್ರೋಽಯಂ ಪರಿಕೀರ್ತಿತಃ ।
ವಕ್ಷ್ಯೇಽಹಮಪರಾನಸ್ಯಾಃ ಪೂಜಾಮಂತ್ರಾನ್ನಿಬೋಧತ ॥ ೧೩ ॥
ಆಗಚ್ಛಾನಂತ ದೇವೇಶ ಕೇಶವಾಚ್ಯುತ ಮಾಧವ ।
ಗೃಹಾಣ ಮತ್ಕೃತಾಂ ಪೂಜಾಂ ತ್ರಿವೇಣ್ಯಾ ಸಹಿತ ಪ್ರಭೋ ॥ ೧೪ ॥
ನಾನಾಮಣಿಗಣಾಕೀರ್ಣಂ ಜಾಂಬೂನದವಿಭೂಷಿತಮ್ ।
ಸಿಂಹಾಸನಂ ಗೃಹಾಣೇದಂ ತ್ರಿವೇಣ್ಯಾ ಸಹಿತ ಪ್ರಭೋ ॥ ೧೫ ॥
ಶೀತಲಂ ನಿರ್ಮಲಂ ಹೃದ್ಯಂ ಗಂಧಾಕ್ಷತವಿಭೂಷಿತಮ್ ।
ಜಲಂ ಗೃಹಾಣ ಪಾದ್ಯಾರ್ಥಂ ತ್ರಿವೇಣ್ಯಾ ಸಹಿತಪ್ರಭೋ ॥ ೧೬ ॥
ಅರ್ಘ್ಯಾರ್ದರ್ಘ್ಯತರೋಽಸಿ ತ್ವಂ ಕೇಶವಾನಂತ ಮಾಧವ ।
ಗೃಹಾಣಾರ್ಘ್ಯಂ ಮಯಾ ದತ್ತಂ ತ್ರಿವೇಣ್ಯಾ ಸಹಿತಪ್ರಭೋ ॥ ೧೭ ॥
ಪ್ರಾಲೇಯಂ ಜಲಮಾನೀತಂ ಕರ್ಪೂರೈಲಾಭಿವಾಸಿತಮ್ ।
ಆಚಮ್ಯಸ್ವ ದಯಾಸಿಂಧೋ ತ್ರಿವೇಣ್ಯಾ ಸಹಿತಪ್ರಭೋ ॥ ೧೮ ॥
ಪಯೋದಧಿಘೃತಂ ಕ್ಷೌದ್ರಂ ಪಂಚಮೀಶರ್ಕರಾ ಸಿತಾ ।
ಕುರು ಪಂಚಾಮೃತಸ್ನಾನಂ ತ್ರಿವೇಣ್ಯಾ ಸಹಿತ ಪ್ರಭೋ ॥ ೧೯ ॥
ಗಂಗಾಯಮುನಸಂಗೋತ್ಥಂ ಮಲಘ್ನಮಮಲಂ ಜಲಮ್ ।
ಸ್ವೀಕುರು ಸ್ನಾನಕೃತ್ಯೈ ತ್ವಂ ತ್ರಿವೇಣ್ಯಾ ಸಹಿತ ಪ್ರಭೋ ॥ ೨೦ ॥
ಗಂಗೋದಕಮಿದಂ ದಿವ್ಯಂ ಹೇಮಭಾಜನಭೂಷಿತಮ್ ।
ಗೃಹಾಣಾಚಮನೀಯಾರ್ಥಂ ತ್ರಿವೇಣ್ಯಾ ಸಹಿತ ಪ್ರಭೋ ॥ ೨೧ ॥
ಪೀತಾಂಬರಧರೋಽಸಿ ತ್ವಂ ದತ್ತಂ ಪೀತಾಂಬರಂ ಮಯಾ ।
ಗೃಹಾಣ ಮಾಧವ ಸ್ವಾಮಿನ್ತ್ರಿವೇಣ್ಯಾ ಸಹಿತ ಪ್ರಭೋ ॥ ೨೨ ॥
ಯಾಮುನಂ ವಿಶದಂ ದಿವ್ಯಂ ಮಮ ಬಾಧಾನಿವಾರಣಮ್ ।
ಊರೀಕುರುಷ್ವಾಚಮನಂ ತ್ರಿವೇಣ್ಯಾ ಸಹಿತ ಪ್ರಭೋ ॥ ೨೩ ॥
ಶ್ರೌತಸ್ಮಾರ್ತಕ್ರಿಯಾಧಾರಂ ಬ್ರಹ್ಮವಿಷ್ಣುಶಿವಾತ್ಮಕಮ್ ।
ಬ್ರಹ್ಮಸೂತ್ರಂ ಗೃಹಾಣೇದಂ ಶ್ವೇತಂ ಶ್ರೀಮಾಧವ ಪ್ರಭೋ ॥ ೨೪ ॥
ಶೀತಲಂ ಬಹುಲಾಮೋದಂ ಕರ್ಮಾಧಿಕೃತಕಾರಣಮ್ ।
ತೋಟಾಮಾಚಮನೀಯಂ ತ್ವಮುರರೀಕುರು ಮಾಧವ ॥ ೨೫ ॥
ಮುಕ್ತಾಮಾಣಿಕ್ಯಖಚಿತಂ ಕಾರ್ತಸ್ವರವಿನಿರ್ಮಿತಮ್ ।
ಭೂಷಣಂ ತ್ವಂ ಮಮಾದೇಹಿ ತ್ರಿವೇಣ್ಯಾ ಸಹಿತ ಪ್ರಭೋ ॥ ೨೬ ॥
ಕಾಲೇಯಾಗುರುಕಸ್ತೂರೀಸುಗಂಧಾಢ್ಯಂ ಮನೋರಮಮ್ ।
ಗೃಹಾಣ ಚಂದನಂ ಪ್ರೀತ್ಯಾ ತ್ರಿವೇಣ್ಯಾ ಸಹಿತ ಪ್ರಭೋ ॥ ೨೭ ॥

ಹಾರಿಣೀಂ ವಿಷ್ಣುಮನಸೋ ಮುಖಮಂಡನಕಾರಿಣೀಮ್ ।
ಹರಿದ್ರಾಂ ತ್ವಂ ಗೃಹಾಣೇಮಾಂ ತ್ರಿವೇಣ್ಯಾಖಿಲವಂದಿತ ॥ ೨೮ ॥
ಸೌಭಾಗ್ಯಧ್ವಜರೂಪಂ ಯತ್ ಶ್ರೀಮತ್ಸರ್ವಾರ್ಥಮಂಗಲಮ್ ।
ಕುಂಕುಮಂ ಭಾಲಮಾಲ್ಯೇನ ತ್ರಿವೇಣಿ ತ್ವಮುರೀಕುರು ॥ ೨೯ ॥
ಅಕ್ಷತಾನ್ ಶಾಲಿಸಂಭೂತಾನ್ ಕುಂಕುಮೇನ ಸುರಂಜಿತಾನ್ ।
ಗೃಹಾಣ ಶಕ್ರಗೋಪಾಭಾನ್ ತ್ರಿವೇಣ್ಯಾ ಸಹಿತ ಪ್ರಭೋ ॥ ೩೦ ॥
ಮಲ್ಲಿಕಾಮಾಲತೀಜಾತೀಕುಂದಕಲ್ಹಾರಪಂಕಜಮ್ ।
ತುಲಸ್ಯಂತಂ ಗೃಹಾಣೇದಂ ತ್ರಿವೇಣ್ಯಾ ಸಹಿತ ಪ್ರಭೋ ॥ ೩೧ ॥
ಉದ್ಗಿರಂತೀಭಿರಾಮೋದಂ ಮಾಲ್ಯಾಮಾಲಾಭಿರಾದರಾತ್ ।
ತ್ವಾಮರ್ಚೇಽಹಂ ಸಭೂಷಾಭಿಃ ತ್ರಿವೇಣ್ಯಾ ಸಹಿತ ಪ್ರಭೋ ॥ ೩೨ ॥
ದಶಾಂಗಾಂಗುಲಪಾಟೀರೇ ಲಸದ್ರತ್ರಸಮನ್ವಿತಮ್ ।
ಧೂಪಂ ಗೃಹಾಣ ಭೂತಾದ್ಯ ತ್ರಿವೇಣ್ಯಾ ಸಹಿತ ಪ್ರಭೋ ॥ ೩೩ ॥
ಘೃತವರ್ತಿಸಮಾಯುಕ್ತಮಜ್ಞಾನಧ್ವಾಂತನಾಶನಮ್ ।
ದೀಪಂ ಗೃಹಾಣ ದಿವ್ಯಾಭಂ ತ್ರಿವೇಣ್ಯಾ ಸಹಿತ ಪ್ರಭೋ ॥ ೩೪ ॥
ಚತುರ್ವಿಧಾನ್ನಂ ಸುಸ್ವಾದು ಷಡ್ರಸೈಃ ಪರಿಪೂರಿತಮ್ ।
ಉಪಹಾರಂ ಗೃಹಾಣೇಮಂ ತ್ರಿವೇಣ್ಯಾ ಸಹಿತ ಪ್ರಭೋ ॥ ೩೫ ॥
ಪ್ರಬೋಧೇ ಮಜ್ಜನೇ ಧೂಪೇ ದೀಪನೈವೇದ್ಯಯೋಸ್ತಥಾ ।
ನೀರಾಜನೇ ಚ ಕುರ್ವೀತ ಘಂಟಾವಾದ್ಯಂ ಹಿ ಪೂಜಕಃ ॥ ೩೬ ॥
ಚಂದ್ರಕೌಶೀರಸಂಯುಕ್ತಂ ರುಕ್ಮಭಾಜನಮಂಡಿತಮ್ ।
ಮಯಾ ಸ್ವೀಕುರು ಪಾನೀಯಂ ತ್ರಿವೇಣ್ಯಾ ಸಹಿತಪ್ರಭೋ ॥ ೩೭ ॥
ಸಂಸಾರೋತ್ತಾರಣಂ ದಿವ್ಯಂ ಭೂಮಿಮಂಡಲಮಂಡಲಮ್ ।
ಗೃಹಾಣಾಚಮನಂ ಗಾಂಗಂ ತ್ರಿವೇಣ್ಯಾ ಸಹಿತಪ್ರಭೋ ॥ ೩೮ ॥
ಅಮಲಾವಮಲೇನಾಶು ಸಿತೋನ್ಮರ್ದಪುರಸ್ಸರಮ್ ।
ಪ್ರಾಪ್ಯ ಪ್ರಕ್ಷಾಲಯ ಕರೌ ತ್ರಿವೇಣ್ಯಾ ಸಹಿತಪ್ರಭೋ ॥ ೩೯ ॥
ಪಾಟೀರಾಗುರುಕಸ್ತೂರೀಚಂದ್ರಕಾಶ್ಮೀರಜಾತಿಭಿಃ ।
ಉದ್ವರ್ತಯ ಕರೌ ದಿವ್ಯೌ ತ್ರಿವೇಣ್ಯಾ ಸಹಿತ ಪ್ರಭೋ ॥ ೪೦ ॥
ನಾನಾವಿಧಾನಿ ಸುಸ್ವಾದುಫಲಾನಿ ಸುರಭೀಣ್ಯಲಮ್ ।
ಗೃಹಾಣ ಸಕಲಾಧಾರ ತ್ರಿವೇಣ್ಯಾ ಸಹಿತಪ್ರಭೋ ॥ ೪೧ ॥
ಪೂಜಾಸಾದ್ಗುಣ್ಯಕಾರೀಣಿ ಸುವರ್ಣಕುಸುಮಾನ್ಯಲಮ್ ।
ದಕ್ಷಿಣಾರ್ಥೇ ಗೃಹಾಣ ತ್ವಂ ತ್ರಿವೇಣ್ಯಾ ಸಹಿತಪ್ರಭೋ ॥ ೪೨ ॥

ನೀರಾಜಿತಪದದ್ವಂದ್ವ ನಿರ್ಜಿತಾಖಿಲತೇಜಸಾ ।
ನೀರಾಜಯಾಮ್ಯಹಂ ಭಕ್ತ್ಯಾ ತ್ರಿವೇಣ್ಯಾ ಸಹಿತಪ್ರಭೋ ॥ ೪೩ ॥
ನಾನಾಪುಷ್ಪೈಶ್ಚ ಪತ್ರೈಶ್ಚ ನಾನಾವರ್ಣಸುಗಂಧಿಭಿಃ ।
ಪುಷ್ಪಾಂಜಲಿಂ ಚಾರ್ಪಯಾಮಿ ತ್ರಿವೇಣ್ಯಾ ಸಹಿತ ಪ್ರಭೋ ॥ ೪೪ ॥
ಪದೇ ಪದೇಽಘವಿಧ್ವಂಸಿ ಸರ್ವಕಾಮಾರ್ಥದಂ ನೃಣಾಮ್ ।
ಪ್ರದಕ್ಷಿಣಂ ಕರಿಷ್ಯಾಮಿ ತ್ರಿವೇಣ್ಯಾ ಸಹಿತ ಪ್ರಭೋ ॥ ೪೫ ॥
ಶ್ರೀಮಾಧವ ದಯಾಸಿಂಧೋ ಭಕ್ತಕಾಮಾರ್ಥಪೂರಕ ।
ತ್ವಾಮಹಂ ಶರಣಂ ಪ್ರಾಪ್ತಃ ಪಾಹಿ ಮಾಂ ದೀನವತ್ಸಲ ॥ ೪೬ ॥
ಭ್ರಮಿತ್ವಾ ಸರ್ವದೇಶೇಷು ದುಃಖಮೂಲೇಷು ದುಃಖಿತಃ ।
ತ್ವತ್ಪಾದಕಮಲಂ ಪ್ರಾಪ್ತೋ ಯಥೇಚ್ಛಸಿ ತಥಾ ಕುರು ॥ ೪೭ ॥
ಆದಿಮಧ್ಯಾಂತರೂಪ ತ್ವಂ ತೀರ್ಥರಾಜೇ ವಿರಾಜಿತ ।
ಅನಾದಿಮಧ್ಯನಿಧನ ಧ್ರುವಬ್ರಹ್ಮಸ್ವರೂಪಿಣೇ ॥ ೪೮ ॥
ಮಂತ್ರತಂತ್ರಕ್ರಿಯಾಹೀನಂ ಪೂಜನಂ ಯನ್ಮಯಾ ಕೃತಮ್ ।
ಸಫಲಂ ಕುರು ತತ್ಸರ್ವಂ ತ್ರಿವೇಣಿ ಜಗದಂಬಿಕೇ ॥ ೪೯ ॥

ನಮೋ ನಮೋಽಕ್ಷಯ್ಯವಟಾಧಿವಾಸ
ನಮೋ ನಮೋ ಭಕ್ತಮನೋನಿವಾಸ ।
ನಮೋ ನಮಸ್ತೀರ್ಥಸುತಾಧಿವಾಸ
ನಮೋ ನಮಸ್ತೇಽಸ್ತು ಜಗನ್ನಿವಾಸ ॥ ೫೦ ॥
ಪ್ರಯಾಗಭಾಗೇಽತಿವಿರಾಜಿತಾಯೈ
ದೇವರ್ಷಿಸಿದ್ಧೋರಗಸಂಸ್ತುತಾಯೈ ।
ಧರ್ಮಾರ್ಥಕಾಮಾದಿಶುಭಾರ್ಥದಾಯೈ
ನಮಸ್ತ್ರಿವೇಣ್ಯೈ ಮಮ ದೇವತಾಯೈ ॥ ೫೧ ॥
ಮಾಘೇ ಮೃಗಾರ್ಕೇ ನಿಜಮಜ್ಜನಾತ್ಸ್ವ-
ಪದಪ್ರದಾಯೈ ಹ್ಯಮಿತಪ್ರದಾಯೈ ।
ಕೇನಾಪ್ಯುಪಾಯೇನ ಚ ಸಂಗಮೇ ಸ್ವೇ
ದೇಹಾವಸಾನೇ ಹ್ಯಮಿತಪ್ರದಾಯೈ ॥ ೫೨ ॥
ಶ್ರೀಜಾಹ್ನವೀಭಾನುಸುತಾಸರಸ್ವತೀ-
ಯೋಗಾತ್ತ್ರಿವೇಣೀತ್ಯಭಿಧಾಂ ಗತಾಯೈ ।
ವಿರಿಂಚಿವಿಷ್ಣ್ವೀಶಪದಪ್ರದಾಯೈ
ನಮೋಽಸ್ತು ತೇ ವೇಣಿ ನಮೋ ನಮೋ ನಮಃ ॥ ೫೩ ॥

**ಯಥಾಶಕ್ತಿ ಯಥಾಜ್ಞಾನಂ ಕೃತಂ ಪೂಜನಕರ್ಮ ಯತ್ ।**
**ಪ್ರೀಯೇತಾಂ ತೇನ ಮೇ ದೇವೌ ತ್ರಿವೇಣೀಮಾಧವೌ ಸದಾ ॥ ೫೪ ॥**

**॥ ಇತಿ ತ್ರಿಚತ್ವಾರಿಂಶೋಽಧ್ಯಾಯಃ ॥**

## ॥ ನಲವತ್ತಮೂರನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ತ್ರಿವೇಣೀಸಂಗಮದಲ್ಲಿ ಸ್ತ್ರೀಯರು ಮಾಡುವ ವೇಣೀದಾನವನ್ನು ಪ್ರಶಸ್ತವಾದ ಶುಕ್ಲಪಕ್ಷದ ಶುಭತಿಥಿಯಲ್ಲಿ ತನ್ನ ಪತಿಯ ಆಜ್ಞೆಯನ್ನು ಸ್ವೀಕರಿಸಿ ಮಾಡತಕ್ಕದ್ದು. ॥ ೧ ॥ ಅನಂತರ ಶುಭದಿನದಲ್ಲಿ ತ್ರಿವೇಣೀಸಹಿತನಾದ ಶ್ರೀವೇಣೀಮಾಧವನ ಪೂಜಾವನ್ನು ಮಾಡತಕ್ಕದ್ದು. ಇದರಿಂದ ಮನುಷ್ಯರು ಇಹಲೋಕದ ಮತ್ತು ಪರಲೋಕದ ಫಲಗಳನ್ನೆಲ್ಲಾ ಹೊಂದುವರು.॥ ೨ ॥ ಈ ರೀತಿ ಪೂಜಿಸತಕ್ಕವರು ಶುಚಿರ್ಭೂತರಾಗಿ, ಸಕಲಪೂಜಾಸಾಮಗ್ರಿಗಳೊಡನೆ ಸಪತ್ನೀಕರಾಗಿ, ಸುಖಾಸೀನರಾಗಿ, ಶುದ್ಧಾಚಮನ ಮಾಡಿ, ನಂತರ ಮಹಾಗಣಪತಿಯನ್ನು ಸ್ಮರಿಸಬೇಕು. ॥ ೩ ॥ ನಂತರ ತ್ರಿವೇಣೀದೇವಿ, ವೇಣೀಮಾಧವ, ಚಂದ್ರ, ಭರದ್ವಾಜ ಋಷಿಗಳು, ಶ್ರೀಶೇಷದೇವರು, ವಾಸುಕಿ, ಅಕ್ಷಯ್ಯವಟವೃಕ್ಷ ಮತ್ತು ತೀರ್ಥನಾಯಕನಾದ ಪ್ರಯಾಗ ಇವರುಗಳನ್ನು ಸ್ಮರಣೆ ಮಾಡಬೇಕು. ॥ ೪ ॥ ಸ್ನಾನ, ದಾನ, ಜಪ, ಹೋಮ, ಅಧ್ಯಯನ ಮತ್ತು ಯಜ್ಞಕರ್ಮ ಇವುಗಳನ್ನು ಮಾಡುವಾಗ ಇವರುಗಳನ್ನು ಭಕ್ತಿಯಿಂದ ಸ್ಮರಿಸುವುದರಿಂದ ಪೂರ್ಣಫಲಪ್ರಾಪ್ತಿಯಾಗುವುದು. ॥ ೫ ॥ ದೇಶಕಾಲಾದಿಗಳಿಂದ ಒಳಗೂಡಿದ ಸಂಕಲ್ಪವನ್ನು ಮಾಡಿ, ಮನೋದ್ದಿಷ್ಟಫಲವನ್ನು ಸಂಕಲ್ಪಿಸಿ, ಕಲಶಾರಾಧನೆಯನ್ನು ಮಾಡಿ ಗಣೇಶನನ್ನು ಪೂಜಿಸಿ, ವೇಣಿಯನ್ನು ಕತ್ತರಿಸಲು ಉಪಯೋಗಿಸುವ ಕತ್ತರಿಯನ್ನು ಪೂಜೆಗೆ ಇಡಬೇಕು. ॥ ೬ ॥ ''ಇಮಂ ಮೇ ಗಂಗೇ'' ಎಂಬ ಮಂತ್ರದಿಂದಲೂ ಪುರುಷಸೂಕ್ತದಿಂದಲೂ ಕಳಶಾರಾಧನೆಯನ್ನು ಮಾಡಿ, ಸರ್ವಪೂಜಾಸಾಮಗ್ರಿಗಳನ್ನು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಬೇಕು. ॥ ೭ ॥ ಗಂಗಾಯಮುನಾಸರಸ್ವತಿಯರ ಸಂಗಮಸ್ಥಾನವಾದ ತ್ರಿವೇಣಿಯಲ್ಲಿ ಷೋಡಶೋಪಚಾರಪೂಜೆಯನ್ನು ಶೂದ್ರರು ಹಾಗೂ ಸ್ತ್ರೀಯರು ನಾಮ ಮಂತ್ರದಿಂದ ಭಕ್ತಿಯಿಂದ ಮಾಡಬೇಕು. ॥ ೮ ॥ ಇಲ್ಲಿ ಗಂಗಾಯಮುನೆಯರು ನದೀರೂಪದಲ್ಲಿ ಜಾಗ್ರತರಾಗಿ ಪ್ರತ್ಯಕ್ಷರಾಗಿದ್ದಾರೆ. ಆದ್ದರಿಂದ ಆವಾಹನೆಯು ಬೇಡ. ಇವರಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ, ನಂತರ ವೇಣಿಯನ್ನೂ ಮಾಧವನನ್ನೂ ಧ್ಯಾನಿಸಬೇಕು. ॥ ೯ ॥ ಮಾಧವದೇವರನ್ನು ಮುಂದೆ ತಿಳಿಸಿದಂತೆ ಧ್ಯಾನ ಮಾಡಬೇಕು. ''ಹೊಸ ಮೇಘದಂತೆ ಕಾಂತಿಯುಳ್ಳವನೇ, ರತ್ನ ಖಚಿತವಾದ ಆಭರಣಗಳಿಂದ ಅಲಂಕೃತನಾದವನೇ, ಒಳ್ಳೆ ಶ್ವೇತವಸ್ತ್ರವನ್ನು ಧರಿಸಿರತಕ್ಕವನೇ, ಎಲ್ಲ ದೇವತೆಗಳಿಂದ ಸ್ತುತ್ಯನೇ, ಶಂಖ, ಚಕ್ರ, ಗದೆ ಮತ್ತು ಪದ್ಮ ಇವುಗಳನ್ನು ಧಾರಣೆ ಮಾಡಿರುವ ಭುಜ ಹಸ್ತಗಳುಳ್ಳವನೇ, ಸದಾಕಾಲದಲ್ಲಿ ಪ್ರಯಾಗದಲ್ಲಿ ಆವಾಸವುಳ್ಳವನೇ, ಲಕ್ಷ್ಮೀಪತಿಯಾಗಿದ್ದು ಮಾಧವನೆಂದು ಕರೆಸಿಕೊಳ್ಳಲ್ಪಡತಕ್ಕವನೇ, ನಿನ್ನನ್ನು ಮನಸ್ಸಿನಲ್ಲಿ ಧ್ಯಾನಿಸುವೆ''. ॥ ೧೦ ॥ ''ಬಿಳಿ ಮತ್ತು ಕಪ್ಪು ಬಣ್ಣಗಳಿಂದ ಕಂಗೊಳಿಸತಕ್ಕವಳೇ, ಮೂರು ಕಣ್ಣುಗಳಿರುವವಳೇ, ಚಿತ್ರ ವಿಚಿತ್ರವಾದ ವಸ್ತ್ರವನ್ನು ಧರಿಸಿರುವವಳೇ, ಶಂಖ, ಚಕ್ರ, ಪದ್ಮ ಮತ್ತು ಗದೆಯನ್ನು ಕ್ರಮವಾಗಿ ಧರಿಸಿರುವ ಹಸ್ತವುಳ್ಳವಳೇ, ಸಮಸ್ತರ ಅಪೇಕ್ಷೆಯನ್ನು ದಯಪಾಲಿಸತಕ್ಕವಳೇ, ವಿವಿಧವಾದ ಆಭರಣಗಳಿಂದ ಅಲಂಕೃತಳಾದವಳೇ ಮತ್ತು ಪ್ರಯಾಗಕ್ಷೇತ್ರದಲ್ಲಿ ನಿರಂತರ ವಾಸಿಸುವ ತ್ರಿವೇಣೀ ದೇವಿಯೇ''

ನಿನ್ನನ್ನು ಮನಸ್ಸಿನಲ್ಲಿ ಧ್ಯಾನಿಸುವೆನು. ॥ ೧೧ ॥ ಶ್ರೀವೇಣೀದೇವಿಗೆ ಪುನಃ ಪುನಃ ನಮಸ್ಕಾರಗಳು, ಭಕ್ತರ ಫಲಗಳನ್ನು ಕೊಡುವ ಶ್ರೀಮಾಧವನೇ, ನಿನಗೆ ನಮಸ್ಕಾರಗಳು. ॥ ೧೨ ॥ ಸ್ತ್ರೀಯರು, ಶೂದ್ರರು ಇವರಿಗಾಗಿ ಈ ಮೇಲೆ ಹೇಳಿರುವ ಶ್ರೀಮಾಧವನ ಮತ್ತು ತ್ರಿವೇಣೀದೇವಿಯರ ನಾಮಮಂತ್ರವನ್ನು ಹೇಳಿದ್ದೇವೆ. ಈ ತ್ರಿವೇಣಿಯ ಬೇರೆ ಮಂತ್ರಗಳನ್ನು ಆಮೇಲೆ ಹೇಳುವೆನು, ತಿಳಿಯಿರಿ. ॥ ೧೩ ॥ ಈ ರೀತಿ ಧ್ಯಾನವಾದ ನಂತರ ಪೂಜಾ ಪ್ರಾರಂಭವು—

ದೇವತೆಗಳಿಗೆ ಸ್ವಾಮಿಯಾದವನೇ, ಅನಂತನೇ, ಕೇಶವನೇ, ಅಚ್ಯುತನೇ ಮಾಧವನೇ, ನಾನು ಮಾಡುವ ಪೂಜಾವನ್ನು ತ್ರಿವೇಣೀದೇವಿಯ ಜೊತೆ ಸ್ವೀಕಾರ ಮಾಡು ಎಂದು ಪ್ರಾರ್ಥನೆ ಮಾಡಬೇಕು. ॥ ೧೪ ॥ ನಾನಾವಿಧವಾದ ರತ್ನಗಳಿಂದ ಖಚಿತವಾದ ಬಂಗಾರದಿಂದ ಅಲಂಕರಿಸಲ್ಪಟ್ಟ ರತ್ನಸಿಂಹಾಸನವನ್ನು ತ್ರಿವೇಣೀಸಹಿತನಾಗಿ ಸ್ವೀಕಾರ ಮಾಡು. ॥ ೧೫ ॥ ತಣ್ಣಗಿರುವ, ಪರಿಶುದ್ಧವಾದ, ಮನಸ್ಸಿಗೆ ಹಿಡಿಸತಕ್ಕ ಗಂಧ ಮತ್ತು ಅಕ್ಷತೆಯಿಂದ ಅಲಂಕೃತವಾದ ಪಾದ್ಯವನ್ನು ಸಮರ್ಪಿಸುತ್ತೇನೆ, ಶ್ರೀವೇಣೀದೇವಿಯೊಡನೆ ಸ್ವೀಕರಿಸು. ॥ ೧೬ ॥ ಅಮೂಲ್ಯವಾದುವುಗಳಿಗಿಂತ ಅಮೂಲ್ಯನಾದ ಕೇಶವ, ಅನಂತ ಮತ್ತು ಮಾಧವನೇ ತ್ರಿವೇಣೀಯುತನಾಗಿ ನಾನು ಕೊಡುವ ಅರ್ಘ್ಯದ ಜಲದಿಂದ ನಿನ್ನ ಕೈಯನ್ನು ತೊಳೆದುಕೋ. ॥ ೧೭ ॥ ಕರಗುತ್ತಿರುವ ಹಿಮಗಡ್ಡೆಯಿಂದ ಸಂಗ್ರಹಿಸಿರುವ ಪಚ್ಚ ಕರ್ಪೂರ ಮತ್ತು ಏಲಕ್ಕಿ ಇವುಗಳಿಂದ ಮಿಶ್ರಿತವಾದ ಜಲವನ್ನು ದಯಾಮಯನಾದ ಶ್ರೀಮಾಧವನೇ, ನೀನು ತ್ರಿವೇಣೀದೇವಿಯೊಡಗೂಡಿ ಆಚಮನವನ್ನು ಮಾಡುವುದು. ॥ ೧೮ ॥ ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ ಎಂಬ ಈ ಐದು ಪದಾರ್ಥಗಳಿಂದ ಕೂಡಿದ ಪಂಚಾಮೃತಗಳಲ್ಲಿ ತ್ರಿವೇಣಿದೇವಿಯೊಡಗೂಡಿ ಸ್ನಾನ ಮಾಡು ಎಂದು ಪಂಚಾಮೃತವನ್ನು ಮಾಡುವುದು. ॥ ೧೯ ॥ ಗಂಗೆಯಮುನೆಯರ ಸಂಗಮದಿಂದ ತಂದ, ನಿರ್ಮಲವಾದ ಮತ್ತು ಪಾಪಪರಿಹಾರಕವಾದ ಜಲದಿಂದ ತ್ರಿವೇಣೀ ಸಹಿತನಾಗಿ ಸ್ನಾನಮಾಡು ಎಂದು ಹೇಳಿ ಅಭಿಷೇಕ ಮಾಡಬೇಕು. ॥ ೨೦ ॥ ಈ ಬಂಗಾರದ ಪಾತ್ರೆಯಲ್ಲಿರುವುದು ಗಂಗೆಯಿಂದ ತಂದ ಜಲವು. ಇದನ್ನು ತ್ರಿವೇಣೀಸಹಿತನಾಗಿ ಆಚಮನಕ್ಕೆ ಉಪಯೋಗಿಸಿ ಎಂದು ಪುನರಾಚಮನವನ್ನು ಸಮರ್ಪಿಸಬೇಕು. ॥ ೨೧ ॥ ನೀನು ಯಾವಾಗಲೂ ಪೀತಾಂಬರಧಾರಿಯಾದ್ದರಿಂದ ಪೀತಾಂಬರವನ್ನು ನಿನಗೆ ಸಮರ್ಪಿಸಿದ್ದೇನೆ. ತ್ರಿವೇಣೀ ಸಹಿತನಾಗಿ ಇದನ್ನು ಸ್ವೀಕಾರ ಮಾಡು. ॥ ೨೨ ॥ ಯಮುನೆಯಿಂದ ತಂದ ಶುದ್ಧವಾದ ಜಲವಿದು. ದಿವ್ಯವಾದುದು ಮತ್ತು ನನ್ನ ತಾಪತ್ರಯಗಳನ್ನು ಹೋಗಲಾಡಿಸತಕ್ಕದ್ದು. ಇದರಿಂದ ತ್ರಿವೇಣಿ ಯುತನಾಗಿ ಆಚಮನ ಮಾಡು. ॥ ೨೩ ॥ ಮಾಧವಪ್ರಭುವೇ, ಶ್ರುತಿ ಮತ್ತು ಸ್ಮೃತಿಗಳಿಗೆ ಸಮ್ಮತವಾದ ಕರ್ಮಗಳಿಗೆ ಮೂಲದಂತಿರುವ ಮತ್ತು ಬ್ರಹ್ಮಾ, ವಿಷ್ಣು ಮತ್ತು ಮಹೇಶ್ವರರ ವಿಶಿಷ್ಟ ಸಾನ್ನಿಧ್ಯವುಳ್ಳ ಬೆಳ್ಳಗಿರುವ ಈ ಬ್ರಹ್ಮಸೂತ್ರವನ್ನು ಸ್ವೀಕಾರ ಮಾಡು ॥ ೨೪ ॥ ತಣ್ಣಗಿರತಕ್ಕ, ಸುಗಂಧ ಯುಕ್ತವಾದ ಕರ್ಮಾಧಿಕಾರಸಿದ್ಧಿಗೆ ಕಾರಣವಾಗಿರತಕ್ಕ ಆಚಮನಜಲವನ್ನು ಸ್ವೀಕರಿಸು. ॥ ೨೫ ॥ ಮುತ್ತು ಮತ್ತು ಮಾಣಿಕ್ಯಖಚಿತವಾದ ಝುಣಝುಣತ್ಕಾರಗಳಿಂದ ಕೂಡಿದ ಸುಂದರವಾಗಿರುವ ಭೂಷಣಾದಿಗಳನ್ನು, ವೇಣೀಸಹಿತನಾಗಿ ಧಾರಣೆ ಮಾಡು. ॥ ೨೬ ॥ ಕಪ್ಪು ಅಗರು, ಕಸ್ತೂರಿ ಮತ್ತು ಸುಗಂಧದ್ರವ್ಯಗಳಿಂದ ಮಿಶ್ರಿತವಾದ ಈ ಮನೋಹರನಾಗಿರುವ ಚಂದನವನ್ನು ವೇಣೀ ಸಹಿತನಾಗಿ ಪ್ರೀತಿಯಿಂದ ಸ್ವೀಕರಿಸು ॥ ೨೭ ॥ ಎಲ್ಲರಿಂದಲೂ ನಮಸ್ಕರಿಸಲ್ಪಡುವ ತ್ರಿವೇಣಿಯೇ, ಶ್ರೀಮಹಾವಿಷ್ಣುವಿನ ಮನಸ್ಸನ್ನು ಸೂರೆಗೊಂಡಿರತಕ್ಕ, ಮುಖಕ್ಕೆ ಅಲಂಕಾರವನ್ನುಂಟುಮಾಡುವ ಈ

ಅರಸಿನವನ್ನು ಸ್ವೀಕಾರ ಮಾಡು. ॥ ೨೮ ॥ ಸೌಭಾಗ್ಯದ ಚಿಹ್ನೆಯಾಗಿ ಕಾಂತಿಯನ್ನು ವರ್ಧಿಸತಕ್ಕ, ಎಲ್ಲ ರೀತಿಯಿಂದಲೂ ಮಂಗಳವನ್ನುಂಟು ಮಾಡತಕ್ಕ ಕುಂಕುಮವನ್ನು ಹಣೆಯಲ್ಲಿ ಧರಿಸಲು ಸ್ವೀಕಾರ ಮಾಡು. ॥ ೨೯ ॥ ಅಕ್ಕಿಯಿಂದ ನಿರ್ಮಾಣವಾಗಿರುವ ಕುಂಕುಮದಿಂದ ಮಿಶ್ರಿತವಾಗಿರತಕ್ಕ ಇಂದ್ರಗೋಪದಂತೆ ಹೊಳೆಯುತ್ತಿರುವ ಅಕ್ಷತೆಯನ್ನು ತ್ರಿವೇಣೀಸಹಿತನಾಗಿ ಸ್ವೀಕಾರ ಮಾಡು. ॥ ೩೦ ॥ ಮಲ್ಲಿಗೆ, ಮಾಲತೀ, ಜಾಜಿ, ಕುಂದ, ಕಲ್ಹಾರ ಕಮಲ ಮತ್ತು ತುಳಸೀ ಇವುಗಳನ್ನು ತ್ರಿವೇಣೀಸಹಿತವಾಗಿ ಸ್ವೀಕಾರ ಮಾಡು. ॥ ೩೧ ॥ ಸುಗಂಧವನ್ನು ಹೊರಚೆಲ್ಲುತ್ತಿರುವ ಪುಷ್ಪ ಮಾಲಿಕೆಗಳಿಂದ ಹಾಗೂ ಆಭರಣಗಳಿಂದ ನಿನ್ನನ್ನು ಆದರದಿಂದ ಅಲಂಕರಿಸುವೆನು, ನೀನು ಅವುಗಳನ್ನು ತ್ರಿವೇಣೀಸಹಿತ ಸ್ವೀಕರಿಸು. ॥ ೩೨ ॥ ದಶಾಂಗ,ಗುಗ್ಗುಳ, ಪಾಟೀರ ಇವುಗಳೇ ಮೊದಲಾದವುಗಳಿಂದ ಕೂಡಿರುವ ಧೂಪವನ್ನು ಆದಿಶಕ್ತಿಯಾದ ಸ್ವಾಮಿಯೇ, ನೀನು ತ್ರಿವೇಣೀ ಸಹಿತ ಸ್ವೀಕರಿಸು. ॥ ೩೩ ॥ ತುಪ್ಪದಲ್ಲಿ ತೊಯ್ದಿರತಕ್ಕ ಪ್ರಕಾಶಮಾನವಾದ ಮೂರು ಬತ್ತಿಗಳಿಂದ ಕೂಡಿದ, ಅಜ್ಞಾನವೆಂಬ ಕತ್ತಲನ್ನು ಹೋಗಲಾಡಿಸತಕ್ಕ, ''ಏಕಾರ್ತಿ''ಯನ್ನು ತ್ರಿವೇಣೀಸಹಿತನಾಗಿ ಸ್ವೀಕಾರ ಮಾಡು. ॥ ೩೪ ॥ ಚೋಷ್ಯ, ಲೇಹ್ಯ, ಪೇಯ ಮತ್ತು ಭಕ್ಷ್ಯ ಎಂಬ ನಾಲ್ಕು ವಿಧಗಳಾದ ಅತಿಮಧುರವಾಗಿರತಕ್ಕ, ಆರು ರಸಗಳಿಂದ ಕೂಡಿದ ಉಪಹಾರಗಳನ್ನು ತ್ರಿವೇಣೀಸಹಿತನಾಗಿ ಸ್ವೀಕರಿಸು. ॥ ೩೫ ॥ ಬ್ರಾಹ್ಮೀಮುಹೂರ್ತದಲ್ಲಿ ಪರಮಾತ್ಮನನ್ನು ಯೋಗನಿದ್ದೆಯಿಂದ ಎಬ್ಬಿಸುವಾಗಲೂ, ಅಭಿಷೇಕ ಮಾಡುವಾಗಲೂ, ಧೂಪ ಹಾಕುವಾಗಲೂ ದೀಪಗಳನ್ನು ಹಚ್ಚಿಡುವಾಗಲೂ, ನೈವೇದ್ಯ ಸಮರ್ಪಣೆ ಮಾಡುವಾಗಲೂ ಮತ್ತು ಮಂಗಳಾರತಿಗಳನ್ನು ಮಾಡುವಾಗಲೂ ಪೂಜೆ ಮಾಡುವವರು ಘಂಟೆಯನ್ನು ಬಾರಿಸಬೇಕು. ॥ ೩೬ ॥ ಪಚ್ಚಕರ್ಪೂರ, ಲಾವಂಚ ಮುಂತಾದವುಗಳಿಂದ ಮಿಶ್ರಿತವಾದ, ಬಂಗಾರದ ಪಾತ್ರೆಯಲ್ಲಿಟ್ಟಿರುವ ಪಾನೀಯವನ್ನು ತ್ರಿವೇಣೀಸಹಿತನಾಗಿ ಸ್ವೀಕಾರ ಮಾಡು. ॥ ೩೭ ॥ ಸಂಸಾರಸಾಗರದಿಂದ ದಾಟಿಸತಕ್ಕ, ದಿವ್ಯವಾದ, ಭೂಮಂಡಲಕ್ಕೆ ಅಲಂಕಾರಪ್ರಾಯವಾದ ಗಂಗೆಯಿಂದ ತಂದ ಜಲವನ್ನು ಆಚಮನೀಯಕ್ಕಾಗಿ ತ್ರಿವೇಣೀಸಹಿತನಾಗಿ ಸ್ವೀಕರಿಸು. ॥ ೩೮ ॥ ಅತ್ಯಂತ ನಿರ್ಮಲವಾದ ಬೆಳ್ಳನೆಯ ವಸ್ತ್ರವನ್ನು ತಮಗಾಗಿ ಕೈವರಿಸಿಕೊಳ್ಳಲು ಇಟ್ಟಿದ್ದೇನೆ. ತ್ರಿವೇಣೀಸಹಿತನಾಗಿ ಸ್ವೀಕರಿಸು. ॥ ೩೯ ॥ ಚಂದನ, ಅಗರು, ಕಸ್ತೂರಿ, ಕುಂಕುಮ, ಕೇಸರಿ ಮತ್ತು ಜಾಜಿ ಕಾಯಿ ಇವುಗಳಿಂದ ಆದ ಗಂಧವನ್ನು ತ್ರಿವೇಣೀಸಹಿತನಾಗಿ ಕರೋದ್ವರ್ತನಕ್ಕಾಗಿ ಸ್ವೀಕರಿಸು. ॥ ೪೦ ॥ ನಾನಾವಿಧವಾದ ಮಧುರವಾಗಿರುವ ಒಳ್ಳೆಯ ವಾಸನೆಯಿಂದ ಕೂಡಿರುವ ಹಣ್ಣುಗಳನ್ನು ಸರ್ವಕ್ಕೂ ಆಧಾರ ಭೂತನಾಗಿದ್ದು ನಿಯಾಮಕನಾಗಿರುವ ತ್ರಿವೇಣೀಸಹಿತನಾದ ಮಾಧವನೇ ಸ್ವೀಕರಿಸು. ॥ ೪೧ ॥ ಪೂಜೆಯು ಗುಣಪರಿಪೂರ್ಣವಾಗಲು ಕಾರಣವಾದ, ಬಂಗಾರದ ಹೂವುಗಳನ್ನು ದಕ್ಷಿಣೆಗಾಗಿ ತ್ರಿವೇಣೀಸಹಿತನಾಗಿ ಸ್ವೀಕರಿಸು. ॥ ೪೨ ॥ ನಿನ್ನ ತೇಜಸ್ಸಿನಿಂದಲೇ ಗೆಲ್ಲಲ್ಪಟ್ಟ ಸಕಲ ಜಗತ್ತುಗಳುಳ್ಳ ಎಲ್ಲರಿಂದಲೂ ಮಂಗಳಾರತಿ ಮಾಡಿಸಿಕೊಳ್ಳಲ್ಪಟ್ಟ ಎರಡು ಪಾದಗಳುಳ್ಳ ಶ್ರೀಮಾಧವನೇ, ಭಕ್ತಿಯಿಂದ ನಾನು ಆರತಿ ಮಾಡುತ್ತೇನೆ. ಅದನ್ನು ತ್ರಿವೇಣೀಸಹಿತನಾಗಿ ಸ್ವೀಕರಿಸು. ॥ ೪೩ ॥ ಸುವಾಸನೆಯಿಂದ ಕೂಡಿದ ನಾನಾ ಬಣ್ಣಗಳ ಹೂವುಗಳ ಅಂಜಲಿಯನ್ನು ನಿನಗೆ ಸಮರ್ಪಿಸುತ್ತೇನೆ, ತ್ರಿವೇಣೀಸಹಿತ ಸ್ವೀಕಾರ ಮಾಡು. ॥ ೪೪ ॥ ಹೆಜ್ಜೆಹೆಜ್ಜೆಗೆ ಪಾಪಗಳನ್ನು ಪರಿಹರಿಸುತ್ತಿರುವ ನೀನು ಮನುಷ್ಯರ ಎಲ್ಲ ಅಪೇಕ್ಷೆಗಳನ್ನು ನೆರವೇರಿಸುತ್ತೀಯೆ. ಅಂತಹ ನಿನಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸುತ್ತೇನೆ. ತ್ರಿವೇಣೀಸಹಿತನಾಗಿ ಸ್ವೀಕರಿಸು. ॥ ೪೫ ॥ ದಯಾಸಮುದ್ರನಾಗಿರುವ, ಭಕ್ತರ

ಇಷ್ಟಾರ್ಥಗಳನ್ನು ನೆರವೇರಿಸುವ, ದೀನರ ಬಗ್ಗೆ ವಾತ್ಸಲ್ಯವುಳ್ಳ ಶ್ರೀ ಮಾಧವನೇ ! ನಿನಗೆ ನಾನು ಶರಣಾಗಿದ್ದೇನೆ. ನನ್ನನ್ನು ಕಾಪಾಡು. ॥ ೪೬ ॥ ಸರ್ವದೇಶಗಳಲ್ಲಿ ಅಲೆದಲೆದು ದುಃಖವೇ ಮೂಲದಲ್ಲಿ ಹೊಂದಿರುವ ಸಂಸಾರದ ಭವಣೆಗಳಿಂದ ಅತ್ಯಂತ ದುಃಖಗೊಂಡಿರುವ ನಾನು ನಿನ್ನ ಎರಡು ಪಾದಗಳಲ್ಲಿ ಬಿದ್ದಿದ್ದೇನೆ. ದೀನವತ್ಸಲನಾದ ನೀನು ನನ್ನನ್ನು ರಕ್ಷಿಸು. ॥ ೪೭ ॥ ಎಲೈ ಮಾಧವನೆ, ನೀನು ಆದಿ, ಮಧ್ಯ ಮತ್ತು ಅಂತ್ಯವೇಣಿಯ ಸ್ವರೂಪನಾಗಿದ್ದು, ದ್ರವಬ್ರಹ್ಮ ರೂಪಿಯಾದ (ದ್ರವದಲ್ಲಿ ಭಗವಂತನು ದ್ರವರೂಪದಿಂದ ಇದ್ದಾನೆಂದು ಭಾವ) ತೀರ್ಥರಾಜನಾದ ಪ್ರಯಾಗದಲ್ಲಿ ವಿರಾಜಮಾನನಾಗಿದ್ದು ಆದಿಮಧ್ಯಾಂತರಹಿತನೆಂದು ಕೀರ್ತಿತನಾಗಿದ್ದೀಯೆ. ॥ ೪೮ ॥ ಜಗನ್ಮಾತೆಯಾದ ತ್ರಿವೇಣೀದೇವಿಯೇ! ಮಂತ್ರ, ತಂತ್ರ ಮತ್ತು ಕ್ರಿಯಾ ಹೀನವಾದ ನನ್ನ ಪೂಜೆಯನ್ನು ಸ್ವೀಕರಿಸಿ ಅದನ್ನು ಸರ್ವರೀತಿಯಲ್ಲಿ ಫಲದಾಯಕವನ್ನಾಗಿ ಮಾಡು. ॥ ೪೯ ॥ ಅಕ್ಷಯ್ಯವಟದಲ್ಲಿರುವವನೇ ಮತ್ತು ಭಕ್ತರ ಮನಸ್ಸಿನಲ್ಲಿರುವ ಸ್ವಾಮಿಯೇ, ನಿನಗೆ ನಮಸ್ಕಾರಗಳು, ತೀರ್ಥನೆಂದು ಕರೆಸಿಕೊಳ್ಳಲ್ಪಟ್ಟ ಶ್ರೀಮಹಾವಿಷ್ಣುವಿನ ಮಗಳಾದ ಗಂಗೆಯಲ್ಲಿ ಸನ್ನಿಹಿತನಾಗಿರುವ ಮತ್ತು ಜಗತ್ತಿನಲ್ಲಿ ನಿಯಾಮಕನಾಗಿ ಮತ್ತು ಆಧಾರಭೂತನಾಗಿ ಇರುವ ಶ್ರೀಮಾಧವನೇ, ನಿನಗೆ ನಮಸ್ಕಾರಗಳು, ನಮಸ್ಕಾರಗಳು, ನಮಸ್ಕಾರಗಳು. ॥ ೫೦ ॥ ಪ್ರಯಾಗ ಕ್ಷೇತ್ರದಲ್ಲಿ ಅತ್ಯಂತ ವಿರಾಜಮಾನಳಾದ ದೇವ, ಋಷಿ, ಸಿದ್ಧ ಮತ್ತು ಸರ್ವಜಾತಿಗಳಿಂದ ಚೆನ್ನಾಗಿ ಸ್ತುತ್ಯಳಾದವಳೇ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕುವಿಧ ಪುರುಷಾರ್ಥಗಳನ್ನು ದಯಪಾಲಿಸತಕ್ಕವಳೇ, ನನ್ನ ಆರಾಧ್ಯದೇವತೆಯೇ ಆದ ತ್ರಿವೇಣೀದೇವಿಯೇ ನಿನಗೆ ನಮಸ್ಕಾರಗಳು. ॥ ೫೧ ॥ ಮಾಘಮಾಸದಲ್ಲಿಯೂ ಮಕರಸಂಕ್ರಮಣದಲ್ಲಿಯೂ ನಿನ್ನಲ್ಲಿ ಸ್ನಾನಾದಿಗಳನ್ನು ಮಾಡಿದವರಿಗೆ ನಿನ್ನ ಲೋಕವಾದ ವೈಕುಂಠದ ವಾಸವನ್ನು ಕೊಡತಕ್ಕವಳೇ, ಅವರಿಗೆ ಮುಕ್ತಿಯನ್ನು ಕೊಟ್ಟು ಅವರವರ ಯೋಗ್ಯತೆಗೆ ತಕ್ಕಂತೆ, ಪೂರ್ಣವಾದ ಆನಂದವನ್ನೂ ಜ್ಞಾನವನ್ನೂ ನಿನ್ನಲ್ಲಿ ಭಕ್ತಿಯನ್ನೂ ಅನುಗ್ರಹಿಸತಕ್ಕವಳೇ, ಏನಾದರೂ ಕಾರಣದಿಂದ ನಿನ್ನಲ್ಲಿ ದೇಹತ್ಯಾಗ ಮಾಡಿದವರಿಗೆ ಮಿತಿಯಿಲ್ಲದ ಜ್ಞಾನಾನಂದಾದಿಗಳುಳ್ಳ ಸ್ವರೂಪಸುಖವನ್ನು, ಸ್ವರೂಪ ಜ್ಞಾನವನ್ನೂ ಕರುಣಿಸತಕ್ಕವಳೇ, ಶ್ರೀತ್ರಿವೇಣಿಯೇ, ನಿನಗೆ ನಮಸ್ಕಾರಗಳು. ॥ ೫೨ ॥ ಗಂಗೆ, ಯಮುನೆ ಮತ್ತು ಸರಸ್ವತೀ ಎಂಬ ಮೂರು ನದಿಗಳ ಸಂಗಮವಾದ ನಿನಗೆ ''ತ್ರಿವೇಣೀ'' ಎಂಬ ಹೆಸರು ಬಂದಿದೆ. ನೀನು ಬ್ರಹ್ಮ,ರುದ್ರ ಮತ್ತು ವಿಷ್ಣುವಿನ ಪದವಿಗಳನ್ನು ಅನುಗ್ರಹಿಸುವವಳು. ಅಂತಹ ವೇಣೀದೇವಿಗೆ ನಮಸ್ಕಾರ, ನಮಸ್ಕಾರ, ನಮಸ್ಕಾರಗಳು. ॥ ೫೩ ॥ ನಾನು ನನ್ನ ಶಕ್ತ್ಯನುಸಾರ ನನಗೆ ತಿಳಿದಂತೆ ವೇಣೀ ಮತ್ತು ವೇಣೀಮಾಧವನ ಪೂಜೆಯನ್ನು ಮಾಡಿದ್ದೇನೆ. ಇದರಿಂದ ತ್ರಿವೇಣಿಯು ಮತ್ತು ಶ್ರೀವೇಣೀಮಾಧವನೂ ಪ್ರೀತರಾಗಲಿ. ॥ ೫೪ ॥

॥ ನಲವತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುಶ್ಚತ್ವಾರಿಂಶೋಽಧ್ಯಾಯಃ ॥ ೪೪ ॥

**ಶೇಷ ಉವಾಚ—**

ನಾಮಪೂಜಾಮಥೋ ವಕ್ಷ್ಯೇ ವೇಣೀಮಾಧವಯೋಃ ಪೃಥಕ್ ।
ಭವೇತಾಂ ಪರಮಪ್ರೀತೌ ಕೃಪಯಾ ಪೂಜಯಾ ಮಯಾ ॥ ೧ ॥
ಪ್ರಫುಲ್ಲೈರ್ವಿವಿಧೈಃ ಪುಷ್ಪೈರ್ಮಾಲೂರತುಲಸೀದಲೈಃ ।
ನಾಮಭಿಃ ಪೂಜಯೇದ್ಭಕ್ತ್ಯಾ ಮಾಧವಂ ವೇಣಿಕಾಂ ತಥಾ ॥ ೨ ॥
ವೇಣೀಮಾಧವಯೋರ್ನಾಮಾನ್ಯನಂತಾನಿ ತಥಾಪ್ಯಹಮ್ ।
ಅಷ್ಟೋತ್ತರಶತಂ ನಾಮ್ನಾಂ ವಕ್ಷ್ಯೇ ಪೂಜೋಪಯೋಗಿ ಯತ್ ॥ ೩ ॥
ಮಾಧವಃ ಕೇಶವೋಽನಂತೋ ಗೋವಿಂದೋ ಗರುಡಧ್ವಜಃ ।
ಮಾಧವೀ ಶಿವದಾ ಗಂಗಾ ಶಿವಾ ಬ್ರಹ್ಮಸ್ವರೂಪಿಣೀ ॥ ೪ ॥
ವಿಷ್ಣುರ್ನಾರಾಯಣಃ ಕೃಷ್ಣಃ ಶ್ರೀಧರೋ ಮಧುಸೂದನಃ ।
ವೈಷ್ಣವೀ ಶಾಂಕರೀ ಬ್ರಾಹ್ಮೀ ಸರ್ವದೇವಸ್ವರೂಪಿಣೀ ॥ ೫ ॥
ತ್ರಿವಿಕ್ರಮೋ ವಾಮನಶ್ಚ ಹೃಷೀಕೇಶೋ ಹ್ಯಧೋಕ್ಷಜಃ ।
ಸರ್ವವ್ಯಾಧಿಭಿಷಕ್ ಶ್ರೇಷ್ಠಾ ಸಂಸಾರವಿಷನಾಶಿನೀ ॥ ೬ ॥
ಪ್ರದ್ಯುಮ್ನೋ ವಾಸುದೇವಶ್ಚಾನಿರುದ್ಧಃ ಪುರುಷೋತ್ತಮಃ ।
ಸೂಕ್ಷ್ಮಮೂರ್ತಿಸ್ಸುಧಾಮೂರ್ತಿರ್ಭುಕ್ತಿಮುಕ್ತಿಪ್ರದಾಯಿನೀ ॥ ೭ ॥
ದಾಮೋದರಃ ಪದ್ಮನಾಭೋ ವಿಶ್ವನಾಥೋ ಜನಾರ್ದನಃ ।
ತಾಪತ್ರಿತಯಸಂಹರ್ತ್ರೀ ಭದ್ರಾ ಶಾಂತಿಕರೀ ಜಯಾ ॥ ೮ ॥
ನರಸಿಂಹೋಽಚ್ಯುತೋ ನಂದೋ ಹರಿಶ್ಚಕ್ರೀ ಚ ಶಾರ್ಙ್ಗಭೃತ್ ।
ಸತ್ವಮೂರ್ತಿರ್ಜಗನ್ಮಾತಾ ಶಾಂತಿಸ್ಸಂತತಿಕಾರಿಣೀ ॥ ೯ ॥
ವೈಕುಂಠೋ ಯಜ್ಞಪುರುಷೋ ಯೋಗೀಶೋ ವಿಷ್ಟರಶ್ರವಾಃ ।
ವೈಕುಂಠಚರಣೋದ್ಭೂತಾ ಯೋಗಿನೀ ಯೋಗದಾ ಸದಾ ॥ ೧೦ ॥
ಕಾಲಾತ್ಮಾ ಪುಂಡರೀಕಾಕ್ಷೋ ವಿಶ್ವರೂಪೀ ಪ್ರತಾಪವಾನ್ ।
ಕಾಲಶಕ್ತಿಃ ಮಹಾಶಕ್ತಿಃ ಸೃಷ್ಟಿಸ್ಥಿತ್ಯಂತಕಾರಿಣೀ ॥ ೧೧ ॥
ಅಂತರ್ಯಾಮೀ ಸಮಸ್ತೇಶಸ್ಸತ್ಯಸಂಧಸ್ಸನಾತನಃ ।
ಭದ್ರಾದಿಭೋಗದಾ ಭೋಗವತೀ ಮಂದಾಕಿನೀ ನದೀ ॥ ೧೨ ॥
ಈಶ್ವರಃ ಪರಮಾತ್ಮಾ ಚ ಮುರಾರಿರ್ದೈತ್ಯನಾಶಕೃತ್ ।
ತ್ರಿಮಾರ್ಗಗಾ ತ್ರಿವರ್ಣಾ ಚ ತ್ರಿಹುತಾಶನಸಂಸ್ಥಿತಾ ॥ ೧೩ ॥
ಮುಕುಂದಃ ಪೀತವಸನೋ ವಿಷ್ವಕ್ಸೇನಶ್ಚತುರ್ಭುಜಃ ।
ಸ್ವರ್ಗದಾ ಜಗತೀಭೂಷಾ ಶುಕ್ಲಸಂಸ್ಥಾ ಕ್ಷಮಾವೃತಾ ॥ ೧೪ ॥

ಶ್ರೀಪತಿರ್ವನಮಾಲೀ ಚ ಬಲಿಧ್ವಂಸೀ ವಟೇಶಯಃ ।
ತೇಜೋವತೀ ವಿಶ್ವಮಿತ್ರಾ ಪಾಶಜಾಲನಿಕೃಂತನೀ ॥ ೧೫ ॥
ಸರ್ವಾರ್ಥಸಾಧಕಃ ಪೂಜ್ಯೋ ಭಕ್ತಸಂಕಟನಾಶನಃ ।
ಸುವೃಷಾ ಸುಚಲದ್ವಾರಾ ಪಾರಾವಾರವಿಹಾರಿಣೀ ॥ ೧೬ ॥
ದೇವಕೀನಂದನೋ ವಿಶ್ವಂಭರಃ ಶ್ರೀವತ್ಸಲಾಂಛನಃ ।
ದೇವಪೂಜ್ಯಾ ಜಗದ್ಧಾತ್ರೀ ವರಿಷ್ಠಾ ವರದಾನಘಾ ॥ ೧೭ ॥
ಮಹಾಮತ್ಸ್ಯೋ ಮಹಾಕೂರ್ಮಃ ಶೇಷಶಾಯೀ ಗದಾಧರಃ ।
ಭಾಗೀರಥೀ ಜಾಹ್ನವೀ ಚ ಮಹಾಪಾತಕನಾಶಿನೀ ॥ ೧೮ ॥
ಮಹಾಯಜ್ಞವರಾಹಶ್ಚ ರಾಘವೋ ರಾವಣಾಂತಕೃತ್ ।
ಬ್ರಹ್ಮಿಷ್ಠಾ ಬ್ರಹ್ಮದೋಷಘ್ನೀ ಸುಖದೋಗ್ಧ್ರೀ ಚ ಮಂಗಲಾ ॥ ೧೯ ॥
ಕಾಶ್ಯಪೋ ಭಾವಗಮ್ಯಶ್ಚ ಶರಣ್ಯೋ ಭಕ್ತವತ್ಸಲಃ ।
ಸಂಜೀವಿನೀ ಭಾವಗಮ್ಯಾ ಶರಣ್ಯಾ ಭಕ್ತವತ್ಸಲಾ ॥ ೨೦ ॥
ತ್ರಿಗುಣಾದಿಸ್ತ್ರಯೀಮೂರ್ತಿರ್ಹನುಮತ್ಪ್ರಭುರವ್ಯಯಃ ।
ನಿರ್ಲೇಪಾ ದುಃಖಹಂತ್ರೀ ಚ ಪ್ರಣತಾರ್ತಿಪ್ರಭಂಜಿನೀ ॥ ೨೧ ॥
ಅನಾದಿನಿಧನಸ್ಸಾಕ್ಷೀ ಲೋಕಾಧ್ಯಕ್ಷಃ ಪಿತಾಮಹಃ ।
ಅನಾದಿಮಧ್ಯನಿಧನಾ ನೀರೂಪಾನೇಕರೂಪಿಣೀ ॥ ೨೨ ॥
ಜಗನ್ನಾಥೋ ಜಗದ್ಬಂಧುಃ ಬ್ರಹ್ಮಣ್ಯಸ್ಸರ್ವಜಿತ್ಪ್ರಭುಃ ।
ಜಗದ್ಧಾರಾ ಜಗದ್ವಂದ್ಯಾ ಕ್ರೀಡಾಕಲ್ಲೋಲಕಾರಿಣೀ ॥ ೨೩ ॥
ಸಹಸ್ರಶೀರ್ಷಾ ಪುರುಷಃ ಪ್ರಧಾನಪುರುಷಃ ಪರಃ ।
ಬ್ರಹ್ಮವಿದ್ಯಾ ತ್ರಯೀರೂಪಾ ಮೂಲಪ್ರಕೃತಿರೀಶ್ವರೀ ॥ ೨೪ ॥
ಪ್ರಯಾಗನಿಲಯಸ್ಸ್ವಾಮೀ ಶ್ರೀನಿವಾಸಶ್ಶುಭೇಕ್ಷಣಃ ।
ಪದ್ಮೇಕ್ಷಣಾ ಪದ್ಮವರ್ಣಾ ಸ್ವರ್ಗಸೋಪಾನಪದ್ಧತಿಃ ॥ ೨೫ ॥
ಹಿರಣ್ಯಗರ್ಭಃ ಕ್ಷೇತ್ರಜ್ಞಃ ಶಾಶ್ವತೋ ದುರ್ಧರೋ ಜಯಃ ।
ದಿವ್ಯಾಂಬರಾ ದಿವ್ಯಭೋಗಾ ದಿವ್ಯಾಭಾ ದಿವ್ಯಭೂಷಣಾ ॥ ೨೬ ॥
ಸುಭುಜಸ್ಸುಮುಖಃ ಶ್ರೀಮಾನ್ಸುನೇತ್ರಶ್ಶೋಭನಾಕೃತಿಃ ।
ಕಾಲಿಂದೀಸಂಗತಾ ಕಲ್ಪಾ ಕಲಿಕಾಲವಿನಾಶಿನೀ ॥ ೨೭ ॥
ವಂದಿತಾಂಘ್ರಿಯುಗೋಽಕ್ಷಯ್ಯವಟಲೀಲಾವಿಚಕ್ಷಣಃ ।
ಇಂದ್ರಾದಿವಂದಿತಾ ಸೌರೀ ಪಾವನೀ ಪೂತಪುಷ್ಕರಾ ॥ ೨೮ ॥
ಷಣ್ಮೂರ್ತಿರ್ಭಕ್ತಿಮದ್ಗಮ್ಯೋ ವೇಣೀನೇತ್ರಯವಿಭೂಷಣಃ ।
ತ್ರಿಮೂರ್ತಿಸ್ತ್ರ್ಯಕ್ಷರಾ ತ್ರ್ಯಕ್ಷಾ ತ್ರ್ಯಕ್ಷಮೌಲೀಕೃತಾಸ್ಪದಾ ॥ ೨೯ ॥

ಕಮನೀಯತರಾಕಾರಃ ಕಾಮಜಿತ್ಕಾಮಿತಪ್ರದಃ ।
ಕಮನೀಯತರಾ ಕಾಮ್ಯಾ ಶರಣ್ಯಾ ಕಾಮಿತಪ್ರದಾ ॥ ೩೦ ॥
ವಿಧಾತೃಕರಕೋದ್ಭೂತಾ ಸಂಜ್ಞಾಜಠರಭೂಷಣಾ ।
ವಿರಂಚಿವದನೋದ್ಭೂತಾ ವಿಷ್ಣುಪಾದಾವನೇಜನೀ ॥ ೩೧ ॥
ಚರಮಾಚಲಸಂಬದ್ಧಾ ಬ್ರಹ್ಮಕಾರ್ಯಕೃತೋದ್ಯಮಾ ।
ಆದಿವೇಣೀ ಮಧ್ಯವೇಣೀ ಹ್ಯಂತವೇಣೀ ತ್ರಿವೇಣಿಕಾ ॥ ೩೨ ॥
ಯ ಏತೈರ್ನಾಮಭಿಃ ಪೂಜಾಂ ಕುರ್ವಂತಿ ಕುಸುಮಾದಿಭಿಃ ।
ತ್ರಿವೇಣೀಮಾಧವೌ ತೇಷಾಂ ಪ್ರಸನ್ನೌ ನಾತ್ರ ಸಂಶಯಃ ॥ ೩೩ ॥
ವಿಭವೇ ಪ್ರತ್ಯಹಂ ಕುರ್ಯಾದನ್ಯಥೈಕದಿನೇಽಪಿ ವಾ ।
ತದಶಕ್ತೌ ಚ ಕುರ್ವೀತ ಜಲೇನ ತುಲಸೀದಲೈಃ ॥ ೩೪ ॥
ನಾದತ್ತೇ ಮಾಧವಃ ಪೂಜಾಮರ್ಥಸಂಭಾರಸಂಭೃತಾಮ್ ।
ದೀನೇನಾಪಿ ಕೃತಾಂ ಭಕ್ತ್ಯಾ ಜವಪತ್ರಜಲಾದಿಭಿಃ ॥ ೩೫ ॥
ನಾರ್ಘಾದಿ ಮಾಧವೋ ದೇವಃ ಪೂರ್ಣೋಽಪೂರ್ಣಾದಪೇಕ್ಷತೇ ।
ಯತ್ಕರೋತ್ಯರ್ಚಕೋಽರ್ಘಾದಿ ಸ್ವಕೃತೇ ತದ್ಧಿ ನಾನ್ಯಥಾ ॥ ೩೬ ॥
ಭಕ್ತ್ಯೈವ ಸುಲಭೋ ದೇವೋ ನಾನ್ಯತೋಽರ್ಥಸ್ಯ ರಾಶಿಭಿಃ ।
ಶ್ರುತಿಸ್ಮೃತಿಪುರಾಣೇಷು ಜರೀಜಾಗರ್ತಿ ಡಿಂಡಿಮಃ ॥ ೩೭ ॥
ಭಕ್ತ್ಯೈವ ಯತ್ಪದಂ ಪ್ರಾಪುಃ ಶೂದ್ರನೀಚಾಂತ್ಯಜಾಬಲಾಃ ।
ಜ್ಞಾನಿನೋ ಯೋಗಿನೋ ವೃದ್ಧಾಸ್ತತ್ಪದಂ ನಾಪುರಂಜಸಾ ॥ ೩೮ ॥
ಪತ್ರಂ ಪುಷ್ಪಂ ಫಲಂ ತೋಯಂ ಯದ್ಭಕ್ತ್ಯಾ ದೀಯತೇ ಜನೈಃ ।
ಸುಮೇರುಸದೃಶಂ ಭೂತ್ವಾ ತದನಂತ್ಯಾಯ ಕಲ್ಪತೇ ॥ ೩೯ ॥
ಪ್ರಯಾಗೇ ತು ವಿಶೇಷೇಣ ಗಂಗಾಯಮುನಸಂಗಮೇ ।
ಪೂಜಿತೋ ಮಾಧವೋ ಭಕ್ತ್ಯಾ ಜಲೇನಾಪಿ ಪ್ರಸೀದತಿ ॥ ೪೦ ॥
ತಸ್ಮಾತ್ಪೂಜಾ ಪ್ರಕರ್ತವ್ಯಾ ವೇಣೀಮಾಧವಯೋಃ ಶುಭಾಃ ।
ಯಾತ್ರಿಕೈಸ್ತು ವಿಶೇಷೇಣ ವಿತ್ತಶಾಠ್ಯವಿವರ್ಜಿತೈಃ ॥ ೪೧ ॥
ಅಕಲ್ಪೋ ವಿಕಲಾಂಗಶ್ಚ ರೋಗೀ ದೂರಸ್ಥಿತೋಽಪಿ ವಾ ।
ನಾಮ್ನಾಂ ಪಠನಮಾತ್ರೇಣ ಸ್ನಾನಪೂಜಾಫಲಂ ಲಭೇತ್ ॥ ೪೨ ॥
ಚತುರ್ಭಿರಪಿ ವರ್ಣೈಶ್ಚ ಚತುರ್ಭಿರಪಿ ಚಾಶ್ರಮೈಃ ।
ಸಬಾಂಧವೈಃ ಸಯೋಷಿದ್ಭಿರ್ಯಥಾಧಿಕೃತಿಪೂಜನಮ್ ॥ ೪೩ ॥
ಪಠಾಮ್ಯಹಂ ಚ ಪಾತಾಲೇಽನ್ವಹಂ ನಾಮ್ನಾಮಿದಂ ಶತಮ್ ।
ವೇಣೀಮಾಧವಯೋರ್ಭಕ್ತ್ಯಾ ಚೇತರೇಷಾಂ ತು ಕಾ ಕಥಾ ॥ ೪೪ ॥

ಏವಂ ವಃ ಕಥಿತಃ ಸಾಂಗಃ ಪೂಜಾವಿಧಿರನುತ್ತಮಃ ।
ನೈಮಿತ್ತಿಕಃ ಪ್ರಯಾಗೇಽಸ್ಮಿನ್ಸರ್ವಕಾಮಫಲಪ್ರದಃ ॥ ೪೫ ॥
ಇಯಂ ನೈಮಿತ್ತಿಕೀ ಪೂಜಾ ಯಾ ಪ್ರೋಕ್ತಾ ಸಾ ಮಹರ್ಷಯಃ ।
ನಿತ್ಯಪೂಜಾಂ ವಿಧಾಯೈವ ಕರ್ತವ್ಯಾ ಕರ್ಮಕೋವಿದೈಃ ॥ ೪೬ ॥
ನಿತ್ಯಕೃತ್ಯಮನುಷ್ಠಾಯ ಯಃ ಕರೋತಿ ನಿಮಿತ್ತಜಮ್ ।
ಸ ಏವ ತತ್ಫಲಂ ಪೂರ್ಣಂ ಲಭತೇ ನಾನ್ಯಥಾ ನರಃ ॥ ೪೭ ॥
ಪಂಚಾನಾಮಥ ಚೈಕಸ್ಯ ಯಥಾಲಾಭಂ ಚ ಯೋ ದ್ವಿಜಃ ।
ಕುರುತೇ ಪೂಜನಂ ಭಕ್ತ್ಯಾ ತಸ್ಯ ಸ್ಯಾತ್ಸಫಲಂ ದಿನಮ್ ॥ ೪೮ ॥
ಪಂಚಾಯತನಪೂಜಾಂ ಯಃ ಕರೋತ್ಯನ್ವಹಮಾದರಾತ್ ।
ಮಾಧವಸ್ತಸ್ಯ ಸಂತುಷ್ಟೋ ಭವತೀತಿ ವಿನಿಶ್ಚಿತಮ್ ॥ ೪೯ ॥

॥ ಇತಿ ಚತುಶ್ಚತ್ವಾರಿಂಶೋಽಧ್ಯಾಯಃ ॥

## ॥ ನಲವತ್ತನಾಲ್ಕನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಈಗ ನನ್ನಿಂದ ತ್ರಿವೇಣಿಯ ಮತ್ತು ಶ್ರೀವೇಣೀಮಾಧವನ ನೂರೆಂಟುನಾಮಗಳ ಪೂಜೆಯು ಹೇಳಲ್ಪಡುತ್ತದೆ, ಇದರಿಂದ ಇವರಿಬ್ಬರೂ ಪ್ರೀತರಾಗಲಿ. ॥ ೧ ॥ ತ್ರಿವೇಣಿಯನ್ನೂ ಶ್ರೀಮಾಧವನನ್ನೂ ಸುವಾಸನೆಯುಳ್ಳ, ಅರಳಿದ ಹೂವುಗಳು, ಬಿಲ್ವಪತ್ರೆ ಮತ್ತು ತುಳಸಿಗಳಿಂದ ಭಕ್ತಿಯಿಂದ ಪೂಜಿಸಬೇಕು. ॥ ೨ ॥ ವೇಣೀ ಮತ್ತು ಶ್ರೀಮಾಧವನ ಹೆಸರುಗಳು ಲೆಕ್ಕಹಾಕದಿರು-ವಷ್ಟು ಇವೆ; ಆದರೂ ಪೂಜೆಗೆ ಉಪಯೋಗವಾಗುವ ನೂರೆಂಟು ನಾಮಗಳನ್ನು ಮಾತ್ರ ಹೇಳುವೆನು. ॥ ೩ ॥

ಮಾಧವ, ಕೇಶವ, ಅನಂತ, ಗೋವಿಂದ ಮತ್ತು ಗರುಡಧ್ವಜ, (ಮಾಧವ–ಲಕ್ಷ್ಮೀದೇವಿಯ ಗಂಡ, ಕೇಶವ–ಬ್ರಹ್ಮರುದ್ರರನ್ನು ರಕ್ಷಿಸುವವನು, ಅನಂತ–ಮರಣವಿಲ್ಲದವನು, ಗೋವಿಂದ–ವೇದಗಳಿಂದ ಪ್ರತಿಪಾದ್ಯನು.)

ಮಾಧವೀ, ಶಿವದಾ, ಗಂಗಾ, ಶಿವಾ ಮತ್ತು ಬ್ರಹ್ಮಸ್ವರೂಪಿಣೀ (ಮಾಧವೀ–ಮಾಧವನ ಹೆಂಡತಿ, ಶಿವದಾ–ಮಂಗಳವನ್ನು ಕೊಡತಕ್ಕವಳು, ಗಂಗಾ–ಗಂಗೆಯ ಜೊತೆ ಇರುವುದರಿಂದ ಗಂಗಾಸಂಜ್ಞೆಯುಳ್ಳವಳು, ಶಿವಾ–ಮಂಗಳಳು, ಬ್ರಹ್ಮಸ್ವರೂಪಿಣೀ–ಪರಬ್ರಹ್ಮನ ಸ್ವರೂಪಳು, (ಸನ್ನಿಧಾನಕ್ಕೆ ಪಾತ್ರಳು). ॥ ೪ ॥

ವಿಷ್ಣು, ನಾರಾಯಣ, ಕೃಷ್ಣ, ಶ್ರೀಧರ, ಮಧುಸೂದನ (ವಿಷ್ಣು–ಎಲ್ಲಕಡೆ ವ್ಯಾಪಿಸಿರುವವನು, ನಾರಾಯಣ–ನೀರಿಗೆ ಆಶ್ರಯನಾದವನು, ಎಲ್ಲರಿಗೂ ನೀರನ್ನು ಹೊಂದಿಸಿಕೊಡುವವನು, ಕೃಷ್ಣ–ಪ್ರಳಯಕಾಲದಲ್ಲಿ ಇಡೀ ಬ್ರಹ್ಮಾಂಡವನ್ನೇ ಆಕರ್ಷಣೆ ಮಾಡಿ ತನ್ನ ಹೊಟ್ಟೆಯಲ್ಲಿಟ್ಟು-ಕೊಳ್ಳುವವನು, ಲಕ್ಷ್ಮೀಪತಿಯು, ಮಧುಸೂದನ–ಮಧುನಾಮಕ ದೈತ್ಯನನ್ನು ಸಂಹರಿಸಿದವನು.)

ವೈಷ್ಣವೀ, ಶಾಂಕರೀ, ಬ್ರಾಹ್ಮೀ, ಸರ್ವದೇವಸ್ವರೂಪಿಣೀ (ವೈಷ್ಣವೀ–ಶ್ರೀವಿಷ್ಣುವಿನ ಪತ್ನಿ,

ಶಾಂಕರೀ–ತಮೋಭಿಮಾನಿಯಾದ ದುರ್ಗಾರೂಪದಿಂದ ಅಹಂಕಾರತತ್ವಕ್ಕೆ ಅಭಿಮಾನಿಯಾದ ಶ್ರೀರುದ್ರದೇವರಲ್ಲಿದ್ದು ವ್ಯಾಪಾರಮಾಡಿಸತಕ್ಕವಳು, ಬ್ರಾಹ್ಮೀ–ಸತ್ವಗುಣಾಭಿಮಾನಿನಿಯಾದ ಶ್ರೀರೂಪದಿಂದ ಸತ್ವಗುಣಪ್ರಧಾನವಾದ ಮಹತ್ತತ್ವದ ಅಭಿಮಾನಿದೇವತೆಯಾದ ಬ್ರಹ್ಮದೇವರಲ್ಲಿದ್ದು ಸೃಷ್ಟ್ಯಾದಿ ಕಾರ್ಯ ಮಾಡಿಸತಕ್ಕವಳು, ಸರ್ವದೇವಸ್ವರೂಪಿಣೀ–ಎಲ್ಲ ದೇವತೆಗಳಲ್ಲಿಯೂ ಪ್ರಧಾನವಾಗಿರುವ ಸತ್ವಗುಣಗಳಲ್ಲಿದ್ದು ಅವರವರ ವ್ಯಾಪಾರಕ್ಕೆ ಕಾರಣಳಾದವಳು.) ॥ ೫ ॥

ತ್ರಿವಿಕ್ರಮ, ವಾಮನ, ಹೃಷೀಕೇಶ, ಅಧೋಕ್ಷಜ (ತ್ರಿವಿಕ್ರಮ–ತ್ರಿವಿಕ್ರಮಾವತಾರದಲ್ಲಿ ಮೂರು ಹೆಜ್ಜೆಗಳ ನೆಪದಿಂದ ಮೂರು ವಿಕ್ರಮವನ್ನು ತೋರಿದವನು, ವಾಮನ–ಸುಂದರನಾದವನು, ಹೃಷೀಕೇಶ–ಶ್ರೀಲಕ್ಷ್ಮೀದೇವಿಯರಿಂದ ಆರಂಭವಾಗಿ ಎಲ್ಲ ಜೀವರಾಶಿಗಳ ಇಂದ್ರಿಯಗಳಿಗೆ ನಿಯಾಮಕನಾದವನು, ಅಧೋಕ್ಷಜ–ಶ್ರೀಹರಿಯು ಅನಿರುದ್ಧ (ವಿಶ್ವ), ಪ್ರದ್ಯುಮ್ನ(ತೈಜಸ), ಸಂಕರ್ಷಣ(ಪ್ರಾಜ್ಞ) ಮತ್ತು ವಾಸುದೇವ (ತುರ್ಯ)ನಾಮರೂಪಗಳಿಂದ ಕ್ರಮವಾಗಿ ಸ್ಥೂಲ, ಅನಿರುದ್ಧ, ಲಿಂಗ ಮತ್ತು ಸ್ವರೂಪದೇಹಗಳಲ್ಲಿದ್ದು ವ್ಯಾಪಾರಗಳನ್ನು ನಡೆಸುತ್ತಾ ಸ್ಥೂಲ-ಸೂಕ್ಷ್ಮಶರೀರಗಳಲ್ಲಿ ನಡೆಯುವ ವ್ಯಾಪಾರಗಳು ಮಾತ್ರ ಜೀವನ ಗಮನಕ್ಕೆ ಯಥೋಚಿತವಾಗಿ ಬರುವಂತೆ ಮಾಡುತ್ತಾ ಲಿಂಗಶರೀರದಲ್ಲಿ ತಾನಿರುವುದೇ ಜೀವನಿಗೆ ತಿಳಿಯದಂತೆ ಮಾಡುವುದರಿಂದ ಅಧೋಕ್ಷಜನು. ಇದಕ್ಕೆ ಕಾರಣ ಲಕ್ಷ್ಮೀದೇವಿಯ ಚಿನ್ಮಾಯೆ ಮತ್ತು ಭಗವದಿಚ್ಛಾರೂಪವಾದ ಮಾಯಾಶಕ್ತಿಗಳು. ನಾಟ್ಯವಿದ್ಯೆಯ ಪರಿಚಯವಿಲ್ಲದಿರುವವರಿಗೆ ನಟವರನ ಅಭಿನಯವಿಶೇಷಗಳು ಹೇಗೆ ಅರ್ಥವಾಗುವುದಿಲ್ಲವೋ ಹಾಗೆ ಎಂಬುದು ಸಾದೃಶ್ಯ.)

ಸರ್ವವ್ಯಾಧಿಭಿಷಕ್, ಶ್ರೇಷ್ಠಾ, ಸಂಸಾರವಿಷನಾಶಿನೀ (ಸರ್ವವ್ಯಾಧಿಭಿಷಕ್–ಎಲ್ಲಾ ಖಾಯಿಲೆಗಳನ್ನು ವೈದ್ಯೆಯಂತೆ ವಾಸಿಮಾಡತಕ್ಕವಳು, ಶ್ರೇಷ್ಠಾ–ಎಲ್ಲ ತೀರ್ಥದೇವತೆಗಳಿಗಿಂತಲೂ ಉತ್ತಮಳು, ಸಂಸಾರವಿಷನಾಶಿನೀ–ಸಂಸಾರವೆಂಬ ವಿಷವನ್ನು ನಾಶಮಾಡಿ ಮುಕ್ತಿಯ ಪ್ರಾಪ್ತಿಗೆ ದಾರಿ ಮಾಡಿಕೊಡುವವಳು.) ॥ ೬ ॥

ಪ್ರದ್ಯುಮ್ನ, ವಾಸುದೇವ, ಅನಿರುದ್ಧ, ಪುರುಷೋತ್ತಮ (ಪ್ರದ್ಯುಮ್ನ-ಪ್ರಕೃಷ್ಟಕಾಂತಿಯುಳ್ಳವನು. ವಾಸುದೇವ-ವಸುದೇವನ ಮಗ, ಇವನಿರುವುದರಿಂದ ಮೂರು ಲೋಕಕ್ಕೆ ವಾಸತ್ವ ಬಂತು ಮತ್ತು ಎಲ್ಲ ಭೂತಗಳಲ್ಲಿಯೂ ಅಂತರ್ಯಾಮಿಯಾಗಿ ವಾಸ ಮಾಡುವವನು, ಅನಿರುದ್ಧ–ತಡೆಯಿಲ್ಲದವನು, ಪುರುಷೋತ್ತಮ–ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಪುರುಷನಾದ್ದರಿಂದ)

ಸೂಕ್ಷ್ಮಮೂರ್ತಿಯು, ಸುಧಾಮೂರ್ತಿಯು, ಭುಕ್ತಿಮುಕ್ತಿಪ್ರದಾಯಿನಿಯು. (ಸೂಕ್ಷ್ಮ-ಮೂರ್ತಿಯು–ಶ್ರೀಲಕ್ಷ್ಮೀದೇವಿಯು ಸೂಕ್ಷ್ಮವಾಗಿರುವ ಚಿತ್ಪ್ರಕೃತಿಯಾಗಿ ಎಲ್ಲ ಜೀವರಲ್ಲಿ, ತತ್ವಾ-ಭಿಮಾನಿಗಳಲ್ಲಿದ್ದು ವ್ಯಾಪಾರ ಮಾಡಿಸುವಳಾದ್ದರಿಂದ, ಸುಧಾಮೂರ್ತಿ–ಸುಧಾರಸಕ್ಕೆ ಮುಖ್ಯಾಭಿ-ಮಾನಿಯು. ಭುಕ್ತಿಮುಕ್ತಿಪ್ರದಾಯಿನೀ–ಎಲ್ಲ ಜೀವಕೋಟಿಗೆ ಆಹಾರಾದಿಗಳನ್ನು, ಮುಮುಕ್ಷುಗಳಿಗೆ ಮುಕ್ತಿಯನ್ನು ಕರುಣಿಸುವವಳು.) ॥ ೭ ॥

ದಾಮೋದರ, ಪದ್ಮನಾಭ, ವಿಶ್ವನಾಥ, ಜನಾರ್ದನ (ದಾಮೋದರ-ಕೃಷ್ಣಾವತಾರದಲ್ಲಿ ಯಶೋದೆಯಿಂದ ಹಗ್ಗದಿಂದ ಹೊಟ್ಟೆಯ ಮೇಲೆ ಕಟ್ಟಿಸಿಕೊಂಡವನು, ಪದ್ಮನಾಭ-ಮಹಾಪ್ರಳಯದ ನಂತರ ಮೊದಲು ತನ್ನ ಹೊಕ್ಕುಳಿಂದ ಸಹಸ್ರದಳ ಪದ್ಮವನ್ನು ಸೃಷ್ಟಿಸಿದವನು,

ವಿಶ್ವನಾಥ-ಜಗತ್ತಿಗೇ ಸ್ವಾಮಿ, ಜನಾರ್ದನ-ಮುಮುಕ್ಷುಗಳ ಹುಟ್ಟುಸಾವನ್ನು ಪರಿಹಾರ ಮಾಡಿ ಮೋಕ್ಷಕೊಡುವವನು.)

ತಾಪತ್ರಿತಯಸಂಹರ್ತ್ರೀ, ಭದ್ರಾ, ಶಾಂತಿಕರೀ, ಜಯಾ (ತಾಪತ್ರಿತಯಸಂಹರ್ತ್ರೀ-ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕವೆಂಬ ಮೂರು ಬಗೆ ತಾಪಗಳ ಪರಿಹಾರಕಳು, ಭದ್ರಾ-ಮಂಗಳಸ್ವರೂಪಳು, ಶಾಂತಿಕರೀ-ಸಜ್ಜನರ ಕ್ಲೇಶವನ್ನು ಪರಿಹರಿಸಿ ಸುಖವನ್ನು ಉಂಟುಮಾಡುವವಳು, ಜಯಾ-ತಮೋಜೀವಿಗಳನ್ನು ದುರ್ಗಾರೂಪದಿಂದ ನಿಗ್ರಹಿಸುವಳು.) ॥ ೮ ॥

ನರಸಿಂಹ, ಅಚ್ಯುತ, ನಂದ, ಹರಿ, ಚಕ್ರೀ, ಶಾರ್ಙ್ಗಭೃತ್ (ನರಸಿಂಹ-ನರ ಮತ್ತು ಸಿಂಹದ ರೂಪವುಳ್ಳ ರೂಪವನ್ನು ತಾಳಿದವನು, ಅಚ್ಯುತ-ನಾಶವಿಲ್ಲದವನು, ನಂದ-ಆನಂದಸ್ವರೂಪನು ಅಥವಾ ಸಜ್ಜನರಿಗೆ ಸಂತಸವನ್ನುಂಟುಮಾಡುವವನು, ಹರಿ-ದುಷ್ಟರನ್ನು ಸಂಹರಿಸುವವನು ಅಥವಾ ಭವಬಂಧವನ್ನು ಪರಿಹರಿಸುವವನು, ಚಕ್ರೀ-ಸುದರ್ಶನಚಕ್ರಧಾರಿ, ಶಾರ್ಙ್ಗಭೃತ್-ಶಾರ್ಙ್ಗವೆಂಬ ಹೆಸರಿನ ಧನುಸ್ಸನ್ನು ಧರಿಸಿರುವವನು.)

ಸತ್ವಮೂರ್ತಿ, ಜಗನ್ಮಾತಾ, ಶಾಂತಿ, ಸಂತತಿಕಾರಿಣೀ (ಸತ್ವಮೂರ್ತಿ–ದುರ್ಗೆಯಾಗಿ ಮಹಾಪೌರುಷತ್ವದಿಂದ ರಾಜಿಸಿದ್ದರಿಂದ ಸತ್ವಮೂರ್ತಿ, ಜಗನ್ಮಾತಾ–ಶ್ರೀಲಕ್ಷ್ಮೀನಾರಾಯಣ-ನೊಂದಿಗೆ ಮಾಯಾ, ಶಾಂತಿ, ಜಯಾ, ಕೃತಿ ಎಂಬ ನಾಲ್ಕು ರೂಪಗಳಿಂದ ಜಗತ್ಸೃಷ್ಟಿಗೆ ಸಹಕರಿಸಿ ಸಹಭಾಗಿಯಾಗಿರುವಳು, ಶಾಂತಿ-ಅನಾದ್ಯನಂತಸುಖ ಸ್ವರೂಪಳು, ಸಂತತಿಕಾರಿಣೀ–ಸಂತಾನಲಕ್ಷ್ಮೀರೂಪದಿಂದ ತನ್ನ ಭಕ್ತರಿಗೆ ಸಂತಾನಪ್ರದಳು.) ॥ ೯ ॥

ವಿಷ್ಟರಶ್ರವಾಃ, ವೈಕುಂಠ, ಯಜ್ಞಪುರುಷ, ಯೋಗೀಶ (ವಿಷ್ಟರಶ್ರವಾಃ-ಸ್ಥಿರವಾದ ಕೀರ್ತಿಯುಳ್ಳವನು, ವೈಕುಂಠ–ವೈಕುಂಠಕ್ಕೆ ಅಧಿಪತಿ, ಯಜ್ಞಪುರುಷ-ಯಜ್ಞಗಳಿಗೆ ಮುಖ್ಯ ದೇವತೆಯಾಗಿ ವಿರಾಜಮಾನನು, ಯೋಗೀಶ-ಯೋಗಿಗಳು, ಸನ್ಯಾಸಿಗಳು ತಮ್ಮ ಹೃತ್ಕಮಲ-ಮಧ್ಯದಲ್ಲಿ ಧ್ಯಾನ ಮಾಡುವದರಿಂದ)

ವೈಕುಂಠಚರಣೋದ್ಭೂತಾ, ಯೋಗಿನೀ, ಯೋಗದಾ, ಸದಾ (ವೈಕುಂಠಚರಣೋ-ದ್ಭೂತಾ-ವೈಕುಂಠನೆಂಬ ಹೆಸರುಳ್ಳ ಶ್ರೀಮಾಧವನ ಪಾದವನ್ನು ತ್ರಿವಿಕ್ರಮಾವತಾರದಲ್ಲಿ ಬ್ರಹ್ಮದೇವರು ತೊಳೆದಾಗ ಹುಟ್ಟಿದ ಗಂಗೆಯನ್ನು ತನ್ನ ಸಂಗಮದಲ್ಲಿ ಹೊಂದಿರುವಳು, ಯೋಗಿನೀ-ಸದಾಕಾಲವೂ ಪರಮಾತ್ಮನ ಗುಣಗಳನ್ನೇ ಹೃದಯದಲ್ಲಿ ಧ್ಯಾನಮಾಡುತ್ತಿರುವಳು, ಯೋಗದಾ-ವೇದಾಭಿಮಾನಿಯಾಗಿ ಯೋಗ, ಸಾಂಖ್ಯಾದಿ ತತ್ವಗಳನ್ನು ತಿಳಿಸುಕೊಡುವವಳು.) ॥ ೧೦ ॥

ಕಾಲಾತ್ಮಾ, ಪುಂಡರೀಕಾಕ್ಷ, ವಿಶ್ವರೂಪೀ, ಪ್ರತಾಪವಾನ್ (ಕಾಲಾತ್ಮಾ-ಪ್ರಳಯವೂ ಸೇರಿ ಎಲ್ಲ ಕಾಲದಲ್ಲಿಯೂ ಇದ್ದು ನಿಯಮನ ಮಾಡುವನು ಅಥವಾ ಪ್ರಳಯಕಾಲದಲ್ಲಿ ಎಲ್ಲವನ್ನು ನಾಶಮಾಡುವನು, ಪುಂಡರೀಕಾಕ್ಷ-ಕಮಲದಳದಂತೆ ವಿಶಾಲವಾದ ಕಣ್ಣುಳ್ಳವನು, ವಿಶ್ವರೂಪೀ-ವಿಶ್ವದ ಎಲ್ಲ ಕಡೆಯಲ್ಲೂ ವ್ಯಾಪಿಸಿರುವವನು, ಪ್ರತಾಪವಾನ್-ಯಾರೂ ಮೀರಿಸಲಾಗದ ಪರಾಕ್ರಮವುಳ್ಳವನು.)

ಕಾಲಶಕ್ತಿ, ಮಹಾಶಕ್ತಿ, ಸೃಷ್ಟಿಸ್ಥಿತ್ಯಂತಕಾರಿಣೀ (ಕಾಲಶಕ್ತಿ-ಎಲ್ಲಕಾಲಗಳ ವ್ಯಾಪಾರವೂ ಇವಳ ಮುಖ್ಯದೇವತೆಯಾದ ಮಾಧವನಿಂದ ನಡೆಯುವುದರಿಂದ ಕಾಲಶಕ್ತಿ, ಮಹಾಶಕ್ತಿ-ಯಾರೂ

ಮೀರಿಸಲಾಗದ ಶಕ್ತಿಯುಳ್ಳ ಮಾಧವನನ್ನೊಳಗೊಂಡಿರುವಳು, ಸೃಷ್ಟಿಸ್ಥಿತ್ಯಂತಕಾರಿಣೀ-ಜಗತ್ತಿನ ಸೃಷ್ಟಿ, ಇರುವಿಕೆ ಮತ್ತು ನಾಶವನ್ನು ಉಂಟುಮಾಡುವ ಮಾಧವನು ಇವಳಿಗೆ ಮುಖ್ಯ ದೇವತೆಯಾದ್ದರಿಂದ ) ॥ ೧೧ ॥

ಅಂತರ್ಯಾಮೀ, ಸಮಸ್ತೇಶ, ಸತ್ಯಸಂಧ, ಸನಾತನ (ಅಂತರ್ಯಾಮೀ-ಲಕ್ಷ್ಮೀಬ್ರಹ್ಮಾದಿ ಸಮಸ್ತದೇವತೆಗಳಲ್ಲಿಯೂ ಇರುವನು, ಸಮಸ್ತೇಶ-ಜೀವಜಡಾತ್ಮಕ ಸಮಸ್ತಪ್ರಪಂಚಕ್ಕೆ ಒಡೆಯ, ಸತ್ಯಸಂಧ-ಎಲ್ಲ ಕಾಲದಲ್ಲಿಯೂ ಅಬಾಧಿತವಾದ ಅಸ್ತಿತ್ವವುಳ್ಳವನು, ಸನಾತನ-ಪ್ರಳಯ ಕಾಲದಲ್ಲಿಯೂ ಇರುವವನು, ವೇದಪ್ರತಿಪಾದ್ಯ)

ಭದ್ರಾದಿಭೋಗದಾ, ಭೋಗವತೀ, ಮಂದಾಕಿನೀ, ನದೀ (ಭದ್ರಾದಿಭೋಗದಾ -ಮಂಗಳಕ್ಕೆ ಕಾರಣಳು ಹಾಗೂ ಭೋಗಪ್ರದಳು, ಭೋಗವತೀ-ಸಮಸ್ತ ಭೋಗಗಳನ್ನು ಹೊಂದಿದವಳು, ಮಂದಾಕಿನೀ-ಗಂಗೆಯನ್ನು ಸಂಗಮದಲ್ಲಿ ಹೊಂದಿದವಳು, ನದೀ-ಎಂಟು ಸಾವಿರ ಧನುಷ್ಪ್ರಮಾಣದಷ್ಟು ದೂರ ಹರಿಯುವುದರಿಂದ ॥ ೧೨ ॥

ಈಶ್ವರ, ಪರಮಾತ್ಮಾ, ಮುರಾರಿ, ದೈತ್ಯನಾಶಕ (ಈಶ್ವರ-ಸಕಲೈಶ್ವರ್ಯಸಂಪನ್ನನು, ಪರಮಾತ್ಮಾ-ಲಕ್ಷ್ಮೀದೇವಿಗಿಂತಲೂ ಉತ್ತಮನು, ಮುರಾರಿ-ಮುರನಾಮಕದೈತ್ಯನನ್ನು ಸಂಹರಿಸಿ-ದವನು, ದೈತ್ಯನಾಶಕ-ದೈತ್ಯರನ್ನು ನಾಶಮಾಡುವವನು.)

ತ್ರಿಮಾರ್ಗಗಾ, ತ್ರಿವರ್ಣಾ, ತ್ರಿಹುತಾಶನಸಂಸ್ಥಿತಾ (ತ್ರಿಮಾರ್ಗಗಾ-ಮೂರು ಲೋಕ-ಗಳಲ್ಲಿಯೂ ಹರಿಯುತ್ತಿರುವ ಗಂಗೆಯನ್ನು ಒಳಗೊಂಡಿರುವಳು, ತ್ರಿವರ್ಣಾ-ಶ್ವೇತ, ಕೃಷ್ಣ, ಕೆಂಪು ಬಣ್ಣಗಳನ್ನು ಹೊಂದಿರುವಳು, ತ್ರಿಹುತಾಶನಸಂಸ್ಥಿತಾ-ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ ಎಂಬ ತ್ರಿವಿಧ ಅಗ್ನಿಗಳ ಮೂಲಕ ಹವಿಸ್ಸನ್ನು ಸ್ವೀಕರಿಸುವ ಅಗ್ನಿಯ ಅಂತರ್ಯಾಮಿಯಾಗಿ ಇರುವುದರಿಂದ) ॥ ೧೩ ॥

ಮುಕುಂದ, ಪೀತವಾಸನ, ವಿಷ್ವಕ್ಸೇನ, ಚತುರ್ಭುಜ (ಮುಕುಂದ-ಮೋಕ್ಷವನ್ನು ಕೊಡುವವನು, ಪೀತವಾಸನ-ಹಳದೀವಸ್ತ್ರಧಾರಿಯು, ವಿಷ್ವಕ್ಸೇನ-ಜಗನ್ನಿಯಾಮಕ, ಚತುರ್ಭುಜ -ನಾಲ್ಕುಭುಜಗಳುಳ್ಳವನು.)

ಸ್ವರ್ಗದಾ, ಜಗತೀಭೂಷಾ, ಶುಕ್ಲಸಂಸ್ಥಾ, ಕ್ಷಮಾವೃತಾ (ಸ್ವರ್ಗದಾ-ಸ್ವರ್ಗವನ್ನು ಕೊಡು-ವವಳು, ಜಗತೀಭೂಷಾ-ಜಗತ್ತಿಗೆ ಭೂಷಣಪ್ರಾಯಳು, ಶುಕ್ಲಸಂಸ್ಥಾ-ಸಾತ್ವಿಕಗುಣಕ್ಕೆ ಅಭಿ-ಮಾನಿಯಾದ ಗಂಗೆಯನ್ನು ಒಳಗೊಂಡಿರುವವಳು, ಕ್ಷಮಾವೃತಾ-ಕ್ಷಮಿಸತಕ್ಕ ಗುಣಗಳುಳ್ಳವಳು.) ॥ ೧೪ ॥

ಶ್ರೀಪತಿ, ವನಮಾಲೀ, ಬಲಿಧ್ವಂಸೀ, ವಟೇಶಯ (ಶ್ರೀಪತಿ-ಲಕ್ಷ್ಮೀದೇವಿಯ ಗಂಡನು, ವನಮಾಲೀ-ವನಮಾಲೆಯನ್ನು ಹಾಕಿಕೊಂಡಿರುವವನು, ಬಲಿಧ್ವಂಸೀ-ಬಲಿನಾಮಕದೈತ್ಯನ ಅಟ್ಟಹಾಸವನ್ನು ನಿಗ್ರಹಿಸಿದವನು, ವಟೇಶಯ-ಅಕ್ಷಯವಟವೃಕ್ಷದ ಎಲೆಯಲ್ಲಿ ಮಲಗುವವನು.)

ತೇಜೋವತೀ, ವಿಶ್ವಮಿತ್ರಾ, ಪಾಶಜಾಲನಿಕೃಂತನೀ (ತೇಜೋವತೀ-ತೇಜಸ್ಸಿನಿಂದ ಮತ್ತು ಪರಾಕ್ರಮದಿಂದ ಕೂಡಿದವಳು, ವಿಶ್ವಮಿತ್ರಾ-ಜಗತ್ತಿನ ಸರ್ವ ಜೀವಿಗಳಿಗೂ ಬೇಕಾದವಳು., ಪಾಶಜಾಲನಿಕೃಂತನೀ-ಸಂಸಾರವೆಂಬ ಬಂಧನದಿಂದ ಬದ್ಧರಾಗಿರುವ ಭಕ್ತರಿಗೆ ಪರಂಪರಯಾ ಮುಕ್ತಿಯನ್ನು ಕರುಣಿಸುವವಳು) ॥ ೧೫ ॥

ಸರ್ವಾರ್ಥಸಾಧಕ, ಪೂಜ್ಯ, ಭಕ್ತಸಂಕಟನಾಶನ (ಸರ್ವಾರ್ಥಸಾಧಕ-ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ಅರ್ಥಗಳನ್ನೂ ತನ್ನ ಭಕ್ತರಿಗೆ ಸಾಧಿಸಿಕೊಡತಕ್ಕವನು, ಪೂಜ್ಯ-ಲಕ್ಷ್ಮೀ ಬ್ರಹ್ಮರುದ್ರಾದಿಗಳಿಂದ ಪೂಜ್ಯನು, ಭಕ್ತಸಂಕಟನಾಶನ-ಭಕ್ತರ ಎಲ್ಲ ಸಂಕಟವನ್ನು ಪರಿಹರಿಸುವವನು

ಸುವೃಷಾ, ಸುಚಲಾ, ದ್ವಾರಾ, ಪಾರಾವಾರವಿಹಾರಿಣೀ. (ಸುವೃಷಾ–ಸತ್ಕರ್ಮದಲ್ಲಿ ಆಸಕ್ತಳಾಗಿರುವವಳು, ಸುಚಲದ್ವಾರಾ–ಉದ್ದಗಲಕ್ಕೂ ಪ್ರವಹಿಸುತ್ತಿರುವವಳು ತನ್ನನ್ನು ಸೇವಿಸುವವರ ಸದ್ಗತಿಗಳಿಗೆ ಬಾಗಿಲಿನಂತಿರುವವಳು, ಪಾರಾವಾರವಿಹಾರಿಣೀ–ಸಮುದ್ರವನ್ನು ಸೇರಿ ಅಲ್ಲಿ ವಿಹಾರ ಮಾಡತಕ್ಕವಳು.) ॥ ೧೬ ॥

ದೇವಕೀನಂದನ, ವಿಶ್ವಂಭರ, ಶ್ರೀವತ್ಸಲಾಂಛನ (ದೇವಕೀನಂದನ–ಕೃಷ್ಣಾವತಾರದಲ್ಲಿ ದೇವಕಿಯ ಮಗ, ವಿಶ್ವಂಭರ–ಜಗತ್ತನ್ನು ಪ್ರಳಯದಲ್ಲಿ ತನ್ನ ಹೊಟ್ಟೆಯಲ್ಲಿ ಅಡಗಿಸಿ ಇಟ್ಟು-ಕೊಂಡವನು, ಎಲ್ಲವನ್ನೂ ಧರಿಸಿರುವವನು, ಶ್ರೀವತ್ಸಲಾಂಛನ–ಲಕ್ಷ್ಮೀದೇವಿಯರ ಚಿಹ್ನೆಯನ್ನು ತನ್ನ ಎದೆಯಲ್ಲಿ ಹೊಂದಿ- ರುವವನು.)

ದೇವಪೂಜ್ಯಾ, ಜಗದ್ಧಾತ್ರೀ, ವರಿಷ್ಠಾ, ವರದಾ, ಅನಘಾ (ದೇವಪೂಜ್ಯಾ– ಸಕಲ-ದೇವತೆಗಳಿಂದ ಪೂಜೆಮಾಡಿಸಿಕೊಳ್ಳುವವಳು, ಜಗದ್ಧಾತ್ರೀ–ಜಗತ್ತನ್ನು ಧಾರಣೆ ಮಾಡಿರುವವಳು, ವರಿಷ್ಠಾ–ಸರ್ವಶ್ರೇಷ್ಠಳು, ವರದಾ–ಭಕ್ತರಿಗೆ ವರವನ್ನು ಕರುಣಿಸತಕ್ಕವಳು, ಅನಘಾ–ಎಲ್ಲರ ಪಾಪ-ಗಳನ್ನು ತೊಳೆದರೂ ತಾನು ಮಾತ್ರ ಪಾಪರಹಿತಳು. ॥ ೧೭ ॥

ಮಹಾಮತ್ಸ್ಯ, ಮಹಾಕೂರ್ಮ, ಶೇಷಶಾಯೀ, ಗದಾಧರ (ಮಹಾಮತ್ಸ್ಯ–ಮತ್ಸ್ಯಾವತಾರದಲ್ಲಿ ಅತಿದೊಡ್ಡ ಮೀನಿನ ರೂಪತಾಳಿದವನು, ಮಹಾಕೂರ್ಮ–ಮಂದರಪರ್ವತವನ್ನು ಬೆನ್ನ ಮೇಲೆ ಇಟ್ಟುಕೊಳ್ಳಲು ಮಹಾಆಮೆಯಾಗಿ ಈ ಹೆಸರು ಪಡೆದನು, ಶೇಷಶಾಯೀ–ಕ್ಷೀರಸಾಗರ ಅನಂತಾಸನಗಳಾದ ತನ್ನ ಲೋಕದಲ್ಲಿ ಶ್ರೀಆದಿಶೇಷನ ಮೇಲೆ ಮಲಗಿರುವವನು, ಗದಾಧರ-ಗದೆಯನ್ನು ಧಾರಣೆ ಮಾಡಿರುವವನು.)

ಭಾಗೀರಥೀ, ಜಾಹ್ನವೀ, ಮಹಾಪಾತಕನಾಶಿನೀ (ಭಾಗೀರಥೀ–ಭಗೀರಥನಿಗೋಸ್ಕರ ಸ್ವರ್ಗದಿಂದ ಭೂಪಾತಾಳಗಳಿಗೆ ಇಳಿದು ಬಂದ ಗಂಗೆಯನ್ನು ತನ್ನ ಸಂಗಮದಲ್ಲಿ ಹೊಂದಿರುವವಳು, ಜಾಹ್ನವೀ-ತನ್ನ ಪ್ರವಾಹವೇಗದಿಂದ ಜಹ್ನು ಋಷಿಯ ಆಶ್ರಮವನ್ನು ಕೊಚ್ಚಿಸಲು ಕುಪಿತನಾದ ಜಹ್ನುವು ಗಂಗೆಯನ್ನು ಆಪೋಶನ ತೆಗೆದುಕೊಂಡನು. ಭಗೀರಥನ ಪ್ರಾರ್ಥನಾನುಸಾರ ತನ್ನ ಕಿವಿಯಿಂದ ಗಂಗೆಯನ್ನು ಮುಂದೆ ಹರಿಯಲು ಬಿಟ್ಟನು. ಅಂತಹ ಗಂಗೆಯು ಸಂಗಮದಲ್ಲಿರುವುದರಿಂದ, ಮಹಾಪಾತಕನಾಶಿನೀ-ತನ್ನ ಭಕ್ತರ ಮಹಾಪಾತಕಗಳನ್ನು ನಾಶಮಾಡುವವಳು.) ॥ ೧೮ ॥

ಮಹಾಯಜ್ಞವರಾಹ, ರಾಘವ, ರಾವಣಾಂತಕೃತ್ (ಮಹಾಯಜ್ಞವರಾಹ-ಶ್ರೀಮಾಧವನು ಯಜ್ಞನಾನುಕನಾಗಿ ಅವತಾರಮಾಡಿ ಮಹಾಯಜ್ಞನೆಂದಾದನು. ಹಿರಣ್ಯಾಕ್ಷನನ್ನು ಸಂಹರಿಸಲು ಮಾಧವನು ತೆಗೆದುಕೊಂಡ ಅವತಾರಕ್ಕೆ ವರಾಹವೆಂದು ಹೆಸರು. ರಾವಣಾಂತಕೃತ್ - ರಾವಣನನ್ನು ಸಂಹರಿಸಿದ ಮಾಧವನ ಅವತಾರಕ್ಕೆ ರಾಮನೆಂದೂ, ರಾವಣಾಂತಕನೆಂದೂ ಹೆಸರು.)

ಬ್ರಹ್ಮಿಷ್ಠಾ, ಬ್ರಹ್ಮದೋಷಘ್ನೀ, ಸುಖದೋಗ್ಧ್ರೀ, ಮಂಗಲಾ (ಬ್ರಹ್ಮಿಷ್ಠಾ–ಪರಬ್ರಹ್ಮನನ್ನೇ

ಧ್ಯಾನಮಾಡತಕ್ಕ ಸರಸ್ವತೀದೇವಿಯನ್ನು ಹೊಂದಿರುವ ಸಂಗಮಕ್ಕೆ ಬ್ರಹ್ಮಿಷ್ಠಾ ಎಂದು ಹೆಸರು. ಬ್ರಹ್ಮದೋಷಘ್ನೀ-ತನ್ನನ್ನು ಸೇವಿಸಿದವರ ಬ್ರಹ್ಮಹತ್ಯಾದಿ ದೋಷಗಳನ್ನು ನಾಶಮಾಡುವವಳು, ಸುಖದೋಗ್ಧ್ರೀ-ತನ್ನಲ್ಲಿ ಸ್ನಾನಾದಿ ಮಾಡಿದವರಿಗೆ ಮುಕ್ತಿಯೂ ಸೇರಿ ಎಲ್ಲ ಸುಖಗಳನ್ನೂ ಕೊಡುವಳು, ಮಂಗಲಾ-ಶ್ರೀಲಕ್ಷ್ಮೀದೇವಿಯ ರೂಪವಾದ್ದರಿಂದ ಮಂಗಳದೇವತೆಯು, ಆದ್ದರಿಂದ ಮಂಗಲಾ ಎಂದು ಹೆಸರು.) ॥ ೧೯ ॥

ಕಾಶ್ಯಪ, ಭಾವಗಮ್ಯ, ಶರಣ್ಯ, ಭಕ್ತವತ್ಸಲ (ಕಾಶ್ಯಪ-ಕಶ್ಯಪ ಋಷಿಗಳಲ್ಲಿ ತಾನು ಅವತರಿಸಿ ವಾಮನನಾದ್ದರಿಂದ ಕಾಶ್ಯಪನು, ಭಾವಗಮ್ಯ-ಭಕ್ತಿಯುತ ಭಾವದಿಂದಲೇ ಶ್ರೀಮಾಧವನನ್ನು ಹೊಂದಲು ಸಾಧ್ಯವಾದ್ದರಿಂದ ಈ ಹೆಸರು, ಶರಣ್ಯ-ಮುಖ್ಯವೃತ್ತಿಯಿಂದ ಚತುರ್ವಿಧ ಪುರುಷಾರ್ಥಪ್ರಾಪ್ತಿಗೆ ಇವನೊಬ್ಬನನ್ನೇ ಆಶ್ರಯಿಸಬೇಕಾಗಿರುವುದರಿಂದ ಶರಣ್ಯನೆಂದಾದನು.

ಸಂಜೀವಿನೀ, ಭಾವಗಮ್ಯಾ, ಶರಣ್ಯಾ, ಭಕ್ತವತ್ಸಲಾ (ಸಂಜೀವಿನೀ-ತನ್ನಲ್ಲಿ ಸ್ನಾನಾದಿಗಳಿಂದ ಸೇವಿಸಿದವರನ್ನು ಪುನರುಜ್ಜೀವನಗೊಳಿಸಿ ಉತ್ಸಾಹವುಳ್ಳವರನ್ನಾಗಿ ಮಾಡುವುದರಿಂದ ಸಂಜೀವಿನಿಯಾದಳು. ಭಾವಗಮ್ಯಾ-ಇವಳೂ ಭಕ್ತಿಭಾವದಿಂದ ಹೊಂದಲ್ಪಡತಕ್ಕವಳು, ಶರಣ್ಯಾ-ದೇವತೆಗಳೂ, ನರರೂ ತಮ್ಮ ದುಃಖವಿಮೋಚನೆಗಾಗಿ ಇವಳನ್ನೇ ಆಶ್ರಯಿಸುತ್ತಾರೆ, ಆದ್ದರಿಂದ ಶರಣ್ಯಳು, ಭಕ್ತವತ್ಸಲಾ-ತನ್ನನ್ನು ಸೇವಿಸುವ ಭಕ್ತರಲ್ಲಿ ಕಾರುಣ್ಯವನ್ನು ತೋರುವುದರಿಂದ ಭಕ್ತವತ್ಸಲಳೆಂದು ಹೆಸರು. ॥ ೨೦ ॥

ತ್ರಿಗುಣಾದಿ, ತ್ರಯೀಮೂರ್ತಿ. ಹನುಮತ್ಪ್ರಭುಃ, ಅವ್ಯಯ (ತ್ರಿಗುಣಾದಿ-ತ್ರಿಗುಣಾತ್ಮಕಳಾದ ಶ್ರೀಲಕ್ಷ್ಮೀದೇವಿಯ ಸೃಷ್ಟ್ಯಾದಿ ವ್ಯಾಪಾರಗಳಿಗೆ ಪ್ರೇರಕನೂ ನಿಯಾಮಕನೂ ಆದ್ದರಿಂದ ತ್ರಿಗುಣಾದಿ, ತ್ರಯೀಮೂರ್ತಿ-ಆಮೂಲಾಗ್ರವಾಗಿ ವೇದಗಳಿಂದ ಪ್ರತಿಪಾದ್ಯ-ನಾದ್ದರಿಂದ ವೇದಮೂರ್ತಿಯೆಂದೆನಿಸಿದನು, ಹನುಮತ್ಪ್ರಭು-ಹನುಮಂತದೇವರಿಗೆ ಪ್ರಭುವು, ಅವ್ಯಯ-ಸ್ವರೂಪ, ಪ್ರವೃತ್ತಿ ಮತ್ತು ಪ್ರಮಿತಿಗಳಲ್ಲಿ ಹ್ರಾಸವಿಲ್ಲದೆ ಇರುವುದರಿಂದ)

ನಿರ್ಲೇಪಾ, ದುಃಖಹಂತ್ರೀ, ಪ್ರಣತಾರ್ತಿಪ್ರಭಂಜನೀ (ನಿರ್ಲೇಪಾ-ಇವಳಲ್ಲಿ ಸ್ನಾನಾದಿಗಳನ್ನು ಮಾಡುವ ಜನರ ಪಾಪಗಳಿಂದ ಇವಳು ನಿರ್ಲೇಪಳಾದ್ದರಿಂದ ಈ ಹೆಸರು. ಭಕ್ತರ ದುಃಖಾದಿಗಳನ್ನು ಪರಿಹಾರ ಮಾಡುವುದರಿಂದ ದುಃಖಹಂತ್ರೀ ಮತ್ತು ಪ್ರಣತಾರ್ತಿಪ್ರಭಂಜನೀ ಎಂಬ ಹೆಸರುಗಳು. ॥ ೨೧ ॥

ಅನಾದಿನಿಧನ, ಸಾಕ್ಷೀ, ಲೋಕಾಧ್ಯಕ್ಷ, ಪಿತಾಮಹ (ಜಗತ್ತಿನ ಸೃಷ್ಟಿ, ಸ್ಥಿತಿ ಲಯಗಳಿಗೂ ಲಕ್ಷ್ಮೀಬ್ರಹ್ಮಾದಿಗಳಿಗೂ ಮೂಲಕಾರಣನಾಗಿರುವುದರಿಂದ ಅನಾದಿನಿಧನನೆಂದು ಹೆಸರಾಯಿತು. ಜಗತ್ತಿಗೇ ಸರ್ವನಿಯಾಮಕ, ಸರ್ವೋತ್ತಮನಾದ್ದರಿಂದ ಲೋಕಾಧ್ಯಕ್ಷನೆಂಬ ಹೆಸರು. ಜಗತ್ತಿನ ಒಳಗೂ ಹೊರಗೂ ಚೇತನಗಳ ಜೀವ, ಅಂತಃಕರಣ ಮತ್ತು ಬುದ್ಧಿ ಇಂದ್ರಿಯಗಳು ಇವುಗಳ ವ್ಯಾಪಾರಗಳನ್ನು ಮಾಡಿಸುತ್ತಾ ಎಲ್ಲವನ್ನು ತಿಳಿಯುವುದರಿಂದ ಸಾಕ್ಷೀ ಎಂದು ಹೆಸರು. ತನ್ನದೇ ಆದ ಜಗತ್ತಿನ ತಂದೆ ಎಂಬ ಹೆಸರನ್ನು ತಾನು ತನ್ನ ಏಕಾಂತ ಭಕ್ತನೂ ತನ್ನ ಪ್ರಿಯಸುತನೂ ಆದ ಬ್ರಹ್ಮದೇವರಿಗೆ ಕೊಟ್ಟಿದ್ದರೂ ತಾನೇ ಮುಖ್ಯವೃತ್ತಿಯಿಂದ ಶಬ್ದವಾಚ್ಯನಾದ್ದರಿಂದ ಪಿತಾಮಹ-ನೆಂದೆನಿಸಿದ್ದಾನೆ.)

ಅನಾದಿಮಧ್ಯನಿಧನಾ, ನೀರೂಪಾ, ಅನೇಕರೂಪಿಣೀ (ಸೃಷ್ಟಿ, ಸ್ಥಿತಿ ಲಯಗಳಿಲ್ಲದೆ ಶ್ರೀಮಹಾವಿಷ್ಣುವಿನೊಡನೆ ತ್ರೈಕಾಲಿಕವ್ಯಾಪ್ತಿಯನ್ನೂ ನಿತ್ಯತ್ವವನ್ನೂ ಹೊಂದಿರುವಳಾದ್ದರಿಂದ ಈ

ಹೆಸರು, ಇವಳು ಪ್ರವಾಹರೂಪದಲ್ಲಿ ಹರಿಯುತ್ತಿರುವುದರಿಂದ ಏಕರೂಪದ ಆಕಾರವಿಲ್ಲದವಳು ಅಥವಾ ಆಕಾಶಕ್ಕೆ ಅಭಿಮಾನಿನಿಯಾದ್ದರಿಂದ ರೂಪವಿಲ್ಲದವಳು. ಶ್ರೀ,ಭೂ, ದುರ್ಗಾ, ಸೀತಾ, ರುಕ್ಮಿಣೀ ಇತ್ಯಾದಿ ಅನೇಕರೂಪಗಳುಳ್ಳವಳು. ಆದ್ದರಿಂದ ಬಹುರೂಪಿಣೀ ಎಂದಾದಳು) ॥ ೨೨ ॥

ಜಗನ್ನಾಥ, ಜಗದ್ಬಂಧು, ಬ್ರಹ್ಮಣ್ಯ, ಸರ್ವಜಿತ್, ಪ್ರಭು (ಜಗತ್ತಿಗೆ ಮುಖ್ಯಸ್ವಾಮಿಯು, ಜಗತ್ತಿನ ಸರ್ವಜೀವಿಗಳ ಹಿತೈಷಿಯು, ಬ್ರಾಹ್ಮಣರಿಗೆ ಪ್ರಿಯನು, ಸಕಲ ದೈತ್ಯದಾನವ ರಾಕ್ಷಸಾದಿಗಳನ್ನು ಗೆದ್ದವನು ಮತ್ತು ಜಗತ್ತಿಗೆ ಯಜಮಾನನು)

ಜಗದ್ಧಾರಾ, ಜಗದ್ವಂದ್ಯಾ, ಕ್ರೀಡಾಕಲ್ಲೋಲಕಾರಿಣೀ (ಭೂದುರ್ಗಾರೂಪಗಳಿಂದಲೂ, ಚಿತ್ಪ್ರಕೃತಿ, ಜಡಪ್ರಕೃತಿಯ ರೂಪದಲ್ಲಿಯೂ ವಾಸುದೇವಾದಿ ಚತುರ್ಮೂರ್ತಿಗಳ ಪತ್ನಿಯರ ರೂಪದಲ್ಲಿ ಕಾರ್ಯಗಳನ್ನೆಸಗಿ, ಜಗದ್ಧಾರೆಯಾದಳು. ಇಂದ್ರ, ರುದ್ರ, ಬ್ರಹ್ಮನೇ ಮೊದಲಾದ ದೇವತೆಗಳಿಂದಲೂ ಸಮಗ್ರಋಷಿಯೋಗಿಗಳಿಂದಲೂ ಖಗನಾಗಗಳಿಂದಲೂ ನಮಸ್ಕೃತಳಾಗಿ ರುವವಳಾದ್ದರಿಂದ ಈ ಹೆಸರು. ತನ್ನ ಸಂಗಮದಲ್ಲಿ ತನ್ನ ಕ್ರೀಡೆಯ ಸ್ವರೂಪವೋ ಎನ್ನುವಂತೆ ಅಲೆಗಳಿಂದ ರಾರಾಜಿಸುತ್ತಿರುವುದರಿಂದ ಈ ಹೆಸರು. ॥ ೨೩ ॥

ಸಹಸ್ರಶೀರ್ಷಾ, ಪುರುಷ, ಪ್ರಧಾನಪುರುಷ, ಪರ (ಶ್ರೀಮಾಧವನು ಸಹಸ್ರತಲೆ ಯುಳ್ಳವನು, ಎಲ್ಲ ದೇಹಿಗಳಲ್ಲಿರತಕ್ಕವನಾದ್ದರಿಂದ ಇವನಿಗೆ ಪುರುಷನೆಂದು ಹೆಸರು. ಕ್ಷರ ಮತ್ತು ಅಕ್ಷರಪುರುಷರ ದೆಶೆಯಿಂದ ಉತ್ತಮನಾಗಿರತಕ್ಕವನೇ ಉತ್ತಮ ಪುರುಷನಾದ ಶ್ರೀಹರಿಯು. ಇವನೇ ಪ್ರಧಾನ ಪುರುಷನು. ಇವನು ಮುಖ್ಯಾರ್ಥದಲ್ಲಿ ಪರ ಅಂದರೆ ಸರ್ವೋತ್ಕೃಷ್ಟನು)

ಬ್ರಹ್ಮವಿದ್ಯಾ, ತ್ರಯೀರೂಪಾ, ಮೂಲಪ್ರಕೃತೀ, ಈಶ್ವರೀ (ಪರಮಾತ್ಮನು ಜ್ಞಾನಾನಂದಾದಿಗುಣಪರಿಪೂರ್ಣನು, ಸೃಷ್ಟ್ಯಾದಿ ಅಷ್ಟಕರ್ತೃತ್ವವುಳ್ಳವನು ಮತ್ತು ಸರ್ವಶಬ್ದ ವಾಚ್ಯನು. ಜಗನ್ನಿಯಾಮಕನು. ಇವನನ್ನು ಜ್ಞಾನಭಕ್ತಿವೈರಾಗ್ಯಾದಿಗಳಿಂದಲೇ, ಸುದೃಢ ಸ್ನೇಹದ ದೆಶೆಯಿಂದಲೇ ಒಲಿಸಿಕೊಂಡು ಅವನ ಸಾಕ್ಷಾತ್ಕಾರ ಪಡೆದು ಮುಕ್ತಿಯನ್ನು ಪಡೆಯಬೇಕು. ಈ ವಿಷಯವೇ ಬ್ರಹ್ಮಜ್ಞಾನ. ಈ ವಿದ್ಯೆಯು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಉಕ್ತವಾಗಿವೆ. ಈ ವಿದ್ಯೆಯನ್ನು ಪರಮಾರ್ಥತಃ ತಿಳಿದವಳು ಶ್ರೀಲಕ್ಷ್ಮೀದೇವಿಯು. ಇವಳೇ ತ್ರಿವೇಣಿಯ ಮುಖ್ಯದೇವತೆಯು. ಆದ್ದರಿಂದಲೇ ಇವಳಿಗೆ ''ಬ್ರಹ್ಮವಿದ್ಯಾ'' ಎಂದು ಹೆಸರು ಬಂದಿತು. ಋಕ್, ಯಜುರ್, ಅಥರ್ವವೆಂಬ ಮೂರು ವೇದಗಳ ರಾಶಿಗೆ ''ತ್ರಯೀ'' ಎಂದು ಹೆಸರು. ಇಂತಹ ತ್ರಯೀಗೆ ಅಭಿಮಾನಿನಿಯಾದ್ದರಿಂದ ತ್ರಿವೇಣೀದೇವಿಗೆ ''ತ್ರಯೀರೂಪಾ'' ಅಂದರೆ ಈ ಮೂರು ವೇದರಾಶಿಗಳ ರೂಪವುಳ್ಳವಳೆಂದು ಕರೆಯಲಾಗಿದೆ. ಶ್ರೀಲಕ್ಷ್ಮೀದೇವಿಯೇ ಚಿತ್ಪ್ರಕೃತಿ ರೂಪದಿಂದ ಜಗತ್ತಿನ ಜೀವಿಗಳ ಸೃಷ್ಟಿಕಾರ್ಯಗಳಲ್ಲಿ ತೊಡಗುವುದರಿಂದ ಈ ಮೂಲರೂಪಕ್ಕೆ ಮೂಲ ಪ್ರಕೃತಿಯೆಂದು ಹೆಸರು. ಇವಳೇ ಜಗತ್ಸೃಷ್ಟಿಗೆ ಕಾರಣಳಾಗಿ ಶ್ರೀಹರಿಯ ಆಜ್ಞಾ ಮತ್ತು ನಿಯಮನ ಮತ್ತು ಪ್ರೇರಣೆಗೆ ಒಳಪಟ್ಟು ಇರುವುದರಿಂದ ಶ್ರೀಹರಿಯ ನಂತರ ಇವಳಿಗೆ ಜಗತ್ಸ್ವಾಮಿತ್ವವು ಇರುವುದರಿಂದ ಇವಳು ಅಮುಖ್ಯಾರ್ಥದಲ್ಲಿ ''ಈಶ್ವರೀ'' ಎಂದಾದಳು.) ॥ ೨೪ ॥

ಪ್ರಯಾಗನಿಲಯಸ್ವಾಮೀ, ಶ್ರೀನಿವಾಸ, ಶುಭೇಕ್ಷಣ (ಪ್ರಯಾಗದಲ್ಲಿ ತನ್ನ ಆವಾಸವನ್ನು ಹೊಂದಿರುವುದರಿಂದ ಈ ಹೆಸರು, ಶ್ರೀಲಕ್ಷ್ಮೀದೇವಿಯರನ್ನು ಎದೆಯಲ್ಲಿಯೇ ಹೊಂದಿರು ವುದರಿಂದ ಶ್ರೀನಿವಾಸನಾದನು. ಮಂಗಳಕರವಾದ ಕಣ್ಣುಗಳುಳ್ಳವನಾದ್ದರಿಂದ ಶುಭೇಕ್ಷಣ

ನೆಂದಾದನು.

ಪದ್ಮೇಕ್ಷಣಾ, ಪದ್ಮವರ್ಣಾ, ಸ್ವರ್ಗಸೋಪಾನಪದ್ಧತೀ (ಪದ್ಮಪುಷ್ಪದಂತೆ ವಿಶಾಲವಾದ ಕಣ್ಣುಳ್ಳವಳು, ಪದ್ಮದಂತೆ ಅರುಣವರ್ಣದಿಂದ ಕೂಡಿದವಳು, ತನ್ನಲ್ಲಿ ಸ್ನಾನಾದಿಗಳನ್ನು ಮಾಡಿದವರಿಗೆ ಸ್ವರ್ಗಕ್ಕೆ ಮೆಟ್ಟಲಿನ ಮಾರ್ಗದಂತೆ ಇರುವವಳು. ॥ ೨೫ ॥

ಹಿರಣ್ಯಗರ್ಭ, ಕ್ಷೇತ್ರಜ್ಞ, ಶಾಶ್ವತ, ದುರ್ಧರ, ಜಯ, (ಹಿರಣ್ಯಗರ್ಭ-ಬ್ರಹ್ಮನನ್ನು ತನ್ನ ಗರ್ಭದಲ್ಲಿ ಹೊಂದಿರುವವನು, ಕ್ಷೇತ್ರಜ್ಞ-ಎಲ್ಲ ಶರೀರಿಗಳ ಶರೀರಗಳಲ್ಲಿ ಇದ್ದು ವ್ಯಾಪಾರ ಮಾಡಿಸತಕ್ಕವನು, ಶಾಶ್ವತ-ಅನಾದಿ, ಅನಿತ್ಯ, ಸಾರ್ವಕಾಲಿಕ, ಸಾರ್ವದೇಶಿಕ ಅಸ್ತಿತ್ವವುಳ್ಳವನು, ತ್ರೈಕಾಲಿಕಾಬಾಧಿತವಾದ ಅಸ್ತಿತ್ವವುಳ್ಳವನು, ಎಲ್ಲಾ ಕಾಲದಲ್ಲಿಯೂ ಏಕಪ್ರಕಾರವಾಗಿರತಕ್ಕವನು, ಯಾರಿಂದಲೂ ಇವನನ್ನು ಎದುರಿಸಲು ಸಾಧ್ಯವಿಲ್ಲವಾದ್ದರಿಂದ ದುರ್ಧರನೆನಿಸಿಕೊಂಡನು, ಜಯ-ಎಲ್ಲ ಕಾಲದಲ್ಲಿಯೂ ಎಲ್ಲಾ ಕಾರ್ಯ ಕರ್ಮಗಳಲ್ಲಿಯೂ ಜಯವುಳ್ಳವನು. ಎಲ್ಲರಿಂದಲೂ ಅಜೇಯನು.)

ದಿವ್ಯಾಂಬರಾ, ದಿವ್ಯಭೋಗಾ, ದಿವ್ಯಾಭಾ, ದಿವ್ಯಭೂಷಣಾ (ಅಲೌಕಿಕವಾದ ವಸ್ತ್ರಗಳನ್ನು ಧರಿಸಿರುವವಳು. ಅಲೌಕಿಕವಾದ ವೈಕುಂಠಾದಿಗಳಲ್ಲಿ ಲಭ್ಯವಾಗುವ ಭೋಗಾದಿಗಳುಳ್ಳವಳು, ಅಲೌಕಿಕವಾದ ಪ್ರಕಾಶವುಳ್ಳವಳು, ಅಪ್ರಾಕೃತವಾದ ಆಭರಣಾದಿಗಳುಳ್ಳವಳು. ॥ ೨೬ ॥

ಸುಭುಜ, ಸುಮುಖ, ಶ್ರೀಮಾನ್, ಸುನೇತ್ರ, ಶೋಭನಾಕೃತಿ (ಸುಭುಜ-ದಷ್ಟಪುಷ್ಟವಾದ ಸಮರ್ಥಶಾಲಿಯಾದ ಭುಜಗಳುಳ್ಳವನು, ಸುಮುಖ-ಮಂಗಳಕರವಾದ ಮುಖವುಳ್ಳವನು, ಶ್ರೀಮಾನ್ ಕಾಂತಿಸಂಪದ್ಯುಕ್ತನಾದ್ದರಿಂದ, ಸುನೇತ್ರ-ಮಂಗಳಕರವಾದ ಶೋಭಾಯಮಾನ ವಾದ ಸುಂದರವಾದ ನೇತ್ರಗಳುಳ್ಳವನಾದ್ದರಿಂದ, ಶೋಭನಾಕೃತಿ-ಮಂಗಳಕರವಾದ ಆಕಾರವುಳ್ಳವನು, ಅಪ್ರಾಕೃತಜ್ಞಾನಾನಂದಾದಿಶರೀರಿಯು.)

ಕಾಲಿಂದೀಸಂಗತಾ, ಕಲ್ಪಾ, ಕಲಿಕಾಲವಿನಾಶಿನೀ (ಕಾಲಿಂದೀಸಂಗತಾ-ಯಮುನಾ ನದಿಯನ್ನು ತನ್ನ ಸಂಗಮದಲ್ಲಿ ಹೊಂದಿರುವವಳು, ಕಲ್ಪಾ-ಎಷ್ಟೋ ಬ್ರಹ್ಮಕಲ್ಪ ಆಯುಸುಳ್ಳವಳಾದ್ದರಿಂದ ಅಥವಾ ಕಲ್ಪವೃಕ್ಷದಂತೆ ಭಕ್ತರ ಇಷ್ಟಗಳನ್ನು ಈಡೇರಿಸುವುದರಿಂದ ಅಥವಾ ದೇಹಾರೋಗ್ಯಕ್ಕೆ ಕಾಯಕಲ್ಪದಂತೆ ಇರುವವಳು, ಕಲಿಕಾಲವಿನಾಶಿನೀ-ಸಜ್ಜನರನ್ನು ಕಲಿಯ ದುಷ್ಪ್ರಭಾವದಿಂದ ರಕ್ಷಿಸುವವಳು ಆದ್ದರಿಂದ. ॥ ೨೭ ॥

ವಂದಿತಾಂಘ್ರಿಯುಗ, ಅಕ್ಷಯವಟಲೀಲಾವಿಚಕ್ಷಣ (ಸಮಸ್ತಜೀವರಾಶಿಯಿಂದ ನಮಸ್ಕರಿಸಲ್ಪಟ್ಟ ಪಾದಯುಗಗಳುಳ್ಳವನು, ಮಹಾಪ್ರಳಯದಲ್ಲಿ ಇಡೀ ಬ್ರಹ್ಮಾಂಡದ ಜೀವರಾಶಿಗಳನ್ನೆಲ್ಲಾ ತನ್ನ ಹೊಕ್ಕುಳಿಂದ ಸೆಳೆದುಕೊಂಡು ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಈ ಅಕ್ಷಯವಟ ವೃಕ್ಷದ ಎಲೆಯನ್ನೇ ಪರ್ಯಂಕವಾಗಿಟ್ಟುಕೊಂಡು ಕಾಲಿನ ಹೆಬ್ಬೆಟ್ಟನ್ನು ತನ್ನ ಬಾಯಲ್ಲಿಟ್ಟು ಚೀಪುತ್ತಾ ಶ್ರೀಲಕ್ಷ್ಮೀದೇವಿಯರಿಂದ ಆಲಿಂಗಿತನಾಗಿದ್ದು ಯೋಗನಿದ್ರಾ ಲೀಲೆಯಲ್ಲಿ ಇರುವವನು.)

ಇಂದ್ರಾದಿವಂದಿತಾ, ಸೌರೀ, ಪಾವನೀ, ಪೂತಪುಷ್ಕರಾ (ಇಂದ್ರಾದಿದೇವತೆಗಳಿಂದ ನಮಸ್ಕರಿಸಲ್ಪಟ್ಟಿರತಕ್ಕವಳು, ಸೂರ್ಯನ ಮಗಳಾದ ಯಮುನೆಯನ್ನು ತನ್ನ ಸಂಗಮದಲ್ಲಿ ಸೇರಿಸಿಕೊಂಡಿರುವವಳು, ಪರಮಪಾವನಳಾದವಳು, ಪವಿತ್ರೀಗೊಳಿಸಿದ ಸಂಗಮಪುಷ್ಕರಿಣಿಯುಳ್ಳವಳು. ॥ ೨೮ ॥

ಷಣ್ಮೂರ್ತಿ, ಭಕ್ತಿಮದ್ಗಮ್ಯ, ವೇದೀತ್ರಯವಿಭೂಷಣ (ಗಂಗೆ, ಯಮುನೆ ಮತ್ತು

ಸರಸ್ವತಿಯರ, ವಟವೃಕ್ಷ, ಟಂಕೇಶ್ವರ ಮತ್ತು ಪಶುಪತಿ ಎಂಬ ಆರು ಮೂರ್ತಿಗಳನ್ನು ಹೊಂದಿರುವವನು. ಆದ್ದರಿಂದ ಷಣ್ಮೂರ್ತಿಯೆಂದು ಹೆಸರು, ಭಕ್ತಿಯುಳ್ಳವರಿಂದಲೇ ಹೊಂದಲ್ಪಡುವವನಾದ್ದರಿಂದ ಭಕ್ತಿಮದ್ಗಮ್ಯ, ಆದಿವೇಣೀ, ಮಧ್ಯವೇಣೀ ಮತ್ತು ಅಂತ್ಯವೇಣೀ ಎಂಬ ತ್ರಿವೇಣಿಗಳಿಂದ ಅಲಂಕೃತನಾಗಿರುವವನಾದ್ದರಿಂದ ವೇಣೀತ್ರಯವಿಭೂಷಣ)

ತ್ರಿಮೂರ್ತಿ, ತ್ರ್ಯಕ್ಷರಾ, ತ್ರ್ಯಕ್ಷಾ, ತ್ರ್ಯಕ್ಷಮೌಲಿಕೃತಾಸ್ಪದಾ (ತ್ರಿಮೂರ್ತಿ–ಗಂಗೆ ಯಮುನೆ ಮತ್ತು ಸರಸ್ವತಿಯ ರೂಪದಲ್ಲಿ ಈ ಮೂರು ನದಿಗಳುಳ್ಳವಳಾದ, ತ್ರ್ಯಕ್ಷಾ–ಮೂರು ಕಣ್ಣುಗಳುಳ್ಳವಳಾದ್ದರಿಂದ, ತ್ರ್ಯಕ್ಷರಾ–ನಾಶರಹಿತನಾದ ಶ್ರೀಮಾಧವನನ್ನು ಅಕ್ಷಯ ವಟವೃಕ್ಷವನ್ನು ಮತ್ತು ನಾಶರಹಿತವಾದ ಪ್ರಯಾಗಕ್ಷೇತ್ರವಾಸಿತ್ವವನ್ನೂ ಹೊಂದಿ ಮೂರು ವಿಧ ಅಕ್ಷರತ್ವವನ್ನುಳ್ಳವಳು, ತ್ರ್ಯಕ್ಷಮೌಲಿಕೃತಾಸ್ಪದಾ–ಮೂರು ಕಣ್ಣುಗಳುಳ್ಳ ರುದ್ರದೇವರ ಶಿರಸ್ಸಿನಲ್ಲಿ ಸ್ವೀಕರಿಸಲ್ಪಟ್ಟ ಗಂಗೆಯನ್ನು ಹೊಂದಿರುವುದರಿಂದ.) ॥ ೨೯ ॥

ಕಮನೀಯತರಾಕಾರ, ಕಾಮಜಿತ್, ಕಾಮಿತಪ್ರದ (ಕಮನೀಯತರಾಕಾರ–ಅತ್ಯಂತ ಸುಂದರವಾದುವುಗಳನ್ನು ಮೀರಿಸುವ ಆಕಾರವುಳ್ಳವನು, ಕಾಮಜಿತ್–ನರನಾರಾಯಣಾದಿ ಅವತಾರಗಳಲ್ಲಿ ಕಾಮನನ್ನು ಗೆದ್ದವನು, ಕಾಮಿತಪ್ರದ–ಭಕ್ತರ ಅಪೇಕ್ಷೆಗಳನ್ನೆಲ್ಲಾ ನೆರವೇರಿಸುವುದರಿಂದ )

ಕಮನೀಯತರಾ, ಕಾಮ್ಯಾ, ಶರಣ್ಯಾ, ಕಾಮಿತಪ್ರದಾ (ಕಮನೀಯತರಾ–ಮನೋಹರ-ಗಳಾದುವುಗಳಿಂಗಿಂತ ಮನೋಹರಳಾದ್ದರಿಂದ, ಕಾಮ್ಯಾ–ಎಲ್ಲರಿಂದಲೂ ಅಪೇಕ್ಷಿತಳಾದ್ದರಿಂದ, ಶರಣ್ಯಾ–ಎಲ್ಲರೂ ಶರಣುಹೊಗುವುದರಿಂದ, ಕಾಮಿತಪ್ರದಾ–ಭಕ್ತರ ಅಪೇಕ್ಷೆಗಳನ್ನೆಲ್ಲಾ ಅನುಗ್ರಹಿಸುವುದರಿಂದ) ॥ ೩೦ ॥

ವಿಧಾತೃಕರಕೋದ್ಭೂತಾ, ಸಂಜ್ಞಾಜಠರಭೂಷಣಾ, (ವಿಧಾತೃಕರಕೋದ್ಭೂತಾ ಬ್ರಹ್ಮ-ದೇವರ ಕಮಂಡಲುವಿನಲ್ಲಿ ಹುಟ್ಟಿದ ಗಂಗೆಯುಳ್ಳವಳು, ಸೂರ್ಯನ ಪತ್ನಿಯಾದ ಸಂಜ್ಞಾದೇವಿಯ ಹೊಟ್ಟೆಯಲ್ಲಿ ಭೂಷಣಪ್ರಾಯಳಾಗಿ ಹುಟ್ಟಿಬಂದ ಯಮುನೆಯನ್ನುಳ್ಳವಳು) ವಿರಿಂಚಿ-ವದನೋದ್ಭೂತಾ, ವಿಷ್ಣುಪಾದಾವನೇಜನೀ (ವಿರಿಂಚಿವದನೋದ್ಭೂತಾ–ಶ್ರೀಚತುರ್ಮುಖ-ಬ್ರಹ್ಮದೇವರ ಮುಖದಲ್ಲಿ ಹುಟ್ಟಿಬಂದ ಸರಸ್ವತಿಯನ್ನೊಳಗೊಂಡವಳು, ವಿಷ್ಣುಪಾದಾ-ವನೇಜನೀ–ಶ್ರೀತ್ರಿವಿಕ್ರಮದೇವರ ಪಾದದಲ್ಲಿನ ಜಲದಲ್ಲಿ ಹುಟ್ಟಿಬಂದಂಥಾ ಗಂಗೆಯನ್ನುಳ್ಳವಳು ॥ ೩೧ ॥

ಚರಮಾಚಲಸಂಬದ್ಧಾ, ಬ್ರಹ್ಮಕಾರ್ಯಕೃತೋದ್ಯಮಾ, ಆದಿವೇಣೀ, ಮಧ್ಯವೇಣೀ, ಅಂತವೇಣೀ (ಚರಮಾಚಲಸಂಬ್ಧಾ–ಪ್ರಯಾಗಸಮೀಪದಲ್ಲಿರುವ ಅಸ್ತಾಚಲದ ಸಂಬಂಧ ಹೊಂದಿರುವವಳು, ಬ್ರಹ್ಮಕಾರ್ಯಕೃತೋದ್ಯಮಾ–ಬ್ರಹ್ಮದೇವರ ದಶಾಶ್ವಮೇಧ ಯಾಗಗಳ ಸಂಬಂಧವುಳ್ಳವಳು, ಆದಿವೇಣೀ, ಮಧ್ಯವೇಣೀ ಮತ್ತು ಅಂತ್ಯವೇಣೀ ಮತ್ತು ತ್ರಿವೇಣೀ ಎಂಬ ಹೆಸರುಳ್ಳವಳು.) ॥ ೩೨ ॥

ಯಾರು ಈ ನಾಮಗಳಿಂದ ತ್ರಿವೇಣೀ ಮತ್ತು ಮಾಧವನನ್ನು ಪುಷ್ಪಾದಿಗಳಿಂದ ಪೂಜಿಸುತ್ತಾರೋ ಅವರಲ್ಲಿ ತ್ರಿವೇಣೀ ಮತ್ತು ಮಾಧವರು ಪ್ರಸನ್ನರಾಗುವರು. ಈ ವಿಷಯದಲ್ಲಿ ಸಂದೇಹವು ಬೇಡ. ॥ ೩೩ ॥ ಸೌಕರ್ಯಗಳಿದ್ದರೆ ಪ್ರತಿ ದಿನವೂ ಈ ನಾಮಗಳಿಂದ ಪೂಜಾ ಮಾಡತಕ್ಕದ್ದು ಅಥವಾ ಒಂದು ದಿವಸವಾದರೂ ಪೂಜಾ ಮಾಡತಕ್ಕದ್ದು, ಧನಬಲದಿಂದ

ಅಶಕ್ತನಾದರೆ ನೀರಿನಿಂದಾಗಲೀ ಅಥವಾ ತುಳಸಿಯಿಂದಲಾಗಲೀ ಪೂಜಾ ಮಾಡತಕ್ಕದ್ದು. ॥ ೩೪ ॥ ಧನ, ಕನಕ, ಸಂಪತ್ತುಗಳಿಂದ ತುಂಬಿದ ಪೂಜೆಯನ್ನೇ ಶ್ರೀಮಾಧವನು ಬಯಸುವುದಿಲ್ಲ; ಕೇವಲ ಕಮಲದ ಹೂ ಮತ್ತು ನೀರಿನಿಂದಲೇ ದೀನನಿಂದ ಭಕ್ತಿಯುಕ್ತವಾಗಿ ಮಾಡಿದ ಪೂಜೆಯನ್ನು ಶ್ರೀಮಾಧವನು ಸ್ವೀಕಾರ ಮಾಡುವನು. ॥ ೩೫ ॥ ಕ್ರೀಡಾದಿಗುಣವಿಶಿಷ್ಟನೂ, ಪೂರ್ಣನೂ ಆದ ಮಾಧವನು ಅಪೂರ್ಣನಾದ ಜೀವನಿಂದ ಪೂಜಾದಿಗಳನ್ನು ಅಪೇಕ್ಷಿಸುವುದಿಲ್ಲ. ಅರ್ಚಕನು ತನ್ನಲ್ಲಿ ಭಕ್ತಿಯುಳ್ಳವನಾಗಿ ತನಗೋಸ್ಕರ ಏನು ಪೂಜೆಯನ್ನು ಮಾಡುತ್ತಾನೋ ಅದನ್ನೇ ಸ್ವೀಕರಿಸುವನು ಬೇರೆ ಯಾವುದನ್ನೂ ಅಲ್ಲ. ॥ ೩೬ ॥ ಶ್ರೀಮಾಧವದೇವನು ಭಕ್ತಿಗೆ ಸುಲಭವಾಗಿ ಲಭ್ಯನು; ಆದರೆ ಹಣದ ರಾಶಿಗಳಿಂದಲ್ಲ. ಈ ವಿಷಯವನ್ನೇ ಶ್ರುತಿಸ್ಮೃತಿಗಳು ಡಂಗುರ ಬಾರಿಸಿದಂತೆ ಸಾರುತ್ತವೆ. ॥ ೩೭ ॥ ಶೂದ್ರರು, ಅಂತ್ಯಜರು, ಬಾಲಕರು ಮತ್ತು ಅಸಹಾಯಕರು ಭಕ್ತಿ ಮಾಡಿ ಏನೇನು ಪದವಿಗಳನ್ನು ಹೊಂದಿದ್ದಾರೆಯೋ ಅಂತಹ ಪದವಿಗಳನ್ನು ಜ್ಞಾನಿಗಳು, ಯೋಗಿಗಳು ಮತ್ತು ತಿಳಿದ ವೃದ್ಧರೂ ಸಹಾ ಹೊಂದಿಲ್ಲ. ॥ ೩೮ ॥ ಪತ್ರ, ಪುಷ್ಪ, ಹಣ್ಣು ಮತ್ತು ನೀರು ಇವುಗಳಲ್ಲಿ ಯಾವುದನ್ನು ಜನರು ಭಕ್ತಿಯಿಂದ ಸಮರ್ಪಿಸುತ್ತಾರೋ ಅದೇ ಮೇರುಪರ್ವತದಷ್ಟು ದೊಡ್ಡದಾಗಿ ಮೋಕ್ಷಕ್ಕೆ ಸಹ ಕಾರಣವಾಗುತ್ತದೆ. ॥ ೩೯ ॥ ಅದರಲ್ಲಿಯೂ ಪ್ರಯಾಗದಲ್ಲಿ ಗಂಗಾಯಮುನೆಯರ ಸಂಗಮದಲ್ಲಿ ಭಕ್ತಿಯಿಂದ ನೀರಿನಿಂದ ಪೂಜಿಸಿದರೂ ಶ್ರೀಮಾಧವನು ಅದರಿಂದ ಸಂತುಷ್ಟನಾಗುವನು. ॥ ೪೦ ॥ ಆದ್ದರಿಂದ ಶ್ರೀವೇಣೀಮಾಧವನ ಮಂಗಳಕರ ಪೂಜಾಗಳನ್ನು ವಿಶೇಷವಾಗಿ ಮಾಡಬೇಕು. ಅದರಲ್ಲಿಯೂ ಯಾತ್ರಿಕರು ಹಣದ ಲೋಭವನ್ನು ಮಾಡಬಾರದು. ॥ ೪೧ ॥ ಆರೋಗ್ಯವಿಲ್ಲದವನು, ಕೈಕಾಲು ಊನವಾಗಿರುವವನು, ರೋಗಿಗಳು ಮತ್ತು ದೂರ ದೂರದೇಶಗಳಲ್ಲಿರುವವರು ಕೇವಲ ಈ ಅಷ್ಟೋತ್ತರನಾಮಗಳ ಜಪ ಮಾಡಿದರೇನೇ ಸ್ನಾನ ಮತ್ತು ಪೂಜೆಗಳ ಫಲವನ್ನು ಹೊಂದುವರು. ॥ ೪೨ ॥ ನಾಲ್ಕು ವರ್ಣದವರೂ, ನಾಲ್ಕು ಆಶ್ರಮದವರೂ ತಮ್ಮ ತಮ್ಮ ಬಂಧುಮಿತ್ರರ ಸಹಿತ ಹೆಂಡತಿಯರಿಂದ ಕೂಡಿದವರಾಗಿ ಅವರವರ ಅಧಿಕಾರಕ್ಕೆ ತಕ್ಕಂತೆ ಪೂಜಾ ಮಾಡಬೇಕು. ॥ ೪೩ ॥ ನಾನು ಕೂಡ ಪಾತಾಳಲೋಕದಲ್ಲಿ ಪ್ರತಿನಿತ್ಯವೂ ಈ ಅಷ್ಟೋತ್ತರ ಶತನಾಮಗಳನ್ನು ತಪ್ಪದೇ ಪಠಿಸುವೆನು, ಹೀಗಿರಲು ಬೇರೆಯವರು ದಿನನಿತ್ಯ ಪಠಿಸುತ್ತಿರಬೇಕೆಂದು ಹೇಳುವುದೇನಿದೆ? ॥ ೪೪ ॥ ಈ ರೀತಿಯಾಗಿ ಅತ್ಯುತ್ತಮವಾದ ಶ್ರೀವೇಣೀಮಾಧವರ ಸಾಂಗೋಪಾಂಗವಾದ ಮತ್ತು ಉತ್ತಮವಾದ ಪೂಜಾವಿಧಾನವು ನನ್ನಿಂದ ಹೇಳಲ್ಪಟ್ಟಿದೆ. ಪ್ರಯಾಗಕ್ಕೆ ಬಂದು ನೈಮಿತ್ತಿಕಪೂಜಾವನ್ನು ಶ್ರೀಮಾಧವನಿಗೆ ಸಮರ್ಪಿಸಿದರೆ ಶ್ರೀಮಾಧವನು ಎಲ್ಲ ಅಪೇಕ್ಷೆಯನ್ನು ನೆರವೇರಿಸುವನು. ॥ ೪೫ ॥ ಎಲೈ, ಮಹರ್ಷಿಗಳಿರಾ! ಇದುವರೆಗೆ ನಾನು ಹೇಳಿರುವುದು ನೈಮಿತ್ತಿಕ ಪೂಜೆಯು. ಇದನ್ನು ಮಾಡುವವರು ತಮ್ಮ ತಮ್ಮ ನಿತ್ಯಕರ್ಮಾನುಷ್ಠಾನ ಮತ್ತು ನಿತ್ಯಪೂಜಾದಿಗಳನ್ನು ಮಾಡಿಯೇ ಮಾಡಬೇಕು. ॥ ೪೬ ॥ ನಿತ್ಯಕರ್ಮಪೂಜಾದಿಗಳನ್ನು ಮಾಡಿ ಮುಗಿಸಿ ಅನಂತರ ನೈಮಿತ್ತಿಕವಾದ ಮಾಧವನ ಪೂಜಾವನ್ನು ಯಾರು ಮಾಡುತ್ತಾರೋ ಅವರಿಗೆ ಪೂರ್ಣಫಲವು ಲಭಿಸುವುದು. ॥ ೪೭ ॥ ಪಂಚಾಯತನಪೂಜೆಯನ್ನಾಗಲೀ ಅಥವಾ ಇವರಲ್ಲಿ ಒಂದು ದೇವತೆಯ ಪೂಜೆಯನ್ನಾಗಲೀ, ಯಾವ ದ್ವಿಜನು ಮಾಡುವನೋ ಅವನ ಆ ದಿನವು ಸಾರ್ಥಕವಾಗುವುದು. ॥ ೪೮ ॥ ಇನ್ನು ದಿನನಿತ್ಯವೂ ಪಂಚಾಯತನ ಪೂಜೆಯನ್ನು ತಪ್ಪದೇ ಯಾರು ಆದರದಿಂದ ಮಾಡುವರೋ ಅವರಿಗೆ ಮಾಧವನು ಸಂತುಷ್ಟನಾಗುವುದರಲ್ಲಿ ಸಂಶಯವೇ ಇಲ್ಲ. ॥ ೪೯ ॥

॥ ನಲವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಚತ್ವಾರಿಂಶೋऽಧ್ಯಾಯಃ ॥ ೪೫ ॥

**ಸನಕಾದಯ ಊಚುಃ—**

> **ಶೇಷರಾಜ ನಮಸ್ತೇऽಸ್ತು ಧನ್ಯಸ್ತ್ವಂ ಲೋಕಪಾವನಃ ।**
> **ಯನ್ಮಾಧವಸ್ಯ ಕಥಯಾ ಪುನಾಸಿ ಭುವನತ್ರಯಮ್ ॥ ೧ ॥**
> **ಇದಾನೀಂ ಯತ್ತ್ವಯಾ ಪ್ರೋಕ್ತಂ ಪಂಚಾಯತನಪೂಜನಮ್ ।**
> **ತದ್ವಿಧಿಂ ವದ ಸಂಕ್ಷಿಪ್ತಂ ಕರ್ತೃಣಾಂ ಸುಖದಾಯಕಮ್ ॥ ೨ ॥**

## ॥ ನಲವತ್ತೈದನೆಯ ಅಧ್ಯಾಯವು ॥

**ಸನಕಾದಿಗಳು ಹೇಳಿದರು—**

ನಾಗಜಾತಿಗಳಿಗೆ ರಾಜರಾಗುವ ಶ್ರೀಶೇಷದೇವರೇ! ನಿಮಗೆ ವಂದನೆಗಳು. ನೀವು ಲೋಕಗಳನ್ನು ಪಾವನ ಮಾಡತಕ್ಕವರು. ತಾವು ಶ್ರೀಮಾಧವನ ಕಥೆಯನ್ನು ಹೇಳಿ ಮೂರುಲೋಕಗಳನ್ನು ಪವಿತ್ರಗೊಳಿಸಿದ್ದೀರಿ. ಇಂತಹ ನೀವೇ ಧನ್ಯರು. ॥ ೧ ॥ ಈಗ ತಾನೇ ''ಪಂಚಾಯತನ ಪೂಜಾ'' ಎಂಬುದಾಗಿ ತಮ್ಮಿಂದ ಹೇಳಲ್ಪಟ್ಟಿತು. ಇದನ್ನು ಆಚರಿಸಿದವರಿಗೆ ಸುಖವಾಗುವುದರಿಂದ ಇದರ ಆಚರಣೆಯ ವಿಧಾನವನ್ನು ದಯಮಾಡಿ ಉಪದೇಶ ಮಾಡಿರಿ.॥ ೨ ॥

**ಶೇಷ ಉವಾಚ—**

> **ಸಮ್ಯಕ್ ಪೃಷ್ಟಂ ಮುನಿಶ್ರೇಷ್ಠಾಃ ಪಂಚಾನಾಮಪಿ ಪೂಜನಮ್ ।**
> **ವದಾಮ್ಯಹಂ ಭವತ್ಪ್ರೀತ್ಯೈ ತ್ವಪರಾಧವಿವರ್ಜಿತಮ್ ॥ ೩ ॥**

**ಶೇಷದೇವರು ಹೇಳಿದರು—**

ಎಲೈ ಮುನಿವರ್ಯರೇ! ತಾವುಗಳು ಚೆನ್ನಾಗಿ ಪ್ರಶ್ನೆ ಮಾಡಿದ್ದೀರಿ. ನಿಮ್ಮಗಳ ಮೇಲಿನ ಪ್ರೀತಿಯಿಂದ ಈ ಪಂಚಾಯತನ ಪೂಜೆಯನ್ನು, ಅಪರಾಧಗಳನ್ನು ಬಿಟ್ಟು ಹೇಳುತ್ತೇನೆ. ॥ ೩ ॥

**ಋಷಯ ಊಚುಃ—**

> **ಅಪರಾಧಾಸ್ತು ಕೇ ಪ್ರೋಕ್ತಾಃ ಪೂಜನಂ ಯದ್ವಿವರ್ಜನಾತ್ ।**
> **ಸಾಂಗಂ ಭವತಿ ತಾನಾದೌ ವದ ಪಶ್ಚಾತ್ತು ಪೂಜನಮ್ ॥ ೪ ॥**

**ಋಷಿಗಳು ಹೇಳಿದರು—**

ಯಾವುಗಳನ್ನು ಬಿಡುವುದರಿಂದ ಪೂಜೆಯು ಸಾಂಗವಾಗುವುದೋ ಅಂತಹ ಅಪರಾಧಗಳನ್ನು ಮೊದಲು ಹೇಳಿ ನಂತರ ಪೂಜಾವಿಧಾನವನ್ನು ವಿವರಿಸಿರಿ. ॥ ೪ ॥

**ಶೇಷ ಉವಾಚ—**

> **ದ್ವಾತ್ರಿಂಶದಪರಾಧಾಸ್ತು ಪೂಜಾವೈಗುಣ್ಯಕಾರಕಾಃ ।**
> **ತಾನ್ವಕ್ಷ್ಯಾಮಿ ಯಥಾಪೂರ್ವಂ ಶೃಣುಧ್ವಮವಧಾನತಃ ॥ ೫ ॥**

ಅಂಗುಷ್ಠಮರ್ದನಂ ದೇವೇ ಹ್ಯಧಃಪುಷ್ಪಸಮರ್ಪಣಮ್ ।
ಅಂಗುಲ್ಯಗ್ರೈರ್ಜಲಕ್ಷೇಪೋಽಮೌನಂ ವ್ಯಗ್ರನಮಸ್ಕೃತಿಃ ॥ ೬ ॥
ಅಪ್ರಕ್ಷಾಲಿತಪಾದಸ್ಯ ಪ್ರವೇಶೋ ದೇವಮಂದಿರೇ ।
ಊರೂವೂಕಃ ಪಲಾಶಸ್ಥೈಃ ಕುಸುಮೈಃ ಪೂಜನಂ ತಥಾ ॥ ೭ ॥
ಪೂಜನಂ ಚಾಸುರೇ ಕಾಲೇಽಭಕ್ತ್ಯಾನ್ನಾದಿನಿವೇದನಮ್ ।
ವಾತಮೂತ್ರಾದಿ ಸಂರೋಧ್ಯ ಕೃತ್ವಾನಾಚಮ್ಯ ಪೂಜನಮ್ ॥ ೮ ॥
ಸ್ಥಿತ್ವಾ ಪೀಠಾಸನೇ ಪೂಜಾ ಘರ್ಮಲಿಪ್ತಾಂಗಪೂಜನಮ್ ।
ನಿರಾಸನಸ್ಯ ಯಾ ಪೂಜಾ ತಥಾ ಪ್ರಾವೃತ್ಯ ಕಂಬಲಮ್ ॥ ೯ ॥
ಮಾರ್ತಿಕೇ ಭಾಜನೇ ಯಚ್ಚ ಧೂಪದೀಪನಿವೇದನಮ್ ।
ಭೂತಾಪ್ಪ್ವ್ಯೋನಕ್ತಂ ಚ ಭೋಜನಂ ಹರಿವಾಸರೇ ॥ ೧೦ ॥
ಸ್ಯೂತಾದ್ರ್ರವಾಸಸಾ ಪೂಜಾಸ್ಪೃಶ್ಯಸ್ಪೃಷ್ಟಸ್ಯ ಪೂಜನಮ್ ।
ದಕ್ಷಿಣಾಸ್ಯಸ್ಯ ಯಾ ಪೂಜಾ ವಿನಾ ತೀರ್ಥಗ್ರಹಂ ಭುಜಿಃ ॥ ೧೧ ॥
ಅಪಟ್ವನೀಲವಸ್ತ್ರೇಣ ತ್ವರಯಾ ಚ ಪ್ರಪೂಜನಮ್ ।
ಮಂತ್ರತಂತ್ರಕ್ರಿಯಾಲುಪ್ತಮಜೀರ್ಣಾನ್ನೇನ ಪೂಜನಮ್ ॥ ೧೨ ॥
ಸ್ಪೃಷ್ಟ್ವಾ ದೀಪಮನಾಚಮ್ಯ ಪೂಜನಂ ಚಾನೃತೇನ ಯತ್ ।
ಯಾಚಿತೈಸ್ಸಾಧನೈಃ ಪೂಜಾ ಚೈಕವಸ್ತ್ರೇಣ ಪೂಜನಮ್ ॥ ೧೩ ॥
ಉತ್ಥಾಯೋತ್ಥಾಯ ಯಾ ಪೂಜಾ ವ್ಯಾಪಾರಾಂತರಸಂಯುತಾ ।
ಏತೇಽಪರಾಧಾ ದ್ವಾತ್ರಿಂಶದ್ವರಾಹೇಣೇರಿತಾಸ್ಸ್ವಯಮ್ ॥ ೧೪ ॥
ಏತೈರ್ವಿರಹಿತಾ ಪೂಜಾ ಸಾ ಪೂಜಾ ಭಗವತ್ಪ್ರಿಯಾ ।

**ಶೇಷದೇವರು ಹೇಳಿದರು—**

ಪೂಜೆಗೆ ಗುಣಹಾನಿತ್ವವನ್ನುಂಟುಮಾಡುವ ಮೂವತ್ತೆರಡು ಅಪರಾಧಗಳನ್ನು ಮೊದಲೇ ತಿಳಿಸಿರುವಂತೆ ಈಗ ಉಲ್ಲೇಖಿಸುವೆ, ಗಮನವಿಟ್ಟು ಕೇಳಿರಿ. ॥ ೫ ॥ ಹೆಬ್ಬೆಟ್ಟಿನಿಂದ ಗಟ್ಟಿಯಾಗಿ ಒತ್ತಿ ದೇವರನ್ನಿಡುವುದು, ನೀಚವಾದ ಹೂವನ್ನು ಸಮರ್ಪಿಸುವುದು, ಬೆರಳುಗಳ ತುದಿಯಿಂದ ದೇವರಿಗೆ ನೀರನ್ನು ಚಿಮುಕಿಸುವುದು, ಮೌನಭಂಗ, ಅಸ್ಥಿಮಿತಮನಸ್ಕನಾಗಿ ದೇವರಿಗೆ ನಮಸ್ಕರಿಸುವುದು, ದೇವಗೃಹವನ್ನು ಕಾಲು ತೊಳೆಯದೇ ಪ್ರವೇಶಿಸುವುದು, ಊರೂವೂಕ(ಹರಳು) ಮತ್ತು ಮುತ್ತುಗದ ಎಲೆಯಲ್ಲಿಟ್ಟಿರುವ ಹೂವನ್ನು ದೇವರಿಗೆ ಸಮರ್ಪಿಸುವುದು, ಆಸುರೀಕಾಲದಲ್ಲಿ ದೇವರನ್ನು ಪೂಜಿಸುವುದು, ಭಕ್ತಿಯಿಲ್ಲದೆ ಅನ್ನಾದಿಗಳನ್ನು ನಿವೇದನ ಮಾಡುವುದು, ಅಪಾನವಾಯು ಮತ್ತು ಮೂತ್ರವನ್ನು ತಡೆದುಕೊಂಡು ಪೂಜಾ ಮಾಡುವುದು, ಅಪಾನವಾಯುವಿನ ನಂತರ ಆಚಮನ ಮಾಡದೇ ಪೂಜಾ ಮಾಡುವುದು, ಪೀಠಾಸನದಲ್ಲಿ ಕುಳಿತು ಪೂಜಾ ಮಾಡುವುದು, ಬೆವರು ಸುರಿಯುತ್ತಿರುವ ದೇಹದಿಂದ ಪೂಜಿಸುವುದು, ಆಸನವಿಲ್ಲದೆ ನೆಲದ ಮೇಲೆ ಕುಳಿತು ಪೂಜಾ ಮಾಡುವುದು, ಕಂಬಳಿಯನ್ನು ಸುತ್ತಿಕೊಂಡು ಪೂಜಾ ಮಾಡುವುದು,

ಮಣ್ಣಿನ ಪ್ರಣತಿಯಲ್ಲಿ ಧೂಪ ಕೊಡುವುದು ಮತ್ತು ದೀಪವನ್ನು ಹಚ್ಚಿಡುವುದು, ಚತುರ್ದಶೀ ಮತ್ತು ಅಷ್ಟಮೀದಿವಸಗಳಲ್ಲಿ ರಾತ್ರಿಭೋಜನ ಮಾಡುವುದು, ಏಕಾದಶಿಯಂದು ಭೋಜನ ಮಾಡುವುದು (ದ್ವಾದಶೀದಿವಸ ಪ್ರಾತಃ ಇನ್ನೂ ದ್ವಾದಶೀ ಪ್ರಥಮಪಾದವಿರುವಾಗ ಮತ್ತು ಗೋಕುಲಾಷ್ಟಮೀ ತಿಥಿಯು ಮುಗಿಯದೇ ಇನ್ನೂ ಇರುವಾಗಲೇ ಭೋಜನ ಮಾಡುವುದು) ಹೊಲಿಗೆ ಹಾಕಿರುವ ಮತ್ತು ಒದ್ದೆ ಬಟ್ಟೆಯನ್ನುಟ್ಟು ಪೂಜಾ ಮಾಡುವುದು, ಅಸ್ಪೃಶ್ಯರನ್ನು ಮುಟ್ಟಿ ಪೂಜೆ ಮಾಡುವುದು, ದಕ್ಷಿಣಾಭಿಮುಖವಾಗಿ ಕುಳಿತುಕೊಂಡು ಪೂಜಾ ಮಾಡುವುದು, ದೇವರ ತೀರ್ಥವನ್ನು ತೆಗೆದುಕೊಳ್ಳದೇ ಭೋಜನ ಮಾಡುವುದು, ನೀಲವಸ್ತ್ರವನ್ನು ಉಟ್ಟುಕೊಂಡು ಪೂಜೆ ಮಾಡುವುದು, ಅವಸರ ವಸರವಾಗಿ ಪೂಜಿಸುವುದು, ಮಂತ್ರ ತಂತ್ರ ಕ್ರಿಯಾಲೋಪದಿಂದ ಪೂಜೆ ಮಾಡುವುದು, ತಿಂದ ಅನ್ನವು ಜೀರ್ಣವಾಗದೇ ಪೂಜೆ ಮಾಡುವುದು, ದೀಪವನ್ನು ಮುಟ್ಟಿ ಆಚಮನ ಮಾಡದೆ ಪೂಜಾ ಮಾಡುವುದು, ಸುಳ್ಳು ಸುಳ್ಳು ಪೂಜೆ ಮಾಡುವುದು, ಮತ್ತೊಬ್ಬರನ್ನು ಬೇಡಿ ತಂದ ಉಪಕರಣಗಳ ಸಹಾಯದಿಂದ ಪೂಜಾ ಮಾಡುವುದು, ಬರೇ ಉಟ್ಟ ಬಟ್ಟೆಯಲ್ಲಿ ಹೊದ್ದುಕೊಳ್ಳದೆ ಪೂಜೆ ಮಾಡುವುದು, ಪೂಜಾ ಮಾಡುವಾಗ ಎದ್ದೆದ್ದು ಹೋಗುವುದು ಮತ್ತು ಬೇರೆ ಬೇರೆ ಕಾರ್ಯಗಳಲ್ಲಿ ನಿರತನಾಗಿದ್ದುಕೊಂಡು ಪೂಜಾ ಮಾಡುವುದು, ಹೀಗೆ ಮೂವತ್ತೆರಡು ಅಪರಾಧಗಳನ್ನು ಪೂಜಾಕಾಲದಲ್ಲಿ ಮಾಡಬಾರದೆಂದು ಶ್ರೀವರಾಹದೇವರೇ ಹೇಳಿದ್ದಾರೆ. ॥ ೬-೧೪ ॥ ಈ ಅಪರಾಧಗಳಿಲ್ಲದಂತೆ ಮಾಡಿದ ಪೂಜೆಯೇ ಭಗವಂತನು ಒಪ್ಪುವ ಪೂಜೆಯು.

ಋಷಯ ಊಚುಃ—

ಅಜ್ಞಾನಾದಥವಾ ಜ್ಞಾನಾದಪರಾದೋ ಯದಾ ಭವೇತ್ ॥ ೧೫ ॥
ತದಾ ತದ್ವಾರಣೋಪಾಯಂ ಕೃಪಯಾ ವದ ನಿಶ್ಚಿತಮ್ ।

ಋಷಿಗಳು ಹೇಳಿದರು—

ತಿಳಿದೋ ತಿಳಿಯದೆಯೋ ಅಪರಾಧಗಳು ಆಗಿಹೋದರೆ ಆಗ ಅವುಗಳ ಪರಿಹಾರೋಪಾಯವನ್ನು ದಯಮಾಡಿ ನಿಶ್ಚಿತವಾಗಿ ಹೇಳಿ. ॥ ೧೫ ॥

ಶೇಷ ಉವಾಚ—

ಸಹಸ್ರನಾಮಪಾಠಾಚ್ಚ ಗೀತಾಪಾರಾಯಣಾದಪಿ ॥ ೧೬ ॥
ತುಲಸೀಪೂಜನಾಚ್ಚ ಸ್ಯಾದಪರಾಧನಿವಾರಣಮ್ ।
ಜಲೇಽಗ್ನೌ ಹೃದಿ ಸೂರ್ಯೇ ಚ ಸ್ಥಂಡಿಲೇ ಪ್ರತಿಮಾಸು ಚ ॥ ೧೭ ॥
ಯಥಾಧಿಕಾರಮೇತೇಷು ವಿದಧ್ಯಾದ್ಧರಿಪೂಜನಮ್ ।
ಅಗ್ನೌ ತು ಕರ್ಮನಿಷ್ಣಾತೋ ಜಲೇ ಸೂರ್ಯೇ ತು ಪಂಡಿತಾಃ ॥ ೧೮ ॥
ಸ್ಥಂಡಿಲೇ ಪ್ರತಿಮಾಯಾಂ ಚಾಽಜ್ಞಾನೀ ಜ್ಞಾನೀ ಹೃದಾಬ್ಜಕೇ ।
ಹವಿಷಾಗ್ನೌ ಜಲೇ ಪುಷ್ಪೈರ್ನಮಸ್ಕೃತ್ವಾ ತು ಭಾಸ್ಕರೇ ॥ ೧೯ ॥
ಸ್ಥಂಡಿಲೇ ಪ್ರತಿಮಾಯಾಂ ಚ ಷೋಡಶೈರುಪಚಾರಕೈಃ ।
ಮಾನಸೈರುಪಚಾರೈಸ್ತು ಸತ್ವಸಂಶೋಧಿತೇ ಹೃದಿ ॥ ೨೦ ॥

ಆಗಚ್ಛೈಃ ಪೂಜಯೇತ್ ಜ್ಞಾನೀ ಭಕ್ತಿಮಾಂಶ್ಚ ವಿಶೇಷತಃ ।
ಅಥವಾ ಸರ್ವದಾ ಪೂಜ್ಯೋ ಹರಿಃ ಕಾಮಮುಮುಕ್ಷುಭಿಃ ॥ ೨೦ ॥
ಶಾಲಗ್ರಾಮಶಿಲಾಚಕ್ರೇ ವಜ್ರಕೀಟವಿನಿರ್ಮಿತೇ ।
ಸ್ಥಾನಂ ಷಟ್ಕಾಧಿಕಂ ಪ್ರೋಕ್ತಂ ವೈಕುಂಠಾದಧಿಕಂ ತಥಾ ॥ ೨೨ ॥
ಶಾಲಗ್ರಾಮಶಿಲಾಚಕ್ರಸ್ಥಾನಂ ಭಗವತಃ ಪ್ರಿಯಮ್ ।
ಅಥ ವಕ್ಷ್ಯಾಮಿ ಮುನಯಶ್ಶಿಲಾಚಕ್ರಪರೀಕ್ಷಣಮ್ ॥ ೨೩ ॥
ಶಿಲಾವರ್ಣಪರೀಕ್ಷಾ ಚ ಪೂಜ್ಯಾಪೂಜ್ಯತ್ವಮೇವ ಚ ।
ಸುದರ್ಶನಸ್ತ್ವೇಕಂ ಚಕ್ರೋ ದ್ವಾಭ್ಯಾಂ ದಾಮೋದರಸ್ಸ್ಮೃತಃ ॥ ೨೪ ॥
ತ್ರಿಚಕ್ರಶ್ಚಾಚ್ಯುತೋ ದೇವಸ್ತ್ರಿಚಕ್ರೋ ವಾ ತ್ರಿವಿಕ್ರಮಃ ।
ಲಕ್ಷ್ಮೀನಾರಾಯಣೋ ದೇವಶ್ಚತುಶ್ಚಕ್ರ ಉದಾಹೃತಃ ॥ ೨೫ ॥
ಜನಾರ್ದನಶ್ಚತುಶ್ಚಕ್ರೋ ವಾಸುದೇವಸ್ತು ಪಂಚಭಿಃ ।
ಪ್ರದ್ಯುಮ್ನಃ ಷಟ್ಸುಚಕ್ರಃ ಸಂಕರ್ಷಣಃ ಸಪ್ತಭಿಃ ಸ್ಮೃತಃ ॥ ೨೬ ॥
ಪುರುಷೋತ್ತಮೋಽಷ್ಟಚಕ್ರಃ ಸ್ಯಾನ್ನೃಸಿಂಹೋ ನವಚಕ್ರಕಃ ।
ದಶಾವತಾರೋ ದಶಭಿರನಿರುದ್ಧಸ್ತತೋಽಧಿಕಃ ॥ ೨೭ ॥
ದ್ವಾದಶಾತ್ಮಾ ದ್ವಾದಶಭಿರತ ಊರ್ಧ್ವಮನಂತಕಃ ।
ಪೂಜನೀಯಾ ಗೃಹಸ್ಥೇನ ವರ್ಣೇನ ಭ್ರಮರೋಪಮಾ ॥ ೨೮ ॥
ಪಕ್ವಜಂಬೂಫಲಾಕಾರಾ ಛತ್ರಧ್ವಜಸ್ವರಾಂಕಿತಾ ।
ಸ್ವರ್ಣರೇಖಾಧರಾ ಸೌಮ್ಯಾ ಸ್ನಿಗ್ಧಾ ಲಘುತರಾವರಾ ॥ ೨೯ ॥
ಚಕ್ರಾಂಕಮಿಥುನೋಪೇತಾ ಪೂಜನೀಯಾ ಶಿಲಾ ದ್ವಿಜೈಃ ।
ಸ್ಥೂಲಾ ಚ ಧೂಸರಾರೂಕ್ಷಾ ನೀರಂಧ್ರಾ ಚಕ್ರವರ್ಜಿತಾ ॥ ೩೦ ॥
ವ್ಯಾತ್ತಾನನಾ ಚಿಹ್ನಹೀನಾ ನ ಪೂಜ್ಯಾ ಗೃಹಿಭಿಶ್ಶಿಲಾ ।
ಅಥ ವಕ್ಷ್ಯೇ ಶೌನಕಾದ್ಯಾಃ ಪಂಚಾಯತನಪೂಜನಮ್ ॥ ೩೦ ॥
ಯದಾಚರಣಮಾತ್ರೇಣ ಸರ್ವಸಿದ್ಧಿಂ ಲಭೇನ್ನರಃ ।
ಬ್ರಹ್ಮಪಂಚಸ್ವರೂಪೇಣ ಸಗುಣತ್ವಮುಪಾಗತಮ್ ॥ ೩೨ ॥
ನಾಮಕ್ರಿಯಾದಿಭೇದೇನ ಭಕ್ತರುಚ್ಯತ್ವಸಿದ್ಧಯೇ ।
ಹರಿಹರೌ ಭಾಸ್ಕರಶ್ಚ ದೇವೀ ಚ ಗಣನಾಯಕಃ ॥ ೩೩ ॥
ಪಂಚಾಯತನಪೂಜೈಷಾ ಕರ್ತವ್ಯಾ ಸ್ಥಾನಭೇದತಃ ।
ಮಧ್ಯೇ ಸ್ವೇಷ್ಟಂ ಪ್ರತಿಷ್ಠಾಪ್ಯ ಚತಸೃಷು ವಿದಿಕ್ಷ್ವಥ ॥ ೩೪ ॥
ಸಂಸ್ಥಾಪ್ಯ ಪೂಜಯೇದನ್ಯಾನ್ವಿಧಿಂ ತಸ್ಯ ವದಾಮಿ ವಃ ।
ಯದಾ ತು ಮಧ್ಯೇ ಗೋವಿಂದಮೀಶಾನ್ಯಾಂ ಶಂಕರಂ ಯಜೇತ್ ॥ ೩೫ ॥

ಆಗ್ನೇಯ್ಯಾಂ ಗಣನಾಥಂ ಚ ನೈರ್ಋತ್ಯಾಂ ಸೂರ್ಯಮೇವ ಚ ।
ವಾಯವ್ಯಾಮಂಬಿಕಾಂ ಚೈವ ಪೂಜಯೇದ್ವಿಷ್ಣುವಲ್ಲಭಃ ॥ ೩೬ ॥
ಯದಾ ತು ಶಂಕರಂ ಮಧ್ಯೇ ಈಶಾನ್ಯಾಂ ಶ್ರೀಪತಿಂ ಯಜೇತ್ ।
ಆಗ್ನೇಯ್ಯಾಂ ತು ತಥಾ ಸೂರ್ಯಂ ನೈರ್ಋತ್ಯಾಂ ಪಾರ್ವತೀಸುತಂ॥ ೩೭ ॥
ವಾಯವ್ಯಾಂ ಚ ತದಾ ಪೂಜ್ಯಾ ಭವಾನೀ ಭವವಲ್ಲಭಾ ।
ಸಹಸ್ರಾಂಶುರ್ಯದಾ ಮಧ್ಯೇ ಈಶಾನ್ಯಾಂ ಪಾರ್ವತೀಪತಿಮ್ ॥ ೩೮ ॥
ಆಗ್ನೇಯ್ಯಾಂ ಗಣನಾಥಂ ಚ ನೈರ್ಋತ್ಯಾಮಚ್ಯುತಂ ತಥಾ ।
ವಾಯವ್ಯಾಂ ಪೂಜಯೇದ್ದೇವೀಂ ಸೂರ್ಯಭಕ್ತಸ್ಸಮಾಹಿತಃ ॥ ೩೯ ॥
ಭವಾನೀಂ ತು ಯದಾ ಮಧ್ಯೇ ಈಶಾನ್ಯಾಂ ಮಾಧವಂ ಯಜೇತ್ ।
ಆಗ್ನೇಯ್ಯಂ ಪಾರ್ವತೀನಾಥಂ ನೈರ್ಋತ್ಯಾಂ ಗಣನಾಯಕಮ್ ॥ ೪೦ ॥
ಪ್ರದ್ಯೋತನಂ ತು ವಾಯವ್ಯಾಂ ದೇವೀಭಕ್ತಃ ಪ್ರಪೂಜಯೇತ್ ।
ಹೇರಂಬಂ ತು ಯದಾ ಮಧ್ಯೇ ಈಶಾನ್ಯಾಮರ್ಚಯೇದ್ಧರಿಮ್ ॥ ೪೧ ॥
ಆಗ್ನೇಯ್ಯಾಂ ಪಂಚವಕ್ತ್ರಂ ತು ನೈರ್ಋತ್ಯಾಂ ಜಗದಂಬಿಕಾಮ್ ।
ವಾಯವ್ಯಾಂ ದ್ಯುಮಣಿಂ ಲಂಬೋದರಭಕ್ತಃ ಪ್ರಪೂಜಯೇತ್ ॥ ೪೨ ॥
ಸ್ವಸ್ಥಾನವರ್ಜಿತಾ ಹ್ಯೇತೇ ದುಃಖಶೋಕಭಯಪ್ರದಾಃ ।
ದ್ವೌ ಶಂಖೌ ನಾರ್ಚಯೇನ್ನಿತ್ಯಂ ತಥಾ ಸೂರ್ಯದ್ವಯಂ ಬುಧಃ ॥ ೪೩ ॥
ವಿಷಮಂ ತು ತ್ರಯಂ ನಾರ್ಚ್ಯಂ ಶಾಲಗ್ರಾಮದ್ವಯಂ ಸಮೇ ।
ಏವಂ ಜ್ಞಾತ್ವಾ ವಿಧಾನೇನ ಪಂಚಾಯತನಪೂಜನಮ್ ॥ ೪೪ ॥
ಕುರ್ವೀತ ಭಕ್ತಿಮಾನ್ವಿಪ್ರಸ್ತತ್ಪ್ರಕಾರಃ ಪ್ರದೃಶ್ಯತೇ ।
ದೇಶಕಾಲಾವನುಸ್ಮೃತ್ಯ ಫಲಂ ಚೋಲ್ಲಿಖ್ಯ ಮಾನಸಮ್ ॥ ೪೫ ॥
ಸಂಕಲ್ಪಂ ಕಲಶಾದ್ಯರ್ಚ್ಯಂ ನ್ಯಾಸಂ ಕುರ್ಯಾದ್ಯಥಾವಿಧಿ ।
ಕರಪಜ್ಜಾನುಕಟಿಷು ನಾಭಿಹೃತ್ಕಂಠಬಾಹುಷು ॥ ೪೬ ॥
ಮುಖಾಕ್ಷಿಮಸ್ತಕೇ ನ್ಯಾಸಂ ವಾಮಾದೌ ಪೌರುಷಂ ಚರೇತ್ ।
ಅಂತ್ಯಾಭಿಃ ಷಡ್ಭಿಸ್ತು ಕರಾದಿನ್ಯಾಸಮಾಚರೇತ್ ॥ ೪೭ ॥
ದೇವಸೂಕ್ತೇನ ವಾ ಕುರ್ಯಾತ್ಕರಾದಿನ್ಯಾಸಮರ್ಚಕಃ ।
ಏವಂ ನ್ಯಾಸವಿಧಿಂ ಕೃತ್ವಾ ಷೋಡಶೈರುಪಚಾರಕೈಃ ॥ ೪೮ ॥
ಪೂಜಯೇತ್ಪೂಜಕಃ ಪೂಜ್ಯಮತಸ್ತಾನ್ಶೃಣುತ ದ್ವಿಜಾಃ ।
ಆವಾಹನಾಸನೇ ಪಾದ್ಯಮರ್ಘ್ಯಮಾಚಮನಂ ತಥಾ ॥ ೪೯ ॥
ಸ್ನಾನಂ ವಸ್ತ್ರೋಪವೀತಂ ಚ ಚಂದನಂ ಪುಷ್ಪಧೂಪಕೇ ।
ದೀಪೋಪಹಾರನಮನ ಪ್ರದಕ್ಷಿಣವಿಸರ್ಜನೇ ॥ ೫೦ ॥

ಏತಾನ್ಪುರುಷಸೂಕ್ತೇನ ಕ್ರಮಾದ್ದದ್ಯಾತ್ತು ಪ್ರತ್ಯೃಚಮ್ ।
ಶಾಲಗ್ರಾಮೇ ನ ವರ್ತೇತ ಆವಾಹನವಿಸರ್ಜನೇ ॥ ೫೦ ॥
ಷೋಡಶತ್ವಸ್ಯ ಸಿದ್ಧ್ಯರ್ಥಂ ತತ್ರ ಪುಷ್ಪಾಂಜಲಿಂ ಕ್ಷಿಪೇತ್ ।
ಏವಂ ಸಂಪೂಜ್ಯ ತತ್ಪೂರ್ತ್ಯೈ ಕುರ್ಯಾದ್ಬ್ರಾಹ್ಮಣಪೂಜನಮ್ ॥ ೫೨ ॥
ಯಥಾ ತಥಾ ಪೂಜಿತೋಽಪಿ ಭಗವಾಂಸ್ತೇನ ತುಷ್ಯತಿ ।
ಬ್ರಾಹ್ಮಣಸ್ತತ್ಪ್ರಿಯೋ ನೂನಂ ಬ್ರಾಹ್ಮಣಾನಾಂ ಸ ಚ ಪ್ರಿಯಃ ॥ ೫೩ ॥
ನ ತಯೋರಂತರಂ ಕಿಂಚಿತ್ಪಶ್ಯೇದ್ಭಾಗವತೋ ಜನಃ ।
ಯಥಾವಿಪ್ರಮುಖೇನಾಯಮತಿಪ್ರೀತ್ಯಾ ಮುನೀಶ್ವರಾಃ ॥ ೫೪ ॥
ಅಗ್ನ್ಯಾದಿಷು ಹವಿರ್ದಾನಂ ತಥಾನಾತ್ಯಯಮಾದರಾತ್।
ದ್ವಿಜೇ ತುಷ್ಟೇಽಖಿಲಂ ತುಷ್ಟಂ ಜಗತ್ಸ್ಥಾವರಜಂಗಮಮ್ ॥ ೫೫ ॥
ತಸ್ಮಿನ್ರುಷ್ಟೇಽಖಿಲಂ ರುಷ್ಟಮತಃ ಪೂಜ್ಯತಮೋ ದ್ವಿಜಃ ।
ಯೋ ದ್ವೇಷ್ಟಿ ಬ್ರಾಹ್ಮಣಂ ಮೂಢೋ ಪ್ರತ್ಯಕ್ಷಂ ಭಗವತ್ತನುಮ್ ॥ ೫೬ ॥
ತಮೇವ ದ್ವೇಷ್ಟ್ಯಸೌ ಸರ್ವಂ ತತ್ಕೃತಂ ವಿಫಲಂ ಭವೇತ್ ।
ವಿಪ್ರೇಷು ಕ್ರುದ್ಧಮಾನೇಷು ಶಪತ್ಸ್ವಪಿ ವಿಶೇಷತಃ ॥ ೫೭ ॥
ನ ವಿಕ್ರಿಯೇತ ಯತ್ಸ್ವಾಂತಂ ತೇನ ವಿಷ್ಣುರ್ವಶೀಕೃತಃ ।
ಮಹಾರಾಜ್ಯಂ ಪ್ರಿಯಂ ನೈವ ವೈಕುಂಠಂ ನ ತಥಾ ಪ್ರಿಯಮ್ ॥ ೫೮ ॥
ಪ್ರಿಯಾ ನೈವ ತಥಾ ಲಕ್ಷ್ಮೀರ್ಯಥಾಸ್ಯ ಬ್ರಾಹ್ಮಣಃ ಪ್ರಿಯಃ ।
ತಸ್ಮಾದಾದೌ ದ್ವಿಜಃ ಪೂಜ್ಯೋ ಗೃಹೀತ್ವಾ ಚರಣೋದಕಮ್ ॥ ೫೯ ॥
ವಿಷ್ಣುಪಾದೋದಕಂ ಪಶ್ಚಾದ್ಗೃಹ್ಣೀಯಾದ್ವಿಧಿಕೋವಿದಃ ।
ಏವಂ ಯಃ ಪೂಜಯೇದ್ಭಕ್ತ್ಯಾ ಭಗವಂತಮನನ್ಯಧೀಃ ॥ ೬೦ ॥
ಷೋಡಶೈರುಪಚಾರೈಶ್ಚ ತತ್ಫಲಂ ಮನ್ನಿಬೋಧತ ।
ಆವಾಹನಾದರ್ಥಸಿದ್ಧಿರಾಸನಾದುತ್ತಮಂ ಗೃಹಮ್ ॥ ೬೧ ॥
ಪಾದ್ಯಾತ್ಸಂಪೂಜ್ಯತೇ ಲೋಕೇಽನರ್ಘ್ಯೋಽರ್ಘ್ಯಾಜ್ಜಾಯತೇ ಪುಮಾನ್ ।
ಸೋಮಪಾನಂ ಲಭೇದ್ವಿಪ್ರಸ್ತ್ವಮಾಚಮನೀಯತಃ ॥ ೬೨ ॥
ಪಂಚಾಮೃತಪ್ರದಾನೇನ ಗೋಕುಲೇ ದಧಿದುಗ್ಧಯುಕ್ ।
ಶುದ್ಧಸ್ನಾನೇನ ಗಂಗಾಯಾಂ ನಿತ್ಯಸ್ನಾನಂ ಲಭೇನ್ನರಃ ॥ ೬೩॥
ವಸ್ತ್ರಾತ್ಸುವಸ್ತ್ರಾಮೇತಿ ಬ್ರಹ್ಮತ್ವಮುಪವೀತಕಾತ್ ।
ಚಂದನಾಕ್ಷತಪುಷ್ಪೈಶ್ಚ ಲಭತೇ ಭಾಗ್ಯಸಂಪದಮ್ ॥ ೬೪ ॥
ಧೂಪಾದಿಂದುಪುರೇವಾಸಸ್ತಮೋನಾಶಶ್ಚ ದೀಪಕಾತ್ ।
ನೈವೇದ್ಯಾದ್ಭೋಜ್ಯಸಂಪತ್ತಿಸ್ತಾಂಬೂಲಾದ್ದುಃಖನಾಶನಮ್ ॥ ೬೫ ॥

ದಕ್ಷಿಣಾದಾನತಃ ಪ್ರಾಪ್ತಿರಿಂದಿರಾಚಸುಪುಷ್ಕಲಾ ।
ಪ್ರದಕ್ಷಿಣೇ ಪ್ರವಾಸತ್ವಂ ನಮಸ್ಕೃತ್ಯಾ ನಮಸ್ಕೃತಿಃ ॥ ೬೬ ॥
ಸ್ತುತ್ಯಾ ಚ ಸ್ತುತ್ಯತಾಂ ಲೋಕೇ ವಿಸರ್ಗಾದವಿರೋಧತಾ ।
ಪ್ರತ್ಯೇಕಮುಪಚಾರಾಣಾಂ ಷೋಡಶಾನಾಮಿದಂ ಫಲಮ್ ॥ ೬೭ ॥
ಸಕಲೈಃ ಸಫಲಪ್ರಾಪ್ತಿರ್ಜಾಯತೇ ಸನಕಾದಯಃ ।
ವಿಧಿರೇಷಾ ಮಯಾ ಪ್ರೋಕ್ತಃ ಪಂಚಾಯತನಪೂಜನೇ ॥ ೬೮ ॥
ಅನೇನಾಚರತಾಂ ಪುಂಸಾಮೈಹಿಕಾಮುಷ್ಮಿಕಂ ಫಲಮ್ ।
ಪ್ರಯಾಗೇ ವಿಧಿನಾನೇನ ಮಾಘಮಾಸೇ ವಿಶೇಷತಃ ॥ ೬೯ ॥
ಫಲಾನ್ಯನಂತ್ಯಸುಖಾನ್ಯೇವ ಕುರ್ವತಾಂ ಭವತಿ ಧ್ರುವಮ್ ।
ದರಿದ್ರಾಣಾಮಪಿ ವಿಧಿಃ ಪ್ರೋಕ್ತೋ ಭಕ್ತಿಮತಾಮಯಮ್ ॥ ೭೦ ॥
ಮಹದ್ದಾನಾನ್ನದಾನಾದಿರೂಪಸ್ತು ಧನಿನಾಂ ಪರಃ ।
ಕಾರ್ಯಾಣಿ ಧನಿಭಿಸ್ತಸ್ಮಾದ್ದಾನಾನಿ ಚ ಯಥಾವಿಧಿ ॥ ೭೧ ॥
ತೈರೇವ ಮಾಧವೋ ದೇವಸ್ತೇಭ್ಯಸ್ತುಷ್ಯತಿ ಸರ್ವದೃಕ್ । ॥ ೭೨ ॥

॥ ಇತಿ ಪಂಚಚತ್ವಾರಿಂಶೋಽಧ್ಯಾಯಃ ॥

ಶೇಷದೇವರು ಹೇಳಿದರು—

ಶ್ರೀಭಗವದ್ಗೀತೆಯ ಪಠನದಿಂದಲೂ, ಶ್ರೀವಿಷ್ಣುಸಹಸ್ರನಾಮಗಳ ಪಾರಾಯಣ ದಿಂದಲೂ, ಶ್ರೀತುಳಸ್ಯರ್ಚನೆಯಿಂದಲೂ ಈ ಅಪರಾಧಗಳಿಂದುಂಟಾಗುವ ದೋಷಗಳು ಪರಿಹಾರವಾಗುವುವು. ॥ ೧೬ ॥ ನೀರು, ಅಗ್ನಿ, ಹೃದಯದಲ್ಲಿ, ಸೂರ್ಯನಲ್ಲಿ, ಪರಿಷ್ಕೃತ ಪ್ರದೇಶದಲ್ಲಿ ಮತ್ತು ಪ್ರತಿಮೆಯಲ್ಲಿ ಅವರವರ ಅಧಿಕಾರಕ್ಕೆ ತಕ್ಕಂತೆ ಶ್ರೀಹರಿಯನ್ನು ಅನುಸಂಧಾನ ಮಾಡಿ ಪೂಜಾ ಮಾಡಬಹುದು. ಅಗ್ನಿಹೋತ್ರಾದಿಗಳನ್ನಿಟ್ಟುಕೊಂಡು ಕರ್ಮನಿಷ್ಠಾತರಾಗಿ ರುವವರು ಪೂಜಾ ಮಾಡಬಹುದು. ಸೂರ್ಯನಲ್ಲಿರುವ ನಾರಾಯಣನನ್ನು, ಜಲದಲ್ಲಿ ನೀರಿಗೆ ಆಶ್ರಯನಾದ ನಾರಾಯಣನನ್ನು ಅನುಸಂಧಾನಪೂರ್ವಕ ಜ್ಞಾನಿಗಳು ಪೂಜಿಸಬಹುದು. ಸ್ಥಂಡಿಲ ಮತ್ತು ಪ್ರತಿಮಾಗಳಲ್ಲಿ ಅಜ್ಞಾನಿಯೂ ಮತ್ತು ಜ್ಞಾನಿಯು ಹೃತ್ಕಮಲದಲ್ಲಿಯೂ ಪೂಜಿಸಬಹುದು. ಅಗ್ನಿಯಲ್ಲಿ ಹವಿಸ್ಸಿನಿಂದಲೂ, ನೀರಿನಲ್ಲಿ ಹೂವಿನಿಂದಲೂ, ಸೂರ್ಯನಲ್ಲಿ ನಮಸ್ಕಾರ ಗಳಿಂದಲೂ, ಸ್ಥಂಡಿಲ ಮತ್ತು ಪ್ರತಿಮಾಗಳಲ್ಲಿ ಹದಿನಾರು ಉಪಚಾರಗಳಿಂದಲೂ ಪೂಜಿಸಬೇಕು. ಸತ್ವಗುಣದಿಂದ ಶೋಧಿತವಾಗಿರುವ ಹೃದಯದಲ್ಲಿರತಕ್ಕ ಶ್ರೀಲಕ್ಷ್ಮೀನಾರಾಯಣನನ್ನು ಮಾನಸಿಕವಾದ ಉಪಚಾರಗಳಿಂದ ಪೂಜಾ ಮಾಡಬೇಕು. ॥ ೧೭-೨೦ ॥ ಜ್ಞಾನಿಯಾದವನು ಲೆಕ್ಕವಿಲ್ಲದಷ್ಟು ಬಾರಿ ಪೂಜಾ ಮಾಡಬಹುದು; ಭಕ್ತಿಯುಳ್ಳವನು ಇನ್ನು ವಿಶೇಷವಾಗಿ ಪೂಜಿಸಬಹುದು; ಮೋಕ್ಷಾಪೇಕ್ಷಿಗಳಾದವರು ಯಾವಾಗಲೂ ಪೂಜೆ ಮಾಡಬಹುದು. ॥ ೨೧ ॥ ಶ್ರೀಹರಿಯ ಸಾನ್ನಿಧ್ಯವು ಇದುವರೆಗೂ ಉಲ್ಲೇಖವಾಗಿರುವ ಆರು ಸ್ಥಾನಗಳಿಗಿಂತಲೂ ಮತ್ತು ವೈಕುಂಠದಲ್ಲಿರುವುದಕ್ಕಿಂತಲೂ ಹೆಚ್ಚು ವಜ್ರಕೀಟದಿಂದ ಕೊರೆಯಲ್ಪಟ್ಟ ಚಕ್ರಗಳುಳ್ಳ ಶಾಲಗ್ರಾಮ

ಶಿಲೆಗಳಲ್ಲಿದೆ. ॥ ೨೨ ॥ ಶಾಲಗ್ರಾಮ ಶಿಲಾಚಕ್ರಗಳಲ್ಲಿ ಇರಲು ಶ್ರೀಹರಿಗೆ ಬಹಳ ಇಷ್ಟವು. ಹೇ ಸನಕಾದಿ ಮುನಿಗಳೇ! ಈ ಶಾಲಗ್ರಾಮಶಿಲೆಗಳಲ್ಲಿರುವ ಚಕ್ರಗಳ ಪರೀಕ್ಷೆಯ ಬಗ್ಗೆ ಹೇಳುವೆನು. ॥ ೨೩ ॥ ಶಿಲೆಯ ಬಣ್ಣವನ್ನು ಮತ್ತು ಪೂಜೆಗೆ ಅರ್ಹವೋ ಎಂದು ಪರೀಕ್ಷೆ ಮಾಡುವುದು ಹೇಗೆ ಎಂಬುದನ್ನು ಹೇಳುವೆನು. ಒಂದು ಚಕ್ರವುಳ್ಳದ್ದು ಸುದರ್ಶನಚಕ್ರವು, ಎರಡು ಚಕ್ರಗಳುಳ್ಳದ್ದು ದಾಮೋದರ ಶಾಲಗ್ರಾಮವು. ॥ ೨೪ ॥ ಮೂರು ಚಕ್ರಗಳುಳ್ಳದ್ದು ಅಚ್ಯುತ ಅಥವಾ ತ್ರಿವಿಕ್ರಮ ಶಾಲಗ್ರಾಮವು. ನಾಲ್ಕು ಚಕ್ರವುಳ್ಳದ್ದು ಶ್ರೀಲಕ್ಷ್ಮೀನಾರಾಯಣಶಾಲಗ್ರಾಮವು. ॥ ೨೫ ॥ ನಾಲ್ಕು ಚಕ್ರಗಳುಳ್ಳದ್ದು ಜನಾರ್ದನ ಶಾಲಗ್ರಾಮವೂ ಕೂಡ. ಐದು ಚಕ್ರಗಳುಳ್ಳದ್ದು ವಾಸುದೇವ ಶಾಲಗ್ರಾಮವು. ಆರು ಚಕ್ರಗಳುಳ್ಳದ್ದು ಪ್ರದ್ಯುಮ್ನಶಾಲಗ್ರಾಮವೂ; ಏಳು ಇರತಕ್ಕದ್ದು ಸಂಕರ್ಷಣಶಾಲಗ್ರಾಮ. ॥ ೨೬ ॥ ಎಂಟು ಚಕ್ರಗಳುಳ್ಳದ್ದು ಪುರುಷೋತ್ತಮಶಾಲಗ್ರಾಮ, ಒಂಭತ್ತುಚಕ್ರವುಳ್ಳದ್ದು ನೃಸಿಂಹ ಸಾಲಿಗ್ರಾಮವು, ಹತ್ತು ಚಕ್ರಗಳುಳ್ಳದ್ದು ದಶಾವತಾರ ಶಾಲಗ್ರಾಮವು, ಹನ್ನೊಂದು ಚಕ್ರವುಳ್ಳದ್ದು ಅನಿರುದ್ಧಶಾಲಗ್ರಾಮ. ॥ ೨೭ ॥ ಹನ್ನೆರಡು ಚಕ್ರಗಳುಳ್ಳದ್ದು ದ್ವಾದಶಾತ್ಮಕನೆಂಬ ಶಾಲಗ್ರಾಮವು. ಹನ್ನೆರಡಕ್ಕಿಂತ ಹೆಚ್ಚು ಚಕ್ರಗಳಿದ್ದರೆ ಅದು ಅನಂತನೆಂಬ ಶಾಲಗ್ರಾಮವು. ಗೃಹಸ್ಥರು ಭ್ರಮರದ ಬಣ್ಣದ ಶಾಲಿಗ್ರಾಮವನ್ನು ಪೂಜಿಸಬೇಕು. ॥ ೨೮ ॥ ಪಕ್ವವಾಗಿರತಕ್ಕ ನೇರಳೇಹಣ್ಣಿನ ಆಕಾರವುಳ್ಳ, ಛತ್ರಿ, ಧ್ವಜ, ಸ್ವರ ಮತ್ತು ಬಂಗಾರದ ರೇಖೆಯುಳ್ಳ, ಸೌಮ್ಯವಾಗಿರುವ, ಸುಂದರವಾಗಿರುವ ಹಗುರವಾಗಿರುವ ಮತ್ತು ಚಕ್ರಾಂಕಗಳ ಜೋಡಿಯಿಂದ ಕೂಡಿರತಕ್ಕ ಶಾಲಗ್ರಾಮವನ್ನು ದ್ವಿಜರು ಪೂಜಿಸಬೇಕು, ಭಾರವಾಗಿರುವ ಧೂಳು ಬಣ್ಣವಿರುವ, ಕ್ರೂರವಾಗಿರುವ, ರಂಧ್ರವಿಲ್ಲದ, ಚಕ್ರವಿಲ್ಲದ, ತೆರೆದಬಾಯುಳ್ಳ, ಚಿಹ್ನೆಗಳೇ ಇಲ್ಲದ ಶಾಲಗ್ರಾಮಶಿಲೆಗಳು ಗೃಹಸ್ಥರಿಂದ ಪೂಜಿಸಲ್ಪಡಬಾರದು. ಶೌನಕಾದಿಗಳೇ! ಈಗ ಪಂಚಾಯತನ ಪೂಜಾ ಬಗ್ಗ ಹೇಳುವೆನು. (ಈ ಪಂಚಾಯತನಪೂಜೆಯು ವಿಷ್ಣುಭಕ್ತರಿಗೆ ನಿಷಿದ್ಧವಾದುದು. ಆಧಾರ-ಶತಾಪರಾಧಸ್ತೋತ್ರ, ಬ್ರಹ್ಮಾಂಡಪುರಾಣ) ॥ ೨೯-೩೧ ॥ ಈ ಪಂಚಾಯತನ ಪೂಜಾವನ್ನುಮಾಡುವವನು ಎಲ್ಲಸಿದ್ಧಿಗಳನ್ನುಹೊಂದುವನು. ತನ್ನವಿವಿಧ ಭಕ್ತರ ಅಪೇಕ್ಷೆಗೆ ತಕ್ಕಂತೆ ಕ್ರಿಯೆ ಮತ್ತುನಾಮಗಳಿಂದ ಬೇರೆ ಬೇರೆಯಾದ ಶ್ರೀಹರಿ, ಹರ, ಸೂರ್ಯ, ದೇವೀ ಮತ್ತು ಗಣೇಶ ಇದೇ ಈ ಐದು ರೂಪವುಳ್ಳ ದೇವತೆಗಳು. ॥ ೩೨-೩೩ ॥ ಈ ಪಂಚಾಯತನಪೂಜೆಯಲ್ಲಿ ದೇವತೆಗಳನ್ನು ಬೇರೆ ಬೇರೆ ಸ್ಥಾನಗಳಲ್ಲಿಟ್ಟು ಪೂಜಿಸಬೇಕು. ಮಧ್ಯದಲ್ಲಿ ತಮ್ಮ ತಮ್ಮ ಇಷ್ಟದೇವತೆಯನ್ನು ಇಟ್ಟು ಇನ್ನುನಾಲ್ಕು ದಿಕ್ಕುಗಳಲ್ಲಿಯೂ ಉಳಿದ ನಾಲ್ಕು ದೇವತೆಗಳನ್ನು ಕೂಡಿಸಿ ಪೂಜಿಸಬೇಕು. ಈ ಪೂಜೆಯ ವಿಧಿಯನ್ನು ಹೇಳುವೆನು, ಕೇಳಿರಿ. ಮಧ್ಯದಲ್ಲಿ ಶ್ರೀನಾರಾಯಣನ ಮೂರ್ತಿಯನ್ನಿಟ್ಟರೆ, ಈಶಾನ್ಯದಲ್ಲಿ ಶ್ರೀಶಂಕರನನ್ನು, ಆಗ್ನೇಯದಿಕ್ಕಿನಲ್ಲಿ ಗಣೇಶನನ್ನು, ನೈರುತ್ಯದಲ್ಲಿ ಸೂರ್ಯನನ್ನು ಮತ್ತು ವಾಯವ್ಯದಲ್ಲಿ ಪಾರ್ವತೀದೇವಿಯನ್ನು ಇಟ್ಟು ಪೂಜಿಸಬೇಕು. ಈವಿಧಾನವನ್ನು ವಿಷ್ಣುಭಕ್ತರು (ವಿಷ್ಣುಭಕ್ತರು ಎನ್ನುವುದಕ್ಕೆ ಸ್ಮಾರ್ತವೈಷ್ಣವರೆಂದರ್ಥ, ಶುದ್ಧವೈಷ್ಣವರಲ್ಲ) ಅನುಸರಿಸಬೇಕು. ॥ ೩೪-೩೬ ॥ ಶಿವಭಕ್ತರು ಶಿವನ ಮೂರ್ತಿಯನ್ನು ಮಧ್ಯದಲ್ಲಿಟ್ಟರೆ ಈಶಾನ್ಯದಲ್ಲಿ ವಿಷ್ಣುವಿನ ಮೂರ್ತಿಯನ್ನು ಉಳಿದ ಮೂರು ದಿಕ್ಕುಗಳಲ್ಲಿ ಕ್ರಮವಾಗಿ ಸೂರ್ಯ, ಗಣೇಶ ಮತ್ತು ಪಾರ್ವತಿ ಇವರ ವಿಗ್ರಹಗಳನ್ನಿಟ್ಟು ಪೂಜಾ ಮಾಡಬೇಕು. ಸೂರ್ಯನ ವಿಗ್ರಹವನ್ನು ಮಧ್ಯದಲ್ಲಿಟ್ಟರೆ ಈಶಾನ್ಯದಲ್ಲಿ ಶಿವನ ವಿಗ್ರಹವನ್ನು, ಆಗ್ನೇಯದಲ್ಲಿ ಗಣಪತಿಯ, ನೈರುತ್ಯದಲ್ಲಿ ಶ್ರೀಹರಿಯ ಮತ್ತು ವಾಯವ್ಯದಲ್ಲಿ ಪಾರ್ವತೀದೇವಿಯ ವಿಗ್ರಹವನ್ನಿಟ್ಟು

ಪೂಜಿಸತಕ್ಕದ್ದು. ಇದು ಸೂರ್ಯಾರಾಧಕರು ಅನುಸರಿಸಬೇಕಾದ ಪದ್ಧತಿಯು. ॥ ೩೭-೩೯ ॥ ಶ್ರೀಪಾರ್ವತೀದೇವಿಯ ಮೂರ್ತಿಯನ್ನು ಮಧ್ಯದಲ್ಲಿಟ್ಟರೆ, ಈಶಾನ್ಯದಲ್ಲಿ ಶ್ರೀವಿಷ್ಣುವಿನ, ಆಗ್ನೇಯದಲ್ಲಿ ಶಿವನ, ನೈರುತ್ಯದಲ್ಲಿ ಗಣಪತಿಯ ಮತ್ತು ವಾಯವ್ಯದಲ್ಲಿ ಸೂರ್ಯನ ವಿಗ್ರಹವನ್ನಿಟ್ಟು ಪೂಜಿಸತಕ್ಕದ್ದು. ಇದು ದೇವಿಭಕ್ತರು ನುಸರಿಸಬೇಕಾದ ಪದ್ಧತಿಯು. ಗಣೇಶನನ್ನು ಮಧ್ಯದಲ್ಲಿಟ್ಟರೆ ಈಶಾನ್ಯದಲ್ಲಿ ಹರಿಯ, ಆಗ್ನೇಯದಲ್ಲಿ ಶಿವನ, ನೈಋತ್ಯದಲ್ಲಿ ಪಾರ್ವತಿಯ ಮತ್ತು ವಾಯವ್ಯದಲ್ಲಿ ಸೂರ್ಯನ ಮೂರ್ತಿಗಳನ್ನಿಟ್ಟು ಪೂಜಿಸಬೇಕು. ಇದು ಗಾಣಪತ್ಯರು ಅನುಸರಿಸಬೇಕಾದ ಪದ್ಧತಿಯು. ॥ ೪೦-೪೨ ॥ ಸ್ಥಾನಪಲ್ಲಟವಾದರೆ ಸ್ವಸ್ಥಾನಗಳಿಂದ ವಂಚಿತರಾದ ಈ ದೇವತೆಗಳು ದುಃಖ, ಶೋಕ ಮತ್ತು ಭಯವನ್ನು ಅರ್ಚಕನಿಗೆ ಕೊಡತಕ್ಕವರಾಗುತ್ತಾರೆ. ಪ್ರತಿನಿತ್ಯವೂ ಎರಡು ಶಂಖಗಳನ್ನೂ ಎರಡು ಸೂರ್ಯಮೂರ್ತಿಗಳನ್ನೂ ಪೂಜಿಸಬಾರದು. ॥ ೪೩ ॥ ಬೆಸ ಸಂಖ್ಯೆಯಲ್ಲಿ ಮೂರು ಶಾಲಗ್ರಾಮವನ್ನು , ಸಮಸಂಖ್ಯೆಯಲ್ಲಿ ಎರಡು ಶಾಲಗ್ರಾಮವನ್ನು ಇಟ್ಟು ಪೂಜಾ ಮಾಡಬಾರದು. ಈ ರೀತಿಯಾಗಿ ಅರ್ಥ ಮಾಡಿಕೊಂಡು ಪಂಚಾಯತನಪೂಜಾ ಮಾಡಬೇಕು. ॥ ೪೪ ॥ ಈ ಪೂಜಾವನ್ನು ಭಕ್ತಿಯಿಂದ ಮಾಡಬೇಕು. ಅದರ ವಿಧಿವಿಧಾನವನ್ನು ಇಲ್ಲಿ ಹೇಳುತ್ತೇನೆ. ದೇಶಕಾಲಗಳನ್ನು ಸ್ಮರಿಸಿ ಉದ್ದಿಷ್ಟವಾದ ಫಲವನ್ನು ಮನಸ್ಸಿನಲ್ಲಿ ಪ್ರಕಟಿಸಿ ಸಂಕಲ್ಪವನ್ನು ಕಲಶಾರ್ಚನೆಯನ್ನು ಮಾಡಬೇಕು. ವಿಧಿವತ್ತಾಗಿ ಕರನ್ಯಾಸಾದಿಗಳನ್ನು ಮಾಡಬೇಕು. ಕೈ, ಕಾಲು, ಮಂಡಿ, ಸೊಂಟ, ಹೊಕ್ಕುಳು, ಹೃದಯ, ಕುತ್ತಿಗೆ, ಬಾಹುಗಳು, ಮುಖ,ಕಣ್ಣುಗಳು ಮತ್ತು ತಲೆ ಈ ಅಂಗಗಳಲ್ಲಿ ಎಡಭಾಗದಿಂದ ಪ್ರಾರಂಭಿಸಿ ಸ್ಪರ್ಶಮಾಡುತ್ತ ಪುರುಷಸೂಕ್ತನ್ಯಾಸವನ್ನು ಮಾಡಬೇಕು. ಕಡೆಯ ಆರು ಋಕ್ಕುಗಳಿಂದ ಕರನ್ಯಾಸವನ್ನು ಮಾಡಬೇಕು. ಅರ್ಚಕನು ದೇವಸೂಕ್ತದಿಂದ ಲಾದರೂ ಕರಾದಿನ್ಯಾಸವನ್ನು ಮಾಡಬಹುದು. ಈ ರೀತಿ ಅಂಗನ್ಯಾಸ ಕರನ್ಯಾಸಾದಿಗಳನ್ನು ಅರ್ಚಕನು ಮಾಡಿ ಅನಂತರ ಷೋಡಶೋಪಚಾರಗಳಿಂದ ಈ ಪಂಚಾಯತನದ ಐದು ದೇವತೆಗಳನ್ನೂ ಪೂಜೆ ಮಾಡಬೇಕು. ॥ ೪೫-೪೮ ॥ ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ ಉಪವೀತ, ಗಂಧ, ಹೂವು, ಧೂಪ, ದೀಪ, ನೈವೇದ್ಯ, ನಮಸ್ಕಾರ, ಪ್ರದಕ್ಷಿಣೆ, ವಿಸರ್ಜನೆ-ಈ ರೀತಿಯಾಗಿ ಹದಿನಾರು ಸೇವಾಗಳನ್ನೊಳಗೊಂಡ ಪೂಜೆಯೇ ಷೋಡಶೋಪಚಾರ. (ಪ್ರದಕ್ಷಿಣೆ ಮತ್ತು ನಮಸ್ಕಾರವನ್ನು ಒಂದೇ ಸೇವೆಯೆಂದು ಪರಿಗಣಿಸಿದರೆ, ಆಗ ಮಂಗಳಾರತಿಯನ್ನೂ ಸೇರಿಸಿ ಹದಿನಾರು ಸೇವೆಗಳು.) ॥ ೪೯-೫೦ ॥ ಈ ಹದಿನಾರು ಸೇವಾಗಳನ್ನು ಕ್ರಮವಾಗಿ ಪುರುಷಸೂಕ್ತದ ಋಕ್ಕುಗಳನ್ನು ಹೇಳುತ್ತಾ ಮಾಡಬೇಕು. ಶಾಲಗ್ರಾಮಕ್ಕೆ ಪೂಜಾ ಮಾಡುವಾಗ ''ಆವಾಹನ'' ವಿಸರ್ಜನಗಳಿಲ್ಲ. ॥ ೫೦ ॥ ಈ ಹದಿನಾರು ಪೂಜೆಗಳ ಸಿದ್ಧಿಗಾಗಿ ದೇವರುಗಳ ಮೇಲೆ ಮಂತ್ರಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಪೂಜೆಯ ಸಂಪೂರ್ಣಫಲ ಲಭಿಸಲು ಬ್ರಾಹ್ಮಣಪೂಜೆಯನ್ನು ಮಾಡಬೇಕು. ॥ ೫೧ ॥ ಬ್ರಾಹ್ಮಣನು ಭಗವಂತನಿಗೆ ಪ್ರಿಯನು. ಭಗವಂತನೂ ಬ್ರಾಹ್ಮಣನಿಗೆ ಬೇಕಾದವನೇ. ಹೇಗೆ ಪೂಜಾ ಮಾಡಿ ದರೂ ಹಾಗೆಯೇ ಅದಕ್ಕೇನೇ ಬ್ರಾಹ್ಮಣಪೂಜೆಯಿಂದ ಭಗವಂತನು ಪ್ರೀತನಾಗುವನು. ॥ ೫೩ ॥ ಭಗವದ್ಭಕ್ತರು ಬ್ರಾಹ್ಮಣನಿಗೂ, ಭಗವಂತನಿಗೂ ವ್ಯತ್ಯಾಸವನ್ನು ತಿಳಿಯಬಾರದು. (ಬ್ರಾಹ್ಮಣಾಂತರ್ಯಾಮಿಯಾಗಿ ಭಗವಂತನೇ ಪೂಜಾ ಸ್ವೀಕಾರ ಮಾಡುವನೆಂದರ್ಥ). ಭಗವಂತನು ಬ್ರಾಹ್ಮಣಮುಖದಿಂದ ಹೇಗೆ ಸಂತೋಷವಾಗಿ ಭೋಜನಮಾಡುತ್ತಾನೋ, ಹಾಗೆ ಅಗ್ನ್ಯಾದಿಗಳಲ್ಲಿ ಮಾಡಿದ ಹವಿರ್ದಾನವನ್ನು ಆದರದಿಂದ ಭೋಜನ ಮಾಡುವುದಿಲ್ಲ.

ಬ್ರಾಹ್ಮಣನು ಸಂತುಷ್ಟನಾದರೆ, ಚರಾಚರ ಜಗತ್ತೇ ಸಂತೋಷಪಡುವುದು. ॥ ೫೪-೫೫ ॥ ಪೂಜ್ಯನಾದ ಬ್ರಾಹ್ಮಣನು ಕ್ರುದ್ಧನಾದರೆ ಎಲ್ಲವೂ ಕೋಪಿಸಿಕೊಂಡಂತೆಯೇ ಸರಿ. ಯಾರು ಬ್ರಾಹ್ಮಣನನ್ನು ದ್ವೇಷಿಸುತ್ತಾರೋ ಅವರು ಪ್ರತ್ಯಕ್ಷವಾಗಿ ಭಗವಂತನನ್ನೇ ದ್ವೇಷಿಸುತ್ತಾರೆ. ॥ ೫೬ ॥ ಆದ್ದರಿಂದ ಬ್ರಾಹ್ಮಣರನ್ನು ದ್ವೇಷಿಸಿದವನ ಸಕಲ ಸತ್ಕರ್ಮಗಳೂ ವ್ಯರ್ಥವಾಗುವುವು. ಬ್ರಾಹ್ಮಣರು ಕೋಪಿಸಿಕೊಂಡರೂ, ಅವರಿಂದ ಶಾಪಗ್ರಸ್ತನಾದರೂ ಯಾರು ಮಾನಸಿಕವಿಕಾರವನ್ನು ಹೊಂದುವುದಿಲ್ಲವೋ ಅಂತಹವನಿಗೆ ಶ್ರೀವಿಷ್ಣುವೂ ಕೂಡ ವಶನಾಗಿರುವನು. ಇಂತಹ ಬ್ರಾಹ್ಮಣನು ಪ್ರಿಯವಾದಂತೆ ಶ್ರೀಹರಿಗೆ ಮಹಾರಾಜ್ಯಾಧಿಪತ್ಯದಿಂದಲಾಗಲೀ ಮತ್ತು ವೈಕುಂಠಾಧಿಪತ್ಯದಿಂದಲಾಗಲೀ ಪ್ರಿಯತ್ವವು ಲಭಿಸುವುದಿಲ್ಲ. ಬ್ರಾಹ್ಮಣನು ಪ್ರಿಯವಾಗುವಷ್ಟು ಶ್ರೀಲಕ್ಷ್ಮೀದೇವಿಯೂ ಇವನಿಗೆ ಪ್ರಿಯನಾಗುವುದಿಲ್ಲ. (ಬ್ರಾಹ್ಮಣಾದರಕ್ಕಾಗಿಯೇ ಹೀಗೆ ಹೇಳಲ್ಪಟ್ಟಿದೇ ಹೊರತು ಶ್ರೀಲಕ್ಷ್ಮೀದೇವಿಯಲ್ಲಿ ಬ್ರಾಹ್ಮಣನಿಗಿಂತ ಕಡಿಮೆ ಪ್ರೀತಿಯೆಂದು ತಿಳಿಯಬಾರದು.) ಆದ್ದರಿಂದ ಪೂಜಾದಿಗಳನ್ನು ಪ್ರಾರಂಭಿಸುವ ಮೊದಲು ಬ್ರಾಹ್ಮಣರ ಪಾದಪ್ರಕ್ಷಾಳನ ಮಾಡಿ ಆ ಉದಕವನ್ನು ಪ್ರೋಕ್ಷಿಸಿಕೊಳ್ಳಬೇಕು. ॥ ೫೭-೫೯ ॥ ಅನಂತರ ವಿಷ್ಣುಪಾದೋದಕವನ್ನು ಸ್ವೀಕರಿಸಬೇಕು. ಈ ರೀತಿಯಾಗಿ ಬುದ್ಧಿವಂತನಾಗಿ ಯಾರು ವಿಧಿಯನ್ನು ತಿಳಿದು ಅನುಸರಿಸಿ ಅನ್ಯಾಸಕ್ತಮನಸ್ಸಿಲ್ಲದೆ ಭಗವಂತನನ್ನು ಷೋಡಶೋಪಚಾರಗಳಿಂದ ಪೂಜಿಸುತ್ತಾರೋ ಅವರಿಗೆ ಒದಗುವ ಫಲಪ್ರಾಪ್ತಿಯನ್ನು ಹೇಳುತ್ತೇನೆ, ತಿಳಿಯಿರಿ. ಆವಾಹನೆ ಮಾಡುವುದರಿಂದ ಅಪೇಕ್ಷೆ ಸಿದ್ಧಿಯೂ, ಆಸನ ಕೊಡುವುದರಿಂದ ಉತ್ತಮವಾದ ಮನೆಯೂ, ಪಾದ್ಯವನ್ನು ಸಮರ್ಪಿಸುವುದರಿಂದ ಜಗತ್ತಿನಲ್ಲಿ ಪೂಜ್ಯತ್ವವೂ, ಅರ್ಘ್ಯಪ್ರದಾನದಿಂದ ಸಾಟಿಯಿಲ್ಲದ ಬೆಲೆಯುಳ್ಳವನಾಗಿಯೂ, ಆಚಮನಪ್ರದಾನದಿಂದ ಸೋಮಪಾನವೂ, ಪಂಚಾಮೃತದಿಂದ ಅಭಿಷೇಕ ಮಾಡುವವನಿಗೆ ಗೋಕುಲದಲ್ಲಿದ್ದಂತೆ ಇದ್ದು ಹಾಲು, ಮೊಸರು, ಬೆಣ್ಣೆ ಮತ್ತು ತುಪ್ಪ ಇವುಗಳ ಪ್ರಾಪ್ತಿಯೂ, ಶುದ್ಧೋದಕದಿಂದ ಅಭಿಷೇಕ ಮಾಡಿದವನಿಗೆ ನಿತ್ಯವೂ ಗಂಗಾಸ್ನಾನದ ಫಲವೂ, ವಸ್ತ್ರವನ್ನು ಸಮರ್ಪಿಸುವುದರಿಂದ ಒಳ್ಳೆಯ ವಸ್ತುಗಳ ಪ್ರಾಪ್ತಿಯೂ, ಯಜ್ಞೋಪವೀತದಿಂದ ಬ್ರಹ್ಮತ್ವಪ್ರಾಪ್ತಿಯೂ, ಗಂಧ, ಅಕ್ಷತೆ ಮತ್ತು ಪುಷ್ಪಸಮರ್ಪಣೆಯಿಂದ ಭಾಗ್ಯ, ಸಂಪತ್ತು ಇವುಗಳ ಲಾಭವೂ, ಧೂಪಾರತಿ ಮಾಡುವುದರಿಂದ ಚಂದ್ರಲೋಕದಲ್ಲಿ ವಾಸವೂ, ದೀಪಗಳನ್ನು ಹಚ್ಚಿಡುವುದರಿಂದ ಮನಸ್ಸಿನ ಅಜ್ಞಾನಪರಿಹಾರವೂ, ನೈವೇದ್ಯ ಸಮರ್ಪಣೆಯಿಂದ ಭೋಗಭಾಗ್ಯಗಳ ಪ್ರಾಪ್ತಿಯೂ, ತಾಂಬೂಲಸಮರ್ಪಣೆಯಿಂದ ದುಃಖ ಪರಿಹಾರವೂ, ದಕ್ಷಿಣೆ ಕೊಡುವುದರಿಂದ ಅಪಾರ ಹಣಪ್ರಾಪ್ತಿಯೂ, ಪ್ರದಕ್ಷಿಣೆ ಮಾಡುವುದರಿಂದ ತೀರ್ಥಯಾತ್ರೆಗಳ ಪ್ರವಾಸಪ್ರಾಪ್ತಿಯೂ, ನಮಸ್ಕರಿಸುವುದರಿಂದ ನಮಸ್ಕಾರಾರ್ಹತ್ವವೂ, ಸ್ತೋತ್ರ ಮಾಡುವುದರಿಂದ ಲೋಕದಲ್ಲಿ ಪ್ರಶಂಸಾಪಾತ್ರತ್ವವೂ ಮತ್ತು ವಿಸರ್ಜನೆಯಿಂದ ಲೋಕದಲ್ಲಿ ಅವಿರೋಧತ್ವವೂ ಪ್ರಾಪ್ತವಾಗುವುವು. ಷೋಡಶೋಪಚಾರಗಳ ಒಂದೊಂದು ಪ್ರತ್ಯೇಕ ಪೂಜೆಗೂ ಈ ರೀತಿಯ ಪ್ರತ್ಯೇಕ ಫಲಗಳಿವೆ. ॥ ೬೦-೬೭ ॥ ಸನಕಾದಿಗಳೇ! ಇವಿಷ್ಟಲ್ಲದೆ ಎಲ್ಲ ಅಭೀಷ್ಟಗಳೂ ಷೋಡಶೋಪಚಾರಪೂಜೆಯಿಂದ ಸಿಗುವುವು. ಪಂಚಾಯತನಪೂಜೆ ವಿಧಿವಿಧಾನವು ಮತ್ತು ಫಲಪ್ರಾಪ್ತಿಯು ಭಕ್ತಿಯುಕ್ತರಾದ ನಿಮಗೆ ನನ್ನಿಂದ ಹೇಳಲ್ಪಟ್ಟಿದೆ. ॥ ೬೮ ॥ ಇದನ್ನು ಆಚರಿಸುವವರಿಗೆ ಇಹಲೋಕದ ಮತ್ತು ಪರಲೋಕದ ಸುಖರೂಪ ಫಲವು ಸಿಗುವುದು. ಮಾಘಮಾಸದಲ್ಲಿ ವಿಶೇಷವಾಗಿ ಪ್ರಯಾಗದಲ್ಲಿ ಈ ವಿಧಾನದಿಂದ ಪೂಜಾ ಮಾಡಿದವರಿಗೆ ಮತ್ತು

ಭಕ್ತಿಯಿಂದ ಮಾಡಿಸುವವರಿಗೆ ಅಪಾರ ಸುಖಸ್ವರೂಪದ ಫಲಗಳು ಖಂಡಿತ ಪ್ರಾಪ್ತಿಯಾಗುವುವು. ಈ ವಿಧಿಯು ದರಿದ್ರರಿಗೆ ಕೇವಲ ಭಕ್ತಿಪೂರ್ವಕವಾಗಿ ಆಚರಿಸಲು ಉಕ್ತವಾಗಿದ್ದು ಮಹಾದಾನಾದಿ ಬೇರೆ ಬೇರೆ ಉತ್ತಮವಾದ ದಾನಗಳು ಧನಿಕರಿಗಾಗಿ ವಿಸ್ತರಿಸಲ್ಪಟ್ಟವೆ. ಇವುಗಳನ್ನು ಧನಿಕರು ಯಥಾವಿಧಿಯಾಗಿ ಮಾಡಿದಾಗಲೇ ಸರ್ವಸಾಕ್ಷಿಯಾದ ಮಾಧವನು ಅವರಿಂದ ಸಂತುಷ್ಟನಾಗುವನು. ॥ ೬೯-೭೨ ॥

॥ ನಲವತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಟ್ಚತ್ವಾರಿಂಶೋಽಧ್ಯಾಯಃ ॥ ೪೬ ॥

ಶೇಷ ಉವಾಚ—

ತತಃ ಪೂಜನಸಂಪೂರ್ತ್ಯೈ ಬ್ರಾಹ್ಮಣಾಂಶ್ಚ ಸುವಾಸಿನೀಃ ।
ಭೋಜಯೇತ್ತದಹಃ ಶಕ್ತ್ಯಾ ಮಿಷ್ಟಾನ್ನೈರ್ವಾ ದಿನಾಂತರೇ ॥ ೧ ॥
ಸದೋಷಂ ವಿಗುಣಂ ನ್ಯೂನಂ ಯತ್ಕೃತಂ ಕರ್ಮ ಮಾನವೈಃ ।
ನಿರ್ದೋಷಂ ಸಗುಣಂ ಪೂರ್ಣಂ ತತ್ಕರೋತಿ ದ್ವಿಜಾರ್ಚನಮ್ ॥ ೨ ॥
ತಸ್ಮಾಚ್ಛ್ರುತಿಧರಾ ವಿಪ್ರಾ ವಿಷ್ಣುಪೂಜಾಗುಣಾನ್ವಿತಾಃ ।
ಉದ್ಧರಂತಿ ಜಗತ್ಸರ್ವಂ ಚಿತ್ರಮತ್ರಾಸ್ತಿ ಕಿಂ ಮಹತ್ ॥ ೩ ॥
ಬ್ರಾಹ್ಮಣಾಸ್ತೀರ್ಥಸದೃಶಾ ದೇವಾಸ್ತೇಷು ವ್ಯವಸ್ಥಿತಾಃ ।
ಶ್ರುತಯೋ ಬ್ರಾಹ್ಮಣಾಧೀನಾ ತಸ್ಮಾಚ್ಛ್ರೇಷ್ಠತಮಾ ಮತಾಃ ॥ ೪ ॥
ಬ್ರಹ್ಮಣಾ ನಿರ್ಮಿತಾ ವಿಪ್ರಾಃ ಶ್ರುತೀನಾಂ ಗುಪ್ತಯೇ ಸದಾ ।
ಅತಸ್ತೇ ವೇದಶಾಸ್ತ್ರಾದ್ಯೌ ಪಾವಯಂತಿ ಜಗತ್ತ್ರಯಮ್ ॥ ೫ ॥
ಜಪಯಜ್ಞೇ ಸ್ಥಿತಾ ವಿಪ್ರಾ ಕಾಮಲೋಭವಿವರ್ಜಿತಾಃ ।
ಬ್ರಹ್ಮಚರ್ಯರತಾ ನಿತ್ಯಮತಸ್ತೇ ಶಾಂತಿಕಾರಕಾಃ ॥ ೬ ॥
ಗೋಪ್ತಾರಸ್ಸರ್ವಜಂತೂನಾಂ ಯಜ್ಞಾನಾಂ ಪ್ರವಿವೇಚಕಾಃ ।
ದಾನಧರ್ಮವಿವೇಕ್ತಾರಃ ಸ್ಮೃತಿಧರ್ಮಪ್ರವರ್ತಕಾಃ ॥ ೭ ॥
ಅತಸ್ತಾನ್ಪೂಜಯೇದ್ಭಕ್ತ್ಯಾ ಪ್ರೀಣಯೇದ್ದಾನಮಾನತಃ ।
ಪ್ರೀತೇಷು ತೇಷು ಸ ಪ್ರೀತೋ ಬ್ರಹ್ಮಣ್ಯೋ ಮಾಧವಃ ಸ್ವಯಮ್ ॥ ೮ ॥
ಸಂಭೋಜ್ಯ ದಕ್ಷಿಣಾಂ ದತ್ತ್ವಾ ಮಂಗಲ್ಯೈರುಪಚಾರಕೈಃ ।
ಸುವಾಸಿನೀಶ್ಚ ತಾಂಬೂಲೈರ್ದಕ್ಷಿಣಾಭಿಶ್ಚ ತೋಷಯೇತ್ ॥ ೯ ॥
ದಂಪತೀಪೂಜನಂ ಕುರ್ಯಾದ್ಯಥಾಶಕ್ತಿ ಯಥಾವಿಧಿ ।
ವೇಣೀಮಾಧವತೋಷಾರ್ಥಂ ಮಾಘಮಾಸೇ ವಿಶೇಷತಃ ॥ ೧೦ ॥
ಪ್ರಯಾಗೇ ದಂಪತೀಪೂಜಾಂ ನರೋ ನಾರ್ಯಾಥ ಬಾಂಧವಃ ।
ಸರ್ವಾನ್ಕಾಮಾನವಾಪ್ನೋತಿ ವೈಕುಂಠಂ ಪ್ರೇತ್ಯ ಗಚ್ಛತಿ ॥ ೧೧ ॥
ವ್ರತೈರ್ದಾನೈಸ್ತಪೋಭಿಶ್ಚ ನ ತಥಾ ಪ್ರೀಯತೇ ಹರಿಃ ।
ದಂಪತೀಪೂಜನೇನೈವ ಯಥಾ ಪ್ರೀಣಾತಿ ಮಾಧವಃ ॥ ೧೨ ॥
ಐಹಿಕಾಮುಷ್ಮಿಕಂ ಯದ್ಯತ್ಫಲಂ ವಾಂಛತಿ ಮಾನವಃ ।
ದಂಪತೀಪೂಜನಾದ್ವೇಣ್ಯಾಂ ತತ್ತದಾಪ್ನೋತಿ ನಿಶ್ಚಿತಮ್ ॥ ೧೩ ॥
ವಸ್ತ್ರಭೂಷಣಮಾಲ್ಯಾದ್ಯೈರ್ಧೂಪದೀಪೋಪಹಾರಕೈಃ ।
ದಂಪತೀ ಪೂಜಯೇದ್ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ॥ ೧೪ ॥

ಸುಶೀಲೌ ಭಗವನ್ನಿಷ್ಠೌ ವಿದ್ಯಾವಂತೌ ತಪಸ್ವಿನೌ ।
ವಿಜ್ಞೇಯೌ ದಂಪತೀ ವೇಣೀಮಾಧವಪ್ರೀತಿಕಾರಿಣೌ ॥ ೧೫ ॥
ಪ್ರತ್ಯಹಂ ವಿಭವೇ ಪೂಜ್ಯೌ ಮಾಸಮೇಕದಿನೇಽಪಿ ವಾ ।
ವೇಣೀಮಾಧವರೂಪೇಣ ಭೇದಬುದ್ಧಿಂ ಜಿಹಾಸತಿ ॥ ೧೬ ॥
ಯಾ ನಾರೀ ಪೂಜಯೇದ್ಭಕ್ತ್ಯಾ ಪ್ರಯಾಗೇ ದಂಪತೀ ತು ಸಾ ।
ಸೌಭಾಗ್ಯೈಶ್ವರ್ಯಪುತ್ರಾದಿ ಲಬ್ಧ್ವಾಂತೇ ಮಾಧವಪ್ರಿಯಾ ॥ ೧೭ ॥
ದಂಪತ್ಯೋಃ ಪೂಜಯಾಽಕೇರಾ ಪ್ರಯಾಗೇ ಪಾಪವರ್ಜಿತಾ ।
ವೈಕುಂಠೇ ವಸತೇ ಪೂಜ್ಯಾ ವೇಣೀಮಾಧವಸನ್ನಿಧೌ ॥ ೧೮ ॥
ವ್ರತಂ ದಾನಂ ತಪಃ ಪೂಜಾ ಹವನಂ ದೇವತಾರ್ಚನಮ್ ।
ದಂಪತೀಪೂಜನಾದೇವ ಸರ್ವಂ ಕೋಟಿಗುಣಂ ಭವೇತ್ ॥ ೧೯ ॥
ವಾರಂ ವಾರಂ ಮಯಾ ಪ್ರೋಕ್ತಂ ಕಿಂ ಬಹೂಕ್ತೇನ ಭಾಮಿನಿ ।
ತಸ್ಮಾತ್ಸರ್ವಪ್ರಯತ್ನೇನ ದಂಪತೀ ಪೂಜಯೇತ್ಕೃತೀ ॥ ೨೦ ॥
ಮಾಧವಃ ಕಥಯಾಮಾಸ ತ್ರಿವೇಣೀಮಿತಿ ವೈ ದ್ವಿಜಾಃ ।
ಅತೋಽತ್ರ ದಂಪತೀಪೂಜಾ ಸರ್ವಧರ್ಮವರೀಯಸೀ ॥ ೨೧ ॥
ಅತ್ರಾಭಿಷೇಕಂ ಯಃ ಕುರ್ಯಾತ್ಸಂಗಮೇ ಲೋಕವಿಶ್ರುತೇ ।
ರುದ್ರಾಧ್ಯಾಯೇನ ಸೂಕ್ತೈರ್ವಾ ತಲ್ಲಿಂಗೈಃ ಪಾವಮಾನಕೈಃ ॥ ೨೨ ॥
ಸ್ವಯಂ ವಾ ಬ್ರಾಹ್ಮಣದ್ವಾರಾ ಹ್ಯಭಿಷೇಕಂ ಸಮಾಚರೇತ್ ।
ಸ್ವಲ್ಪೇನಾಪ್ಯಭಿಷೇಕೇನ ಮಹತ್ಫಲಮವಾಪ್ನುಯಾತ್ ॥ ೨೩ ॥
ತಥೈವಾತಿಪ್ರಶಸ್ತೋಽತ್ರ ತಿಲಹೋಮಃ ಸದಾ ದ್ವಿಜಾಃ ।
ಮಾಘಮಾಸೇ ವಿಶೇಷೇಣ ಪ್ರೋಕ್ತಃ ಪದ್ಮಭವಾದಿಭಿಃ ॥ ೨೪ ॥
ಕಿಮತ್ರ ಬಹುನೋಕ್ತೇನ ಯತ್ಕಿಂಚಿತ್ಸುಕೃತಂ ನರಾಃ ।
ಕುರ್ವಂತಿ ತೀರ್ಥಮಾಹಾತ್ಮ್ಯಾತ್ಸರ್ವಮಕ್ಷಯ್ಯತಾಂ ವ್ರಜೇತ್ ॥ ೨೫ ॥
ಕರ್ಮಣಾ ಮನಸಾ ವಾಚಾ ಸತ್ಯಧರ್ಮಪ್ರತಿಷ್ಠಿತಃ ।
ಗಂಗಾಯಮುನಯೋರ್ಮಧ್ಯೇ ಯಸ್ತು ಗ್ರಾಮಂ ಪ್ರಯಚ್ಛತಿ ॥ ೨೬ ॥
ಕೌಟುಂಬಿಕಾಯ ವಿಪ್ರಾಯ ಶುಚಯೇ ವೇದಶಾಲಿನೇ ।
ತಪಸ್ವಿನೇ ಸುಶಾಂತಾಯ ದಾಂತಾಯಾಗ್ನಿಮತೇಽಧಿಕಮ್ ॥ ೨೭ ॥
ಸ್ವರ್ಗೇಽಸೌ ಮೋದತೇಽತ್ಯರ್ಥಂ ಮಂದಾಕಿನ್ಯಾಸ್ತಟೇ ಶುಭೇ ।
ಭುಕ್ತ್ವಾ ಚ ಬಹುಲಾನ್ಭೋಗಾನ್ಜಂಬೂದ್ವೀಪಪತಿರ್ಭವೇತ್ ॥ ೨೮ ॥
ಪ್ರಯಾಗೇ ಮಾಧವಕ್ಷೇತ್ರೇ ಯಸ್ತು ಕನ್ಯಾಂ ಪ್ರಯಚ್ಛತಿ ।
ಸ್ವಗೃಹ್ಯೋಕ್ತವಿಧಾನೇನ ಯಥಾವಿಭವಸಂಭವಮ್ ॥ ೨೯ ॥

ತೇನ ದತ್ತಾ ಹಿ ಭೂಸ್ಸರ್ವಾ ಸಶೈಲವನಕಾನನಾ ।
ಕುಲಂ ಚ ತಾರಿತಂ ಕೃತ್ಸ್ನಂ ಸ್ವರ್ಗಸ್ತಸ್ಯ ಕರೇ ಸ್ಥಿತಃ ॥ ೩೦ ॥
ಯಸ್ತು ರತ್ನಪ್ರವಾಲಾನಿ ಹರಿಪ್ರೀತ್ಯೈ ದದಾತಿ ಚ ।
ವೇಣ್ಯಾಂ ರತ್ನಪ್ರದಾನೇನ ಸ್ವರ್ಗೇ ರತ್ನಗೃಹೇ ವಸೇತ್ ॥ ೩೧ ॥
ಧಾನ್ಯದಾನಂ ಮಹಾಭಾಗಾ ಜಲದಾನಂ ವೃಷೇ ರವೌ ।
ಗಂಗಾತೀರನಿವಾಸಿಭ್ಯಃ ಕುರ್ವತೇ ವಿಪುಲಂ ಫಲಮ್ ॥ ೩೨ ॥
ಬ್ರಾಹ್ಮಣಾಯ ಸುವಾಸಿನ್ಯೈ ಮುಕ್ತಾದಾನಂ ಕರೋತಿ ಯಃ ।
ತೇಜಸ್ವೀ ನಿರ್ಮಲೋ ಭೂತ್ವಾ ಸೋಮಲೋಕೇ ಮಹೀಯತೇ ॥ ೩೩ ॥
ಇಕ್ಷುದಂಡಸಿತಾಂ ವಾಪಿ ವಿದ್ಯಾಂ ಪುಸ್ತಕಮೇವ ಚ ।
ತಸ್ಯ ಮಾಧುರ್ಯತಾಂ ಯಾತಿ ಪ್ರಯಾಗೇ ಮಾಧವೋಽವ್ಯಯಃ ॥ ೩೪ ॥
ಯಾನಿ ಕಾನಿ ಚ ದಾನಾನಿ ಸ್ವಸ್ವಶಕ್ತ್ಯಾನುಸಾರತಃ ।
ಕರೋತಿ ಪರಯಾ ಭಕ್ತ್ಯಾ ಸೋಽಕ್ಷಯ್ಯಂ ಫಲಮಶ್ನುತೇ ॥ ೩೫ ॥
ಅಶಕ್ತಃ ಸ್ನಾನಮಾತ್ರೇಣ ಗಂಗಾಯಮುನಸಂಗಮೇ ।
ಗಂಗಾಯಾಂ ಯಮುನಾಯಾಂ ಚ ಲಭತೇ ವಾಂಛಿತಂ ಫಲಮ್ ॥ ೩೬ ॥
ಗಂಗಾ ಚ ಯಮುನಾ ಚೈವ ಉಭೇ ತುಲ್ಯಫಲೇ ಸ್ಮೃತೇ ।
ಕೇವಲಂ ಜ್ಯೇಷ್ಠಭಾವೇನ ಗಂಗಾ ಸರ್ವತ್ರ ಪೂಜ್ಯತೇ ॥ ೩೭ ॥
ಅತಃ ಸ್ನಾನಾದಿಕಂ ಸರ್ವಮುಭಯೋಸ್ಸಮಮುಚ್ಯತೇ ।
ಸಂಗಮೇ ತು ತತಃ ಶ್ರೇಷ್ಠಂ ಫಲಮುಕ್ತಂ ಮಹರ್ಷಿಭಿಃ ॥ ೩೮ ॥
ಸ ಏವ ಕಾಮಿಕಂ ತೀರ್ಥಂ ತತ್ರ ಸ್ನಾನೇನ ಭಕ್ತಿತಃ ।
ಯಸ್ಯ ಯಸ್ಯ ಚ ಯಃ ಕಾಮಸ್ತಸ್ಯ ತಸ್ಯ ಭವೇದ್ಧಿ ಸಃ ॥ ೩೯ ॥
ಭೋಗಕಾಮಸ್ಯ ಭೋಗಃ ಸ್ಯಾದ್ರಾಜ್ಯಂ ಸ್ಯಾದ್ರಾಜ್ಯಕಾಮಿನಃ ।
ಸ್ವರ್ಗಂ ಸ್ಯಾತ್ಸ್ವರ್ಗಕಾಮಸ್ಯ ಮೋಕ್ಷಃ ಸ್ಯಾನ್ಮೋಕ್ಷಕಾಮಿನಃ ॥ ೪೦ ॥
ಗಂಗಾಯಮುನಾಸಂಗಮೇ ತು ಯಃ ಪುಮಾನ್ಪುಣ್ಯವರ್ಧನೇ ।
ಸ್ನಾತ್ವಾ ನಾರಾಯಣಂ ದೇವಂ ಭಕ್ತ್ಯಾ ಸಂಸ್ಮರತೇ ಯದಿ ॥ ೪೧ ॥
ಸ ಪುಮಾನ್ಯತ್ರ ಯತ್ರಾಸ್ತೇ ತತ್ರ ವಿಷ್ಣುಃ ಪ್ರಸೀದತಿ ।
ಜಪಹೋಮಾದಿಕಂ ತಸ್ಯ ಸರ್ವಂ ಸಾಂಗಂ ಭವೇತ್ತತಃ ॥ ೪೨ ॥
ದುರ್ಲಭಂ ತೀರ್ಥರಾಜಸ್ಯ ಸ್ನಾನಂ ಸರ್ವತ್ರ ಸರ್ವದಾ ।
ದೇಶಕಾಲಾದಿನಿಯಮಃ ಪ್ರಯಾಗೇ ನ ಹಿ ಸರ್ವಥಾ ॥ ೪೩ ॥
ಸರ್ವೇ ಶುಭಮಯಾಃ ಕಾಲಾಃ ಸರ್ವಾ ಶುಭಮಯಾ ದಿಶಃ ।
ಸರ್ವೇ ಪಾತ್ರತಮಾ ವಿಪ್ರಾಃ ಸಂದೇಹಂ ನೈವ ಕಾರಯೇತ್ ॥ ೪೪ ॥

ಶೃಣುಯಾತ್ತೀರ್ಥಮಾಹಾತ್ಮ್ಯಂ ಪೂರ್ಣವಿದ್ಯಾವತಃ ಫಲಮ್ ।
ಮಾಹಾತ್ಮ್ಯಶ್ರವಣಾದೇವ ಸರ್ವಪಾಪೈಃ ಪ್ರಮುಚ್ಯತೇ ॥ ೪೫ ॥
ತೀರ್ಥರಾಜಸ್ಯ ಮಾಹಾತ್ಮ್ಯಂ ಶೃಣ್ವನ್ದೇಶಾಂತರೇಽಪಿ ಚ ।
ಪಠಿತ್ವಾ ಶ್ರಾವಯನ್ವಾಪಿ ದರ್ಶನಂ ಫಲಮಾಪ್ನುಯಾತ್ ॥ ೪೬ ॥
ಪುಣ್ಯಂ ಪ್ರಯಾಗಮಾಹಾತ್ಮ್ಯಂ ಮಾಘಮಾಹಾತ್ಮ್ಯಮೇವ ಚ ।
ವಿಧಿನಾ ಶೃಣುಯಾನ್ಮಾಘೇ ತಸ್ಯ ಪುಣ್ಯಮನಂತಕಮ್ ॥ ೪೭ ॥
ಏವಂ ನಾನಾವಿಧಾನೀಹ ಪುಣ್ಯಕರ್ಮಾಣಿ ಕುರ್ವತಾಮ್ ।
ದದಾತಿ ಮಾಧವಃ ಸರ್ವಮೈಹಿಕಾಮುಷ್ಮಿಕಂ ಫಲಮ್ ॥ ೪೮ ॥

॥ ಇತಿ ಷಟ್ಚತ್ವಾರಿಂಶೋಽಧ್ಯಾಯಃ ॥

## ॥ ನಲವತ್ತಾರನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಪಂಚಾಯತನ ಪೂಜಾದಿಗಳಾದ ಮೇಲೆ ಬ್ರಾಹ್ಮಣರ ಸುವಾಸಿನಿಯರ ಭೋಜನವನ್ನು ತನ್ನ ಶಕ್ತ್ಯಾನುಸಾರ ಮಾಡಿಸಬೇಕು. ಆ ದಿನವೇ ಆಗದಿದ್ದರೆ ಮರುದಿವಸವಾಗಲೀ ಅಥವಾ ಬೇರೊಂದು ದಿವಸದಲ್ಲಾಗಲೀ ಈ ಕಾರ್ಯ ಮಾಡಬೇಕು. ॥ ೧ ॥ ಮನುಷ್ಯನು ಯಾವ ಸತ್ಕಾರ್ಯವನ್ನು ಮಾಡಲಿ ಅದು ಬ್ರಾಹ್ಮಣಸುವಾಸಿನಿಯರ ಭೋಜನ ಮಾಡಿಸುವುದರಿಂದ, ಕಾರ್ಯಾಚರಣೆಯಲ್ಲಿ ಉಂಟಾಗಬಹುದಾದ ಪ್ರಮಾದಾದಿ ದೋಷಗಳೂ, ವೈಗುಣಗಳೂ ಮತ್ತು ನ್ಯೂನತೆಗಳೂ ಹೋಗಿ ಆ ಕಾರ್ಯವು ಗುಣಭರಿತವಾಗಿಯೂ, ನಿರ್ದುಷ್ಟವೂ ಆಗಿ ಪೂರ್ಣವಾಗುವುದು. ॥ ೨ ॥ ವೇದಶಾಸ್ತ್ರಜ್ಞರಾದ ವಿಷ್ಣುಪೂಜೆಯೆಂಬ ಗುಣಾನ್ವಿತರಾದ ಬ್ರಾಹ್ಮಣರು, ಸಮಸ್ತಜಗತ್ತನ್ನೇ ಉದ್ಧರಿಸುವರೆಂಬುದಲ್ಲಿ ಏನು ಆಶ್ಚರ್ಯವಿದೆ? ॥ ೩ ॥ ಬ್ರಾಹ್ಮಣರುಗಳು ತೀರ್ಥಕ್ಷೇತ್ರಗಳಿಗೆ ಸರಿಸಮನಾದವರು. ದೇವತೆಗಳು ಅವರಲ್ಲಿ ಸನ್ನಿಹಿತರಾಗಿದ್ದಾರೆ. ವೇದಗಳೂ ಅವರ ಅಧೀನವಾಗಿ ಇರುವದರಿಂದಲೇ ಅವರುಗಳು ಶ್ರೇಷ್ಠತಮರೆಂದು ಪರಿಗಣಿಸಲ್ಪಟ್ಟಿದ್ದಾರೆ. ॥ ೪ ॥ ಸರ್ವಕಾಲಗಳಲ್ಲೂ ವೇದಗಳ ರಕ್ಷಣೆಗಾಗಿಯೇ ಶ್ರೀಬ್ರಹ್ಮದೇವರಿಂದ ಸೃಷ್ಟಿಸಲ್ಪಟ್ಟ ಬ್ರಾಹ್ಮಣರು ವೇದಶಾಸ್ತ್ರಾದಿಗಳಿಂದ ಜಗತ್ತನ್ನೇ ಪಾವನಗೊಳಿಸುವರು. ॥ ೫ ॥ ಜಪವೆಂಬ ಯಜ್ಞದಲ್ಲಿ ನಿರತರಾಗಿರತಕ್ಕ ಬ್ರಾಹ್ಮಣರುಗಳು ಕಾಮ ಮತ್ತು ಲೋಭಗಳಿಲ್ಲದವರಾಗಿದ್ದು ಬ್ರಹ್ಮಚರ್ಯ ಕಾಪಾಡಿಕೊಂಡು ಬರುವವರಾದ್ದರಿಂದ ಅವರಿಂದ ಜಗತ್ತಿಗೆ ಶಾಂತಿ ಉಂಟಾಗುವುದು. ॥ ೬ ॥ ಇವರು ಎಲ್ಲ ಜೀವಿಗಳ ರಕ್ಷಕರೂ ವಿವೇಚಿಸಿ ಯಜ್ಞಾದಿಗಳನ್ನು ಮಾಡಿಸತಕ್ಕವರೂ, ದಾನಧರ್ಮಗಳ ವಿವೇಕವುಳ್ಳವರು ಮತ್ತು ಸ್ಮೃತಿಗಳಲ್ಲಿ ಉಕ್ತವಾಗಿರುವಂತೆ ಧರ್ಮಾಚರಣೆ ಮಾಡುವುದರಲ್ಲಿ ಆಸಕ್ತಿಯುಳ್ಳವರೂ ಆಗಿರುತ್ತಾರೆ. ॥ ೭ ॥ ಆದ್ದರಿಂದ ದಾನ ಮರ್ಯಾದೆಗಳಿಂದ ಅವರುಗಳನ್ನು ಪೂಜಿಸತಕ್ಕದ್ದು. ಬ್ರಾಹ್ಮಣರ ಪರವಾಗಿರುವ ಶ್ರೀಮಾಧವದೇವರು ಬ್ರಾಹ್ಮಣರು ಪ್ರೀತರಾದರೇನೇ ಪ್ರೀತರಾಗುವರು. ॥ ೮ ॥ ಬ್ರಾಹ್ಮಣರುಗಳನ್ನೂ ಸುವಾಸಿನಿಯರನ್ನೂ ಭೋಜನ ಮಾಡಿಸಿ, ತಾಂಬೂಲ ಯಥೇಚ್ಛ ದಕ್ಷಿಣಾದಿಗಳನ್ನು ಕೊಟ್ಟು ಮಂಗಳಕರವಾದ ಉಪಚಾರಗಳಿಂದ ಸಂತೋಷಪಡಿಸಬೇಕು. ॥ ೯ ॥ ವಿಧಿವತ್ತಾಗಿ ಯಥಾಶಕ್ತಿ ದಂಪತಿಗಳ

ಪೂಜಾವನ್ನು, ಅದರಲ್ಲಿಯೂ ವಿಶೇಷವಾಗಿ ಮಾಘಮಾಸದಲ್ಲಿ ಮಾಡಬೇಕು. ॥ ೧೦ ॥ ಪ್ರಯಾಗದಲ್ಲಿ ಗಂಡಸರಾಗಲೀ, ಸ್ತ್ರೀಯರಾಗಲೀ ಮತ್ತು ಬಂಧುಗಳಾಗಲೀ ದಂಪತಿಪೂಜಾವನ್ನು ಮಾಡಿದರೆ ಎಲ್ಲ ಅಭೀಷ್ಟಗಳನ್ನೂ ಹೊಂದಿ ವೈಕುಂಠವನ್ನು ಸೇರುವರು. ॥ ೧೧ ॥ ಮಾಧವನು ದಂಪತಿಪೂಜೆಯಿಂದ ತೃಪ್ತನಾಗುವಷ್ಟು ವ್ರತ, ದಾನ ಮತ್ತು ತಪಸ್ಸು ಇವುಗಳಿಂದ ತೃಪ್ತನಾಗುವುದಿಲ್ಲ. ॥ ೧೨ ॥ ವೇಣೀಕ್ಷೇತ್ರದಲ್ಲಿ ದಂಪತಿಪೂಜಾ ಮಾಡುವುದರಿಂದ ಮನುಷ್ಯನು ಆಸೆ ಪಡುವ ಸಮಸ್ತ ಇಹಲೋಕದ ಮತ್ತು ಪರಲೋಕದ ಎಲ್ಲ ಭಾಗ್ಯವನ್ನು ಹೊಂದುತ್ತಾನೆ. ॥ ೧೩ ॥ ಹಣದ ಲೋಭವನ್ನು ಹೊಂದದೆ, ದಂಪತಿಗಳಿಗೆ ವಸ್ತ್ರ ಆಭರಣಗಳು, ಹೂಮಾಲೆಗಳು, ಧೂಪ, ದೀಪ ಮತ್ತು ಭೋಜನಾದಿಗಳಿಂದ ದಂಪತಿಪೂಜಾವನ್ನು ಮಾಡಬೇಕು; ॥ ೧೪ ॥ ಒಳ್ಳೆಯ ಶೀಲವಂತರೂ, ತಪಸ್ವಿಗಳೂ, ವಿದ್ಯಾವಂತರೂ ಮತ್ತು ಪರಮಾತ್ಮನ ವಿಶೇಷವಾದ ಜ್ಞಾನ ಉಳ್ಳವರೂ ಆದ ದಂಪತಿಗಳೇ ವೇಣೀಮಾಧವನನ್ನು ಸಂತುಷ್ಟಿಪಡಿಸುವರು. ॥ ೧೫ ॥ ಶಕ್ತಿಯಿದ್ದರೆ ಪ್ರತಿನಿತ್ಯವೂ ದಂಪತಿಪೂಜಾವನ್ನು ಮಾಡಬೇಕು, ಇಲ್ಲದಿದ್ದರೆ ತಿಂಗಳಿಗೊಮ್ಮೆಯಾದರೂ ಮಾಡಬೇಕು. ಈ ದಂಪತಿಗಳೂ ವೇಣೀ ಮತ್ತು ಮಾಧವನ ರೂಪದಲ್ಲಿ ಬಂದಿದ್ದಾರೆಂದು ತಿಳಿಯಬೇಕು. ಈ ವಿಷಯದಲ್ಲಿ ಯಾವ ರೀತಿಯಾದ ಅನ್ಯಥಾಭಾವನೆ ಹೊಂದಿರಬಾರದು. ॥ ೧೬ ॥ ಯಾವ ಸ್ತ್ರೀಯು ಪ್ರಯಾಗದಲ್ಲಿ ಭಕ್ತಿಯಿಂದ ದಂಪತಿಪೂಜೆಯನ್ನು ಮಾಡುತ್ತಾಳೋ ಅವಳು ಮಾಧವನಿಗೆ ಬೇಕಾದವಳಾಗಿ ಸೌಭಾಗ್ಯ, ಐಶ್ವರ್ಯ ಮತ್ತು ಮಕ್ಕಳನ್ನು ಪಡೆಯುತ್ತಾಳೆ. ॥ ೧೭ ॥ ವಿಧವೆಯು ಪ್ರಯಾಗದಲ್ಲಿ ದಂಪತಿಪೂಜೆಯನ್ನು ಮಾಡಿದರೆ ಅವಳು ಸಕಲ ಪಾಪಗಳನ್ನು ಕಳೆದುಕೊಂಡು ಎಲ್ಲರಿಂದಲೂ ಗೌರವಿಸಿಕೊಳ್ಳಲ್ಪಟ್ಟವಳಾಗಿ ವೈಕುಂಠದಲ್ಲಿ ವೇಣೀಮಾಧವನ ಸನಿಹದಲ್ಲಿ ವಾಸಮಾಡುವಳು. ॥ ೧೮ ॥ ವ್ರತ, ದಾನ, ತಪಸ್ಸು, ಪೂಜಾ, ಹವನ ಮತ್ತು ದೇವತಾರ್ಚನೆ ಮುಂತಾದವುಗಳೆಲ್ಲ ದಂಪತಿಪೂಜಾದಿಂದ ಕೋಟಿಯಷ್ಟು ಗುಣಸಂಪನ್ನತೆಯನ್ನು ಹೊಂದುವುವು. ॥ ೧೯ ॥ "ಹೇ ಭಾಮಿನಿ, ಅನೇಕ ಬಾರಿ ನಾನು ಹೇಳಿಯಾಯಿತು; ಬಹಳ ಹೇಳುವುದರಿಂದೇನು ಪ್ರಯೋಜನ, ಕರ್ಮದಲ್ಲಿ ಕೃತಾರ್ಥನಾಗಬಯಸುವವನು ದಂಪತಿಪೂಜೆಯನ್ನು ಮಾಡಲೇಬೇಕು." ಇದು ಮಾಧವನು ವೇಣಿಗೆ ಹೇಳಿದ ಹೇಳಿಕೆಯು, ಬ್ರಾಹ್ಮಣೋತ್ತಮರೇ! ಕೇಳಿರಿ. ಆದ್ದರಿಂದ ದಂಪತಿಪೂಜೆಯು ಎಲ್ಲ ಧರ್ಮಗಳಿಗಿಂತ ಹೆಚ್ಚಿನದು. ॥ ೨೦-೨೧ ॥ ಲೋಕಪ್ರಸಿದ್ಧವಾಗಿರತಕ್ಕ ಈ ತ್ರಿವೇಣೀಸಂಗಮದಲ್ಲಿ ರುದ್ರಾಧ್ಯಾಯಾದಿಂದಲಾಗಲೀ ರುದ್ರಲಿಂಗಕವಾದ(ರುದ್ರದೇವರನ್ನು ಪ್ರತಿಪಾದಿಸುವ) ಸೂಕ್ತಗಳಿಂದಲಾಗಲೀ ಅಥವಾ ಪವಮಾನ ಸೂಕ್ತಗಳಿಂದಲಾಗಲೀ ಅಲ್ಪವಾದ ಅಭಿಷೇಕವನ್ನು ತಾನೇ ಮಾಡಿದರೂ ಅಥವಾ ಬ್ರಾಹ್ಮಣರ ಮೂಲಕ ಮಾಡಿಸಿದರೂ ಮಹಾಫಲವು ದೊರಕುವುದು. ॥ ೨೨-೨೩ ॥ ಹೇ ಬ್ರಾಹ್ಮಣರೇ! ಬ್ರಹ್ಮದೇವರ ವಚನದಂತೆ ಈ ಪ್ರಯಾಗದಲ್ಲಿ ಮಾಘಮಾಸದಲ್ಲಿ ಅಥವಾ ಯಾವಾಗಲೂ ತಿಲ ಹೋಮವು ಪ್ರಶಸ್ತವಾದುದು. ॥ ೨೪ ॥ ಹೆಚ್ಚಿಗೆ ಹೇಳಿ ಏನು ಪ್ರಯೋಜನ. ಈ ಪ್ರಯಾಗದಲ್ಲಿ ಏನೇನು ಒಳ್ಳೆ ಕಾರ್ಯ ಮಾಡಿದರೂ ಈ ತೀರ್ಥದ ಮಾಹಾತ್ಮ್ಯೆಯಿಂದ ಅಕ್ಷಯಫಲಪ್ರದಗಳಾಗುವುವು. ॥ ೨೫ ॥ ಯಾರು ಗಂಗಾಯಮುನೆಯರ ಸಂಗಮದಲ್ಲಿ ಒಳ್ಳೆಯ ಅನುಸಂಧಾನಪೂರ್ವಕ ಕರ್ಮದಿಂದಲೂ, ಮನಸ್ಸಿನಿಂದಲೂ, ವಾಕ್ಯಗಳಿಂದಲೂ ಮತ್ತು ಸತ್ಯಧರ್ಮಗಳಲ್ಲಿ ನೆಟ್ಟ ಮನಸ್ಸುಳ್ಳವರಾಗಿ, ಗೃಹಸ್ಥಾಶ್ರಮಿಯಾದ, ಶುಚಿರ್ಭೂತನಾಗಿರುವ, ವೇದಾಧ್ಯಯನ ಅಧ್ಯಾಪನಾಸಕ್ತರಾದ, ಶಾಂತರಾದ, ಜಿತೇಂದ್ರಿಯರಾದ, ತಪಸ್ವಿಯಾದ ಮತ್ತು

ಅಗ್ನಿಹೋತ್ರಾದಿಗಳುಳ್ಳ ಬ್ರಾಹ್ಮಣನಿಗೆ ಗ್ರಾಮವನ್ನು ದಾನಮಾಡುವನೋ ಅವನು ಸ್ವರ್ಗದಲ್ಲಿ ಮಂದಾಕಿನಿಯ ದಡದಲ್ಲಿ ವಿಶೇಷವಾದ ಅಪೇಕ್ಷೆಗಳನ್ನು ಅನುಭವಿಸಿ ನಂತರ ಭೂಮಿಯಲ್ಲಿ ಹುಟ್ಟಿ ಇಡೀ ಜಂಬೂದ್ವೀಪದ ಅಧಿಪತಿ ಆಗುವನು. ॥ ೨೬-೨೮ ॥ ಯಾರು ಪ್ರಯಾಗಕ್ಷೇತ್ರದಲ್ಲಿ ತನ್ನ ಸ್ವಗೃಹ್ಯೋಕ್ತ(ಗೃಹ್ಯೋಕ್ತವಿಧಿಯೆಂದರೆ ಗೃಹ್ಯಸೂತ್ರಗಳಲ್ಲಿ ಹೇಳಿದ ವಿಧಿ)ವಿಧಿಯಿಂದ ತನ್ನ ಶಕ್ತ್ಯಾನುಸಾರ ಕನ್ಯಾದಾನ ಮಾಡುತ್ತಾನೋಅವನು ಕಾಡು, ವನ, ಪರ್ವತಗಳಿಂದ ಕೂಡಿ ಇಡಿ ಭೂಮಂಡಲವನ್ನೇ ದಾನ ಮಾಡುವಷ್ಟು ಫಲವನ್ನು ಪಡೆಯುವನು ಮತ್ತು ಅವನ ವಂಶವೇ ಉದ್ಧಾರವಾಗುವುದು. ಇಂತಹವನ ಅಂಗೈಯಲ್ಲಿಸ್ವರ್ಗವೇ ಇದೆ ಎಂದು ತಿಳಿಯಿರಿ. ॥ ೨೯-೩೦ ॥ ಯಾರು ತ್ರಿವೇಣೀಸಂಗಮದಲ್ಲಿ ಶ್ರೀಮಾಧವನ ಪ್ರೀತಿಗಾಗಿ ರತ್ನ ಮತ್ತು ಹವಳಾದಿಗಳನ್ನು ದಾನಮಾಡುವರೋ ಅವರು ಸ್ವರ್ಗದಲ್ಲಿ ರತ್ನಮಯವಾದ ಮನೆಯಲ್ಲಿ ವಾಸಿಸುವರು. ॥ ೩೧ ॥ ಇಲ್ಲಿ, ಗಂಗಾತೀರವಾಸಿಗಳಿಗೆ ಧನ, ಧಾನ್ಯ ಮತ್ತು ಜಲ ಇವುಗಳನ್ನು ಸೂರ್ಯನು ವೃಷಭರಾಶಿಯಲ್ಲಿರುವಾಗ ದಾನಮಾಡುವವನು ಅಪಾರಫಲವನ್ನು ಹೊಂದುವನು. ॥ ೩೨ ॥ ಯಾರು ಬ್ರಾಹ್ಮಣಮುತ್ತೈದೆಯರಿಗೆ ಮುತ್ತುಗಳನ್ನು ದಾನ ಮಾಡುವರೋ ಅವರು ಪವಿತ್ರರಾಗಿ, ಮಹಾತೇಜಸ್ವಿಗಳಾಗಿ ಚಂದ್ರಲೋಕದಲ್ಲಿ ವಿರಾಜಮಾನರಾಗುವರು. ॥ ೩೩ ॥ ಯಾರು ಪ್ರಯಾಗದಲ್ಲಿ ಕಬ್ಬಿನ ಜಲ್ಲೆಗಳನ್ನು ಬಿಳಿ ಬೂರ ಸಕ್ಕರೆಯನ್ನು ಬ್ರಹ್ಮವಿದ್ಯೆಯನ್ನು ಮತ್ತು ಶಾಸ್ತ್ರಗ್ರಂಥಗಳನ್ನೂ ದಾನ ಮಾಡುವರೋ ಅವರಲ್ಲಿ ಶ್ರೀಮಾಧವದೇವರು ಬಹುಪ್ರಸನ್ನತೆಯನ್ನು ತೋರುವರು. ॥ ೩೪ ॥ ಪ್ರಯಾಗದಲ್ಲಿ ಪರಮಭಕ್ತಿಯಿಂದ ಅವರವರ ಶಕ್ತ್ಯಾನುಸಾರ ಏನೇನು ದಾನಗಳನ್ನು ಮಾಡಿದರೂ ಅವುಗಳೆಲ್ಲವೂ ಅಕ್ಷಯಫಲಗಳನ್ನು ಕೊಡತಕ್ಕಗಳಾಗುವುವು. ॥ ೩೫ ॥ ಅಶಕ್ತನಾದವನು ಗಂಗೆಯಲ್ಲಾಗಲೀ ಯಮುನೆಯಲ್ಲಾಗಲೀ ಅಥವಾ ಗಂಗೆಯುಮನೆಯರ ಸಂಗಮದಲ್ಲಾಗಲೀ ಸ್ನಾನ ಮಾಡಿದರೆ ತಾನು ಬಯಸಿದ ಆಸೆಗಳನ್ನೆಲ್ಲಾ ಹೊಂದುವನು. ॥ ೩೬ ॥ ಗಂಗೆ ಮತ್ತು ಯಮುನೆಯರು, ಇಬ್ಬರೂ ಒಂದೇ ಸಮನಾಗಿ ಫಲಕೊಡತಕ್ಕವರುಗಳು; ಕೇವಲ ದೊಡ್ಡವಳಾದ್ದರಿಂದ ಗಂಗೆಗೆ ಎಲ್ಲೆಡೆ ಮಾನ್ಯತೆಯಿದೆ. ॥ ೩೭ ॥ ಆದ್ದರಿಂದ ಇವೆರಡರಲ್ಲಿ ಮಾಡಿದ ಸ್ನಾನಾದಿಗಳು ಒಂದೇ ಸಮನಾದವು, ಸಂಗಮದಲ್ಲಿ ಮಾಡಿದ ಸ್ನಾನಾದಿಗಳೂ ಇವುಗಳಿಗಿಂತ ಹೆಚ್ಚು ಫಲ ಕೊಡತಕ್ಕದೆಂದು ಮಹರ್ಷಿಗಳ ಹೇಳಿಕೆಗಳಾಗಿವೆ. ॥ ೩೮ ॥ ಈ ತ್ರಿವೇಣೀಸಂಗಮವು ಕಾಮಿಕತೀರ್ಥವೇ ಸರಿ. ಕಾರಣ ಇಲ್ಲಿ ಯಾರು ಏನೇನು ಅಪೇಕ್ಷೆಗಳನ್ನಿಟ್ಟುಕೊಂಡು ಸ್ನಾನಾದಿಗಳನ್ನು ಭಕ್ತಿಯಿಂದ ಮಾಡುತ್ತಾರೋ ಅವುಗಳೆಲ್ಲವೂ ಅವರಿಗೆ ಲಭಿಸುವುವು. ॥ ೩೯ ॥ ಇಲ್ಲಿ ಭೋಗಾಪೇಕ್ಷಿಗೆ ಭೋಗವೂ, ರಾಜ್ಯಾಪೇಕ್ಷಿಗೆ ರಾಜ್ಯವೂ, ಸ್ವರ್ಗಾಪೇಕ್ಷಿಗೆ ಸ್ವರ್ಗವೂ ಮತ್ತು ಮೋಕ್ಷಾಪೇಕ್ಷಿಗೆ ಮೋಕ್ಷವೂ ಲಭಿಸುವುದು. ॥ ೪೦ ॥ ಗಂಗಾಯಮುನೆಯರ ಸಂಗಮದಲ್ಲಿ ತನ್ನ ಭಕ್ತಿಯನ್ನು ಬೆಳೆಸಿಕೊಳ್ಳುವ ಇಚ್ಛೆಯುಳ್ಳವರು ಶ್ರೀನಾರಾಯಣನನ್ನು ಸ್ಮರಣೆ ಮಾಡುತ್ತಾ ಭಕ್ತಿಯಿಂದ ಸ್ನಾನ ಮಾಡಿದರೆ ಅಂತಹ ಮನುಷ್ಯನು ಎಲ್ಲಿಯೇ ಇರಲಿ, ಅವನಿಗೆ ಶ್ರೀನಾರಾಯಣನು ಒಲಿದಿರುತ್ತಾನೆ, ಅಂಥಹವನು ಮಾಡುವ ಜಪಹೋಮಾದಿಕಾರ್ಯಗಳಿಗೆ ಯಾವಾಗಲೂ ಸಾಫಲ್ಯವು ಇದ್ದೇ ಇರುವುದು. ॥ ೪೧-೪೨ ॥ ತೀರ್ಥರಾಜನ ಸಂಗಮಸ್ನಾನವು ಎಲ್ಲರಿಗೂ ಯಾವಾಗಲೂ ದುರ್ಲಭವು. ಆದ್ದರಿಂದ ಅಲ್ಲಿ ದೇಶಕಾಲ ಇವುಗಳ ನಿಯಮಗಳು ಸರ್ವಥಾ ಸ್ನಾನಾದಿಗಳಿಗೆ ಇಲ್ಲ. ॥ ೪೩ ॥ ಎಲ್ಲ ಕಾಲಗಳೂ ಮಂಗಳಮಯಗಳಾದುವೇ, ಎಲ್ಲ

ದಿಕ್ಕುಗಳೂ ಮಂಗಳಕರಗಳಾದುವುಗಳೇ, ಇಲ್ಲಿ ದೊರಕುವ ಎಲ್ಲ ಬ್ರಾಹ್ಮಣರುಗಳೂ ಸತ್ಪಾತ್ರರೇ, ಈ ಬಗ್ಗೆ ಸಂದೇಹಪಡಬೇಕಾಗಿಲ್ಲ. ॥ ೪೪ ॥ ಬ್ರಹ್ಮವಿದ್ಯೆಯನ್ನು ಪೂರ್ಣವಾಗಿ ಅಧ್ಯಯನ ಮಾಡಿದ ಫಲವು ಈ ಪ್ರಯಾಗತೀರ್ಥದ ಮಾಹಾತ್ಮ್ಯೆಯ ಶ್ರವಣದಿಂದ ಲಭ್ಯವಾಗುವುದು ಮತ್ತು ಸಕಲಪಾಪಗಳೂ ನಿವಾರಣೆಯಾಗುವುವು. ॥ ೪೫ ॥ ಈ ತೀರ್ಥರಾಜನ ಮಾಹಾತ್ಮ್ಯೆಯನ್ನು ದೇಶಾಂತರಗಳಲ್ಲಿಯೂ ಶ್ರವಣ ಮಾಡುವನೂ, ಶ್ರವಣ ಮಾಡಿಸಿದವನೂ, ಆ ಪ್ರಯಾಗದ ಕ್ಷೇತ್ರದ ದರ್ಶನದಷ್ಟೇ ಫಲವನ್ನು ಪಡೆಯುತ್ತಾನೆ. ॥ ೪೬ ॥ ಪ್ರಯಾಗ ಮಾಹಾತ್ಮ್ಯೆಯು ಪುಣ್ಯಕರವಾದುದು, ಮಾಘಮಾಹಾತ್ಮ್ಯೆಯೂ ಅಷ್ಟೇ; ಇವೆರಡನ್ನೂ ಮಾಘಮಾಸದಲ್ಲಿ ಶ್ರವಣ ಮಾಡಿದವರ ಪುಣ್ಯವು ಕೊನೆಯಿಲ್ಲದ್ದು. ॥ ೪೭ ॥ ಈ ರೀತಿಯಾಗಿ ನಾನಾವಿಧವಾದ ಪುಣ್ಯಕರ್ಮ ಮಾಡುವವರಿಗೆ ಶ್ರೀಮಾಧವದೇವರು ಐಹಿಕಾಮುಷ್ಮಿಕ ಫಲಗಳನ್ನೆಲ್ಲ ಕೊಡುವನು. ॥ ೪೮ ॥

॥ ನಲವತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತಚತ್ವಾರಿಂಶೋಽಧ್ಯಾಯಃ ॥ ೪೭ ॥

**ಸನಕಾದಯ ಊಚುಃ—**

> ಶೇಷರಾಜ ಮಹಾರಾಜ ಪುರಾಣಶ್ರವಣೇ ವಿಧಿಃ ।
> ನ ಶ್ರುತೋಽಸ್ಮಾಭಿರಧುನಾ ತಂ ವದಸ್ವಾನುಗೃಹ್ಯ ನಃ ॥ ೧ ॥
> ಕೀದೃಶೋಽಪೇಕ್ಷ್ಯತೇ ವಕ್ತಾ ಶ್ರೋತಾರಃ ಕೀದೃಶಾ ಮತಾಃ ।
> ಯೇ ಚೋಭಯೇಷಾಂ ನಿಯಮಾಸ್ತತ್ಸರ್ವಮನುವರ್ಣಯ ॥ ೨ ॥

## ॥ ನಲವತ್ತೇಳನೆಯ ಅಧ್ಯಾಯವು ॥

**ಸನಕಾದಿಗಳು ಹೇಳಿದರು—**

ಮಹಾರಾಜರಾದಂಥ ಶೇಷದೇವರೇ! ಪುರಾಣಗಳನ್ನು ಶ್ರವಣ ಮಾಡುವ ವಿಧಿಯು ನಮ್ಮಿಂದ ಕೇಳಲ್ಪಟ್ಟಿಲ್ಲ. ಅನುಗ್ರಹಿಸಿ ಅದನ್ನು ನಮಗೆ ಹೇಳಿರಿ. ॥ ೧ ॥ ಪುರಾಣ ಹೇಳುವವರು ಯಾವ ರೀತಿಯಾಗಿರಬೇಕು ಮತ್ತು ಕೇಳತಕ್ಕವರು ಯಾವ ರೀತಿಯಾಗಿರಬೇಕು? ಈ ಎರಡು ಗುಂಪಿನವರಿಗೆ ಇರಬೇಕಾದ ನಿಯಮಗಳನ್ನು ವರ್ಣಿಸಿರಿ. ॥ ೨ ॥

**ಶೇಷ ಉವಾಚ—**

> ಸಮ್ಯಕ್ಪೃಷ್ಟಂ ಮುನಿಶ್ರೇಷ್ಠಾಃ ಸರ್ವಲೋಕೋಪಕಾರಕಮ್ ।
> ಪುರಾಣಶ್ರವಣಂ ಯೇನ ವಿಧಿನಾ ಸಫಲಂ ಭವೇತ್ ॥ ೩ ॥
> ತಂ ವಿಧಿಂ ಕಥಯಿಷ್ಯೇಽಹಂ ವ್ಯಾಸದೇವೇನ ವರ್ಣಿತಮ್ ।
> ವಕ್ತೃಶ್ರೋತೃಗುಣೋಪೇತಂ ಪುಣ್ಯಂ ಗೋಪ್ಯಂ ಜಗದ್ಧಿತಮ್ ॥ ೪ ॥
> ಬಾಲೋ ಯುವಾಥ ವೃದ್ಧೋ ವಾ ದರಿದ್ರೋ ದುರ್ಬಲೋಽಪಿ ವಾ ।
> ಪುರಾಣಜ್ಞಃ ಸದಾ ವಂದ್ಯಃ ಪೂಜ್ಯಶ್ಚ ಸುಖಮರ್ಥಿಭಿಃ ॥ ೫ ॥
> ನ ನೀಚಬುದ್ಧಿಂ ಕುರ್ವೀತ ಪುರಾಣಜ್ಞೇ ಕಥಂಚನ ।
> ಯಸ್ಯ ವಕ್ತ್ರೋದ್ಗತಾ ವಾಣೀ ಕಾಮಧೇನುಶ್ಶರೀರಿಣಾಮ್ ॥ ೬ ॥
> ಗುರವಸ್ಸಂತಿ ಲೋಕಸ್ಯ ಜನ್ಮತೋ ಗುಣತಶ್ಚ ಯೇ ।
> ತೇಷಾಮಪಿ ಚ ಸರ್ವೇಷಾಂ ಪುರಾಣಜ್ಞಃ ಪರೋ ಗುರುಃ ॥ ೭ ॥
> ಸಂಸಾರಾರ್ಣವಮಗ್ನಾನಾಂ ತೃಷ್ಣಾಕುಲಿತಚೇತಸಾಮ್ ।
> ಯೋ ದದ್ಯಾನ್ನಿರ್ವೃತಿಂ ಕೋಽನ್ಯಃ ಪುನಸ್ತಸ್ಮಾತ್ಪರೋ ಗುರುಃ ॥ ೮ ॥
> ಪುರಾಣಜ್ಞಶ್ಶುಚಿರ್ದಾಂತಶ್ಶಾಂತೋ ವಿಜಿತಮತ್ಸರಃ ।
> ಸಾಧುಃ ಕಾರುಣ್ಯವಾನ್ವಕ್ತಾ ವದೇದ್ಭಾಗವತಃ ಕಥಾಮ್ ॥ ೯ ॥
> ವ್ಯಾಸಾಸನಸಮಾರೂಢೋ ಯಾವತ್ಪೌರಾಣಿಕೋ ದ್ವಿಜಃ ।
> ಆಸಮಾಪ್ತೇಃ ಪುರಾಣಸ್ಯ ನಮಸ್ಕುರ್ಯಾನ್ನ ಕಸ್ಯಚಿತ್ ॥ ೧೦ ॥

ಯೇ ಧೂರ್ತಾ ಯೇ ಚ ದುರ್ವೃತ್ತಾಃ ಸ್ವಾಗತಾ ವಿಜಿಗೀಷವಃ ।
ತೇಷಾಂ ಕುಟಿಲವೃತ್ತೀನಾಂ ಸಾಮ್ನೇ ನೈವ ವದೇತ್ಕಥಾಮ್ ॥ ೧೧ ॥
ಸತಾಮೇವ ಪ್ರವಕ್ತವ್ಯಂ ಪುಣ್ಯಂ ಪುಣ್ಯತರಂ ಯತಃ ।
ವಾಚಯೇತ್ಪುಣ್ಯಸದನೇ ಪುಣ್ಯಕ್ಷೇತ್ರೇ ದ್ವಿಜೋತ್ತಮಃ ॥ ೧೨ ॥
ಬ್ರಹ್ಮದ್ವೇಷರತಾನಾಂ ಚ ದಂಭಾಚಾರರತಾತ್ಮನಾಮ್ ।
ಶಠಾನಾಂ ವಕ್ರವೃತ್ತೀನಾಂ ನ ಬ್ರೂಯಾದಿದಮುತ್ತಮಮ್ ॥ ೧೩ ॥
ತ್ಯಕ್ತಕಾಮಾದಿದೋಷಾಣಾಂ ವಿಷ್ಣುಭಕ್ತಿರತಾತ್ಮನಾಮ್ ।
ಗುರುಭಕ್ತಿಪರಾಣಾಂ ಚ ವಕ್ತವ್ಯಂ ಮೋಕ್ಷಸಾಧನಮ್ ॥ ೧೪ ॥
ಕೃತನಿತ್ಯಕ್ರಿಯಸ್ಸಮ್ಯಙ್ನತ್ವಾ ಸ್ವಾಭೀಷ್ಟದೇವತಾಮ್ ।
ಸ್ವಪರಾರ್ಥಾನ್ಹೃದಿ ನ್ಯಸ್ಯ ದ್ರವಚಿತ್ತೋ ವದೇತ್ಕಥಾಮ್ ॥ ೧೫ ॥
ಏತೇ ವಕ್ತೃಗುಣಾಃ ಪ್ರೋಕ್ತಾಸ್ಸರ್ವೇಷಾಮುಪಕಾರಕಾಃ ।
ಅಥ ಶ್ರೋತುರ್ಗುಣಾನ್ವಕ್ಷ್ಯೇ ಶ್ರೋತೃಪುಣ್ಯವಿವರ್ಧನಾತ್ ॥ ೧೬ ॥
ಶ್ರದ್ಧಾಭಕ್ತಿಸಮಾಯುಕ್ತಾನಾನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾ ಶುಚಯೋಽವ್ಯಗ್ರಾ ಶ್ರೋತಾರಃ ಫಲಭಾಗಿನಃ ॥ ೧೭ ॥
ಅಭಕ್ತ್ಯಾ ಯೇ ಬಲಾದ್ವಾಪಿ ಸಂಕೋಚೇನಾನ್ಯಕಾರ್ಯತಃ ।
ಕಥಾಂ ಶೃಣ್ವಂತಿ ಪಾಪಘ್ನೀಂ ನ ತೇಷಾಂ ಸಕಲಂ ಫಲಮ್ ॥ ೧೮ ॥
ಸ್ತ್ರಿಯೋ ವೃದ್ಧಾ ಜಡಾ ಮೂರ್ಖಾ ಅರ್ಥಜ್ಞಾನಂ ವಿನಾಪಿ ಯೇ ।
ಕಥಾಂ ಶೃಣ್ವಂತಿ ಯಾಂ ಭಕ್ತ್ಯಾ ತೇ ಯಾಂತಿ ಪರಮಾಂ ಗತಿಮ್ ॥ ೧೯ ॥
ಪುರಾಣಜ್ಞಂ ತ್ವಸಂಪೂಜ್ಯ ಫಲತಾಂಬೂಲಪುಷ್ಪಕೈಃ ।
ಯೇ ಶೃಣ್ವಂತಿ ಕಥಾಂ ತೇ ಸ್ಯುರ್ದರಿದ್ರಾ ಜನ್ಮಜನ್ಮನಿ ॥ ೨೦ ॥
ಕಥಾಯಾಂ ಕಥ್ಯಮಾನಾಯಾಂ ಯೇ ಗಚ್ಛಂತ್ಯನ್ಯತೋ ನರಾಃ ।
ಕಲಹಂ ವಾ ಪ್ರಕುರ್ವಂತಿ ತೇ ವೈ ನಿರಯಗಾಮಿನಃ ॥ ೨೧ ॥
ತಾಂಬೂಲಂ ಚರ್ವಯಂತೋ ಯೇ ಕಥಾಂ ಶೃಣ್ವಂತಿ ಪಾವನೀಮ್ ।
ಸ್ವವಿಷ್ಠಾಂ ಖಾದಯಂತ್ಯಂತೇ ನರಕೇ ಯಮಕಿಂಕರಾಃ ॥ ೨೨ ॥
ಯೇ ಚ ತುಂಗಾಸನಾರೂಢಾ ಕಥಾಂ ಶೃಣ್ವಂತಿ ದಾಂಭಿಕಾಃ ।
ಅನೇಕಾನ್ನರಕಾನ್ಭುಕ್ತ್ವಾ ತೇ ಭವಂತ್ಯತ್ರ ವಾಯಸಾಃ ॥ ೨೩ ॥
ಯೇ ಚ ವೀರಾಸನಾರೂಢಾ ಯೇ ಚೈಕಾಸನಸಂಸ್ಥಿತಾಃ ।
ಶೃಣ್ವಂತಿ ಸತ್ಕಥಾಂ ತೇ ವೈ ಭವಂತ್ಯರ್ಜುನಪಾದಪಾಃ ॥ ೨೪ ॥
ಅಸಂಪ್ರಣಮ್ಯ ಶೃಣ್ವಂತೋ ವಿಷವೃಕ್ಷಾ ಭವಂತಿ ಹಿ ।
ತಥಾ ಶಯಾನಾಃ ಶೃಣ್ವಂತೋ ಭವಂತ್ಯಜಗರಾ ನರಾಃ ॥ ೨೫ ॥

ಯೇ ನಿಂದಂತಿ ಪುರಾಣಜ್ಞಂ ಕಥಾಂ ವಾ ಪಾಪನಾಶಿನೀಮ್ ।
ತೇ ಯಾಮೀಂ ಯಾತನಾಂ ಭುಕ್ತ್ವಾ ಜಾಯಂತೇ ಶುನಕಾ ನರಾಃ ॥ ೨೬ ॥
ದುರುತ್ತರಂ ವದಂತೋ ಯೇ ಕಥಾಯಾಂ ವಿಘ್ನಯಂತಿ ತೇ ।
ಬಹ್ವಬ್ದಂ ನರಕಾನ್ಭುಕ್ತ್ವಾ ಭವಂತಿ ಗ್ರಾಮಶೂಕರಾಃ ॥ ೨೭ ॥
ಆಸನಾರ್ಥೇ ಪ್ರಯಚ್ಛಂತಿ ಪುರಾಣಜ್ಞಾನಿನೇ ನರಾಃ ।
ಊರ್ಣಾಕಂಬಲವಾಸಾಂಸಿ ಮಂಚಂ ತೂಲವತೀಂ ಪಟೀಮ್ ॥ ೨೮ ॥
ಪೃಷ್ಠತಃ ಪಾರ್ಶ್ವಯೋಶ್ಚೈವ ಮೃದೂನ್ಯುಚ್ಛ್ರೀರ್ಷಿಕಾಸ್ಥಲಮ್ ।
ಪ್ರಾವಾರಂ ಪರಿಧೇಯಂ ಚ ಸಂಭವೇ ಭೂಷಣಾದಿಕಮ್ ॥ ೨೯ ॥
ಋತಾವೃತೌ ಸಮುತ್ಪನ್ನಂ ಭೋಗ್ಯಂ ಪುಷ್ಪಫಲಾದಿಕಮ್ ।
ಯಾವತ್ಕಥಂ ಭೋಜನಂ ಚ ಜಲಭೋಜನಭಾಜನೇ ॥ ೩೦ ॥
ಜಾತೀಫಲಲವಂಗೈಲಾಯುಕ್ತಂ ತಾಂಬೂಲಮುತ್ತಮಮ್ ।
ಚಂದನಂ ಚಾಂಗಲೇಪಾರ್ಥಂ ಕಸ್ತೂರೀಕೇಸರಾನ್ವಿತಮ್ ॥ ೩೧ ॥
ಇತ್ಯಾದಿಭೋಗವಸ್ತೂನಿ ಭಕ್ತ್ಯಾ ಯಚ್ಛಂತಿ ಯೇ ನರಾಃ ।
ಶ್ರವಣಂ ಸಫಲಂ ತೇಷಾಂ ಮಾಧವೋಽತಿಪ್ರಸೀದತಿ ॥ ೩೨ ॥
ದರಿದ್ರೇಣಾರ್ಥಿತೈರೇವ ಕುಸುಮೈಸ್ತುಲಸೀದಲೈಃ ।
ಪ್ರೀಣಾತಿ ಮಾಧವೋ ಭಕ್ತ್ಯಾ ನಾನ್ಯತ್ಕಿಂಚಿದಪೇಕ್ಷತೇ ॥ ೩೩ ॥
ಶ್ರದ್ಧೈವ ಸರ್ವಧರ್ಮಸ್ಯ ಮಾತೇವ ಹಿತಕಾರಿಣೀ ।
ಶ್ರದ್ಧಯೈವ ನೃಣಾಂ ಸಿದ್ಧಿರ್ಜಾಯತೇ ಲೋಕಯೋರ್ದ್ವಯೋಃ ॥ ೩೪ ॥
ಶ್ರದ್ಧಯಾ ಭಜತಃ ಪುಂಸಶ್ಶಿಲಾಪಿ ಫಲದಾಯಿನೀ ।
ಮೂರ್ಖೋಽಪಿ ಪೂಜಿತೋ ಭಕ್ತ್ಯಾ ಗುರುರ್ಭವತಿ ಸಿದ್ಧಿದಃ ॥ ೩೫ ॥
ಅಶ್ರದ್ಧಯಾ ಕೃತಾ ಪೂಜಾ ದಾನಂ ಯಜ್ಞಸ್ತಪೋ ವ್ರತಮ್ ।
ಸರ್ವಂ ನಿಷ್ಫಲತಾಂ ಯಾತಿ ಪುಷ್ಪಂ ವಂಧ್ಯಾತರೋರಿವ ॥ ೩೬ ॥
ಸರ್ವತ್ರ ಸಂಶಯಾವಿಷ್ಟಃ ಶ್ರದ್ಧಾಹೀನೋಽತಿಚಂಚಲಃ ।
ಪರಮಾರ್ಥೇ ಪರಿಭ್ರಷ್ಟಸ್ಸಂಸೃತೇರ್ನ ಹಿ ಮುಚ್ಯತೇ ॥ ೩೭ ॥
ಸರ್ವದೇವಮಯೋ ವಿಷ್ಣುಃ ಸ್ಮರಣಾರ್ತಿಪ್ರಣಾಶನಃ ।
ಸದ್ಭಕ್ತವತ್ಸಲೋ ದೇವೋ ಭಕ್ತ್ಯಾ ತುಷ್ಯತಿ ನಾನ್ಯಥಾ ॥ ೩೮ ॥
ಅವಶೇನಾಪಿ ಯನ್ನಾಮ ಕೀರ್ತಿತೇ ವಾ ಸ್ಮೃತೇಽಥ ವಾ ।
ವಿಮುಕ್ತಃ ಪಾತಕೈಃ ಸರ್ವೈಃ ಪರಮಂ ಪದಮಶ್ನುತೇ ॥ ೩೯ ॥
ಸಂಸಾರಘೋರಕಾಂತಾರದಾವಾಗ್ನಿರ್ಮಧುಸೂದನಃ ।
ಸ್ಮರ್ತೄಣಾಂ ಸರ್ವಪಾಪಾನಿ ನಾಶಯತ್ಯಾಶು ಸತ್ತಮಾಃ ॥ ೪೦ ॥

ತದರ್ಥದ್ಯೋತಕಮಿದಂ ಪುರಾಣಂ ಶ್ರಾವ್ಯಮುತ್ತಮಮ್ ।
ಪಠನಾಚ್ಛ್ರವಣಾದ್ವಾಪಿ ಸರ್ವಪಾಪವಿನಾಶನಮ್ ॥ ೪೦ ॥
ಯಸ್ಯಾತ್ರ ಶ್ರವಣೇ ಬುದ್ಧಿರ್ವರ್ತತೇ ಭಕ್ತಿಸಂಯುತಾ ।
ಸ ಏವ ಕೃತಕೃತ್ಯಸ್ತು ಸರ್ವಶಾಸ್ತ್ರಾರ್ಥಕೋವಿದಃ ॥ ೪೨ ॥
ಯೇ ಶೃಣ್ವಂತಿ ಕಥಾಂ ವಿಷ್ಣೋಃ ಪುಣ್ಯಾಂ ಭುವನಪಾವನೀಮ್ ।
ತೇ ವೈ ಮನುಷ್ಯಲೋಕೇಽಸ್ಮಿನ್ವಿಷ್ಣುರೂಪಾ ನ ಸಂಶಯಃ ॥ ೪೩ ॥
ಶೃಣ್ವಂತಿ ಭಗವದ್ಗಾಥಾಂ ಕೀರ್ತಯಂತೇ ಚ ಯೇ ಸದಾ ।
ತೇಷಾಂ ಪಾದರಜಾಂಸ್ಯೇವಂ ತೀರ್ಥಾನಿ ಮುನಯೋ ವಿದುಃ ॥ ೪೪ ॥
ತಸ್ಮಾನ್ನಿಶ್ರೇಯಸಂಗುಸ್ತು ಯೋಽಭಿವಾಂಛತಿ ದೇಹಿನಃ ।
ತೇ ಶೃಣ್ವಂತು ಸದಾ ಭಕ್ತ್ಯಾ ಶಕ್ತ್ಯಾ ಹರಿಕಥಾಂ ಮುದಾ ॥ ೪೫ ॥
ಸಂಸಾರತಾಪನಿಸ್ತಪ್ತಾ ಯೇ ನರಾಃ ಶಾಂತಿಮಿಚ್ಛವಃ ।
ಪಿಬಂತಿ ಸಾದರಂ ತತ್ರ ನಿತ್ಯಂ ಹರಿಕಥಾಸುಧಾಮ್ ॥ ೪೬ ॥
ಯದ್ಯಶಕ್ತಸ್ಸದಾ ಶ್ರೋತುಂ ಕಥಾಂ ಸಂಸೃತಿಜಾಲಗಃ ।
ಮುಹೂರ್ತಮಾತ್ರಂ ಶೃಣುಯಾನ್ನಿಯತಾತ್ಮಾ ದಿನೇ ದಿನೇ ॥ ೪೭ ॥
ಅಶಕ್ತಃ ಪ್ರತ್ಯಹಂ ವಾಪಿ ಯಃ ಶ್ರೋತುಂ ಪರವಾನ್ ಜನಃ ।
ವೈಶಾಖೇ ಕಾರ್ತಿಕೇ ಮಾಘೇ ಶೃಣುಯಾದ್ಯತ್ನತೋ ನರಃ ॥ ೪೮ ॥
ಮುಹೂರ್ತಂ ವಾ ತದರ್ಧಂ ವಾ ಕ್ಷಣಂ ವಾ ಪಾವನೀಂ ಕಥಾಮ್ ।
ಯೇ ಶೃಣ್ವಂತಿ ಸದಾ ಭಕ್ತ್ಯಾ ನ ತೇಷಾಮಸ್ತಿ ದುರ್ಗತಿಃ ॥ ೪೯ ॥
ಯತ್ಫಲಂ ಸರ್ವದೇವೇಷು ಸರ್ವಯಜ್ಞೇಷು ಯತ್ಫಲಮ್ ।
ಸಕೃತ್ಪುರಾಣಶ್ರವಣಾತ್ತತ್ಫಲಂ ವಿಂದತೇ ನರಃ ॥ ೫೦ ॥
ಕಲೌ ಯುಗೇ ವಿಶೇಷೇಣ ಪುರಾಣಶ್ರವಣಾದೃತೇ ।
ನಾಸ್ತಿ ಧರ್ಮಃ ಪರಃ ಪುಂಸಾಮಾಲಸ್ಯಶಿಥಿಲಾತ್ಮನಾಮ್ ॥ ೫೧ ॥
ಪುರಾಣಶ್ರವಣಂ ವಿಷ್ಣೋರ್ನಾಮಸಂಕೀರ್ತನಂ ತಥಾ ।
ಉಭಯೇ ಚ ಮನುಷ್ಯಾಣಾಂ ಕಲ್ಪದ್ರುಮಮಹಾಫಲೇ ॥ ೫೨ ॥
ಕಲೌ ದುರ್ಮೇಧಸೋ ವಿಪ್ರಾ ಧರ್ಮಾಚಾರವಿವರ್ಜಿತಾಃ ।
ಇತಿ ಸಂಚಿಂತ್ಯ ಕೃಪಯಾ ಭಗವಾನ್ಬಾದರಾಯಣಃ ॥ ೫೩ ॥
ತೇಷಾಂ ಹಿತಾಯ ವಿದಧೇ ಪುರಾಣಾಖ್ಯಂ ಸುಧಾರಸಮ್ ।
ಅನಾಯಾಸೇನ ಯತ್ಪಾನಾನ್ಮರ್ತ್ಯೋ ಪ್ರಾಪ್ನೋದಮರ್ತ್ಯತಾಮ್ ॥ ೫೪ ॥
ತಸ್ಮಾತ್ಸರ್ವಾತ್ಮನಾ ಪೂರ್ವಂ ಕರ್ತವ್ಯೋ ಧರ್ಮಸಂಗ್ರಹಃ ।
ಉಪಕುರ್ಯಾತ್ಕಥಾಕಾಲೇ ಗೃಹದಾಹೇಽಂಬು ನಿರ್ಮಿತಮ್ ॥ ೫೫ ॥

ಭವತಾಂ ವಿದಿತಪ್ರಾಯಂ ಧರ್ಮತತ್ತ್ವಂ ಮಹಾತ್ಮನಾಮ್ ।
ಪ್ರಶ್ನಪ್ರತಿವಚಸ್ಸಿದ್ಧ್ಯೈ ತಥಾಪ್ಯುಕ್ತಂ ಮುನೀಶ್ವರಾಃ ॥ ೫೬ ॥
ಏವಂ ಪುರಾಣಶ್ರವಣೇ ವಿಧಿರುಕ್ತೋ ಯಥಾಶ್ರುತಃ ।
ಶೃಣ್ವನ್ನನೇನ ವಿಧಿನಾ ಸಮಗ್ರಫಲಮಶ್ನುತೇ ॥ ೫೭ ॥
ಪ್ರಾತಃ ಸ್ನಾತ್ವಾ ವಿಧಾನೇನ ಗಂಗಾಯಮುನಸಂಗಮೇ ।
ತೀರ್ಥರಾಜಸ್ಯ ಮಾಹಾತ್ಮ್ಯಂ ಶೃಣುಯಾದ್ಭಕ್ತಿತೋ ನರಃ ॥ ೫೮ ॥
ತೇನ ಯಾತ್ರಾಫಲಂ ಪೂರ್ಣಂ ಪ್ರಾಪ್ನೋತಿ ಗತಕಲ್ಮಷಃ ।
ಸರ್ವದಾ ಮಾಘಮಾಸೇ ತು ವಿಶೇಷೇಣ ಮುನೀಶ್ವರಾಃ ॥ ೫೯ ॥
ಪ್ರಯಾಗೇ ಮಾಘಮಾಸೇ ತು ದೇವಾನಾಮಪಿ ದುರ್ಲಭಃ ।
ವಕ್ತುಂ ತತ್ರ ನ ಶಕ್ತೋಽಹಂ ಸ್ನಾನದಾನಾದಿಜಂ ಫಲಮ್ ॥ ೬೦ ॥
ಮಾಘಪ್ರಯಾಗಮಾಹಾತ್ಮ್ಯಂ ಮಾಘಮಾಹಾತ್ಮ್ಯಮೇವ ಚ ।
ಶೃಣುಯಾತ್ಸದ್ದ್ವಿಜಾದ್ಭಕ್ತ್ಯಾ ವಿಶೇಷಾತ್ತೀರ್ಥವಾಸಿನಃ ॥ ೬೧ ॥
ಭಕ್ತ್ಯಾ ಯಃ ಶೃಣುಯಾದತ್ರ ತೀರ್ಥಮಾಹಾತ್ಮ್ಯಮುತ್ತಮಮ್ ।
ಸರ್ವಕಾಮಫಲಂ ಭುಕ್ತ್ವಾ ವೈಕುಂಠೇ ವ್ರಜತೇ ನರಃ ॥ ೬೨ ॥
ಪೃಷ್ಟಂ ಸಾರ್ವಜನೀನಂ ಯದ್ಭವದ್ಭಿರ್ಲೋಕಮಂಗಲೈಃ ।
ನಿರೂಪಿತಂ ಮಯಾ ಸರ್ವಂ ಕಿಮನ್ಯಚ್ಛ್ರೋತುಮಿಚ್ಛಥ ॥ ೬೩ ॥

॥ ಇತಿ ಸಪ್ತಚತ್ವಾರಿಂಶೋಽಧ್ಯಾಯಃ ॥

ಶೇಷದೇವರು ಹೇಳಿದರು—

ಪುರಾಣಗಳನ್ನು ವಿಧಿವತ್ತಾಗಿ ಕೇಳಿದರೆ ಅದು ಫಲದಾಯಕವಾಗುವುದು. ಇಂಥಹ ಪುರಾಣಶ್ರವಣದ ವಿಧಿಯ ಬಗ್ಗೆ ಲೋಕೋಪಕಾರಕದೃಷ್ಟಿಯಿಂದ ನೀವು ಪ್ರಶ್ನಿಸಿ ಒಳ್ಳೆಯದನ್ನು ಮಾಡಿದಿರಿ. ॥ ೩ ॥ ಈ ಪುರಾಣಶ್ರವಣವಿಧಿಯು ವೇದವ್ಯಾಸರಿಂದ ವರ್ಣಿಸಲ್ಪಟ್ಟಿದ್ದು, ನಾನು ನಿಮಗೀಗ ಹೇಳುವೆನು. ಈ ವಿಧಿಯು ಪುರಾಣ ಹೇಳುವವರ ಮತ್ತು ಕೇಳುವವರ ಗುಣಗಳಿಗೆ ಸಂಬಂಧಪಟ್ಟದ್ದು, ಅತಿರಹಸ್ಯವಾದದ್ದು, ಪುಣ್ಯಕರವಾದದ್ದು ಮತ್ತು ಜಗತ್ತಿಗೆ ಹಿತಕಾರಿಯಾದದ್ದು ॥ ೪ ॥ ಪುರಾಣ ಹೇಳುವವರು, ಬಾಲಕರಾಗಲಿ, ವೃದ್ಧರಾಗಿರಲಿ, ದರಿದ್ರರಾಗಲಿ ಅಥವಾ ದುರ್ಬಲರಾಗಿರಲಿ ಸದಾ ನಮಸ್ಕಾರಾರ್ಹರು ಮತ್ತು ಪೂಜನೀಯರು. ॥ ೫ ॥ ಯಾರ ಬಾಯಿಂದ ಹೊರಡತಕ್ಕ ವಾಣಿಯು ಕಾಮಧೇನುವಂತೆ ಸಕಲರ ಆಸೆಗಳನ್ನು ಈಡೇರಿಸತಕ್ಕದ್ದೋ ಅಂತಹ ಪುರಾಣಜ್ಞರ ಬಗ್ಗೆ ನೀಚಬುದ್ಧಿಯನ್ನು ಎಂದೂ ತಾಳಬಾರದು. ॥ ೬ ॥ ಕೆಲವರು ತಮ್ಮ ತಮ್ಮ ಗುಣಗಳಿಂದಲೂ ಮತ್ತೆ ಕೆಲವರು ತಮ್ಮ ಜನ್ಮದಿಂದಲೂ ಪೂಜ್ಯತ್ವವನ್ನು ಹೊಂದಿರುತ್ತಾರೆ. ಆದರೆ ಇವರೆಲ್ಲರಿಗೂ ಪುರಾಣಜ್ಞನು ಅಗ್ರಸ್ಥಾನದಲ್ಲಿರಲು ಯೋಗ್ಯನಾದ ಗುರುವು. (ಗು ಶಬ್ದಸ್ತ್ವಂಧಕಾರಸ್ಸ್ಯಾತ್ ರು ಶಬ್ದಸ್ತನ್ನಿರೋಧಕಃ—ಭವಿಷ್ಯೋತ್ತರಪುರಾಣ. ಗುರು—ಅಂಧಕಾರವನ್ನು ಅಥವಾ ಅಜ್ಞಾನವನ್ನು ಪರಿಹರಿಸತಕ್ಕವನು ಎಂದರ್ಥ) ॥ ೭ ॥ ಸಂಸಾರ ಸಾಗರದಲ್ಲಿ ಮುಳುಗಿ ಹಸಿವು

ನೀರಡಿಕೆಗಳಿಂದ ಬಳಲುತ್ತಿರುವ ಜೀವಿಗಳಿಗೆ ಶಾಂತಿಯನ್ನು ಸಂಸಾರದಿಂದ ನಿವೃತ್ತಿಯನ್ನು ತಂದು ಕೊಡುವುದರಲ್ಲಿ ಪುರಾಣಜ್ಞರನ್ನು ಬಿಟ್ಟು ಬೇರೆ ಯಾರು ತಾನೇ ಪುರೋಗಾಮಿಗಳಾದ ಗುರುಗಳಾಗಬಲ್ಲರು? ॥ ೮ ॥ ಪುರಾಣಜ್ಞರು ಸದಾಚಾರಸಂಪನ್ನರಾಗಿಯೂ, ಇಂದ್ರಿಯನಿಗ್ರಹ ಉಳ್ಳವರಾಗಿಯೂ, ಕಾಮಕ್ರೋಧಾದಿಗಳನ್ನು ಬಿಟ್ಟವರೂ, ಕರುಣೆಯುಳ್ಳವರೂ, ಒಳ್ಳೆಯ ವಾಗ್ಮಿಯೂ ಮತ್ತು ಶ್ರೀಮನ್ನಾರಾಯಣಕಥೆಗಳನ್ನು ಚೆನ್ನಾಗಿ ಬೋಧಿಸುವವರೂ ಆಗಿರಬೇಕು. ॥ ೯ ॥ ಪುರಾಣಜ್ಞರು ವ್ಯಾಸಪೀಠದ ಮುಂದೆ ತಮ್ಮ ಆಸನದಲ್ಲಿ ಮಂಡಿಸಿ ಪುರಾಣ ಪಠನ ನಡೆಯುತ್ತಿರುವವರೆಗೂ ಯಾರಿಗೂ ನಮಸ್ಕಾರ ಮಾಡಬಾರದು. ॥ ೧೦ ॥ ಧೂರ್ತರೂ ಕೆಟ್ಟಚಾಳಿಯುಳ್ಳವರೂ ಮತ್ತು ಪುರಾಣಜ್ಞರನ್ನು ವಾದದಲ್ಲಿ ಗೆಲ್ಲುವ ಉದ್ದೇಶ್ಯದಿಂದ ತಾವೇ ತಾವಾಗಿ ಬಂದಿರುವವರೂ ಈ ರೀತಿಯಾದ ಕುತಂತ್ರವೃತ್ತಿವುಳ್ಳವರ ಮುಂದೆಯೂ ಭಗವಂತನ ಕಥೆಯನ್ನು ಹೇಳಲೇಬಾರದು. ॥ ೧೧ ॥ ದ್ವಿಜೋತ್ತಮರುಗಳು ಪುಣ್ಯಕರವಾದುವುಗಳಿಗಿಂತ ಹೆಚ್ಚು ಪುಣ್ಯಕರವಾದ ಪುರಾಣಕಥನವನ್ನು ಕೇವಲ ಸಜ್ಜನರ ಮುಂದೆ, ಸತ್ಸಭೆಗಳಲ್ಲಿ ಮತ್ತು ಪುಣ್ಯಕ್ಷೇತ್ರಗಳಲ್ಲಿ ಹೇಳಬೇಕು. ॥ ೧೨ ॥ ಈ ಉತ್ತಮ ಕಥಾದಿಗಳನ್ನು ಬ್ರಹ್ಮದ್ವೇಷ ಉಳ್ಳವರ, ಆಸಕ್ತರಾಗದವರ, ಡಂಭಾಚಾರದಲ್ಲಿ ಆಸಕ್ತರಾದವರ, ಮೂರ್ಖರ ಮತ್ತು ಬಕವೃತ್ತಿಯುಳ್ಳವರ ಮುಂದೆ ಹೇಳಲೇಬಾರದು. ॥ ೧೩ ॥ ಈ ಕಥೆಗಳು ಮೋಕ್ಷಪ್ರಾಪ್ತಿಗೆ ಸಾಧನಗಳಾದ್ದರಿಂದ ಇವುಗಳನ್ನು ಕಾಮಾದಿದೋಷಗಳನ್ನು ಬಿಟ್ಟು ವಿಷ್ಣುಭಕ್ತಿ ಪರಾಯಣರಾದವರಿಗೇ ಮತ್ತು ಗುರುಭಕ್ತಿಯುಳ್ಳವರಿಗೇ ಹೇಳಬೇಕು. ॥ ೧೪ ॥ ಪುರಾಣಜ್ಞರು ತಮ್ಮ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬಂದು, ತಮ್ಮ ಅಭೀಷ್ಟದೇವತೆಯನ್ನು ನಮಸ್ಕರಿಸಿ ತನ್ನ ಮತ್ತು ಶ್ರೋತೃಗಳ ಹಿತವನ್ನೂ ಮನಸ್ಸಿನಲ್ಲಿಟ್ಟುಕೊಂಡು ದಯಾರ್ದ್ರಹೃದಯವುಳ್ಳವರಾಗಿ ಇದ್ದುಕೊಂಡು ಕಥೆಗಳನ್ನು ಹೇಳಬೇಕು. ॥ ೧೫ ॥ ಈವರೆಗೆ ಹೇಳಿದುವುಗಳೆಲ್ಲ ಪುರಾಣಜ್ಞರ ಗುಣಗಳು. ಇದು ಎಲ್ಲರಿಗೂ ಬೇಕಾಗಿರತಕ್ಕವಗಳೇ ಆದ್ದರಿಂದ ಉಪಕಾರಕಗಳೇ. ಇನ್ನು ಶ್ರೋತೃಗಳ ಪುಣ್ಯವು ಹೆಚ್ಚುವುದ ಕ್ಕೋಸ್ಕರ ಶ್ರೋತೃಗಳ ಗುಣಗಳನ್ನು ಹೇಳುವೆನು. ॥ ೧೬ ॥ ಶ್ರದ್ಧೆ ಮತ್ತು ಭಕ್ತಿಗಳಿಂದ ಕೂಡಿರತಕ್ಕ ಸರ್ವರಿಗೂ ಮಾನ್ಯವಾಗಿರುವ ಕಾರ್ಯಗಳನ್ನು ಮಾಡುವುದರಲ್ಲಿಯೇ ಆಸಕ್ತಿಯುಳ್ಳ, ಸಂಯಮಿ ಯಾಗಿ ವಿವೇಚನೆಯಿಂದ ಮಾತನಾಡುವ, ಶುಚಿರ್ಭೂತರಾಗಿರತಕ್ಕ ಮತ್ತು ಶಾಂತಮನಸ್ಸುಳ್ಳ ಶ್ರೋತೃಗಳೇ ಪುರಾಣಶ್ರವಣದ ಫಲವನ್ನು ಹೊಂದತಕ್ಕವರು. ॥ ೧೭ ॥ ಭಕ್ತಿಯಿಲ್ಲದೆ ಮತ್ತೊಬ್ಬರ ಬಲಾತ್ಕಾರಕ್ಕಾಗಿ ಬಂದವರಿಗೆ, ಸಂಕೋಚದಿಂದ ಬಂದವರಿಗೆ, ಅನ್ಯಕಾರ್ಯಗಳಲ್ಲಿ ಆಸಕ್ತರಾಗಿದ್ದುಕೊಂಡಿರುವವರಿಗೆ ಪಾಪಪರಿಹಾರಕಗಳಾದ ಕಥೆಗಳು ಏನೂ ಫಲಪ್ರದ ವಾಗುವುದಿಲ್ಲ. ॥ ೧೮ ॥ ಸ್ತ್ರೀಯರಾಗಲೀ, ವೃದ್ಧರಾಗಿರಲಿ, ಜಡರಾಗಿರಲಿ, ಮೂರ್ಖರಾಗಿರಲಿ ಮತ್ತು ಅರ್ಥಜ್ಞಾನವನ್ನು ತಿಳಿಯಲು ಅಸಮರ್ಥರಾದವರಾಗಲೀ ಯಾರು ಪಾಪಪರಿಹಾರಕ ವಾಗುವ ಕಥೆಯನ್ನು ಕೇಳುತ್ತಾರೋ ಅವರೇ ಉತ್ತಮಗತಿಯನ್ನು ಹೊಂದುವವರು. ॥ ೧೯ ॥ ಪುರಾಣಜ್ಞರನ್ನು ಹಣ್ಣು, ಹೂವು ಮತ್ತು ತಾಂಬೂಲಾದಿಗಳಿಂದ ಪೂಜಿಸದೆ ಯಾರು ಕಥಾಶ್ರವಣ ಮಾಡುತ್ತಾರೋ ಅವರು ಜನ್ಮಜನ್ಮಾಂತರಗಳಲ್ಲಿಯೂ ದರಿದ್ರರಾಗಿಯೇ ಹುಟ್ಟುವರು. ॥ ೨೦ ॥ ಪುರಾಣಕಥೆಯು ಸಾಗುತ್ತಿರುವಾಗ ಯಾರು ಬೇರೆ ಕಡೆ ಎದ್ದು ಹೋಗುತ್ತಾರೋ ಮತ್ತು ಜಗಳವಾಡುತ್ತಾರೋ ಅವರು ನರಕಕ್ಕೆ ಹೋಗುವರು. ॥ ೨೧ ॥ ಪವಿತ್ರಗಳಾದ ಕಥೆಗಳನ್ನು

ಅಡಿಕೆಎಲೆಗಳನ್ನು ಜಗಿಯುತ್ತಾ ಯಾರು ಕೇಳುತ್ತಾರೋ ಅಂತಹವರಿಗೆ ಅವರದೇ ಅಮೇಧ್ಯವನ್ನು ಯಮಲೋಕದಲ್ಲಿ ತಿನ್ನಿಸುತ್ತಾರೆ. ॥ ೨೨ ॥ ಯಾರು ಡಾಂಭಿಕವಾಗಿ ಎತ್ತರವಾದ ಆಸನದಲ್ಲಿ ಕುಳಿತುಕೊಂಡು ಕಥೆಯನ್ನು ಕೇಳುತ್ತಾರೋ, ಅವರು ನರಕದಲ್ಲಿ ಅನೇಕ ಯಾತನೆಗಳನ್ನನುಭವಿಸಿ ಭೂಮಿಯಲ್ಲಿ ಕಾಗೆಗಳಾಗಿ ಹುಟ್ಟುತ್ತಾರೆ. ॥ ೨೩ ॥ ಯಾರು ವೀರಾಸನದಲ್ಲಿ ಕುಳಿತುಕೊಂಡು ಮತ್ತು ಪುರಾಣಜ್ಞರು ಕುಳಿತ ಆಸನದಲ್ಲೇ ಕುಳಿತು ಕಥೆ ಕೇಳುವರೋ, ಅವರು ಅರ್ಜುನವೃಕ್ಷಗಳಾಗಿ ಹುಟ್ಟುತ್ತಾರೆ. ॥ ೨೪ ॥ ಪುರಾಣಜ್ಞರನ್ನು ಭಕ್ತಿಯಿಂದ ನಮಿಸದೆ ಕಥೆ ಕೇಳುವವರು ವಿಷವೃಕ್ಷಗಳಾಗಿ ಹುಟ್ಟಿಕೊಳ್ಳುತ್ತಾರೆ. ಮಲಗಿಕೊಂಡು ಕಥೆ ಕೇಳುವವರು ಹೆಬ್ಬಾವಾಗಿ ಹುಟ್ಟುತ್ತಾರೆ. ॥ ೨೫ ॥ ಯಾರು ಪುರಾಣಜ್ಞರನ್ನಾಗಲೀ ಪುರಾಣದ ಕಥೆಯನ್ನಾಗಲೀ ನಿಂದೆ ಮಾಡುತ್ತಾರೋ ಅವರು ಯಮಲೋಕದಲ್ಲಿ ನರಕಯಾತನೆಗಳನ್ನನುಭವಿಸಿ ನಂತರ ಭೂಮಿಯಲ್ಲಿ ನಾಯಿಗಳಾಗಿ ಹುಟ್ಟುವರು. ॥ ೨೬ ॥ ಕೆಟ್ಟಕೆಟ್ಟ ಉತ್ತರಗಳನ್ನು ಹೇಳಿ ಯಾರು ಕಥಾಪ್ರಸಂಗದಲ್ಲಿ ವಿಘ್ನಗಳನ್ನುಂಟು ಮಾಡುವರೋ ಅವರು ಬಹಳ ನರಕದುಃಖಗಳನ್ನನುಭವಿಸಿ ಹಂದಿಗಳಾಗಿ ಹುಟ್ಟುವರು. ॥ ೨೭ ॥ ಪುರಾಣಜ್ಞರಿಗೆ ಕೂಡಲು ಆಸನ, ಉಣ್ಣೆಯ ಕಂಬಳಿ, ಬಟ್ಟೆಗಳು, ಮಲಗುವ ಮಂಚ, ಹತ್ತಿಯಿಂದ ತುಂಬಿದ ಹಾಸಿಗೆ, ಬೆನ್ನಿಗೆ ಮತ್ತು ಪಕ್ಕಗಳಿಗೆ ಒರಗುದಿಂಬುಗಳು, ಮೃದುವಾಗಿರುವ ತಲೆ ದಿಂಬು, ಹೊದ್ದುಕೊಳ್ಳುವ ಮತ್ತು ಉಟ್ಟುಕೊಳ್ಳುವ ಧೋತ್ರಗಳು, ಶಕ್ತಿಯಿದ್ದರೆ ಆಭರಣಾದಿಗಳು, ಆಯಾಯ ಋತುಗಳಲ್ಲಿ ಉತ್ಪತ್ತಿಯಾಗಿರುವ ಭೋಗ ಪದಾರ್ಥಗಳು, ಹೂವುಗಳು ಮತ್ತು ಹಣ್ಣುಗಳು, ಕಥೆಯು ನಡೆಯುತ್ತಿರುವ ಕಾಲಗಳಲ್ಲಿ ಭೋಜನ ವ್ಯವಸ್ಥೆ ಮತ್ತು ಪಾನೀಯ ಪಾತ್ರೆ, ಭೋಜನ ಮಾಡತಕ್ಕ ಪಾತ್ರೆ, ಜಾಪತ್ರೆ, ಲವಂಗ ಮತ್ತು ಏಲಕ್ಕಿ ಮಿಶ್ರಿತವಾಗಿರುವ ಉತ್ತಮ ತಾಂಬೂಲ, ಮೈಗೆ ಹಚ್ಚಿಕೊಳ್ಳಲು ಕಸ್ತೂರಿ ಮತ್ತು ಕೇಸರಿ ಪಚ್ಚಕರ್ಪೂರವೂ ಮಿಶ್ರವಾದ ಶ್ರೀಗಂಧ ಇತ್ಯಾದಿ ಭೋಗವಸ್ತುಗಳನ್ನು ಕೊಡುವರು ಧನ್ಯರು, ಅವರ ಪುರಾಣಶ್ರವಣವು ಸಫಲವಾಗುವುದು. ಮಾಧವನು ಅವರ ಬಗ್ಗೆ ಸಂತುಷ್ಟನಾಗುವನು. ॥ ೨೮-೩೨ ॥ ದರಿದ್ರನಿಂದ ಪ್ರಾರ್ಥನಾ-ಪೂರ್ವಕವಾಗಿ ಭಕ್ತಿಯಿಂದ ಕೊಡಲ್ಪಟ್ಟ ಹೂವಿನಿಂದಲೂ ಮತ್ತು ತುಳಸೀದಳಗಳಿಂದಲೂ ಶ್ರೀಮಾಧವನು ಸಂತುಷ್ಟನಾಗುವನು; ಅವನು ಬೇರೆ ಏನನ್ನೂ ಬಯಸುವುದಿಲ್ಲ. ॥ ೩೩ ॥ ಶ್ರದ್ಧೆಯೇ ಎಲ್ಲ ಧರ್ಮಕ್ಕೂ ತಾಯಿಯಂತೆ ಹಿತವನ್ನುಂಟುಮಾಡತಕ್ಕದ್ದು. ಭೂಲೋಕ-ದಲ್ಲಿಯೂ ಊರ್ಧ್ವಲೋಕದಲ್ಲಿಯೂ ಶ್ರದ್ಧೆಯಿಂದಲೇ ಸಿದ್ಧಿಯು ಸಿಗುವುದು. ॥ ೩೪ ॥ ಶ್ರದ್ಧೆಯಿಂದ ಭಜಿಸುವ ಮನುಷ್ಯನಿಗೆ ಕಲ್ಲೂ ಫಲದಾಯಕವಾಗುವುದು. ಭಕ್ತಿಯಿಂದ ಪೂಜಿಸಲ್ಪಟ್ಟ ಮೂರ್ಖನೂ ಕೂಡ ಸಿದ್ಧಿಯನ್ನು ಕೊಡಬಲ್ಲ ಗುರುವಾಗಬಲ್ಲನು. ॥ ೩೫ ॥ ಅಶ್ರದ್ಧೆಯಿಂದ ಮಾಡಿದ ಪೂಜಾ, ದಾನ, ಯಜ್ಞ, ತಪಸ್ಸು ಮತ್ತು ವ್ರತ ಇವೆಲ್ಲವೂ ಬಂಜೆಮರದ ಹೂಗಳಂತೆ ಫಲಪ್ರದಗಳಾಗುವುದಿಲ್ಲ. ॥ ೩೬ ॥ ಎಲ್ಲದರಲ್ಲೂ ಸಂದೇಹವುಳ್ಳವನೂ, ಶ್ರದ್ಧೆಯಿಲ್ಲದವನೂ ಮತ್ತು ಅತಿ ಚಂಚಲಚಿತ್ತನೂ ಆದವನು ಪರಮಾರ್ಥತತ್ತ್ವದಲ್ಲಿಯೂ ಭ್ರಷ್ಟವಾದ ಜ್ಞಾನವುಳ್ಳವನಾಗಿ ಈ ಸಂಸಾರಬಂಧನದಿಂದ ವಿಮೋಚನೆಯನ್ನೇ ಹೊಂದುವುದಿಲ್ಲ. ॥ ೩೭ ॥ ಎಲ್ಲ ದೇವತೆಗಳ ವ್ಯಾಪಾರವೂ ಶ್ರೀವಿಷ್ಣುವಿನ ಪ್ರಚುರವಾದ ನಿಯಾಮಕತ್ವಕ್ಕೆ ಅಧೀನವಾಗಿದೆ. ಅಂತಹ ವಿಷ್ಣುವು ಸ್ಮರಿಸಿದವರ ದುಃಖವನ್ನು ನಿವಾರಣೆ ಮಾಡುವನು. ಭಕ್ತರಲ್ಲೇ ವಾತ್ಸಲ್ಯವುಳ್ಳವನಾದ ಇವನು ಭಕ್ತಿಯಿಂದಲೇ ಸಂತುಷ್ಟನಾಗುವನು, ಬೇರೆ ಯಾವುದರಿಂದಲೂ

ಅಲ್ಲ. ॥ ೩೮ ॥ ವಿಸ್ಮರಣೆಯಿಂದಲೂ ಅಜ್ಞಾನದಿಂದಲಾಗಲೀ ಅಭ್ಯಾಸಬಲದಿಂದಲಾಗಲೀ ಯಾರು ಶ್ರೀವಿಷ್ಣುವಿನ ಹೆಸರನ್ನು ಸ್ಮರಿಸುವರೋ ಅಥವಾ ಸ್ತುತಿಸುವರೋ ಅಂತಹವರು ಸಕಲ ಪಾಪಗಳಿಂದ ಬಿಡುಗಡೆ ಹೊಂದಿ ಮುಕ್ತಿಯನ್ನು ಪಡೆಯುವನು. ॥ ೩೯ ॥ ಸಂಸಾರವೆಂಬ ಘೋರವಾದ ಕಾಡಿಗೆ ಮಧುಸೂದನನು ಕಾಡ್ಗಿಚ್ಚಿನಂತೆ. ಈ ಸರ್ವೋತ್ತಮನು ತನ್ನ ಸ್ಮರಿಸಿದವರ ಸಕಲ ಪಾಪಗಳನ್ನು ನಾಶ ಮಾಡುವನು. ॥ ೪೦ ॥ ಈ ಅರ್ಥವನ್ನೇ ತಿಳಿಯಹೇಳುವ ಪುರಾಣವು ಶ್ರಾವ್ಯಸಾಧನವು. ಇದನ್ನು ಹೇಳುವುದರಿಂದಲೂ ಕೇಳುವುದರಿಂದಲೂ ಎಲ್ಲ ಪಾಪಗಳೂ ನಾಶವಾಗುವುವು. ॥ ೪೧ ॥ ಯಾರಿಗೆ ಈ ಪುರಾಣವನ್ನು ಕೇಳುವ ಬುದ್ಧಿಯು ಇರುವುದೋ, ಈ ಬುದ್ಧಿಯು ಭಕ್ತಿಯಿಂದ ಕೂಡಿರುವುದೋ ಅವನೇ ಸರ್ವಶಾಸ್ತ್ರಗಳಲ್ಲಿ ಪಾರಂಗತನು ಮತ್ತು ಅವನೇ ಕೃತಾರ್ಥನು. ॥ ೪೨ ॥ ಪುಣ್ಯಕರವಾದ ಮತ್ತು ಇಡೀ ಭೂಮಿಯನ್ನೇ ಪಾವನಗೊಳಿಸುವ ಈ ಪುರಾಣಕಥೆಯ ಶ್ರವಣದಲ್ಲಿ ಯಾರಿಗೆ ಮನಸ್ಸಾಗುವುದೋ ಅವನೇ ಈ ಮನುಷ್ಯ ಲೋಕದಲ್ಲಿರುವ ವಿಷ್ಣುರೂಪಸದೃಶನು. ಇದರಲ್ಲಿ ಸಂದೇಹವಿಲ್ಲ. ॥ ೪೩ ॥ ಯಾರು ಭಗವತ್ಕಥೆಗಳನ್ನು ಕೇಳುತ್ತಾರೋ ಮತ್ತು ಹೇಳುತ್ತಾರೋ ಅಂಥವರುಗಳ ಪಾದಧೂಳು ತೀರ್ಥಕ್ಷೇತ್ರಗಳಿಗೆ ಸಮವು. ॥ ೪೪ ॥ ಆದ್ದರಿಂದ ಪರಲೋಕದ ಪ್ರಾಪ್ತಿಯನ್ನು ಬಯಸು ವವರೆಲ್ಲವೂ ಹರಿಕಥೆಗಳನ್ನು ಭಕ್ತಿಯಿಂದ ತನ್ನ ಶಕ್ತಿಯಿದ್ದಷ್ಟೂ ಕೇಳಲಿ. ॥ ೪೫ ॥ ಸಂಸಾರದ ಬೇಗೆಯಿಂದ ಬೆಂದು ಶಾಂತಿ ಬಯಸುವವರೆಲ್ಲರೂ ಈ ಭೂಮಿಯಲ್ಲಿ ನಿತ್ಯವೂ ಹರಿಕಥಾ ಶ್ರವಣವೆಂಬ ಅಮೃತವನ್ನು ಪಾನ ಮಾಡುತ್ತಾರೆ. ॥ ೪೬ ॥ ಸಂಸಾರದ ಜಂಜಾಟದಲ್ಲಿ ಸಿಲುಕಿ, ಯಾವಾಗಲೂ ಶ್ರವಣ ಮಾಡಲು ಅಶಕ್ತನಾದರೆ ದಿನವೂ ಒಂದು ಮುಹೂರ್ತದ ಮಟ್ಟಿಗಾದರೂ ಮನಸ್ಸಿಟ್ಟು ಹರಿಕಥೆಯನ್ನು ದಿನವೂ ಶ್ರವಣ ಮಾಡಲಿ. ॥ ೪೭ ॥ ಪ್ರತಿದಿನ ಕೇಳಲೂ ಅಶಕ್ತನಾದರೆ ಪ್ರಯತ್ನ ಮಾಡಿ ವೈಶಾಖ, ಕಾರ್ತಿಕ ಮತ್ತು ಮಾಘಮಾಸಗಳಲ್ಲಾದರೂ ಕೇಳಲಿ. ॥ ೪೮ ॥ ಒಂದು ಮುಹೂರ್ತವಾಗಲೀ, ಅರ್ಧಮುಹೂರ್ತವಾಗಲೀ ಅಥವಾ ಒಂದು ಕ್ಷಣವಾದರೂ ಭಕ್ತಿಯಿಂದ ಯಾರು ಈ ಹರಿಕಥಾಶ್ರವಣ ಮಾಡುತ್ತಾರೋ ಅವರಿಗೆ ದುರ್ಗತಿಯೇ ಇರುವುದಿಲ್ಲ. ॥ ೪೯ ॥ ಎಲ್ಲ ದೇವತೆಗಳ ಆರಾಧನೆಗಳಲ್ಲಿ ಮತ್ತು ಎಲ್ಲ ಯಜ್ಞಾಚರಣೆಗಳಲ್ಲಿ ಏನೇನು ಫಲಗಳಿವೆಯೋ ಅವೆಲ್ಲವೂ ಒಂದು ಬಾರಿ ಪುರಾಣಶ್ರವಣದಿಂದಲೇ ನರನು ಹೊಂದುವನು. ॥ ೫೦ ॥ ಆಲಸ್ಯದಿಂದಲೇ ಶಿಥಿಲಗೊಂಡ ಬುದ್ಧಿಮನಸ್ಸುಗಳುಳ್ಳ ಜನರಿಗೆ ಈ ಕಲಿಯುಗದಲ್ಲಿ ಪುರಾಣಶ್ರವಣವನ್ನು ಬಿಟ್ಟರೆ ಬೇರೆ ಶ್ರೇಷ್ಠವಾದ ಬೇರೊಂದು ಧರ್ಮವೇ ಇಲ್ಲ. ॥ ೫೧ ॥ ಪುರಾಣಶ್ರವಣವೂ ವಿಷ್ಣುವಿನ ನಾಮಸಂಕೀರ್ತನೆಯೂ ಈ ಕಲಿಯುಗದಲ್ಲಿ ಮಹಾಫಲಗಳನ್ನು ಕೊಡತಕ್ಕಂಥ ಕಲ್ಪವೃಕ್ಷವಿದ್ದಂತೆ. ॥ ೫೨ ॥ ಕಲಿಯುಗದಲ್ಲಿ ಹೀನಬುದ್ಧಿಯುಳ್ಳ ಬ್ರಾಹ್ಮಣರುಗಳು ಧರ್ಮಾಚರಣೆಗಳನ್ನು ಬಿಡುವವರಾಗುತ್ತಾರೆ ಎಂದು ಯೋಚಿಸಿ ಭಗವಾನ್ ಬಾದರಾಯಣರು ಕಾರುಣ್ಯದಿಂದ ಅವರ ಹಿತಕ್ಕೋಸ್ಕರವೇ ಪುರಾಣಗಳೆಂಬ ಸುಧಾರಸವನ್ನು ನಿರ್ಮಿಸಿದರು. ಇದನ್ನು ಉಪಯೋಗಿಸಿಕೊಂಡ ಮನುಷ್ಯರು ಅನಾಯಾಸವಾಗಿ ಪಾಪಗಳಿಂದ ವಿಮೋಚನೆ ಹೊಂದುವರು. ॥ ೫೩-೫೪ ॥ ಭಾವಿ ತೋಡಿಟ್ಟುಕೊಂಡಿದ್ದರೆ, ಮನೆಗೆ ಬೆಂಕಿ ಬಿದ್ದಾಗ ಉಪಯೋಗಕ್ಕೆ ಬರುವಂತೆ ಸಂಸಾರದಾಹದಲ್ಲಿ ಬೇಯುತ್ತಿರುವವರಿಗೆ ಈ ಪುರಾಣಗಳು. ॥ ೫೫ ॥ ಹೇ ಮುನೀಶ್ವರರೇ! ಮಹಾತ್ಮರಾದ ನಿಮ್ಮಗಳಿಗೆ ಧರ್ಮಗಳ ತತ್ತ್ವವು ತಿಳಿದಿರುವುದು. ಆದರೂ ಪ್ರಶ್ನೆ ಕೇಳಿದ್ದರಿಂದ ಉತ್ತರಗಳ ರೂಪದಲ್ಲಿ ಇಲ್ಲಿ ಮಂಡಿಸಿರುವ ಈ ಪುರಾಣವಿಧಿಯು

ಹೇಳಲ್ಪಟ್ಟಿತು. ಈ ವಿಧಿಗಳನ್ನು ಸಮಗ್ರವಾಗಿ ಶ್ರವಣ ಮಾಡಿದರೂ ಫಲವು ಸಮಗ್ರವಾಗಿ ಬರುವುದು. ॥ ೫೬-೫೭ ॥ ಉಷಃಕಾಲದಲ್ಲಿಯೇ ಎದ್ದು ವಿಧಿವತ್ತಾಗಿ ಗಂಗಾಯಮುನೆಯರ ಸಂಗಮದಲ್ಲಿ ಸ್ನಾನಮಾಡಿ, ಮನುಷ್ಯರು ಭಕ್ತಿಯಿಂದ ಈ ತೀರ್ಥರಾಜನ ಮಾಹಾತ್ಮ್ಯೆಯನ್ನು ಕೇಳತಕ್ಕದ್ದು. ॥ ೫೮ ॥ ಇದರಿಂದ ಪ್ರಯಾಗಯಾತ್ರೆಯ ಪೂರ್ಣಫಲವು ಬರುವುದು. ಪಾಪಗಳೆಲ್ಲವೂ ಪರಿಹಾರವಾಗುವುವು. ಈ ಫಲವು ಸರ್ವದಾ ದೊರಕುವುದು, ಮಾಘಮಾಸದಲ್ಲಿ ವಿಶೇಷವಾಗಿ ದೊರಕುವುದು. ॥ ೫೯ ॥ ಪ್ರಯಾಗದಲ್ಲಿ ಮಾಘಮಾಸದಲ್ಲಿ ಬಂದು ಸೇರುವುದು ದೇವತೆಗಳಿಗೂ ದುರ್ಲಭವಾದುದು. ಈ ಕಾಲದಲ್ಲಿ ಪ್ರಯಾಗದಲ್ಲಿ ಮಾಡುವ ಸ್ನಾನದಾನಗಳ ಫಲವನ್ನು ಹೇಳಲು ನಾನಂತೂ ಸಮರ್ಥನಲ್ಲ. ॥ ೬೦ ॥ ಮಾಘದಲ್ಲಿ ಪ್ರಯಾಗದ ಮಾಹಾತ್ಮ್ಯೆಯನ್ನೂ ಮಾಘಮಾಸಮಾಹಾತ್ಮ್ಯೆಯನ್ನೂ ಸದ್ಬ್ರಾಹ್ಮಣರುಗಳಿಂದ ಹೇಳಿಸಿ ಕೇಳತಕ್ಕದ್ದು; ಅದರಲ್ಲಿ ಈ ಕ್ಷೇತ್ರವಾಸಿಗಳಿಂದ ವಿಶೇಷವಾಗಿ ಶ್ರವಣ ಮಾಡತಕ್ಕದ್ದು. ॥ ೬೧ ॥ ಭಕ್ತಿಯಿಂದ ಯಾರು ಪ್ರಯಾಗದಲ್ಲಿ ಉತ್ತಮವಾದ ಈ ಎರಡು ಮಾಹಾತ್ಮ್ಯೆಗಳನ್ನೂ ಕೇಳುತ್ತಾರೋ ಅವರು ಅವರ ಸಮಸ್ತ ಆಸೆಗಳನ್ನು ಅನುಭವಿಸಿ ಅನಂತರ ವೈಕುಂಠವನ್ನು ಕುರಿತು ಪ್ರಯಾಣ ಮಾಡುತ್ತಾರೆ. ॥ ೬೨ ॥ ಲೋಕಕಲ್ಯಾಣಾರ್ಥವಾಗಿ ತಮ್ಮಗಳಿಂದ ಎಲ್ಲರಿಗೂ ಉಪಯೋಗವಾಗುವ ಪ್ರಶ್ನೆಯು ಕೇಳಲ್ಪಟ್ಟಿತು. ಅದನ್ನು ನಾನು ನಿರೂಪಿಸಿದ್ದೇನೆ. ಇನ್ನು ಏನು ಬೇಕೋ ಕೇಳಿರಿ. ॥ ೬೩ ॥

॥ ನಲವತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಚತ್ವಾರಿಂಶೋಽಧ್ಯಾಯಃ ॥ ೪೮ ॥

**ಋಷಯ ಊಚುಃ—**

ಸೂತ ಸರ್ವವಿದಾಂ ಶ್ರೇಷ್ಠ ಪರೋಪಕೃತಿಭೂಷಣ ।
ವರ್ಣನಾತ್ತೀರ್ಥರಾಜಸ್ಯ ನಿರ್ವೃತಿಂ ಗಮಿತಾ ವಯಮ್ ॥ ೧ ॥
ಕಿಮೂಚುಸ್ತೇ ಬ್ರಹ್ಮಪುತ್ರಾಶ್ಶೇಷಃ ಪ್ರೋವಾಚ ಕಿಂ ಪುನಃ ।
ತೀರ್ಥರಾಜಸ್ಯ ಮಾಹಾತ್ಮ್ಯಂ ತನ್ನಃ ಕಥಯ ಸುವ್ರತ ॥ ೨ ॥

## ॥ ನಲವತ್ತೆಂಟನೆಯ ಅಧ್ಯಾಯವು ॥

**ಋಷಿಗಳು ಹೇಳಿದರು—**

ತಿಳಿದವರಲ್ಲಿ ಶ್ರೇಷ್ಠರಾದ ಮತ್ತು ಪರೋಪಕಾರಕೃತಿಯಿಂದ ಭೂಷಿತರಾದ ಸೂತರೇ, ಈ ತೀರ್ಥರಾಜನ ವರ್ಣನೆಯಿಂದ ನಾವು ಪರಮಾನಂದವನ್ನು ಪಡೆದೆವು. ॥ ೧ ॥ ಬ್ರಹ್ಮಪುತ್ರರಾದ ಸನಕಾದಿಗಳು ಶೇಷದೇವರನ್ನು ಪುನಃ ಮತ್ತೇನು ಪ್ರಶ್ನಿಸಿದರು ಮತ್ತು ಶೇಷದೇವರು ಇನ್ನೇನು ಹೇಳಿದರು ? ಎಲೈ, ಮಂಗಳಕರ ವ್ರತವುಳ್ಳ ಸೂತರೇ, ತೀರ್ಥರಾಜನ ಮಾಹಾತ್ಮ್ಯೆಯನ್ನು ಇನ್ನೂ ಹೇಳಿರಿ. ॥ ೨ ॥

**ಸೂತ ಉವಾಚ—**

ಶೇಷಸ್ಯ ವಚನಂ ಶ್ರುತ್ವಾ ಸನಕಾದ್ಯಾ ಮಹರ್ಷಯಃ ।
ಪಪ್ರಚ್ಛುಃ ಪುನರೇವಾಮುಂ ತೀರ್ಥರಾಜಸ್ಯ ಗೌರವಮ್ ॥ ೩ ॥

ಶ್ರೀಶೇಷದೇವರ ಉಪದೇಶಗಳನ್ನು ಆಲಿಸಿದ ಸನಕಾದಿಗಳು ಪುನಃ ಆ ಶೇಷದೇವರನ್ನು ಆ ತೀರ್ಥರಾಜನ ಅಗಾಧತೆಯ ಬಗ್ಗೆ ಮತ್ತಷ್ಟು ಹೇಳಲು ಪ್ರಾರ್ಥಿಸಿದರು. ॥ ೩ ॥

**ಸನಕಾದಯ ಊಚುಃ—**

ಸಂಕರ್ಷಣ ಮಹಾಬುದ್ಧೇ ತ್ವನ್ಮುಖಾಂಭೋಜನಿರ್ಗತಮ್ ।
ಶ್ರುತಂ ಪ್ರಯಾಗಮಾಹಾತ್ಮ್ಯಂ ಪರಮಾನಂದಕಾರಣಮ್ ॥ ೪ ॥
ಪ್ರಯಾಗೇ ಮಾಘಮಾಹಾತ್ಮ್ಯಂ ಶ್ರೀಮತಾ ಬಹು ವರ್ಣಿತಮ್ ।
ಶ್ರವಣೇ ತಸ್ಯ ಚಾಸ್ಮಾಕಂ ಲಾಲಸಾ ಬಹು ಜಾಯತೇ ॥ ೫ ॥
ಪೂರ್ಣಸ್ನಾನಫಲಂ ಕೀದೃಗೂನಸ್ನಾನಫಲಂ ತಥಾ ।
ಕರ್ತವ್ಯಂ ಕೇನ ವಿಧಿನಾ ಪ್ರಯಾಗೇ ಮಾಘಮಜ್ಜನಮ್ ॥ ೬ ॥
ನಿಯಮಾ ಮಾಘಮಾಸೀಯಾಃ ಕೇ ಕೇ ಕಾರ್ಯಾ ವಿಜಾನತಾ ।
ದಾನಾನಿ ಕಾನಿ ಕಾರ್ಯಾಣಿ ತತ್ಸರ್ವಂ ಕಥಯಾಶು ನಃ ॥ ೭ ॥

ಮಹಾಬುದ್ಧಿಶಾಲಿಯಾದ ಶ್ರೀಸಂಕರ್ಷಣಾಖ್ಯ ಹೆಸರುಳ್ಳ ಶ್ರೀಶೇಷದೇವರೆ! ತಮ್ಮ ಮುಖಕಮಲದಿಂದ ಹೊರಟ ಪ್ರಯಾಗಮಾಹಾತ್ಮ್ಯೆಯನ್ನು ಕೇಳಿದೆವು; ಇದು ಪರಮಾನಂದ ದಾಯಕವು. ॥ ೪ ॥ ಪ್ರಯಾಗದಲ್ಲಿ ಕೇಳಲೇಬೇಕಾಗಿರುವ ಮಾಘಮಾಹಾತ್ಮ್ಯೆಯ ಬಗ್ಗೆ ತಾವು

ಬಹಳಷ್ಟೇ ವರ್ಣಿಸಿದ್ದೀರಿ. ಅದನ್ನು ಶ್ರವಣ ಮಾಡಿದ ನಮಗೆ ಇನ್ನೂ ಹೆಚ್ಚು ತಿಳಿಯಲು ಕುತೂಹಲವಾಗುತ್ತಿದೆ. ॥ ೫ ॥ ಪೂರ್ಣವಾಗಿ ಮಾಡಿದ ಸ್ನಾನದ ಫಲವೇನು? ಮತ್ತು ಪ್ರಯಾಗ-ದಲ್ಲಿ ಮಾಘಸ್ನಾನವನ್ನು ಮಾಡುವ ವಿಧಿಯೇನು? ॥ ೬ ॥ ಜ್ಞಾನಿಯಾದವನು ಮಾಘಮಾಸದಲ್ಲಿ ಯಾವ ಯಾವ ನಿಯಮಗಳನ್ನು ಮಾಡಬೇಕು? ಏನೇನು ದಾನಗಳನ್ನು ಕೊಡಬೇಕು ಮತ್ತು ಏನೇನು ಆಚಾರಗಳನ್ನು ಮಾಡಬೇಕು? ಎಲ್ಲವನ್ನೂ ಹೇಳುವವರಾಗಿ ಎಂದು ಕೇಳಿಕೊಂಡರು.॥೭॥

**ಶೇಷ ಉವಾಚ—**

ಸಮಸ್ತಾನಿ ಚ ತೀರ್ಥಾನಿ ಸಕಲಾ ದೇವಜಾತಯಃ ।
ಸಸ್ತ್ರೀಕಾ ಋಷಯೋ ಮಾಘೇ ಸರ್ವೇ ಯಾಂತಿ ಪ್ರಯಾಗಕೇ ॥ ೮ ॥
ಅಣಿಮಾದಿಗುಣೋಪೇತಾ ಯೇ ಚಾನ್ಯೇ ತತ್ತ್ವದರ್ಶಿನಃ ।
ಸ್ನಾತುಮಾಯಾಂತಿ ತೇ ಸರ್ವೇ ಮಾಘೇ ವೇಣ್ಯಾಂ ದ್ವಿಜೋತ್ತಮಾಃ ॥ ೯ ॥
ಅನ್ಯಸ್ಮಾಲ್ಲಕ್ಷಗುಣಿತಂ ಗಂಗಾಯಮುನಸಂಗಮೇ ।
ಫಲಂ ಪಶ್ಚಿಮವಾಹಿನ್ಯಾಮನಂತಂ ಮಜ್ಜನೇ ಮತಮ್ ॥ ೧೦ ॥
ಪಶ್ಚಿಮಾಭಿಮುಖೀ ಗಂಗಾ ಕಾಲಿಂದ್ಯಾ ಸಹ ಸಂಗತಾ ।
ಹಂತಿ ಕಲ್ಪಕೃತಂ ಪಾಪಂ ಸಾ ಮಾಘೇ ತ್ವತಿದುರ್ಲಭಾ ॥ ೧೧ ॥
ತಸ್ಯಾಂ ಮಾಘೇ ಮುಹೂರ್ತೇಽಪಿ ದೇವಾನಾಮಪಿ ದುರ್ಲಭಃ ।
ವಿಜ್ಞೇಯಾ ಮುಕ್ತಿಜನನೀ ಸಾ ವೇಣ್ಯಮೃತರೂಪಿಣೀ ॥ ೧೨ ॥
ಪ್ರಯಾಗೇ ಪರಕಾಲೇ ಯತ್ಪಾಪಂ ಸಂಪಾದಿತಂ ನರೈಃ ।
ನಶ್ಯೇತ್ಪಶ್ಚಿಮವಾಹಿನ್ಯಾಂ ಮಾಘೇ ತದಪಿ ನಿಶ್ಚಿತಮ್ ॥ ೧೩ ॥
ಮಹಾಭಾಗ್ಯೋದಯೇನಾತ್ರ ಮಾಘಃ ಸಂಪ್ರಾಪ್ಯತೇ ನರೈಃ ।
ಅಪುನರ್ಜನ್ಮದಂ ಯತ್ರ ಸಿತಾಸಿತಜಲಂ ಖಲು ॥ ೧೪ ॥
ಗರ್ಭೇ ನ ಮಜ್ಜತೇ ಜಂತುಃ ಪ್ರಯಾಗೇ ಮಾಘಮಜ್ಜನಾತ್ ।
ತೀರ್ತ್ವಾ ಭಾಗವತೀಂ ಮಾಯಾಂ ವೈಕುಂಠೇ ವಸತೇ ನರಃ ॥ ೧೫ ॥
ರಾಜಸೂಯಸಹಸ್ರಸ್ಯ ವಾಜಿಮೇಧಶತಸ್ಯ ಚ ।
ಮಾಘೇ ಸಿತಾಸಿತೇ ಪುಣ್ಯಂ ಮಜ್ಜತಾಂ ಭವತಿ ಧ್ರುವಮ್ ॥ ೧೬ ॥
ಸಕಾಮಾಃ ಕಾಮಸಂಪನ್ನಾ ನಿಷ್ಕಾಮಾ ಮುಕ್ತಿಭಾಗಿನಃ ।
ಸ್ನಾತಾ ಭವಂತಿ ವೈ ಮಾಘೇ ಗಂಗಾಯಮುನಸಂಗಮೇ ॥ ೧೭ ॥
ಪುತ್ರಪೌತ್ರಾಬಲಾಲಾಭಮಾಧಿಪತ್ಯಂ ಚ ಪ್ರಾರ್ಥಿತಮ್ ।
ಸ್ವರ್ಗಭೋಗಫಲದೇ ಮಾಘೇ ಪ್ರಯಾಗೇಽದಃ ಫಲಂ ಕಿಯತ್ ॥ ೧೮ ॥
ತ್ರಿವಿಧಂ ಜ್ಞಾತಮಜ್ಞಾತಂ ನಾನಾಜನ್ಮಸು ಸಂಚಿತಮ್ ।
ಕರೋತಿ ಭಸ್ಮಸಾತ್ಸದ್ಯಃ ಪ್ರಯಾಗೇ ಮಾಘಮಜ್ಜನಾತ್ ॥ ೧೯ ॥

ಪ್ರಯಾಗೇ ಮಾಘಮಾಸೇ ತು ವೇಣೀತೀರ್ಥೋದಬಿಂದುನಾ ।
ಯದ್ಗಾತ್ರಂ ಸ್ಪೃಶತೇ ನೂನಂ ಮುಚ್ಯತೇಽಸೌ ಮಹಾಭಯಾತ್ ॥ ೨೦ ॥
ಮಾಘಮಾಸೇ ಪ್ರಯಾಗಸ್ಯ ದರ್ಶನಂ ದುರ್ಲಭಂ ನೃಣಾಮ್ ।
ಕಿಂ ಪುನಃ ಸ್ನಾನಪಾನಾದಿ ಫಲಂ ವಾಚ್ಯಂ ಮುನೀಶ್ವರಾಃ ॥ ೨೧ ॥
ಅಶ್ವಮೇಧಾದಿಕೃದ್ಭ್ಯೋಽಯಃ ಪ್ರಯಾಗೇ ಮಾಘಮಾಸಕೃತ್ ।
ಮಾಘಸ್ನಾನಂ ತಯೋರ್ಮಧ್ಯೇ ಶ್ರೇಷ್ಠಾಚ್ಛ್ರೇಷ್ಠತಮೋ ಮತಃ ॥ ೨೨ ॥
ಯತ್ರ ಕುತ್ರಾಪಿ ಯೋ ಮಾಘೇ ಪ್ರಯಾಗಸ್ಮರಣಾನ್ವಿತಃ ।
ಕರೋತಿ ಮಜ್ಜನಂ ತೀರ್ಥೇ ಸ ಲಭೇದ್ಗಾಂಗಮಜ್ಜನಮ್ ॥ ೨೩ ॥
ಮಾಘೇ ಮಾಸಿ ತು ಯಃ ಸ್ನಾಯಾನ್ನೈರಂತರ್ಯೇಣ ಭಾವತಃ ।
ಪುಂಡರೀಕಫಲಂ ತಸ್ಯ ದಿವಸೇ ದಿವಸೇ ಭವೇತ್ ॥ ೨೪ ॥
ವಾಪೀಕೂಪತಟಾಗೇಷು ನದೀಷು ಚ ಯಥೋತ್ತರಮ್ ।
ನದೇಷು ದೇವಖಾತೇಷು ಸರಿತಾಂ ಸಂಗಮೇಷು ಚ ॥ ೨೫ ॥
ಮಹಾನದೀಷು ಕಾಲಿಂದ್ಯಾಂ ಗಂಗಾಯಾಂ ಚ ಯಥೋತ್ತರಮ್ ।
ಅಧಿಕಂ ಫಲಮುದ್ದಿಷ್ಟಂ ಮಾಘಸ್ನಾನೇ ಮಹರ್ಷಿಭಿಃ ॥ ೨೬ ॥
ಗಂಗಾಯಮುನಸಂಗೇ ತು ಮಾಘಸ್ನಾನಭವಂ ಫಲಮ್ ।
ಅಗಣ್ಯಂ ಬ್ರಹ್ಮಣಾ ಪ್ರೋಕ್ತಂ ತ್ರೈಲೋಕ್ಯೇ ತಾದೃಶಂ ನ ಹಿ ॥ ೨೭ ॥
ಯೋಽಶಕ್ತೋಽಸ್ಮಿನ್ಮಹಾಯೋಗೇ ದೇಶಕಾಲಗದಾದಿನಾ ।
ಸೋಽನುಕಲ್ಪೇನ ಕುರ್ವೀತ ಶ್ರದ್ಧಯಾ ಮಾಘಮಜ್ಜನಮ್ ॥ ೨೮ ॥
ಪಕ್ಷಪಕ್ಷಾರ್ಧಪಂಚತ್ರಿದಿನೇಷ್ವೇಕದಿನೇಽಥವಾ ।
ಪ್ರಯಾಗೇ ಮಾಘಮಾಸೇ ತು ಮಜ್ಜತಾಂ ಫಲಮುಚ್ಯತೇ ॥ ೨೯ ॥
ಪಕ್ಷಮಾತ್ರಂ ತು ಯೋ ಮಾಘೇ ಪ್ರಯಾಗೇ ನಿಯತೇಂದ್ರಿಯಃ ।
ಸ್ನಾತ್ಯಸೌ ಪಾಪಕವಚಂ ಭಿತ್ವಾ ಯಾತಿ ತ್ರಿವಿಷ್ಟಪಮ್ ॥ ೩೦ ॥
ಅವಿಮುಕ್ತೇ ಪ್ರಭಾಸೇ ಚ ಗಂಗಾಸಾಗರಸಂಗಮೇ ।
ಯತ್ಫಲಂ ತದ್ಭವೇನ್ಮಾಘೇ ವೇಣ್ಯಾಂ ಸಪ್ತಾಹಮಜ್ಜನಾತ್ ॥ ೩೧ ॥
ಪ್ರಯಾಗೇ ಪಂಚರಾತ್ರಂ ಯಃ ಸ್ನಾತಿ ಮಾಘೇ ನರೋತ್ತಮಃ ।
ದಿವ್ಯಭೋಗಾನಸೌ ನೇತುಂ ಚಂದ್ರವದ್ವರ್ಧತೇ ಫಲಮ್ ॥ ೩೨ ॥
ಶತವರ್ಷಾಣಿ ಯೋ ವಿಪ್ರಃ ಕುರ್ಯಾದನಶನಂ ವ್ರತಮ್ ।
ಪ್ರಯಾಗೇ ತ್ರಿದಿನಂ ಮಾಘೇ ಯಃ ಸ್ನಾತಸ್ತಾವುಭೌ ಸಮೌ ॥ ೩೩ ॥
ಅಶ್ವಮೇಧಾದಿಭಿರ್ಯಜ್ಞೈರ್ಯೋಗಾಭ್ಯಾಸೇನ ಯತ್ಫಲಮ್ ।
ಪ್ರಯಾಗೇ ಮಾಘಮಾಸೇ ತು ಸಂಗಮೇ ಮಜ್ಜತಸ್ತ್ರ್ಯಹಮ್ ॥ ೩೪ ॥

ರವಿಗ್ರಹೇ ಕುರುಕ್ಷೇತ್ರೇ ಸ್ವರ್ಣಭಾರೇಣ ಯತ್ಫಲಮ್ ।
ಪ್ರಯಾಗೇ ಮಜ್ಜತೇ ಮಾಘೇ ದಿವಸೇ ದಿವಸೇ ಫಲಮ್ ॥ ೩೫ ॥
ಕೋಟಿಗೋದಾನಜಂ ಪುಣ್ಯಂ ಪ್ರತ್ಯಹಂ ಸ್ವರ್ಣದಾನಜಮ್ ।
ಪ್ರತ್ಯಹಂ ಲಭತೇ ವೇಣ್ಯಾಮೇವಮಾಹುರ್ಮನೀಷಿಣಃ ॥ ೩೬ ॥
ಏವಂ ಕೇನಾಪ್ಯುಪಾಯೇನ ಮಾಘಸ್ನಾನಂ ಯಥಾ ತಥಾ ।
ಭಕ್ತ್ಯಾ ಕರೋತಿ ಯೋ ಮರ್ತ್ಯಃ ಲಭತೇ ವಾಂಛಿತಂ ಫಲಮ್ ॥ ೩೭ ॥
ನಾರೀ ವಾ ಪುರುಷೋ ವಾಪಿ ಬಲೀ ವಾ ದುರ್ಬಲೋಽಪಿ ವಾ ।
ಲಭತೇ ಸಕಲಾನ್ಕಾಮಾನ್ವೇಣ್ಯಾಂ ಸ್ನಾನೇನ ನಿಶ್ಚಿತಮ್ ॥ ೩೮ ॥
ಬ್ರಾಹ್ಮಣಕ್ಷತ್ರವಿಟ್ಶೂದ್ರಾಃ ಪ್ರತಿಲೋಮಾನುಲೋಮಜಾಃ ।
ಆಶ್ರಮಾ ಬ್ರಹ್ಮಚರ್ಯಾದ್ಯಾ ಮಾಘೇ ಸ್ನಾಂತಿ ಮುನೀಶ್ವರಾಃ ॥ ೩೯ ॥
ಯಥಾಧಿಕಾರಃ ಸರ್ವೇಷಾಂ ವಿಷ್ಣುಭಕ್ತ್ಯಾ ಬುಧೈಃ ಸ್ಮೃತಃ ।
ಮಾಘಸ್ನಾನೇ ತಥಾ ಜ್ಞೇಯೋ ನಾತ್ರ ಕಾರ್ಯಾ ವಿಚಾರಣಾ ॥ ೪೦ ॥
ಮಾಘಸ್ನಾನಫಲಂ ಪ್ರೋಕ್ತಂ ಪ್ರಯಾಗೇ ಸನಕಾದಯಃ ।
ಯಸ್ಯ ಶ್ರವಣಮಾತ್ರೇಣ ವೇಣೀಸ್ನಾನಫಲಂ ಲಭೇತ್ ॥ ೪೧ ॥

॥ ಇತಿ ಅಷ್ಟಚತ್ವಾರಿಂಶೋಽಧ್ಯಾಯಃ ॥

**ಶೇಷದೇವರು ಹೇಳಿದರು—**

ಇಡೀ ಬ್ರಹ್ಮಾಂಡದ ಎಲ್ಲ ತೀರ್ಥದೇವತೆಗಳೂ, ಸಕಲದೇವತಾಗಣಗಳೂ ಮತ್ತು ತಮ್ಮ ತಮ್ಮ ಪತ್ನಿಯರಿಂದ ಕೂಡಿದ ಋಷಿಗಳೂ ಮಾಘಮಾಸದಲ್ಲಿ ಪ್ರಯಾಗಕ್ಕೆ ಹೋಗುವರು. ॥ ೮ ॥ ಅಣಿಮಾದಿಸಿದ್ಧಿಯುಳ್ಳವರೂ, ತತ್ವಜ್ಞಾನಿಗಳೂ ಮತ್ತು ಬ್ರಾಹ್ಮಣೋತ್ತಮರೂ ವೇಣೀ ಸಂಗಮದಲ್ಲಿ ಮಾಘಸ್ನಾನ ಮಾಡಲು ಆಗಮಿಸುತ್ತಾರೆ. ॥ ೯ ॥ ಬೇರೆ ತೀರ್ಥಗಳಿಗಿಂತ ಲಕ್ಷದಷ್ಟು ಹೆಚ್ಚು ಫಲವು ಗಂಗೆಯಮುನೆಯರ ಸಂಗಮದಲ್ಲಿ ಮಾಘಮಾಸದಲ್ಲಿ ಮಾಡಿದ ಸ್ನಾನದಿಂದ ಬರುವುದು ಮತ್ತು ಪಶ್ಚಿಮದಿಕ್ಕಿನ ಕಡೆ ಪಶ್ಚಿಮವಾಹಿನಿಯಾಗಿ ಹರಿಯುವ ಗಂಗೆಯಲ್ಲಿ ಮಾಡಿದ ಮಾಘಸ್ನಾನದಿಂದ ಅನಂತಫಲವು ದೊರಕುವುದು. ॥ ೧೦ ॥ ಯಮುನೆಯೊಡನೆ ಕಲೆತು ಪಶ್ಚಿಮವಾಹಿನಿಯಾಗಿ ಹರಿಯುವ ಗಂಗೆಯು ಮಾಘಮಾಸದಲ್ಲಿ ಸ್ನಾನಮಾಡಿದವರ ಒಂದು ಕಲ್ಪವಿಡೀ ಮಾಡಿರಬಹುದಾದ ಪಾಪಗಳನ್ನೆಲ್ಲಾ ಪರಿಹರಿಸುವುದು. ಈ ರೀತಿಯಾದ ಸ್ನಾನವೇ ದುರ್ಲಭವಾದುದು. ॥ ೧೧ ॥ ಮಾಘಮಾಸದಲ್ಲಿ ವೇಣೀಸ್ನಾನವು ಮುಹೂರ್ತಮಾತ್ರವೂ ದೇವತೆಗಳಿಗೂ ಸಿಗುವುದು ಕಷ್ಟವು. ಮಾಘಮಾಸದಲ್ಲಿ ವೇಣೀಸಂಗಮವು ಅಮೃತಸ್ವರೂಪಳಾಗಿದ್ದು ಮುಕ್ತಿಯನ್ನೇ ಕೊಡತಕ್ಕವಳು. ॥ ೧೨ ॥ ಪ್ರಯಾಗದಲ್ಲಿ ಪೂರ್ವಜನ್ಮಗಳಲ್ಲಿ ಸಂಪಾದಿಸಿದ್ದ ಪಾಪಗಳೆಲ್ಲವೂ ಗಂಗೆಯ ಈ ಪಶ್ಚಿವಾಹಿನಿಯಲ್ಲಿ ಸ್ನಾನ ಮಾಡುವುದರಿಂದ ನಾಶವಾಗುವುವೆಂದು ನಿಶ್ಚಯವಾಗಿದೆ. ॥ ೧೩ ॥ ಮನುಷ್ಯನು ಪ್ರಯಾಗದಲ್ಲಿ ಮಾಘಸ್ನಾನವನ್ನು ಸಂಗಮದಲ್ಲಿ ಮಾಡುತ್ತಾನೆಂದರೆ ಅವನ ಭಾಗ್ಯೋದಯವಾಗಿದೆಯಂದೇ ತಿಳಿಯಬೇಕು. ಈ ಸಂಗಮದ ನೀರು ಪುನರ್ಜನ್ಮವನ್ನು ಕಳೆಯತಕ್ಕದ್ದು. ॥ ೧೪ ॥ ಪ್ರಯಾಗದಲ್ಲಿ ಮಾಘಸ್ನಾನವನ್ನು ಮಾಡಿದವನಿಗೆ ಪುನಃ

ಗರ್ಭವಾಸವಿಲ್ಲ. ಭಗವಂತನಿಂದ ನಿರ್ಮಾಣವಾಗಿರತಕ್ಕ ಅಜ್ಞಾನವು (ನನ್ನದು ನಾನು ಎಂಬ ಭ್ರಮಾತ್ಮಕ ಜ್ಞಾನವುಳ್ಳ ಜೀವನದ ಆವರವು) ನಾಶವಾಗಿ ಜೀವನು ವೈಕುಂಠದಲ್ಲಿ ವಾಸಿಸುವನು. ॥ ೧೫ ॥ ಮಾಘಮಾಸದಲ್ಲಿ ಈ ಸಂಗಮದಲ್ಲಿ ಸ್ನಾನ ಮಾಡಿದವರಿಗೆ ಸಹಸ್ರರಾಜಸೂಯ ಯಾಗಗಳನ್ನು ಮಾಡಿದ ಫಲವೂ ಮತ್ತು ನೂರು ಅಶ್ವಮೇಧಯಾಗಗಳನ್ನು ಮಾಡಿದ ಫಲವೂ ಲಭಿಸುವುವು. ॥ ೧೬ ॥ ಐಹಿಕ ಲೋಕದ ಆಸೆಗಳಿದ್ದವರಿಗೆ ಎಲ್ಲಾ ಅಭೀಷ್ಟಗಳೂ ಆಸೆಗಳೇ ಇಲ್ಲದವರಿಗೆ ಮುಕ್ತಿಯೋಗವೂ ಇಲ್ಲಿ ಮಾಘಸ್ನಾನವನ್ನು ಮಾಡಿದವರಿಗೆ ದೊರಕುವುವು. ॥ ೧೭ ॥ ಪ್ರಯಾಗದ ಮಾಘಸ್ನಾನವು ಸ್ವರ್ಗವನ್ನೇ ಕೊಡಬಲ್ಲದೆಂದ ಮೇಲೆ ಇನ್ನು ಮಕ್ಕಳು, ಮೊಮ್ಮಕ್ಕಳು ಮತ್ತು ಹೆಂಡತಿ ಇವುಗಳ ಪ್ರಾಪ್ತಿ ಮತ್ತು ಬಯಸಿದವನಿಗೆ ರಾಜ್ಯಪ್ರಾಪ್ತಿಯು ಕೂಡ ಯಾವ ದೊಡ್ಡ ವಿಷಯ? ॥ ೧೮ ॥ ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕಗಳೆಂಬ ಮೂರು ಬಗೆಯ ತಾಪಗಳೂ ಅವುಗಳು ತಿಳಿದಿದ್ದೂ ತಿಳಿಯದಿದ್ದುವೋ ಮತ್ತು ನಾನಾಜನ್ಮಗಳಿಂದ ಕೂಡಿ ಹಾಕಿಟ್ಟುಕೊಂಡಿರುವುವೋ ಅವೆಲ್ಲವೂ ಮಾಘಮಾಸದಲ್ಲಿ ಪ್ರಯಾಗದ ಸಂಗಮದ ಸ್ನಾನದಿಂದ ಸುಟ್ಟು ಬೂದಿಯಾಗುವುವು. ॥ ೧೯ ॥ ಮಾಘಮಾಸದಲ್ಲಿನ ತ್ರಿವೇಣೀಸಂಗಮ ತೀರ್ಥದ ಜಲಬಿಂದುವಿನ ಸ್ಪರ್ಶದಿಂದಲೇ ಮನುಷ್ಯ ಸಂಸಾರದ ಮತ್ತು ರೌರವಾದಿನರಕಗಳ ಮಹಾಭಯ ದಿಂದ ಬಿಡಲ್ಪಡುವನು. ॥ ೨೦ ॥ ಮಾಘಮಾಸದಲ್ಲಿ ಪ್ರಯಾಗದ ದರ್ಶನವೇ ಮನುಷ್ಯರಿಗೆ ದುರ್ಲಭವಾಗಿರುವಾಗ ಇನ್ನು ಆಗ ಅಲ್ಲಿ ಸ್ನಾನ, ಪಾನಗಳು ಎಷ್ಟು ದುರ್ಲಭ್ಯಗಳೆಂದು ಹೇಳುವುದೇನಿದೆ? ॥ ೨೧ ॥ ಅಶ್ವಮೇಧಾದಿಯಜ್ಞಗಳನ್ನು ಮಾಡಿದ್ದಕ್ಕಿಂತ ಹೆಚ್ಚು ಫಲವು ಮಾಘಮಾಸದಲ್ಲಿ ಪ್ರಯಾಗದಲ್ಲಿ ಮಾಡಿದ ಸ್ನಾನದಿಂದ ಪ್ರಾಪ್ತವಾಗುವುದು. ॥ ೨೨ ॥ ಎಲ್ಲಿಯಾದರೂ ಬೇರೆ ಕ್ಷೇತ್ರಗಳಲ್ಲಿ ಮಾಘಮಾಸದಲ್ಲಿ ಪ್ರಯಾಗವನ್ನು ಸ್ಮರಿಸುತ್ತಾ ಸ್ನಾನ ಮಾಡಿದರೆ ಅವನಿಗೆ ಗಂಗಾಸ್ನಾನದ ಫಲವು ದೊರಕುವುದು. ॥ ೨೩ ॥ ಮಾಘಮಾಸದಲ್ಲಿ ನಿಶ್ಚಲವಾದ ಭಗವದ್ಭಕ್ತಿಯಿಂದ ಸ್ನಾನ ಮಾಡಿದವರಿಗೆ ಪ್ರತಿನಿತ್ಯವೂ ಪುಂಡರೀಕಯಾಗದ ಫಲವು ಸಿಗುವುದು. ॥ ೨೪ ॥ ಮಹರ್ಷಿಗಳ ದೃಷ್ಟಿಯಲ್ಲಿ ಭಾವಿ, ಇಳಿಯುವ ಭಾವಿ, ಕೆರೆ, ನದಿಗಳು, ನದಗಳು ದೇವತೆಗಳಿಂದ ನಿರ್ಮಾಣವಾದ ಸರೋವರಗಳು. ನದಿಗಳ ಸಂಗಮಗಳು, ಮಹಾನದಿಗಳು, ಯಮುನೆ ಮತ್ತು ಗಂಗೆಯು ಇವುಗಳಲ್ಲಿ ಕ್ರಮೇಣ ಮಾಘಸ್ನಾನದಿಂದ ಹೆಚ್ಚು ಹೆಚ್ಚು ಫಲಗಳು ಸಿಗುವುವು. ॥ ೨೫-೨೬ ॥ ಶ್ರೀಬ್ರಹ್ಮದೇವರಿಂದಲೇ ಹೇಳಲ್ಪಟ್ಟಂತೆ ಮಾಘಮಾಸದಲ್ಲಿ ಗಂಗೆಯಮುನೆಯರ ಸಂಗಮದಲ್ಲಿನ ಸ್ನಾನದ ಫಲಗಳು ಎಣಿಸಲಾರದಷ್ಟು ಮತ್ತು ಇಂತಹ ಫಲಪ್ರದಾಯಕ ತೀರ್ಥವು ಮೂರುಲೋಕಗಳಲ್ಲಿ ಬೇರೆ ಯಾವುದೂ ಇಲ್ಲ. ॥ ೨೭ ॥ ದೇಶ, ಕಾಲ ಮತ್ತು ಅನಾರೋಗ್ಯಗಳ ನಿಮಿತ್ತ ಯಾರು ಈ ಮಾಘಮಾಸದ ಪ್ರಯಾಗಸ್ನಾನದ ಯೋಗವನ್ನು ಪಡೆಯುವುದಿಲ್ಲವೋ ಅವರು ಗೌಣವಾಗಿಯಾದರೂ ಶ್ರದ್ಧೆಯಿಂದ ತಾವಿರುವೆಡೆಯಲ್ಲಿಯೇ ಮಾಘಸ್ನಾನವನ್ನು ಮಾಡಿದರೆ ಅವರಿಗೂ ಫಲಗಳು ಲಭ್ಯವಾಗುವುವು. ॥ ೨೮ ॥ ಒಂದು ಪಕ್ಷ, ಒಂದು ವಾರ, ಐದು, ಮೂರು ಅಥವಾ ಒಂದು ದಿನವಾದರೂ ಯಾರು ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನ ಮಾಡುವರೋ ಅವರಿಗೆ ಲಭ್ಯವಾಗುವ ಪುಣ್ಯದ ಫಲವನ್ನು ಹೇಳುವೆನು, ಕೇಳಿರಿ. ॥ ೨೯ ॥ ಜಿತೇಂದ್ರಿಯನಾಗಿ ಹದಿನೈದು ದಿವಸಗಳು ಪ್ರಯಾಗದಲ್ಲಿ ಮಾಘಸ್ನಾನ ಮಾಡಿದವನು ತನ್ನ ಪಾಪದ ಗೋಡೆಗಳನ್ನು ಭೇದಿಸಿಕೊಂಡು ಸ್ವರ್ಗಕ್ಕೆ ಹೋಗುವನು. ॥ ೩೦ ॥ ಅವಿಮುಕ್ತಿಯೆಂದು ಹೇಳಿಸಿಕೊಳ್ಳುವ ಕಾಶಿಯಲ್ಲಾಗಲೀ, ಪ್ರಭಾಸಕ್ಷೇತ್ರದಲ್ಲಾಗಲೀ ಮತ್ತು

ಗಂಗಾಸಾಗರ ಸಂಗಮದಲ್ಲಾಗಲೀ ಸ್ನಾನ ಮಾಡಿದವರಿಗೆ ಬರುವ ಫಲವು ಮಾಘದಲ್ಲಿ ಪ್ರಯಾಗದಲ್ಲಿ ಒಂದು ವಾರ ಮಾಡುವ ಸ್ನಾನದಿಂದ ದೊರಕುವುದು. ॥ ೩೧ ॥ ಪ್ರಯಾಗದಲ್ಲಿ ಐದು ದಿವಸ ಮಾಘಸ್ನಾನ ಮಾಡಿದವರು ದಿವ್ಯಭೋಗಗಳಿಗೆ ಭಾಗಿಯಾಗುವುದಕ್ಕಾಗಿ ಅವರ ಪುಣ್ಯವು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತದೆ. ॥ ೩೨ ॥ ನೂರು ವರ್ಷ, ಆಹಾರವಿಲ್ಲದೆ ಉಪವಾಸ ಮಾಡುವುದರಲ್ಲಿ ಬರುವ ಫಲವೂ, ಪ್ರಯಾಗದಲ್ಲಿ ಮೂರು ದಿನಗಳ ಸ್ನಾನದಿಂದ ಬರುವ ಫಲವೂ ಸರಿಸಮವಾದುದು. ॥ ೩೩ ॥ ಅಶ್ವಮೇಧಾದಿ ಯಜ್ಞಗಳಾಚರಣೆಯಿಂದಲೂ ಯೋಗಾಭ್ಯಾಸದಿಂದಲೂ ಏನು ಫಲಗಳು ಲಭ್ಯಗಳೋ ಅಷ್ಟು ಫಲಗಳು ಪ್ರಯಾಗದಲ್ಲಿನ ಮಾಘಮಾಸದ ಮೂರು ದಿನದ ಸ್ನಾನದಿಂದ ಲಭ್ಯ. ॥ ೩೪ ॥ ಕುರುಕ್ಷೇತ್ರದಲ್ಲಿ ಬಂಗಾರದಿಂದ ತುಲಾಭಾರ ಮಾಡಿಸಿಕೊಂಡು ಆ ಬಂಗಾರವನ್ನು ದಾನ ಮಾಡುವುದರಿಂದ ಬರುವಷ್ಟು ಪುಣ್ಯಫಲವು ಪ್ರಯಾಗದಲ್ಲಿ ಮಾಘಮಾಸದಲ್ಲಿ ದಿವಸವೂ ಮಾಡುವ ಸ್ನಾನಗಳಿಂದ ಲಭ್ಯಗಳು. ॥ ೩೫ ॥ ಈ ರೀತಿ ಪ್ರತಿನಿತ್ಯ ವೇಣಿಯಲ್ಲಿ ಮಾಘದಲ್ಲಿ ಸ್ನಾನ ಮಾಡುವದರಿಂದ ಒಂದು ಕೋಟಿ ಗೋವುಗಳ ದಾನದಿಂದ ಮತ್ತು ಬಂಗಾರವನ್ನು ದಾನ ಮಾಡುವುದರಿಂದ ಬರುವಷ್ಟು ಫಲವು ಬರುವುದು. ॥ ೩೬ ॥ ಈ ರೀತಿಯಾಗಿ ಹೇಗಾದರೂ ಮಾಡಿ ಪ್ರಯಾಗದಲ್ಲಿ ಮಾಘದಲ್ಲಿ ಭಕ್ತಿಶ್ರದ್ಧೆಗಳಿಂದ ಸ್ನಾನ ಮಾಡುವವರು ಅಪೇಕ್ಷಿತ ಫಲಗಳನ್ನೆಲ್ಲಾ ಹೊಂದುವರು. ॥ ೩೭ ॥ ಮಾಘದಲ್ಲಿ ಮಾಡಿದ ವೇಣೀಸ್ನಾನದಿಂದ ಸ್ತ್ರೀಯಾಗಲೀ, ಪುರುಷನಾಗಲೀ, ಬಲಿಷ್ಠನಾಗಲೀ ಮತ್ತು ದುರ್ಬಲನಾಗಲೀ ತಾವು ಬಯಸಿದ ಸಕಲ ಅಪೇಕ್ಷೆಗಳನ್ನೂ ಖಂಡಿತವಾಗಿ ಹೊಂದುವರು. ॥ ೩೮ ॥ ಹೇ ಮುನೀಶ್ವರರೇ! ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಮತ್ತು ಕೀಳು ಜಾತಿಯವರಿಂದ ಉತ್ತಮ ಸ್ತ್ರೀಯರಲ್ಲಿ ಹುಟ್ಟಿದವರೂ, ಹಾಗೆಯೇ ಉತ್ತಮ ಜಾತಿಯವರಿಂದ ಕೀಳು ಜಾತಿಯ ಸ್ತ್ರೀಯರಲ್ಲಿ ಜನಿಸಿದವರೂ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ನಾಲ್ಕು ಆಶ್ರಮಗಳಲ್ಲಿರುವವರೂ, ಮಾಘಮಾಸದಲ್ಲಿ ಪ್ರಯಾಗಕ್ಷೇತ್ರದಲ್ಲಿ ಯಾಗಲೀ, ಅನ್ಯಾನ್ಯ ಕ್ಷೇತ್ರದಲ್ಲಾಗಲೀ ತಪ್ಪದೆ ಸ್ನಾನ ಮಾಡುತ್ತಾರೆ. ॥ ೩೯ ॥ ಸ್ಮೃತಿಗಳಲ್ಲಿ ಹೇಳಿರುವಂತೆ ಎಲ್ಲರಿಗೂ ಶ್ರೀಮಹಾವಿಷ್ಣುವನ್ನು ಭಜಿಸಲು ಅಧಿಕಾರವಿದ್ದಂತೆ ಮಾಘಸ್ನಾನ ಮಾಡಲು ಎಲ್ಲರಿಗೂ ಅಧಿಕಾರವಿದೆ. ಈ ವಿಷಯದಲ್ಲಿ ವಿಚಾರಮಾಡಬೇಕಾದ ಆವಶ್ಯಕತೆಯಿಲ್ಲ. ॥ ೪೦ ॥ ಪ್ರಯಾಗಕ್ಷೇತ್ರದಲ್ಲಿ ಮಾಡಬೇಕಾದ ಮಾಘಸ್ನಾನದ ಬಗ್ಗೆ ಹೇಳಿಯಾಯಿತು. ಸನಕಾದಿಗಳೇ! ಇದರ ವಿಧಾನವನ್ನು ಕೇಳಿದ ಮಾತ್ರದಿಂದಲೇ ಮಾಘದ ವೇಣೀಸ್ನಾನದ ಫಲವು ಪ್ರಾಪ್ಯವಾಗುವುದು. ॥ ೪೧ ॥

॥ ನಲವತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನಪಂಚಾಶತ್ತಮೋಽಧ್ಯಾಯಃ ॥ ೪೯ ॥

ಶೇಷ ಉವಾಚ—

ಮಾಘಸ್ನಾನವಿಧಿಂ ವಕ್ಷ್ಯೇ ಯಥೋಕ್ತಂ ಸರ್ವಸಮ್ಮತಮ್ ।
ಮಾಘಸ್ನಾನಂ ಕೃತಂ ಯೇನ ನಿಶ್ಚಿತಂ ಫಲದಂ ಭವೇತ್ ॥ ೧ ॥
ಚಾಂದ್ರಸಾವನಸೌರಾಖ್ಯೈಃ ಪ್ರಮಾಣೈರ್ಮಾಘಮಜ್ಜನಮ್ ।
ಯಥಾಸಂಭವಮೇಕೇನ ಪ್ರೋಕ್ತಂ ಕುರ್ವೀತ ಮಾನವಃ ॥ ೨ ॥
ಅಮಾಂ ವಾ ಪೂರ್ಣಮಾಸೀಂ ವಾ ಸ್ನಾಯಾದಾರಭ್ಯ ಭಕ್ತಿತಃ ।
ಪಕ್ಷದ್ವಯಮಿದಂ ಚಾಂದ್ರಂ ವಿಂಧ್ಯಭಾಗಾದ್ವಿಕಲ್ಪಿತಮ್ ॥ ೩ ॥
ಪೌಷೀಮೇಕಾದಶೀಂ ಶುದ್ಧಾಮಾರಭ್ಯ ಸ್ನಾನಮಾಚರೇತ್ ।
ತಸ್ಯಾಂ ಮಾಘಸ್ಯ ಶುಕ್ಲಾಯಾಂ ಸಾವನೇನ ಸಮಾಪಯೇತ್ ॥ ೪ ॥
ಝಷಸಂಕ್ರಮಮಾರಭ್ಯ ಯಾವತ್ಕಲಶಸಂಕ್ರಮಮ್ ।
ಸ್ನಾಯಾನ್ನಿಯಮಮಾಶ್ರಿತ್ಯ ಸೌರಮಾನೇನ ಭಕ್ತಿತಃ ॥ ೫ ॥
ಏತೇಷ್ವನ್ಯತಮಂ ಪಕ್ಷಮಾಶ್ರಿತ್ಯ ಪ್ರಯತೋ ನರಃ ।
ವಿಧಿನಾ ಮಜ್ಜನಂ ಕುರ್ಯಾನ್ಮಾಧವಪ್ರೀತಿಕೃದ್ಭವೇತ್ ॥ ೬ ॥
ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಗುರೂನ್ ಧ್ಯಾತ್ವಾ ಯಥಾವಿಧಿ ।
ಬ್ರಹ್ಮಾಣಂ ಭಾಸ್ಕರಂ ರಾಮಂ ಹರಿಂ ಕೃಷ್ಣಂ ಸ್ಮರೇತ್ತತಃ ॥ ೭ ॥
ಪುಣ್ಯಶ್ಲೋಕನಲಾದೀನಾಂ ಸಪ್ತಾಹಲ್ಯಾದಿಯೋಷಿತಾಮ್ ।
ವಿದಧ್ಯಾತ್ಸ್ಮರಣಂ ಭಕ್ತ್ಯಾ ಮಹಾಪಾತಕನಾಶನಮ್ ॥ ೮ ॥
ಉತ್ಥಾಯ ಪೃಥಿವೀಂ ಪ್ರಾರ್ಥ್ಯ ಗೃಹೀತ್ವಾ ಜಲಭಾಜನಮ್ ।
ಬಹಿರ್ಗತ್ವಾಥ ನಗರಾತ್ಕುರ್ಯಾಚ್ಛೌಚವಿಧಿಂ ಕೃತೀ ॥ ೯ ॥
ಸ್ನಾತ್ವಾಚಮನಪರ್ಯಂತಂ ಸಮ್ಯಕ್ ಶೌಚವಿಧಾನತಃ ।
ದೈನಂದಿನಾಃ ಕ್ರಿಯಾಃ ಸರ್ವಾ ಯತ ಏವ ಫಲಪ್ರದಾಃ ॥ ೧೦ ॥
ಭುಕ್ತ್ವಾವಾಸಃ ಪರಿತ್ಯಜ್ಯಾಪರಂ ಧೃತ್ವಾ ತಥಾಹತಮ್ ।
ಧೃತ್ವಾ ಭಸ್ಮ ಯಥಾಮಂತ್ರೈರಥವಾ ತುಲಸೀದಲಮ್ ॥ ೧೧ ॥
ಗೃಹೀತ್ವಾ ಸ್ನಾನಸಂಭಾರಂ ಸ್ತ್ರೀಪುತ್ರಾದಿಭಿರನ್ವಿತಃ ।
ಪ್ರಾಪ್ತೇಽರುಣೋದಯೇ ಕಾಲೇ ಗೃಹಾದ್ಗಚ್ಛೇದತಂದ್ರಿತಃ ॥ ೧೨ ॥
ಅಪ್ರಾವೃತಶರೀರೋ ವಾಥವಾಪ್ರಾವೃತಮಸ್ತಕಃ ।
ಪಾದದಗ್ಧೋ ಭವಚ್ಚಿತ್ತಸ್ತಥಾ ಮೌನಸಮನ್ವಿತಃ ॥ ೧೩ ॥
ಕೃಷ್ಣ ವಿಷ್ಣೋ ಹೃಷೀಕೇಶ ವಾಸುದೇವ ಜಗತ್ಪತೇ ।
ಮಾಧವಾನಂತ ಗೋವಿಂದೇತೀರಯನ್ನ್ಯವ್ರಜಞ್ಛನೈಃ ॥ ೧೪ ॥

ತತಸ್ತೀರಂ ಸಮಾಸಾದ್ಯ ಸಾಷ್ಟಾಂಗಂ ಪ್ರಣಿಪತ್ಯ ಚ ।
ಪ್ರಕ್ಷಾಲ್ಯ ಪಾದಾವಾಚಮ್ಯ ತೀರ್ಥಾದುದ್ಧೃತವಾರಿಣಾ ॥ ೧೫ ॥
ತತೋ ಜಲಾಂತಿಕಂ ಗತ್ವಾ ಗಾಯತ್ರ್ಯಾಸ್ಪೃಶ್ಯ ತಜ್ಜಲಮ್ ।
ವರುಣಂ ಭೈರವಂ ಪ್ರಾರ್ಥ್ಯ ಗೃಹೀತ್ವಾ ಪಾಣಿನಾ ಜಲಮ್ ॥ ೧೬ ॥
ಮಾಘಮಾಸಮಿಮಂ ಪೂರ್ಣಂ ಸ್ನಾಸ್ಯೇಽಹಂ ದೇವ ಮಾಧವ ।
ತೀರ್ಥಸ್ಯಾಸ್ಯ ಜಲೇ ನಿತ್ಯಮಿತಿ ಸಂಕಲ್ಪಮಾಚರೇತ್ ॥ ೧೭ ॥
ಪ್ರಾಚೀಮರುಣಿತಾಂ ದೃಷ್ಟ್ವಾ ಗಂಗಾಯಮುನಸಂಗಮೇ ।
ನಾಭಿಮಾತ್ರೇ ಜಲೇ ಗತ್ವಾ ನಿಮಜ್ಜ್ಯೋನ್ಮೃಜ್ಯ ವಾಚಮೇತ್ ॥ ೧೮ ॥
ಪುನರಾದಾಯ ಸಲಿಲಂ ಪಂಚಾಂಗೋಲ್ಲಿಖ್ಯಪೂರ್ವಕಮ್ ।
ಪ್ರಾಗುಕ್ತಂ ಫಲಮುದ್ದಿಶ್ಯ ಮಾಧವಪ್ರೀತಿಹೇತವೇ ॥ ೧೯ ॥
ಮಾಘಸ್ನಾನಂ ಕರಿಷ್ಯೇಽಹಂ ಗಂಗಾಯಮುನಸಂಗಮೇ ।
ಸಂಕಲ್ಪ್ಯೈವಂ ನಿಮಜ್ಜೇತ್ತ್ರಿಃ ಪ್ರವಾಹಾಭಿಮುಖಸ್ತತಃ ॥ ೨೦ ॥
ದುಃಖದಾರಿದ್ರ್ಯನಾಶಾಯ ಶ್ರೀವಿಷ್ಣೋಸ್ತೋಷಣಾಯ ಚ ।
ಮಾಘಸ್ನಾನಂ ಕರೋಮ್ಯತ್ರ ತೀರ್ಥೇ ಪಾಪಪ್ರಣಾಶನೇ ॥ ೨೧ ॥
ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತ ಮಾಧವ ।
ಸ್ನಾನೇನಾನೇನ ಮೇ ದೇವ ಯಥೋಕ್ತಫಲದೋ ಭವ ॥ ೨೨ ॥
ಇಮೌ ಮಂತ್ರೌ ಸಮುಚ್ಚಾರ್ಯ ಸ್ನಾಯಾನ್ಮೌನೀ ಸಮಾಹಿತಃ ।
ಪ್ರಸಂಗಸಿದ್ಧಿರ್ನಿತ್ಯಸ್ಯ ತತ್ರ ತಾವಾವಿಧಿರ್ಗುಣೇ ॥ ೨೩ ॥
ಕರ್ತವ್ಯಾಂತಂ ನಿಮಜ್ಜೇತ ಪೃಥಿವ್ಯಾಂ ಸಂಗಮಾಂತರೇ ।
ಪ್ರಯಾಗೇ ನ ನಿಷೇಧೋಽಸೌ ತತ್ರ ತತ್ರ ವ್ರತಂ ಚರೇತ್ ॥ ೨೪ ॥
ಅಬ್ಲಿಂಗೈರ್ವಾರುಣೈರ್ಮಂತ್ರೈಃ ಕುಶೈರ್ಮಜ್ಜನಮಾಚರೇತ್ ।
ಮಂತ್ರೇಣೋದಕಮಾಲೋಡ್ಯ ಪ್ರಕುರ್ಯಾದಘಮರ್ಷಣಮ್ ॥ ೨೫ ॥
ಗಂಗಾಯೈ ಯಮುನಾಯೈ ಚ ಸರಸ್ವತ್ಯೈ ತಥೈವ ಚ ।
ಮಾಧವಾಯ ವಟೇಶಾಯ ಪ್ರದದ್ಯಾದರ್ಘ್ಯಪಂಚಕಮ್ ॥ ೨೬ ॥
ಸ್ನಾನಾಂಗಂ ತರ್ಪಣಂ ಕೃತ್ವಾ ಪುನಃ ಸ್ನಾತ್ವಾ ಪರಾವೃತಃ ।
ಶಿಖಾವಸ್ತ್ರೋದಕೇ ದತ್ವಾಚಮ್ಯ ತೀರಂ ಸಮಾರುಹೇತ್ ॥ ೨೭ ॥
ವಾಸೋಹತಂ ಪರೀಧಾಯ ಪ್ರಾವೃತ್ಯಾಪರಮುಕ್ಷಿತಮ್ ।
ದ್ವಿರಾಚಮ್ಯ ಮೃದಾ ಕುರ್ಯಾದೂರ್ಧ್ವಪುಂಡ್ರಾದಿಕಂ ತತಃ ॥ ೨೮ ॥
ಪ್ರಾತಃಸಂಧ್ಯಾಮಥಾರ್ಘ್ಯಾಂತೇ ಕೃತ್ವಾಥೋ ವೇದಮಾತರಮ್ ।
ಮಂತ್ರಾರ್ಥಂ ಭಾವಯಂಸ್ತಿಷ್ಠನ್ಜಪೇದಾಮಂಡಲೋದಯಾತ್ ॥ ೨೯ ॥

ಮುಖ್ಯೋಽರುಣೋದಯಃ ಸ್ನಾನೇ ಮಧ್ಯಮೋಽರ್ಕಪ್ರಭೋದಯಃ ।
ಮಂಡಲಾರ್ದ್ಧೋದಯೋ ಹೀನಃ ಶಕ್ತ್ಯಾ ಶಕ್ತ್ಯಾ ವಿಕಲ್ಪಿತಃ ॥ ೩೦ ॥

ಬಾಲವೃದ್ಧಾತುರಾದೀನಾಂ ಪ್ರಾತಃಕಾಲೇಽಖಿಲೋ ಮತಃ ।
ಅಶಕ್ತಸ್ಯ ಧನಾಢ್ಯಸ್ಯ ಸ್ವೇಚ್ಛಾಚಾರೋ ಯತಃ ಸ್ಮೃತಃ ॥ ೩೧ ॥

ಏವಂ ಕೇನಾಪಿ ವಿಧಿನಾ ಶಕ್ತಿಶಾಠ್ಯವಿವರ್ಜಿತಃ ।
ಮಾಘಸ್ನಾನಂ ಪ್ರಕುರ್ವೀತ ಕಂಚಿನ್ನಿಯಮಮಾಚರೇತ್ ॥ ೩೨ ॥

ತೇ ಚ ನಾನಾವಿಧಾಃ ಪ್ರೋಕ್ತಾ ಋಷಿಭಿಸ್ತತ್ತ್ವದರ್ಶಿಭಿಃ ।
ತೇಷ್ವನ್ಯತಮಮಾಶ್ರಿತ್ಯ ಮಾಘಸ್ನಾನಂ ಸಮಾಚರೇತ್ ॥ ೩೩ ॥

ಏಕಭುಕ್ತೇನ ನಕ್ತೇನ ತಥೈವಾಯಾಚಿತೇನ ವಾ ।
ಹವಿಷ್ಯೇಣ ತಥೈಕಾನ್ನ ಭುಕ್ತ್ಯಾನ್ನೋದನಪಕ್ವತಃ ॥ ೩೪ ॥

ಫಲಾಹಾರತಿಲಾಹಾರದುಗ್ಧಾಹಾರಜಲಾಶನೈಃ ।
ಆಜ್ಯೇನ ಪಂಚಗವ್ಯೇನ ಮುಖ್ಯೋಪಾಸೇನ ವೇಚ್ಛಯಾ ॥ ೩೫ ॥

ಚಾಂದ್ರಾಯಣೇನ ಕೃಚ್ಛ್ರಾದ್ಯೈಃ ಪಾರಾಕಾದ್ಯೈಃ ಸ್ವಶಕ್ತಿತಃ ।
ಐಹಿಕಾಮುಷ್ಮಿಕಪ್ರಾಪ್ತ್ಯೈ ಮಾಘೇ ಮಜ್ಜನಮಾಚರೇತ್ ॥ ೩೬ ॥

ಪ್ರಧಾನಸ್ಯಾವಿರೋಧೇನ ಹ್ಯಂಗಾಚರಣಮಿಷ್ಯತೇ ।
ನಿಯತಂ ನೋಪವಾಸಾದಿ ಗೃಹಸ್ಥಸ್ಯ ವಿಜಾನತಃ ॥ ೩೭ ॥

ವಿಧವಾಯತಿಭಿಕ್ಷೂಣಾಮುಪವಾಸಾದಿ ಸಮ್ಮತಮ್ ।
ಗೃಹಸ್ಥೋ ಭೋಜಯನ್ವಿಪ್ರಾನ್ಸ್ವಯಂ ಭೋಜನಮಾಚರೇತ್ ॥ ೩೮ ॥

ಪ್ರಾತರ್ಮಧ್ಯಾಹ್ನಯೋಃ ಸ್ನಾನಂ ಗೃಹಿಣೇ ನಿಯತಂ ಭವೇತ್ ।
ಸಾಯಂ ಚ ಬ್ರಹ್ಮಚಾರೀಣಾಂ ಗೃಹಿಣೋಽಪಿ ನಿಮಿತ್ತತಃ ॥ ೩೯ ॥

ತತ್ರೋಪವಾಸನಿಯಮಾಂಶ್ಚಿರಂಟೀ ಭರ್ತ್ರನುಜ್ಞಯಾ ।
ಕುರ್ವೀತ ತತ್ಪರಾ ವಿಪ್ರಾ ನಾನ್ಯಥಾ ಸಿದ್ಧಿಮಾಪ್ನುಯಾತ್ ॥ ೪೦ ॥

ಯಥಾಕಥಂಚಿತ್ಕುರ್ವೀತ ಭಕ್ತ್ಯಾ ಮಾಘೇ ನಿಮಜ್ಜನಮ್ ।
ತೇನೈವ ಮಾಧವೋ ದೇವೋ ದದಾತಿ ಸಕಲಂ ಫಲಮ್ ॥ ೪೧ ॥

ತ್ಯಜೇದಿಷ್ಟತಮಂ ವಸ್ತು ನಿಷಿದ್ಧಾನ್ನಂ ಚ ಮೂಲಕಮ್ ।
ಅನ್ನಂ ಹಿತಂ ಮಿತಂ ಮೇಧ್ಯಂ ಭುಂಜೀತ ತಪ ಏವ ತತ್ ॥ ೪೨ ॥

ಹೋಮಾರ್ಥಂ ಸೇವಯೇದ್ವಹ್ನಿಂ ನ ಚ ಶೀತನಿವಾರಣೇ ।
ಅಶಕ್ತೋ ಯದಿ ಸೇವೇತ ಪರಸ್ಯಾಗ್ನಿಂ ನ ಸೇವಯೇತ್ ॥ ೪೩ ॥

ಮಜ್ಜನೋನ್ಮರ್ದನಂ ಹೋಮಂ ದಾನಂ ತರ್ಪಣಮೇವ ಚ ।
ತಿಲೈಃ ಪ್ರತಿದಿನಂ ಕುರ್ಯಾದ್ದದ್ಯಾಚ್ಚ ತಪಸಿ ವ್ರತೀ ॥ ೪೪ ॥

ಶಕ್ತೌ ದಾನಾನಿ ಕಾರ್ಯಾಣಿ ಮಾಧವಪ್ರೀತಿಕಾಮ್ಯಯಾ ।
ತೀರ್ಥಸಾದ್ಗುಣ್ಯಕೃದ್ದಾನಂ ಸ್ನಾನಮಾತ್ರಮಶಕ್ತಿಮಾನ್ ॥ ೪೫ ॥
ಬ್ರಹ್ಮಚರ್ಯಂ ಭುವಿ ಸ್ವಾಪಃ ಪರಾನ್ನಾನಶನಂ ತಥಾ ।
ಪ್ರತಿಗ್ರಹನಿವೃತ್ತಿಶ್ಚ ಕಾರ್ಯಾ ಯಾತ್ರಾ ಫಲೇಚ್ಛಯಾ ॥ ೪೬ ॥
ಪ್ರತಿಗ್ರಹಂ ಪರಿತ್ಯಜ್ಯ ಭಿಕ್ಷಾಶೀ ಸತ್ಯವಾಕ್ ವ್ರತೀ ।
ನಿಂದಾಪೈಶುನ್ಯರಹಿತಃ ಸರ್ವಾಧಿಫಲಭಾಗ್ಭವೇತ್ ॥ ೪೭ ॥
ತೈಲಮಾಮಲಕಾಶ್ಚೈವ ತೀರ್ಥೇ ದೇಯಾಸ್ತು ನಿತ್ಯಶಃ ।
ತಥಾ ಪ್ರಜ್ವಾಲಯೇದ್ವಹ್ನಿಂ ಸೇವನಾರ್ಥಂ ದ್ವಿಜನ್ಮನಾಮ್ ॥ ೪೮ ॥
ಭೋಜಯೇದ್ದಂಪತೀಂ ನಿತ್ಯಂ ತೋಷಯೇದ್ವಸ್ತ್ರಭೂಷಣೈಃ ।
ಔರ್ಣಕಾನಿ ಚ ವಾಸಾಂಸಿ ಕಂಚುಕಾನಿ ಚ ತೂಲಿಕಾಃ ॥ ೪೯ ॥
ಉಪಾನಹೌ ತಥಾಗುಪ್ತಾ ಮೋಚಕೌ ಪಾಪಮೋಚಕೌ ।
ಘೃತಂ ಕಾರ್ಪಾಸಕಂ ಹೇಮಖಂಡಂ ದೀಪಂ ತಥಾ ಶುಭಮ್ ॥ ೫೦ ॥
ಪಾತ್ರೇಭ್ಯೋ ಪ್ರತ್ಯಹಂ ದದ್ಯಾದಥವೈಕದಿನೇಽಪಿ ವಾ ।
ಪ್ರಯಾಗೇ ಮಾಘಮಾಸೇ ತು ಮಾಧವಃ ಪ್ರೀಯತಾಮಿತಿ ॥ ೫೧ ॥
ವೇದಪಾರಾಯಣಂ ಕುರ್ಯಾತ್ಪ್ರಯಾಗೇ ತಪಸಿ ವ್ರತೀ ।
ಅಗಣ್ಯಂ ಪುಣ್ಯಮಾಪ್ನೋತಿ ವೈಕುಂಠೇ ವಸತೇ ಸದಾ ॥ ೫೨ ॥
ವೇದವರ್ಣಾನಿ ಯಾವಂತಿ ಪಠಿತಾನಿ ದ್ವಿಜನ್ಮಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥ ೫೩ ॥
ಅಶಕ್ತೌ ಪುಣ್ಯಸೂಕ್ತಾನಿ ಪವಮಾನಂ ಚ ಯಃ ಪಠೇತ್ ।
ತ್ರಿವೇಣ್ಯಾ ಪರಯಾ ಭಕ್ತ್ಯಾ ಪಾರಾಯಣಫಲಂ ಲಭೇತ್ ॥ ೫೪ ॥
ಶ್ರೀಮದ್ಭಾಗವತಂ ಪುಣ್ಯಂ ಕಲಿಕಲ್ಮಷನಾಶನಮ್ ।
ವಾಚಯೇನ್ನಿಯತಃ ಸೋಽಪಿ ಶ್ರೀಕೃಷ್ಣಪದವೀಮಿಯಾತ್ ॥ ೫೫ ॥
ಅಶಕ್ತಸ್ತು ಜಪೇನ್ಮಾಘೇ ಗಾಯತ್ರೀಂ ವೇದಮಾತರಮ್ ।
ಭಕ್ತ್ಯಾ ಫಲಮವಾಪ್ನೋತಿ ವೇದಪಾರಾಯಣೋದ್ಭವಮ್ ॥ ೫೬ ॥
ಆಮಧ್ಯಾಹ್ನಂ ಜಪೇದ್ಯಸ್ತು ಗಾಯತ್ರೀಂ ವೇದಮಾತರಮ್ ।
ತಂ ವೈಕುಂಠಗತಂ ವಿದ್ಯಾತ್ಪುನರ್ವೈಕುಂಠಗಾಮಿನಮ್ ॥ ೫೭ ॥
ಬ್ರಾಹ್ಮಣಾನ್ಭೋಜಯೇನ್ನಿತ್ಯಂ ಯಥಾಶಕ್ತ್ಯಾ ಸದಂಧಸಾ ।
ಪ್ರಾಣದಾನಸಮಂ ಪುಣ್ಯಂ ಪ್ರಾಪ್ಯ ಸ್ವರ್ಗೇ ಮಹೀಯತೇ ॥ ೫೮ ॥
ಮಾಘಮಾಸೇ ಯತಿಭ್ಯೋ ವೈ ಭಿಕ್ಷಾದಾನಂ ಕರೋತಿ ಯಃ ।
ಸೋಽನಂತಫಲಮಾಪ್ನೋತಿ ವಿಷ್ಣುರೂಪಾಯತೇ ಹಿ ತೇ ॥ ೫೯ ॥

ಬ್ರಹ್ಮಧ್ಯಾನಪರಾಶ್ಶಾಂತಾಃ ದಾಂತಾಸ್ಸಂನ್ಯಾಸಿನೋಽಮಲಾಃ ।
ಯದ್ ಗೃಹೇ ತೃಪ್ತಿಮಾಯಾಂತಿ ಬ್ರಹ್ಮಲೋಕೇ ವಸಂತಿ ತೇ ॥ ೬೦ ॥
ಯತಿರ್ವೈ ವಿಮುಖೋ ಯಸ್ಯ ನ ಯಾತಿ ಗೃಹಮಾಗತಃ ।
ಮಧ್ಯಾಹ್ನೇ ವೈಶ್ವದೇವಾಂತೇ ನ ಸ ಯಾತಿ ಯಮಾಲಯಮ್ ॥ ೬೧ ॥
ಅಶಕ್ತೌ ತತ್ಕರೇ ದದ್ಯಾದನ್ನಂ ಗ್ರಾಸಮಿತಂ ತು ಯಃ ।
ಸೋಽಪಿ ಸಂಯಮನೀ ನೇಕ್ಷೇದಪಿ ಪಾಪಶತೈರ್ವೃತಃ ॥ ೬೨ ॥
ಯತಿಹಸ್ತೇ ಜಲಂ ದದ್ಯಾದ್ಭೈಕ್ಷ್ಯಂ ದದ್ಯಾತ್ಪುನರ್ಜಲಮ್ ।
ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಮ್ ॥ ೬೩ ॥
ಯತಿರ್ಯಸ್ಯ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಸ್ಸ್ವಯಮ್ ।
ವಿಮುಖಃ ಸ್ಯಾದ್ಯತಿರ್ಯಸ್ಯ ವಿಮುಖಾ ತಸ್ಯ ದೇವತಾಃ ॥ ೬೪ ॥
ಪೂಜಯೇದ್ವಿಷ್ಣುಬುದ್ಧ್ಯಾ ತಂ ಶ್ರೀಖಂಡತುಲಸೀದಲೈಃ ।
ಯತಿಪಾದೋದಕಂ ಗ್ರಾಹ್ಯಂ ಸಪ್ತಜನ್ಮಾಘನಾಶನಮ್ ॥ ೬೫ ॥
ಕೌಪೀನಂ ಚ ಬಹಿರ್ವಾಸಃ ಕರಕಾಜಿನಕಂಬಲಾನ್ ।
ಕಾಷ್ಠಾನಿ ಚ ಕುಟೀರಾಣಿ ದದ್ಯಾತ್ತಸ್ಮೈ ಸುಭಕ್ತಿಮಾನ್ ॥ ೬೬ ॥
ಏವಂ ಯಃ ಕಥಿತೋ ವಿಪ್ರಾಸ್ಸಾಮಾನ್ಯೋ ಧರ್ಮಸಂಗ್ರಹಃ ।
ಯದಾಚರಣಮಾತ್ರೇಣ ಶೀಘ್ರಂ ತುಷ್ಯತಿ ಮಾಧವಃ ॥ ೬೭ ॥

॥ ಇತಿ ಏಕೋನಪಂಚಾಶತ್ತಮೋಽಧ್ಯಾಯಃ ॥

## ॥ ನಲವತ್ತೊಂಬತ್ತನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಶಾಸ್ತ್ರದಲ್ಲಿ ಹೇಳಿರುವಂತೆಯೇ ಸರ್ವಸಮ್ಮತವಾದ ಮಾಘಸ್ನಾನದ ವಿಧಿಯನ್ನು ಹೇಳುತ್ತೇನೆ. ಈ ವಿಧಿ ಪ್ರಕಾರ ಮಾಘಸ್ನಾನವನ್ನು ಮಾಡಿದರೆ ಖಂಡಿತವಾಗಿಯೂ ಫಲಪ್ರದವಾಗುವುದು. ॥ ೧ ॥ ಚಾಂದ್ರಮಾನ, ಸಾಯನ ಮತ್ತು ಸೌರವೆಂಬ ಮೂರು ಪ್ರಕಾರಗಳಿಂದ ಸ್ನಾನದ ಕಾಲಗಳು ನಿಶ್ಚಿತವಾಗಿದೆ. ಆಯಾಯಾ ದೇಶಗಳಲ್ಲಿ ಆಚರಣೆಯಲ್ಲಿರುವ ಪದ್ಧತಿಗನುಸಾರವಾಗಿ ಅವರವರು ಮಾಡಬಹುದು. ಅಂತೂ ಯಾವುದಾದರೂ ಒಂದು ಸಂಪ್ರದಾಯವನ್ನಾದರೂ ಅನುಸರಿಸಿ ಮಾಘಸ್ನಾನಾದಿಗಳನ್ನು ಮಾಡತಕ್ಕದ್ದು. ॥ ೨ ॥ ಚಾಂದ್ರಮಾನದ ರೀತ್ಯಾ ಮಾಘಸ್ನಾನವನ್ನು ಪುಷ್ಯ ಶುದ್ಧ ಪೂರ್ಣಿಮೆಯಿಂದ ಆರಂಭಿಸಿ ಮಾಘ ಶುದ್ಧ ಪೂರ್ಣಿಮಾವರೆಗಿನ ದಿವಸಗಳಲ್ಲಿ ಸ್ನಾನ ಮಾಡುವುದು ಅಥವಾ ಪುಷ್ಯಾಮಾವಾಸ್ಯದಿಂದ ಆರಂಭಿಸಿ ಮಾಘಮಾಸದ ಅಮಾವಾಸ್ಯ ದಿವಸಗಳವರೆಗೆ ಸ್ನಾನ ಮಾಡುವುದು—ಹೀಗೆ ಈ ಎರಡು ಸಂಪ್ರದಾಯವೂ ಚಾಂದ್ರಮಾನದ ರೀತ್ಯಾ ವಿಂಧ್ಯಪರ್ವತ ದಕ್ಷಿಣಭಾಗದಲ್ಲಿ ಭಾರತದೇಶದಲ್ಲಿ ಇವೆ. ॥ ೩ ॥ ಸಾಯನ ಪದ್ಧತಿಯಲ್ಲಿ ಪುಷ್ಯಶುದ್ಧ ಏಕಾದಶಿಯಿಂದ ಮಾಘಶುದ್ಧ ಏಕಾದಶಿವರೆಗಿನ ದಿವಸಗಳಲ್ಲಿ ಸ್ನಾನವು ಮಾಡತಕ್ಕದ್ದು. ॥ ೪ ॥ ಇನ್ನು ಸೌರಮಾನರೀತ್ಯಾ ಮೀನಸಂಕ್ರಮಣದಿಂದ ಆರಂಭಿಸಿ ಕುಂಭಸಂಕ್ರಮಣದ

ವರೆಗಿರುವ ಮೂವತ್ತೊಂದು ದಿವಸಗಳಲ್ಲಿ ಸ್ನಾನ ಮಾಡುವುದು. (ಸೌರಮಾನ ರೀತಿಯು ವಿಂಧ್ಯಪರ್ವತಕ್ಕೆ ಉತ್ತರಭಾಗದಲ್ಲಿ ಅನೇಕ ಕಡೆ ಇವೆ. ದಕ್ಷಿಣದಲ್ಲೂ ಸಹ ತೌಳವದೇಶದಲ್ಲೂ, ತಮಿಳುನಾಡಿನಲ್ಲೂ ಇದೆ.) ॥ ೫ ॥ ಈ ಮೂರರಲ್ಲಿ ಒಂದು ಸಂಪ್ರದಾಯವನ್ನು ಅರಿಸಿಕೊಂಡು ಶ್ರೀಮಾಧವನ ಪ್ರೀತಿಗಾಗಿ ಭಕ್ತಿಯಿಂದ ವಿಧಿವತ್ತಾಗಿ ಸ್ನಾನ ಮಾಡತಕ್ಕದ್ದು. ॥ ೬ ॥ ಮಾಘಸ್ನಾನ ಮಾಡುವವನು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು(ಬೆಳಗಿನ ಜಾವ ೪-೩೦ ಗಂಟೆಯಿಂದ ೬ ಗಂಟೆವರೆಗಿನ ಕಾಲಕ್ಕೆ ಬ್ರಾಹ್ಮೀಮುಹೂರ್ತವೆಂದು ಹೆಸರು.) ತನ್ನ ಗುರುಗಳನ್ನು ಧ್ಯಾನಿಸಿ ನಂತರ ಬ್ರಹ್ಮ, ಸೂರ್ಯ, ಶ್ರೀರಾಮ, ಶ್ರೀಹರಿ ಮತ್ತು ಶ್ರೀಕೃಷ್ಣನನ್ನು ಸ್ಮರಣೆಮಾಡಬೇಕು. ಪುಣ್ಯ-ಶ್ಲೋಕಿಗಳಾದ ನಳ, ದಮಯಂತೀ, ಕಾರ್ಕೋಟಕವೆಂಬ ನಾಗ, ಋತುಪರ್ಣನೆಂಬ ರಾಜರ್ಷಿ, ಇವರುಗಳನ್ನು ಧ್ಯಾನಿಸಬೇಕು. ಅಹಲ್ಯಾ, ದ್ರೌಪದೀ, ತಾರಾ, ತಾರಾ, ಮಂಡೋದರೀ ಇವರನ್ನು ಮಹಾಪಾತಕಗಳ ನಾಶಕ್ಕಾಗಿ ಸ್ಮರಣೆ ಮಾಡಬೇಕು. ನಂತರ ಸಮುದ್ರವನ್ನೇ ವಸನವಾಗಿ ಉಳ್ಳವಳೇ, ಪರ್ವತಗಳೇ ಸ್ತನಸದೃಶವಾಗಿ ಉಳ್ಳವಳೇ, ವಿಷ್ಣುಪತ್ನಿಯಾಗಿರತಕ್ಕ ಭೂಮಾತೆಯೇ, ನನ್ನ ಪಾದಸ್ಪರ್ಶವನ್ನು ಕ್ಷಮಿಸು ಎಂದು ಭೂಮಿಯನ್ನು ಪ್ರಾರ್ಥಿಸಬೇಕು. ನೀರಿನ ತಂಬಿಗೆಯನ್ನು ಹಿಡಿದುಕೊಂಡು ಗ್ರಾಮದಿಂದ ಹೊರಕ್ಕೆ ಹೊರಡಬೇಕು. ಅಲ್ಲಿ ಶೌಚಾದಿವಿಧಿಗಳನ್ನು ಮುಗಿಸಬೇಕು. ॥ ೭-೯ ॥ ಸ್ನಾನ ಮಾಡಿ ಆಚಮನಪರ್ಯಂತ ಮಾಡಬೇಕಾದ ದಂತಧಾವನಾದಿ ಶೌಚವಿಧಾನದಿಂದಲೇ ದೈನಂದಿನವಾದ ಎಲ್ಲಾ ಕ್ರಿಯೆಗಳು ಫಲಪ್ರದವಾಗುತ್ತವೆ. ಆದ್ದರಿಂದ ಶೌಚಾಚಾರವನ್ನು ಮಾಡಬೇಕು. ತಾನು ಉಟ್ಟಿರುವ ಬಟ್ಟೆಯನ್ನು ಬಿಚ್ಚಿ ಬೇರೆಯ ವಸ್ತ್ರಗಳನ್ನು ಉಟ್ಟುಕೊಳ್ಳಬೇಕು. ಮಂತ್ರಸಹಿತವಾಗಿ ಭಸ್ಮವನ್ನು ತುಳಸೀಮೃತ್ತಿಕೆಯನ್ನು ಧಾರಣೆ ಮಾಡಿ, ತುಳಸಿಯನ್ನು, ತೆಗೆದುಕೊಂಡು ಸ್ನಾನಕ್ಕೆ ಬೇಕಾಗಿರುವ ಪದಾರ್ಥಗಳನ್ನೆಲ್ಲಾ ತೆಗೆದುಕೊಂಡು ಹೆಂಡತಿಮಕ್ಕಳೊಡನೆ ಅರುಣೋದಯಕಾಲದಲ್ಲಿ ಮನೆಯಿಂದ ಆಲಸ್ಯವಿಲ್ಲದಂತೆ ಹೊರಗೆ ಹೊರಡಬೇಕು. ॥ ೧೦-೧೨ ॥ ಹೊರಡುವಾಗ ಹೊದ್ದುಕೊಳ್ಳಬಾರದು ಅಥವಾ ಬರೆ ತಲೆಯಲ್ಲಾದರೂ ಇರಬೇಕು. ತನ್ನ ಕಾಲುಗಳನ್ನೇ ನೋಡಿಕೊಳ್ಳುತ್ತ ಮೌನವಾಗಿದ್ದು, ಭಗವಂತನಲ್ಲಿ ಮನಸ್ಸನ್ನಿಟ್ಟು ವಿಷ್ಣೋ, ಹೃಷೀಕೇಶ, ವಾಸುದೇವ, ಜಗತ್ಪತೇ, ಮಾಧವ, ಹೇ ಕೃಷ್ಣ, ಮಾಧವ, ಅನಂತ ಮತ್ತು ಗೋವಿಂದ ಹೀಗೆ ಹೇಳುತ್ತಾ ನಿಧಾನವಾಗಿ ಜಲಾಶಯದ ಕಡೆಗೆ ಹೋಗಬೇಕು. ॥ ೧೩-೧೪ ॥ ನದೀಸಮೀಪಕ್ಕೆ ಹೋಗಿ ಆ ಜಲದೇವತೆಗಳಿಗೆ ಸಾಷ್ಟಾಂಗ ನಮನ ಮಾಡಿ ಆ ನದಿಯಿಂದ ತೆಗೆದ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡು, ಪುನಃ ನೀರಿನ ಸಮೀಪಕ್ಕೆ ಹೋಗಿ, ಆ ನೀರನ್ನು ಗಾಯತ್ರೀಮಂತ್ರದಿಂದ ಸ್ಪರ್ಶಮಾಡಿ, ವರುಣ ಮತ್ತು ಭೈರವನನ್ನು ಪ್ರಾರ್ಥಿಸುತ್ತಾ ಆ ನೀರನ್ನು ತೆಗೆದುಕೊಂಡು ''ಹೇ ಮಾಧವ, ಈ ಸಾರಿಯ ಮಾಘಮಾಸ ಪೂರ್ತಿ ಈ ಜಲದಲ್ಲಿ ನಿತ್ಯವೂ ನಿನ್ನ ಪ್ರೀತಿಗಾಗಿ ನಿನ್ನ ಪ್ರೇರಣೆಯಿಂದ ಸ್ನಾನ ಮಾಡುವೆನು'' ಎಂದು ಸಂಕಲ್ಪವನ್ನು ಮಾಡಬೇಕು. ॥ ೧೫-೧೭ ॥ ಪ್ರಯಾಗದಲ್ಲಿರುವವರು ಪೂರ್ವದಿಕ್ಕು ಕೆಂಪಾಗಲು ಆರಂಭವಾಗುವದನ್ನು ನೋಡಿ ಗಂಗೆ ಮತ್ತು ಯಮುನೆಯರ ಸಂಗಮದಲ್ಲಿ, ಹೊಕ್ಕಳವರೆಗೆ ಬರುವ ನೀರಿನಲ್ಲಿ ನಿಂತುಕೊಂಡು ನೀರಿನಲ್ಲಿ ಮುಳುಗಿ ಅನಂತರ ಆಚಮನ ಮಾಡಬೇಕು. ॥ ೧೮ ॥ ಪುನಃ ಆ ಸಂಗಮದ ಜಲವನ್ನು ತೆಗೆದುಕೊಂಡು ಪಂಚಾಂಗದ ಪ್ರಕಾರ ದಿನ, ವಾರ, ನಕ್ಷತ್ರ, ಯೋಗ, ಕರಣ, ವರ್ಷ, ಅಯನ, ಋತು, ರಾಶಿ ಮತ್ತು ಪ್ರಾದೇಶಿಕ ಸ್ಥಳ ಇವುಗಳನ್ನು ಪ್ರಾಣಾಯಾಮ ಸಂಕಲ್ಪಪುರಸ್ಸರವಾಗಿ ಹೇಳಿ, ತಮ್ಮ ಅಭೀಷ್ಟಗಳನ್ನು ಉಚ್ಚರಿಸಿ,

ತಮ್ಮ ತಮ್ಮ ಕುಲದೇವತೆಯನ್ನು ಸ್ಮರಿಸಿ, ಮಾಸದೇವತೆಯ ಮೂರ್ತಿಯಿಂದ ಅಭಿನ್ನವಾದ ಶ್ರೀವೇಣೀಮಾಧವನ ಪ್ರೀತಿಗಾಗಿ "ಈ ಗಂಗಾಯಮುನೆಯರ ಸಂಗಮದಲ್ಲಿ ತ್ರಿವೇಣೀ-ಕ್ಷೇತ್ರದಲ್ಲಿ ಮಾಘಸ್ನಾನವನ್ನು ಮಾಡುತ್ತೇನೆ"ಎಂದು ಸಂಕಲ್ಪ ಮಾಡಿ, ಪ್ರವಾಹಾಭಿಮುಖವಾಗಿ ನಿಂತು "ದುಃಖ ಮತ್ತು ದಾರಿದ್ರ್ಯದ ನಿವಾರಣೆಗಾಗಿ ಶ್ರೀಮಹಾವಿಷ್ಣುವಿನ ಸಂತುಷ್ಟಿಗಾಗಿಯೂ, ಪಾಪಗಳನ್ನು ನಾಶಮಾಡುವ ಈ ತೀರ್ಥದಲ್ಲಿ ಮಾಘಸ್ನಾನವನ್ನು ಮಾಡಬೇಕು. ॥ ೧೯-೨೧ ॥ ಸೂರ್ಯನು ಮಕರರಾಶಿಯಲ್ಲಿರುವಾಗ, "ಗೋವಿಂದ, ಅಚ್ಯುತ, ಮಾಧವ, ಕೃಷ್ಣ, ವಿಷ್ಣು ಹೃಷೀಕೇಶ, ಪದ್ಮನಾಭ, ನಾರಾಯಣ ಮತ್ತು ಶ್ರೀಹರಿ ಎಂಬ ನಾಮಗಳನ್ನು ಧ್ಯಾನಿಸುತ್ತಾ ಮೌನವಾಗಿ ಮನಸ್ಸನ್ನು ಮಾಧವನಲ್ಲಿಯೇ ಇಟ್ಟು ಮೂರು ಬಾರಿ ಮುಳುಗಬೇಕು. ಹೇ ಮಾಧವನೇ! ಈ ನನ್ನ ಸ್ನಾನದಿಂದ ಯಥೋಚಿತವಾದ ಫಲವನ್ನುನೀಡುವವನಾಗೆಂದು ಪ್ರಾರ್ಥಿಸಬೇಕು. ॥ ೨೨ ॥ ಈ ರೀತಿಯಾಗಿ ಪ್ರಾರ್ಥನೆ ಮಾಡುತ್ತಾ ಮಾಧವನಲ್ಲಿ ಮನಸ್ಸನ್ನಿಟ್ಟು ಸ್ನಾನ ಮಾಡಬೇಕು. ಪ್ರಸಂಗಕ್ಕೆ ತಕ್ಕಂತೆ ಬೇರೆ ಸಂಗಮಗಳಲ್ಲಿ ಅಥವಾ ನದಿಗಳಲ್ಲಿ ಈ ಸಂಕಲ್ಪಗಳು ಈ ದೇವತಾಸ್ತೋತ್ರಗಳು ಬದಲಾಗುವುವು. ॥ ೨೩ ॥ ಆದರೆ ಬಹಳ ಮಂದಿ ಬ್ರಾಹ್ಮಣರುಗಳು ಪ್ರಯಾಗದಲ್ಲಿ ಅಲ್ಲಲ್ಲಿ ಉಪಸ್ಥಿತರಿರುವುದರಿಂದ ಈ ಸಂಕಲ್ಪ ಮಾಡುವ ವಿಧಾನಗಳಲ್ಲಿ ಕೊರತೆಯಾಗುವುದಿಲ್ಲ. ಅವರೇ ಸೂಕ್ತವಾಗಿ ಎಲ್ಲ ಮಂತ್ರಗಳ ಸಹಿತ ಸಂಕಲ್ಪ ಮಾಡಿಸಿ ಸ್ನಾನ ಮಾಡಿಸುತ್ತಾರೆ. ಪ್ರಸಂಗಾಂತರದಲ್ಲಿ ಸಂಗಮದಲ್ಲಿ ಸ್ನಾನವಾದ ನಂತರ ದಡಕ್ಕೆ ಬಂದು ಪುನಃ ಸ್ನಾನ ಮಾಡಿಸುತ್ತಾರೆ. ಆದರೆ ಇಂತಹ ವಿಧಿಯು ಪ್ರಯಾಗದಲ್ಲಿಲ್ಲ. ॥ ೨೪ ॥ ವರುಣಮಂತ್ರಗಳಿಂದ ದರ್ಭೆಗಳಿಂದ ನದಿಯ ನೀರನ್ನು ಚಿಮುಕಿಸಿಕೊಳ್ಳಬೇಕು. ಇದೇ ಮಂತ್ರದಿಂದ ನೀರನ್ನು ಕಲಕಿ "ಋತಂ ಚ ಸತ್ಯಂ ಚ" ಎಂಬ ಅಘಮರ್ಷಣಸೂಕ್ತವನ್ನು ಹೇಳಿಕೊಂಡು ಮುಳುಗಬೇಕು. ॥ ೨೫ ॥ "ಗಂಗಾ, ಯಮುನಾ, ಸರಸ್ವತೀ, ಮಾಧವ, ವಟೇಶ" ಎಂದು ಹೇಳಿ ಈ ಐವರಿಗೂ ಅರ್ಘ್ಯಗಳನ್ನು ಕೊಡಬೇಕು. ॥ ೨೬ ॥ ಸ್ನಾನಾಂಗತರ್ಪಣವನ್ನು ಬಿಟ್ಟು ಸ್ನಾನ ಮಾಡಿ, ಶಿಖೆ ಮತ್ತು ವಸ್ತ್ರಗಳನ್ನು ಹಿಂಡಿ, ನಂತರ ಆಚಮನ ಮಾಡಿ ತೀರಕ್ಕೆ ಬರಬೇಕು. ॥ ೨೭ ॥ ಉಟ್ಟಿರುವ ಒದ್ದೆ ಬಟ್ಟೆಗಳನ್ನು ಬಿಚ್ಚಿ ಬೇರೆ ಒಣಗಿದ ಧೋತ್ರಗಳನ್ನು ಧರಿಸಿ ಎರಡು ಬಾರಿ ಆಚಮನ ಮಾಡಿ ಗೋಪೀಚಂದನದಿಂದ ಊರ್ಧ್ವಪುಂಡ್ರ, ದ್ವಾದಶನಾಮ, ಪಂಚಮುದ್ರಾಧಾರಣೆ ಮಾಡಿಕೊಳ್ಳ ತಕ್ಕದ್ದು. ॥ ೨೮ ॥ ಅನಂತರ ಪ್ರಾತಃಸಂಧ್ಯೆಯ ಅರ್ಘ್ಯವನ್ನು ಬಿಟ್ಟು ವೇದಮಾತೆ ಆದ ಗಾಯತ್ರಿಯನ್ನು ಜಪಿಸಿ ಸೂರ್ಯನ ಪೂರ್ಣ ಮಂಡಲವು ಉದಯಿಸುವವರೆಗೆ ಆ ಗಾಯತ್ರಿಯ ಮಂತ್ರದ ಅರ್ಥವನ್ನು ಮನನ ಮಾಡುತ್ತಿರಬೇಕು. ॥ ೨೯ ॥ ಸೂರ್ಯೋದಯಕ್ಕೆ ಮೊದಲೇ ಅರುಣೋದಯವಾಗುತ್ತಾ ಇರುವಾಗಲೇ ಸ್ನಾನ ಮಾಡುವುದು ಮುಖ್ಯವಾದುದು; ಸೂರ್ಯನು ಉದಯಿಸುತ್ತಿರುವಾಗ ಮಾಡುವ ಸ್ನಾನವು ಮಧ್ಯಮವು, ಸೂರ್ಯಮಂಡಲವು ಪೂರ್ತಿ ಉದಯಿಸಿ ಕಣ್ಣಿಗೆ ಗೋಚರವಾದ ಮೇಲೆ ಸ್ನಾನ ಮಾಡುವುದು ಅಧಮವು. ಈ ಕಲ್ಪಗಳನ್ನು ತಿಳಿದು ಅವರವರ ಶಕ್ತ್ಯಾನುಸಾರ ಸ್ನಾನ ಮಾಡತಕ್ಕದ್ದು. ॥ ೩೦ ॥ ಬಾಲಕರು, ವೃದ್ಧರು ಮತ್ತು ಕೆಲಸ ಕಾರ್ಯಗಳ ಆತುರತೆಯಿದ್ದವರು ಪ್ರಾತಃಕಾಲದಲ್ಲಿ ಮಾಘಸ್ನಾನ ಮಾಡುವುದು ಶ್ಲಾಘ್ಯವು. ಇದು ಎಲ್ಲದಕ್ಕಿಂತಲೂ ಉತ್ತಮವು. ಅಶಕ್ತರೂ ಶ್ರೀಮಂತರೂ ಅವರ ಇಚ್ಛೆಗನುಸಾರವಾಗಿ ಮಾಡ ಬಹುದು. ॥ ೩೧ ॥ ತಮ್ಮ ಅಶಕ್ತತೆಯ ಶಾಠ್ಯವನ್ನು ಬಿಟ್ಟು ಯಾವುದಾದರೊಂದು ವಿಧದಿಂದ ಮಾಘಸ್ನಾನ ಮಾಡಬೇಕು, ಮತ್ತೇನಾದರೂ ಒಂದು ನಿಯಮ ಅನುಸರಿಸಬೇಕು. ॥ ೩೨ ॥

ಋಷಿಮಹರ್ಷಿಗಳು ತತ್ವದರ್ಶಿಗಳು, ಅವರು ನಾನಾವಿಧಗಳಾದ ನಿಯಮಗಳನ್ನು ಹೇಳಿದ್ದಾರೆ; ಇವುಗಳಲ್ಲಿ ಯಾವ ಒಂದನ್ನಾದರೂ ಅನುಸರಿಸಬೇಕು; ಬಿಡದೆ ಮಾಘಸ್ನಾನವನ್ನು ಮಾಡಬೇಕು. ॥ ೩೩ ॥ ಒಪ್ಪೊತ್ತು ಊಟ, ಕೇವಲ ರಾತ್ರಿಯೂಟ, ಭಿಕ್ಷೆ ಬೇಡದೆ ತನ್ನಲ್ಲಿರುವಷ್ಟರಿಂದಲೇ ಭೋಜನ, ಹವಿಷ್ಯಾನ್ನಭೋಜನ, ಏಕಾನ್ನಭೋಜನ, ಕೇವಲ ಅನ್ನದ ಮಾತ್ರ ಭೋಜನ, ಫಲಾಹಾರ, ತಿಲಾಹಾರ, ದುಗ್ಧಾಹಾರ, ಜಲಾಹಾರ, ತುಪ್ಪದ ಭಕ್ಷಣ, ಪಂಚಗವ್ಯದ ಪಾನ, ನಿರಾಹಾರ, ಹೀಗೆ ಆಹಾರದಲ್ಲಿ ನಿಯಮದಿಂದಿದ್ದು, ಕೃಚ್ಛ್ರಚಾಂದ್ರಾಯಣಾದಿವ್ರತಗಳನ್ನೂ ಮಾಡುತ್ತಿದ್ದು ಪರಾಕವೆಂಬ ಮೂರು ದಿವಸಗಳ ಉಪವಾಸವನ್ನೂ ಮಾಡಿ ಮತ್ತು ತನ್ನ ಶಕ್ತ್ಯಾನುಸಾರ ಭಗವತ್ಕಾರ್ಯಗಳಲ್ಲಿ ಆಸಕ್ತನಾಗಿದ್ದುಕೊಂಡು ಮಾಘಸ್ನಾನವನ್ನು ಮಾಡಿದರೆ ಐಹಿಕ ಮತ್ತು ಆಮುಷ್ಮಿಕ ಫಲಗಳೆರಡೂ ದೊರಕುವುವು. ॥ ೩೪-೩೬ ॥ ಪ್ರಧಾನ ವಾದುದು ಮಾಘಸ್ನಾನವು. ಇದಕ್ಕೆ ವಿರೋಧವಿಲ್ಲದಂತೆ ಬೇರೆ ಸಾಧನಗಳನ್ನು ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು. ಗೃಹಸ್ಥನಿಗೆ ಉಪವಾಸಾದಿಗಳು ಕಡ್ಡಾಯವಲ್ಲ. ॥ ೩೭ ॥ ಮಾಘಮಾಸದಲ್ಲಿ ಯತಿಗಳು, ಭಿಕ್ಷುಗಳು ಮತ್ತು ವಿಧವೆಯರು ಉಪವಾಸಾದಿಗಳನ್ನು ಮಾಡಬೇಕಾದುದೇ. ಆದರೆ ಗೃಹಸ್ಥನು ಬ್ರಾಹ್ಮಣರ ಭೋಜನ ಮಾಡಿಸಿ ತಾನೂ ಭೋಜನ ಮಾಡಬೇಕು. ॥ ೩೮ ॥ ಗೃಹಸ್ಥನಿಗೆ ಮಾಘಮಾಸದಲ್ಲಿ ಪ್ರಾತಃಕಾಲದ ಮತ್ತು ಮಧ್ಯಾಹ್ನದ ಸ್ನಾನಗಳು ಕಡ್ಡಾಯ. ಆದರೆ ಬ್ರಹ್ಮಚಾರಿಯು ಸಾಯಂಸ್ನಾನವನ್ನೂ ಕಡ್ಡಾಯವಾಗಿ ಮಾಡಬೇಕು. ಗೃಹಸ್ಥನು ನಿಮಿತ್ತಕಾರಣಗಳಿಂದ ಕೂಡಿದ ದಿವಸಗಳಲ್ಲಿ ಸಾಯಂಸ್ನಾನವನ್ನು ಮಾಡಬೇಕು. ॥ ೩೯ ॥ ಮಾಘಮಾಸದಲ್ಲಿ ಗಂಡಂದಿರ ಅನುಜ್ಞೆಯಿಂದ ಪತಿತತ್ಪರಳಾದ ಗೃಹಿಣಿಯು ಉಪವಾಸವನ್ನು ಮಾಡಬಹುದು. ಇಲ್ಲದಿದ್ದರೆ ಕಾರ್ಯ ಸಿದ್ಧಿಸುವುದಿಲ್ಲ. ॥ ೪೦ ॥ ಹೇಗಾದರೂ ಮಾಡಿ ಭಕ್ತಿಯಿಂದ ಮಾಘಸ್ನಾನವನ್ನು ಮಾಡಲೇಬೇಕು, ಅದರಿಂದಲೇ ಶ್ರೀಮಾಧವನು ಎಲ್ಲ ಫಲಗಳನ್ನು ಕೊಡುವವನಾಗುತ್ತಾನೆ. ॥ ೪೧ ॥ ಮಾಘ ಮಾಸದಲ್ಲಿ ತಮಗೆ ಇಷ್ಟವಾದ ವಸ್ತುವನ್ನು ಬಿಡಬೇಕು ಮತ್ತು ನಿಷಿದ್ಧವಾದ ಪದಾರ್ಥಗಳನ್ನು ತಿನ್ನಬಾರದು. ಹಿತವಾದ ಪರಿಶುದ್ಧವಾದ ಅನ್ನವನ್ನು ತಿನ್ನಬೇಕು. ಇದೂ ಮಾಧವನ ಪ್ರೀತಿಗಾಗಿ ಮಾಡುವ ಒಂದು ತಪಸ್ಸೇ. ॥ ೪೨ ॥ ಹೋಮಾದಿಗಳನ್ನು ಮಾಡುವಾಗ ಮಾತ್ರ ಬೆಂಕಿಯ ಮುಂದೆ ಇರಬಹುದು. ಆದರೆ ಛಳಿಗೆ ಕಾಸಿಕೊಳ್ಳಲು ಅಗ್ನಿಸೇವನೆ ಕೂಡದು. ಅಶಕ್ತನು ಅಗ್ನಿಸೇವನೆ ಮಾಡಿದರೂ ಇನ್ನೊಬ್ಬರ ಅಗ್ನಿಯನ್ನು ಸೇವಿಸಬಾರದು. ॥ ೪೩ ॥ ಎಳ್ಳು ಎಣ್ಣೆಯಿಂದ ಅಭ್ಯಂಜನವನ್ನು ಮಾಘಮಾಸದಲ್ಲಿ ಮಾಡಬಹುದು. ತಿಲಹೋಮಮಾಡುವುದು, ತಿಲತರ್ಪಣ ಕೊಡುವುದು, ತಪಸ್ವಿಗಳಿಗೆ ತಿಲದಾನ ಮಾಡುವುದು. ಇವೆಲ್ಲವೂ ಮಾಧವನಿಗೆ ಪ್ರೀತಿಕರವು. ॥ ೪೪ ॥ ಶಕ್ತನಾದವನು, ಮಾಧವನ ಪ್ರೀತಿಗೋಸ್ಕರ ಮಾಡುವ ದಾನಾದಿ ಕಾರ್ಯಗಳಿಂದ ತೀರ್ಥಕ್ಷೇತ್ರದಲ್ಲಿ ದೊರಕುವ ಫಲವು. ಅಶಕ್ತನಾದವನಿಗೆ ಕೇವಲ ಸ್ನಾನಮಾತ್ರದಿಂದಲೇ ದೊರಕುವುದು. ॥ ೪೫ ॥ ಪ್ರಯಾಗದ ಯಾತ್ರಾಫಲಾಪೇಕ್ಷಿಗಳು ಬ್ರಹ್ಮಚರ್ಯೆಯಿಂದ ಇರಬೇಕು, ಭೂಮಿಯಲ್ಲಿ ಮಲಗಿ ನಿದ್ದೆ ಮಾಡಬೇಕು, ಮತ್ತೊಬ್ಬರ ಅನ್ನವನ್ನು ಊಟ ಮಾಡಬಾರದು ಮತ್ತು ದಾನ ತೆಗೆದುಕೊಳ್ಳಬಾರದು, ಭಿಕ್ಷಾನ್ನವನ್ನು ಭಕ್ಷಿಸಬೇಕು, ಸತ್ಯವನ್ನೇ ನುಡಿಯಬೇಕು, ಪರರ ನಿಂದೆಯನ್ನು ಬಿಡಬೇಕು ಮತ್ತು ಪರರನ್ನು ಆಡಿಕೊಳ್ಳುವುದನ್ನು ಬಿಡಬೇಕು, ಹೀಗಿದ್ದರೇನೇ ಹೆಚ್ಚಿಗೆ ಫಲ ಲಭಿಸುವುದು. ॥ ೪೬-೪೭ ॥ ಪ್ರತಿನಿತ್ಯವೂ ಮಾಘಸ್ನಾನವ್ರತಿಯು ದಂಪತಿಗಳಿಗೆ ಭೋಜನಮಾಡಿಸಬೇಕು ಮತ್ತು ಅವರಿಗೆ ವಸ್ತ್ರಭೂಷಣಗಳನ್ನು ಕೊಡಬೇಕು.

ಹಾಗೆಯೇ ಬ್ರಾಹ್ಮಣೋತ್ತಮರಿರುವಲ್ಲಿ ಅವರು ಕಾಯಿಸಿಕೊಳ್ಳುವುದಕ್ಕೆ ಬೆಂಕಿಯನ್ನು ಹಚ್ಚಿ ಕೊಡಬೇಕು. ಬ್ರಾಹ್ಮಣರಿಗೆ ಉಣ್ಣೆ ಬಟ್ಟೆಗಳನ್ನೂ ಮೇಲಂಗಿಗಳನ್ನೂ ಕೊಡಬೇಕು. ಅವರಿಗೆ ನೆಲ್ಲಿ ಕಾಯಿ ಮತ್ತು ಎಳ್ಳನ್ನು ಹಾಸಿಗೆಗಳನ್ನು ಈ ತೀರ್ಥಕ್ಷೇತ್ರದಲ್ಲಿ ನಿತ್ಯವೂ ದಾನ ಮಾಡಬೇಕು. ॥ ೪೮-೪೯ ॥ ಬ್ರಾಹ್ಮಣರಿಗೆ ಪಾದರಕ್ಷೆಗಳನ್ನೂ ಮತ್ತು ಹೊಲಿದಿರುವ ಬಟ್ಟೆಗಳನ್ನೂ ಕೊಟ್ಟರೆ ಪಾಪಪರಿಹಾರವು. ಹಾಗೆಯೇ ಆಕಳತುಪ್ಪ ಹತ್ತಿ, ಬಂಗಾರದ ದೀಪದ ಸೊಡರುಗಳು, ಸತ್ಪಾತ್ರರಾದ ವಿಪ್ರರಿಗೆ ಪ್ರಯಾಗದಲ್ಲಿ ಮಾಘಮಾಸದಲ್ಲಿ ಪ್ರತಿದಿವಸವೂ ಅಥವಾ ಒಂದು ದಿವಸವಾದರೂ ದಾನಮಾಡಿದರೆ ಶ್ರೀಮಾಧವನು ಅತಿಪ್ರೀತನಾಗುವನು. ॥ ೫೦-೫೧ ॥ ಮಾಘಸ್ನಾನವ್ರತದ ದೀಕ್ಷೆಯಲ್ಲಿರುವವನು ಪ್ರಯಾಗದಲ್ಲಿ ವೇದಪಾರಾಯಣ ಮಾಡಿದರೆ ಲೆಕ್ಕಹಾಕಲಾರದಷ್ಟು ಪುಣ್ಯವನ್ನು ಪಡೆದು ವೈಕುಂಠದಲ್ಲಿ ವಾಸಿಸುವನು. ॥ ೫೨ ॥ ವೇದ-ಪಾರಾಯಣ ಮಾಡಿದವರು ಆ ವೇದಮಂತ್ರಗಳಲ್ಲಿ ಎಷ್ಟೆಷ್ಟು ಅಕ್ಷರಗಳಿವೇ ಅಷ್ಟಷ್ಟು ಸಂಖ್ಯೆಯಲ್ಲಿ ಶ್ರೀಹರಿಯ ನಾಮಗಳನ್ನು ಸಂಕೀರ್ತನೆ ಮಾಡಿರುವರು. ಇದರಲ್ಲಿ ಯಾವ ಸಂದೇಹವೂ ಇಲ್ಲ. ॥ ೫೩ ॥ ವೇದಪಾರಾಯಣ ಮಾಡಲೂ ಸಾಧ್ಯವಾಗದಿದ್ದಲ್ಲಿ ಪವಮಾನಸೂಕ್ತಗಳನ್ನಾದರೂ ಪ್ರಯಾಗದಲ್ಲಿ ಪಾರಾಯಣ ಮಾಡಿದರೆ ವೇದಪಾರಾಯಣದ ಫಲವೇ ಲಭಿಸುವುದು. ॥ ೫೪ ॥ ಕಲಿಯ ಬಾಧೆಯನ್ನು ನಿವಾರಿಸುವ ಪುಣ್ಯಕರವಾದ ಶ್ರೀಮದ್ಭಾಗವತದ ಪಾರಾಯಣ ಮಾಡಿದರೆ ಜ್ಞಾನಾನಂದಾದಿಗಳುಳ್ಳ ಸ್ವರೂಪವುಳ್ಳ ಮೋಕ್ಷವನ್ನು ಪಡೆದು ಶ್ರೀವಿಷ್ಣುವಿನ ಸಾದೃಶ್ಯವನ್ನು ಪಡೆಯುವರು. ॥ ೫೫ ॥ ಶಕ್ತಿಯಿಲ್ಲದವರು ಮಾಘಮಾಸದಲ್ಲಿ ವೇದಮಾತೆಯೆಂದು ಎನಿಸಿಕೊಂಡಿರುವ ಗಾಯತ್ರೀಮಂತ್ರವನ್ನು ಜಪಿಸಿದರೆ ವೇದಪಾರಾಯಣ ಮಾಡಿದ ಫಲವು ದೊರಕುವುದು. ॥ ೫೬ ॥ ಮಧ್ಯಾಹ್ನದವರೆಗೂ ಯಾರು ಗಾಯತ್ರಿಯನ್ನು ಜಪಿಸುವರೋ ಅವರು ಶ್ರೀವೈಕುಂಠಕ್ಕೆ ಹೋಗಿ ಶ್ರೀವಿಷ್ಣುವನ್ನು ನೋಡುವರು. ॥ ೫೭ ॥ ಪರಮಾತ್ಮನಿಗೆ ನೈವೇದ್ಯವಾಗಿರತಕ್ಕ ಹವಿಷ್ಯಾನ್ನದಿಂದ ಯಾರು ಬ್ರಾಹ್ಮಣರಿಗೆ ಮಾಘಮಾಸದಲ್ಲಿ ಭೋಜನ ಮಾಡಿಸುತ್ತಾರೋ ಅವರು ಪ್ರಾಣದಾನ ಮಾಡಿದ ಪುಣ್ಯವನ್ನು ಸಂಪಾದಿಸಿ ಸ್ವರ್ಗದಲ್ಲಿ ವಿರಾಜಮಾನರಾಗುವರು. ॥ ೫೮ ॥ ಮಾಘಮಾಸದಲ್ಲಿ ಯಾರು ಯತಿಗಳಿಗೆ ಭಿಕ್ಷೆ ಮಾಡಿಸು ತ್ತಾರೋ ಅವರು ಅನಂತ ಫಲಗಳನ್ನು ಹೊಂದುವರು. ಏಕೆಂದರೆ ಆ ಯತಿಗಳು ವಿಷ್ಣುವಿನ ಪ್ರತಿಮಾರೂಪರು. ॥ ೫೯ ॥ ಬ್ರಹ್ಮಧ್ಯಾನಪರರೂ, ಶಾಂತರೂ, ಜಿತೇಂದ್ರಿಯರೂ ಮತ್ತು ಶುದ್ಧರೂ ಆದ ಸನ್ಯಾಸಿಗಳನ್ನು ತಮ್ಮ ಮನೆಗಳಿಗೆ ಕರೆಸಿ ಭಿಕ್ಷೆ ಕೊಡುವವರು ಸತ್ಯಲೋಕಕ್ಕೆ ತೆರಳುವರು. ॥ ೬೦ ॥ ಯತಿಗಳು ಮಧ್ಯಾಹ್ನದಲ್ಲಿ ವೈಶ್ವದೇವಾನಂತರ ಯಾರ ಮನೆಗೆ ಬಂದು ವಿಮುಖರಾಗಿ ಹೋಗುವುದಿಲ್ಲವೋ, ಅವರು ಯಮಲೋಕಕ್ಕೆ ಹೋಗುವುದಿಲ್ಲ. ॥ ೬೧ ॥ ಮಧ್ಯಾಹ್ನದಲ್ಲಿ ಈ ರೀತಿ ಆಗಮಿಸಿರತಕ್ಕ ಸನ್ಯಾಸಿಗಳಿಗೆ ಒಂದು ತುತ್ತು ಅನ್ನವನ್ನಾದರೂ ಕೊಟ್ಟವನು ನೂರಾರು ಪಾಪಗಳಿಂದ ಕೂಡಿದವನಾದಾಗ್ಯೂ ಯಮದೇವರ ಪಟ್ಟಣವಾದ ಸಂಯಮಿನೀ ಯನ್ನು ನೋಡುವುದೇ ಇಲ್ಲ. ॥ ೬೨ ॥ ಯತಿಗಳು ಬಂದಾಗ ನೀರನ್ನು ಕೊಡಬೇಕು, ಆಮೇಲೆ ಅನ್ನವನ್ನು ಕೊಡಬೇಕು, ಪುನಃ ನೀರನ್ನು ಕೊಡಬೇಕು. ಕೊಟ್ಟ ಅನ್ನವು ಮೇರುಪರ್ವತದಷ್ಟು ಹೆಚ್ಚಿನದ್ದಾಗುವುದು ಮತ್ತು ಆ ನೀರು ಸಾಗರದ ನೀರಿನಂತೆ ಬೃಹತ್ತಾಗುವುದು. ॥ ೬೩ ॥ ಯಾರ ಮನೆಯಲ್ಲಿ ಯತಿಗಳು ಭೋಜನ ಮಾಡುವರೋ ಅವರ ಮನೆಯಲ್ಲಿ ಸಾಕ್ಷಾತ್ ಶ್ರೀಹರಿಯು ಭೋಜನ ಮಾಡುವನು. ಯಾರ ಮನೆಯಿಂದ ಸನ್ಯಾಸಿಯು ಅನ್ನವಿಲ್ಲದೆ ಕಳುಹಿಸಲ್ಪಡುವನೋ.

ಅಂತಹವರಿಗೆ ದೇವತೆಗಳೂ ಮುಖ ತೋರಿಸದೆ ಹೊರಟುಹೋಗುವರು. ॥ ೬೪ ॥ ಯತಿಗಳನ್ನು ಸಾಕ್ಷಾತ್ ವಿಷ್ಣುವೆಂದೇ ತಿಳಿದು ಅವರನ್ನು ಶ್ರೀಖಂಡ ಮತ್ತು ತುಳಸೀಗಳಿಂದ ಪೂಜಿಸಬೇಕು. ಯತಿಗಳ ಪಾದೋದಕವು ಸ್ವೀಕಾರಾರ್ಹವು. ಅದು ಏಳು ಜನ್ಮಗಳ ಪಾಪಗಳನ್ನು ನಾಶ ಮಾಡುವುದು. ॥ ೬೫ ॥ ಯತಿಗಳಿಗೆ ಕೌಪೀನ, ಉಡುವ ವಸ್ತ್ರ, ಕಮಂಡಲು, ಕೃಷ್ಣಾಜಿನ, ಕಂಬಳಿ, ಕಾಷ್ಠ ಮತ್ತು ಗುಡಿಸಲು ಇವುಗಳನ್ನು ಭಕ್ತಿಯಿಂದ ಸಮರ್ಪಣೆ ಮಾಡಬೇಕು. ॥ ೬೬॥ ಹೇ ಬ್ರಾಹ್ಮಣರುಗಳಿರಾ! ಈ ರೀತಿಯಾಗಿ ಪ್ರಯಾಗದಲ್ಲಿನ ಮಾಘಸ್ನಾನದ ಸಾಮಾನ್ಯಧರ್ಮಗಳು ಹೇಳಲ್ಪಟ್ಟಿವೆ. ಇದರಂತೆ ಆಚರಿಸಿದರೆ ಶೀಘ್ರವಾಗಿ ಮಾಧವನು ಪ್ರಸನ್ನನಾಗುವನು. ॥ ೬೭ ॥

॥ ನಲವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಾಶತ್ತಮೋಽಧ್ಯಾಯಃ ॥ ೫೦ ॥

ಸೂತ ಉವಾಚ—

ಅಥ ವೈಶೇಷಿಕಾನ್ವಕ್ಷ್ಯೇ ಧರ್ಮಾನ್ನಾಘಭವಾನ್ದ್ವಿಜಾಃ ।
ನಿತ್ಯನೈಮಿತ್ತಿಕಾನ್ಕಾಮ್ಯಾಂಸ್ತತ್ತತ್ಕಾಲವಿಭೇದತಃ ॥ ೧ ॥
ಮಕರೇ ತು ಪರಾಃ ಪುಣ್ಯಾಶ್ಚತ್ವಾರಿಂಶತ್ತು ನಾಡಿಕಾಃ ।
ಕ್ರಮಾತ್ಪುಣ್ಯತರಾಃ ಪುಣ್ಯತಮಾಃ ಪುಣ್ಯಾಃ ಪ್ರಕೀರ್ತಿತಾಃ ॥ ೨ ॥
ಸ್ನಾನಂ ದಾನಂ ಜಪೋ ಹೋಮಃ ಪೂಜನಂ ದ್ವಿಜಭೋಜನಮ್ ।
ಫಲಂ ಕೋಟಿಗುಣಂ ಧತ್ತೇ ಪ್ರಯಾಗೇ ತು ವಿಶೇಷತಃ ॥ ೩ ॥
ತಸ್ಯಾಂ ಶುಕ್ಲತಿಲೈಃ ಸ್ನಾನಂ ಕಾರ್ಯಂ ಚೋದ್ವರ್ತನಂ ಶುಭೈಃ ।
ತಿಲಾ ದೇಯಾಶ್ಚ ವಿಪ್ರೇಭ್ಯಃ ಸಂಕ್ರಾಂತಾವುತ್ತರಾಯಣೇ ॥ ೪ ॥
ತಿಲತೈಲೇನ ದೀಪಾಶ್ಚ ದೇಯಾ ದೇವಗೃಹೇಷು ಚ ।
ತಿಲಹೋಮಃ ಪ್ರಕರ್ತವ್ಯೋ ದದ್ಯಾತ್ತಿಲವೃಷಂ ತಥಾ ॥ ೫ ॥
ವಸ್ತ್ರಂ ಕಾಷ್ಠಂ ಚ ಪಂಚಾಗ್ನಿಂ ತಿಲಧೇನುಂ ಚ ಪರ್ವತಮ್ ।
ತಿಲಪಾತ್ರಂ ಚ ಪದ್ಮಂ ಚ ಹೇಮಮುಕ್ತಾಶ್ಚ ವಿದ್ರುಮಮ್ ॥ ೬ ॥
ಸಘೃತಂ ಕೃಶರಂ ದದ್ಯಾದ್ಬ್ರಾಹ್ಮಣೇಭ್ಯೋ ಯಥಾವಿಧಿ ।
ದಕ್ಷಿಣಾ ಚ ಪ್ರದಾತವ್ಯಾ ಮಾಧವಪ್ರೀತಯೇಽಧಿಕಾ ॥ ೭ ॥
ಅಥಾನೇಕಫಲಪ್ರಾಪ್ತ್ಯೈ ಸೌಭಾಗ್ಯಾಯುಷ್ಕರಾಣಿ ಚ ।
ಸ್ತ್ರೀಭಿರ್ದಾನಾನಿ ದೇಯಾನಿ ನಿಬೋಧತ ಮುನೀಶ್ವರಾಃ ॥ ೮ ॥
ತಿಲಗ್ರಾಸಃ ಪ್ರದಾತವ್ಯೋ ಲಡ್ಡುಕಾಸ್ತಿಲಸಂಭವಾಃ ।
ನವನೀತಮಯಂ ಲಿಂಗಂ ವಸ್ತ್ರತಂಡುಲಪರ್ವತಮ್ ॥ ೯ ॥
ನಿಶಾತಾಂಬೂಲದೀಪಾಂಶ್ಚ ವರ್ಧಮಾನಫಲಾನಿ ಚ ।
ತಥಾ ಮಂಗಲಸೂತ್ರಾಣಿ ಕರಂಡೋ ದಂತಪತ್ರಿಕಾ ॥ ೧೦ ॥
ಮುಕುರಾಃ ಕಜ್ಜಲೋ ಧಾನ್ಯೋ ಕಂಚುಕ್ಯಃ ಕುಂಕುಮಂ ತಥಾ ।
ಕದಲೀ ಚೇಕ್ಷುದಂಡಾಶ್ಚ ತಥಾ ಭೋಗ್ಯಾನನೇಕಶಃ ॥ ೧೧ ॥
ಸದಕ್ಷಿಣಾನಿ ದೇಯಾನಿ ದ್ವಿಜಸ್ತ್ರೀಭ್ಯೋ ಯಥಾಯಥಮ್ ।
ಧನಧಾನ್ಯಸುಖಾವಾಪ್ತಿಪುತ್ರಪೌತ್ರಾದಿವರ್ಧನಮ್ ॥ ೧೨ ॥
ಜನ್ಮಜನ್ಮನಿ ಸೌಭಾಗ್ಯಂ ದಾನೇನಾನೇನ ವೈ ಭವೇತ್ ।
ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ದಕ್ಷಿಣಾಭಿಶ್ಚ ತೋಷಯೇತ್ ॥ ೧೩ ॥
ಸ್ವಯಂ ಭುಂಜೀತ ಸಾಮಾತ್ಯೋ ನಿಯಮೇನ ನಯೇದ್ದಿನಮ್ ।
ಏವಂ ಯಃ ಕುರುತೇ ಶಕ್ತ್ಯಾ ಪ್ರಾಗುಕ್ತಂ ಭಕ್ತಿಮಾನ್ನರಃ ॥ ೧೪ ॥

ಅಕ್ಷಯ್ಯಫಲಮಾಪ್ನೋತಿ ಮಾಧವಶ್ಚಾಶು ತುಷ್ಯತಿ ।
ಏವಂ ವೋ ಮುನಯಃ ಕೃತ್ಯಮುಕ್ತಂ ಸಂಕ್ರಾಂತಿಕಾಮ್ಯಯಾ ॥ ೧೫ ॥
ಕೃತ್ಯಾಂತರಮಥೋ ವಕ್ಷ್ಯೇ ಶ್ರುಣುಧ್ವಂ ಸಾವಧಾನತಃ ।
ಮಾಘಕೃಷ್ಣಚತುರ್ಥೀ ತು ಸಂಕಷ್ಟಹರಸಂಜ್ಞಿತಾ ॥ ೧೬ ॥
ತಸ್ಯಾಮುಪೋಷಣಂ ಕೃತ್ವಾ ಗಣೇಶಂ ಪೂಜಯೇನ್ನಿಶಿ ।
ಷೋಡಶೈರುಪಚಾರೈಶ್ಚ ವೇದಮಂತ್ರೈರ್ಯಥಾವಿಧಿ ॥ ೧೭ ॥
ಚಂದ್ರೋದಯೇಽರ್ಘ್ಯದಾನಂ ಸ್ಯಾಚ್ಚಂದ್ರಾದಿಭ್ಯೋ ಯಥಾಕ್ರಮಮ್ ।
ಏಕವಿಂಶತಿಸಂಖ್ಯಾಕೈಃ ಶೋಭನೈಸ್ತಿಲಲಡ್ಡುಕೈಃ ॥ ೧೮ ॥
ವಾಯನಂ ದ್ವಿಜವರ್ಯಾಯ ದೇಯಂ ಘೃತಸಮನ್ವಿತಮ್ ।
ಶೃಣುಯಾದ್ವಾ ಕಥಾಂ ಪುಣ್ಯಾಂ ಸ್ವಯಮದ್ಯಾತ್ತಿಲಾದಿಕಮ್ ॥ ೧೯ ॥
ಭಾದ್ರಕೃಷ್ಣಚತುರ್ಥ್ಯಾಂ ವೈ ತಸ್ಯಾಂ ವಾ ವ್ರತಮಾಚರೇತ್ ।
ಏಕವಿಂಶತಿವರ್ಷಾಣಿ ಕುರ್ಯಾತ್ ವ್ರತಮನುತ್ತಮಮ್ ॥ ೨೦ ॥
ಏಕಮೇವಾಥವಾ ಕುರ್ಯಾತ್ಕ್ರಿಯಾಗೇ ಭೂತಲೇ ತಥಾ ।
ಏತದ್ವ್ರತಪ್ರಭಾವೇನ ಸರ್ವಸಂಕಷ್ಟನಾಶನಮ್ ॥ ೨೧ ॥
ಜಾಯತೇ ಸರ್ವಕಾಮಾನಾಂ ಪ್ರಾಪ್ತಿರ್ಹೇರಂಬತೋಷಣಾತ್ ।
ದ್ವಾದಶೀಮಾಘಕೃಷ್ಣಸ್ಯ ಸಾ ತಿಲಾ ದ್ವಾದಶೀ ಸ್ಮೃತಾ ॥ ೨೨ ॥
ತಸ್ಯಾಂ ಸರ್ವಂ ತಿಲೈಃ ಕೃತ್ಯಂ ಕರ್ತವ್ಯಂ ಮುನಿಪುಂಗವಾಃ ।
ಮಾಘೇ ತು ಕೃಷ್ಣದ್ವಾದಶ್ಯಾಂ ಯಮೋ ಹಿ ಭಗವಾನ್ಪುರಾ ॥ ೨೩ ॥
ತಿಲಾನುತ್ಪಾದಯಾಮಾಸ ತಪಃ ಕೃತ್ವಾ ಸುದಾರುಣಮ್ ।
ತಸ್ಯಾಮುಪೋಷಿತಸ್ನಾತ ತಿಲೈಸ್ತಸ್ಯಾಂ ಯಜೇದ್ಧರಿಮ್ ॥ ೨೪ ॥
ತಿಲತೈಲೇನ ದೀಪಾಶ್ಚ ದೇಯಾ ದೇವಗೃಹೇಷು ಚ ।
ನಿವೇದಯೇತ್ತಿಲಾನೇವಂ ದಾತವ್ಯಾಶ್ಚ ತಿಲಾಸ್ತಥಾ ॥ ೨೫ ॥
ತಿಲಾನ್ದತ್ವಾ ಚ ವಿಪ್ರೇಭ್ಯೋ ಭಕ್ಷಯೇಚ್ಚ ತಿಲಾಂಸ್ತಥಾ ।
ಮಾಘಕೃಷ್ಣಚತುರ್ದಶ್ಯಾಂ ಸ್ನಾತಃ ಸಂತರ್ಪಯೇದ್ಯಮಮ್ ॥ ೨೬ ॥
ಸತಿಲೈಃ ಸಲಿಲೈಃ ಸಮ್ಯಕ್ ಚತುರ್ದಶಯಮಾಖ್ಯತಃ ।
ತತೋ ಯಮೋ ನಿಹಂತೇತಿ ದಶಕೃತ್ವಃ ಪಠೇನ್ಮನುಮ್ ॥ ೨೭ ॥
ನ ಸ್ಯಾದ್ಯಮಭಯಂ ತಸ್ಯ ಸರ್ವಪಾಪೈಃ ಪ್ರಮುಚ್ಯತೇ ।
ಮಾಘಾಮಾಯಾಂ ಯದಾ ವಿಪ್ರಾಃ ಪಾತಶ್ರವಣಭಾನುತಃ ॥ ೨೮ ॥
ಅರ್ಧೋದಯ ಇತಿ ಪ್ರೋಕ್ತೋ ಯೋಗಃ ಪರಮದುರ್ಲಭಃ ।
ದಿವೈವ ಯೋಗಃ ಶಸ್ತೋಽಯಂ ನ ರಾತ್ರೌ ನ ಚ ಸಂಧ್ಯಯೋಃ ॥ ೨೯ ॥

ಕೋಟಿಸೂರ್ಯಗ್ರಹೈಸ್ತುಲ್ಯ ಈಷನ್ನ್ಯೂನೋ ಮಹೋದಯಃ ।
ಅಮಾಶ್ರವಣಪಾತಾನಾಮಾದಿಮಧ್ಯಾಂತ್ಯನಾಡಿಕಾಃ ॥ ೩೦ ॥

ಭಾನೌ ಭಾನೂದಯೇ ವೈ ಸ್ಯುರ್ಮುಖ್ಯೋ ಹ್ಯರ್ಧೋದಯಸ್ತ್ವಸೌ ।
ಪ್ರಯಾಗೇ ತು ಪ್ರಶಸ್ತೋಽಯಂ ಯೋಗಃ ಪುಣ್ಯೈರವಾಪ್ಯತೇ ॥ ೩೧ ॥

ತತ್ರ ಸ್ನಾನಂ ಹುತಂ ಜಪ್ತಂ ದತ್ತಂ ಕೋಟಿಗುಣಂ ಭವೇತ್ ।
ಅಮೈವೈಕಾ ಮಹಾಪುಣ್ಯಾ ತಾಪಸೀ ತೀರ್ಥನಾಯಕೇ ॥ ೩೨ ॥

ಕಿಮು ಯೋಗೈರ್ಯುತಾ ರೌಕ್ಮೀ ಮಾಣಿಕ್ಯೈರಿವ ಮುದ್ರಿಕಾ ।
ಅರ್ಧೋದಯೇ ತು ಸಂಪ್ರಾಪ್ತೇ ಸರ್ವಂ ಗಂಗಾಸಮಂ ಜಲಮ್ ॥ ೩೩ ॥

ಪಾತ್ರಭೂತಾ ದ್ವಿಜಾಃ ಸರ್ವೇ ಸ್ವಲ್ಪದಾನಂ ಗಿರೇಸ್ಸಮಮ್ ।
ಚತುಷ್ಷಷ್ಟಿಪಲಂ ಮುಖ್ಯಂ ಚತ್ವಾರಿಂಶತ್ತು ಮಧ್ಯಮಮ್ ॥ ೩೪ ॥

ಪಂಚವಿಂಶತಿಕಂ ಹೀನಂ ಕಾಂಸ್ಯಪಾತ್ರಂ ಸ್ವಶಕ್ತಿತಃ ।
ಕೃತ್ವಾ ಪಾಯಸಸಂಪೂರ್ಣಂ ತತ್ರಾಷ್ಟದಲಮುಲ್ಲಿಖೇತ್ ॥ ೩೫ ॥

ಪದ್ಮಸ್ಯ ಕರ್ಣಿಕಾಯಾಂ ತು ಕರ್ಷಮಾತ್ರಂ ಸುವರ್ಣಕಮ್ ।
ತದಭಾವೇ ತದರ್ಧಂ ವಾ ತದರ್ಧಂ ವಾಪಿ ಯೋಜಯೇತ್ ॥ ೩೬ ॥

ಭೂಮೌ ತು ತಂಡುಲೈಶ್ಶುದ್ಧೈಃ ಕೃತ್ವಾಷ್ಟದಲಮುತ್ತಮಮ್ ।
ಆಮಂತ್ರ್ಯ ಸ್ಥಾಪಯೇತ್ತತ್ರ ಬ್ರಹ್ಮವಿಷ್ಣುಶಿವಾತ್ಮಕಮ್ ॥ ೩೭ ॥

ತೇಷಾಂ ಪೂಜಾ ತತಃ ಕಾರ್ಯಾ ಶ್ವೇತಮಾಲ್ಯೈಸ್ಸುಶೋಭಿತೈಃ ।
ವಸ್ತ್ರಾದಿಭಿರಲಂಕೃತ್ಯ ಬ್ರಾಹ್ಮಣಾಯ ನಿವೇದಯೇತ್ ॥ ೩೮ ॥

ಸಸ್ವರ್ಣಪಾಯಸಮನ್ನಂ ಯಸ್ಮಾದೇತತ್ತ್ರಯೀಮಯಮ್ ।
ಆಪತ್ತೇಸ್ತಾರಕಂ ಯಸ್ಮಾತ್ತದ್ಗೃಹಾಣ ದ್ವಿಜೋತ್ತಮಾಃ ॥ ೩೯ ॥

ಸಮುದ್ರಮೇಖಲಾಂ ಪೃಥ್ವೀಂ ಸಮ್ಯಗ್ದಾತುಶ್ಚ ಯತ್ಫಲಮ್ ।
ತತ್ಫಲಂ ಲಭತೇ ಮರ್ತ್ಯಃ ಕೃತ್ವೇದಂ ದಾನಮುತ್ತಮಮ್ ॥ ೪೦ ॥

ಅಮಾವಾಸ್ಯಾವಿಧಿಃ ಪ್ರೋಕ್ತಾ ಪ್ರಯಾಗೇ ಮುನಿಪುಂಗವಾಃ ।
ತಿಥ್ಯಂತರಗತಶ್ಚಾಥೋಽನುಷ್ಠಾನಕ್ರಮ ಈರ್ಯತೇ ॥ ೪೧ ॥

॥ ಇತಿ ಪಂಚಾಶತ್ತಮೋಽಧ್ಯಾಯಃ ॥

## ॥ ಐವತ್ತನೆಯ ಅಧ್ಯಾಯವು ॥

ಸೂತರು ಹೇಳಿದರು—

ಎಲೈ ಶೌನಕಾದಿ ಬ್ರಾಹ್ಮಣರುಗಳೇ! ಮಾಘಮಾಸದಲ್ಲಿ ಸಂಭವಿಸಿರತಕ್ಕ ಅನೇಕ ವಿಶಿಷ್ಟವಾದ ವ್ರತಾದಿಗಳಿಗೆ ಅನ್ವಯಿಸುವ ಧರ್ಮಗಳನ್ನು ಹೇಳುವೆನು. ಇವುಗಳಂತೆ ಆಚರಣೆ ಮಾಡುವುದರಿಂದಲೇ ಶ್ರೀಮಾಧವನು ಬೇಗನೆ ಸಂತುಷ್ಟನಾಗುವನು. ॥ ೧ ॥ ಮಕರಸಂಕ್ರಮಣ

ದಲ್ಲಿ ಸಂಕ್ರಮಣದ ನಂತರ ನಲವತ್ತು ಘಳಿಗೆ ಕಾಲವು ಪುಣ್ಯಕಾಲವು. ಇವು ಕ್ರಮಕ್ರಮವಾಗಿ ಪುಣ್ಯ, ಪುಣ್ಯತರ ಮತ್ತು ಪುಣ್ಯತಮ ಈ ರೀತಿಯಾಗಿ ತನ್ನ ಪ್ರಾಶಸ್ತ್ಯದಲ್ಲಿ ಬದಲಾವಣೆಯನ್ನು ಹೊಂದುವುದು. ॥೨॥ ಪ್ರಯಾಗದಲ್ಲಿ ಈ ಪುಣ್ಯಕಾಲಗಳಲ್ಲಿ ಸ್ನಾನ, ದಾನ, ಜಪ, ಹೋಮ, ಪೂಜೆ ಮತ್ತು ಬ್ರಾಹ್ಮಣರ ಭೋಜನ ಮಾಡಿಸುವುದು ಇವುಗಳಿಂದ ಕೋಟಿಯಷ್ಟು ಹೆಚ್ಚಿಗೆ ಪುಣ್ಯಪ್ರಾಪ್ತವಾಗುವುದು. ॥೩॥ ಈ ಪುಣ್ಯಕಾಲವಾದ ಉತ್ತರಾಯಣದಲ್ಲಿ ಬಿಳಿ ಎಳ್ಳಿನಿಂದ ಸ್ನಾನ ಮಾಡಿ ಮತ್ತು ಮಂಗಳದ್ರವ್ಯಗಳಿಂದ ತಿಕ್ಕಿ ದೇಹವನ್ನು ಸುವಾಸನೆಯುಕ್ತವಾದ್ದನ್ನಾಗಿ ಮಾಡಬೇಕು, ಹಾಗೂ ಎಳ್ಳನ್ನು ದಾನ ಮಾಡಬೇಕು. ॥ ೪ ॥ ದೇವಮಂದಿರದಲ್ಲಿ ಎಳ್ಳೆಣ್ಣೆಯ ದೀಪವನ್ನು ಇಡಬೇಕು ಮತ್ತು ತಿಲಹೋಮವನ್ನು ಮಾಡಬೇಕು. ಎಳ್ಳಿನ ಎತ್ತನ್ನು ದಾನ ಮಾಡಬೇಕು. ॥ ೫ ॥ ವಸ್ತ್ರ, ಕಟ್ಟಿಗೆ ಮತ್ತು ಪಂಚಾಗ್ನಿಯನ್ನೂ ಎಳ್ಳಿನಿಂದ ಮಾಡಿದ ಆಕಳನ್ನೂ ಎಳ್ಳಿನ ರಾಶಿಗಳನ್ನೂ ದಾನ ಮಾಡಬೇಕು, ಎಳ್ಳು ತುಂಬಿದ ಪಾತ್ರೆಯನ್ನು, ಪದ್ಮದ ಆಕಾರದಲ್ಲಿ ಹರಡಿರುವ ಎಳ್ಳನ್ನು, ಬಂಗಾರ, ಮುತ್ತುಗಳು ಮತ್ತು ಹವಳ ಇವುಗಳನ್ನು ದಾನ ಮಾಡಬೇಕು. ॥ ೬ ॥ ಮಾಧವನ ಪ್ರೀತಿಗಾಗಿ ತುಪ್ಪದ ಸಹಿತ ಹುಗ್ಗಿಯನ್ನು ದಕ್ಷಿಣೆಯೊಡನೆ ವಿಧಿವತ್ತಾಗಿ ಬ್ರಾಹ್ಮಣರುಗಳಿಗೆ ದಾನ ಮಾಡಬೇಕು. ॥ ೭ ॥ ಹೇ ಮುನೀಶ್ವರರೇ! ಕೇಳಿರಿ, ಸ್ತ್ರೀಯರು ಈ ಮಕರಮಾಸದಲ್ಲಿ ಅನೇಕ ರೀತಿಯ ಫಲವು ಲಭಿಸುವುದಕ್ಕಾಗಿಯೂ, ತಮಗೆ ದೀರ್ಘಾಯುಸ್ಸು ಮತ್ತು ಸೌಭಾಗ್ಯವು ದೊರಕಲು ಅನೇಕ ದಾನಗಳನ್ನು ಮಾಡಬೇಕು. ॥ ೮ ॥ ಎಳ್ಳನ್ನು, ಎಳ್ಳು ಉಂಡೆಗಳು, ಬೆಣ್ಣೆಯಿಂದ ಆವೃತವಾದ ಲಿಂಗಗಳನ್ನು, ವಸ್ತ್ರಗಳನ್ನು ಮತ್ತು ಅಕ್ಕಿಯ ರಾಶಿ ಇವುಗಳನ್ನು ದಾನವಾಗಿ ಕೊಡಬಹುದು. ॥ ೯ ॥ ಧನ, ಧಾನ್ಯ ಮತ್ತು ಸುಖವೃದ್ಧಿಗೂ ಮತ್ತು ಮಕ್ಕಳು, ಮೊಮ್ಮಕ್ಕಳು ಹುಟ್ಟಿ ವಂಶಾಭಿವೃದ್ಧಿಗಾಗಿಯೂ ಅರಶಿನ, ತಾಂಬೂಲ, ದೀಪಗಳು, ಆ ಕಾಲದಲ್ಲಿ ಬೆಳೆಯುತ್ತಿರುವ ಹಣ್ಣುಗಳು, ಮಂಗಳಸೂತ್ರ, ಡಬ್ಬಿ, ಬಾಚಣಿಗೆ, ಮುಕುರ, ಕಾಡಿಗೆ, ಧಾನ್ಯಗಳು, ಕುಪ್ಪಸಗಳು, ಕುಂಕುಮ, ಬಾಳೆಹಣ್ಣು, ಕಬ್ಬಿನಜಲ್ಲೆ ಮತ್ತು ಅನೇಕ ಭೋಗಪದಾರ್ಥಗಳನ್ನು ಬ್ರಾಹ್ಮಣಸ್ತ್ರೀಯರಿಗೆ ದಕ್ಷಿಣೆ ಸಹಿತ ದಾನ ಮಾಡಬೇಕು. (ಇದನ್ನೇ ಭೋಗೀ ಕೊಡುವುದೆಂದು ವಾಡಿಕೆಯಿರುವುದು.) ॥ ೧೦-೧೨ ॥ ಈ ವಸ್ತುಗಳ ದಾನದಿಂದ ಜನ್ಮ ಜನ್ಮಗಳಲ್ಲಿಯೂ ಸೌಭಾಗ್ಯವು ಶಾಶ್ವತವಾಗಿ ಇರುವುದು. ಇದಲ್ಲದೆ ಬ್ರಾಹ್ಮಣರನ್ನು ಭೋಜನಗಳಿಂದಲೂ ದಕ್ಷಿಣೆಯಿಂದಲೂ ಸಂತುಷ್ಟಿ ಪಡಿಸಬೇಕು. ॥ ೧೩ ॥ ಹೀಗೆ ದಾನಾದಿಗಳನ್ನು ಮಾಡಿ ತನ್ನ ಪರಿವಾರದೊಡನೆ ತಾನೂ ಭೋಜನ ಮಾಡಿ ನಿಯಮದಿಂದ ದಿನಗಳನ್ನು ಕಳೆಯಬೇಕು. ಈ ರೀತಿಯಾಗಿ ಯಾರು ಮಾಡುವರೋ ಅವರಿಗೆ ಮಾಧವನು ಪ್ರಸನ್ನನಾಗುವನು ಮತ್ತು ಅಕ್ಷಯ್ಯಫಲವನ್ನು ಕೊಡುವನು. ಸಂಕ್ರಾಂತಿಯನ್ನು ಉದ್ದೇಶ ಮಾಡಿ ಈ ಕೃತ್ಯಗಳನ್ನು ಹೇಳಿದ್ದಾಯಿತು. ॥ ೧೪-೧೫ ॥ ಮಾಘಕೃಷ್ಣಚತುರ್ಥೀ ದಿವಸವು ಸಂಕಷ್ಟಚತುರ್ಥಿ ಎಂದು ಪ್ರಸಿದ್ಧವಾಗಿದೆ. ಇದರ ಆಚರಣೆಯ ವಿಧಿಯನ್ನು ಹೇಳುವೆನು, ಸಾವಧಾನದಿಂದ ಕೇಳಿ. (ಈ ವ್ರತವು ವೈಷ್ಣವರು ಅನುಷ್ಠಾನ ಮಾಡಲು ಯೋಗ್ಯವಲ್ಲ) ॥ ೧೬ ॥ ಆ ದಿನ ಉಪವಾಸವಿದ್ದು ಸಾಯಂಕಾಲದ ವೇಳೆಯಲ್ಲಿ ವೇದಮಂತ್ರಗಳಿಂದ ಮೂಲಕ ಶ್ರೀ ಮಹಾ ಗಣಪತಿಯ ಷೋಡಶೋಪಚಾರಪೂಜಾವನ್ನು ಮಾಡಬೇಕು. ॥ ೧೭ ॥ ಚಂದ್ರೋದಯ ವಾಗುತ್ತಲೇ ಚಂದ್ರನೇ ಮುಂತಾದವರಿಗೆ ಕ್ರಮಪ್ರಕಾರವಾಗಿ ಅರ್ಘ್ಯವನ್ನು ಕೊಡಬೇಕು. ಇಪ್ಪತ್ತೊಂದು ಎಳ್ಳು ಲಡ್ಡಿಗೆಗಳನ್ನು ತುಪ್ಪದ ಸಹಿತವಾಗಿ ವಾಯನದಾನದೊಡನೆ ಬ್ರಾಹ್ಮಣರಿಗೆ ಕೊಡಬೇಕು. ಪುಣ್ಯಕರವಾದ ಸಂಕಷ್ಟನಾಶಕ ಗಣಪತಿಯ ಕಥೆಯನ್ನು ಕೇಳಿ ನಂತರ ಎಳ್ಳಿನಲ್ಲಿ

ಮಾಡಿದ ಪದಾರ್ಥಗಳಿಂದ ಕೂಡಿದ ಭೋಜನವನ್ನು ಮಾಡಬೇಕು. ॥ ೧೮-೧೯ ॥ ಭಾದ್ರಪದ ಕೃಷ್ಣ ಚತುರ್ಥಿ ದಿವಸವೂ ಈ ವ್ರತವನ್ನು ಇದೇ ರೀತಿ ಮಾಡಬೇಕು. ಹೀಗೆಯೇ ಇಪ್ಪತ್ತೊಂದು ವರ್ಷ ಈ ಉತ್ತಮವಾದ ವ್ರತವನ್ನು ಮಾಡಬೇಕು. ॥ ೨೦ ॥ ಇದನ್ನು ಪ್ರಯಾಗದಲ್ಲಿ ಒಂದು ವರ್ಷ ವಿಧಿಪೂರ್ವಕ ಮಾಡಿದರೆ ಇದರ ಪ್ರಭಾವದಿಂದ ಸರ್ವಾರಿಷ್ಟಗಳೂ ನಿವಾರಣೆಯಾಗುವುವು. ॥ ೨೧ ॥ ಮತ್ತು ಗಣಪತಿಯನ್ನು ಸಂತುಷ್ಟಿಗೊಳಿಸಿದ್ದರಿಂದ ಸರ್ವ ಅಪೇಕ್ಷೆಗಳೂ ನೆರವೇರುವುವು. ಇನ್ನು ಮಾಘಕೃಷ್ಣ ದ್ವಾದಶೀ ದಿವಸವೂ ತಿಲದ್ವಾದಶೀ ಎಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ॥ ೨೨ ॥ ಅವತ್ತಿನ ಎಲ್ಲ ಕೃತ್ಯಗಳೂ ಎಳ್ಳಿನಿಂದಲೇ ಮಾಡಲ್ಪಡತಕ್ಕದ್ದು. ಹಿಂದೆ ಭಗವಾನ್ ಯಮಧರ್ಮರಾಜರು ಮಾಘಕೃಷ್ಣದ್ವಾದಶೀದಿನ ತಿಲವನ್ನು ಉತ್ಪಾದನೆ ಮಾಡಿದರು. ॥ ೨೩ ॥ ಆದ್ದರಿಂದ ಯಮನ ಸಂತೋಷಕ್ಕಾಗಿ ಅಂದು ಉಪವಾಸ ಮಾಡತಕ್ಕದ್ದು ಮತ್ತು ಎಳ್ಳಿನಿಂದ ಶ್ರೀಹರಿಯನ್ನು ಪೂಜಿಸತಕ್ಕದ್ದು. ದೇವರಗುಡಿಗಳಲ್ಲಿ ಎಳ್ಳು ಎಣ್ಣೆಯ ದೀಪಗಳನ್ನು ಹಚ್ಚಿಡಬೇಕು. ಮತ್ತು ದೇವರಿಗೆ ಎಳ್ಳನ್ನು ನಿವೇದನ ಮಾಡಬೇಕು ಮತ್ತು ಎಳ್ಳನ್ನು ದಾನ ಮಾಡಬೇಕು, ॥ ೨೪-೨೫ ॥ ಬ್ರಾಹ್ಮಣರಿಗೆ ಎಳ್ಳನ್ನು ದಾನ ಮಾಡಿದ್ದಲ್ಲದೆ ಎಳ್ಳನ್ನು ತಿನ್ನಬೇಕು. ಮಾಘಕೃಷ್ಣ ಚತುರ್ದಶೀದಿವಸ ಸ್ನಾನ ಮಾಡಿ ಯಮದೇವರಿಗೆ ತರ್ಪಣವನ್ನು ಕೊಡಬೇಕು.॥ ೨೬ ॥ ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ । ಎಂಬ ಯಮಧರ್ಮರಾಜನ ಹೆಸರಿನ ಮಂತ್ರವನ್ನು ಹತ್ತು ಬಾರಿ ಹೇಳಬೇಕು ಮತ್ತು ಎಳ್ಳು ನೀರಿನಿಂದ ಯಮದೇವರಿಗೆ ತರ್ಪಣವನ್ನು ಕೊಡಬೇಕು. ॥ ೨೭ ॥ ಇದರಿಂದ ಯಮನೆಂಬ ಹೆಸರಿನ ಈ ಮನುವಿನಿಂದ ನಮಗೆ ಯಮ-ಭಯವು ಇರುವುದಿಲ್ಲ ಮತ್ತು ಎಲ್ಲ ಪಾಪಗಳಿಂದಲೂ ನಿವೃತ್ತಿ ಹೊಂದುತ್ತೇವೆ. ಹೇ ಶೌನಕಾದಿ ವಿಪ್ರರೇ! ವ್ಯತೀಪಾತ ಮತ್ತು ಶ್ರವಣ ನಕ್ಷತ್ರಗಳು ಕೂಡಿದರೆ (ಅಂದರೆ ವ್ಯತಿಪಾತ ಶ್ರವಣಯೋಗವಿದ್ದರೆ) ಹಾಗೂ ಭಾನುವಾರದ ಯೋಗವಿದ್ದರೆ ಅಂತಹ ಯೋಗಕ್ಕೆ ''ಅರ್ಧೋದಯ''ವೆಂದು ಕರೆಯುತ್ತಾರೆ. ॥ ೨೮ ॥ ಈ ಯೋಗವು ಅಮಾವಾಸ್ಯೆ ಬರುವುದು ಪರಮ ದುರ್ಲಭವು, ಅದರಲ್ಲಿ ಈ ಯೋಗವು ಹಗಲು ಬಂದರೇನೇ ಅತಿಪ್ರಶಸ್ತವು. ಎರಡು ಸಂಧ್ಯಾಕಾಲಗಳಲ್ಲಿಯೂ ಮತ್ತು ರಾತ್ರಿವೇಳೆಯಲ್ಲಿಯೂ ಬಂದರೆ ಪ್ರಶಸ್ತವಲ್ಲ. ಅಮಾ, ವ್ಯತೀಪಾತ, ಶ್ರವಣ, ಭಾನುವಾರ ಇವುಗಳಲ್ಲಿ ಯಾವುದಾದರೊಂದು ಇಲ್ಲದಿದ್ದರೆ ಮಹೋದಯಯೋಗ; ಇದು ಕೋಟಿಸೂರ್ಯಗ್ರಹಣಗಳಿಗೆ ಸಮಾನವು. ಅಂದರೆ ಈ ಯೋಗದಲ್ಲಿ ಮಾಡತಕ್ಕ ಸ್ನಾನ, ತರ್ಪಣ, ಜಪ, ತಪ, ದಾನಗಳು ಕೋಟಿಸೂರ್ಯಗ್ರಹಣ ಗಳಲ್ಲಿಯೂ ಮಾಡಿದ ಜಪತಪಾದಿಗಳಿಗೆ ಸಮಾನವು. ಮಹೋದಯ ಯೋಗವು ಅರ್ಧೋದಯಕ್ಕಿಂತ ಸ್ವಲ್ಪ ಕಡಿಮೆ ಪ್ರಾಶಸ್ತ್ಯವುಳ್ಳದ್ದು. ಇಂತಹ ಅರ್ಧೋದಯವು ಅದರಲ್ಲಿ ಪ್ರಯಾಗದಲ್ಲಿ ಬಂದರೆ ಅದು ಪರಮದುರ್ಲಭವಾದುದೇ ಸರಿ. ಅಮಾವಾಸ್ಯೆಯ ಆದಿಘಳಿಗೆ, ಶ್ರವಣದ ಮಧ್ಯಘಳಿಗೆ, ವ್ಯತೀಪಾತದ ಅಂತ್ಯಘಳಿಗೆ ಇವು ಭಾನುವಾರ ಸೂರ್ಯೋದಯಕ್ಕೆ ಬಂದರೆ ಮುಖ್ಯವಾದ ಅರ್ಧೋದಯಯೋಗವು. ॥ ೨೯-೩೦ ॥ ಸೂರ್ಯೋದಯವಾದ ನಂತರ ಹಗಲಿನಲ್ಲಿ ಅದರಲ್ಲಿಯೂ ಪ್ರಯಾಗದಲ್ಲಿ ಅಮಾವಾಸ್ಯಾದಿನ ಈ ಯೋಗವು ಪುಣ್ಯ-ವಿಶೇಷದಿಂದಲೂ ಬಂದು ಸೇರುವುದು. ॥ ೩೧ ॥ ಆಗ ಪ್ರಯಾಗದಲ್ಲಿ ಮಾಡಿದ ಸ್ನಾನ, ಹೋಮ, ಜಪ, ದಾನ ಮುಂತಾದುವು ಕೋಟಿಗುಣದಷ್ಟು ಹೆಚ್ಚಿಗೆ ಫಲ ಕೊಡತಕ್ಕದ್ದು ಮಾಘ ಮಾಸದ ಅಮಾವಾಸ್ಯೆಯೇ ಪ್ರಯಾಗದಲ್ಲಿ ಮಹಾಪುಣ್ಯತಮ ಇದು ಇದ್ದಾಗ ಹೇಳಬೇಕಾದ್ದೇನು? ॥ ೩೨ ॥

ಬಂಗಾರವು ಮಾಣಿಕ್ಯದಿಂದ ಖಚಿತವಾದರೆ ಹೇಗೋ ಹಾಗೆ ವ್ಯತೀಪಾತಾದಿಯೋಗವು. ಈ ಯೋಗದಲ್ಲಿ ಎಲ್ಲವೂ ಗಂಗಾಜಲಕ್ಕೆ ಸರಿಸಮನಾದುದೇ. ॥ ೩೩ ॥ ಆಗ ಪ್ರಯಾಗದಲ್ಲಿರುವ ಬ್ರಾಹ್ಮಣರೆಲ್ಲರೂ ಸತ್ಪಾತ್ರರೇ; ಅಲ್ಲಿ ಕೊಡತಕ್ಕ ಅಲ್ಪದಾನವೂ ಬೆಟ್ಟದಷ್ಟು ಫಲಕೊಡತಕ್ಕದ್ದು. ಆ ಯೋಗಯುಕ್ತ ಸಮಯದಲ್ಲಿ ಕಂಚಿನ ಪಾತ್ರೆಯಲ್ಲಿ ಪರಮಾನ್ನವನ್ನು ತುಂಬಿ ಅದರೊಳಗೆ ಅಷ್ಟದಳದ ಕಮಲದ ಹೂವನ್ನು ಬರೆದು, ಆ ಹೂವಿನ ಮಧ್ಯದಲ್ಲಿ ಒಂದು ಕರ್ಷ ತೂಕದ ಬಂಗಾರವನ್ನಿಟ್ಟು, ಶಕ್ತಿಯಿಲ್ಲದಿದ್ದರೆ ಅದರ ಅರ್ಧದಷ್ಟು ತೂಕದ, ಅದೂ ಆಗದಿದ್ದರೆ ಇದರ ಅರ್ಧದಷ್ಟು ತೂಕದ (ಅಂದರೆ ಕಾಲುಕರ್ಷದ ತೂಕದ) ಬಂಗಾರವನ್ನಿಟ್ಟು, ಅನಂತರ ಭೂಮಿಯಲ್ಲಿ ಶುದ್ಧವಾದ ಅಕ್ಕಿಯನ್ನು ಸುರಿದು ಅಷ್ಟದಳಪದ್ಮವನ್ನು ರಚಿಸಿ, ಅದರ ಮೇಲೆ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೂಪವಾದ ಪಾಯಸಪಾತ್ರೆಯನ್ನು ಅಮಂತ್ರಕವಾಗಿ ಇಡಬೇಕು. ಈ ಕಂಚಿನ ಪಾತ್ರೆಯು ಅರವತ್ತನಾಲ್ಕು ತೊಲ ತೂಕವಿರುವುದು ಉತ್ತಮ ಪಕ್ಷ, ನಲವತ್ತು ತೊಲದ್ದು ಮಧ್ಯಮ ಮತ್ತು ಇಪ್ಪತ್ತೈದು ತೊಲದ ತೂಕದ್ದು ಕನಿಷ್ಠ. ॥ ೩೪-೩೭ ॥ ಆ ಬ್ರಹ್ಮ, ವಿಷ್ಣು ಮಹೇಶ್ವರರ ಪೂಜೆಯನ್ನು ಬಿಳಿ ಹೂಮಾಲೆಗಳಿಂದ ಪೂಜಾ ಮಾಡಬೇಕು ಮತ್ತು ವಸ್ತ್ರಾದಿಗಳಿಂದ ಅಲಂಕರಿಸಿ ಬ್ರಾಹ್ಮಣರಿಗೆ ಇವಿಷ್ಟನ್ನೂ ದಾನ ಮಾಡಬೇಕು. ॥ ೩೮ ॥ ದಾನ ಕೊಡುವಾಗ ಈ ಮಂತ್ರವನ್ನು ಹೇಳಿ ಕೊಡಬೇಕು. ''ಸಸ್ವರ್ಣಪಾಯಸಮನ್ನಂ ಯಸ್ಮಾದೇತತ್ತ್ರಯೀಮಯಮ್ । ಆಪತ್ತೇಸ್ತಾರಕಂ ಯಸ್ಮಾತ್ತದ್ಗೃಹಾಣ ದ್ವಿಜೋತ್ತಮ ॥'' ನನ್ನಿಂದ ನಿಮಗೆ ಕೊಡಲ್ಪಡುತ್ತಿರುವ ಈ ಸುವರ್ಣಯುಕ್ತವಾದ ಪರಮಾನ್ನವು ವೇದಮಯವಾದದ್ದು. ಆದ್ದರಿಂದ ಸರ್ವ ಆಪತ್ತುಗಳ ನಿವಾರಣೆಗಾಗಿ ಹೇ ವಿಪ್ರೋತ್ತಮರೇ ಇದನ್ನು ಸ್ವೀಕರಿಸಿ. ॥ ೩೯ ॥ ಈ ಉತ್ತಮವಾದ ದಾನ ಮಾಡುವವನಿಗೆ ಸಮುದ್ರವನ್ನೇ ಡಾಬನ್ನಾಗಿ ಉಳ್ಳ ಇಡೀ ಭೂಮಿಯನ್ನೇ ದಾನ ಮಾಡಿದಷ್ಟು ಫಲವು ದೊರಕುವುದು. ॥ ೪೦ ॥ ಪ್ರಯಾಗದಲ್ಲಿನ ಅಮಾವಾಸ್ಯಾವಿಧಿಯು, ಹೇ ಮುನಿಪುಂಗವರೇ! ನನ್ನಿಂದ ಹೇಳಲ್ಪಟ್ಟಿತು. ಬೇರೆ ಮಾಘಮಾಸದ ತಿಥಿಗಳಿಗೆ ಸಂಬಂಧಪಟ್ಟ ವಿಧಿಗಳನ್ನು ಹೇಳುವೆನು. ॥ ೪೧ ॥

॥ ಐವತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕಪಂಚಾಶತ್ತಮೋಽಧ್ಯಾಯಃ ॥ ೫೧ ॥

ಸೂತ ಉವಾಚ—

ಮಾಘಶುಕ್ಲಚತುರ್ಥ್ಯಾಂ ತು ನಕ್ತವ್ರತಪರಾಯಣಃ ।
ಕುಂದೈರಭ್ಯರ್ಚ್ಯ ಗಿರಿಶಂ ಸರ್ವಾನ್ಕಾಮಾನವಾಪ್ನುಯಾತ್ ॥ ೧ ॥
ಅತಃ ಕುಂದಚತುರ್ಥೀತಿ ಭುವಿ ವಿಖ್ಯಾತಿಮಾಗತಾ ।
ಕುಂದಪೂಜನಮಾತ್ರೇಣ ಪ್ರಸನ್ನೋ ಜಾಯತೇ ಶಿವಃ ॥ ೨ ॥
ಪಂಚಮ್ಯಾಂ ಪೂಜನಂ ಭಕ್ತ್ಯಾ ಕರ್ತವ್ಯಂ ರತಿಕಾಮಯೋಃ ।
ಅನೇಕೈರುಪಭೋಗೈಶ್ಚ ಪೂಜಾಸಂಭಾರವಿಸ್ತರೈಃ ॥ ೩ ॥
ಶ್ರಿಯಶ್ಚ ಪೂಜನಂ ಕಾರ್ಯಂ ತಥೈವ ಗುರುಪೂಜನಮ್ ।
ವಾಸಂತಿಕೋತ್ಸವಃ ಕಾರ್ಯೋ ಗೀತವಾದಿತ್ರನರ್ತನೈಃ ॥ ೪ ॥
ಅನೇಕಮಂಗಲದ್ರವ್ಯೈರಸಾಲಕುಸುಮೈಶ್ಶುಭೈಃ ।
ಶ್ರೀಮಾಧವಪರಃ ಸರ್ವೈಃ ಕರ್ತವ್ಯಶ್ಚ ಮಹೋತ್ಸವಃ ॥ ೫ ॥
ದಾನಾನಿ ದ್ವಿಜವರ್ಯೇಭ್ಯೋ ಭೋಜನಾನಿ ವಿಶೇಷತಃ ।
ತೇನಾಸೌ ಮಾಧವೋ ದೇವಸ್ತುಷ್ಟೋ ಭವತಿ ನಿಶ್ಚಿತಮ್ ॥ ೬ ॥
ಯೇ ಹೃಷ್ಟಾಮಲಿನಾಸ್ತಸ್ಮಿಂಸ್ತಿಷ್ಠಂತ್ಯಹನಿ ಮಾನವಾಃ ।
ತಥಾ ತಿಷ್ಠಂತಿ ತೇ ಸರ್ವೇ ವರ್ಷಮಾತ್ರಂ ನ ಸಂಶಯಃ ॥ ೭ ॥
ಅತಃ ಶ್ರೀಪಂಚಮೀ ಪ್ರೋಕ್ತಾ ತಥೈವ ಗುರುಪಂಚಮೀ ।
ವಸಂತಪಂಚಮೀ ಚೇತಿ ಪ್ರಸಿದ್ಧಿಂ ಸಮುಪಾಗತಾ ॥ ೮ ॥
ಅರುಣೋದಯವೇಲಾಯಾಂ ಶುಕ್ಲಾ ಮಾಘಸ್ಯ ಸಪ್ತಮೀ ।
ಪ್ರಯಾಗೇ ಯದಿ ಲಭ್ಯೇತ ಕೋಟಿಸೂರ್ಯಗ್ರಹೈಸ್ಸಮಾ ॥ ೯ ॥
ತಸ್ಯಾಂ ಸ್ನಾನಂ ಚ ದಾನಂ ಚ ಯತ್ಕಿಂಚಿದ್ದುರಿತೋಷಣಮ್ ।
ಕೃತಂ ನಿಶ್ಚಲತಾಂ ಯಾತಿ ತೇನಾಸಾವಚಲಾ ಸ್ಮೃತಾ ॥ ೧೦ ॥
ಬದರ್ಯಾಃ ಸಪ್ತಪತ್ರಾಣಿ ತಾವತ್ಯರ್ಕದಲಾನಿ ಚ ।
ದತ್ತ್ವಾ ಶಿರಸಿ ಮಂತ್ರೇಣ ಸ್ನಾಯಾದ್ಭಕ್ತ್ಯಾರುಣೋದಯೇ ॥ ೧೧ ॥
ಯದ್ವ್ಯಥಾ ಕೃತಂ ಪಾಪಂ ಮಯಾ ಸಪ್ತಸು ಜನ್ಮಸು ।
ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮೀ ॥ ೧೨ ॥
ಮಂತ್ರೇಣಾನೇನ ವೈ ಸ್ನಾತ್ವಾ ಗಂಧಪುಷ್ಪಾಕ್ಷತೈರ್ಯುತಮ್ ।
ಪಾತ್ರೇಣಾಂಜಲಿನಾ ವಾಪಿ ಸೂರ್ಯಾಯಾರ್ಘ್ಯಂ ನಿವೇದಯೇತ್॥ ೧೩ ॥
ಸಪ್ತಸಪ್ತಿವಹಪ್ರೀತಿಸ್ಸಪ್ತಲೋಕಪ್ರದೀಪಕ ।
ಸಪ್ತಮ್ಯಾ ಸಹಿತೋ ದೇವ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೧೪ ॥

ಜನನೀ ಸರ್ವಭೂತಾನಾಂ ಸಪ್ತಮೀ ಸಪ್ತಸಪ್ತಿಕೇ ।
ಸಪ್ತವ್ಯಾಹೃತಿಕೇ ದೇವಿ ನಮಸ್ತೇ ಸೂರ್ಯಮಂಡಲೇ ॥ ೧೫ ॥
ಏವಂ ಸ್ನಾನವಿಧಿರ್ಜ್ಞೇಯೋ ರಥಸಪ್ತಮಿಕಾಭವಃ ।
ಅಚಲಾ ಸಂಭವಃ ಸೋಽಥ ವಿಧಿಃ ಸ್ನಾನೇ ನಿರೂಪ್ಯತೇ ॥ ೧೬ ॥
ಕೃತ್ವಾ ಷಷ್ಠ್ಯಾಮೇಕಭುಕ್ತಂ ಸಪ್ತಮ್ಯಾಂ ನಿಶ್ಚಲಂ ಜಲಮ್ ।
ರಾತ್ರ್ಯಂತೇ ಚಾಲಯೇನ್ನಾರೀ ದತ್ವಾ ಶಿರಸಿ ದೀಪಕಮ್ ॥ ೧೭ ॥
ಸೌವರ್ಣೇ ರಾಜತೇ ಪಾತ್ರೇ ಶಕ್ತ್ಯಾ ಲಬ್ಧಮಯೇ ತಥಾ ।
ತೈಲೇನ ವರ್ತಿಕಾ ದೇಯಾ ಮಹಾರಜನಿರಂಜಿತಾ ॥ ೧೮ ॥
ಸಮಾಹಿತಮನಾ ಭೂತ್ವಾ ದತ್ವಾ ಶಿರಸಿ ದೀಪಕಮ್ ।
ಭಾಸ್ಕರಂ ಹೃದಯೇ ಧ್ಯಾತ್ವಾ ಇಮಂ ಮಂತ್ರಮುದೀರಯೇತ್ ॥ ೧೯ ॥
ನಮಸ್ತೇ ರುದ್ರರೂಪಾಯ ರಸಾನಾಂ ಪತಯೇ ನಮಃ ।
ವರುಣಾಯ ನಮಸ್ತೇಽಸ್ತು ಹರಿವಾಸ ನಮೋಽಸ್ತು ತೇ ॥ ೨೦ ॥
ಜಲೋಪರಿ ಚ ತದ್ದೀಪಂ ಸ್ಥಾಪ್ಯ ಸಂತರ್ಪ್ಯ ದೇವತಾಃ ।
ನರಃ ಕೇನವಲೇದ್ಯಾವತ್ತಾವತ್ಸ್ನಾನಂ ಸಮಾಚರೇತ್ ॥ ೨೧ ॥
ಏವಂ ಪ್ರಯಾಗೇ ಚೇತ್ ಸ್ನಾನಂ ಸರ್ವಕಾಮಫಲಪ್ರದಮ್ ।
ರೂಪಸೌಭಾಗ್ಯಜನನಂ ಸರ್ವರೋಗನಿವಾರಣಮ್ ॥ ೨೨ ॥
ಸೂರ್ಯಪೂಜಾಂ ತತಃ ಕುರ್ಯಾದರ್ಕ್ಯೈಃ ಪೂಜನಸಾಧನೈಃ ।
ಪೀಠಾದೌ ರಥಮುಲ್ಲಿಖ್ಯ ಸಪ್ತಸಪ್ತಿಸಮನ್ವಿತಮ್ ॥ ೨೩ ॥
ಸವಾಲಖಿಲ್ಯಂ ಸಾನೂರುಮೇಕಚಕ್ರಂ ಧ್ವಜಾನ್ವಿತಮ್ ।
ಸಹಸ್ರಕಿರಣಂ ಸೂರ್ಯಂ ವಿಲಿಖೇತ್ತತ್ರ ಸಾಯುಧಮ್ ॥ ೨೪ ॥
ಷೋಡಶೈರುಪಚಾರೈಶ್ಚ ಪೂಜಯಿತ್ವಾ ಯಥಾವಿಧಿ ।
ತದಗ್ರೇ ಸಪ್ತಧಾನ್ಯಾನಿ ಫಲಾನಿ ಚ ನಿವೇದಯೇತ್ ॥ ೨೫ ॥
ಕರವೀರೈರ್ಜಪಾಪುಷ್ಪೈರ್ದೀಪೈರ್ಲೋಹಿತಚಂದನೈಃ ।
ತಾಂಬೂಲೈರ್ದಕ್ಷಿಣಾಭಿಶ್ಚ ಸೂರ್ಯಮಂತ್ರೈಃ ಪ್ರಪೂಜಯೇತ್ ॥ ೨೬ ॥
ಬ್ರಾಹ್ಮಣಂ ಪೂಜಯೇತ್ಪಶ್ಚಾತ್ತೋಷಯೇದ್ದಕ್ಷಿಣಾದಿಭಿಃ ।
ಸರ್ವಾನ್ಕಾಮಾನವಾಪ್ನೋತಿ ನರೋ ನಾರೀ ವಿಶೇಷತಃ ॥ ೨೭ ॥
ತದ್ದಿನೇ ತಿಲಪಾತ್ರಾಣಾಂ ದಾನಮುಕ್ತಂ ಮಹಾಫಲಮ್ ।
ಫಲದಾನಂ ಚ ವಿಪ್ರೇಭ್ಯಸ್ತಥಾ ಷೋಡಶಸಂಖ್ಯಯಾ ॥ ೨೮ ॥
ಕೂಷ್ಮಾಂಡದಾನಂ ಮಂತ್ರೋಕ್ತಂ ಬ್ರಹ್ಮಹತ್ಯಾನಿವಾರಣಮ್ ।
ಸೌಭಾಗ್ಯಪುತ್ರಪೌತ್ರಾದಿಪೋಷಣಂ ರವಿತೋಷಣಮ್ ॥ ೨೯ ॥

ಪ್ರವಾಲಮಣಿಮುಕ್ತಾಢ್ಯಂ ವಸ್ತ್ರಧಾನ್ಯಫಲಾನ್ವಿತಮ್ ।
ಘೃತಾಕ್ತಂ ತಿಲಸಂಯುಕ್ತಂ ಸ್ವರ್ಣರೌಪ್ಯಾದಿಪೂರಿತಮ್ ॥ ೩೦ ॥
ಸಂವೃತ್ತಂ ದ್ವಿಜವರ್ಯಾಯ ಪೂಜಯಿತ್ವಾ ಯಥಾವಿಧಿ ।
ನಾರೀ ವಾ ಪುರುಷೋ ವಾಪಿ ದದ್ಯಾದ್ಭಕ್ತ್ಯಾ ಸದಕ್ಷಿಣಮ್ ॥ ೩೧ ॥
ಯಾವದ್ಬೀಜಾನಿ ಸಂತ್ಯಸ್ಯ ತಾವದ್ವರ್ಷಸಹಸ್ರಕಮ್ ।
ಕೂಷ್ಮಾಂಡದಾತಾ ತೇಜಸ್ವೀ ಪ್ರೀತಃ ಸ್ವರ್ಗೇ ವಸೇನ್ನರಃ ॥ ೩೨ ॥
ಸಂಕ್ರಾಂತಾವಥವಾಮಾಯಾಂ ಸಪ್ತಮ್ಯಾಂ ಚ ವಿಶೇಷತಃ ।
ಪೂರ್ಣಿಮಾಯಾಂ ಚ ಗೋದಾನಮಕ್ಷಯ್ಯಫಲದಂ ಸ್ಮೃತಮ್ ॥ ೩೩ ॥
ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ದಂಪತೀ ಚ ತಥಾರ್ಚಯೇತ್ ।
ಸೂರ್ಯಾತ್ಮಾ ಮಾಧವಸ್ತೇನ ಕರ್ಮಣಾ ಸಂಪ್ರಸೀದತಿ ॥ ೩೪ ॥
ಏವಂವಿಧಾಯ ವಿಧಿವತ್ಸರ್ವಂ ಸಾಪ್ತಮಿಕಂ ವಿಧಿಮ್ ।
ಸ್ನಾತ್ವಾಷ್ಟಮ್ಯಾಂ ತತಃ ಕುರ್ಯಾತ್ಸಲಿಲೇ ಭೀಷ್ಮತರ್ಪಣಮ್ ॥ ೩೫ ॥
ಬ್ರಾಹ್ಮಣಾದ್ಯಾಶ್ಚ ಯೇ ವರ್ಣಾ ನ ದದ್ಯುರ್ಭೀಷ್ಮತರ್ಪಣಮ್ ।
ಸಂವತ್ಸರಕೃತಂ ತೇಷಾಂ ಪುಣ್ಯಂ ನಶ್ಯತಿ ಸತ್ತಮ ॥ ೩೬ ॥
ಭೀಷ್ಮಶ್ಶಾಂತನವೋ ವೀರಸ್ಸತ್ಯವಾದೀ ಜಿತೇಂದ್ರಿಯಃ ।
ಆಭಿರದ್ಭಿರವಾಪ್ನೋತು ಪುತ್ರಪೌತ್ರೋಚಿತಾಂ ಕ್ರಿಯಾಮ್ ॥ ೩೭ ॥
ವೈಯಾಘ್ರಪಾದಗೋತ್ರಾಯ ಸಾಂಕೃತಿಪ್ರವರಾಯ ಚ ।
ಅಪುತ್ರಾಯ ದದಾಮ್ಯೇತಜ್ಜಲಂ ಭೀಷ್ಮಾಯ ವರ್ಮಣೇ ॥ ೩೮ ॥
ಜೀವತ್ಪಿತ್ರಾಪಿ ಕರ್ತವ್ಯಂ ತರ್ಪಣಂ ಯಮಭೀಷ್ಮಯೋಃ ।
ಸವ್ಯೇನ ವಾಪಸವ್ಯೇನ ದ್ವಯೋರಸ್ತಿ ದ್ವಿರೂಪತಾ ॥ ೩೯ ॥
ಏವಂ ಯಸ್ತರ್ಪಣಂ ಕೃತ್ವಾ ಬ್ರಾಹ್ಮಣಾನ್ಭೋಜಯೇತ್ತತಃ ।
ತಸ್ಯ ಸಂತತಿವಿಚ್ಛೇದೋ ಜಾಯತೇ ನ ಕದಾಚನ ॥ ೪೦ ॥
ಏಕಾದಶೀ ತು ಯಾ ಶುಕ್ಲಾ ಸಾ ಭೀಷ್ಮದ್ವಾದಶೀ ಸ್ಮೃತಾ ।
ಉಪೋಷ್ಯ ವಿಧಿವತ್ತಸ್ಯಾಂ ಮಾಧವಂ ಪೂಜಯೇನ್ನರಃ ॥ ೪೧ ॥
ಮಾಘಸ್ನಾನಂ ತಥಾ ಸಮ್ಯಕ್ಸಂತರ್ಪ್ಯ ಪಿತೃದೇವತಾಃ ।
ತಿಲಪಾತ್ರಾಣಿ ದೇಯಾನಿ ಸುವರ್ಣಸಹಿತಾನಿ ಚ ॥ ೪೨ ॥
ತಾಮ್ರಪಾತ್ರಂ ದಶಪಲಂ ಜಘನ್ಯಂ ಪರಿಕೀರ್ತಿತಮ್ ।
ದ್ವಿಗುಣಂ ಮಧ್ಯಮಂ ಪ್ರೋಕ್ತಂ ತ್ರಿಗುಣಂ ಚೋತ್ತಮೋತ್ತಮಮ್ ॥ ೪೩ ॥
ಸ್ವರ್ಣಮೇಕಂ ಜಘನ್ಯಂ ಸ್ಯಾತ್ ದ್ವಿಗುಣಂ ಮಧ್ಯಮಂ ಸ್ಮೃತಮ್ ।
ತ್ರಿಗುಣಂ ಚೋತ್ತಮಂ ಪ್ರೋಕ್ತಮೃಷಿಭಿಸ್ತತ್ತ್ವದರ್ಶಿಭಿಃ ॥ ೪೪ ॥

ತಾಮ್ರಪಾತ್ರೇ ತಿಲಾನ್ ದತ್ವಾ ಪಲಷೋಡಶಕಲ್ಪಿತೇ ।
ಸಹಿರಣ್ಯಂ ಯಥಾಶಕ್ತಿ ವಿಪ್ರಾಯ ಪ್ರತಿಪಾದಯೇತ್ ॥ ೪೫ ॥
ತಾಮ್ರಪಾತ್ರಂ ತಿಲೈಃ ಪೂರ್ಣಂ ಪ್ರಸ್ಥಮಾತ್ರೈರ್ದ್ವಿಜಾಯ ತು ।
ಸಹಿರಣ್ಯಂ ಚ ಯೋ ದದ್ಯಾಚ್ಛ್ರದ್ಧಾವಿತ್ತಾನುಸಾರತಃ ॥ ೪೬ ॥
ದೇವ ದೇವ ಜಗನ್ನಾಥ ಶಂಖಚಕ್ರಗದಾಧರ ।
ತಿಲಪಾತ್ರಂ ಪ್ರದಾಸ್ಯಾಮಿ ತವಾಂಗೇ ಸಂಸ್ಥಿತೋ ಹ್ಯಹಮ್ ॥ ೪೭ ॥
ತಿಲಾಃ ಪುಣ್ಯಾಃ ಪವಿತ್ರಾಶ್ಚ ಸರ್ವಪಾಪಹರಾಃ ಸ್ಮೃತಾಃ ।
ಶುಕ್ಲಾಶ್ಚೈವ ತಥಾ ಕೃಷ್ಣಾ ವಿಷ್ಣುಗಾತ್ರಸಮುದ್ಭವಾಃ ॥ ೪೮ ॥
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ತಿಲಪಾತ್ರಪ್ರದಾನೇನ ತಾನಿ ನಶ್ಯಂತಿ ಸರ್ವದಾ ॥ ೪೯ ॥
ಏವಂ ಯಃ ಕುರುತೇ ದಾನಂ ತಿಲಪಾತ್ರಸ್ಯ ಭಕ್ತಿತಃ ।
ನಾಶಯೇತ್ತ್ರಿವಿಧಂ ಪಾಪಂ ವಾಙ್ಮನಃಕಾಯಸಂಭವಮ್ ॥ ೫೦ ॥
ಊರ್ಣವಸ್ತ್ರಂ ತಥಾ ಧೇನುಂ ಮಣಿಮುಕ್ತಾಪ್ರವಾಲಕಮ್ ।
ಮಾಘೇ ದತ್ವಾ ನರಃ ಪಾಪಾನ್ಮುಕ್ತೋ ವೈಕುಂಠಮಾವ್ರಜೇತ್ ॥ ೫೧ ॥
ದಂಪತೀ ಪೂಜಯೇದ್ಭಕ್ತ್ಯಾ ವೇಣೀಮಾಧವರೂಪಿಣೌ ।
ವಿಪ್ರಾನ್ಸಂಭೋಜ್ಯ ವಿಧಿವತ್ಸ್ವಯಂ ಭುಂಜೀತ ಭಕ್ತಿಮಾನ್ ॥ ೫೨ ॥
ಮೇಷರಾಶೌ ಯದಾ ಸೌರಿಸ್ಸಿಂಹೇ ಚಂದ್ರಬೃಹಸ್ಪತೀ ।
ಭಾಸ್ಕರಃ ಶ್ರವಣರ್ಕ್ಷೇ ಚೇನ್ಮಹಾಮಾಘೀತಿ ಸಾ ಸ್ಮೃತಾ ॥ ೫೩ ॥
ಮಘಾಯುಕ್ತಾಪಿ ಚೇತ್ತಾಸ್ಯಾತ್ಕೇವಲಾ ವಾ ಮುನೀಶ್ವರಾಃ ।
ಪ್ರಯಾಗೇಽತಿಪ್ರಶಸ್ತೇಯಮಖಿಲೇ ಭೂಮಿಮಂಡಲೇ ॥ ೫೪ ॥
ಗಂಗಾಯಮುನಯೋಸ್ತೀರೇ ಪೂರ್ಣಾಯಾಂ ರಜನೀಮುಖೇ ।
ಈಪ್ಸಿತಂ ಫಲಮಾಪ್ನೋತಿ ದೀಪದಾನಕೃತೋ ನರಃ ॥ ೫೫ ॥
ಯತ್ಕೃತಂ ಸುಕೃತಂ ತಸ್ಯಾಂ ತತ್ಸರ್ವಂ ಮೇರುಣಾ ಸಮಮ್ ।
ಜಾಯತೇ ನಾತ್ರ ಸಂದೇಹೋ ಗುರುವಾಕ್ಯಾನ್ಮಯೋದಿತಮ್ ॥ ೫೬ ॥
ಏವಂ ವೋ ಮುನಿಶಾರ್ದೂಲಾ ವಿಶೇಷವಿಧಿನಿರ್ಣಯಃ ।
ಕಥಿತೋಽಯಂ ಭವತ್ಪ್ರೀತ್ಯಾ ಮಾಘಸ್ನಾನಫಲಪ್ರದಃ ॥ ೫೭ ॥

॥ ಇತಿ ಏಕಪಂಚಾಶತ್ತಮೋಽಧ್ಯಾಯಃ ॥

## ॥ ಐವತ್ತೊಂದನೆಯ ಅಧ್ಯಾಯವು ॥

ಮಾಘಶುಕ್ಲ ಚತುರ್ಥಿದಿನದಂದು ಆಚರಿಸತಕ್ಕ ರಾತ್ರಿವ್ರತದಲ್ಲಿ ಆಸಕ್ತರಾದವರು ಮಲ್ಲೆ ಅಥವಾ ಕಮಲಪುಷ್ಪಗಳಿಂದ ಶ್ರೀಮಹರುದ್ರದೇವರನ್ನು ಪೂಜಿಸಿದರೆ ಅವರ ಸಕಲ

ಇಷ್ಟಾರ್ಥಗಳೂ ನೆರವೇರುವುವು. ॥ ೧ ॥ ಕೇವಲ ಕುಂದಪುಷ್ಪಗಳಿಂದ ಮಾಡಿದ ಪೂಜೆಯಿಂದಲೇ ಶ್ರೀರುದ್ರದೇವರು ಪ್ರಸನ್ನರಾಗುತ್ತಾರಾದ್ದರಿಂದ ಈ ಚೌತಿಯು "ಕುಂದ ಚತುರ್ಥೀ" ಎಂದು ಪ್ರಸಿದ್ಧವಾಗಿದೆ. ॥ ೨ ॥ ಅನೇಕವಾದ ಭೋಗಸಾಮಗ್ರಿಗಳಿಂದಲೂ ಮತ್ತು ಪೂಜಾಸಾಮಗ್ರಿಗಳಿಂದಲೂ ಮಾಘಶುಕ್ಲಪಂಚಮಿಯಂದು ರತಿ ಮತ್ತು ಮನ್ಮಥರ ಪೂಜೆಯನ್ನು ಮಾಡುವುದೂ ಕರ್ತವ್ಯವೇ. ವಸಂತಪಂಚಮಿಯೆಂದು ಪ್ರಸಿದ್ಧವಾಗಿರುವ ಅಂದು ಸಂಗೀತ, ವಾದ್ಯ ಮತ್ತು ನರ್ತನಗಳಿಂದ ವಸಂತೋತ್ಸವವನ್ನು ಆಚರಿಸಿ ಶ್ರೀಲಕ್ಷ್ಮೀದೇವಿಯರನ್ನೂ ಮತ್ತು ಬೃಹಸ್ಪತ್ಯಾಚಾರ್ಯರನ್ನೂ ಪೂಜಿಸಿ ಮಾಧವದೇವರನ್ನು ಸಂತೋಷಪಡಿಸತಕ್ಕದ್ದು. ಈ ದಿನ ಶ್ರೀಮಾಧವನ ಭಕ್ತರೆಲ್ಲರೂ ಅನೇಕ ವಿಧ ಮಂಗಳ ದ್ರವ್ಯಗಳಿಂದಲೂ ಶುಭಕರಗಳಾದ ಮಾವಿನ ಹೂಚಿಗುರುಗಳಿಂದಲೂ ಮಾಧವನ ಸಂಬಂಧವಾಗಿ ಮಹೋತ್ಸವವನ್ನು ಮಾಡಬೇಕು. ॥ ೩-೫ ॥ ಬ್ರಾಹ್ಮಣೋತ್ತಮರ ಭೋಜನ ಮಾಡಿಸಿ ದಾನಾದಿಗಳನ್ನು ಕೊಡುವುದರಿಂದ ಶ್ರೀಮಾಧವನು ನಿಶ್ಚಯವಾಗಿಯೂ ಸಂತುಷ್ಟನಾಗುವನು. ಈ ವಸಂತಪಂಚಮಿಯ ದಿವಸ ಯಾರು ಸಂತುಷ್ಟಾಂತಃಕರಣರಾಗಿ ಇರುವರೋ ಅವರು ಇಡೀ ಈ ವರ್ಷದಲ್ಲೇ ಸಂತುಷ್ಟಮನಸ್ಕರಾಗಿಯೇ ಇರುವರು; ಯಾರು ಮಲಿನರಾಗಿರುವರೋ, ಅವರು ವರ್ಷಪೂರ್ತಿ ಮಲಿನರಾಗಿಯೇ ಇರುವರು. ಈ ವಿಷಯದಲ್ಲಿ ಸಂಶಯವಿಲ್ಲ. ॥ ೬-೭ ॥ ಆದ್ದರಿಂದಲೇ ಈ ಪಂಚಮಿಯನ್ನು ಶ್ರೀಪಂಚಮಿಯೆಂದೂ, ಗುರುಪಂಚಮಿಯೆಂದೂ ಮತ್ತು ವಸಂತ ಪಂಚಮಿಯೆಂದೂ ಕರೆಯುತ್ತಾರೆ. ॥ ೮ ॥ ಸರಿಸಮ ಇಲ್ಲದ ಮಾಘಶುದ್ಧಸಪ್ತಮಿಯ ಅರುಣೋದಯ ಕಾಲವು ಪ್ರಯಾಗದಲ್ಲಿ ಲಭ್ಯವಾದರೆ ಕೋಟಿಸೂರ್ಯಗ್ರಹಣಗಳಷ್ಟು ಮಹತ್ವವುಳ್ಳದ್ದು. ॥ ೯ ॥ ಆ ಕಾಲದಲ್ಲಿ ಯಾರು ಸ್ನಾನ, ದಾನ ಮತ್ತು ಶ್ರೀಹರಿಯು ಸಂತುಷ್ಟನಾಗುವ ಯಾವ ಸಣ್ಣ ಕೆಲಸವನ್ನಾದರೂ ಮಾಡಿದರೆ ಅವುಗಳ ಫಲವು ಶಾಶ್ವತವಾಗಿರುತ್ತವಾದ್ದರಿಂದಲೇ ಆ ಸಪ್ತಮಿಗೆ "ನಿಶ್ಚಲ ಸಪ್ತಮೀ" ಎಂದು ಸ್ಮೃತಿಗಳಲ್ಲಿ ಕರೆದಿದ್ದಾರೆ. ॥ ೧೦ ॥ ಎಳಚೀಗಿಡದ ಏಳು ಎಲೆಗಳನ್ನು, ಎಕ್ಕೆ ಎಲೆಗಳನ್ನೂ ಶಿರಸ್ಸಿನ ಮೇಲೆ ಇಟ್ಟುಕೊಂಡು ಭಕ್ತಿಯಿಂದ ಅರುಣೋದಯಕಾಲದಲ್ಲಿ ಈ ಮುಂದೆ ಉಲ್ಲಿಖಿತ ಮಂತ್ರವನ್ನು ಹೇಳಿಕೊಳ್ಳುತ್ತಾ ಸ್ನಾನ ಮಾಡಬೇಕು. ॥ ೧೧ ॥ "ನನ್ನಿಂದ ಹಿಂದಿನ ಏಳು ಜನ್ಮಗಳಲ್ಲಿ ಏನೇನು ಪಾಪಗಳು ಮಾಡಲ್ಪಟ್ಟಿವೆಯೋ ಅವುಗಳನ್ನು ಮತ್ತು ಅವುಗಳ ಪರಿಣಾಮವಾಗಿ ಉಂಟಾಗುವ ರೋಗವನ್ನು ಮತ್ತು ದುಃಖವನ್ನು ಈ ಮಾಕರೀ ಸಪ್ತಮಿಯು ಪರಿಹಾರ ಮಾಡಲಿ." (ಈ ಸಪ್ತಮೀತಿಥಿಯಲ್ಲಿ ಸೂರ್ಯನು ಮಕರರಾಶಿಯಲ್ಲಿ ಇರುವುದರಿಂದ ಈ ತಿಥಿಗೆ "ಮಾಕರೀ ಸಪ್ತಮೀ" ಎಂದು ಕರೆಯುತ್ತಾರೆ.) ॥ ೧೨ ॥ ಈ ಮಂತ್ರವನ್ನು ಉಚ್ಚರಿಸುತ್ತಾ ಸ್ನಾನ ಮಾಡಿ ಗಂಧ, ಹೂವು ಮತ್ತು ಅಕ್ಷತೆಗಳನ್ನು ತುಂಬಿಕೊಂಡು ಪಾತ್ರೆಯಿಂದಲಾಗಲೀ ಇಲ್ಲ ಬೊಗಸೆಯಿಂದಲೇ ಆಗಲೀ ನೀರಿನಿಂದ ಸೂರ್ಯನಾರಾಯಣದೇವರಿಗೆ ಅರ್ಘ್ಯವನ್ನು ಕೊಡತಕ್ಕದ್ದು. ॥ ೧೩ ॥ "ಸಪ್ತಾಶ್ವಗಳಿಂದ ಎಳೆಯಲ್ಪಡಲು ಬಯಸುವವನೇ! ಏಳು ಲೋಕಗಳಿಗೆ ಬೆಳಕನ್ನುಂಟುಮಾಡುವ ಸೂರ್ಯದೇವನೇ; ಸಪ್ತಮೀತಿಥಿಯಿಂದ ಕೂಡಿಕೊಂಡು ಇರತಕ್ಕ ದೇವತೆಯೇ; ನನ್ನಿಂದ ಕೊಡತಕ್ಕ ಅರ್ಘ್ಯವನ್ನು ಸ್ವೀಕರಿಸು, ನಿನಗೆ ನಮಸ್ಕಾರಗಳು. ॥ ೧೪ ॥ ಎಲ್ಲ ಜೀವಿಗಳ ಜನ್ಮ ಕೊಟ್ಟಿರತಕ್ಕ ತಾಯಿಯೇ! ಏಳು ಕುದುರೆಗಳುಳ್ಳವಳೇ; ಗಾಯತ್ರೀ ವ್ಯಾಹೃತಿ ಮಂತ್ರದಲ್ಲಿ ಅಂತರ್ಗತವಾಗಿರತಕ್ಕ ಸಪ್ತವ್ಯಾಹೃತಿಯೇ! ಸೂರ್ಯಮಂಡಲದಲ್ಲಿರತಕ್ಕವಳೇ; ಹೇ ಸಪ್ತಮೀದೇವಿಯೇ; ನಿನಗೆ ನಮಸ್ಕಾರಗಳು." ಎಂದು ಹೇಳಿ ಸಪ್ತಮೀದೇವಿಗೆ ಅರ್ಘ್ಯವನ್ನು ಕೊಡಬೇಕು. ॥ ೧೫ ॥ ಈ ರೀತಿಯಾಗಿ ಸ್ನಾನದ ವಿಧಿಯನ್ನು ತಿಳಿದುಕೊಳ್ಳಬೇಕು. ಇದು ಕೇವಲ

ರಥಸಪ್ತಮೀ ತಿಥಿಗಾಗಿಯೇ ಹೇಳಲ್ಪಟ್ಟಿದೆ ಮತ್ತು ಸ್ನಾನದ ವಿಧಿಯಾಗಿ ನಿರೂಪಣೆ ಮಾಡಲ್ಪಟ್ಟಿದೆ. ॥ ೧೬ ॥ ಈ ವಿಧಿಯ ಪ್ರಕಾರ ಷಷ್ಠೀದಿವಸ ಒಪ್ಪೊತ್ತು ಊಟ ಮಾಡಿ, ಸಪ್ತಮೀದಿವಸ ನೀರನ್ನು ಮಾತ್ರ ಸೇವಿಸಿ, ರಾತ್ರಿಯ ಕೊನೆಯವರೆಗೂ ಮೌನವ್ರತಧಾರಣೆ ಮಾಡಿದ್ದು ನಂತರ ಶಿರಸ್ಸಿನ ಮೇಲೆ ದೀಪವನ್ನು ಇಟ್ಟುಕೊಂಡು ರಾತ್ರಿಯನ್ನು ಕಳೆಯಬೇಕು. ॥ ೧೭ ॥ ಬಂಗಾರ, ಬೆಳ್ಳಿ ತಾಮ್ರ ಅಥವಾ ಯಾವುದು ಲಭ್ಯವಿರುವುದೋ ಅಂತಹ ಪಾತ್ರೆಯಲ್ಲಿ ಉರಿಯುತ್ತಿರುವ ಬತ್ತಿಯನ್ನಿಟ್ಟು ಅದನ್ನು ರಾತ್ರಿಯಲ್ಲಿ ಶಿರಸಾ ಧಾರಣೆ ಮಾಡಿಕೊಂಡಿದ್ದು ಬೆಳಿಗ್ಗೆ ಅದನ್ನು ದಾನ ಮಾಡಬೇಕು. ॥ ೧೮ ॥ ಶಾಂತಮನಸ್ಕರಾಗಿ, ದೀಪವನ್ನು ಶಿರಸ್ಸಿನಲ್ಲಿ ಧಾರಣ ಮಾಡಿಕೊಂಡಿದ್ದು ಶ್ರೀಸೂರ್ಯನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಈ ಮಂತ್ರವನ್ನು ಉಚ್ಚರಿಸಬೇಕು. ॥ ೧೯ ॥ ತೇಜಸ್ವಿರೂಪವುಳ್ಳ, ಷಡ್ರಸಗಳಿಗೆ ಅಧಿಪತಿಯಾದ ಸ್ವಾಮಿಯೇ ವರುಣನೇ! ಹರಿವಾಸನೇ! ನಿನಗೆ ನಮಸ್ಕಾರಗಳು. ॥ ೨೦ ॥ ತೀರ್ಥದೇವತೆ ಮತ್ತು ತೀರ್ಥರಾಜನನ್ನುದ್ದೇಶಿಸಿ ನೀರಿನ ಮೇಲೆ ದೀಪವನ್ನು ಹಚ್ಚಿ ಹರಿಬಿಟ್ಟು ಸ್ನಾನ ಮಾಡಿ ಅರ್ಘ್ಯಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸಿ ಜನರು ಎದ್ದು ಓಡಿಯಾಡುವ ಮುನ್ನವೇ ಸ್ನಾನವನ್ನು ಮುಗಿಸಬೇಕು ॥ ೨೧ ॥ ಈ ರೀತಿಯಾಗಿ ಪ್ರಯಾಗದ ಸಂಗಮದಲ್ಲಿ ಸ್ನಾನ ಮಾಡಿದರೆ ಸರ್ವರೋಗನಿವಾರಣೆಯಾಗಿ ಸ್ಫುರದ್ರೂಪವೂ ಮತ್ತು ಸೌಭಾಗ್ಯವೂ ಸರ್ವ ಅಭೀಷ್ಟಗಳೂ ಪ್ರಾಪ್ತವಾಗುವುದು. ॥ ೨೨ ॥ ನಂತರ ಮುಂದೆ ತಿಳಿಸಿರುವ ಪೂಜಾಸಾಧನೆಗಳಿಂದ ಸೂರ್ಯದೇವರ ಪೂಜೆಯನ್ನು ಮಾಡಬೇಕು. ಒಂದು ಮರದ ಹಲಿಗೆಯ ಮೇಲೆ ಚಂದನದಿಂದ ಒಂದು ಚಕ್ರವುಳ್ಳ ಮತ್ತು ದಪ್ಪವಾದ ತೊಲೆಯುಳ್ಳ, ಮುಂದುಗಡೆ ವಾಲಖಿಲ್ಯರುಗಳನ್ನು (ಬ್ರಹ್ಮರ್ಷಿಗಳು), ಧ್ವಜಸಹಿತವಾದ ರಥವನ್ನು ಚಿತ್ರಿಸಿ, ಅರುಣ ಎಂಬ ಸಾರಥಿಯನ್ನೂ ರಥದ ಮಧ್ಯಭಾಗದಲ್ಲಿ ಸಹಸ್ರಕಿರಣಗಳನ್ನುಳ್ಳ ಸೂರ್ಯದೇವರನ್ನು ಆಯುಧಗಳ ಸಹಿತರಾಗಿರುವಂತೆ ಬರೆಯಬೇಕು. ಷೋಡಶೋಪಚಾರಪೂಜೆಗಳಿಂದ ವಿಧಿವತ್ತಾಗಿ ಶ್ರೀಸೂರ್ಯನಾರಾಯಣದೇವರನ್ನು ಪೂಜಿಸಿ, ರಥದ ಮುಂದೆ ಸೂರ್ಯದೇವರಿಗಾಗಿ ಏಳು ವಿಧ ಧಾನ್ಯಗಳನ್ನು ನಾನಾವಿಧಗಳಾದ ಸುಮಧುರ ಹಣ್ಣುಗಳನ್ನು ಇಟ್ಟು ಸಮರ್ಪಣೆ ಮಾಡಬೇಕು. ॥ ೨೩-೨೫ ॥ ಕೆಂಪು ಬಣ್ಣವುಳ್ಳ ಪೂಜಾಸಾಮಗ್ರಿಗಳಿಂದಲೂ ಕೆಂಪಾದ ಮಂತ್ರಾಕ್ಷತೆ, ಗೆಜ್ಜೆವಸ್ತ್ರ ದಾಸವಾಳದ ಹೂವು ಮತ್ತು ಕಮಲದ ಹೂವುಗಳಿಂದಲೂ ಮತ್ತು ಚಂದನದಿಂದಲೂ, ದೀಪಧೂಪಗಳಿಂದಲೂ, ತಾಂಬೂಲ ಮತ್ತು ದಕ್ಷಿಣೆಗಳಿಂದಲೂ, ನೀರಾಜನದಿಂದಲೂ ಸೂರ್ಯಮಂತ್ರದಿಂದ ಸೂರ್ಯನನ್ನು ಪೂಜಿಸಬೇಕು. (ಸೂರ್ಯಮಂತ್ರ, ಅಷ್ಟಾಕ್ಷರ ಮಂತ್ರವು ತಂತ್ರಸಾರ ಸಂಗ್ರಹದಲ್ಲಿ ಹೇಳಲ್ಪಟ್ಟಿದೆ.) ॥ ೨೬ ॥ ಅನಂತರ ಬ್ರಾಹ್ಮಣರನ್ನು ಪೂಜಾದಿಗಳಿಂದ ಸಂತೋಷಪಡಿಸಿ ಅವರಿಗೆ ದಕ್ಷಿಣೆಯನ್ನು ಕೊಡಬೇಕು. ಸ್ತ್ರೀಯರಾಗಲಿ, ಪುರುಷರಾಗಲಿ ವಿಶೇಷವಾಗಿ ಸ್ತ್ರೀಯರು-ರಥಸಪ್ತಮಿಯಂದು ಈ ರೀತಿಯಾಗಿ ಸೂರ್ಯನನ್ನು ಪೂಜಿಸಿದರೆ ಅವರ ಸಕಲ ಅಭೀಷ್ಟಗಳೂ ಸಿದ್ಧಿಸುವುವು. ॥ ೨೭ ॥ ಆ ದಿನದಲ್ಲಿ ಎಳ್ಳನ್ನು ತುಂಬಿದ ಪಾತ್ರೆಯನ್ನು ಹಾಗೆಯೇ ಹದಿನಾರು ಸಂಖ್ಯೆಯಲ್ಲಿ ಹಣ್ಣುಗಳನ್ನು ಬ್ರಾಹ್ಮಣರಿಗೆ ದಾನ ಮಾಡುವುದೂ ಮಹಾಫಲಪ್ರದವು. ॥ ೨೮ ॥ ರಥಸಪ್ತಮಿಯ ದಿನ ಮಂತ್ರೋಕ್ತವಾಗಿ ಮಾಡುವ ಸಿಹಿಕುಂಬಳಕಾಯಿಯ ದಾನದಿಂದ ಶ್ರೀಸೂರ್ಯದೇವರು ಸಂತುಷ್ಟರಾಗಿ, ಬ್ರಹ್ಮಹತ್ಯೆಯ ಪಾಪವು ನಿವಾರಣೆಯಾಗಿ, ಸೌಭಾಗ್ಯವು ಪ್ರಾಪ್ತವಾಗಿ ಮಕ್ಕಳು ಮೊಮ್ಮಕ್ಕಳುಗಳು ಪುಷ್ಟರಾಗಿ ಬೆಳೆಯುವರು. ॥ ೨೯ ॥ ಆ ದಿನದಲ್ಲಿ ಹವಳ, ರತ್ನಗಳು, ಮುತ್ತುಗಳು, ಬಟ್ಟೆ ಮತ್ತು ಧಾನ್ಯಗಳು, ಫಲಗಳು, ತುಪ್ಪದಿಂದ ಕೂಡಿರುವ ಎಳ್ಳು, ಬಂಗಾರ ಮತ್ತು ಬೆಳ್ಳಿಯಿಂದ ತುಂಬಿರುವ ಪರಾತವನ್ನು

ಬ್ರಾಹ್ಮಣರಿಗೆ ಭಕ್ತಿಯಿಂದ ಪೂಜಿಸಿ ದಕ್ಷಿಣೆಸಹಿತವಾಗಿ ದಾನ ಮಾಡಿದರೆ ಕುಂಬಳಕಾಯಿಯಲ್ಲಿ ಎಷ್ಟು ಬೀಜಗಳಿರುವುವೋ ಅಷ್ಟು ಸಹಸ್ರವರ್ಷಗಳವರೆಗೆ ದಾನ ಮಾಡಿದ ವ್ಯಕ್ತಿಯು ತೇಜಸ್ವಿಯಾಗಿ ಸ್ವರ್ಗದಲ್ಲಿ ಸಂತೋಷದಿಂದ ಎಲ್ಲರ ಪ್ರೀತಿಗೂ ಪಾತ್ರನಾಗಿ ವಾಸಮಾಡುವನು. ॥ ೩೦-೩೨ ॥ ಸಂಕ್ರಾಂತಿ, ಅಮಾವಾಸ್ಯೆ, ಪೂರ್ಣಿಮಾ ಮತ್ತು ಸಪ್ತಮೀದಿವಸಗಳಲ್ಲಿ ಗೋದಾನ ಮಾಡುವವರು ಅಕ್ಷಯಫಲವನ್ನು ಪಡೆಯುತ್ತಾರೆಂದು ಸ್ಮೃತಿಗಳಲ್ಲಿ ಉಕ್ತವಾಗಿದೆ. ॥ ೩೩ ॥ ಈ ದಿವಸಗಳಲ್ಲಿ ಭಕ್ತಿಯಿಂದ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು ಮತ್ತು ದಂಪತಿಗಳನ್ನು ಪೂಜಿಸಬೇಕು; ಹೀಗೆ ಮಾಡಿದರೆ ಸೂರ್ಯಾಂತರ್ಯಾಮಿ ಶ್ರೀಲಕ್ಷ್ಮೀನಾರಾಯಣನಿಂದ ಅಭಿನ್ನನಾದ ಶ್ರೀಮಾಧವನು ಬಹಳ ಪ್ರಸನ್ನನಾಗುವನು. ॥ ೩೪ ॥ ಈ ರೀತಿಯಾಗಿ ರಥಸಪ್ತಮಿಗೆ ಸಂಬಂಧಪಟ್ಟ ವಿಧಿಗಳನ್ನು ವಿಧ್ಯುಕ್ತರೀತಿಯಲ್ಲಿ ಆಚರಿಸಿ ಮರುದಿನ ಅಷ್ಟಮಿಯಂದು ಸ್ನಾನಾನಂತರ ನೀರಿನಿಂದ ಭೀಷ್ಮತರ್ಪಣವನ್ನು ಬಿಡಬೇಕು. ॥ ೩೫ ॥ ಬ್ರಾಹ್ಮಣಾದಿ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ)ವರ್ಣದವರೆಲ್ಲರು ಈ ಅಷ್ಟಮಿಯಂದು ಜಲತರ್ಪಣವನ್ನು ಪೂಜ್ಯರಾದ ಭೀಷ್ಮಾಚಾರ್ಯರಿಗಾಗಿ ಕೊಡದಿದ್ದರೆ, ಹೇ ದ್ವಿಜಸತ್ತಮರಾದ ಶೌನಕಾದಿಗಳೇ! ಅಂತಹವರು ಸಂಪಾದಿಸಿದ ಇಡೀ ಸಂವತ್ಸರದ ಪುಣ್ಯವೆಲ್ಲವೂ ನಾಶವಾಗುವುದು. ॥ ೩೬ ॥ ''ಶಂತನು ಚಕ್ರವರ್ತಿಯ ಮಗನೂ, ಮಹಾವೀರನೂ, ಸತ್ಯವಾದಿಯೂ, ಜಿತೇಂದ್ರಿಯನೂ ಆಗಿರುವ ಭೀಷ್ಮನೇ! ನಾನು ಈಗ ಬಿಡುತ್ತಿರುವ ಈ ಜಲದಿಂದ ಮಕ್ಕಳು ಮತ್ತು ಮೊಮ್ಮಕ್ಕಳು ಮಾಡತಕ್ಕ ಪೈತೃಕ ಕ್ರಿಯಾ ಮತ್ತು ತರ್ಪಣಾದಿಗಳ ಫಲಗಳನ್ನು ತಾವು ಹೊಂದಿರಿ'' ಎಂದು ಪ್ರಾರ್ಥಿಸುತ್ತಾ ಭೀಷ್ಮಾಚಾರ್ಯರಿಗೆ ತರ್ಪಣವನ್ನು ಕೊಡಬೇಕು. ॥ ೩೭ ॥ ''ವೈಯಾಘ್ರಪಾದ ಎಂಬ ಗೋತ್ರದಲ್ಲಿ ಜನಿಸಿದ, ಸಾಂಕೃತಿಯೆಂಬ ಪ್ರವರಕ್ಕೆ ಸೇರಿದ, ಅವಿವಾಹಿತನಾದುದರಿಂದ ಅಪುತ್ರನಾದ, ಕವಚದಿಂದ ಯುಕ್ತನಾದ, ಭೀಷ್ಮಾಚಾರ್ಯರಿಗೆ ಈ ಜಲವನ್ನು ಬಿಡುತ್ತಿದ್ದೇನೆ'' ಎಂದು ಹೇಳಿ ಬೊಗಸೆ ತುಂಬ ನೀರು ಬಿಡಬೇಕು. ॥ ೩೮ ॥ ತಂದೆತಾಯಿಗಳು ಇರುವವರೂ ಕೂಡ ಯಮದೇವರಿಗೆ ಮತ್ತು ಭೀಷ್ಮಾಚಾರ್ಯರಿಗೆ ತರ್ಪಣವನ್ನು ಕೊಡಬೇಕು. ಸವ್ಯದಿಂದಲೂ ಅಥವಾ ಅಪಸವ್ಯದಿಂದ ಇವರಿಬ್ಬರಿಗೆ ಜಲತರ್ಪಣ ಕೊಡಬಹುದೆಂದು ಎರಡು ಸಂಪ್ರದಾಯ ಗಳಿವೆ. ॥ ೩೯ ॥ ಈ ರೀತಿಯಾಗಿ ಯಾರು ತರ್ಪಣವನ್ನು ಕೊಟ್ಟು ಬ್ರಾಹ್ಮಣ ಭೋಜನವನ್ನು ಮಾಡಿಸುತ್ತಾರೋ ಅವರಿಗೆ ಸಂತತಿವಿಚ್ಛೇದವು ಎಂದೂ ಆಗುವುದಿಲ್ಲ. ॥ ೪೦ ॥ ಮಾಘಶುಕ್ಲ ಏಕಾದಶಿಯು ಭೀಷ್ಮೈಕಾದಶೀ ಎಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ಈ ಏಕಾದಶಿಯಂದು ವಿಧ್ಯುಕ್ತ ವಾಗಿ ಉಪವಾಸ ಮಾಡಿ ನರನು ಶ್ರೀಮಾಧವನನ್ನು ಪೂಜಾ ಮಾಡಬೇಕು. ॥ ೪೧ ॥ ಈ ರೀತಿಯಾಗಿ ಅರುಣೋದಯಕ್ಕೆ ಮೊದಲೇ ಮಾಘಸ್ನಾನವನ್ನು ಪೂರ್ತಿ ಒಂದು ತಿಂಗಳು ಮಾಡಿ ಮುಗಿಸಬೇಕು. ಈ ಮಾಘಸ್ನಾನಾವಧಿಯಲ್ಲಿ ಪಿತೃದೇವತೆಗಳನ್ನು ಚೆನ್ನಾಗಿ ತೃಪ್ತಿಪಡಿಸಬೇಕು. ಬಂಗಾರದ ನಾಣ್ಯ ಮುಂತಾದವುಗಳ ಸಹಿತವಾಗಿ ಎಳ್ಳಿನಿಂದ ತುಂಬಿರುವ ಪಾತ್ರೆಯನ್ನು ದಾನ ಮಾಡಬೇಕು. ॥ ೪೨ ॥ ಈ ರೀತಿಯಾಗಿ ಎಳ್ಳನ್ನು ತುಂಬಿರುವ ಪಾತ್ರೆಯು ಹತ್ತು ತೊಲ ತೂಕದ್ದಾಗಿದ್ದರೆ ಇದು ಅಧಮಪಕ್ಷ. ಹತ್ತು ತೊಲಕ್ಕೆ ಎರಡರಷ್ಟು ಇದ್ದರೆ ಅದು ಮಧ್ಯಮ ಪಕ್ಷ. ಮೂವತ್ತು ತೊಲಗಳಿಗಿಂತ ಹೆಚ್ಚಿಗೆಯಿದ್ದರೆ ಅದು ಉತ್ತಮ ಪಕ್ಷವು. ॥ ೪೩ ॥ ಒಂದು ತೊಲ ತೂಕದ ಬಂಗಾರದ ತಿಲಪಾತ್ರೆಯು ಅಧಮಪಕ್ಷದ್ದು; ಎರಡು ತೊಲ ತೂಕವಿದ್ದ ಬಂಗಾರದ ಪಾತ್ರೆಯು ಮಧ್ಯಮ ಪಕ್ಷದ್ದು; ಮೂರು ತೊಲದಷ್ಟು ತೂಕವಿದ್ದ ಬಂಗಾರದ ಪಾತ್ರೆಯು ಉತ್ತಮ ಪಕ್ಷದ್ದು ಎಂದು ಬ್ರಹ್ಮಜ್ಞಾನಿಗಳಿಂದ ಹೇಳಲ್ಪಟ್ಟಿದೆ. ॥ ೪೪ ॥ ಹದಿನಾರು ತೊಲಗಳ ತೂಕವುಳ್ಳ ತಾಮ್ರಪಾತ್ರೆಯಲ್ಲಿ

ಎಳ್ಳನ್ನು ತುಂಬಿ ಯಥಾಶಕ್ತಿ ಬಂಗಾರದ ಸಹಿತ ಬ್ರಾಹ್ಮಣರಿಗೆ ದಾನ ಮಾಡಬೇಕು. ॥ ೪೫ ॥ ಹಣದ ಸೌಕರ್ಯವನ್ನನುಸರಿಸಿ ಒಂದು ಸೇರು ಎಳ್ಳಿನಿಂದ ತುಂಬಿರುವ ತಾಮ್ರದ ಪಾತ್ರೆಯನ್ನು ದಾನ ಮಾಡಿದರೆ ಆ ದಾನವು ಶುದ್ಧದಾನವೆಂದು ಪರಿಗಣಿಸಲ್ಪಟ್ಟಿದೆ. ॥ ೪೬ ॥ ಈ ತಿಲಪಾತ್ರೆಯನ್ನು ಈ ಕೆಳಗಿನ ಮಂತ್ರವನ್ನು ಉಚ್ಚಾರಣೆ ಮಾಡುತ್ತಾ ದಾನಮಾಡಬೇಕು.—ದೇವದೇವನಾದ, ಜಗತ್ತಿನ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡಿ ಜಗನ್ನಾಥನೆಂದೆನಿಸಿಕೊಂಡಿರುವ, ಶಂಖ, ಚಕ್ರ, ಗದೆ, ಮತ್ತು ಪದ್ಮ ಇವುಗಳನ್ನು ಧರಿಸಿರುವ ಶ್ರೀ ಮಾಧವನೇ! ನಾನು ತಿಲಪಾತ್ರೆಯನ್ನು ದಾನಮಾಡುತ್ತಿದ್ದೇನೆ. ನಿನ್ನ ದೇಹದಲ್ಲಿ ನನ್ನನ್ನು (ಸಾಯುಜ್ಯರೂಪ ಮೋಕ್ಷವನ್ನು) ಸೇರಿಸಿಕೋ— ಹೇ ಮಾಧವ! ಎಂದು ಪ್ರಾರ್ಥಿಸಿ ಕೊಡಬೇಕು. ॥ ೪೭ ॥ ಬಿಳಿ ಮತ್ತು ಕರೀ ಎಳ್ಳು ಹೀಗೆ ಎರಡು ಬಗೆಯ ಎಳ್ಳುಗಳೂ ಪುಣ್ಯಕರವಾದುವು, ಪವಿತ್ರವಾಗಿರತಕ್ಕವು ಮತ್ತು ಎಲ್ಲ ಪಾಪಗಳನ್ನು ಪರಿಹಾರಮಾಡತಕ್ಕವುಗಳು. ಈ ಎರಡೂ ಬಗೆಯ ಎಳ್ಳುಗಳು ಶ್ರೀಮಹಾವಿಷ್ಣುವಿನ ದೇಹದಿಂದ ಹುಟ್ಟಿರತಕ್ಕವುಗಳು. ॥ ೪೮ ॥ ಬ್ರಹ್ಮಹತ್ಯೆಗೆ ಸರಿಸಮನಾಗಿರುವ ಯಾವ ಯಾವ ಪಾಪಗಳಿವೆಯೋ ಅವುಗಳೆಲ್ಲವೂ ತಿಲಪಾತ್ರೆಯನ್ನು ದಾನಮಾಡುವುದರಿಂದ ಯಾವಾಗಲೂ ನಾಶವಾಗುವುವು. ॥ ೪೯ ॥ ಯಾರು ಯಾರು ಈ ರೀತಿಯಾಗಿ ತಿಲಪಾತ್ರೆಯನ್ನು ಭಕ್ತಿಯಿಂದ ದಾನ ಮಾಡುವರೋ ಅಂತಹವರ ವಾಕ್, ಮನಸ್ಸು ಮತ್ತು ದೈಹಿಕವಾಗಿ ಮಾಡಿದ ಮೂರು ವಿಧವಾದ ಪಾಪಗಳೂ ನಾಶವಾಗುವುವು. ॥ ೫೦ ॥ ಹೀಗೆಯೇ, ಮಾಘಮಾಸದಲ್ಲಿ ಉಣ್ಣೆಯ ವಸ್ತ್ರಗಳನ್ನೂ, ಕರುವಿನಿಂದ ಸಹಿತವಾಗಿರುವ ಆಕಳನ್ನೂ, ರತ್ನ ಮತ್ತು ಮುತ್ತುಹವಳವನ್ನೂ ದಾನ ಮಾಡಿದವನೂ ಎಲ್ಲ ಪಾಪಗಳಿಂದ ಮುಕ್ತನಾಗಿ ವೈಕುಂಠಲೋಕಕ್ಕೆ ಪ್ರಯಾಣ ಮಾಡುವನು. ॥ ೫೧ ॥ ಮಾಘಮಾಸದಲ್ಲಿ ವೇಣೀಮಾಧವರ ರೂಪದಿಂದಿರುವ ದಂಪತಿಗಳನ್ನು ಭಕ್ತಿಯಿಂದ ಪೂಜಿಸಿ ನಂತರ ವಿಧಿವತ್ತಾಗಿ ಬ್ರಾಹ್ಮಣರ ಭೋಜನವನ್ನು ಮಾಡಿಸಿ ಅನಂತರ ತಾನೂ ಭೋಜನ ಮಾಡಬೇಕು. ॥ ೫೨ ॥ ಮೇಷರಾಶಿಯಲ್ಲಿ ಶನೇಶ್ವರನು ಬಂದಾಗ ಸಿಂಹರಾಶಿಯಲ್ಲಿ ಚಂದ್ರ ಮತ್ತು ಬೃಹಸ್ಪತಿಗ್ರಹಗಳು ಇದ್ದಾಗ ಮತ್ತು ಸೂರ್ಯನು ಶ್ರವಣನಕ್ಷತ್ರದೊಡನೆ ಇದ್ದಾಗ ಅಂತಹ ಪೌರ್ಣಿಮೆಯು ''ಮಹಾಮಾಘೀ'' ಎಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ಕೇವಲ ಮಘಾ ನಕ್ಷತ್ರದಿಂದ ಕೂಡಿದ ಮಾಘಮಾಸದ ಹುಣ್ಣಿಮೆಯೂ ಮಹಾಮಾಘೀ ಎನಿಸುತ್ತದೆ. ಈ ರೀತಿಯಾದ ಪೌರ್ಣಿಮೆಯು ಪ್ರಯಾಗಕ್ಷೇತ್ರದಲ್ಲಿರುವಾಗ ಬಂದರೆ ಅದು ಭೂಮಂಡಲದಲ್ಲಿಯೇ ಅತಿ ಪ್ರಶಸ್ತವಾದುದೆಂದು ತಿಳಿಯಬೇಕು. ॥ ೫೩-೫೪ ॥ ಗಂಗಾ ಮತ್ತು ಯಮುನೆಯರ ತೀರಗಳಲ್ಲಿ ಪೌರ್ಣಿಮೆಯ ದಿನ ಪ್ರಾತಃಕಾಲದಲ್ಲಿ ದೀಪದಾನ ಮಾಡಿದ ವ್ಯಕ್ತಿಯು ತನ್ನ ಎಲ್ಲ ಇಷ್ಟಾರ್ಥಗಳನ್ನೂ ಪಡೆಯುವನು. ॥ ೫೫ ॥ ಅವನಿಂದ ಏನೇನು ಸುಕೃತವು ಮಾಡಲ್ಪಟ್ಟಿವೆಯೋ ಅವೆಲ್ಲವೂ ಮೇರುಪರ್ವತದಷ್ಟು ಎತ್ತರವಾಗಿ ಬೆಳೆದು ಹಿರಿದಾಗುತ್ತವೆ ಎಂದು ನಮ್ಮ ಗುರುಗಳಿಂದ ಉಕ್ತವಾದ ವಾಕ್ಯಗಳ ಆಧಾರದ ಮೇಲೆ ನಾನು ಸಾರುತ್ತಿದ್ದೇನೆ. ॥ ೫೬ ॥ ಈ ರೀತಿಯಾಗಿ, ಹೇ ಮುನಿಶ್ರೇಷ್ಠರೇ! ಮಾಘಸ್ನಾನಕ್ಕೆ ಸಂಬಂಧಪಟ್ಟ ವಿಶಿಷ್ಟವಾದ ವಿಧಿನಿಯಮಗಳನ್ನು ನಿಮ್ಮ ಮೇಲಿನ ಪ್ರೀತಿಯಿಂದ ಹೇಳಿದ್ದಾಯಿತು. ಈ ಮಾಘಸ್ನಾನವು ನಿಜವಾಗಿ ಸತ್ಫಲಗಳನ್ನು ಕೊಡತಕ್ಕದ್ದು. ॥ ೫೭ ॥

॥ ಐವತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಿಸಂಚಾಶತ್ತಮೋಽಧ್ಯಾಯಃ ॥ ೫೨ ॥

**ಸೂತ ಉವಾಚ—**

ವದಾಮ್ಯಥ ಮುನಿಶ್ರೇಷ್ಠಾ ಮಾಘಸ್ಯೋದ್ಯಾಪನೇ ವಿಧಿಮ್ ।
ಮಾಘಸ್ನಾನವ್ರತಂ ಯೇನ ಸಫಲಂ ಜಾಯತೇ ನೃಣಾಮ್ ॥ ೧ ॥
ಕೃತ್ಯಂ ಕೃತ್ವೋದ್ಯಾಪನಂ ಯೋ ನ ಕುರ್ಯಾನ್ಮೋಹತೋ ನರಃ ।
ಸಂಪೂರ್ಣಂ ನ ಭವೇತ್ತಸ್ಯ ತದ್ವ್ರತಂ ನಿಷ್ಫಲಂ ಭವೇತ್ ॥ ೨ ॥
ವ್ರತವೈಕಲ್ಯಮಾಸಾದ್ಯ ರೋಗೀ ಚಾಂಧಃ ಪ್ರಜಾಯತೇ ।
ತಸ್ಮಾದುದ್ಯಾಪನಂ ಕುರ್ಯಾದ್ಯಥಾಶಕ್ತಿ ಯಥಾವಿಧಿ ॥ ೩ ॥
ಕಾಣಾ ಕುಬ್ಜಾಸ್ತಥಾ ಖಂಜಾ ದರಿದ್ರಾಶ್ಚ ನಪುಂಸಕಾಃ ।
ಜಾಯಂತೇ ಬಧಿರಾ ಮೂಕಾ ಕುರ್ವಂತ್ಯುದ್ಯಾಪನಂ ನ ಯೇ ॥ ೪ ॥

## ॥ ಐವತ್ತೆರಡನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಎಲೈ ಮುನಿಶ್ರೇಷ್ಠರೇ! ಮಾಘಸ್ನಾನದ ವ್ರತದ ಉದ್ಯಾಪನೆಯ ಬಗ್ಗೆ ಹೇಳುತ್ತೇನೆ, ಕೇಳಿ. ಈ ಉದ್ಯಾಪನೆಯ ಆಚರಣೆಯಿಂದಲೇ ಮಾಘಸ್ನಾನದ ವ್ರತವು ಸಫಲವಾಗುವುದು. ॥ ೧ ॥ ಅಜ್ಞಾನದಿಂದಲೋ ಅಥವಾ ಮೋಹದಿಂದಲೋ ವ್ರತವನ್ನು ಮಾಡಿ ಈ ವ್ರತದ ಉದ್ಯಾಪನೆಯನ್ನು ಮಾಡದಿದ್ದರೆ ಮಾಘಸ್ನಾನದ ಫಲವು ಲಭಿಸದೆ ಈ ವ್ರತದ ಶ್ರಮವೂ ನಿಷ್ಫಲವಾಗುವುದು. ॥ ೨ ॥ ಅದಲ್ಲದೆ ಈ ವ್ರತಕ್ಕೆ ವ್ರತಭಂಗದೋಷವು ಬಂದರೆ ಕರ್ತೃವು ರೋಗಿಯೂ ಕುರುಡನೂ ಆಗಿ ಹುಟ್ಟುವನು. ಆದ್ದರಿಂದ ಶಕ್ತ್ಯಾನುಸಾರ ವಿಧ್ಯನುಸಾರ ಉದ್ಯಾಪನೆಯನ್ನು ವಿಧಿವತ್ತಾಗಿ ಮಾಡಬೇಕು. ॥ ೩ ॥ ಉದ್ಯಾಪನೆಯಿಲ್ಲದೆ ವ್ರತವು ದಾರಿತಪ್ಪಿ, ವ್ರತಿಯು ಭವಿಷ್ಯದಲ್ಲಿ ಒಕ್ಕಣ್ಣುಳ್ಳವನಾಗಿಯೂ, ಕುಳ್ಳನಾಗಿಯೂ, ಕುಂಟನಾಗಿಯೂ, ದರಿದ್ರನಾಗಿಯೂ ಮತ್ತು ನಪುಂಸಕನಾಗಿಯೂ, ಮೂಕ ನಾಗಿಯೂ, ಕಿವುಡನಾಗಿಯೂ ಹುಟ್ಟುವನು. ॥ ೪ ॥

**ಋಷಯ ಊಚುಃ—**

ಕಥಮುದ್ಯಾಪನಂ ಕಾರ್ಯಂ ಮಾಘಸ್ನಾನವ್ರತಸ್ಯ ಚ ।
ವದ ನಃ ಶ್ರದ್ದಧಾನಾನಾಂ ಯೇನ ಪೂರ್ಣಂ ಫಲಂ ಭವೇತ್ ॥ ೫ ॥

**ಋಷಿಗಳು ಹೇಳಿದರು—**

ಮಾಘಸ್ನಾನದ ವ್ರತಕ್ಕೆ ಸಂಬಂಧಪಟ್ಟ ಉದ್ಯಾಪನೆಯ ವಿಧಿನಿಯಮಗಳನ್ನು ಶ್ರದ್ಧಾವಂತರಾದ ನಮಗೆ ಹೇಳಿರಿ. ಯಾವುದರ ಆಚರಣೆಯಿಂದ ವ್ರತದ ಸಂಪೂರ್ಣಫಲವು ಲಭಿಸುವುದೋ ವ್ರತದ ಅಂತಹ ವಿವರವನ್ನು ತಿಳಿಯಲು ನಾವು ಉತ್ಸುಕರಾಗಿದ್ದೇವೆ. ॥ ೫ ॥

**ಸೂತ ಉವಾಚ—**

ಯದಾ ವಿತ್ತಂ ಯದಾ ಚಿತ್ತಂ ಶ್ರದ್ಧಾ ತೀರ್ಥಂ ಚ ಲಭ್ಯತೇ ।
ಪುಣ್ಯಕಾಲಶ್ಚ ಪಾತ್ರಂ ಚ ತದೋದ್ಯಾಪನಮಾಚರೇತ್ ॥ ೬ ॥

ಆದೌ ಮಧ್ಯೇ ತಥಾ ಚಾಂತೇ ಕಾರ್ಯಮುದ್ಯಾಪನಂ ಶುಭಮ್ ।
ತಥಾಪ್ಯಂತ್ಯೇ ಪ್ರಕರ್ತವ್ಯಂ ಮಾಘಸ್ಯೋದ್ಯಾಪನಂ ನರೈಃ ॥ ೭ ॥
ಮಾಘಶುಕ್ಲಚತುರ್ದಶ್ಯಾಂ ಪ್ರಾತಃ ಸ್ನಾತ್ವಾ ಯಥಾವಿಧಿ ।
ಸರ್ವಂ ನಿತ್ಯಮನುಷ್ಠಾಯ ಸಂಕಲ್ಪಂ ತು ಸಮಾಚರೇತ್ ॥ ೮ ॥
ಮಾಘಸ್ನಾನಸ್ಯ ಸಂಪೂರ್ತ್ಯೈ ವೇಣೀಮಾಧವತುಷ್ಟಯೇ ।
ಉದ್ಯಾಪನಂ ಕರಿಷ್ಯೇಽಹಂ ಮಾಘಸ್ನಾನವ್ರತಸ್ಯ ಹಿ ॥ ೯ ॥
ತದ್ದಿನೇ ನಿಯಮೇ ತಿಷ್ಠೇತ್ಸಪತ್ನೀಕಃ ಸಬಾಂಧವಃ ।
ಸಂಭಾರಾನಾಹರೇತ್ಸರ್ವಾನುಪವಾಸೀ ಸಮಾಹಿತಃ ॥ ೧೦ ॥
ಉಪಲಿಪ್ತೇ ಶುಚೌ ದೇಶೇ ಗಂಗಾತೀರೇಽಥವಾ ಗೃಹೇ ।
ವಿಧಾಯ ಮಂಟಪಂ ರಮ್ಯಂ ಕದಲೀಸ್ತಂಭಮಂಡಿತಮ್ ॥ ೧೧ ॥
ತೋರಣೈಃ ಫಲಪುಷ್ಪೈಶ್ಚ ವಿತಾನೇನ ಚ ಭೂಷಿತಮ್ ।
ಇಕ್ಷುದಂಡಕೃತಂ ದ್ವಾರಂ ಚತುರ್ದಿಕ್ಷು ಮನೋಹರಮ್ ॥ ೧೨ ॥
ತನ್ಮಧ್ಯೇ ವೇದಿಕಾ ಕಾರ್ಯಾ ಷಣ್ಣವತ್ಯಂಗುಲಾ ಸಮಾ ।
ಶ್ಲಕ್ಷ್ಣಾ ವೇದಾಂಗುಲೋತ್ಸೇಧಾ ಸರ್ವತೋಭದ್ರಮಂಡಿತಮ್ ॥ ೧೩ ॥
ಏವಂ ಸಂಭೃತಸಂಭಾರಸ್ಸಾಯಂ ಸ್ನಾತ್ವಾ ಸಿತೈಸ್ತಿಲೈಃ ।
ದೀಪಾನ್ಪ್ರಬೋಧ್ಯ ಪರಿತೋ ದ್ವಿಜಾನಾಹೂಯ ಕರ್ಮಠಾನ್ ॥ ೧೪ ॥
ಸಪತ್ನೀಕಸ್ಸಮಾಚಮ್ಯ ಪ್ರಾಣಾನಾಯಮ್ಯ ಚಾಸನೇ ।
ಆದೌ ವಿನಾಯಕಂ ಪೂಜ್ಯ ಪುಣ್ಯಾಹಂ ವಾಚಯೇತ್ತತಃ ॥ ೧೫ ॥
ಋತ್ವಿಜೋ ವರಣಂ ಕುರ್ಯಾದಾಚಾರ್ಯಂ ವರಯೇತ್ತತಃ ।
ಸೌವರ್ಣೀ ಪ್ರತಿಮಾ ಕಾರ್ಯಾ ವೇಣೀಮಾಧವಯೋಶ್ಶುಭಾ ॥ ೧೬ ॥
ತ್ರಯಸ್ತ್ರಿಂಶದಥ ತ್ರಿಂಶದಥ ಚೈಕಾಂ ಸ್ವಶಕ್ತಿತಃ ।
ತಾವಂತಃ ಕಲಶಾಃ ಕಾರ್ಯಾ ಯಾವಂತಃ ಪ್ರತಿಮಾಃ ಕೃತಾಃ ॥ ೧೭ ॥
ವಿಧಾನಾನ್ಯಪಿ ತಾವಂತಿ ವಸ್ತ್ರಾಣಿ ವಿಶದಾನಿ ಚ ।
ತತಸ್ಸ್ವಯಂ ಸಪತ್ನೀಕ ಆಚಾರ್ಯೋ ವಾ ಪ್ರಚೋದಿತಃ ॥ ೧೮ ॥
ಬ್ರಹ್ಮಾದ್ಯಾನ್ಸ್ಥಾಪಯೇನ್ಮಂತ್ರೈಃ ಸರ್ವತೋಭದ್ರದೇವತಾಃ ।
ಸಂಪೂಜ್ಯೋಪರಿ ತನ್ಮಂತ್ರೈಃ ಕಲಶಂ ಸ್ಥಾಪಯೇತ್ಸುಧೀಃ ॥ ೧೯ ॥
ತೇಷು ಪ್ರಸಾರ್ಯ ವಸ್ತ್ರಾಣಿ ಕೃತ್ವಾಗ್ನ್ಯುತ್ತಾರಣಂ ಪೃಥಕ್ ।
ಕೃತಪ್ರಾಣಪ್ರತಿಷ್ಠಾಶ್ಚ ಪ್ರತಿಮಾಃ ಸ್ಥಾಪ್ಯ ಪೂಜಯೇತ್ ॥ ೨೦ ॥
ಪೌರುಷೇಣ ತು ಸೂಕ್ತೇನ ಷೋಡಶೈರುಪಚಾರಕೈಃ ।
ಪೂರ್ವಮಂತ್ರೈಶ್ಚ ವಿಧಿವತ್ಪೂಜಯೇನ್ಮಾಧವಪ್ರಭುಮ್ ॥ ೨೧ ॥

ನಾನಾಪುಷ್ಪೈರ್ಧೂಪದೀಪೈರ್ನಾರಿಕೇಲೈಸ್ಸದಕ್ಷಿಣೈಃ ।
ಪೂರ್ವೋಕ್ತನಾಮಭಿಃ ಪಶ್ಚಾದರ್ಚಯೇತ್ತುಲಸೀದಲೈಃ ॥ ೨೨ ॥
ಪುಷ್ಪಾಂಜಲಿಮಥೋ ದತ್ತ್ವಾ ಮಂತ್ರಘೋಷೇಣ ಭೂಯಸಾ ।
ಪ್ರದಕ್ಷಿಣೀಕೃತ್ಯ ನತ್ವಾ ಪ್ರಾರ್ಥಯೇನ್ಮಾಧವಂ ವಿಭುಮ್ ॥ ೨೩ ॥
ಶ್ರೀಮಾಧವ ದಯಾಸಿಂಧೋ ಭಕ್ತಕಾಮಪ್ರವರ್ಷಣ ।
ಮಾಘಸ್ನಾನವ್ರತಂ ಮೇಽದ್ಯ ಸಫಲಂ ಕುರು ತೇ ನಮಃ ॥ ೨೪ ॥
ಸಂಪೂಜ್ಯೈನಂ ದ್ವಿಜಾನ್ಪೂಜ್ಯ ಪ್ರತಿಗೃಹ್ಯಾಶಿಷಸ್ತತಃ ।
ಸ್ತುತಿವಾದಿತ್ರಗೀತಾದ್ಯೈಸ್ತಾಂ ರಾತ್ರಿಮತಿವಾಹಯೇತ್ ॥ ೨೫ ॥
ತತಃ ಸ್ನಾತ್ವಾ ಪ್ರಭಾತೇ ಚ ಕೃತನಿತ್ಯಕ್ರಿಯಶ್ಶುಚಿಃ ।
ಪಂಚೋಪಚಾರೈಸ್ಸಂಪೂಜ್ಯ ಮಾಧವಂ ಹವನಂ ಚರೇತ್ ॥ ೨೬ ॥
ವಾರುಣ್ಯಾಂ ಮಂಡಲಂ ಕೃತ್ವಾ ಸ್ಥಂಡಿಲಂ ಹಸ್ತಮಾತ್ರಕಮ್ ।
ಸ ತತ್ರ ಸ್ಥಾಪಯೇದಗ್ನಿಂ ಸ್ವಗೃಹ್ಯೋಕ್ತೇನ ವರ್ತ್ಮನಾ ॥ ೨೭ ॥
ತದೀಶಾನ್ಯಾಂ ಗ್ರಹಾನ್ಸ್ಥಾಪ್ಯ ಪೂಜ್ಯಾನ್ವಾಧಾಯ ಚಾನಲಮ್ ।
ಚಕ್ಷುಷ್ಮಂತಂ ವಿಧಾಯಾತ್ರ ಪ್ರಧಾನಂ ಹವನಂ ಚರೇತ್ ॥ ೨೮ ॥
ಅಷ್ಟೋತ್ತರಶತಂ ಚಾಷ್ಟವಿಂಶತಿರ್ವಾಷ್ಟಸಂಖ್ಯಯಾ ।
ಗ್ರಹಮಂತ್ರೈಶ್ಚ ಜುಹುಯಾತ್ಸಮಿಚ್ಚರುತಿಲಾದಿಕಮ್ ॥ ೨೯ ॥
ಅಷ್ಟೋತ್ತರಸಹಸ್ರಂ ಚ ಶತಮಷ್ಟೋತ್ತರಂ ತು ವಾ ।
ವೈಷ್ಣವೇನ ತು ಮಂತ್ರೇಣ ಘೃತಾಕ್ತಾನ್ಜುಹುಯಾತ್ತಿಲಾನ್ ॥ ೩೦ ॥
ಪ್ರಣವಾದ್ಯೈರ್ನಮೋಽಂತೈಶ್ಚ ವೇಣೀಮಾಧವನಾಮಭಿಃ ।
ಹುತ್ವಾಜ್ಯಂ ಮಂಡಲಸ್ಥಾನಾಂ ದೇವತಾನಾಂ ಚ ತದ್ಧುನೇತ್ ॥ ೩೧ ॥
ತತಃ ಸ್ವಿಷ್ಟಕೃತಂ ಹುತ್ವಾ ಪ್ರಾಯಶ್ಚಿತ್ತಾಹುತೀಸ್ತಥಾ ।
ಬಲಿದಾನಂ ತತಃ ಕೃತ್ವಾ ಪೂರ್ಣಾಹುತಿಮಥೋ ಹುನೇತ್ ॥ ೩೨ ॥
ಪ್ರಣೀತಾನಾಂ ವಿಮೋಕಾದಿ ಶ್ರೇಯಸ್ಸಂಪಾದ್ಯ ದಕ್ಷಿಣಾಮ್ ।
ಆಚಾರ್ಯಾಯ ಸವತ್ಸಾಂ ಗಾಂ ದದ್ಯಾದ್ವಿಪುಲದಕ್ಷಿಣಾಮ್ ॥ ೩೩ ॥
ಸಂಪೂಜ್ಯಾವಾಹಿತಾನ್ದೇವಾನ್ ಗಂಧಾದ್ಯೈರುಪಚಾರಕೈಃ ।
ಅಭಿಷಿಕ್ತೋ ಜಲೈರ್ಮಂತ್ರೈರಗ್ನಿಪೂಜನಮಾಚರೇತ್ ॥ ೩೪ ॥
ವಿಭೂತಿಧಾರಣಂ ಕೃತ್ವಾ ಪ್ರಣಮ್ಯಾಗ್ನಿಂ ಚ ದೇವತಾಃ ।
ವಿಸರ್ಜನಂ ತತಃ ಕುರ್ಯಾನ್ಮಾಧವಂ ನ ವಿಸರ್ಜಯೇತ್ ॥ ೩೫ ॥
ಋತ್ವಿಗ್ಭ್ಯೋಽನ್ಯದ್ವಿಜೇಭ್ಯಶ್ಚ ದಕ್ಷಿಣಾಂ ಭೂಯಸೀಂ ತಥಾ ।
ದತ್ವಾ ಹವನಸಂಪತ್ತಿಂ ವಾಚಯಿತ್ವಾ ನಿವೇದಯೇತ್ ॥ ೩೬ ॥

ಉದ್ಯಾಪನಸ್ಯ ಸಂಪೂರ್ತ್ಯೈ ವೇಣೀಮಾಧವತುಷ್ಟಯೇ ।
ದಂಪತೀಭೋಜನಂ ಕಾರ್ಯಂ ಪ್ರತಿಮಾಸಂಖ್ಯಯಾ ತತಃ ॥ ೩೭ ॥
ಅಭಾವೇ ಬ್ರಾಹ್ಮಣಾ ಭೋಜ್ಯಾಃ ಸುವಾಸಿನ್ಯಾಸ್ತಥೈವ ಚ ।
ದಂಪತೀನಾಂ ತ್ರಯಂ ಭೋಜ್ಯಮೇಕಂ ವಾ ನಿಯತಂ ಭವೇತ್ ॥ ೩೮ ॥
ವಸ್ತ್ರಾಲಂಕರಣೈರ್ಮಾಲ್ಯೈರ್ಭಕ್ಷ್ಯಭೋಜ್ಯೈಸ್ತಥೈವ ಚ ।
ತಾಂಬೂಲೈರ್ದಕ್ಷಿಣಾದ್ಯೈಶ್ಚ ತೋಷಯೇದ್ಬ್ರಾಹ್ಮಣಾನ್ವ್ರತೀ ॥ ೩೯ ॥
ನಾನಾಮಂಗಲಯುಕ್ತಾನಿ ದಕ್ಷಿಣಾಸಂಯುತಾನಿ ಚ ।
ತಾವಚ್ಛೂರ್ಪಾಣಿ ದೇಯಾನಿ ಚಿರಂಟೀಭ್ಯಃ ಫಲೇಕ್ಷುಭಿಃ ॥ ೪೦ ॥
ಪೂಜಯಿತ್ವಾ ಪುನರ್ದೇವಂ ತ್ರಿವೇಣೀಂ ಚ ವಿಶೇಷತಃ ।
ತತೋ ವಾಯನಕಂ ದದ್ಯಾದಾಚಾರ್ಯಾಯ ಸದಕ್ಷಿಣಾಮ್ ॥ ೪೧ ॥
ಮೋದಕಾಸ್ತು ತ್ರಯಸ್ತ್ರಿಂಶಚ್ಛರ್ಕರಾಸ್ತಿಲಗರ್ಭಿತಾಃ ।
ಭಾಗತ್ರಯಂ ತಿಲಾನಾಂ ಸ್ಯಾಚ್ಚತುರ್ಥಃ ಶರ್ಕರಾಂಶಕಃ ॥ ೪೨ ॥
ಸಾಜ್ಯಾಶ್ಚ ಸಹಿರಣ್ಯಾಸ್ತೇ ವಸ್ತ್ರೇಣಾಚ್ಛಾದಿತಾಶ್ಶುಭಾಃ ।
ದೇಯಾ ಪ್ರಧಾನಾಚಾರ್ಯಾಯ ವಾಯನಾರ್ಥಂ ಚ ಮಂತ್ರತಃ ॥ ೪೩ ॥
ಏತೇ ವೈ ಮೋದಕಾಸ್ತುಭ್ಯಂ ವಾಯನಾರ್ಥೇ ನಿವೇದಿತಾಃ ।
ಗೃಹಾಣೈತಾನ್ಮಮ ಪ್ರೀತ್ಯಾ ಮಾಮುದ್ಧರ ನಮೋಽಸ್ತು ತೇ ॥ ೪೪ ॥
ಮಾಧವಃ ಪ್ರತಿಗೃಹ್ಣಾತಿ ಮಾಧವೋ ವೈ ದದಾತಿ ಚ ।
ಮಾಧವಸ್ತಾರಕೋಭಾಭ್ಯಾಂ ಮಾಧವಾಯ ನಮೋ ನಮಃ ॥ ೪೫ ॥
ಏವಂ ವಾಯನಕಂ ದತ್ವಾ ತೋಷ್ಯಾಚಾರ್ಯಂ ಚ ಭಕ್ತಿತಃ ।
ಮಾಧವಂ ಪ್ರಾರ್ಥ್ಯ ಮಂತ್ರೇಣ ತತೋ ಭಕ್ತ್ಯಾ ವಿಸರ್ಜಯೇತ್ ॥ ೪೬ ॥
ಬ್ರಾಹ್ಮಣೇಭ್ಯಸ್ತತೋ ದೇಯಾಃ ಕಲಶಾಸ್ಸಪರಿಚ್ಛದಾಃ ।
ಗೃಹಪೀಠಂ ಸಕಲಶಮಾಚಾರ್ಯಾಯ ನಿವೇದಯೇತ್ ॥ ೪೭ ॥
ಶಂಖಚಕ್ರಗದಾಪದ್ಮಧರಪೀತಾಂಬರಾಚ್ಯುತ ।
ವೇಣೀಮಾಧವ ಭೋ ಸ್ವಾಮಿನ್ ಶರಣಾಗತವತ್ಸಲ ॥ ೪೮ ॥
ಮಂತ್ರತಂತ್ರಕ್ರಿಯಾಹೀನಂ ಶ್ರದ್ಧಾಭಕ್ತಿವಿವರ್ಜಿತಮ್ ।
ಮತ್ಕೃತೋದ್ಯಾಪನಂ ಕರ್ಮ ಕೃಪಯಾ ಸಫಲಂ ಕುರು ॥ ೪೯ ॥
ಏವಮುಕ್ತ್ವಾ ಕೃತಂ ಕರ್ಮ ಮಾಧವಾಯ ಸಮರ್ಪಯೇತ್ ।
ದೀನಾಂಧಬಂಧುಸಹಿತೋ ಭುಂಜೀತಾಥ ಪ್ರಹರ್ಷಿತಃ ॥ ೫೦ ॥
ಸದ್ಯಃಕಾಲಂ ಪ್ರಕುರ್ವೀತ ಪೂರ್ಣಾಯಾಮೇವ ವಾಖಿಲಮ್ ।
ಅಶಕ್ತೌ ಸಂಖ್ಯಯಾ ನ್ಯೂನಂ ಹವನೇ ವಿಪ್ರಭೋಜನೇ ॥ ೫೧ ॥

ತತ್ರಾಪ್ಯಶಕ್ತೌ ಕೃತ್ವಾಥ ವೇಣೀಮಾಧವಪೂಜನಮ್ ।
ದಂಪತೀಭೋಜನಂ ಕೃತ್ವಾ ದದ್ಯಾದ್ವಾಯನಮುತ್ತಮಮ್ ॥ ೫೨ ॥
ದರಿದ್ರಶ್ಚಾಸಮರ್ಥಶ್ಚ ನರೋ ನಾರ್ಯಥವಾದೃತಾ ।
ಆಮಂ ದಂಪತಿಪರ್ಯಾಪ್ತಂ ವಾಯನಂ ಚ ನಿವೇದಯೇತ್ ॥ ೫೩ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ಸ್ತ್ರಿಯೋ ಶೂದ್ರಾಸ್ತಥೈವ ಚ ।
ಪ್ರತಿಲೋಮಾನುಲೋಮಾಶ್ಚ ಕುರ್ಯುರಿತ್ಥಂ ಫಲೇಚ್ಛವಃ ॥ ೫೪ ॥
ಪ್ರಯಾಗೇ ಚೇದ್ವ್ರತೇ ಚೈತದುದ್ಯಾಪನಮನುತ್ತಮಮ್ ।
ತಥಾನ್ಯತಃ ಕೋಟಿಗುಣಂ ಮಾಧವಃ ಕುರುತೇ ಸ್ವಯಮ್ ॥ ೫೫ ॥
ಏವಮುದ್ಯಾಪನವಿಧಿಂ ಶೌನಕಾದ್ಯಾ ಮಹರ್ಷಯಃ ।
ಕಥಿತೋ ಭವತಾಂ ಪ್ರೀತ್ಯೈ ಕಿಮನ್ಯಚ್ಛ್ರೋತುಮಿಚ್ಛಥ ॥ ೫೬ ॥

॥ ಇತಿ ದ್ವಿಪಂಚಾಶತ್ತಮೋಽಧ್ಯಾಯಃ ॥

**ಸೂತರು ಹೇಳಿದರು—**

ಯಾವಾಗ ಹಣದ ಸೌಕರ್ಯವು, ಮನಸ್ಸು, ಶ್ರದ್ಧೆಯು, ಪವಿತ್ರವಾದ ತೀರ್ಥಕ್ಷೇತ್ರವು, ಪುಣ್ಯಕಾಲವು ಮತ್ತು ಸತ್ಪಾತ್ರರೂ ಲಭ್ಯವಾಗುವರೋ ಆವಾಗಲೇ ಈ ವ್ರತದ ಉದ್ಯಾಪನೆಯನ್ನು ಮಾಡಬೇಕು. ॥ ೬ ॥ ನರರಿಗೆ ಮಾಘಸ್ನಾನದ ಉದ್ಯಾಪನೆಯು ಅವಶ್ಯಕರ್ತವ್ಯವಾಗಿದ್ದು, ಈ ಮಂಗಳಕರವಾದ ಉದ್ಯಾಪನೆಯನ್ನು ಈ ವ್ರತದ ಪ್ರಾರಂಭದಲ್ಲಾಗಲೀ, ಮಧ್ಯದಲ್ಲಾಗಲೀ ಅಥವಾ ಅಂತ್ಯದಲ್ಲಾಗಲೀ ಆಚರಿಸಬಹುದು. ॥ ೭ ॥ ಈ ಉದ್ಯಾಪನೆಯನ್ನು ಆಚರಿಸುವವನು ಮಾಘಶುಕ್ಲಚತುದರ್ಶಿ ಈ ಶುಭದಿವಸದಲ್ಲಿ ಉಷಃಕಾಲದಲ್ಲೆದ್ದು ಸ್ನಾನ ಮಾಡಿ ನಿತ್ಯಕರ್ಮಗಳನ್ನು ಮುಗಿಸಿ ಮಾಘಸ್ನಾನದ ಸಂಪೂರ್ಣತೆಗಾಗಿ ಶ್ರೀಮಾಧವನ ಪ್ರೀತಿಗಾಗಿ ಉದ್ಯಾಪನೆಯನ್ನು ಮಾಡುವೆನು ಎಂದು ಸಂಕಲ್ಪ ಮಾಡಬೇಕು. ॥ ೮-೯ ॥ ಇಂದು ಶುದ್ಧಮನಸ್ಕನಾಗಿ ಉಪವಾಸದಿಂದಿದ್ದು ಹೆಂಡತಿಮಕ್ಕಳುಗಳಿಂದ ಸಹಿತನಾಗಿ ನಿಯಮದಿಂದ ಇರಬೇಕು. ॥ ೧೦ ॥ ಗಂಗಾತೀರದಲ್ಲಿ ಅಥವಾ ಗೃಹಮಂದಿರಗಳಲ್ಲಿ ಗುಡಿಸಿ ಗೋಮಯದಿಂದ ಸಾರಿಸಿ ಶುಚಿಗೊಳಿಸಿದ ಜಾಗದಲ್ಲಿ ನಾಲ್ಕು ದಿಕ್ಕುಗಳಲ್ಲೂ ಕಬ್ಬಿನ ಜಲ್ಲೆಯಿಂದ ನಾಲ್ಕು ದ್ವಾರಗಳನ್ನುಳ್ಳ ಹೋಮ ಮಂಟಪವನ್ನು ನಿರ್ಮಿಸಿ, ಅದನ್ನು ಬಾಳೆಯ ಕಂಬ, ಮಾವಿನ ತಳಿರು ತೋರಣ, ಹಣ್ಣು ಹೂವು, ಮಾಲೆಗಳಿಂದಲೂ ಹಂದರದಿಂದಲೂ ಮನೋಹರವಾಗಿ ಅಲಂಕರಿಸಬೇಕು. ಈ ಮಂಟಪದ ಮಧ್ಯೆ ತೊಂಬತ್ತಾರು ಅಂಗುಲ ಉದ್ದ ಮತ್ತು ಅಗಲವಿರುವ ಹಾಗೂ ನಾಲ್ಕು ಅಂಗಲ ದಪ್ಪವುಳ್ಳದ್ದಾದ ವೇದಿಕೆಯನ್ನು ನಿರ್ಮಿಸಬೇಕು, ಇದು ಅತ್ಯಂತ ಮನೋಹರವಾಗಿದ್ದು ಅದರ ಮಧ್ಯೆ ರಂಗವಲ್ಲಿಗಳಿಂದ ಸರ್ವತೋಭದ್ರಮಂಡಲವನ್ನು ಹಾಕಬೇಕು. ॥ ೧೧-೧೩ ॥ ಈ ರೀತಿಯಾಗಿ ಸಕಲ ಸಾಮಗ್ರಿಗಳನ್ನು ಸಂಗ್ರಹಿಸಿಟ್ಟುಕೊಂಡು ಸಾಯಂಕಾಲ ಪುಡಿಮಾಡಿದ ಬಿಳಿಎಳ್ಳನ್ನು ಹಚ್ಚಿಕೊಂಡು ಸ್ನಾನವನ್ನು ಮಾಡಬೇಕು. ನಂತರ ಜಗಲಿಯ ಮತ್ತು ಮಂಟಪದ ಸುತ್ತಲೂ ದೀಪಗಳನ್ನು ಹಚ್ಚಿಟ್ಟು ಕರ್ಮಕಾಂಡದಲ್ಲಿ ಪರಿಣತರಾಗಿರತಕ್ಕ ಪುರೋಹಿತರನ್ನೂ, ಋತ್ವಿಜಾದಿಗಳನ್ನೂ ಆಹ್ವಾನಿಸಿ ಹೆಂಡತಿಸಹಿತನಾಗಿ ಆಚಮನ ಮಾಡಿ, ಪ್ರಾಣಾಯಾಮವನ್ನೂ

ಮಾಡಿ, ಮೊಟ್ಟಮೊದಲು ಆಸನದಲ್ಲಿ ಶ್ರೀಮಹಾಗಣಪತಿಯನ್ನು ಪೂಜಿಸಿ ನಂತರ ಪುಣ್ಯಾಹವಾಚನವನ್ನು ಮಾಡಬೇಕು. ॥ ೧೪-೧೫ ॥ ಅನಂತರ ಸ್ತೋತ್ರಪ್ರಾರ್ಥನಾದಿಗಳಿಂದ ಋತ್ವಿಜರನ್ನೂ ಪ್ರಧಾನಾಚಾರ್ಯರನ್ನೂ ಸ್ವೀಕರಿಸಬೇಕು, ಶ್ರೀವೇಣೀಮಾಧವದೇವರ ಮಂಗಳಕರವಾದ ಬಂಗಾರದ ಪ್ರತಿಮೆಯನ್ನು ಮಂಡಿಸಬೇಕು. ॥ ೧೬ ॥ ೩೩, ೨೦ ಅಥವಾ ೧ ಎಷ್ಟು ಪ್ರತಿಮೆಗಳನ್ನು ಮಾಡಿಸಿಟ್ಟುಕೊಂಡಿರುತ್ತಾರೋ, ಅಷ್ಟು ಸಂಖ್ಯೆಯ ಕಲಶಗಳ ಮೇಲೆ ನಿರ್ಮಲವಾದ ಶ್ವೇತವಸ್ತ್ರಗಳನ್ನು ಹೊದ್ದಿಸಬೇಕು. ಅನಂತರ ಪತ್ನಿಯಿಂದೊಡಗೂಡಿ ತಾನಾಗಿ ಅಥವಾ ತನ್ನಿಂದ ಪ್ರಾರ್ಥಿಸಲ್ಪಟ್ಟ ಆಚಾರ್ಯರಿಂದಲಾಗಲೀ ಮಂತ್ರಗಳಿಂದ ಸರ್ವತೋಭದ್ರ ಮಂಡಲದ ದೇವತೆಗಳಾದ ಚತುರ್ಮುಖಬ್ರಹ್ಮಾದಿಗಳನ್ನು ಸ್ಥಾಪಿಸಬೇಕು, ಮತ್ತು ಅದೇ ಮಂತ್ರದಿಂದ ಕಳಶಗಳನ್ನು ಪೂಜಿಸಿ ಸುತ್ತಲೂ ಸ್ಥಾಪಿಸಬೇಕು. ॥ ೧೭-೧೯ ॥ ಆ ಕಳಶಗಳ ಮೇಲೆ ವಸ್ತ್ರಗಳನ್ನು ಹರಡಿ, ಅಗ್ನ್ಯುತ್ತಾರಣ ಮಂತ್ರದಿಂದ ಪ್ರತಿಮಾದಿಗಳಲ್ಲಿ ಅಗ್ನಿಸಂಪರ್ಕದ ದೋಷಗಳನ್ನು ಪರಿಹರಿಸಿ, ಪ್ರಾಣಪ್ರತಿಷ್ಠಾಪನೆ ಮಾಡಿ ಸ್ಥಾಪಿಸಿ ಪೂಜೆ ಮಾಡಬೇಕು. ॥ ೨೦ ॥ ಪುರುಷಸೂಕ್ತದಿಂದಲೂ, ಷೋಡಶಪೂಜಾಗಳಿಂದಲೂ ಮತ್ತು ಮೊದಲೇ ಉಕ್ತವಾಗಿರತಕ್ಕ ಮಂತ್ರದಿಂದಲೂ ವಿಧಿವತ್ತಾಗಿ ಶ್ರೀಮಾಧವನನ್ನು ಪೂಜಾ ಮಾಡಬೇಕು. ॥ ೨೧ ॥ ನಾನಾ ವಿಧವಾದ ಸುವಾಸನೆಯುಳ್ಳ ಹೂವುಗಳಿಂದಲೂ, ಗಂಧ, ಧೂಪ, ದೀಪ, ತೆಂಗಿನಕಾಯಿ ಮತ್ತು ದಕ್ಷಿಣೆ ಸಹಿತ ತಾಂಬೂಲಾದಿಗಳಿಂದಲೂ ಪೂಜಿಸಿ ಅನಂತರ ಪೂರ್ವೋಕ್ತ ನಾಮಗಳಿಂದ ತುಳಸೀದಳಗಳಿಂದ ಅರ್ಚಿಸತಕ್ಕದ್ದು. ॥ ೨೨ ॥ ಮಂತ್ರಘೋಷಗಳಿಂದ ಪುಷ್ಪಾಂಜಲಿಯನ್ನು ಸಮರ್ಪಿಸಿ, ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಶ್ರೀಮಾಧವನನ್ನು ಪ್ರಾರ್ಥಿಸಬೇಕು. ॥ ೨೩ ॥ ''ಶ್ರೀಲಕ್ಷ್ಮೀಪತಿಯಾದ ಮಾಧವನೇ, ದಯಾಸಾಗರನೇ! ಭಕ್ತರ ಅಪೇಕ್ಷೆಗಳನ್ನು ಮಳೆಗರೆದಂತೆ ನೆರವೇರಿಸುವವನೇ! ಈಗ ನಾನು ಆಚರಿಸಿರುವ ಮಾಘಸ್ನಾನದ ವ್ರತವನ್ನು ಫಲವುಳ್ಳದ್ದನ್ನಾಗಿ ಮಾಡು, ನಿನಗೆ ನಮಸ್ಕಾರಗಳು.'' ॥ ೨೪ ॥ ಶ್ರೀಮಾಧವನನ್ನು ಈ ರೀತಿಯಾಗಿ ಪೂಜಿಸಿ, ಬ್ರಾಹ್ಮಣರನ್ನು ಪೂಜಿಸಿ, ಅವರುಗಳಿಂದ ಆಶೀರ್ವಾದಗಳನ್ನು ಸ್ವೀಕರಿಸಿ, ದೇವರ ಸ್ತೋತ್ರಪಠನ ವಾದ್ಯಗಳನ್ನು ನುಡಿಸುವುದು ಮತ್ತು ಹಾಡುಗಳನ್ನು ಹಾಡುವುದು ಹೀಗೆ ಆ ರಾತ್ರಿಯನ್ನೆಲ್ಲಾ ಕಳೆಯಬೇಕು. ॥ ೨೫ ॥ ಅನಂತರ ಉಷಃಕಾಲದಲ್ಲಿ ಸ್ನಾನ ಮಾಡಿ ಶುಚಿರ್ಭೂತನಾಗಿ ನಿತ್ಯಕ್ರಿಯೆಗಳನ್ನು ಮುಗಿಸಿ ಮಾಧವನನ್ನು ಪಂಚೋಪಚಾರಗಳಿಂದ ಪೂಜಿಸಿ ಹವನವನ್ನು ಮಾಡಬೇಕು. ॥ ೨೬ ॥ ಪಶ್ಚಿಮದಿಕ್ಕಿನಲ್ಲಿ ಮಂಟಪವನ್ನು ನಿರ್ಮಿಸಿ ಅದರೊಳಗೆ ಒಂದು ಮೊಳ ಉದ್ದಗಲದಷ್ಟು ಸ್ಥಂಡಿಲವನ್ನು ಮಾಡಿ ಅದರ ಮೇಲೆ ಅಗ್ನಿಯನ್ನು ಸ್ವಗೃಹ್ಯೋಕ್ತರೀತಿಯಿಂದ ಸ್ಥಾಪಿಸಬೇಕು ॥ ೨೭ ॥ ಅದಕ್ಕೆ ಈಶಾನ್ಯ ಭಾಗದಲ್ಲಿ ನವಗ್ರಹಗಳನ್ನು ಸ್ಥಾಪಿಸಿ, ಪೂಜಿಸಿ, ಅನ್ವಾಧಾನ ಮಾಡಿ, ಚಕ್ಷುಹೋಮದವರೆಗೆ ಅಗ್ನಿಮುಖವನ್ನು ಮಾಡಿ ಪ್ರಧಾನ ಹವನವನ್ನು ಮಾಡಬೇಕು. ॥ ೨೮ ॥ ಸಮಿತ್ತು, ಚರು ಮತ್ತು ತಿಲಾದಿಗಳನ್ನು ಒಟ್ಟಿಗೆ ಹವನ ಮಾಡುತ್ತಾ ನೂರೆಂಟು ಸಲ, ಇಪ್ಪತ್ತು ಸಲ ಅಥವಾ ಎಂಟು ಸಾರಿ ಗ್ರಹ ಮಂತ್ರಗಳಿಂದ ಅಗ್ನಿಯಲ್ಲಿ ಹವನ ಮಾಡಬೇಕು. ॥ ೨೯ ॥ ಸಾವಿರದೆಂಟು ಸಾರಿ ಅಥವಾ ನೂರೆಂಟು ಸಾರಿ ತುಪ್ಪದಲ್ಲಿ ತೊಯ್ದಿರತಕ್ಕಂಥಾ ಎಳ್ಳನ್ನು ವೈಷ್ಣವಮಂತ್ರಗಳಿಂದ ಹವನ ಮಾಡಬೇಕು. ॥ ೩೦ ॥ ''ಓಂ ವೇಣೀಮಾಧವಾಯ ನಮಃ'', ಎಂತಲೂ, ಮಂಡಲದೇವತೆಗಳನ್ನುದ್ದೇಶಿಸಿಯೂ ಹವನ ಮಾಡಬೇಕು. ॥ ೩೧ ॥ ಅನಂತರ ಸ್ವಿಷ್ಟಕೃತಹೋಮವನ್ನು ಮಾಡಿ ಪ್ರಾಯಶ್ಚಿತ್ತ ಆಹುತಿಯನ್ನು ಕೊಟ್ಟು, ಬಲಿದಾನವನ್ನು ಮಾಡಿ,

ಅನಂತರ ಪೂರ್ಣಾಹುತಿಯನ್ನು ಕೊಡಬೇಕು. ॥ ೩೨ ॥ ಅನಂತರ ''ಪ್ರಣೀತಾ'' ಪಾತ್ರವನ್ನು ತ್ಯಾಗ ಮಾಡಬೇಕು. ಅನಂತರ ಬ್ರಾಹ್ಮಣರನ್ನು ಪೂಜಿಸಿ ಅವರ ಆಶೀರ್ವಾದವನ್ನು ಪಡೆಯಬೇಕು. ಪ್ರಧಾನ ಆಚಾರ್ಯರಿಗೆ ಕರುವಿನಿಂದ ಕೂಡಿದ ಹಾಲು ಕರೆಯುವ ಆಕಳನ್ನು ವಿಪುಲ ದಕ್ಷಿಣೆಯೊಡನೆ ದಾನ ಮಾಡಬೇಕು. ॥ ೩೩ ॥ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಮಂಗಳಾರತಿ, ಮಂತ್ರಪುಷ್ಪ, ನಮಸ್ಕಾರಾದಿಗಳಿಂದ ಆವಾಹಿತದೇವತೆಗಳನ್ನು ಪೂಜಿಸಿ, ಕಳಶದ ಜಲದಿಂದ ಮಂತ್ರೋಕ್ತವಾಗಿ ಅಭಿಷೇಕ ಮಾಡಿಸಿಕೊಂಡು ತದನಂತರ ಅಗ್ನಿಪೂಜೆಯನ್ನು ಮಾಡಬೇಕು. ॥ ೩೪ ॥ ಅನಂತರ ವಿಭೂತಿಯನ್ನು ಎಂದರೆ ಹುತ ಭಸ್ಮವನ್ನು ಹಚ್ಚಿಕೊಂಡು ಅಗ್ನ್ಯಾದಿದೇವತೆಗಳನ್ನು ನಮಿಸಿ ವಿಸರ್ಜಿಸಬೇಕು. ಶ್ರೀಮಾಧವದೇವರನ್ನು ವಿಸರ್ಜಿಸಬಾರದು. ॥ ೩೫ ॥ ಋತ್ವಿಜರಿಗೂ ಬೇರೆ ಬೇರೆ ಬ್ರಾಹ್ಮಣರುಗಳಿಗೂ ಭೂರಿದಕ್ಷಿಣೆಯನ್ನು ಕೊಟ್ಟು ಯಜ್ಞದ ಸಾಫಲ್ಯಕ್ಕಾಗಿ ಅವರನ್ನು ಪ್ರಾರ್ಥಿಸಬೇಕು. ॥ ೩೬ ॥ ಉದ್ಯಾಪನಾ ಕಾರ್ಯದ ಸಂಪೂರ್ಣ ಸಾಫಲ್ಯಕ್ಕಾಗಿಯೂ ಶ್ರೀಮಾಧವದೇವರ ಪ್ರಸನ್ನತೆಗಾಗಿಯೂ ಎಷ್ಟು ಸಂಖ್ಯೆಯಲ್ಲಿ ಪ್ರತಿಮೆಗಳನ್ನಿಟ್ಟಿದೆಯೋ ಅಷ್ಟು ಸಂಖ್ಯೆಯ ದಂಪತಿಗಳಿಗೆ ಭೋಜನ ಮಾಡಿಸಬೇಕು. ॥ ೩೭ ॥ ಅಷ್ಟು ಸಂಖ್ಯೆಯ ಬ್ರಾಹ್ಮಣರು ಸಿಗದಿದ್ದರೆ, ಸಾಧ್ಯವಾದಷ್ಟು ಬ್ರಾಹ್ಮಣರನ್ನು ಮುತ್ತೈದೆಯರನ್ನು ಭೋಜನ ಮಾಡಿಸಬೇಕು. ಮೂರು ದಂಪತಿಗಳಿಗಾಗಲಿ, ಕಡೆಯ ಪಕ್ಷ ಒಂದು ದಂಪತಿಗಳಿಗಾಗಲೀ ಭೋಜನ ಮಾಡಿಸಬೇಕು. ॥ ೩೮ ॥ ವ್ರತಿಯು ವಸ್ತ್ರಗಳು, ಅಲಂಕಾರ ದ್ರವ್ಯಗಳು, ಸೌಭಾಗ್ಯ ದ್ರವ್ಯಗಳು, ಭಕ್ಷ್ಯಭೋಜ್ಯಾದಿಗಳು, ತಾಂಬೂಲದಕ್ಷಿಣಾದಿಗಳಿಂದ ಬ್ರಾಹ್ಮಣಸುವಾಸಿನಿಯರನ್ನು ಸಂತುಷ್ಟಿಪಡಿಸಬೇಕು. ॥ ೩೯ ॥ ಮುತ್ತೈದೆಯರಿಗೆ ನಾನಾವಿಧವಾದ ಮಂಗಳದ್ರವ್ಯಗಳಿಂದಲೂ ಆಲಂಕಾರಿಕಸಾಮಗ್ರಿಗಳಿಂದಲೂ ಕೂಡಿದ ಮರದ ಬಾಗಿನಗಳನ್ನು ದಕ್ಷಿಣೆ ಸಹಿತವಾಗಿ ಪ್ರಧಾನ ಆಚಾರ್ಯರಿಗೆ ದಾನ ಮಾಡಬೇಕು. ॥ ೪೦ ॥ ಪುನಃ ಶ್ರೀಮಾಧವದೇವರನ್ನು ಶ್ರೀತ್ರಿವೇಣೀದೇವಿಯರನ್ನು ಪೂಜಿಸಿ ನಂತರ ಆಚಾರ್ಯರಿಗೆ ವಾಯನದಾನವನ್ನು ದಕ್ಷಿಣೆ ಸಹಿತವಾಗಿ ಕೊಡಬೇಕು. ॥ ೪೧ ॥ ಅನಂತರ, ಮುಕ್ಕಾಲು ಎಳ್ಳು ಮತ್ತು ಕಾಲು ಭಾಗ ಸಕ್ಕರೆಯನ್ನುಳ್ಳ ತುಪ್ಪದಲ್ಲಿ ಕರಿದಿರುವ ಮೂವತ್ತು ಮೂರು ಮೋದಕಗಳ ಮೇಲೆ ಹೊಸಬಟ್ಟೆಯನ್ನು ಹೊದಿಸಿ ಬಿದಿರಿನ ತಟ್ಟೆಯಲ್ಲಿಟ್ಟು ದಕ್ಷಿಣೆ ಸಹಿತವಾಗಿ ಪ್ರಧಾನ ಆಚಾರ್ಯರಿಗೆ ಮಂತ್ರಪೂರ್ವಕವಾಗಿ ದಾನ ಮಾಡಬೇಕು. ॥ ೪೨-೪೩ ॥ ''ಈ ಮೋದಕಗಳು ತಮಗಾಗಿ ವಾಯನಕ್ಕೋಸ್ಕರ ಇಡಲ್ಪಟ್ಟಿವೆ. ನನ್ನ ಮೇಲಿನ ಪ್ರೀತಿಯಿಂದ ಇವುಗಳನ್ನು ಸ್ವೀಕಾರ ಮಾಡಿ ನನ್ನನ್ನು ಉದ್ಧರಿಸಿರಿ. ॥ ೪೪ ॥ ಮಾಧವನು ಸ್ವೀಕರಿಸುತ್ತಾನೆ ಮತ್ತು ಮಾಧವನೇ ಕೊಡುತ್ತಾನೆ. ನಮ್ಮಿಬ್ಬರಿಗೂ ಮಾಧವನೇ ತಾರಕನು ಮತ್ತು ಮೋಚಕನು, ಮಾಧವನಿಗೆ ನಮಸ್ಕಾರಗಳು.'' ಈ ರೀತಿಯಾಗಿ ಮಂತ್ರೋಚ್ಚಾರಣೆ ಮಾಡಿ ಆಚಾರ್ಯರಿಗೆ ದಾನ ಮಾಡಿ ಅವರನ್ನು ಸಂತೋಷಪಡಿಸಿ ಮಾಧವನನ್ನು ಪ್ರಾರ್ಥಿಸಿ ವಿಸರ್ಜಿಸಬೇಕು. ॥ ೪೫-೪೬ ॥ ನಂತರ ವಸ್ತ್ರಗಳಿಂದ ಹೊದಿಸಲ್ಪಟ್ಟಿರುವ ಕಳಶಗಳನ್ನು ಬ್ರಾಹ್ಮಣರುಗಳಿಗೆ ದಾನ ಮಾಡಬೇಕು. ಗೃಹಪೀಠವನ್ನು ಕಳಶ ಮತ್ತು ಹೊದಿಸಿರುವ ವಸ್ತ್ರದ ಸಹಿತ ಆಚಾರ್ಯರಿಗೆ ದಕ್ಷಿಣೆಯೊಡನೆ ದಾನ ಮಾಡಬೇಕು. ॥ ೪೭ ॥ ನಂತರ ಶ್ರೀಮಾಧವನನ್ನು ಈ ರೀತಿಯಾಗಿ ಪ್ರಾರ್ಥನೆ ಮಾಡಬೇಕು — ಶಂಖ, ಚಕ್ರ, ಗದೆ ಮತ್ತು ಪದ್ಮಗಳನ್ನು ಧಾರಣೆ ಮಾಡಿರುವ, ಪೀತಾಂಬರವನ್ನು ಧರಿಸಿರುವ, ಜಗತ್ತಿಗೆ ಮುಖ್ಯಸ್ವಾಮಿಯಾದ, ಶ್ರೀವೇಣೀ ಸಹಿತನಾದ ಶ್ರೀಮಾಧವದೇವನೆ! ಮಂತ್ರ, ತಂತ್ರ, ಕ್ರಿಯಾಹೀನವಾದ, ಶ್ರದ್ಧಾ

ಮತ್ತು ಭಕ್ತಿಗಳಿಲ್ಲದೆ ನನ್ನಿಂದ ಮಾಡಲ್ಪಟ್ಟಿರುವ ಈ ಉದ್ಯಾಪನೆಯೆಂಬ ಕರ್ಮವನ್ನು ದಯಮಾಡಿ ಫಲಯುಕ್ತವಾದದ್ದನ್ನಾಗಿ ಮಾಡು. ॥ ೪೮-೪೯ ॥ ಈ ರೀತಿಯಾಗಿ ನಿವೇದನ ಮಾಡಿಕೊಂಡು ಕರ್ಮವನ್ನು ಶ್ರೀಮಾಧವದೇವರಿಗೆ ಸಮರ್ಪಣೆ ಮಾಡಿ, ದೀನರು, ಕುರುಡರು ಮತ್ತು ಬಂಧುಗಳೊಡನೆ ಸಂತೋಷದಿಂದ ಭೋಜನ ಮಾಡಬೇಕು. ॥ ೫೦ ॥ ಹಿಂದೆ ಹೇಳಿದಂತೆ ಹಿಂದಿನ ದಿನ ಕಲಶಸ್ಥಾಪನೆ, ಹುಣ್ಣಿಮೆಯಂದು ಉದ್ಯಾಪನೆ ಮಾಡಲು ಆಗದಿದ್ದರೆ, ಹುಣ್ಣಿಮೆಯಂದೇ ಆ ಕಾಲದಲ್ಲಿಯೇ ಕಲಶ ಸ್ಥಾಪನೆ, ಹವನಾದಿಗಳನ್ನು ಮಾಡಬೇಕು. ಶಕ್ತಿಯಿಲ್ಲದಿದ್ದರೆ ಹವನದಲ್ಲಿಯೂ, ಬ್ರಾಹ್ಮಣಭೋಜನದಲ್ಲಿಯೂ ಸಂಖ್ಯೆಯನ್ನು ಕಡಿಮೆ ಮಾಡಬಹುದು. ॥ ೫೧ ॥ ಅದಕ್ಕೂ ಶಕ್ತಿಯಿಲ್ಲದಿದ್ದರೆ ಶ್ರೀವೇಣೀಮಾಧವದೇವರ ಪೂಜಾವನ್ನು ಮಾಡಿ ದಂಪತಿಭೋಜನವನ್ನುಮಾಡಿಸಿ ಬ್ರಾಹ್ಮಣಸುವಾಸಿನಿಯರಿಗೆ ವಾಯನದಾನವನ್ನಾದರೂ ಮಾಡಬೇಕು. ॥ ೫೨ ॥ ದರಿದ್ರರೂ ಅಸಮರ್ಥರೂ ಆದ ಸ್ತ್ರೀ ಅಥವಾ ಪುರುಷರು ದಂಪತಿಗಳಿಗೆ ಸಾಕಾಗುವಷ್ಟು ಹಸಿಪದಾರ್ಥವನ್ನು ಮತ್ತು ಹೆಸರುಕಾಳಿನಿಂದ ವಾಯನದಾನವನ್ನು ಕೊಟ್ಟು ಉದ್ಯಾಪನೆ ಮುಗಿಸಬಹುದು. ॥ ೫೩ ॥ ಬ್ರಾಹ್ಮಣರಾಗಲೀ, ಕ್ಷತ್ರಿಯರಾಗಲೀ. ವೈಶ್ಯರಾಗಲೀ, ಶೂದ್ರರಾಗಲೀ ಅಥವಾ ಪ್ರತಿಲೋಮ ಮತ್ತು ಅನುಲೋಮದಿಂದ ಹುಟ್ಟಿದವರಾಗಲೀ, (ಅನುಲೋಮ ಎಂದರೆ ನೀಚವರ್ಣದ ಗಂಡಸು ಉತ್ತಮವರ್ಣದ ಸ್ತ್ರೀಯನ್ನು ವಿವಾಹಿತನಾದಾಗ—ಅವರಲ್ಲಿ ಹುಟ್ಟುವ ಸಂತಾನದವರೆಂದು ತಿಳಿಯಬೇಕು. ಪ್ರತಿಲೋಮ ಎಂದರೆ ಉತ್ತಮವರ್ಣದ ಗಂಡಸು, ನೀಚವರ್ಣದ ಸ್ತ್ರೀಯನ್ನು ವಿವಾಹಿತನಾದಾಗ ಅವರಲ್ಲಿ ಹುಟ್ಟುವ ಸಂತಾನದವರೆಂದು ತಿಳಿಯಬೇಕು) ಮತ್ತುಸ್ತ್ರೀಯರಾಗಲೀ, ಫಲಾಪೇಕ್ಷಿಗಳಾಗಿದ್ದರೆ ಈ ರೀತಿಯಾಗಿ ಮಾಡಬಹುದು. ॥ ೫೪ ॥ ಪ್ರಯಾಗಕ್ಷೇತ್ರದಲ್ಲಾಗಲೀ, ಅಕ್ಷಯವಟವೃಕ್ಷದ ಸನ್ನಿಧಿಯಲ್ಲಾಗಲೀ ಈ ಉದ್ಯಾಪನ ಕರ್ಮವನ್ನು ಮಾಡಿದರೆ ಬೇರೆ ಕಡೆ ಮಾಡುವುದಕ್ಕಿಂತ ಕೋಟಿಗುಣ ಹೆಚ್ಚಿಗೆ ಫಲವನ್ನು ಶ್ರೀಮಾಧವದೇವರು ಉದ್ಯಾಪನೆ ಮಾಡುವವರಿಗೆ ಕರುಣಿಸುತ್ತಾನೆ. ॥ ೫೫ ॥ ಈ ರೀತಿಯಾಗಿ ಶೌನಕಾದಿಗಳೇ! ತಮಗೋಸ್ಕರ ಈ ಉದ್ಯಾಪನವಿಧಿಯು ಹೇಳಲ್ಪಟ್ಟಿತು. ತಾವುಗಳು ಮತ್ತೇನನ್ನು ಕೇಳಬಯಸುತ್ತೀರಿ? ॥ ೫೬ ॥

॥ ಐವತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಿಪಂಚಾಶತ್ತಮೋಽಧ್ಯಾಯಃ ॥ ೫೩ ॥

**ಶೌನಕಾದಯ ಊಚುಃ—**

ಸೋದ್ಯಾಪನಂ ಸಮಾಹಾತ್ಮ್ಯಂ ಮಾಘಸ್ನಾನಂ ತ್ವಯೋದಿತಮ್ ।
ಶ್ರುತ್ವಾ ಪ್ರಮುದಿತಾಸ್ಸರ್ವೇ ಪೃಚ್ಛಾಮೋಽನ್ಯದ್ವಯಂ ಪ್ರಭೋ ॥ ೧ ॥
ಶಕ್ತೌ ದಾನಾನಿ ಕಾರ್ಯಾಣೀತ್ಯವೋಚ ಕರುಣಾತ್ಮನಾ ।
ಭವತಾ ವಿದುಷಾ ತತ್ರ ವಯಂ ಸಂದೇಹಮಾಗತಾಃ ॥ ೨ ॥
ಕಾನಿ ದಾನಾನಿ ದೇಯಾನಿ ಕುತ್ರ ಕೇಭ್ಯಃ ಕದಾ ಕಥಮ್ ।
ಏತದಾಚಕ್ಷ್ವ ನಃ ಸೂತ ಸರ್ವಜ್ಞೋಽಸಿ ಮಹಾಮತೇ ॥ ೩ ॥

## ॥ ಐವತ್ತಮೂರನೆಯ ಅಧ್ಯಾಯವು ॥

**ಶೌನಕಾದಿಗಳು ಹೇಳಿದರು—**

"ಮಾಘಸ್ನಾನದ ವ್ರತವು, ಅದರ ಉದ್ಯಾಪನೆಯು, ಅವುಗಳ ಮಾಹಾತ್ಮ್ಯಗಳ ಸಹಿತ ತಮ್ಮಿಂದ ಉಪದೇಶಿಸಲ್ಪಟ್ಟಿವೆ. ಇವುಗಳನ್ನು ಶ್ರವಣ ಮಾಡಿ ನಾವುಗಳೆಲ್ಲರೂ ಅತ್ಯಂತ ಸಂತುಷ್ಟರಾಗಿದ್ದೇವೆ. ಈಗ ನಾವು ಬೇರೆ ಬೇರೆ ವಿಷಯಗಳ ಬಗ್ಗೆ ಕೇಳಬಯಸುತ್ತೇವೆ. ॥ ೧ ॥ ಈ ಮಾಘಮಾಸದಲ್ಲಿ ಶಕ್ತಿಯಿದ್ದರೆ ದಾನಾದಿಗಳನ್ನು ಮಾಡಬೇಕೆಂದು ಎಲ್ಲವನ್ನೂ ತಿಳಿದ ತಾವು ಕರುಣೆಯಿಂದ ಹೇಳಿದ್ದೀರಿ. ಈ ಬಗ್ಗೆ ನಮಗೆ ಸಂದೇಹಗಳಿವೆ. ॥ ೨ ॥ ಏನೇನು ದಾನಗಳನ್ನು ಎಲ್ಲಿ ಯಾರಿಗೆ, ಯಾವಾಗ ಮತ್ತು ಹೇಗೆ ಹೇಗೆ ಕೊಡಬೇಕು? ಸರ್ವವನ್ನು ಬಲ್ಲ ಮಹಾಮೇಧಾವಿಗಳಾದ ಶ್ರೀಸೂತಪುರಾಣಿಕರೇ! ನಮಗಾಗಿ ಇವುಗಳನ್ನು ವಿವರಿಸಿ. ॥ ೩ ॥

**ಸೂತ ಉವಾಚ—**

ವದಾಮಿ ಮುನಿಶಾರ್ದೂಲಾಃ ಶೃಣುಧ್ವಂ ಸಾವಧಾನತಃ ।
ನಾನಾದಾನವಿಧಿಂ ಭಕ್ತ್ಯಾ ಪ್ರಯಾಗೇಽಗಣ್ಯಪುಣ್ಯದೇ ॥ ೪ ॥
ದ್ರವ್ಯತ್ಯಾಗಸ್ತು ಯಃ ಪಾತ್ರೇ ಸ್ವಸತ್ತಾತ್ಯಾಗಪೂರ್ವಕಃ ।
ಪರಸ್ವತ್ವಸ್ಯ ಜನ್ಯಂತೋ ದಾನಮಿತ್ಯುಚ್ಯತೇ ಬುಧೈಃ ॥ ೫ ॥
ಸ್ವಲ್ಪಬಾಹುಲ್ಯಭಾವೋ ಹಿ ದಾನೇನಾಭ್ಯುದಯಾವಹಃ ।
ಶ್ರದ್ಧಾಭಕ್ತೀ ಚ ದಾನಾನಾಂ ವೃದ್ಧಿಕ್ಷಯಕರೇ ಸ್ಮೃತೇ ॥ ೬ ॥
ಅದುಷ್ಟರೋಗೀ ಧರ್ಮಾತ್ಮಾ ದಿತ್ಸುರವ್ಯಸನಶ್ಶುಚಿಃ ।
ಅನಿಂದ್ಯಜೀವಕರ್ಮಾ ಚ ದಾನಕರ್ತಾ ಪ್ರಶಸ್ಯತೇ ॥ ೭ ॥
ಪಾತ್ರೇಭ್ಯೋ ದೀಯತೇ ನಿತ್ಯಮನವೇಕ್ಷ್ಯ ಪ್ರಯೋಜನಮ್ ।
ಕೇವಲಂ ಧರ್ಮಬುದ್ಧ್ಯಾ ಯದ್ಧರ್ಮದಾನಂ ತದುಚ್ಯತೇ ॥ ೮ ॥
ಪ್ರಯೋಜನಮಪೇಕ್ಷ್ಯೈವ ಪ್ರಸಂಗಾದ್ಯತ್ಪ್ರದೀಯತೇ ।
ತದರ್ಥಂ ದಾನಮಿತ್ಯಾಹುರೈಹಿಕಂ ಫಲಹೇತುಕಮ್ ॥ ೯ ॥

ಸ್ತ್ರಿಯಾಂ ದಾನಂ ಮೃಗಾಕ್ಷೀಣಾಂ ಪ್ರಸಂಗಾದ್ಯತ್ಪ್ರದೀಯತೇ ।
ಅನರ್ಹಾಣಾಂ ಚ ರಾಗೇಣ ಕಾಮದಾನಂ ತದುಚ್ಯತೇ ॥ ೧೦ ॥

ಸಭಾಯಾಂ ವ್ರೀಡಯಾ ಸ್ತುತ್ಯಾ ಚಾರ್ಥಾರ್ಥಿಭ್ಯಃ ಪ್ರಯಾಚಿತಃ ।
ಪ್ರದೀಯತೇ ಪ್ರಶಂಸಾರ್ಥಂ ವ್ರೀಡಾದಾನಮಿತಿ ಸ್ಮೃತಮ್ ॥ ೧೧ ॥

ದೃಷ್ಟ್ವಾ ಪ್ರಿಯಾಣಿ ಶ್ರುತ್ವಾ ವಾ ಹರ್ಷವದ್ಯತ್ಪ್ರದೀಯತೇ ।
ತದರ್ಥಂ ದಾನಮಿತ್ಯಾಹುರ್ದಾನಂ ತದ್ಧರ್ಮಚಿಂತಕಾಃ ॥ ೧೨ ॥

ಆಕ್ರೋಶನಾರ್ಥಂ ಹಿಂಸಾನಾಂ ಪ್ರತೀಕಾರಾಯ ಯದ್ಭವೇತ್ ।
ದೀಯತೇ ತಾಪಕರ್ತೃಭ್ಯೋ ಭಯದಾನಂ ತದುಚ್ಯತೇ ॥ ೧೩ ॥

ತ್ರಿಶುಕ್ಲಃ ಶುಕ್ಲವೃತ್ತಿಶ್ಚ ಘೃಣಾಲುಃ ಸ ಜಿತೇಂದ್ರಿಯಃ ।
ವಿಮುಕ್ತೋ ಸರ್ವದೋಷೇಭ್ಯಃ ಬ್ರಾಹ್ಮಣಃ ಪಾತ್ರಮುಚ್ಯತೇ ॥ ೧೪ ॥

ಸತ್ಯಂ ಶೌಚಂ ಕ್ಷಮಾ ಧೈರ್ಯಂ ವ್ರತಮಿತ್ಯಭಿಧೀಯತೇ ।
ವಿದ್ಯಾ ತಪಶ್ಚ ತದ್ಯತ್ರ ತದ್ಧಿ ಪಾತ್ರಂ ಪ್ರಚಕ್ಷತೇ ॥ ೧೫ ॥

ಸ್ತೇನಾನಾಸ್ತಿಕಹಿಂಸ್ರೇಭ್ಯೋ ಜಾರಾಯ ಪತಿತಾಯ ಚ ।
ಪಿಶುನಭ್ರೂಣಹಂತೃಭ್ಯಾಂ ದತ್ತಮಲ್ಪಫಲಂ ಭವೇತ್ ॥ ೧೬ ॥

ಮಹದಲ್ಪಫಲಂ ಚೈವ ಶ್ರದ್ಧಯಾ ಪರಿವರ್ಜಿತಮ್ ।
ಶ್ರದ್ಧಯೋಪೇತಮಲ್ಪಂ ಚ ಮಹಾಫಲಮುದಾಹೃತಮ್ ॥ ೧೭ ॥

ಧ್ರುವಮಜಸ್ರಕಂ ಕಾಮ್ಯಂ ನೈಮಿತ್ತಿಕಮಿತಿಕ್ರಮಾತ್ ।
ಪುನಶ್ಚತುರ್ವಿಧಂ ಪ್ರಾಹುರ್ದಾನಂ ದಾನವಿದೋ ಬುಧಾಃ ॥ ೧೮ ॥

ಪ್ರಪಾರಾಮತಡಾಗಾದಿಸರ್ವಕಾಮಫಲಂ ಧ್ರುವಮ್ ।
ತದಾಜಸ್ರಕಮಿತ್ಯಾಹುಃ ಕ್ರಿಯತೇ ಯದ್ದಿನೇ ದಿನೇ ॥ ೧೯ ॥

ಸ್ವರ್ಗಾಪ್ತಿವಿಜಯೈಶ್ವರ್ಯಸ್ತ್ರೀಬಾಲಾರ್ಥಂ ಯದಿಷ್ಯತೇ ।
ಇಚ್ಛಾಕೃತಂ ತು ಯದ್ದಾನಂ ಕಾಮ್ಯಮಿತ್ಯಭಿಧೀಯತೇ ॥ ೨೦ ॥

ಕಾಲಾಪೇಕ್ಷ್ಯಂ ಕ್ರಿಯಾಪೇಕ್ಷ್ಯಮರ್ಥಾಪೇಕ್ಷ್ಯಂ ಚ ಯತ್ಕೃತಮ್ ।
ತ್ರಿಧಾ ನೈಮಿತ್ತಿಕಂ ಪ್ರೋಕ್ತಂ ಸಹೋಮಂ ಹೋಮವರ್ಜಿತಮ್ ॥ ೨೧ ॥

ಉತ್ತಮಂ ಮಧ್ಯಮಂ ಚೈವಾಧಮಂ ಚೇತಿ ತ್ರಿಧಾ ಪುನಃ ।
ದೇಯೋತ್ತಮತ್ವಮಧ್ಯತ್ವಾಧಮತ್ವೈಃ ಪರಿಕೀರ್ತಿತಮ್ ॥ ೨೨ ॥

ಅನ್ನಂ ದಧಿ ಮಧುತ್ರಾಣಗೋಭೂರುಕ್ಮಾಶ್ಚ ಹಸ್ತಿನಃ ।
ಏತೇಷಾಮುತ್ತಮಂ ದಾನಮುತ್ತಮಂ ದ್ರವ್ಯದಾನತಃ ॥ ೨೩ ॥

ವಿದ್ಯಾವಾಸೋಪಭೋಗ್ಯಾನಿ ವಸೂನಿ ಹ್ಯೌಷಧಾನಿ ಚ ।
ಮಧ್ಯಮಂ ದಾನಮೇತೇಷಾಂ ಮಧ್ಯಮಂ ದ್ರವ್ಯದಾನತಃ ॥ ೨೪ ॥

ಬಹುತ್ವಾದರ್ಥಜಾತಾನಾಂ ಸಂಖ್ಯಾಶೇಷೇಷು ನೇಷ್ಯತೇ ।
ಅತೋಽಧಮಾನಿ ಶೇಷಾಣಿ ಹ್ಯಧಮಂ ದ್ರವ್ಯದಾನತಃ ॥ ೨೫ ॥
ಸತ್ತ್ವೇನ ರಜಸಾ ವಾಪಿ ತಮಸಾ ಯಃ ಪ್ರಯಚ್ಛತಿ ।
ದಾನಂ ತಥಾ ತದ್ಭವತಿ ಫಲಂ ಭುಂಕ್ತೇ ತಥೈವ ಚ ॥ ೨೬ ॥
ದೇವತ್ವಂ ಸಾತ್ತ್ವಿಕಾತ್ಪ್ರಾಪ್ಯ ರಜಸಾ ತು ಮನುಷ್ಯತಾಮ್ ।
ತಿರ್ಯಕ್ತ್ವಂ ತಾಮಸಾತ್ಪ್ರಾಪ್ಯ ಭುಂಕ್ತೇ ತ್ರಿಗುಣಜಂ ಫಲಮ್ ॥ ೨೭ ॥
ಪ್ರಯತ್ನಮಂತರಾ ಲಬ್ಧಂ ಜಾನೀಯಾತ್ಸಾತ್ತ್ವಿಕಂ ಫಲಮ್ ।
ರಾಜಸಂ ಕರ್ಮಣಾ ಲಬ್ಧಂ ತಾಮಸಂ ಕೃಚ್ಛ್ರಕರ್ಮಣಾ ॥ ೨೮ ॥
ತ್ರೀಣ್ಯಾಹುರತಿದಾನಾನಿ ಮಹಾದಾನಾನಿ ಷೋಡಶ ।
ಬಹೂನ್ಯನ್ಯಾನಿ ದಾನಾನಿ ಚೇಷ್ಟಾಪೂರ್ತಾದಿಕಾನಿ ಚ ॥ ೨೯ ॥
ಅತಿದಾನಾನಿ ಚೋಕ್ತಾನಿ ಗಾವಃ ಪೃಥ್ವೀ ಸರಸ್ವತೀಃ ।
ನರಕಾದುದ್ಧರಂತ್ಯೇನಂ ದೋಹಾವಾಪಜಪಾದಿಭಿಃ ॥ ೩೦ ॥
ಅಗ್ನಿಹೋತ್ರಂ ತಪಸ್ಸತ್ಯಂ ವೇದಾನಾಂ ಚೈವ ಪಾಲನಮ್ ।
ಆತಿಥ್ಯಂ ವೈಶ್ವದೇವಂ ಚ ಇಷ್ಟಮಿತ್ಯಭಿಧೀಯತೇ ॥ ೩೧ ॥
ವಾಪೀಕೂಪತಡಾಗಾದಿ ರೋಗಸೇವಾ ಸುರಾಲಯಾಃ ।
ಅನ್ನಪ್ರದಾನಮಾರಾಮಃ ಪೂರ್ತಮಿತ್ಯಭಿಧೀಯತೇ ॥ ೩೨ ॥
ಇಷ್ಟಂ ದತ್ತಂ ಚ ಜಪ್ತಂ ಚ ವಿನಶ್ಯತ್ಯನುಕೀರ್ತನಾತ್ ।
ತಸ್ಮಾದಾತ್ಮಕೃತಂ ಪುಣ್ಯಂ ವೃಥಾ ನ ಪರಿಕೀರ್ತಯೇತ್ ॥ ೩೩ ॥
ಪಂಗ್ವಂಧಬಧಿರಾ ಮೂಕಾ ವ್ಯಾಧಿನೋಪಹತಾಶ್ಚ ಯೇ ।
ಭರ್ತವ್ಯಾಸ್ತೇನ ದಾನೇನ ನ ದದ್ಯಾದ್ಭೂಗಜಾದಿಕಮ್ ॥ ೩೪ ॥
ದೀನಾಂಧಮೂಕಕೃಪಣಜಡವಾಮನಪಂಗುಷು ।
ಅನ್ನವಸ್ತ್ರಜಲಾದೀನಿ ದದ್ಯಾದ್ದಾನಂ ಸಮಶ್ನುತೇ ॥ ೩೫ ॥
ಅನ್ನದಾನೇ ನ ಕರ್ತವ್ಯಂ ಪಾತ್ರಾವೇಕ್ಷಣಮೇಷ್ವಪಿ ।
ಅನ್ಯೇಷು ಸರ್ವದಾನೇಷು ಸರ್ವಂ ಕಾರ್ಯಂ ಪರೀಕ್ಷಣಮ್ ॥ ೩೬ ॥
ತದ್ಧನಂ ದಾನಯೋಗ್ಯಂ ಯತ್ಸಪ್ತೋಪಾಯೈಸ್ಸಮಾಗತಮ್ ।
ಧನಮೂಲಾ ಕ್ರಿಯಾಸ್ಸರ್ವಾಸ್ಸಫಲಾ ವಿಫಲಾ ಅಪಿ ॥ ೩೭ ॥
ಸಪ್ತವಿತ್ತಾಗಮಾ ಧರ್ಮ್ಯಾ ದಾಯೋ ಲಾಭಃ ಕ್ರಯೋ ಜಯಃ ।
ಪ್ರಯೋಗಃ ಕರ್ಮಯೋಗಶ್ಚ ಸತ್ಪ್ರತಿಗ್ರಹ ಏವ ಚ ॥ ೩೮ ॥
ಯದ್ಯದಿಷ್ಟತಮಂ ಲೋಕೇ ಯಚ್ಚ ಸ್ಯಾದಪಿ ವಾ ಗೃಹೇ ।
ತತ್ತದ್ಗುಣವತೇ ದೇಯಂ ತದೇವಾಕ್ಷಯ್ಯಮಿಚ್ಛತಾ ॥ ೩೯ ॥

ಸ್ವಕುಟುಂಬ್ಯವಿರೋಧೇನ ದೇಯಂ ದಾರಾದಿಭಿರ್ವಿನಾ ।
ವಿರೋಧೇನಾಪಿ ದಾತವ್ಯಮನ್ನಂ ಯಚ್ಚ ಪ್ರತಿಶ್ರುತಮ್ ॥ ೪೦ ॥
ಸರ್ವಮೇತದ್ವಿಚಾರ್ಯಾದೌ ದಾನಂ ದದ್ಯಾದ್ಯಥಾವಿಧಿ ।
ತದ್ದಾನಮಕ್ಷಯಂ ಭೂತ್ವಾ ದಾತುಸ್ಸಮುಪತಿಷ್ಠತಿ ॥ ೪೧ ॥

॥ ಇತಿ ತ್ರಿಪಂಚಾಶತ್ತಮೋಽಧ್ಯಾಯಃ ॥

**ಸೂತರು ಹೇಳಿದರು—**

ಎಲೈ ಮುನಿಶ್ರೇಷ್ಠರೇ! ಹೇಳುತ್ತೇನೆ, ಗಮನವಿಟ್ಟು ಆಲಿಸಿರಿ. ನಾನಾವಿಧಗಳಾದ ದಾನಗಳು ಪ್ರಯಾಗಕ್ಷೇತ್ರದಲ್ಲಿ ಮಾಡಿದಾಗ ಅವು ಎಣಿಸಲಾರದಷ್ಟು ಪುಣ್ಯವನ್ನು ತಂದುಕೊಡುವುವು. ॥ ೪ ॥ ತನ್ನ ಸ್ವತ್ತಿನ ಅಥವಾ ಹಣದ ಯಜಮಾನತ್ವವು ತ್ಯಾಗಪೂರ್ವಕವಾಗಿ ಪರರ ಸ್ವತ್ತಾಗಿ ಅದರ ಯಜಮಾನತ್ವವು ಪರರಲ್ಲಿ ಹುಟ್ಟಿಕೊಳ್ಳುವುದೇ ದಾನವು ಎಂಬುದಾಗಿ ಜ್ಞಾನಿಗಳಿಂದ ಹೇಳಲ್ಪಟ್ಟಿದೆ. ॥ ೫ ॥ ದಾನವು ಸ್ವಲ್ಪವಾಗಿರಲೀ ಬಹಳವಾಗಿರಲೀ ಅದರಿಂದ ದಾನಿಯ ಏಳಿಗೆಯು ನಿಯತವಾಗಿ ನಿಶ್ಚಿತವಾಗಿರುತ್ತದೆ. ದಾನವು ಸ್ವಲ್ಪ, ಜಾಸ್ತಿ ಎಂಬುದು ಅಭ್ಯುದಯಕ್ಕೆ ಕಾರಣವಲ್ಲ; ಮತ್ತೇನೆಂದರೆ, ದಾನದ ವಿಷಯದಲ್ಲಿ ಶ್ರದ್ಧಾಭಕ್ತಿಯ ಭಾವನೆಯೇ ದಾನಿಯ ವೃದ್ಧಿಗೂ, ಅವನತಿಗೂ ಕಾರಣವಾಗಿರುತ್ತವೆ. ॥ ೬ ॥ ಕೆಟ್ಟದಾದ ಅಪಸ್ಮಾರಾದಿರೋಗಗಳಿಲ್ಲದ, ಧರ್ಮಾತ್ಮನಾಗಿರತಕ್ಕ ದಾನ ಮಾಡಲು ಅಪೇಕ್ಷೆಯುಳ್ಳಂತಹ, ದುಷ್ಟ ಚಟಗಳಿಲ್ಲದ ಶುಚಿರ್ಭೂತನಾಗಿರತಕ್ಕ, ಅನಿಂದ್ಯ ಕರ್ಮಾಚರಣೆಗಳಿರುವ ದಾನಿಯು ಪ್ರಶಸ್ತನು. ॥ ೭ ॥ ಯಾವ ಪ್ರಯೋಜನವನ್ನೂ ನಿರೀಕ್ಷಿಸದೆ ಯಾವಾಗಲೂ ಸತ್ಪಾತ್ರರಿಗೆ ದಾನ ಮಾಡಬೇಕು ಎಂದು ಕೇವಲ ಧರ್ಮಬುದ್ಧಿ ಯಿಂದಲೇ ಕೊಡತಕ್ಕ ದಾನವು ''ಧರ್ಮದಾನ''ಎಂದು ಕರೆಯಲ್ಪಡುತ್ತದೆ. ॥ ೮ ॥ ಪ್ರಸಂಗಕ್ಕೆ ಗಂಟುಬಿದ್ದು ಯಾವುದೋ ಪ್ರಯೋಜನಕ್ಕಾಗಿ ಮಾಡಿದ ದಾನವು ತದರ್ಥ ದಾನವೆಂದು ಕರೆಸುತ್ತದೆ. ಇಂಥಾ ದಾನದಿಂದ ಐಹಿಕಫಲವು ಮಾತ್ರ ಸಿಗುವುದು. ॥ ೯ ॥ ಜಿಂಕೆಯಂತೆ ಕಣ್ಣುಳ್ಳ ಸುಂದರಾಂಗಿಯರಾದ ಸ್ತ್ರೀಯರಿಗೆ ಪ್ರಸಂಗವಶಾತ್ ಅನರ್ಹರಾಗಿದ್ದರೂ ರಾಗದಿಂದ ಯಾವ ದಾನವು ಕೊಡಲ್ಪಡುತ್ತದೋ ಅದು ಕಾಮದಾನವೆನಿಸುತ್ತದೆ. ॥ ೧೦ ॥ ಸಭಾಗಳಲ್ಲಿ ಲಜ್ಜೆಯಿಂದಾಗಲೀ, ಹೊಗಳಿಕೆಗೆ ಮಾರುಹೋಗಿಯಾಗಲೀ ಅಥವಾ ಕೇವಲ ಹೊಗಳಿಕೆಗೋಸ್ಕರ ಬೇಡಿದವರಿಗೆ ಕೊಡತಕ್ಕ ದಾನವು ''ವ್ರೀಡಾದಾನ'' ಎಂದು ಸ್ಮೃತಿಗಳಲ್ಲಿ ವರ್ಣಿಸಲ್ಪಟ್ಟಿದೆ. ॥ ೧೧ ॥ ತನಗೆ ಪ್ರಿಯವಾಗಿರುವುದನ್ನು ಕಂಡು ಅಥವಾ ಶ್ರವಣ ಮಾಡಿ ಸಂತೋಷಗೊಂಡ ವನಾಗಿ ಕೊಡುವ ದಾನವನ್ನು ತದರ್ಥ ದಾನವೆಂದು ದಾನಧರ್ಮವನ್ನು ತಿಳಿದವರು ವರ್ಣಿಸಿದ್ದಾರೆ. ॥ ೧೨ ॥ ತನ್ನ ಮೇಲೆ ಆಕ್ರೋಶದಿಂದ ಹಿಂಸೆ ಮಾಡುವುದಾಗಿ ಹೆದರಿಸುವ ಅಥವಾ ಬಯ್ಯುವ ವ್ಯಕ್ತಿಗೆ ಅವನ ಮನವೊಲಿಸಿಕೊಳ್ಳಲು ಆ ಪಾಪಿಗೆ ಕೊಡುವ ದಾನವು ಭಯದಿಂದಲಾಗಿರುವುದರಿಂದ ಅದು ''ಭಯದಾನ'' ಎಂದು ಹೇಳಲ್ಪಟ್ಟಿದೆ. ॥ ೧೩ ॥ ದೇಹದಿಂದಲೂ, ಮಾತಿನಿಂದಲೂ ಮತ್ತು ಮನಸ್ಸಿನಿಂದಲೂ ಶುದ್ಧನಾಗಿರತಕ್ಕ, ಶುದ್ಧವಾದ ನಡವಳಿಕೆಗಳುಳ್ಳ, ದಯಾಳುವಾಗಿರತಕ್ಕ, ಜಿತೇಂದ್ರಿಯತ್ವವುಳ್ಳ, ಎಲ್ಲ ದೋಷಗಳಿಂದಲೂ ಬಿಡಲ್ಪಟ್ಟರತಕ್ಕ ಮತ್ತು ಬ್ರಾಹ್ಮಣನಾಗಿ ಇರತಕ್ಕವನೇ ದಾನಾದಿಗಳಿಗೆ ಸತ್ಪಾತ್ರನೆಂದೆನಿಸಿ ಕೊಳ್ಳುತ್ತಾನೆ. ॥ ೧೪ ॥ ಸತ್ಯ, ವಾಙ್ಮನಕಾರ್ಯಗಳಲ್ಲಿ ಶುಚಿರ್ಭೂತನಾಗಿ ಇರುವುದು,

ಸಹನಾಗುಣಸಂಪನ್ನತೆ, ಧೈರ್ಯಶಾಲಿತ್ವ ಇವುಗಳನ್ನೇ ಜೀವನದಲ್ಲಿ ವ್ರತವನ್ನಾಗಿ ಇಟ್ಟುಕೊಂಡಿರ ತಕ್ಕದ್ದು ಯಾರಲ್ಲಿ ಅತ್ಯಧಿಕಗಳಾಗಿ ಕಂಡುಬರುತ್ತವೋ, ವಿದ್ಯಾ ಮತ್ತು ತಪಸ್ಸು ಸಹ ಯಾರಲ್ಲಿ ಕಂಡು ಬರುವುದೋ ಅವರೇ ದಾನಕ್ಕೆ ಅರ್ಹರಾದ ಸತ್ಪಾತ್ರರು. ॥ ೧೫ ॥ ಕಳ್ಳತನ ಮಾಡುವ, ನಾಸ್ತಿಕನಾಗಿರುವ, ಪರರನ್ನು ಹಿಂಸೆ ಮಾಡುವ, ವ್ಯಭಿಚಾರಿಯಾಗಿರುವ, ಭ್ರಷ್ಟನಾಗಿರುವ, ಕ್ರೂರಿ ಮತ್ತು ಭ್ರೂಣ ಹಂತಕನಿಗೆ ಕೊಡುವ ದಾನವು ಅಲ್ಪಫಲವನ್ನು ಕೊಡತಕ್ಕದ್ದು. ॥ ೧೬ ॥ ಶ್ರದ್ಧಾರಹಿತ ದಾನವು ಬಹಳವಾದರೂ ಅಲ್ಪಫಲವನ್ನು ಕೊಡತಕ್ಕದ್ದು. ಅಲ್ಪವಾದ ದಾನವನ್ನೇ ಶ್ರದ್ಧೆಯಿಂದ ಮಾಡಿದರ ಮಹಾಫಲಪ್ರದವೆಂದು ಹೇಳಲ್ಪಟ್ಟಿದೆ. ॥ ೧೭ ॥ ದಾನವನ್ನು ಬಲ್ಲ ವಿದ್ವಾಂಸರು ದಾನವು ಧ್ರುವ, ಅಜಸ್ರಕ, ಕಾಮ್ಯ, ನೈಮಿತ್ತಿಕವೆಂದು ನಾಲ್ಕು ವಿಧವೆಂದು ಹೇಳುವರು. ॥ ೧೮ ॥ ಯಜ್ಞಶಾಲೆ ಅಥವಾ ಅರವಟ್ಟಿಗೆ, ಉದ್ಯಾನವನ, ಕೆರೆಗಳ ದಾನವು ಎಲ್ಲರಿಗೂ ಫಲಗಳನ್ನು ಕೊಡತಕ್ಕವು ಇವು ಧ್ರುವ ಎಂದು ಕರೆಯಲ್ಪಟ್ಟಿವೆ. ದಿನನಿತ್ಯವೂ ಮಾಡುವ ದಾನಗಳು ಅಜಸ್ರಕ ಎಂದು ಹೇಳಲ್ಪಟ್ಟಿವೆ. ॥ ೧೯ ॥ ಸ್ವರ್ಗಪ್ರಾಪ್ತಿಗಾಗಿಯೂ, ದಿಗ್ವಿಜಯ ಪ್ರಾಪ್ತಿ ಗಾಗಿಯೂ, ಐಶ್ವರ್ಯ, ಹೆಂಡತಿ ಮತ್ತು ಮಕ್ಕಳನ್ನುಪೇಕ್ಷಿಸಿ ಮಾಡುವ ದಾನಾದಿಗಳನ್ನು ಉದ್ದೇಶಪೂರ್ವಕವಾಗಿ ಮಾಡುವುದರಿಂದ ''ಕಾಮ್ಯದಾನ'' ಎಂದು ಹೇಳಲ್ಪಟ್ಟಿವೆ. ॥ ೨೦ ॥ ಹಬ್ಬ ಹರಿದಿನ, ಗ್ರಹಣಕಾಲ, ಪರ್ವಕಾಲ, ಪುಣ್ಯಕಾಲ ಹೀಗೆ ಅನೇಕ ಕಾಲಗಳಲ್ಲಿ ಮಾಡಬೇಕಾದ ದಾನಗಳು ''ಕಾಲಾಪೇಕ್ಷ''ಗಳಾಗಿಯೂ ಹವನ, ಹೋಮ, ಕಾಮ್ಯಕರ್ಮಗಳಲ್ಲಿ ಮಾಡುವ ದಾನಗಳು ''ಕ್ರಿಯಾಪೇಕ್ಷ''ಗಳಾಗಿಯೂ, ಮತ್ತೆ ಕೆಲವು ಐಶ್ವರ್ಯ, ಯಶಸ್ಸುಗಳನ್ನು ಬಯಸಿ ಮಾಡುವ ದಾನಗಳು ''ಅರ್ಥಾಪೇಕ್ಷ''ಯಾಗಿದೆ. ನೈಮಿತ್ತಿಕ ದಾನಗಳು ಮೂರು ವಿಧಗಳಾಗಿದ್ದು ಇವುಗಳನ್ನು ಹೋಮಸಹಿತವಾಗಿಯೂ ಅಥವಾ ಹೋಮರಹಿತವಾಗಿಯೂ ಮಾಡಬಹುದಾಗಿದೆ. ॥ ೨೧ ॥ ಈ ಒಂದೊಂದು ವಿಧ ದಾನಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಎಂದು ಮೂರು ಬಗೆಗಳಿವೆ. ಏಕೆಂದರೆ ಕೊಡಲ್ಪಡುವ ವಸ್ತುಗಳು ಉತ್ತಮ, ಮಧ್ಯಮ ಮತ್ತು ಅಧಮ ಎಂದು ಮೂರು ಬಗೆ ಆಗಿವೆ. ॥ ೨೨ ॥ ಅನ್ನ, ಮೊಸರು, ಜೇನುತುಪ್ಪ, ಗೋವು, ಭೂಮಿ, ಬಂಗಾರ, ಆನೆಗಳು ಇವುಗಳು ಉತ್ತಮ ಪದಾರ್ಥಗಳಾದುದರಿಂದ ಇವುಗಳ ದಾನಗಳು ದ್ರವ್ಯದಾನಕ್ಕಿಂತ ಉತ್ತಮ ದಾನಗಳೆಂದು ಪರಿಗಣಿಸಲ್ಪಟ್ಟಿವೆ. ॥ ೨೩ ॥ ವಿದ್ಯಾ, ವಾಸ ಮಾಡಲು ಯೋಗ್ಯವಾದ ಮನೆ, ಜೀವನಕ್ಕೆ ಉಪಯುಕ್ತವಾಗುವ ವಸ್ತುಗಳು, ಮತ್ತು ಔಷಧಿ ಪದಾರ್ಥಗಳ ದಾನಗಳು ಮಧ್ಯಮದಾನಗಳಾಗಿದ್ದು ದ್ರವ್ಯದಾನಗಳಿಗಿಂತ ಉತ್ತಮವಾಗಿದ್ದು ಮಧ್ಯಮದರ್ಜೆಯ ಫಲಗಳನ್ನು ಕೊಡತಕ್ಕವುಗಳು. ॥ ೨೪ ॥ ಪದಾರ್ಥಗಳು ಅನೇಕ ಇರುವುದರಿಂದ ಅವುಗಳ ಎಣಿಕೆಯೂ ಸಾಧ್ಯವಿಲ್ಲದ್ದರಿಂದ ಈ ಹಿಂದೆ ಉಲ್ಲೇಖವಾಗಿರುವ ಪದಾರ್ಥಗಳ ದೆಶೆಯಿಂದ ಬೇರೆ ಬೇರೆಯಾಗಿರುವ ಪದಾರ್ಥಗಳ ದಾನಗಳು ಅಧಮ ದಾನಗಳಾಗಿದ್ದು ದ್ರವ್ಯ ದಾನಕ್ಕಿಂತ ಕಡಿಮೆ ಫಲದಾಯಕವಾದುದು. ॥ ೨೫ ॥ ಸಾತ್ವಿಕ, ರಾಜಸ ಮತ್ತು ತಾಮಸ ಭಾವನೆಗಳಿಂದ ಬರುವ ಫಲಗಳು ಹೇಗೆ ಉತ್ತಮ, ಮಧ್ಯಮ ಮತ್ತು ನೀಚಗಳಾಗಿರುತ್ತವೆಯೋ, ಹಾಗೆಯೇ ಅವುಗಳ ದಾನದ ಫಲಾನುಭವಗಳೂ ಇರುತ್ತವೆ. ॥ ೨೬ ॥ ಸಾತ್ವಿಕ, ರಾಜಸ ಮತ್ತು ತಾಮಸ ಅನುಸಂಧಾನಗಳಿಂದ ಕೊಟ್ಟ ದಾನಗಳ ಫಲವಾಗಿ ದೈವತ್ವವನ್ನೂ, ಮನುಷ್ಯತ್ವವನ್ನೂ ಮತ್ತು ಮೃಗತ್ವವನ್ನೂ ದಾನಿಗಳು ಪಡೆಯುತ್ತಾರೆ. ॥ ೨೭ ॥ ಕೆಲವು ಸಂದರ್ಭದಲ್ಲಿ ಪ್ರಯತ್ನವಿಲ್ಲದೇ ಸತ್ಫಲಗಳು ದೊರಕಿದ್ದರೆ ಅದಕ್ಕೆ ಕಾರಣ ಆಯಾ ವ್ಯಕ್ತಿಗಳಿಂದ ತಮ್ಮ ತಮ್ಮ ಪೂರ್ವಜನ್ಮಗಳಲ್ಲಿ ಮಾಡಿದ ಸತ್ಕಾರ್ಯಗಳು ಮತ್ತು ಸಾತ್ವಿಕದಾನಗಳೆಂದು ತಿಳಿಯಬೇಕು.

ಹಾಗೆಯೇ ಕರ್ಮದಿಂದ ಲಬ್ಧವಾದ ಫಲವು ರಾಜಸವೆಂದೂ, ಕಷ್ಟಪಟ್ಟು ಕರ್ಮದಿಂದ ಲಬ್ಧವಾದ ಫಲವು ತಾಮಸವೆಂದೂ ತಿಳಿಯಬೇಕು. ॥ ೨೮ ॥ ಅತಿದಾನಗಳೆಂದು ಕರೆಯಲ್ಪಡುವ ದಾನಗಳು ಮೂರು ಬಗೆಯಾದುವು. ಮಹಾದಾನಗಳೆಂದು ಕರೆಯಲ್ಪಡುವುವು ಹದಿನಾರು ವಿಧ. ಇವುಗಳಲ್ಲದೆ ಚೇಷ್ಟಾದಾನ, ಪೂರ್ತಾದಾನ ಮತ್ತು ಇಷ್ಟಾಪೂರ್ತ ಮೊದಲಾದ (ಇಷ್ಟವೆಂದರೆ ಅಗ್ನಿಹೋತ್ರಾದಿಗಳು, ಪೂರ್ತವೆಂದರೆ ಅರವಟ್ಟಿಗೆ ಮೊದಲಾದವುಗಳು.) ಬೇರೆ ಬೇರೆ ಬಗೆಯ ಅನೇಕ ದಾನಗಳಿವೆ. ॥ ೨೯ ॥ ಭೂದಾನ, ಗೋದಾನ, ವಿದ್ಯಾದಾನ ಇವುಗಳು ಅತಿದಾನಗಳು. ಭೂಮಿಯಲ್ಲಿ ಬಿತ್ತನೆ ಮಾಡುವುದರಿಂದ, ಗೋವನ್ನು ಹಾಲು ಕರೆಯುವುದರಿಂದ, ವಿದ್ಯೆಯನ್ನು ಜಪ ಮಾಡುವುದರಿಂದ ಇವುಗಳು ದಾನಕರ್ತನನ್ನು ನರಕದಿಂದ ಉದ್ಧರಿಸುತ್ತವೆ. ॥ ೩೦ ॥ ಅಗ್ನಿಹೋತ್ರ (ಗೃಹಸ್ಥಾಶ್ರಮಿಗಳು ಮಾಡಬೇಕಾದ ಹೋಮಕಾರ್ಯ-ದೈನಂದಿನ ಕರ್ಮ), ತಪಸ್ಸು, (ನಾವು ಮಾಡುವ ವೇದಶಾಸ್ತ್ರಸಮ್ಮತವಾದ ಕಾರ್ಯಗಳೆಲ್ಲವೂ ತಪಸ್ಸು, ಸದಾಲೋಚನೆಯೂ ತಪಸ್ಸೇ) ಸತ್ಯ (ಗೋಬ್ರಾಹ್ಮಣರಿಗೆ ಹಿತವಾದ ವಚನ) ಅತಿಥಿಸತ್ಕಾರ ಮಾಡುವುದು ಮತ್ತು ವೈಶ್ವದೇವವೆಂಬ ಹೋಮಕಾರ್ಯದ ಆಚರಣೆ ಇವುಗಳು ಇಷ್ಟದಾನಗಳಾಗಿವೆ. ॥ ೩೧ ॥ ಬಾವಿಗಳನ್ನು ತೋಡಿಸುವುದು, ಕೆರೆಗಳ ನಿರ್ಮಾಣ ಮಾಡುವುದು, ಆಸ್ಪತ್ರೆಗಳನ್ನು ಸ್ಥಾಪಿಸಿ ರೋಗಿಗಳ ಸೇವಾವ್ಯವಸ್ಥೆಯನ್ನು ಮಾಡುವುದು, ದೇವಮಂದಿರಗಳನ್ನು ಕಟ್ಟಿಸುವುದು, ಅನ್ನದಾನ ಮಾಡುವುದು, ಉದ್ಯಾನವನ ನಿರ್ಮಾಣ ಇವುಗಳು ಪೂರ್ತದಾನಗಳು. ॥ ೩೨ ॥ ಹೋಮ, ದಾನ, ಜಪಗಳನ್ನು ಮಾಡಿದ್ದನ್ನು ಆತ್ಮಸ್ತುತಿರೂಪದಲ್ಲಿ ಪ್ರಕಾಶ ಪಡಿಸುವುದರಿಂದ ವಿಫಲವಾಗುವುದಾದ್ದರಿಂದ ತನ್ನಿಂದ ಮಾಡಲ್ಪಟ್ಟಿರುವ ಪುಣ್ಯಕಾರ್ಯಗಳ ಬಗ್ಗೆ ಕರ್ತೃವು ಪ್ರಕಾಶ ಮಾಡಬಾರದು. ॥ ೩೩ ॥ ಹೆಳವ, ಕುರುಡ, ಕಿವುಡ, ಮೂಕ ಮತ್ತು ರೋಗಿಷ್ಠರನ್ನು ಈ ದಾನಗಳಿಂದ ಪೋಷಣೆ ಮಾಡಬೇಕು. ಆದರೆ ಈ ಗುಂಪಿನವರಿಗೆ ಭೂಮಿ, ಆನೆ ಮುಂತಾದವು ಗಳನ್ನು ಕೊಡಬಾರದು. ಕಾರಣವೆಂದರೆ ಅವರು ಅವುಗಳನ್ನು ರಕ್ಷಿಸಲಾರರು. ॥ ೩೪ ॥ ದೀನರು, ಕುರುಡರು, ಮೂಕರು, ಕೃಪಣರು, ದಡ್ಡರು ಮತ್ತು ನೀಚರು ಇವರಿಗೆ ಬಟ್ಟೆ, ಅನ್ನ ಮತ್ತು ನೀರನ್ನು ದಾನವಾಗಿ ಕೊಡಬೇಕು. ॥ ೩೫ ॥ ಈ ವರ್ಗದವರಿಗೆ ಅನ್ನದಾನ ಮಾಡುವಾಗ ಪಾತ್ರಾಪಾತ್ರಗಳ ವಿಮರ್ಶೆಯನ್ನು ಮಾಡಬಾರದು. ಬೇರೆಯ ದಾನಗಳನ್ನು ಮಾಡುವಾಗ ಪಾತ್ರಾಪಾತ್ರದ ವಿಚಾರವನ್ನು ಮಾಡಬೇಕು. ॥ ೩೬ ॥ ಏಳುವಿಧವಾದ ಉಪಾಯಗಳಿಂದ ಸಂಪಾದಿಸಿರುವ ಹಣವೇ ದಾನಕ್ಕೆ ಯೋಗ್ಯವು. ಎಲ್ಲ ಕ್ರಿಯಾದಿಗಳಲ್ಲೂ ಹಣದ ಸಂಪಾದನೆಯ ಮೂಲವೇ ಆ ಕ್ರಿಯಾದಿಗಳ ಸಾಫಲ್ಯವನ್ನೂ ವೈಫಲ್ಯವನ್ನೂ ಸೂಚಿಸುವುದು. ॥ ೩೭ ॥ ಏಳು ರೀತಿಯಾಗಿ ಸಂಪಾದಿಸಿದ ದ್ರವ್ಯವು ಧರ್ಮದಿಂದ ಅರ್ಜಿಸಿದ್ದಾಗಿ ಹೇಳಲ್ಪಟ್ಟಿವೆ. ಅವುಗಳು ೧. ತಂದೆಯ ಆಸ್ತಿಯಿಂದ ಇಡಿಯಾಗಲೀ ಅಥವಾ ಭಾಗಭಾಗವಾಗಲೀ ಬಂದಿರುವ ಹಣ. ೨. ಬಂಡವಾಳವನ್ನು ಹಾಕಿ ಅದರಿಂದ ಬಂದ ಲಾಭದ ಹಣ. ೩. ತನ್ನ ಪದಾರ್ಥವನ್ನು ಮಾರಿದ್ದರಿಂದ ಬಂದ ಹಣ ೪. ರಾಜರು ಬೇರೆ ರಾಜರನ್ನು ಸೋಲಿಸಿ ಕಪ್ಪಕಾಣಿಕೆಯ ರೂಪದಲ್ಲಿಯೋ ದಂಡದ ರೀತಿಯಲ್ಲಿಯೋ ಗಳಿಸಿದ ಹಣ. ೫. ಲೇವಾದೇವಿ ಮುಂತಾದ ವ್ಯವಹಾರದಿಂದ ಅರ್ಜಿಸಿದ ಹಣ. ೬. ಯಾಜನಾದಿ ಕರ್ಮಗಳಿಂದ ಬಂದ ಹಣ. ೭. ಶಾಸ್ತ್ರೋಕ್ತರೀತಿಯಾಗಿ ಕೊಡಲ್ಪಟ್ಟ ದಾನದಿಂದ ಗಳಿಸಿದ ಹಣ. ॥ ೩೮ ॥ ನಮಗೆ ಲೋಕದಲ್ಲಿ ಯಾವು ಯಾವುದು ಇಷ್ಟವಾಗಿದೆಯೋ, ನಮ್ಮ ಮನೆಯಲ್ಲಿ ಇದಯೋ ಅದೇ ಅಕ್ಷಯವಾಗಬೇಕೆಂದು ಇಚ್ಛಿಸುವವನು

ಅದನ್ನೇ ಗುಣವಂತರಿಗೆ ದಾನ ಮಾಡಬೇಕು. ॥ ೩೯ ॥ ಪತ್ನಿಯೇ ಮೊದಲಾದ ತನ್ನ ಕುಟುಂಬಿಗಳ ವಿರೋಧವಿಲ್ಲದಂತೆ ದಾನ ಮಾಡಬೇಕು. ಮಾತು ಕೊಟ್ಟ ಹಾಗೂ ಮೇಲೆ ಅನ್ನದಾನವನ್ನು ಕುಟುಂಬದ ವಿರೋಧವಿದ್ದರೂ ಅದನ್ನು ಎದುರಿಸಿ ವಿಧಿವತ್ತಾಗಿ ದಾನಮಾಡಬೇಕು. ॥ ೪೦ ॥ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ಮೊದಲೇ ವಿಚಾರ ಮಾಡಿ ವಿಧಿವತ್ತಾಗಿ ದಾನವನ್ನು ಮಾಡಬೇಕು. ಹೀಗೆ ಮಾಡಲ್ಪಟ್ಟ ದಾನವು ಅಕ್ಷಯಫಲ ಕೊಡತಕ್ಕದ್ದಾಗಿ ತನ್ನ ಶ್ರೇಯಸ್ಸಿಗೆ ಕಾರಣವಾಗುತ್ತದೆ. ॥ ೪೧ ॥

॥ ಐವತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುಃಪಂಚಾಶತ್ತಮೋಽಧ್ಯಾಯಃ ॥ ೫೪ ॥

ಸೂತ ಉವಾಚ—

ಗೋಭೂತಿಲಹಿರಣ್ಯಾದಿ ದದ್ಯಾನ್ನಿತ್ಯಮತಂದ್ರಿತಃ ।
ಆರ್ತೇಭ್ಯೋಽನ್ನಂ ಪ್ರದಾತವ್ಯಂ ಗೋದಾನಂ ಚ ಕುಟುಂಬಿನೇ ॥ ೧ ॥
ಯಸ್ಯೋಪಯೋಗಿ ಯದ್ದ್ರವ್ಯಂ ತದೇವಾಸ್ಮೈ ನಿವೇದಯೇತ್ ।
ಉಪಯುಕ್ತಪ್ರದಾನೇನ ಫಲಂ ತಾತ್ಕಾಲಿಕಂ ವಿದುಃ ॥ ೨ ॥
ದಂಡಕೃಷ್ಣಾಜಿನಂ ಚೈವ ಕೌಪೀನಾಚ್ಛಾದನೇ ತಥಾ ।
ಮೇಖಲಾಂ ಕರಕಂ ಭಕ್ತ್ಯಾ ಪ್ರದದ್ಯಾದ್ಬ್ರಹ್ಮಚಾರಿಣೇ ॥ ೩ ॥
ವಸ್ತ್ರಂ ಶಯ್ಯಾಸನಂ ಧಾನ್ಯಮಗಾರಂ ಸಪರಿಚ್ಛದಮ್ ।
ದತ್ತಮೇತದ್ಗೃಹಸ್ಥಾಯ ಭವೇದ್ಬಹುಫಲಾನ್ವಿತಮ್ ॥ ೪ ॥
ನೀವಾರೋ ವಲ್ಕಲಂ ಶಾಕಂ ಫಲಂ ಮೂಲಂ ಚ ಗೋರಸಮ್ ।
ವಾನಪ್ರಸ್ಥಾಯ ದತ್ತಂ ತದನಂತಂ ಪರಿಕೀರ್ತಿತಮ್ ॥ ೫ ॥
ಭೈಕ್ಷ್ಯಂ ಜಲಂ ಜಲಾಧಾರಂ ಕಂಥಾಂ ಕೌಪೀನಮೇವ ಚ ।
ಕಟಿಸೂತ್ರಂ ತ್ರಿವೇಣುಂ ಚ ದದ್ಯಾನ್ಮಸ್ಕರಿಣೇ ಪರಮ್ ॥ ೬ ॥
ಗಂಧಮಾಂಗಲ್ಯತಾಂಬೂಲರಕ್ತವಸ್ತ್ರಾಂಜನಾದಿಕಮ್ ।
ಸಧವಾಭ್ಯೋ ಪ್ರದೇಯಂ ವಿಧವಾಭ್ಯೋ ವಸನಾಶನೇ ॥ ೭ ॥
ದೇವತಾನಾಂ ಗುರೂಣಾಂ ಚ ಮಾತಾಪಿತ್ರೋಸ್ತಥೈವ ಚ ।
ಪುಣ್ಯಂ ದೇಯಂ ಪ್ರಯತ್ನೇನ ನಾಪುಣ್ಯಂ ತಸ್ಯ ಕರ್ಹಿಚಿತ್ ॥ ೮ ॥
ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ ।
ದುರ್ಭಿಕ್ಷೇಽನ್ನಸ್ಯ ದಾತಾ ಚ ಸುಭಿಕ್ಷೇ ಹೇಮವಸ್ತ್ರದಃ ॥ ೯ ॥
ಅಪಹೃತ್ಯ ಪರಸ್ಯಾರ್ಥಂ ದಾನಂ ಯಸ್ತು ಪ್ರಯಚ್ಛತಿ ।
ಸ ದಾತಾ ನರಕಂ ಯಾತಿ ಯಸ್ಯಾರ್ಥಸ್ತಸ್ಯ ತತ್ಫಲಮ್ ॥ ೧೦ ॥
ವೇದವಿಕ್ರಯಸಂಪ್ರಾಪ್ತಂ ಸ್ತ್ರೀಭಿರ್ಯಚ್ಚಾರ್ಜಿತಂ ಧನಮ್ ।
ಅದೇಯಂ ಪಿತೃದೇವೇಭ್ಯೋ ಯಚ್ಚ ಕ್ಲೀಬಾದುಪಾಗತಮ್ ॥ ೧೧ ॥
ಬಹುಭ್ಯೋ ನ ಪ್ರದೇಯಾನಿ ಗೌರ್ಗೃಹಂ ಶಯನಂ ಸುತಾಃ ।
ವಿಭಕ್ತದಕ್ಷಿಣಾ ಗಾವಸ್ತಾಸು ದೋಷೋ ನ ವಿದ್ಯತೇ ॥ ೧೨ ॥
ವಿವತ್ಸಾಂ ರೋಗಿಣೀಂ ರುಕ್ಷಾಂ ಸ್ಥವಿರಾಂ ಶೃಂಗಭೀಷಣಾಮ್ ।
ಕ್ಷೀಣಕ್ಷೀರಶರೀರಾಂಗಾಂ ದತ್ವಾ ದೋಷಮವಾಪ್ನುಯಾತ್ ॥ ೧೩ ॥
ನ ಚೋರಾಂ ನ ಚ ನಿರ್ದಗ್ಧಾಂ ಮಹೀಂ ದದ್ಯಾತ್ಕಥಂಚನ ।
ನ ಶ್ಮಶಾನಪರೀತಾಂ ಚ ನ ಚ ವ್ಯಾಘ್ರಾದಿಸೇವಿತಾಮ್ ॥ ೧೪ ॥

ದುಃಖಂ ದದಾತಿ ಯೋಽನ್ಯಸ್ಯ ಧ್ರುವಂ ದುಃಖಂ ಸ ವಿಂದತಿ ।
ತಸ್ಮಾನ್ನ ಕಸ್ಯಚಿದ್ದುಃಖಂ ದಾತವ್ಯಂ ದುಃಖಭೀರುಣಾ ॥ ೧೫ ॥
ಯತಯೇ ಕಾಂಚನಂ ದತ್ವಾ ತಾಂಬೂಲಂ ಬ್ರಹ್ಮಚಾರಿಣೇ ।
ಚೋರಾಣಾಮಭಯಂ ದತ್ವಾ ದಾತಾಪಿ ನರಕಂ ವ್ರಜೇತ್ ॥ ೧೬ ॥
ಮುನ್ಯನ್ನಂ ನ ಗೃಹಸ್ಥಸ್ಯ ವಾನಪ್ರಸ್ಥಸ್ಯ ಗೋರಸಂ ।
ವೃತ್ತಿಂ ಚ ಭಿಕ್ಷುವೃತ್ತಿಭ್ಯೋ ನ ದೇಯಂ ಪುಣ್ಯಮಿಚ್ಛತಾ ॥ ೧೭ ॥
ಭುವಂ ಧೇನುಮಥಾಶ್ವಂ ಚ ರತ್ನಾನಿ ಕನಕಂ ತಥಾ ।
ತಿಲಾಂಶ್ಚ ಕುಂಜರಂ ದದ್ಯಾನ್ನಾವಿಜ್ಞಾಯ ಗುಣಾಗುಣಾನ್ ॥ ೧೮ ॥
ಕುಟುಂಬಾರ್ಥಂ ಹಿ ಸಚ್ಛೂದ್ರಾತ್ಪ್ರತಿಗೃಹ್ಣಾಮ್ಯಯಾಚಿತಮ್ ।
ವೃತ್ತ್ಯರ್ಥಮಾತ್ಮನೇ ನೈವ ನ ಹಿ ಯಾಚೇತ ಕರ್ಹಿಚಿತ್ ॥ ೧೯ ॥
ನಿತ್ಯಮಾಚರಿತುಂ ಶಕ್ಯಾ ಪಂಚಯಜ್ಞಾಸ್ತು ಯಾವತಾ ।
ತಾವಂತಮೇವ ಗೃಹ್ಣೀಯಾತ್ಪ್ರತಿಗ್ರಹಮತಂದ್ರಿತಃ ॥ ೨೦ ॥
ಋಣಾಯಾಕರಣಾರ್ಥಂ ಹಿ ಪ್ರತಿಗ್ರಾಹ್ಯಂ ದ್ವಿಜೋತ್ತಮೈಃ ।
ಚಿಕೀರ್ಷಯಾ ತು ಯಜ್ಞಸ್ಯ ಮಾತಾಪಿತ್ರರ್ಥಮೇವ ಚ ॥ ೨೧ ॥
ಆತಿಥ್ಯಾರ್ಥಂ ಚ ಭೃತ್ಯಾರ್ಥಂ ಗುರ್ವರ್ಥಂ ಸ್ವಾರ್ಥಮೇವ ಚ ।
ಶೂದ್ರಾನ್ನಂ ಪ್ರತಿಗೃಹ್ಣೀಯಾನ್ನ ತು ಭೋಜ್ಯಂ ಸ್ವಯಂ ತತಃ ॥ ೨೨ ॥
ಖಲಕ್ಷೇತ್ರಗತಂ ಧಾನ್ಯಂ ವಾಪೀಕೂಪಗತಂ ಜಲಮ್ ।
ಕೃಚ್ಛ್ರೇ ದತ್ತಮಪಿ ಗ್ರಾಹ್ಯಂ ಯಚ್ಚ ಗೋಷ್ಠಗತಂ ಪಯಃ ॥ ೨೩ ॥
ಗ್ರಾಹ್ಯಂ ಪ್ರಾಣಪ್ರದಾನಂ ಚ ಚಂಡಾಲಾತ್ಪುಲ್ಕಸಾದಪಿ ।
ಜೀವನ್ಸರ್ವಮವಾಪ್ನೋತಿ ಜೀವನ್ಧರ್ಮಂ ಕರೋತಿ ಚ ॥ ೨೪ ॥
ಶರೀರಂ ಧರ್ಮಸರ್ವಸ್ವಂ ರಕ್ಷಣೀಯಂ ಪ್ರಯತ್ನತಃ ।
ಕಥಂ ಭವೇನ್ಮುನಿಶ್ರೇಷ್ಠಾ ಧರ್ಮೋ ಮೋಕ್ಷಶ್ಚ ತದ್ವಿನಾ ॥ ೨೫ ॥
ಏಕಾದಶ್ಯಪ್ಯಮಾವಾಸ್ಯಾ ಪೂರ್ಣಿಮಾ ಪುತ್ರಜನ್ಮ ಚ ।
ದ್ವಾದಶೀ ಚ ವ್ಯತೀಪಾತೋ ಗ್ರಹಣಂ ಚಂದ್ರಸೂರ್ಯಯೋಃ ॥ ೨೬ ॥
ಮನ್ವಾದಯೋ ಯುಗಾದ್ಯಾಶ್ಚ ಸಂಕ್ರಾಂತಿರ್ವೈಧೃತಿಸ್ತಥಾ ।
ಅಲಭ್ಯಯೋಗಲಾಭಶ್ಚ ತೀರ್ಥಪ್ರಾಪ್ತಿರ್ವಿಶೇಷತಃ ॥ ೨೭ ॥
ಇತ್ಯಾದಿಪುಣ್ಯಕಾಲಾಸ್ತು ದಾನಯೋಗ್ಯಾಃ ಪ್ರಕೀರ್ತಿತಾಃ ।
ಏಷು ದಾನಾನಿ ದೇಯಾನಿ ವಿಶೇಷಫಲವೃದ್ಧಯೇ ॥ ೨೮ ॥
ರಾತ್ರೌ ದಾನಂ ನ ಕರ್ತವ್ಯಂ ಕದಾಚಿದಪಿ ಕೇನಚಿತ್ ।
ನಿಶೀಥೇ ತು ವಿಶೇಷೇಣ ನ ಶುಭಂ ಕರಣೇಷು ಚ ॥ ೨೯ ॥

ಗ್ರಹಣೇ ಸೂರ್ಯಸಂಕ್ರಾಂತೌ ವಿವಾಹಾತ್ಯಯವೃದ್ಧಿಷು ।
ಸ್ನಾನದಾನಾದಿಕಂ ಕುರ್ಯಾನ್ನಿಶಿ ಕಾಮ್ಯವ್ರತೇಷು ಚ ॥ ೩೦ ॥
ದಾನಂ ಚೋಭಯಮುಖ್ಯಾಶ್ಚ ತಥಾ ಚಾತಿಥಿಪೂಜನಮ್ ।
ಗೋಪೂಜಾಂ ಜಾಹ್ನವೀಸ್ನಾನಂ ಕುರ್ಯಾನ್ನಿಶ್ಯಪಿ ಭಕ್ತಿಮಾನ್ ॥ ೩೧ ॥
ಗಂಗಾದ್ವಾರೇ ಪ್ರಯಾಗೇ ಚ ವಾರಾಣಸ್ಯಾಂ ಚ ಪುಷ್ಕರೇ ।
ಕುರುಕ್ಷೇತ್ರೇ ಗಯಾಯಾಂ ಚ ತೀರ್ಥೇ ಚಾಮರಕಂಟಕೇ ॥ ೩೨ ॥
ನೈಮಿಷೇಽವಂತಿಕಾಯಾಂ ಚ ವಿಂಧ್ಯಪಾದೇ ಪೃಥೂದಕೇ ।
ಏವಮಾದಿಷು ದೇಶೇಷು ದತ್ತಮಕ್ಷಯ್ಯತಾಮಿಯಾತ್ ॥ ೩೩ ॥
ಸರ್ವತೀರ್ಥಮಯೀ ಗಂಗಾ ಯತ್ರ ಪ್ರಾಚೀ ಸರಸ್ವತೀ ।
ಅಥವಾ ಯಮುನಾತೀರೇ ದತ್ತಂ ಕೋಟಿಗುಣಂ ಭವೇತ್ ॥ ೩೪ ॥
ಅಗ್ನಿಹೋತ್ರಗೃಹೇ ಗೋಷ್ಠೇ ಶಿವಾದ್ಯಾಯತನೇಷು ಚ ।
ಅನಂತಫಲದಂ ದಾನಂ ದೇವಬ್ರಾಹ್ಮಣಸನ್ನಿಧೌ ॥ ೩೫ ॥
ಪ್ರಯಾಗೇ ವಟಸಾಮೀಪ್ಯೇ ವೇಣೀಮಾಧವಸನ್ನಿಧೌ ।
ಮಾಘೇ ದತ್ತಂ ವಿಶೇಷೇಣ ವರ್ಧತೇ ವಟಬೀಜವತ್ ॥ ೩೬ ॥
ಅತ ಏವಾತ್ರ ದೇವಾದ್ಯಾ ಸ್ವಪದಚ್ಯುತಿಭೀರವಃ ।
ವಿಘ್ನಯಂತಿ ಚ ದಾನಾನಿ ದುರ್ವೃತ್ತದ್ವಿಜರೂಪತಃ ॥ ೩೭ ॥
ಮಾಧವಸ್ಯ ಕೃಪಾದೃಷ್ಟಿರ್ಯಸ್ಯೋಪರಿ ಭವೇದ್ದೃಢಾ ।
ತಸ್ಯೈವ ಘಟತೇ ದಾನಂ ನಾನ್ಯಥಾರ್ಥಸ್ಯ ರಾಶಿಭಿಃ ॥ ೩೮ ॥
ಅತೋಽತ್ರ ಯೇ ಪ್ರಕುರ್ವಂತಿ ದಾನಾದಿಕಮತಂದ್ರಿತಾಃ ।
ವಿಜ್ಞೇಯಾ ನಿಯತಂ ತೇ ವೈ ವೇಣೀಮಾಧವವಲ್ಲಭಾಃ ॥ ೩೯ ॥

॥ ಇತಿ ಚತುಃಪಂಚಾಶತ್ತಮೋಽಧ್ಯಾಯಃ ॥

## ॥ ಐವತ್ತನಾಲ್ಕನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಆಕಳು, ಭೂಮಿ, ಎಳ್ಳು ಮತ್ತು ಬಂಗಾರ ಇವುಗಳನ್ನು ನಿತ್ಯವೂ ಆಲಸ್ಯವಿಲ್ಲದೆ ದಾನ ಮಾಡಬೇಕು. ಕಷ್ಟದಲ್ಲಿದ್ದವರಿಗೆ ಅನ್ನವನ್ನು, ಸಂಸಾರಸ್ಥನಾದ ಗೃಹಸ್ಥನಿಗೆ ಆಕಳ ದಾನವನ್ನು ಕೊಡಬೇಕು. ॥ ೧ ॥ ಯಾರಿಗೆ ಯಾವ ಪದಾರ್ಥವು ಉಪಯೋಗಕ್ಕೆ ಬರುವುದೋ ಅದೇ ಪದಾರ್ಥವನ್ನು ಅವರವರಿಗೆ ದಾನ ಮಾಡಿದರೆ ಅದು ಆಗಲೇ ಫಲವನ್ನು ಕೊಡತಕ್ಕದ್ದಾಗುವುದು. ॥ ೨ ॥ ಬ್ರಹ್ಮಚಾರಿಗೆ ಉಡಿದಾರ, ದಂಡ, ಕೃಷ್ಣಮೃಗದ ಚರ್ಮ, ಕೌಪೀನ, ಹೊದ್ದುಕೊಳ್ಳುವ ವಸ್ತ್ರ ಮತ್ತು ಕಮಂಡಲವನ್ನು ಭಕ್ತಿಯಿಂದ ಕೊಡಬೇಕು. ॥ ೩ ॥ ಬಟ್ಟೆ, ಹಾಸಿಗೆ, ಆಸನ, ಧಾನ್ಯ, ಮನೆ, ಹೊದ್ದುಕೊಳ್ಳುವ ವಸ್ತ್ರ ಮತ್ತು ಉಡುವ ವಸ್ತ್ರ ಇವುಗಳನ್ನು ಗೃಹಸ್ಥನಿಗೆ ದಾನ ಮಾಡಿದರೆ ಬಹಳ ಫಲವು

ಬರುತ್ತದೆ. ॥ ೪ ॥ ಉತ್ತರಾಣಿಯಅಕ್ಕಿ, ನಾರು ಮಡಿ, ಕಾಯಿಪಲ್ಯಗಳು, ಗೆಡ್ಡೆಗೆಣಸು, ಮತ್ತು ಹಣ್ಣುಗಳು, ಹಾಲು, ಮೊಸರು, ತುಪ್ಪ ಮತ್ತು ಬೆಣ್ಣೆ ಇವುಗಳನ್ನು ವಾನಪ್ರಸ್ಥಾಶ್ರಮಿಗೆ ಕೊಟ್ಟರೆ ಎಣಿಸಲಾರದಷ್ಟು ಫಲವು ಬರುವುದು. ॥ ೫ ॥ ಭಿಕ್ಷಾನ್ನವನ್ನು, ಹರಕು ಬಟ್ಟೆಗಳನ್ನು, ನೀರನ್ನು, ನೀರಿನ ಪಾತ್ರೆಗಳನ್ನು, ಕೌಪೀನವನ್ನು, ಉಡಿದಾರವನ್ನು, ದಂಡವನ್ನು ಸನ್ಯಾಸಿಗೆ ದಾನ ಮಾಡಬೇಕು. ॥ ೬ ॥ ಗಂಧ, ಮಾಂಗಲ್ಯ, ತಾಂಬೂಲ, ಕೆಂಪುವಸ್ತ್ರಗಳು, ಕಾಡಿಗೆ, ಇವುಗಳನ್ನು ಮುತ್ತೈದೆಯರಿಗೆ ಕೊಡಬೇಕು. ಗಂಡನಿಲ್ಲದ ಹೆಂಗಸಿಗೆ ಬಟ್ಟೆಯನ್ನೂ ಊಟವನ್ನೂ ಕೊಡಬೇಕು. ॥ ೭ ॥ ದೇವತೆಗಳಿಗೂ, ಗುರುಗಳಿಗೂ, ತಾಯಿತಂದೆಯವರಿಗೂ ಪ್ರಯತ್ನಪಟ್ಟು ಸಂಪಾದನೆ ಮಾಡಿ ಪುಣ್ಯವನ್ನು ಧಾರೆಯೆರೆಯಬೇಕು. ಪಾಪವನ್ನು ಅವರುಗಳಿಗೆ ಎಂದಿಗೂ ಕೊಡಬಾರದು. ॥ ೮ ॥ ಕ್ಷಾಮಕಾಲದಲ್ಲಿ ಅನ್ನದಾನ ಮಾಡುವವನೂ ಮತ್ತು ಸುಭಿಕ್ಷದಲ್ಲಿ ಬಂಗಾರ ಮತ್ತು ವಸ್ತ್ರಗಳನ್ನು ದಾನ ಮಾಡುವವನೂ ಸೂರ್ಯಮಂಡಲವನ್ನು ಭೇದಿಸಿ ವೈಕುಂಠಾದಿಲೋಕಗಳಿಗೆ ಪ್ರಯಾಣ ಮಾಡುವನು. ॥ ೯ ॥ ಬೇರೆಯವರ ಪದಾರ್ಥವನ್ನು ಅಪಹಾರ ಮಾಡಿ ಅದನ್ನೇ ದಾನ ಮಾಡುವವನು ನರಕಕ್ಕೆ ಹೋಗುವನು ಮತ್ತು ಅವನು ಅಪಹರಿಸಿದ ವಸ್ತುವು ಯಾರದ್ದೋ ಅವರಿಗೆ ಆ ದಾನದ ಫಲವು ದೊರಕುವುದು. ॥ ೧೦ ॥ ವೇದಶಾಸ್ತ್ರಗಳನ್ನು ಹಣಕ್ಕಾಗಿ ಮಾರಿದ ದ್ರವ್ಯವನ್ನು, ಸ್ತ್ರೀಯರಿಂದ ಸಂಪಾದಿಸಿದ ಹಣವನ್ನು ಮತ್ತು ನಪುಂಸಕರಿಂದ ಪಡೆದ ಹಣವನ್ನು ದೇವತೆಗಳಿಗೂ ಮತ್ತು ಪಿತೃಗಳಿಗೂ ದಾನ ಮಾಡಬಾರದು. ॥ ೧೧ ॥ ಒಂದೇ ಆಕಳನ್ನು, ಮನೆಯನ್ನು, ಹಾಸಿಗೆಯನ್ನು ಮತ್ತು ಹೆಣ್ಣುಮಕ್ಕಳನ್ನು ಅನೇಕರಿಗೆ ಕೊಡಬಾರದು. ಬೇರೆ ಬೇರೆ ದಕ್ಷಿಣೆ ಸಮೇತ ಆಕಳುಗಳನ್ನು ಬೇರೆ ಬೇರೆಯವರಿಗೆ ದಾನ ಮಾಡಬೇಕು. ಹಾಗೆ ಮಾಡುವುದರಲ್ಲಿ ದೋಷವಿಲ್ಲ. ॥ ೧೨ ॥ ಕರುವಿಲ್ಲದ, ದೋಷಗ್ರಸ್ತವಾದ, ಬಡಕಲಾಗಿರುವ, ಮುದಿಯಾಗಿರುವ, ಭಯಂಕರ ಕೊಂಬುಗಳುಳ್ಳ ಮತ್ತು ಕ್ಷೀಣಸುತ್ತಿರುವ ಹಾಲುಳ್ಳ ಮತ್ತು ಕ್ಷೀಣಸುತ್ತಿರುವ ದೇಹವುಳ್ಳ ಆಕಳನ್ನು ದಾನ ಮಾಡಿದರೆ ಪಾಪ ಬರುವುದು. ॥ ೧೩ ॥ ಬಂಜರು ಭೂಮಿಯನ್ನು, ಬೆಂಕಿಯಲ್ಲಿ ಬೆಂದು ಹೋಗಿರತಕ್ಕ ಭೂಮಿಯನ್ನು, ಸ್ಮಶಾನದ ಸುತ್ತಲೂ ಇರತಕ್ಕ ಭೂಮಿಯನ್ನು, ಹುಲಿಸಿಂಹಾದಿಗಳ ಸಮೀಪದಲ್ಲಿರುವ ಭೂಮಿಯನ್ನು ದಾನ ಮಾಡಬಾರದು. ॥ ೧೪ ॥ ಯಾರು ಬೇರೆಯವರಿಗೆ ದುಃಖವನ್ನುಂಟುಮಾಡುವರೋ ಅವರು ಖಂಡಿತವಾಗಿಯೂ ದುಃಖವನ್ನು ಹೊಂದುವರು. ಆದ್ದರಿಂದ ದುಃಖ ಹೊಂದಲು ಹೆದರುವವರು ಯಾರಿಗೂ ದುಃಖವನ್ನುಂಟುಮಾಡಬಾರದು. ॥ ೧೫ ॥ ಯಾರು ಸನ್ಯಾಸಿಗಳಿಗೆ ಬಂಗಾರವನ್ನು, ಬ್ರಹ್ಮಚಾರಿಗಳಿಗೆ ತಾಂಬೂಲವನ್ನು ಮತ್ತು ಕಳ್ಳರಿಗೆ ಅಭಯವನ್ನು ಕೊಡುವರೋ ಅವರು ನರಕಕ್ಕೆ ಹೋಗುವರು. ॥ ೧೬ ॥ ಗೃಹಸ್ಥಾಶ್ರಮಿಗಳಿಗೆ ಸನ್ಯಾಸಿಗಳ ಅನ್ನವನ್ನು ಕೊಡಬಾರದು ಮತ್ತು ವಾನಪ್ರಸ್ಥಾಶ್ರಮಿಗಳ ಹಾಲು, ಮೊಸರು ಮುಂತಾದವುಗಳನ್ನು ಕೊಡಬಾರದು, ಭಿಕ್ಷಾವೃತ್ತಿಯಲ್ಲಿರುವವರಿಗೆ ಭೂಮಿ, ಹೈನು, ಮನೆಗಳು ಮುಂತಾದವುಗಳನ್ನೂ ಕೊಡಬಾರದು. ಪುಣ್ಯವನ್ನು ಬಯಸುವವರು ಈ ಬಗ್ಗೆ ಗಮನ ಕೊಡಬೇಕು. ॥ ೧೭ ॥ ದಾನವನ್ನು ಸ್ವೀಕರಿಸುವವನ ಗುಣವನ್ನು ತಿಳಿದು ವಿಚಾರಮಾಡದೆ, ಭೂಮಿ, ಹಸು, ಕುದುರೆ, ರತ್ನಖಚಿತವಾದ ಆಭರಣಗಳು, ಬಂಗಾರ, ಎಳ್ಳು ಮತ್ತು ಆನೆ ಇವುಗಳನ್ನು ದಾನ ಮಾಡಬಾರದು. ॥ ೧೮ ॥ ತನ್ನ ಕುಟುಂಬದ ರಕ್ಷಣೆಗಾಗಿ ಒಳ್ಳೆಯ ಶೂದ್ರನಿಂದ ಬೇಕಾದ್ದನ್ನು ಬೇಡಿ ಸ್ವೀಕರಿಸಬಹುದು. ತನ್ನ ವೃತ್ತಿಗಾಗಲೀ ಅಥವಾ ತನಗಾಗಲೀ ಯಾರನ್ನೂ ಯಾಚಿಸಬಾರದು. ॥ ೧೯ ॥ ತನ್ನ ಶಕ್ತ್ಯಾನುಸಾರ ನಿತ್ಯವೂ ಆಚರಿಸಲ್ಪಡತಕ್ಕ ಪಂಚಯಜ್ಞಗಳಿಗೆ ಎಷ್ಟು ಆವಶ್ಯಕಗಳೋ

ಅಷ್ಟೇ ಪ್ರತಿಗ್ರಹಗಳನ್ನು ಆಲಸ್ಯವಿಲ್ಲದೆ ಸ್ವೀಕರಿಸಬಹುದು. ॥೨೦॥ ಋಣವನ್ನು ತೀರಿಸುವುದಕ್ಕಾಗಿ ಬ್ರಾಹ್ಮಣಶ್ರೇಷ್ಠರುಗಳಿಂದ ಹಣವನ್ನು ಸ್ವೀಕರಿಸಬಹುದು. ಇದು ಶಾಸ್ತ್ರಸಮ್ಮತವಾದುದು. ಯಜ್ಞಮಾಡುವ ಸಲುವಾಗಿಯೂ ಮತ್ತು ತಾಯಿತಂದೆಯವರಿಗಾಗಿಯೂ, ಅತಿಥಿಸತ್ಕಾರಕ್ಕಾಗಿಯೂ, ಭೃತ್ಯರನ್ನು ಕಾಪಾಡುವುದಕ್ಕಾಗಿಯೂ, ಗುರುಗಳಿಗಾಗಿಯೂ ಮತ್ತು ಹೆಂಡತಿಗಾಗಿಯೂ ಶೂದ್ರರ ಅನ್ನ ಸ್ವೀಕರಿಸಬಹುದು. (ಶೂದ್ರರಿಂದ ಪಡೆದ ಹಣದಿಂದ ಅಡಿಗೆ ಮಾಡಲು ಬೇಕಾದ ಸಾಮಗ್ರಿಗಳನ್ನು ತಂದು ಅವುಗಳನ್ನು ಬೇಯಿಸಿ ಭೋಜನಾದಿಗಳನ್ನು ಮಾಡಿಸಬಹುದು, ಆದರೆ ತಾನು ಮಾತ್ರ ಅಂತಹ ಅನ್ನವನ್ನು ತಿನ್ನಬಾರದು.) ॥ ೨೧-೨೨ ॥ ಕಣದಲ್ಲಿರುವ ಧಾನ್ಯವನ್ನು, ಕೊಳ ಅಥವಾ ಭಾವಿಯಲ್ಲಿರುವ ಜಲವನ್ನಾಗಲೀ, ತಾನೇ ಕೊಟ್ಟಿದ್ದನ್ನಾಗಲೀ, ಕೊಟ್ಟಿಗೆಯಲ್ಲಿರುವ ಹಾಲನ್ನಾಗಲೀ ಕಷ್ಟದ ಪರಿಸ್ಥಿತಿಯಲ್ಲಿ ಸ್ವೀಕರಿಸಬಹುದು. ॥ ೨೩ ॥ ಚಂಡಾಲನಿಂದಾಗಲೀ ಅಥವಾ ಪುಲ್ಕಸನಿಂದಾಗಲಿ ಪ್ರಾಣರಕ್ಷಣೆಯನ್ನು ಸ್ವೀಕಾರ ಮಾಡಬಹುದು; ಏಕೆಂದರೆ ಬದುಕಿದ್ದರೇನೇ ಸರ್ವಧರ್ಮಗಳನ್ನು ಕಾಪಾಡಬಹುದು ಮತ್ತು ಎಲ್ಲ ಪುರುಷಾರ್ಥಗಳನ್ನು ಪಡೆಯಬಹುದು. ॥ ೨೪ ॥ ಶರೀರವೇ ಸರ್ವಧರ್ಮಾಚರಣೆಗೆ ಮೂಲವಾಗಿರುವುದರಿಂದ ಅದನ್ನು ಹೇಗಾದರೂ ರಕ್ಷಣೆ ಮಾಡಲೇಬೇಕು. ಹೇ ಶೌನಕಾದಿ ಮುನಿಶ್ರೇಷ್ಠರೇ! ಅಂತಹದನ್ನು ಬಿಟ್ಟು ಹೇಗೆ ತಾನೇ ಧರ್ಮಸಾಧನೆಯಾಗಲಿ, ಮೋಕ್ಷಸಾಧನೆಯಾಗಲಿ ಆಗುವುದು. ॥ ೨೫ ॥ ಏಕಾದಶೀ, ಅಮಾವಾಸ್ಯೆ, ಪೂರ್ಣಿಮಾ, ಪುತ್ರೋತ್ಸವವಾದ ದಿನ, ದ್ವಾದಶೀ, ವ್ಯತೀಪಾತ, ಸೂರ್ಯ, ಚಂದ್ರಗ್ರಹಣದ ಕಾಲ, ಮನ್ವಾದಿಗಳು, ಯುಗಾದಿ, ಸಂಕ್ರಾಂತಿ, ವೈಧೃತಿಯೋಗ, ಅಲಭ್ಯವಾದ ಯೋಗವು ಲಭ್ಯವಾಗುವ ದಿನ, ತೀರ್ಥಗಳನ್ನು ಹೊಂದಿದ ದಿನ, ಮುಂತಾದ ಪುಣ್ಯಕಾಲಗಳು ದಾನಾದಿಗಳಿಗೆ ಯೋಗ್ಯವಾದುವುಗಳೆಂದು ಹೇಳಲ್ಪಟ್ಟಿವೆ, ಇವುಗಳಲ್ಲಿ ಮಾಡತಕ್ಕ ದಾನಾದಿಗಳು ವಿಶೇಷವಾಗಿ ಫಲಗಳನ್ನು ಕೊಟ್ಟು ವೃದ್ಧಿಯಾಗುವುವು. ॥ ೨೬-೨೮ ॥ ಯಾರಿಂದಲೂ ಯಾವಾಗಲೂ ರಾತ್ರಿಯ ವೇಳೆಯಲ್ಲಿ ದಾನವನ್ನು ಮಾಡಬಾರದು, ಅರ್ಧರಾತ್ರಿಯಲ್ಲಂತೂ ಶುಭಕಾರ್ಯವನ್ನು ಮಾಡಲೇಬಾರದು. ॥೨೯॥ ಸೂಯಚಂದ್ರಗ್ರಹಣಗಳಲ್ಲಿ, ಸೂರ್ಯನ ಸಂಕ್ರಾಂತಿಯ ಕಾಲದಲ್ಲಿ, ವಿವಾಹ, ಮರಣ ಮತ್ತು ಜನನದ ಕಾಲದಲ್ಲಿ ರಾತ್ರಿಯಾದರೂ ಸರಿ, ಸ್ನಾನ ದಾನಾದಿಗಳನ್ನು ಮಾಡಬೇಕು. ಫಲಾಪೇಕ್ಷೆಯಿಂದ ಮಾಡಲ್ಪಡುವ ಕಾಮ್ಯವ್ರತಗಳಲ್ಲಿ ರಾತ್ರಿಯಲ್ಲೂ ಸ್ನಾನದಾನಾದಿಗಳನ್ನು ಮಾಡಬೇಕು. ॥ ೩೦ ॥ ದ್ವಿಮುಖಿ ಗೋವಿನ ದಾನ (ದ್ವಿಮುಖಿ ಗೋವೆಂದರೆ ಪ್ರಸವಿಸುತ್ತಿರುವ ಗೋವು) ಅತಿಥಿಸತ್ಕಾರ, ಗೋಪೂಜಾ ಮತ್ತು ಗಂಗಾಸ್ನಾನ ಇವುಗಳನ್ನು ಹಗಲಿನಲ್ಲಲ್ಲದೆ ರಾತ್ರಿಯಲ್ಲೂ ಭಕ್ತಿಯಿಂದ ಮಾಡಬೇಕು. ॥ ೩೧ ॥ ಗಂಗಾದ್ವಾರ, ಪ್ರಯಾಗ, ವಾರಾಣಸೀ, ಪುಷ್ಕರ, ಕುರುಕ್ಷೇತ್ರ, ಗಯಾ, ಅಮರಕಂಟಕ, ನೈಮಿಷ, ಅವಂತಿಕಾ, ವಿಂಧ್ಯಾಚಲ ಮತ್ತು ಪೃಥೂದಕ ಇವೇ ಮೊದಲಾದ ಕ್ಷೇತ್ರಗಳಲ್ಲಿ ಮಾಡಿದ ದಾನಾದಿಗಳು ಶಾಶ್ವತವಾದ ಫಲಗಳನ್ನು ಕೊಡುವುವು. ॥ ೩೨-೩೩ ॥ ಎಲ್ಲಿ ಪೂರ್ವಗಾಮಿನಿಯಾದ ಸರಸ್ವತಿನದಿಯು ಹರಿಯುವುದೋ, ಎಲ್ಲಿ ತೀರ್ಥಗಳಲ್ಲಿ ಸಾರವತ್ತಾಗಿರುವ ಗಂಗೆಯು ಇರುವುದೋ ಅಥವಾ ಯಮುನೆಯ ತೀರವಿರುವುದೋ ಅಲ್ಲಿ ಮಾಡಿದ ದಾನಗಳು ಕೋಟಿಗುಣಗಳಿಂದ ವೃದ್ಧಿಯಾಗುವುವು. ॥ ೩೪ ॥ ಅಗ್ನಿಹೋತ್ರ ನಡೆಯುವ ಮನೆಯಲ್ಲಿ, ಸಜ್ಜನರಿರುವ ಸಮೂಹದಲ್ಲಿ, ಶಿವಮಂದಿರಗಳಲ್ಲಿ ಮತ್ತು ದೇವಬ್ರಾಹ್ಮಣರ ಸನ್ನಿಧಾನದಲ್ಲಿ ಮಾಡಿದ ದಾನವು ಕೊನೆಯಿಲ್ಲದಂತೆ ಬೆಳೆಯುತ್ತದೆ. ॥ ೩೫ ॥

ಪ್ರಯಾಗ ಕ್ಷೇತ್ರದಲ್ಲಿಯೂ, ಅಕ್ಷಯವಟವೃಕ್ಷದ ಸಮೀಪದಲ್ಲಿಯೂ ಮತ್ತು ಶ್ರೀವೇಣೀಮಾಧವನ ಸನ್ನಿಧಾನದಲ್ಲಿಯೂ ಮಾಡಿದ ದಾನಾದಿಗಳ ಪುಣ್ಯವು ಆಲದ ಹಣ್ಣಿನ ಬೀಜದಂತೆ ವಿಶೇಷವಾಗಿ ವರ್ಧಿಸುತ್ತದೆ. ॥ ೩೬ ॥ ಆದ್ದರಿಂದಲೇ ತಮ್ಮ ಪದವಿಯ ಚ್ಯುತಿಯ ಭಯದಿಂದಲೇ ದೇವತೆಗಳು ಕೆಟ್ಟ ಬ್ರಾಹ್ಮಣರುಗಳ ವೇಷದಲ್ಲಿ ಬಂದು ಸಜ್ಜನರ ಮನಸ್ಸನ್ನು ಕೆಡಿಸಿ ದಾನಾದಿಗಳಿಗೆ ವಿಘ್ನ ಮಾಡುತ್ತಾರೆ. ॥ ೩೭ ॥ ಶ್ರೀಮಾಧವದೇವರ ಕೃಪಾದೃಷ್ಟಿಯು ಯಾರ ಮೇಲೆ ಬೀಳುವುದೋ ಅಂಥವರಿಂದಲೇ ದಾನಾದಿಗಳು ಮಾಡಲ್ಪಡುತ್ತವೆ ಹೊರತು ಬರೇ ಹಣರಾಶಿಗಳಿಂದಲ್ಲ. ॥ ೩೮ ॥ ಆದ್ದರಿಂದಲೇ ಈ ಪ್ರಯಾಗದಲ್ಲಿ ಯಾರು ಆಲಸ್ಯಾದಿಗಳನ್ನು ಬಿಟ್ಟು ದಾನಾದಿಗಳನ್ನು ಮಾಡುತ್ತಾರೋ ಅವರು ವೇಣೀಮಾಧವನಿಗೆ ಬೇಕಾದವರೆಂದು ತಿಳಿಯಬೇಕು. ॥ ೩೯ ॥

॥ ಐವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಪಂಚಾಶತ್ತಮೋಽಧ್ಯಾಯಃ ॥ ೫೫ ॥

ಸೂತ ಉವಾಚ—

ಸಮ್ಯಕ್ಸಂಸಾಧನಂ ಕರ್ಮ ಕರ್ತವ್ಯಮಧಿಕಾರಿಣಾ ।
ನಿಷ್ಕಾಮೇನ ಯಥಾ ಸಾಂಗಂ ಕಾಮ್ಯಕಾಮಾಭಿಲಾಷಿಣಾ ॥ ೧ ॥
ಸಮ್ಯಕ್ಕರ್ಮವಿಧಿಂ ಜ್ಞಾತ್ವಾ ಕರೋತ್ಯವಿಧಿನಾ ತು ಯಃ ।
ಫಲಂ ನ ಕಿಂಚಿದಾಪ್ನೋತಿ ಕ್ಲೇಶಮಾತ್ರಂ ಹಿ ತಸ್ಯ ತತ್ ॥ ೨ ॥
ಪ್ರಭುಃ ಪ್ರಥಮಕಲ್ಪೇಽಪಿ ಯೋಽನುಕಲ್ಪೇ ಪ್ರವರ್ತತೇ ।
ನ ಪಾರಲೌಕಿಕಂ ತಸ್ಯ ಫಲಂ ಭವತಿ ನಿಶ್ಚಿತಮ್ ॥ ೩ ॥
ದದ್ಯಾನ್ನಾವಜ್ಞಯಾ ಕಿಂಚಿತ್ಸ್ವಲ್ಪಂ ವಾ ಬಹು ವಾ ಧನಮ್ ।
ಅವಜ್ಞಯಾ ತು ಯದ್ದತ್ತಂ ದಾತುಸ್ತದ್ದೋಷಮಾವಹೇತ್ ॥ ೪ ॥
ಗುಪ್ತಾಧ್ಯಾಯೀ ಗುಪ್ತದಾನೀ ಗುಪ್ತಪೂಜಾಗ್ನಿಸತ್ಕ್ರಿಯಃ ।
ಪೂಜ್ಯತೇ ಸರ್ವಲೋಕೇಷು ಸರ್ವದೇವಶ್ಶತಕ್ರತುಃ ॥ ೫ ॥
ಜ್ಞಾನಂ ದಾನಂ ತಪಸ್ತ್ಯಾಗೋ ಮಂತ್ರಕರ್ಮವಿಧಿಕ್ರಿಯಾಃ ।
ಮಂಗಲಾಚಾರನಿಯಮಾ ಭ್ರಷ್ಟಶೌಚಸ್ಯ ನಿಷ್ಫಲಾಃ ॥ ೬ ॥
ಸ್ನಾತೋಽಧಿಕಾರೀ ಭವತಿ ದೈವೇ ಪಿತ್ರ್ಯೇ ಚ ಕರ್ಮಣಿ ।
ಸ್ವಾಧ್ಯಾಯೇ ಮಂತ್ರಜಾಪ್ಯೇ ಚ ದಾನೇನ ವಿಧಿಚೋದಿತೇ ॥ ೭ ॥
ದದ್ಯಾಮಿದಮಿತಿ ಬ್ರೂಯಾತ್ಸಕುಶೋದಕರಸ್ತತಃ ।
ತೋಯಂ ದ್ವಿಜಕರೇ ದದ್ಯಾದ್ದಾನೇ ವಿಧಿರಯಂ ಸ್ಮೃತಃ ॥ ೮ ॥
ಅಂತರ್ಜಾನುಕರೌ ಕೃತ್ವೋಪವೀತ್ಯಾಬಧ್ಯ ವೈ ಶಿಖಾಮ್ ।
ಕೃತನಿತ್ಯಕ್ರಿಯಃ ಕುರ್ಯಾತ್ಕಾಮ್ಯಂ ನೈಮಿತ್ತಿಕಂ ಪುನಃ ॥ ೯ ॥
ನಾಮಗೋತ್ರೇ ಸಮುಚ್ಚಾರ್ಯ ಸಂಪ್ರದಾನಸ್ಯ ಚಾತ್ಮನಃ ॥ ೧೦ ॥
ಪ್ರಶ್ನಪೂರ್ವಂ ತು ಯೋ ದದ್ಯಾದ್ಬ್ರಾಹ್ಮಣಾಯ ಪ್ರತಿಗ್ರಹಮ್ ।
ಸ ಪೂರ್ವಂ ನರಕಂ ಯಾತಿ ಬ್ರಾಹ್ಮಣಸ್ತದನಂತರಮ್ ॥ ೧೧ ॥
ಸಹವಾಸೇನ ತಚ್ಛೀಲಂ ಶುಚಿತ್ವಂ ವ್ಯವಹಾರತಃ ।
ಪ್ರಜ್ಞಾನ್ಯವಾಕ್ಯತೋ ಜ್ಞೇಯಾ ತ್ರಿಭಿರ್ವಿಪ್ರಂ ಪರೀಕ್ಷಯೇತ್ ॥ ೧೨ ॥
ದದ್ಯಾತ್ಪೂರ್ವಮುಖೋ ದಾನಂ ಗೃಹ್ಣೀಯಾದುತ್ತರಾಮುಖಃ ।
ಪುಣ್ಯವೃದ್ಧಿರ್ದ್ವಯೋರೇವಂ ವಿವಾಹೇ ತು ವಿಪರ್ಯಯಃ ॥ ೧೩ ॥
ಓಂಕಾರಮುಚ್ಚರನ್ಪ್ರಾಜ್ಞೋ ದ್ರವಿಣಂ ಸಕುಶೋದಕಮ್ ।
ಗೃಹ್ಣೀಯಾದ್ದಕ್ಷಿಣೇ ಹಸ್ತೇ ತದಂತೇ ಸ್ವಸ್ತಿ ಕೀರ್ತಯೇತ್ ॥ ೧೪ ॥
ಸಾವಿತ್ರೀಂ ಪೂರ್ವಮುಚ್ಚಾರ್ಯ ದ್ರವ್ಯಂ ದ್ರವ್ಯಾಧಿದೇವತಾಮ್ ।

ಕಾಮಸ್ತುತಿಂ ಪಠೇತ್ಸ್ವಸ್ತಿ ಪ್ರತಿಗ್ರಹವಿಧಿಸ್ತ್ವಯಮ್ ॥ ೧೫ ॥
ಮಾಸಂ ಪಕ್ಷಂ ತಿಥಿಂ ವಾರಂ ನಕ್ಷತ್ರಂ ಯೋಗಮೇವ ಚ ।
ಅನುಲ್ಲಿಖಿನ್ನ ದಾನಸ್ಯ ನ ಪೂರ್ಣಫಲಮಾಪ್ನುಯಾತ್ ॥ ೧೬ ॥
ಶ್ರದ್ಧಾಯುಕ್ತಶ್ಶುಚಿರ್ದಾಂತೋ ದಾನಂ ದದ್ಯಾತ್ಸದಕ್ಷಿಣಮ್ ।
ಅದಕ್ಷಿಣಂ ಭವೇದ್ದಾನಂ ಭಸ್ಮನೀವ ಹುತಂ ಹವಿಃ ॥ ೧೭ ॥
ಯಥಾಸ್ವವಿತ್ತಂ ದಾನೇಷು ಪ್ರದೇಯಾ ದಕ್ಷಿಣಾ ವರಾ ।
ಯಥಾ ಪ್ರೋಕ್ತಾ ಚ ಸೌವರ್ಣೀ ದಾನಸಾದ್ಗುಣ್ಯಕಾರಿಣೀ ॥ ೧೮ ॥
ಸರ್ವೇಷಾಮಪಿ ದಾನಾನಾಂ ಸುವರ್ಣಂ ದಕ್ಷಿಣೋಚ್ಯತೇ ।
ಸುವರ್ಣೇ ದೀಯಮಾನೇ ತು ರಜತಂ ದಕ್ಷಿಣೋಚ್ಯತೇ ॥ ೧೯ ॥
ದೇಯದ್ರವ್ಯತೃತೀಯಾಂಶಾಂ ದಕ್ಷಿಣಾಂ ಪರಿಕಲ್ಪಯೇತ್ ।
ಅನುಕ್ತದಕ್ಷಿಣಾದಾನೇ ದಶಾಂಶಾಮಪಿ ಭಕ್ತಿತಃ ॥ ೨೦ ॥
ದಶಮಾಷಂ ಸುವರ್ಣಂ ಸ್ಯಾದ್ಯದ್ವಾ ಸರ್ವತ್ರ ದಕ್ಷಿಣಾ ।
ಯಥಾಶಕ್ತ್ಯಾ ತಥಾ ದೇಯಮಪಿ ಮೂಲಫಲಾದಿಕಮ್ ॥ ೨೧ ॥
ಪಂಚಸೌವರ್ಣಿಕಾ ನಿಷ್ಕಾ ಮಹಾದಾನೇಷು ದಕ್ಷಿಣಾ ।
ಅಶಕ್ತೌ ತದಶಕ್ತೌ ಚ ರೌಪ್ಯಾಸ್ತೇ ಪರಿಕೀರ್ತಿತಾಃ ॥ ೨೨ ॥
ಅಸನ್ನಿಧಾನೇ ಪಾತ್ರಸ್ಯ ಸಮಯೇ ಸಮುಪಾಗತೇ ।
ಪಾತ್ರಂ ಮನಸಿ ಸಂಧಾಯ ತೋಯೇ ತೋಯಂ ವಿನಿಕ್ಷಿಪೇತ್ ॥ ೨೩ ॥
ಉಭಯಾಸನ್ನಿಧಾನೇ ಚ ದ್ರವ್ಯಮಾದಿತ್ಯದೈವತಮ್ ।
ಧ್ಯಾತ್ವಾ ಚ ಬ್ರಾಹ್ಮಣಂ ಪಾತ್ರಂ ಜಲಮಧ್ಯೇ ಜಲಂ ಕ್ಷಿಪೇತ್ ॥ ೨೪ ॥
ಪರೋಕ್ಷೇ ಕೃತದಾನಸ್ಯ ಫಲಂ ದೋಷವಿವರ್ಜಿತಮ್ ।
ದೃಶ್ಯತೇ ಸಾಗರಸ್ಯಾಂತೋ ನ ತದ್ದಾನಸ್ಯ ದೃಶ್ಯತೇ ॥ ೨೫ ॥
ಏವಂ ವಿಚಾರ್ಯ ಸತ್ಕ್ಷೇತ್ರೇ ಸತ್ಪಾತ್ರೇ ದಾನಮಾಚರೇತ್ ।
ಯಥಾವಿಧಿ ಯಥಾಶಕ್ತಿ ತೇನ ಪ್ರೀಣಾತಿ ಮಾಧವಃ ॥ ೨೬ ॥

## ॥ ಐವತ್ತೈದನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಉತ್ತಮಾಧಿಕಾರಿಗಳಿಂದ ಒಳ್ಳೆಯ ಸಾಧನೆಯುಕ್ತವಾದ ಕರ್ಮಗಳೇ ಮಾಡಲ್ಪಡಬೇಕು. ಕಾಮಾಪೇಕ್ಷೆಯಿಲ್ಲದ ಕರ್ಮದಿಂದ ಹೇಗೆ ಕರ್ಮವು ಸಾಂಗವಾಗುವುದೋ ಹಾಗೆ ಕಾಮಾಪೇಕ್ಷೆಯಿಂದ ಮಾಡಿದ ಕರ್ಮವು ಸಾಂಗೋಪಾಂಗವಾಗಿ ಆಗುವುದಿಲ್ಲ. ॥ ೧ ॥ ಸರಿಯಾಗಿ ಕರ್ಮದ ವಿಧಿನಿಯಮವನ್ನು ತಿಳಿದಿದ್ದರೂ ಆ ನಿಯಮಗಳಿಂದ ಭಿನ್ನವಾದ ನಿಯಮಗಳನ್ನು ಯಾರು ಆಚರಿಸುವರೋ ಆ ಕರ್ಮಕ್ಕೆ ಸ್ವಲ್ಪವೂ ಫಲವು ಬರುವುದಿಲ್ಲ ಮತ್ತು ಕ್ಲೇಶವೇ

ಅಧಿಕವಾಗುತ್ತದೆ. ॥ ೨ ॥ ಮುಖ್ಯವಾಗಿ ಆಚರಿಸಬೇಕಾದ ವ್ರತಗಳ ಕಲ್ಪದ ಬದಲು ಅದರಿಂದ ಗೌಣವಾಗಿರತಕ್ಕ ನಿಯಮಗಳನ್ನು ಆಚರಿಸುವುದರಲ್ಲಿ ಪ್ರವೃತ್ತನಾಗುವ ಯಜಮಾನನಿಗೆ ಪಾರಲೌಕಿಕವಾದ ಫಲಗಳು ಖಂಡಿತವಾಗಿ ದೊರಕುವುದಿಲ್ಲ. ॥ ೩ ॥ ಅಲ್ಪದ್ದೇ ಆಗಲೀ, ದೊಡ್ಡದೇ ಆಗಿರಲಿ ದಾನಗಳನ್ನು ತಿರಸ್ಕಾರ ಭಾವನೆಯಿಂದ ಮಾಡಿದ ದಾನಿಗೆ ತಿರಸ್ಕಾರದಿಂದ ಮಾಡುವ ದಾನದ ದೋಷವೇ ಪ್ರಾಪ್ತವಾಗುವುದು. ॥ ೪ ॥ ರಹಸ್ಯವಾಗಿ ಅಧ್ಯಯನ ಮಾಡುವವನು, ರಹಸ್ಯವಾಗಿ ದಾನ ಮಾಡುವವನು ಮತ್ತು ಗುಪ್ತಪೂಜೆಯನ್ನು ಮಾಡುವವನು ಆದ ವ್ಯಕ್ತಿಯು ಜಗತ್ತಿನಲ್ಲಿ ದೇವತೆಗಳಿಗೆ ಅಧಿಪತಿಯಾದ ಇಂದ್ರನಂತೆ ಆದರಿಸಲ್ಪಡುವನು. ॥ ೫ ॥ ಶಾಸ್ತ್ರಜನ್ಯಜ್ಞಾನ, ಸದ್ದಾನಗಳು, ತಪಸ್ಸು, ತ್ಯಾಗ, ಮಂತ್ರಾದಿಗಳ ಜಪವು, ವಿಧಿವತ್ತಾದ ಕರ್ಮಾದಿಗಳು ಮತ್ತು ಮಂಗಳಕರವಾದ ಆಚಾರನಿಯಮಗಳು ಇವೆಲ್ಲ ದೈಹಿಕ, ಮಾನಸಿಕ, ಆಚಾರರಹಿತನಿಗೂ, ಶುಚಿರ್ಭೂತನಾಗಿಲ್ಲದವನಿಗೂ ನಿಷ್ಫಲಗಳಾಗುವುವು. ॥ ೬ ॥ ದೇವತಾ ಮತ್ತು ಪಿತೃಕಾರ್ಯಗಳಿಗೆ ಸ್ನಾನ ಮಾಡಿದರೇನೇ ಅಧಿಕಾರ ಬರುವುದು. ವಿಧ್ಯುಕ್ತವಾದ ಅಧ್ಯಯನ ಮಾಡುವುದಕ್ಕೂ ಮತ್ತು ಜಪ ಮಾಡುವುದಕ್ಕೂ ದಾನಾದಿಗಳನ್ನು ಮಾಡಿದರೇನೇ ಅಧಿಕಾರವು ಬರುವುದು. ॥ ೭ ॥ ದರ್ಭೆ ಮತ್ತು ನೀರನ್ನು ಕೈಯಲ್ಲಿ ಹಿಡಿದು, ''ಇದನ್ನು ಕೊಡುತ್ತೇನೆ'' ಎಂದು ಬಾಯಿಯಲ್ಲಿ ಹೇಳಿಕೊಂಡು, ಬ್ರಾಹ್ಮಣೋತ್ತಮರ ಕೈಯಲ್ಲಿ ದರ್ಭೆಯ ಸಹಿತವಾದ ನೀರನ್ನು ದಾನಿಯು ಹಾಕಬೇಕು. ಈ ರೀತಿಯಾಗಿ ಸ್ಮೃತಿಗಳಲ್ಲಿ ಉಕ್ತವಾಗಿದೆ. ॥ ೮ ॥ ಎರಡು ಕಾಲ್ಮಂಡಿಗಳ ಮಧ್ಯದಲ್ಲಿ ಎರಡು ಕೈಗಳನ್ನು ಇಟ್ಟುಕೊಂಡು ಜನಿವಾರವನ್ನು ಸವ್ಯದಲ್ಲಿ ಹಾಕಿಕೊಂಡು ನಿತ್ಯಕ್ರಿಯೆಗಳನ್ನು ಮಾಡಿದ ನಂತರ ಅಪೇಕ್ಷಿತವಾದ ಫಲಗಳನ್ನುದ್ದೇಶಿಸಿ ನೈಮಿತ್ತಿಕ ದಾನಾದಿಗಳನ್ನು ಮಾಡಬೇಕು. ॥ ೯ ॥ ತನ್ನ ಮತ್ತು ದಾನಸ್ವೀಕಾರ ಮಾಡುವವರ ತ್ರೈಯಾರ್ಷೇಯ ಪ್ರವರಾದಿಗಳಿಂದ ಕೂಡಿದ ಗೋತ್ರಗಳನ್ನು ಉಚ್ಚರಿಸಿ ದಾನವನ್ನು ''ನ ಮಮ''ಎಂದು ಹೇಳಿ ಕೊಡಬೇಕು. (ನ ಮಮ —ಈ ದಾನದ ಪದಾರ್ಥದ ಸ್ವಾಮ್ಯವನ್ನು ನನ್ನಿಂದ ನಿನಗೆ ಒಪ್ಪಿಸುತ್ತಿದ್ದೇನೆ) ॥ ೧೦ ॥ ಪ್ರಶ್ನಪೂರ್ವಕವಾಗಿ ದಾನವನ್ನು ಕೊಟ್ಟರೆ ದಾನ ಕೊಡುವವನು ಮೊದಲು ನರಕಕ್ಕೆ ಹೋಗುವನು; ತದನಂತರ ದಾನ ತೆಗೆದುಕೊಂಡ ಬ್ರಾಹ್ಮಣನೂ ನರಕಕ್ಕೆ ಹೋಗುವನು. ॥ ೧೧ ॥ ದಾನ ತೆಗೆದುಕೊಳ್ಳುವವನ ಜೊತೆಗಿದ್ದು ಅವನ ಶೀಲವನ್ನು, ವ್ಯವಹಾರದಿಂದ ಶುಚಿತ್ವವನ್ನು ಮತ್ತು ಅವನ ಮಾತುಕಥೆಗಳಿಂದ ಜ್ಞಾನವನ್ನು ತಿಳಿದುಕೊಳ್ಳಬೇಕು; ಈ ರೀತಿ ಮೂರು ಬಗೆಯಿಂದಲೂ ಬ್ರಾಹ್ಮಣರನ್ನು ಪರೀಕ್ಷೆ ಮಾಡಬೇಕು. ॥ ೧೨ ॥ ಪೂರ್ವಾಭಿಮುಖವಾಗಿ ಕುಳಿತುಕೊಂಡು ದಾನಿಯು ದಾನ ಮಾಡಬೇಕು; ಬ್ರಾಹ್ಮಣನು ಉತ್ತರಾಭಿಮುಖವಾಗಿ ಕುಳಿತು ಸ್ವೀಕಾರ ಮಾಡಬೇಕು. ಈ ರೀತಿ ವರ್ತಿಸಿದರೆ ದಾನಿಯ ಮತ್ತು ದಾನ ಸ್ವೀಕಾರ ಮಾಡುವವರ ಪುಣ್ಯವು ಹೆಚ್ಚುವುದು. ಆದರೆ ಕನ್ಯಾದಾನ ಮಾಡುವಾಗ ಮತ್ತು ಸ್ವೀಕಾರ ಮಾಡುವಾಗ ಇದಕ್ಕೆ ವಿರುದ್ಧವಾಗಿರಬೇಕು —ಅಂದರೆ ಕನ್ಯಾಪಿತೃವು ಉತ್ತರಾಭಿಮುಖಿಯಾಗಿರಬೇಕು ಮತ್ತು ವರನು ಪೂರ್ವಾಭಿಮುಖಿಯಾಗಿರಬೇಕು. ॥ ೧೩ ॥ ದಾನ ಸ್ವೀಕಾರ ಮಾಡುವ ಬ್ರಾಹ್ಮಣನು ಕುಶ, ಉದಕ ಮತ್ತು ದಕ್ಷಿಣೆಯನ್ನು ಬಲಗಡೆಯ ಹಸ್ತದಲ್ಲಿ ''ಓಂ'' ಎಂದು ಉಚ್ಚರಿಸಿ ಸ್ವೀಕರಿಸಬೇಕು. ದಾನದ ಕಡೆಯಲ್ಲಿ ''ಸ್ವಸ್ತಿ'' ಎಂದು ಹೇಳಬೇಕು. ॥ ೧೪ ॥ ಮೊದಲು ಸಾವಿತ್ರೀಸೂಕ್ತವನ್ನು ಉಚ್ಚರಿಸಿ, ದ್ರವ್ಯವನ್ನೂ ದ್ರವ್ಯಾಧಿದೇವತೆಯನ್ನು ಸ್ತುತಿಸಿ ನಂತರ ಕಾಮಸ್ತುತಿಯನ್ನು ಹೇಳಬೇಕು. ಅನಂತರ ''ಸ್ವಸ್ತಿ''ಯನ್ನು ಉಚ್ಚರಿಸಬೇಕು. ಇದು ದಾನವನ್ನು ಪಡೆಯುವ ವಿಧಿಯು. ॥ ೧೫ ॥

ಆಚಮನ ಮಾಡಿ ಪ್ರಾಣಾಯಾಮ ಮಾಡಿ ಸಂಕಲ್ಪದಲ್ಲಿ ಸಂವತ್ಸರ, ಅಯನ, ಮಾಸ, ಪಕ್ಷ, ತಿಥಿ, ವಾರ, ಯೋಗ, ಕರಣ, ದಾನದ ಹೆಸರು ಮತ್ತು ಕಾರಣ ಇವುಗಳನ್ನು ಉಚ್ಚಾರ ಮಾಡದೆ ದಾನ ಮಾಡಿದರೆ ಫಲವು ಬರುವುದಿಲ್ಲ. ॥ ೧೬ ॥ ದಾನಿಯು ಶುಚಿರ್ಭೂತನಾಗಿ ಶ್ರದ್ಧಾನ್ವಿತನಾಗಿ ಮತ್ತು ಜಿತೇಂದ್ರಿಯನಾಗಿದ್ದು ದಾನಕ್ಕೆ ತಕ್ಕ ದಕ್ಷಿಣೆಯಿಂದ ಕೂಡಿದ ದಾನವನ್ನು ಕೊಡಬೇಕು. ದಕ್ಷಿಣೆಯಿಲ್ಲದೆ ದಾನ ಕೊಟ್ಟರೆ ಅದು ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವಾಗುವುದು. ॥ ೧೭ ॥ ದಾನದಲ್ಲಿ ತನ್ನ ಸ್ವತ್ತಿಗೆ ಅನುಸಾರವಾಗಿ ದಕ್ಷಿಣೆಯು ಹೆಚ್ಚಿನದೇ ಆಗಿರಬೇಕು. ಬಂಗಾರದ ನಾಣ್ಯರೂಪದಲ್ಲಿ ದಕ್ಷಿಣೆಯನ್ನು ಕೊಟ್ಟರೆ ದಾನಕ್ಕೆ ಗುಣಪೂರ್ಣತ್ವವು ಬರುವುದು. ॥ ೧೮ ॥ ಎಲ್ಲ ದಾನಗಳಿಗೂ ಬಂಗಾರದ ನಾಣ್ಯವನ್ನು ದಕ್ಷಿಣೆಯಾಗಿ ಕೊಡಬೇಕೆಂದು ಹೇಳಲ್ಪಟ್ಟಿದೆ. ಬಂಗಾರದ ದಾನವನ್ನು ಮಾಡುವಾಗ ಬೆಳ್ಳಿಯ ನಾಣ್ಯವನ್ನು ದಕ್ಷಿಣಾರೂಪದಲ್ಲಿ ಕೊಡಬೇಕು. ॥ ೧೯ ॥ ದಾನ ಕೊಡುವ ಪದಾರ್ಥದ ಬೆಲೆಯ ಮೂರನೇ ಅಂಶದಷ್ಟಾದರೂ ದಕ್ಷಿಣೆಯ ಪ್ರಮಾಣ ವಾಗಿರಬೇಕು. ದಕ್ಷಿಣೆಯ ಪ್ರಮಾಣವು ಹೇಳಲ್ಪಡದಿದ್ದಾಗ ಪದಾರ್ಥದ ಬೆಲೆಯ ಹತ್ತನೆಯ ಒಂದು ಭಾಗದಷ್ಟಾದರೂ ದಕ್ಷಿಣೆಯ ಪ್ರಮಾಣವಾಗಿರಬೇಕು ಮತ್ತು ಅದನ್ನು ಭಕ್ತಿಯಿಂದ ಸಮರ್ಪಿಸಬೇಕು. ॥ ೨೦ ॥ ಎಲ್ಲಾ ದಾನಗಳಲ್ಲಿಯೂ ಹತ್ತು ಗುಲಗಂಜಿ ತೂಕದಷ್ಟು ಸುವರ್ಣದಕ್ಷಿಣೆಯನ್ನು ಕೊಡಬಹುದು. ಗೆಡ್ಡೆ ಗೆಣಸುಗಳು, ಹಣ್ಣು ಮೊದಲಾದ್ದನ್ನು ಕೊಡಬೇಕು. ॥ ೨೧ ॥ ಮಹಾದಾನಾದಿಗಳಲ್ಲಿ ಐದು ನಿಷ್ಕದ ಸುವರ್ಣವನ್ನಾದರೂ ದಕ್ಷಿಣೆಯನ್ನಾಗಿ ಕೊಡಬೇಕು. ಶಕ್ತಿಯಿಲ್ಲದಿದ್ದರೆ ಐದು ಬೆಳ್ಳಿನಾಣ್ಯಗಳನ್ನಾದರೂ ದಕ್ಷಿಣೆಯನ್ನಾಗಿ ಕೊಡಬಹುದು. ॥ ೨೨ ॥ ದಾನಕ್ಕೆ ಸತ್ಪಾತ್ರನು ಸಿಗದಿದ್ದರೆ ದಾನದ ಸಮಯ ಪ್ರಾಪ್ತವಾದಾಗ ಸಂಕಲ್ಪ ಮಾಡಿ ಸತ್ಪಾತ್ರನನ್ನು ಮನಸ್ಸಿನಲ್ಲಿ ಅಂದುಕೊಂಡು ಜಲದಲ್ಲಿ ನೀರನ್ನು ಬಿಡಬೇಕು. ॥ ೨೩ ॥ ಸತ್ಪಾತ್ರರ ಸನ್ನಿಧಾನವೂ ಮತ್ತು ದಾನದ ಸಮಯವೂ ಒದಗದಿದ್ದರೆ ದ್ರವ್ಯವನ್ನು ಸಂಕಲ್ಪ ಮಾಡಿ ಸೂರ್ಯನನ್ನು ಧ್ಯಾನಿಸಿ ನೀರಿನಲ್ಲಿ ನೀರನ್ನು ಬಿಡಬೇಕು. ॥ ೨೪ ॥ ಸತ್ಪಾತ್ರರು ಎದುರಿಗಿಲ್ಲದಿರುವಾಗ ಮಾಡಿದ ದಾನಗಳಲ್ಲಿ ಪಾತ್ರಾಪಾತ್ರದ ದೋಷಾದಿಗಳಿರುವುದಿಲ್ಲ ಮತ್ತು ಆ ದಾನದ ಫಲವೂ ನಿರ್ದುಷ್ಟವಾಗಿರುವುದು. ಸಾಗರದ ಕೊನೆಯಾದರೂ ಸಿಗಬಲ್ಲದು ಆದರೆ ಪರೋಕ್ಷದಾನದ ಫಲದ ಎಲ್ಲೆಯನ್ನು ಕಾಣುವುದು ಕಷ್ಟ. ॥ ೨೫ ॥ ವಿಚಾರಮಾಡಿ ಸತ್ಕ್ಷೇತ್ರದಲ್ಲಿ ಸತ್ಪಾತ್ರರಿಗೆ ಯಥಾಶಕ್ತಿ ವಿಧಿಪೂರ್ವಕವಾಗಿ ದಾನ ಮಾಡಬೇಕು. ಅಂತಹ ದಾನದಿಂದ ಶ್ರೀಮಾಧವನು ಪ್ರೀತನಾಗುತ್ತಾನೆ. ॥ ೨೬ ॥

ಋಷಯ ಊಚುಃ—

ಭವತೋಕ್ತಃ ಶ್ರುತೋಽಸ್ಮಾಭಿರ್ದಾನಾನಾಂ ವಿಸ್ತೃತೋ ವಿಧಿಃ ।
ಪ್ರಸನ್ನಂ ಮಾನಸಂ ಜಾತಂ ತ್ವದ್ವಾಕ್ಪೀಯೂಷಪಾನತಃ ॥ ೨೭ ॥
ಇದಾನೀಂ ಶ್ರೋತುಮಿಚ್ಛಾಮೋ ಮಹಾದಾನಾನುಕೀರ್ತನಮ್ ।
ಕತಿ ವಾ ವದ ನಸ್ಸೌಮ್ಯ ಮಹಾದಾನಾನಿ ಕಾನಿ ಚ ॥ ೨೮ ॥

ಋಷಿಗಳು ಹೇಳಿದರು—

ತಮ್ಮಿಂದ ಹೇಳಲ್ಪಟ್ಟ ದಾನಗಳ ವಿಸ್ತಾರವಾದ ವಿಧಿಯು ನಮ್ಮಿಂದ ಆಲಿಸಲ್ಪಟ್ಟಿದೆ. ತಮ್ಮ ಉಪದೇಶಾಮೃತವನ್ನು ಕೇಳಿ ಮನಸ್ಸಿಗೆ ತುಂಬಾ ಹರ್ಷವುಂಟಾಗಿದೆ. ॥ ೨೭ ॥ ಈಗ

ಮಹಾದಾನಗಳ ಉಲ್ಲೇಖವನ್ನು ಕೇಳಲು ಆಸೆಪಡುತ್ತೇವೆ; ಎಲ್ಲೈ ಶಾಂತಸ್ವರೂಪರೇ! ಮಹಾದಾನಗಳು ಎಷ್ಟು? ಯಾವುವು? ಅವುಗಳನ್ನು ವಿಸ್ತಾರವಾಗಿ ವರ್ಣಿಸಿರಿ. ॥೨೮॥

ಸೂತ ಉವಾಚ—

ಶೃಣ್ವಂತು ಮುನಯಸ್ಸರ್ವೇ ಮಹಾದಾನಾನುಕೀರ್ತನಮ್ ।
ಯಥೋಕ್ತಂ ದಾನಧರ್ಮೇಷು ವಿಷ್ಣುನಾ ಪ್ರಭವಿಷ್ಣುನಾ ॥ ೨೯ ॥
ಸರ್ವಪಾಪಕ್ಷಯಕರಂ ನೃಣಾಂ ಸರ್ವದುಃಖಪ್ರಣಾಶನಮ್ ।
ಯತ್ತು ಷೋಡಶಧಾ ಪ್ರೋಕ್ತಂ ವಾಸುದೇವೇನ ಭೂತಲೇ ॥ ೩೦ ॥
ಪುಣ್ಯಂ ಪವಿತ್ರಮಾಯುಷ್ಯಂ ಸರ್ವಪಾಪಹರಂ ಶುಭಮ್ ।
ಪೂಜಿತಂ ಸಕಲೈರ್ದೇವೈರ್ಬ್ರಹ್ಮವಿಷ್ಣುಶಿವಾದಿಭಿಃ ॥ ೩೧ ॥
ಆದ್ಯಂ ತು ಸರ್ವದಾನಾನಾಂ ತುಲಾಪುರುಷಸಂಜ್ಞಿತಮ್ ।
ಹಿರಣ್ಯಗರ್ಭದಾನಂ ಚ ಬ್ರಹ್ಮೋಕ್ತಂ ತದನಂತರಮ್ ॥ ೩೨ ॥
ಕಲ್ಪಪಾದಪದಾನಂ ಚ ಗೋಸಹಸ್ರಂ ತು ಪಂಚಮಮ್ ।
ಹಿರಣ್ಯಂ ಕಾಮಧೇನುಶ್ಚ ಹಿರಣ್ಯಾಶ್ವಸ್ತಥೈವ ಚ ॥ ೩೩ ॥
ಹಿರಣ್ಯಾಶ್ವರಥಸ್ತದ್ವದ್ವೇಹ ಹಸ್ತಿರಥಸ್ತಥಾ ।
ಪಂಚಲಾಂಗಲದಾನಂ ಚ ಧರಾದಾನಂ ತಥೈವ ಚ ॥ ೩೪ ॥
ದ್ವಾದಶಂ ವಿಶ್ವಚಕ್ರಂ ಚ ತತಃ ಕಲ್ಪಲತಾತ್ಮಕಮ್ ।
ಸಪ್ತಸಾಗರದಾನಂ ಚ ರತ್ನಧೇನುಸ್ತಥೈವ ಚ ॥ ೩೫ ॥
ಮಹಾಭೂತಧರಸ್ತದ್ವದ್ದಂತಿನಃ ಪರಿಕೀರ್ತಿತಃ ।
ಸರ್ವಾಣ್ಯೇತಾನಿ ಕೃತವಾನ್ವಿಧಿನಾ ಮುನಿಪುಂಗವಾಃ ॥ ೩೬ ॥
ವಾಸುದೇವೋ ಹಿ ಭಗವಾನಂಬರೀಷಶ್ಚ ಪಾರ್ಥಿವಃ ।
ಕಾರ್ತವೀರ್ಯಾರ್ಜುನಶ್ಚೈವ ಪ್ರಹ್ಲಾದಃ ಪೃಥುರೇವ ಚ ॥ ೩೭ ॥
ಚಕ್ರುರನ್ಯೇ ಮಹೀಪಾಲಾಃ ಕೇಚಿಚ್ಚ ಭರತಾದಯಃ ।
ಶ್ರೀಮತಾ ಹಿ ಪ್ರದೇಯಾನಿ ಸಂಸಾರಭಯಭೀರುಣಾ ॥ ೩೮ ॥
ಅನಿತ್ಯಂ ಜೀವಿತಂ ಯಸ್ಮಾಲ್ಲಕ್ಷ್ಮೀರಪ್ಯತಿಚಂಚಲಾ ।
ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥ ೩೯ ॥
ಧನಿನಾಮಧಿಕಾರೋಽಸ್ತಿ ದಾನೇಷ್ವೇತೇಷು ಸರ್ವಥಾ ।
ತೈರತೋಽತ್ರ ಪ್ರದೇಯಾನಿ ಮಹಾದಾನಾನಿ ಸುವ್ರತಾಃ ॥ ೪೦ ॥
ಸರ್ವೇಷಾಮುಪಕಾರಾರ್ಥಂ ಗೋದಾನಂ ತು ವಿಶಿಷ್ಯತೇ ।
ಕರೋತಿ ಯಃ ಪ್ರಯಾಗೇ ತತ್ಸರ್ವದಾನಾಧಿಕಂ ಮತಮ್ ॥ ೪೧ ॥

॥ ಇತಿ ಪಂಚಪಂಚಾಶತ್ತಮೋಽಧ್ಯಾಯಃ ॥

**ಸೂತರು ಹೇಳಿದರು—**

ಜಗತ್ಪ್ರಭುವಾದ ಶ್ರೀವಿಷ್ಣುವಿನಿಂದ ದಾನಧರ್ಮಗಳ ವಿಧಿವಿಧಾನಗಳಲ್ಲಿ ಯಾವ ರೀತಿಯಾಗಿ ಹೇಳಲ್ಪಟ್ಟಿವೆಯೋ ಅದೇ ರೀತಿಯಾಗಿ ಮಹಾದಾನಗಳ ಉಲ್ಲೇಖನವನ್ನು ಹೇಳುವೆನು. ಎಲೈ ಮುನೀಶ್ವರರೇ, ಕೇಳಿರಿ. ॥ ೨೯ ॥ ಹದಿನಾರು ವಿಧವಾಗಿ ವಿಂಗಡಿಸಲ್ಪಟ್ಟ ಭೂಲೋಕಕ್ಕೆ ಸಂಭವಿಸಿದ ಈ ಮಹಾದಾನಗಳನ್ನು ಶ್ರೀವಾಸುದೇವನು ಹೇಳಿದ್ದಾನೆ. ಈ ದಾನಗಳನ್ನು ಮಾಡುವುದರಿಂದ ಎಲ್ಲ ಪಾಪಗಳೂ ನಾಶವಾಗುವುವು ಮತ್ತು ಎಲ್ಲ ದುಃಖವೂ ಪರಿಹಾರವಾಗುವುದು. ಅಲ್ಲದೆ ಈ ದಾನಗಳು ಪವಿತ್ರವಾದುವು ಪುಣ್ಯಪ್ರದವಾದುವು, ಆಯುಷ್ಯವನ್ನು ಹೆಚ್ಚಿಸತಕ್ಕವು ಮತ್ತು ಮಂಗಳಕರವಾದುವೆಂದು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರಾದಿ ಎಲ್ಲ ದೇವತೆಗಳಿಂದಲೂ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಿವೆ. ॥ ೩೦-೩೧ ॥ ಎಲ್ಲ ದಾನಗಳಿಗೂ ಪ್ರಪ್ರಥಮವಾದುದು ತುಲಾ ಪುರುಷ ದಾನವು, ಎರಡನೆಯದು ಮಹಾವಿಷ್ಣುವಿನ ಪ್ರತಿಮೆಯ ದಾನವು ಮತ್ತು ವೇದ ದಾನವು ಮೂರನೆಯದು. ॥ ೩೨॥ ಕಲ್ಪವೃಕ್ಷದಾನವು ನಾಲ್ಕನೆಯದು, ಸಹಸ್ರಗೋವುಗಳ ದಾನವು ಐದನೆಯದು. ಬಂಗಾರದ ಕಾಮಧೇನುವಿನ ಹಾಗೂ ಬಂಗಾರದ ಕುದುರೆಯ ದಾನವು ಆರು ಮತ್ತು ಏಳನೆಯ ದಾನಗಳಾಗಿವೆ. ॥ ೩೩ ॥ ಬಂಗಾರದ ಕುದುರೆಗಾಡಿಯು ಹಾಗೆಯೇ ಬಂಗಾರದ ಆನೆಯ ರಥವು ಎಂಟು ಮತ್ತು ಒಂಭತ್ತನೆಯ ದಾನಗಳು. ಬಂಗಾರದ ನೇಗಿಲು ಹತ್ತನೆಯ ದಾನವು, ಭೂದಾನವು ಹನ್ನೊಂದನೆಯದು. ॥ ೩೪ ॥ ಬ್ರಹ್ಮಾಂಡಮಂಡಲದ ದಾನವು ಹನ್ನೆರಡನೆಯ ದಾನವು, ಬಳ್ಳಿಗಳಿಂದ ಕೂಡಿದ ಬಂಗಾರದ ಕಲ್ಪವೃಕ್ಷವು ಹದಿಮೂರನೆಯದು, ಬಂಗಾರದ ಸಪ್ತಸಮುದ್ರಗಳ ಪ್ರತಿಮೆಯು ಹದಿನಾಲ್ಕನೆಯದ್ದಾಗಿದ್ದು, ರತ್ನಖಚಿತವಾದ ಬಂಗಾರದ ಆಕಳು ಹದಿನೈದನೆಯದ್ದಾಗಿದೆ. ॥ ೩೫ ॥ ಹದಿನಾರನೆಯದು ಭೂಮಿಯನ್ನು ಧಾರಣೆ ಮಾಡಿರುವ ಬಂಗಾರದ ಗಜಪ್ರತಿಮಾದಾನವು. ಹೇ ಮುನಿಶ್ರೇಷ್ಠರಾದ ಶೌನಕಾದಿಗಳೇ! ಈ ರೀತಿಯಾದ ಹದಿನಾರು ಮಹಾದಾನಗಳು ಉಕ್ತವಾಗಿವೆ. ॥ ೩೬ ॥ ವಸುದೇವನ ಮಗನಾದ ಕೃಷ್ಣನೂ, ಅಂಬರೀಷಚಕ್ರವರ್ತಿಯೂ, ಕಾರ್ತವೀರ್ಯಾರ್ಜುನನೂ, (ಚಕ್ರಾಯುಧದ ಅವತಾರ), ಪ್ರಹ್ಲಾದರಾಜರೂ, ಪೃಥು ರಾಜರೂ ಮತ್ತು ಬೇರೆ ಬೇರೆ ಚಕ್ರವರ್ತಿಗಳೂ ಭರತಾದಿ ಚಕ್ರವರ್ತಿಗಳೂ ಈ ಮಹಾದಾನಗಳನ್ನು ಮಾಡಿದ್ದಾರೆ. ಐಶ್ವರ್ಯವಂತರು ಸಂಸಾರಭಯಕ್ಕೆ ಹೆದರಿ ಈ ದಾನಗಳನ್ನು ಕೊಡಬೇಕು. ಜೀವಿತವು ಅನಿತ್ಯವೂ, ಲಕ್ಷ್ಮಿಯು ಅತ್ಯಂತ ಚಂಚಲಳೂ ಎಂದೂ, ಮೃತ್ಯುವಿನಿಂದ ಕೇಶದಲ್ಲಿ ಹಿಡಿಯಲ್ಪಟ್ಟಿದ್ದೇವೆಂದೇ ತಿಳಿದು, ಧರ್ಮಗಳನ್ನು ಆಚರಿಸಬೇಕು. ॥ ೩೭-೩೯ ॥ ಧನಿಕರಿಗೆ ಇಂತಹ ದಾನಗಳಲ್ಲಿ ಅಧಿಕಾರವಿದ್ದೇ ಇದೆ. ಆದ್ದರಿಂದ ಅವರು ಈ ಮಹಾದಾನಗಳನ್ನು ಮಾಡಲೇಬೇಕು ॥ ೪೦ ॥ ಎಲ್ಲರಿಗೂ ಉಪಕಾರವಾಗುವ ಗೋದಾನವನ್ನಂತೂ ಮಾಡಲೇ ಬೇಕು. ಅದರಲ್ಲೂ ಪ್ರಯಾಗದಲ್ಲಿ ಮಾಡುವ ಗೋದಾನವು ಎಲ್ಲ ದಾನಗಳಿಗಿಂತ ಶ್ರೇಷ್ಠವು. ॥ ೪೧ ॥

॥ ಐವತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಟ್ಪಂಚಾಶತ್ತಮೋಽಧ್ಯಾಯಃ ॥ ೫೬ ॥

ಋಷಯ ಊಚುಃ—

ಸರ್ವದಾನಾಧಿಕಂ ಸೂತ ಸರ್ವೇಷಾಮುಪಕಾರಕಮ್ ।
ಗೋದಾನಂ ಭವತಾ ಪ್ರೋಕ್ತಂ ವಿಸ್ತರಾತ್ತದ್ವಿಧಿಂ ವದ ॥ ೧ ॥

## ॥ ಐವತ್ತಾರನೆಯ ಅಧ್ಯಾಯವು ॥

ಶೌನಕಾದಿ ಋಷಿಗಳು ಹೇಳಿದರು—

ಎಲೈ ಸೂತಪುರಾಣಜ್ಞರೇ! ಎಲ್ಲರಿಗೂ ಉಪಯುಕ್ತವಾದ ಮತ್ತು ದಾನಗಳಲ್ಲಿ ಅಧಿಕಶ್ರೇಷ್ಠವಾಗಿರುವ ಗೋದಾನವು ತಮ್ಮಿಂದ ಈವರೆಗೆ ಹೇಳಲ್ಪಟ್ಟಿತು. ಈಗ ಈ ದಾನದ ವಿಧಿನಿಯಮಗಳನ್ನು ವಿಸ್ತಾರವಾಗಿ ಹೇಳಿರಿ. ॥ ೧ ॥

ಸೂತ ಉವಾಚ—

ಶ್ರೋತಾರಸ್ಸಾವಧಾನೇನ ಗೋದಾನಸ್ಯ ವಿಧಿಂ ಶುಭಮ್ ।
ಶೃಣ್ವಂತು ಶ್ರವಣಾದ್ಯಸ್ಯ ಪ್ರಾಪ್ಯತೇ ಪುಣ್ಯಮುತ್ತಮಮ್ ॥ ೨ ॥
ವಿಮಾನವರಮಾರುಹ್ಯ ದಿವ್ಯಾಭರಣಭೂಷಿತಃ ।
ಯೋ ಗಂತುಂ ವಾಂಛತಿ ಸ್ವರ್ಗಂ ಸ ಗೋದಾನಂ ಪ್ರಯಚ್ಛತು ॥ ೩ ॥
ತ್ರಿವಿಧಾಘವಿನಿರ್ಮುಕ್ತಿಂ ವೈಕುಂಠವಸತಿಂ ನರಃ ।
ಸಮಸ್ತಪಿತೃಮುಕ್ತಿಂ ಚ ಕಾಮಯಾನೋ ದದಾತು ಗಾಮ್ ॥ ೪ ॥
ಶುಚಿಸ್ಸಂಭೃತಸಂಭಾರಃ ಪುಣ್ಯಕಾಲೇ ಶುಭಸ್ಥಲೇ ।
ಸಪತ್ನೀಕಸ್ಸಮಾಚಮ್ಯ ಪ್ರಾಣಾನಾಯಮ್ಯ ವಾಗ್ಯತಃ ॥ ೫ ॥
ದೇಶಕಾಲಾವನುಸ್ಮೃತ್ಯ ಸರ್ವಪಾಪಾಪನುತ್ತಯೇ ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಮಾಧವಪ್ರೀತಯೇಽಥವಾ ॥ ೬ ॥
ಗೋಪ್ರದಾನಂ ಕರಿಷ್ಯೇಹಮಿತಿ ಸಂಕಲ್ಪ್ಯ ಭಕ್ತಿಮಾನ್ ।
ಗಣೇಶಂ ಪೂಜಯಿತ್ವಾಥೋ ವೃಣುಯಾತ್ಪಾತ್ರಮುತ್ತಮಮ್ ॥ ೭ ॥
ಸಪತ್ನೀಕಶ್ಶುಚಿಶ್ಶಾಂತಸ್ಸದ್ವೃತ್ತಃ ಶ್ರೋತ್ರಿಯೋ ದ್ವಿಜಃ ।
ಅವ್ಯಂಗ್ಯಶ್ಚಾಪ್ಯರೋಗೀ ಚ ಕುಟುಂಬೀ ಪಾತ್ರಮುಚ್ಯತೇ ॥ ೮ ॥
ಪೂಜಯಿತ್ವಾಥ ತಂ ಸಮ್ಯಗ್ ವಸ್ತ್ರಾಲಂಕಾರಸಾಧನೈಃ ।
ಗವಾಮಂಗೇಷು ಸರ್ವೇಷು ದೇವತಾನ್ಯಾಸಮಾಚರೇತ್ ॥ ೯ ॥
ಬ್ರಹ್ಮಾವಿಷ್ಣೂ ಸ್ಥಿತೌ ನಿತ್ಯಂ ಗವಾಂ ವೈ ಶೃಂಗಮೂಲಯೋಃ ।
ಶೃಂಗಾಗ್ರೇ ಸರ್ವತೀರ್ಥಾನಿ ಸ್ಥಾವರಾಣಿ ಚರಾಣಿ ಚ ॥ ೧೦ ॥
ಶಿರೋಮಧ್ಯೇ ಮಹಾದೇವಸ್ಸರ್ವಭೂತಮಯಸ್ಸ್ಥಿತಃ ।
ಲಲಾಟಾಗ್ರೇ ಸ್ಥಿತಾ ಗೌರೀ ನಾಸಾವಂಶೇ ಚ ಷಣ್ಮುಖಃ ॥ ೧೧ ॥

ಕಂಬಲಾಶ್ವತರೌ ನಾಗೌ ನಾಸಾಯುಗ್ಮಮುಪಾಶ್ರಿತೌ ।
ಕರ್ಣಯೋರಶ್ವಿನೌ ದೇವೌ ನೇತ್ರಯೋಶ್ಶಶಿಭಾಸ್ಕರೌ ॥ ೧೨ ॥
ದಂತೇಷು ವಾಯವಸ್ಸರ್ವೇ ಜಿಹ್ವಾಯಾಂ ವರುಣಸ್ಸ್ಥಿತಃ ।
ಸರಸ್ವತೀ ಚ ಹುಂಕಾರೇ ಮಾಸಪಕ್ಷೌ ಚ ಗಂಡಯೋಃ ॥ ೧೩ ॥
ಓಷ್ಠದ್ವಯೇ ಚ ಸಂಧ್ಯೇ ದ್ವೇ ಗ್ರೀವಾಯಾಮಿಂದ್ರ ಆಸ್ಥಿತಃ ।
ಮುಖಮಧ್ಯೇಷು ಗಂಧರ್ವಾಸ್ಸಾಧ್ಯಾಶ್ಚೋರಸಿ ಸಂಸ್ಥಿತಾಃ ॥ ೧೪ ॥
ಚತುಷ್ಪಾತ್ಸಕಲೋ ಧರ್ಮಸ್ಸ್ವಯಂ ಜಂಘಾಸು ಸಂಸ್ಥಿತಃ ।
ಖುರಮಧ್ಯೇಷು ಗಂಧರ್ವಾ ಖುರಾಗ್ರೇಷು ಚ ಪನ್ನಗಾಃ ॥ ೧೫ ॥
ಖುರಾಣಾಂ ಪಶ್ಚಿಮಾಗ್ರೇಷು ಗಣಾ ಹ್ಯಪ್ಸರಸಾಂ ತಥಾ ।
ರುದ್ರಾಶ್ಚ ಸಕಲಾಃ ಪೃಷ್ಠೇ ವಸವಸ್ಸರ್ವಸಂಧಿಷು ॥ ೧೬ ॥
ಶ್ರೋಣೀತಟಸ್ಥಾಃ ಪಿತರಸ್ಸೋಮೋ ಲಾಂಗೂಲಮಾಸ್ಥಿತಃ ।
ಆದಿತ್ಯರಶ್ಮಯೋ ಬಾಲೇ ಪಿಂಡೀಭೂತಾಶ್ಚ ಸಂಸ್ಥಿತಾಃ ॥ ೧೭ ॥
ಸಾಕ್ಷಾದ್ಗಂಗಾ ಚ ಗೋಮೂತ್ರೇ ಗೋಮಯೇ ಯಮುನಾ ಸ್ಥಿತಾ ।
ಕ್ಷೀರೇ ಸರಸ್ವತೀ ದೇವೀ ನರ್ಮದಾ ದಧ್ನಿ ಸಂಸ್ಥಿತಾ ॥ ೧೮ ॥
ಹುತಾಶನಸ್ಸ್ವಯಂ ಸರ್ಪಿರ್ಬ್ರಾಹ್ಮಣಾನಾಂ ಗುರುಃ ಪರಃ ।
ಅಷ್ಟಾವಿಂಶತಿದೇವಾನಾಂ ಕೋಟಯೋ ರೋಮಸಂಸ್ಥಿತಾಃ ॥ ೧೯ ॥
ಉದರೇ ಪೃಥಿವೀ ಜ್ಞೇಯಾ ಸಾಗರಾಶ್ಚ ಪಯೋಧರಾಃ ।
ಏವಮಾವಾಹ್ಯ ಸರ್ವಾಂಗೇ ದೇವತಾಸ್ತಾಭಿರನ್ವಿತಾಮ್ ॥ ೨೦ ॥
ಪೂಜಯೇದ್ಗಾಂ ತತೋ ಭಕ್ತ್ಯಾ ಷೋಡಶೈರುಪಚಾರಕೈಃ ।
ವಸ್ತ್ರಾಲಂಕಾರಮಾಲಾಭಿರಾಗಾವ ಇತಿ ಮಂತ್ರತಃ ॥ ೨೧ ॥
ಸದಶಂ ನೂತನಂ ವಾಸಃ ಕಾರ್ಪಾಸಂ ಕ್ಷೌಮಮೇವ ವಾ ।
ಆಚ್ಛಾದನಂ ಮಯಾ ದತ್ತಂ ಸುರಭೇ ಪ್ರತಿಗೃಹ್ಯತಾಮ್ ॥ ೨೨ ॥
ಸುರಭೇ ತ್ವಂ ಜಗನ್ಮಾತಾ ದೇವೀ ವಿಷ್ಣುಪದೇ ಸ್ಥಿತಾ ।
ಗ್ರಾಸಂ ಗೃಹಾಣ ಮದ್ದತ್ತಂ ಗೌರ್ಮಾತಸ್ತ್ರಾತುಮರ್ಹಸಿ ॥ ೨೩ ॥
ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾಚ್ಛಿವಂ ಮೇ ಸ್ಯಾದಿಹ ಲೋಕೇ ಪರತ್ರ ಚ ॥ ೨೪ ॥
ಗಾವೋ ಮಮಾಗ್ರತಸ್ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಪಾರ್ಶ್ವಯೋಸ್ಸಂತು ಗವಾಂ ಮಧ್ಯೇ ವಸಾಮ್ಯಹಮ್ ॥ ೨೫ ॥
ಏವಂ ಪ್ರದಕ್ಷಿಣೀಕೃತ್ಯ ತ್ರಿವಾರಂ ಭಕ್ತಿಮಾನ್ನರಃ ।
ಮಂತ್ರೇಣಾನೇನ ಸಸ್ತ್ರೀಕಸ್ಸಾಷ್ಟಾಂಗಂ ಪ್ರಣಮೇತ್ತತಃ ॥ ೨೬ ॥

ಪಂಚಗಾವಸ್ಸಮುತ್ಪನ್ನಾಃ ಮಥ್ಯಮಾನೇ ಮಹೋದಧೌ ।
ತಾಸಾಂ ಮಧ್ಯೇ ತು ಯಾ ನಂದಾ ತಸ್ಯೈ ಧೇನ್ವೇ ನಮೋ ನಮಃ ॥ ೨೭ ॥
ಏವಂ ಪ್ರಣಮ್ಯ ಗೋಪುಚ್ಛಂ ಗೃಹೀತ್ವಾ ದಕ್ಷಿಣೇ ಕರೇ ।
ದಕ್ಷಿಣಾಭಿಮುಖಃ ಪಿತೄಂಸ್ತರ್ಪಯೇತ್ಸಲಿಲೈರ್ಜಲೈಃ ॥ ೨೮ ॥
ಏವಂ ಸಂತರ್ಪ್ಯ ಪಿತ್ರಾದೀನ್ಸುರ್ವಂತಾಂಸ್ತದನಂತರಮ್ ।
ಬ್ರಹ್ಮಾದ್ಯಾ ದೇವತಾಸ್ಸರ್ವಾ ಮುನಯೋ ಮಾನವಾಸ್ತಥಾ ॥ ೨೯ ॥
ಅಸುರಾಃ ಪನ್ನಗಾ ನಾಗಾ ಮಾತರಶ್ಚಂಡಿಕಾಸ್ತಥಾ ।
ದಿಕ್ಪಾಲಾ ಲೋಕಪಾಲಾಶ್ಚ ಗ್ರಹದೇವಾಧಿದೇವತಾಃ ॥ ೩೦ ॥
ಸರ್ವೇ ತೇ ತೃಪ್ತಿಮಾಯಾಂತು ಗೋಪುಚ್ಛೋದಕತರ್ಪಿತಾಃ ।
ವಿಶ್ವೇದೇವಾಸ್ತಥಾದಿತ್ಯಾಸ್ಸಾಧ್ಯಾಶ್ಚೈವ ಮರುದ್ಗಣಾಃ ॥ ೩೧ ॥
ಕ್ಷೇತ್ರಪೀಠೋಪಪೀಠಾನಿ ನದಾ ನದ್ಯಶ್ಚ ಸಾಗರಾಃ ।
ಪಾತಾಲೇ ನಾಗಪತ್ನ್ಯಶ್ಚ ನಾಗಾಶ್ಚ ಕುಲಪರ್ವತಾಃ ॥ ೩೨ ॥
ಪಿಶಾಚಾ ಗುಹ್ಯಕಾಃ ಪ್ರೇತಾ ಗಂಧರ್ವಗಣರಾಕ್ಷಸಾಃ ।
ಪೃಥಿವ್ಯಾಪಶ್ಚ ತೇಜಶ್ಚ ವಾಯುರಾಕಾಶಮೇವ ಚ ॥ ೩೩ ॥
ಭುವಿ ದಿವ್ಯಂತರಿಕ್ಷೇ ಚ ಪಾತಾಲತಲವಾಸಿನಃ ।
ತಪೋಧನಾಶ್ಚ ಭಗವಾನವ್ಯಯಃ ಪರಮೇಶ್ವರಃ ॥ ೩೪ ॥
ಕ್ಷೇತ್ರೌಷಧಿಲತಾ ವೃಕ್ಷಾ ವನಸ್ಪತ್ಯಧಿದೇವತಾಃ ।
ಕಪಿಲಃ ಶೇಷನಾಗಶ್ಚ ತಕ್ಷಕೋಽನಂತ ಏವ ಚ ॥ ೩೫ ॥
ಅನ್ಯೇ ಜಲಧರಾ ಜೀವಾ ಹ್ಯಸಂಖ್ಯಾತಾಸ್ತ್ವನೇಕಶಃ ।
ಚತುರ್ದಶಯಮಾಶ್ಚೈವ ಯೇ ಚಾನ್ಯೇ ಯಮಕಿಂಕರಾಃ ॥ ೩೬ ॥
ಯಕ್ಷಾಸ್ಸಿದ್ಧಾಃ ಕಿನ್ನರಾಶ್ಚ ಪಕ್ಷಿಣಃ ಪಶವಸ್ತಥಾ ।
ಅಜಾ ಗಾವೋ ಮಹಿಷ್ಯಶ್ಚ ಯೇ ಚಾನ್ಯೇ ಸರ್ವತಃ ಸ್ಥಿತಾಃ ॥ ೩೭ ॥
ಶಾಂತಿದಾಃ ಶುಭದಾಸ್ಸಂತು ಗೋಪುಚ್ಛೋದಕತರ್ಪಿತಾಃ ।
ಸರ್ಪವ್ಯಾಘ್ರಹತಾ ಯೇ ಚ ಶೃಂಗಿದಂಷ್ಟ್ರಾನಖಾದಿಭಿಃ ॥ ೩೮ ॥
ಅಪುತ್ರಾ ಹ್ಯಕ್ರಿಯಾ ಯೇ ಚ ಅದಾರಾ ಧರ್ಮವರ್ಜಿತಾಃ ।
ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ॥ ೩೯ ॥
ತೃಪ್ಯಂತು ಪಿತರಸ್ಸರ್ವೇ ಮಾತೃಮಾತಾಮಹಾದಯಃ ।
ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಮ್ ॥ ೪೦ ॥
ಆಬ್ರಹ್ಮಭುವನಾಲ್ಲೋಕಾದಸ್ತು ಪುಚ್ಛೋದಕಂ ತ್ವಿದಮ್ ।
ಏವಂ ಕಾಮೋದಕಂ ದತ್ವಾ ಕುಶಹಸ್ತ ಉದಙ್ಮುಖೀಮ್ ॥ ೪೧ ॥

ಪ್ರಾಗಾಸ್ಯ ಉದಗಾಸ್ಯಾಯ ತಿಷ್ಠನ್ದದ್ಯಾದ್ದ್ವಿಜಾಯ ಗಾಮ್ ।
ಸ್ವರ್ಣಶೃಂಗೀಂ ರೌಪ್ಯಖುರಾಂ ತಾಮ್ರಪೃಷ್ಠೀಂ ಪಯಸ್ವಿನೀಮ್ ॥ ೪೨ ॥
ಚೈತ್ರಕಂಠೀಂ ಕಾಂಸ್ಯದೋಹಾಂ ಮುಕ್ತಾಲಾಂಗೂಲಭೂಷಿತಾಮ್ ।
ಸವತ್ಸಾಂ ತರುಣೀಂ ರೌದ್ರೀಂ ಘಂಟಾಚಾಮರಶೋಭಿತಾಮ್ ॥ ೪೩ ॥
ದದ್ಯಾತ್ಸಂಕಲ್ಪ್ಯ ಸಜಲಂ ಪೂಜಿತಾಂ ಪೂಜಿತಾಯ ಗಾಮ್ ।
ಘೃತದುಗ್ಧತಿಲೈಃ ಪೂರ್ಣೇ ಸಸ್ವರ್ಣೇ ಕಾಂಸ್ಯಭಾಜನೇ ॥ ೪೪ ॥
ನಿಕ್ಷಿಪ್ಯ ಸಕುಶಂ ಪುಚ್ಛಂ ದದ್ಯಾದ್ವಿಪ್ರಕರೇ ಕೃತೀ ।
ತತೋ ದಾನಸ್ಯ ಸಂಪೂರ್ತ್ಯೈ ಶಕ್ತ್ಯಾ ಸ್ವರ್ಣಾದಿದಕ್ಷಿಣಾಮ್ ॥ ೪೫ ॥
ದತ್ತ್ವಾ ವಿಪ್ರಾಯ ಗೋಸೂಕ್ತಂ ಪಠಿತ್ವಾ ಗೋಮತೀಂ ಜಪೇತ್ ।
ಗಾವೋ ಮಾಮುಪತಿಷ್ಠಂತು ಹೇಮಶೃಂಗ್ಯಃ ಪಯೋಮುಚಃ ॥ ೪೬ ॥
ಸುರಭ್ಯಃ ಸೌರಭೇಯಾಶ್ಚ ಸರ್ವಕಾಮದುಘಾಶ್ಶುಭಾಃ ।
ಗಾಂ ವೈ ಪಶ್ಯಾಮ್ಯಹಂ ನಿತ್ಯಂ ಗಾವಃ ಪಶ್ಯಂತು ಮಾಂ ಸದಾ ॥ ೪೭ ॥
ಗಾವೋಽಸ್ಮಾಕಂ ವಯಂ ತಾಸಾಂ ಯತೋ ಗಾವಸ್ತತೋ ವಯಮ್ ।
ಗಾವಸ್ಸುರಭಯೋ ನಿತ್ಯಂ ಗಾವೋ ಗುಗ್ಗುಲಸನ್ನಿಭಾಃ ॥ ೪೮ ॥
ಗಾವಃ ಪ್ರತಿಷ್ಠಾ ಭೂತಾನಾಂ ಗಾವಸ್ಸ್ವಸ್ತ್ಯಯನಂ ಮಹತ್ ।
ಅನ್ನಮೇವ ಪರಂ ಗಾವೋ ದೇವಾನಾಂ ಹವಿಸತ್ತಮಮ್ ॥ ೪೯ ॥
ಪಾವನಂ ಸರ್ವಭೂತಾನಾಂ ರಕ್ಷಂತಿ ಚ ವಹಂತಿ ಚ ।
ಹವಿಷಾ ಮಂತ್ರಪೂತೇನ ತರ್ಪಯಂತ್ಯಪರಾನ್ದಿವಿ ॥ ೫೦ ॥
ಋಷೀಣಾಮಪಿ ಹೋತ್ರ್ಯಾಣಾಂ ಗಾವೋ ಹೋಮೇ ಪ್ರತಿಷ್ಠಿತಾಃ ।
ಸರ್ವೇಷಾಮೇವ ಭೂತಾನಾಂ ಗಾವಶ್ಶರಣಮುತ್ತಮಮ್ ॥ ೫೧ ॥
ಗಾವಃ ಪವಿತ್ರಂ ಪರಮಂ ಗಾವೋ ಮಂಗಲಮುತ್ತಮಮ್ ।
ಗಾವಸ್ಸರ್ವಸ್ಯ ಲೋಕಸ್ಯ ಗಾವೋ ಧನ್ಯಾಸ್ಸವತ್ಸಕಾಃ ॥ ೫೨ ॥
ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ ।
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥ ೫೩ ॥
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಕೃತಮ್ ।
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ॥ ೫೪ ॥
ಘೃತಕ್ಷೀರದುಹಾ ಗಾವೋ ಘೃತಯೋನ್ಯೋ ಘೃತೋದ್ಭವಾಃ ।
ಘೃತಂ ನದ್ಯೋ ಘೃತಾವಾರ್ತಾಸ್ತಾ ಮೇ ಸಂತು ಸದಾ ಗೃಹೇ ॥ ೫೫ ॥
ನತಸ್ತು ಭೂಯಸೀಂ ದತ್ತ್ವಾ ನ್ಯೂನಾಧಿಕ್ಯನಿವಾರಿಣೀಮ್ ।
ಕರ್ಮೇಶ್ವರಾರ್ಪಣಂ ಕೃತ್ವಾ ಶಕ್ತ್ಯಾ ಸಂಭೋಜಯೇದ್ದ್ವಿಜಾನ್ ॥ ೫೬ ॥

ಅಥವಾ ದೇವತಾಗಾರೇ ಗಂಗಾತೀರೇ ವಿಚಕ್ಷಣಃ ।
ಪಾತ್ರಂ ಮನಸಿ ಸಂಧಾಯ ತೋಯೇ ತೋಯಂ ವಿನಿಕ್ಷಿಪೇತ್ ॥ ೫೭ ॥
ತತಃ ಪಾತ್ರಗೃಹಂ ಗತ್ವಾ ತಾಂ ಧೇನುಂ ಸಪರಿಚ್ಛದಾಮ್ ।
ಪ್ರದದ್ಯಾತ್ವರಯಾ ಭಕ್ತ್ಯಾ ಬ್ರಾಹ್ಮಣಾಯ ಸದಕ್ಷಿಣಾಮ್ ॥ ೫೮ ॥
ಅಥವಾ ಪುಣ್ಯಸಮಯೇ ಗೋಮೂಲ್ಯಂ ದಕ್ಷಿಣಾಯುತಮ್ ।
ದೇಯಂ ಸಂಕಲ್ಪ್ಯ ವಿಪ್ರಾಯ ಗೋದಾನಂ ಚಾಕ್ಷಯಂ ಸ್ಮೃತಮ್ ॥ ೫೯ ॥
ಏವಂ ಕುರ್ವಂತಿ ಯೇ ಭಕ್ತ್ಯಾ ಯೇನ ಕೇನಾಪಿ ವರ್ತ್ಮನಾ ।
ಭುಕ್ತ್ವೈಹಿಕಂ ಫಲಂ ಸಮ್ಯಗ್ಲಭಂತೇ ಪಾರಲೌಕಿಕಮ್ ॥ ೬೦ ॥
ಸ್ವರೋಮಸಮಸಂಖ್ಯಾಕಂ ದತ್ವಾ ವೈಕುಂಠವಾಸಕಮ್ ।
ಪಿತೃಂಶ್ಚೋದ್ಧರತೇ ದಾತುರ್ದಶಪೂರ್ವಾನ್ದಶಾಪರಾನ್ ॥ ೬೧ ॥
ಪ್ರಯಾಗೇ ಚ ವಟೇ ಚೈತನ್ಮಾಘಮಾಸೇ ವಿಶೇಷತಃ ।
ಗೋಪ್ರದಾನಂ ಯಥಾವಿತ್ತಮನಂತಫಲದಂ ಭವೇತ್ ॥ ೬೨ ॥
ಏವಂ ವೋ ಮುನಯಃ ಪ್ರೋಕ್ತೋ ಗೋದಾನಸ್ಯ ವಿಧಿಃ ಫಲಮ್ ।
ಯತ್ಪಾಠಾತ್ ಶ್ರವಣಾದ್ಭಕ್ತ್ಯಾ ದಾನಸ್ಯ ಫಲಮಾಪ್ನುಯಾತ್ ॥ ೬೩ ॥
ಅನ್ಯಾನ್ಯಪಿ ತು ದಾನಾನಿ ವಕ್ಷ್ಯಾಮ್ಯಥ ನಿಬೋಧತ ॥ ೬೪ ॥

॥ ಇತಿ ಷಟ್ಪಂಚಾಶತ್ತಮೋಽಧ್ಯಾಯಃ ॥

**ಸೂತರು ಹೇಳಿದರು—**

ಯಾವುದನ್ನು ಶ್ರವಣಮಾಡುವುದರಿಂದ ಉತ್ತಮವಾದ ಪುಣ್ಯವನ್ನು ಹೊಂದುತ್ತಾರೋ ಅಂತಹ ಮಂಗಳಕರವಾದ ಗೋದಾನವಿಧಿಯನ್ನು ಸಾವಧಾನದಿಂದ ಕೇಳುವವರಾಗಿರಿ. ॥ ೨ ॥ ಯಾರು ದೇವಯೋಗ್ಯಗಳಾದ ಆಭರಣಗಳನ್ನು ಧರಿಸಿ ದೇವಲೋಕದ ವಿಮಾನಗಳಲ್ಲಿ ಕುಳಿತು ಸ್ವರ್ಗಲೋಕಕ್ಕೆ ತೆರಳುವ ಇಚ್ಛೆಯುಳ್ಳವರೋ, ಸಮಸ್ತ ಪಾಪಗಳನ್ನು ಕಳೆದುಕೊಂಡು ವೈಕುಂಠದ ವಾಸವನ್ನೂ, ಸಮಸ್ತ ಪಿತೃಗಳ ಮುಕ್ತಿಯನ್ನೂ ಬಯಸುವರೋ ಅಂತಹವರು ಆಕಳನ್ನು ದಾನ ಮಾಡಬೇಕು. ॥ ೩-೪ ॥ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿ, ಪುಣ್ಯಕಾಲದಲ್ಲಿ ಪವಿತ್ರಸ್ಥಳದಲ್ಲಿ ಯಜಮಾನನು ತನ್ನ ಹೆಂಡತಿಯೊಡನೆ ಆಚಮನ ಮಾಡಿ, ಪ್ರಾಣಾಯಾಮವನ್ನು ಮಾಡಿ, ವಾಙ್ನಿಯಮವುಳ್ಳವನಾಗಿ ದೇಶಕಾಲಗಳನ್ನು ಸ್ಮರಣೆ ಮಾಡಿ ತನ್ನ ಸಮಸ್ತ ಪಾಪಗಳ ಪರಿಹಾರಾರ್ಥವಾಗಿಯೂ, ಇಷ್ಟವಾದ ಕಾಮನೆಗಳ ಸಿದ್ಧಿಗಾಗಿಯೂ ಮತ್ತು ಶ್ರೀಮಾಧವನ ಪ್ರೀತಿಗಾಗಿಯೂ ಗೋದಾನವನ್ನು ಮಾಡುತ್ತೇನೆ'' ಎಂದು ಭಕ್ತಿಯುಕ್ತನಾಗಿ ಸಂಕಲ್ಪ ಮಾಡಬೇಕು. ಅನಂತರ ಶ್ರೀಗಣೇಶನನ್ನು ಪೂಜಿಸಿ ಪಾತ್ರನಾದ ಬ್ರಾಹ್ಮಣೋತ್ತಮನನ್ನು ವರಿಸಬೇಕು. ॥ ೫-೭ ॥ ಪತ್ನೀಯುಕ್ತನಾಗಿರಬೇಕು, ಶುಚಿರ್ಭೂತನಾಗಿರಬೇಕು, ಶಾಂತ ಸ್ವಭಾವದವನಾಗಿರಬೇಕು, ಸದಾಚಾರಸಂಪನ್ನನಾಗಿ ಇರಬೇಕು ಮತ್ತು ಶ್ರೋತ್ರಿಯನಾಗಿರಬೇಕು. ಅಂಗಾಂಗಗಳ ನ್ಯೂನತೆಯಿಲ್ಲದವನಾಗಿರಬೇಕು, ರೋಗಿಷ್ಠನಾಗಿರಬಾರದು, ಕುಟುಂಬಸ್ಥನಾಗಿರಬೇಕು. ಇಂಥಾ

ಪ್ರಾಗಾಸ್ಯ ಉದಗಾಸ್ಯಾಯ ತಿಷ್ಠನ್ದದ್ಯಾದ್ದ್ವಿಜಾಯ ಗಾಮ್ ।
ಸ್ವರ್ಣಶೃಂಗೀಂ ರೌಪ್ಯಖುರಾಂ ತಾಮ್ರಪೃಷ್ಠೀಂ ಪಯಸ್ವಿನೀಮ್ ॥ ೪೨ ॥
ಚೈತ್ರಕಂಠೀಂ ಕಾಂಸ್ಯದೋಹಾಂ ಮುಕ್ತಾಲಾಂಗೂಲಭೂಷಿತಾಮ್ ।
ಸವತ್ಸಾಂ ತರುಣೀಂ ರೌದ್ರೀಂ ಘಂಟಾಚಾಮರಶೋಭಿತಾಮ್ ॥ ೪೩ ॥
ದದ್ಯಾತ್ಸಂಕಲ್ಪ್ಯ ಸಜಲಂ ಪೂಜಿತಾಂ ಪೂಜಿತಾಯ ಗಾಮ್ ।
ಘೃತದುಗ್ಧತಿಲೈಃ ಪೂರ್ಣೇ ಸಸ್ವರ್ಣೇ ಕಾಂಸ್ಯಭಾಜನೇ ॥ ೪೪ ॥
ನಿಕ್ಷಿಪ್ಯ ಸಕುಶಂ ಪುಚ್ಛಂ ದದ್ಯಾದ್ವಿಪ್ರಕರೇ ಕೃತೀ ।
ತತೋ ದಾನಸ್ಯ ಸಂಪೂರ್ತ್ಯೈ ಶಕ್ತ್ಯಾ ಸ್ವರ್ಣಾದಿದಕ್ಷಿಣಾಮ್ ॥ ೪೫ ॥
ದತ್ವಾ ವಿಪ್ರಾಯ ಗೋಸೂಕ್ತಂ ಪಠಿತ್ವಾ ಗೋಮತೀಂ ಜಪೇತ್ ।
ಗಾವೋ ಮಾಮುಪತಿಷ್ಠಂತು ಹೇಮಶೃಂಗ್ಯಃ ಪಯೋಮುಚಃ ॥ ೪೬ ॥
ಸುರಭ್ಯಃ ಸೌರಭೇಯಾಶ್ಚ ಸರ್ವಕಾಮದುಘಾಶ್ಶುಭಾಃ ।
ಗಾಂ ವೈ ಪಶ್ಯಾಮ್ಯಹಂ ನಿತ್ಯಂ ಗಾವಃ ಪಶ್ಯಂತು ಮಾಂ ಸದಾ ॥ ೪೭ ॥
ಗಾವೋಽಸ್ಮಾಕಂ ವಯಂ ತಾಸಾಂ ಯತೋ ಗಾವಸ್ತತೋ ವಯಮ್ ।
ಗಾವಸ್ಸುರಭಯೋ ನಿತ್ಯಂ ಗಾವೋ ಗುಗ್ಗುಲಸನ್ನಿಭಾಃ ॥ ೪೮ ॥
ಗಾವಃ ಪ್ರತಿಷ್ಠಾ ಭೂತಾನಾಂ ಗಾವಸ್ಸ್ವಸ್ತ್ಯಯನಂ ಮಹತ್ ।
ಅನ್ನಮೇವ ಪರಂ ಗಾವೋ ದೇವಾನಾಂ ಹವಿಸತ್ತಮಮ್ ॥ ೪೯ ॥
ಪಾವನಂ ಸರ್ವಭೂತಾನಾಂ ರಕ್ಷಂತಿ ಚ ವಹಂತಿ ಚ ।
ಹವಿಷಾ ಮಂತ್ರಪೂತೇನ ತರ್ಪಯಂತ್ಯಪರಾನ್ದಿವಿ ॥ ೫೦ ॥
ಋಷೀಣಾಮಪಿ ಹೋತೄಣಾಂ ಗಾವೋ ಹೋಮೇ ಪ್ರತಿಷ್ಠಿತಾಃ ।
ಸರ್ವೇಷಾಮೇವ ಭೂತಾನಾಂ ಗಾವಶ್ಶರಣಮುತ್ತಮಮ್ ॥ ೫೧ ॥
ಗಾವಃ ಪವಿತ್ರಂ ಪರಮಂ ಗಾವೋ ಮಂಗಲಮುತ್ತಮಮ್ ।
ಗಾವಸ್ಸರ್ವಸ್ಯ ಲೋಕಸ್ಯ ಗಾವೋ ಧನ್ಯಾಸ್ಸವತ್ಸಕಾಃ ॥ ೫೨ ॥
ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯೀಭ್ಯ ಏವ ಚ ।
ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ॥ ೫೩ ॥
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಕೃತಮ್ ।
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ॥ ೫೪ ॥
ಘೃತಕ್ಷೀರದುಹಾ ಗಾವೋ ಘೃತಯೋನ್ಯೋ ಘೃತೋದ್ಭವಾಃ ।
ಘೃತಂ ನದ್ಯೋ ಘೃತಾವಾರ್ತಾಸ್ತಾ ಮೇ ಸಂತು ಸದಾ ಗೃಹೇ ॥ ೫೫ ॥
ನತಸ್ತು ಭೂಯಸೀಂ ದತ್ವಾ ನ್ಯೂನಾಧಿಕ್ಯನಿವಾರಿಣೀಮ್ ।
ಕರ್ಮೇಶ್ವರಾರ್ಪಣಂ ಕೃತ್ವಾ ಶಕ್ತ್ಯಾ ಸಂಭೋಜಯೇದ್ದ್ವಿಜಾನ್ ॥ ೫೬ ॥

ಅಥವಾ ದೇವತಾಗಾರೇ ಗಂಗಾತೀರೇ ವಿಚಕ್ಷಣಃ ।
ಪಾತ್ರಂ ಮನಸಿ ಸಂಧಾಯ ತೋಯೇ ತೋಯಂ ವಿನಿಕ್ಷಿಪೇತ್ ॥ ೫೭ ॥
ತತಃ ಪಾತ್ರಗೃಹಂ ಗತ್ವಾ ತಾಂ ಧೇನುಂ ಸಪರಿಚ್ಛದಾಮ್ ।
ಪ್ರದದ್ಯಾತ್ವರಯಾ ಭಕ್ತ್ಯಾ ಬ್ರಾಹ್ಮಣಾಯ ಸದಕ್ಷಿಣಾಮ್ ॥ ೫೮ ॥
ಅಥವಾ ಪುಣ್ಯಸಮಯೇ ಗೋಮೂಲ್ಯಂ ದಕ್ಷಿಣಾಯುತಮ್ ।
ದೇಯಂ ಸಂಕಲ್ಪ್ಯ ವಿಪ್ರಾಯ ಗೋದಾನಂ ಚಾಕ್ಷಯಂ ಸ್ಮೃತಮ್ ॥ ೫೯ ॥
ಏವಂ ಕುರ್ವಂತಿ ಯೇ ಭಕ್ತ್ಯಾ ಯೇನ ಕೇನಾಪಿ ವರ್ತ್ಮನಾ ।
ಭುಕ್ತ್ವೈಹಿಕಂ ಫಲಂ ಸಮ್ಯಗ್ಲಭಂತೇ ಪಾರಲೌಕಿಕಮ್ ॥ ೬೦ ॥
ಸ್ವರೋಮಸಮಸಂಖ್ಯಾಕಂ ದತ್ವಾ ವೈಕುಂಠವಾಸಕಮ್ ।
ಪಿತೄಂಶ್ಚೋದ್ಧರತೇ ದಾತುರ್ದಶಪೂರ್ವಾನ್ದಶಾಪರಾನ್ ॥ ೬೧ ॥
ಪ್ರಯಾಗೇ ಚ ವಟೇ ಚೈತನ್ಮಾಘಮಾಸೇ ವಿಶೇಷತಃ ।
ಗೋಪ್ರದಾನಂ ಯಥಾವಿತ್ತಮನಂತಫಲದಂ ಭವೇತ್ ॥ ೬೨ ॥
ಏವಂ ವೋ ಮುನಯಃ ಪ್ರೋಕ್ತೋ ಗೋದಾನಸ್ಯ ವಿಧಿಃ ಫಲಮ್ ।
ಯತ್ಪಾಠಾತ್ ಶ್ರವಣಾದ್ಭಕ್ತ್ಯಾ ದಾನಸ್ಯ ಫಲಮಾಪ್ನುಯಾತ್ ॥ ೬೩ ॥
ಅನ್ಯಾನ್ಯಪಿ ತು ದಾನಾನಿ ವಕ್ಷ್ಯಾಮ್ಯಥ ನಿಬೋಧತ ॥ ೬೪ ॥

॥ ಇತಿ ಷಟ್ಪಂಚಾಶತ್ತಮೋಽಧ್ಯಾಯಃ ॥

**ಸೂತರು ಹೇಳಿದರು—**

ಯಾವುದನ್ನು ಶ್ರವಣಮಾಡುವುದರಿಂದ ಉತ್ತಮವಾದ ಪುಣ್ಯವನ್ನು ಹೊಂದುತ್ತಾರೋ ಅಂತಹ ಮಂಗಳಕರವಾದ ಗೋದಾನವಿಧಿಯನ್ನು ಸಾವಧಾನದಿಂದ ಕೇಳುವವರಾಗಿರಿ. ॥ ೨ ॥ ಯಾರು ದೇವಯೋಗ್ಯಗಳಾದ ಆಭರಣಗಳನ್ನು ಧರಿಸಿ ದೇವಲೋಕದ ವಿಮಾನಗಳಲ್ಲಿ ಕುಳಿತು ಸ್ವರ್ಗಲೋಕಕ್ಕೆ ತೆರಳುವ ಇಚ್ಛೆಯುಳ್ಳವರೋ, ಸಮಸ್ತ ಪಾಪಗಳನ್ನು ಕಳೆದುಕೊಂಡು ವೈಕುಂಠದ ವಾಸವನ್ನೂ, ಸಮಸ್ತ ಪಿತೃಗಳ ಮುಕ್ತಿಯನ್ನೂ ಬಯಸುವರೋ ಅಂತಹವರು ಆಕಳನ್ನು ದಾನ ಮಾಡಬೇಕು. ॥ ೩-೪ ॥ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿ, ಪುಣ್ಯಕಾಲದಲ್ಲಿ ಪವಿತ್ರಸ್ಥಳದಲ್ಲಿ ಯಜಮಾನನು ತನ್ನ ಹೆಂಡತಿಯೊಡನೆ ಆಚಮನ ಮಾಡಿ, ಪ್ರಾಣಾಯಾಮವನ್ನು ಮಾಡಿ, ವಾಙ್ನಿಯಮವುಳ್ಳವನಾಗಿ ದೇಶಕಾಲಗಳನ್ನು ಸ್ಮರಣೆ ಮಾಡಿ ತನ್ನ ಸಮಸ್ತ ಪಾಪಗಳ ಪರಿಹಾರಾರ್ಥವಾಗಿಯೂ, ಇಷ್ಟವಾದ ಕಾಮನೆಗಳ ಸಿದ್ಧಿಗಾಗಿಯೂ ಮತ್ತು ಶ್ರೀಮಾಧವನ ಪ್ರೀತಿಗಾಗಿಯೂ ಗೋದಾನವನ್ನು ಮಾಡುತ್ತೇನೆ'' ಎಂದು ಭಕ್ತಿಯುಕ್ತನಾಗಿ ಸಂಕಲ್ಪ ಮಾಡಬೇಕು. ಅನಂತರ ಶ್ರೀಗಣೇಶನನ್ನು ಪೂಜಿಸಿ ಪಾತ್ರನಾದ ಬ್ರಾಹ್ಮಣೋತ್ತಮನನ್ನು ವರಿಸಬೇಕು. ॥ ೫-೭ ॥ ಪತ್ನೀಯುಕ್ತನಾಗಿರಬೇಕು, ಶುಚಿರ್ಭೂತನಾಗಿರಬೇಕು, ಶಾಂತ ಸ್ವಭಾವದವನಾಗಿರಬೇಕು, ಸದಾಚಾರಸಂಪನ್ನನಾಗಿ ಇರಬೇಕು ಮತ್ತು ಶ್ರೋತ್ರಿಯನಾಗಿರಬೇಕು. ಅಂಗಾಂಗಗಳ ನ್ಯೂನತೆಯಿಲ್ಲದವನಾಗಿರಬೇಕು, ರೋಗಿಷ್ಠನಾಗಿರಬಾರದು, ಕುಟುಂಬಸ್ಥನಾಗಿರಬೇಕು. ಇಂಥಾ

ಬ್ರಾಹ್ಮಣನು ದಾನಕ್ಕೆ ಉತ್ತಮನಾದ ಪಾತ್ರನು. ॥ ೮ ॥ ವಸ್ತ್ರ ಹೂಮಾಲೆ ಮುಂತಾದ ಸಾಧನಗಳಿಂದ ಇಂತಹ ಬ್ರಾಹ್ಮಣನನ್ನು ಪೂಜಿಸಬೇಕು. ಗೋವಿನ ಎಲ್ಲ ಅಂಗಾಂಗಗಳಲ್ಲಿಯೂ ದೇವತೆಗಳನ್ನು ಅನುಸಂಧಾನಪೂರ್ವಕ ಆವಾಹನ ಮಾಡಬೇಕು. ॥ ೯ ॥ ಶ್ರೀ ಚತುರ್ಮುಖ ಬ್ರಹ್ಮನೂ ಶ್ರೀಮಹಾವಿಷ್ಣುವೂ ಯಾವಾಗಲೂ ಗೋವಿನ ಕೊಂಬಿನ ಮೂಲದಲ್ಲಿರುವವರು. ಹರಿಯುತ್ತಿರುವ ಮತ್ತು ಚಲಿಸದ, ಸಮಸ್ತ ತೀರ್ಥಗಳೂ ಕೊಂಬಿನ ಅಗ್ರಭಾಗಗಳಲ್ಲಿರುತ್ತವೆ. ॥ ೧೦ ॥ ತಲೆಯ ಮಧ್ಯದಲ್ಲಿ ಪಂಚಭೂತಗಳ ಸ್ವರೂಪರಾದ ಶ್ರೀಮಹಾದೇವರು, ಹಣೆಯ ಅಗ್ರಭಾಗದಲ್ಲಿ ಗೌರೀದೇವಿಯು, ಮೂಗಿನ ಹೊಳ್ಳೆಗಳಲ್ಲಿ ಷಣ್ಮುಖನು ಇದ್ದಾರೆ. ॥ ೧೧ ॥ ಕಂಬಲ ಮತ್ತು ಅಶ್ವತರಗಳೆಂಬ ಸರ್ಪದೇವತೆಗಳು ಮೂಗಿನ ರಂಧ್ರಗಳಲ್ಲಿಯೂ, ಕಿವಿಗಳಲ್ಲಿ ಅಶ್ವಿನೀದೇವತೆಗಳು ಮತ್ತು ಕಣ್ಣುಗಳಲ್ಲಿ ಸೂರ್ಯಚಂದ್ರರೂ ಇದ್ದಾರೆ. ॥ ೧೨ ॥ ಹಲ್ಲುಗಳಲ್ಲಿ ವಾಯುಗಣಗಳು, ನಾಲಿಗೆಯಲ್ಲಿ ವರುಣನು, ಹುಂಕಾರದಲ್ಲಿ ಸರಸ್ವತಿಯು, ಮಾಸಗಳು ಮತ್ತು ಪಕ್ಷಗಳು ಅದರ ಕಪೋಲಗಳಲ್ಲಿ, ತುಟಿಗಳಲ್ಲಿ ಎರಡು ಸಂಧ್ಯಾಕಾಲಗಳೂ ಕುತ್ತಿಗೆಯಲ್ಲಿ ಇಂದ್ರದೇವರೂ ಅದರ ಮುಖದ ಮಧ್ಯಭಾಗದಲ್ಲಿ ಗಂಧರ್ವರೂ, ಎದೆಭಾಗದಲ್ಲಿ ಸಾಧ್ಯರು, ನಾಲ್ಕು ಪಾದಗಳುಳ್ಳ ಧರ್ಮವು ಅದರ ಮೊಣಕಾಲುಗಳಲ್ಲಿಯೂ, ಗೊರಸುಗಳ ಮಧ್ಯೆ ಗಂಧರ್ವರೂ, ಗೊರಸುಗಳ ತುದಿಯಲ್ಲಿ ನಾಗದೇವತೆಗಳೂ ಗೊರಸುಗಳ ಹಿಂಭಾಗಗಳಲ್ಲಿ ಅಪ್ಸರೆಯರ ಗುಂಪುಗಳೂ, ಬೆನ್ನಿನಲ್ಲಿ ರುದ್ರಗಣಗಳು, ಎಲ್ಲ ಕೀಲಕಗಳಲ್ಲಿಯೂ ಅಷ್ಟವಸುಗಳು, ಎರಡು ನಿತಂಬಗಳಲ್ಲಿ ಪಿತೃಗಳು, ಬಾಲದಲ್ಲಿ ಚಂದ್ರನು, ಬಾಲದಲ್ಲಿರುವ ಕೂದಲುಗಳಲ್ಲಿ ಸೂರ್ಯನ ಕಿರಣಗಳು, ಗೋಮೂತ್ರದಲ್ಲಿ ಗಂಗೆಯು, ಗೋಮಯದಲ್ಲಿ ಯಮುನೆಯು, ಹಾಲಿನಲ್ಲಿ ಸರಸ್ವತೀನದಿಯು, ಮೊಸರಿನಲ್ಲಿ ನರ್ಮದೆಯೂ ಇರುತ್ತಾರೆ. ॥ ೧೩-೧೮ ॥ ಬ್ರಾಹ್ಮಣಶ್ರೇಷ್ಠ ನಾಗಿರತಕ್ಕ ಅಗ್ನಿಯು ತುಪ್ಪದಲ್ಲಿಯೂ. ಇಪ್ಪತ್ತೆಂಟು ಕೋಟಿ ದೇವತೆಗಳು ಆಕಳ ರೋಮಗಳ ಲ್ಲಿಯೂ. ಹೊಟ್ಟೆಯಲ್ಲಿ ಭೂಮಿಯೂ, ಸ್ತನಗಳಲ್ಲಿ ಸಾಗರಗಳೂ ಇದ್ದು ಈ ರೀತಿಯಾಗಿ ದೇವತಾಸಮೂಹವನ್ನೆಲ್ಲಾ ಅಂಗಾಂಗಗಳಲ್ಲಿ ಹೊಂದಿರತಕ್ಕಂಥಾ ಗೋಮಾತೆಯನ್ನು ಭಕ್ತಿಯಿಂದ ವಸ್ತ್ರಮಾಲಾಗಳಿಂದ ''ಆ ಗಾವಃ'' ಎಂಬ ಮಂತ್ರದಿಂದ ಅಲಂಕರಿಸಿ ಷೋಡ-ಶೋಪಚಾರಗಳಿಂದ ಪೂಜಿಸಬೇಕು. ಅದರ ಕರುವನ್ನೂ ಅಲಂಕರಿಸಬೇಕು. ॥ ೧೯-೨೦ ॥ ಸುರಭಿ ಎಂಬ ಹೆಸರಿನಿಂದ ಶೋಭಾಯಮಾನಳಾಗಿರತಕ್ಕ ಧೇನುವೇ, ನಾನು ಹೊದಿಸಿರತಕ್ಕ ಹೊಸದಾದ ಹತ್ತಿಯ ಅಥವಾ ರೇಶ್ಮೆಯ ವಸ್ತ್ರವನ್ನು ಸ್ವೀಕಾರಮಾಡು. ॥ ೨೨ ॥ ''ಸುರಭಿಯೇ! ನೀನು ಜಗತ್ತಿಗೆ ತಾಯಿಯು, ಸಾಕ್ಷಾತ್ ಮಹಾವಿಷ್ಣುವಿನ ಪಾದಗಳಲ್ಲಿರತಕ್ಕವಳು, ನಾನು ಸಮರ್ಪಿಸುತ್ತಿರುವ ಗೋಗ್ರಾಸವನ್ನು ಸ್ವೀಕರಿಸಿ ನನ್ನನ್ನು ಉದ್ಧರಿಸು.'' ಎಂದು ಪ್ರಾರ್ಥಿಸಬೇಕು. ॥ ೨೩ ॥ ''ಯಾವ ಕಾರಣದಿಂದ ಹದಿನಾಲ್ಕು ಲೋಕಗಳೂ ಗೋವುಗಳ ಅಂಗಾಂಗಗಳಲ್ಲಿ ವೆಯೋ ಆ ಕಾರಣದಿಂದ ಈ ಲೋಕದಲ್ಲಿ ಮತ್ತು ಪರಲೋಕಗಳಲ್ಲಿ ಮಂಗಳವಾಗಲಿ. ॥ ೨೪ ॥ ಗೋವುಗಳು ಎದುರಿಗಿದ್ದು ನನ್ನನ್ನು ರಕ್ಷಿಸಲಿ, ಗೋವುಗಳು ನನ್ನ ಎಡಬಲಪಾರ್ಶ್ವಗಳಲ್ಲಿದ್ದು ನನ್ನನ್ನು ರಕ್ಷಿಸಲಿ. ಗೋವುಗಳು ನನ್ನ ಹಿಂದೆಯೂ ಇದ್ದು ರಕ್ಷಿಸಲಿ. ನಾನು ಗೋವುಗಳ ಮಧ್ಯದಲ್ಲಿಯೇ ವಾಸಿಸುವೆನು. ॥ ೨೫ ॥ ಈ ರೀತಿ ಹೇಳುತ್ತಾ ಮೂರು ಬಾರಿ ಹೆಂಡತಿಯೊಡನೆ ಪ್ರದಕ್ಷಿಣೆ ಮಾಡಿ ಗೋಮಾತೆಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ॥ ೨೬ ॥ ''ಹಿಂದೆ ಸಮುದ್ರಮಥನವಾದಾಗ ಐದು ಆಕಳುಗಳು ಉತ್ಪನ್ನವಾದುವು. ಅವುಗಳ ಪೈಕಿ ''ನಂದಾ'' ಎಂಬ ಹೆಸರುಳ್ಳ ಗೋಮಾತೆಯೇ

ನೀನಾಗಿರುವೆ, ಅಂತಹ ನಿನಗೆ ನಮಸ್ಕಾರಗಳು.'' ಎಂದು ಹೇಳಿ ನಮಸ್ಕರಿಸಿ ಆಕಳ ಬಾಲವನ್ನು ಬಲಗೈಯಿಲ್ಲಿ ಹಿಡಿದುಕೊಂಡು ದಕ್ಷಿಣಕ್ಕೆ ತಿರುಗಿ ಜಲದಿಂದ ಪಿತೃಗಳಿಗೆ ತರ್ಪಣ ಕೊಡಬೇಕು. ॥ ೨೭-೨೮ ॥ ಅನಂತರ ಪಿತೃಗಳಿಂದ ಗುರುಗಳವರೆಗಿನ ಎಲ್ಲರನ್ನು ಗೋಪುಚ್ಛದ ಜಲದಿಂದ ತೃಪ್ತಿಪಡಿಸಬೇಕು. ''ಬ್ರಹ್ಮದೇವರೇ ಮೊದಲಾದ ದೇವತೆಗಳು, ಎಲ್ಲ ಮುನಿಗಳು, ನರರು, ಅಸುರರು, ಹಾವುಗಳು, ಆನೆಗಳು, ಸಪ್ತ ಮಾತೃಕೆಯರು, ಸಿದ್ಧರು, ಅಷ್ಟ ದಿಕ್ಪಾಲಕರು, ಲೋಕಪಾಲರು, ನವಗ್ರಹ ದೇವತೆಗಳು, ಗ್ರಹಗಳ ಅಧಿದೇವತೆಗಳು, ವಿಶ್ವೇದೇವತೆಗಳು, ದ್ವಾದಶಾದಿತ್ಯರು, ಸಾಧ್ಯರು, ಮರುದ್ಗಣಗಳು, ಇವರೆಲ್ಲರೂ ಈ ಗೋಪುಚ್ಛದ ಜಲದಿಂದ ತೃಪ್ತರಾಗಲಿ. ಪೀಠ, ಉಪಪೀಠ, ಕ್ಷೇತ್ರ, ಪುರುಷನದಿಗಳು, ಸ್ತ್ರೀನದಿಗಳು, ಸಾಗರಗಳು, ಪಾತಾಳಲೋಕದಲ್ಲಿರುವ ನಾಗರು, ನಾಗಪತ್ನಿಯರು, ಕುಲಪರ್ವತಗಳು, ಪಿಶಾಚಗಳು, ಗುಹ್ಯಕರು, ಪ್ರೇತಗಳು, ಗಂಧರ್ವಗಣಗಳು, ರಾಕ್ಷಸರು, ಪೃಥಿವೀ, ನೀರು, ತೇಜಸ್ಸು, ವಾಯು ಮತ್ತು ಆಕಾಶ, ಭೂಮಿಯಲ್ಲೂ ಸ್ವರ್ಗದಲ್ಲಿಯೂ, ಅಂತರಿಕ್ಷದಲ್ಲಿಯೂ ಮತ್ತು ಪಾತಾಲದಲ್ಲಿ ವಾಸಿಸುವ ತಪಸ್ವಿಗಳೂ, ನಾಶರಹಿತನಾದ ಭಗವಾನ್ ಪರಮೇಶ್ವರನೂ, ಕ್ಷೇತ್ರಪಾಲಕರು, ಸಸ್ಯಗಳು, ಸಸ್ಯದೇವತೆಗಳು, ಕಪಿಲ, ಶೇಷನಾಗ, ತಕ್ಷಕ, ಅನಂತ ಎಂಬ ಹೆಸರಿನ ನಾಗದೇವತೆಗಳು, ಬೇರೆ ಬೇರೆ ಅಸಂಖ್ಯಾಕ ಜಲಚರಜೀವಿಗಳು, ಹದಿನಾಲ್ಕು ಯಮದೇವತೆಗಳು ಮತ್ತು ಯಮಕಿಂಕರರು, ಯಕ್ಷರು, ಸಿದ್ಧರು, ಕಿನ್ನರರು, ಪಕ್ಷಿಗಳು, ಪ್ರಾಣಿಗಳು, ಆಡುಗಳು, ಆಕಳುಗಳು, ಎಮ್ಮೆಗಳು ಮತ್ತು ಉಳಿದೆಲ್ಲವುಗಳು, ಈ ಗೋಪುಚ್ಛದ ಜಲದಿಂದ ತೃಪ್ತರಾಗಿ ನಮಗೆ ಮತ್ತು ಸರ್ವರಿಗೂ ಶಾಂತಿಯನ್ನು, ಸುಖವನ್ನು ಕೊಡಲಿ. ಸರ್ಪಗಳಿಂದ, ಹುಲಿಗಳಿಂದ, ಕೊಂಬಿನಿಂದ ಇರಿಯಲ್ಪಟ್ಟು ಸಂಹೃತರಾದ, ಕೋರೆ ದಾಡೆಗಳಿಂದ ಹಾಗೂ ಉಗುರುಗಳಿಂದ ಸಂಹೃತರಾದವರೂ, ಮಕ್ಕಳಿಲ್ಲದವರೂ, ಪೈತೃಕಕ್ರಿಯೆಯಿಂದ ವಂಚಿತರಾದವರೂ, ಹೆಂಡತಿಯಿಲ್ಲದವರೂ, ಮಕ್ಕಳಿಲ್ಲದವರೂ, ಧರ್ಮಭ್ರಷ್ಟರೂ ಮತ್ತು ಬ್ರಹ್ಮದೇವರಿಂದ ಆರಂಭಿಸಿ ಹುಲ್ಲಿನವರೆಗಿರುವ ದೇವತೆಗಳು, ಋಷಿಗಳು, ಪಿತೃಗಳು ಮತ್ತು ಮನುಷ್ಯರು ನಮ್ಮ ದ್ವಾದಶ ಪಿತೃಗಳು ಮತ್ತು ಇತರ ಪಿತೃಗಳು, ಏಳು ದ್ವೀಪಗಳಲ್ಲಿ ವಾಸಮಾಡುತ್ತಿರುವವರೂ, ಕಳೆದು ಹೋದ ನಮ್ಮ ಕುಲಕ್ಕೆ ಸೇರಿದ ಕೋಟ್ಯಂತರ ಜೀವಿಗಳೂ, ಬ್ರಹ್ಮದೇವರ ಲೋಕದಿಂದ ಆರಂಭಿಸಿ ಎಲ್ಲ ಲೋಕಗಳಲ್ಲಿಯೂ ಇರುವವರೆಲ್ಲರೂ ಈಗ ನಾನು ಕೊಡುತ್ತಿರುವ ಗೋಪುಚ್ಛದ ನೀರಿನಿಂದ ತೃಪ್ತಿಯನ್ನು ಪಡೆಯಲಿ'' ಹೀಗೆಂದು ಹೇಳಿ ಕಾಮೋದಕವನ್ನು ಕೊಟ್ಟು, ದರ್ಭೆಯನ್ನು ಕೈಯಲ್ಲಿಟ್ಟುಕೊಂಡು ಉತ್ತರಾಭಿಮುಖ ವಾಗಿ ನಿಲ್ಲಿಸಿರುವ ಗೋಮಾತೆಯನ್ನು ತಾನು ಪೂರ್ವಾಭಿಮುಖವಾಗಿ ನಿಂತು ಉತ್ತರಾಭಿಮುಖ ವಾಗಿ ನಿಂತಿರುವ ಬ್ರಾಹ್ಮಣೋತ್ತಮನಿಗೆ ದಾನ ಮಾಡತಕ್ಕದ್ದು. ದಾನ ಮಾಡುವ ಗೋವಿನ ಕಂಠವನ್ನು ಚಿತ್ತಾರದಿಂದ ಅಲಂಕರಿಸಿರಬೇಕು. ಕೊಂಬುಗಳನ್ನು ಬಂಗಾರದಿಂದ ಅಲಂಕರಿಸ ಬೇಕು, ಬೆನ್ನಿಗೆ ತಾಮ್ರದ ತಗಡಿನ ಕವಚವನ್ನು ಹಾಕಿರಬೇಕು, ಹಸುವು ಹಾಲು ಕರೆಯುವುದಾಗಿರ ಬೇಕು, ಹೂಮಾಲೆ ವಸ್ತ್ರಗಳಿಂದ ಅಲಂಕೃತವಾದ ಕುತ್ತಿಗೆಯುಳ್ಳದ್ದಾಗಿರಬೇಕು. ಕರೆಯಲು ಕಂಚಿನ ಪಾತ್ರೆಯಿಂದ ಕೂಡಿದ್ದಾಗಿರಬೇಕು, ಮುತ್ತುಗಳು ಕಟ್ಟಿ ಜಗಿದಿರತಕ್ಕ ಬಾಲವುಳ್ಳದ್ದಾಗಿರಬೇಕು, ಕರುವಿನಿಂದ ಕೂಡಿದ್ದಾಗಿರಬೇಕು, ಮೋಹಕವಾಗಿರಬೇಕು, ಯೌವನಯುಕ್ತವಾಗಿರಬೇಕು, ಗಂಟೆ ಮತ್ತು ಚಾಮರಗಳನ್ನು ಕಟ್ಟಿರಬೇಕು, ಈ ರೀತಿಯಾಗಿರುವ ಆಕಳನ್ನು ಪೂಜಿಸಿ, ಬ್ರಾಹ್ಮಣೋತ್ತಮರಿಗೆ ಪೂಜಾ ಮಾಡಿ

ದಾನ ಸಂಕಲ್ಪ ಮಾಡಿ ಎಳ್ಳು, ತುಪ್ಪ, ಮೊಸರು ಇವುಗಳಿಂದ ತುಂಬಿದ ಬಂಗಾರ ಅಥವಾ ಕಂಚಿನ ಪಾತ್ರೆಗಳನಿಟ್ಟು ದರ್ಭೆಸಹಿತ ಆಕಳ ಬಾಲವನ್ನು ಬ್ರಾಹ್ಮಣನ ಕೈಯಲ್ಲಿಟ್ಟು ದಾನ ಮಾಡಬೇಕು. ಅನಂತರ ದಾನದ ಸಂಪೂರ್ಣಫಲಪ್ರಾಪ್ತಿಗಾಗಿ ಬ್ರಾಹ್ಮಣನಿಗೆ ಸ್ವರ್ಣಾದಿಗಳನ್ನು ದಾನ ಮಾಡಬೇಕು. ॥ ೨೯-೪೫ ॥ ಈ ರೀತಿ ಬ್ರಾಹ್ಮಣನಿಗೆ ದಾನವನ್ನು ಕೊಟ್ಟ ನಂತರ ಗೋಸೂಕ್ತವನ್ನು ಪಠಿಸಿ ಗೋಮತಿಯನ್ನು ಜಪಿಸಬೇಕು. ಸುವರ್ಣದಿಂದ ಅಲಂಕರಿಸಲ್ಪಟ್ಟ ಕೊಂಬುಗಳುಳ್ಳ, ಹಾಲು ಕರೆಯುವ, ಗೋಮಾತೆಯರು ನನ್ನ ಸನಿಹದಲ್ಲೇ ಇರಲಿ. ನಾನು ಯಾವಾಗಲೂ ಆಕಳನ್ನು ನೋಡುತ್ತಿರುವಂತಾಗಲಿ; ಹಾಗೆಯೇ ಅವುಗಳೂ ನನ್ನನ್ನು ನೋಡುತ್ತಿರುವಂತಾಗಲಿ. ಯಥೇಚ್ಛ ಹಾಲನ್ನು ಕರೆಯುವ ಗೋಮಾತೆಯರು ಮತ್ತು ಅನೇಕ ಕರುಗಳೂ ನನ್ನ ಸನಿಹದಲ್ಲಿದ್ದು ನನ್ನ ಅಪೇಕ್ಷೆಗಳನ್ನೆಲ್ಲ ನಡೆಸಿಕೊಡಲಿ. ॥ ೪೬-೪೭ ॥ ಗೋವುಗಳು ನಮ್ಮಗಳ ಸೌಖ್ಯಕ್ಕಾಗಲಿ; ಹಾಗೆಯೇ ನಾವುಗಳು ಅವುಗಳ ಕ್ಷೇಮಕ್ಕಾಗೋಣ. ಎತ್ತುಗಳೂ ಗೋಮಾತೆಯರೂ ಯಾವಾಗಲು ಹಾಲು ಮಡ್ಡಿಯಂತೆ ತಮ್ಮನ್ನು ತ್ಯಾಗ ಮಾಡಿಕೊಂಡು ಸುವಾಸನೆಯನ್ನೀಯುವ ಗುಗ್ಗುಳದಂತೆ ಇರತಕ್ಕವುಗಳು. ॥ ೪೮ ॥ ಗೋವುಗಳು ಜೀವಿಗಳ ಬದುಕಿಗೇ ಮೂಲಗಳು; ಮತ್ತು ಅತಿಹೆಚ್ಚಿನ ಮಂಗಳಕಾರಕಗಳು. ದೇವತೆಗಳಿಗೆ ಸಮರ್ಪಿಸತಕ್ಕ ಶ್ರೇಷ್ಠವಾದ ಆಹಾರವು ಗೋವುಗಳಿಂದುದ್ಭವವಾಗುವ ಕ್ಷೀರವೇ ಆಗಿದೆ. ದೇವತೆಗಳಿಗೆ ಅಗ್ನಿಯಲ್ಲಿ ಹೋಮ ಮಾಡಿ ಸಮರ್ಪಣೆ ಮಾಡುವ ಹವಿಸ್ಸು, ಆಕಳಿಂದಾಗುವ ಹಾಲು, ಮೊಸರು, ತುಪ್ಪ ಇವೇ ಮೊದಲಾದವುಗಳು. ॥ ೪೯ ॥ ಆದ್ದರಿಂದ ಈ ಲೋಕದಲ್ಲಿ ಆಕಳುಗಳು ಸರ್ವರನ್ನೂ ಧಾರಣೆ ಮಾಡಿ ರಕ್ಷಣೆ ಮಾಡತಕ್ಕವುಗಳು ಆಗಿದ್ದು ವೇದಮಂತ್ರಗಳಿಂದ ಪವಿತ್ರ ಮಾಡಲ್ಪಟ್ಟ ಹವಿಸ್ಸುಗಳು ಪರಲೋಕದಲ್ಲಿ ದೇವತೆಗಳನ್ನು ತೃಪ್ತಿಪಡಿಸುತ್ತವೆ. ॥ ೫೦ ॥ ಹವಿಸ್ಸುಗಳನ್ನು ಸಮರ್ಪಣೆಮಾಡತಕ್ಕ ಋಷಿಗಳಿಗೂ ಯಜ್ಞಹೋಮಾದಿಗಳಲ್ಲಿ ಗೋಮಾತೆಯು ಇದ್ದೇ ಇರುತ್ತಾಳೆ. ಎಲ್ಲ ಜೀವಿಗಳಿಗೂ ಗೋವುಗಳು ಅತ್ಯುತ್ತಮವಾದ ಆಶ್ರಯವಾಗಿದೆ. ॥ ೫೧ ॥ ಗೋವುಗಳು ಪರಮ ಪವಿತ್ರವಾದುವು, ಉತ್ತಮವಾದ ಮಂಗಳಪ್ರದಗಳು, ಎಲ್ಲರಿಗೂ ಬೇಕಾಗಿದ್ದು, ಅವರಲ್ಲಿಯೂ ಕರು ಸಹಿತವಾದ ಗೋವುಗಳು ಧನ್ಯವಾಗಿರತಕ್ಕವುಗಳು. ॥ ೫೨ ॥ ಸುರಭಿಯ ಸಂತತಿಗೆ ಸೇರಿರತಕ್ಕ ಮಹಾವರ್ಚಸುಳ್ಳ ಗೋಮತಿಯರಿಗೆ ನಮಸ್ಕಾರಗಳು. ಬ್ರಹ್ಮನ ಮಗಳಾಗಿರತಕ್ಕ ಅತ್ಯಂತ ಪವಿತ್ರಳಾಗಿರತಕ್ಕ ಗೋಮಾತೆಗೆ ನಮಸ್ಕಾರಗಳು. ॥ ೫೩ ॥ ಬ್ರಾಹ್ಮಣರು ಮತ್ತು ಗೋವುಗಳು ಬ್ರಹ್ಮದೇವರಿಂದ ಉತ್ಪತ್ತಿಯನ್ನು ಪಡೆದು ಒಂದೇ ಕುಲಕ್ಕೆ ಸೇರಿದವರಾಗಿದ್ದು ನಂತರ ಎರಡು ಕವಲುಗಳಾಗಿ ಒಡೆದು ಗೋವುಗಳು ಮತ್ತು ಬ್ರಾಹ್ಮಣರು ಎಂಬುದಾಗಿ ಪ್ರಸಿದ್ಧರಾಗಿದ್ದಾರೆ. ಬ್ರಾಹ್ಮಣರಲ್ಲಿ ವೇದಮಂತ್ರಗಳು ಸನ್ನಿಹಿತವಾಗಿವೆ ಮತ್ತು ಗೋವುಗಳಲ್ಲಿ ಹವಿಸ್ಸುಗಳು ಸನ್ನಿಹಿತವಾಗಿವೆ. ॥ ೫೪ ॥ ಗೋವುಗಳು ತುಪ್ಪ, ಹಾಲನ್ನು ಕರೆಯತಕ್ಕವು (ಹಾಲಿನಲ್ಲಿ ಸೂಕ್ಷ್ಮವಾಗಿ ತುಪ್ಪವು ಇರುವುದರಿಂದ ತುಪ್ಪವನ್ನು ಕರೆಯುತ್ತವೆ ಎಂದು ಹೇಳಿದ್ದಾರೆ); ತುಪ್ಪಕ್ಕೆ ಕಾರಣವಾದವು; ಪ್ರಕಾಶಮಾನವಾದ್ದರಿಂದ ಘೃತಶಬ್ದವಾಚ್ಯನಾದ ಭಗವಂತನಿಂದ ಹುಟ್ಟಿರತಕ್ಕವು. ತುಪ್ಪದ ನದಿಯನ್ನು, ತುಪ್ಪದ ಸುಳಿಯನ್ನು ಉಂಟುಮಾಡತಕ್ಕವು. ಇಂಥಾ ಗೋವುಗಳು ಯಾವಾಗಲೂ ನಮ್ಮ ಮನೆಯಲ್ಲಿರಲಿ. ॥ ೫೫ ॥ ಗೋದಾನವನ್ನು ಸ್ವೀಕಾರ ಮಾಡಿದ ಬ್ರಾಹ್ಮಣೋತ್ತಮರಿಗೆ ನಮಸ್ಕರಿಸಿ, ದಾನಕರ್ಮಗಳಲ್ಲಿನ ನ್ಯೂನತೆಯನ್ನಾಗಲೀ ಆಧಿಕ್ಯವನ್ನಾಗಲೀ ನಿವಾರಣೆ ಮಾಡುವಷ್ಟು ಭೂರಿದಕ್ಷಿಣಾದಿಗಳನ್ನು ಕೊಟ್ಟು ಗೋದಾನರೂಪ ಕರ್ಮವನ್ನು ಅದರ ಫಲವನ್ನು

ಪರಮಾತ್ಮನಿಗೆ ಸಮರ್ಪಿಸಿ ನಂತರ ಶಕ್ತ್ಯನುಸಾರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ॥ ೫೬ ॥ ದೇವಮಂದಿರದಲ್ಲಾಗಲೀ, ಅಥವಾ ಗಂಗಾತೀರದಲ್ಲಾಗಲೀ, ಬುದ್ಧಿವಂತನಾದ ದಾನಿಯು, ಸತ್ಪಾತ್ರರುಗಳನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡಿ, ನೀರನ್ನು ನೀರಿನಲ್ಲಿ ಬಿಡಬೇಕು. ॥ ೫೭ ॥ ಅನಂತರ ವಸ್ತ್ರಾಲಂಕಾರಗಳಿಂದ ಭೂಷಿತವಾಗಿರುವ ಆ ಗೋವನ್ನು ದಾನಸಪಾತ್ರರ ಮನೆಗೆ ಹೊಡೆದುಕೊಂಡು ಹೋಗಿ, ಹೆಚ್ಚಿನ ದಕ್ಷಿಣೆ ಸಹಿತ ಬಹಳ ಭಕ್ತಿಯಿಂದ ಅಲ್ಲಿ ಒಪ್ಪಿಸಿ ಬರಬೇಕು. ॥ ೫೮ ॥ ಅಥವಾ ಪುಣ್ಯತಿಥಿಗಳಲ್ಲಿ ಗೋವಿಗೆ ತಗಲುವ ಬೆಲೆಯಷ್ಟು ಹಣವನ್ನು ದಕ್ಷಿಣೆ ಸಹಿತವಾಗಿ ವಿಪ್ರೋತ್ತಮರಿಗೆ ಸಂಕಲ್ಪಪೂರ್ವಕವಾಗಿ ಕೊಡತಕ್ಕದ್ದು. ಈ ರೀತಿ ಮಾಡಿದ ದಾನವೂ ಅಕ್ಷಯವಾಗುವುದು. ಹೀಗೆಂದು ಸ್ಮೃತಿಗಳಲ್ಲಿ ಉಕ್ತವಾಗಿದೆ. ॥ ೫೯ ॥ ಈ ರೀತಿಯಾಗಿ ಏನಾದರೂ ಉಪಾಯಮಾರ್ಗದಿಂದ ಯಾರು ಭಕ್ತಿಯಿಂದ ಈ ದಾನವನ್ನು ಮಾಡುವರೋ, ಅವರು ಇಹಲೋಕದ ಪುಣ್ಯಫಲಗಳನ್ನು ಹೊಂದಿ ಪರಲೋಕದ ಪುಣ್ಯಫಲಗಳನ್ನು ಅನುಭವಿಸುತ್ತಾರೆ. ॥ ೬೦ ॥ ಈ ರೀತಿಯಾಗಿ ಮಾಡಿದ ಗೋದಾನವು ಪಿತೃಗಳಿಗೆ ತನ್ನ ಮೈಮೇಲಿನ ಕೂದಲುಗಳ ಸಂಖ್ಯೆಯಷ್ಟು ವರ್ಷಗಳವರೆಗೆ ಸ್ವರ್ಗ (ವೈಕುಂಠಕ್ಕೆ ಸ್ವರ್ಗ ಎಂದು ಇಲ್ಲಿ ಅರ್ಥ ಮಾಡಬೇಕು)ಗಳಲ್ಲಿ ವಾಸ ಮಾಡುವ ಭಾಗ್ಯವನ್ನು ಸಂಪಾದಿಸಿಕೊಟ್ಟು ದಾನ ಮಾಡಿದವನ ಹಿಂದಿನ ಹತ್ತು ತಲೆಮಾರಿನವರನ್ನು ಮತ್ತು ಮುಂದಿನ ಹತ್ತು ತಲೆಮಾರಿನವರನ್ನು ಉದ್ಧಾರಮಾಡುತ್ತದೆ. ॥ ೬೧ ॥ ಪ್ರಯಾಗದಲ್ಲಾಗಲೀ ಅಥವಾ ವಟವೃಕ್ಷದ ಸನ್ನಿಧಾನದಲ್ಲಿ ಯಾಗಲೀ ವಿಶೇಷವಾಗಿ ಮಾಘ ಮಾಸದಲ್ಲಿ ಯಾರು ಈ ರೀತಿ ಗೋದಾನವನ್ನು ಮಾಡುವರೋ ಅವರಿಗೆ ಅನಂತವಾದಷ್ಟು ಫಲವು ಸಿಗುವುದು. ॥ ೬೨ ॥ ಹೇ ಶೌನಕಾದಿ ಮುನೀಶ್ವರರೇ! ತಮಗೆ ಗೋದಾನದ ವಿಧಿಯನ್ನು ಮತ್ತು ಫಲವನ್ನು ಹೇಳಿಯಾಯಿತು. ಇದನ್ನು ಓದುವುದರಿಂದ ಮತ್ತು ಶ್ರವಣ ಮಾಡುವುದರಿಂದ ದಾನದ ಫಲವು ಲಭ್ಯವಾಗುವುದು. ಬೇರೆಯ ದಾನಗಳನ್ನೂ ಹೇಳುತ್ತೇನೆ, ಕೇಳಿರಿ. ॥ ೬೩-೬೪ ॥

॥ ಐವತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತಪಂಚಾಶತ್ತಮೋಽಧ್ಯಾಯಃ ॥ ೫೭ ॥

**ಸೂತ ಉವಾಚ—**

ಪ್ರಯಾಗೇ ಮಾಘಮಾಸೇ ಯೋ ದದಾತ್ಯುಭಯತೋಮುಖೀಮ್ ।
ತೇನ ದತ್ತಾ ಧರಾ ಕೃತ್ಸ್ನಾ ಸಶೈಲವನಕಾನನಾ ॥ ೧ ॥
ಪ್ರಯಾಗೇ ವಾಜಿದಾನೇನ ಪುರುಹೂತಪದಂ ವ್ರಜೇತ್ ।
ವೃಷದಾನೇನ ಕೈಲಾಸಂ ಗಜೇನ ಬ್ರಹ್ಮಣಃ ಪದಮ್ ॥ ೨ ॥
ಶಯ್ಯಯಾ ಸ್ವಸ್ಸುಖಾವಾಪ್ತೀ ರಾಜ್ಯಂ ಶಿಬಿಕಯಾ ಭವೇತ್ ।
ಗೃಹದಾನೇನ ವೈಕುಂಠಂ ರಥೇನೇನಪದಂ ವ್ರಜೇತ್ ॥ ೩ ॥
ಕಿಂ ಬಹೂಕ್ತೇನ ಭೂಲೋಕೇ ಯದ್ಯದಿಷ್ಟತಮಂ ಭವೇತ್।
ಪ್ರದದ್ಯಾದ್ವಿಧಿವತ್ತತ್ತತ್ಪ್ರಯಾಗೇ ತಪಸಿ ದ್ವಿಜಾಃ ॥ ೪ ॥
ಏಕತ್ರಾನ್ನಪ್ರದಾನಂ ಸ್ಯಾತ್ಸರ್ವದಾನಾನಿ ಚೈಕತಃ ।
ನಾನ್ನದಾನಸಮಾನಿ ಸ್ಯುಸ್ತಾನೀತಿ ಬ್ರಹ್ಮಣಾ ಶ್ರುತಃ ॥ ೫ ॥
ಅನ್ನಮೂಲಾಃ ಕ್ರಿಯಾಸ್ಸರ್ವಾ ಅನ್ನಮೂಲಂ ಚ ಜೀವನಮ್ ।
ತೇನಾನ್ನದಾನಮಧಿಕಂ ಪ್ರಾಣದಾನಸಮಂ ಯತಃ ॥ ೬ ॥
ವರಿಷ್ಠಂ ಸರ್ವದಾನೇಷು ಸರ್ವಧರ್ಮೇಷು ಯನ್ಮಹತ್ ।
ಯತ್ಕೃತ್ವಾ ಸರ್ವಧರ್ಮಾಣಾಂ ಫಲಮಾಪ್ನೋತಿ ಮಾನವಃ ॥ ೭ ॥
ತದೇತತ್ಪರಿಕರ್ತವ್ಯಮನ್ನದಾನಂ ವಿಧಾನತಃ ।
ಸರ್ವದುಃಖಪ್ರಶಮನಮಾಯುಃಪುತ್ರವಿವರ್ಧನಮ್ ॥ ೮ ॥

## ॥ ಐವತ್ತೇಳನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಯಾರು ಪ್ರಯಾಗದಲ್ಲಿ ಮಾಘಮಾಸದಲ್ಲಿ ಪ್ರಸವವಾಗುತ್ತಿರುವ ಗೋವನ್ನು ದಾನ ಮಾಡುತ್ತಾನೋ ಅಂತಹವನು ಬೆಟ್ಟ, ಕಾಡುಗಳುಳ್ಳ ಇಡೀ ಭೂಮಂಡಲವನ್ನೇ ದಾನ ಮಾಡುತ್ತಿದ್ದಾನೆಂದು ತಿಳಿಯಬೇಕು. ॥ ೧ ॥ ಪ್ರಯಾಗದಲ್ಲಿ ಕುದುರೆಯ ದಾನ ಕೊಟ್ಟವನು ಇಂದ್ರನ ಲೋಕವನ್ನು, ಎತ್ತಿನ ದಾನ ಮಾಡಿದವನು ಕೈಲಾಸವನ್ನು, ಆನೆಯನ್ನು ದಾನ ಮಾಡಿದವನು ಸತ್ಯಲೋಕದ ವಾಸವನ್ನು ಹೊಂದುತ್ತಾನೆ. ॥ ೨ ॥ ಹಾಸಿಗೆಯನ್ನು ದಾನ ಮಾಡುವುದರಿಂದ ಸ್ವರ್ಗಲೋಕದ ಸುಖವಾಸವೂ, ಪಲ್ಲಕ್ಕಿಯನ್ನು ದಾನ ಮಾಡುವುದರಿಂದ ರಾಜ್ಯಪ್ರಾಪ್ತಿಯೂ, ಮನೆಯ ದಾನದಿಂದ ವೈಕುಂಠವಾಸವೂ ಮತ್ತು ರಥದ ದಾನದಿಂದ ಸೂರ್ಯಲೋಕದ ಪ್ರಾಪ್ತಿಯೂ ಲಭ್ಯವಾಗುವುದು. ॥ ೩ ॥ ಹೆಚ್ಚು ಹೇಳಿ ಏನು ಪ್ರಯೋಜನ? ಪ್ರಯಾಗದಲ್ಲಿ ವಿಧಿವತ್ತಾಗಿ ಏನೇನನ್ನು ಬಹುವಾಗಿ ಇಷ್ಟಪಡುವೆವೋ ಅವೆಲ್ಲವನ್ನೂ ಮಾಘಮಾಸದಲ್ಲಿ ದಾನ ಮಾಡಬೇಕು. ॥ ೪ ॥ ಒಂದು ಕಡೆ ಅನ್ನದಾನವನ್ನೂ ಇನ್ನೊಂದು ಕಡೆ ಎಲ್ಲ ದಾನಗಳನ್ನೂ ಸೇರಿಸಿ ಇಟ್ಟು ತೂಗಿದರೆ ಇವು ಅನ್ನದಾನದ ತೂಕಕ್ಕೆ ಸರಿಸಮನಾಗುವುದಿಲ್ಲ. ಯಾವ

ದಾನವೂ ಅನ್ನದಾನಕ್ಕೆ ಸರಿಯಾಗುವುದಿಲ್ಲವೆಂದು ಶ್ರುತಿವಾಕ್ಯಗಳು ಇವೆ. ॥ ೫ ॥ ಎಲ್ಲ ಕೆಲಸಗಳೂ ಅನ್ನವನ್ನೇ ಅವಲಂಬಿಸಿವೆ, ಜೀವನವೇ ಅನ್ನವನ್ನು ಮೂಲದಲ್ಲಿ ಹೊಂದಿದೆ. ಆದ್ದರಿಂದ ಅನ್ನದಾನವು ಶ್ರೇಷ್ಠವಾದುದು ಮತ್ತು ಪ್ರಾಣದಾನಕ್ಕೆ ಸಮನಾದುದು. ॥ ೬ ॥ ಎಲ್ಲ ದಾನಗಳಿಗಿಂತಲೂ ಅನ್ನದಾನವು ಶ್ರೇಷ್ಠವು. ಎಲ್ಲ ಧರ್ಮಗಳಲ್ಲಿ ಅನ್ನದಾನಧರ್ಮವು ಮಹಾನ್ ಶ್ರೇಷ್ಠವಾದುದು. ಇದನ್ನು ಮಾಡುವುದರಿಂದ ಮಾನವನು ಎಲ್ಲ ಧರ್ಮಗಳ ಆಚರಣೆಯ ಫಲವನ್ನು ಹೊಂದುತ್ತಾನೆ. ॥ ೭ ॥ ಆದ್ದರಿಂದ ವಿಧಿವತ್ತಾಗಿ ಅನ್ನದಾನವನ್ನು ಮಾಡಬೇಕು. ಇದು ಎಲ್ಲ ದುಃಖದ ಪರಿಹಾರಕ, ಆಯುಸ್ಸು ಮತ್ತು ಮಕ್ಕಳ ಭಾಗ್ಯವನ್ನು ವೃದ್ಧಿ ಮಾಡುವುದು. ॥ ೮ ॥

**ಋಷಯ ಊಚುಃ—**

ವಿಧಿನಾ ಕೇನ ಕರ್ತವ್ಯಂ ಕಿಮುದ್ದಿಶ್ಯ ಚ ಕಿಂ ಫಲಮ್ ।
ಏತದ್ವಿಸ್ತರತೋಽಸ್ಮಾಕಂ ವದ ಲೋಕೋಪಕಾರಕ ॥ ೯ ॥

**ಶೌನಕಾದಿ ಋಷಿಗಳು ಹೇಳಿದರು—**

ಈ ಅನ್ನದಾನವನ್ನು ಯಾವ ವಿಧಾನದಿಂದ ಮತ್ತು ಯಾವ ಫಲವನ್ನು ಉದ್ದೇಶಿಸಿ ಮಾಡಬೇಕು ಎಂಬುದನ್ನು ಪರೋಪಕಾರಿಗಳಾದ ತಾವು ದಯಮಾಡಿ ಹೇಳಬೇಕು. ॥ ೯ ॥

**ಸೂತ ಉವಾಚ—**

ಶೃಣ್ವಂತು ಮುನಯಸ್ಸರ್ವೇ ಏಕಾಗ್ರಕೃತಮಾನಸಾಃ ।
ಅನ್ನದಾನವಿಧಿಂ ಸಮ್ಯಕ್ಸರ್ವಧರ್ಮೋತ್ತಮೋತ್ತಮಮ್ ॥ ೧೦ ॥
ಉದಯಂ ಗತೇ ಸಹಸ್ರಾಂಶೌ ಪುಣ್ಯಮಾಸೇಽಮಲೇ ದಲೇ ।
ಸುತಿಥೌ ಶುಭವಾರೇ ಚ ಸುನಕ್ಷತ್ರೇ ಸುಯೋಗಕೇ ॥ ೧೧ ॥
ಪೂರ್ವಾಹ್ಣೇ ತು ಸಪತ್ನೀಕೋ ವಿಹಿತಾಭ್ಯಂಗಮಜ್ಜನಃ ।
ಕೃತನಿತ್ಯಕ್ರಿಯಶ್ಶಾಂತಶ್ಶುಚಿಸ್ಸಂಯಮಿತೇಂದ್ರಿಯಃ ॥ ೧೨ ॥
ವೇದವೇದಾಂಗಪಾರಜ್ಞಾನ್ದ್ವಿಜಾನಾಹೂಯ ಕರ್ಮಠಾನ್ ।
ಉದ್ದೇಶ್ಯಫಲಮುಲ್ಲಿಖ್ಯ ಭಗವತ್ಪ್ರೀತಿಮೇವ ವಾ ॥ ೧೩ ॥
ಭೋಜಯಿಷ್ಯೇ ಸ್ವಶಕ್ತ್ಯಾಹಂ ಸಹಸ್ರಂ ಬ್ರಾಹ್ಮಣಾನಿತಿ ।
ಸಂಕಲ್ಪ್ಯ ಪೂಜ್ಯ ವಿಘ್ನೇಶಂ ಬ್ರಾಹ್ಮಣೈಸ್ಸ್ವಸ್ತಿ ವಾಚಯೇತ್ ॥ ೧೪ ॥
ಕೃತ್ವಾಭ್ಯುದಯಿಕಂ ಯೋಗ್ಯಮಾಚಾರ್ಯಂ ವೃಣುಯಾತ್ತತಃ ।
ಬ್ರಹ್ಮಾಣಂ ಚ ಸದಸ್ಯಂ ಚ ಋತ್ವಿಜೋ ದ್ವಾದಶಾಷ್ಟ ವಾ ॥ ೧೫ ॥
ಸೌವರ್ಣಂ ಕಲಶಂ ಸ್ಥಾಪ್ಯ ಸರ್ವಲಕ್ಷಣಸಂಯುತಮ್ ।
ಜನಾರ್ದನಸ್ಯ ಪ್ರತಿಮಾಂ ಸೌವರ್ಣೀಂ ತತ್ರ ಸಾದಯೇತ್ ॥ ೧೬ ॥
ಪೂಜಯೇತ್ಪರಯಾ ಭಕ್ತ್ಯಾ ಷೋಡಶೈರುಪಚಾರಕೈಃ ।
ಸಂಪೂಜ್ಯ ಪ್ರಾರ್ಥಯಿತ್ವಾ ತಂ ಬ್ರಾಹ್ಮಣಾನ್ಭೋಜಯೇತ್ತತಃ ॥ ೧೭ ॥

ಪ್ರತ್ಯಹಂ ಶತಸಂಖ್ಯಾಕಾನ್ ವಾ ನ್ಯೂನಾಧಿಕ್ಯಸಂಖ್ಯಯಾ ।
ಪಾದ್ಯಗಂಧಾಕ್ಷತೈಃ ಪುಷ್ಪೈರ್ಧೂಪದೀಪೈಃ ಪ್ರಪೂಜಿತಾನ್ ॥ ೧೮ ॥
ಪೂರ್ತೌ ಸಹಸ್ರಸಂಖ್ಯಾಯಾಂ ದ್ವಿಜಾನಾಂ ತದ್ದಿನೇ ಪುನಃ ।
ಸ್ವಗೃಹ್ಯೋಕ್ತೇನ ಮಾರ್ಗೇಣ ಪ್ರಣೀಯಾಗ್ನಿಂ ಚರುಂ ಶ್ರಪೇತ್ ॥ ೧೯ ॥
ವೈಷ್ಣವೇನ ತು ಮಂತ್ರೇಣ ಸಹಸ್ರಂ ಜುಹುಯಾಚ್ಚ ತಮ್ ।
ತತೋ ದ್ವಾದಶಭಿರ್ಮಂತ್ರೈಃ ಕೇಶವಾದ್ಯೈರ್ನಮೋಽಂತಕೈಃ ॥ ೨೦ ॥
ಅಪಿ ನಾಮ್ನಾ ಸಹಸ್ರೇಣ ಪೂಜ್ಯ ದೇವಸ್ಯ ಸರ್ಪಿಷಾ ।
ಹುತ್ವಾ ಸ್ವಿಷ್ಟಕೃತಾದ್ಯಂ ಚ ಹೋಮಶೇಷಂ ಸಮಾಪಯೇತ್ ॥ ೨೧ ॥
ಆಚಾರ್ಯೇಣಾಖಿಲಂ ಕರ್ಮ ಕರಣೀಯಮಥಾಪಿ ವಾ ।
ತತ್ಸಮಕ್ಷಂ ಸ್ವಯಂ ಕುರ್ಯಾದಖಿಲಂ ಹವನಾದಿಕಮ್ ॥ ೨೨ ॥
ಉತ್ತರಂ ಪೂಜನಂ ಕುರ್ಯಾದ್ದತ್ವಾ ದಧ್ಯೋದನಂ ಪುನಃ ।
ಆಚಾರ್ಯಂ ಚ ಸದಸ್ಯಂ ಚ ಬ್ರಹ್ಮಾಣಂ ಚೈವ ಪೂಜಯೇತ್ ॥ ೨೩ ॥
ಆಚಾರ್ಯಾಯ ತತೋ ದದ್ಯಾತ್ಕೃಷ್ಣಧೇನುಂ ಸವತ್ಸಕಾಮ್ ।
ಬ್ರಹ್ಮಣೇ ವೃಷಭಂ ಯೋಗ್ಯಂ ಸದಸ್ಯಾಯಾಶ್ವಮೇವ ಚ ॥ ೨೪ ॥
ಏಕೇತ್ಯಾದಿಕಮಂತ್ರಾಣಾಂ ಶ್ರಾವಕಾ ಋತ್ವಿಜಶ್ಚ ಯೇ ।
ವಿಪ್ರಭೋಜನಕಾಲೇ ತಾನ್ದಕ್ಷಿಣಾದ್ಯೈಶ್ಚ ತೋಷಯೇತ್ ॥ ೨೫ ॥
ರಸಾಸ್ಸರ್ವೇ ಯದಾಶ್ರಿತ್ಯ ತಿಷ್ಠಂತಿ ಬ್ರಹ್ಮರೂಪಕಾಮ್ ।
ತದನ್ನದಾನತೋ ಮಹ್ಯಂ ಹರಿಸ್ತುಷ್ಯತಿ ಮಾಧವಃ ॥ ೨೬ ॥
ಅನ್ನದಾನೇನ ದೇವೇಶ ವ್ರತೇನ ಚ ಜನಾರ್ದನ ।
ಪ್ರಸನ್ನೋ ಭವ ಮೇ ಕಾಂತ ರಮಾರಮಣ ಸುಂದರ ॥ ೨೭ ॥
ಸಿಕ್ಥಂ ಸಿಕ್ಥಾರ್ಧಮಾತ್ರಂ ವಾ ಯದ್ದತ್ತಮತಿಪಾವನಮ್ ।
ಪಕ್ವಾನ್ನಂ ತು ರಸೈಃ ಪೂರ್ಣಂ ಶರ್ಕರಾಜ್ಯಸಮನ್ವಿತಮ್ ॥ ೨೮ ॥
ಆಜ್ಯಂ ಪ್ರಾಜ್ಯಂ ಮರೀಚೈಲಾಗುಡಾದಿಮಧುರೀಕೃತಮ್ ।
ತಾಂಬೂಲದಕ್ಷಿಣಾಯುಕ್ತಂ ಶ್ರದ್ಧಾಭಕ್ತಿಸಮನ್ವಿತಮ್ ॥ ೨೯ ॥
ಸಮರ್ಪಿತಂ ಮಯಾ ತುಭ್ಯಮಾಕೃಷ್ಯ ಫಲದೋ ಭವ ।
ಯನ್ನ್ಯೂನಮಧಿಕಂ ಜಾತಂ ತತ್ಸಾಂಗಂ ಕುರು ಮೇ ಪ್ರಭೋ ॥ ೩೦ ॥
ಏವಂ ವಿಸೃಜ್ಯ ತಂ ದೇವಂ ದಕ್ಷಿಣಾಕಲಶಾದಿಕಮ್ ।
ದತ್ವಾಽಚಾರ್ಯಾಯ ಪರಯಾ ಭಕ್ತ್ಯಾ ತಂ ಪ್ರಾರ್ಥಯೇತ್ತತಃ ॥ ೩೧ ॥
ಭಗವನ್ಸರ್ವಧರ್ಮಜ್ಞ ಶರಣಾಗತವತ್ಸಲ ।
ತ್ವತ್ಪ್ರಸಾದಾದಿದಂ ಕರ್ಮ ಸಾಂಗಂ ಭವತು ಭೋ ಗುರೋ ॥ ೩೨ ॥

ತರ್ಪಯಿತ್ವಾನ್ನಶೇಷೇಣ ದೀನಾಂಧಕೃಪಣಾದಿಕಾನ್ ।
ಕರ್ಮೇಶ್ವರಾರ್ಪಣಂ ಕೃತ್ವಾ ಸ್ವಯಂ ಭುಂಜೀತ ಬಂಧುಭಿಃ ॥ ೩೩ ॥
ಸಹಸ್ರಭೋಜನವಿಧಿಮೇವಂ ಯಃ ಕುರುತೇ ನರಃ ।
ತಸ್ಯ ಪುಣ್ಯಫಲಂ ವಕ್ತುಂ ದೇವದೇವೋಽಪಿ ನ ಪ್ರಭುಃ ॥ ೩೪ ॥
ನಿಯಮೋ ನಾನ್ನದಾನೇಽಪಿ ಪಾತ್ರಂ ಕ್ಷುಧಿತಮೀರಿತಮ್ ।
ತಥಾಪ್ಯತಿಫಲಂ ಪ್ರೋಕ್ತಂ ವೈದಿಕದ್ವಿಜಭೋಜನೇ ॥ ೩೫ ॥
ವೇದಾಭ್ಯಾಸೇನ ಯಸ್ಯಾನ್ನಂ ಜೀರ್ಯತೇ ಸ್ವೋದರಂ ಗತಮ್ ।
ದಶಪೂರ್ವಾನ್ದಶಪರಾನ್ಪಿತೄನುದ್ಧರತೇ ಸ್ವಕಾನ್ ॥ ೩೬ ॥
ಸಹಸ್ರಬ್ರಾಹ್ಮಣಾ ಮುಖ್ಯಾ ಮಧ್ಯಮಾಸ್ತು ಭುಜಿಕ್ರಿಯಾ ।
ಯೇನ ಕೇನ ಪ್ರಕಾರೇಣ ಕುರ್ವನ್ನಾಪ್ನೋತಿ ವೈ ಫಲಮ್ ॥ ೩೭ ॥
ಅನೇನೈವ ಪ್ರಕಾರೇಣ ಲಕ್ಷಂ ವಾ ಕೋಟಿಮೇವ ವಾ ।
ಸ್ವಶಕ್ತ್ಯಾ ಭೋಜಯೇದ್ವಿಪ್ರಾನಶಕ್ತೌ ಶತಮೇವ ವಾ ॥ ೩೮ ॥
ತಾವದ್ಧೋಮಂ ಪ್ರಕುರ್ವೀತ ಯಾವದ್ಬ್ರಾಹ್ಮಣಭೋಜನಮ್ ।
ಹೋಮೋ ದಶಾಂಶಂ ವಾ ಸ್ಯಾಚ್ಚೇಷಮುಕ್ತವದಾಚರೇತ್ ॥ ೩೯ ॥
ದಾನಾನಿ ಸರ್ವಶಾಸ್ತ್ರೇಷು ಯಾನ್ಯುಕ್ತಾನಿ ವ್ರತಾನಿ ಚ ।
ತಾನಿ ಸರ್ವಾಣಿ ಮುನಯೋ ಹ್ಯನ್ನದಾನಸಮಾನಿ ನ ॥ ೪೦ ॥
ಅನ್ನಮೂಲಂ ಜಗತ್ಸರ್ವಂ ಪ್ರಾಣಾ ಹ್ಯನ್ನಮಯಾ ಸ್ಥಿತಾಃ ।
ತದನ್ನಮಮೃತಂ ಭೂತ್ವಾ ಬ್ರಹ್ಮಭೂಯಾಯ ಕಲ್ಪತೇ ॥ ೪೧ ॥
ಧಾತವಸ್ಸಪ್ತ ಸರ್ವೇಷಾಮನ್ನಮೂಲಾಸ್ತು ದೇಹಿನಾಮ್ ।
ತಸ್ಮಾದನ್ನಂ ಪ್ರದಾತವ್ಯಂ ಜಗತಾಮುಪಕಾರಕಮ್ ॥ ೪೨ ॥
ಇಂದ್ರಾದಯೋಽಪಿ ಯೇ ದೇವಾಸ್ಸರ್ವೇ ತೇಽನ್ನಮುಪಾಸತೇ ।
ಅನ್ನಂ ಬ್ರಹ್ಮೇತಿ ವೇದಾಶ್ಚ ಯಸ್ಯ ಕುರ್ವಂತಿ ವರ್ಣನಮ್ ॥ ೪೩ ॥
ಯಸ್ಯ ಪ್ರದಾನತಃ ಪೂರ್ವಮೃಷಯಸ್ಸುಖಮಿಚ್ಛವಃ ।
ಐಹಿಕಾಮುಷ್ಮಿಕಾನ್ಭೋಗಾನ್ಭುಕ್ತ್ವಾ ವಿಷ್ಣುಪದೇ ಸ್ಥಿತಾಃ ॥ ೪೪ ॥
ಅನೇನ ವಿಧಿನಾ ಯೋಽನ್ನಪ್ರದಾನಂ ಕುರುತೇ ನರಃ ।
ಯತ್ರ ಕುತ್ರಾಪಿ ತೇನಾಸೌ ಕಲ್ಪೋಕ್ತಂ ಲಭತೇ ಫಲಮ್ ॥ ೪೫ ॥
ಪ್ರಯಾಗೇ ಯದಿ ತತ್ಕುರ್ಯಾದ್ಯಥಾಶಕ್ತಿ ಯಥಾವಿಧಿ ।
ಅನ್ಯತಃ ಸಮವಾಪ್ನೋತಿ ಹ್ಯನಂತಗುಣಿತಂ ಫಲಮ್ ॥ ೪೬ ॥
ಏವಮುಕ್ತೋ ಮುನಿಶ್ರೇಷ್ಠಾಃ ಪ್ರಯಾಗೇ ತೀರ್ಥನಾಯಕೇ ।
ಅನ್ನದಾನವಿಧಿಸ್ಸಮ್ಯಕ್ ಶೃಣುತಾನ್ಯದ್ವದಾಮಿ ವಃ ॥ ೪೭ ॥

॥ ಇತಿ ಸಪ್ತಪಂಚಾಶತ್ತಮೋಽಧ್ಯಾಯಃ ॥

**ಸೂತರು ಹೇಳಿದರು—**

ಎಲೈ ಮುನಿವರ್ಯರೇ! ಸರ್ವಧರ್ಮಗಳಲ್ಲಿ ಉತ್ತಮೋತ್ತಮವಾದ ಅನ್ನದಾನದ ವಿಧಿಯನ್ನು ಒಂದೇ ಮನಸ್ಸುಳ್ಳವರಾಗಿ ಕೇಳಿರಿ. ॥ ೧೦ ॥ ಸೂರ್ಯನು ಉದಯಿಸಿರಲಾಗಿ ಪುಣ್ಯಕರವಾದ ಮಾಸದಲ್ಲಿ, ಪುಣ್ಯಕರ ತಿಥಿ, ವಾರ, ನಕ್ಷತ್ರ, ಶುಭಕರಣ, ಶುಭಯೋಗದಲ್ಲಿ ॥ ೧೧ ॥ ಪೂರ್ವಾಹ್ನದಲ್ಲಿ ಹೆಂಡತಿಸಹಿತನಾಗಿ ಅಭ್ಯಂಜನವನ್ನು ಮಾಡಿ, ನಿತ್ಯಕ್ರಿಯೆಗಳನ್ನು ಆಚರಿಸಿ ಶಾಂತನಾಗಿ ಶುಚಿರ್ಭೂತನಾಗಿ ಇಂದ್ರಿಯಗಳನ್ನು ಸ್ಥಿಮಿತದಲ್ಲಿಟ್ಟುಕೊಂಡವನಾಗಿ. ಸದಾಚಾರಸಂಪನ್ನರಾಗಿಯೂ, ವೇದವೇದಾಂಗಪಾರಂಗತರಾಗಿಯೂ ಇರುವ ಬ್ರಾಹ್ಮಣೋತ್ತಮರನ್ನು ಆಹ್ವಾನಿಸಿ, ಭಗವತ್ಪ್ರೀತಿಯೇ ಮುಖ್ಯವಾದ ಉದ್ದೇಶ್ಯವನ್ನು ಠರಾವು ಮಾಡಿ "ನನ್ನ ಶಕ್ತ್ಯಾನುಸಾರ ಸಹಸ್ರಸಂಖ್ಯಾಕ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತೇನೆ" ಎಂದು ಸಂಕಲ್ಪಮಾಡಿ ತದಂಗವಾಗಿ ಬ್ರಾಹ್ಮಣರ ಸ್ವಸ್ತಿವಾಚನದೊಡನೆ ಮಹಾಗಣಪತಿಪೂಜೆಯನ್ನು ಮಾಡಬೇಕು. ॥ ೧೨-೧೪ ॥ ಅನಂತರ ಅಭ್ಯುದಯ ಶ್ರಾದ್ಧವನ್ನು ಮಾಡಿ ಯೋಗ್ಯವಾಗಿರತಕ್ಕ ಒಬ್ಬ ಆಚಾರ್ಯರನ್ನು ಸ್ವೀಕರಿಸಬೇಕು. ಅನಂತರ ಬ್ರಹ್ಮನನ್ನೂ, ಸದಸ್ಯರನ್ನೂ, ಹನ್ನೆರಡು ಅಥವಾ ಎಂಟು ಮಂದಿ ಋತ್ವಿಜರನ್ನೂ ವರಿಸಬೇಕು. ॥ ೧೫ ॥ ಸಲ್ಲಕ್ಷಣಗಳಿಂದ ಕೂಡಿದ ಬಂಗಾರದ ಕಳಶವನ್ನು ಸ್ಥಾಪಿಸಿ ಅದರ ಮೇಲೆ ಬಂಗಾರದ ಜನಾರ್ದನ ದೇವರ ಪ್ರತಿಮಾವನ್ನು ಸ್ಥಾಪಿಸಬೇಕು. ॥ ೧೬ ॥ ಈ ಜನಾರ್ದನ ದೇವರನ್ನು ಷೋಡಶೋಪಚಾರಪೂಜಾಗಳಿಂದ ಅರ್ಚಿಸಿ ಅನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ॥ ೧೭ ॥ ಪ್ರತಿದಿವಸವೂ ನೂರು ಅಥವಾ ಹೆಚ್ಚು ಕಡಿಮೆಯ ಸಂಖ್ಯೆಯ ಬ್ರಾಹ್ಮಣರುಗಳನ್ನು ಪಾದ್ಯ, ಅರ್ಘ್ಯ, ಗಂಧ, ಅಕ್ಷತೆ, ಹೂವು, ಧೂಪ ಮತ್ತು ದೀಪ ಇವುಗಳಿಂದ ಪೂಜಿಸಿ ಭೋಜನ ಮಾಡಿಸಬೇಕು. ॥ ೧೮ ॥ ಈ ರೀತಿಯಾಗಿ ಭೋಜನವನ್ನು ನಿತ್ಯವೂ ಮಾಡಿಸಬೇಕು. ಅನಂತರ ಈ ಭೋಜನ ಮಾಡಿದ ಬ್ರಾಹ್ಮಣರ ಸಂಖ್ಯೆಯು ಸಾವಿರವಾಗಲು, ತನಗೆ ಸಂಬಂಧಪಟ್ಟ ಗೃಹ್ಯೋಕ್ತಮಾರ್ಗದಿಂದ ಅಗ್ನಿಯನ್ನು ಪ್ರತಿಷ್ಠಾನ ಮಾಡಿ ಆಹುತಿಗಳನ್ನು ಅಗ್ನಿಯಲ್ಲಿ ಹಾಕಬೇಕು. ॥ ೧೯ ॥ ವಿಷ್ಣುಮಂತ್ರದಿಂದ (ಅಥವಾ ವಿಷ್ಣುಗಾಯತ್ರೀ ಮಂತ್ರದಿಂದ) ಸಾವಿರ ಆಹುತಿಯನ್ನು ಕೊಡಬೇಕು. ಅನಂತರ ನಮಃ ಎಂಬುದು ಕಡೆಯಲ್ಲಿ ಉಳ್ಳ ಕೇಶವಾದಿ ದ್ವಾದಶ ಮಂತ್ರಗಳಿಂದ, ಹಾಗೂ ವಿಷ್ಣುಸಹಸ್ರನಾಮದಿಂದ ಪೂಜಿಸಬೇಕು (ಇದೇ ಮಂತ್ರಗಳಿಂದ ಆಜ್ಯಾಹುತಿಯನ್ನು ಕೊಡಬೇಕು ಎಂಬ ಅಭಿಪ್ರಾಯವೂ ಬರುತ್ತದೆ.) ಅನಂತರ ಸ್ವಿಷ್ಟಕೃತ್ ಮೊದಲಾದ ಹೋಮಶೇಷವನ್ನು ಮುಗಿಸಬೇಕು. ॥ ೨೦-೨೧ ॥ ಆವಶ್ಯಕತೆಯಿದ್ದರೆ ಆಚಾರ್ಯರುಗಳ ಮೂಲಕ ಎಲ್ಲ ಕಾರ್ಯಗಳನ್ನೂ ಮಾಡಿ ಮುಗಿಸಬಹುದು. ಅಥವಾ ಅವರ ಎದುರಿಗೆ ಅವರ ಆದೇಶದಂತೆ ತಾನೇ ಎಲ್ಲವನ್ನೂ ಮಾಡಿ ಮುಗಿಸಬಹುದು. ॥ ೨೨ ॥ ಮೊಸರನ್ನವನ್ನು ನಿವೇದನ ಮಾಡಿ ಉತ್ತರಪೂಜಾದಿಗಳನ್ನು ಮುಗಿಸಬೇಕು. ಅನಂತರ ಆಚಾರ್ಯರನ್ನೂ, ಋತ್ವಿಜರನ್ನೂ ಮತ್ತು ಬ್ರಾಹ್ಮಣರನ್ನೂ ಪೂಜಿಸಬೇಕು. ॥ ೨೩ ॥ ಪ್ರಧಾನ ಆಚಾರ್ಯರಿಗೆ ಕರುವಿನ ಸಹಿತವಾಗಿರುವ ಕಪ್ಪು ಗೋವನ್ನು ದಾನ ಮಾಡಬೇಕು. ಬ್ರಹ್ಮಸ್ಥಾನಕ್ಕೆ ಆವಾಹಿತರಾಗಿರುವ ಬ್ರಾಹ್ಮಣರಿಗೆ ವೃಷಭವನ್ನು, ಋತ್ವಿಜಾದಿಗಳಿಗೆ ಕುದುರೆಯನ್ನು ಕೊಡಬೇಕು. ॥ ೨೪ ॥ "ಏಕ" ಇತ್ಯಾದಿ ಮಂತ್ರಗಳನ್ನು ಋತ್ವಿಜರಿಂದ ಶ್ರವಣಮಾಡಿ ಅವರನ್ನು ಭೋಜನಕಾಲದಲ್ಲಿ ದಕ್ಷಿಣಾದಿಗಳಿಂದ ಸಂತೋಷಪಡಿಸಬೇಕು. ॥ ೨೫ ॥ ಷಡ್ರಸಗಳಲ್ಲಿಯೂ ಪರಮಾತ್ಮನು ಇದ್ದಾನೆ. ಆದ್ದರಿಂದ ಷಡ್ರಸಗಳೂ ಪರಮಾತ್ಮನ ರೂಪದಲ್ಲಿದ್ದು ಸ್ವೀಕರಿಸಲ್ಪಡುತ್ತವೆ:

ಇಂತಹ ಷಡ್ರಸಗಳು ಅನ್ನದಲ್ಲಿವೆ. ಇಂತಹ ಅನ್ನವನ್ನು ದಾನ ಮಾಡುವವರಿಂದ ಶ್ರೀಮಾಧವನ ರೂಪದಲ್ಲಿರುವ ಹರಿಯು ಸಂತುಷ್ಟನಾಗುವನು. ॥ ೨೬ ॥ ಅನ್ನದಾನರೂಪ ವ್ರತದಿಂದ ದೇವದೇವನಾದ, ಮನೋಹರನಾದ, ಸುಂದರನಾಗಿರತಕ್ಕ, ರಮಾರಮಣನಾದ ಶ್ರೀಜನಾರ್ದನನೇ! ನನ್ನ ಬಗ್ಗೆ ಪ್ರಸನ್ನನಾಗು. ॥ ೨೭ ॥ ನಾನು ನಿನಗೆ ಅರ್ಪಿಸುತ್ತಿರುವ ಪಕ್ವಾನ್ನವು ಒಂದು ತುತ್ತಿರಬಹುದು ಅಥವಾ ಅರ್ಧ ತುತ್ತಿರಬಹುದು. ಹೇಗಾದರೂ ಇರಲಿ, ನನ್ನಿಂದ ಯಾವುದು ನಿವೇದಿತವಾಗಿದೆಯೋ ಅದು ಷಡ್ರಸಗಳಿಂದ ತುಂಬಿದೆ ಮತ್ತು ಸಕ್ಕರೆ ತುಪ್ಪದಿಂದ ಕೂಡಿದೆ ಮತ್ತು ಹೇರಳವಾದಷ್ಟು ತುಪ್ಪದಿಂದಲೂ, ಬೆಲ್ಲ, ಮೆಣಸು, ಜೀರಿಗೆ ಮುಂತಾದುವುಗಳಿಂದಲೂ, ರುಚಿಯುಕ್ತವನ್ನಾಗಿ ಮಾಡಲ್ಪಟ್ಟಿದೆ. ಆದ್ದರಿಂದ ಅದನ್ನು ಸ್ವೀಕರಿಸು. ದಕ್ಷಿಣೆಯಿಂದ ಕೂಡಿದ ತಾಂಬೂಲವನ್ನು ಶ್ರದ್ಧೆಭಕ್ತಿಗಳಿಂದ ಸಮರ್ಪಿಸುತ್ತಿದ್ದೇನೆ; ಅದನ್ನು ಸ್ವೀಕರಿಸಿ ಫಲಪ್ರದನಾಗು. ನನ್ನ ಕರ್ಮ, ಕ್ರಿಯೆ ಮತ್ತು ನಿವೇದನದಲ್ಲಿ ಹೆಚ್ಚುಕಡಿಮೆಗಳಿವೆ; ಅದನ್ನು ಸ್ವೀಕರಿಸಿ ಸಾಂಗಯುಕ್ತವನ್ನದ್ದನ್ನಾಗಿ ಮಾಡು. ॥ ೨೮-೩೦ ॥ ಈ ರೀತಿಯಾಗಿ ಹೇಳುತ್ತಾ ಜನಾರ್ದನ ದೇವರನ್ನು ವಿಸರ್ಜಿಸಿ ದಕ್ಷಿಣೆ ಮತ್ತು ಕಳಶವನ್ನು ಆಚಾರ್ಯರಿಗೆ ಕೊಟ್ಟು ಅತಿಶಯಭಕ್ತಿಯಿಂದ ಅವರನ್ನು ಪ್ರಾರ್ಥಿಸಬೇಕು. ॥ ೩೧ ॥ ಗುರುಗಳೇ! ಸರ್ವಧರ್ಮಗಳನ್ನೂ ತಿಳಿದಿರುವ ಪೂಜ್ಯರೇ! ನಿಮ್ಮನ್ನು ಆಶ್ರಯಿಸಿದವರಲ್ಲಿ ವಾತ್ಸಲ್ಯವುಳ್ಳವರೇ! ನಿಮ್ಮ ಅನುಗ್ರಹದಿಂದ ಈ ಅನ್ನದಾನ ಕರ್ಮವು ಸಾಂಗವಾಗಲಿ. ॥ ೩೨ ॥ ಉಳಿದಿರುವ ಅಡಿಗೆ ಪದಾರ್ಥಗಳಿಂದ ದೀನರು, ಕುರುಡರು ಮತ್ತು ಕಂಗಾಲರನ್ನು ಭೋಜನ ಮಾಡಿಸಿ ತೃಪ್ತಿಪಡಿಸಿ ತಾನೂ ಇಷ್ಟಮಿತ್ರ ಬಂಧುಗಳೊಡನೆ ಭೋಜನ ಮಾಡತಕ್ಕದ್ದು. ॥ ೩೩ ॥ ಸಹಸ್ರಭೋಜನ ವಿಧಿಯನ್ನು ಮಾಡುವ ಆ ಮನುಷ್ಯನ ಪುಣ್ಯವನ್ನು ಹೇಳಲು ದೇವದೇವನಾದ ಶ್ರೀಹರಿಯೂ ಸಮರ್ಥನಲ್ಲ. (ಅಂದರೆ ಅಪಾರವೆಂತರ್ಥ) ॥ ೩೪ ॥ ಈ ಅನ್ನದಾನಕ್ಕೆ ಯಾವ ನಿಯಮವೂ ಇಲ್ಲ; ಹಸಿದಿರುವರಂತೂ ಪಾತ್ರರೇ, ಆದರೂ ವೇದಶಾಸ್ತ್ರಾದಿಗಳನ್ನು ಅಧ್ಯಯನ ಮಾಡಿ ನಿಷ್ಠರಾಗಿರುವವರಿಗೆ ಭೋಜನಮಾಡಿಸಿದರೆ ಈ ಮುಂದೆ ಹೇಳುವ ಮಹಾಫಲಗಳು ಲಭ್ಯವಾಗುವುವು. ॥ ೩೫ ॥ ವೇದಾಭ್ಯಾಸದಿಂದ ಯಾರು ಅನ್ನವನ್ನು ಜೀರ್ಣಿಸಿಕೊಳ್ಳುತ್ತಾರೋ ಅಂತವರನ್ನು ಭೋಜನ ಮಾಡಿಸಿದರೆ ತನ್ನ ಹಿಂದಿನ ಹತ್ತು ಪೀಳಿಗೆಗೆ ಸೇರಿದ ಪಿತೃಗಳನ್ನು ತನಗೆ ಭವಿಷ್ಯದಲ್ಲಿ ಬಂದು ಒದಗುವ ಹತ್ತು ಪೀಳಿಗೆಯ ಪಿತೃಗಳನ್ನು ಉದ್ಧರಿಸುವುದು. ॥ ೩೬ ॥ ಸಹಸ್ರ ಬ್ರಾಹ್ಮಣರಿಗೆ ಭೋಜನ ಮಾಡಿಸುವುದು ಮುಖ್ಯ; ಹಾಗಿಲ್ಲದಿದ್ದರೆ ಹೇಗಾದರಾಗಲೀ ಸಹಸ್ರ ಜನರಿಗೆ ಭೋಜನ ಮಾಡಿಸುವುದು ಮಧ್ಯಮ. ಹೇಗೆ ಮಾಡಿದರೂ ಫಲವು ಬರುತ್ತದೆ. ॥ ೩೭ ॥ ಇದೇ ರೀತಿಯಾಗಿ ಲಕ್ಷಸಂಖ್ಯಾಕ ಅಥವಾ ಕೋಟಿ ಸಂಖ್ಯಾಕರಾದ ಬ್ರಾಹ್ಮಣರುಗಳನ್ನು ತನ್ನ ಶಕ್ತ್ಯಾನುಸಾರ ಭೋಜನ ಮಾಡಿಸತಕ್ಕದ್ದು; ಶಕ್ತಿಯಿಲ್ಲದವನು ನೂರು ಬ್ರಾಹ್ಮಣರುಗಳನ್ನಾದರೂ ಭೋಜನ ಮಾಡಿಸಬೇಕು. ॥ ೩೮ ॥ ಎಷ್ಟು ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತೇವೋ ಅಷ್ಟು ಸಂಖ್ಯೆ ಆಹುತಿಗಳಿಂದ ಹೋಮಿಸಬೇಕು, ಅಥವಾ ಭೋಜನ ಸಂಖ್ಯೆಯ ಹತ್ತನೆಯ ಒಂದು ಅಂಶವಾದರೂ ಹೋಮಿಸಬಹುದು. ಮಿಕ್ಕ ಕರ್ಮಭಾಗಗಳು ಹಿಂದೆ ಹೇಳಿರುವಂತೆಯೇ ಸರಿ. ॥ ೩೯ ॥ ಎಲೈ ಮುನೀಶ್ವರರೇ! ಸರ್ವಶಾಸ್ತ್ರಗಳಲ್ಲಿ ಏನೇನು ದಾನಗಳು ಉಕ್ತವಾಗಿವೆಯೋ ಮತ್ತು ವ್ರತಗಳು ನಿರೂಪಿತವಾಗಿವೆಯೋ ಅವೆಲ್ಲವೂ ಅನ್ನದಾನಕ್ಕೆ ಸಮನಾಗುವುದಿಲ್ಲ. ॥ ೪೦ ॥ ಜಗತ್ತೆಲ್ಲವೂ ಅನ್ನವನ್ನೇ ಮೂಲದಲ್ಲಿ ಹೊಂದಿದೆ. ಪ್ರಾಣಗಳೂ ಅನ್ನವನ್ನವಲಂಬಿಸಿಯೇ ಇದೆ. ಆದ್ದರಿಂದ ಈ ಅನ್ನವೇ

ಅಮೃತಪ್ರಾಯವಾಗಿ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ. ॥ ೪೧ ॥ ಜೀವಿಗಳಲ್ಲಿರುವ ಏಳು ಧಾತುಗಳೂ ಅನ್ನವನ್ನೇ ಮೂಲದಲ್ಲಿ ಅವಲಂಬಿಸಿವೆ. ಆದ್ದರಿಂದ ಜಗತ್ತಿಗೆ ಉಪಕಾರ ಮಾಡುವವರು ಅನ್ನವನ್ನು ಪ್ರದಾನ ಮಾಡಬೇಕು. ॥ ೪೨ ॥ ಇಂದ್ರಾದಿ ಎಲ್ಲ ದೇವತೆಗಳೂ ಅನ್ನವನ್ನೇ ಉಪಾಸಿಸುತ್ತಾರೆ. ವೇದಾದಿಗಳೂ ಪರಮಾತ್ಮನನ್ನು "ಅನ್ನ" ಎಂದೇ ವರ್ಣಿಸಿವೆ. ॥ ೪೩ ॥ ಮೋಕ್ಷಸುಖವನ್ನು ಬಯಸಿದ ಋಷಿಗಳು ಈ ಅನ್ನದಾನದ ಫಲಸ್ವರೂಪವಾಗಿ ಇಹಲೋಕಪರಲೋಕಗಳ ಸುಖಗಳನ್ನು ಹೊಂದಿ ಕೊನೆಗೆ ಶ್ರೀವಿಷ್ಣುವಿನ ವೈಕುಂಠದಲ್ಲಿ ಇದ್ದಾರೆ. ॥ ೪೪. ॥ ಈ ವಿಧಿಯಿಂದ ಎಲ್ಲಿಯಾದರೂ ಇರಲಿ, ಯಾರು ಅನ್ನದಾನವನ್ನು ಮಾಡುವರೋ ಅವರು ಕಲ್ಪೋಕ್ತಪ್ರಕಾರ ಮಾಡಿದ ಅನ್ನದಾನದ ಫಲವನ್ನು ಹೊಂದುತ್ತಾರೆ. ॥ ೪೫ ॥ ಯಥಾವಿಧಿಯಾಗಿ ಪ್ರಯಾಗಕ್ಷೇತ್ರದಲ್ಲಿ ಅನ್ನದಾನ ಮಾಡಿದವನು ಬೇರೆಡೆಗಳಲ್ಲಿ ಮಾಡಿದ ಅನ್ನದಾನಗಳಿಗಿಂತ ಅನಂತಪಟ್ಟು ಹೆಚ್ಚಿಗೆ ಫಲವನ್ನು ಹೊಂದುವನು. ॥ ೪೬ ॥ ಎಲೈ, ಮುನಿಶ್ರೇಷ್ಠರೇ! ಈ ತೀರ್ಥನಾಯಕನಾದ ಪ್ರಯಾಗದಲ್ಲಿ ಮಾಡತಕ್ಕ ಈ ಅನ್ನದಾನದ ವಿಧಿಯು ತಮಗೆ ಹೇಳಲ್ಪಟ್ಟಿತು; ಇನ್ನೂ ಬೇರೆ ಬೇರೆ ವಿಷಯಗಳನ್ನು ಹೇಳುವೆನು. ಆಲಿಸಿರಿ. ॥ ೪೭ ॥

॥ ಐವತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಪಂಚಾಶತ್ತಮೋಽಧ್ಯಾಯಃ ॥ ೫೮ ॥

ಸೂತ ಉವಾಚ—

ಯಾನಿ ಕಾನಿ ಚ ದಾನಾನಿ ಸ್ವಲ್ಪಾನ್ಯಲ್ಪತರಾಣಿ ಚ ।
ತೀರ್ಥರಾಜಂ ಸಮಾಸಾದ್ಯ ಮಹತ್ತ್ವಂ ಯಾಂತಿ ಭಕ್ತಿತಃ ॥ ೧ ॥
ಅಪ್ರಕಾಶ್ಯಂ ತು ತತ್ರಾಪಿ ಮಹತ್ತರಮುದಾಹೃತಮ್ ।
ವಿಷ್ಣುಪ್ರಿಯಕರಂ ಶ್ರೇಷ್ಠಂ ಸರ್ವವಿಘ್ನೈರಬಾಧಿತಮ್ ॥ ೨ ॥
ಮಂತ್ರತಂತ್ರಕ್ರಿಯಾಹೀನಮಲ್ಪಕಂ ವಿಧಿವರ್ಜಿತಮ್ ।
ಅಪ್ರಕಾಶಕೃತಂ ದಾನಂ ಪ್ರಕಾಶಾದ್ದಶಧಾಧಿಕಮ್ ॥ ೩ ॥
ಪ್ರಯಾಗೇಽತಿ ಪ್ರಶಂಸಂತಿ ಗುಪ್ತದಾನಂ ಮಹರ್ಷಯಃ ।
ಅತೋ ಧನವತಾ ಕಾರ್ಯಂ ದರಿದ್ರೇಣಾಪಿ ಶಕ್ತಿತಃ ॥ ೪ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।
ಯಸ್ಯ ಶ್ರವಣಮಾತ್ರೇಣ ಗುಪ್ತದಾನಫಲಂ ಲಭೇತ್ ॥ ೫ ॥
ಸ್ವಸ್ವಶಕ್ತ್ಯಾ ಕೃತಂ ಯದ್ಯದ್ಬಹು ಸ್ವಲ್ಪಮಥಾಪಿ ವಾ ।
ಸರ್ವಸಾಕ್ಷೀ ಜಗಚ್ಚಕ್ಷುರ್ಮಾಧವಸ್ತೇನ ತುಷ್ಯತಿ ॥ ೬ ॥
ಮಧ್ಯದೇಶೇ ಪುರಾ ಕಶ್ಚಿದಾಸೀದ್ವೈಶ್ಯೋ ಧನೇಶ್ವರಃ ।
ನಾಮ್ನಾ ಗುಪ್ತಧನೋ ಲೋಭೀ ಕರ್ಮಣಾಪಿ ತಥೈವ ಸಃ ॥ ೭ ॥
ಅತ್ಯಂತಕೃಪಣೋಽದಾತಾಽಭಕ್ತೋಽಭೋಜಯಿತಾ ಚ ಸಃ ।
ರಂಕವೃತ್ತಿಪ್ರಿಯೋ ದುಃಖಂ ಸುಖವನ್ಮನ್ಯತೇ ಕ್ಷಮೀ ॥ ೮ ॥
ಪತಿವ್ರತಾ ತಸ್ಯ ಭಾರ್ಯಾ ಸುನಂದಾನಂದರೂಪಿಣೀ ।
ಸುಶೀಲಾ ರೂಪಸಂಪನ್ನಾ ವಸ್ತ್ರಾಲಂಕಾರಭೂಷಿತಾ ॥ ೯ ॥
ಗೃಹಕರ್ಮಣಿ ದಕ್ಷಾಸೀದ್ದೇವದ್ವಿಜಪರಾಯಣಾ ।
ಭುಂಜಾನಾ ಸ್ವಕೃತಂ ಪುಣ್ಯಂ ಪತ್ಯುಶ್ಛಂದಾನುವರ್ತಿನೀ ॥ ೧೦ ॥
ಪ್ರಾತರಾದಿನಿಶೀಥಾಂತಂ ನಾನಾಭೋಗಾನ್ಭುನಕ್ತಿ ಸಾ ।
ನಿಶೀಥಾದುದಯಂ ಯಾವದ್ರಂಕವತ್ತಿಷ್ಠತಿ ಸ್ವಯಮ್ ॥ ೧೧ ॥
ಕದಾಚಿತ್ತದ್ಗೃಹೇ ಕಶ್ಚಿದ್ಯಾಚಕಸ್ಸಮುಪಾಗತಃ ।
ಭಾರ್ಯಯಾ ಪ್ರೇರಿತೋ ದೀನಃ ದ್ರವ್ಯಾರ್ಜನಪರೋ ಭ್ರಮನ್॥ ೧೨ ॥
ದ್ವಾರ್ಯಲಿಂದೇ ಸಮಾಸೀನಂ ಕ್ಷುತ್ತೃಡಾಕುಲಿತೇಂದ್ರಿಯಮ್ ।
ದದರ್ಶಾಥ ಸುನಂದಾ ತಂ ಬ್ರಾಹ್ಮಣಂ ಶ್ವಾಸವರ್ಷಿಣಮ್ ॥ ೧೩ ॥
ದೃಷ್ಟ್ವಾ ತಥಾವಿಧಂ ವಿಪ್ರಂ ಕೃಪಾನಿರ್ಭರಮಾನಸಾ ।
ಪ್ರಶ್ರಯಾವನತಾ ಭೂತ್ವಾ ತಮುವಾಚ ಧನೇಶ್ವರೀ ॥ ೧೪ ॥

## ॥ ಐವತ್ತೆಂಟನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಸಣ್ಣದಾಗಿರಲಿ, ಸ್ವಲ್ಪವಾಗಿರಲಿ ಶ್ರೀತೀರ್ಥರಾಜನಾದ ಪ್ರಯಾಗಮಾಧವನಿಗೆ ಭಕ್ತಿಯಿಂದ ಅರ್ಪಿತವಾದ ದಾನವು ಮಹತ್ತರವಾಗುತ್ತದೆ. ॥ ೧ ॥ ಪ್ರಕಾಶಪಡಿಸದೆ ಗುಪ್ತವಾಗಿ ಕೊಡಲ್ಪಟ್ಟ ದಾನವು, ಮಹತ್ತರವಾದುದೆಂದು ಶಾಸ್ತ್ರಗಳಲ್ಲಿ ಉದಾಹರಿಸಲ್ಪಟ್ಟಿದೆ. ಇಂತಹ ಗುಪ್ತದಾನವು ಯಾವ ಬಾಧೆಯೂ ಇಲ್ಲದ್ದು ಶ್ರೇಷ್ಠವಾದುದು ಮತ್ತು ಶ್ರೀಹರಿಗೆ ಪ್ರಿಯವಾದುದು ॥ ೨ ॥ ಮಂತ್ರತಂತ್ರಗಳಿಲ್ಲದೆ ಯಾವ ವಿಧಿನಿಯಮಗಳೂ ಇಲ್ಲದೆ ಗುಪ್ತವಾಗಿ ಕೊಡುವ ದಾನವು ಪ್ರಕಾಶಪಡಿಸಿ ಕೊಡುವ ದಾನಕ್ಕಿಂತ ಹತ್ತರಷ್ಟು ಹೆಚ್ಚಿಗೆ ಫಲಕೊಡತಕ್ಕದ್ದು. ॥ ೩ ॥ ಮಹರ್ಷಿಗಳು ಪ್ರಯಾಗದಲ್ಲಿ ಗುಪ್ತದಾನವನ್ನು ಬಹುವಾಗಿ ಪ್ರಶಂಸಿಸಿದ್ದಾರೆ. ಆದ್ದರಿಂದ ಶ್ರೀಮಂತನು ಅವಶ್ಯವಾಗಿ ದರಿದ್ರನೂ ಯಥಾಶಕ್ತಿ ಅಲ್ಲಿ ಗುಪ್ತದಾನವನ್ನು ಮಾಡಬೇಕು. ॥ ೪ ॥ ಈ ವಿಷಯದಲ್ಲಿ ಪುರಾತನವಾದ ಇತಿಹಾಸವನ್ನು ಹೇಳುವರು; ಇದನ್ನು ಕೇಳುವ ಮಾತ್ರದಿಂದಲೇ ಗುಪ್ತದಾನದ ಫಲಪ್ರಾಪ್ತಿಯಾಗುವುದು. ॥ ೫ ॥ ತನ್ನ ಶಕ್ತಿಗೆ ತಕ್ಕಂತೆ ಮಾಡಿದ ದೊಡ್ಡದಾಗಲೀ, ಅಲ್ಪದ್ದಾಗಲೀ ಇರುವ ದಾನದಿಂದ ಸರ್ವಸಾಕ್ಷಿಯಾದ ಶ್ರೀಮಾಧವನು ಸಂತುಷ್ಟನಾಗುವನು. ॥ ೬ ॥ ಹಿಂದೆ, ಮಧ್ಯದೇಶದಲ್ಲಿ ಗುಪ್ತಧನನೆಂಬ ಹೆಸರುಳ್ಳ ಒಬ್ಬ ಶ್ರೀಮಂತ ವೈಶ್ಯನಿದ್ದನು. ಅವನು ತನ್ನ ಕರ್ಮದಿಂದಲೂ ಗುಪ್ತಧನನೇ ಆಗಿದ್ದನು. (ದುಡ್ಡನ್ನು ಮುಚ್ಚಿಡುತ್ತಿದ್ದನೆಂದರ್ಥ) ಅತಿಲೋಭಿಯಾಗಿದ್ದನು. ॥ ೭ ॥ ಅವನು ಅತ್ಯಂತ ಜಿಪುಣನೂ, ದಾನಮಾಡದವನೂ, ಭಗವದ್ಭಕ್ತಿಯಿಲ್ಲದವನೂ ಮತ್ತು ಯಾರಿಗೂ ಊಟಮಾಡಿಸದವನಾಗಿದ್ದನು. ದರಿದ್ರನಂತೆ ಇರಲು ಇಷ್ಟಪಡುತ್ತಿದ್ದನು ಮತ್ತು ಎಲ್ಲವನ್ನೂ ಸಹಿಸಿಕೊಂಡಿದ್ದು ದುಃಖವನ್ನೇ ಸುಖಪ್ರಾಯವನ್ನಾಗಿ ತಿಳಿಯುತ್ತಿದ್ದನು. ॥ ೮ ॥ ಅವನ ಹೆಂಡತಿಯು ಸುನಂದಾ ಎಂದು. ಇವಳಿಗೆ ಆನಂದಕರವಾದ ರೂಪವಿದ್ದಿತು. ಇವಳು ಒಳ್ಳೆಯ ನಡತೆಯಿಂದಲೂ ರೂಪಸಂಪತ್ತಿನಿಂದಲೂ ಕೂಡಿದ್ದು ಒಳ್ಳೆಯ ವಸ್ತ್ರಾಲಂಕಾರಗಳಿಂದ ಭೂಷಿತಳಾಗಿದ್ದಳು. ॥ ೯ ॥ ಗೃಹಕೃತ್ಯಗಳಲ್ಲಿ ಕುಶಲಳಾಗಿದ್ದು ದೇವರು ಬ್ರಾಹ್ಮಣರುಗಳ ವಿಷಯದಲ್ಲಿ ಆಸಕ್ತಿ ತೋರುತ್ತಿದ್ದಳು. ತನ್ನ ಪುಣ್ಯಫಲವನ್ನು ಅನುಭವಿಸುತ್ತಾ ಗಂಡನ ಇಚ್ಛೆಗೆ ಅನುಕೂಲಳಾಗಿದ್ದಳು. ॥ ೧೦ ॥ ಪ್ರಾತಃಕಾಲದಿಂದ ರಾತ್ರಿಯವರೆಗೆ ತನಗೆ ಇಷ್ಟಬಂದ ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದಳು. ಆದರೆ ರಾತ್ರಿಯಿಂದ ಬೆಳಗ್ಗಿನವರೆಗೆ ತಾನೂ ದರಿದ್ರಳಂತೆ ಇರುತ್ತಿದ್ದಳು. ॥ ೧೧ ॥ ಒಂದು ದಿನ, ಅವಳ ಮನೆಗೆ ಒಬ್ಬ ಭಿಕ್ಷುಕನು ಬಂದನು; ಅವನು ದೀನನಾಗಿದ್ದು ಹೆಂಡತಿಯಿಂದ ಪ್ರೇರಿಸಲ್ಪಟ್ಟವನಾಗಿ ಹಣದ ಸಂಪಾದನೆಗಾಗಿ ಅಲೆಯುತ್ತಿದ್ದನು. ॥ ೧೨ ॥ ಬಾಗಿಲಿನ ಚೌಕಟ್ಟಿನ ಹತ್ತಿರ ಕುಳಿತು ಹಸಿವು ನೀರಡಿಕೆಯಿಂದ ನಿಟ್ಟುಸಿರು ಬಿಡುತ್ತಿದ್ದ ಮತ್ತು ಆಯಾಸಗೊಂಡಿದ್ದ ಬ್ರಾಹ್ಮಣನನ್ನು ಸುನಂದೆಯು ನೋಡಿದಳು. ॥ ೧೩ ॥ ಅಂಥ ಅವಸ್ಥೆಯಲ್ಲಿದ್ದ ಆ ಬ್ರಾಹ್ಮಣನನ್ನು ನೋಡಿದ ಧನಿಕಳಾದ ಸುನಂದೆಯ ಮನಸ್ಸು ಕಾರುಣ್ಯದಿಂದ ತುಂಬಿಹೋಯಿತು. ವಿನಯದಿಂದ ಬಾಗಿ ಅವನನ್ನು ಪ್ರಶ್ನಿಸಿದಳು. ॥ ೧೪ ॥

**ಸುನಂದೋವಾಚ—**

ಕುತಸ್ತ್ವಮಾಗತೋ ಬ್ರಹ್ಮನ್ಕುತ್ರೇದಾನೀಂ ಚ ಗಚ್ಛಸಿ ।
ವಿಹ್ವಲೋ ದೃಶ್ಯಸೇ ಕಸ್ಮಾತ್ಕಿಂಚಾಸ್ತೇ ಚ ಮನೋಗತಮ್ ॥ ೧೫ ॥

**ಸುನಂದೆಯು ಹೇಳಿದಳು—**

''ಎಲೈ ಬ್ರಾಹ್ಮಣೋತ್ತಮನೇ! ಎಲ್ಲಿಂದ ಬರುತ್ತಿದ್ದೀ, ಮತ್ತು ಎಲ್ಲಿಗೆ ಹೋಗುತ್ತಿದ್ದೀ. ನಿನ್ನನ್ನು ನೋಡಿದರೆ ಕಷ್ಟದಲ್ಲಿದ್ದಂತೆ ತೋರುವುದು. ನಿನ್ನ ಮನಸ್ಸಿನಲ್ಲಿ ಏನಿದೆ?'' ಎಂದು. ॥ ೧೫ ॥

**ಬ್ರಾಹ್ಮಣ ಉವಾಚ—**

**ಕ್ಷುತ್ತೃಡಾಕುಲಚಿತ್ತೋऽಹಂ ನೋತ್ಸಹೇ ವಕ್ತುಮನಾಗಪಿ ।**
**ಮನಃಸ್ವಾಸ್ಥ್ಯಂ ಸಮಾಸಾದ್ಯ ವದಿಷ್ಯಾಮಿ ಸ್ವಚೇಷ್ಟಿತಮ್ ॥ ೧೬ ॥**

**ಬ್ರಾಹ್ಮಣನು ಹೇಳಿದನು—**

''ಹಸಿವು ನೀರಡಿಕೆಯಿಂದ ನನ್ನ ಮನಸ್ಸು ವ್ಯಾಕುಲಗೊಂಡಿದೆ. ಹೇಳಲು ಸ್ವಲ್ಪವೂ ಉತ್ಸಾಹವಿಲ್ಲ. ಮನಸ್ಸಿಗೆ ನೆಮ್ಮದಿ ಸಿಕ್ಕಿದ ಮೇಲೆ ನನ್ನ ವೃತ್ತಾಂತವನ್ನೆಲ್ಲಾ ಹೇಳುವೆನು.'' ಎಂದನು. ॥ ೧೬ ॥

**ಸೂತ ಉವಾಚ—**

**ಇತಿ ತದ್ವಚನಂ ಶ್ರುತ್ವಾ ಜ್ಞಾತ್ವಾ ಚಾತಿಬುಭುಕ್ಷಿತಮ್ ।**
**ಸ್ಮರಂತ್ಯಾತಿಥ್ಯಧರ್ಮಂ ಸಾ ತಂ ನಿನಾಯ ಗೃಹಾಂತರಮ್ ॥ ೧೭ ॥**
**ಸ್ನಾಪಯಿತ್ವೋಷ್ಣಸಲಿಲೈಃ ಪರಿಧಾಯ ವರಂ ಶುಭಮ್ ।**
**ಸಮಾವೇಶ್ಯಾಸನೇ ರಮ್ಯೇऽಪೂಜಯತ್ತಂ ಯಥಾವಿಧಿ ॥ ೧೮ ॥**
**ಆಮಂ ನಾನಾವಿಧಂ ದತ್ವಾ ದಧಿಕ್ಷೀರಘೃತಾದಿ ಚ ।**
**ಕಾರಯಿತ್ವಾಮುನಾ ಪಾಕಂ ಭೋಜಯಾಮಾಸ ತಂ ದ್ವಿಜಮ್ ॥ ೧೯ ॥**
**ತತೋ ಯಥಾಸುಖಂ ವಿಪ್ರೇ ಭುಕ್ತವತ್ಯಮಲಾಶಯಾ ।**
**ನಾನಾಪರಿಜನೈರ್ಯುಕ್ತಾ ತಚ್ಛೇಷಂ ಬುಭುಜೇ ಸ್ವಯಮ್ ॥ ೨೦ ॥**
**ಅಥ ತೃಪ್ತಸ್ಸುಖಾಸೀನಸ್ತಯಾ ಸ ಬಹುಮಾನಿತಃ ।**
**ಸ್ವೋದಂತಂ ಕಥಯಾಮಾಸ ಸುನಂದಾಮತಿಹರ್ಷಿತಃ ॥ ೨೧ ॥**

**ಸೂತರು ಹೇಳಿದರು—**

ಈ ರೀತಿಯಾದ ಅವನ ಮಾತುಗಳನ್ನು ಕೇಳಿ ಆಕೆಯು ಬಹಳ ದಣಿದಿರುವನೆಂದು ತಿಳಿದು ಆತಿಥ್ಯಧರ್ಮವನ್ನು ಸ್ಮರಿಸಿದವಳಾಗಿ ಅವನನ್ನು ಮನೆಯೊಳಗೆ ಸ್ವಾಗತಿಸಿದಳು. ॥ ೧೭ ॥ ಅವನಿಗೆ ಬಿಸಿನೀರನ್ನು ಸ್ನಾನಕ್ಕೆ ಕೊಟ್ಟು ಉಟ್ಟುಕೊಳ್ಳಲು ಶುಭ್ರವಾದ ಒಳ್ಳೆಯ ಬಟ್ಟೆಯನ್ನು ಕೊಟ್ಟು ಉತ್ತಮವಾದ ಆಸನದಲ್ಲಿ ಕೂಡಿಸಿ ವಿಧಿವತ್ತಾಗಿ ಸತ್ಕರಿಸಿದಳು. ॥ ೧೮ ॥ ಹಾಲು,ತುಪ್ಪ, ಮೊಸರು, ಅಕ್ಕಿ ಮುಂತಾದ ಹಸಿ ಪದಾರ್ಥಗಳನ್ನು ಕೊಟ್ಟು ಅವನು ಅಡಿಗೆಯನ್ನು ಮಾಡಿಕೊಂಡು ಭೋಜನ ಮಾಡಲು ಅನುಕೂಲ ಮಾಡಿಕೊಟ್ಟಳು. ॥ ೧೯ ॥ ಅನಂತರ ಬ್ರಾಹ್ಮಣನು ಸುಖವಾಗಿ ಭೋಜನವನ್ನು ಮಾಡಿ ಮುಗಿಸಿದ ಮೇಲೆ ಆ ಸ್ತ್ರೀಯು ಒಳ್ಳೆಯ

ಭಾವನೆಯಿಂದ ತನ್ನ ಬಂಧುಗಳೊಡನೆ ಉಳಿದಿರುವ ಅಡಿಗೆಯಿಂದ ತಾನೂ ಭೋಜನ ಮಾಡಿದಳು. ॥೨೦॥ ಅನಂತರ ತೃಪ್ತಿಯಿಂದ ಸುಖವಾಗಿ ಕುಳಿತಿರತಕ್ಕ ಆ ಬ್ರಾಹ್ಮಣನು ಆಕೆಯಿಂದ ಆದರ ಮಾಡಲ್ಪಟ್ಟವನಾಗಿ ಆಕೆಯನ್ನು ಕುರಿತು ತನ್ನ ವೃತ್ತಾಂತವನ್ನೆಲ್ಲಾ ಅರುಹಿದನು. ॥೨೧॥

ದ್ವಿಜ ಉವಾಚ—

ಧರ್ಮಿಷ್ಠೇ ಶೃಣು ಮೇ ವೃತ್ತಂ ಯದ್ಬ್ರಮನ್ನಿಹ ಚಾಗತಃ ।
ಸ್ತ್ರಿಯಾ ವಿವಾಸಿತೋಽತ್ಯರ್ಥಂ ದಾರಿದ್ರ್ಯಪ್ರಾಪ್ತದುಃಖಯಾ ॥ ೨೨ ॥
ಧನಮೇವ ಪರಂ ಲೋಕೇ ಸಂಸಾರಸುಖಸಾಧನಮ್ ।
ತದ್ವಿನಾ ಮೃತಕಪ್ರಾಯೋ ವ್ಯರ್ಥಂ ಭವತಿ ಜೀವಿತಮ್ ॥ ೨೩ ॥
ತಪೋ ವಿದ್ಯಾ ಬಲಂ ಶೌರ್ಯಂ ಸದಾಚಾರಶ್ಚ ಸತ್ಕ್ರಿಯಾಃ ।
ಕುಲವರ್ಣಾಶ್ರಮಾಸ್ಸರ್ವೇ ವಿಫಲಾ ಧನವರ್ಜಿತಾ ॥ ೨೪ ॥
ತದರ್ಜನೋತ್ಸುಕೋಽಹಂ ವೈ ದೈವಾತ್ತ್ವದ್ಗೃಹಮಾಗತಃ ।
ತ್ವದ್ಗಾರ್ಹಸ್ತ್ಯಂ ಸಮಾಲೋಕ್ಯ ಪ್ರಹೃಷ್ಟೋಽಸ್ಮಿ ಶುಚಿಸ್ಮಿತೇ ॥ ೨೫ ॥
ತ್ವಂ ತು ಮೇ ಸುಭಗಾ ಭಾಸಿ ಚೈಕಲಾ ದೃಕ್ಷ್ಯಸೇ ಕಥಮ್ ।
ಗೃಹಸ್ವಾಮೀ ಕ್ವ ಚಾಸ್ತೇ ತೇ ಪ್ರೇಷಿತೋ ವಾಸ್ತಿ ವಾ ಗೃಹೇ ॥ ೨೬ ॥

ಬ್ರಾಹ್ಮಣನು ಹೇಳಿದನು—

ಎಲೈ ಧರ್ಮಿಷ್ಠಳೇ! ದಾರಿದ್ರ್ಯದಿಂದ ಪ್ರಾಪ್ತವಾದ ದುಃಖದಿಂದ ನನ್ನ ಹೆಂಡತಿಯಿಂದ ಊರಿನಿಂದ ಹೊರಡಿಸಲ್ಪಟ್ಟಿರತಕ್ಕ ನನ್ನ ವೃತ್ತಾಂತವನ್ನು ಕೇಳು. ॥೨೨॥ ಸಂಸಾರವನ್ನು ಸುಖವಾಗಿ ಸಾಗಿಸುವುದಕ್ಕೆ ಅವಶ್ಯಕವಾದ ಸಾಧನವೆಂದರೆ ಹಣವೇನೇ; ಅದಿಲ್ಲದಿದ್ದರೆ ಜೀವನವು ಶವದಂತಾಗಿ ವ್ಯರ್ಥವಾಗುವುದು. ॥ ೨೩ ॥ ಹಣವಿಲ್ಲದಿದ್ದರೆ ತಪಸ್ಸು, ವಿದ್ಯೆಯು, ಶಕ್ತಿಯು, ಶೌರ್ಯವು, ಸದಾಚಾರವು, ಸತ್ಕ್ರಿಯೆಗಳು, ಕುಲಕ್ಕೆ ಸಂಬಂಧಪಟ್ಟ ವರ್ಣವು ಮತ್ತು ವರ್ಣಾಶ್ರಮಗಳು. ಎಲ್ಲವೂ ವ್ಯರ್ಥವಾಗುವುವು. ॥ ೨೪ ॥ ಆದ್ದರಿಂದ ಈ ಹಣದ ಸಂಪಾದನೆಯಲ್ಲಿ ಉತ್ಸುಕನಾಗಿದ್ದು ದೈವಯೋಗದಿಂದ ನಿನ್ನ ಮನೆಗೆ ಬಂದಿದ್ದೇನೆ. ಎಲೈ ಒಳ್ಳೆಯ ಮಂದಹಾಸವುಳ್ಳವಳೇ; ನಿನ್ನ ಗೃಹಸ್ಥಧರ್ಮದ ಆಚರಣೆಯನ್ನು ಕಂಡು ಹರ್ಷಗೊಂಡಿದ್ದೇನೆ. ॥೨೫॥ ನೀನು ಚೆನ್ನಾಗಿ ಸುಖಭೋಗಗಳನ್ನು ಹೊಂದಿರುವುದಾಗಿ ನನಗೆ ತೋರುತ್ತಿ. ಆದರೆ ಒಬ್ಬಂಟಿಗಳಾಗಿ ಏಕೆ ಕಂಡುಬರುತ್ತಿದ್ದೀ? ಮನೆಯ ಯಜಮಾನನನ್ನು ಎಲ್ಲಿಯಾದರೂ ಕಳುಹಿಸಿದ್ದೀಯಾ? ಇಲ್ಲವಾದರೆ ಮನೆಯಲ್ಲಿಯೇ ಇದ್ದಾನೆಯೇ?'' ಎಂದು ಪ್ರಶ್ನಿಸಿದನು. ॥ ೨೬ ॥

ಸುನಂದೋವಾಚ—

ಅದ್ಯಾತ್ರೈವ ವಸ ಬ್ರಹ್ಮನ್ಯದಿ ತ್ವಂ ದ್ರಷ್ಟುಮಿಚ್ಛಸಿ ।
ಆಗಂತಾ ಮಧ್ಯರಾತ್ರೇಽಸೌ ತದಾ ತಂ ಪಶ್ಯ ಸಾದರಮ್ ॥ ೨೭ ॥
ಇತ್ಯುಕ್ತ್ವಾ ತಂ ಸುನಂದಾ ಸಾ ಗೃಹಕರ್ಮ ಚಕಾರ ಹ ।
ಸ ಚ ಸುಷ್ವಾಪ ಪರ್ಯಂಕೇ ಶ್ರಮಾಪನುತಿಕಾಮ್ಯಯಾ ॥ ೨೮ ॥

ಅಥ ಸಾಯಂ ಸುನಂದಾ ಸಾ ದೀಪಾನ್ಪ್ರಜ್ವಾಲ್ಯ ಸರ್ವತಃ ।
ಕೃತ್ವಾ ಸಾಯಂತನಂ ಕೃತ್ಯಂ ಸುಷ್ವಾಪ ಗೃಹಮಧ್ಯಗಾ ॥ ೨೯ ॥
ದ್ವಿಜೋಽಪ್ಯುತ್ಥಾಯ ಸಹಸಾ ಧೌತಾಂಘ್ರಿಯುಗಲಸ್ತತಃ ।
ಸಂಧ್ಯಾಮುಪಾಸ್ಯ ಮನಸಾ ಜಜಾಪ ಬ್ರಹ್ಮ ಸುವ್ರತಃ ॥ ೩೦ ॥
ಅಥ ಶೂನ್ಯಂ ಗೃಹಂ ದೃಷ್ಟ್ವಾ ಸುಪ್ತಾಂ ಚ ಗೃಹಧರ್ಮಿಣೀಮ್ ।
ದದರ್ಶ ಸರ್ವತೋ ಗೇಹಂ ಸಮೃದ್ಧಂ ದೀಪಭೂಷಿತಮ್ ॥ ೩೧ ॥
ಏಕಸ್ಮಿನ್ಗೃಹಭಾಗೇಽಸೌ ದ್ರವ್ಯಂ ಭಾಂಡಂ ಮಹತ್ತರಮ್ ।
ದೃಷ್ಟ್ವಾ ದಾತುಂ ಮನಶ್ಚಕ್ರೇ ನಿರ್ಧನೋ ಧನಲೋಭತಃ ॥ ೩೨ ॥
ತಾವತ್ಪಂಚಫಣೋ ನಾಗಸ್ತತ ಉತ್ಥಾಯ ಸತ್ವರಮ್ ।
ಫೂತ್ಕಾರೈರ್ಭೀಷಯನ್ನಾಹ ಸಕ್ರೋಧಂ ಧನಲಾಲಸಮ್ ॥ ೩೩ ॥

**ಸುನಂದೆಯು ಹೇಳಿದಳು—**

ವಿಪ್ರನೇ! ಅವರನ್ನು ನೋಡುವ ಇಚ್ಛೆಯಿದ್ದರೆ ಇಲ್ಲಿಯೇ ಇದ್ದು ಬಿಡಿ. ಮಧ್ಯರಾತ್ರಿಯಲ್ಲಿ ಅವರು ಬರುವರು. ಆಗ ಅವರನ್ನು ನೋಡುವಿರಿ. ॥ ೨೭ ॥ ಹೀಗೆ ಹೇಳಿ ಸುನಂದೆಯು ಗೃಹಕಾರ್ಯಗಳಲ್ಲಿ ಆಸಕ್ತಳಾದಳು. ಆ ಬ್ರಾಹ್ಮಣನಾದರೋ ಆಯಾಸ ಪರಿಹಾರವಾಗಲು ಮಂಚದ ಮೇಲೆ ಮಲಗಿದನು. ॥ ೨೮ ॥ ಅನಂತರ ಸಾಯಂಕಾಲದಲ್ಲಿ ಸುನಂದೆಯು ಎಲ್ಲ ಕಡೆಯಲ್ಲೂ ದೀಪಗಳನ್ನು ಹಚ್ಚಿಟ್ಟು ಸಾಯಂಕಾಲದಲ್ಲಿ ಮಾಡಬೇಕಾದ ಕಾರ್ಯಗಳನ್ನೆಲ್ಲ ಮುಗಿಸಿ, ಮನೆಯ ಮಧ್ಯದಲ್ಲಿ ಮಲಗಿದಳು. ॥ ೨೯ ॥ ಸದಾಚಾರ ವ್ರತವುಳ್ಳ ಆ ಬ್ರಾಹ್ಮಣನು ಥಟ್ಟನೆ ಎದ್ದು ತನ್ನ ಕಾಲುಗಳನ್ನು ತೊಳೆದುಕೊಂಡು, ಸಾಯಂಸಂಧ್ಯಾವನ್ನು ಮಾಡಿ ಮನಸ್ಸಿನಲ್ಲೇ ಗಾಯತ್ರೀಮಂತ್ರವನ್ನು ಜಪಿಸಿದನು. ॥ ೩೦ ॥ ಅನಂತರ ಯಾರೂ ಇಲ್ಲದಿರುವ ಮನೆಯನ್ನೂ ಮಲಗಿರುವ ಗೃಹಿಣಿಯನ್ನೂ ಎಲ್ಲೆಡೆ ದೀಪಗಳಿಂದ ಬೆಳಗುತ್ತಿರುವ ಮತ್ತು ಸಮೃದ್ಧವಾಗಿ ತುಂಬಿರುವ ಮನೆಯನ್ನು ನೋಡಿದನು. ॥ ೩೧ ॥ ಮನೆಯ ಒಂದು ಭಾಗದಲ್ಲಿ ದೊಡ್ಡ ನಾಣ್ಯಗಳ ಪಾತ್ರೆಯನ್ನು ನೋಡಿ ದರಿದ್ರನಾದ ಅವನು ಧನಲೋಭಿಯಾಗಿ ಅದರಿಂದ ಹಣವನ್ನು ತೆಗೆದುಕೊಳ್ಳಲು ನಿಶ್ಚಯಿಸಿದನು. ॥ ೩೨ ॥ ಆಗ ಜಾಗ್ರತೆಯಾಗಿ ಐದು ಹೆಡೆಯ ಹಾವೊಂದು ತನ್ನ ಹೆಡೆಗಳನ್ನೆತ್ತಿ ಬುಸುಗುಟ್ಟಿ ಧನಾಸಕ್ತನಾದ ಇವನನ್ನು ಹೆದರಿಸಿ, ಕೋಪದಿಂದ ಹೇಳಿತು. ॥ ೩೩ ॥

**ನಾಗ ಉವಾಚ—**

ಗೃಹ್ಣಾಸೀದಂ ಧನಂ ಕಸ್ಯ ಮಾಮನಾದೃತ್ಯ ದುರ್ಮತೇ ।
ನ ಗೃಹಸ್ವಾಮಿನೋ ದ್ರವ್ಯಂ ನ ತವಾಸ್ತಿ ಮಮಾಪಿ ಚ ॥ ೩೪ ॥
ವಿಷ್ಣುಶರ್ಮೇತಿ ಧರ್ಮಾತ್ಮಾ ಕಿಂಚಿದ್ದಾನಪರಙ್ಮುಖಃ ।
ನಿಸ್ಪೃಹಸ್ಸರ್ವಕಾಮೇಷು ಪ್ರಯಾಗೇ ವಸತಿ ದ್ವಿಜಃ ॥ ೩೫ ॥
ಪ್ರತ್ಯಹಂ ಮಾಧವಕ್ಷೇತ್ರೇ ಆಮಧ್ಯಾಹ್ನಂ ಜಪನ್ಮುನಃ ।
ಯಾಯಾವರಂ ಸಮಾನೀಯ ಕಿಂಚಿದ್ದತ್ವಾ ತತಃ ಸ್ವಯಮ್ ॥ ೩೬ ॥

**ಭುನಕ್ತಿ ಪಂಚಮೇ ಕಾಲೇ ಶೀತೇ ಸಂಧ್ಯಾಂ ವಟೇ ಸುಖಮ್ ।**
**ತಸ್ಯೇದಂ ವರ್ತತೇ ದ್ರವ್ಯಂ ಗುಪ್ತದಾನಪ್ರಭಾವಜಮ್ ॥ ೩೭ ॥**
**ತತ್ತ್ವಮಿಚ್ಛಸಿ ಚೇದ್ಗತ್ವಾ ಗೃಹ್ಣೀಷ್ವ ತದನುಜ್ಞಯಾ ।**
**ಏವಂ ನಿವಾರಿತೋ ವಿಪ್ರಃ ಸ್ವಸ್ಥಾನೇ ಸಮುವಾಸ ಹ ॥ ೩೮ ॥**
**ಏನಿದ್ರೋ ಧನಮಾಶಂಸನ್ಪ್ರತೀಕ್ಷನ್ನರುಣೋದಯಮ್ ।**
**ಕದಾ ತತ್ರ ಗಮಿಷ್ಯಾಮಿ ಕದಾ ಲಪ್ಸ್ಯಾಮ್ಯದೋ ಧನಮ್ ॥ ೩೯ ॥**
**ಏವಂ ಧನಾಶಯಾ ವ್ಯಗ್ರಶ್ಚಿಂತಯಾನಃ ಪುನಃ ಪುನಃ ।**
**ಶಯ್ಯಾಯಾಂ ಜಾಗರೂಕೋಽಸೌ ನಿಶೀಥಂ ಸಮಪದ್ಯತ ॥ ೪೦ ॥**

**॥ ಇತಿ ಅಷ್ಟಪಂಚಾಶತ್ತಮೋಽಧ್ಯಾಯಃ ॥**

**ಸರ್ಪವು ಹೇಳಿತು—**

ಎಲೈ ದುರ್ಬುದ್ಧಿಯುಳ್ಳವನೇ! ನನ್ನನ್ನು ಧಿಕ್ಕರಿಸಿ ಯಾರ ಹಣವನ್ನು ತೆಗೆದುಕೊಳ್ಳುತ್ತೀಯೆ; ಈ ಹಣವು ಮನೆಯ ಯಜಮಾನನದೂ ಅಲ್ಲ, ನಿನ್ನದೂ ಅಲ್ಲ, ನನ್ನದಂತೂ ಅಲ್ಲವೇ ಅಲ್ಲ. ॥ ೩೪ ॥ ಧರ್ಮಾತ್ಮನಾದ, ''ಸ್ವಲ್ಪದಾನ''ದಲ್ಲಿ ಒಲವುಳ್ಳ ಪವಿತ್ರನಾಗಿರುವ ಮತ್ತು ಎಲ್ಲ ಕರ್ಮಗಳಲ್ಲೂ ನಿಸ್ಪೃಹನಾಗಿರುವ ವಿಷ್ಣುಶರ್ಮನೆಂಬ ಒಬ್ಬ ಬ್ರಾಹ್ಮಣನು ಪ್ರಯಾಗದಲ್ಲಿ ಇದ್ದಾನೆ. ॥ ೩೫ ॥ ಪ್ರತಿದಿವಸವೂ ಶ್ರೀವೇಣೀಮಾಧವನ ಕ್ಷೇತ್ರದಲ್ಲಿ ಈ ಬ್ರಾಹ್ಮಣನು ಮಧ್ಯಾಹ್ನದವರೆಗೂ ಮಾಧವನನ್ನು ಕುರಿತು ಜಪ ಮಾಡುವನು. ನಂತರ ಯಾಯಾವರವನ್ನು ಮಾಡಿ (ಯಾಯಾವರ-ನಿತ್ಯಯಾಚನೆ) ದ್ರವ್ಯವನ್ನು ತಂದು, ಅದರಲ್ಲಿ ಸ್ವಲ್ಪಭಾಗವನ್ನು ದಾನ ಮಾಡಿ ಸಾಯಂಕಾಲವಾಗುತ್ತಲೇ ಭೋಜನ ಮಾಡಿ ವಟಮೂಲದಲ್ಲಿ ನಿದ್ರಿಸುವನು. ಈ ಹಣವು ಅವನಿಗೆ ಸೇರಿದ್ದು. ಇದನ್ನು ಅವನು ಗುಪ್ತದಾನದ ಪ್ರಭಾವದಿಂದ ಸಂಪಾದಿಸಿದ್ದು. ॥ ೩೬-೩೭ ॥ ನೀನು ಅಪೇಕ್ಷೆಪಟ್ಟರೆ ಪ್ರಯಾಗಕ್ಕೆ ಹೋಗಿ ಅಲ್ಲಿ ಅವನ ಅಪ್ಪಣೆಯಿಂದ ಇದನ್ನು ತೆಗೆದುಕೋ. ಈ ರೀತಿಯಾಗಿ ಸರ್ಪದಿಂದ ನಿವಾರಿಸಲ್ಪಟ್ಟ ಆ ಬ್ರಾಹ್ಮಣನು ತಾನು ಮಲಗಿದ್ದ ಸ್ಥಳಕ್ಕೆ ಹಿಂದಿರುಗಿದನು. ॥ ೩೮ ॥ ಹಣವನ್ನೇ ಆಶಿಸುತ್ತಾ ಅರುಣೋದಯವಾಗುವುದನ್ನೇ ನಿರೀಕ್ಷಿಸುತ್ತಾ ''ಯಾವಾಗ ಪ್ರಯಾಗಕ್ಕೆ ಹೋದೇನು? ಅವನಿಂದ ಯಾವಾಗ ಹಣವನ್ನು ಸಂಪಾದಿಸುವೆನು?'' ಎಂದು ಹಣದಾಶೆಯಿಂದ ವ್ಯಗ್ರನಾಗಿ ರಾತ್ರಿಯಿಡೀ ನಿದ್ದೆ ಮಾಡದೆ ಹಾಸಿಗೆಯಲ್ಲಿ ಎಚ್ಚರದಿಂದಿದ್ದೇ ಕಳೆದನು. ॥ ೩೯-೪೦ ॥

॥ ಐವತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನಷಷ್ಟಿತಮೋಽಧ್ಯಾಯಃ ॥ ೫೯ ॥

ಸೂತ ಉವಾಚ—

ತತಸ್ಸಮಾಗತೋ ರಾತ್ರಾವರ್ಧಚಂದ್ರೇಽರ್ಧಭಾಸ್ಕರೇ ।
ವನಂ ಗತೋ ಗೃಹಸ್ವಾಮೀ ದ್ವಾರದೇಶೇ ಸಮಾಹ್ವಯತ್ ॥ ೧ ॥
ಗೃಹಿಣೀ ತದ್ಧ್ವನಿಂ ಶ್ರುತ್ವಾ ದೀಪಾನ್ನಿರ್ವಾಪ್ಯ ಸರ್ವತಃ ।
ವಿಷಣ್ಣವದನಾ ತಸ್ಥಾವುದ್ಘಾಟ್ಯ ದ್ವಾರಮಂಜಸಾ ॥ ೨ ॥
ಶುಷ್ಕಪರ್ಣಶಿರೋಭಾರಂ ಸ್ಥಾಪಯಿತ್ವಾ ಸ ಚಾಂಗಣೇ ।
ವಸ್ತ್ರಾಣ್ಯುತ್ತಾರ್ಯ ಶೀತೇನ ಜಲೇನ ಸ್ನಾನಮಾಚರತ್ ॥ ೩ ॥
ತತಃ ಪಾಷಾಣಪಾತ್ರೇಣ ವನ್ಯಂ ಪರ್ಯುಷಿತಂ ಸ್ಥಿತಮ್ ।
ಬುಭುಜೇ ಜೀರ್ಣಪರ್ಣಾನಾಂ ಜ್ಯೋತ್ಸ್ನಯಾ ಕೃತದೀಪಕಃ ॥ ೪ ॥
ಮಾರ್ತಿಕೇನೈವ ಪಾತ್ರೇಣ ಜಲಂ ಪೀತ್ವಾ ಸುಶೀತಲಮ್ ।
ತಚ್ಛೇಷೇಣ ಕರೌ ಪಾದೌ ಮುಖಂ ಪ್ರಕ್ಷಾಲ್ಯ ಹರ್ಷಿತಃ ॥ ೫ ॥
ತತೋ ಗತ್ವಾ ಸ ಪರ್ಯಂಕೇ ಬಹುಜೀವಸಮಾಕುಲೇ ।
ತತ್ರಾಸ್ತರಕಥಾಶೂನ್ಯೇ ನಿಮ್ನೇ ನಿರುಪಬರ್ಹಣೇ ॥ ೬ ॥
ಕಂಚುಕಾವರಣಶ್ಲಿಷ್ಟೇ ಕಟಿಸ್ಪೃಷ್ಟಧರಾತಲಃ ।
ತತೋ ಗತ್ವಾ ಸುನಂದಾಪಿ ಸುಷ್ವಾಪ ಸ್ವಗೃಹಾಂತರೇ ॥ ೭ ॥
ಅಥಾರುಣೋದಯೇ ಕಾಲೇ ಶೀಘ್ರಮುತ್ಥಾಯ ಸತ್ವರಃ ।
ಭಾರಸಾಹಿತ್ಯಮಾದಾಯ ತಾಮಾಮಂತ್ರ್ಯ ಗತೋ ವನಮ್ ॥ ೮ ॥
ಗತೇ ತಸ್ಮಿನ್ಸುನಂದಾ ತು ಕೃತ್ವಾ ಶೌಚವಿಧಿಂ ಸತೀ ।
ಸಮ್ಮಾರ್ಜನೀಯಲೇಪಾದಿ ಪ್ರಾತ್ಯೂಷಂ ಕರ್ಮ ಸಾಚರತ್ ॥ ೯ ॥
ತದ್ದೃಷ್ಟ್ವಾ ಮಹದಾಶ್ಚರ್ಯಂ ಜ್ಞಾತ್ವಾ ಸಾಂಸಾರಿಕಂ ಸುಖಮ್ ।
ಸ್ವಯಂ ವಿಚಾರಯಾಮಾಸ ಸಫಲಂ ದೃಷ್ಟಸಾಧನಮ್ ॥ ೧೦ ॥
ಪಶ್ಯತೋ ಹಿ ಮಹಾಶ್ಚರ್ಯಂ ದಂಪತ್ಯೋಸ್ಸಹಧರ್ಮಿಣೋಃ ।
ಪತ್ನೀ ದೃಶ್ಯಂ ಫಲಂ ಭುಂಕ್ತೇ ಪತಿಸ್ತು ಫಲಮೀದೃಶಮ್ ॥ ೧೧ ॥
ಮಾತಾಪಿತೃಸುತಭ್ರಾತೃದಂಪತೀನಾಂ ಚ ಯೋ ಯಥಾ ।
ಪ್ರಾಗ್ಭವೇ ಕುರುತೇ ಕರ್ಮ ಸ ಏವೇಹಾತ್ತಿ ತತ್ಫಲಮ್ ॥ ೧೨ ॥
ಸ್ವಕರ್ಮಣಾ ಸುನಂದಾಸೌ ಭುಂಕ್ತೇ ಸಾಂಸಾರಿಕಂ ಸುಖಮ್ ।
ಗೃಹಸ್ವಾಮ್ಯಪಿ ವೈಶ್ಯೋಽಸೌ ನ ತದಾಪ್ನೋತಿ ದಿಷ್ಟತಃ ॥ ೧೩ ॥
ತಪೋ ವಿದ್ಯಾಕುಲಾಚಾರನೀತಿಸಾಧನವಿಕ್ರಮಾಃ ।
ಭವಂತಿ ಯದ್ವಿನಾ ವ್ಯರ್ಥಾ ತದದೃಷ್ಟಂ ನತೋಽಸ್ಮ್ಯಹಮ್ ॥ ೧೪ ॥

ಅಹಂ ಚ ಬಲಿನಾ ಯೇನ ಪುರಾನ್ನಿರ್ವಾಸಿತಃ ಸ್ವಕಾತ್ ।
ಧನಲೋಭೇನ ತತ್ಪಶ್ಚೇ ಕಥಮಂತಂ ಕರಿಷ್ಯತಿ ॥ ೧೫ ॥
ಸ ದಾಸ್ಯತಿ ನ ವಾ ಮಹ್ಯಂ ಪ್ರಾಣಪ್ರಿಯತರಂ ಧನಮ್ ।
ತಥಾಪ್ಯತ್ರ ಯತಿಷ್ಯೇಽಹಂ ತಮಾಹುಸ್ಸಹಕಾರಿಣಮ್ ॥ ೧೬ ॥
ವಿಚಾರ್ಯೈವಂ ಸಮುತ್ಥಾಯ ತಾಮಾಭಾಷ್ಯ ಚ ಸತ್ವರಮ್ ।
ಹರ್ಷಶೋಕಭಯಾವಿಷ್ಟಃ ಪ್ರತಸ್ಥೇ ತೀರ್ಥಭೂಪತಿಮ್ ॥ ೧೭ ॥
ದ್ವಿಗುಣಂ ಪ್ರಚಲನ್ಮಾರ್ಗೇಽನಶ್ನನ್ನಪಿ ಬಲಾನ್ವಿತಃ ।
ಅಪಿಬನ್ನಪ್ಯತಪ್ತೋಽಸೌ ಪ್ರಯಾಗಂ ದ್ರಾಗಗಾದ್ದ್ವಿಜಃ ॥ ೧೮ ॥
ವಿಷ್ಣುಶರ್ಮಾ ದ್ವಿಜಃ ಕ್ವಾಸ್ತೇ ತಮಹಂ ದ್ರಷ್ಟುಮಾಗತಃ ।
ನಿವೇದಯತ ತಂ ಮಹ್ಯಮಿತಿ ಪಪ್ರಚ್ಛ ತಜ್ಜನಾನ್ ॥ ೧೯ ॥
ಕೇಚನೋಚುಸ್ತತಸ್ತಸ್ಮೈ ವಿಷ್ಣುಶರ್ಮಾ ತು ತಿಷ್ಠತಿ ।
ಗಂಗಾಯಮುನಯೋಸ್ತೀರ ಆಮಧ್ಯಾಹ್ನಂ ಜಪನ್ ದ್ವಿಜಃ ॥ ೨೦ ॥
ಗ್ರಾಮೇ ಯಾಯಾವರಂ ಕೃತ್ವಾ ಕಿಂಚಿದ್ದತ್ವಾ ತತಃ ಸ್ವಯಮ್ ।
ಭುಕ್ತ್ವಾ ಸಂಧ್ಯಾಂ ವಟೇ ರಾತ್ರೌ ಶೇತೇ ಶ್ರೀಮಾಧವಂ ಸ್ಮರನ್ ॥ ೨೧ ॥
ಇತಿ ಶ್ರುತ್ವಾ ಜಗಾಮಾಶು ಸತ್ವರಂ ವೇಣಿಕಾತಟೇ ।
ಧ್ಯಾನಸ್ಥಿತಂ ಸಮಾಲೋಕ್ಯ ಸ್ವಯಂ ಸ್ನಾನಂ ಚಕಾರ ಹ ॥ ೨೨ ॥
ಸಂಧ್ಯಾಮುಪಾಸ್ಯ ವಿಧಿವತ್ಕ್ಷೌರಂ ಕೃತ್ವಾ ತತಃ ಪರಮ್ ।
ತ್ರಿವೇಣೀಂ ಮಾಧವಂ ಪೂಜ್ಯ ಪ್ರಾರ್ಥಯಾಮಾಸ ಭಕ್ತಿತಃ ॥ ೨೩ ॥
ಶ್ರೀಮಾಧವ ದಯಾಸಿಂಧೋ ಸರ್ವಕಾಮಪ್ರಪೂರಕ ।
ಯದಿ ದಾಸ್ಯಸಿ ಮೇ ದ್ರವ್ಯಂ ತದ್ವಸಿಷ್ಯೇ ತವ ಸ್ಥಲೇ ॥ ೨೪ ॥
ಅಥ ಧ್ಯಾನಚ್ಯುತಂ ವೀಕ್ಷ್ಯ ತಂ ದ್ವಿಜಂ ತಸ್ಯ ಸನ್ನಿಧಿಮ್ ।
ಗತ್ವಾ ನತ್ವಾ ಪುರಃ ಸ್ಥಿತ್ವಾ ಊಚೇ ಯಾಚಕಮುದ್ರಯಾ ॥ ೨೫ ॥

## ॥ ಐವತ್ತೊಂಬತ್ತನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಅರ್ಧರಾತ್ರಿಯಾಯಿತು. ಅರ್ಧಚಂದ್ರನು ಅರ್ಧಸೂರ್ಯನಂತೆ ಬೆಳಗಿದನು. ವನಕ್ಕೆ ತೆರಳಿದ್ದ ಮನೆಯ ಯಜಮಾನನು ಬಾಗಿಲಲ್ಲಿ ನಿಂತು ಕೂಗಿದನು. ॥ ೧ ॥ ಅದನ್ನು ಕೇಳಿದ ಯಜಮಾನಿಯು ಎಲ್ಲೆಡೆಯೂ ದೀಪಗಳನ್ನು ಆರಿಸಿ ದುಃಖಿತಳಾಗಿ ಬಾಗಿಲನ್ನು ತೆಗೆದು ನಿಂತಳು. ॥ ೨ ॥ ಅನಂತರ ಒಣಗಿದ ಎಲೆಗಳ ಹೊರೆಯನ್ನು ಅಂಗಳದಲ್ಲಿ ಇಟ್ಟು ಬಟ್ಟೆ ಬಿಚ್ಚಿ ತಣ್ಣೀರಿನಲ್ಲಿ ಕುತ್ತಿಗೆಯವರೆಗೆ ಸ್ನಾನ ಮಾಡಿದನು. ॥ ೩ ॥ ಒಣ ಎಲೆಗಳ ಸಹಾಯದಿಂದ ಬೆಳುದಿಂಗಳ ಬೆಳಕಿನಲ್ಲಿ ದೀಪ ಹಚ್ಚಿದನು. ಅನಂತರ ಮಣ್ಣಿನ ತಟ್ಟೆಯಲ್ಲಿ ತಂಗಳಾಗಿದ್ದ, ಕಾಡುಗೆಣಸಿನ ಆಹಾರವನ್ನು

ತಿಂದು, ಮಣ್ಣಿನ ಪಾತ್ರೆಯಲ್ಲಿಯೇ ತಣ್ಣೀರನ್ನು ಕುಡಿದು ಉಳಿದ ಅದೇ ತಣ್ಣೀರಿನಿಂದ ಕೈಕಾಲುಗಳನ್ನು ಹರ್ಷಿತನಾಗಿ ತೊಳೆದುಕೊಂಡನು. ॥ ೪-೫ ॥ ಜಿರಳೆ, ಗೊದ್ದ, ಇರುವೆ ಮುಂತಾದ ನಾನಾಪ್ರಾಣಿಗಳು ಮಲಗಿದ್ದ ತನ್ನ ಮಂಚದ ಮೇಲೆ ಕೇವಲ ಒಂದು ಅಂಗಿಯನ್ನು ಹಾಕಿಕೊಂಡು ಹಾಸಿಗೆ ಹೊದ್ದಿಗೆಯಿಲ್ಲದೆ ಮಂಚದ ಹಲಗೆಯು ಮೈಗೆ ಒತ್ತುತ್ತಿರಲು ಹಾಗೆಯೇ ಮಲಗಿದನು. ಅನಂತರ ಸುನಂದೆಯು ತನ್ನ ಶಯ್ಯಾಗೃಹಕ್ಕೆ ಹೋಗಿ ಸುಖವಾಗಿ ಮಲಗಿ ನಿದ್ರಿಸಿದಳು. ॥ ೬-೭ ॥ ಅನಂತರ ಅರುಣೋದಯವಾಗುತ್ತಲೇ ಅವನು ಜಾಗ್ರತೆಯಾಗಿ ಎದ್ದು ತನ್ನ ಭಾರವಾದ ಸಾಮಾನುಗಳನ್ನೆಲ್ಲ ಹೊತ್ತುಕೊಂಡು ಅವನ ಹೆಂಡತಿಗೆ ಹೇಳಿ ವನವನ್ನು ಕುರಿತು ಪ್ರಯಾಣಮಾಡಿದನು. ॥ ೮ ॥ ಗಂಡನು ಮನೆಯಿಂದ ಹೋದಮೇಲೆ ಪತಿವ್ರತೆಯಾದ ಆ ಸುನಂದೆಯು ಪ್ರಾತರ್ವಿಧಿಗಳನ್ನು ಮುಗಿಸಿ ಮನೆಯನ್ನು ಗುಡಿಸಿ ಮತ್ತು ಸಾರಿಸಿ ಪ್ರಾತಃಕಾಲದ ಕಾರ್ಯಗಳನ್ನೆಲ್ಲಾ ಮಾಡಿದಳು. ॥ ೯ ॥ ವಿಪ್ರನು ತಾನು ನೋಡಿದ ಇದೆಲ್ಲವನ್ನೂ ಮಹದಾಶ್ಚರ್ಯ ಸಂಗತಿಯಾಗಿ ತಿಳಿದು ತಾನೂ ವಿಚಾರ ಮಾಡಿ ಸಂಸಾರದ ಸುಖವೂ ಅದೃಷ್ಟವನ್ನೇ ಸಾಧನವಾಗಿ ಉಳ್ಳದ್ದೆಂದು ತಿಳಿದುಕೊಂಡನು. ॥ ೧೦ ॥ ದಂಪತಿಗಳಾಗಿರತಕ್ಕ ಈ ಗಂಡಹೆಂಡತಿಯರ ಜೀವನವಿಧಾನವು ಬಹು ಆಶ್ಚರ್ಯಕರವಾದುದು. ಹೆಂಡತಿಯು ಕಣ್ಣಿಗೆ ಕಾಣುವಂತೆ ಎಲ್ಲ ಸತ್ಫಲಗಳನ್ನು ಅನುಭವಿಸುತ್ತಿದ್ದಾಳೆ. ಗಂಡನಾದರೋ ಇಂತಹ ಕಂಗಾಲುಫಲಗಳನ್ನು ಅನುಭವಿಸುತ್ತಿದ್ದಾನೆ. ॥ ೧೧ ॥ ತಾಯಿ, ತಂದೆ, ಮಗ, ಅಣ್ಣ ತಮ್ಮಂದಿರು ಮತ್ತು ದಂಪತಿಗಳು ಇವರೆಲ್ಲರೂ ತಮ್ಮ ತಮ್ಮ ಹಿಂದಿನ ಜನ್ಮಗಳಲ್ಲಿ ಏನೇನು ಕರ್ಮಗಳನ್ನು ಮಾಡಿರುವರೋ ಅವುಗಳ ಫಲಗಳನ್ನೇ ಈ ಜನ್ಮದಲ್ಲಿ ಅನುಭವಿಸುತ್ತಾರೆ. ॥ ೧೨ ॥ ತನ್ನ ಪೂರ್ವಜನ್ಮದ ಕರ್ಮದ ಫಲಸ್ವರೂಪವಾಗಿಯೇ ಸುನಂದೆಯು ಈಗ ಸಾಂಸಾರಿಕ ಸುಖಗಳನ್ನೆಲ್ಲಾ ಅನುಭವಿಸುತ್ತಿದ್ದಾಳೆ. ಮನೆಯ ಯಜಮಾನನಾಗಿರುವ ವೈಶ್ಯನಿಗಾದರೋ ಅವನ ದುರದೃಷ್ಟದ ದಶೆಯಿಂದ ಈ ಸೌಖ್ಯಗಳಿಲ್ಲ. ॥ ೧೩ ॥ ವಿದ್ಯೆ, ಕುಲಾಚಾರ, ನೀತಿ, ಸಾಧನೆಗಳು ಮತ್ತು ಸಾಹಸಗಳು ಹೀಗೆ ಇವೆಲ್ಲವೂ ಯಾವುದಿಲ್ಲದೆ ವ್ಯರ್ಥವಾಗುವುವೋ ಅಂತಹ ಅದೃಷ್ಟಕ್ಕೆ ನನ್ನ ನಮಸ್ಕಾರಗಳು. ॥ ೧೪ ॥ ನಾನೂ ಕೂಡ ಬಲವತ್ತರವಾದ ನನ್ನ ಅದೃಷ್ಟದಿಂದ ನನ್ನ ಊರಿನಿಂದ ಹೊರ ಹೊರಡಿಸಲ್ಪಟ್ಟಿದ್ದೇನೆ. ಆದ್ದರಿಂದ ಧನಲೋಭಿಯಾದ ನನಗೆ ಕೊನೆಗೆ ಏನು ಲಭ್ಯವೋ ಅದನ್ನೂ ನೋಡೇಬಿಡುವೆನು. ॥ ೧೫ ॥ ಈ ಅದೃಷ್ಟವು ನನಗೆ ಪ್ರಾಣಪ್ರಿಯವಾದ ಹಣವನ್ನು ಕೊಡುವುದೋ ಇಲ್ಲವೋ ನೋಡೇಬಿಡುವೆನು. ಪ್ರಯತ್ನವೇ ಸಹಕಾರಿಕಾರಣವೆಂದು ತಿಳಿದವರು ಹೇಳುವುದರಿಂದ ನಾನು ಈ ಹಣಕ್ಕಾಗಿ ಪ್ರಯತ್ನಿಸಿಯೇಬಿಡುತ್ತೇನೆ. ॥ ೧೬ ॥ ಈ ರೀತಿಯಾಗಿ ವಿಚಾರಮಾಡಿ ಹಾಸಿಗೆಯಿಂದ ಎದ್ದು ಮನೆಯ ಒಡತಿಗೆ ಹೇಳಿ ಹರ್ಷ, ಶೋಕ ಮತ್ತು ಭಯ ಇವುಗಳಿಂದ ಕೂಡಿದವನಾಗಿ ತೀರ್ಥರಾಜನಾದ ಪ್ರಯಾಗಕ್ಷೇತ್ರವನ್ನು ಕುರಿತು ಹೊರಟೇ ಬಿಟ್ಟನು. ॥ ೧೭ ॥ ಎರಡರಷ್ಟು ವೇಗದಿಂದ ಅನ್ನನೀರುಗಳಿಲ್ಲದಿದ್ದರೂ ಆಯಾಸವನ್ನು ಲೆಕ್ಕಿಸದೇ ಬಲಿಷ್ಠನಂತೆ, ಬಾಯಾರದೆ ಇರುವವನಂತೆ ಜಾಗ್ರತೆಯಾಗಿ ಪ್ರಯಾಗಕ್ಷೇತ್ರವನ್ನು ತಲುಪಿದನು. ॥ ೧೮ ॥ ''ವಿಷ್ಣುಶರ್ಮನೆಂಬ ಬ್ರಾಹ್ಮಣನು ಎಲ್ಲಿದ್ದಾನೆ, ಅವನನ್ನು ನಾನು ನೋಡಬೇಕು, ಹೇಳಿರಿ. ಅದಕ್ಕಾಗಿ ಬಂದಿದ್ದೇನೆ'' ಎಂದು ಪ್ರಯಾಗದಲ್ಲಿನ ಜನರನ್ನು ವಿಚಾರಿಸಿದನು. ॥ ೧೯ ॥ ಗಂಗಾ ಯಮುನೆಯರ ತೀರದಲ್ಲಿ ಜಪ ಮಾಡುತ್ತಾ ಈ ವಿಷ್ಣುಶರ್ಮನೆಂಬ ದ್ವಿಜನು ಇರುತ್ತಾನೆ ಎಂದು ಕೆಲವರು ಅವನಿಗೆ ತಿಳಿಸಿದರು. ॥ ೨೦ ॥ ಈ ಊರಿನಲ್ಲಿ ಯಾಯಾವರವನ್ನು ಮಾಡಿ ಸಂಪಾದಿಸಿದ

ಸ್ವಲ್ಪವನ್ನು ದಾನ ಮಾಡಿ ತಾನೂ ಭೋಜನ ಮಾಡಿ ವಟಮೂಲದಲ್ಲಿ ಶ್ರೀಮಾಧವನನ್ನು ಸ್ಮರಿಸುತ್ತಾ ಮಲಗುವನು. ॥ ೨೧ ॥ ಇದನ್ನು ಕೇಳಿ ಆ ಬ್ರಾಹ್ಮಣನು ತ್ರಿವೇಣಿಯ ದಡಕ್ಕೆ ಹೋಗಿ, ಅಲ್ಲಿ ಶ್ರೀವಿಷ್ಣುಶರ್ಮನು ಧ್ಯಾನಾಸಕ್ತನಾಗಿರುವುದನ್ನು ಕಂಡು, ತಾನೂ ತ್ರಿವೇಣಿಯಲ್ಲಿ ಸ್ನಾನ ಮಾಡಿದನು. ॥ ೨೨ ॥ ವಿಧಿವತ್ತಾಗಿ ಸಂಧ್ಯೆಯನ್ನು ಮುಗಿಸಿ ನಂತರ ವಿಧಿವತ್ತಾಗಿ ಕ್ಷೌರಕರ್ಮವನ್ನು ಮುಗಿಸಿ ನಂತರ ತ್ರಿವೇಣಿಯನ್ನೂ ಮಾಧವನನ್ನೂ ಪೂಜಿಸಿ ಭಕ್ತಿಯಿಂದ ಪ್ರಾರ್ಥನೆ ಮಾಡಿದನು. ॥ ೨೩ ॥ ''ದಯಾಸಮುದ್ರನಾಗಿರುವ ಮತ್ತು ಎಲ್ಲಾ ಅಪೇಕ್ಷೆಗಳನ್ನು ಪೂರ್ಣಮಾಡತಕ್ಕ ಶ್ರೀಮಾಧವನೇ, ನೀನು ನನಗೆ ಹಣವನ್ನು ಕೊಟ್ಟರೆ ಈ ನಿನ್ನ ಕ್ಷೇತ್ರದಲ್ಲಿಯೇ ವಾಸ ಮಾಡುವೆನು.'' ಎಂದು ಸಂಕಲ್ಪಿಸಿದನು. ॥ ೨೪ ॥ ಆಮೇಲೆ ಧ್ಯಾನದಿಂದ ಎಚ್ಚರಗೊಂಡ ಶ್ರೀವಿಷ್ಣುಶರ್ಮನನ್ನು ಸಮೀಪಿಸಿ, ಅವನಿಗೆ ನಮಸ್ಕರಿಸಿ, ಯಾಚಕ ಭಾವನೆಯಿಂದ ಅವನನ್ನು ಕುರಿತು ಹೇಳಿದನು. ॥ ೨೫ ॥

ದ್ವಿಜ ಉವಾಚ—

ದ್ವಿಜವರ್ಯ ಮಹಾಬುದ್ಧೇ ರಂಕಸ್ತ್ವಾಹಮುಪಾಗತಃ ।
ಸೀದತ್ಕುಟುಂಬಪೋಷಾರ್ಥಂ ಧನಮಿಚ್ಛಂಸ್ತ್ರಿಯೇರಿತಃ ॥ ೨೬ ॥
ತದ್ಧನಂ ಭೂರಿ ಮೇ ದೇಹಿ ದೂರಾದಾಗತವಾನಹಮ್ ।
ಕುಟುಂಬಪೋಷಣಂ ಮೇ ಸ್ಯಾತ್ತವ ಚಾತ್ಯಂತಿಕಂ ಫಲಮ್ ॥ ೨೭ ॥
ಇತಿ ತದ್ವಾಚಮಾಕರ್ಣ್ಯ ದರಿದ್ರತ್ವಾತ್ಸುದುಃಖಿತಃ ।
ಸಂಸ್ಮರನ್ಮಾಧವಂ ದೇವಂ ಮನಸೀದಂ ವ್ಯಚಾರಯತ್ ॥ ೨೮ ॥
ಯದಾ ವಿತ್ತಂ ಪ್ರಪದ್ಯೇತ ತದಾ ಪಾತ್ರಂ ನ ಜಾಯತೇ ।
ವಿತ್ತಂ ಚಿತ್ತಂ ಪ್ರಪದ್ಯೇತ ತದಾ ಪಾತ್ರಂ ನ ಲಭ್ಯತೇ ॥ ೨೯ ॥
ಪಾತ್ರೇಽಪಿ ವಿದ್ಯಮಾನೇಽಪಿ ತೀರ್ಥಂ ನೈವ ಪ್ರಪದ್ಯತೇ ।
ತತ್ರಾಪಿ ತೀರ್ಥಕೋಟೀನಾಂ ಪ್ರಯಾಗಃ ಶ್ರೇಷ್ಠ ಉಚ್ಯತೇ ॥ ೩೦ ॥
ಮಮ ದೈವವಶಾದದ್ಯ ವರ್ತಮಾನಮಪಿ ತ್ರಯಮ್ ।
ಪ್ರಥಮಸ್ಯ ತ್ವಭಾವೇನಾವರ್ತಮಾನಮಿವಾಭವತ್ ॥ ೩೧ ॥
ಇದಮೇವ ಹಿ ಸಾಫಲ್ಯಂ ಧನಸ್ಯ ಪರಿಕೀರ್ತಿತಮ್ ।
ಪುಣ್ಯದೇಶೇ ಚ ಕಾಲೇ ಚ ತತ್ಸುಪಾತ್ರಕರೇಽರ್ಪಣಮ್ ॥ ೩೨ ॥
ಮಮ ಕ್ವೈವಂವಿಧಂ ದೈವಮೇತಸ್ಮಿಂಸ್ತೀರ್ಥಭೂಪತೌ ।
ಧನಮಸ್ಮೈ ಪ್ರದಾಸ್ಯಾಮಿ ಯಾಚಿತಂ ಮನಸೀಪ್ಸಿತಮ್ ॥ ೩೩ ॥

ಬ್ರಾಹ್ಮಣನು ಹೇಳಿದನು—

''ಬ್ರಾಹ್ಮಣೋತ್ತಮರೇ! ತಾವು ಮಹಾಬುದ್ಧಿಶಾಲಿಗಳು; ಬಡತನದಿಂದ ಪೀಡಿತನಾಗಿ ನಾನು ಬಂದಿದ್ದೇನೆ. ನಾನು ಕುಟುಂಬಪಾಲನೆಯಲ್ಲಿ ಪರಿತಪಿಸುತ್ತಿದ್ದೇನೆ. ನನ್ನ ಹೆಂಡತಿಯಿಂದ ಕಳುಹಿಸಲ್ಪಟ್ಟು ಇಲ್ಲಿಗೆ ಬಂದಿದ್ದೇನೆ. ॥ ೨೬ ॥ ಬಹಳ ದೂರದಿಂದ ನಡೆದು ಬಂದಿದ್ದೇನೆ. ನಾನು

ಬಯಸುವ ಹೆಚ್ಚಿನ ಹಣವನ್ನು ನನಗೆ ಕೊಡಿ; ಇದರಿಂದ ನನ್ನ ಕುಟುಂಬದ ಪೋಷಣೆಯೂ ಆಗಿ, ತಮಗೆ ಅತ್ಯಧಿಕಫಲವು ದೊರಕುವುದು.'' ॥೨೭॥ ವಿಷ್ಣುಶರ್ಮನು ದರಿದ್ರತೆಯಿಂದ ಅತ್ಯಂತ ದುಃಖಕ್ಕೆ ಈಡಾಗಿದ್ದ ಬ್ರಾಹ್ಮಣನ ಈ ಮಾತನ್ನು ಕೇಳಿ, ಮಾಧವನನ್ನು ಸ್ಮರಿಸಿ ಮನಸ್ಸಿನಲ್ಲಿ ಈ ರೀತಿ ವಿಚಾರ ಮಾಡಿದನು. ॥ ೨೮ ॥ ''ಹಣವು ಬಂದು ಸೇರಿದಾಗ ದಾನ ಮಾಡಲು ಸತ್ಪಾತ್ರರು ಸಿಗುವುದಿಲ್ಲ. ಯಾವಾಗ ಹಣವೂ ಹಣವನ್ನು ದಾನ ಮಾಡುವ ಮನಸ್ಸೂ ಇದ್ದಾಗ ಆಗಲೂ ಸತ್ಪಾತ್ರರು ಸಿಗುವುದಿಲ್ಲ. ಸತ್ಪಾತ್ರರು ಸಿಕ್ಕಾಗ, ಸತ್ತೀರ್ಥಕ್ಷೇತ್ರವು ಸಿಗುವುದಿಲ್ಲ. ಅದರಲ್ಲೂ ಕೋಟ್ಯಾನುಕೋಟಿತೀರ್ಥಗಳಲ್ಲಿ ಪ್ರಯಾಗವು ಅತಿಶ್ರೇಷ್ಠವು. ಈಗ ದೈವಬಲದಿಂದ ನನಗೆ ಈ ಮೂರೂ ಲಭ್ಯವಾಗಿವೆ. ಹಣದ ಅಭಾವದಿಂದ ಈ ಮೂರೂ ಇಲ್ಲದ ಹಾಗೆಯೇ ಆಗಿತ್ತು. ಹಣವನ್ನು ಹೊಂದಿರುವಾಗ ಪುಣ್ಯಕರವಾದ ದೇಶದಲ್ಲಿ ಪುಣ್ಯಕಾಲದಲ್ಲಿ ಸತ್ಪಾತ್ರರಿಗೆ ದಾನ ಮಾಡಬೇಕು ಎಂಬುದಾಗಿ ಶಾಸ್ತ್ರಾದಿಗಳಲ್ಲಿ ಹೇಳಲ್ಪಟ್ಟಿದೆ. ॥೨೯-೩೨॥ ನನಗೆ ಇಂತಹ ಅದೃಷ್ಟವು ಪುನಃ ಎಲ್ಲಿ ದೊರಕುವುದು? ಆದ್ದರಿಂದ ಈ ತೀರ್ಥರಾಜನಲ್ಲಿ ಈ ಬ್ರಾಹ್ಮಣನು ಮನಸ್ಸಿನಲ್ಲಿ ಬಯಸಿರುವ ಹಣವನ್ನೆಲ್ಲಾ ದಾನ ಮಾಡುವೆನು. ॥ ೩೩ ॥

ವಿಷ್ಣುಶರ್ಮೋವಾಚ—

> ಅಥೋವಾಚ ದರಿದ್ರೋಽಹಂ ನ ದ್ರವ್ಯಂ ಮಾಮಕೇ ಗೃಹೇ ।
> ಕಿಂಚಿದ್ದಾನಂ ಮಯಾ ನಿತ್ಯಂ ದೀಯತೇ ಬ್ರಾಹ್ಮಣಾಯ ಯತ್ ॥ ೩೪ ॥
> ತದ್ಗೃಹಾಣ ತ್ವಮೇವಾದ್ಯ ದಯಾಂ ಕುರು ದಯಾನಿಧೇ ।
> ಇತಿ ಶ್ರುತ್ವಾ ವಚಸ್ತಸ್ಯ ಕೃಷ್ಣಶರ್ಮಾಬ್ರವೀದ್ವಚಃ ॥ ೩೫ ॥

ವಿಷ್ಣುಶರ್ಮನು ಹೇಳಿದನು—

ಹೀಗೆಂದು ಯೋಚಿಸಿ ಆ ವಿಷ್ಣುಶರ್ಮನು ಬ್ರಾಹ್ಮಣನನ್ನು ಕುರಿತು ಈ ರೀತಿ ಹೇಳಿದನು. ನನ್ನ ಮನೆಯಲ್ಲಿ ಹಣವೇನೂ ಇಲ್ಲ. ನನ್ನಿಂದ ಪ್ರತಿನಿತ್ಯವು ಬ್ರಾಹ್ಮಣನೊಬ್ಬನಿಗೆ ಸ್ವಲ್ಪಧನ ಕೊಡಲ್ಪಡುತ್ತಿದೆ. ॥ ೩೪ ॥ ಅದನ್ನು ನೀನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು. ಹೀಗೆ ಹೇಳಿದ ಆ ಮಾತನ್ನು ಕೇಳಿ ಕೃಷ್ಣಶರ್ಮನು ಉತ್ತರವಿತ್ತನು. ॥ ೩೫ ॥

ಕೃಷ್ಣಶರ್ಮೋವಾಚ—

> ಸಂಕಲ್ಪ್ಯ ದೇಹಿ ತದ್ದ್ರವ್ಯಂ ಯತ್ರ ಸ್ಯಾತ್ತುತ್ರಚಿತ್ತವ ।
> ತವಾಜ್ಞಯಾ ಗೃಹೀತ್ವಾ ತದ್ಗಮಿಷ್ಯಾಮಿ ಯಥಾಸುಖಮ್ ॥ ೩೬ ॥
> ಕೃಷ್ಣಶರ್ಮನ್ವದಾಶ್ಚರ್ಯಂ ಕುತ್ರ ಮೇಽಸ್ತಿ ಧನಂ ಕಿಯತ್ ।
> ಕಥಂ ವಾ ಕುತ ಆಯಾತಂ ಜ್ಞಾತಂ ಚ ಭವತಾ ಕಥಮ್ ॥ ೩೭ ॥
> ವಿಷ್ಣುಶರ್ಮನ್ನಹಂ ಪತ್ನ್ಯಾ ಚೋದಿತಃ ಸೀದಮಾನಯಾ ।
> ದಿಷ್ಟಯಷ್ಟಿಂ ಸ್ವಮಾಲಂಬ್ಯ ಸ್ವಪುರಾನ್ನಿರ್ಗತೋ ಬಹಿಃ ॥ ೩೮ ॥
> ತತೋ ವಿದೂರೇ ಗತ್ವಾಹಮೇಕಸ್ಮಿನ್ನಗರೇ ಶುಭೇ ।
> ಮಧ್ಯಾಹ್ನೇ ದೈವತೋ ಹ್ಯೇಕವೈಶ್ಯಗೇಹಂಗತೋಽಸ್ಮ್ಯಹಮ್ ॥ ೩೯ ॥

ತದ್ಗೇಹಿನೀ ಮದಾತಿಥ್ಯಂ ಭಕ್ಷ್ಯಭೋಜ್ಯಸಮನ್ವಿತಮ್ ।
ಚಕಾರ ಶಯನಾಂತಂ ಸಾ ವಿಷ್ಣುಶರ್ಮನ್ಯಶಸ್ವಿನೀ ॥ ೪೦ ॥

॥ ಇತಿ ಏಕೋನಷಷ್ಟಿತಮೋಽಧ್ಯಾಯಃ ॥

ಕೃಷ್ಣಶರ್ಮನು ಹೇಳಿದನು—

"ಎಲ್ಲಿ ಇರಲಿ, ಆ ಹಣವನ್ನು ಸಂಕಲ್ಪ ಮಾಡಿ ನನಗೆ ದಾನ ಕೊಡು. ನಾನು ಅದನ್ನು ನಿಮ್ಮ ಆಜ್ಞಾದಿಂದ ಸ್ವೀಕಾರ ಮಾಡಿ ಸುಖದಿಂದ ಹೋಗುತ್ತೇನೆ." ॥ ೩೬ ॥ ಅದಕ್ಕೆ ವಿಷ್ಣುಶರ್ಮನು ಹೇಳಿದನು. "ಹೇ ಕೃಷ್ಣಶರ್ಮ! ಈ ಆಶ್ಚರ್ಯವನ್ನು ನನಗೆ ಬಿಡಿಸಿ ಹೇಳಿ. ನನ್ನ ಹಣ ಎಲ್ಲಿದೆ? ಎಷ್ಟಿದೆ? ಆ ಹಣವು ನನ್ನ ಪಾಲಿಗೆ ಹೇಗೆ ಬಂದಿತು? ತಮ್ಮಿಂದ ಹೇಗೆ ಈ ಹಣದ ವಿವರವು ತಿಳಿಯಲ್ಪಟ್ಟಿತ್ತು?" ॥ ೩೭ ॥ ಕೃಷ್ಣಶರ್ಮನು ಉತ್ತರ ಹೇಳಿದನು, "ವಿಷ್ಣುಶರ್ಮನೇ! ಕಾರ್ಪಣ್ಯದ ಬೇಗೆಯಿಂದ ಬೆಂದ ನನ್ನ ಹೆಂಡತಿಯಿಂದ ಪ್ರಚೋದಿತನಾದ ನಾನು ನನ್ನ ಅದೃಷ್ಟದ ದಂಡವನ್ನು ಅವಲಂಬಿಸಿಕೊಂಡು ನನ್ನ ಊರಿಂದ ಹೊರಕ್ಕೆ ಹೊರಟೆನು. ॥ ೩೮ ॥ ಅಲ್ಲಿಂದ ಸ್ವಲ್ಪ ದೂರದಲ್ಲಿಯೇ ಮಧ್ಯಾಹ್ನದ ವೇಳೆಗೆ ದೈವಯೋಗದಿಂದ ಒಬ್ಬ ವೈಶ್ಯನ ಮನೆಗೆ ಬಂದೆನು. ॥ ೩೯ ॥ ಮನೆಯ ಒಡತಿಯು ಭಕ್ಷ್ಯಭೋಜ್ಯಾದಿಗಳಿಂದ ಕೂಡಿದ ಭೋಜನದಿಂದ ಹಿಡಿದು ನನ್ನ ಹಾಸಿಗೆಯವರೆಗಿನ ಎಲ್ಲಾ ಏರ್ಪಾಡನ್ನೂ ಮಾಡಿದಳು. ॥ ೪೦ ॥

॥ ಐವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಷ್ಟಿತಮೋऽಧ್ಯಾಯಃ ॥ ೬೦ ॥

ಕೃಷ್ಣಶರ್ಮೋವಾಚ—

ಅಥ ತಸ್ಯಾಂ ಪ್ರಸುಪ್ತಾಯಾಂ ತದ್ಗೃಹಂ ಪರಮರ್ದ್ಧಿಮತ್ ।
ದ್ರಷ್ಟುಂ ಪ್ರವೃತ್ತಸ್ತತ್ಕೋಶೇ ದ್ರವ್ಯಭಾಂಡಮಲೋಕಯಮ್ ॥ ೧ ॥
ತತಸ್ತಸ್ಮಾಪಾದಾತುಮಹಂ ಯತ್ನಮಕಾರಿಷಮ್ ।
ಯಾವತ್ತಾವತ್ಸಮುತ್ತಸ್ಥೌ ನಾಗಃ ಪಂಚಫಣೋ ಮಹಾನ್ ॥ ೨ ॥
ಸ ಮಾಮುವಾಚ ದುರ್ಬುದ್ಧೇ ನೇದಂ ತ್ವಂ ಲಪ್ಸ್ಯಸೇ ಧನಮ್ ।
ವೈಶ್ಯಸ್ಯಾತ್ರ ನ ಸತ್ತಾಸ್ತಿ ನ ತವಾಪಿ ಮಮಾಪಿ ನ ॥ ೩ ॥
ಕಿಂತು ಪ್ರಯಾಗೇ ವಸತಿ ವಿಷ್ಣುಶರ್ಮೇತಿ ಯೋ ದ್ವಿಜಃ ।
ತಸ್ಯೇದಮಖಿಲಂ ದ್ರವ್ಯಂ ವಿದ್ಧಿ ಮಾಂ ರಕ್ಷಕಂ ಪರಮ್ ॥ ೪ ॥
ಪ್ರಯಾಗೇ ಪ್ರಾಗ್ಭವೇ ತೇನ ಮಾಘೇ ಪಾತ್ರೇ ಯಥಾವಿಧಿ ।
ಗುಪ್ತದಾನಂ ಕೃತಂ ಸ್ವಲ್ಪಮಪಿ ಭಕ್ತ್ಯಾ ಕೃತಂ ಪರಮ್ ॥ ೫ ॥
ತೀರ್ಥರಾಜಸ್ಯ ಮಾಘಸ್ಯ ಪಾತ್ರಸ್ಯ ಚ ಮಹತ್ತ್ವತಃ ।
ಗುಪ್ತತ್ವಾಚ್ಚ ತದೇವಾಭೂದನಂತಮಿದಮೇವ ಚ ॥ ೬ ॥
ಅತಸ್ತದಾಜ್ಞಯಾ ದ್ರವ್ಯಂ ದಾಸ್ಯಾಮಿ ತ್ವಾನ ಚಾನ್ಯಥಾ ।
ಇತಿ ನಿರ್ಬಂಧಮಸ್ಯಾಹಂ ಜ್ಞಾತ್ವಾ ತ್ವಾಂ ಸಮುಪಾಗತಃ ॥ ೭ ॥
ಮಯೇದಂ ದ್ರವ್ಯಲೋಭೇನ ಸರ್ವಂ ತ್ವಯಿ ನಿವೇದಿತಮ್ ।
ಅತ ಊರ್ಧ್ವಂ ವಿಚಾರ್ಯಾತ್ರ ಯಥೇಚ್ಛಸಿ ತಥಾ ಕುರು ॥ ೮ ॥

## ॥ ಅರವತ್ತನೆಯ ಅಧ್ಯಾಯವು ॥

ಕೃಷ್ಣಶರ್ಮನು ಹೇಳಿದನು—

''ಆ ಗೃಹಿಣಿಯು ಮಲಗಿದಮೇಲೆ ಧನಧಾನ್ಯದಿಂದ ಸಮೃದ್ಧವಾಗಿದ್ದ ಆ ಮನೆಯನ್ನು ನೋಡಲು ಉದ್ಯುಕ್ತನಾದ ನಾನು ಅವಳ ಕೋಶಾಗಾರದಲ್ಲಿ ಹಣದ ಪಾತ್ರೆಯನ್ನು ನೋಡಿದೆನು. ॥ ೧ ॥ ಅದರಿಂದ ಹಣವನ್ನು ಅಪಹರಿಸಲು ಯತ್ನವನ್ನು ಮಾಡಿದೆನು. ಆಗ ಅದರಲ್ಲಿ ದೊಡ್ಡ ಐದು ಹೆಡೆ ಸರ್ಪವೊಂದು ಎದ್ದು ನಿಂತಿತು. ॥ ೨ ॥ ಅದು ನನ್ನನ್ನು ಕುರಿತು ''ದುರ್ಬುದ್ಧಿಯುಳ್ಳವನೇ! ಈ ಹಣವನ್ನು ನೀನು ಅಪಹರಿಸಲಾರೆ. ಈ ಹಣವು ಈ ವೈಶ್ಯನಿಗೂ ಸೇರಿಲ್ಲ, ನನಗೂ ಸೇರಿಲ್ಲ ಮತ್ತು ನಿನಗೂ ಅಲ್ಲ. ॥ ೩ ॥ ಪ್ರಯಾಗದಲ್ಲಿ ವಾಸಿಸುತ್ತಿರುವ ವಿಷ್ಣುಶರ್ಮ ಬ್ರಾಹ್ಮಣನಿಗೆ ಈ ಎಲ್ಲ ಹಣವೂ ಸೇರಿದ್ದು. ನಾನು ಕೇವಲ ಅದರ ರಕ್ಷಕನೆಂದು ತಿಳಿ. ॥ ೪ ॥ ಪ್ರಯಾಗಕ್ಷೇತ್ರದಲ್ಲಿ ಪೂರ್ವಜನ್ಮದಲ್ಲಿ ಇವನಿಂದ ಮಾಘಮಾಸದಲ್ಲಿ ಸತ್ಪಾತ್ರರಿಗೆ ವಿಧ್ಯುಕ್ತಪ್ರಕಾರವಾಗಿ ''ಗುಪ್ತದಾನ''ವು ಭಕ್ತಿಯಿಂದ ಕೊಡಲ್ಪಟ್ಟಿತ್ತು. ॥ ೫ ॥ ತೀರ್ಥರಾಜನಾದ ಪ್ರಯಾಗದಲ್ಲಿ ಮಾಘಮಾಸದಲ್ಲಿ ಸತ್ಪಾತ್ರನಿಗೆ ಅವನಿಂದ ಗುಪ್ತವಾಗಿ ಕೊಡಲ್ಪಟ್ಟದ್ದರಿಂದ ಆ ದಾನವು ಅನಂತವಾಗಿ ವೃದ್ಧಿಯಾಗಿ ಬೆಳೆದಿರುವ ಹಣವೇ. ಇದು. ॥ ೬ ॥ ಆದ್ದರಿಂದ ಅವನ

ಅಪ್ಪಣೆಯಿಂದಲೇ ಈ ಹಣವನ್ನು ನಿನಗೆ ಕೊಡಬಲ್ಲೆ; ಇಲ್ಲದಿದ್ದರೆ ಇಲ್ಲ.'' ಎಂದು ಹೇಳಲ್ಪಟ್ಟ ಈ ನಿರ್ಬಂಧವಚನವಿರುವುದರಿಂದ ನಿನ್ನ ಆಜ್ಞಾದಿಂದಲೇ ಈ ಹಣವನ್ನು ತೆಗೆದುಕೊಳ್ಳಲು ನಿನ್ನ ಸಮೀಪಕ್ಕೆ ಬಂದಿದ್ದೇನೆ. ॥ ೭ ॥ ಹಣದ ಲೋಭದಿಂದ ನನ್ನಿಂದ ಎಲ್ಲವೂ ನಿಮ್ಮಲ್ಲಿ ನಿವೇದಿಸಲ್ಪಟ್ಟಿದೆ. ಇದರ ಮೇಲೆ ವಿಚಾರಮಾಡಿ ತಮಗೆ ಇಷ್ಟಬಂದಂತೆ ಮಾಡಿರಿ.''ಎಂದು ಹೇಳಿದನು. ॥ ೮ ॥

ನಿಶಮ್ಯೇತಿ ವಚಸ್ತಸ್ಯ ವಿಷ್ಣುಶರ್ಮಾತಿವಿಸ್ಮಿತಃ ।
ಸ್ಮರನ್ಪ್ರಯಾಗಮಾಹಾತ್ಮ್ಯಂ ಪ್ರಾಗ್ಭವಂ ಚ ಸ್ವಚೇಷ್ಟಿತಮ್ ॥ ೯ ॥
ಅಥೋ ವಿಚಾರ್ಯ ಮನಸಿ ಸ್ವದೈವಾಸಾದಿತಂ ಧನಮ್ ।
ಭೂಯೋಽತ್ರ ವಿತರಿಷ್ಯೇಽಹಮಸ್ಮೈ ದತ್ವಾತು ವಾಂಛಿತಮ್ ॥ ೧೦ ॥
ಧನಂ ಹಿ ದ್ವಿವಿಧಂ ಪ್ರೋಕ್ತಂ ತಾರಕಂ ಮಾರಕಂ ತಥಾ ।
ಸುಮಾರ್ಗೇಣಾಗತಂ ತ್ವಾದ್ಯಂ ಕುಮಾರ್ಗೇಣಾಗತಂ ಪರಮ್ ॥ ೧೧ ॥

ಇದನ್ನು ಕೇಳಿ ವಿಷ್ಣುಶರ್ಮನು ಬಹಳ ಆಶ್ಚರ್ಯಗೊಂಡನು. ಪ್ರಯಾಗದ ಮಾಹಾತ್ಮ್ಯೆಯನ್ನು ತನ್ನ ಪೂರ್ವಜನ್ಮದ ವ್ಯಾಪಾರವನ್ನು ಸ್ಮರಣೆಗೆ ತಂದುಕೊಂಡನು. ॥ ೯ ॥ ಅನಂತರ ಮನಸ್ಸಿನಲ್ಲಿ ಈ ರೀತಿ ವಿಚಾರ ಮಾಡಿದನು. ''ಸುದೈವದಿಂದ ಈ ನನ್ನ ಹಣವು ನನಗೇ ಪುನಃ ಸಂದಿದೆ. ಇದನ್ನು ಅವನು ಇಷ್ಟಪಟ್ಟಷ್ಟು ಅವನಿಗೇ ಹಂಚುವೆನು. ॥ ೧೦ ॥ ಹಣವು ಎರಡು ವಿಧವಾದದ್ದು—ಒಂದು ನಮ್ಮನ್ನು ಸಂಸಾರ ಸಮುದ್ರದಿಂದ ದಾಟಿಸತಕ್ಕದ್ದು, ಇನ್ನೊಂದು ನಮಗೆ ಮೃತ್ಯುವನ್ನು ತಂದು ಕೊಡತಕ್ಕದ್ದು. ಮೊದಲನೆಯದು ಒಳ್ಳೆಯ ಮಾರ್ಗದಿಂದ ಬಂದದ್ದು ಮತ್ತು ಎರಡನೆಯದು ದುರ್ಮಾರ್ಗದಿಂದ ಬಂದದ್ದು.'' ॥ ೧೧ ॥

ವಿಷ್ಣುಶರ್ಮೋವಾಚ—

ಇತಿ ನಿಶ್ಚಿತ್ಯ ತಂ ಪ್ರಾಹ ಕೃಷ್ಣಶರ್ಮಾಣಮಾಜ್ಞಯಾ ।
ಗತ್ವಾ ತ್ವಮಾನಯ ದ್ರವ್ಯಂ ಯಥಾಪೇಕ್ಷಮಿಹೈವ ತತ್ ॥ ೧೨ ॥
ತತಸ್ತೇಽತ್ರ ಪ್ರದಾಸ್ಯಾಮಿ ನಾಹಂ ಮುಂಚಾಮಿ ಮಾಧವಮ್ ।
ಸ್ವಕುಟುಂಬಂ ಗೃಹೀತ್ವಾ ಚ ದ್ರವ್ಯಂ ಚಾಗಮ್ಯತಾಂ ಲಘು ॥ ೧೩ ॥
ಕೃಷ್ಣಶರ್ಮಾ ತಥೇತ್ಯುಕ್ತ್ವಾ ಪ್ರಹೃಷ್ಟಃ ಪ್ರಯಯೌ ತತಃ ।
ಪುನಸ್ತದ್ಭವನಂ ಗತ್ವಾ ಸುನಂದಾಮಾಹ ಸಸ್ಮಿತಃ ॥ ೧೪ ॥

ವಿಷ್ಣುಶರ್ಮನು ಹೇಳಿದನು—

ಈ ರೀತಿಯಾದ ಬುದ್ಧಿಯುಳ್ಳವನಾಗಿ ಆ ಕೃಷ್ಣಶರ್ಮನನ್ನು ಕುರಿತು, ''ಹೇ ಕೃಷ್ಣಶರ್ಮ! ನೀನು ಹೋಗಿ ಆ ಹಣವನ್ನು ಇಲ್ಲಿಗೆ ತೆಗೆದುಕೊಂಡು ಬಾ. ನೀನು ಅಪೇಕ್ಷಿಸಿದಂತೆ ಆ ಹಣವನ್ನು ನಾನು ಇಲ್ಲಿಯೇ ನಿನಗೆ ದಾನ ಮಾಡುವೆನು. ನಾನಂತೂ ಶ್ರೀಮಾಧವನನ್ನು ಬಿಟ್ಟು ಅನ್ಯತ್ರ ಹೋಗಲಾರೆ. ಈ ದ್ರವ್ಯವನ್ನು ತೆಗೆದುಕೊಂಡು ನಿನ್ನ ಕುಟುಂಬದೊಡನೆ ಇಲ್ಲಿಗೆ ಜಾಗ್ರತೆಯಾಗಿ ಬಾ.'' ಎಂದು ಹೇಳಿದನು. ॥ ೧೨-೧೩ ॥ ಸಂತುಷ್ಟನಾದ ಕೃಷ್ಣಶರ್ಮನು ''ಹಾಗೆಯೇ ಆಗಲಿ''

ಎಂದು ಹೇಳಿ ಅಲ್ಲಿಂದ ಹೊರಟು ಪುನಃ ಆ ವೈಶ್ಯನ ಮನೆಗೆ ಬಂದು ಹಸನ್ಮುಖಿಯಾಗಿ ಸುನಂದೆಯನ್ನು ಕುರಿತು ಹೇಳಿದನು. ।। ೧೪ ।।

ದ್ವಿಜ ಉವಾಚ—

ಸುನಂದೇ ತ್ವದ್ಗೃಹೇ ರಾತ್ರೌ ದೃಷ್ಟಂ ಪೂರ್ವಂ ಮಯಾ ಧನಮ್ ।
ಗೃಹ್ಣಾಮಿ ತದಹಂ ಸರ್ವಮಾಜ್ಞಾಂ ದೇಹಿ ದಯಾಂ ಕುರು ।। ೧೫ ।।

ಕೃಷ್ಣಶರ್ಮನು ಹೇಳಿದನು—

ಎಲೈ ಸುನಂದೆಯೇ! ನಿಮ್ಮ ಮನೆಯಲ್ಲಿ ನಾನು ಹಿಂದೆ ಬಂದಿದ್ದಾಗ ಹಣವನ್ನು ನೋಡಿದ್ದೆನು. ಅಷ್ಟನ್ನು ನಾನು ತೆಗೆದುಕೊಳ್ಳುವೆನು, ದಯಮಾಡಿ ಆಜ್ಞೆಯನ್ನು ಕೊಡು ಎಂದನು. ।। ೧೫ ।।

ಸುನಂದೋವಾಚ—

ಕುತ್ರಾಸ್ತೇ ಮದ್ಗೃಹೇ ದ್ರವ್ಯಂ ಮಾಂ ಪ್ರದರ್ಶಯ ಸತ್ವರಮ್ ।
ವಿನಿಶ್ಚಿತ್ಯ ಪುನಸ್ತುಭ್ಯಂ ಪ್ರದಾಸ್ಯಾಮಿ ನ ಸಂಶಯಃ ।। ೧೬ ।।
ತಯಾ ಸಹ ತತೋ ಗತ್ವಾ ದರ್ಶಯಾಮಾಸ ತದ್ಧನಮ್ ।
ಸಾಪಿ ದೃಷ್ಟ್ವಾ ತಮವದದ್ವಚನಂ ಧನಲೋಲುಪಾ ।। ೧೭ ।।
ತ್ವಂ ಗೃಹ್ಣಾಸಿ ಕಥಂ ವಿಪ್ರ ಮಮ ಗೇಹಸ್ಥಿತಂ ಧನಮ್ ।
ತತ್ರ ಮೇ ಕಾರಣಂ ಬ್ರೂಹಿ ಯೇನ ವಿಶ್ವಾಸಮಾಪ್ನುಯಾಮ್ ।। ೧೮ ।।
ಏವಂ ವಿವದಮಾನಾನಾಂ ನಾಗ ಉತ್ಥಾಯ ಸತ್ವರಮ್ ।
ಫಣಾಮಂಡಲಮುದ್ಯಮ್ಯ ಸುನಂದಾಮಬ್ರವೀದ್ವಚಃ ।। ೧೯ ।।

ಸುನಂದೆಯು ಹೇಳಿದಳು—

''ನನ್ನ ಮನೆಯಲ್ಲಿ ಹಣವೆಲ್ಲಿದೆ? ಅದನ್ನು ನನಗೆ ತೋರಿಸು. ಅದನ್ನು ನಿನಗೆ ಖಂಡಿತವಾಗಿ ಕೊಡುವೆನು'' ಎಂದು ಹೇಳಿದಾಗ ಬ್ರಾಹ್ಮಣನು ಅವಳ ಜೊತೆಗೆ ಹೋಗಿ ಆ ಹಣವನ್ನು ತೋರಿಸಿದನು. ಅದನ್ನು ನೋಡಿದ ಅವಳು ಹಣದ ಮೇಲಿನ ಆಸೆಯಿಂದ ಅವನನ್ನು ಕುರಿತು ಹೇಳಿದಳು. ।। ೧೬-೧೭ ।। ನನ್ನ ಮನೆಯಲ್ಲಿರುವ ಹಣವನ್ನು ನೀನು ಹೇಗೆ ತೆಗೆದುಕೊಳ್ಳುವೆ? ಈ ವಿಷಯದಲ್ಲಿ ಇರುವ ಕಾರಣವನ್ನಾದರೂ ಹೇಳು. ಅದರಿಂದ ನನಗೆ ನಂಬಿಕೆಯುಂಟಾಗುತ್ತದೆ. ।। ೧೮ ।। ಹೀಗೆ ವಿವಾದ ಮಾಡಿದ ಸುನಂದೆಗೆ ಆ ಹಾವು ತನ್ನ ಹೆಡೆಯನ್ನು ಹರಡಿ ಮೇಲೆದ್ದು ಈ ರೀತಿಯಾಗಿ ಹೇಳಿತು. ।। ೧೯ ।।

ನಾಗ ಉವಾಚ—

ಸುನಂದೇ ಶೃಣು ಮೇ ವಾಕ್ಯಂ ತವೈತಸ್ಯ ಚ ನೋ ಧನಮ್ ।
ಪ್ರಯಾಗವಾಸಿನೋ ವಿಷ್ಣುಶರ್ಮಣೋಽಸ್ತ್ಯಖಿಲಂ ಧನಮ್ ।। ೨೦ ।।
ತದಾಜ್ಞಯಾಗತಾಯಾಸ್ಮೈ ದೇಹಿ ತ್ವಮವಿಲಂಬಿತಮ್ ।
ಮಾ ಕುರುಷ್ವಾತ್ರ ಸಂದೇಹಂ ಶೀಘ್ರಂ ಸಾಹಾಯ್ಯಕಂ ಕುರು ।। ೨೧ ।।

**ಸರ್ಪವು ಹೇಳಿತು—**

''ಸುನಂದೆಯೇ! ನನ್ನ ಮಾತನ್ನು ಕೇಳು. ಈ ಹಣವು ನಿನ್ನದೂ ಅಲ್ಲ; ಈ ಬ್ರಾಹ್ಮಣದೂ ಅಲ್ಲ. ಪ್ರಯಾಗದಲ್ಲಿ ವಾಸ ಮಾಡುತ್ತಿರುವ ವಿಷ್ಣುಶರ್ಮನಿಗೆ ಈ ಎಲ್ಲ ಹಣವೂ ಸೇರಿದುದು. ॥೨೦॥ ಅವನ ಅಪ್ಪಣೆಯಿಂದಲೇ ಇಲ್ಲಿಗೆ ಬಂದಿರುವ ಇವನಿಗೆ ಎಲ್ಲ ಹಣವನ್ನೂ ಕೊಟ್ಟುಬಿಡು. ಈ ವಿಷಯದಲ್ಲಿ ಸಂದೇಹ ಬೇಡ, ಇವನಿಗೆ ಸಹಾಯ ಮಾಡು. ॥೨೧॥

ಏವಂ ನಾಗವಚಃ ಶ್ರುತ್ವಾ ಗತಸ್ವೀಯತ್ವಸಂಶಯಾ ।
ಸ್ವಕೀಯಶಕಟೇ ಸ್ಥಾಪ್ಯ ದದೌ ತಸ್ಮೈ ನನಾಮ ಚ ॥ ೨೨ ॥
ಕೃಷ್ಣಶರ್ಮಾ ಧನಂ ಪ್ರಾಪ್ಯ ಹೃಷ್ಟಸ್ತಾಮಪಿ ಭಾಷ್ಯ ಚ ।
ನಾಗರಾಜಂ ಸಮಾಮಂತ್ರ್ಯ ರಾತ್ರ್ಯಾಮೇವ ಜಗಾಮ ಹ ॥ ೨೩ ॥
ಅಂಜಸಾ ಸ್ವಗೃಹಂ ಗತ್ವಾ ಗೃಹೀತ್ವಾ ಸ್ವಕುಟುಂಬಕಮ್ ।
ಪ್ರಯಾಗಂ ಪ್ರಾಪ್ಯ ತದ್ಗೇಹಂ ಜಗಾಮಾಶು ಪ್ರಹರ್ಷಿತಃ ॥ ೨೪ ॥
ಧನಂ ನಿವೇದಯಾಮಾಸ ತತ್ಸರ್ವಂ ವಿಷ್ಣುಶರ್ಮಣೇ ।
ಸೋಽಪ್ಯಸ್ಮೈ ಸತ್ಯಸಂತುಷ್ಟೋ ದದಾವರ್ಧಂ ಧನಂ ದ್ವಿಜಃ ॥ ೨೫ ॥
ಉಭಾವಪಿ ಪ್ರಯಾಗೇ ತೌ ಸ್ಥಿತ್ವಾ ಧರ್ಮಪರಾಯಣೌ ।
ಸ್ವಕುಟುಂಬಾವಿರೋಧೇನ ಧರ್ಮಕಾರ್ಯಾಣಿ ಚಕ್ರತುಃ ॥ ೨೬ ॥
ಬಹುದಾನಾನಿ ಪುಣ್ಯಾನಿ ದದತುಸ್ತೌ ಯಥಾವಿಧಿ ।
ಅನಿವಾರಿತಮನ್ನಂ ಚ ಪುಣ್ಯಕಾಲೇ ವಿಶೇಷತಃ ॥ ೨೭ ॥
ಗೋದಾನಾನಿ ಕ್ರಿಯಾಸ್ಸರ್ವಾ ಲಕ್ಷಹೋಮಾದಿಕಾಸ್ತಥಾ ।
ತಿಲಪಾತ್ರಪ್ರದಾನಾನಿ ಚಕ್ರಾತೇ ತೌ ಯಥಾವಿಧಿ ॥ ೨೮ ॥
ಉದ್ವಾಹಂ ದ್ವಿಜಕನ್ಯಾನಾಂ ವಟೂನಾಮುಪನಾಯನಮ್ ।
ಪೋಷಣಂ ಚ ದರಿದ್ರಾಣಾಂ ಸೇವನಂ ರೋಗಿಣಾಂ ತಥಾ ॥ ೨೯ ॥
ಗ್ರೀಷ್ಮೇ ಜಲಪ್ರದಾನಂ ಚ ವರ್ಷಾಸು ಜಲವಾರಣಮ್ ।
ದದತುಃ ಪರಯಾ ಭಕ್ತ್ಯಾ ಶೀತೇ ಶೀತನಿವಾರಣಮ್ ॥ ೩೦ ॥
ರೋಪಣಂ ಪುಷ್ಪವಾಟೀನಾಂ ತುಲಸೀನಾಂ ತಥೈವ ಚ ।
ಕೃತ್ವಾ ತದುದ್ಭವೈಃ ಪುಷ್ಪೈಃ ಪತ್ರೈಶ್ಚ ತುಲಸೀದಲೈಃ ॥ ೩೧ ॥
ಪ್ರತ್ಯಹಂ ಚಕ್ರತುರ್ಭಕ್ತ್ಯಾ ವೇಣೀಮಾಧವಪೂಜನಮ್ ।
ಗಂಧೈರ್ಧೂಪೈಸ್ತಥಾ ದೀಪೈರ್ನೈವೇದ್ಯೈರ್ವಿವಿಧೈಸ್ತಥಾ ॥ ೩೨ ॥
ತಥೈವ ಲಕ್ಷಪೂಜಾಭಿರ್ದಂಪತೀಪೂಜನೇನ ವೈ ।
ತೋಷಯಾಮಾಸತುರ್ದೇವಂ ಮಾಧವಂ ವರದಪ್ರಭುಮ್ ॥ ೩೩ ॥
ಸಸ್ನತುರ್ಮಾಘಮಾಸೇ ತು ಶಾಸ್ತ್ರದೃಷ್ಟೇನ ವರ್ತ್ಮನಾ ।
ಪ್ರಯಾಗೇ ಮಾಘಮಾಹಾತ್ಮ್ಯಂ ಶೃಣ್ವಾಂತೌ ತೀರ್ಥವಾಸಿನಃ ॥ ೩೪ ॥

ಇತ್ಯಾದಿ ಧರ್ಮಸಂಯುಕ್ತೌ ತೀರ್ಥಸೇವಾಗತ್ಯೈನಸೌ ।
ಪಂಚತ್ವಂ ಜಗ್ಮತುರ್ವೃದ್ಧಾವೇಕಸ್ಮಿನ್ನೇವ ವಾಸರೇ ॥ ೩೫ ॥
ಗರುಡಧ್ವಜಶೋಽಭಿಷ್ಟಂ ಚಂದ್ರಸೂರ್ಯಾಗ್ನಿಸನ್ನಿಭಮ್ ।
ಭ್ರಾಜಿಷ್ಣುರ್ವೈಷ್ಣವಾನೀತಂ ವಿಮಾನಮಧಿರುಹ್ಯ ತೌ ॥ ೩೬ ॥
ಕಲ್ಪದ್ರುಮೋತ್ಥಕುಸುಮೈರಭಿವೃಷ್ಟೌ ದಿವಿ ಸ್ಥಿತೌ ।
ನೃತ್ಯಗಾಯನಸಂಯುಕ್ತೌ ವೈಕುಂಠಭವನಂ ಗತೌ ॥ ೩೭ ॥
ದಕ್ಷಿಣೇ ವಿಷ್ಣುಶರ್ಮಾ ಚ ಕೃಷ್ಣಶರ್ಮಾ ತು ವಾಮತಃ ।
ತಸ್ಥೌ ಮಾಧವದೇವಸ್ಯ ಸಾಕ್ಷಾನ್ಮಾಧವರೂಪಿಣೌ ॥ ೩೮ ॥
ಗುಪ್ತದಾನಸ್ಯ ಮಾಹಾತ್ಮ್ಯಂ ಸಾಖ್ಯಾನಂ ಮೇ ನಿರೂಪಿತಮ್ ।
ಸರ್ವದಾನವರಿಷ್ಠಂ ತದ್ಧರಿಸಾರೂಪ್ಯಕಾರಣಮ್ ॥ ೩೯ ॥
ಅತಃ ಕರೋತಿ ಯತ್ಕಿಂಚಿದ್ಗುಪ್ತದಾನಂ ಸ್ವಶಕ್ತಿತಃ ।
ಪ್ರಯಾಗೇ ಮಾಧವೋಽನಂತಂ ಕುರುತೇ ಮಾಧವಃ ಸ್ವಯಮ್ ॥ ೪೦ ॥

॥ ಇತಿ ಷಷ್ಟಿತಮೋಽಧ್ಯಾಯಃ ॥

ಈ ರೀತಿಯ ಹಾವಿನ ಮಾತನ್ನು ಕೇಳಿದ ಸುನಂದೆಯು ಸಂಶಯರಹಿತಳಾಗಿ ತನ್ನ ಗಾಡಿಯಲ್ಲಿ ಆ ಎಲ್ಲ ಹಣವನ್ನೂ ಇಟ್ಟು ಆ ಬ್ರಾಹ್ಮಣನಿಗೆ ಕೊಟ್ಟು ನಮಸ್ಕಾರ ಮಾಡಿದಳು. ॥ ೨೨ ॥ ಕೃಷ್ಣಶರ್ಮನು ಧನವನ್ನು ಪಡೆದು ಸಂತುಷ್ಟನಾಗಿ, ಸುನಂದೆಗೂ ಮತ್ತು ಆ ಹಾವಿಗೂ ಹೇಳಿ ರಾತ್ರಿಯಲ್ಲೇ ಅಲ್ಲಿಂದ ಹೊರಟನು. ॥ ೨೩ ॥ ಬೇಗನೆ ತನ್ನ ಮನೆಗೆ ಹೋಗಿ ತನ್ನ ಕುಟುಂಬವನ್ನು ಕರೆದುಕೊಂಡು ಪ್ರಯಾಗಕ್ಕೆ ಜಾಗ್ರತೆಯಿಂದ ಬಂದು ಸಂತಸದಿಂದ ವಿಷ್ಣುಶರ್ಮನ ಮನೆಗೆ ಬಂದನು. ॥ ೨೪ ॥ ಆ ಎಲ್ಲ ಹಣವನ್ನು ವಿಷ್ಣುಶರ್ಮನಿಗೆ ಒಪ್ಪಿಸಿದನು. ವಿಷ್ಣುಶರ್ಮನೂ ಇವನ ಸತ್ಯನಿಷ್ಠೆಯಿಂದ ಸಂತುಷ್ಟನಾಗಿ ಅರ್ಧಹಣವನ್ನು ಕೃಷ್ಣಶರ್ಮನಿಗೆ ಕೊಟ್ಟನು. ॥ ೨೫ ॥ ಅವರಿಬ್ಬರೂ ಪ್ರಯಾಗದಲ್ಲಿಯೇ ವಾಸಮಾಡಿಕೊಂಡಿದ್ದು ತಮ್ಮ ಕುಟುಂಬರಕ್ಷಣೆಗೆ ವಿರೋಧವಿಲ್ಲದಂತೆ ಧರ್ಮಕಾರ್ಯಗಳನ್ನು ಮಾಡಿದರು. ॥ ೨೬ ॥ ಯಥಾವಿಧಿಯಾಗಿ ಪುಣ್ಯಕರವಾದ ಅನೇಕ ದಾನಗಳನ್ನು ಮಾಡಿದರು ಮತ್ತು ಎಡೆತಡೆಯಿಲ್ಲದಷ್ಟು ಅನ್ನದಾನಗಳನ್ನು ಪುಣ್ಯಕಾಲಗಳಲ್ಲಿ ಮಾಡಿದರು. ॥ ೨೭ ॥ ಅವರಿಬ್ಬರೂ ಗೋದಾನಾದಿಗಳನ್ನೂ, ಲಕ್ಷಹೋಮಾದಿ ಕಾರ್ಯಗಳನ್ನೂ ಮತ್ತು ಎಳ್ಳಿನ ಪಾತ್ರೆಗಳ ದಾನಗಳನ್ನೂ ಮಾಡಿದರು. ॥ ೨೮ ॥ ಬ್ರಾಹ್ಮಣ ಕನ್ಯೆಯರಿಗೆ ವಿವಾಹ ಮಾಡಿಸಿದರು, ವಟುಗಳಿಗೆ ಉಪನಯನಗಳನ್ನೂ, ದರಿದ್ರರ ಸೇವೆಗಳನ್ನೂ ರೋಗಿಗಳ ಪೋಷಣೆಯನ್ನೂ ಮಾಡಿದರು. ॥ ೨೯ ॥ ಬೇಸಿಗೆಯಲ್ಲಿ ಕುಡಿಯುವ ನೀರನ್ನು ದಾನ ಮಾಡಿದರು, ಮಳೆಗಾಲದಲ್ಲಿ ನೀರಿನ ತೊಂದರೆಗಳನ್ನು ತಪ್ಪಿಸಿದರು ಮತ್ತು ಅತ್ಯಂತ ಆಸಕ್ತಿಯಿಂದ ಛಳಿಗಾಲದಲ್ಲಿ ಯಾತ್ರಿಕರಿಗೆ ಛಳಿನಿವಾರಣೆಯನ್ನು ಮಾಡಿದರು. ॥ ೩೦ ॥ ಹೂವಿನ ತೋಟಗಳನ್ನು ಬೆಳೆಸಿದರು, ತುಳಸಿವನಗಳನ್ನು ಬೆಳೆಸಿದರು. ಅವುಗಳಲ್ಲಿ ಉತ್ಪತ್ತಿಯಾದ ಹೂವುಗಳಿಂದಲೂ ತುಳಸೀದಳಗಳಿಂದಲೂ ವೇಣೀಮಾಧವನ ಪೂಜಾವನ್ನು ಭಕ್ತಿಯಿಂದ ಮಾಡಿದರು. ॥ ೩೧ ॥ ಹಾಗೆಯೇ ಗಂಧ, ಧೂಪ, ದೀಪ; ವಿವಿಧವಾದ ನೈವೇದ್ಯಗಳಿಂದ ಮಾಧವನನ್ನು

ಸಂತುಷ್ಟಗೊಳಿಸಿದರು. ॥ ೩೨ ॥ ಹಾಗೆಯೇ ಲಕ್ಷಪುಷ್ಪ ಮತ್ತು ತುಳಸೀಪೂಜಾಗಳಿಂದಲೂ ದಂಪತಿಗಳ ಪೂಜಾದಿಂದಲೂ ವರಪ್ರದನಾದ ಶ್ರೀಮಾಧವನನ್ನು ಸಂತೋಷಪಡಿಸಿದರು. ॥ ೩೩ ॥ ಶಾಸ್ತ್ರದಲ್ಲಿ ಹೇಳಿರುವ ರೀತಿಯಲ್ಲಿ ಮಾಘಸ್ನಾನವನ್ನು ಮಾಡಿದರು. ಪ್ರಯಾಗವಾಸಿಗಳಾದ ಪುರಾಣಜ್ಞರಿಂದ ಮಾಘಮಾಸಮಾಹಾತ್ಮ್ಯೆಯನ್ನು ಹೇಳಿಸಿ ಕೇಳಿದರು. ॥ ೩೪ ॥ ಈ ರೀತಿಯಾಗಿ ಧರ್ಮದಿಂದ ಕೂಡಿದ ತೀರ್ಥಕ್ಷೇತ್ರದ ಧರ್ಮಗಳನ್ನು ಅನುಷ್ಠಾನ ಮಾಡುತ್ತಿದ್ದು ವೃದ್ಧಾಪ್ಯದಕಾರಣ ಒಂದಾನೊಂದುದಿವಸ ಮರಣವನ್ನೈದಿದರು. ॥ ೩೫ ॥ ಆಗ ವಿಷ್ಣುದೂತರಿಂದ ತರಲ್ಪಟ್ಟ ಗರುಡಧ್ವಜದಿಂದ ಅಲಂಕೃತವಾಗಿದ್ದ ಮತ್ತು ಚಂದ್ರ ಸೂರ್ಯ ಮತ್ತು ಅಗ್ನಿ ಇವರುಗಳ ತೇಜಸ್ಸಿನಿಂದ ಕೂಡಿದ ವಿಮಾನವನ್ನು ಅವರಿಬ್ಬರೂ ಹತ್ತಿಕೊಂಡು ಕಲ್ಪವೃಕ್ಷದ ಪುಷ್ಪಗಳಿಂದ ಮಳೆಗೈಯ್ಯಲ್ಪಟ್ಟವರಾಗಿ ದೇವಲೋಕಾದಿಗಳಲ್ಲಿ ತಂಗಿ ಅಲ್ಲಿಯೂ ನೃತ್ಯಗಾನಾದಿಗಳಿಂದ ಪೂಜಿಸಲ್ಪಟ್ಟವರಾಗಿ ಅಲ್ಲಿಂದ ವೈಕುಂಠಲೋಕಕ್ಕೆ ಹೋದರು. ॥ ೩೬-೩೭ ॥ ವಿಮಾನದಲ್ಲಿ ಕುಳಿತಿದ್ದ ಮಾಧವದೇವರ ಬಲಗಡೆ ವಿಷ್ಣುಶರ್ಮನೂ ಎಡಗಡೆ ಕೃಷ್ಣಶರ್ಮನೂ ಕುಳಿತು ತಾವೂ ಮಾಧವದೇವರಂತೆ ಶಂಖ, ಚಕ್ರ ಮತ್ತು ಪೀತಾಂಬರಧಾರಿಗಳಾಗಿ ಸಾರೂಪ್ಯವನ್ನು ಪಡೆದು ವೈಕುಂಠದಲ್ಲಿ ವಿರಾಜಿಸಿದರು. ॥ ೩೮ ॥ ಈ ಗುಪ್ತದಾನದ ಮಾಹಾತ್ಮ್ಯೆಯು ಈ ಇತಿಹಾಸದೊಡನೆ ನಿಮ್ಮಗಳಿಗೆ ನನ್ನಿಂದ ಹೇಳಲ್ಪಟ್ಟಿತು. ಈ ಗುಪ್ತದಾನವು ಎಲ್ಲ ದಾನಗಳಿಗಿಂತ ಶ್ರೇಷ್ಠವಾದದ್ದು ಮತ್ತು ಶ್ರೀಹರಿಯಸಾರೂಪ್ಯರೂಪ ಮುಕ್ತಿಯನ್ನು ತಂದುಕೊಡತಕ್ಕದ್ದು. ॥ ೩೯ ॥ ಆದ್ದರಿಂದ ಪ್ರಯಾಗದಲ್ಲಿ ಯಾರು ತನ್ನ ಶಕ್ತ್ಯಾನುಸಾರ ಈ ಗುಪ್ತದಾನವನ್ನು ಮಾಡುತ್ತಾರೋ ಅವರಿಗೆ ಮಾಧವನು ಶಾಶ್ವತಜ್ಞಾನಾನಂದಾದಿಗುಣಗಳುಳ್ಳ ಸಾರೂಪ್ಯಮುಕ್ತಿಯನ್ನು ಪ್ರದಾನ ಮಾಡುವನು. ॥ ೪೦ ॥

॥ ಅರವತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕಷಷ್ಟಿತಮೋಽಧ್ಯಾಯಃ ॥ ೬೧ ॥

ಸೂತ ಉವಾಚ—

ಅಥಾನ್ಯದಪಿ ವಕ್ಷ್ಯಾಮಿ ಭಗವತ್ಪ್ರೀತಿಕಾರಣಮ್ ।
ಪ್ರಸಂಗಸ್ಮಾರಿತಂ ದಾನಂ ಶೃಣುತಾಮಲಬುದ್ಧಯಃ ॥ ೧ ॥
ಬ್ರಹ್ಮಣಾ ದೇವಮುಖ್ಯೇನ ಋಷಿಭ್ಯಃ ಕಥಿತಂ ಪುರಾ ।
ಶೇಷೇಣ ಸನಕಾದಿಭ್ಯೋ ಭೀಷ್ಮೇಣಾಜಾತಶತ್ರವೇ ॥ ೨ ॥
ಸರ್ವಸ್ವದಾನಂ ಸರ್ವಾರ್ಥಂ ಪ್ರೋಕ್ತಂ ಕಾಮ್ಯಧಿಯಾ ಕೃತಮ್ ।
ನಿಷ್ಕಾಮೇನ ಕೃತಂ ಭಕ್ತ್ಯಾ ವಿಷ್ಣುಸಾಮೀಪ್ಯಸಾಧನಮ್ ॥ ೩ ॥
ಕುಟುಂಬಿನಾಪಿ ಕರ್ತವ್ಯಮೇಕಲೇನ ವಿಶೇಷತಃ ।
ವಿಧಿನಾವಿಧಿನಾ ವಾಪಿ ಫಲಾಧಿಕ್ಯಂ ವಿಧೌ ಮತಮ್ ॥ ೪ ॥
ವಸ್ತ್ರಪಾತ್ರಧನಾನ್ಯಾನಿ ಮುಕ್ತಾವಿದ್ರುಮಭೂಷಣಮ್ ।
ದದ್ಯಾತ್ಸೋಪಸ್ಕರಂ ಸರ್ವಂ ದ್ವಿಜೇಭ್ಯೋ ಗೃಹಮಂತರಾ ॥ ೫ ॥
ಸ್ವೇಚ್ಛಯಾ ಸಕಲಂ ದೇಯಂ ಕೇಚಿದಾಹುರ್ದ್ವಿಜೇಚ್ಛಯಾ ।
ವಸ್ತ್ರದ್ವಯಂ ತು ಸಂಸ್ಥಾಪ್ಯಂ ಪ್ರತಿಜೀವಂ ನ ಚಾಧಿಕಮ್ ॥ ೬ ॥
ವಿಧಿನಾ ಯೇನ ಕರ್ತವ್ಯಂ ದಾನಂ ಸರ್ವಸ್ವನಾಯಕಮ್ ।
ವದಾಮಿ ತಂ ವಿಧಿಂ ಸರ್ವಂ ಶೌನಕಾದ್ಯಾ ಮಹರ್ಷಯಃ ॥ ೭ ॥
ಶುಭಕಾಲೇ ಶುಭೇ ದೇಶೇಽಥವಾ ಶ್ರದ್ಧೋದಯೇ ಸತಿ ।
ದ್ವಿಜಾನಾಹೂಯ ಮತಿಮಾನ್ಸಂಕಲ್ಪಂ ತು ಸಮಾಚರೇತ್ ॥ ೮ ॥
ತತೋ ಗಣೇಶಂ ಸಂಪೂಜ್ಯ ಷೋಡಶೈರುಪಚಾರಕೈಃ ।
ಸಂಪೂಜ್ಯ ಮಾಧವಂ ವಿಷ್ಣುಂ ಪ್ರಾರ್ಥಯೇದ್ಭಕ್ತಿಭಾವತಃ ॥ ೯ ॥
ನಮಸ್ತೇ ದೇವದೇವೇಶ ಶಂಖಚಕ್ರಗದಾಧರ ।
ನಮಸ್ತೇ ಪುಂಡರೀಕಾಕ್ಷ ಭಕ್ತಾನುಗ್ರಹಕಾರಕ ॥ ೧೦ ॥
ಲಕ್ಷ್ಮೀಕಾಂತ ನಮಸ್ತುಭ್ಯಂ ಮಧುಕೈಟಭಮರ್ದನ ।
ಮಾಧವಾನಂತ ವಿಶ್ವೇಶ ಭಕ್ತಕಾಮಾಮರಾಧಿಪ ॥ ೧೧ ॥
ಕೃಷ್ಣ ವಿಷ್ಣೋ ಹೃಷೀಕೇಶ ಸಚ್ಚಿದಾನಂದವಿಗ್ರಹ ।
ಕ್ಷೀರಾಬ್ಧಿಶಯನಾನಂದ ವಾಸುದೇವ ನಮೋಽಸ್ತು ತೇ ॥ ೧೨ ॥
ಯನ್ಮಯಾ ಸಂಚಿತಂ ದ್ರವ್ಯಂ ಸಕಲಂ ವಿವಿಧಂ ಪ್ರಭೋ ।
ತತ್ಪ್ರಯಚ್ಛಾಮಿ ವಿಪ್ರೇಭ್ಯೋ ಸರ್ವಸ್ವಂ ಪ್ರೀತಯೇ ತವ ॥ ೧೩ ॥
ಬ್ರಾಹ್ಮಣಾನಥ ಸಂಪೂಜ್ಯ ದದ್ಯಾತ್ತೇಭ್ಯೋಽಖಿಲಂ ಸ್ವಯಮ್ ।
ಸ್ವೇಚ್ಛಯೈವ ಯಥೇಷ್ಟಂ ತದ್ಗೃಹ್ಣೀಯುಸ್ತತ ಏವ ಚ ॥ ೧೪ ॥

ತತಃ ಕರ್ಮಾರ್ಪಣಂ ಕುರ್ಯಾದೇವಂ ಯಃ ಕುರುತೇ ನರಃ ।
ವಾಂಛಿತಂ ಫಲಮಾಪ್ನೋತಿ ವೈಕುಂಠಮಧಿರೋಹತಿ ॥ ೧೫ ॥
ಅಹಮಸ್ಯ ಫಲಂ ವಕ್ತುಂ ನಾಲಂ ವರ್ಷಶತೈರಪಿ ।
ಅನ್ಯೇಷಾಂ ತು ಕಥಾ ಕಾ ವಾ ಬ್ರಹ್ಮಣೈವಮುದಾಹೃತಮ್ ॥ ೧೬ ॥
ಪ್ರಯಾಗೇ ಪುಣ್ಯಬಾಹುಲ್ಯಾದೇತತ್ಸಂಪದ್ಯತೇ ಯದಿ ।
ಮಾಧವಸ್ಯ ಪ್ರಸಾದೇನ ತದಕ್ಷಯ್ಯಂ ಭವೇದ್ ಧ್ರುವಮ್ ॥ ೧೭ ॥
ನೈತದ್ದಾನಭವಂ ಪುಣ್ಯಂ ಲಿಖಿತುಂ ವಕ್ತುಮೀಕ್ಷಿತುಮ್ ।
ಕೃತವೀರ್ಯಭವಾನಂತಜಿಷ್ಣವಃ ಪ್ರಭವಿಷ್ಣವಃ ॥ ೧೮ ॥
ಸರ್ವಸ್ವದಾನಮಾಹಾತ್ಮ್ಯಂ ಸವಿಧಾನಂ ನಿರೂಪಿತಮ್ ।
ಭವದ್ಭ್ಯೋ ಭಕ್ತಿಮದ್ಭ್ಯೋ ವೈ ಮಯಾ ವ್ಯಾಸಮುಖಾಚ್ಛ್ರುತಮ್॥ ೧೯ ॥

## ॥ ಅರವತ್ತೊಂದನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಎಲೈ ಪವಿತ್ರವಾದ ಮನಸ್ಸುಳ್ಳ ಶೌನಕಾದಿಗಳೇ! ಭಗವತ್ಪ್ರೀತಿಗೆ ಮೂಲಕಾರಣವಾದ ಇನ್ನೊಂದು ದಾನವನ್ನು ಪ್ರಾಸಂಗಿಕವಾಗಿ ಹೇಳುವೆನು. ಕೇಳಿರಿ. ॥ ೧ ॥ ಈ ವಿಷಯವನ್ನು ಋಷಿಮಹರ್ಷಿಗಳಿಗೆ ಚತುರ್ಮುಖ ಬ್ರಹ್ಮದೇವರೂ, ಸನಕಾದಿಗಳಿಗೆ ಶೇಷದೇವರೂ ಮತ್ತು ಭೀಷ್ಮರು ಅಜಾತಶತ್ರುವಾದ ಧರ್ಮರಾಜನಿಗೂ ಉಪದೇಶ ಮಾಡಿದ್ದಾರೆ. ॥ ೨ ॥ ಇದು ''ಸರ್ವಸ್ವ ದಾನವು''. ಇದನ್ನು ಫಲಾಪೇಕ್ಷೆಯ ಭಾವನೆಯಿಂದ ಮಾಡಿದರೆ ಅಪೇಕ್ಷಿತ ಇಷ್ಟಾರ್ಥಗಳು ನೆರವೇರುವುವು ಮತ್ತು ನಿಷ್ಕಾಮಭಾವದಿಂದ, ಭಕ್ತಿಯಿಂದ ಮಾಡಿದರೆ ವೈಕುಂಠಪ್ರಾಪ್ತಿಯೇ ಆಗುವುದು. ॥ ೩ ॥ ಸಂಸಾರದಲ್ಲಿರುವವನೂ, ಯಾರ ಸಹಾಯ ಇಲ್ಲದೆಯೂ, ಒಬ್ಬಂಟಿಗನಾಗಿಯೂ, ವಿಧಿಪೂರ್ವಕವಾಗಿಯೂ ಮತ್ತು ವಿಧಿಗಳಿಲ್ಲದೆಯೂ ಈ ದಾನವನ್ನು ಮಾಡಬಹುದು. ಆದರೆ ವಿಧಿಪೂರ್ವಕ ಮಾಡಿದ ಈ ದಾನಕ್ಕೆ ಹೆಚ್ಚು ಮಹತ್ತ್ವವಿದೆ. ॥ ೪ ॥ ಬಟ್ಟೆ, ವಸ್ತುಗಳು, ಪಾತ್ರೆಗಳು, ಅನ್ನಾಹಾರಗಳು, ಮುತ್ತು, ಹವಳ, ಆಭರಣಗಳು ಮತ್ತು ಭೋಜನಾದಿಗಳಿಗೆ ಬೇಕಾದ ಸಾಮಗ್ರಿಗಳು ಹೀಗೆ ತಾನು ವಾಸ ಮಾಡುವ ಮನೆಯನ್ನು ಹೊರ್ತುಪಡಿಸಿ ಸಕಲವನ್ನೂ ಈ ಸರ್ವಸ್ವದಾನದಲ್ಲಿ ಬ್ರಾಹ್ಮಣರಿಗೆ ದಾನ ಮಾಡಬಹುದು. ॥ ೫ ॥ ಕೆಲವರು ತನ್ನ ಇಚ್ಛೆಯಿದ್ದಷ್ಟು, ಮತ್ತೆ ಕೆಲವರು ಸ್ವೀಕರಿಸುವ ಬ್ರಾಹ್ಮಣರ ಇಚ್ಛೆಗೆ ಅನುಸಾರವಾಗಿ ಈ ದಾನವನ್ನು ಕೊಡಬಹುದೆಂದು ಎರಡು ಅಭಿಪ್ರಾಯಗಳನ್ನು ಉಲ್ಲೇಖಿಸುವರು. ಕುಟುಂಬದ ಒಬ್ಬೊಬ್ಬ ವ್ಯಕ್ತಿಗೂ ಎರಡೆರಡು ಬಟ್ಟೆಗಳನ್ನು ಬಿಟ್ಟು ಉಳಿದೆಲ್ಲವನ್ನೂ ದಾನ ಮಾಡಬೇಕೆಂದೂ ಮತ್ತು ಇದಕ್ಕಿಂತ ಹೆಚ್ಚಿಗೆ ಉಳಿಸಿಕೊಳ್ಳಬಾರದೆಂದೂ ಕೆಲವರು ಹೇಳುತ್ತಾರೆ. ॥ ೬ ॥ ವಿಧಿಪೂರ್ವಕವಾಗಿ ಮಾಡುವ ದಾನವೇ ಎಲ್ಲಕ್ಕಿಂತ ಶ್ರೇಷ್ಠವಾದುದು. ಆದ್ದರಿಂದ, ಶೌನಕಾದಿಗಳೇ! ಸರ್ವಸ್ವ ದಾನವನ್ನು ಮಾಡುವ ಆ ವಿಧಿಯನ್ನು ಹೇಳುತ್ತೇನೆ, ಕೇಳಿರಿ. ॥ ೭ ॥ ಶುಭಕಾಲದಲ್ಲಿ ಪವಿತ್ರವಾದ ಸ್ಥಳದಲ್ಲಿ ಅಥವಾ ಯಾವಾಗ ಈ ದಾನ ಮಾಡಲು ಶ್ರದ್ಧೆ ಹುಟ್ಟುವುದೋ ಆಗ ಬ್ರಾಹ್ಮಣರುಗಳನ್ನು ಆಹ್ವಾನಿಸಿ ಸಂಕಲ್ಪವನ್ನು ಮಾಡಿ ಮುಗಿಸಬೇಕು. ॥ ೮ ॥

ಆಗ ಷೋಡಶೋಪಚಾರಗಳಿಂದ ಗಣೇಶನನ್ನು ಪೂಜಿಸಿ ಶ್ರೀಮಾಧವದೇವರನ್ನು ಪೂಜಿಸಿ ಪ್ರಾರ್ಥಿಸಬೇಕು. ॥ ೯ ॥ ಜೀವೋತ್ತಮನಾದ ಮತ್ತು ಶಂಖಚಕ್ರಗದಾಪದ್ಮಗಳ ಧಾರಿಯಾದ ಕಮಲದ ದಳದಂತೆ ವಿಸ್ತಾರವಾದ ಕಣ್ಣುಗಳುಳ್ಳವನೇ! ಭಕ್ತರಿಗೆ ಅನುಗ್ರಹ ಮಾಡತಕ್ಕವನೇ! ಶ್ರೀಲಕ್ಷ್ಮೀಪತಿಯೇ! ಆದಿದೈತ್ಯರಾದ ಮಧು ಮತ್ತು ಕೈಟಭರನ್ನು ನಿಗ್ರಹ ಮಾಡಿದವನೇ! ಮಾಧವನೇ! ಅನಂತನೇ! ವಿಶ್ವೇಶನೇ! ಭಕ್ತರಿಂದ ಅಪೇಕ್ಷಿತನಾಗಿರುವವನೇ! ದೇವತೆಗಳಿಗೆ ಸ್ವಾಮಿಯೇ! ಕೃಷ್ಣನೇ! ವಿಷ್ಣುವೇ! ಹೃಷೀಕೇಶನೇ! ಸಾರ್ವಕಾಲಿಕಸತ್ತಾ ಉಳ್ಳ ಸ್ವರೂಪಭೂತವಾದ ಜ್ಞಾನ ಮತ್ತು ಆನಂದವೇ ಸ್ವರೂಪವಾದ ದೇಹವುಳ್ಳವನೇ! ಕ್ಷೀರಸಾಗರದಲ್ಲಿ ಶೇಷನ ಮೇಲೆ ಮಲಗಿರುವವನೇ! ಆನಂದಸ್ವರೂಪವಾಗಿದ್ದು ಆನಂದನೆಂದು ಕರೆಯಲ್ಪಟ್ಟವನೇ! ವಾಸುದೇವ ನೆಂಬ ಹೆಸರಿನಿಂದ ವಾಚ್ಯನೇ! ನಿನಗೆ ನಮಸ್ಕಾರಗಳು. ನನ್ನಿಂದ ಸಂಪಾದಿಸಲ್ಪಟ್ಟ ನಾನಾವಿಧಗಳಾದ ಪದಾರ್ಥಗಳನ್ನೆಲ್ಲ ಶ್ರೀಮಾಧವ! ನಿನ್ನ ಪ್ರೀತಿಗಾಗಿ ಬ್ರಾಹ್ಮಣರಿಗೆ ದಾನ ಮಾಡುವೆನು.'' ಎಂದು ಹೇಳಿ ಮಂತ್ರಾಕ್ಷತೆಯನ್ನು ಬಿಟ್ಟು ಬ್ರಾಹ್ಮಣರುಗಳನ್ನು ಪೂಜಿಸಿ, ತನ್ನ ಸರ್ವಸ್ವವನ್ನು ಅವರುಗಳಿಗೆ ದಾನ ಮಾಡಿ, ಈ ದಾನದಿಂದ ''ಶ್ರೀಕೃಷ್ಣನು ಪ್ರೀತನಾಗಲಿ'' ಎಂದುಹೇಳಿ ''ಕೃಷ್ಣಾರ್ಪಣ'' ಮಾಡಬೇಕು. ಈ ರೀತಿಯಾಗಿ ಮಾಡಿದವನು ತಾನು ಅಪೇಕ್ಷಿಸಿದ್ದನ್ನೆಲ್ಲ ಪಡೆದು, ವೈಕುಂಠಕ್ಕೂ ಪ್ರಯಾಣ ಮಾಡುವನು. ॥ ೧೦-೧೫ ॥ ''ನಾನು ನೂರು ವರ್ಷಗಳವರೆಗೆ ಹೇಳಿದರೂ ಇದರ ಫಲಗಳ ಮಹತ್ತ್ವವನ್ನು ಹೇಳಿ ಮುಗಿಸಲಾರೆ. ನನಗೇ ಹೀಗಿರುವಾಗ ಬೇರೆಯವರ ಪಾಡೇನು?'' ಎಂದು ಬ್ರಹ್ಮದೇವರೇ ಹೇಳಿದ್ದಾರೆ. ॥ ೧೬ ॥ ಈ ದಾನಪ್ರದಾನವು ಪುಣ್ಯದ ಅತಿಶಯದಿಂದ ಯಾರಿಗಾದರೂ ಪ್ರಯಾಗದಲ್ಲಿ ಲಭ್ಯವಾದರೆ ಶ್ರೀಮಾಧವನ ಅನುಗ್ರಹದಿಂದ ಅದು ನಿಶ್ಚಯವಾಗಿಯೂ ಅಕ್ಷಯವಾಗುವುದು. ॥ ೧೭ ॥ ''ಈ ದಾನದಿಂದ ಹುಟ್ಟುವ ಪುಣ್ಯವನ್ನು ಬರೆಯಲು ಅಥವಾ ಯೋಚಿಸಲೂ ಕೃತವೀರ್ಯ, ರುದ್ರದೇವರು, ಶೇಷದೇವರು, ಇಂದ್ರ ಇವರುಗಳಿಗೂ ಸಾಧ್ಯವಾಗುವುದಿಲ್ಲ.'' ಎಂದು ಹೇಳಿದ್ದಾರೆ. ॥ ೧೮ ॥ (ಇಲ್ಲಿ ಹೇಳಿರುವ ಅತಿಶಯೋಕ್ತಿಯನ್ನು ಸರ್ವಸ್ವದಾನದ ಮಹತ್ತ್ವದ ಬಗ್ಗೆ ಆದರವನ್ನು ಹುಟ್ಟಿಸಲು ಎಂದು ತಿಳಿಯಬೇಕು.) ಇಲ್ಲಿ ನಾನು ಹೇಳಿರುವ ಸರ್ವಸ್ವದಾನದ ಮಾಹಾತ್ಮ್ಯೆಯೂ ಅದರ ಅನುಷ್ಠಾನದ ವಿಧಿಯೂ ಭಕ್ತಿಯುಕ್ತರಾದ ತಮಗಾಗಿ ನಾನು ಹೇಳಿದ್ದೇನೆ. ಇದನ್ನು ನಾನು ಶ್ರೀವೇದವ್ಯಾಸರಿಂದ ಕೇಳಿದೆನು. ॥ ೧೯ ॥

**ಋಷಯ ಊಚುಃ—**

> **ಸಮ್ಯಗುಕ್ತಂ ತ್ವಯಾ ಸೂತ ದಾನಂ ಸರ್ವಸ್ವಸಂಜ್ಞಕಮ್ ।**
> **ಧನಿನಸ್ಸಂಭವೇದೇತದ್ದರಿದ್ರಸ್ಯ ಕಥಂ ಭವೇತ್ ॥ ೨೦ ॥**

**ಋಷಿಗಳು ಹೇಳಿದರು—**

''ಸರ್ವಸ್ವದಾನ''ಎಂಬುದು ತಮ್ಮಿಂದ ಚೆನ್ನಾಗಿ ವರ್ಣಿಸಲ್ಪಟ್ಟಿತು. ಆದರೆ ಈ ದಾನವು ಶ್ರೀಮಂತರಿಗೆ ಸಾಧ್ಯ. ದರಿದ್ರರಿಗೆ ಹೇಗೆ ಸಾಧ್ಯ?'' ॥ ೨೦ ॥

**ಸೂತ ಉವಾಚ—**

> **ಇದಮುಕ್ತಂ ಮುನಿಶ್ರೇಷ್ಠಾಸ್ತಥಾಪ್ಯತ್ರ ನ ಕಾರಣಮ್ ।**
> **ಧನಿತ್ವಂ ವಾ ದರಿದ್ರತ್ವಂ ಸರ್ವಸ್ವಮುಭಯೋಸ್ಸಮಮ್ ॥ ೨೧ ॥**

ಅಸ್ಮಿನ್ನರ್ಥೇ ಪುರಾವೃತ್ತಂ ಪ್ರವಕ್ಷ್ಯಾಮಿ ಕಥಾನಕಮ್ ।
ಪಠನಾಚ್ಛ್ರವಣಾದ್ಯಸ್ಯ ದಾನಪುಣ್ಯಂ ಲಭೇನ್ನರಃ ॥ ೨೨ ॥
ಜನಸ್ಥಾನೇ ಶುಭಸ್ಥಾನೇ ವಿಪ್ರಃ ಶ್ರೀಪತಿನಾಮಕಃ ।
ಕುಟುಂಬೀ ಧನವಾನ್ದಾತಾ ಧರ್ಮನಿಷ್ಠೋಽತಿಬುದ್ಧಿಮಾನ್ ॥ ೨೩ ॥
ಆಸೀತ್ತಸ್ಯ ಮತಿರ್ಜಾತಾ ಚರಮೇ ವಯಸಿ ದ್ವಿಜಾಃ ।
ಪ್ರಯಾಗತೀರ್ಥಯಾತ್ರಾಯಾಂ ಪೂರ್ವಪುಣ್ಯಸಮುದ್ಭವಾ ॥ ೨೪ ॥
ತತೋಽಸೌ ದ್ವಿಜವಾಕ್ಯೇನ ವಿಧಾಯ ಗಮನೇ ವಿಧಿಮ್ ।
ಜ್ಯೇಷ್ಠಪುತ್ರಂ ಸಪತ್ನೀಕಂ ಗೃಹೀತ್ವಾ ಸ್ವಸ್ತ್ರಿಯಂ ತತಃ ॥ ೨೫ ॥
ಬಹುಲಂ ಧನಮಾದಾಯ ದಾಸೀದಾಸಸಮಾವೃತಃ ।
ಮುಹೂರ್ತೇ ಶೋಭನೇ ಹೃಷ್ಟಃ ಪ್ರತಸ್ಥೇ ನಗರಾತ್ಸ್ವಕಾತ್ ॥ ೨೬ ॥
ನಾಪಿತೋ ಜಯನಾಮಾಸೀಚ್ಛ್ರೀಪತೇಃ ಪ್ರಾತಿವೇಶಿಕಃ ।
ತತ್ತೀರ್ಥಗಮನಂ ಶ್ರುತ್ವಾ ಸೋಽಪಿ ಶ್ರೀಪತಿಮನ್ವಗಾತ್ ॥ ೨೭ ॥
ಗೃಹಾಗಮನಪರ್ಯಂತಂ ಕರಿಷ್ಯೇ ನ ಪ್ರತಿಗ್ರಹಮ್ ।
ಏವಂ ನಿಯಮಮಾಪೇದೇ ಶ್ರೀಪತಿಃ ಶಾಸ್ತ್ರಕೋವಿದಃ ॥ ೨೮ ॥
ಜಯೋಽಪಿ ನಿಯಮಂ ಚಕ್ರೇ ನಾಹಂ ಯಾವದ್ಗೃಹಾಗಮಮ್ ।
ಆಶಯಾ ಕಸ್ಯಚಿತ್ಕ್ಷೌರಂ ಕರಿಷ್ಯಾಮೀತಿ ಸುವ್ರತೀ ॥ ೨೯ ॥
ಇತ್ಯಾದಿ ನಿಯಮಾಪನ್ನಾವುಭೌ ಶ್ರೀಪತಿನಾಪಿತೌ ।
ಯಾತ್ರಾಧರ್ಮಾನುಸಾರೇಣ ಜಗ್ಮತುಸ್ತೀರ್ಥಭೂಪತಿಮ್ ॥ ೩೦ ॥
ಪ್ರಯಾಗಂ ಪ್ರಾಪತೂ ರಾತ್ರೌ ವೇಣೀತೀರಮುಪಾಗತೌ ।
ಸ್ನಾನಂ ಕೃತ್ವಾ ವಿಧಾನೇನ ಸ್ಥಿತೌ ಕ್ಷೌರಾಭಿಲಾಷಿಣೌ ॥ ೩೧ ॥
ತದಾ ವಿಚಾರಯಾಮಾಸ ಶ್ರೀಪತಿಃ ಸಂಶಯಾನ್ವಿತಃ ।
ರಾತ್ರೌ ಕ್ಷೌರನಿಷೇಧೋ ಹಿ ಸರ್ವತ್ರ ಖಲು ದೃಶ್ಯತೇ ॥ ೩೨ ॥
ದಿವಾ ವಾ ಯದಿ ವಾ ರಾತ್ರೌ ಗಂಗಾಂ ಪ್ರಾಪ್ಯಸ್ಸರಿದ್ವರಾಮ್ ।
ಮುಂಡನಂ ಯೋ ನ ಕುರ್ವೀತ ಸ ಭವೇತ್ಪಿತೃಘಾತಕಃ ॥ ೩೩ ॥
ಪ್ರಯಾಗೇ ತು ವಿಶೇಷೇಣ ರಾತ್ರಾವಹನಿ ಸಂಧ್ಯಯೋಃ ।
ನಿಷಿದ್ಧೇಽಪಿ ದಿನೇ ಕುರ್ಯಾನ್ಮುಂಡನಂ ನ ವಿಚಾರಯೇತ್ ॥ ೩೪ ॥
ಇತ್ಯಾದಿವಚನಾಧಾರಾನ್ನಿಶ್ಚಿತ್ಯ ನಿಶಿ ಮುಂಡನಮ್ ।
ಗಂಗಾಯಮುನಯೋಸ್ತೀರೇ ದಿವಾಕೀರ್ತಿಂ ಸಮಾಹ್ವಯತ್ ॥ ೩೫ ॥
ಯದಾ ಏಕೋಽಪಿ ನ ಪ್ರಾಪ್ತಸ್ಸರ್ವೇ ಸ್ವಸ್ವಗೃಹಂ ಗತಾಃ ।
ತದಾ ಚಿಂತಾಮನುಪ್ರಾಪ್ಯ ಶ್ರೀಪತಿರ್ಜಯಮಬ್ರವೀತ್ ॥ ೩೬ ॥

**ಸೂತರು ಹೇಳಿದರು—**

ನಿಮ್ಮಿಂದ ಹೇಳಲ್ಪಟ್ಟ ದಾರಿದ್ರ್ಯವೆಂಬುದು ಈ ಸರ್ವಸ್ವ ದಾನ ಮಾಡದಿರಲು ಕಾರಣವಲ್ಲ. ದರಿದ್ರರಿಗೂ ಮತ್ತು ಶ್ರೀಮಂತರಿಗೂ ಈ ದಾನವು ಒಂದೇ ಸಮನಾಗಿ ಇದೆ. ॥ ೨೧ ॥ ಈ ವಿಷಯದಲ್ಲಿ ಹಿಂದೆ ನಡೆದಿರುವ ಒಂದು ಇತಿಹಾಸವನ್ನು ಹೇಳುತ್ತೇನೆ. ಇದನ್ನು ಕೇಳುವುದರಿಂದ ಅಥವಾ ಓದುವುದರಿಂದ ಸರ್ವಸ್ವದಾನದ ಪುಣ್ಯವೇ ಪ್ರಾಪ್ತವಾಗುವುದು. ॥ ೨೨ ॥ ಮಂಗಳಕರವಾದ ಜನಸ್ಥಾನದಲ್ಲಿ ಶ್ರೀಪತಿ ಎಂಬ ಹೆಸರಿನ ಒಬ್ಬ ಧನಿಕನಿದ್ದನು. ಅವನು ಕುಟುಂಬಿಯೂ, ಧರ್ಮಿಷ್ಠನೂ, ದಾನಿಯೂ ಮತ್ತು ಬುದ್ಧಿವಂತನೂ ಆಗಿದ್ದನು. ॥ ೨೩ ॥ ಎಲೈ, ಬ್ರಾಹ್ಮಣೋತ್ತಮರಾದ ಶೌನಕಾದಿಗಳೇ! ಅವನಿಗೆ ಹಿಂದಿನ ಜನ್ಮದ ಪುಣ್ಯದ ಫಲವಾಗಿ ಕೊನೆಗಾಲದಲ್ಲಿ ಪ್ರಯಾಗತೀರ್ಥದ ಯಾತ್ರೆಯಲ್ಲಿ ಬುದ್ಧಿಯು ಹುಟ್ಟಿತು. ॥ ೨೪ ॥ ಅವನು ಬ್ರಾಹ್ಮಣರ ಮಾತಿನಂತೆ ಯಾತ್ರೆ ಹೊರಡಲು ಮನಸ್ಸು ಮಾಡಿದನು. ತನ್ನ ಹೆಂಡತಿ, ಹಿರಿಯ ಮಗ ಮತ್ತು ಹಿರಿಯ ಸೊಸೆ ಇವರೊಡನೆ ಹೊರಡಲು ನಿಶ್ಚಯಿಸಿದನು. ॥ ೨೫ ॥ ಬೇಕಾದಷ್ಟು ಹಣವನ್ನೂ ತೆಗೆದುಕೊಂಡು ದಾಸದಾಸಿಯರಿಂದ ಕೂಡಿಕೊಂಡು ಅವನು ಶುಭ ಮುಹೂರ್ತದಲ್ಲಿ ಊರಿನಿಂದ ಹೊರಹೊರಟನು. ॥ ೨೬ ॥ ಜಯನೆಂಬ ಹೆಸರಿನ ಕ್ಷೌರಿಕನೊಬ್ಬನು ಶ್ರೀಪತಿಯ ಪಕ್ಕದ ಮನೆಯವನಾಗಿದ್ದನು. ಈ ತೀರ್ಥಯಾತ್ರೆಯ ವಿಷಯವನ್ನು ಕೇಳಿ ಅವನು ಶ್ರೀಪತಿಯನ್ನು ಹಿಂಬಾಲಿಸಿದನು. ॥ ೨೭ ॥ ಶಾಸ್ತ್ರದಲ್ಲಿ ನಿಷ್ಣಾತನಾಗಿದ್ದ ಶ್ರೀಪತಿಯು ಮನೆಗೆ ಹಿಂತಿರುಗುವವರೆಗೂ ಏನನ್ನೂ ಸ್ವೀಕರಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದನು. ॥ ೨೮ ॥ ತೀರ್ಥಯಾತ್ರಾವ್ರತದಲ್ಲಿ ದೀಕ್ಷೆಯಿದ್ದ ಜಯನೂ ಕೂಡ ''ನಾನೂ, ಹಿಂತಿರುಗುವವರೆಗೆ, ಹಣದ ಸಂಪಾದನೆಯ ದೃಷ್ಟಿಯಿಂದ ಕ್ಷೌರವನ್ನು ಮಾಡುವುದಿಲ್ಲ'' ಎಂದು ನಿಯಮವನ್ನು ಮಾಡಿಕೊಂಡನು. ॥ ೨೯ ॥ ಇವೇ ಮೊದಲಾದ ನಿಯಮಗಳಿಗೆ ಒಳಪಟ್ಟು ಆ ಶ್ರೀಪತಿ ಮತ್ತು ಜಯರು ಯಾತ್ರೆಯ ಧರ್ಮದ ಪ್ರಕಾರವಾಗಿ ತೀರ್ಥರಾಜನ ಕ್ಷೇತ್ರವನ್ನು ತಲುಪಿದರು. ॥ ೩೦ ॥ ರಾತ್ರಿಯಲ್ಲಿ ಪ್ರಯಾಗವನ್ನು ತಲುಪಿ ವೇಣೀತೀರವನ್ನು ಹೊಂದಿದರು. ವಿಧಿವತ್ತಾಗಿ ಸ್ನಾನವನ್ನು ಮಾಡಿ ಕ್ಷೌರ ಮಾಡಿಸಿಕೊಳ್ಳಲು ಅಪೇಕ್ಷೆಪಟ್ಟರು. ॥ ೩೧ ॥ ಶ್ರೀಪತಿಯು ಸಂದೇಹಗೊಂಡವನಾಗಿ ವಿಚಾರ ಮಾಡಿದನು. ರಾತ್ರಿಯ ವೇಳೆಯಲ್ಲಿ ಕ್ಷೌರಕರ್ಮವು ನಿಷಿದ್ಧವೆಂದು ಎಲ್ಲೆಡೆಯಲ್ಲಿಯೂ ಕಂಡುಬಂದಿದೆ. ॥ ೩೨ ॥ ಆದರೆ ಗಂಗೆಯನ್ನು ತಲುಪಿದಾಗ ಹಗಲಾಗಿರಲಿ, ರಾತ್ರಿಯಾಗಿರಲಿ ಅಥವಾ ಸಂಧ್ಯಾಕಾಲವಾಗಿರಲಿ ಯಾರು ಮುಂಡನವನ್ನು ಮಾಡಿಸಿಕೊಳ್ಳುವುದಿಲ್ಲವೋ ಅವನ ಪಿತೃಗಳು ನರಕದಲ್ಲಿ ಬೀಳುವರು. ಪ್ರಯಾಗದಲ್ಲಿಯೂ ವಿಶೇಷವಾಗಿ ರಾತ್ರಿ, ಹಗಲು, ಸಂಧ್ಯಾಕಾಲ ಮತ್ತು ನಿಷಿದ್ಧ ದಿವಸಗಳಲ್ಲಿಯೂ ಮುಂಡನವನ್ನು ಮಾಡಿಸಿಕೊಳ್ಳಲೇಬೇಕು. ಈ ಬಗ್ಗೆ ವಿಚಾರ ಮಾಡಬಾರದು. ॥ ೩೩-೩೪ ॥ ಇತ್ಯಾದಿವಚನಗಳ ಆಧಾರದ ಮೇಲೆ ಅವನು ರಾತ್ರಿಯಲ್ಲೇ ಮುಂಡ ಮಾಡಿಸಿಕೊಳ್ಳಲು ನಿಶ್ಚಯಿಸಿ ಗಂಗಾಯಮುನೆಯರ ತೀರಕ್ಕೆ ಬಂದು ಕ್ಷೌರಿಕನಿಗೆ ಹೇಳಿ ಕಳುಹಿಸಿದನು. ॥ ೩೫ ॥ ಎಲ್ಲರೂ ಅವರವರ ಮನೆಗಳಿಗೆ ತೆರಳಿದ್ದರಿಂದ ಒಬ್ಬ ಕ್ಷೌರಿಕನೂ ಸಿಗಲಿಲ್ಲ. ಆಗ ಚಿಂತೆಗೊಳಗಾಗಿ ಶ್ರೀಪತಿಯು ಜಯನನ್ನು ಕುರಿತು ಹೇಳಿದನು. ॥ ೩೬ ॥

**ಶ್ರೀಪತಿರುವಾಚ—**

> ಜಯಾಗಚ್ಛ ಕುರು ಕ್ಷೌರಂ ರಾತ್ರೌ ನಾನ್ಯೋಽಸ್ತಿ ನಾಪಿತಃ ।
> ಶೀತಂ ಮಾಂ ಬಾಧತೇಽತ್ಯರ್ಥಂ ಸಕುಟುಂಬಂ ದಯಾಂ ಕುರು ॥ ೩೭ ॥

ಜಯಃ ಶ್ರುತ್ವಾಪಿ ತತ್ಕ್ಷೌರಂ ನ ಚಕ್ರೇ ವ್ರತಮಾಸ್ಥಿತಃ ।
ತದಾ ತಂ ಲೋಭಯಾಮಾಸ ಶ್ರೀಪತಿಃ ಕಾರ್ಯಸಾಧಕಃ ॥ ೩೮ ॥
ಕುತೋ ನ ಕುರುಷೇ ಕ್ಷೌರಂ ಜಯ ಮತ್ತಃ ಕಿಮಿಚ್ಛಸಿ ।
ಅಹಂ ತುಭ್ಯಂ ಪ್ರದಾಸ್ಯಾಮಿ ಸುವರ್ಣಂ ಕ್ಷುರಸಮ್ಮಿತಮ್ ॥ ೩೯ ॥
ಪುತ್ರೋಽಪಿ ಮತ್ಪ್ರಿಯಃ ಸ್ವರ್ಣಂ ತಾವದೇವ ಪ್ರದಾಸ್ಯತಿ ।
ಪತ್ನೀ ಸ್ನುಷಾ ಚ ಮೇ ತುಭ್ಯಂ ಕನಕಂ ಕರ್ತರೀಮಿತಮ್ ॥ ೪೦ ॥
ದಾಸೀದಾಸಾಶ್ಚ ಸರ್ವೇಽಪಿ ದಾಸ್ಯಂತಿ ಹಿ ಯಥೋಚಿತಮ್ ।
ತ್ವಮೇವಾತಃ ಕುರು ಕ್ಷೌರಂ ದರಿದ್ರೋಽಸಿ ಪ್ರಿಯೋಽಸಿ ಮೇ ॥ ೪೧ ॥
ರಾತ್ರೌ ನ ಪ್ರಾಪ್ಯತೇ ಕಶ್ಚಿನ್ನಾಪಿತಃ ಪರಿಶೋಧಿತಮ್ ।
ಅತಸ್ತ್ವತ್ಪ್ರಾರ್ಥನಾಂ ಕುರ್ವೇ ನ ನಿರಾಕರ್ತುಮರ್ಹಸಿ ॥ ೪೨ ॥

॥ ಇತಿ ಏಕಷಷ್ಟಿತಮೋಽಧ್ಯಾಯಃ ॥

ಶ್ರೀಪತಿಯು ಹೇಳಿದನು—

"ಎಲೈ ಜಯನೇ! ಬಾ. ಕ್ಷೌರವನ್ನು ಮಾಡು. ರಾತ್ರಿಯಾದ್ದರಿಂದ ಯಾರೂ ಸಿಗಲಿಲ್ಲ. ನನಗೂ ನನ್ನ ಕುಟುಂಬಕ್ಕೂ ಛಳಿಯು ಬಾಧಿಸುತ್ತಿದೆ. ನೀನು ದೊಡ್ಡ ಮನಸ್ಸು ಮಾಡು." ಎಂದು ಹೇಳಿದನು. ॥ ೩೭ ॥ ಈ ಮಾತನ್ನು ಆಲಿಸಿಯೂ ಜಯನು ವ್ರತದ ದೀಕ್ಷೆಯಲ್ಲಿದ್ದುದರಿಂದ ಕ್ಷೌರವನ್ನು ಮಾಡಲಿಲ್ಲ. ಆಗ ಶ್ರೀಪತಿಯು ನಾಯಿಂದನಿಗೆ ತನ್ನ ಕಾರ್ಯದ ಸಾಧನೆಗಾಗಿ ಆಸೆ ತೋರಿಸಲು ಪ್ರಾರಂಭಿಸಿದನು. ॥ ೩೮ ॥ ಜಯನೇ! ಏತಕ್ಕೆ ಕ್ಷೌರವನ್ನು ಮಾಡುವುದಿಲ್ಲ; ನೀನು ನನ್ನಿಂದ ಏನನ್ನು ಅಪೇಕ್ಷಿಸುತ್ತಿ? ನಾನು ನಿನಗೆ ಕತ್ತಿಯ ತೂಕದಷ್ಟು ಬಂಗಾರವನ್ನು ಕೊಡುವೆನು. ॥ ೩೯ ॥ ನನಗೆ ಬಹಳ ಪ್ರೀತ್ಯಾಸ್ಪದನಾದ ನನ್ನ ಮಗನೂ ಅಷ್ಟೇ ಬಂಗಾರವನ್ನು ಕೊಡುವನು. ನನ್ನ ಹೆಂಡತಿ ಮತ್ತು ಸೊಸೆಯೂ ಕತ್ತರಿಯ ತೂಕದಷ್ಟು ಬಂಗಾರವನ್ನು ಕೊಡುವರು. ॥ ೪೦ ॥ ದಾಸದಾಸಿಯರೂ ಉಚಿತವಾದ ಹಣವನ್ನು ಕೊಡುವರು. ನೀನು ದರಿದ್ರ. ನನಗೆ ಬಹಳ ಬೇಕಾದವನು. ಆದ್ದರಿಂದ ಕ್ಷೌರವನ್ನು ಮಾಡು. ॥ ೪೧ ॥ ನಾನು ಬಹಳ ಹುಡುಕಿಸಿದೆ. ರಾತ್ರಿಯಲ್ಲಿ ಯಾವನೂ ಸಿಕ್ಕಿಲ್ಲ. ಆದ್ದರಿಂದ ನಿನ್ನನ್ನು ಪ್ರಾರ್ಥಿಸುತ್ತಿದ್ದೇನೆ. ನಿರಾಕರಣೆ ಮಾಡುವುದು ಯೋಗ್ಯವಲ್ಲ." ಎಂದು ಹೇಳಿ ಪ್ರಲೋಭನ ಮಾಡಲು ಪ್ರಯತ್ನಿಸಿದನು. ॥ ೪೨ ॥

॥ ಅರವತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಿಷಷ್ಟಿತಮೋಽಧ್ಯಾಯಃ ॥ ೬೨ ॥

ಜಯ ಉವಾಚ—

ಶ್ರೀಪತೇರ್ವಚನಂ ಶ್ರುತ್ವಾ ದರಿದ್ರೋಽಪ್ಯಾಹ ನಾಪಿತಃ ।
ಯೋ ವಾ ಕೋ ವಾತ್ರ ಭವಿತಾ ಕರ್ತಾ ಜ್ಞಾತಾ ಕ್ಷುರಕ್ರಿಯಾಃ ॥ ೧ ॥
ನಾಹಂ ಜಾನೇ ಕ್ಷೌರಕರ್ಮ ವಿಸ್ಮೃತೋಽಸ್ಮಿ ನ ಸಂಶಯಃ ।
ಮಾಸಮಾತ್ರಮನಭ್ಯಾಸಾದನ್ಯಚ್ಚ ಶ್ರೂಯತಾಂ ದ್ವಿಜ ॥ ೨ ॥
ತ್ಯಕ್ತ್ವಾ ಕ್ಷುರಕ್ರಿಯಾಂ ಭೂಯಃ ಕಥಂ ಕಾರ್ಯಾಣಿ ಜಾನತಾ ।
ದರಿದ್ರೋ ವಾ ಸಮೃದ್ಧೋ ವಾ ನಿಯಮಸ್ಯ ಚ ಪಾಲನಾತ್ ॥ ೩ ॥
ಸಮಗ್ರಂ ಫಲಮಾಪ್ನೋತಿ ಮಾಧವಶ್ಚ ಪ್ರಸೀದತಿ ।
ಸರ್ವೇಽಪಿ ಧನಿನಸ್ಸಂತಿ ದರಿದ್ರಾ ನೈವ ಸಂತಿ ಕಿಮ್ ॥ ೪ ॥
ಉಭಯೋರಪಿ ದತ್ತೇಽಸೌ ಸರ್ವಜ್ಞೋ ಮಾಧವಃ ಫಲಮ್ ।
ದಿಷ್ಟಾಯತ್ತಂ ಧನಂ ಪುಂಸಾಂ ದಿಷ್ಟಂ ನಾನಾವಿಧಂ ಸ್ಮೃತಮ್ ॥ ೫ ॥
ಸ್ವದಿಷ್ಟಾಪ್ತೇನ ವಿತ್ತೇನ ಕುರ್ವನ್ಕರ್ಮಾಣ್ಯಶ್ನುತೇ ಫಲಮ್ ।
ಅತೋ ವೈ ನ ಕರಿಷ್ಯಾಮಿ ಭವತಾ ಲೋಭಿತೋಽಪ್ಯಹಮ್ ॥ ೬ ॥

## ॥ ಅರವತ್ತೆರಡನೆಯ ಅಧ್ಯಾಯವು ॥

ಜಯನು ಹೇಳಿದನು—

ಶ್ರೀಪತಿಯ ಮಾತನ್ನು ಕೇಳಿ ದರಿದ್ರನಾಗಿದ್ದ ನಾಪಿತನು ಉತ್ತರವನ್ನು ಹೇಳಿದನು— "ಇಲ್ಲಿಯೇ ಕ್ಷೌರಕರ್ಮದ ಜ್ಞಾನವುಳ್ಳವನೂ ಆ ಕೆಲಸ ಗೊತ್ತಿದ್ದವನೂ ಇರಬೇಕು. ॥ ೧ ॥ ಒಂದು ತಿಂಗಳು ಅಭ್ಯಾಸ ಮಾಡದೇ ಬಿಟ್ಟದ್ದರಿಂದ ನನಗೆ ಕ್ಷೌರದ ಕೆಲಸವು ತಿಳಿಯದು ಮತ್ತು ಮರೆತು ಹೋಗಿದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಎಲೈ! ಬ್ರಾಹ್ಮಣನೇ, ಮತ್ತೊಂದು ವಿಚಾರವನ್ನು ಕೇಳು ॥ ೨ ॥ ಕ್ಷೌರಕಾರ್ಯವನ್ನು ಬಿಟ್ಟ ನಾನು ಈಗ ಹೇಗೆ ತಾನೇ ಅದನ್ನು ಮಾಡಲಿ? ದರಿದ್ರನಾಗಿರಲಿ, ಶ್ರೀಮಂತನಾಗಿರಲಿ, ನಿಯಮಗಳನ್ನು ಪಾಲಿಸಬೇಕು. ॥ ೩ ॥ ಇದರಿಂದ ಪೂರ್ಣಫಲವು ಸಿಗುವುದು ಮತ್ತು ಮಾಧವನೂ ಸಂತುಷ್ಟನಾಗುವನು. ಎಲ್ಲರೂ ಶ್ರೀಮಂತರೇ ಆಗಿರುವರೇ? ದರಿದ್ರನೂ ಇರುವುದಿಲ್ಲವೇ? ॥ ೪ ॥ ಎಲ್ಲವನ್ನೂ ತಿಳಿದ ಮಾಧವನು ಇಬ್ಬರಿಗೂ ಫಲ ಕೊಡತಕ್ಕವನೇ. ಎಲ್ಲ ಮನುಷ್ಯರಿಗೂ ಹಣವು ಅದೃಷ್ಟದಿಂದಲೇ ಸಿಗುವುದು; ಇವುಗಳಲ್ಲಿ ನಾನಾವಿಧಗಳಿವೆಯೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. ॥ ೫ ॥ ತಮ್ಮ ತಮ್ಮ ಅದೃಷ್ಟದಿಂದ ಪಡೆದಿರುವ ಹಣದಿಂದ ಕರ್ಮಗಳನ್ನೆಸಗಿ ಫಲಗಳನ್ನು ಅನುಭವಿಸುತ್ತಾರೆ. ಆದ್ದರಿಂದ ನಿಮ್ಮಿಂದ ಆಸೆ ತೋರಿಸಲ್ಪಟ್ಟರೂ ನಾನು ಕ್ಷೌರವನ್ನು ಮಾಡುವುದಿಲ್ಲ." ॥ ೬ ॥

ಸೂತ ಉವಾಚ—

ವೃಥಾ ಮಾ ಕುರು ಸಂದೇಹಂ ನಿರ್ಬಂಧಂ ಸಂತಿ ನಾಪಿತಾಃ ।
ಇತಿ ತನ್ನಿಶ್ಚಯಂ ಜ್ಞಾತ್ವಾನ್ವೇಷಯಿತ್ವಾನ್ಯನಾಪಿತಮ್ ॥ ೭ ॥

ತಮಾಹೂಯ ಚಕಾರಾಸೌ ಸರ್ವೇಷಾಂ ಮುಂಡನಂ ತಥಾ ।
ಧನಂ ಚ ಬಹುಧಾ ತಸ್ಮೈ ವಸ್ತ್ರಾಣಿ ಚ ವಿಶೇಷತಃ ॥ ೮ ॥
ಚಕ್ರೇ ಜಯೋಽಪಿ ತೇನೈವ ಕ್ಷುರಕರ್ಮ ಯಥೋಚಿತಮ್ ।
ತತಃ ಸ್ನಾತ್ವಾ ವಿಧಾನೇನ ವೇಣೀತೀರೇ ಸ್ಥಿತಾಃ ಸುಖಮ್ ॥ ೯ ॥
ಅತಃ ಪ್ರಭಾತೇ ಸಂಜಾತೇ ಪ್ರಾತಃಸ್ನಾನಂ ವಿಧಾಯ ತೇ ।
ದಾನಾನಿ ಬಹುಶೋ ದತ್ವಾ ಚಕ್ರುಃ ಶ್ರಾದ್ಧಾದಿಕಂ ತತಃ ॥ ೧೦ ॥
ಮಾಘಸ್ನಾನಂ ತತಶ್ಚಕ್ರೇ ಶ್ರೀಪತಿರ್ನಾಪಿತಶ್ಚ ಸಃ ।
ಯಥಾವಿಧಿ ಯಥಾಶಕ್ತಿ ಮಾಸಮಾತ್ರಂ ನಿರಂತರಮ್ ॥ ೧೧ ॥
ಮಾಘಾಂತೇ ಪೂರ್ಣಿಮಾಯಾಂ ವೈ ವಿಧಾಯ ಸಕಲಂ ವಿಧಿಮ್ ।
ಸರ್ವಸ್ವದಾನಂ ಕರ್ತವ್ಯಮಿತಿ ನಿಶ್ಚಿತವಾನ್ಧಿಯಾ ॥ ೧೨ ॥
ಸ್ವಕೀಯಂ ಸಕಲಂ ದ್ರವ್ಯಂ ವಸ್ತ್ರಾಲಂಕರಣಾದಿ ಚ ।
ತ್ರಿವೇಣ್ಯಾಂ ಬ್ರಾಹ್ಮಣೇಭ್ಯೋಽಸೌ ಸಂಕಲ್ಪ್ಯ ವಿಧಿವದ್ದದೌ ॥ ೧೩ ॥
ಪ್ರಶಶಂಸುರ್ಜನಾಸ್ಸರ್ವೇ ಶ್ರೀಪತಿಂ ದಾನಕರ್ಮಣಾ ।
ತ್ಯಕ್ತ್ವಾಶಾಂ ಮಾಧವಪ್ರೀತ್ಯೈ ಸರ್ವಸ್ವಂ ಪ್ರದದಾವಸೌ ॥ ೧೪ ॥
ದೃಷ್ಟ್ವಾ ತದದ್ಭುತಂ ಕರ್ಮ ಶ್ರೀಪತೇರ್ನಾಪಿತೋಽಪಿ ಸಃ ।
ಸರ್ವಸ್ವಂ ದಾತುಮಾರೇಭೇ ಪಿತೃಪೈತಾಮಹಾರ್ಜಿತಮ್ ॥ ೧೫ ॥
ಕಾರ್ಷ್ಣಾಯಸಾಃ ಕ್ಷುರಾಸ್ತೀಕ್ಷ್ಣಾಃ ಕರ್ತರ್ಯೋ ವಿವಿಧಾಸ್ತಥಾ ।
ಕೇಶೋಲ್ಲುಂಚನಕಾರಿಣ್ಯೋ ನಖಕೃಂತನಿಕಾಸ್ತಥಾ ॥ ೧೬ ॥
ಆದರ್ಶೋ ಜಲಪಾತ್ರಂ ಚ ಸರ್ವಾಧಾರಶ್ಚ ಚರ್ಮಜಃ ।
ಏತತ್ಸರ್ವಸ್ವಮಾದಾಯ ವಿಪ್ರೇಭ್ಯೋ ದಾತುಮುದ್ಯತಃ ॥ ೧೭ ॥
ಕೋಽಪಿ ನ ಪ್ರತಿಗೃಹ್ಣಾತಿ ತಸ್ಯ ಸರ್ವಸ್ವಮರ್ಥಿತಃ ।
ಚಕ್ರೇ ನಿಷೇಧಂ ಸರ್ವೋಽಪಿ ತಂ ಚ ನಿರ್ಭರ್ತ್ಸಯನ್ರುಷಾ ॥ ೧೮ ॥
ಗಂಗಾಯಮುನಯೋಸ್ತೀರೇ ತ್ರಿರಾವೃತ್ತಿಃ ಕೃತಾಮುನಾ ।
ಪ್ರತ್ಯೇಕಂ ಪ್ರಾರ್ಥಯಾಮಾಸ ತಥಾಪ್ಯಾದತ್ತ ಕೋಽಪಿ ನ ॥ ೧೯ ॥
ತತೋ ಭೂತ್ವಾ ನಿರಾಶೋಽಸೌ ದಾರಿದ್ರ್ಯಾದತಿದುಃಖಿತಃ ।
ವಿಲಲಾಪ ಸ್ವರೇಣೋಚ್ಚೈಃ ಪತಿತ್ವಾ ವೇಣಿಕಾತಟೇ ॥ ೨೦ ॥

ಸೂತರು ಹೇಳಿದರು—

ಈ ರೀತಿಯಾಗಿ ಹೇಳಿದ ಅವನ ಮಾತನ್ನು ಕೇಳಿ ಅವನ ನಿಶ್ಚಯವನ್ನು ಅರಿತು ಬೇರೆ ಕ್ಷೌರಿಕನನ್ನುಹುಡುಕಿಸಿ ಅವನಿಂದ ಎಲ್ಲರಿಗೂ ಕ್ಷೌರವನ್ನುಮಾಡಿಸಿದನು. ಅವನಿಗೆ ಬಹು ಹಣವನ್ನು ಕೊಟ್ಟನು; ಬಟ್ಟೆಗಳನ್ನು ಕೊಟ್ಟನು. ನಾಪಿತನೂ ಅವನಿಂದಲೇ ಕ್ಷೌರವನ್ನು ಮಾಡಿಸಿಕೊಂಡನು. ಅನಂತರ ಎಲ್ಲರೂ ಸ್ನಾನ ಮಾಡಿ ವೇಣೀತೀರದಲ್ಲಿ ಸುಖವಾಗಿದ್ದರು. ॥ ೭-೯ ॥

ಅನಂತರ ಬೆಳಗಾಗುತ್ತಲೇ ಶ್ರೀಪತಿಯು ವಿಧಿವತ್ತಾಗಿ ಸ್ನಾನಾದಿಗಳನ್ನು ಮಾಡಿ ದಾನಾದಿಗಳನ್ನು ಕೊಟ್ಟುಶ್ರಾದ್ಧಾದಿಗಳನ್ನುಮಾಡಿದನು. ನಂತರ ಶ್ರೀಪತಿಯೂ ಮತ್ತು ಕ್ಷೌರಿಕನು ಮಾಘಸ್ನಾನವನ್ನು ಮಾಡಿದರು. ಇಡೀ ಮಾಘಮಾಸ ಪೂರ್ತಿಯಾಗಿ ವಿಧ್ಯುಕ್ತ ರೀತಿಯಲ್ಲಿ ಬಿಡದೆ ಒಂದೇ ಸಮನೆ ಮಾಘಸ್ನಾನವನ್ನು ಮಾಡಿದರು. ॥ ೧೦-೧೧ ॥ ಮಾಘಸ್ನಾನಾವಧಿಯ ಅಂತ್ಯದಲ್ಲಿನ ಪೌರ್ಣಮೆಯಂದು ಎಲ್ಲ ವಿಧಿಗಳನ್ನು ಮಾಡಿ ಶ್ರೀಪತಿಯು ''ಸರ್ವಸ್ವ ದಾನ''ವನ್ನು ಮಾಡತತಕ್ಕದ್ದೆಂದು ನಿಶ್ಚಯಿಸಿದನು. ॥ ೧೨ ॥ ತನ್ನ ಸಕಲ ಹಣವನ್ನೂ ವಸ್ತ್ರಾಲಂಕಾರಗಳನ್ನೂ ತ್ರಿವೇಣಿಯಲ್ಲಿನ ಬ್ರಾಹ್ಮಣರುಗಳಿಗೆ ಸಂಕಲ್ಪ ಮಾಡಿ ವಿಧಿವತ್ತಾಗಿ ದಾನ ಮಾಡಿದನು. ॥ ೧೩ ॥ ಅಲ್ಲಿದ್ದ ಸಜ್ಜನರೆಲ್ಲರೂ ಶ್ರೀಪತಿಯು ಮಾಡಿದ ದಾನಕರ್ಮಗಳನ್ನೂ ಅವನನ್ನೂ ಸ್ತೋತ್ರ ಮಾಡಿದರು. ಅವನಾದರೋ ಎಲ್ಲ ಆಸೆಗಳನ್ನೂ ತೊರೆದು ಮಾಧವನ ಪ್ರೀತಿಗಾಗಿ ಸರ್ವಸ್ವವನ್ನು ದಾನಮಾಡಿದನು. ॥ ೧೪ ॥ ಶ್ರೀಪತಿಯ ಈ ಅದ್ಭುತ ವ್ಯಾಪಾರವನ್ನು ಕಂಡು ನಾಪಿತನೂ ತನ್ನ ತಂದೆ, ತಾತ, ಮುತ್ತಾತಂದಿರ ಕಾಲದಿಂದ ಬಂದಿರುವ ಎಲ್ಲವನ್ನೂ ದಾನ ಮಾಡಲು ಆರಂಭಿಸಿದನು. ॥ ೧೫ ॥ ಹರಿತವಾಗಿರತಕ್ಕ ಕಬ್ಬಿಣದ ಕತ್ತಿಗಳು, ಉಕ್ಕಿನ ನಾನಾವಿಧವಾದ ಕತ್ತರಿಗಳು, ಕೂದಲನ್ನು ಬುಡಮಟ್ಟ ಕಿತ್ತತಕ್ಕ ಚಿಮಟಗಳು ಮತ್ತು ಉಗುರುಗಳನ್ನು ಕತ್ತರಿಸುವ ಉಪಕರಣಗಳು, ಕನ್ನಡಿಯು ನೀರಿನ ಬಟ್ಟಲುಗಳು ಮತ್ತು ಎಲ್ಲವನ್ನೂ ಇಟ್ಟುಕೊಳ್ಳತಕ್ಕ ಚರ್ಮದ ಚೀಲಗಳು ಇವೇ ಮುಂತಾದ ಸರ್ವಸ್ವವನ್ನೂ ತೆಗೆದುಕೊಂಡು ಬಂದು ಬ್ರಾಹ್ಮಣರುಗಳಿಗೆ ದಾನ ಮಾಡಲು ಉದ್ಯುಕ್ತನಾದನು. ॥ ೧೬-೧೭ ॥ ಅವನಿಂದ ಪ್ರಾರ್ಥಿಸಲ್ಪಟ್ಟರೂ ಅವನನ್ನು ಕೋಪದಿಂದ ಗದರಿಸಿ ಯಾರೂ ಅವುಗಳನ್ನು ಸ್ವೀಕಾರ ಮಾಡದೆ ನಿಷೇಧಿಸಿದರು. ॥ ೧೮ ॥ ಗಂಗಾಯಮುನೆಯರ ತೀರಗಳಲ್ಲಿ ಮೂರು ಮೂರು ಬಾರಿ ಒಬ್ಬೊಬ್ಬರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಪ್ರಾರ್ಥಿಸಿದರೂ ಯಾರೂ ಅವನ ದಾನವನ್ನು ಸ್ವೀಕಾರ ಮಾಡಲಿಲ್ಲ. ॥ ೧೯ ॥ ಕಡೆಗೆ ಅವನು ನಿರಾಶನಾಗಿ ತನ್ನ ದಾರಿದ್ರ್ಯಕ್ಕೆ ಅತಿದುಃಖಗೊಂಡು ವೇಣೀದಡದಲ್ಲಿ ಬಿದ್ದು ಗಟ್ಟಿಯಾಗಿ ರೋದಿಸತೊಡಗಿದನು. ॥ ೨೦ ॥

ಜಯ ಉವಾಚ—

ಅಹೋ ಪಶ್ಯತ ಮೇ ಪಾಪವಿತತಿಂ ದುಷ್ಕೃತಾತ್ಮನಃ ।
ನಿಷ್ಪಾದ್ಯಂ ದುರ್ಗತಿತ್ವಂ ವೈ ಯಯಾ ನೀತೋ ದಶಾಮಿಮಾಮ್ ॥ ೨೧ ॥
ಆದೌ ಶೂದ್ರಕುಲೇ ಜನ್ಮ ತತೋ ದಾರಿದ್ರ್ಯಮದ್ಭುತಮ್ ।
ಇದಂ ಕಸ್ಯ ಫಲಂ ಜ್ಞೇಯಂ ಮಮ ಪಾತಕಮಂತರಾ ॥ ೨೨ ॥
ಕಿಮಿದಾನೀಂ ಕರಿಷ್ಯೇಽಹಂ ಗಮಿಷ್ಯೇ ವಾ ಕುತೋಽತ್ರತಃ ।
ಪಾತಯಿಷ್ಯೇ ನಿಜಂ ದೇಹಂ ಜೋಷಮಾಸೇತಿ ನಿಶ್ಚಿತಃ ॥ ೨೩ ॥
ಗೃಹ್ಣಾತಿ ತು ನ ಕೋಽಪೀದಂ ಸ್ಥಾಪ್ಯಂ ಸಂಕಲ್ಪಿತಂ ಕಥಮ್ ।
ವಿಚಾರ್ಯೈವಂ ನಿಚಿಕ್ಷೇಪ ಗಂಗಾಯಮುನಯೋಸ್ತಟೇ ॥ ೨೪ ॥
ನಿಕ್ಷಿಪ್ಯೈವಂ ಸ್ವಸರ್ವಸ್ವಂ ಭಕ್ತ್ಯಾ ತ್ರಿಪುರುಷಾರ್ಜಿತಮ್ ।
ವ್ರತಂ ಚಾನಶನಂ ಕೃತ್ವಾ ಸಂಸ್ಥಿತೋ ದೃಢನಿಶ್ಚಯಃ ॥ ೨೫ ॥

ತತೋ ಮಾಧವದೇವೋಽಸೌ ಕರುಣಾಮಯವಿಗ್ರಹಃ ।
ವೃದ್ಧಬ್ರಾಹ್ಮಣವೇಷೇಣ ಸಮಾಗತ್ಯ ಜಗಾದ ತಮ್ ॥ ೨೬ ॥

**ಜಯನು ಹೇಳಿದನು—**

ನನ್ನ ಪಾಪದ ವಿಸ್ತಾರವನ್ನು ನೋಡಿರಿ. ನಾನು ಪಾಪಿಷ್ಠನು. ದುರ್ಗತಿಯಿಂದಲೇ ನನಗೆ ಹೀಗಾಗಿದೆ. ಕಾಲು ತೊಳೆಯಲು ಯಾರೂ ಸಹ ಸಿಗದಿರುವ ಈ ನನ್ನ ಗತಿಯನ್ನು ನೋಡಿ. ॥ ೨೧ ॥ ಮೊದಲನೆಯದು ನಾನು ಶೂದ್ರಜಾತಿಯಲ್ಲಿ ಹುಟ್ಟಿದ್ದು, ಜೊತೆಗೆ ಅದ್ಭುತವಾದ ದಾರಿದ್ರ್ಯವು. ಇದು ನನ್ನ ಪಾಪಗಳ ಫಲವಲ್ಲದೆ ಬೇರಾವುದರ ಫಲವಾದೀತು! ॥ ೨೨ ॥ ಈಗ ನಾನೇನು ಮಾಡಲಿ? ಇಲ್ಲಿಂದ ಎಲ್ಲಿಗೆ ಹೋಗಲಿ? ನಾನು ದೇಹತ್ಯಾಗ ಮಾಡಿ ನಿಶ್ಚಿಂತನಾಗುತ್ತೇನೆ. ॥ ೨೩ ॥ ಸಂಕಲ್ಪ ಮಾಡಿ ಮುಂದಿಟ್ಟಿರುವ ಈ ನನ್ನ ದಾನವನ್ನು ಯಾರೂ ತೆಗೆದುಕೊಳ್ಳುವುದಿಲ್ಲ? ಎಂದು ವಿಚಾರ ಮಾಡಿ ತನ್ನ ಸರ್ವಸ್ವವನ್ನೂ ಗಂಗೆಯಮುನೆಯರ ದಡದ ಮೇಲೆ ಎಸೆದುಬಿಟ್ಟನು. ॥ ೨೪ ॥ ಈ ರೀತಿಯಾಗಿ ತನ್ನ ಮೂರು ತಲೆಮಾರಿನಿಂದಲೂ ಬಂದಿರುವ ತನ್ನ ಸ್ವತ್ತನ್ನು ಭಕ್ತಿಯಿಂದ ಗಂಗೆಯಮುನೆಯರ ದಡದಲ್ಲಿ ಹಾಕಿ ದೃಢನಿಶ್ಚಯ ವುಳ್ಳವನಾಗಿ ಉಪವಾಸವ್ರತವನ್ನು ಸ್ವೀಕರಿಸಿ ಅಲ್ಲಿ ಕುಳಿತನು. ॥ ೨೫ ॥ ಅನಂತರ ಕರುಣಾಮಯ ಸ್ವರೂಪನಾದ ಶ್ರೀಮಾಧವದೇವರು ವೃದ್ಧಬ್ರಾಹ್ಮಣವೇಷದಿಂದ ಅವನೆದುರಿಗೆ ಬಂದು ಅವನನ್ನು ಕುರಿತು ಹೀಗೆ ಹೇಳಿದರು. ॥ ೨೬ ॥

**ಬ್ರಾಹ್ಮಣ ಉವಾಚ—**

ಕುತಸ್ತ್ವಮತ್ರ ಸುಪ್ತೋಽಸಿ ಕಿಮರ್ಥಂ ಪರಿಖಿದ್ಯಸೇ ।
ಶೀಘ್ರಂ ಕಥಯ ಸರ್ವಂ ಮೇ ಕೋ ವಾಸಿ ತ್ವಂ ಕಿಮಿಚ್ಛಸಿ ॥ ೨೭ ॥
ದೈವಾತ್ಸಮಾಗತಾ ಯೇ ಚ ಶ್ರೀವೇಣೀಮಾಧವಾಂತಿಕೇ ।
ಕೃತಕೃತ್ಯಾ ಭವಂತ್ಯೇತೇ ಯಥಾ ಸ್ವರ್ಲೋಕವಾಸಿನಃ ॥ ೨೮ ॥
ಅತ್ರ ತಿಷ್ಠಂತಿ ಯೇ ಮರ್ತ್ಯಾಸ್ತೇ ಮರ್ತ್ಯಾ ದೇವರೂಪಿಣಃ ।
ನೈವ ದುಃಖಲವಸ್ತೇಷಾಂ ಯಥಾ ವೈಕುಂಠವಾಸಿನಾಮ್ ॥ ೨೯ ॥
ತ್ವಂ ತು ದುಃಖಾತಿಸಂತಪ್ತಃ ಶೋಚಮಾನಶ್ಚ ದೃಶ್ಯಸೇ ।
ಸ್ವಾಮವಸ್ಥಾಂ ತತೋ ಬ್ರೂಹಿ ಮಹ್ಯಂ ಮಾಸ್ತು ವಿಲಂಬಿತಮ್ ॥ ೩೦ ॥

**ಬ್ರಾಹ್ಮಣನು ಹೇಳಿದನು—**

''ಏತಕ್ಕಾಗಿ ಇಲ್ಲಿ ಬಿದ್ದುಕೊಂಡಿದ್ದಿ? ಏತಕ್ಕಾಗಿ ದುಃಖ ಪಡುತ್ತಿದ್ದಿ? ನೀನು ಯಾರು? ಮತ್ತು ಏನನ್ನು ಬಯಸುತ್ತಿ? ಜಾಗ್ರತೆ ನನ್ನ ಮುಂದೆ ಎಲ್ಲವನ್ನೂ ಹೇಳು. ॥ ೨೭ ॥ ಭಗವದಿಚ್ಛೆ ಯಿಂದ ಇಲ್ಲಿ ಬಂದವರೆಲ್ಲರೂ ಶ್ರೀವೇಣೀಮಾಧವನ ಸಾನ್ನಿಧ್ಯದ ಕಾರಣದಿಂದ ಕೃತಕೃತ್ಯರಾಗಿ ಸ್ವರ್ಗಲೋಕದ ವಾಸಿಗಳಾಗುತ್ತಾರೆ. ॥ ೨೮ ॥ ಇಲ್ಲಿ ಇರುವ ಮನುಷ್ಯರೆಲ್ಲರೂ ದೇವರೂಪದಲ್ಲಿ ಇರುವವರೇ. ಅವರು ದುಃಖದ ತುಣುಕೂ ಇಲ್ಲದೆ ವೈಕುಂಠವಾಸಿಗಳಂತೆ ಇರುತ್ತಾರೆ. ॥ ೨೯ ॥ ನೀನು ಅತೀವ ವ್ಯಸನದಿಂದ ದುಃಖಪಡುತ್ತಿರುವಂತೆ ತೋರುತ್ತೀಯೆ. ನಿನ್ನ ಸ್ಥಿತಿಯನ್ನು ನಿಧಾನ ಮಾಡದೇ ನನಗೆ ಹೇಳು.'' ॥ ೩೦ ॥

ಜಯ ಉವಾಚ—

ಜನಸ್ಥಾನನಿವಾಸೀ ವೈ ನಾಪಿತೋಽಹಂ ಜಯಾಭಿಧಃ ।
ಅತ್ರ ಶ್ರೀಪತಿನಾ ಸಾಕಂ ಯಾತ್ರಾರ್ಥಂ ವೈ ಸಮಾಗತಃ ॥ ೩೧ ॥
ಧನಿನಾನೇನ ಸರ್ವಸ್ವಮತ್ರ ದತ್ತಂ ಯಥಾವಿಧಿ ।
ತದ್ಗ್ರಹೀತಂ ದ್ವಿಜೈಃ ಸರ್ವೈಃ ಪ್ರಹೃಷ್ಟೇನಾಂತರಾತ್ಮನಾ ॥ ೩೨ ॥
ಮಮ ಕೋಽಪಿ ನ ಗೃಹ್ಣಾತಿ ಸರ್ವಸ್ವಂ ಬ್ರಾಹ್ಮಣಃ ಪ್ರಭೋ ।
ಅತೋ ದಾರಿದ್ರ್ಯದುಃಖೇನ ವಿಲಪಾಮಿ ಮುಹುರ್ಮುಹುಃ ॥ ೩೩ ॥
ಆಕರ್ಣ್ಯೇತ್ಥಂ ವಚಸ್ತಸ್ಯ ಮಾಧವೋ ದ್ವಿಜರೂಪಭಾಕ್ ।
ಉವಾಚೈನಂ ಪ್ರಸನ್ನಾತ್ಮಾ ಸ್ಮಯಮಾನಮುಖಾಂಬುಜಃ ॥ ೩೪ ॥
ಸರ್ವಸ್ವಂ ಕಿಂ ದದಾಸಿ ತ್ವಂ ತನ್ಮಹ್ಯಂ ದೇಹಿ ಸತ್ವರಮ್ ।
ಗೃಹ್ಣಾಮ್ಯಹಮಶೇಷೇಣ ದರಿದ್ರಸ್ಯ ವಿಶೇಷತಃ ॥ ೩೫ ॥
ನ ಪ್ರಾಪ್ತಸ್ತ್ವಂ ಮಯಾ ಬ್ರಹ್ಮನ್ ಪೂರ್ವದುಷ್ಕೃತಕರ್ಮಣಾ ।
ಅತಃ ಸಂಸ್ಥಾಪಿತಂ ಭೂಮೌ ಸರ್ವಸ್ವಂ ತದ್ಗ್ರಹಾಣ ಭೋಃ ॥ ೩೬ ॥
ಇತ್ಯಾಕರ್ಣ್ಯ ವಚಸ್ತಸ್ಯಾನ್ವೇಷಯಾಮಾಸ ತದ್ದ್ವಿಜಃ ।
ನ ಲೇಭೇ ತತ್ರ ಕಿಮಪಿ ತದಾ ಪ್ರೋವಾಚ ನಾಪಿತಮ್ ॥ ೩೭ ॥

ಜಯನು ಹೇಳಿದನು—

ನಾನು ಜನಸ್ಥಾನದಲ್ಲಿ ವಾಸಿಸುತ್ತಿರುವ ಜಯನೆಂಬ ಕ್ಷೌರಿಕನು. ಇಲ್ಲಿಗೆ ಶ್ರೀಪತಿಯ ಜೊತೆಗೆ ಯಾತ್ರಾರ್ಥಿಯಾಗಿ ಬಂದಿದ್ದೇನೆ. ॥ ೩೧ ॥ ಶ್ರೀಮಂತನಾದ ಶ್ರೀಪತಿಯಿಂದ ಸರ್ವಸ್ವವೂ ವಿಧಿವತ್ತಾಗಿ ದಾನ ಮಾಡಲ್ಪಟ್ಟಿತು. ಅವನು ಕೊಟ್ಟಿದ್ದೆಲ್ಲ ಸಂತೋಷಚಿತ್ತದಿಂದ ಬ್ರಾಹ್ಮಣರುಗಳಿಂದ ಸ್ವೀಕರಿಸಲ್ಪಟ್ಟಿತು. ॥ ೩೨ ॥ ಬ್ರಾಹ್ಮಣಪ್ರಭುವೇ! ನನ್ನಿಂದ ಕೊಡಲ್ಪಟ್ಟ ದಾನವನ್ನು ಒಬ್ಬ ಬ್ರಾಹ್ಮಣನೂ ಸ್ವೀಕರಿಸಲಿಲ್ಲ. ಆದ್ದರಿಂದ ದಾರಿದ್ರ್ಯದ ದುಃಖದಿಂದ ಪದೇ ಪದೇ ಅಳುತ್ತಿದ್ದೇನೆ, ಎಂದು ಹೇಳಿದನು. ॥ ೩೩ ॥ ಅವನ ಈ ಮಾತನ್ನು ಕೇಳಿ ದ್ವಿಜರೂಪದಲ್ಲಿದ್ದ ಶ್ರೀಮಾಧವನು ಮಂದಹಾಸದಿಂದ ಕೂಡಿದ ಮುಖಕಮಲವುಳ್ಳವನಾಗಿ ಜಯನನ್ನು ಕುರಿತು ಈ ರೀತಿ ಹೇಳಿದನು. ॥ ೩೪ ॥ "ಏನನ್ನು ಸರ್ವಸ್ವರೂಪದಲ್ಲಿ ದಾನ ಮಾಡಬೇಕೆಂದಿರುವೆಯೋ ಅದನ್ನು ಬೇಗನೆ ನನಗೆ ಕೊಡು. ನೀನು ಕೊಡುವ ಸರ್ವಸ್ವವನ್ನು ನಾನು ಸ್ವೀಕರಿಸುವೆನು. ಅದರಲ್ಲೂ ದರಿದ್ರನು ಕೊಡುವುದನ್ನಂತೂ ವಿಶೇಷವಾಗಿ ಬಿಡುವುದೇ ಇಲ್ಲ" ಎಂದನು. ॥ ೩೫ ॥ "ನೀವು ನನ್ನ ಪೂರ್ವಜನ್ಮದ ಪಾಪದ ನಿಮಿತ್ತ ಮೊದಲೇ ನನ್ನ ಕಣ್ಣಿಗೆ ಬಿದ್ದಿಲ್ಲ. ಆದ್ದರಿಂದ ನನ್ನ ಸರ್ವಸ್ವವನ್ನೂ ಭೂಮಿಯಲ್ಲಿ ಹಾಕಿದ್ದೇನೆ. ಅದನ್ನು ಸ್ವೀಕರಿಸಿ." ॥ ೩೬ ॥ ಹೀಗೆ ಹೇಳಿದ ಆ ಮಾತನ್ನು ಕೇಳಿ ಆ ದ್ವಿಜನು ಆ ಸರ್ವಸ್ವದಾನದ ವಸ್ತುಗಾಗಿ ಅಲ್ಲೆಲ್ಲಾ ಹುಡುಕಾಡಿದನು. ಆದರೆ ಅಲ್ಲಿ ಏನೂ ಅವನಿಗೆ ಸಿಗಲಿಲ್ಲ. ಆಗ ಆ ಕ್ಷೌರಿಕನನ್ನು ಕುರಿತು ಹೀಗೆಂದನು. ॥ ೩೭ ॥

ಬ್ರಾಹ್ಮಣ ಉವಾಚ—

ನಾಪಿತ ತ್ವಂ ಮೃಷಾ ಬ್ರೂಷೇ ಕಿಮಪ್ಯತ್ರ ನ ದೃಶ್ಯತೇ ।
ತಚ್ಛ್ರುತ್ವಾ ಪಶ್ಯತಾಂ ತತ್ರ ತಾವುಭಾವಪಿ ಸರ್ವತಃ ॥ ೩೮ ॥
ಅದೃಷ್ಟ್ವಾಽಸೌ ಮಹದ್ದುಃಖಂ ಪ್ರಾಪ್ಯ ಮೂರ್ಛಾಂ ಜಗಾಮ ಹ ।
ತಾವನ್ಮಾಧವದೇವೋಽಸೌ ಪ್ರತ್ಯಕ್ಷಸ್ಸಮಜಾಯತ ॥ ೩೯ ॥

ಬ್ರಾಹ್ಮಣನು ಹೇಳಿದನು—

''ಕ್ಷೌರಿಕನೇ, ನೀನು ವೃಥಾ ಹೇಳುತ್ತಿದ್ದಿ. ಇಲ್ಲಿ ಏನೂ ಕಾಣಬರುತ್ತಿಲ್ಲ'' ಎಂದನು. ಅದನ್ನು ಕೇಳಿದ ಮೇಲೆ ಅವರಿಬ್ಬರೂ ಸೇರಿ ಅಲ್ಲೆಲ್ಲ ಹುಡುಕಾಡಿದರು. ॥ ೩೮ ॥ ಅವನ ಸರ್ವಸ್ವರೂಪ ದಾನವಸ್ತುಗಳು ಸಿಗದಿರಲು ಕ್ಷೌರಿಕನು ಬಹಳ ದುಃಖಪಟ್ಟವನಾಗಿ ಮೂರ್ಛೆ ಬಿದ್ದನು. ಆಗ ಮಾಧವದೇವರು ಆ ಕ್ಷೌರಿಕನ ಮುಂದೆ ಪ್ರತ್ಯಕ್ಷರಾದರು. ॥ ೩೯ ॥

ಮಾಧವ ಉವಾಚ—

ಉವಾಚ ಮಧುರಂ ವಾಕ್ಯಂ ಜಯಮುತ್ಥಾಪ್ಯ ಸಾದರಮ್ ।
ಮಾಧವೋಽಹಂ ಮಯಾ ಪೂರ್ವಂ ತ್ವತ್ಸರ್ವಸ್ವಮುರೀಕೃತಮ್ ॥ ೪೦ ॥
ಭಕ್ತ್ಯಾ ಪ್ರಿಯೋಽಸಿ ಮೇ ನೂನಂ ಶ್ರೀಪತೇರಪಿ ಮಾ ಶುಚಃ ।
ತತೋ ವಿಮಾನಮಾನೀಯ ತತ್ರ ಶ್ರೀಪತಿನಾಪಿತೌ ॥ ೪೧ ॥
ತತ್ಪತ್ನೀ ಚ ಸ್ವಯಂ ಸ್ಥಾಪ್ಯ ನಿನಾಯ ನಿಜಮಂದಿರಮ್ ।
ಅತಃ ಪ್ರಯಾಗೇ ಯೋ ದದ್ಯಾದ್ದಾನಂ ಸರ್ವಸ್ವಸಂಜ್ಞಕಮ್ ॥ ೪೨ ॥
ಸರ್ವದೋ ಮಾಧವಸ್ತಸ್ಯ ಸತ್ಯಂ ಸರ್ವಸ್ವದೋ ಭವೇತ್ ।
ಏವಂ ಸರ್ವಸ್ವದಾನಸ್ಯ ಮಾಹಾತ್ಮ್ಯಮನುವರ್ಣಿತಮ್ ॥ ೪೩ ॥
ಅನ್ಯಾನ್ಯಪಿ ಚ ದಾನಾನಿ ಕಾಮ್ಯಾನಿ ವಿಧಿಪೂರ್ವಕಮ್ ।
ಪ್ರಯಾಗೇಽತಿಪ್ರಶಸ್ತಾನಿ ವದಿಷ್ಯೇ ಪರಮರ್ಷಯಃ ॥ ೪೪ ॥

॥ ಇತಿ ದ್ವಿಷಷ್ಟಿತಮೋಽಧ್ಯಾಯಃ ॥

ಮಾಧವದೇವರು ಹೇಳಿದರು—

ಜಯನನ್ನು ಆದರದಿಂದ ಎಬ್ಬಿಸಿ ಮಾಧವದೇವರು ಮಧುರವಾಗಿ ''ನಾನು ಮಾಧವನು. ನಾನು ಈ ಮೊದಲೇ ನೀನಿತ್ತ ಸರ್ವಸ್ವದಾನವನ್ನು ಸ್ವೀಕಾರ ಮಾಡಿಯಾಯಿತು.'' ಎಂದು ಹೇಳಿದರು. ॥ ೪೦ ॥ ''ಶ್ರೀಪತಿಗಿಂತಲೂ ನೀನು ನನಗೆ ನಿನ್ನ ಭಕ್ತಿಯಿಂದ ಹೆಚ್ಚು ಪ್ರಿಯನಾಗಿದ್ದಿ. ಎಂದು ಹೇಳಿ ಅನಂತರ ವಿಮಾನವನ್ನು ತರಿಸಿ ಅದರಲ್ಲಿ ಜಯನನ್ನು, ಶ್ರೀಪತಿಯನ್ನು ಅವನ ಪತ್ನಿಯನ್ನು ತಾನೇ ವಿಮಾನದಲ್ಲಿ ಕೂಡಿಸಿ ವೈಕುಂಠದ ತನ್ನ ಮನೆಗೆ ಕರೆದುಕೊಂಡು ಹೋದನು. ಆದ್ದರಿಂದ ಪ್ರಯಾಗದಲ್ಲಿ ಯಾರು ಸರ್ವಸ್ವವೆಂಬ ದಾನವನ್ನು ಮಾಡುವರೋ ಅವರಿಗೆ ಮಾಧವನು ತನ್ನಸರ್ವಸ್ವವನ್ನೂ ಕೊಡುವನು. ಈ ರೀತಿಯಾಗಿ ಸರ್ವಸ್ವದಾನದ ಮಾಹಾತ್ಮ್ಯೆಯು

ವರ್ಣಿಸಲ್ಪಟ್ಟಿದೆ. ॥ ೪೧-೪೩ ॥ ಎಲೈ ಶ್ರೇಷ್ಠ ಮುನಿಗಳೇ! ಇನ್ನೂ ಪ್ರಯಾಗದಲ್ಲಿ ಮಾಡಬೇಕಾದ ಬೇರೆ ಬೇರೆ ದಾನಗಳನ್ನು ಮುಂದೆ ವರ್ಣಿಸುವೆನು. ॥ ೪೪ ॥

॥ ಅರವತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಿಷಷ್ಟಿತಮೋಽಧ್ಯಾಯಃ ॥ ೬೩ ॥

**ಸೂತ ಉವಾಚ—**

ಫಲದಾನಂ ಮಹಾಕಾಮ್ಯಂ ಪುತ್ರಪ್ರಾಪ್ತಿಕರಂ ಪರಮ್ ।
ಕೌಸಲ್ಯಾಯೈ ವಶಿಷ್ಠೇನ ಮುನಿನಾ ಪ್ರಾಗುದಾಹೃತಮ್ ॥ ೧ ॥
ಯದಾ ನ ಜಾಯತೇ ಪುತ್ರಃ ಕೌಸಲ್ಯಾ ತು ಸ್ವಕರ್ಮಣಃ ।
ವಶಿಷ್ಠಂ ಪ್ರಾರ್ಥಯಾಮಾಸ ದಂಡವತ್ಪ್ರಣಿಪತ್ಯ ಸಾ ॥ ೨ ॥

## ॥ ಅರವತ್ತಮೂರನೆಯ ಅಧ್ಯಾಯವು ॥

**ಸೂತರು ಹೇಳಿದರು—**

ನಮ್ಮ ಅಪೇಕ್ಷೆಗಳನ್ನೆಲ್ಲಾ ಮತ್ತು ಸಂತಾನವನ್ನೂ ಕೊಡತಕ್ಕ ಫಲದಾನವು ಅತ್ಯುತ್ತಮ-ವಾದುದು. ಕೌಸಲ್ಯೆಯಿಂದ ಪ್ರಾರ್ಥಿತರಾದ ವಸಿಷ್ಠಮುನಿಗಳಿಂದ ಈ ದಾನವು ಹೇಳಲ್ಪಟ್ಟಿದೆ. ॥ ೧ ॥ ತನ್ನ ಪ್ರಾಕೃತ ಕರ್ಮದ ದಶೆಯಿಂದ ಕೌಸಲ್ಯೆಗೆ ಪುತ್ರಸಂತಾನವಾಗದಿದ್ದಾಗ ಅವಳು ವಶಿಷ್ಠರಿಗೆ ಸಾಷ್ಟಾಂಗವೆರಗಿ ಪ್ರಾರ್ಥಿಸಿದಳು. ॥ ೨ ॥

**ಕೌಸಲ್ಯೋವಾಚ—**

ಭಗವನ್ಸರ್ವಶಾಸ್ತ್ರಜ್ಞ ಸಕಲಂ ತ್ವತ್ಪ್ರಸಾದತಃ ।
ಮಮಾಪಿ ನ ತು ಪುತ್ರೋಽಸ್ತಿ ತದುಪಾಯಂ ವದಸ್ವ ಮೇ ॥ ೩ ॥

**ಕೌಸಲ್ಯೆಯು ಹೇಳಿದಳು—**

"ಹೇ ಸರ್ವಶಾಸ್ತ್ರವನ್ನೂ ಬಲ್ಲ ಪೂಜ್ಯರೇ! ತಮ್ಮ ಅನುಗ್ರಹದಿಂದ ನನಗೆ ಎಲ್ಲವೂ ಇದ್ದರೂ ಪುತ್ರಸಂತಾನವಾಗಿಲ್ಲ, ಇದಕ್ಕೆ ಉಪಾಯವನ್ನು ಹೇಳಿರಿ." ಎಂದು ಕೇಳಿದಳು. ॥ ೩ ॥

**ವಶಿಷ್ಠ ಉವಾಚ—**

ವದಾಮ್ಯಹಮುಪಾಯಂ ತೇ ಪುತ್ರಪ್ರಾಪ್ತಿಕರಂ ಪರಮ್ ।
ಫಲದಾನಂ ವಿಧಾನೇನ ದ್ವಿಜೇಭ್ಯಃ ಪ್ರತ್ಯಹಂ ಕುರು ॥ ೪ ॥
ಪುಣ್ಯಮಾಸೇ ಸಮಾರಭ್ಯ ಯಾವದ್ವರ್ಷಂ ಸದಕ್ಷಿಣಮ್ ।
ಕೌಸಲ್ಯೇ ಫಲದಾನೇನ ಭವಿತಾ ತೇ ಸುತೋ ಹರಿಃ ॥ ೫ ॥
ತಥೇತಿ ತಂ ಪ್ರತಿಶ್ರುತ್ಯ ಗೃಹಂ ಗತ್ವಾ ಚಕಾರ ಸಾ ।
ನಾನಾಫಲಪ್ರದಾನಂ ಯತ್ತೇನಾಭೂದ್ರಾಘವಃ ಸುತಃ ॥ ೬ ॥
ಯದಾ ಪುನಸ್ಸ ಗತವಾನ್ಹಂತುಂ ರಾವಣರಾಕ್ಷಸಮ್ ।
ತದಾಪಿ ತದ್ವಿಯೋಗಾರ್ತಾ ಫಲದಾನಾತ್ತಮಾಪ ಸಾ ॥ ೭ ॥
ಫಲದಾನಮತಃ ಶ್ರೇಷ್ಠಂ ಮುನಿಭಿಸ್ಸಮುದಾಹೃತಮ್ ।
ವರ್ಷಮಾತ್ರಂ ತು ಯಃ ಕುರ್ಯಾತ್ಸ ಪುತ್ರಂ ಪ್ರಾಪ್ನುಯಾದ್ಧ್ರುವಮ್ ॥ ೮ ॥

ಪ್ರಯಾಗೇ ಮಾಘಮಾಸೇ ತನ್ಮಾಸಮಾತ್ರಮಪಿ ದ್ವಿಜಾಃ ।
ಅಥವೈಕದಿನೇ ಭಕ್ತ್ಯಾ ಕುರ್ವನ್ನಾಪ್ನೋತಿ ಸತ್ಸುತಮ್ ॥ ೯ ॥

ವಶಿಷ್ಠರು ಹೇಳಿದರು—

ಮಕ್ಕಳಾಗುವ ಉತ್ತಮವಾದ ಉಪಾಯವನ್ನು ಹೇಳುತ್ತೇನೆ, ಕೇಳು. ವಿಧಿವತ್ತಾಗಿ ಪ್ರತಿದಿವಸವೂ ಫಲದಾನವನ್ನು ಬ್ರಾಹ್ಮಣರುಗಳಿಗೆ ಕೊಡು. ॥ ೪ ॥ ಎಲೈ ಕೌಸಲ್ಯೆಯೇ! ಶುಭಮಾಸದಲ್ಲಿ ಆರಂಭಿಸಿ ಒಂದು ವರ್ಷವು ಮುಗಿಯುವವರೆಗೂ ದಕ್ಷಿಣೆಯ ಸಹಿತವಾಗಿ ಹಣ್ಣುಗಳ ದಾನವನ್ನು ಮಾಡು; ಇದರಿಂದ ನಿನಗೆ ಶ್ರೀಹರಿಯೇ ಮಗನಾಗಿ ಹುಟ್ಟುವನು. ॥ ೫ ॥ ಹಾಗೆಯೇ ಆಗಲಿ ಎಂದು ಹೇಳಿ ಅರಮನೆಗೆ ಬಂದು ಆದರಂತೆ ಫಲದಾನವನ್ನು ಮಾಡಿದಳು. ನಾನಾವಿಧವಾದ ಹಣ್ಣುಗಳನ್ನು ದಾನ ಕೊಟ್ಟಳು. ಇದರಿಂದ ಸಾಕ್ಷಾತ್ ಮಾಧವನೇ ಶ್ರೀರಾಮರೂಪದಲ್ಲಿ ಮಗನಾಗಿ ಅವತರಿಸಿದನು. ॥ ೬ ॥ ಪುನಃ ಶ್ರೀರಾಮನು ರಾವಣನೆಂಬ ರಾಕ್ಷಸನನ್ನು ಸಂಹರಿಸಲು ಕಾಡಿಗೆ ಹೋದಾಗ ಅವನ ವಿಯೋಗವನ್ನು ತಾಳಲಾರದೆ ಫಲದಾನವನ್ನು ಮಾಡಿದಳು; ಇದರಿಂದ ಮಗನನ್ನು ಪುನಃ ಪಡೆದಳು. ॥ ೭ ॥ ಎಲ್ಲ ಋಷಿಗಳೂ ಹೇಳುವಂತೆ, ಇಡೀ ವರ್ಷವೇ ಯಾರು ಫಲದಾನ ಮಾಡುತ್ತಾರೋ ಅವರಿಗೆ ಖಂಡಿತ ಪುತ್ರಸಂತಾನವಾಗುವುದು. ॥ ೮ ॥ ಎಲೈ ಬ್ರಾಹ್ಮಣೋತ್ತಮರೇ! ಪ್ರಯಾಗದಲ್ಲಿ ಒಂದು ತಿಂಗಳವರೆಗೆ ಅಥವಾ ಒಂದು ದಿವಸವಾದರೂ ಮಾಘಮಾಸದಲ್ಲಿ ಫಲದಾನ ಮಾಡಿದವರಿಗೆ ಖಂಡಿತವಾಗಿ ಪುತ್ರಸಂತಾನವಾಗುವುದು. ॥ ೯ ॥

ಋಷಯ ಊಚುಃ—

ಫಲದಾನಂ ಕಥಂ ಕಾರ್ಯಂ ಕಾನಿ ತಾನಿ ಫಲಾನಿ ಚ ।
ಬ್ರೂಹೀದಂ ಸಕಲಂ ಯೇನ ಕರ್ತುರ್ಭೂಯಾದಲಂ ಫಲಮ್ ॥ ೧೦ ॥

ಋಷಿಗಳು ಹೇಳಿದರು—

ಫಲದಾನವನ್ನು ಹೇಗೆ ಮಾಡುವುದು? ಆ ಫಲಗಳು ಯಾವುವು? ಇದರಿಂದ ಕರ್ತೃವಿಗೆ ಯಥೇಚ್ಛ ಫಲವು ಆಗುವುದಾದ್ದರಿಂದ ಇವುಗಳನ್ನೆಲ್ಲಾ ಹೇಳಿರಿ. ॥ ೧೦ ॥

ಸೂತ ಉವಾಚ—

ಸದಕ್ಷಿಣಾನಿ ಸರ್ವಾಣಿ ವಸ್ತ್ರೇಣಾಚ್ಛಾದಿತಾನಿ ಚ ।
ತಥಾ ಷೋಡಶಸಂಖ್ಯಾಕಾ ತ್ರಯೋ ವಾ ಚೈಕಮೇವ ವಾ ॥ ೧೧ ॥
ಸಂಕಲ್ಪ್ಯ ಫಲಮುಲ್ಲಿಖ್ಯ ಬ್ರಾಹ್ಮಣಾಯ ಯಥಾವಿಧಿ ।
ಪ್ರದದ್ಯಾನ್ನೈವ ಕುರ್ವೀತ ಪಾತ್ರಾಪಾತ್ರಪರೀಕ್ಷಣಮ್ ॥ ೧೨ ॥
ಶ್ರೀಫಲಂ ನಾಗರಿಂಗಂ ಚ ಖರ್ಜೂರಂ ದಾಡಿಮೀಫಲಮ್ ।
ಕ್ರಮುಕಂ ಮಾತುಲಿಂಗಂ ಚ ಕೂಷ್ಮಾಂಡಂ ಕರ್ಕರೀತ್ರಯಮ್ ॥ ೧೩ ॥
ಜಾತೀಫಲಂ ಕಾದಲೇಯಮಾಮ್ರಜಂಬೂಫಲಾನಿ ಚ ।
ನಿಂಬೂಫಲಂ ಬಾದರಂ ಚ ಮಿಷ್ಟಮನ್ಯಚ್ಚ ಯತ್ಫಲಮ್ ॥ ೧೪ ॥

ಪ್ರದೇಯಾನಿ ಯಥಾಲಾಭಂ ಮಾಘೇ ಪುತ್ರಫಲೇಚ್ಛುನಾ ।
ತೇನ ಪುತ್ರಫಲಾವಾಪ್ತಿರ್ಭವತ್ಯೇವ ನ ಸಂಶಯಃ ॥ ೧೫ ॥
ಏವಂ ತಾಂಬೂಲದಾನಂ ಚ ಪ್ರಯಾಗೇ ಸರ್ವಕಾಮದಮ್ ।
ನಾನಾಭೋಗಪ್ರದಂ ಮಾಘೇ ಕುರ್ವನ್ಮುಚ್ಯೇತ ಕಿಲ್ಬಿಷಾತ್ ॥ ೧೬ ॥

**ಸೂತರು ಹೇಳಿದರು—**

ಎಲ್ಲ ಫಲಗಳನ್ನೂ ವಸ್ತ್ರದಿಂದ ಮುಚ್ಚಿ ದಕ್ಷಿಣೆ ಸಹಿತ ದಾನ ಮಾಡಬೇಕು. ಈ ಹಣ್ಣುಗಳ ಸಂಖ್ಯೆ ಹದಿನಾರು, ಮೂರು ಅಥವಾ ಒಂದು ಕೂಡ ಇರಬಹುದು. ॥ ೧೧ ॥ ಫಲದಾನವನ್ನು ಉದ್ದೇಶಿಸಿ ಸಂಕಲ್ಪ ಮಾಡಿ ಪಾತ್ರತ್ವ ಅಥವಾ ಅಪಾತ್ರತ್ವವನ್ನು ವಿಚಾರ ಮಾಡದೇ ಬ್ರಾಹ್ಮಣನಿಗೆ ಕೊಡಬೇಕು. ॥ ೧೨ ॥ ಶ್ರೀಫಲ, ಹೇರಳೇಹಣ್ಣು, ಖರ್ಜೂರ, ದಾಡಿಂಬೆ, ಅಡಿಕೆ, ಮಾದಾಳದ ಹಣ್ಣು, ಕುಂಬಳಕಾಯಿ, ಮೂರು ಬಗೆಯ ಕರ್ತರೀ ಎಂಬ ಹಣ್ಣು (ಇದು ನೆಲದ ಮೇಲೆ ಬಳ್ಳಿಗಳಲ್ಲಿ ಬಿಡುತ್ತದೆ. ಈ ಹಣ್ಣು ಸ್ವಾದುವಾಗಿರುತ್ತದೆ.) ಜಾಜಿಕಾಯಿ, ನಾನಾಬಗೆಯ ಬಾಳೇಹಣ್ಣುಗಳು, ಮಾವಿನ ಹಣ್ಣುಗಳು, ನೇರಳೇಹಣ್ಣುಗಳು, ನಿಂಬೇಹಣ್ಣು, ಬೋರೇಹಣ್ಣು ಮತ್ತು ಸಿಹಿಯಾಗಿರತಕ್ಕ ದ್ರಾಕ್ಷಿ, ಕಿತ್ತಳೆ, ಮೊಸಂಬಿ, ಸ್ವಾದುವಾದ ಸೇಬು, ಪನ್ನೇರಳೆ ಮುಂತಾದವುಗಳು. ಆಯಾಯಾ ದೇಶಗಳಲ್ಲಿ ಆಯಾಯಾ ಕಾಲಗಳಲ್ಲಿ ಯಾವ ಯಾವ ಹಣ್ಣುಗಳು ಸಿಗುವುವೋ ಅವುಗಳನ್ನು ದಾನ ಮಾಡಬಹುದು. ಮಕ್ಕಳನ್ನು ಬಯಸುವವರು, ಮಾಘಮಾಸದಲ್ಲಿ ಇವುಗಳನ್ನು ಖಂಡಿತ ದಾನ ಮಾಡಬೇಕು. ಇದರಿಂದ ನಿಶ್ಚಯವಾಗಿ ಪುತ್ರಸಂತಾನವಾಗುವುದು. ॥ ೧೩-೧೫ ॥ ಇದೇ ರೀತಿ ಪ್ರಯಾಗದಲ್ಲಿ ಮಾಡಿದ ತಾಂಬೂಲದ ದಾನವು ಎಲ್ಲ ಅಪೇಕ್ಷಿತಫಲಗಳನ್ನು ಕೊಡುವುದು. ನಾನಾವಿಧವಾದ ಭೋಗವಸ್ತುಗಳನ್ನು ಮಾಘಮಾಸದಲ್ಲಿ ದಾನ ಮಾಡಿದರೆ ಪಾಪಗಳ ಪರಿಹಾರವಾಗುವುದು. ॥ ೧೬ ॥

**ಋಷಯ ಊಚುಃ—**

ತಾಂಬೂಲಸ್ಯ ಪ್ರದಾನೇನ ಕಸ್ಮಾನ್ಮುಚ್ಯೇತ ಕಿಲ್ಬಿಷಾತ್ ।
ವಿದಾಂ ವರ ವದಾಸ್ಮಭ್ಯಂ ಪ್ರವೃತ್ತಿರ್ಯೇನ ವೈ ಭವೇತ್ ॥ ೧೭ ॥

**ಋಷಿಗಳು ಹೇಳಿದರು—**

ತಾಂಬೂಲವನ್ನು ದಾನ ಮಾಡುವುದರಿಂದ ಹೇಗೆ ಪಾಪಪರಿಹಾರವಾಗುವುದು? ತಿಳಿದವರಲ್ಲಿ ಶ್ರೇಷ್ಠರಾದ ತಾವು ಇದನ್ನು ವಿವರಿಸಿ. ಇದರಿಂದ ಈ ದಾನದ ಬಗ್ಗೆ ಒಲವು ಉಂಟಾಗುವುದು. ॥ ೧೭ ॥

**ಸೂತ ಉವಾಚ—**

ತಾಂಬೂಲಭಕ್ಷಣೇನೈವ ಯತ್ಪಾಪಂ ಜಾಯತೇ ನೃಣಾಮ್ ।
ತತ್ಪಾಪಪ್ರಶಮಾಯೈವ ಕುರ್ಯಾತ್ತಾಂಬೂಲದಾನಕಮ್ ॥ ೧೮ ॥
ಪತ್ರಮೂಲಾಗ್ರನಾಡೀನಾಂ ಚೂರ್ಣಪತ್ರಸ್ಯ ಭಕ್ಷಣಾತ್ ।
ರಾತ್ರೌ ಖದಿರಸಾರಸ್ಯ ಪಾಪಾದ್ದಾರಿದ್ರ್ಯಮಶ್ನುತೇ ॥ ೧೯ ॥

ಅತಸ್ತತ್ಪಾಪನಾಶಾರ್ಥಂ ದಾರಿದ್ರ್ಯಪ್ರಶಮಾಯ ಚ ।
ಪ್ರತಿಸಂವತ್ಸರಂ ಕುರ್ಯಾತ್ತಸ್ಯ ದಾನಂ ವಿಧಾನತಃ ॥ ೨೦ ॥
ಯೇನ ನೈವ ಕೃತಂ ದಾನಂ ಪ್ರಯಾಗಂ ಪ್ರಾಪ್ಯ ದುರ್ಲಭಮ್ ।
ಕರ್ತವ್ಯಂ ತೇನ ವಿಧಿನಾ ವಿಶೇಷಾತ್ತಪಸಿ ದ್ವಿಜಾಃ ॥ ೨೧ ॥
ಮಕರಸಂಕ್ರಮಣೇಽಮಾಯಾಂ ಪಂಚಮ್ಯಾಮಚಲೇಽಹನಿ ।
ಪೂರ್ಣಾಯಾಂ ಕುಂಭಸಂಕ್ರಾಂತೌ ಯಸ್ಮಿನ್ಕಸ್ಮಿನ್ದಿನೇಽಥವಾ ॥ ೨೨ ॥
ಸೌವರ್ಣಂ ರಾಜತಂ ತಾಮ್ರಂ ಪೈತಲಂ ವಾ ವಿಚಿತ್ರಿತಮ್ ।
ಯಥಾಶಕ್ತಿ ವಿನಿರ್ಮಾಯ ಪರ್ಣಾಧಾರಂ ಮನೋಹರಮ್ ॥ ೨೩ ॥
ತತಸ್ಸೌವರ್ಣಪತ್ರಾಣಿ ರಾಜತಾನಿ ಫಲಾನಿ ಚ ।
ವೈಡೂರ್ಯಂ ಖದಿರಂ ಚೂರ್ಣಂ ಕರಂಡಸ್ಥಂ ಚ ಮೌಕ್ತಿಕಮ್ ॥ ೨೪ ॥
ಪೂರ್ಣಸಂಖ್ಯಾ ತು ವಿಜ್ಞೇಯಾ ಸಹಸ್ರಂ ಶತಮೇವ ವಾ ।
ಘೋಟಾಖದಿರಚೂರ್ಣಾನಿ ತದ್ಯೋಗ್ಯಾನಿ ಪ್ರಕಲ್ಪಯೇತ್ ॥ ೨೫ ॥
ಯದ್ವಾ ತಾಂಬೂಲಪರ್ಣಾನಿ ಸಮೂಲಾಗ್ರಾಣಿ ಶಕ್ತಿತಃ ।
ಯಥಾಸಂಖ್ಯಾನಿ ಚಾದಾಯ ಸ್ಥಾಪಯೇತ್ತತ್ರ ಭಾಜನೇ ॥ ೨೬ ॥
ಗಲಂತೀರ್ವಿವಿಧಾಃ ಕೃತ್ವಾ ತತ್ರ ಪೂಗೀಫಲಾದಿಕಮ್ ।
ಸರ್ವಂ ನಿಕ್ಷಿಪ್ಯ ಸಾಹಿತ್ಯಂ ತತ್ರೈವ ಸ್ಥಾಪಯೇಚ್ಚ ತಾಃ ॥ ೨೭ ॥
ಜಾತೀಫಲಲವಂಗೈಲಾಜಾತೀಪತ್ರಾದಿಸಾಧನಮ್ ।
ಪೂಗಶಾತನಯಂತ್ರಂ ಚ ಕಿಂಕಿಣೀಜಾಲಭೂಷಿತಮ್ ॥ ೨೮ ॥
ಚಿತ್ರವಸ್ತ್ರೇಣ ಚಾಚ್ಛಾದ್ಯ ಸರ್ವಮೇತತ್ಸದಕ್ಷಿಣಮ್ ।
ಸಪತ್ನೀಕಾಯ ವಿಪ್ರಾಯ ದದ್ಯಾನ್ಮಂತ್ರೇಣ ಭಕ್ತಿತಃ ॥ ೨೯ ॥
ಯಥಾ ಸೋಪಸ್ಕರಂ ತುಭ್ಯಂ ದತ್ತಂ ತಾಂಬೂಲಮುತ್ತಮಮ್ ।
ಗೃಹಾಣ ಕುರು ಮಾ ಪಾಪಂ ದ್ವಿಜವರ್ಯ ನಮೋಽಸ್ತು ತೇ ॥ ೩೦ ॥
ಪೂರ್ಣಮೂಲಾಗ್ರನಾಡೀನಾಂ ಪೂರ್ಣಪತ್ರಸ್ಯ ಮೋಹತಃ ।
ರಾತ್ರೌ ಖದಿರಸಾರಸ್ಯ ಯನ್ಮಯಾ ಭಕ್ಷಣಂ ಕೃತಮ್ ॥ ೩೧ ॥
ರಥ್ಯಾರಾಜಪಥಾದೌ ಚ ತ್ರೇತಾಗಾರೇ ಸುರಾಲಯೇ ।
ತಾಂಬೂಲಂ ಯನ್ಮಯಾ ಭುಕ್ತಂ ಶಯ್ಯಾಯಾಂ ಚಾಪ್ಯಸಾಕ್ಷಿಕಮ್ ॥ ೩೨ ॥
ತತೋ ಜಾತಂ ಚ ಯತ್ಪಾಪಂ ದಾರಿದ್ರ್ಯಂ ಚ ತತೋಽಪಿ ಯತ್ ।
ತತ್ಸರ್ವಂ ನಾಶಮಾಯಾತು ಮಾಧವಶ್ಚ ಪ್ರಸೀದತು ॥ ೩೩ ॥
ಏವಂ ಯಃ ಕುರುತೇ ದಾನಂ ನರೋ ನಾರ್ಯಥವಾದೃತಾ ।
ಪ್ರಯಾಗೇ ಮಾಘಮಾಸೇ ತು ಮುಚ್ಯತೇ ಪಾತಕಾದಸೌ ॥ ೩೪ ॥

ಆಯುರಾರೋಗ್ಯಸೌಭಾಗ್ಯಪುತ್ರಪೌತ್ರಧನಾದಿಕಮ್ ।
ಲಭತೇ ವಿವಿಧಾನ್ಭೋಗಾನಿಹ ಸ್ವರ್ಗೇ ಚ ಪುಷ್ಕಲಾನ್ ॥ ೩೫ ॥
ಸಾಹಿತ್ಯಕರಣಾಶಕ್ತೌ ಪೂಗೀಫಲಯುತಾನಿ ಚ ।
ಪರ್ಣಾನ್ಯೇವ ಯಥಾಸಂಖ್ಯಂ ಪ್ರದೇಯಾನಿ ದ್ವಿಜಾಯ ತೇ ॥ ೩೬ ॥
ಸ್ವಯಮೇವ ಸಮರ್ಥಾನಿ ನಾಗವಲ್ಲೀದಲಾನ್ಯಲಮ್ ।
ಕಿಮು ಪೂಗಾದಿಯುಕ್ತಾನಿ ಸರ್ವದೋಷನಿವಾರಣೇ ॥ ೩೭ ॥
ತಾಂಬೂಲದಾನಂ ವಿಧಿವದೇವಂ ವಸ್ಸಮುದಾಹೃತಮ್ ।
ಕಥಯಾಮಿ ಕಿಮನ್ಯದ್ಯತ್ತದ್ಬ್ರೂತಾಮಲದರ್ಶನಾಃ ॥ ೩೮ ॥

॥ ಇತಿ ತ್ರಿಷಷ್ಟಿತಮೋಽಧ್ಯಾಯಃ ॥

**ಸೂತರು ಹೇಳಿದರು—**

ತಾಂಬೂಲವನ್ನು ತಿನ್ನುವುದರಿಂದಲೇ ಮನುಷ್ಯರಿಗೆ ಏನು ಪಾಪವು ಬರುವುದೋ ಅದರ ಪರಿಹಾರಕ್ಕಾದರೂ ತಾಂಬೂಲವನ್ನು ದಾನ ಮಾಡಬೇಕು. ॥ ೧೮ ॥ ವೀಳ್ಯದೆಲೆಯನ್ನು ತುಂಬು, ತುದಿ, ಅಗ್ರ, ನಾಡಿಗಳ ಸಮೇತ ಮತ್ತು ಹರಕು ಎಲೆ ಇವುಗಳನ್ನು ತಿನ್ನುವುದರಿಂದ ಹಾಗೂ ರಾತ್ರಿಯಲ್ಲಿ ಕಾಚು ಅಥವಾ ಖಾದಿರದ ರಸದಲ್ಲಿ ಬೇಯಿಸಿರುವ ಅಡಿಕೆಯನ್ನೂ ತಿನ್ನುವುದರಿಂದ ಉಂಟಾಗುವ ಪಾಪದಿಂದ ದಾರಿದ್ರ್ಯವು ಬರುವುದು. ॥ ೧೯ ॥ ಆದ್ದರಿಂದ ಆ ಪಾಪಗಳ ಪರಿಹಾರಾರ್ಥವಾಗಿಯೂ ದಾರಿದ್ರ್ಯದ ನಿವಾರಣೆಗಾಗಿಯೂ ತಾಂಬೂಲದಾನಾದಿಗಳನ್ನು ಪ್ರತಿವರ್ಷವೂ ವಿಧಿವತ್ತಾಗಿ ಮಾಡಬೇಕು. ॥ ೨೦ ॥ ಯಾರಿಂದ ಈ ದಾನವು ಮಾಡಲ್ಪಟ್ಟಿಲ್ಲವೋ ಅವನು ಬಹಳ ಕಷ್ಟದಿಂದ ಲಭ್ಯವಾಗುವ ಪ್ರಯಾಗದಲ್ಲಿ ವಿಶೇಷವಾಗಿ ವಿಧಿಪೂರ್ವಕವಾಗಿ ಮಾಘಮಾಸದಲ್ಲಿ ಈ ದಾನವನ್ನು ಮಾಡಲೇಬೇಕು. ॥ ೨೧ ॥ ಮಾಘದಲ್ಲಿ ಮಕರ ಸಂಕ್ರಾಂತಿಯಲ್ಲಿ, ಅಮಾವಾಸ್ಯೆಯಲ್ಲಿ, ಪಂಚಮಿಯಲ್ಲಿ, ಶನಿವಾರದಲ್ಲಿ, ಹಗಲಿನಲ್ಲಿ, ಪೌರ್ಣಮಾದಲ್ಲಿ, ಕುಂಭಸಂಕ್ರಮಣದಲ್ಲಿ ಮತ್ತು ಯಾವ ದಿನವು ಅನುಕೂಲವಾಗುವುದೋ ಆ ದಿನದಲ್ಲಿ ಈ ದಾನವನ್ನು ಕೊಡಬಹುದು. ॥ ೨೨ ॥ ವೀಳ್ಯದೆಲೆಯನ್ನು ಇಡುವ ಪಾತ್ರೆಯನ್ನು ಬಂಗಾರ, ಬೆಳ್ಳಿ, ತಾಮ್ರ ಅಥವಾ ಹಿತ್ತಾಳೆಯಿಂದ ಯಥಾಶಕ್ತಿಯಾಗಿ ಮಾಡಿಸಬೇಕು. ಅದರ ಸುತ್ತಲೂ ಆಕರ್ಷಕವಾದ ಚಿತ್ರಗಳನ್ನು ಕೆತ್ತಿಸಿರಬೇಕು. ॥ ೨೩ ॥ ಆ ತಟ್ಟೆಯಲ್ಲಿ ಬಂಗಾರದ ಎಲೆಗಳು, ಬೆಳ್ಳಿಯ ಹಣ್ಣುಗಳು, ವೈಡೂರ್ಯಾದಿಗಳ ಅಡಿಕೆ ಪುಡಿ ಮತ್ತು ಮುತ್ತಿನ ಸುಣ್ಣದ ಕರಂಡಕವನ್ನು ಇಟ್ಟಿರಬೇಕು. ॥ ೨೪ ॥ ಅದರಲ್ಲಿ ಪೂರ್ಣಸಂಖ್ಯೆಯಲ್ಲಿ ವೀಳ್ಯದೆಲೆಗಳನ್ನು ಇಡಬೇಕು. (ಅಂದರೆ ಸಾವಿರದೆಲೆಗಳು ಅಥವಾ ನೂರು ಎಲೆಗಳು) ಅಡಿಕೆ, ವೀಳ್ಯದೆಲೆಗಳು, ಸುಣ್ಣ ಇವನ್ನೆಲ್ಲ ಅದಕ್ಕೆ ತಕ್ಕಂತೆ ಇಡಬೇಕು. ॥ ೨೫ ॥ ಅಥವಾ ತುಂಬು ಮತ್ತು ಅಗ್ರಗಳಿರುವ ವೀಳ್ಯದೆಲೆಗಳನ್ನು ತನ್ನ ಶಕ್ತ್ಯಾನುಸಾರ ಆ ಪಾತ್ರೆಯಲ್ಲಿ ಇಡಬಹುದು. ॥ ೨೬ ॥ ಅದರೊಳಗೆ ಅಡಿಕೆ, ಲವಂಗ, ಜಾಪತ್ರೆ, ಏಲಕ್ಕಿ, ಕೇಸರಿ, ಕಲ್ಲುಸಕ್ಕರೆ ಚೂರುಗಳು, ಒಣಕೊಬ್ಬರಿ ಹಳಕು ಮುಂತಾದವುಗಳನ್ನು ಮತ್ತು ಅಡಕೋತ್ತನ್ನು ಇಡಬೇಕು. ತಟ್ಟೆಯು ಸಣ್ಣಸಣ್ಣ ಗೆಜ್ಜೆಗಳಿಂದ ಅಲಂಕೃತವಾಗಿದ್ದು ಝುಣಝುಣ ಶಬ್ದ ಮಾಡತಕ್ಕದ್ದಾಗಿರಬೇಕು. ॥ ೨೭-೨೮ ॥ ಅದರೊಳಗೆ ದಕ್ಷಿಣೆಯನ್ನು ಇಟ್ಟು ಬಣ್ಣಬಣ್ಣದ ವಸ್ತ್ರದಿಂದ

ಆ ತಟ್ಟೆಯನ್ನು ಮುಚ್ಚಬೇಕು. ಹೀಗಿರುವ ತಾಂಬೂಲ ಕರಂಡಿಗೆಯನ್ನು ತನ್ನ ಹೆಂಡತಿಸಹಿತನಾಗಿ ನಿಷ್ಠನಾದ ಬ್ರಾಹ್ಮಣನಿಗೆ ಸಂಕಲ್ಪ ಮಾಡಿ ಮಂತ್ರಪುರಸ್ಸರವಾಗಿ ಭಕ್ತಿಯಿಂದ ದಾನ ಮಾಡಬೇಕು. ॥ ೨೯ ॥ ''ಹೇ ದ್ವಿಜವರ್ಯರೇ! ಆವಶ್ಯಕವಾದ ಸಾಮಗ್ರಿಗಳೊಡನೆ ತಾಂಬೂಲದ ಭರಣಿಯನ್ನು ದಾನ ಮಾಡುತ್ತಿದ್ದೇನೆ, ಅದನ್ನು ಸ್ವೀಕರಿಸಿ ನನ್ನ ಎಲ್ಲ ಪಾಪಗಳನ್ನೂ ಪರಿಹರಿಸಿ'' ಎಂದು ಹೇಳಿ ದಾನ ಮಾಡಬೇಕು. ॥ ೩೦ ॥ ಈ ದಾನಪ್ರದಾನ ಮಾಡುವಾಗ ''ವೀಳ್ಯದೆಲೆಯನ್ನು ತಿನ್ನುವ ಆಸೆಯಲ್ಲಿ ನಾನು ವೀಳ್ಯದೆಲೆಯ ತುಂಬನ್ನೂ ಅಗ್ರವನ್ನೂ ಮತ್ತು ನಾಡಿಗಳನ್ನೂ ಸಹ ತೆಗೆಯದೆ ಪೂರ ಎಲೆಯನ್ನು ಭಕ್ಷಿಸಿದ್ದೇನೆ. ರಾತ್ರಿಯಲ್ಲಿ ಖಾದಿರರಸವನ್ನು ಭಕ್ಷಿಸಿದ್ದೇನೆ. ॥ ೩೧ ॥ ಬೀದಿಗಳಲ್ಲಿ, ರಾಜಮಾರ್ಗಗಳಲ್ಲಿ ಅಗ್ನಿಹೋತ್ರಾಗಾರದಲ್ಲಿ ಮತ್ತು ಹೆಂಡದ ಮನೆಗಳಲ್ಲಿ ತಿಳಿಯದೆ ಹಾಸಿಗೆಗಳಲ್ಲಿ ತಾಂಬೂಲಚರ್ವಣ ಮಾಡಿರುವುದು, ಇವೇ ಮೊದಲಾದವುಗಳ ದೆಶೆಯಿಂದ ಉಂಟಾಗಿರುವ ಪಾಪದ ಫಲವಾಗಿ ಬಂದಿರುವ ನನ್ನ ದಾರಿದ್ರ್ಯವೆಲ್ಲವೂ ನಾಶವಾಗಿ ಶ್ರೀಮಾಧವನು ನನ್ನ ವಿಷಯದಲ್ಲಿ ಸಂತುಷ್ಟನಾಗಲಿ'' ಎಂದು ಬ್ರಾಹ್ಮಣರೆದುರಿಗೆ ಹೇಳಿ ತಾಂಬೂಲದ ಕರಂಡವನ್ನು ದಾನ ಮಾಡಬೇಕು. ॥ ೩೨-೩೩ ॥ ಈ ರೀತಿಯಾಗಿ ಯಾವ ಮನುಷ್ಯನು ಮಾಘಮಾಸದಲ್ಲಿ ಪ್ರಯಾಗದಲ್ಲಿ ತಾಂಬೂಲದ ದಾನವನ್ನು ಮಾಡುವನೋ ಅವನು ತನ್ನ ಸಮಸ್ತ ಪಾಪಗಳಿಂದಲೂ ವಿಮೋಚಿತನಾಗುವನು. ॥ ೩೪ ॥ ಅಂಥವನು ಆಯುರಾರೋಗ್ಯ, ಸೌಭಾಗ್ಯ, ಪುತ್ರ, ಪೌತ್ರ ಮತ್ತು ಐಶ್ವರ್ಯಾದಿಗಳನ್ನು ಪಡೆದು ನಾನಾವಿಧಭೋಗಗಳನ್ನು ಈ ಲೋಕದಲ್ಲಿಯೂ ಮತ್ತು ಸ್ವರ್ಗಲೋಕದಲ್ಲಿಯೂ ಅನುಭವಿಸುವನು. ॥ ೩೫ ॥ ಎಲ್ಲ ಸಾಮಗ್ರಿಗಳನ್ನು ದಾನ ಮಾಡಲು ಅಶಕ್ತರಾದವರು ಕೇವಲ ಮೇಲೆ ಸೂಚಿಸಿರುವ ಸಂಖ್ಯೆಯಷ್ಟು ವೀಳ್ಯದೆಲೆ ಮತ್ತು ಅಡಿಕೆಗಳನ್ನಾದರೂ ದಾನ ಮಾಡಬೇಕು. ॥ ೩೬ ॥ ಬರೇ ವೀಳ್ಯದೆಲೆಯ ದಾನವೇ ಎಲ್ಲ ಪಾಪಗಳನ್ನು ಪರಿಹಾರ ಮಾಡಲು ಸಮರ್ಥವಾಗಿರುವಾಗ ಇನ್ನು ಅಡಿಕೆ ಮತ್ತು ಇತರ ಸಾಮಗ್ರಿಗಳನ್ನು ಇಟ್ಟು ದಾನ ಮಾಡಿದ ಮೇಲೆ ಹೇಳತಕ್ಕದ್ದೇನಿದೆ? (ಇದು ಸ್ತೋತ್ರಪರವೆಂದು ತಿಳಿಯಬೇಕು. ಏಕೆಂದರೆ, ಕೇವಲ ವೀಳ್ಯದೆಲೆಯನ್ನು ದಾನ ಮಾಡಬಾರದು). ॥ ೩೭ ॥ ಈಗ ತಾಂಬೂಲ ದಾನದ ವಿಧಿಯನ್ನು ನಿಮಗೆ ವಿವರವಾಗಿ ಹೇಳಿದ್ದಾಯಿತು. ಅದ್ಭುತವಾದ ತಿಳುವಳಿಕೆಯುಳ್ಳ ನಿಮಗೆ ಇನ್ನೇನನ್ನು ಹೇಳಲಿ? ॥ ೩೮ ॥

॥ ಅರವತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುಃಷಷ್ಟಿತಮೋಽಧ್ಯಾಯಃ ॥ ೬೪ ॥

**ಋಷಯ ಊಚುಃ—**

ತಾಂಬೂಲವಲ್ಲೀ ಪ್ರೋಕ್ತಾ ಸಾ ನಾಗವಲ್ಲ್ಯಭಿಧಾಂ ಕುತಃ ।
ಸಂಪ್ರಾಪ್ತೇತಿ ಸಮುತ್ಪತ್ತಿಂ ತಸ್ಯಾ ಕಥಯ ನಃ ಪ್ರಭೋ ॥ ೧ ॥

## ॥ ಅರವತ್ತನಾಲ್ಕನೆಯ ಅಧ್ಯಾಯವು ॥

**ಶೌನಕಾದಿ ಋಷಿಗಳು ಹೇಳಿದರು—**

ತಾಂಬೂಲದಲ್ಲಿ ಉಪಯೋಗಿಸುವ ವೀಳ್ಯದೆಲೆಯು ನಾಗವಲ್ಲೀ ಎಂಬ ಹೆಸರಿನಿಂದ ಕರೆಯಲ್ಪಡುವುದು ಎಂದು ತಾವು ಹೇಳಿದಿರಿ. ಈ ಹೆಸರು ಹೇಗೆ ಬಂದಿತು ಎನ್ನುವುದನ್ನು ಹೇಳಿರಿ. ॥ ೧ ॥

**ಸೂತ ಉವಾಚ—**

ನಾಗವಲ್ಲೀಸಮುತ್ಪತ್ತಿಂ ಶೃಣುಧ್ವಂ ಶೌನಕಾದಯಃ ।
ವಕ್ಷ್ಯಾಮಿ ಗುಣದೋಷೌ ಚ ಸ ಕಥಂ ವಿಸ್ತರಾದಹಮ್ ॥ ೨ ॥
ಯದಾ ದೇವಾಸುರೈಃ ಸ್ವಾರ್ಥೇ ಮಥಿತಃ ಕ್ಷೀರಸಾಗರಃ ।
ನಿಃಸೃತಾನಿ ತದಾ ತಸ್ಮಾತ್ಸುರತ್ನಾನಿ ಚತುರ್ದಶ ॥ ೩ ॥
ಗೃಹೀತಾನಿ ಯಥಾಯೋಗ್ಯಂ ತಾನಿ ದೇವಾಸುರೈಸ್ತತಃ ।
ಮೋಹಿನ್ಯಾ ವಂಚಯನ್ದೈತ್ಯಾನಮೃತಂ ಸ್ವಾನಪಾಯಯತ್ ॥ ೪ ॥
ಪೀತಶೇಷಾಮೃತಘಟಂ ವಿಷ್ಣುರಿಂದ್ರಸ್ಯ ನಂದನೇ ।
ಸಮಸ್ತದೇವಕಾರ್ಯಾರ್ಥಂ ಸ್ಥಾಪಯಾಮಾಸ ಗೋಪಿತಮ್ ॥ ೫ ॥
ಐರಾವತಶ್ಚ ನಾಗೇಂದ್ರೋ ಬದ್ಧಸ್ತತ್ರೈವ ತಿಷ್ಠತಿ ।
ತದ್ದಾನಾಮೃತಸಂಯೋಗಾದ್ವಲ್ಲ್ಯೇಕಾ ಸಮಭೂದ್ವನೇ ॥ ೬ ॥
ಸಾವರ್ಧತ ಲತಾ ರಮ್ಯಾ ಪ್ರತ್ಯಹಂ ನವಪಲ್ಲವಾ ।
ತದುದ್ಭವಾನಿ ಪತ್ರಾಣಿ ದದುರಿಂದ್ರಾಯ ರಕ್ಷಕಾಃ ॥ ೭ ॥
ಕೋಮಲಾನಿ ಸುಗಂಧೀನಿ ತಸ್ಯಾಃ ಪತ್ರಾಣಿ ವಾಸವಃ ।
ಧನ್ವಂತರಿಂ ಸಮಾಹೂಯ ತಾನಿ ತಸ್ಮೈ ಹ್ಯದರ್ಶಯತ್ ॥ ೮ ॥
ಸ ದೃಷ್ಟ್ವೋವಾಚ ದೇವೇಂದ್ರಸ್ತದುತ್ಪತ್ತಿಂ ನಿಶಮ್ಯ ಚ ।
ತೇಷಾಂ ಗುಣಂ ಚ ದೋಷಂ ಚ ಚಿಕಿತ್ಸಕಶಿರೋಮಣಿಃ ॥ ೯ ॥

**ಸೂತರು ಹೇಳಿದರು—**

ಎಲೈ ಶೌನಕಾದಿಗಳೇ! ನಾಗವಲ್ಲೀ ಎಂಬ ಹೆಸರಿನ ಉತ್ಪತ್ತಿಯನ್ನು, ಅದರ ಗುಣದೋಷಗಳನ್ನು ಅದಕ್ಕೆ ಸಂಬಂಧಪಟ್ಟ ಕಥೆಯೊಡನೆ ವಿಸ್ತಾರವಾಗಿ ಹೇಳುವೆನು. ಕೇಳಿರಿ. ॥ ೨ ॥

ದೇವಾಸುರರು ತಮ್ಮ ತಮ್ಮ ಸ್ವಾರ್ಥಕ್ಕಾಗಿ ಕ್ಷೀರಸಾಗರವನ್ನು ಕಡೆದಾಗ ಶ್ರೇಷ್ಠವಾದ ಹದಿನಾಲ್ಕು ರತ್ನಗಳು ಹುಟ್ಟಿದವು. ॥ ೩ ॥ ಅವುಗಳನ್ನು ಅವರವರ ಯೋಗ್ಯತಾನುಸಾರ ಅವರೆಲ್ಲರೂ ಹಂಚಿಕೊಂಡರು. ದೈತ್ಯರನ್ನು ವಂಚಿಸಿ ಮೋಹಿನಿಯ ರೂಪದಲ್ಲಿದ್ದ ಶ್ರೀಹರಿಯು ತನ್ನವರಾದ ದೇವತೆಗಳಿಗೆ ಅಮೃತವನ್ನು ಪ್ರಾಶನ ಮಾಡಿಸಿದನು. ॥ ೪ ॥ ವಿಷ್ಣುವು ದಾನ ಮಾಡಿ ಮಿಕ್ಕಿದ್ದ ಅಮೃತದ ಮಡಿಕೆಯನ್ನು ಎಲ್ಲ ದೇವತೆಗಳ ಕಾರ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಇಂದ್ರನ ನಂದನವನದಲ್ಲಿ ಅಡಗಿಸಿಟ್ಟನು. ॥ ೫ ॥ ಸಮುದ್ರಮಥನದಿಂದ ಹುಟ್ಟಿದ ಐರಾವತವನ್ನೂ ಆ ನಂದನವನದಲ್ಲಿ ಕಟ್ಟಿದ್ದರು. ಆಗ ಈ ಅಮೃತದ ಕಳಶದಿಂದ ಸೋರಿದ ಅಮೃತವು ಐರಾವತವು ಸೋರಿಸಿದ ಮದರಸದೊಡನೆ ಬೆರತು ನಂದನವನದ ಭೂಮಿಯಲ್ಲಿ ಬಿದ್ದು ಅದರಿಂದ ಬಳ್ಳಿಯೊಂದು ಹುಟ್ಟಿತು. ॥ ೬ ॥ ಅದು ದಿನೇ ದಿನೇ ಹೊಸ ಹೊಸ ಎಲೆಗಳನ್ನು ಬಿಟ್ಟು ದೊಡ್ಡ ಬಳ್ಳಿಯಾಗಿ ರಮ್ಯವಾಗಿ ಬೆಳೆಯಿತು; ವನದ ಕಾವಲುಗಾರರು ಅದರ ಎಲೆಗಳನ್ನು ಇಂದ್ರನಿಗೆ ಕೊಟ್ಟರು. ॥ ೭ ॥ ಧನ್ವಂತರಿಯ ರೂಪದಲ್ಲಿದ್ದ ಶ್ರೀಹರಿಗೆ ಇಂದ್ರನು ಈ ಬಳ್ಳಿಯ ಕೋಮಲವಾದ ಮತ್ತು ಸುವಾಸನೆಯುಳ್ಳ ಎಲೆಗಳನ್ನು ತೋರಿಸಿದನು. ॥ ೮ ॥ ಅದನ್ನು ನೋಡಿದ ವೈದ್ಯ ಶಿರೋಮಣಿಯಾದ ಧನ್ವಂತರಿಯು ಅದರ ಉತ್ಪತ್ತಿಯ ವಿವರವನ್ನು ಅರಿತು ಅದರ ಗುಣದೋಷಗಳನ್ನು ದೇವೇಂದ್ರನಿಗೆ ಮನವರಿಕೆ ಮಾಡಿಕೊಟ್ಟನು. ॥ ೯ ॥

ಧನ್ವಂತರಿರುವಾಚ—

ಅದ್ಭುತೇಯಂ ಲತಾ ಜಾತಾ ಮಹೇಂದ್ರ ತವ ನಂದನೇ ।
ಅಮೃತಸ್ರವನಾಗೇಂದ್ರದಾನಸ್ರವಣತಃ ಶುಭಾ ॥ ೧೦ ॥
ನಾನಾರೋಗಹರಾ ಪಥ್ಯಾ ಜಾತಾ ಪೀಯೂಷಯೋಗತಃ ।
ದಾನಯೋಗಾದಸೌ ದಿವ್ಯಾ ಮಾದಕಾನಂಗವರ್ಧಿನೀ ॥ ೧೧ ॥
ನಾಗವಲ್ಲೀತಿ ವಿಖ್ಯಾತಿಂ ನಾಗಾಲಯಸಮುದ್ಭವಾ ।
ಯಾಸ್ಯತೇ ಸರ್ವಲೋಕೇಷು ವಿಶೇಷಂ ಚಾವಧಾರಯ ॥ ೧೨ ॥
ಪೂಗಖಾದಿರಚೂರ್ಣಾನಾಂ ಯೋಗಾತ್ತಾಂಬೂಲನಾಮತಾಮ್ ।
ಪ್ರಾಪ್ಸ್ಯತೇಽಸೌ ಶಚೀಕಾಂತ ತ್ರಯೋದಶಗುಣಾನ್ವಿತಮ್ ॥ ೧೩ ॥
ತತೋ ಲೇಖರ್ಷಭಃ ಪ್ರೀತ್ಯಾ ಕೃತ್ವಾ ತಾಂಬೂಲಮುತ್ತಮಮ್ ।
ತಸ್ಯೈ ಪುಲೋಮಜಾಯೈ ಚ ದತ್ವಾ ಸ್ವಯಮಭಕ್ಷಯತ್ ॥ ೧೪ ॥
ಭಕ್ಷಯಿತ್ವಾ ಚ ತಾಂಬೂಲಂ ಮುಖಸೌರಭ್ಯಕಾರಕಮ್ ।
ಅನಂಗವರ್ಧನಂ ಸ್ವಾದು ಸರ್ವೇ ಹರ್ಷಮುಪಾಗತಾಃ ॥ ೧೫ ॥
ನಾಗವಲ್ಲೀಂ ತತಃ ಶಕ್ರೋ ನಾನೋಪಾಯೈರರಕ್ಷಯತ್ ।
ಅಮೃತಾದಿಪ್ರಭಾವೇನ ಸಾಪಿ ನಂದನಮಾವೃಣೋತ್ ॥ ೧೬ ॥
ಕದಾಚಿದ್ಭೂಪತಿಃ ಶೌರೀ ಸುಧರ್ಮಾಯಾಂ ಜಗಾಮ ಹ ।
ತಾಂಬೂಲಂ ದದೃಶೇ ತತ್ರ ಕಾಮ್ಯಂ ಭೋಗ್ಯಮನುತ್ತಮಮ್ ॥ ೧೭ ॥

**ಧನ್ವಂತರಿಯು ಹೇಳಿದನು—**

''ಎಲೈ ಇಂದ್ರನೇ, ಅದ್ಭುತವಾದ ಈ ಬಳ್ಳಿಯು ನಿನ್ನನಂದನವನದಲ್ಲಿ ಹುಟ್ಟಿದೆ. ಐರಾವತದ ಮದಜಲವೂ ಅಮೃತವೂ ಸೇರಿ ಹುಟ್ಟಿರುವ ಈ ಲತೆಯು ಮಂಗಳಕರವಾದುದು. ॥ ೧೦ ॥ ಅಮೃತದ ಸಂಬಂಧವಿರುವುದರಿಂದ ಪಥ್ಯರೂಪದಲ್ಲಿದ್ದು ನಾನಾರೋಗನಿವಾರಕವಾಗಿದೆ. ದೇವ ಯೋಗ್ಯವಾದದ್ದಾಗಿದೆ ಮತ್ತು ಐರಾವತದ ಮದಜಲದ ಸಂಬಂಧವಿರುವುದರಿಂದ ಕಾಮನೆಗಳನ್ನು ವೃದ್ಧಿಮಾಡುವ ಗುಣವನ್ನು ಹೊಂದಿದೆ. ॥ ೧೧ ॥ ಆನೆಯನ್ನು ಕಟ್ಟುವ ಶಾಲೆಯಲ್ಲಿ ಬೆಳೆದಿರುವುದ ರಿಂದ ''ನಾಗವಲ್ಲೀ'' ಎಂದು ವಿಶಿಷ್ಟವಾದ ಹೆಸರಿನಿಂದ ಪ್ರಸಿದ್ಧವಾಗಿದೆ. ಇದೇ ಇದರ ವೈಶಿಷ್ಟ್ಯವು. ॥ ೧೨ ॥ ಎಲೈ ಶಚೀಪತಿಯೇ! ಅಡಿಕೆ, ಸುಣ್ಣ ಇವುಗಳ ಸಂಬಂಧದಿಂದ ಇದಕ್ಕೆ ''ತಾಂಬೂಲ'' ಎಂಬ ಹೆಸರು ಬರುತ್ತದೆ; ಮತ್ತು ಇದರಲ್ಲಿ ಹದಿಮೂರು ಗುಣಗಳಿವೆ. ॥ ೧೩ ॥ ಅನಂತರ ಇಂದ್ರನು ಉತ್ತಮವಾದ ತಾಂಬೂಲವನ್ನು ತಯಾರು ಮಾಡಿಸಿ ಪುಲೋಮೆಯ ಮಗಳಾದ ಶಚೀ ದೇವಿಗೆ ಪ್ರೇಮದಿಂದ ಕೊಟ್ಟನು. ತಾನೂ ಭಕ್ಷಿಸಿದನು. ॥ ೧೪ ॥ ಅನಂತರ ಈ ಬಗೆಯ ತಾಂಬೂಲವನ್ನು ಮದ್ದು ಬಾಯಿಗೆ ಸುವಾಸನೆಯನ್ನೂ ಕಾಮಪ್ರಚೋದನೆಯನ್ನೂ ಉಂಟು ಮಾಡುವ ಪ್ರಭಾವವಿರುವುದರಿಂದ ಎಲ್ಲರೂ ಆನಂದಪಟ್ಟರು. ॥ ೧೫ ॥ ಅನಂತರ ಇಂದ್ರನು ನಾನಾವಿಧದಲ್ಲಿ ಇದನ್ನು ರಕ್ಷಿಸಿದನು. ಅಮೃತ ಮೊದಲಾದುದರ ಪ್ರಭಾವದಿಂದ ಅದು ನಂದನವನ ವನ್ನೆಲ್ಲಾ ವ್ಯಾಪಿಸಿತು. ॥ ೧೬ ॥ ಒಂದಾನೊಂದು ಸಲ ಶೌರಿ ಎಂಬ ರಾಜನು ಇಂದ್ರನ ಸಭೆಯಾದ ಸುಧರ್ಮವನ್ನು ಹೊಕ್ಕನು. ಅಲ್ಲಿ ಕಾಮ್ಯವೂ ಭೋಗ್ಯವೂ, ಅತ್ಯುತ್ತಮವೂ ಆದ ತಾಂಬೂಲವನ್ನು ಕಂಡನು. ॥ ೧೭ ॥

**ಸೂತ ಉವಾಚ—**

ಕದಾಚಿದಿಂದ್ರೋ ಭೂಪಾಲಂ ಪ್ರಸನ್ನಃ ಪ್ರತ್ಯಭಾಷತ ।<br>
ಪ್ರತ್ಯಹಂ ಯಾಸಿ ಶೌರೇ ತ್ವಂ ಶ್ರಮಸ್ತೇ ಜಾಯತೇ ಮಹಾನ್ ॥ ೧೮ ॥<br>
ದೇವಯಾನಂ ಗೃಹಾಣೇದಮಾರುಹ್ಯಾಯಾಹಿ ಗಚ್ಛ ಚ ।<br>
ಭೂಮೌ ಪ್ರಿಯತರಸ್ತ್ವಂ ಮೇ ಬುದ್ಧ್ಯಾ ಶೌರ್ಯಾದಿಕೈರ್ಗುಣೈಃ ॥ ೧೯ ॥<br>
ಭೂಯಃ ಪ್ರಸನ್ನಂ ದೇವೇಂದ್ರಂ ಕದಾಚಿಚ್ಛೌರಿರಬ್ರವೀತ್ ।<br>
ದದಸ್ವೈತಾನಿ ಮಘವನ್ನಾಗವಲ್ಲೀದಲಾನಿ ಮೇ ॥ ೨೦ ॥<br>
ಸಕಾಂಡಾನಿ ದಲಾನ್ಯಸ್ಮೈ ತತೋ ದತ್ತಾನಿ ಜಿಷ್ಣುನಾ ।<br>
ಶೌರಿರಾನೀಯ ತಾನ್ಯತ್ರಾನ್ರೋಪಯತ್ಸ್ವವನೇ ಶುಭೇ ॥ ೨೧ ॥<br>
ತತ್ರಾಪಿ ವವೃಧೇಽತ್ಯಂತಂ ಸಾ ವಲ್ಲೀ ಜಲಸೇಚನೈಃ ।<br>
ತದುದ್ಭವಾನಿ ಪರ್ಣಾನಿ ತಾಂಬೂಲೀಕೃತ್ಯ ಜಕ್ಷತಿ ॥ ೨೨ ॥<br>
ಸ ಚಾನ್ಯಸ್ಮೈ ಸ ಚಾನ್ಯಸ್ಮೈ ಸ ಚಾನ್ಯಸ್ಮಾ ಇತಿ ಕ್ರಮಾತ್ ।<br>
ದತ್ವಾ ಪ್ರಚಾರಯಾಮಾಸ ಸಮಸ್ತೇ ಕ್ಷಿತಿಮಂಡಲೇ ॥ ೨೩ ॥<br>
ಪ್ರಮತ್ತಾ ಅಭವನ್ಸರ್ವೇ ಭೋಗಿತಾಂಬೂಲಭಕ್ಷಣಾತ್ ।<br>
ವರ್ಣಾಶ್ರಮಕ್ರಿಯಾಸ್ಸರ್ವಾಃ ಲುಪ್ತಾಸ್ತದ್ಭಕ್ಷಣಾತ್ತದಾ ॥ ೨೪ ॥

**ತತೋ ದೇವಗಣಾಸ್ಸರ್ವೇ ಯಜ್ಞಭಾಗವಿವರ್ಜಿತಾಃ ।**
**ಪೀಡ್ಯಮಾನಾ ಕ್ಷುಧಾರ್ತಾಶ್ಚ ಗತ್ವಾ ಪ್ರೋಚುಃ ಪಿತಾಮಹಮ್ ॥ ೨೫ ॥**

**ಸೂತನು ಹೇಳಿದನು—**

ಒಂದು ಸಲ ದೇವೇಂದ್ರನು ಆ ಶೌರಿರಾಜನನ್ನು ಕುರಿತು ಸಂತುಷ್ಟನಾಗಿ ಹೇಳಿದನು. "ಎಲೈ ಶೌರಿಯೇ, ಪ್ರತಿದಿನವೂ ಬಂದು ಹೋಗುವ ನಿನಗೆ ಬಹಳ ಶ್ರಮವಾಗುವುದು. ॥೧೮॥ ಈ ದೇವಯಾನವನ್ನು ಸ್ವೀಕರಿಸು. ಅದರಿಂದ ಬಂದು ಹೋಗುತ್ತಿರು. ನಿನ್ನ ಬುದ್ಧಿಯಿಂದಲೂ ಶೌರ್ಯದಿಂದಲೂ ಭೂಲೋಕದಲ್ಲಿಯೇ ನೀನು ನನಗೆ ಬಹಳ ಬೇಕಾದವನು." ಎಂದು. ॥ ೧೯ ॥ ಪ್ರಸನ್ನನಾದ ಇಂದ್ರನನ್ನು ಕುರಿತು ಶೌರಿಯು ಹೇಳಿದನು "ಇಂದ್ರನೇ! ಈ ವೀಳ್ಯದೆಲೆಗಳನ್ನು ನನಗೆ ಕೊಡು." ॥ ೨೦ ॥ ಆಗ ಕಾಂಡಸಹಿತವಾಗಿ ಇಂದ್ರನು ವೀಳ್ಯದೆಲೆಗಳನ್ನು ಶೌರಿಗೆ ಕೊಟ್ಟನು. ಶೌರಿಯು ತನ್ನ ವನದಲ್ಲಿ ಇದನ್ನು ಹುಟ್ಟಿಹಾಕಿ ಬೆಳೆಸಿದನು. ॥ ೨೧ ॥ ನೀರು ಹಾಕಿದ್ದರಿಂದ ಆ ಬಳ್ಳಿಯು ಅಲ್ಲಿ ಚೆನ್ನಾಗಿ ಬೆಳೆಯಿತು. ಅಲ್ಲಿ ಬೆಳೆದ ಎಲೆಗಳಿಂದ ತಾಂಬೂಲವನ್ನು ಮಾಡಿ ಎಲ್ಲರೂ ತಿಂದರು. ॥ ೨೨ ॥ ಅವನು ಇನ್ನೊಬ್ಬನಿಗೆ, ಆ ಇನ್ನೊಬ್ಬನು ಮತ್ತೊಬ್ಬನಿಗೆ, ಮತ್ತೊಬ್ಬನು ಮಗದೊಬ್ಬಳಿಗೆ ಹೀಗೆ ಕೊಡುತ್ತಾ ಅದು ಇಡೀ ಭೂಮಂಡಲದಲ್ಲಿ ಪ್ರಚಾರವಾಯಿತು. ॥೨೩॥ ಈ ಭೋಗಪ್ರಧಾನವಾದ ತಾಂಬೂಲವನ್ನು ಭಕ್ಷಣ ಮಾಡುತ್ತಾ ಜನರು ಪ್ರಮತ್ತರಾದರು ಮತ್ತು ವರ್ಣಾಶ್ರಮದ ಕ್ರಿಯೆಗಳೆಲ್ಲವು ಲೋಪವಾದುವು. ॥ ೨೪ ॥ ಆಗ ದೇವಗಣಗಳೆಲ್ಲರೂ ಯಜ್ಞದ ಹವಿಸ್ಸಿಲ್ಲದವರಾದರು ಮತ್ತು ಹಸಿವಿನಿಂದ ಬಾಧಿತರಾಗಿ ಚತುರ್ಮುಖ ಬ್ರಹ್ಮದೇವರ ಹತ್ತಿರ ಹೋದರು. ॥ ೨೫ ॥

**ದೇವಾ ಊಚುಃ—**

**ಮರ್ತ್ಯಲೋಕೇ ಸುರಶ್ರೇಷ್ಠ ನಷ್ಟಾ ಧರ್ಮಾಸ್ತಥಾಧ್ವರಾಃ ।**
**ಉನ್ಮತ್ತಾಸ್ಸಕಲಾ ಲೋಕಾ ಜಾತಾಸ್ತಾಂಬೂಲಭಕ್ಷಣಾತ್ ॥ ೨೬ ॥**
**ತಸ್ಮಾತ್ಕುರು ಪ್ರಸಾದಂ ತೇ ಯೇನಾಸ್ಮಾಕಂ ಸುಖಂ ಭವೇತ್ ।**
**ಇತಿ ದೇವವಚಃ ಶ್ರುತ್ವಾ ಬ್ರಹ್ಮೋಚೇ ಸಸ್ಮಿತಾನನಃ ॥ ೨೭ ॥**

**ದೇವತೆಗಳು ಹೇಳಿದರು—**

"ಭೂಲೋಕದಲ್ಲಿ ತಾಂಬೂಲಭಕ್ಷಣದಿಂದ ಜನರೆಲ್ಲರೂ ಉನ್ಮತ್ತರಾಗಿದ್ದಾರೆ ಮತ್ತು ಧರ್ಮಗಳು ನಷ್ಟವಾಗಿವೆ. ಯಾಗಗಳಂಥೂ ಇಲ್ಲವೇ ಇಲ್ಲ. ॥ ೨೬ ॥ ಆದ್ದರಿಂದ ನಮಗೆ ಹಿತವಾಗುವಂತೆ ಮಾಡು" ಎಂದರು. ಆಗ ಬ್ರಹ್ಮನು ಮಂದಹಾಸದಿಂದ ದೇವತೆಗಳನ್ನು ಕುರಿತು ಹೇಳಿದನು. ॥ ೨೭ ॥

**ಬ್ರಹ್ಮೋವಾಚ—**

**ಕಿಂಚಿತ್ಕಾಲಂ ಪ್ರತೀಕ್ಷಧ್ವಂ ಯಜ್ಞಭಾಗಾನ್ಪಜಿಷ್ಯಥ ।**
**ಇತಿ ಬ್ರಹ್ಮವಚಃ ಶ್ರುತ್ವಾ ಸರ್ವೇ ದೇವಾ ಪ್ರಹರ್ಷಿತಾಃ ॥ ೨೮ ॥**
**ಮತ್ವಾ ಸ್ವಕಾರ್ಯಂ ಸಂಪನ್ನಂ ಜಗ್ಮುಃ ಸ್ವಸ್ವಗೃಹಾನ್ಮುದಾ ।**
**ಧ್ಯಾಯಂತಃ ಸಂಸ್ಥಿತಾ ನಿತ್ಯಂ ಕದಾ ಲಪ್ಸ್ಯಾಮಹೇ ಸುಖಮ್ ॥ ೨೯ ॥**

ಕದಾಚಿದಥ ದಾರಿದ್ರ್ಯಂ ಭೂಮಿಲೋಕೇಽತಿಪೀಡಿತಮ್ ।
ನ ಲೇಭೇ ಕುತ್ರಚಿತ್ಸ್ಥಾನಂ ಶೌರೌ ಶಾಸತಿ ರಾಜನಿ ॥ ೩೦ ॥
ಸರ್ವೇಽಪಿ ಸುಖಿನೋ ಲೋಕೇ ಧನವಂತಃ ಶತಾಯುಷಃ ।
ನ ದರಿದ್ರಸ್ತದಾ ಕೋಽಪಿ ಚತುರ್ವರ್ಣೇಷು ದೃಶ್ಯತೇ ॥ ೩೧ ॥
ತದಾ ವಿಪ್ರಸ್ವರೂಪೇಣ ದಾರಿದ್ರ್ಯಂ ಬ್ರಹ್ಮಣೋಽಂತಿಕಮ್ ।
ಗತ್ವಾ ನತ್ವಾ ತತಸ್ತಸ್ಮೈ ವ್ಯಸನಂ ಸ್ವಮವೋಚತ ॥ ೩೨ ॥

ಬ್ರಹ್ಮದೇವರು ಹೇಳಿದರು—

''ಸ್ವಲ್ಪಕಾಲ ನಿರೀಕ್ಷಿಸಿರಿ, ನಿಮ್ಮ ನಿಮ್ಮ ಯಜ್ಞಭಾಗಗಳನ್ನು ಹೊಂದುತ್ತೀರಿ.'' ಎಂದು ಬ್ರಹ್ಮದೇವರು ಹೇಳಿದರು. ಈ ರೀತಿಯಾದ ಬ್ರಹ್ಮನ ಮಾತನ್ನು ಕೇಳಿ ದೇವತೆಗಳು ಸಂತುಷ್ಟರಾದರು. ॥ ೨೮ ॥ ತಮ್ಮ ಕಾರ್ಯವು ಆಯಿತೆಂದು ತಿಳಿದು ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿ, ಯಾವಾಗ ಸುಖವನ್ನು ಪಡೆದೇವೆಂದು ಚಿಂತಿಸುತ್ತಾ ಇದ್ದರು. ॥ ೨೯ ॥ ಶೌರಿಯು ರಾಜ್ಯವಾಳುತ್ತಿರಲು ದಾರಿದ್ರ್ಯವು ಭೂಲೋಕದಲ್ಲಿ ಅತ್ಯಂತ ಪೀಡೆಗೆ ಒಳಪಟ್ಟಿತು. ಆದಕ್ಕೆ ಭೂಲೋಕದಲ್ಲಿ ಎಲ್ಲಿಯೂ ಸ್ಥಾನವಿಲ್ಲದೇ ಹೋಯಿತು. ॥ ೩೦ ॥ ಎಲ್ಲರೂ ಸುಖವಾಗಿದ್ದರು, ಧನಿಕರಾಗಿದ್ದರು ಮತ್ತು ನೂರು ವರ್ಷ ಆಯುಷ್ಯವುಳ್ಳವರಾದರು. ನಾಲ್ಕುವರ್ಣದವರಲ್ಲಿ ಒಬ್ಬ ದರಿದ್ರನೂ ಇರಲಿಲ್ಲ. ॥ ೩೧ ॥ ಆಗ ಬ್ರಾಹ್ಮಣ ವೇಷದಿಂದ ದರಿದ್ರನು ಬ್ರಹ್ಮದೇವರನ್ನು ಸಮೀಪಿಸಿ, ಅವರಿಗೆ ನಮಸ್ಕರಿಸಿ ತನ್ನ ವ್ಯಸನವನ್ನು ಹೇಳಿಕೊಂಡನು. ॥ ೩೨ ॥

ಬ್ರಾಹ್ಮಣ ಉವಾಚ—

ಬ್ರಹ್ಮನ್ಭೂಮಂಡಲೇ ಕ್ವಾಪಿ ಮಯಾ ಸ್ಥಾನಂ ನ ಲಭ್ಯತೇ ।
ತಾಂಬೂಲಭಕ್ಷಣಾತ್ಸರ್ವೇ ಪ್ರಮತ್ತಾ ಧನಿನೋಽಭವನ್ ॥ ೩೩ ॥
ಕ್ವಾಹಂ ವಸಾಮಿ ತದ್ಬ್ರೂಹಿ ಸಸ್ತ್ರೀಕಸ್ಸಸುತಃ ಪ್ರಭೋ ।
ಕುಟುಂಬಂ ಸೀದತೇಽತ್ಯರ್ಥಂ ಕಿಂ ಕರೋಮಿ ಪಿತಾಮಹ ॥ ೩೪ ॥

ಬ್ರಾಹ್ಮಣನು ಹೇಳಿದನು—

''ಸ್ವಾಮಿಯೇ! ಭೂಮಂಡಲದಲ್ಲಿ ಎಲ್ಲಿಯೂ ನನಗೆ ನನ್ನ ಸ್ಥಾನವನ್ನು ಸಿಗುತ್ತಿಲ್ಲ. ತಾಂಬೂಲಭಕ್ಷಣದ ದಶೆಯಿಂದ ಎಲ್ಲರೂ ಪ್ರಮತ್ತರಾಗಿದ್ದಾರೆ ಮತ್ತು ಧನಿಕರೂ ಆಗಿದ್ದಾರೆ. ॥ ೩೩ ॥ ನಾನು ನನ್ನ ಹೆಂಡತಿ ಮಕ್ಕಳೊಡನೆ ಎಲ್ಲಿ ವಾಸ ಮಾಡಲಿ? ಅದನ್ನು ತಿಳಿಸಿರಿ. ನನ್ನ ಕುಟುಂಬವು ಅತ್ಯಂತ ಘಾಸಿ ಪಡುತ್ತಿದೆ, ನಾನು ಏನು ಮಾಡಲಿ? ಎಂದು ಕೇಳಿದನು. ॥ ೩೪ ॥

ಬ್ರಹ್ಮೋವಾಚ—

ಸ್ಥಾನಂ ತುಭ್ಯಂ ಪ್ರದಾಸ್ಯಾಮಿ ಕಿಮರ್ಥಂ ಪರಿಖಿದ್ಯಸೇ ।
ಸಕುಟುಂಬಸ್ಯ ತೇ ವಾಸೋ ಭವೇದಾನಂದತೋ ಯಥಾ ॥ ೩೫ ॥
ತಾಂಬೂಲೇ ಭವತಾ ವಾಸೋ ಯಥಾಯೋಗ್ಯಂ ಕುಟುಂಬಿನಾ ।
ಕರ್ತವ್ಯಃ ಕ್ರಮಶಃ ಪಶ್ಚಾತ್ಸರ್ವತ್ರಾಪಿ ಕರಿಷ್ಯಸಿ ॥ ೩೬ ॥

ಚೂರ್ಣಪತ್ರೇ ತ್ವಯಾ ಸ್ಥೇಯಂ ಕುಬುದ್ಧ್ಯಾ ತವ ಭಾರ್ಯಯಾ ।
ಪರ್ಣಾಗ್ರೇ ಪರ್ಣಮೂಲೇ ತು ಕಲಹೇನ ಸುತೇನ ತೇ ॥ ೩೭ ॥
ಕ್ಷುಧಾಯಾಸ್ತವ ಪುತ್ರ್ಯಾಸ್ತು ಪರ್ಣನಾಡೀಷು ಸಂಸ್ಥಿತಿಃ ।
ಆಸ್ತಾಂ ಖಾದಿರಸಾರೇ ತು ರಾತ್ರೌ ಸಮುದಿತಾ ಸ್ಥಿತಿಃ ॥ ೩೮ ॥
ಇತಿ ಬ್ರಹ್ಮವಚಃ ಶ್ರುತ್ವಾ ವಿಪ್ರೋ ಭೂಲೋಕಮಾಗತಃ ।
ಉವಾಸ ಸಕುಟುಂಬೋಽಸೌ ತಾಂಬೂಲೇಷು ಯಥಾಯಥಮ್॥ ೩೯ ॥
ತದಾರಭ್ಯ ಜನಾ ಯೇ ಯೇಽಶುದ್ಧತಾಂಬೂಲಭಕ್ಷಕಾಃ ।
ತೇ ಸರ್ವೇ ಪಾಪಿನೋಽಭೂವನ್ದರಿದ್ರಾಶ್ಚ ಸಹಸ್ರಶಃ ॥ ೪೦ ॥
ಜಾನತೋಽಜಾನತೋ ವಾಪಿ ಭಕ್ಷದೋಷಸ್ಯ ಶಾಂತಯೇ ।
ಪ್ರಾಗುಕ್ತವಿಧಿನಾ ದಾನಂ ಕರ್ತವ್ಯಂ ಪಾಪಭೀರುಭಿಃ ॥ ೪೧ ॥
ತಸ್ಮಾದ್ವಿಚಾರ್ಯ ತಾಂಬೂಲಂ ಭಕ್ಷಣೀಯಂ ವಿವೇಕಿಭಿಃ ।
ಅನ್ಯಥಾ ಪಾತಕೋತ್ಪತ್ತ್ಯಾ ದಾರಿದ್ರ್ಯಂ ಭವತಿ ಧ್ರುವಮ್ ॥ ೪೨ ॥
ಬ್ರಹ್ಮಚಾರೀ ಚ ವಿಧವಾ ಸಂನ್ಯಾಸೀ ಚ ರಜಸ್ವಲಾ ।
ತ್ಯಜೇಯುರ್ನಿಯತಂ ಹ್ಯೇತೇ ತಾಂಬೂಲಂ ಚ ಪರೇ ಜನಾಃ ॥ ೪೩ ॥
ಗೃಹಸ್ಥಾಃ ಸಧವಾ ಸ್ತ್ರೀ ವಾನುಪೇತಾ ಬಾಲಕಾದಯಃ ।
ಅವಶ್ಯಂ ಭಕ್ಷಯಂತ್ಯೇತೇ ತಾಂಬೂಲಂ ಶ್ರೀಕರಂ ಪರಮ್ ॥ ೪೪ ॥
ಮುಖಂ ತಾಂಬೂಲಹೀನಂ ತು ಗೃಹಿಣೋ ಯಸ್ಯ ದೃಶ್ಯತೇ ।
ತನ್ಮುಖಂ ತು ವಿಜಾನೀಯಾತ್ಕೃಪಣಸ್ಯೇವ ಮಂದಿರಮ್ ॥ ೪೫ ॥
ದ್ವಾತ್ರಿಂಶಪತ್ರಕೈರ್ಯುಕ್ತಂ ಪೂಗೀಫಲಸಮನ್ವಿತಮ್ ।
ಏಲಾಲವಂಗಕರ್ಪೂರಯುಕ್ತಂ ತಾಂಬೂಲಮುಚ್ಯತೇ ॥ ೪೬ ॥
ಏತದ್ದಾನಂ ಪ್ರಯಾಗೇ ಚೇದ್ಯಥಾಶಕ್ತಿ ಯಥಾವಿಧಿ ।
ಯಃ ಕರೋತಿ ನರೋ ಭಕ್ತ್ಯಾ ಸ ಮುಚ್ಯೇತ್ಯೆನಸೋಽಖಿಲಾತ್ ॥ ೪೭ ॥
ಅನ್ನದೋ ದೀರ್ಘಮಾಯುಷ್ಯಂ ಸೌಮನಸ್ಯಂ ಚ ಪುಷ್ಪದಃ ।
ಸೌಭಾಗ್ಯಂ ಚಂದನಾದಿಭ್ಯೋ ನೈರ್ಮಲ್ಯಂ ದೀಪದೋ ಲಭೇತ್ ॥ ೪೮ ॥
ಏತಚ್ಚತುಷ್ಟಯಂ ದಾನಾತ್ತಾಂಬೂಲಸ್ಯ ಲಭೇನ್ನರಃ ।
ಇಹ ಲೋಕೇ ಪರತ್ರಾಪಿ ಸರ್ವದಾ ಸುಖಮಶ್ನುತೇ ॥ ೪೯ ॥
ನಾಗವಲ್ಲೀಸಮುತ್ಪತ್ತಿರ್ದಾನಭಕ್ಷಣಯೋಃ ಫಲಮ್ ।
ಮಯಾ ನಿರೂಪಿತಂ ಸರ್ವಂ ಕಿಮನ್ಯತ್ಪ್ರವದಾಮಿ ವಃ ॥ ೫೦ ॥

॥ ಇತಿ ಚತುಃಷಷ್ಟಿತಮೋಽಧ್ಯಾಯಃ ॥

ಬ್ರಹ್ಮದೇವರು ಹೇಳಿದರು—

"ಏತಕ್ಕಾಗಿ ದುಃಖಪಡುತ್ತೀಯೆ ನಿನಗೆ ಸ್ಥಾನವನ್ನು ಕೊಡುತ್ತಿದ್ದೇನೆ. ಅಲ್ಲಿ ಕುಟುಂಬ ಸಮೇತನಾದ ನಿನ್ನ ಜೀವನವು ಆನಂದಮಯವಾಗುವುದು. ॥ ೩೫ ॥ ಕುಟುಂಬಸಹಿತನಾಗಿ ನೀನು ತಾಂಬೂಲದಲ್ಲಿ ವಾಸಮಾಡು, ಕ್ರಮವಾಗಿ ಎಲ್ಲವೂ ಸರಿಹೋಗುವುದು. ॥ ೩೬ ॥ ವೀಳ್ಯದೆಲೆ ಗಳಲ್ಲಿ ನೀನು ಇರಬೇಕು, ಕುಬುದ್ಧಿ ಎಂಬ ಹೆಸರಿನ ನಿನ್ನ ಹೆಂಡತಿಯು ವೀಳ್ಯದೆಲೆಯ ತೊಟ್ಟಿನಲ್ಲಿಯೂ ಮತ್ತು ಅಗ್ರದಲ್ಲಿ ನಿನ್ನ ಮಗನಾದ ಕಲಹನೂ ಇರಲಿ. ॥ ೩೭ ॥ ಕ್ಷುಧಾ ಎಂಬ ಹೆಸರಿನ ನಿನ್ನ ಮಗಳು ವೀಳ್ಯದೆಲೆಯ ನಾಡಿಗಳಲ್ಲಿಯೂ ಮತ್ತು ರಾತ್ರಿಯಲ್ಲಿ ಖಾದಿರರಸದಲ್ಲಿಯೂ ಇರಲಿ." ॥ ೩೮ ॥ ಹೀಗೆ ಹೇಳಿದ ಬ್ರಹ್ಮದೇವರ ಮಾತುಗಳನ್ನು ಆಲಿಸಿದ ಬ್ರಾಹ್ಮಣನ ವೇಷದಲ್ಲಿದ್ದ ಆ ದರಿದ್ರನು ಭೂಲೋಕಕ್ಕೆ ಬಂದು ಬ್ರಹ್ಮದೇವರ ನಿರ್ದೇಶದಂತೆ ಸಕುಟುಂಬಿಯಾಗಿ ತಾಂಬೂಲದಲ್ಲಿ ವಾಸ ಮಾಡಲಾರಂಭಿಸಿದರು. ॥ ೩೯ ॥ ಆಮೇಲೆ ಅಶುದ್ಧವಾದ ತಾಂಬೂಲವನ್ನು ಭಕ್ಷಿಸಿದ ಜನರೆಲ್ಲರೂ ಸಹಸ್ರ ಸಹಸ್ರ ಸಂಖ್ಯೆಗಳಲ್ಲಿ ಪಾಪಿಗಳೂ ಮತ್ತು ದರಿದ್ರರೂ ಆದರು. ॥ ೪೦ ॥ ಆದ್ದರಿಂದ, ತಿಳಿದೋ ತಿಳಿಯದೆಯೋ ಮಾಡಿದ ತಾಂಬೂಲ ಭಕ್ಷಣದೋಷದಿಂದ ಎಸಗಿದ ಪಾಪದ ಪ್ರಾಯಶ್ಚಿತ್ತಕ್ಕಾಗಿ ಪಾಪಭೀರುಗಳು ತಾಂಬೂಲದಾನವನ್ನು ಮಾಡಬೇಕು. ॥ ೪೧ ॥ ಆದ್ದರಿಂದಲೇ ವಿವೇಕಿಗಳಿಂದ ವಿಚಾರ ಮಾಡಿ ತಾಂಬೂಲವು ತಿನ್ನಲ್ಪಡಬೇಕು, ಇಲ್ಲದಿದ್ದರೆ ಪಾತಕಗಳಾಗಿ ದಾರಿದ್ರ್ಯವು ಅವರಿಗೆ ಬಂದೊದಗುವುದು. ॥ ೪೨ ॥ ಬ್ರಹ್ಮಚಾರಿಯು, ವಿಧವೆಯು, ಮುಟ್ಟಾದವಳು ಮತ್ತು ಸನ್ಯಾಸಿಯು ನಿಯತವಾಗಿ ತಾಂಬೂಲವನ್ನು ಹಾಕಿಕೊಳ್ಳಬಾರದು, ಬೇರೆಯವರೆಲ್ಲರೂ ಹಾಕಿಕೊಳ್ಳಬಹುದು. ॥ ೪೩ ॥ ಗೃಹಸ್ಥರೂ, ಗಂಡನಿರುವ ಹೆಂಗಸೂ ಮತ್ತು ಉಪನಯವಾಗದ ಬಾಲಕರೂ ಅವಶ್ಯವಾಗಿ ತಾಂಬೂಲವನ್ನು ಹಾಕಿಕೊಳ್ಳಬಹುದು. ಏಕೆಂದರೆ ಇದು ಮಂಗಳಕರ ಮತ್ತು ಉತ್ತಮವಾದುದು. ॥ ೪೪ ॥ ಯಾವ ಗೃಹಿಣಿಯ ಮುಖವು ತಾಂಬೂಲರಹಿತವಾಗಿ ಕಾಣಬರುವುದೋ ಆ ಮುಖವು ದಾರಿದ್ರ್ಯದ ಆಕರವೆಂದು ತಿಳಿಯ ತಕ್ಕದ್ದು. ॥ ೪೫ ॥ ಮೂವತ್ತೆರಡು ಎಲೆಗಳಿಂದಲೂ ಏಲಕ್ಕಿ, ಲವಂಗ, ಕರ್ಪೂರ ಮತ್ತು ಅಡಿಕೆ ಇವುಗಳಿಂದ ಕೂಡಿರುವುದೇ ತಾಂಬೂಲವು. ॥ ೪೬ ॥ ಈ ತಾಂಬೂಲದ ದಾನವನ್ನು ಪ್ರಯಾಗ ದಲ್ಲಿ ಯಾರು ಯಥಾವಿಧಿ, ಯಥಾಶಕ್ತಿಯಾಗಿ ಮಾಡುತ್ತಾರೋ ಅವರು ಎಲ್ಲ ಪಾಪಗಳಿಂದ ಪರಿಹೃತರಾಗುತ್ತಾರೆ. ॥ ೪೭ ॥ ಅನ್ನದಾನದಿಂದ ದೀರ್ಘಾಯುಸ್ಸು, ಹೂದಾನದಿಂದ ಸೌಮನಸ್ಯ, ಗಂಧಾದಿಗಳ ದಾನದಿಂದ ಸೌಭಾಗ್ಯ ಮತ್ತು ದೀಪದಾನದಿಂದ ಮನೋನೈರ್ಮಲ್ಯ ಲಭಿಸುವುದು. ॥ ೪೮ ॥ ಈ ನಾಲ್ಕು ಪದಾರ್ಥಗಳ ದಾನದಿಂದ ಲಭಿಸುವ ಪುಣ್ಯವು ಕೇವಲ ತಾಂಬೂಲ ದಾನದಿಂದಲೇ ಲಭಿಸುವುದು ಅಲ್ಲದೆ ಅವರು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖವನ್ನು ಪಡೆಯುತ್ತಾರೆ. ॥ ೪೯ ॥ ನಾಗವಲ್ಲಿಯ ಉತ್ಪತ್ತಿ, ದಾನ ಮತ್ತು ಭಕ್ಷಣ ಇವುಗಳನ್ನು ನಿಮಗೆ ಹೇಳಿದ್ದಾಯಿತು. ಮತ್ತೇನನ್ನು ತಿಳಿಯಬಯಸುತ್ತೀರಿ? ॥ ೫೦ ॥

॥ ಅರವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಷಷ್ಟಿತಮೋऽಧ್ಯಾಯಃ ॥ ೬೫ ॥

ಋಷಯ ಊಚುಃ—

ದಾನಾನಿ ತ್ವನ್ಮುಖಾಂಭೋಜನಿರ್ಯಾತಾನಿ ಸವಿಸ್ತರಮ್ ।
ಶ್ರುತಾನ್ಯಥ ವದಾಸ್ಮಾಕಂ ಯಜ್ಞಾನಾವಶ್ಯಕಾನಿಹ ॥ ೧ ॥
ಕೇ ಕೇ ಯಜ್ಞಾಃ ಪ್ರಕರ್ತವ್ಯಾಃ ಪ್ರಯಾಗೇ ಫಲಮಿಚ್ಛತಾ ।
ನಿಷ್ಕಾಮೇನ ಚ ಕಾರ್ಯಾಸ್ತತ್ಸರ್ವಂ ಚ ಕಥಯಾಶು ನಃ ॥ ೨ ॥

## ॥ ಅರವತ್ತೈದನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

''ದಾನಾದಿಗಳು ನಿಮ್ಮ ಮುಖಕಮಲದಿಂದ ವಿಸ್ತಾರವಾಗಿ ಹೇಳಲ್ಪಟ್ಟಿತು. ಇಲ್ಲಿ ಅತ್ಯಾವಶ್ಯಕವಾಗಿ ಮಾಡಬೇಕಾಗಿರುವ ಯಜ್ಞಗಳ ಬಗ್ಗೆ ಹೇಳೋಣವಾಗಲಿ. ಫಲವನ್ನು ಅಪೇಕ್ಷಿಸಿ ಪ್ರಯಾಗದಲ್ಲಿ ಯಾವ ಯಾವ ಯಜ್ಞಗಳು ಮಾಡಲ್ಪಡಬೇಕು ಮತ್ತು ಇವುಗಳಲ್ಲಿ ನಿಷ್ಕಾಮನೆಯಿಂದ ಯಾವುಗಳನ್ನು ಮಾಡಬೇಕು'' ಎಂಬುದನ್ನು ಪೂರ್ತಿಯಾಗಿ ಹೇಳಿರಿ. ॥ ೧-೨ ॥

ಸೂತ ಉವಾಚ—

ಸರ್ವಜ್ಞಾ ಅಪಿ ಯೂಯಂ ಮಾಂ ಪೃಚ್ಛಂತೋ ಯನ್ಮುನೀಶ್ವರಾಃ ।
ತದ್ಧಿ ಲೋಕೋಪಕಾರಾರ್ಥಂ ವೇದ್ಮ್ಯಹಂ ಪ್ರಬ್ರವೀಮಿ ವಃ ॥ ೩ ॥
ಯಜ್ಞಾಸ್ತು ತ್ರಿವಿಧಾಃ ಪ್ರೋಕ್ತಾ ವೇದಕಾಂಡತ್ರಯಾತ್ಮಕೇ ।
ತಪೋಯಜ್ಞಾ ಯೋಗಯಜ್ಞಾಃ ಕರ್ಮಯಜ್ಞಾಸ್ತ್ವನೇಕಧಾ ॥ ೪ ॥
ಜ್ಞಾನಿನೋ ಜ್ಞಾನಯಜ್ಞೈಶ್ಚ ಯೋಗಯಜ್ಞೈಶ್ಚ ಯೋಗಿನಃ ।
ಯಜಂತಿ ಮಾಧವಂ ದೇವಂ ಕರ್ಮಯಜ್ಞೈಸ್ತು ಕರ್ಮಿಣಃ ॥ ೫ ॥
ಪ್ರಯಾಗೇ ಮಾಧವಕ್ಷೇತ್ರೇ ಭುಕ್ತಿಮುಕ್ತಿಪ್ರದಾಯಕೇ ।
ಯಜ್ಞಾಚರಣಮಾತ್ರೇಣ ಶೀಘ್ರಂ ತೃಪ್ಯತಿ ಮಾಧವಃ ॥ ೬ ॥
ಅತ ಏವಾಕರೋದ್ಬ್ರಹ್ಮಾ ಯಜ್ಞಾನತ್ರಾತಿದಕ್ಷಿಣಾನ್ ।
ಸರ್ವಸಾಧನಸಂಪನ್ನಾನಶ್ವಮೇಧಾಭಿಧಾನ್ದಶ ॥ ೭ ॥
ಯುಧಿಷ್ಠಿರೋऽಂಬರೀಷಶ್ಚ ಮಾಂಧಾತಾ ನಹುಷಸ್ತಥಾ ।
ಇಕ್ಷ್ವಾಕುರ್ಭರತೋ ರಾಮಸ್ತಥಾ ಚೈಲಃ ಪುರೂರವಾಃ ॥ ೮ ॥
ಏತೇ ಚಾನ್ಯೇ ಚ ರಾಜಾನೋ ಋಷಯಶ್ಚಾಪ್ಯನೇಕಶಃ ।
ಯಜ್ಞಾನ್ನಾನಾವಿಧಾಂಶ್ಚಕ್ರುಃ ಸ್ವಸ್ವಯೋಗ್ಯಾನತಂದ್ರಿತಾಃ ॥ ೯ ॥
ಅತೋऽತ್ರ ಬ್ರಾಹ್ಮಣಶ್ರೇಷ್ಠಾ ಹ್ಯಗ್ನಿಷ್ಟೋಮಾದಿಕಾನ್ಮಖಾನ್ ।
ಕರಿಷ್ಯಂತಿ ಯಥಾಶಕ್ತ್ಯಾ ತೇ ವೈ ವೈಕುಂಠಗಾಮಿನಃ ॥ ೧೦ ॥

ಅಶಕ್ತಾವಗ್ನಿಹೋತ್ರಂ ವಾ ಪ್ರಯಾಗೇ ಜುಹುಯಾದ್ದ್ವಿಜಃ ।
ದರ್ಶೇಷ್ಟಿಂ ಪೌರ್ಣಮಾಸೇಷ್ಟಿಂ ಪವಿತ್ರೇಷ್ಟಿಂ ಮೃಗಾರಿಕಮ್ ॥ ೧೧ ॥
ಚಾತುರ್ಮಾಸ್ಯಂ ಪಶುಂ ಸೋಮಂ ಸಪ್ತಸಂಸ್ಥಾಶ್ಚ ಸೌಮಿಕಾಃ ।
ಕಾಮ್ಯಾ ನಾನಾವಿಧೇಷ್ಟಿಂ ಚ ನವಾನ್ನಪ್ರಾಶನಂ ತಥಾ ॥ ೧೨ ॥
ಕುರ್ವತಾಂ ಸ್ವಸ್ವಸಾಮರ್ಥ್ಯಾದೇಕಂ ವಾನೇಕಮೇವ ವಾ ।
ಯಜ್ಞೇಶೋ ಮಾಧವಸ್ತೇಷಾಂ ಭುಕ್ತಿಂ ಮುಕ್ತಿಂ ಚ ಯಚ್ಛತಿ ॥ ೧೩ ॥
ಔಪಾಸನಂ ವಾ ಯಃ ಕುರ್ಯಾತ್ಸ್ಥಾಲೀಪಾಕಂ ಚ ಭಕ್ತಿಮಾನ್ ।
ಪಿಂಡಯಜ್ಞಂಚ ಸಂಸ್ಥಾಶ್ಚ ಅಷ್ಟಕಾಸ್ವಾಷ್ಟಕಾಮಪಿ ॥ ೧೪ ॥
ಸೋಽಪಿ ತತ್ಫಲಮಾಪ್ನೋತಿ ಯದ್ಯಜ್ಞೈರ್ಧನಿನಾಂ ಫಲಮ್ ।
ಯದ್ವಾ ಪಂಚಮಹಾಯಜ್ಞಾನಪಿ ಕುರ್ವಂಸ್ತದಶ್ನುತೇ ॥ ೧೫ ॥
ಮಾಸಮಾತ್ರಂ ತು ಯಃ ಕುರ್ಯಾದ್ಧೋಮಂ ವೈತಾನಿಕಂ ದ್ವಿಜಃ ।
ಯದ್ವೌಪಾಸನಹೋಮಂ ಚ ಪ್ರಯಾಗೇಽನಂತಪುಣ್ಯಭಾಕ್ ॥ ೧೬ ॥
ಸರತ್ನಸಾನುವಿಪಿನಾರ್ಣವಭೂದಾನಮುತ್ತಮಮ್ ।
ಸಾಯಂಪ್ರಾತರ್ಹೋಮತುಲ್ಯಂ ಜಾಯತೇ ವಾ ನವಾನಘಾಃ ॥ ೧೭ ॥
ಸರ್ವತ್ರೈವಂ ಫಲಂ ಪ್ರೋಕ್ತಂ ನಿತ್ಯಹೋಮಸ್ಯ ನಿಶ್ಚಿತಮ್ ।
ಪ್ರಯಾಗೇ ಕಿಮು ವಕ್ತವ್ಯಂ ವಿಶೇಷಾತ್ತಪಸಿ ದ್ವಿಜಾಃ ॥ ೧೮ ॥
ವಿಚ್ಛಿನ್ನೋಪಾಸನೋ ವಿಪ್ರಃ ಕರ್ಮಾನಧಿಕೃತೋ ಯತಃ ।
ಕುರ್ಯಾದ್ವಿಚ್ಛಿನ್ನಸಂಧಾನಂ ಪುನರಾಧಾನಮಾಹಿತಃ ॥ ೧೯ ॥
ಪ್ರಯಾಗೇ ಯಸ್ತು ವಿಪ್ರೇಣ ಶ್ರೌತಾಧಾನಂ ತು ಕಾರಯೇತ್ ।
ಚಾತುರ್ಮಾಸ್ಯಾನಿ ವಾ ಭಕ್ತ್ಯಾ ಸೋಮಯಾಗಮಥಾಪಿ ವಾ ॥ ೨೦ ॥
ತಸ್ಯ ಪುಣ್ಯಸ್ಯ ಮರ್ಯಾದಾವರ್ಣನೇ ಕೋಽಪಿ ನ ಪ್ರಭುಃ ।
ಯಜ್ಞೇಭ್ಯಃ ಸ್ವಕೃತೇಭ್ಯೋಽಸಾವಗಣ್ಯಂ ಪುಣ್ಯಮಶ್ನುತೇ ॥ ೨೧ ॥
ಅಸಾಮರ್ಥ್ಯೇ ತು ಆಹೂತಃ ಪರಯಜ್ಞಂ ತು ಪಶ್ಯತಿ ।
ಸ್ನಾತಿ ಚಾವಭೃತೇ ಯಶ್ಚ ಸೋಽಪ್ಯಾಪ್ನೋತಿ ಮಹತ್ಫಲಮ್ ॥ ೨೨ ॥

ಸೂತರು ಹೇಳಿದರು—

ಎಲ್ಲವನ್ನೂ ತಿಳಿದವರೇ ಆದ ತಾವುಗಳು ಯಾವುದನ್ನು ಕುರಿತು ನನ್ನನ್ನು ಪ್ರಶ್ನಿಸುವಿರೋ ಆದು ಲೋಕೋಪಕಾರಕ್ಕೇ ಕೇಳಲ್ಪಟ್ಟಿತು ಎಂದು ತಿಳಿಯುವೆ ಮತ್ತು ಅದನ್ನು ತಮಗೆ ಹೇಳುವೆನು. ॥ ೩ ॥ ವೇದಗಳ ಮೂರು ಕಾಂಡದಲ್ಲಿ ಉಲ್ಲೇಖವಾಗಿರುವ ಯಜ್ಞಗಳು ಮೂರು ಬಗೆಯವು. ಅವುಗಳು ತಪೋಯಜ್ಞ, ಯೋಗಯಜ್ಞ ಮತ್ತು ಕರ್ಮಯಜ್ಞವು. ಇವುಗಳಲ್ಲಿ ಸಹ ಅನೇಕ ವಿಧಗಳಿವೆ. ॥ ೪ ॥ ಜ್ಞಾನಿಗಳು ಜ್ಞಾನಯಜ್ಞವನ್ನೂ ಯೋಗಿಗಳು ಯೋಗಯಜ್ಞವನ್ನೂ ಮತ್ತು

ಕರ್ಮದಲ್ಲಿಯೇ ಆಸಕ್ತರಾದ ಕರ್ಮಠರು ಕರ್ಮಯಜ್ಞವನ್ನೂ ಅನುಸರಿಸಿ ಶ್ರೀಮಾಧವ ದೇವರನ್ನು ಆರಾಧಿಸುತ್ತಾರೆ. ॥ ೫ ॥ ಮಾಧವಕ್ಷೇತ್ರವಾದ ಪ್ರಯಾಗವು ಆರಾಧಿಸಿದವರಿಗೆ ಭುಕ್ತಿಯನ್ನು ಮತ್ತು ಮುಕ್ತಿಯನ್ನೂ ಕೊಡುವುದು. ಯಜ್ಞಗಳ ಆಚರಣೆಯ ಮಾತ್ರದಿಂದಲೇ ಮಾಧವನು ಜಾಗ್ರತೆಯಾಗಿ ಸಂತುಷ್ಟನಾಗುವನು. ॥ ೬ ॥ ಆದ್ದರಿಂದಲೇ ಚತುರ್ಮುಖ ಬ್ರಹ್ಮದೇವರು ಬಹುದಕ್ಷಿಣಾದಿಗಳನ್ನು ಕೊಟ್ಟು ಸಾಧನಸಂಪತ್ತುಳ್ಳ ಹತ್ತು ಅಶ್ವಮೇಧಯಾಗಗಳನ್ನು ಅಲ್ಲಿ ಮಾಡಿದರು. ॥ ೭ ॥ ಯುಧಿಷ್ಠಿರ, ಅಂಬರೀಷ, ಮಾಂಧಾತಾ, ನಹುಷ, ಇಕ್ಷ್ವಾಕು, ಭರತ, ಶ್ರೀರಾಮ, ಇಲಾ ಪುತ್ರನಾದ ಪುರೂರವ ಮುಂತಾದ ರಾಜರುಗಳು ಮತ್ತು ಅನೇಕ ಋಷಿಗಳೂ ಇಲ್ಲಿ ತಮ್ಮ ತಮ್ಮ ಶಕ್ತ್ಯಾನುಸಾರ ಅನೇಕವಿಧವಾದ ಯಜ್ಞಗಳನ್ನು ಲೋಪವಿಲ್ಲದಂತೆ ಮಾಡಿರುವರು. ॥ ೮-೯ ॥ ಆದ್ದರಿಂದಲೇ ಬ್ರಾಹ್ಮಣಶ್ರೇಷ್ಠರು ಇಲ್ಲಿ ಅಗ್ನಿಷ್ಟೋಮ ಮುಂತಾದ ಯಾಗಗಳನ್ನು ತಮ್ಮ ಶಕ್ತ್ಯಾನುಸಾರ ಮಾಡಿ ವೈಕುಂಠಕ್ಕೆ ಹೋಗುವರು. ॥ ೧೦ ॥ ಅಶಕ್ತನಾದ ಬ್ರಾಹ್ಮಣನು ಪ್ರಯಾಗದಲ್ಲಿ ಅಗ್ನಿಹೋತ್ರಾದಿಗಳನ್ನಾದರೂ ಮಾಡಬೇಕು. ಅಮಾವಾಸ್ಯಾಇಷ್ಟಿ, ಪೌರ್ಣಮಾಇಷ್ಟಿ, ಪವಿತ್ರೇಷ್ಟಿ (ವಿಷ್ಣುವನ್ನು ಪ್ರಸನ್ನೀಕರಿಸುವ ಯಜ್ಞ, ಮಳೆಗಾಗಿ ಮಾಡುವ ಯಜ್ಞ) ಮಕರಸಂಕ್ರಮಣ ಶ್ರಾದ್ಧ, ಚಾತುರ್ಮಾಸ್ಯ ಯಜ್ಞ, ಪಶುಯಷ್ಟಿ, ಸೋಮಯಷ್ಟಿ , ಏಳುಸಂಖ್ಯೆಯ ''ಸೌಮಿಕ''ವೆಂಬ ಯಜ್ಞ, ನಾನಾವಿಧವಾದ ಕಾಮ್ಯಕಯಜ್ಞಗಳು, ನವಾಗ್ರಯಣೇಷ್ಟಿ ಇವೇ ಮುಂತಾದವುಗಳಲ್ಲಿ ಒಂದನ್ನಾಗಲೀ ಅಥವಾ ಅನೇಕವನ್ನಾಗಲೀ ಆಚರಣೆ ಮಾಡುವವರಿಗೆ ಯಜ್ಞೇಶನಾದ ಶ್ರೀಮಾಧವನು ಭುಕ್ತಿ ಮತ್ತು ಮುಕ್ತಿಗಳೆರಡನ್ನೂ ಕೊಡುವನು. ॥ ೧೧-೧೩ ॥ ಔಪಾಸನವನ್ನು ಮಾಡತಕ್ಕವನಿಗೆ ಸ್ಥಾಲೀಪಾಕವೆಂಬ ಯಜ್ಞ, ಪಿಂಡ ಪಿತೃಯಜ್ಞ, ಸಂಸ್ಥಾಗಳೆಂಬ ಯಜ್ಞ ವಿಶೇಷಗಳು, ಅಷ್ಟಕಗಳಲ್ಲಿ ಅಷ್ಟಕ ಯಜ್ಞಗಳು, ಇವುಗಳನ್ನು ಮಾಡತಕ್ಕವನೂ ಕೂಡ ಮಹಾ ಧನಿಕನಿಂದ ಮಾಡಲ್ಪಡುವ ಯಜ್ಞದ ಫಲವನ್ನೇ ಪಡೆಯುವನು. ಪಂಚಯಜ್ಞವನ್ನು ಮಾಡುವವರೂ ಸಹ ಅದೇ ಫಲವನ್ನು ಹೊಂದುತ್ತಾರೆ. ॥ ೧೪-೧೫ ॥ ಪ್ರಯಾಗದಲ್ಲಿ ಒಂದು ಮಾಸದವರೆಗೆ ಅಗ್ನಿಹೋತ್ರವನ್ನು ಅಥವಾ ಔಪಾಸನ ಹೋಮವನ್ನು ಮಾಡಿದವನೂ ಅನಂತ ಪುಣ್ಯವನ್ನು ಪಡೆಯುವನು. ॥ ೧೬ ॥ ರತ್ನಗಳಿಂದ ತುಂಬಿರುವ, ಪರ್ವತಶಿಖರಗಳು, ವನಗಳು ಮತ್ತು ಸಮುದ್ರಗಳನ್ನು ಹೊಂದಿರುವ ಇಡೀ ಭೂಮಿಯನ್ನೂ ದಾನ ಮಾಡಿದವನ ಪುಣ್ಯವು ಪ್ರಯಾಗದಲ್ಲಿ ಎರಡು ಹೊತ್ತು ಹೋಮಾದಿಗಳನ್ನು ಮಾಡಿದವನ ಪುಣ್ಯಕ್ಕೆ ಸಮವು ಆಗುವುದಿಲ್ಲ ಮತ್ತು ಈ ರೀತಿ ಹೋಮಾದಿಗಳನ್ನು ಮಾಡಿದವನಿಗೆ ಪಾಪಪರಿಹಾರವಾಗಿ ಪುನರ್ಜನ್ಮವೇ ಇರುವುದಿಲ್ಲ. ॥ ೧೭ ॥ ನಿತ್ಯಹೋಮ ಮಾಡುವವರಿಗೆ ಎಲ್ಲೆಡೆಯಲ್ಲಿಯೂ ಇಂತಹ ಫಲವು ಹೇಳಲ್ಪಟ್ಟಿರುವಾಗ ಇನ್ನು ನಿತ್ಯಹೋಮಾದಿಗಳನ್ನು ಪ್ರಯಾಗದಲ್ಲಿ ಅದರಲ್ಲಿಯೂ ಮಾಘಮಾಸದಲ್ಲಿ ಮಾಡಿದವನ ಪುಣ್ಯವನ್ನು ಹೇಳತಕ್ಕದ್ದೇನಿದೆ? ॥ ೧೮ ॥ ಬ್ರಾಹ್ಮಣನು ತನ್ನ ಔಪಾಸನೆಯಲ್ಲಿ ಉಂಟಾದ ಅಡಚಣೆಗಳಿಂದ ತಾನು ಹೋಮಾದಿಕರ್ಮಗಳಿಗೆ ಅನಧಿಕಾರಿ ಯಾದರೂ ಪುನರಾಧಾನ ಮಾಡಿ ಈ ಅಧಿಕಾರವನ್ನು ಮತ್ತೆ ಪಡೆಯಬಹುದು. (ಔಪಾಸನವು ವಿಚ್ಛೇದ ಹೊಂದಿದಾಗ ನಷ್ಟವಾದ ಅಗ್ನಿಯನ್ನು ಸಂಪಾದಿಸುವ ಕ್ರಮಕ್ಕೆ ಪುನರಾಧಾನವೆನ್ನುವರು.) ॥ ೧೯ ॥ ಯಾರು ಭಕ್ತಿಯಿಂದ ಚಾತುರ್ಮಾಸ್ಯ ವ್ರತವನ್ನು, ಸೋಮಯಾಗವನ್ನು ಪ್ರಯಾಗದಲ್ಲಿ ಮಾಡುವನೋ ಅವನ ಪುಣ್ಯದ ಎಲ್ಲೆಯನ್ನು ಯಾರು ತಾನೇ ವರ್ಣಿಸಬಲ್ಲರು? ಈ ರೀತಿ ಆಚರಿಸಲ್ಪಟ್ಟ ಯಜ್ಞಗಳಿಗೆ ಲೆಕ್ಕವಿಲ್ಲದಷ್ಟು ಪುಣ್ಯವು ಲಭಿಸುವುದು. ॥ ೨೦-೨೧ ॥ ಸಾಮರ್ಥ್ಯವಿಲ್ಲದೆ

ಇದ್ದರೆ, ಆಹ್ವಾನ ಮಾಡಲ್ಪಟ್ಟವನು ಮತ್ತೊಬ್ಬನು ಆಚರಿಸುತ್ತಿರುವ ಯಜ್ಞವನ್ನು ಯಾರು ದರ್ಶನ ಮಾಡುವನೋ ಮತ್ತು ಯಜ್ಞದ ಅವಭೃತ ಸ್ನಾನದಲ್ಲಿ ಭಾಗಿಯಾಗುವನೋ ಅವನಿಗೂ ಮಹತ್ತರ ಫಲಪ್ರಾಪ್ತಿಯಾಗುವುದು. ॥ ೨೨ ॥

**ಋಷಯ ಊಚುಃ—**

> **ಯೇ ತ್ವಯಾಽಭಿಹಿತಾ ಪಂಚ ಮಹಾಯಜ್ಞಾ ಇತಿ ಪ್ರಭೋ ।**
> **ಕೇ ತೇ ಕೇನ ಕಥಂ ಕಾರ್ಯಾಃ ಕಿಂ ಫಲಮಿತಿ ಶಂಸ ನಃ ॥ ೨೩ ॥**

**ಋಷಿಗಳು ಹೇಳಿದರು—**

ತಾವು ಹೇಳಿದ ಪಂಚಮಹಾಯಜ್ಞಗಳನ್ನು ಯಾರ್ಯಾರು ಮಾಡಬೇಕು ಮತ್ತು ಹೇಗೆ ಮಾಡಬೇಕು? ಅವುಗಳ ಆಚರಣೆಯಿಂದ ಏನು ಫಲವಿದೆ, ಇದನ್ನು ವಿವರಿಸಬೇಕೆಂದು ಶೌನಕಾದಿಗಳು ಕೇಳಿದರು. ॥ ೨೩ ॥

**ಸೂತ ಉವಾಚ—**

> **ಬ್ರಹ್ಮಯಜ್ಞೋ ದೇವಯಜ್ಞೋ ಭೂತಯಜ್ಞಸ್ತತಃ ಪರಃ ।**
> **ಪಿತೃಯಜ್ಞೋ ನೃಯಜ್ಞಶ್ಚ ಪಂಚಯಜ್ಞಾಃ ಪ್ರಕೀರ್ತಿತಾಃ ॥ ೨೪ ॥**
> **ಸ್ವಾಧ್ಯಾಯೋ ಬ್ರಹ್ಮಯಜ್ಞಃ ಸ್ಯಾದ್ದೇವಯಜ್ಞೋಽಗ್ನಿಹೋಮಿಕಃ ।**
> **ಭೂತಯಜ್ಞೋ ಬಲಿಃ ಪ್ರೋಕ್ತೋ ಹುತಶೇಷಾತ್ತತಃ ಪರಃ ॥ ೨೫ ॥**
> **ಪಿತೃಯಜ್ಞಃ ಸ್ವಧಾ ಪಿತೃಭ್ಯ ಇತ್ಯನ್ನಾದಿದಾನತಃ ।**
> **ಮನುಷ್ಯಯಜ್ಞೋಽತಿಥ್ಯಾದೇರ್ಮನುಷ್ಯೋದ್ದೇಶದಾನತಃ ॥ ೨೬ ॥**
> **ಏತಾನ್ಪಂಚಮಹಾಯಜ್ಞಾನ್ಕುರ್ಯಾತ್ಪ್ರತಿದಿನಂ ಗೃಹೀ ।**
> **ಯಥಾವಿಧಿ ಯಥಾಶಕ್ತ್ಯಾ ತತ್ಪ್ರಕಾರಃ ಪ್ರದರ್ಶ್ಯತೇ ॥ ೨೭ ॥**
> **ಸ್ನಾನಂ ವಿಧಾಯ ಮಧ್ಯಾಹ್ನೇ ತತ್ಸಂಧ್ಯಾಂ ಸಮುಪಾಸ್ಯ ಚ ।**
> **ಬ್ರಹ್ಮಯಜ್ಞಂ ತತಃ ಕುರ್ಯಾತ್ತರ್ಪಣಾಂತಂ ಯಥಾವಿಧಿ ॥ ೨೮ ॥**
> **ಅನ್ಯಕಾಲೇ ಯದಾ ಕುರ್ಯಾನ್ನಾನಾಕಾರ್ಯವಶಾತ್ತದಾ ।**
> **ಬ್ರಹ್ಮಯಜ್ಞಂ ಪುರಾ ಪಶ್ಚಾತ್ಸಂಧ್ಯಾವಂದನಮಾಚರೇತ್ ॥ ೨೯ ॥**
> **ತತೋ ಗೃಹಂ ಸಮಾಗತ್ಯ ಧೌತಪಾದಕರಶ್ಶುಚಿಃ ।**
> **ಪಾಕಾದನ್ನಂ ಸಮುದ್ಧೃತ್ಯ ದೇವಯಜ್ಞಂ ಸಮಾರಭೇತ್ ॥ ೩೦ ॥**
> **ಔಪಾಸನಾಗ್ನೌ ಕುರ್ವೀತ ಪಂಚಕೇಽಗ್ನಾವಥಾಪಿ ವಾ ।**
> **ಘೃತಾಕ್ತಾನ್ನೇನ ಜುಹುಯಾತ್ಸ್ವಗೃಹ್ಯೋಕ್ತವರ್ತ್ಮನಾ ॥ ೩೧ ॥**
> **ಪ್ರಾತಃ ಸಾಯಂ ಪ್ರಕುರ್ವೀತ ಗೃಹಸ್ಥೋ ವೈಶ್ವದೇವಕಮ್ ।**
> **ಪ್ರಾತರಾರಂಭಣಂ ಯಸ್ಯ ತಂತ್ರೇಣೋಭಯಮೇವ ವಾ ॥ ೩೨ ॥**

ಸಾಯಂಕಾಲೇ ಯದಾ ಕುರ್ಯಾದ್ಧೋಮಮಾತ್ರಂ ಸಮಾಚರೇತ್ ।
ಭೂತಯಜ್ಞಂ ಚ ಚೇತ್ಕುರ್ಯಾತ್ಸಪತ್ನೀಕೋ ನ ವಾ ಭುವಿ ॥ ೩೩ ॥
ಅನ್ನಸ್ಯ ಚಾತ್ಮನೋ ವಾಪಿ ಸಂಸ್ಕಾರಾರ್ಥಮಿದಂ ಭವೇತ್ ।
ಕೇಚಿದನ್ನಸ್ಯ ಸಂಸ್ಕಾರಂ ಪಂಚಸೂನನಿವಾರಣಾತ್ ॥ ೩೪ ॥
ಪ್ರತಿಪಾಕಂ ತದಾವೃತ್ತಿ ದ್ವಿತೀಯೇ ಸಕೃದೇವ ತತ್ ।
ಏಕಪಾಕೇ ತು ಭುಂಜಾನಾ ವರ್ತತೇ ಬಹವೋ ಯದಿ ॥ ೩೫ ॥
ಏಕಂ ಏಕಂ ತದಾ ಕುರ್ಯಾದ್ವೈಶ್ವದೇವಂ ನ ವೈ ಪೃಥಕ್ ।
ಪಾಕಾಭಾವೇಽಪಿ ತತ್ಕುರ್ಯಾತ್ತತ್ರೈಕಮಪಿ ಚಾಂತಿಕೇ ॥ ೩೬ ॥
ಪಾಕಾಭಾವೇ ಪ್ರವಾಸೇ ವಾ ತಂಡುಲೈರೇವ ತದ್ಭವೇತ್ ।
ಅಕ್ಷಾರಾನ್ನಾಂತರೇಣಾಪಿ ಕಾರ್ಯಮಿತ್ಯಪರೇ ಜಗುಃ ॥ ೩೭ ॥
ಪೃಥಕ್ಪಾಕೇನ ತತ್ಪ್ರೋಕ್ತಂ ಸ್ನಾತಕಬ್ರಹ್ಮಚಾರಿಣೋಃ ।
ಜಲೇನ ಸಮಿಧಾ ವಾಪಿ ತದ್ಭವೇತ್ಸಂಕಟಾದಿಷು ॥ ೩೮ ॥
ಹೋಮಾಗ್ರದಾನರಹಿತಂ ನ ಭೋಕ್ತವ್ಯಂ ಕದಾಚನ ।
ಗೃಹಸ್ಥೋ ಯದಿ ಭುಂಜೀಯಾದ್ದೋಷಮೇವ ಭುನಕ್ತ್ಯಸೌ ॥ ೩೯ ॥
ದೇವಾರ್ಥಂ ಬ್ರಾಹ್ಮಣಾರ್ಥಂ ವಾ ಯದನ್ನಂ ಪಾಚಿತಂ ಗೃಹೇ ।
ವೈಶ್ವದೇವೇನ ತತ್ಸರ್ವಂ ಯೋಗ್ಯಂ ಸ್ಯಾದನ್ಯಥಾ ನ ತು ॥ ೪೦ ॥
ಏತೇ ಪಂಚಮಹಾಯಜ್ಞಾ ಯೇಷಾಂ ಸ್ಯುಃ ಪ್ರತ್ಯಹಂ ಗೃಹೇ ।
ತೇಷಾಮನ್ನಂ ಹಿ ಭೋಕ್ತವ್ಯಂ ನೇತರೇಷಾಂ ಕದಾಚನ ॥ ೪೧ ॥
ಏವಂ ವಿಸ್ತರತಃ ಪ್ರೋಕ್ತಃ ಪಂಚಯಜ್ಞವಿಧಿರ್ಮಯಾ ।
ಭವದ್ಭ್ಯೋ ಮುನಿಶಾರ್ದೂಲಾಃ ಕಿಮನ್ಯಚ್ಛ್ರೋತುಮಿಚ್ಛಥ ॥ ೪೨ ॥

॥ ಇತಿ ಪಂಚಷಷ್ಟಿತಮೋಽಧ್ಯಾಯಃ ॥

**ಸೂತರು ಹೇಳಿದರು—**

ಬ್ರಹ್ಮಯಜ್ಞ, ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ ಈ ಐದೂ ಪಂಚ ಮಹಾಯಜ್ಞಗಳೆಂದು ಪ್ರಶಂಸಿಸಲ್ಪಟ್ಟಿವೆ. ॥೨೪॥ ವೇದ, ಸಚ್ಛಾಸ್ತ್ರ ಪುರಾಣ ಇತಿಹಾಸಸ್ಮೃತಿಗಳನ್ನು ಪಾಠ ಹೇಳುವುದು, ತಾವು ಗುರುಗಳಲ್ಲಿ ಅಧ್ಯಯನ ಮಾಡುವುದು ಇವೆಲ್ಲ ಬ್ರಹ್ಮಯಜ್ಞವೆಂದು ಕರೆಯಲ್ಪಟ್ಟಿದೆ. ಅಗ್ನಿಯಲ್ಲಿ ಮಾಡುವ ವೈಶ್ವದೇವ, ಔಪಾಸನಾದಿ ಹೋಮಗಳು ದೇವ ಯಜ್ಞವೆಂದು ಎನಿಸುತ್ತದೆ. ವೈಶ್ವದೇವವಾದ ಮೇಲೆ ಅನ್ನದಿಂದ ಬಲಿಹರಣವೆಂಬ ಯಜ್ಞವನ್ನು ಮಾಡಿ, ಪಶುಪಕ್ಷಿಭೂತಗಳನ್ನು ತೃಪ್ತಿ ಪಡಿಸುವುದು ''ಭೂತಯಜ್ಞ'' ಎಂದೆನಿಸುವುದು. ॥೨೫॥ ಪಿತೃಗಳನ್ನುದ್ದೇಶಿಸಿ ಶ್ರಾದ್ಧಾದಿಗಳನ್ನು ಮಾಡಿ ''ಸ್ವಧಾ'' ಎಂದು ಅಗ್ನಿಪುರುಷದೇವರ ಮೂಲಕ ಅವರವರಿಗೆ ಅನ್ನಾದಿಗಳನ್ನು ಅರ್ಪಿಸುವುದು ಪಿತೃಯಜ್ಞವು. ಅತಿಥಿಸತ್ಕಾರ, ಭಿಕ್ಷುಕರ ಮತ್ತು ದೀನದಲಿತರಿಗೆ ಊಟ ಮಾಡಿಸುವುದು ''ಮನುಷ್ಯಯಜ್ಞ''ವು. ಹೀಗೆ ಪಂಚಮಹಾಯಜ್ಞಗಳು

ಪ್ರಶಂಸಿಸಲ್ಪಟ್ಟಿವೆ. ॥ ೨೬ ॥ ಈ ಪಂಚಮಹಾಯಜ್ಞಗಳನ್ನು ಗೃಹಸ್ಥಾಶ್ರಮಿಯು ವಿಧ್ಯುಕ್ತಪ್ರಕಾರ ತನ್ನ ಶಕ್ತ್ಯಾನುಸಾರ ಮಾಡತಕ್ಕದ್ದು. ಈ ವಿಧಿವಿಧಾನಗಳ ಪ್ರಕಾರಗಳನ್ನು ಮುಂದೆ ವರ್ಣಿಸುವೆನು. ॥ ೨೭ ॥ ಮಧ್ಯಾಹ್ನದ ಸ್ನಾನವನ್ನು ಮಾಡಿ, ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ಮುಗಿಸಿ ನಂತರ ಬ್ರಹ್ಮಯಜ್ಞವನ್ನು ವಿಧ್ಯುಕ್ತವಾಗಿ ಮಾಡಬೇಕು. ಇದನ್ನು ಪಿತೃತರ್ಪಣದಿಂದ ಮುಗಿಸಬೇಕು. ॥ ೨೮ ॥ ಅನ್ಯಕಾರ್ಯಗಳಲ್ಲಿ ಸಿಕ್ಕಿಬಿದ್ದು ಬೇರೆಕಾಲದಲ್ಲಿ ಬ್ರಹ್ಮಯಜ್ಞವನ್ನು ಮಾಡುವುದಾದರೆ ಮೊದಲು ಬ್ರಹ್ಮಯಜ್ಞವನ್ನು ಮಾಡಿ ನಂತರ ಸಂಧ್ಯೆಯನ್ನು ಆಚರಿಸತಕ್ಕದ್ದು. ॥ ೨೯ ॥ ಅನಂತರ ಮನೆಗೆ ಬಂದು ಕೈಕಾಲುಗಳನ್ನು ತೊಳೆದು ಸಿದ್ಧವಾಗಿರುವ ಅನ್ನದಿಂದ ದೇವಯಜ್ಞವನ್ನು ಆಚರಿಸುವುದು. ॥ ೩೦ ॥ ಔಪಾಸನಾಗ್ನಿಯಲ್ಲಾಗಲೀ ಪಂಚಾಗ್ನಿ ಯಲ್ಲಾಗಲೀ (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ ಮತ್ತು ಆವಸಥ್ಯವೆಂಬ ಐದು ಬಗೆಯ ಯಾಗಾಗ್ನಿಗಳು) ದೇವಯಜ್ಞವನ್ನು ಮಾಡಬೇಕು. ತುಪ್ಪದಲ್ಲಿ ತೊಯ್ದಿರುವ ಅನ್ನವನ್ನು ಹೋಮ ಮಾಡಿ ಈ ಯಜ್ಞವನ್ನು ಮಾಡತಕ್ಕದ್ದು. ಈ ಕಾರ್ಯಗಳನ್ನು ಸ್ವಶಾಖೋಕ್ತ ಗೃಹ್ಯಸೂತ್ರದಲ್ಲಿ ಉಲ್ಲೇಖಿತವಾಗಿರುವ ರೀತಿಯಲ್ಲಿ ಮಾಡಬೇಕು. ॥ ೩೧ ॥ ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ ಗೃಹಸ್ಥಾಶ್ರಮಿಯು ವೈಶ್ವದೇವವನ್ನು ಮಾಡಬೇಕು. ಇವೆರಡನ್ನೂ ಪ್ರಾತಃಕಾಲದಲ್ಲಿಯೇ ಒಟ್ಟಿಗೇ ಮಾಡಬಹುದು. ॥ ೩೨ ॥ ಸಾಯಂಕಾಲದಲ್ಲಿ ವೈಶ್ವದೇವ ಮಾಡುವಾಗ ಹೋಮವನ್ನು ಮಾತ್ರ ಮಾಡಿದರೆ ಸಾಕು. ಭೂತಯಜ್ಞವನ್ನು ತನ್ನ ಪತ್ನಿಯೊಡಗೂಡಿ ಮಾಡಬೇಕು ಅಥವಾ ಅಪತ್ನೀಕನೂ ಮಾಡಬಹುದು, ಈ ಬಲಿಹರಣವನ್ನು ಭೂಮಿಯ ಮೇಲೆ ಮಾಡಬೇಕು. ॥ ೩೩ ॥ ಕೆಲವರು ಈ ಹೋಮವನ್ನು ಅನ್ನಸಂಸ್ಕಾರಕ್ಕಾಗಿಯೂ ಮತ್ತು ಕೆಲವರು ಐದು ಬಗೆ ಪಾಪಗಳ ಪರಿಹಾರಕ್ಕಾಗಿಯೂ ಎಂದು ಹೇಳುವರು. (ಪಂಚಸೂನಗಳು—ಒಲೆ, ಅರೆಯುವ ಕಲ್ಲು, ಒರಳು, ನೀರಿನ ತಂಬಿಗೆ, ಈಳಿಗೆ, ಹಾರೆ, ಕುಟ್ಟುವ ಕಲ್ಲು ಮುಂತಾದವುಗಳ ಪ್ರಯೋಗದಲ್ಲಿ ನಮಗೆ ತಿಳಿಯದೆ ಎಷ್ಟೋ ಪ್ರಾಣಿಗಳು ನಾಶವಾಗಿ ಈ ಹತ್ಯೆಯ ಪಾಪವು ಮನೆಯ ಯಜಮಾನನಿಗೆ ಅಂಟಿಕೊಳ್ಳುತ್ತವೆ.) ॥ ೩೪ ॥ ಪ್ರತಿಸಲ ಅಡಿಗೆ ಮಾಡಿದಾಗಲೂ ಈ ವೈಶ್ವದೇವ ಯಜ್ಞವನ್ನು ಮಾಡಬೇಕು. ಒಂದೇ ಅಡಿಗೆಯಲ್ಲಿ ಅನೇಕರು ಭೋಜನ ಮಾಡುವ ಪ್ರಸಂಗದಲ್ಲಿ ಎಲ್ಲರೂ ಬೇರೆ ಬೇರೆ ವೈಶ್ವದೇವಹೋಮವನ್ನು ಮಾಡಬೇಕಾಗಿಲ್ಲ. ಅನ್ನವನ್ನು ಮಾಡದಿದ್ದಾಗಲೂ ವೈಶ್ವದೇವವನ್ನು ಮಾಡಬೇಕೆಂದು ಕೆಲವರು ಹೇಳುತ್ತಾರೆ. ॥ ೩೫-೩೬ ॥ ಅಡಿಗೆಯನ್ನು ಮಾಡದಿದ್ದಾಗ ಅಥವಾ ಪ್ರವಾಸದಲ್ಲಿದ್ದಾಗ ವೈಶ್ವದೇವಹೋಮವನ್ನು ಅಕ್ಕಿಯಿಂದಲೇ ಮಾಡಬೇಕು. ಉಪ್ಪಿಲ್ಲದ ಅನ್ನಾದಿಗಳಿಂದಲೇ ವೈಶ್ವದೇವಹೋಮವನ್ನು ಮಾಡಬೇಕೆಂದು ಕೆಲವರು ಹೇಳುತ್ತಾರೆ. ॥ ೩೭ ॥ ಬ್ರಹ್ಮಚಾರಿಗಳಿಗೆ ಮತ್ತು ಗುರುಕುಲವಾಸ ಮಾಡಿ ಬಂದ ಅವಿವಾಹಿತವಾದವರಿಗೆ ಪ್ರತ್ಯೇಕ ಅನ್ನವನ್ನು ವೈಶ್ವದೇವಕ್ಕಾಗಿ ಮಾಡಿಡಬೇಕು. (ಬ್ರಹ್ಮಚಾರಿಗಳು ವೈಶ್ವದೇವವನ್ನು ಮಾಡಬಾರದು ಎಂದು ಪ್ರಮಾಣವಿದೆ.) ಕಷ್ಟಕಾಲಗಳಲ್ಲಿ ಸಮಿತ್ತಿನಿಂದಲೂ ಅಥವಾ ಕೇವಲ ನೀರಿನಿಂದಲೂ ವೈಶ್ವದೇವವನ್ನು ಮಾಡಬಹುದು. ॥ ೩೮ ॥ ವೈಶ್ವದೇವಾದಿ ಹೋಮ ಮಾಡದ, ಹಿರಿಯರು, ಅತಿಥಿಗಳು ಮತ್ತು ಪೂಜ್ಯರು ಭೋಜನ ಮಾಡದ ಅನ್ನವನ್ನು ಎಂದೂ ತಿನ್ನಬಾರದು. ಅದರಲ್ಲಿಯೂ ಗೃಹಸ್ಥನು ವೈಶ್ವದೇವವಿಲ್ಲದ ಅಡಿಗೆಯನ್ನು ಊಟ ಮಾಡಿದರೆ ಅದು ದೋಷವೇ ಆಗುವುದು. ॥ ೩೯ ॥ ದೇವತೆಗಳಿಗಾಗಲೀ, ಬ್ರಾಹ್ಮಣರುಗಳಿಗಾಗಲಿ ಸಮರ್ಪಣೆ ಮಾಡಲು

ಮನೆಯಲ್ಲಿ ಬೆಂದ ಅನ್ನವು ವೈಶ್ವದೇವ ಸಂಸ್ಕಾರ ಪಡೆಯದಿದ್ದರೆ ಅದು ಈ ಕಾರ್ಯಕ್ಕೆ ಯೋಗ್ಯವಾಗುವುದಿಲ್ಲ. ॥ ೪೦ ॥ ಇಲ್ಲಿ ಉಲ್ಲೇಖವಾಗಿರುವ ಈ ಪಂಚಮಹಾಯಜ್ಞಗಳು ಯಾರ ಮನೆಯಲ್ಲಿ ನಿತ್ಯವೂ ನಡೆಯುವುವೋ ಅಂಥವರ ಮನೆಯ ಅನ್ನವನ್ನೇ ಭೋಜನ ಮಾಡಬೇಕು. ॥ ೪೧ ॥ ಈ ರೀತಿಯಾಗಿ ವಿಶದವಾಗಿ ಪಂಚ ಮಹಾಯಜ್ಞಗಳ ವಿಧಿಯು ನನ್ನಿಂದ ನಿಮ್ಮಗಳಿಗೆ ಹೇಳಲ್ಪಟ್ಟಿತು. ಹೇ ಮುನಿವರ್ಯರೇ! ಮತ್ತೇನನ್ನು ಕೇಳಬಯಸುತ್ತೀರಿ. ॥ ೪೨ ॥

॥ ಅರವತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## || ಅಥ ಷಟ್ಷಷ್ಟಿತಮೋಽಧ್ಯಾಯಃ || ೬೬ ||

**ಋಷಯ ಊಚುಃ—**

ಸೂತ ಸರ್ವವಿಧಾನಜ್ಞ ಯಜ್ಞಾ ನಾನಾವಿಧಾಸ್ತ್ವಯಾ ।
ಅಸ್ಮಭ್ಯಂ ಶ್ರಾವಿತಾಸ್ತೇನ ಪರಾನಂದಂ ಗತಾ ವಯಮ್ || ೧ ||
ಇದಾನೀಂ ತೀರ್ಥರಾಜೇಽಸ್ಮಿನ್ನಿತ್ಯನೈಮಿತ್ತಿಕಾನಿ ಚ ।
ಯಾನಿ ವ್ರತಾನಿ ಕಾರ್ಯಾಣಿ ಕಾಮ್ಯಾನಿ ಚ ಗೃಣೀಹಿ ನಃ || ೨ ||

## || ಅರವತ್ತಾರನೆಯ ಅಧ್ಯಾಯವು ||

**ಋಷಿಗಳು ಹೇಳಿದರು—**

ಎಲ್ಲ ಬಗೆಯ ಯಜ್ಞವ್ರತಾದಿಗಳ ವಿಧಿವಿಧಾನಗಳನ್ನು ಬಲ್ಲ ಸೂತರೇ! ತಮ್ಮಿಂದ ನಾನಾವಿಧಗಳಾದ ಯಜ್ಞಗಳು ನಮಗೆ ಹೇಳಲ್ಪಟ್ಟಿತು. ಇದನ್ನು ಕೇಳಿ ನಮಗೆ ಪರಮಾನಂದವಾಗಿದೆ. || ೧ || ಈಗ ತೀರ್ಥರಾಜನಾದ ಪ್ರಯಾಗದಲ್ಲಿ ನಿತ್ಯವು ಆಚರಿಸಲೇಬೇಕಾದ ಮತ್ತು ಯಾವುದೋ ಕಾರಣಕ್ಕಾಗಿ ಆಚರಿಸಬೇಕಾದ ವ್ರತಗಳನ್ನೂ ಮತ್ತು ಅಪೇಕ್ಷೆಗಳು ನೆರವೇರುವ ಉದ್ದೇಶ್ಯದಿಂದ ಮಾಡಬೇಕಾಗಿರುವ ವ್ರತಗಳ ಆಚರಣೆಗಳ ಬಗ್ಗೆ ನಮಗೆ ಹೇಳೋಣವಾಗಲಿ.'' ಎಂದು ಪ್ರಶ್ನಿಸಿದರು. ||೨||

**ಸೂತ ಉವಾಚ—**

ಋಷಯಃ ಸಾಧು ಪೃಷ್ಟೋಽಹಂ ಭವದ್ಭಿರ್ಲೋಕಮಂಗಲೈಃ ।
ಯತ್ಕೃತಃ ಪುಣ್ಯಸಂಪ್ರಶ್ನಃ ಸರ್ವಲೋಕೋಪಕಾರಕಃ || ೩ ||
ನಿತ್ಯನೈಮಿತ್ತಿಕಂ ಕಾಮ್ಯಂ ನಿತ್ಯಂ ಕಾಮ್ಯಮಿತಿ ದ್ವಿಜಾಃ ।
ಉಕ್ತಂ ಸರ್ವಪುರಾಣೇಷು ಚತುರ್ವಿಧಮಪಿ ವ್ರತಮ್ || ೪ ||
ತತ್ರಾದೌ ವೈಷ್ಣವಂ ಪುಣ್ಯಂ ಶ್ರೇಷ್ಠಂ ಚೈಕಾದಶೀವ್ರತಮ್ ।
ಪ್ರತ್ಯವಾಯಶ್ರುತೇರ್ನಿತ್ಯಂ ಕಾಮ್ಯಂ ಚ ಫಲದರ್ಶನಾತ್ || ೫ ||
ಸರ್ವೇಷಾಮೇವ ವರ್ಣಾನಾಮಾಶ್ರಮಾಣಾಂ ಚ ಸರ್ವದಾ ।
ಸ್ತ್ರೀಣಾಂ ಚಾತ್ರಾಧಿಕಾರೋಽಸ್ತಿ ದೋಷಶ್ಚಾಕರಣೇ ತಥಾ || ೬ ||
ಅಷ್ಟಮಂ ವರ್ಷಮಾರಭ್ಯಾಶೀತಿರ್ಯಾವತ್ಪ್ರಪೂರ್ಯತೇ ।
ತಾವದ್ ವ್ರತಮಿದಂ ಕುರ್ಯಾದುಪವಾಸಾತ್ಮಕಂ ಹರೇಃ || ೭ ||
ಶುಕ್ಲಾ ಕೃಷ್ಣಾ ಚ ಸರ್ವೇಷಾಂ ಸಮೈವೈಕಾದಶೀ ಭವೇತ್ ।
ಗೃಹೀ ತತ್ಸ್ತ್ರೀ ಚ ಕೃಷ್ಣಾಯಾ ಮನುಕಲ್ಪಂ ಸಮಾಚರೇತ್ || ೮ ||
ಏಕಾದಶೀಷು ಕೃಷ್ಣಾಸು ಚಾತುರ್ಮಾಸ್ಯಗತಾಸು ಚ ।
ಕುರ್ಯಾದುಪೋಷಣಂ ಪುತ್ರೀ ಗೃಹಸ್ಥೋಽಪಿ ವಿಶೇಷತಃ || ೯ ||

ಏಕಾದಶ್ಯಾಮಹೋರಾತ್ರಂ ಕ್ರಿಯತೇ ಯದುಪೋಷಣಮ್ ।
ನಿತ್ಯವ್ರತಮಿದಂ ಪ್ರೋಕ್ತಂ ಪಕ್ಷಪಾತಕನಾಶನಮ್ ॥ ೧೦ ॥
ಅನೇಕನಿಯಮೈರ್ಯುಕ್ತಂ ಕ್ರಿಯತೇ ತ್ರಿದಿನಾತ್ಮಕಮ್ ।
ತದ್ ವ್ರತಂ ಕಾಮ್ಯಮಿತ್ಯುಕ್ತಂ ನಾನಾಕಾಮ್ಯಫಲಪ್ರದಮ್ ॥ ೧೧ ॥
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ಅನ್ನಮಾಶ್ರಿತ್ಯ ತಿಷ್ಠಂತಿ ತಾನಿ ವೈ ಹರಿವಾಸರೇ ॥ ೧೨ ॥
ಭುಂಜಾನಸ್ತತ್ರ ಸರ್ವಾಣಿ ತಾನ್ಯವಾಪ್ನೋತಿ ನಿಶ್ಚಿತಮ್ ।
ಇತಿ ಸರ್ವಪುರಾಣಾನಿ ಶಾಸ್ತ್ರಾಣ್ಯಪಿ ರಟಂತ್ಯಹೋ ॥ ೧೩ ॥
ಪುತ್ರವಾಂಶ್ಚ ಸಮರ್ಥಶ್ಚ ಬಂಧುಯುಕ್ತಸ್ತಥೈವ ಚ ।
ಉಭಯೋಃ ಪಕ್ಷಯೋಃ ಕಾಮ್ಯಂ ವ್ರತಂ ಕುರ್ಯಾತ್ತು ವೈಷ್ಣವಮ್॥ ೧೪ ॥
ಸಪುತ್ರೈರ್ಗೃಹಿಭಿರ್ನಿತ್ಯಮಪಿ ವಿಷ್ಣುಪರಾಯಣೈಃ ।
ಪಕ್ಷಯೋರುಭಯೋಃ ಕಾರ್ಯಂ ಸರ್ವದಾ ವೈಷ್ಣವಂ ವ್ರತಮ್ ॥ ೧೫ ॥
ಯಥಾ ಶುಕ್ಲಾ ತಥಾ ಕೃಷ್ಣಾ ಯಥಾ ಕೃಷ್ಣಾ ತಥಾ ಸಿತಾ ।
ತುಲ್ಯೇಽಪಿ ಮನ್ಯತೇ ಯಸ್ತು ಸ ವೈ ವೈಷ್ಣವ ಉಚ್ಯತೇ ॥ ೧೬ ॥
ಪತಿಪುತ್ರವತೀ ನಾರೀ ಯಚ್ಚ ಕುರ್ಯಾದ್ ವ್ರತಾದಿಕಾನ್ ।
ಪತ್ಯಾಜ್ಞಯೈವ ತತ್ತಸ್ಯಾಃ ಸರ್ವಕಾಮದುಘಂ ಭವೇತ್ ॥ ೧೭ ॥
ಯಾ ತು ಭರ್ತ್ರಾನನುಜ್ಞಾತಾ ಕುರ್ಯಾದ್ ವ್ರತಜಪಾದಿಕಮ್ ।
ನಿಷ್ಫಲಂ ತದ್ಭವೇತ್ತಸ್ಯಾ ಇತಿ ಶಾಸ್ತ್ರೇಷು ನಿಶ್ಚಿತಮ್ ॥ ೧೮ ॥
ವಿಧವಾಪಿ ಪ್ರಕುರ್ವೀತ ವ್ರತದಾನಜಪಾದಿಕಮ್ ।
ಯದಧೀನಾ ಭವೇತ್ತಸ್ಯಾನುಜ್ಞಯಾ ನಾನ್ಯಥಾ ಫಲಮ್ ॥ ೧೯ ॥
ಪುಷ್ಪಾಲಂಕಾರವಸ್ತ್ರಾಣಿ ಗಂಧಧೂಪಾಂಜನಾನಿ ಚ ।
ಉಪವಾಸೇನ ದುಷ್ಯಂತಿ ತಾಂಬೂಲಾದಿ ತು ವರ್ಜಯೇತ್ ॥ ೨೦ ॥
ಸೂತಕೇ ಮೃತಕೇ ಚೈವ ನಿತ್ಯಂ ರಜಸಿ ಚ ವ್ರತಮ್ ।
ಕುರ್ವೀತ ದೇಹನಿರ್ವರ್ತ್ಯಮುಪವಾಸಂ ನ ಚೇತರತ್ ॥ ೨೧ ॥
ರೋಗಾದಿಪ್ರತಿಬಂಧೇಷು ಪತಿಪತ್ನ್ಯೌ ಪರಸ್ಪರಮ್ ।
ನಿತ್ಯವ್ರತಂ ಪ್ರಕುರ್ಯಾತಾಂ ಕಾಮ್ಯಮಾವಶ್ಯಕಂ ನ ತು ॥ ೨೨ ॥
ದ್ವಿಜದ್ವಾರಾಥವಾ ಕುರ್ಯಾನ್ನಿತ್ಯಮೇವ ವ್ರತಂ ಗೃಹೀ ।
ಏವಂ ಹಿ ಫಲಮಾಪ್ನೋತಿ ಕಾಮ್ಯೇ ಪ್ರತಿನಿಧಿರ್ನ ಹಿ ॥ ೨೩ ॥
ಯೇನ ಕೇನ ಪ್ರಕಾರೇಣ ನಿತ್ಯವ್ರತಮಲಂಘಯನ್ ।
ಸಕಲಂ ಫಲಮಾಪ್ನೋತಿ ಪಾತಕೈರ್ನ ಚ ಲಿಪ್ಯತೇ ॥ ೨೪ ॥

ಕ್ರಿಯಾನುಕಲ್ಪಃ ಪ್ರಥಮೋ ದ್ವಿತೀಯಃ ಕರ್ತುರೇವ ಸಃ ।
ಪ್ರಥಮಃ ಸ್ಯಾದ್ಧವಿಷ್ಯಾದಿರ್ದ್ವಿಜದ್ವಾರೇ ದ್ವಿತೀಯಕಃ ॥ ೨೫ ॥
ದಶಮ್ಯೇಕಾದಶೀ ಚೇತಿ ದ್ವಾದಶೀ ಚ ದಿನತ್ರಯಮ್ ।
ಏಕಾದಶೀವ್ರತಂ ಕಾಮ್ಯಂ ನಾನಾನಿಯಮಸಂಯುತಮ್ ॥ ೨೬ ॥
ಸಾಯಮಾದ್ಯಂತಯೋರಹ್ನೋಃ ಸಾಯಂಪ್ರಾತಶ್ಚ ಮಧ್ಯಮೇ ।
ಉಪವಾಸಫಲಂ ಪ್ರೇಪ್ಸುರ್ಜಹ್ಯಾದ್ಭುಜಿಚತುಷ್ಟಯಮ್ ॥ ೨೭ ॥
ಅಥ ನಿತ್ಯೋಪವಾಸೀ ಚೇತ್ಸಾಯಂ ಪ್ರಾತರ್ಭುಜಿಕ್ರಿಯಾಮ್ ।
ವರ್ಜಯೇನ್ಮತಿಮಾನ್ಭಕ್ತ್ಯಾ ಸಂಪ್ರಾಪ್ತೇ ಹರಿವಾಸರೇ ॥ ೨೮ ॥
ಕಾಂಸ್ಯಪಾತ್ರಭುಜಿಕ್ಷೌದ್ರಂ ಪರಾನ್ನಂ ಚ ಪುನರ್ಭುಜಿಮ್ ।
ಮೈಥುನಂ ಚ ದಿವಾಸ್ವಾಪಂ ತೈಲಪರ್ಯಂಕಮೇವ ಚ ॥ ೨೯ ॥
ದಶಮ್ಯಾಂ ವರ್ಜಯೇದೇತದೇಕಭುಕ್ತಂ ಸಮಾಚರೇತ್ ।
ಅನ್ಯಾಂಶ್ಚ ನಿಯಮಾನ್ಕುರ್ಯಾದ್ವ್ರತಸಾದ್ಗುಣ್ಯಕಾರಕಾನ್ ॥ ೩೦ ॥
ಗಾತ್ರಾಭ್ಯಾಂಗಾನುಲೇಪೌ ಚ ದಂತಧಾವನಮೈಥುನೇ ।
ದಿವಾಸ್ವಾಪಂ ಚ ತಾಂಬೂಲಂ ಜಲಪಾನಂ ಪುನಃಪುನಃ ॥ ೩೧ ॥
ಭಾಷಣಂ ದರ್ಶನಂ ಸ್ಪರ್ಶಂ ಪತಿತಾಂತ್ಯಜಸೂತಕೈಃ ।
ಪಾಷಂಡಿನಾಸ್ತಿಕೋದಕ್ಯಾದಿಭಿರ್ನೈವಾಚರೇದ್ವ್ರತೀ ॥ ೩೨ ॥
ಕಾಂಸ್ಯಮಾಷಾನ್ನಕಂ ಕ್ಷೌದ್ರಂ ತೈಲಂ ವಿತಥಭಾಷಣಮ್ ।
ದಿವಾಸ್ವಾಪಂ ಪುನರ್ಭುಕ್ತಿಂ ಪರಾನ್ನಂ ಚ ವಿವರ್ಜಯೇತ್ ॥ ೩೩ ॥
ಸೂರ್ಯೋದಯೋತ್ತರಂ ಸ್ವಲ್ಪಾ ದ್ವಾದಶೀ ಪಾರಣೇ ದಿನೇ ।
ಉಷಃಕಾಲೇ ತದಾ ಕುರ್ಯಾತ್ಪ್ರಾತರ್ಮಾಧ್ಯಾಹ್ನಿಕಂ ವಿಧಿಮ್ ॥ ೩೪ ॥
ಶ್ರೌತೇಽಯಂ ನೈವ ಸಂಕೋಚಃ ಸಂಕೋಚಃ ಸ್ಮಾರ್ತಕರ್ಮಣಿ ।
ಸ್ಮಾರ್ತಪೌರಾಣಕರ್ಮಭ್ಯಃ ಶ್ರೌತಂ ಹಿ ಪ್ರಬಲಂ ಮತಮ್ ॥ ೩೫ ॥
ದ್ವಾದಶ್ಯಾಃ ಪ್ರಥಮಃ ಪಾದೋ ಹರಿವಾಸರ ಉಚ್ಯತೇ ।
ತಮುಲ್ಲಂಘ್ಯೈವ ಕುರ್ವೀತ ಪಾರಣಂ ವಿಷ್ಣುಭಕ್ತಿಮಾನ್ ॥ ೩೬ ॥
ಇತ್ಯಾದಿನಿಯಮಾನ್ ಜ್ಞಾತ್ವಾ ಕುರ್ಯಾದೇಕಾದಶೀವ್ರತಮ್ ।
ಏಕಾದಶೀಂ ವಿನಿರ್ಣೀಯ ಸಮ್ಯಕ್ಶಾಸ್ತ್ರೋಕ್ತವರ್ತ್ಮನಾ ॥ ೩೭ ॥

॥ ಇತಿ ಷಟ್ಷಷ್ಟಿತಮೋಽಧ್ಯಾಯಃ ॥

ಸೂತರು ಹೇಳಿದರು—

ಎಲೈ ಶೌನಕಾದಿಗಳೇ! ಪ್ರಪಂಚಕ್ಕೆ ಮಂಗಳಪ್ರದರಾದ ತಮ್ಮಗಳಿಂದ ನಾನು ಚೆನ್ನಾಗಿ ಪ್ರಶ್ನಿಸಲ್ಪಟ್ಟಿದ್ದೇನೆ. ಈ ಪ್ರಶ್ನೆಗಳಿಂದ ಲೋಕಕ್ಕೆ ಉಪಕಾರವಾಗುವುದು. ॥ ೩ ॥ ನಿತ್ಯ, ನೈಮಿತ್ತಿಕ,

ನಿತ್ಯಕಾಮ್ಯ ಮತ್ತು ಕಾಮ್ಯ ಎಂದು ಪುರಾಣಗಳಲ್ಲಿ ವ್ರತಗಳನ್ನು ನಾಲ್ಕು ಬಗೆಯಾಗಿ ವಿಂಗಡಿಸಿದ್ದಾರೆ. ॥ ೪ ॥ ಅವುಗಳಲ್ಲಿ ಪ್ರಾರಂಭದಲ್ಲಿ ಹೇಳಿರುವ ಏಕಾದಶೀವ್ರತವು ವಿಷ್ಣುಸಂಬಂಧವಾದುದು, ಶ್ರೇಷ್ಠವಾದುದು. ಕಾಮ್ಯವ್ರತದಲ್ಲಿ ಫಲವು ಸಿಗುವುದಾದರೂ ನಿತ್ಯವ್ರತವಾದ ಇದನ್ನು ಅನುಷ್ಠಾನ ಮಾಡದಿದ್ದರೆ ಪಾಪವು ಪ್ರಾಪ್ತವಾಗವುದು. ॥ ೫ ॥ ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣದವರಿಗೂ ಮತ್ತು ಸ್ತ್ರೀಯರಿಗೂ ಸಹ ಏಕಾದಶೀವ್ರತದ ಆಚರಣೆಯಲ್ಲಿ ಅಧಿಕಾರವಿದೆ, ಹಾಗೂ ಏಕಾದಶೀವ್ರತವನ್ನು ಮಾಡದಿದ್ದರೆ ಪಾಪಸಂಘಟನೆಯಾಗುವುದು. ॥ ೬ ॥ ಎಂಟು ವರ್ಷದಿಂದ ಎಂಭತ್ತು ವರ್ಷದವರೆವಿಗೂ ಶ್ರೀಹರಿಯನ್ನು ಕುರಿತು ಉಪವಾಸಾತ್ಮಕವಾದ ಈ ವ್ರತವನ್ನು ಮಾಡಬೇಕು. ॥ ೭ ॥ ಗೃಹಸ್ಥಾಶ್ರಮದಲ್ಲಿರುವ ಪುರುಷರು ಹಾಗೂ ಸ್ತ್ರೀಯರಿಗೆ ಕೃಷ್ಣಪಕ್ಷದ ಏಕಾದಶಿಯು ಕಿಂಚಿತ್ ಗೌಣವಾಗಿದ್ದರೂ ವ್ರತಾನುಷ್ಠಾನದಲ್ಲಿ ಎರಡು ಏಕಾದಶಿಗಳೂ ಎಲ್ಲರಿಗೂ ಸರಿಸಮವು. (ಕೃಷ್ಣಪಕ್ಷ ಏಕಾದಶಿಯು ಗೌಣವೆಂಬುದು ಅವೈಷ್ಣವರನ್ನು ಕುರಿತು ಹೇಳಿದ್ದು. ವೈಷ್ಣವರಿಗೆ ಎರಡು ಏಕಾದಶಿಗಳೂ ಸಮಾನ) ॥ ೮ ॥ ಕೃಷ್ಣಪಕ್ಷದ ಮತ್ತು ಚಾತುರ್ಮಾಸ್ಯದಲ್ಲಿರುವ (ಆಷಾಢ ಶುಕ್ಲೈಕಾದಶಿಯಿಂದ ಆರಂಭಿಸಿ ಕಾರ್ತಿಕ ಶುಕ್ಲೈಕಾದಶಿಯವರೆಗೆ) ಏಕಾದಶಿಗಳಲ್ಲಿ ಮಕ್ಕಳಂದಿಗರಾದ ಗೃಹಸ್ಥರು ಖಂಡಿತ ಉಪವಾಸ ಮಾಡಬೇಕು. ॥ ೯ ॥ ನಿತ್ಯವ್ರತವಾದ ಏಕಾದಶಿಯಂದು ಹಗಲು ಮತ್ತು ರಾತ್ರಿ ಕೂಡ ಉಪವಾಸ ಮಾಡುವು ದರಿಂದ ಆ ಏಕಾದಶಿಯ ಹಿಂದಿನ ಹದಿನೈದು ದಿವಸದಲ್ಲಿ ಮಾಡಿರುವ ಪಾಪಗಳೆಲ್ಲವೂ ಪರಿಹಾರ ವಾಗುವುವು. ॥ ೧೦ ॥ ದಶಮೀ, ಏಕಾದಶೀ ಮತ್ತು ದ್ವಾದಶೀಗಳಿಂದ ಕೂಡಿದ ಈ ಏಕಾದಶೀ ವ್ರತವು ಅನೇಕ ನಿಯಮಗಳನ್ನು ಒಳಗೊಂಡಿದ್ದು ಇದರ ಆಚರಣೆಯಿಂದ ನಾನಾಬಗೆಯ ಅಪೇಕ್ಷೆಗಳು ನೆರವೇರುವುದರಿಂದ ಮೂರು ದಿನಗಳ ಈ ವ್ರತವನ್ನು ಕಾಮ್ಯವ್ರತವೆಂದು ಪರಿಗಣಿಸಲಾಗಿದೆ. ॥ ೧೧ ॥ ಬ್ರಹ್ಮಹತ್ಯೆಗೆ ಸರಿಸಮನಾದ ಅನೇಕ ಪಾಪಗಳು ಹರಿದಿವಸವಾದ ಏಕಾದಶಿಯಂದು ತಿನ್ನುವ ಅನ್ನವನ್ನು ಆಶ್ರಯಿಸಿಕೊಂಡಿರುತ್ತವೆ. ಆದ್ದರಿಂದ ಈ ದಿನ ಭೋಜನದಿಂದ ಪಾಪಗಳನ್ನು ಹೊಂದುತ್ತಾರೆಂದು ಅನೇಕ ಶಾಸ್ತ್ರಪುರಾಣಗಳಲ್ಲಿ ಉಕ್ತವಾಗಿದೆ. ॥ ೧೨-೧೩ ॥ ಶಕ್ತನಾದವನು ಮಕ್ಕಳು ಮತ್ತು ಬಂಧುಬಾಂಧವರೊಡನೆ ಶುಕ್ಲ ಮತ್ತು ಕೃಷ್ಣ ಎರಡೂ ಪಕ್ಷಗಳಲ್ಲಿಯೂ ವಿಷ್ಣುವಿಗೆ ಪ್ರೀತಿಕರವಾದ ಕಾಮ್ಯವೆಂದು ಕರೆಯಲ್ಪಟ್ಟ ಏಕಾದಶಿಯನ್ನು ಆಚರಿಸಬೇಕು. ॥ ೧೪ ॥ ವಿಷ್ಣುಪರಾಯಣರಾದ ಪುತ್ರವಂತರಾದ ಗೃಹಸ್ಥರು ಎರಡು ಪಕ್ಷಗಳಲ್ಲೂ ಈ ವೈಷ್ಣವವ್ರತವನ್ನು ಯಾವಾಗಲೂ ಆಚರಿಸಬೇಕು. ॥ ೧೫ ॥ ''ಶುಕ್ಲಪಕ್ಷವು ಹೇಗೋ ಕೃಷ್ಣಪಕ್ಷವು ಹಾಗೆಯೇ ಮತ್ತು ಕೃಷ್ಣಪಕ್ಷವು ಹೇಗೋ ಶುಕ್ಲಪಕ್ಷವೂ ಹಾಗೆಯೇ'' ಎಂದು ಎರಡು ಪಕ್ಷಗಳ ಏಕಾದಶಿಯನ್ನು ಯಾರು ತಿಳಿಯುವರೋ ಅವರೇ ವೈಷ್ಣವರೆಂದು ಕರೆಯಲ್ಪಡಲು ಅರ್ಹರು. ॥ ೧೬ ॥ ಗಂಡ ಮಕ್ಕಳೊಡನಿರುವ ಮುತ್ತೈದೆಯು ಗಂಡನ ಆಜ್ಞಾದಿಂದ ಯಾವ ವ್ರತಾದಿಗಳನ್ನು ಆಚರಿಸುತ್ತಾಳೋ ಅವಳ ಸಕಲ ಇಷ್ಟಾರ್ಥಗಳೂ ಸಿದ್ದಿಸುವುವು. ॥ ೧೭ ॥ ''ಯಾವ ನಾರಿಯು ಗಂಡನ ಅನುಮತಿಯಿಲ್ಲದೆ ವ್ರತಜಪಾದಿಗಳನ್ನು ಮಾಡುವಳೋ ಅವಳ ಈ ಕಾರ್ಯಗಳೆಲ್ಲವೂ ಫಲಪ್ರದಗಳಾಗುವುದಿಲ್ಲ'' ಹೀಗೆಂದು ಶಾಸ್ತ್ರಾದಿಗಳಲ್ಲಿ ನಿಶ್ಚಯಿಸಲ್ಪಟ್ಟಿದೆ. ॥ ೧೮ ॥ ವಿಧವೆಯೂ ವ್ರತ, ದಾನ ಮತ್ತು ಜಪಗಳನ್ನು ಮಾಡಬೇಕು. ಆದರೆ ಅವಳು ಯಾರ ಆಧೀನ್ಯದಲ್ಲಿ ಇದ್ದಾಳೆಯೋ ಅವರ ಆಜ್ಞಾದಿಂದಲೇ ಇವನ್ನೆಲ್ಲಾ ಮಾಡಬೇಕು; ಇಲ್ಲದಿದ್ದರೆ ಇವೆಲ್ಲ ನಿಷ್ಫಲವಾಗುವುವು. ॥ ೧೯ ॥ ಹೂವಿನಿಂದ ಅಲಂಕಾರ ಮಾಡಿಕೊಳ್ಳುವುದು, ಹೊಸ ಹೊಸ

ಬಟ್ಟೆಗಳನ್ನು ಧಾರಣ ಮಾಡುವುದು, ಗಂಧಲೇಪನ, ಧೂಪದ ಸೇವನೆ, ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳುವುದು ತಾಂಬೂಲಸೇವನೆ ಮುಂತಾದವುಗಳು ಉಪವಾಸವಿರುವಾಗ ದೋಷಯುಕ್ತ-ಗಳಾಗುವುದರಿಂದ ಇವುಗಳನ್ನು ಬಿಡಬೇಕು. ॥ ೨೦ ॥ ಮೃತಾಶೌಚ ಮತ್ತು ಜನನಾಶೌಚ ಮತ್ತು ರಜಸ್ವಲೆಯಾಗಿರುವ ಕಾಲಗಳಲ್ಲಿಯೂ ಉಪವಾಸವನ್ನು ಮಾಡಲೇಬೇಕು; ಆದರೆ ವ್ರತಜಪಾದಿಗಳನ್ನು ಮಾಡಬಾರದು. ॥ ೨೧ ॥ ರೋಗರುಜಿನಗಳ ಉಪಟಳವಿದ್ದಾಗ ಗಂಡ-ಹೆಂಡರಿಬ್ಬರೂ ನಿತ್ಯವಾಗಿರತಕ್ಕ ಉಪವಾಸವನ್ನು ಬಿಡಬಾರದು. ಆದರೆ ಮೂರು ದಿನಗಳಲ್ಲಿ ಮಾಡಬೇಕಾದ ಕಾಮ್ಯವ್ರತವನ್ನು ಮಾಡಬೇಕಾಗಿಲ್ಲ. ॥ ೨೨ ॥ ತೀವ್ರವಾದ ಖಾಯಿಲೆಗಳಿದ್ದಾಗ ಬ್ರಾಹ್ಮಣನ ದ್ವಾರಾ ನಿತ್ಯವಾದ ಏಕಾದಶಿಯನ್ನು ಮಾಡಿಸಬಹುದು. (ತಕ್ಕ ಸಂಭಾವನೆ ಮತ್ತು ಮರ್ಯಾದೆಗಳ ಸಹಿತ) ಆದರೆ ಮೂರು ದಿವಸಗಳ ಕಾಮ್ಯವ್ರತವನ್ನು ಬೇರೆ ಯಾರೂ ಪ್ರತಿನಿಧಿಸುವಂತಿಲ್ಲ. ॥ ೨೩ ॥ ಯಾವ ವಿಧದಿಂದಲಾಗಲೀ ನಿತ್ಯವ್ರತವಾದ ಏಕಾದಶೀವ್ರತವನ್ನು ತಪ್ಪದೆ ಪರಿಪಾಲಿಸುವವನಿಗೆ ಯಾವ ಪಾತಕಗಳೂ ಅಂಟಿಕೊಳ್ಳುವುದಿಲ್ಲ. ಎಲ್ಲ ಫಲಗಳೂ ಲಭಿಸುವುವು. ॥ ೨೪ ॥ ಕ್ರಿಯೆಗಳನ್ನು ಪ್ರತಿನಿಧಿಸುವ ಪ್ರಥಮ ಕಲ್ಪವು ಯಾವುದು? ಮತ್ತು ಕರ್ತೃವನ್ನು ಯಾರು ಪ್ರತಿನಿಧಿಸಬಲ್ಲರು? ಎಂಬ ವಿಕಲ್ಪ ಬಂದಾಗ ಹವಿಷ್ಯಾದಿಗಳನ್ನು ಋತ್ವಿಜಾದಿ ಪ್ರತಿನಿಧಿಗಳಿಂದ ಹೋಮ ಮಾಡಿಸುವುದು ಪ್ರಥಮ ಕಲ್ಪ. ಏತಕ್ಕೆಂದರೆ ಎಲ್ಲ ಬಗೆಯ ಹವಿಸ್ಸನ್ನು ಯಜಮಾನನೇ ಹೋಮ ಮಾಡಲಾರನು. ಬೇರೆ ಕ್ರಿಯೆಗಳಿಗೆ ಗೌಣ ರೀತಿಯಾಗಿ ಬೇರೆಯವರಾಗಬಹುದು. ಇದು ದ್ವಿತೀಯ ಕಲ್ಪವು. ॥ ೨೫ ॥ ದಶಮೀ, ಏಕಾದಶೀ ಮತ್ತು ದ್ವಾದಶೀ ಎಂಬ ಮೂರು ದಿವಸಗಳ ವ್ಯಾಪ್ತಿಯಲ್ಲಿ ಆಚರಿಸುವ ಏಕಾದಶೀವ್ರತವು ಕಾಮ್ಯವ್ರತವು. ಇದು ನಾನಾಬಗೆಯ ನಿಯಮಗಳಿಗೆ ಒಳಪಟ್ಟಿದೆ. ॥ ೨೬ ॥ ಕಾಮ್ಯವ್ರತದ ಫಲವನ್ನು ಅಪೇಕ್ಷಿಸುವವರು ದಶಮಿಯ ರಾತ್ರಿಯ ಭೋಜನ, ಏಕಾದಶಿಯ ಬೆಳಗ್ಗಿನ ಮತ್ತು ಸಾಯಂಕಾಲದ ಭೋಜನ; ಮತ್ತು ದ್ವಾದಶಿಯರಾತ್ರಿಯ ಭೋಜನ ಹೀಗೆ ಈ ನಾಲ್ಕು ಭೋಜನಗಳನ್ನು ಮಾಡಬಾರದು. ॥ ೨೭ ॥ ಏಕಾದಶಿಯ ನಿತ್ಯವ್ರತದಲ್ಲಿರುವವನು ಏಕಾದಶಿಯಂದು ಬೆಳಗ್ಗಿನ ಮತ್ತು ರಾತ್ರಿಯ ಭೋಜನಗಳನ್ನು ಬಿಡಬೇಕು. ದ್ವಾದಶೀದಿನ ಹರಿವಾಸರವಿದ್ದರೆ ಅಂದರೆ ಏಕಾದಶೀ ಘಳಿಗೆಗಳಿದ್ದರೆ ಅಂದೂ ಭೋಜನವನ್ನು ಬಿಡಬೇಕು. ॥ ೨೮ ॥ ಕಂಚಿನ ಪಾತ್ರೆಯನ್ನೂ, ಉದ್ದು ಮಿಶ್ರಿತ ಅನ್ನವನ್ನೂ, ಜೇನುತುಪ್ಪವನ್ನೂ, ಮತ್ತೊಬ್ಬರ ಮನೆಯ ಅನ್ನವನ್ನು ತಿನ್ನುವುದು, ಮತ್ತೆ ಮತ್ತೆ ನೀರು ಕುಡಿಯುವುದು, ಸ್ತ್ರೀಸಂಗವನ್ನೂ, ಎಣ್ಣೆ ಹಚ್ಚಿಕೊಂಡ ಅಭ್ಯಂಜನ ಸ್ನಾನವನ್ನೂ, ಹಗಲು ನಿದ್ರೆಯನ್ನು ಮತ್ತು ಹಾಸಿಗೆಯುಳ್ಳ ಮಂಚದ ಮೇಲೆ ಮಲಗುವುದನ್ನು ದಶಮೀದಿವಸ ಬಿಡಬೇಕು. ಮತ್ತು ದಶಮಿ ದಿವಸ ಒಪ್ಪತ್ತು ಭೋಜನ ಮಾಡಬೇಕು. ಏಕಾದಶೀವ್ರತವು ಗುಣಪೂರ್ಣವಾಗಲು ಇನ್ನೂ ಅನೇಕ ಬೇರೆ ಬೇರೆ ನಿಯಮಗಳನ್ನು ಪಾಲಿಸಬೇಕು. ॥ ೨೯-೩೦ ॥ ಅವುಗಳೆಂದರೆ ಅಭ್ಯಂಜನ, ಗಂಧಲೇಪನ, ಹಲ್ಲುಜ್ಜುವುದು, ಸ್ತ್ರೀಸಂಗ, ಹಗಲು ನಿದ್ರೆ ಮಾಡುವುದು, ತಾಂಬೂಲ ಸೇವನೆ, ಆಗಾಗ್ಗೆ ನೀರು ಕುಡಿಯುವುದು ಇವುಗಳನ್ನು ಬಿಡಬೇಕು. ॥ ೩೧ ॥ ಪತಿತರು, ಅಂತ್ಯಜರು, ಸೂತಕದಲ್ಲಿರುವವರು, ಪಾಖಂಡಿಗಳು, ನಾಸ್ತಿಕರು, ಮೈಲಿಗೆಯಲ್ಲಿರುವವರು ಮತ್ತು ರಜಸ್ವಲೆ-ಯಾದವರು ಇವರೊಡನೆ ಮಾತನಾಡುವುದು ಅವರನ್ನು ದರ್ಶನ ಮಾಡುವುದು ಕೂಡ ಏಕಾದಶೀ ವ್ರತದಲ್ಲಿರುವವರಿಂದ ಬಿಡಲ್ಪಡಬೇಕು. ಕಂಚಿನ ಪಾತ್ರೆ, ಜೇನುತುಪ್ಪ, ಅಭ್ಯಂಗ, ಅನವಶ್ಯಕವಾಗಿ ಮಾತನಾಡುವುದು, ಪುನರ್ಭೋಜನ, ಪರಾನ್ನಭೋಜನ ಇವುಗಳನ್ನು ಸಹ ಕಾಮ್ಯವ್ರತಿಯು

ಬಿಡತಕ್ಕದ್ದು. ॥ ೩೨-೩೩ ॥ ದ್ವಾದಶೀದಿನ ಪಾರಣೆಯ ದಿನವಾದುದರಿಂದ ಅಂದು ಅಲ್ಪದ್ವಾದಶೀ ಇದ್ದರೂ ಸಂಧ್ಯಾವಂದನೆಯನ್ನೂ ಮಾಧ್ಯಾಹ್ನಿಕೆಯನ್ನೂ ಬೆಳಗ್ಗೆಯೇ ಮಾಡಿ ಮುಗಿಸಬೇಕು. ॥ ೩೪ ॥ ಶ್ರುತಿಗಳನುಸಾರವಾಗಿ ಈ ಎರಡು ಕರ್ಮಗಳನ್ನು ಮಾಡಬೇಕಾಗಿರುವುದರಿಂದ ಈ ಕರ್ಮಗಳನ್ನು ಅದರಲ್ಲಿಯೂ ಮಾಧ್ಯಾಹ್ನಿಕ ಸಂಧ್ಯೆಯನ್ನು ಸಂಕೋಚ ಮಾಡಬಾರದು; ಸ್ಮೃತಿಗಳನ್ನನುಸರಿಸಿ ಕರ್ಮ ಮಾಡುವ ಸ್ಮಾರ್ತರಿಗೆ ಈ ಸಂಕೋಚವುಂಟು. ಸ್ಮಾರ್ತ ಮತ್ತು ಪೌರಾಣಿಕ ಕರ್ಮಾನುಷ್ಠಾನಗಳಿಗಿಂತ ಶ್ರೌತಕರ್ಮಾನುಷ್ಠಾನವು ಪ್ರಬಲವಾದುದು ಎಂದು ಮತವಿದೆ. ॥ ೩೫ ॥ ದ್ವಾದಶಿಯ ಮೊದಲನೆಯ ಪಾದವು ಹರಿವಾಸರವೆಂದು ಕರೆಯಲ್ಪಡುತ್ತದೆ. ವಿಷ್ಣುಭಕ್ತಿಯುಳ್ಳವನು ಆ ಮೊದಲನೆಯ ಪಾದವು ಮುಗಿದ ಮೇಲೆಯೇ (ಅಂದರೆ ಹರಿವಾಸರವು ತೀರಿದಮೇಲೆಯೇ) ಪಾರಣೆಯನ್ನು ಮಾಡಬೇಕು. ॥ ೩೬ ॥ ಇವೇ ಮೊದಲಾದ ನಿಯಮಗಳನ್ನು ತಿಳಿದುಕೊಂಡು ಏಕಾದಶೀವ್ರತವನ್ನು ಮಾಡಬೇಕು. ಶಾಸ್ತ್ರಗಳಲ್ಲಿ ಹೇಳಿರುವ ದಾರಿಯಲ್ಲಿ ಏಕಾದಶಿಯನ್ನು ತೀರ್ಮಾನಿಸಬೇಕು. ॥ ೩೭ ॥

॥ ಅರವತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತಷಷ್ಟಿತಮೋಽಧ್ಯಾಯಃ ॥ ೬೭ ॥

ಸೂತ ಉವಾಚ—

ಅಥ ವಕ್ಷ್ಯೇ ಮುನಿಶ್ರೇಷ್ಠಾ ಏಕಾದಶ್ಯಾ ವಿನಿರ್ಣಯಮ್ ।
ವೈಷ್ಣವಸ್ಮಾರ್ತಯೋಗೇನ ವ್ರತಂ ಭವತಿ ನಿಶ್ಚಿತಮ್ ॥ ೧ ॥
ಸಂಪೂರ್ಣೈಕಾದಶೀ ವಿದ್ಧಾ ಖಂಡಾ ಚೇತಿ ತ್ರಿಧಾ ಮತಾ ।
ಖಂಡಾಯಾಂ ನಾಸ್ತಿ ಸಂದೇಹೋ ದ್ವಯೋರ್ನಿರ್ಣಯ ಉಚ್ಯತೇ ॥ ೨ ॥
ಪೂರ್ವಾರುಣೋದಯೇ ವ್ಯಾಪ್ಯ ಪರಸೂರ್ಯೋದಯೇ ಸ್ಥಿತಾ ।
ಸಂಪೂರ್ಣೈಕಾದಶೀ ಪ್ರೋಕ್ತಾ ಸೂರ್ಯಾತ್ಸೂರ್ಯಂ ಪರಾ ತಿಥಿಃ ॥ ೩ ॥
ಅರುಣೋದಯಕಾಲೇ ತು ದಶಾಲೇಶೋಽಪಿ ದೃಶ್ಯತೇ ।
ಸಾ ವಿದ್ಧೈಕಾದಶೀ ಜ್ಞೇಯಾ ಪರಾ ಖಂಡಾ ಪ್ರಕೀರ್ತಿತಾ ॥ ೪ ॥
ಅರುಣೋದಯವೇಧಶ್ಚ ವೇಧಃ ಸೂರ್ಯೋದಯೇ ತಥಾ ।
ದ್ವಿವಿಧೋ ದಶಮೀವಿದ್ಧೋ ವೈಷ್ಣವಸ್ಮಾರ್ತಯೋಃ ಕ್ರಮಾತ್ ॥ ೫ ॥
ಅರುಣೋದಯವೇಧಂ ತು ವೈಷ್ಣವಸ್ಸರ್ವಥಾ ತ್ಯಜೇತ್ ।
ಸ್ಮಾರ್ತಸ್ಸೂರ್ಯೋದಯೇ ವೇಧಂ ತ್ಯಜೇದಿತಿ ವಿನಿರ್ಣಯಃ ॥ ೬ ॥
ವೈಖಾನಸಾಗಮಪ್ರೋಕ್ತಾಂ ಪಂಚರಾತ್ರೋದಿತಾಂ ತಥಾ ।
ದೀಕ್ಷಾಂ ಯೋ ವೈಷ್ಣವಃ ಪ್ರಾಪ್ತಃ ಸ ವೈ ವೈಷ್ಣವ ಉಚ್ಯತೇ ॥ ೭ ॥
ನೈಕಾದಶೀಂ ತ್ಯಜೇದ್ಯಸ್ತು ಸಂಕಟೇಽಪಿ ಪರಾ ಯದಿ ।
ಜಿತಾಂತರಾದಿಷಡ್ವರ್ಗಸ್ಸ ವೈ ವೈಷ್ಣವ ಉಚ್ಯತೇ ॥ ೮ ॥
ಸಮಬುದ್ಧಿಸ್ಸದಾ ಲೋಕೇ ಮಿತ್ರೋದಾಸೀನಶತ್ರುಷು ।
ವಿಷ್ಣುರೂಪಂ ಜಗತ್ಸರ್ವಂ ಸ ವೈ ವೈಷ್ಣವ ಉಚ್ಯತೇ ॥ ೯ ॥
ದ್ರವೀಭೂತಂ ತು ಯಚ್ಚಿತ್ತಂ ವಿಷ್ಣುಪಾದಾಂಬುಜೇ ಕ್ಷಣಾತ್ ।
ಚಲತೇ ನ ಸ್ವಭಾವೇನ ಸ ವೈಷ್ಣವ ಉದಾಹೃತಃ ॥ ೧೦ ॥
ಭೇದೋ ನೈವಾವಯೋರ್ವಿಷ್ಣೋರಿತಿ ವಾಕ್ಯಮನುಸ್ಮರನ್ ।
ಶಿವಂ ನ ದ್ವೇಷ್ಟಿ ಶೈವಂ ಚ ವೈಷ್ಣವಸ್ಸ ಹರಿಪ್ರಿಯಃ ॥ ೧೧ ॥
ಸತ್ಪ್ರೇಮರಶನಾಬದ್ಧೋ ಜಾತು ಯದ್ಧೃದಯಂ ಹರಿಃ ।
ನ ಮುಂಚತಿ ತದಾಯತ್ತೋ ವೈಷ್ಣವಾಗ್ರ್ಯಸ್ಸ ಉಚ್ಯತೇ ॥ ೧೨ ॥
ಶಿವಾದಿದೀಕ್ಷಾಮಾಪನ್ನಃ ಶ್ರೌತಸ್ಮಾರ್ತಕ್ರಿಯಾಪರಃ ।
ಪ್ರಾಗುಕ್ತಲಕ್ಷಣೈರ್ಯುಕ್ತಃ ಸ್ಮಾರ್ತ ಇತ್ಯುಚ್ಯತೇ ಬುಧೈಃ ॥ ೧೩ ॥
ಅರುಣೋದಯವಿದ್ಧಾಯಾಮೇಕಾದಶ್ಯಾಮುಪೋಷಣಮ್ ।
ನ ಕುರ್ಯಾದ್ವೈಷ್ಣವೋ ನಿತ್ಯಂ ಸ್ಮಾರ್ತಃ ಕಾಮ್ಯಂ ಪರಿತ್ಯಜೇತ್ ॥ ೧೪ ॥

ಏಕಾದಶೀ ದ್ವಾದಶೀ ವೋಭಯಂ ವಾ ಯದಿ ವರ್ಧತೇ ।
ಶುದ್ಧಾಪ್ಯೇಕಾದಶೀ ತ್ಯಾಜ್ಯಾ ತದಾ ವಿಷ್ಣುಪರಾಯಣೈಃ ॥ ೧೫ ॥
ಪಕ್ಷತ್ರಯೇಽಪಿ ದ್ವಾದಶ್ಯಾಂ ವೈಷ್ಣವಾನಾಮುಪೋಷಣಮ್ ।
ಸ್ಮಾರ್ತಃ ಸೂರ್ಯೋದಯೇ ವಿದ್ಧಾಂ ತ್ಯಜೇನ್ನಿತ್ಯಂ ವ್ರತೇ ಸದಾ ॥ ೧೬ ॥
ಶುದ್ಧಾ ವಿದ್ಧಾ ದ್ವಿಧಾ ತ್ರೇಧಾ ಭಿನ್ನಾ ನ್ಯೂನಸಮಾಧಿಕೈಃ ।
ತ್ರಿಧೈಕೈಕಾ ಪುನರ್ಭಿನ್ನಾ ದ್ವಾದಶ್ಯೂನಸಮಾಧಿಕೈಃ ॥ ೧೭ ॥
ಪರೋದಯಾದ್ಘಟೀ ನ್ಯೂನಾ ಪಲನ್ಯೂನೋದಯಾಧಿಕಾ ।
ನ್ಯೂನಾ ಸಮಾಧಿಕಾ ಜ್ಞೇಯಾ ಸೂಕ್ಷ್ಮದೃಷ್ಟ್ಯಾ ವಿಚಕ್ಷಣೈಃ ॥ ೧೮ ॥
ಷಟ್ಸು ಪೂರ್ವಾರ್ಧಪಕ್ಷೇಷು ಸಪ್ತಮೇ ಚಾಷ್ಟಮೇ ತಥಾ ।
ಕರ್ತವ್ಯಾ ಗೃಹಿಭಿಃ ಪೂರ್ವಾ ವಿಧವಾ ಯತಿಭಿಃ ಪರಾ ॥ ೧೯ ॥
ಸಕಾಮಾ ಗೃಹಿಭಿಃ ಪ್ರೋಕ್ತಾ ನಿಷ್ಕಾಮಾ ಯತಿಭಿಸ್ತಥಾ ।
ಪರಾಖಿಲಾನಾಂ ನವಮ ಇತಿ ಶುದ್ಧಾವಿನಿರ್ಣಯಃ ॥ ೨೦ ॥
ಜ್ಯೋತಿಶ್ಶಾಸ್ತ್ರೇಣ ನಿಶ್ಚಿತ್ಯ ತಿಥಿಂ ತತ್ರ ವ್ರತಂ ಚರೇತ್ ।
ಸ್ಥೂಲದೃಷ್ಟ್ಯಾ ನ ಕುರ್ವೀತ ಸಂದೇಹೇ ತು ಪರಾ ಭವೇತ್ ॥ ೨೧ ॥
ಏಕಾದಶ್ಯಾಂ ಪಿತೃಶ್ರಾದ್ಧಂ ಭವೇದ್ಯದಿ ಮುನೀಶ್ವರಾಃ ।
ಕುರ್ವೀತ ವಿಧಿವಚ್ಛ್ರಾದ್ಧಮಾಘ್ರಾಯ ಪಿತೃಸೇವಿತಮ್ ॥ ೨೨ ॥
ವ್ರತೇಽಹನಿ ಋತುಸ್ನಾತಾ ಯಸ್ಯ ಭಾರ್ಯಾ ಪತಿವ್ರತಾ ।
ಪರರಾತ್ರೇ ಋತುಂ ದದ್ಯಾತ್ ಷೋಡಶ್ಯಾಮಿತಿ ಕೇಚನ ॥ ೨೩ ॥
ಏಕಾದಶ್ಯಾಂ ವ್ರತೀ ಕೃತ್ವಾ ಗಂಡೂಷಾನ್ದ್ವಾದಶೋಽಪಿ ।
ನದ್ಯಾದೌ ವಿಧಿವತ್ಪ್ರಾತಃ ಸ್ನಾತ್ವಾ ಸಂಕಲ್ಪಯೇದ್ವ್ರತಮ್ ॥ ೨೪ ॥
ನಿತ್ಯಕೃತ್ಯಮನುಷ್ಠಾಯ ಗತ್ವಾ ಗೇಹೇ ಶುಚಿಸ್ಥಲೇ ।
ವಿದಧ್ಯಾನ್ಮಂಟಪಂ ತತ್ರ ಪುಷ್ಪಪಲ್ಲವಶೋಭಿತಮ್ ॥ ೨೫ ॥
ತತ್ರ ಸಂಪೂಜಯೇದ್ವಿಷ್ಣುಮುಪಚಾರೈರನೇಕಧಾ ।
ಯಥಾಶಕ್ತಿ ಯಥಾಜ್ಞಾನಂ ಯಥಾಭಕ್ತಿಸಮನ್ವಿತಃ ॥ ೨೬ ॥
ನಾನಾಪುಷ್ಪೈಶ್ಚ ಮಾಲ್ಯೈಶ್ಚ ತುಲಸೀನಾಂ ದಲೈಶ್ಶುಭೈಃ ।
ಧೂಪದೀಪೈಶ್ಚ ನೈವೇದ್ಯೈಃ ಪೂಜಯೇದ್ಭಕ್ತಿಮಾನ್ ವ್ರತೀ ॥ ೨೭ ॥
ವಿಷ್ಣುಮಂತ್ರಜಪೈರ್ನಾನಾಸೂಕ್ತಪಾಠೈರತಂದ್ರಿತಃ ।
ಪ್ರದಕ್ಷಿಣನಮಸ್ಕಾರೈಃ ಸ್ತೋತ್ರಪಾಠೈರ್ನಯೇದ್ದಿನಮ್ ॥ ೨೮ ॥
ವಿಷ್ಣೋಸ್ಸಮಂತತೋ ರಾತ್ರೌ ದೀಪಾನುದ್ಬೋಧ್ಯ ಮಂಗಲಾನ್ ।
ಜಾಗರಂ ತತ್ರ ಕುರ್ವೀತ ಗೀತವಾದಿತ್ರನರ್ತನೈಃ ॥ ೨೯ ॥

ವಾಸುದೇವಸ್ಯ ಪುರತೋ ರಾತ್ರೌ ಗಾಯತಿ ಯಃ ಪುಮಾನ್ ।
ಗಾಂಧರ್ವಗಾಯನಂ ಶೃಣ್ವನ್ನಿಂದ್ರಲೋಕಂ ಪ್ರಯಾತ್ಯಸೌ ॥ ೩೦ ॥
ಜಾಗರೇ ತು ವಿಶೇಷೇಣ ಪುಣ್ಯಂ ಶಾಸ್ತ್ರೇऽವಧಾರಿತಮ್ ।
ಧರೋದ್ಧಾರೇ ವರಾಹೇಣ ಪೃಥಿವ್ಯೈ ಕಥಿತಂ ಪುರಾ ॥ ೩೧ ॥
ಹರಿಜಾಗರಣೇ ಗೀತೇ ವಾದ್ಯೇ ನೃತ್ಯೇ ಪ್ರಬೋಧನೇ ।
ತತ್ಸರ್ವಂ ಯತ್ಪುರಾ ವೃತ್ತಂ ವ್ಯಾಸೇನೋಕ್ತಂ ಮಮಾಂತಿಕೇ ॥ ೩೨ ॥
ನ ಯೋಗೈಃ ಪ್ರಾಪ್ಯತೇ ಸಾಂಖ್ಯೈಸ್ತಪಸಾ ಚ ಸ್ವಧರ್ಮತಃ ।
ಅನಾಯಾಸೇನ ತತ್ಪ್ರಾಪ್ಯಮೇಕಾದಶ್ಯಾಂ ಚ ಜಾಗರಾತ್ ॥ ೩೩ ॥
ನಾತ್ರ ದಾನಂ ಪ್ರಶಂಸಂತಿ ನಾಷ್ಟಾಂಗೋ ಯೋಗಧಾರಣಾ ।
ಯತ್ಫಲಂ ಲಭತೇ ರಾತ್ರೌ ಕೃಷ್ಣವಕ್ತ್ರಾವಲೋಕನಾತ್ ॥ ೩೪ ॥
ನೃತ್ಯಗಾಯನವಾದ್ಯಾನಿ ಯೇ ವೈ ಕುರ್ವಂತಿ ಜಾಗರೇ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೩೫ ॥
ಏಕಾದಶ್ಯಾಂ ನಿರಾಹಾರೋ ರಾತ್ರೌ ಜಾಗರಣಂ ನರಃ ।
ಹೃಷಿಕೇಶಾಗ್ರತಃ ಕೃತ್ವಾ ಸರ್ವಾನ್ಕಾಮಾನವಾಪ್ನುಯಾತ್ ॥ ೩೬ ॥
ತಾಲವೀಣಾಮೃದಂಗಾಶ್ಚ ವಾದಯಂತಿ ಚ ಯೇ ನರಾಃ ।
ಪ್ರಸನ್ನೋ ಮಾಧವಸ್ತೇಷಾಂ ಜಾಗರೇ ಭವತಿ ಧ್ರುವಮ್ ॥ ೩೭ ॥
ಪಾತಕೀ ಪುಲ್ಕಸಃ ಕಶ್ಚಿದ್ಗೀತಪುಣ್ಯೇನ ರಾಕ್ಷಸಮ್ ।
ವನಾಂತೇ ಮೋಚಯಾಮಾಸ ಕೃಪಯಾ ಮುನಿಸತ್ತಮಾಃ ॥ ೩೮ ॥
ಏವಂ ಪ್ರಭಾವಾ ಬಹುಧಾ ಕಥಿತೈಕಾದಶೀ ಮಯಾ ।
ಸಾಂಗೋಪಾಂಗಂ ಯಥಾಶಕ್ತ್ಯಾ ಕಿಮನ್ಯಚ್ಛ್ರೋತುಮಿಚ್ಛಥ ॥ ೩೯ ॥

॥ ಇತಿ ಸಪ್ತಷಷ್ಟಿತಮೋऽಧ್ಯಾಯಃ ॥

## ॥ ಅರವತ್ತೇಳನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಎಲೈ ಋಷಿಗಳೇ! ಮುನಿಶ್ರೇಷ್ಠರೇ! ಏಕಾದಶೀತಿಥಿಯ ನಿರ್ಣಯವನ್ನು ಹೇಳುತ್ತೇನೆ, ಕೇಳಿ. ಈ ರೀತಿ ವೈಷ್ಣವರು ಮತ್ತು ಸ್ಮಾರ್ತರುಗಳಿಬ್ಬರಿಗೂ ಅನ್ವಯಿಸುವಂತೆ ಏಕಾದಶೀತಿಥಿಯು ನಿರ್ಣಯಿಸಲ್ಪಡುವುದು. ॥ ೧ ॥ ಏಕಾದಶೀತಿಥಿಯು ಸಂಪೂರ್ಣೈಕಾದಶೀ, ವಿದ್ಧೈಕಾದಶೀ ಮತ್ತು ಖಂಡೈಕಾದಶೀ ಎಂದು ಮೂರು ಬಗೆಗಳಾಗಿವೆ. ಖಂಡೈಕಾದಶೀವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಇನ್ನು ಉಳಿದ ವಿದ್ಧ ಮತ್ತು ಸಂಪೂರ್ಣೈಕಾದಶೀ ಬಗ್ಗೆ ನಿರ್ಣಯವು ಹೇಳಲ್ಪಡುವುದು. ॥ ೨ ॥ ಮೊದಲಿನ ಅರುಣೋದಯದಿಂದ ಆರಂಭಿಸಿ ಮರುದಿನದ ಸೂರ್ಯೋದಯದವರೆಗೆ ವ್ಯಾಪಿಸಿರುವ ಏಕಾದಶಿಯು "ಸಂಪೂರ್ಣೈಕಾದಶೀ" ಎಂದು

ಕರೆಯಲ್ಪಡುವುದು. ಸಾಮಾನ್ಯವಾಗಿ ಏಕಾದಶೀ ವಿನಹ ಒಂದು ಸೂರ್ಯೋದಯದಿಂದ ಹಿಡಿದು ಇನ್ನೊಂದು ಸೂರ್ಯೋದಯದವರೆಗಿರುವ ತಿಥಿಯು ಸಂಪೂರ್ಣ ತಿಥಿಯೆಂದು ಹೇಳಲ್ಪಡುತ್ತದೆ. ॥ ೩ ॥ ಅರುಣೋದಯಕಾಲದಲ್ಲಿ ದಶಮಿಯ ಲೇಶವು ಇದ್ದರೂ ಏಕಾದಶೀಯನ್ನು "ವಿದ್ಧೈಕಾದಶೀ" ಎಂದು ತಿಳಿಯಬೇಕು. ಇವೆರಡರಿಂದ ಭಿನ್ನವಾದ ಎಂದರೆ, ಅರುಣೋದಯ ದಿಂದ ಆರಂಭಿಸಿ ಮರುದಿನ ಸೂರ್ಯೋದಯ ಪರ್ಯಂತವೂ ವ್ಯಾಪಿಸದಿರುವ, ಹಾಗೂ ಅರುಣೋದಯ ಕಾಲಕ್ಕೆ ದಶಮಿಯ ಲೇಶವಿಲ್ಲದಿರುವ ಏಕಾದಶೀತಿಥಿಯು "ಖಂಡೈಕಾದಶೀ" ಎಂದು ತಿಳಿಯಬೇಕು. ॥ ೪ ॥ ದಶಮೀತಿಥಿಯು ಏಕಾದಶೀತಿಥಿಯ ಪ್ರಾತಃಕಾಲದ ಅರುಣೋದಯದಲ್ಲಿ ನುಗ್ಗಿ ತನ್ನ ವ್ಯಾಪ್ತಿಯನ್ನು ಹೊಂದಿದ್ದರೆ ಅದಕ್ಕೆ ಅರುಣೋದಯವೇಧೆ ಎಂದೂ ಸೂರ್ಯೋದಯದ ಕಾಲದಲ್ಲಿಯೂ ದಶಮಿಯು ನುಗ್ಗಿ ಬಂದರೆ ಅಂತಹ ದಶಮೀವೇಧೆಗೆ ಸೂರ್ಯೋದಯವೇಧೆಯೆಂದೂ ಕರೆಯುತ್ತಾರೆ. ಅರುಣೋದಯವೇಧೆಯು ವೈಷ್ಣವರಿಗೂ, ಸೂರ್ಯೋದಯವೇಧವು ಸ್ಮಾರ್ತರಿಗೂ ಸಮ್ಮತವಾದುವುಗಳು. ॥ ೫ ॥ ಅರುಣೋದಯವೇಧವನ್ನು ವೈಷ್ಣವರು ಬಿಡಲೇಬಾರದೆಂದು ಹಾಗೆಯೇ ಸೂರ್ಯೋದಯ ವೇಧವನ್ನು ಸ್ಮಾರ್ತರು ಬಿಡಲೇಬಾರದೆಂದು ನಿರ್ಣಯಗಳಾಗಿವೆ. ॥ ೬ ॥ ವೈಖಾನಸಾಗಮದಲ್ಲಿ ಹೇಳಿರುವ ಮತ್ತು ಪಂಚರಾತ್ರದಲ್ಲಿ (ಇದು ಶ್ರೀನಾರಾಯಣದೇವರಿಂದಲೇ ರಚಿತವಾದ ಗ್ರಂಥವು) ಹೇಳಿರುವಂತೆಯೂ ದೀಕ್ಷೆಯಲ್ಲಿ ಇರುವವರೇ ವೈಷ್ಣವರು. ॥ ೭ ॥ ಯಾರು ಮಹತ್ತರವಾದ ಸಂಕಟಪ್ರಾಪ್ತವಾದರೂ ಏಕಾದಶೀವ್ರತದ ದೀಕ್ಷೆಯನ್ನು ಬಿಡುವುದಿಲ್ಲವೋ, ಯಾರು ಅರಿಷಡ್ವರ್ಗವನ್ನೂ, ತನ್ನ ಮನಸ್ಸನ್ನೂ ಗೆದ್ದಿರುವನೋ ಅವನೇ ವೈಷ್ಣವನು. ॥ ೮ ॥ ಯಾರು ಮಿತ್ರರು, ಉದಾಸೀನರು ಮತ್ತು ಶತ್ರುಗಳಲ್ಲಿ ಸಮಭಾವವನ್ನಿಟ್ಟುಕೊಂಡು ಜಗತ್ತೆಲ್ಲವನ್ನೂ ವಿಷ್ಣುಪ್ರತಿಮಾರೂಪವೆಂದು ತಿಳಿಯುತ್ತಾರೋ ಅವರೇ ವೈಷ್ಣವರು. ॥ ೯ ॥ ಯಾರ ಹೃದಯವು ವಿಷ್ಣುಪಾದಕಮಲದ ದರ್ಶನವಾಗುತ್ತಲೇ ಕರಗಿಹೋಗುವುದೋ, ಯಾರು ತನ್ನ ಸಾತ್ವಿಕ ಸ್ವಭಾವದಿಂದ ವಿಚಲಿತರಾಗುವುದಿಲ್ಲವೋ ಅವರೇ ವೈಷ್ಣವರು. ॥ ೧೦ ॥ ನಮ್ಮಿಬ್ಬರಲ್ಲಿ ಯಾವ ಮತಭೇದವನ್ನೂ ಎಣಿಸದೆ ಯಾರು ಶಿವನನ್ನೂ, ಶಿವಭಕ್ತನನ್ನೂ ದ್ವೇಷ ಮಾಡುವುದಿಲ್ಲವೋ ಅವನೇ ನಿಜವಾದ ವೈಷ್ಣವಾಗ್ರೇಸರನು. (ಅಂದರೆ ಶಿವನೂ ನಿಜವಾದ ವೈಷ್ಣವನೇ ಎಂಬ ಭಾವದಿಂದ ಶಿವನನ್ನೂ ಶಿವಭಕ್ತರನ್ನೂ ಆದರದಿಂದ ಕಾಣುವವನು ಎಂದರ್ಥ) ॥ ೧೧ ॥ ಯಾರ ಹೃದಯದಲ್ಲಿ ಶ್ರೀಹರಿಯು ಪ್ರೇಮವೆಂಬ ಪಾಶದಿಂದ ಬಂಧಿಸಲ್ಪಟ್ಟಿದಾನೋ ಮತ್ತು ಅವನನ್ನು ಬಿಡುವುದೇ ಇಲ್ಲವೋ ಅವನೇ ವೈಷ್ಣವಾಗ್ರೇಸರನು. ॥ ೧೨ ॥ ಶಿವನೇ ಮೊದಲಾದ ಐದು ದೇವತೆಗಳಲ್ಲಿ ಒಬ್ಬರನ್ನು ಪೂಜಿಸುತ್ತಾ ಶ್ರೌತ ಮತ್ತು ಸ್ಮಾರ್ತಕ್ರಿಯಾಪರನಾಗಿದ್ದು ಹಿಂದೆ ಹೇಳಿದ ಸೂರ್ಯೋದಯವೇಧದ ಏಕಾದಶೀವ್ರತಾಚರಣೆಯುಳ್ಳವಾಗಿದ್ದವನ ಲಕ್ಷಣಗಳಿಂದ ಕೂಡಿದ್ದರೆ ಅವನನ್ನು ಸ್ಮಾರ್ತನೆಂದು ಕರೆಯುತ್ತಾರೆ. ॥ ೧೩ ॥ ಅರುಣೋದಯದಲ್ಲಿ ದಶಮಿಯಿಂದ ವಿದ್ಧವಾದ ಏಕಾಶಿಯಲ್ಲಿ ವೈಷ್ಣವರು ಉಪವಾಸವನ್ನು ಮಾಡಬಾರದು; ಸ್ಮಾರ್ತರು ಕಾಮ್ಯವಾದ ಏಕಾದಶಿಯನ್ನು ಮಾಡಬಾರದು ॥ ೧೪ ॥ ಏಕಾದಶೀಯಾಗಲೀ, ದ್ವಾದಶೀಯಾಗಲೀ, ಎರಡೂ ಆಗಲೀ ವೃದ್ಧಿಯಾಗುವ ಪಕ್ಷದಲ್ಲಿ (ದಿನಪೂರ್ತಿಯಿದ್ದು, ಮಾರನೇ ದಿನವೂ ಇರುವ ಪಕ್ಷಕ್ಕೆ) ಶುದ್ಧವಾದ ಏಕಾದಶಿಯೂ ಸಹ ವಿಷ್ಣುಭಕ್ತರಿಗೆ ತ್ಯಜಿಸಲು ಯೋಗ್ಯವಾದದ್ದು ॥ ೧೫ ॥ ಈ ಮೂರು ಪಕ್ಷದಲ್ಲಿಯೂ ವೈಷ್ಣವರು ದ್ವಾದಶಿಯಂದು ಉಪವಾಸ ಮಾಡಬೇಕು. ಸ್ಮಾರ್ತರು

ಸೂರ್ಯೋದಯದಲ್ಲಿ ವಿದ್ಧವಾದ ಏಕಾದಶಿಯನ್ನು ನಿತ್ಯವ್ರತದಲ್ಲಿ ಪರಿತ್ಯಾಗ ಮಾಡಬೇಕು. ॥ ೧೬ ॥ ಏಕಾದಶಿಯು ಶುದ್ಧ ಹಾಗೂ ವಿದ್ಧ ಎಂದು ಎರಡು ವಿಧ. ಇವೆರಡೂ ಸಹ ನ್ಯೂನ, ಸಮ, ಅಧಿಕ ಎಂದು ಪ್ರತ್ಯೇಕವಾಗಿ ಮೂರು ವಿಧ. ಇದರಂತೆಯೇ ದ್ವಾದಶಿಯೂ ನ್ಯೂನ, ಸಮ, ಅಧಿಕ ಎಂದು ಮೂರು ವಿಧ (ಏಕಾದಶಿಯಲ್ಲಿ ಶುದ್ಧನ್ಯೂನ, ಶುದ್ಧಸಮ, ಶುದ್ಧಾಧಿಕ, ವಿದ್ಧನ್ಯೂನ, ವಿದ್ಧ ಸಮ, ವಿದ್ಧಾಧಿಕ ಎಂದು ಆರು ಪ್ರಭೇದಗಳು. ಈ ಏಕಾದಶಿಯ ಮುಂದಿರುವ ದ್ವಾದಶಿಯೂ ಅದರಂತೆ ನ್ಯೂನ, ಸಮ ಅಥವಾ ಅಧಿಕವಾಗಿರಬಹುದು) ॥ ೧೭ ॥ ನ್ಯೂನವೆಂದರೆ ಮಾರನೇ ದಿಸ ಸೂರ್ಯೋದಯಕ್ಕೆ ಕೆಲವು ಘಳಿಗೆಗಳು ಮುಂಚೆಯೇ ತಿಥಿಯು ಮುಗಿಯತಕ್ಕದ್ದು. ಅಧಿಕವೆಂದರೆ ಮಾರನೇ ದಿನ ಸೂರ್ಯೋದಯದ ನಂತರವೂ ಕೆಲವು ಘಳಿಗೆಗಳು ಇರತಕ್ಕದ್ದು ॥ ೧೮ ॥ ಈ ಮೇಲೆ ಹೇಳಿದ ಆರು ಪಕ್ಷಗಳಲ್ಲಿಯೂ, ಹಾಗೂ ಏಳನೇ ಮತ್ತು ಎಂಟನೇ ಪಕ್ಷಗಳಲ್ಲಿಯೂ (ಎಂದರೆ ದ್ವಾದಶಿಯು ನ್ಯೂನ ಅಥವಾ ಸಮವಿದ್ದಾಗಲೂ) ಗೃಹಸ್ಥಾಶ್ರಮಿಗಳು ಹಿಂದಿನ ದಿನವೂ, ವಿಧವೆಯರು ಹಾಗೂ ಯತಿಗಳು ಮಾರನೇ ದಿನವೂ ಉಪವಾಸವನ್ನು ಮಾಡಬೇಕು. ಗೃಹಸ್ಥರಿಗೆ ಸಕಾಮ ಏಕಾದಶಿಯು; ಯತಿಗಳಿಗೆ ನಿಷ್ಕಾಮ ಏಕಾದಶಿಯೆಂದು ತಿಳಿಯಬೇಕು ॥ ೧೯ ॥ ಒಂಬತ್ತನೆಯ ಪಕ್ಷದಲ್ಲಿ ಎಂದರೆ ದ್ವಾದಶಿಯು ಅಧಿಕವಾಗಿದ್ದಾಗ ಎಲ್ಲರೂ ಮಾರನೇ ದಿನ ಉಪವಾಸವನ್ನು ಮಾಡಬೇಕು (ವಿದ್ಧಪಕ್ಷದಲ್ಲಿ ಮಾರನೇ ದಿನವೇ ಉಪವಾಸವಾಗುತ್ತದೆ. ಶುದ್ಧಪಕ್ಷದಲ್ಲಿ ಏಕಾದಶಿಯು ನ್ಯೂನ, ಸಮ, ಅಧಿಕವಾದಾಗ, ದ್ವಾದಶಿಯು ನ್ಯೂನ, ಸಮ, ಅಧಿಕವಾಗುವ ಕ್ರಮದಿಂದ ಒಟ್ಟು ಒಂಬತ್ತು ಪಕ್ಷಗಳಾಗುತ್ತವೆ. ಇದರಲ್ಲಿ ಏಕಾದಶಿಯೂ ಅಧಿಕ, ದ್ವಾದಶಿಯೂ ಅಧಿಕ ಎಂಬುದು ಒಂಬತ್ತನೆಯ ಪಕ್ಷ. ಈ ಪಕ್ಷದಲ್ಲಿ ಮಾತ್ರ ಎಲ್ಲರಿಗೂ ಮಾರನೇ ದಿನವೇ ಉಪವಾಸವೆಂದು ಅಭಿಪ್ರಾಯ.) ವೈಷ್ಣವರು ಗೃಹಸ್ಥರಾಗಲೀ, ಯತಿಗಳಾಗಲೀ ನಿಷ್ಕಾಮ ಏಕಾದಶಿಯನ್ನೇ ಮಾಡಬೇಕು. ಗೃಹಸ್ಥರಿಗೆ ಸಕಾಮ ಏಕಾದಶೀ ಉಪವಾಸ; ಯತಿಗಳಿಗೆ ಹಾಗೂ ವಿಧವೆಯರಿಗೆ ನಿಷ್ಕಾಮ ಏಕಾದಶೀ ಉಪವಾಸ ಎನ್ನುವುದು ಭಾಗವತ ಸಂಪ್ರದಾಯದಲ್ಲಿದೆ. ॥ ೨೦ ॥ ಜ್ಯೋತಿಶ್ಶಾಸ್ತ್ರಾನುಸಾರವಾಗಿ ತಿಥಿಯನ್ನು ನಿಶ್ಚಯ ಮಾಡಿಕೊಂಡು ಅದರಂತೆ ವ್ರತವನ್ನು ಆಚರಿಸತಕ್ಕದ್ದು. ಸ್ಥೂಲದೃಷ್ಟಿಯಿಂದ ಮಾಡಬಾರದು. ಸಂದೇಹ ಬಂದಾಗ ಮಾರನೇ ದಿನ ಏಕಾದಶೀಯಾಗುವುದು- ಅದನ್ನು ಆಚರಿಸತಕ್ಕದ್ದು. ॥ ೨೧ ॥ ಹೇ ಮುನೀಶ್ವರರೇ! ಏಕಾದಶಿಯ ದಿನ ಪಿತೃಶ್ರಾದ್ಧ ಬಂದಾಗ ಅಂದು ಪಿತೃಶ್ರಾದ್ಧವನ್ನು ವಿಧಿವತ್ತಾಗಿ ಆಚರಿಸಿ ಪಿತೃಶೇಷವನ್ನು ಕೇವಲ ಮೂಸಿ ನೋಡಿ ಬಿಡಬೇಕು. ಇದು ಸ್ಮಾರ್ತರ ಕ್ರಮ. ವೈಷ್ಣವರಲ್ಲಿ ಏಕಾದಶೀತಿಥಿಯನ್ನು ದ್ವಾದಶೀದಿನ ಮಾಡುವ ಕಟ್ಟುನಿಟ್ಟಾದ ಸಂಪ್ರದಾಯವಿದೆ. ಇದನ್ನು ಗಮನಿಸಬೇಕು. ॥ ೨೨ ॥ ಏಕಾದಶೀವ್ರತದ ದಿವಸ ವ್ರತಿಯ ಪತಿವ್ರತೆಯಾದ ಹೆಂಡತಿಯು ಋತುಸ್ನಾನ ಮಾಡಿದರೆ ಮಾರನೆಯ ದಿನವೇ (ಎಂದರೆ ತ್ರಯೋದಶಿಯ ದಿನ) ಆಕೆಗೆ ಋತುದಾನವನ್ನು ಮಾಡಬಹುದು. ಈ ದಿನದಿಂದ ಹದಿನಾರು ದಿನಗಳಲ್ಲಿ ಋತುದಾನ ಮಾಡಬಹುದೆಂದೂ ಇದೆ. ॥ ೨೩ ॥ ಏಕಾದಶೀವ್ರತ ಮಾಡುವವನು ಅರುಣೋದಯಕ್ಕೆ ನದ್ಯಾದಿಗಳಿಗೆ ಹೋಗಿ, ಹನ್ನೆರಡು ಸಾರಿ ಬಾಯಿ ಮುಕ್ಕಳಿಸಿ ವಿಧಿವತ್ತಾಗಿ ಸ್ನಾನ ಮಾಡಿ ಏಕಾದಶೀವ್ರತಾನುಷ್ಠಾನದ ಸಂಕಲ್ಪವನ್ನು ಮಾಡಬೇಕು. ॥ ೨೪ ॥ ನಿತ್ಯಕರ್ಮಗಳನ್ನು ಮುಗಿಸಿ ಮನೆಗೆ ಬಂದು ಗೋಮಯದಿಂದ ಸಾರಿಸಿದ ಸ್ಥಳದಲ್ಲಿ ಶ್ರೀಹರಿಪೂಜೆಗಾಗಿ ಮಂಟಪವನ್ನು ರಚಿಸಿ ಅದನ್ನು ಕೆಮ್ಮಣ್ಣು, ರಂಗವಲ್ಲಿ, ಹೂವು ತೋರಣಗಳಿಂದ ಅಲಂಕರಿಸತಕ್ಕದ್ದು. ॥ ೨೫ ॥ ಅದರಲ್ಲಿ

ಶ್ರೀವಿಷ್ಣುವನ್ನು ತನ್ನ ಶಕ್ತ್ಯನುಸಾರ ಭಕ್ತಿ ಜ್ಞಾನಗಳಾನುಸಾರ ಷೋಡಶೋಪಚಾರಪೂಜಾಗಳಿಂದ ಪೂಜೆ ಮಾಡತಕ್ಕದ್ದು. ॥ ೨೬ ॥ ವ್ರತಿಯು ಪರಮಾತ್ಮನನ್ನು ನಾನಾವಿಧ ಹೂಗಳಿಂದಲೂ ಹೂಮಾಲೆಗಳಿಂದಲೂ, ತುಳಸೀದಳಗಳಿಂದಲೂ ಮಂಗಳಕರವಾದ ಧೂಪ, ದೀಪ ಮತ್ತು ನೈವೇದ್ಯಗಳಿಂದಲೂ ಭಕ್ತಿಯಿಂದ ಪೂಜಿಸತಕ್ಕದ್ದು. ॥ ೨೭ ॥ ಆ ದಿನವನ್ನೆಲ್ಲ ವೈಷ್ಣವಮಂತ್ರಗಳ ಜಪ (ಅಷ್ಟಾಕ್ಷರಮಂತ್ರ, ಕೃಷ್ಣಮಂತ್ರ, ದ್ವಾದಶಾಕ್ಷರಮಂತ್ರ, ಇತ್ಯಾದಿ) ನಾನಾ ಸೂಕ್ತ ಹಾಗೂ ವೇದಪಠಣಗಳಿಂದಲೂ, ಸ್ತೋತ್ರಪಾಠಗಳಿಂದಲೂ, ದೇವರ ನಾಮಸಂಕೀರ್ತನೆಯಿಂದಲೂ, ಪುರಾಣಶ್ರವಣದಿಂದಲೂ, ಪಾರಾಯಣದಿಂದಲೂ, ಪ್ರದಕ್ಷಿಣೆ ನಮಸ್ಕಾರಗಳಿಂದಲೂ ಆಲಸ್ಯವಿಲ್ಲದೆ ಕಳೆಯಬೇಕು. ॥ ೨೮ ॥ ಶ್ರೀವಿಷ್ಣುವಿನ ಸಮೀಪದಲ್ಲಿ ಸುತ್ತಲೂ ಮಂಗಳಕರವಾದ ದೀಪಗಳನ್ನು ಬೆಳಗಿ, ಗೀತ, ವಾದ್ಯ ಮತ್ತು ನರ್ತನ ಇವುಗಳಿಂದ ರಾತ್ರಿಯೆಲ್ಲ ಜಾಗರಣೆ ಮಾಡಬೇಕು ॥ ೨೯ ॥ ಯಾರು ಶ್ರೀವಾಸುದೇವನ ಸನ್ನಿಧಾನದಲ್ಲಿ ರಾತ್ರಿಯಲ್ಲಿ ಗಾಯನ ಮಾಡುತ್ತಾರೋ ಅವರು ಗಂಧರ್ವಸಂಗೀತಗಳನ್ನು ಕೇಳಿಕೊಳ್ಳುತ್ತಾ ಇಂದ್ರಲೋಕವನ್ನು ಕುರಿತು ಪ್ರಯಾಣ ಮಾಡುವರು. ॥ ೩೦ ॥ ಜಾಗರಣೆಯಲ್ಲಿ ವಿಶೇಷವಾದ ಪುಣ್ಯವಿದೆಯೆಂದು ಶಾಸ್ತ್ರಗಳಲ್ಲಿ ನಿಶ್ಚಯಿಸಲ್ಪಟ್ಟಿದೆ. ಭೂಮಿಯನ್ನು ಉದ್ಧಾರ ಮಾಡುವಾಗ ಶ್ರೀಆದಿವರಾಹದೇವರಿಂದ ಶ್ರೀಭೂದೇವಿಗೆ ಈ ವಿಷಯವು ಹೇಳಲ್ಪಟ್ಟಿತು. ॥ ೩೧ ॥ ಏಕಾದಶೀರಾತ್ರಿಯಲ್ಲಿ ಮಾಡುವ ಜಾಗರಣೆ, ಹಾಡುವ ಗಾನಗಳು. ನುಡಿಸುವ ವಾದ್ಯಗಳು ಮತ್ತು ನರ್ತನ, ಬೆಳಗಿನ ಜಾವದ ದೇವರನ್ನು ಎಬ್ಬಿಸುವುದು ಮುಂತಾದ ಇದುವರೆಗೆ ವಿವರಿಸಿರುವ ವಿಷಯಗಳನ್ನು ನಾನು ಈ ಮೊದಲೇ ಶ್ರೀವ್ಯಾಸರಿಂದ ಕೇಳಿದ್ದೇನೆ. ॥ ೩೨ ॥ ಜ್ಞಾನಯೋಗದಿಂದಲೂ, ಸಾಂಖ್ಯಯೋಗ ದಿಂದಲೂ, ತಪಸ್ಸುಗಳಿಂದಲೂ ಮತ್ತು ಸ್ವಧರ್ಮಾಚರಣೆಗಳಲ್ಲಿಯೂ ದೊರಕದ ಪುಣ್ಯವು ಅನಾಯಾಸವಾಗಿ ಏಕಾದಶೀರಾತ್ರಿಯ ಜಾಗರಣೆಯಿಂದ ಲಭಿಸುವುದು. ॥ ೩೩ ॥ ದಾನಾದಿಗಳಿಂದಾಗಲೀ ಅಥವಾ ಅಷ್ಟಾಂಗಯೋಗದಿಂದಲಾಗಲೀ ಏಕಾದಶೀರಾತ್ರಿಯಲ್ಲಿ ಶ್ರೀಕೃಷ್ಣನ ಮುಖದರ್ಶನದಿಂದ ಉಂಟಾಗುವಷ್ಟು ಪುಣ್ಯವು ಲಭಿಸುವುದಿಲ್ಲ. ॥ ೩೪ ॥ ಈ ಜಾಗರಣೆಯಲ್ಲಿ ಯಾರು ನರ್ತನ, ಹಾಡುವಿಕೆ ಮತ್ತು ವಾದ್ಯವನ್ನು ನುಡಿಸುವಿಕೆ ಇವನ್ನು ಮಾಡುತ್ತಾರೋ ಅವರಿಗೆ ಕೋಟಿಕಲ್ಪಗಳಲ್ಲಿಯೂ ಪುನರ್ಜನ್ಮವು ಇರುವುದಿಲ್ಲ. ॥ ೩೫ ॥ ನಿರಾಹಾರಿಯಾಗಿದ್ದು ಶ್ರೀಕೇಶವನ ಮುಂದೆ ಜಾಗರಣೆ ಮಾಡುವವನು ಸಕಲ ಅಭೀಷ್ಟಗಳನ್ನೂ ಹೊಂದುವನು. ॥ ೩೬ ॥ ಜಾಗರದಲ್ಲಿ ತಾಳಗಳನ್ನು ಬಾರಿಸಿ ವೀಣೆಮೃದಂಗಾದಿಗಳನ್ನು ನುಡಿಸುವವರಿಗೆ ಶ್ರೀ ಮಾಧವನು ನಿಶ್ಚಯವಾಗಿಯೂ ಪ್ರಸನ್ನನಾಗುವನು. ॥ ೩೭ ॥ ಪಾತಕಿಯಾದ ಒಬ್ಬ ಚಂಡಾಲನು ತನ್ನ ಗಾಯನದಿಂದ ಲಭ್ಯವಾದ ಪುಣ್ಯದಿಂದ ವನದಲ್ಲಿ ರಾಕ್ಷಸನೊಬ್ಬನನ್ನು ವಿಮೋಚನೆ ಮಾಡಿದ ದೃಷ್ಟಾಂತವಿದೆ. ॥ ೩೮ ॥ ಈ ರೀತಿಯಾಗಿ ನನ್ನಿಂದ ಏಕಾದಶೀವ್ರತದ ಸಂಬಂಧಪಟ್ಟ ಬಹುಪ್ರಸಂಗಗಳು ಸಾಂಗೋಪಾಂಗವಾಗಿ ನನ್ನ ಶಕ್ತ್ಯನುಸಾರ ತಮ್ಮಗಳಿಗೆ ಹೇಳಲ್ಪಟ್ಟವು; ಮತ್ತೇನನ್ನು ಕೇಳಬಯಸುತ್ತೀರಿ? ॥ ೩೯ ॥

॥ ಅರವತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಷಷ್ಟಿತಮೋಽಧ್ಯಾಯಃ ॥ ೬೮ ॥

**ಋಷಯ ಊಚುಃ—**

ಕಃ ಪುರಾ ಮೋಚಿತಃ ಕೇನ ಚಾಂಡಾಲೇನ ಚ ರಾಕ್ಷಸಃ ।
ಗೀತಪುಣ್ಯಪ್ರಭಾವೇನ ತತ್ಸರ್ವಂ ಕಥಯಾಶು ನಃ ॥ ೧ ॥

## ॥ ಅರವತ್ತೆಂಟನೆಯ ಅಧ್ಯಾಯವು ॥

**ಋಷಿಗಳು ಹೇಳಿದರು—**

''ಹಿಂದೆ ಯಾವ ರಾಕ್ಷಸನು ಯಾವ ಚಂಡಾಲನಿಂದ ಏಕಾದಶಿಯ ರಾತ್ರಿಯಲ್ಲಿ ದೇವರ ನಾಮಗಳನ್ನು ಹಾಡಿದ್ದರ ಪುಣ್ಯದ ಪ್ರಭಾವದಿಂದ ಹೇಗೆ ಬಿಡಿಸಲ್ಪಟ್ಟನು? ಇವೆಲ್ಲವನ್ನು ವಿಸ್ತಾರವಾಗಿ ಹೇಳಬೇಕು.'' ಎಂದು ಪ್ರಾರ್ಥಿಸಿದರು. ॥ ೧ ॥

**ಸೂತ ಉವಾಚ—**

ಏಕಸ್ಮಿನ್ನಗರೇ ಕಶ್ಚಿಚ್ಚಾಂಡಾಲಃ ಕರ್ಮಗರ್ಹಿತಃ ।
ಕುಮಾರ್ಗಾಪ್ತಧನೇನೈವ ಕುಟುಂಬಂ ಪಾಲಯತ್ಯಸೌ ॥ ೨ ॥
ಸುಮತಿರ್ನಾಮ ವಿಪ್ರೇಂದ್ರಸ್ತಸ್ಯಾಸೀತ್ಪ್ರಾತಿವೇಶಿಕಃ ।
ತಸ್ಯ ಸಂಸರ್ಗತಶ್ಚಕ್ರೇ ಪರಮೇಕಾದಶೀವ್ರತಮ್ ॥ ೩ ॥
ಏಕಾದಶ್ಯಾಂ ನಿರಾಹಾರೋ ವಿಪ್ರಸಂಗೇನ ಸರ್ವದಾ ।
ರಾತ್ರೌ ಜಾಗರಣಂ ಕೃತ್ವಾ ಸಮ್ಯಗ್ಗಾಯತಿ ಭಕ್ತಿತಃ ॥ ೪ ॥
ಏವಂ ಪ್ರಕುರ್ವತಸ್ತಸ್ಯ ಬಹವೋ ವತ್ಸರಾ ಗತಾಃ ।
ತತೋಽಭೂತ್ಪರಮಂ ಚಿತ್ರಂ ತನ್ನಿಬೋಧತ ಸುವ್ರತಾಃ ॥ ೫ ॥
ಕದಾಚಿದೂರ್ಜಶುಕ್ಲಾಯಾಮೇಕಾದಶ್ಯಾಮುಪೋಷಿತಃ ।
ಸುಪ್ತಿಂ ಗತೇ ಜನೇ ರಾತ್ರೌ ವೀಣಾಮಾದಾಯ ಸತ್ವರಮ್ ॥ ೬ ॥
ಜಾಗರಂ ಕರ್ತುಕಾಮೋಽಸಾವಾಶ್ರಮಾದ್ವಿಜನೇ ವನೇ ।
ಜಗಾಮಾನೇಕಗೀತಾನಿ ಗಾಯನ್ಸ ಹರಿಮಂದಿರಮ್ ॥ ೭ ॥
ತಸ್ಮಿನ್ನುಗ್ರತರೇಽರಣ್ಯೇ ಮಾರ್ಗಮಧ್ಯೇಽತಿಭೀಷಣಮ್ ।
ದದರ್ಶ ವಿಕೃತಾಕಾರಂ ಬ್ರಹ್ಮರಾಕ್ಷಸಮದ್ಭುತಮ್ ॥ ೮ ॥
ವ್ಯಾತ್ತಾನನಂ ಬಿಡಾಲಾಕ್ಷಂ ಕೃಶಂ ಭೀಮಂ ದಿಗಂಬರಮ್ ।
ಸ್ನಿಗ್ಧಾಂಜನಾಭಂ ಸಂಹೃಷ್ಟಂ ಪದ್ಭ್ಯಾಮಸ್ಪೃಷ್ಟಭೂಮಿಕಮ್ ॥ ೯ ॥
ಊರ್ಧ್ವರೋಮಾಣಮತ್ಯುಚ್ಚಂ ಕಾಲದೂತಮಿವಾಪರಮ್ ।
ಮಾನುಷಾಸ್ರಪಲಾಹಾರಂ ನೃತ್ಯಂತಂ ಹೃಷ್ಟಪುಷ್ಟವತ್ ॥ ೧೦ ॥

ಚಲಂಜಿಹ್ವೋಷ್ಟದಶನಂ ಗತಾಕ್ಷಂ ಶುಷ್ಕಪಂಜರಮ್ ।
ಹಾ ಹೇತಿ ರಟಮಾನಂತಂ ಧಾವಂತಂ ಕ್ಷುಧಿತಂ ಭೃಶಮ್ ॥ ೧೧ ॥
ದೃಷ್ಟ್ವೈನಂ ನಿಕಟೇ ಕ್ರೂರಂ ಶ್ವಪಾಕಾ ಮಾರ್ಗರೋಧಕಮ್ ।
ವ್ರತವಿಘ್ನಕರಂ ಮತ್ವಾ ಪರಾಂ ಚಿಂತಾಮುಪಾಗಮತ್ ॥ ೧೨ ॥
ಅಲ್ಪಪ್ರಾಣಃ ಶ್ವಪಾಕೋಽಸೌ ಬಲವಾನ್ ಬ್ರಹ್ಮರಾಕ್ಷಸಃ ।
ದುಃಖಶೋಕೇನ ಸಂತಪ್ತೋ ನ ಶಕ್ನೋತಿ ವಿಚೇಷ್ಟಿತುಮ್ ॥ ೧೩ ॥
ತತೋ ಧೈರ್ಯಂ ಸಮಾಲಂಬ್ಯ ಬಲಾತ್ ಸ್ಮೃತ್ವಾ ಹರಿಂ ಪ್ರಭುಮ್ ।
ಭಕ್ತಾಭಯಪ್ರದಾತಾರಂ ತಮುವಾಚ ನಿಶಾಚರಮ್ ॥ ೧೪ ॥

ಸೂತರು ಹೇಳಿದರು—

ಒಂದಾನೊಂದು ಊರಿನಲ್ಲಿ ಒಬ್ಬ ಚಂಡಾಲನು ನಿಂದಾಸ್ಪದವಾದ ಕುಮಾರ್ಗಗಳಿಂದಲೇ ಸಂಪಾದಿಸಿದ ಹಣದಿಂದ ತನ್ನ ಸಂಸಾರವನ್ನು ನಡೆಸುತ್ತಿದ್ದನು. ॥ ೨ ॥ ಇವನ ಪಕ್ಕದಲ್ಲಿ ಸುಮತಿ ಎಂಬ ಬ್ರಾಹ್ಮಣನು ಇದ್ದನು. ಅವನ ಸಂಬಂಧದ ಫಲವಾಗಿ ಚಂಡಾಲನೂ ಏಕಾದಶೀವ್ರತವನ್ನು ಆಚರಿಸುತ್ತಿದ್ದನು. ॥ ೩ ॥ ಬ್ರಾಹ್ಮಣನ ಸಹವಾಸದಿಂದ ಏಕಾದಶಿಯಂದು ನಿರಾಹಾರಿಯಾಗಿದ್ದು ಅವತ್ತಿನ ರಾತ್ರಿಯಲ್ಲಿ ಜಾಗರಣೆ ಮಾಡುತ್ತಾ ಚೆನ್ನಾಗಿ ಭಕ್ತಿಯಿಂದ ಹಾಡುತ್ತಿದ್ದನು. ॥ ೪ ॥ ಎಲೈ ಒಳ್ಳೆಯ ವ್ರತನಿಷ್ಠೆಯುಳ್ಳ ಶೌನಕಾದಿಗಳಿರಾ! ಕೇಳಿರಿ. ಹೀಗೆಯೇ ಮಾಡುತ್ತಿರಲು ಬಹಳ ವರ್ಷಗಳು ಕಳೆದುಹೋದುವು. ಆಗ ಒಂದು ವಿಚಿತ್ರವು ನಡೆಯಿತು. ॥ ೫ ॥ ಒಂದಾನೊಂದು ದಿವಸ ಕಾರ್ತಿಕ ಶುಕ್ಲಪಕ್ಷದ ಏಕಾದಶಿಯಲ್ಲಿ ಉಪವಾಸ ಮಾಡಿದ ಆ ಚಂಡಾಲನು ಎಲ್ಲರೂ ನಿದ್ರೆ ಮಾಡುತ್ತಿರುವಾಗ ಥಟ್ಟನೆ ತನ್ನ ವೀಣೆಯ ಸಹಿತ ಹಾಡುತ್ತಾ ಜಾಗರಣೆ ಮಾಡುವುದಕ್ಕಾಗಿ ತಾನಿದ್ದ ಆಶ್ರಮವನ್ನು ಬಿಟ್ಟು ಯಾರೂ ಇಲ್ಲದ ಒಂದು ವನದಲ್ಲಿದ್ದ ಹರಿಮಂದಿರಕ್ಕೆ ಹೊರಟನು. ॥ ೬-೭ ॥ ಅತಿಭಯಂಕರವಾದ ಅರಣ್ಯದಲ್ಲಿ ಅವನು ಹೋಗುತ್ತಿದ್ದ ಮಾರ್ಗದಲ್ಲಿ ಅತ್ಯಂತ ಭಯಂಕರ ವಾಗಿದ್ದ ವಿಕಾರಾಕೃತಿಯುಳ್ಳ ಅದ್ಭುತನಾದ ಒಂದು ಬ್ರಹ್ಮರಾಕ್ಷಸನನ್ನು ಕಂಡನು. ॥ ೮ ॥ ಆ ಬ್ರಹ್ಮರಾಕ್ಷಸನು ಬಾಯನ್ನು ತೆರೆದುಕೊಂಡು, ಬೆಕ್ಕಿನ ಕಣ್ಣುಗಳುಳ್ಳವನಾಗಿ, ಬಡಬಡಕಲಾಗಿ ಭಯಂಕರವಾಗಿಯೂ, ಬರಿ ಬತ್ತಲೆಯಾಗಿಯೂ, ಕಪ್ಪಗೂ, ಪಾದಗಳನ್ನು ಭೂಮಿಯ ಮೇಲೆ ಊರದಂತೆಯೂ ಆದರೆ ಸಂತೋಷದಿಂದಲೂ ಇದ್ದನು. ॥ ೯ ॥ ಅವನು ಬಹಳ ಎತ್ತರವಾಗಿಯೂ, ಮೇಲಕ್ಕೆ ನಿಗರಿ ನಿಂತಿದ್ದ ಕೂದಲುಳ್ಳವನಾಗಿದ್ದವನಾಗಿಯೂ, ಯಮ-ದೂತನೋ ಎನ್ನುವಂತೆ ತೋರುತ್ತಲೂ, ಮನುಷ್ಯರ ರಕ್ತಮಾಂಸಗಳನ್ನು ಭಕ್ಷಿಸುತ್ತಲೂ, ನರ್ತನ ಮಾಡುತ್ತಲೂ, ದಷ್ಟಪುಷ್ಟವಾಗಿದ್ದು ಆನಂದದಿಂದ ಇರುವಂತೆಯೂ, ಅದರುತ್ತಿರುವ ನಾಲಿಗೆ ಹಾಗು ತುಟಿ ಹಲ್ಲುಗಳುಳ್ಳವನಾಗಿಯೂ, ಒಣಗಿದ ದೇಹವುಳ್ಳವನಾಗಿಯೂ, ಒಳಗೆ ಹೋದ ಕಣ್ಣುಳ್ಳವ ನಾಗಿಯೂ ಹಾಹಾಕಾರ ಮಾಡಿ ಕಿರುಚುತ್ತಿದ್ದು ಕೊನೆ ಮೊದಲಿಲ್ಲದೆ ಓಡಿಯಾಡುತ್ತಾ ಮತ್ತು ಅತ್ಯಂತ ಹಸಿವಿನಿಂದ ಬಳಲುತ್ತಿರುವಂತೆಯೂ ಕಾಣುತ್ತಿದ್ದನು. ॥ ೧೦-೧೧ ॥ ಈ ಕ್ರೂರವಾಗಿರುವ ರಾಕ್ಷಸನನ್ನು ತೀರಾ ಸಮೀಪದಲ್ಲಿ ತನ್ನ ದಾರಿಯನ್ನು ತಡೆಯಲು ಬಂದಿರುವವನನ್ನಾಗಿ ತಿಳಿದು ತನ್ನ ಉತ್ಕೃಷ್ಟವಾದ ವ್ರತಕ್ಕೆ ಅವನಿಂದ ಹಾನಿಯಾಗುವುದನ್ನು ತಿಳಿದು ಬಹಳ ಚಿಂತೆಗೆ ಒಳಗಾದನು. ॥ ೧೨ ॥ ಚಂಡಾಲನಾದರೋ ಸ್ವಲ್ಪವೇ ಬಲವುಳ್ಳವನು ಮತ್ತು

ಬ್ರಹ್ಮರಾಕ್ಷಸನಾದರೋ ಅತಿಬಲಿಷ್ಠನು. ಆದ್ದರಿಂದ ದುಃಖದಿಂದ ಸಂತಪ್ತನಾದ ಅವನು ಏನನ್ನೂ ಮಾಡಲಾರದಾದನು. ॥ ೧೩ ॥ ಅನಂತರ ಹೇಗೋ ಧೈರ್ಯವನ್ನು ತಂದುಕೊಂಡು ಭಕ್ತರಿಗೆ ಅಭಯವನ್ನು ಕೊಡತಕ್ಕ ತನ್ನ ಸ್ವಾಮಿಯಾದ ಶ್ರೀಹರಿಯನ್ನು ಧ್ಯಾನಿಸಿ ಆ ಬ್ರಹ್ಮರಾಕ್ಷಸನನ್ನು ಕುರಿತು ಹೇಳಿದನು. ॥ ೧೪ ॥

ಶ್ವಪಾಕ ಉವಾಚ—

ಕೋಽಸಿ ತ್ವಂ ಭೀಷಣಾಕಾರೋ ವಿಕೃತೋ ಭಯವರ್ಧನಃ ।
ಕುತೋ ರುಣತ್ಸಿ ಮೇ ಮಾರ್ಗಂ ತತ್ಸರ್ವಂ ವದ ಸತ್ವರಮ್ ॥ ೧೫ ॥
ಏವಮುಕ್ತಃ ಶ್ವಪಾಕೇನ ಕ್ಷುಧಿತೋ ಬ್ರಹ್ಮರಾಕ್ಷಸಃ ।
ಉವಾಚ ಪರುಷಂ ವಾಕ್ಯಂ ಮಾನುಷಾಹಾರಲೋಲುಪಃ ॥ ೧೬ ॥

ಚಂಡಾಲನು ಹೇಳಿದನು—

ಭಯಂಕರಾಕೃತಿಯುಳ್ಳ ನೀನು ಯಾರು? ನೀನು ವಿಕಾರವಾಗಿದ್ದಿ, ಎಲ್ಲರಿಗೂ ಭಯವನ್ನು ಹೆಚ್ಚಿಸತಕ್ಕವನಾಗಿದ್ದಿ. ನೀನು ನನ್ನ ಮಾರ್ಗಕ್ಕೆ ಏತಕ್ಕಾಗಿ ಅಡ್ಡಿ ಮಾಡುತ್ತಿದ್ದಿ? ಎಲ್ಲವನ್ನೂ ಜಾಗ್ರತೆಯಾಗಿ ಹೇಳು.'' ॥ ೧೫ ॥ ಈ ರೀತಿಯಾಗಿ ಹೇಳಿಕೊಳ್ಳಲ್ಪಟ್ಟ ಆ ಹಸಿದಿದ್ದ ರಾಕ್ಷಸನು ಮಾನುಷಾಹಾರದ ಆಸೆಯುಳ್ಳವನಾಗಿ ಕ್ರೂರವಾದ ಈ ಮಾತುಗಳನ್ನು ಚಂಡಾಲನಿಗೆ ಹೇಳಿದನು. ॥ ೧೬ ॥

ಬ್ರಹ್ಮರಾಕ್ಷಸ ಉವಾಚ—

ಅಸ್ಮಿನ್ನೇವ ವನೇ ನಿತ್ಯಮಹಂ ವೈ ಬ್ರಹ್ಮರಾಕ್ಷಸಃ ।
ವನಾಗತಾನ್ನರಾನ್ ಭುಕ್ತ್ವಾ ವಿಚರಾಮಿ ಯಥಾಸುಖಮ್ ॥ ೧೭ ॥
ಅತೀತಾನಿ ನವಾಹಾನಿ ಫಲಮೂಲಾದಿಭಿರ್ಮಯಾ ।
ಮದ್ಭಯಾತ್ಕೋಽಪಿ ಮನುಜೋ ನಾತ್ರ ಸಂಚೇಷ್ಟತೇ ಯತಃ ॥ ೧೮ ॥
ಅದ್ಯ ಮೇ ದಶಮೀರಾತ್ರಿರ್ನಿರಾಹಾರಸ್ಯ ಗಚ್ಛತಿ ।
ಧಾತ್ರಾ ನಿವೇದಿತೋಽಸಿ ತ್ವಂ ಮಮ ಗ್ರಾಸೋ ಜಿಘತ್ಸತಃ ॥ ೧೯ ॥
ಅದ್ಯ ತ್ವಾಂ ಭಕ್ಷಯಿಷ್ಯಾಮಿ ಸವಸಾಮಾಂಸಶೋಣಿತಮ್ ।
ಪರಾಂ ತೃಪ್ತಿಂ ಗಮಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥ ೨೦ ॥
ಇತಿ ತಸ್ಯ ವಚಃ ಶ್ರುತ್ವಾ ಶ್ವಪಾಕೋ ವ್ರತಲಾಲಸಃ ।
ರಾಕ್ಷಸಂ ಛಂದಯಾಮಾಸ ಗಿರಾ ಮಧುರಯಾ ತದಾ ॥ ೨೧ ॥

ಬ್ರಹ್ಮರಾಕ್ಷಸನು ಹೇಳಿದನು—

''ನಾನು ಬ್ರಹ್ಮರಾಕ್ಷಸನು. ಇದೇ ವನದಲ್ಲಿ ನಿತ್ಯವೂ ಸಂಚರಿಸುತ್ತಿದ್ದು ಇಲ್ಲಿ ಬರುವ ಮನುಷ್ಯರನ್ನೆಲ್ಲಾ ಭಕ್ಷಿಸಿ ಸುಖವಾಗಿ ಇದ್ದೇನೆ. ॥ ೧೭ ॥ ಈಗ ಕಳೆದ ಒಂಬತ್ತು ದಿವಸಗಳಿಂದ ಹಣ್ಣುಗೆಡ್ಡೆ ಬೇರುಗಳನ್ನು ತಿಂದುಕೊಂಡಿದ್ದೇನೆ. ನನ್ನ ಭಯದಿಂದ ಯಾವ ಮನುಷ್ಯನೂ ಇಲ್ಲಿಗೆ

ಬರುವ ಸಾಹಸ ಮಾಡುತ್ತಿಲ್ಲ. ॥ ೧೮ ॥ ಈಗ ಇವತ್ತು ಹತ್ತನೆಯ ರಾತ್ರಿಯು ಆಹಾರವಿಲ್ಲದೆ ಹೋಗುತ್ತಿದೆ. ಆಹಾರಕ್ಕಾಗಿ ಬಯಸುತ್ತಿರುವ ನನ್ನ ಭಾಗ್ಯವು ನಿನ್ನನ್ನು ಪ್ರೇರೇಪಿಸಿ ಇಲ್ಲಿಗೆ ಕಳುಹಿಸಿದೆ. ನೀನು ನನ್ನ ಆಹಾರವಾಗಿದ್ದಿ. ॥ ೧೯ ॥ ಮಜ್ಜೆ, ಮಾಂಸ ಮತ್ತು ರಕ್ತದಿಂದ ತುಂಬಿರುವ ನಿನ್ನನ್ನು ತಿಂದು ಹೆಚ್ಚಿನ ತೃಪ್ತಿಯನ್ನು ಹೊಂದುವೆನು. ಈ ವಿಷಯದಲ್ಲಿ ಬೇರೆ ಏನೂ ವಿಚಾರ ಮಾಡತಕ್ಕದ್ದಿಲ್ಲ. ॥ ೨೦ ॥ ಎಂದು ಹೇಳಿದನು. ಈ ರೀತಿಯಾಗಿ ಹೇಳಿದ ಆ ಬ್ರಹ್ಮರಾಕ್ಷಸನ ಮಾತನ್ನು ಕೇಳಿದ ಚಂಡಾಲನು ತನ್ನ ಏಕಾದಶೀವ್ರತವನ್ನು ರಕ್ಷಿಸುವ ಆಸೆಯುಳ್ಳವನಾಗಿ ಮಧುರವಾಕ್ಯಗಳಿಂದ ಆ ರಾಕ್ಷಸನನ್ನು ಸಂತೋಷಪಡಿಸಿದನು. ॥ ೨೧ ॥

ಶ್ವಪಾಕ ಉವಾಚ—

ಶೃಣು ರಾಕ್ಷಸ ಮೇ ವಾಕ್ಯಮಾಗತೋಽಹಂ ತ್ವದಂತಿಕೇ ।
ಧಾತ್ರಾ ಯಥಾ ತವಾದಿಷ್ಟಮವಶ್ಯಂ ಕುರು ತತ್ತಥಾ ॥ ೨೨ ॥
ಕಿಂ ತ್ವಹಂ ವಿಷ್ಣುಸವಿಧೇ ಜಾಗರಾರ್ಥಂ ಸಮಾಗತಃ ।
ಪ್ರಾಪ್ತೋಽಸಿ ತ್ವಂ ಮಯಾ ಮಧ್ಯೇ ಮದ್ವ್ರತಭ್ರಂಶಕಾರಕಃ ॥ ೨೩ ॥
ಅತಸ್ತ್ವಾಮಿತ್ಯಹಂ ಯಾಚೇ ಬ್ರಹ್ಮರಾಕ್ಷಸ ಸಾದರಮ್ ।
ಯಾಚಿತಾರ್ಥಪ್ರದಾ ಲೋಕೇ ತ್ವದ್ವಿಧಾ ನ ಭವಂತಿ ಹಿ ॥ ೨೪ ॥
ಅತ್ರಾಸ್ತೇ ಶ್ರೀಮಹಾವಿಷ್ಣೋಃ ಪ್ರಾಸಾದಃ ಪುಣ್ಯವತ್ತರಃ ।
ಜಾಗರಾರ್ಥಮಹಂ ಗಚ್ಛೇ ಪ್ರತ್ಯೇಕಾದಶಿ ತತ್ರ ವೈ ॥ ೨೫ ॥
ಅದ್ಯಾಂತರಾ ತ್ವಮೇವಂ ಮಾಂ ಭಾಷಸೇ ದೈವಚೋದಿತಃ ।
ಪಥ್ಯಂ ತದಪಿ ಮೇ ಮಿತ್ರ ಪರೋಪಕರಣಂ ಯತಃ ॥ ೨೬ ॥
ಪರೋಪಕರಣೇ ಪ್ರಾಣಾ ಯೋಜಿತಾ ಬಹುಭಿಃ ಪುರಾ ।
ಪರಂ ತು ಬ್ರಹ್ಮರಕ್ಷಾಯಾಂ ತೃಷ್ಣುರಸ್ಮಿ ವಿಶೇಷತಃ ॥ ೨೭ ॥
ಪ್ರಸೀದತಿ ಮಹಾವಿಷ್ಣುರ್ವ್ರತಸಂರಕ್ಷಣಾದ್ಯತಃ ।
ಅತಸ್ತಥಾ ಕರಿಷ್ಯೇಽಹಂ ದ್ವಯಮಪ್ಯಕ್ಷತಂ ಯಥಾ ॥ ೨೮ ॥
ತತ್ರ ಗತ್ವಾ ವ್ರತಂ ಕೃತ್ವಾ ಗಾನಜಾಗರಣಾತ್ಮಕಮ್ ।
ಪಶ್ಚಾತ್ತ್ವಂ ಸ್ವದ ಮಾಂ ರಕ್ಷೋ ಜಾಗರಾದ್ವಿನಿವರ್ತಿತಮ್ ॥ ೨೯ ॥
ವಿಷ್ಣುಸಂತೋಷಣಾರ್ಥಾಯ ವ್ರತಮೇತದನುತ್ತಮಮ್ ।
ಜಾಗರೇ ವಿನಿವೃತ್ತಂ ಮಾಂ ಭಕ್ಷಯಸ್ವ ಯಥಾಸುಖಮ್ ॥ ೩೦ ॥
ಶ್ವಪಾಕಸ್ಯ ವಚಃ ಶ್ರುತ್ವಾ ರಾಕ್ಷಸೋಽತಿಕ್ಷುಧಾರ್ದಿತಃ ।
ಶ್ವಪಾಕಂ ಪ್ರತ್ಯುವಾಚಾಸೌ ಹಸನ್ವಾಚಮಶಂಕಿತಃ ॥ ೩೧ ॥

ಚಂಡಾಲನು ಹೇಳಿದನು—

ಎಲೈ ರಾಕ್ಷಸನೇ! ಕೇಳು; ನಾನು ನಿನ್ನ ಹತ್ತಿರ ಬಂದಿರುವುದಂತೂ ನಿಜ; ವಿಧಿಯು ನಿನಗೆ ಹೇಗೆ ಪ್ರೇರೇಪಿಸುವುದೋ ಹಾಗೆಯೇ ಮಾಡು. ॥ ೨೨ ॥ ನಾನು ವಾಸ್ತವವಾಗಿ ವಿಷ್ಣುವಿನ ಹತ್ತಿರ

ಜಾಗರಣೆಗಾಗಿ ಬಂದಿರುವೆನು. ಮಧ್ಯೆ ನೀನು ನನ್ನಿಂದ ಸಂಧಿಸಲ್ಪಟ್ಟಿದ್ದಿ ಮತ್ತು ನನ್ನ ಏಕಾದಶೀವ್ರತಕ್ಕೆ ಭಂಗ ಮಾಡುವವನಾಗಿದ್ದೀಯೆ. ॥ ೨೩ ॥ ಎಲೈ ಬ್ರಹ್ಮರಾಕ್ಷಸನೇ! ಆದ್ದರಿಂದ ನಾನು ಆದರದಿಂದ ನಿನ್ನನ್ನು ಕೇಳುವುದಿಷ್ಟೇ. ನಿನ್ನಂಥವನು ಬೇಡಿದವರ ಪ್ರಾರ್ಥನೆಗಳನ್ನು ನಡೆಸುವುದಿಲ್ಲ; ಇದು ನಿಶ್ಚಯವು. ॥ ೨೪ ॥ ಈ ಕ್ಷೇತ್ರದಲ್ಲಿರುವ ಮಂದಿರದಲ್ಲಿ ಶ್ರೀಮಹಾವಿಷ್ಣುವಿನ ಅನುಗ್ರಹವು ತುಂಬಾ ತುಂಬಾ ಇದೆ. ಅದು ಪುಣ್ಯ ಮಾಡಿದವರಿಗೇ ಲಭ್ಯವಾಗುವುದು. ಜಾಗರಣಕ್ಕಾಗಿ ನಾನು ಇಲ್ಲಿಗೆ ಪ್ರತಿ ಏಕಾದಶಿಯೂ ಬರುತ್ತೇನೆ. ॥ ೨೫ ॥ ಮಿತ್ರ! ನನ್ನ ದೌರ್ಭಾಗ್ಯದಿಂದ ನೀನು ದೈವಪ್ರೇರಿತನಾಗಿ ಈ ರೀತಿ ಮಾತನಾಡುತ್ತಿದ್ದಿ. ಈ ನಿನ್ನ ಮಾತಿನಲ್ಲಿ ಪರೋಪಕಾರದ ತತ್ತ್ವವಿರುವುದರಿಂದ ನಿನ್ನ ಮಾತನ್ನು ನಾನು ನನಗೆ ಹಿತಕಾರಿಯಾದದ್ದಾಗಿ ಭಾವಿಸುತ್ತೇನೆ. ॥ ೨೬ ॥ ಹಿಂದೆ ಪರೋಪಕಾರಕ್ಕಾಗಿ ಬಹು ಜನರು ತಮ್ಮ ಪ್ರಾಣಗಳನ್ನೇ ತ್ಯಾಗ ಮಾಡಿದ್ದಾರೆ. ನೀನು ಬ್ರಾಹ್ಮಣನಾಗಿರುವುದರಿಂದ ನಿನ್ನನ್ನು ಹಸಿವಿನಿಂದ ಉಳಿಸಿ ರಕ್ಷಣೆ ಮಾಡುವುದರಲ್ಲಿ ನಾನು ವಿಶೇಷವಾಗಿ ಕಾತರನಾಗಿದ್ದೇನೆ. ॥ ೨೭ ॥ ಹಾಗಿದ್ದರೂ, ನನ್ನ ವ್ರತವು ಕಾಪಾಡಲ್ಪಟ್ಟರೆ ಶ್ರೀಮಹಾವಿಷ್ಣುವು ಸಂತುಷ್ಟನಾಗುವುದರಿಂದ ನಾನು ಈ ಎರಡು ಉದ್ದೇಶ್ಯಗಳಿಗೂ (ನನ್ನ ಏಕಾದಶೀ ಜಾಗರದ ರಕ್ಷಣೆ ಮತ್ತು ಬ್ರಾಹ್ಮಣನಾದ ನಿನ್ನನ್ನು ಹಸಿವಿನಿಂದ ರಕ್ಷಣೆ) ಧಕ್ಕೆ ಬರದಂತೆ ನಡೆದುಕೊಳ್ಳಬಯಸುತ್ತೇನೆ. ॥ ೨೮ ॥ ಆದ್ದರಿಂದ ಮಂದಿರಕ್ಕೆ ಹೋಗಿ ಗಾನ ಮತ್ತು ಜಾಗರಣರೂಪವಾದ ವ್ರತವನ್ನು ಪೂರೈಸಿ ಅಲ್ಲಿಂದ ಹಿಂದಿರುಗುವಾಗ ನನ್ನನ್ನು, ಎಲೈ ರಾಕ್ಷಸನೇ! ನೀನು ಅವಶ್ಯ ಭಕ್ಷಣ ಮಾಡು. ॥ ೨೯ ॥ ಈಗ ನಾನು ನಡೆಸಿಕೊಂಡು ಬರುತ್ತಿರುವ ಜಾಗರಣವ್ರತವು ಶ್ರೀಮಹಾವಿಷ್ಣುವಿನ ಸಂತೋಷಕ್ಕಾಗಿ ಆಗಿದೆ. ಆದ್ದರಿಂದ ಜಾಗರಣೆಯಿಂದ ಹಿಂತಿರುಗುವಾಗ ನನ್ನನ್ನು ಸುಖದಿಂದ ಭಕ್ಷಿಸು.'' ॥ ೩೦ ॥ ಚಂಡಾಲನ ಮಾತನ್ನು ಕೇಳಿ ಹಸಿವಿನಿಂದ ಘಾಸಿಪಟ್ಟಿದ್ದ ಆ ರಾಕ್ಷಸನು ನಕ್ಕು ಚಂಡಾಲನನ್ನು ಕುರಿತು ಯಾವ ಸಂಶಯಕ್ಕೂ ಎಡೆ ಕೊಡದೆ ಈ ರೀತಿಯಾಗಿ ಉತ್ತರಿಸಿದನು. ॥ ೩೦ ॥

ರಾಕ್ಷಸ ಉವಾಚ—

ಮೃಷಾ ಕಿಂ ಭಾಷಸೇ ಧೂರ್ತ ಪುನರೇಷ್ಯಾಮಿ ಮೇಽಂತಿಕೇ ।
ಕೋ ಹಿ ರಕ್ಷೋಮುಖಾದ್ಭ್ರಷ್ಟಃ ಪುನರ್ಯಾತಿ ತದಂತಿಕಮ್ ॥ ೩೨ ॥
ಶ್ರುತಿಸ್ಮೃತಿಪುರಾಣಾನಿ ರಟಂತ್ಯೇವಂ ಪುನಃ ಪುನಃ ।
ಪ್ರಾಪ್ತವಸ್ತುಪರಿತ್ಯಾಗೇ ಕಾರ್ಯನಾಶೋ ಭವೇದ್ ಧ್ರುವಮ್ ॥ ೩೩ ॥
ತಸ್ಮಾತ್ ತ್ವಾಂ ನ ವಿಮೋಕ್ಷ್ಯಾಮಿ ನಿಕೃತಂ ಸಾಧುಲಿಂಗಿನಮ್ ।
ಭಕ್ಷಯಾಮಿ ತವಾಂಗಾನಿ ಯಥಾರುಚಿ ಯಥಾಸುಖಮ್ ॥ ೩೪ ॥
ಜ್ಞಾತ್ವಾ ತದಾ ಶ್ವಪಾಕೋಽಸೌ ರಾಕ್ಷಸಸ್ಯೇತಿ ನಿಶ್ಚಯಮ್ ।
ಸತ್ಯೇ ಮನಸ್ಸಮಾಧಾಯ ರಕ್ಷಸೇ ತದುವಾಚ ಹ ॥ ೩೫ ॥

ರಾಕ್ಷಸನು ಹೇಳಿದನು—

''ಎಲೈ ಧೂರ್ತನೇ! ನನ್ನ ಹತ್ತಿರ ಪುನಃ ಹಿಂತಿರುಗಿ ಬರುವೆನೆಂದು ಏತಕ್ಕಾಗಿ ಸುಳ್ಳು ಹೇಳುತ್ತೀಯೆ. ಬ್ರಹ್ಮರಾಕ್ಷಸನ ಮುಖದಿಂದ ತಪ್ಪಿಸಿಕೊಂಡು ಹೋದ ಯಾವನು ತಾನೇ ಹಿಂತಿರುಗಿ

ಬರುವನು? ॥ ೩೨ ॥ ಪ್ರಾಪ್ತವಾಗಿರುವ ವಸ್ತುವನ್ನು ಬಿಟ್ಟುಬಿಟ್ಟರೆ ಕೆಲಸವೇ ಖಂಡಿತ ಕೆಟ್ಟು ಹೋಗುವುದೆಂದು ಶ್ರುತಿಗಳು ಸ್ಮೃತಿಗಳು ಮತ್ತು ಪುರಾಣಗಳು ಹೇಳುತ್ತಿವೆ. ॥ ೩೩ ॥ ಆದ್ದರಿಂದ ಸಾಧುವಿನಂತೆ ವೇಷ ಧರಿಸಿರುವ ನಿನ್ನನ್ನು ಬಿಡುವುದಿಲ್ಲ. ನಿನ್ನ ಅಂಗಗಳನ್ನೆಲ್ಲ ಹೇಗೆ ಹೇಗೆ ರುಚಿಸುವುದೋ ಹಾಗೆ ಸುಖವಾಗಿ ತಿನ್ನುತ್ತೇನೆ.'' ॥ ೩೪ ॥ ಆಗ ರಾಕ್ಷಸನ ನಿಶ್ಚಯವನ್ನು ತಿಳಿದ ಚಂಡಾಲನು ''ಸತ್ಯ''ದಲ್ಲಿ ಮನಸ್ಸನ್ನು ಇಟ್ಟು ರಾಕ್ಷಸನಿಗೆ ಹೀಗೆಂದು ಹೇಳಿದನು. ॥ ೩೫ ॥

**ಶ್ವಪಾಕ ಉವಾಚ—**

ನಾಹಂ ಸತ್ಯಾತ್ಪರಿಭ್ರಷ್ಟ ಇತಿ ನಿಶ್ಚಿತ್ಯ ರಾಕ್ಷಸಃ ।
ಶಪಾಮಿ ಚ ಪುನರ್ಯಾಸ್ಯೇ ಕೃತ್ವಾ ಕಾರ್ಯಂ ತ್ವದಂತಿಕೇ ॥ ೩೬ ॥
ಯದ್ಯಪ್ಯಹಂ ಹಿ ಚಾಂಡಾಲಃ ಪೂರ್ವಕರ್ಮವಿಗರ್ಹಿತಃ ।
ಪ್ರಾಪ್ತೋಽಸ್ಮಿ ಮಾನುಷಂ ದೇಹಂ ಕೇನಾಪ್ಯದ್ಭುತಕರ್ಮಣಾ ॥ ೩೭ ॥
ಸತ್ಯಮೂಲಂ ಜಗತ್ಸರ್ವಂ ಸತ್ಯೇ ಲೋಕಾ ಪ್ರತಿಷ್ಠಿತಾಃ ।
ಸತ್ಯೇನ ಪ್ರಾಪ್ಯತೇ ಸೌಖ್ಯಮೇವಮಾಹುರ್ಮನೀಷಿಣಃ ॥ ೩೮ ॥
ಸತ್ಯೇನ ತಪತೇ ಸೂರ್ಯೋ ವಾತಿ ಸತ್ಯೇನ ಮಾರುತಃ ।
ಸತ್ಯೇನ ಪ್ರಾಪ್ಯತೇ ಸ್ವರ್ಗಂ ಸರ್ವಂ ಸತ್ಯೇ ಪ್ರತಿಷ್ಠಿತಮ್ ॥ ೩೯ ॥
ಉದಧಿರ್ಲಂಘತೇ ನೈವ ಮರ್ಯಾದಾಂ ಸತ್ಯಪಾಲಿತಃ ।
ಸತ್ಯೇನ ಜ್ವಲತೇ ವಹ್ನಿಸ್ಸತ್ಯೇನ ಪೃಥಿವೀ ಸ್ಥಿರಾ ॥ ೪೦ ॥
ಸತ್ಯೇನ ಪ್ರಾಪ್ಯತೇ ಧರ್ಮಃ ಸತ್ಯೇನ ಪ್ರಾಪ್ಯತೇ ಸುಖಮ್ ।
ವಸತ್ಯದ್ಯಾಪಿ ಪಾತಾಲೇ ಬಲಿಸ್ಸತ್ಯಸಮಾಶ್ರಿತಃ ॥ ೪೧ ॥
ಸ್ಥಿತಸ್ಸತ್ಯೇ ಮಹಾವಿಂಧ್ಯೋ ವರ್ಧಮಾನೋ ನ ವರ್ಧತೇ ।
ಸರ್ವಂ ಚರಾಚರಮಿದಂ ಸತ್ಯೇನ ಧ್ರಿಯತೇ ಜಗತ್ ॥ ೪೨ ॥
ಧರ್ಮಾ ವರ್ಣಾಶ್ರಮಾಣಾಂ ಯೇ ವಾಜಿಮೇಧಾದಯೋ ಮಖಾಃ ।
ಸತ್ಯಂ ಚ ತುಲಿತಂ ತಸ್ಮಾತ್ಸತ್ಯಮೇವಾಭವದ್ಗುರು ॥ ೪೩ ॥
ಏವಂ ಸತ್ಯಸ್ಯ ಮಾಹಾತ್ಮ್ಯಂ ಶ್ರುತ್ವಾ ದೃಷ್ಟ್ವಾ ಚ ತತ್ತ್ವತಃ ।
ಪುನರೇಷ್ಯಾಮ್ಯಹಂ ರಕ್ಷಸ್ತ್ವಂ ಸತ್ಯಂ ನ ಸಂಶಯಃ ॥ ೪೪ ॥

॥ ಇತಿ ಅಷ್ಟಷಷ್ಟಿತಮೋಽಧ್ಯಾಯಃ ॥

**ಚಂಡಾಲನು ಹೇಳಿದನು—**

''ಹೇ ರಾಕ್ಷಸನೇ! ನಾನು ಸತ್ಯದಿಂದ ಭ್ರಷ್ಟನಾಗುವುದಿಲ್ಲ. ಇದು ನನ್ನ ನಿಶ್ಚಯವು. ನನ್ನ ಕಾರ್ಯವನ್ನು ಮುಗಿಸಿಕೊಂಡು ಪುನಃ ನಿನ್ನೆಡೆಗೆ ಬರುತ್ತೇನೆ.'' ॥ ೩೬ ॥ ಮತ್ತು ''ನಾನು ಪೂರ್ವಜನ್ಮಗಳ ಕರ್ಮಫಲದಿಂದ ಚಂಡಾಲನಾಗಿ ಹುಟ್ಟಿರುವುದೇನೋ ನಿಜ. ಆದರೆ ಯಾವುದೋ ಅದ್ಭುತವಾದ ಕರ್ಮದ ಫಲವಾಗಿ ಮನುಷ್ಯನ ದೇಹವನ್ನಾದರೂ ಹೊಂದಿದ್ದೇನೆ. ॥ ೩೭ ॥ ಜಗತ್ತು ಸತ್ಯವನ್ನೇ ಮೂಲದಲ್ಲಿ ಹೊಂದಿದೆ, ಸತ್ಯದ ಮೇಲೆಯೇ ಎಲ್ಲ ಲೋಕಗಳೂ

ನಿಂತಿವೆ. ಸತ್ಯದಿಂದಲೇ ಸೌಖ್ಯವು ದೊರಕುವುದೆಂದು ಜ್ಞಾನಿಗಳು ಹೇಳಿದ್ದಾರೆ. ॥ ೩೮ ॥ ಸತ್ಯದಿಂದಲೇ ಸೂರ್ಯನು ಬೆಳಗುತ್ತಿದ್ದಾನೆ. ಗಾಳಿಯು ಸತ್ಯದಿಂದಲೇ ಬೀಸುತ್ತಿದೆ. ಸತ್ಯದಿಂದಲೇ ಸ್ವರ್ಗವು ಸಿಗುವುದು. ಎಲ್ಲವೂ ಸತ್ಯವನ್ನವಲಂಬಿಸಿದೆ. ॥ ೩೯ ॥ ಸತ್ಯವನ್ನು ಪಾಲಿಸುವುದಕ್ಕಾಗಿಯೇ ಸಮುದ್ರವು ತನ್ನ ದಡವನ್ನು ಮೀರಿ ದಾಟುವುದಿಲ್ಲ. ಸತ್ಯವನ್ನು ಅವಲಂಬಿಸಿಯೇ ಬೆಂಕಿಯು ಜ್ವಲಿಸುತ್ತಿರುವುದು. ಸತ್ಯಕ್ಕಾಗಿಯೇ ಭೂಮಿಯು ಸ್ಥಿರವಾಗಿ ನಿಂತಿರುವುದು. ॥ ೪೦ ॥ ಸತ್ಯದಿಂದಲೇ ಧರ್ಮವು ಸಿಕ್ಕುವುದು, ಸತ್ಯದಿಂದಲೇ ಸುಖಪ್ರಾಪ್ತಿ ಆಗುವುದು, ಸತ್ಯಕ್ಕೆ ಕಟ್ಟುಬಿದ್ದೇ ಬಲಿಚಕ್ರವರ್ತಿಯು ಈಗಲೂ ಪಾತಾಲದಲ್ಲಿ ವಾಸ ಮಾಡಿಕೊಂಡಿರುವುದು. ॥ ೪೧ ॥ ಬೆಳೆಯಬಲ್ಲ ವಿಂಧ್ಯಾದ್ರಿಯೂ ಸತ್ಯಕ್ಕಾಗಿಯೇ ಬೆಳೆಯದೇ ಹಾಗೆಯೆ ನಿಂತುಬಿಟ್ಟಿದೆ. ಜಗತ್ತು ಸಕಲಚರಾಚರ ಪದಾರ್ಥಗಳನ್ನು ಸತ್ಯದಿಂದಲೇ ಹಿಡಿದಿಟ್ಟುಕೊಂಡಿದೆ. ॥ ೪೨ ॥ ವರ್ಣಾಶ್ರಮ ಧರ್ಮಗಳಾಗಲೀ, ವಾಜಪೇಯಾದಿ ಯಾಗಗಳಾಗಲೀ, ಧರ್ಮವನ್ನು ಅವಲಂಬಿಸಿಯೇ ನಿಂತಿರುವುವು. ಆದ್ದರಿಂದ ಎಲ್ಲ ಪದಾರ್ಥಗಳೊಡನೆ ತೂಕ ಹಾಕಿದಾಗ ಸತ್ಯವೇ ಎಲ್ಲಕ್ಕಿಂತಲೂ ಭಾರವಾಗಿರುವುದು. ॥ ೪೩ ॥ ಈ ರೀತಿಯಾಗಿ ಸತ್ಯದ ಮಾಹಾತ್ಮ್ಯೆಯನ್ನು ಕೇಳಿ ಯಥಾರ್ಥವಾಗಿ ತಿಳಿದು ನಾನು ಪುನಃ ಹಿಂತಿರುಗುತ್ತೇನೆ. ಎಂದು ಪ್ರತಿಜ್ಞೆ ಮಾಡುತ್ತೇನೆ. ಆದ್ದರಿಂದ ಈ ವಿಷಯದಲ್ಲಿ ಸಂಶಯ ಬೇಡ. ಆದ್ದರಿಂದ ಹೇ ರಾಕ್ಷಸನೇ! ಈ ಸತ್ಯವನ್ನು ಮನಗಂಡೇ ಪುನಃ ನಾನು ಬರುತ್ತೇನೆ. ಇದರಲ್ಲಿ ಸಂಶಯವಿಲ್ಲ; ಸತ್ಯವು, ಸತ್ಯವು. ॥ ೪೪ ॥

(ಟಿಪ್ಪಣಿ—ಲಕ್ಷ್ಮೀಬ್ರಹ್ಮಾದಿದೇವತೆಗಳೂ, ಸಕಲ ತತ್ತ್ವಾಭಿಮಾನಿದೇವತೆಗಳೂ, ಸೂರ್ಯ, ಚಂದ್ರ, ಗಾಳಿ, ನೀರು, ಮೋಡ, ಸಮುದ್ರ ಮತ್ತು ಪೃಥಿವ್ಯಾದಿ ಪಂಚಭೂತಗಳೂ ಸತ್ಯಸ್ವರೂಪವಾಗಿದ್ದು ''ಸತ್ಯ''ನೆಂದು ವೇದಾದಿಗಳಲ್ಲಿ ನಿತ್ಯಸತ್ಯದಿಂದ ಲಕ್ಷ್ಮೀಶನಾಗಿರತಕ್ಕ ಶ್ರೀಹರಿಯ ಆಜ್ಞಾ ಮತ್ತು ನಿಯಾಮಕತ್ವಕ್ಕೆ ಒಳಪಟ್ಟು ಈ ಜಗದ್ವ್ಯಾಪಾರವೆಲ್ಲವೂ ಅಚ್ಚುಕಟ್ಟಾಗಿ ಹದ್ದುಬಸ್ತಿನಲ್ಲಿ ನಡೆಯುತ್ತಿರುವುದರಿಂದ ಸತ್ಯವೇ ಸಕಲಕ್ಕೂ ಮೂಲವು, ಎಲ್ಲವೂ ಸತ್ಯದ ಮೇಲೆಯೇ ಇದ್ದು ಅದನ್ನೇ ಅವಲಂಬಿಸಿ ನಿರ್ಬಾಧಿತವಾಗಿ ನಡೆಯುತ್ತಿದೆ ಎಂಬ ತೈತ್ತಿರಿಯೋಪನಿಷತ್ತಿನಲ್ಲಿ ಹೇಳಿಸುವ ವಿಷಯವನ್ನೇ ಶ್ರೀವ್ಯಾಸರು ಇಲ್ಲಿ ಹೇಳಿದ್ದಾರೆ.)

॥ ಅರವತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನಸಪ್ತತಿತಮೋಽಧ್ಯಾಯಃ ॥ ೬೯ ॥

ಸೂತ ಉವಾಚ—

ರಕ್ಷಃಪ್ರಸಾದಸಿದ್ಧ್ಯರ್ಥಂ ವಿಶ್ವಾಸಾರ್ಥಂ ಚ ಪುಲ್ಕಸಃ ।
ಪುನರ್ನಾನಾವಿಧಾಂಶ್ಚಕ್ರೇ ಶಪಥಾನ್ ಜಾಗರೋತ್ಸುಕಃ ॥ ೧ ॥

## ॥ ಅರವತ್ತೊಂಬತ್ತನೆಯ ಅಧ್ಯಾಯವು ॥

ಸೂತರು ಹೇಳಿದರು—

ಜಾಗರಣ ಮಾಡುವುದರಲ್ಲಿಯೇ ಉತ್ಸಾಹಗೊಂಡಿದ್ದ ಆ ಚಂಡಾಲನು ಆ ರಾಕ್ಷಸನನ್ನು ಒಲಿಸಿಕೊಳ್ಳಲು ಮತ್ತೆ ನಾನಾವಿಧಗಳಾದ ಶಪಥಗಳನ್ನು ಮಾಡಿದನು. ॥ ೧ ॥

ಶ್ವಪಾಕ ಉವಾಚ—

ಯೇ ಮಹಾಪಾಪಿನಾಂ ಲೋಕಾಃ ಕೃತಘ್ನಾನಾಂ ದುರಾತ್ಮನಾಮ್ ।
ತಾಂಲ್ಲೋಕಾನ್ವೈ ಗಮಿಷ್ಯೇ ಹಿ ನಾಗಮಿಷ್ಯಾಮಿ ಚೇತ್ಪುನಃ ॥ ೨ ॥
ಮಿಥ್ಯಾವಾದರತಾನಾಂ ಚ ಪರದಾರೋಪಸೇವಿನಾಮ್ ।
ಪಾಪೈಃ ಕರ್ತುರಲಿಪ್ಯೇಽಹಂ ನಾಗಮಿಷ್ಯಾಮಿ ಚೇತ್ಪುನಃ ॥ ೩ ॥
ಉದಕ್ಯಾಗಾಮಿನಃ ಪಾಪಂ ಪಾಕಭೇದಕರಸ್ಯ ಹಿ ।
ಯತ್ಪಾಪಂ ತದ್ಭವೇನ್ಮಹ್ಯಂ ನಾಗಮಿಷ್ಯಾಮಿ ಚೇತ್ಪುನಃ ॥ ೪ ॥
ದ್ವಿಜತ್ವಂ ದುರ್ಲಭಂ ಪ್ರಾಪ್ಯ ನಾಧೀಯೇತ ಶ್ರುತಿಂ ದ್ವಿಜಃ ।
ತಸ್ಯ ದೋಷೋ ಮಮಾಸ್ತ್ವದ್ಯ ನಾಗಮಿಷ್ಯಾಮಿ ಚೇತ್ಪುನಃ ॥ ೫ ॥
ಆಕ್ಷಿಕೇ ಪಿಶುನೇ ಚೋರೇ ಘಾತುಕೇ ಮೃತಭೋಜಿನಿ ।
ಯತ್ಪಾಪಂ ತೇನ ಲಿಪ್ಯೇಽಹಂ ನಾಗಮಿಷ್ಯಾಮಿ ಚೇತ್ಪುನಃ ॥ ೬ ॥
ಭೋಜನಾವಸರೇ ದೀಪೇ ಗತೇ ಯಃ ಕುರುತೇ ಭುಜಿಮ್ ।
ಮಮ ಭೂಯಾದಘಂ ತಸ್ಯ ನಾಗಮಿಷ್ಯಾಮಿ ಚೇತ್ಪುನಃ ॥ ೭ ॥
ಯೋ ದ್ವಿಭಾರ್ಯ ಉಭೇ ಭಾರ್ಯೇ ಸಮದೃಷ್ಟ್ಯಾ ನ ಪಶ್ಯತಿ ।
ತಸ್ಯ ಯತ್ಕಲುಷಂ ಮಹ್ಯಂ ನಾಗಮಿಷ್ಯಾಮಿ ಚೇತ್ಪುನಃ ॥ ೮ ॥
ಶ್ವಪಾರಾವತಮಾರ್ಜಾರಾನ್ಯಃ ಪುಷ್ಣಾತಿ ಚ ಕುಕ್ಕುಟಾನ್ ।
ಮಮಾಸ್ತು ಪಾತಕಂ ತಸ್ಯ ನಾಗಮಿಷ್ಯಾಮಿ ಚೇತ್ಪುನಃ ॥ ೯ ॥
ಕೂಷ್ಮಾಂಡಚ್ಛೇದಿಕಾ ನಾರೀ ದೀಪನಿರ್ವಾಪಕಃ ಪುಮಾನ್ ।
ತಯೋಃ ಪಾಪಂ ಚ ಮೇ ಭೂಯಾನ್ನಾಗಮಿಷ್ಯಾಮಿ ಚೇತ್ಪುನಃ ॥ ೧೦ ॥
ಮಾತಾ ಸ್ವಸಾ ಸ್ನುಷಾ ಕನ್ಯಾ ಮಮೇಯಮಿತಿ ವೈ ವದನ್ ।
ಕುರುತೇ ಪಾಪದೃಷ್ಟಿಂ ಯಸ್ತತ್ಪಾಪಂ ಮೇಽನ್ಯಥಾ ಭವೇತ್ ॥ ೧೧ ॥

**ಚಂಡಾಲನು ಹೇಳಿದನು—**

ನಾನು ಗಾನಾನಂತರ ಹಿಂತಿರುಗಿ ಬರದಿದ್ದರೆ ಮಹಾಪಾಪಿಗಳು, ದುರಾತ್ಮರು ಮತ್ತು ಕೃತಘ್ನರು ಹೋಗತಕ್ಕ ನರಕಾದಿಲೋಕಗಳಿಗೆ ಹೋಗುವೆನು. ॥ ೨ ॥ ಸುಳ್ಳು ಹೇಳುವವರಿಗೆ ಮತ್ತು ಪರಸ್ತ್ರೀಗಮನ ಮಾಡುವವರಿಗೆ ಅಂಟಿಕೊಳ್ಳುವ ಪಾಪಗಳಿಂದ ನಾನು ಲಿಪ್ತನಾಗಿ ನರಕಾದಿಲೋಕಗಳಲ್ಲಿ ಬೀಳುವೆನು. ॥ ೩ ॥ ರಜಸ್ವಲೆಯೊಡನೆ ಸಂಗಮ ಮಾಡುವವನಿಗೆ ಮತ್ತು ಒಟ್ಟಿಗೆ ಬಡಿಸುತ್ತಿರುವಾಗ ಬೇರೆ ಬೇರೆ ಎಲೆಗಳಿಗೆ ಬೇರೆ ಪದಾರ್ಥಗಳನ್ನು ಬಡಿಸಿ ಪಾಕಭೇದ ಮಾಡುವವರಿಗೆ ಯಾವ ಪಾಪಗಳು ಬರುವುವೋ ಅವೆಲ್ಲ ನನಗೆ ಬರಲಿ. ॥ ೪ ॥ ದುರ್ಲಭವಾದ ಬ್ರಾಹ್ಮಣಜನ್ಮ ಬಂದಾಗ ವೇದಾಧ್ಯಯನವನ್ನು ಮಾಡದಿದ್ದರೆ ಬರುವ ಪಾಪವು ನನಗೂ ಬರಲಿ. ॥ ೫ ॥ ಪಗಡೆಯಲ್ಲಿ ಜಯ ಗಳಿಸಿ ಹಣಸಂಪಾದನೆ ಮಾಡುವವನಿಗೆ, ಸುಳ್ಳು ಚಾಡಿ ಮತ್ತು ಅಪವಾದಗಳನ್ನು ಹುಟ್ಟಿಸುವವಗೂ, ಕೃಪಣರಿಗೂ, ಕಳ್ಳರಿಗೂ ಕೊಲೆಪಾತಕಿಗೂ ಮತ್ತು ಮೃತರಾದವರ ಏಕಾಹ ಶ್ರಾದ್ಧಗಳಲ್ಲಿ ಭೋಜನ ಮಾಡುವವರಿಗೂ ಯಾವ ಪಾಪಗಳು ಉಂಟಾಗುವುವೋ ಆ ಎಲ್ಲ ಪಾಪಗಳೂ ನನಗೆ ಬರಲಿ. ॥ ೬ ॥ ಊಟ ಮಾಡುವಾಗ ದೀಪವು ಆರಿ ಹೋದರೂ ಹಾಗೆಯೇ ಭೋಜನ ಮಾಡುವವನಿಗೆ ಬರುವ ಪಾಪವು ನನಗೂ ಬರಲಿ. ॥ ೭ ॥ ಇಬ್ಬರು ಹೆಂಡತಿಯರನ್ನು ಉಳ್ಳವನು ಇಬ್ಬರನ್ನೂ ಒಂದೇ ಸಮನಾದ ದೃಷ್ಟಿಯಿಂದ ನೋಡದವನಿಗೆ ಉಂಟಾಗುವ ಪಾಪವು ನನಗೂ ಬರಲಿ. ॥ ೮ ॥ ನಾಯಿ, ಬೆಕ್ಕು, ಪಾರಿವಾಳ ಮತ್ತು ಹುಂಜ ಇವುಗಳನ್ನು ಸಾಕಿದರೆ ಬರುವ ಪಾಪವು ನನಗೂ ಬರಲಿ. ॥ ೯ ॥ ಕುಂಬಳ ಕಾಯಿಯನ್ನು ಒಡೆಯತಕ್ಕಂಥ ಹೆಂಗಸಿಗೆ ಮತ್ತು ದೀಪವನ್ನು ಆರಿಸತಕ್ಕ ಪುರುಷನಿಗೆ ಬರುವ ಪಾಪವೆಲ್ಲವೂ ನನಗೆ ಬರಲಿ. ॥ ೧೦ ॥ ತಾಯಿ, ಮಗಳು, ಸೊಸೆ ಮತ್ತು ಅವಿವಾಹಿತ ಕನ್ಯಾ ಇವರುಗಳ ರಕ್ಷಕನು ತಾನೆಂದು ಹೇಳಿಯೂ ಅವರನ್ನು ಕೆಟ್ಟ ದೃಷ್ಟಿಯಿಂದ ನೋಡುವವನಿಗೆ ಬರುವ ಪಾಪವು ನನಗೆ ಬರಲಿ. ॥ ೧೧ ॥ ಹೀಗೆಂದು ಶಪಥಗಳನ್ನು ಮಾಡಿದನು.

**ಸೂತ ಉವಾಚ—**

ಇತಿ ತಚ್ಛಪಥಾನ್ ಶ್ರುತ್ವಾ ವಿಶ್ವಸ್ತೋ ಬ್ರಹ್ಮರಾಕ್ಷಸಃ ।
ಉವಾಚ ಮಧುರಂ ವಾಕ್ಯಂ ಶೀಘ್ರಂ ಗಚ್ಛ ನಮೋಽಸ್ತು ತೇ ॥ ೧೨ ॥
ತತೋ ರಾಕ್ಷಸನಿರ್ಮುಕ್ತಃ ಶ್ವಪಾಕಃ ಕೃತನಿಶ್ಚಯಃ ।
ಶೀಘ್ರಂ ದೇವಾಲಯಂ ಗತ್ವಾ ಗಾಯನ್ನೃತ್ಯನ್ನಿಶಿ ಸ್ಥಿತಃ ॥ ೧೩ ॥
ನಾರಾಯಣ ಹರೇ ವಿಷ್ಣೋ ಗೋವಿಂದೇತೀರಯನ್ಮುಹುಃ ।
ನೃತ್ಯಗಾಯನಸಂಸಕ್ತಸ್ತಾಂ ರಾತ್ರಿಮತಿವಾಸಯನ್ ॥ ೧೪ ॥
ಅಥ ಪ್ರಭಾತಸಮಯೇ ಸಮಾಪ್ತೇ ಜಾಗರೇ ಹರೇಃ ।
ಗಮನಾಯ ಮತಿಂ ಚಕ್ರೇ ರಾಕ್ಷಸಾಭ್ಯಾಸಮಂಜಸಾ ॥ ೧೫ ॥
ತತೋಽಧ್ವನಿ ದದರ್ಶಾಸಾವೇಜಮಾನಶಿರೋಧರಮ್ ।
ಶ್ವಸಂತಂ ಯಷ್ಟಿಕಾಯುಕ್ತಂ ವೃದ್ಧಬ್ರಾಹ್ಮಣಮಗ್ರತಃ ॥ ೧೬ ॥

ತಂ ದೃಷ್ಟ್ವಾ ಬ್ರಾಹ್ಮಣಂ ಮಾರ್ಗೇ ವಿನಯಾನತಕಂಧರಃ ।
ಪುನಃಪುನರ್ನಮಶ್ಚಕ್ರೇ ಶ್ವಪಾಕಃ ಸ್ವೇಷ್ಟಸಿದ್ಧಯೇ ॥ ೧೭ ॥

**ಸೂತರು ಹೇಳಿದರು—**

ಈ ರೀತಿಯಾದ ಆ ಚಂಡಾಲನ ಶಪಥಗಳನ್ನು ಆಲಿಸಿದ ಬ್ರಹ್ಮರಾಕ್ಷಸನು ಅವನ ಬಗ್ಗೆ ವಿಶ್ವಾಸವನ್ನು ಹೊಂದಿ ಮಧುರವಾಕ್ಯಗಳಿಂದ "ಬೇಗ ಹೋಗಿ ಬಾ, ನಿನಗೆ ನಮಸ್ಕಾರಗಳು" ಎಂದು ಹೇಳಿದನು. ॥ ೧೨ ॥ ಆಮೇಲೆ ಚಂಡಾಲನು, ರಾಕ್ಷಸನಿಂದ ಬಿಡುಗಡೆ ಹೊಂದಿ, ದೇವಾಲಯವನ್ನು ನಿಶ್ಚಿತಬುದ್ಧಿಯಿಂದ ಪ್ರವೇಶಿಸಿ ಇಡೀ ರಾತ್ರಿಯನ್ನು ಹಾಡುಗಳು ಮತ್ತು ನರ್ತನಗಳಿಂದ ಕಳೆದನು. ॥ ೧೩ ॥ "ನಾರಾಯಣ! ಹರೇ! ವಿಷ್ಣೋ! ಗೋವಿಂದ!" ಎಂದು ನಾಮಸಂಕೀರ್ತನೆಯನ್ನು ಮಾಡುತ್ತಾ ನೃತ್ಯಗಾಯನಗಳಲ್ಲಿ ಆಸಕ್ತನಾಗಿ ಇಡೀ ರಾತ್ರಿಯನ್ನು ಕಳೆದನು. ॥ ೧೪ ॥ ಬೆಳಗ್ಗೆಯಾಗುತ್ತಲೇ ಶ್ರೀಹರಿಯ ಜಾಗರಣೆಯು ಮುಗಿದ ಮೇಲೆ ರಾಕ್ಷಸನ ಸಮೀಪಕ್ಕೆ ಬೇಗೆ ಹೋಗಲು ನಿಶ್ಚಯಿಸಿದನು. ॥ ೧೫ ॥ ಆಗ ದಾರಿಯಲ್ಲಿ ಆದುರುತ್ತಿರುವ ಕುತ್ತಿಗೆಯುಳ್ಳ, ದೀರ್ಘವಾಗಿ ಉಚ್ಛ್ವಾಸ ನಿಶ್ವಾಸ ಬಿಡುತ್ತಿದ್ದ ಕಟ್ಟಿಗೆಯನ್ನೂರಿಕೊಂಡು ಬರುತ್ತಿದ್ದ ಒಬ್ಬ ವೃದ್ಧ ಬ್ರಾಹ್ಮಣನನ್ನು ನೋಡಿದನು. ॥ ೧೬ ॥ ದಾರಿಯಲ್ಲಿ ಆ ಬ್ರಾಹ್ಮಣನನ್ನು ನೋಡಿ ವಿನಯದಿಂದ ಬಾಗಿ ತನ್ನ ಶ್ರೇಯಸ್ಸಿಗಾಗಿ ಪುನಃ ಪುನಃ ನಮಸ್ಕಾರ ಮಾಡಿದನು. ॥ ೧೭ ॥

**ಬ್ರಾಹ್ಮಣ ಉವಾಚ—**

ಬ್ರಾಹ್ಮಣಸ್ತಮುವಾಚಾಥೋ ಕೋಽಸಿ ಶೀಘ್ರಂ ಕ್ವ ಗಚ್ಛಸಿ ।
ಕಿಂ ತೇ ಕಾರ್ಯಂ ಶ್ವಪಾಕ ತ್ವಂ ಕಿಂ ವಾ ಮೃಗಯಸೇ ವನೇ ॥ ೧೮ ॥
ಇತಿ ತಸ್ಯ ವಚಃ ಶ್ರುತ್ವಾ ಶ್ವಪಾಕಸ್ಸತ್ಯವಾಕ್ತದಾ ।
ಸರ್ವಂ ನಿವೇದಯಾಮಾಸ ಸ್ವವೃತ್ತಂ ದ್ವಿಜಪುಂಗವೇ ॥ ೧೯ ॥

**ಬ್ರಾಹ್ಮಣನು ಹೇಳಿದನು—**

"ನೀನು ಯಾರು? ಏತಕ್ಕಾಗಿ ಬೇಗ ಬೇಗ ಹೋಗುತ್ತಿದ್ದೀಯಾ? ಏನುನಿನ್ನ ಕಾರ್ಯ? ಎಲೈ ಚಂಡಾಲನೇ, ಮೃಗಗಳಿಂದ ತುಂಬಿದ ಈ ಕಾಡಿನಲ್ಲಿ ನೀನು ಏನನ್ನು ತಾನೇ ಹುಡುಕುತ್ತಿದ್ದೀಯಾ?" ॥ ೧೮ ॥ ಈ ರೀತಿಯಾದ ಬ್ರಾಹ್ಮಣನ ಮಾತನ್ನು ಕೇಳಿ ನಡೆದ ತನ್ನ ವೃತ್ತಾಂತವನ್ನೆಲ್ಲ ಯಥಾವತ್ತಾಗಿ ಸತ್ಯವಾಕ್ಯಗಳಿಂದ ಬ್ರಾಹ್ಮಣನಿಗೆ ವಿವರಿಸಿದನು. ॥ ೧೯ ॥

**ಶ್ವಪಾಕ ಉವಾಚ—**

ಚಾಂಡಾಲೋಽಹಂ ದ್ವಿಜಶ್ರೇಷ್ಠ ಸತ್ಸಂಗಪ್ರಾಪ್ತಸನ್ಮತಿಃ ।
ಏಕಾದಶ್ಯಾಮನಾಹಾರೋ ಜಾಗರಾರ್ಥಮಿಹಾಗತಮ್ ॥ ೨೦ ॥
ವಿಪಿನೇಽಸ್ಮಿನ್ನಿತೋ ದೂರೇ ತಿಷ್ಠತಿ ಬ್ರಹ್ಮರಾಕ್ಷಸಃ ।
ಸ ಮಯಾ ಮೇ ಕೃತಸ್ತೇನ ಸ್ವಶರೀರಾರ್ಪಣೇ ಕಿಲ ॥ ೨೧ ॥
ತತ್ರಾಹಂ ಮಂಕ್ಷು ಗಚ್ಛಾಮಿ ತತ್ಕ್ಷುಧಾಶಾಂತಯೇ ದ್ವಿಜ ।
ಯತಸ್ತುಷ್ಯತಿ ಗೋವಿಂದಃ ಪ್ರತಿಜ್ಞಾತಾರ್ಥಪಾಲನಾತ್ ॥ ೨೨ ॥

ಗಮಿಷ್ಯತ್ಯನ್ಯಥಾ ನಾಶಂ ಕೃತ್ಸ್ನಂ ಪುಣ್ಯಂ ಶ್ರಮಾರ್ಜಿತಮ್ ।
ಅತೋಽಹಂ ತತ್ರ ಗಚ್ಛಾಮಿ ದೇಹ್ಯಾಜ್ಞಾಂ ಬುದ್ಧಿಮನ್ಮಮ ॥ ೨೩ ॥
ಶ್ವಪಾಕಸ್ಯ ವಚಃ ಶ್ರುತ್ವಾ ಭಗವಾನ್ ವೃದ್ಧರೂಪಧೃಕ್ ।
ನಿಶ್ಚಯೇ ದೃಢತಾಂ ತಸ್ಯ ವಿಜ್ಞಾತುಂ ಪುನರಬ್ರವೀತ್ ॥ ೨೪ ॥

ಚಂಡಾಲನು ಹೇಳಿದನು—

ನಾನು ಚಂಡಾಲನು. ಸತ್ಸಹವಾಸದಿಂದ ಹುಟ್ಟಿದ ಸುಬುದ್ಧಿಯಿಂದ ನಾನು ಏಕಾದಶೀದಿವಸ ನಿರಾಹಾರನಾಗಿದ್ದು ಜಾಗರಣೆಗಾಗಿ ಇಲ್ಲಿಗೆ ಬಂದೆನು. ॥ ೨೦ ॥ ಈ ಕಾಡಿನಲ್ಲಿ ಹತ್ತಿರದಲ್ಲಿಯೇ ಒಬ್ಬ ಬ್ರಹ್ಮರಾಕ್ಷಸನಿದ್ದಾನೆ. ನನ್ನ ಶರೀರವನ್ನು ಅರ್ಪಿಸುವುದಾಗಿ ನಾನು ಅವನಿಗೆ ವಾಗ್ದಾನ ಮಾಡಿದ್ದೇನೆ. ॥ ೨೧ ॥ ಹೇ ಬ್ರಾಹ್ಮಣನೇ! ಅವನ ಹಸಿವನ್ನು ಪರಿಹಾರ ಮಾಡಲು ನಾನು ಜಾಗ್ರತೆಯಾಗಿ ಅವನಲ್ಲಿಗೆ ಹೋಗುತ್ತಿದ್ದೇನೆ. ಈ ಪ್ರತಿಜ್ಞಾಪಾಲನಕಾರ್ಯದಿಂದ ಶ್ರೀಗೋವಿಂದನು ತೃಪ್ತನಾಗುತ್ತಾನೆ. ॥ ೨೨ ॥ ಹಾಗೆ ಮಾಡದಿದ್ದರೆ ನಾನು ಸಂಪಾದನೆ ಮಾಡಿರುವ ಇಡೀ ಪುಣ್ಯವು ನಾಶವಾಗುವುದು. ಆದ್ದರಿಂದ ಬುದ್ಧಿವಂತರಾದ ನೀವು ನನಗೆ ಆಜ್ಞೆಯನ್ನು ಕೊಡಿ. ನಾನು ಅಲ್ಲಿಗೆ ಹೋಗುತ್ತೇನೆ. ॥ ೨೩ ॥ ಚಂಡಾಲನ ಮಾತನ್ನು ಕೇಳಿ ವೃದ್ಧ ಬ್ರಾಹ್ಮಣನ ವೇಷದಲ್ಲಿದ್ದ ಭಗವಂತನು ಅವನ ದಾರ್ಢ್ಯವನ್ನು ಅರಿಯಲು ಪುನಃ ಹೇಳಿದನು. ॥ ೨೪ ॥

ಬ್ರಾಹ್ಮಣ ಉವಾಚ—

ಜೀವತೋ ಧರ್ಮಸಿದ್ಧಿಃ ಸ್ಯಾದರ್ಥಸಿದ್ಧಿಶ್ಚ ಜೀವತಃ ।
ಜೀವತಃ ಕಾಮಸಿದ್ಧಿಃ ಸ್ಯಾಜ್ಜೀವನ್ಭದ್ರಾಣಿ ಪಶ್ಯತಿ ॥ ೨೫ ॥
ಯಶೋ ಧರ್ಮಸ್ಯ ಮಾಹಾತ್ಮ್ಯಂ ಸಂಪದೋ ವಿಪದೋಽಪಿ ವಾ ।
ಸುಖಂ ವಾ ಯದಿ ವಾ ದುಃಖಂ ಘಟೇತ ಮೃತಕೇ ಕಥಮ್ ॥ ೨೬ ॥
ತದಗ್ಚ್ಛ ಜೀವ ಚಾಂಡಾಲ ನಾತ್ರ ಗಂತುಂ ತ್ವಮರ್ಹಸಿ ।
ಯತ್ರಾಸೌ ರಾಕ್ಷಸಃ ಪಾಪಃ ಪಿಶಿತಾಶೀ ಬುಭುಕ್ಷಿತಃ ॥ ೨೭ ॥
ಸ್ವಸ್ಥಾನಂ ತ್ವಂ ದ್ರುತಂ ಗತ್ವಾ ಧರ್ಮಸಂಚಯಮಾಚರ ।
ಸತ್ಯಲೋಪಕೃತಂ ಪಾಪಂ ನ ಸ್ಪ್ರಶೇತ್ತ್ವಾಂ ಮದಾಜ್ಞಯಾ ॥ ೨೮ ॥
ಗೋವಿಪ್ರಪ್ರಾಣರಕ್ಷಾರ್ಥಂ ದ್ಯೂತೇ ಸ್ವಪ್ರಾಣಸಂಕಟೇ ।
ಸ್ತ್ರಿಯಾಂ ಶಠೇ ವಿವಾಹೇ ಚ ನಾನೃತಂ ದೋಷಮಾವಹೇತ್ ॥ ೨೯ ॥
ಇತ್ಥಂ ತದ್ವಾಚಮಾಕರ್ಣ್ಯ ಶ್ವಪಾಕೋಽಸೌ ದೃಢವ್ರತಃ ।
ಉವಾಚ ಮಧುರಂ ವಾಕ್ಯಂ ಮರಣೇ ಕೃತನಿಶ್ಚಯಃ ॥ ೩೦ ॥

ಬ್ರಾಹ್ಮಣನು ಹೇಳಿದನು—

ಬದುಕಿದ್ದವನಿಗೆ ಧರ್ಮಸಿದ್ಧಿಯಾಗಲೀ, ಅರ್ಥಸಿದ್ಧಿಯಾಗಲೀ ಕಾಮಸಿದ್ಧಿಯಾಗಲೀ ಆಗುವುದು. ಬದುಕಿದವನೇ ಮಂಗಳಕರವಾದವುಗಳನ್ನು ನೋಡಬಲ್ಲನು. ॥ ೨೫ ॥ ಯಶಸ್ಸು, ಧರ್ಮದ ಮಹಾಮಹಿಮೆಯು, ಸಂಪತ್ತು, ವಿಪತ್ತು, ಸುಖ ಅಥವಾ ದುಃಖವು ಸತ್ತವನಿಗೆ ಹೇಗೆ

ತಾನೇ ದಕ್ಕೀತು? ॥ ೨೬ ॥ ಆದ್ದರಿಂದ ಇಲ್ಲಿಂದ ಪರಾರಿಯಾಗು. ಬ್ರಹ್ಮರಾಕ್ಷಸನ ಸಮೀಪಕ್ಕೆ ಹೋಗಬೇಡ. ಆ ರಾಕ್ಷಸನು ಪಾಪಿಷ್ಠನು ಮತ್ತು ಹಸಿದಿದ್ದಾನೆ, ಜೊತೆಗೆ ಮಾಂಸಭಕ್ಷಕನು ಬೇರೆ. ॥ ೨೭ ॥ ಸ್ವಸ್ಥಾನಕ್ಕೆ ಬೇಗ ಹೋಗಿ ಅಲ್ಲಿ ನಿನ್ನ ಧರ್ಮಗಳನ್ನು ಸಂಚಯ ಮಾಡು. ನನ್ನ ಆಜ್ಞಾದಿಂದ ಸತ್ಯಭ್ರಷ್ಟನಾಗುವ ದೋಷವು ನಿನಗೆ ತಟ್ಟುವುದಿಲ್ಲ. ॥ ೨೮ ॥ ಗೋವು, ಬ್ರಾಹ್ಮಣ, ಇವರುಗಳ ಪ್ರಾಣರಕ್ಷಣೆಯ ಸಮಯದಲ್ಲಿಯೂ, ಜೂಜಿನಲ್ಲಿಯೂ, ತನ್ನ ಪ್ರಾಣಕ್ಕೆ ಅಪಾಯದ ಪ್ರಸಂಗದಲ್ಲಿಯೂ ಸ್ತ್ರೀಯರಲ್ಲಿಯೂ, ಮೂರ್ಖರಲ್ಲಿಯೂ ಮತ್ತು ವಿವಾಹದಲ್ಲಿಯೂ ಸುಳ್ಳು ಹೇಳುವುದರಿಂದ ದೋಷ ಬರುವುದಿಲ್ಲ. ॥ ೨೯ ॥ ಈ ರೀತಿಯಾಗಿ ಹೇಳಿದ ಆ ಬ್ರಾಹ್ಮಣನ ಮಾತನ್ನು ಕೇಳಿದ ಚಂಡಾಲನು ತನ್ನ ಪ್ರಾಣವನ್ನು ಅರ್ಪಿಸುವುದಕ್ಕೆ ದೃಢಮನಸ್ಕನಾಗಿ ಮಧುರವಾದ ಮಾತುಗಳನ್ನು ಹೇಳಿದನು. ॥ ೩೦ ॥

ಶ್ವಪಾಕ ಉವಾಚ—

ನಾಹಮೇವಂ ಕರಿಷ್ಯಾಮಿ ಯನ್ಮಾಂ ತ್ವಂ ಪರಿಭಾಷಸೇ ।
ನ ಚಾಹಂ ನಾಶಯೇ ಸತ್ಯಮೇತನ್ಮೇ ನಿಶ್ಚಿತಂ ವ್ರತಮ್ ॥ ೩೧ ॥
ಸತ್ಯಮೇವ ಪರೋ ಧರ್ಮಃ ಸತ್ಯಮೇವ ಪರಂ ತಪಃ ।
ಸತ್ಯಮೇವ ಪರಂ ದಾನಂ ಸತ್ಯಮೇವ ಪರಂ ವ್ರತಮ್ ॥ ೩೨ ॥
ನಾನ್ಯಂ ಧರ್ಮಂ ಪರಂ ಪ್ರಾಹುಃ ಸ್ವಸತ್ಯಪರಿಪಾಲನಾತ್ ।
ಅತೋ ಬ್ರೂಹಿ ವಿಚಾರ್ಯಾರ್ಥಂ ಕಥಮೇವಂ ಪ್ರಭಾಷಸೇ ॥ ೩೩ ॥
ತಾರಣಾಯೋದಿತಂ ಸತ್ಯಂ ಯಾತನಾಯಾನೃತಂ ತಥಾ ।
ನಾಹಂ ತತ್ಪ್ರಾಣಲೋಭೇನ ಭವೇಯಂ ಸತ್ಯನಾಶಕಃ ॥ ೩೪ ॥
ನಾಹಂ ಮೃಷಾ ಕರಿಷ್ಯಾಮಿ ಗಚ್ಛ ತಾತ ನಮೋಽಸ್ತು ತೇ ।
ನಿಶ್ಚಯಂ ಮಮ ಜಾನೀಹಿ ಯಾಸ್ಯೇ ರಾಕ್ಷಸಸನ್ನಿಧಿಮ್ ॥ ೩೫ ॥
ಏವಮುಕ್ತ್ವಾ ವಚಶ್ಶೀಘ್ರಂ ಶ್ವಪಾಕಃ ಸತ್ಯಚೋದಿತಃ ।
ಜಗಾಮ ತತ್ರ ವೇಗೇನ ಯತ್ರಾಸೌ ಬ್ರಹ್ಮರಾಕ್ಷಸಃ ॥ ೩೬ ॥
ಸೋಽಪ್ಯತಿಕ್ರಮಮಾಲಕ್ಷ್ಯ ವಿಚಿನ್ವನ್ವಿಪಿನೇ ಖಲಃ ।
ಬಭ್ರಾಮಾನುದಿಶಂ ಕ್ರವ್ಯಾದಾಗತೋಽದ್ಯಾಪಿ ನೇತ್ಯಸೌ ॥ ೩೭ ॥
ತಥಾವಿಧಂ ಚ ತಂ ದೃಷ್ಟ್ವಾ ಭ್ರಮಂತಂ ನಿಕಷಾ ವನಮ್ ।
ತತ್ಪ್ರದೇಶಂ ಸಮಾಗಮ್ಯ ಪ್ರಾಂಜಲಿಸ್ತಮಭಾಷತ ॥ ೩೮ ॥

ಚಂಡಾಲನು ಹೇಳಿದನು—

"ಎಲೈ ಬ್ರಾಹ್ಮಣೋತ್ತಮನೇ! ನಾನು ನೀನು ಹೇಳಿದಂತೆ ಮಾಡುವುದಿಲ್ಲ. ನನ್ನ ಸತ್ಯನಿಷ್ಠೆಯ ವ್ರತವನ್ನು ನಾಶ ಮಾಡಲು ಇಚ್ಛಿಸೆನು. ಇದು ನನ್ನ ದೃಢನಿಶ್ಚಯವು. ॥ ೩೧ ॥ ಸತ್ಯವೇ ಅತ್ಯುತ್ತಮವಾದ ವ್ರತವು ಮತ್ತು ಧರ್ಮವು, ಸತ್ಯವೇ ಅತಿಶ್ರೇಷ್ಠವಾದ ತಪಸ್ಸು, ಸತ್ಯವೇ ಅತಿಶ್ರೇಷ್ಠವಾದ ದಾನವು. ॥ ೩೨ ॥ ತನ್ನ ಸತ್ಯತ್ವದ ಪರಿಪಾಲನೆಗಿಂತ ಹೆಚ್ಚಾದ ಯಾವುದನ್ನು

ಶ್ರೇಷ್ಠವಾದ ಧರ್ಮವೆಂದು ಯಾರು ಹೇಳಿಲ್ಲ. ಆದ್ದರಿಂದ ವಿಚಾರ ಮಾಡಿ ಸರಿಯಾಗಿ ಹೇಳು. ಏತಕ್ಕಾಗಿ ಈ ರೀತಿ ನುಡಿಯುತ್ತಿದ್ದೀಯೆ? ॥ ೩೩ ॥ ನಮ್ಮನ್ನು ಸಂಸಾರಸಮುದ್ರದಿಂದ ಪಾರು ಮಾಡಲು ಸತ್ಯವು ಹೇಳಲ್ಪಟ್ಟಿದೆ. ಹಾಗೆಯೇ ಅನೃತವು ನಮ್ಮನ್ನು ನರಕಕ್ಕೆ ಒಯ್ಯುವುದೆಂದು ಹೇಳಲ್ಪಟ್ಟಿದೆ. ಆದ್ದರಿಂದ ನಾನು ನನ್ನ ಪ್ರಾಣದ ಮೇಲಿನ ಆಶೆಯಿಂದ ಸತ್ಯವನ್ನು ನಾಶ ಮಾಡುವುದಿಲ್ಲ. ॥ ೩೪ ॥ ನಾನು ತಪ್ಪು ಮಾಡುವುದಿಲ್ಲ. ವೃದ್ಧರೇ, ತಾವು ಹೊರಡಿರಿ. ತಮಗೆ ನಮಸ್ಕಾರಗಳು. ನನ್ನ ನಿಶ್ಚಯವನ್ನು ತಾವು ತಿಳಿದೇ ಇದ್ದೀರಿ. ನಾನು ರಾಕ್ಷಸನ ಸಮೀಪಕ್ಕೆ ಹೋಗುತ್ತೇನೆ'' ॥ ೩೫ ॥ ಈ ರೀತಿಯಾಗಿ ಹೇಳಿ ಸತ್ಯದಿಂದ ಪ್ರಚೋದಿತನಾಗಿ ಆ ಚಂಡಾಲನು ವೇಗವಾಗಿ ರಾಕ್ಷಸನಿದ್ದ ಸ್ಥಳಕ್ಕೆ ಬಂದನು. ॥ ೩೬ ॥ ಮಾಂಸಭಕ್ಷಕನೂ, ಕ್ರೂರಿಯೂ ಆದ ಆ ಬ್ರಹ್ಮರಾಕ್ಷಸನು ಚಂಡಾಲನನ್ನು ತನ್ನ ಮಾತಿಗೆ ಮೀರಿದವನನ್ನಾಗಿ ತಿಳಿದು ಅವನಿಗಾಗಿ ಕಾಡಿನಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಹುಡುಕುತ್ತಾ ''ಈ ವರೆವಿಗೂ ಬರಲಿಲ್ಲ'' ಎಂದು ಯೋಚಿಸಿದನು. ॥ ೩೭ ॥ ಈ ರೀತಿಯಾಗಿದ್ದು ಕಾಡಿನ ಹತ್ತಿರ ಅಲೆದಾಡುತ್ತಿದ್ದ ಆ ರಾಕ್ಷಸನನ್ನು ನೋಡಿ ಚಂಡಾಲನು ಅವನ ಜಾಗಕ್ಕೆ ಹೋಗಿ, ಕೈಮುಗಿದು ಅವನಿಗೆ ಹೇಳಿದನು. ॥ ೩೮ ॥

ಪುಲ್ಕಸ ಉವಾಚ—

ಆಗತೋಽಹಂ ಮಹಾಭಾಗ ಕೃತ್ವಾ ಜಾಗರಮುತ್ತಮಮ್ ।
ಸ್ವೀಯಂ ವ್ರತಂ ಸಮಾಪ್ಯಾಶು ಸತ್ಯನೈಗಡಯಂತ್ರಿತಃ ॥ ೩೯ ॥
ಏಹ್ಯೇಹಿ ಮಮ ಗಾತ್ರಾಣಿ ಭಕ್ಷಯಸ್ವ ಯಥೇಚ್ಛಯಾ ।
ಯಥಾ ಸ್ಯಾದತುಲೋ ಹರ್ಷೋ ಯಥಾ ಚ ತವ ರೋಚತೇ ॥ ೪೦ ॥
ಏವಂ ಶ್ವಪಾಕವಚನಂ ಶ್ರುತ್ವಾಸೌ ಬ್ರಹ್ಮರಾಕ್ಷಸಃ ।
ಉವಾಚ ಹರ್ಷಿತಸ್ವಾಂತಃ ಶ್ವಪಾಕಂ ಸತ್ಯಪಾಲನಾತ್ ॥ ೪೧ ॥

॥ ಇತಿ ಏಕೋನಸಪ್ತತಿತಮೋಽಧ್ಯಾಯಃ ॥

ಚಂಡಾಲನು ಹೇಳಿದನು—

ಎಲೈ ಮಹಾಭಾಗನೇ! ನನ್ನ ಸತ್ಯವೆಂಬ ಬೇಡಿಯಿಂದ ಕಟ್ಟಲ್ಪಟ್ಟವನಾಗಿ ನಾನು ಅತ್ಯುತ್ತಮ ಜಾಗರಣ ಸೇವೆಯನ್ನು ಮುಗಿಸಿಕೊಂಡು ಬಂದಿದ್ದೇನೆ. ॥ ೩೯ ॥ ''ಬಾ, ಬಾ, ನನ್ನ ಅಂಗಾಂಗಗಳನ್ನು ಇಚ್ಛೆ ಬಂದಂತೆ ಭಕ್ಷಿಸು. ನಿನಗೆ ತೋರಿದಂತೆ ನಿನಗೆ ಸಂತೋಷವಾಗುವಂತೆ ಭಕ್ಷಣ ಮಾಡು.'' ॥ ೪೦ ॥ ಹೀಗೆ ಹೇಳಿದ ಚಂಡಾಲನ ವಾಕ್ಯಗಳನ್ನು ಕೇಳಿ ಅವನ ಸತ್ಯಪರಿಪಾಲನೆಯ ನಿಷ್ಠೆಯಿಂದ ಹರ್ಷಗೊಂಡು ಅವನನ್ನು ಕುರಿತು ರಾಕ್ಷಸನು ಈ ರೀತಿ ಹೇಳಿದನು. ॥ ೪೧ ॥

॥ ಅರವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತತಿತಮೋಽಧ್ಯಾಯಃ ॥ ೭೦ ॥

ರಾಕ್ಷಸ ಉವಾಚ—

ಪರಂ ತುಷ್ಟೋಽಸ್ಮ್ಯಹಂ ವತ್ಸ ತವ ಸತ್ಯಪ್ರಪಾಲನಾತ್ ।
ಚಾಂಡಾಲಸ್ಯಾನಭಿಜ್ಞಸ್ಯ ಯಸ್ಯ ತೇ ಮತಿರೀದೃಶೀ ॥ ೧ ॥
ತವ ದಾರ್ಢ್ಯಮಹಂ ದೃಷ್ಟ್ವಾ ಪ್ರಸನ್ನೋಽಸ್ಮಿ ನ ಸಂಶಯಃ ।
ತವ ಪ್ರಾಣಾ ಮಯಾ ಮುಕ್ತಾ ಗೃಹಂ ಗಚ್ಛ ಯಥಾಸುಖಮ್ ॥ ೨ ॥
ಪರಂತು ತ್ವಾಮಹಂ ಯಾಚೇ ಯತ್ಕಿಂಚಿದ್ದೇಹಿ ತನ್ಮಮ ।
ತ್ವತ್ಪ್ರಾಣರಕ್ಷಣಂ ತೇನ ಭವಿಷ್ಯತಿ ನ ಚಾನ್ಯಥಾ ॥ ೩ ॥
ಜಾಗರೇ ಗಾಯನಂ ನೃತ್ಯಂ ಕೃತಂ ಯದ್ಧರಿಮಂದಿರೇ ।
ತತ್ಪುಣ್ಯಂ ದೇಹಿ ಮೇ ಶೀಘ್ರಂ ಯದಿ ಜೀವಿತುಮಿಚ್ಛಸಿ ॥ ೪ ॥
ರಾಕ್ಷಸೀಂ ಗಿರಮಾಕರ್ಣ್ಯ ಮರಣಾದಪ್ಯರಂತುದಾಮ್ ।
ಶ್ವಪಾಕಃ ಪ್ರಾಣರಕ್ಷಾಯೈ ನ ಚಚಾಲ ದೃಢವ್ರತಃ ॥ ೫ ॥
ಸಮಾಗತೋ ಮಹಾವಿಘ್ನೋ ನಿವರ್ತೇತ ಕಥಂ ಮಮ ।
ವಿಚಾರ್ಯೈವಂ ಶ್ವಪಾಕೋಽಸಾವುವಾಚ ಬ್ರಹ್ಮರಾಕ್ಷಸಮ್ ॥ ೬ ॥

## ॥ ಎಪ್ಪತ್ತನೆಯ ಅಧ್ಯಾಯವು ॥

ರಾಕ್ಷಸನು ಹೇಳಿದನು—

''ಅಪ್ಪ! ನಿನ್ನ ಸತ್ಯಪರಿಪಾಲನೆಯನ್ನು ಕಂಡು ನನಗೆ ಬಹಳ ಹರ್ಷವಾಗಿದೆ. ಹೆಚ್ಚು ಅರಿವಿಲ್ಲದ ಚಂಡಾಲನಿಗೆ ಇಂತಹ ಬುದ್ಧಿಯು ಇರುವುದು ಆಶ್ಚರ್ಯವೇ ಸರಿ! ॥ ೧ ॥ ನಿನ್ನ ಸತ್ಯನಿಷ್ಠೆಯ ದಾರ್ಢ್ಯವನ್ನು ನೋಡಿ ಪ್ರಸನ್ನನಾಗಿದ್ದೇನೆ; ಇದರಲ್ಲಿ ಸಂಶಯವಿಲ್ಲ. ನಿನ್ನ ಪ್ರಾಣವನ್ನು ಉಳಿಸಿದ್ದೇನೆ. ಸುಖವಾಗಿ ಮನೆಗೆ ತೆರಳು. ॥ ೨ ॥ ಆದರೂ ನಾನು ಯಾವುದೋ ಸ್ವಲ್ಪವನ್ನು ದಾನವಾಗಿ ಕೇಳುತ್ತೇನೆ. ಅದನ್ನು ನನಗೆ ಕೊಡು. ಅದನ್ನು ಕೊಟ್ಟರೇನೇ ನಿನ್ನ ಪ್ರಾಣವು ಉಳಿಯುವುದು; ಇಲ್ಲದಿದ್ದರೆ ಇಲ್ಲ. ॥ ೩ ॥ ನಿನಗೆ ಬದುಕುವ ಆಸೆಯಿದ್ದರೆ ಹರಿಮಂದಿರದಲ್ಲಿ ಜಾಗರಣೆಗಾಗಿ ನೀನು ಯಾವ ಗಾಯನ ಮತ್ತು ನರ್ತನವನ್ನು ಮಾಡಿದೆಯೋ ಅದರ ಪುಣ್ಯವನ್ನು ಜಾಗ್ರತೆಯಾಗಿ ನನಗೆ ಕೊಡು.'' ॥ ೪ ॥ ಮರಣಕ್ಕಿಂತಲೂ ಕಠಿಣವಾದ ರಾಕ್ಷಸನ ಈ ಮಾತನ್ನು ಕೇಳಿದ ಆ ಚಂಡಾಲನು ತನ್ನ ಪ್ರಾಣರಕ್ಷಣೆಗೋಸ್ಕರ ತನ್ನ ಅಚಲವಾದ ನಿರ್ಧಾರದಿಂದ ಚಲಿಸಲಿಲ್ಲ. ॥ ೫ ॥ ಸಿಡಿಲಿನಂತೆ ಬಂದೊದಗಿರುವ ಈ ಮಹಾವಿಘ್ನವನ್ನು ಹೇಗೆ ನಿವಾರಣೆ ಮಾಡಲಿ ಎಂದು ವಿಚಾರಮಾಡಿ ಚಂಡಾಲನು ಬ್ರಹ್ಮರಾಕ್ಷಸನನ್ನು ಕುರಿತು ಹೇಳಿದನು. ॥ ೬ ॥

ಶ್ವಪಾಕ ಉವಾಚ—

ತುಭ್ಯಂ ಯದ್ಭಾಷಿತಂ ಪೂರ್ವಂ ತತ್ಸತ್ಯಂ ತು ಮಯಾ ಕೃತಮ್ ।
ತಸ್ಮಾದ್ಭಕ್ಷಯ ಮೇ ದೇಹಂ ನ ದಾಸ್ಯೇ ಗೀತಜಂ ಫಲಮ್ ॥ ೭ ॥

**ಚಂಡಾಲನು ಹೇಳಿದನು—**

ಮಾತು ಕೊಟ್ಟರುವಂತೆ ನಾನು ಹಿಂತಿರುಗಿ ಬಂದು ನನ್ನನ್ನು ಒಪ್ಪಿಸಿಕೊಳ್ಳುತ್ತಿದ್ದೇನೆ. ಗಾನನೃತ್ಯಗಳ ಫಲಗಳನ್ನು ನಾನು ಕೊಡುವುದಿಲ್ಲ ಮತ್ತು ನನ್ನ ದೇಹವನ್ನು ಭಕ್ಷಿಸು.'' ॥ ೭ ॥

**ರಾಕ್ಷಸ ಉವಾಚ—**

**ಏವಮುಕ್ತಃ ಶ್ವಪಾಕೇನ ರಾಕ್ಷಸಃ ಪುನರಬ್ರವೀತ್ ।**
**ಯಾಮದ್ವಯೋದ್ಭವಂ ಪುಣ್ಯಂ ಶ್ವಪಾಕ ವಿತರಾಶು ಮೇ ॥ ೮ ॥**

**ರಾಕ್ಷಸನು ಹೇಳಿದನು—**

ಈ ರೀತಿಯಾಗಿ ಹೇಳಿಸಿಕೊಂಡ ರಾಕ್ಷಸನು ಪುನಃ ಹೇಳಿದನು. ''ಚಂಡಾಲನೇ! ಗಾನನೃತ್ಯಗಳ ಎರಡು ಯಾಮಗಳ ಫಲವನ್ನಾದರೂ ಕೊಡು.'' ॥ ೮ ॥

**ಶ್ವಪಾಕ ಉವಾಚ—**

**ಏವಂ ರಕ್ಷೋಗಿರಂ ಶ್ರುತ್ವಾ ಶ್ವಪಾಕಃ ಪುನರಬ್ರವೀತ್ ।**
**ನ ದಾಸ್ಯಾಮಿ ತದಪ್ಯದ್ಯ ಭಕ್ಷಯಸ್ವ ಯಥಾಸುಖಮ್ ॥ ೯ ॥**

**ಚಂಡಾಲನು ಹೇಳಿದನು—**

ಈ ರೀತಿಯಾದ ರಾಕ್ಷಸನ ಮಾತನ್ನು ಕೇಳಿ ಚಂಡಾಲನು ಹೇಳಿದನು. ''ಮೂರ್ಖನೇ, ಅದನ್ನೂ ಕೊಡೆನು. ನನ್ನನ್ನು ಯಥೇಚ್ಛವಾಗಿ ಭಕ್ಷಿಸು.'' ಎಂದು ಹೇಳಿದನು. ॥ ೯ ॥

**ರಾಕ್ಷಸ ಉವಾಚ—**

**ಏವಂ ನಿರಾಕೃತಸ್ತೇನ ರಾಕ್ಷಸಃ ಪುನರೂಚಿವಾನ್ ।**
**ಏಕಯಾಮೋದ್ಭವಂ ಪುಣ್ಯಂ ದೇಹಿ ತ್ವಂ ಮಮ ಸುವ್ರತ ॥ ೧೦ ॥**

**ರಾಕ್ಷಸನು ಹೇಳಿದನು—**

ಈ ರೀತಿಯಾಗಿ ನಿರಾಕರಿಸಲ್ಪಟ್ಟ ಬ್ರಹ್ಮರಾಕ್ಷಸನು ಪುನಃ ಹೇಳಿದನು. ''ಎಲೈ, ಒಳ್ಳೆಯ ವ್ರತಶೀಲನೇ! ಒಂದು ಯಾಮದ ಗಾಯನದ ಪುಣ್ಯವನ್ನಾದರೂ ನನಗೆ ಕೊಡು'' ಎಂದು ಹೇಳಿದನು. ॥ ೧೦ ॥ ಚಂಡಾಲನು ರಾಕ್ಷಸನ ಹಟವನ್ನು ಕೇಳಿ ಪುನಃ ಅವನಿಗೆ ಹೇಳಿದನು.

**ಶ್ವಪಾಕ ಉವಾಚ—**

**ಶ್ವಪಾಕಸ್ತಸ್ಯ ನಿರ್ಬಂಧಂ ಶ್ರುತ್ವಾ ತಮವದತ್ಪುನಃ ।**
**ಭಕ್ಷಣಂ ಮೇ ಪ್ರತಿಜ್ಞಾತಂ ಗೀತಪುಣ್ಯಂ ಕಿಮಿಚ್ಛಸಿ ॥ ೧೧ ॥**

**ಚಂಡಾಲನು ಹೇಳಿದನು—**

ರಾಕ್ಷಸನ ಬಲಾತ್ಕಾರವನ್ನು ಕೇಳಿದ ಚಂಡಾಲನು ಅವನನ್ನು ಕೇಳಿದನು. ''ಭಕ್ಷಣಕ್ಕೋಸ್ಕರ ನನ್ನಿಂದ ಶಪಥ ಮಾಡಿಸಿ ಈಗ ಗೀತನರ್ತನಗಳ ಪುಣ್ಯವನ್ನು ಹೊಂದಲು ಏತಕ್ಕೋಸ್ಕರ ಬಯಸುತ್ತಿದ್ದೀಯಾ?'' ॥ ೧೧ ॥

ರಾಕ್ಷಸ ಉವಾಚ—

ಕೌಣಪಸ್ತು ಪುನಃ ಪ್ರಾಹ ಗೈತಕಪ್ರಬಲಂ ಫಲಮ್ ।
ದೇಹಿ ಶೀಘ್ರಮನೇನಾಶು ಸ್ವಾತ್ಮಾನಂ ತಾರಯಾಮ್ಯಹಮ್ ॥ ೧೨ ॥
ಇತ್ಥಂ ತದಾಗ್ರಹಂ ಜ್ಞಾತ್ವಾ ಶ್ವಪಾಕೋ ಭಗವತ್ಪ್ರಿಯಃ ।
ಸ್ವಾಂತೇ ವಿಚಾರಯಾಮಾಸ ಬಲಾಬಲವಿಧಿಂ ತದಾ ॥ ೧೩ ॥
ಅಹೋ ಕಷ್ಟಂ ಮಹತ್ಪ್ರಾಪ್ತಂ ಕಿಂ ಕಾರ್ಯಮಧುನಾ ಮಯಾ ।
ಪ್ರಬಲಂ ದುರ್ಬಲಂ ಕಿಂ ವಾ ಜ್ಞಾತ್ವಾ ಕುರ್ವೇ ಯಥೋಚಿತಮ್ ॥ ೧೪ ॥
ಸತ್ಯಂ ತಪೋ ದಯಾ ದಾನಂ ಸ್ವಾಧ್ಯಾಯಂ ಯಜನಾದಿಕಮ್ ।
ಪರೋಪಕಾರಪುಣ್ಯಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೧೫ ॥
ಪರೋಪಕಾರಿಭಿರ್ದತ್ತಾ ಅಪಿ ಪ್ರಾಣಾ ನೃಭಿಃ ಪುರಾ ।
ಗೀತದಾನೇನ ತತ್ಪ್ರಾಪ್ತೌ ಕಿಂ ನ ಲಬ್ಧಂ ಮಯಾ ಪುನಃ ॥ ೧೬ ॥
ಪರೋಪಕಾರಃ ಕರ್ತವ್ಯೋ ಧನೈಃ ಪ್ರಾಣೈರಥಾಪಿ ವಾ ।
ಇತ್ಯಶ್ರಾವಿ ಮಯಾ ಭೂಯೋಽತೋ ದಾಸ್ಯೇ ಗೀತಜಂ ಫಲಮ್॥ ೧೭ ॥
ಇತ್ಥಂ ನಿಶ್ಚಿತ್ಯ ಮನಸಿ ಶ್ವಪಾಕಃ ಪುಣ್ಯಮಾನಸಃ ।
ಧರ್ಮದಾನೇ ಮತಿಂ ಕೃತ್ವಾ ಜಗಾದ ಬ್ರಹ್ಮರಾಕ್ಷಸಮ್ ॥ ೧೮ ॥

ರಾಕ್ಷಸನು ಹೇಳಿದನು—

ರಾಕ್ಷಸನು ಮತ್ತೆ ಹೇಳಿದನು. "ಯಾವುದಾದರೂ ಒಂದು ಹಾಡಿನ ಪ್ರಬಲ ಪುಣ್ಯವನ್ನಾದರೂ ಕೊಟ್ಟು ನಿನ್ನ ಪ್ರಾಣವನ್ನು ಉಳಿಸಿಕೋ. ನೀನು ಕೊಡುವ ಪುಣ್ಯದಿಂದ ನನ್ನನ್ನು ನಾನು ಉದ್ಧಾರ ಮಾಡಿಕೊಳ್ಳುತ್ತೇನೆ." ॥ ೧೨ ॥ ಈ ರೀತಿಯಾದ ಅವನ ಆಗ್ರಹವನ್ನು ಕೇಳಿದ ಭಗವತ್ಪ್ರಿಯನಾದ ಚಂಡಾಲನು ಅವನ ಶರತ್ತಿನ ಬಲಾಬಲಗಳನ್ನು ವಿಚಾರ ಮಾಡಿದನು. ॥ ೧೩ ॥ ಅಯ್ಯೋ ! ದೊಡ್ಡ ಕಷ್ಟವು ಬಂದೊದಗಿದೆ. ಏನು ಮಾಡುವುದು? ಪ್ರಬಲ ಅಥವಾ ದುರ್ಬಲಗಳನ್ನು ವಿಚಾರ ಮಾಡಿ ಉಚಿತವಾದುದನ್ನು ಮಾಡುವೆನು. ॥ ೧೪ ॥ ಸತ್ಯ, ತಪಸ್ಸು, ದಯೆ, ದಾನ, ಅಧ್ಯಯನ ಮಾಡುವುದು ಮತ್ತೆ ಯಜ್ಞ ಮಾಡುವುದು ಇವೆಲ್ಲವೂ ಪರೋಪಕಾರದಿಂದ ಬರುವ ಪುಣ್ಯದ ಹದಿನಾರನೇ ಒಂದು ಭಾಗಕ್ಕೂ ಸರಿಸಮನಾದುದಲ್ಲ. ॥ ೧೫ ॥ ಪೂರ್ವದಲ್ಲಿ ಚಕ್ರವರ್ತಿಗಳು ಪರೋಪಕಾರಕ್ಕಾಗಿ ತಮ್ಮ ಪ್ರಾಣಗಳನ್ನೆ ತೆತ್ತಿದ್ದಾರೆ. ಆದ್ದರಿಂದ ಅಂತಹ ಪರೋಪಕಾರವು ಗೀತದ ದಾನದಿಂದ ಲಭಿಸುವುದಾದರೆ ನನ್ನಿಂದ ಏನನ್ನು ತಾನೇ ಪಡೆದಂತೆ ಆಗುವುದಿಲ್ಲ? ॥ ೧೬ ॥ ಧನದಿಂದಲೂ, ಪ್ರಾಣದಿಂದಲೂ ಪರೋಪಕಾರವನ್ನು ಮಾಡಬೇಕು. ಹೀಗೆಂದು ನನ್ನಿಂದ ಪದೇ ಪದೇ ಕೇಳಲ್ಪಟ್ಟಿದೆ. ಆದ್ದರಿಂದ ಈ ರಾಕ್ಷಸನಿಗೆ ಗೀತದ ಫಲವನ್ನು ದಾನ ಮಾಡುವೆನು. ॥ ೧೭ ॥ ಈ ರೀತಿಯಾದ ಪುಣ್ಯಕರವಾದ ಮನಸ್ಸುಳ್ಳವನಾಗಿ ಧರ್ಮದ ದಾನವನ್ನು ಮಾಡಲು ನಿಶ್ಚಯಿಸಿ ಬ್ರಹ್ಮರಾಕ್ಷಸನನ್ನು ಕುರಿತು ಹೀಗೆಂದು ಹೇಳಿದನು. ॥ ೧೮ ॥

**ಚಂಡಾಲನು ಹೇಳಿದನು—**

ಮಾತು ಕೊಟ್ಟಿರುವಂತೆ ನಾನು ಹಿಂತಿರುಗಿ ಬಂದು ನನ್ನನ್ನು ಒಪ್ಪಿಸಿಕೊಳ್ಳುತ್ತಿದ್ದೇನೆ. ಗಾನನೃತ್ಯಗಳ ಫಲಗಳನ್ನು ನಾನು ಕೊಡುವುದಿಲ್ಲ ಮತ್ತು ನನ್ನ ದೇಹವನ್ನು ಭಕ್ಷಿಸು.'' ॥ ೭ ॥

**ರಾಕ್ಷಸ ಉವಾಚ—**

**ಏವಮುಕ್ತಃ ಶ್ವಪಾಕೇನ ರಾಕ್ಷಸಃ ಪುನರಬ್ರವೀತ್ ।**
**ಯಾಮದ್ವಯೋದ್ಭವಂ ಪುಣ್ಯಂ ಶ್ವಪಾಕ ವಿತರಾಶು ಮೇ ॥ ೮ ॥**

**ರಾಕ್ಷಸನು ಹೇಳಿದನು—**

ಈ ರೀತಿಯಾಗಿ ಹೇಳಿಸಿಕೊಂಡ ರಾಕ್ಷಸನು ಪುನಃ ಹೇಳಿದನು. ''ಚಂಡಾಲನೇ! ಗಾನನೃತ್ಯಗಳ ಎರಡು ಯಾಮಗಳ ಫಲವನ್ನಾದರೂ ಕೊಡು.'' ॥ ೮ ॥

**ಶ್ವಪಾಕ ಉವಾಚ—**

**ಏವಂ ರಕ್ಷೋಗಿರಂ ಶ್ರುತ್ವಾ ಶ್ವಪಾಕಃ ಪುನರಬ್ರವೀತ್ ।**
**ನ ದಾಸ್ಯಾಮಿ ತದಪ್ಯಜ್ಞ ಭಕ್ಷಯಸ್ವ ಯಥಾಸುಖಮ್ ॥ ೯ ॥**

**ಚಂಡಾಲನು ಹೇಳಿದನು—**

ಈ ರೀತಿಯಾದ ರಾಕ್ಷಸನ ಮಾತನ್ನು ಕೇಳಿ ಚಂಡಾಲನು ಹೇಳಿದನು. ''ಮೂರ್ಖನೇ, ಅದನ್ನೂ ಕೊಡೆನು. ನನ್ನನ್ನು ಯಥೇಚ್ಛವಾಗಿ ಭಕ್ಷಿಸು.'' ಎಂದು ಹೇಳಿದನು. ॥ ೯ ॥

**ರಾಕ್ಷಸ ಉವಾಚ—**

**ಏವಂ ನಿರಾಕೃತಸ್ತೇನ ರಾಕ್ಷಸಃ ಪುನರೂಚಿವಾನ್ ।**
**ಏಕಯಾಮೋದ್ಭವಂ ಪುಣ್ಯಂ ದೇಹಿ ತ್ವಂ ಮಮ ಸುವ್ರತ ॥ ೧೦ ॥**

**ರಾಕ್ಷಸನು ಹೇಳಿದನು—**

ಈ ರೀತಿಯಾಗಿ ನಿರಾಕರಿಸಲ್ಪಟ್ಟ ಬ್ರಹ್ಮರಾಕ್ಷಸನು ಪುನಃ ಹೇಳಿದನು. ''ಎಲೈ, ಒಳ್ಳೆಯ ವ್ರತಶೀಲನೇ! ಒಂದು ಯಾಮದ ಗಾಯನದ ಪುಣ್ಯವನ್ನಾದರೂ ನನಗೆ ಕೊಡು'' ಎಂದು ಹೇಳಿದನು. ॥ ೧೦ ॥ ಚಂಡಾಲನು ರಾಕ್ಷಸನ ಹಟವನ್ನು ಕೇಳಿ ಪುನಃ ಅವನಿಗೆ ಹೇಳಿದನು.

**ಶ್ವಪಾಕ ಉವಾಚ—**

ಶ್ವಪಾಕಸ್ತಸ್ಯ ನಿರ್ಬಂಧಂ ಶ್ರುತ್ವಾ ತಮವದತ್ಪುನಃ ।
ಭಕ್ಷಣಂ ಮೇ ಪ್ರತಿಜ್ಞಾತಂ ಗೀತಪುಣ್ಯಂ ಕಿಮಿಚ್ಛಸಿ ॥ ೧೧ ॥

**ಚಂಡಾಲನು ಹೇಳಿದನು—**

ರಾಕ್ಷಸನ ಬಲಾತ್ಕಾರವನ್ನು ಕೇಳಿದ ಚಂಡಾಲನು ಅವನನ್ನು ಕೇಳಿದನು. ''ಭಕ್ಷಣಕ್ಕೋಸ್ಕರ ನನ್ನಿಂದ ಶಪಥ ಮಾಡಿಸಿ ಈಗ ಗೀತನರ್ತನಗಳ ಪುಣ್ಯವನ್ನು ಹೊಂದಲು ಏತಕ್ಕೋಸ್ಕರ ಬಯಸುತ್ತಿದ್ದೀಯಾ?'' ॥ ೧೧ ॥

ರಾಕ್ಷಸ ಉವಾಚ—

ಕೌಣಪಸ್ತು ಪುನಃ ಪ್ರಾಹ ಗೈತಕಪ್ರಬಲಂ ಫಲಮ್ ।
ದೇಹಿ ಶೀಘ್ರಮನೇನಾಶು ಸ್ವಾತ್ಮಾನಂ ತಾರಯಾಮ್ಯಹಮ್ ॥ ೧೨ ॥
ಇತ್ಥಂ ತದಾಗ್ರಹಂ ಜ್ಞಾತ್ವಾ ಶ್ವಪಾಕೋ ಭಗವತ್ಪ್ರಿಯಃ ।
ಸ್ವಾಂತೇ ವಿಚಾರಯಾಮಾಸ ಬಲಾಬಲವಿಧಿಂ ತದಾ ॥ ೧೩ ॥
ಅಹೋ ಕಷ್ಟಂ ಮಹತ್ಪ್ರಾಪ್ತಂ ಕಿಂ ಕಾರ್ಯಮಧುನಾ ಮಯಾ ।
ಪ್ರಬಲಂ ದುರ್ಬಲಂ ಕಿಂ ವಾ ಜ್ಞಾತ್ವಾ ಕುರ್ವೇ ಯಥೋಚಿತಮ್ ॥ ೧೪ ॥
ಸತ್ಯಂ ತಪೋ ದಯಾ ದಾನಂ ಸ್ವಾಧ್ಯಾಯಂ ಯಜನಾದಿಕಮ್ ।
ಪರೋಪಕಾರಪುಣ್ಯಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೧೫ ॥
ಪರೋಪಕಾರಿಭಿರ್ದತ್ತಾ ಅಪಿ ಪ್ರಾಣಾ ನೃಭಿಃ ಪುರಾ ।
ಗೀತದಾನೇನ ತತ್ಪ್ರಾಪ್ತೌ ಕಿಂ ನ ಲಬ್ಧಂ ಮಯಾ ಪುನಃ ॥ ೧೬ ॥
ಪರೋಪಕಾರಃ ಕರ್ತವ್ಯೋ ಧನೈಃ ಪ್ರಾಣೈರಥಾಪಿ ವಾ ।
ಇತ್ಯಶ್ರಾವಿ ಮಯಾ ಭೂಯೋಽತೋ ದಾಸ್ಯೇ ಗೀತಜಂ ಫಲಮ್॥ ೧೭ ॥
ಇತ್ಥಂ ನಿಶ್ಚಿತ್ಯ ಮನಸಿ ಶ್ವಪಾಕಃ ಪುಣ್ಯಮಾನಸಃ ।
ಧರ್ಮದಾನೇ ಮತಿಂ ಕೃತ್ವಾ ಜಗಾದ ಬ್ರಹ್ಮರಾಕ್ಷಸಮ್ ॥ ೧೮ ॥

ರಾಕ್ಷಸನು ಹೇಳಿದನು—

ರಾಕ್ಷಸನು ಮತ್ತೆ ಹೇಳಿದನು. "ಯಾವುದಾದರೂ ಒಂದು ಹಾಡಿನ ಪ್ರಬಲ ಪುಣ್ಯ-ವನ್ನಾದರೂ ಕೊಟ್ಟು ನಿನ್ನ ಪ್ರಾಣವನ್ನು ಉಳಿಸಿಕೋ. ನೀನು ಕೊಡುವ ಪುಣ್ಯದಿಂದ ನನ್ನನ್ನು ನಾನು ಉದ್ಧಾರ ಮಾಡಿಕೊಳ್ಳುತ್ತೇನೆ." ॥ ೧೨ ॥ ಈ ರೀತಿಯಾದ ಅವನ ಆಗ್ರಹವನ್ನು ಕೇಳಿದ ಭಗವತ್ಪ್ರಿಯನಾದ ಚಂಡಾಲನು ಅವನ ಶರತ್ತಿನ ಬಲಾಬಲಗಳನ್ನು ವಿಚಾರ ಮಾಡಿದನು. ॥ ೧೩ ॥ ಅಯ್ಯೋ ! ದೊಡ್ಡ ಕಷ್ಟವು ಬಂದೊದಗಿದೆ. ಏನು ಮಾಡುವುದು? ಪ್ರಬಲ ಅಥವಾ ದುರ್ಬಲಗಳನ್ನು ವಿಚಾರ ಮಾಡಿ ಉಚಿತವಾದುದನ್ನು ಮಾಡುವೆನು. ॥ ೧೪ ॥ ಸತ್ಯ, ತಪಸ್ಸು, ದಯೆ, ದಾನ, ಅಧ್ಯಯನ ಮಾಡುವುದು ಮತ್ತೆ ಯಜ್ಞ ಮಾಡುವುದು ಇವೆಲ್ಲವೂ ಪರೋಪಕಾರದಿಂದ ಬರುವ ಪುಣ್ಯದ ಹದಿನಾರನೇ ಒಂದು ಭಾಗಕ್ಕೂ ಸರಿಸಮನಾದುದಲ್ಲ. ॥ ೧೫ ॥ ಪೂರ್ವದಲ್ಲಿ ಚಕ್ರವರ್ತಿಗಳು ಪರೋಪಕಾರಕ್ಕಾಗಿ ತಮ್ಮ ಪ್ರಾಣಗಳನ್ನೆ ತೆತ್ತಿದ್ದಾರೆ. ಆದ್ದರಿಂದ ಅಂತಹ ಪರೋಪಕಾರವು ಗೀತದ ದಾನದಿಂದ ಲಭಿಸುವುದಾದರೆ ನನ್ನಿಂದ ಏನನ್ನು ತಾನೇ ಪಡೆದಂತೆ ಆಗುವುದಿಲ್ಲ? ॥ ೧೬ ॥ ಧನದಿಂದಲೂ, ಪ್ರಾಣದಿಂದಲೂ ಪರೋಪಕಾರ ವನ್ನು ಮಾಡಬೇಕು. ಹೀಗೆಂದು ನನ್ನಿಂದ ಪದೇ ಪದೇ ಕೇಳಲ್ಪಟ್ಟಿದೆ. ಆದ್ದರಿಂದ ಈ ರಾಕ್ಷಸನಿಗೆ ಗೀತದ ಫಲವನ್ನು ದಾನ ಮಾಡುವೆನು. ॥ ೧೭ ॥ ಈ ರೀತಿಯಾದ ಪುಣ್ಯಕರವಾದ ಮನಸ್ಸುಳ್ಳವನಾಗಿ ಧರ್ಮದ ದಾನವನ್ನು ಮಾಡಲು ನಿಶ್ಚಯಿಸಿ ಬ್ರಹ್ಮರಾಕ್ಷಸನನ್ನು ಕುರಿತು ಹೀಗೆಂದು ಹೇಳಿದನು. ॥ ೧೮ ॥

ಶ್ವಪಾಕ ಉವಾಚ—

ಕಸ್ತ್ವಂ ಪೂರ್ವಂ ಕಿಮಾಚಾರಃ ಕಿಂಜನ್ಮಾ ಕಿಂಕ್ರಿಯಾಯುತಃ ।
ರಾಕ್ಷಸತ್ವಂ ತ್ವಯಾ ಪ್ರಾಪ್ತಂ ಕೇನ ದುಷ್ಕೃತಕರ್ಮಣಾ ॥ ೧೯ ॥
ತತ್ಸರ್ವಂ ಮೇ ಸಮಾಚಕ್ಷ್ವ ಕ್ರಿಯ್ಯಾದಾಶು ಸ್ವಚೇಷ್ಟಿತಮ್ ।
ಯಥೋಚಿತಂ ಕರಿಷ್ಯೇಽಹಂ ರಾತ್ರಿಂಚರ ತತಃ ಪರಮ್ ॥ ೨೦ ॥
ತದ್ವಾಗಮೃತಮಾಪೀಯ ಪರಾನಂದಮುಪಾಗತಃ ।
ಪ್ರಣಮ್ಯ ದಂಡವದ್ಭೂಮಾವಸ್ರವಃ ಪ್ರತ್ಯುವಾಚ ತಮ್ ॥ ೨೧ ॥

ಚಂಡಾಲನು ಹೇಳಿದನು—

ಎಲೈ ರಾಕ್ಷಸನೇ! ಪೂರ್ವದಲ್ಲಿ ನೀನು ಏನಾಗಿದ್ದೀ? ನಿನ್ನ ಆಚಾರವು ಯಾವುದು? ನಿನ್ನದು ಎಂತಹ ಜನ್ಮವಾಗಿತ್ತು? ಏನು ಕೆಲಸ ಮಾಡುತ್ತಿದ್ದಿ? ಯಾವ ದುಷ್ಕಾರ್ಯದ ಫಲವಾಗಿ ಈ ರಾಕ್ಷಸತ್ವವು ನಿನಗೆ ಪ್ರಾಪ್ತವಾಯಿತು? ॥ ೧೯ ॥ ಹೇ ಮಾಂಸಭಕ್ಷಕನಾದ ರಾಕ್ಷಸನೇ! ನಿನ್ನ ವೃತ್ತಾಂತದ ಸರ್ವಸ್ವವನ್ನೂ ನನಗೆ ತಿಳಿಸು. ಅನಂತರ ನಾನು ಉಚಿತವಾದುದನ್ನು ಮಾಡುವೆನು. ॥ ೨೦ ॥ ಆ ಚಂಡಾಲನ ಮಾತುಗಳಲ್ಲಿನ ಅಮೃತಾಸ್ವಾದನೆ ಮಾಡಿದ ಆ ರಾಕ್ಷಸನು ಪರಮಾನಂದಪಟ್ಟು ಅವನಿಗೆ ನಮಸ್ಕಾರ ಮಾಡಿ ಉತ್ತರವನ್ನು ಕೊಟ್ಟನು. ॥ ೨೧ ॥

ರಾಕ್ಷಸ ಉವಾಚ—

ಜನ್ಮನಾ ತ್ವಂ ಶ್ವಪಾಕೋಽಸಿ ಗುಣೈರ್ವಿಪ್ರಾಧಿಕೋ ಮತಃ ।
ಯಸ್ಯ ತೇ ನಿಶ್ಚಲಾ ಭಕ್ತಿರ್ಮಾಧವೇ ಭಕ್ತವತ್ಸಲೇ ॥ ೨೨ ॥
ಧರ್ಮಸಾರಂ ವಿಚಿಂತ್ಯಾಶು ಕುರು ದೀನಸ್ಯ ಮೋಕ್ಷಣಮ್ ।
ದುಷ್ಟೇ ಸಾಧುಃ ಸ ವೈ ಸಾಧುಃ ಸಾಧೌ ಸಾಧೋರ್ನ ಸಾಧುತಾ ॥ ೨೩ ॥
ಬಹುಜನ್ಮಾರ್ಜಿತೈಃ ಪುಣ್ಯೈರ್ಘಟತೇ ಸಂಗತಿಸ್ಸತಾಮ್ ।
ತದ್ವೃತ್ತಂ ವರ್ತಮಾನಂ ಚ ಚೇಷ್ಟಿತಂ ಶೃಣು ಮೇಽಖಿಲಮ್ ॥ ೨೪ ॥
ಪ್ರಾಗ್ಭವೇ ಸೋಮಶರ್ಮಾಹಂ ಬ್ರಾಹ್ಮಣೋ ಗ್ರಾಮಯಾಜಕಃ ।
ಕರ್ಮಕಾಂಡಾನಭಿಜ್ಞಶ್ಚಾನಿಷ್ಣಾತೋ ಯಜ್ಞಕರ್ಮಣಿ ॥ ೨೫ ॥
ಮಂತ್ರತಂತ್ರಕ್ರಿಯಾಹೀನಃ ಕಾರಯಿತ್ವಾಧ್ವರಾದಿಕಮ್ ।
ಕುಮಾರ್ಗೇಣೈವ ಬಹುಲಂ ದ್ರವ್ಯಂ ಸಂಚಿತವಾನಹಮ್ ॥ ೨೬ ॥
ಸ್ನಾನಸಂಧ್ಯಾದಿ ನಿತ್ಯಾನಾಂ ಕೃತಲೋಪಃ ಸ್ವಕರ್ಮಣಾಮ್ ।
ಕಾಮ್ಯನೈಮಿತ್ತಿಕಾನಾಂ ತು ಕರ್ಮಣಾಂ ಕಾಕಥಾ ತದಾ ॥ ೨೭ ॥
ಇತ್ಯಾದಿಕರ್ಮಭಿರ್ದುಷ್ಟೈರ್ಬ್ರಾಹ್ಮಣ್ಯಂ ಭಸ್ಮಸಾದಭೂತ್ ।
ಏವಂ ಪೂರ್ವಭವೇ ನಾಮ್ನಾ ಬ್ರಾಹ್ಮಣೋಽಹಂ ನ ಕರ್ಮಣಾ ॥ ೨೮ ॥
ತತಃ ಕಾಲೇನ ತತ್ರಾಹಂ ಪಂಚತ್ವಂ ಸಮುಪಾಗತಃ ।
ಔರ್ಧ್ವದೈಹಿಕಕರ್ಮಾಪಿ ವೈದಿಕಂ ನಾಭವನ್ಮಮ ॥ ೨೯ ॥

**ಕರ್ಮಣಾ ತೇನ ಭೂತ್ವಾಹಂ ರಾಕ್ಷಸೋಽಸ್ಮಿನ್ವನೇ ವನೇ ।**
**ಪುನಶ್ಚ ಪಾತಕಂ ಕುರ್ವೇ ನಾನಾಜೀವವಿಘಾತನೈಃ ॥ ೩೦ ॥**
**ಅಸಂಭಾವಿತನಿಸ್ತಾರಾ ಮಜ್ಜಂತೇ ಪಾತಕಾರ್ಣವೇ ।**
**ತ್ವಂ ಮಾಂ ಗೀತಪ್ರಭಾವೇಣ ನಿಸ್ತಾರಯಿತುಮರ್ಹಸಿ ॥ ೩೧ ॥**
**ತದ್ವೃತ್ತಂ ಸಕಲಂ ಶ್ರುತ್ವಾ ಕೃಪಾಮೃತಪರಿಪ್ಲುತಃ ।**
**ತಮುವಾಚ ವಚೋ ರಮ್ಯಂ ಸ್ಮರನ್ಧರ್ಮಂ ಸನಾತನಮ್ ॥ ೩೨ ॥**

**ರಾಕ್ಷಸನು ಹೇಳಿದನು—**

ಜನ್ಮದಿಂದ ನೀನು ಚಂಡಾಲನಾಗಿದ್ದೀಯೇ. ಆದರೆ ಗುಣದಲ್ಲಿ ಬ್ರಾಹ್ಮಣರನ್ನು ಮೀರಿಸುತ್ತೀಯೆಂದು ನನ್ನ ಅಭಿಪ್ರಾಯ. ಕಾರಣ ನೀನು ನಿಶ್ಚಲವಾದ ಭಕ್ತಿಯನ್ನು ಭಕ್ತವತ್ಸಲನಾದ ಮಾಧವನಲ್ಲಿ ಹೊಂದಿದ್ದೀಯೆ. ॥ ೨೨ ॥ ಧರ್ಮದ ಸಾರವನ್ನು ನಿಶ್ಚಯಿಸಿ ಬೇಗನೆ ಈ ದೀನನನ್ನು ವಿಮೋಚನೆಗೊಳಿಸು. ಸಾಧುಗಳಲ್ಲಿ ಸಾಧುತ್ವ ತೋರಿಸುವುದೇನೂ ಸಾಧುತ್ವವಲ್ಲ. ದುಷ್ಟರಿಗೂ ಯಾರು ಸಾಧುತ್ವವನ್ನು ತೋರಿಸುವರೋ ಅವರೇ ಸಾಧುಗಳು ॥ ೨೩ ॥ ಬಹು ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದಿಂದಲೇ ಸಜ್ಜನರ ಸಮಾಗಮವು ಸಿಗುವುದು; ಆದ್ದರಿಂದ ಕಳೆದುಹೋಗಿರುವ ಮತ್ತು ಈಗಿನ ನನ್ನ ಸಕಲ ವೃತ್ತಾಂತಗಳನ್ನು ಕೇಳು. ॥ ೨೪ ॥ ನಾನು ಹಿಂದಿನ ಜನ್ಮದಲ್ಲಿ ಸೋಮಶರ್ಮನೆಂಬ ಹೆಸರಿನ ಗ್ರಾಮಪುರೋಹಿತನಾಗಿದ್ದೆ. ನಾನು ಕರ್ಮಕಾಂಡವನ್ನು ತಿಳಿದವನಾಗಿರಲಿಲ್ಲ. ಮತ್ತು ಯಜ್ಞಯಾಗಾದಿಗಳಲ್ಲೂ ನಿಷ್ಣಾತನು ಆಗಿರಲಿಲ್ಲ. ॥ ೨೫ ॥ ಮಂತ್ರ, ತಂತ್ರ ಮತ್ತು ಕ್ರಿಯೆಗಳಲ್ಲಿಯೂ ಏನೂ ತಿಳಿಯದವನಾಗಿದ್ದರೂ ಯಜ್ಞಯಾಗಾದಿಗಳನ್ನು ಮಾಡಿಸುತ್ತಾ ಕೆಟ್ಟ ಮಾರ್ಗಗಳಿಂದ ಬಹಳ ಧನವನ್ನು ಸಂಪಾದನೆ ಮಾಡಿದೆನು. ॥ ೨೬ ॥ ಸ್ನಾನ ಸಂಧ್ಯಾವಂದನಾದಿ ನಿತ್ಯಕರ್ಮಗಳಿಗೂ ಲೋಪ ಮಾಡುತ್ತಿದ್ದೆನು. ಹೀಗಿರಲಾಗಿ ಇನ್ನು ಕಾಮ್ಯಕರ್ಮಗಳ ಮತ್ತು ನೈಮಿತ್ತಿಕಕರ್ಮಗಳ ಲೋಪದ ವಿಷಯದಲ್ಲಿ ಹೇಳತಕ್ಕದ್ದೇನಿದೆ? ॥ ೨೭ ॥ ಈ ರೀತಿಯಾದ ದುಷ್ಟಕರ್ಮಗಳಿಂದ ನನ್ನ ಬ್ರಾಹ್ಮಣ್ಯವು ಬೂದಿಪಾಲಾಯಿತು. ಈ ರೀತಿಯಾಗಿ ನಾನು ಪೂರ್ವಜನ್ಮದಲ್ಲಿ ಕರ್ಮದಲ್ಲಿಲ್ಲದಿದ್ದರೂ ಹೆಸರಿಗೆ ಮಾತ್ರ ಬ್ರಾಹ್ಮಣನಾಗಿದ್ದೆ. ॥ ೨೮ ॥ ಹೀಗಿರಲು ನನಗೆ ಮೃತ್ಯುವು ಪ್ರಾಪ್ತವಾಯಿತು. ನನಗೆ ವೇದೋಕ್ತವಾದ ಮರಣದ ನಂತರ ಮಾಡತಕ್ಕ ದಹನಾದಿಕರ್ಮಗಳು ನಡೆಯಲಿಲ್ಲ. ॥ ೨೯ ॥ ಈ ರೀತಿಯಾದ ಹೀನ ಕರ್ಮಗಳಿಂದ ನಾನು ಈ ವನದಲ್ಲಿಯೇ ರಾಕ್ಷಸನಾದೆನು. ಇಲ್ಲಿಯೂ ಪುನಃ ನಾನು ನಾನಾಜೀವಿಗಳನ್ನು ಕೊಲ್ಲುತ್ತಾ ಪಾತಕಗಳನ್ನೇ ಎಸಗುತ್ತಿದ್ದೇನೆ. ॥ ೩೦ ॥ ಉದ್ಧಾರವೇ ಅಸಾಧ್ಯವಾಗಿರುವವರು ಪಾಪದ ಸಮುದ್ರದಲ್ಲಿಯೇ ಮುಳುಗುತ್ತಾರೆ. ನೀನು ನಿನ್ನ ಗಾಯನದಿಂದ ಸಂಪಾದಿಸಿದ ಪುಣ್ಯವನ್ನು ನನಗೆ ದಾನ ಮಾಡಿ ನನ್ನನ್ನು ಈ ಪಾಪಸಮುದ್ರದಿಂದ ದಾಟಿಸಲು ಸಮರ್ಥನಾಗಿದ್ದೀಯೆ. ॥ ೩೧ ॥ ಅವನ ವೃತ್ತಾಂತವೆಲ್ಲವನ್ನೂ ಕೇಳಿದ ಆ ಚಂಡಾಲನು ದಯೆ ಎಂಬ ಅಮೃತದಲ್ಲಿ ತೊಯ್ದವನಾಗಿ, ಸನಾತನ ಧರ್ಮವನ್ನು ಸ್ಮರಣೆ ಮಾಡಿಕೊಂಡು ಅವನಿಗೆ ಆಪ್ಯಾಯಮಾನವಾಗುವ ಮಾತನ್ನು ಹೇಳಿದನು. ॥ ೩೨ ॥

ಶ್ವಪಾಕ ಉವಾಚ—

ಮಾ ಚಿಂತಾಂ ಕುರು ದುರ್ಬುದ್ಧೇ ನಿಸ್ತಾರಸ್ತ ಉಪಸ್ಥಿತಃ ।
ವಿಹಾಯ ಮಾಂ ಯತಸ್ತ್ವಂ ಹಿ ಫಲಮಿಚ್ಛಸಿ ಗೀತಜಮ್ ॥ ೩೩ ॥
ಗೀತವಾನಸ್ಮಿ ಪಶ್ಚಾದ್ಧಂ ಸ್ವರಮೇಕಮನುತ್ತಮಮ್ ।
ಫಲೇನ ತಸ್ಯ ಭದ್ರ ತ್ವಂ ರಾಕ್ಷಸತ್ವಾತ್ಪ್ರಮೋಚಯೇ ॥ ೩೪ ॥
ಇತ್ಯುಕ್ತ್ವಾ ಜಲಮಾದಾಯ ಸ್ವರಜಂ ಪುಣ್ಯಮುತ್ತಮಮ್ ।
ಸ್ಮೃತ್ವಾ ವಿಷ್ಣುಪದಾಂಭೋಜಂ ಪ್ರದದೌ ಬ್ರಹ್ಮರಾಕ್ಷಸೇ ॥ ೩೫ ॥
ಸೋಽಪಿ ತತ್ಪುಣ್ಯಮಾದಾಯ ತತ್ಕ್ಷಣೇ ರಾಕ್ಷಸೀಂ ತನುಮ್ ।
ತ್ಯಕ್ತ್ವಾ ರೂಪಂ ಪರಂ ಲೇಭೇ ದ್ಯುತಿದ್ಯೋತಿತದಿಙ್ಮುಖಮ್ ॥ ೩೬ ॥
ದಿವ್ಯದೇಹಸ್ತತೋ ಭೂತ್ವಾ ಸೋಮಶರ್ಮಾ ದ್ವಿಜರ್ಷಭಃ ।
ಪರಮಾನಂದಮಾಪನ್ನಸ್ತುಷ್ಟಾವ ಶ್ವಪಚಂ ತದಾ ॥ ೩೭ ॥

ಚಂಡಾಲನು ಹೇಳಿದನು—

ಹೇ ಮೂರ್ಖನೇ! ಯೋಚಿಸಬೇಡ. ನಿನ್ನ ಉದ್ಧಾರವು ಸಮೀಪವಾಗುತ್ತಿದೆ. ಏಕೆಂದರೆ ನೀನು ನನ್ನನ್ನು ಭಕ್ಷಿಸದೆ ಬಿಟ್ಟು ಗಾನ ಮಾಡಲು ಅವಕಾಶ ಮಾಡಿಕೊಟ್ಟೆ. ಅದರಿಂದ ನನಗೆ ಪುಣ್ಯವು ಪ್ರಾಪ್ತವಾಗಿದೆ. ಆ ಪುಣ್ಯವನ್ನು ನನ್ನಿಂದ ಹೊಂದಲು ನೀನು ಬಯಸುತ್ತಿದ್ದಿ. ॥ ೩೩ ॥ ಜಾಗರಣೆಯ ಪ್ರಾರಂಭದಲ್ಲಿ ಉತ್ತಮ ಸ್ವರದಿಂದ ಕೂಡಿದ ಹಾಡೊಂದನ್ನು ನಾನು ಹಾಡಿದ್ದೇನೆ. ಅದನ್ನು ಹಾಡುವುದರಿಂದ ಬಂದ ಪುಣ್ಯದಿಂದ ನಿನ್ನನ್ನು ವಿಮೋಚನೆ ಮಾಡುವೆನು. ॥ ೩೪ ॥ ಈ ರೀತಿಯಾಗಿ ಹೇಳಿ ನೀರನ್ನು ತೆಗೆದುಕೊಂಡು ಉತ್ತಮವಾದ ಸ್ವರದಿಂದ ಹುಟ್ಟಿದ ಪುಣ್ಯವನ್ನು ಶ್ರೀಮಾಧವನ ಪಾದಕಮಲಗಳನ್ನು ಧ್ಯಾನಿಸುತ್ತಾ ಆ ಬ್ರಹ್ಮರಾಕ್ಷಸನಿಗೆ ಕೊಟ್ಟನು. ॥ ೩೫ ॥ ಅವನಾದರೋ ಆ ಪುಣ್ಯವನ್ನು ಸ್ವೀಕರಿಸಿ ತಕ್ಷಣವೇ ತನ್ನ ರಾಕ್ಷಸಶರೀರವನ್ನು ಕಳೆದುಕೊಂಡು ಉತ್ತಮವಾದ ದೇಹವನ್ನು ಹೊಂದಿದನು. ಆ ದೇಹದ ಪ್ರಕಾಶದಿಂದ ದಿಕ್ಕು ವಿದಿಕ್ಕುಗಳೆಲ್ಲಾ ಬೆಳಗಿದುವು. ॥ ೩೬ ॥ ಬ್ರಾಹ್ಮಣಶ್ರೇಷ್ಠನಾದ ಆ ಸೋಮಶರ್ಮನು ದಿವ್ಯದೇಹ ಉಳ್ಳವನಾಗಿ ಪರಮಾನಂದವನ್ನು ಹೊಂದಿ ಚಂಡಾಲನನ್ನು ಸ್ತೋತ್ರ ಮಾಡಿದನು. ॥ ೩೭ ॥

ಸೋಮಶರ್ಮೋವಾಚ—

ಧನ್ಯೋಽಸಿ ಭದ್ರ ಕಲ್ಯಾಣಂ ಮತ್ಪ್ರಸಾದಮವಾಪ್ನುಹಿ ।
ಯತ್ತ್ವಯಾನನ್ಯಗತಿಕಸ್ತಾರಿತೋಽಹಂ ದಯಾವತಾ ॥ ೩೮ ॥

ಸೋಮಶರ್ಮನು ಹೇಳಿದನು—

ಬೇರೆ ಗತಿಯನ್ನು ಕಾಣದ ನಾನು ದಯಾಮಯನಾದ ನಿನ್ನಿಂದ ಈ ರಾಕ್ಷಸತ್ವವನ್ನು ಕಳೆದುಕೊಂಡು ಉದ್ಧರಿತನಾಗಿದ್ದೇನೆ. ನೀನು ಧನ್ಯನು. ನನ್ನ ಅನುಗ್ರಹದಿಂದ ಮಂಗಳವನ್ನು ಹೊಂದುತ್ತೀಯೆ''. ॥ ೩೮ ॥

ಶ್ವಪಾಕಸ್ಯಾಪಿ ಸುದೃಢಾಂ ಸ್ವಭಕ್ತಿಮವಲೋಕ್ಯ ಸಃ ।
ಭಗವಾನಪಿ ಸುಪ್ರೀತಃ ಪ್ರತ್ಯಕ್ಷೋಽಭೂತ್ತಯೋಸ್ತದಾ ॥ ೩೯ ॥
ಸ್ನಿಗ್ಧಪ್ರಾವೃಟ್ಘನಶ್ಯಾಮಃ ಕಂಜಗರ್ಭಾರುಣೇಕ್ಷಣಃ ।
ಪೀತಾಂಬರಶ್ಚತುರ್ಬಾಹುಃ ಶಂಖಚಕ್ರಗದಾಧರಃ ॥ ೪೦ ॥
ವಿಮಾನವರಮಾರೂಢಸ್ತಾವಾರೋಪ್ಯ ಚ ಸತ್ವರಮ್ ।
ಸ್ವಸಾರೂಪ್ಯಧರೌ ಕೃತ್ವಾ ನಿನ್ಯೇ ವೈಕುಂಠಮದ್ಭುತಮ್ ॥ ೪೧ ॥
ಏವಂ ಜಾಗರಮಾಹಾತ್ಮ್ಯಮೇಕಾದಶ್ಯಾಂ ನಿರೂಪಿತಮ್ ।
ಅತೋಽತ್ರ ವ್ರತಿಭಿಃ ಕಾರ್ಯಂ ಭಕ್ತ್ಯಾ ಜಾಗರಣಂ ನಿಶಿ ॥ ೪೨ ॥
ಏಕಾದಶ್ಯಾಮುಪೋಷ್ಯೈವಂ ಜಾಗರಂ ಯಸ್ತು ಕಾರಯೇತ್ ।
ಸ ತಾರಯತಿ ದುಃಖಾನಿ ಶ್ವಪಾಕೋ ರಾಕ್ಷಸಂ ಯಥಾ ॥ ೪೩ ॥
ತಸ್ಮಾತ್ಪ್ರಯತ್ನತಃ ಕುರ್ಯಾದ್ಗೀತವಾದಿತ್ರನರ್ತನೈಃ ।
ಯುಕ್ತಂ ಜಾಗರಣಂ ರಾತ್ರೌ ಸ ಗಚ್ಛೇದ್ವಿಷ್ಣುಸನ್ನಿಧಿಮ್ ॥ ೪೪ ॥
ಯಃ ಪ್ರಯಾಗೇ ಮಹಾಭಾಗೇ ಮಾಘೇ ಮಾಸೇಽಮಲೇ ದಲೇ ।
ಏಕಾದಶ್ಯಾಮನಾಹಾರೋ ಮಾಧವಂ ಪೂಜ್ಯ ಭಕ್ತಿತಃ ॥ ೪೫ ॥
ಜಾಗರಂ ಕುರುತೇ ರಾತ್ರೌ ಗೀತನೃತ್ಯಾದಿಸಂಯುತಮ್ ।
ಸರ್ವಪಾಪವಿನಿರ್ಮುಕ್ತಃ ಪರಂ ಬ್ರಹ್ಮಾಧಿಗಚ್ಛತಿ ॥ ೪೬ ॥
ಉದ್ಯಾಪನಂ ಯಥಾಶಕ್ತ್ಯಾ ಏಕಾದಶ್ಯಾಂ ಕರೋತಿ ಯಃ ।
ಪ್ರಯಾಗೇ ವ್ರತಲೋಪೋತ್ಥಪಾಪಂ ತ್ಯಕ್ತ್ವಾ ದಿವಂ ವ್ರಜೇತ್ ॥ ೪೭ ॥
ಏವಂ ನಿತ್ಯಂ ಚ ಕಾಮ್ಯಂ ಚ ಪ್ರೋಕ್ತಮೇಕಾದಶೀವ್ರತಮ್ ।
ಯುಷ್ಮಭ್ಯಂ ಸವಿಧಾನಂ ಮೇ ಕಿಮನ್ಯತ್ಕಥಯಾಮಿ ವಃ ॥ ೪೮ ॥

॥ ಇತಿ ಸಪ್ತತಿತಮೋಽಧ್ಯಾಯಃ ॥

ಭಗವಂತನೂ ಕೂಡ ಆ ಚಂಡಾಲನ ಸುದೃಢವಾದ ಭಕ್ತಿಯನ್ನು ಕಂಡು ಅತ್ಯಂತ ಪ್ರೀತನಾಗಿ ಅವರಿಬ್ಬರಿಗೂ ಪ್ರತ್ಯಕ್ಷನಾದನು. ॥ ೩೯ ॥ ಪ್ರತ್ಯಕ್ಷನಾದ ಮಾಧವನು ನೀಲವರ್ಣವಿಶಿಷ್ಟನು, ಕಮಲದ ಒಳಭಾಗದಂತೆ ಕೆಂಪುಬಣ್ಣವುಳ್ಳ ಕಣ್ಣುಗಳುಳ್ಳವನು, ಪೀತಾಂಬರಧಾರಿಯು, ಶಂಖಚಕ್ರಗದಾಪದ್ಮಧಾರಿಯು ಆಗಿದ್ದನು. ॥ ೪೦ ॥ ಇಂತಹ ಶ್ರೀಹರಿಯು ಅವರಿಬ್ಬರನ್ನೂ ಒಳ್ಳೆಯ ವಿಮಾನದಲ್ಲಿ ಕೂಡಿಸಿಕೊಂಡು, ತನ್ನ ರೂಪದಂತೆ ಇರುವ ರೂಪವುಳ್ಳ "ಸಾರೂಪ್ಯ"ವನ್ನು ಅವರಿಬ್ಬರಿಗೆ ದಯಪಾಲಿಸಿ ಅದ್ಭುತವಾದ ತನ್ನ ವೈಕುಂಠಲೋಕಕ್ಕೆ ಕರೆದೊಯ್ದನು. ॥ ೪೧ ॥ ಈ ರೀತಿಯಾಗಿ ಏಕಾದಶಿಯ ಜಾಗರದ ಮಾಹಾತ್ಮ್ಯೆಯು ನಿರೂಪಿಸಲ್ಪಟ್ಟಿತು. ಆದ್ದರಿಂದ ಏಕಾದಶೀವ್ರತಿಗಳು ಭಕ್ತಿಯಿಂದ ಅಂದು ರಾತ್ರಿಯಲ್ಲಿ ಜಾಗರಣ ಮಾಡತಕ್ಕದ್ದು. ॥ ೪೨ ॥ ಏಕಾದಶಿಯಂದು ಉಪವಾಸ ಮಾಡಿ ಯಾರು ಜಾಗರಣೆಯನ್ನು ಮಾಡುವರೋ ಅವರು ಚಂಡಾಲನು ರಾಕ್ಷಸನನ್ನು ದಾಟಿಸಿದಂತೆ ದುಃಖಗಳನ್ನು ದಾಟುತ್ತಾರೆ.

॥ ೪೩ ॥ ಆದ್ದರಿಂದ ಪ್ರಯತ್ನಪಟ್ಟು ರಾತ್ರಿಯಲ್ಲಿ ಗಾನನಾಟ್ಯಗಳೊಡನೆ ವಾದ್ಯಗಳೊಡನೆಯೂ ಜಾಗರ ಮಾಡುವವನು ಶ್ರೀಮಾಧವನ ಸನ್ನಿಧಾನಕ್ಕೆ ತೆರಳುವನು. ॥ ೪೪ ॥ ಯಾರು ಪ್ರಯಾಗದಲ್ಲಿ ಮಾಘಮಾಸದ ಶುಕ್ಲಪಕ್ಷದಲ್ಲಿ ಏಕಾದಶಿಯಂದು ಉಪವಾಸವಿದ್ದು ಭಕ್ತಿಯಿಂದ ಮಾಧವನನ್ನು ಪೂಜಿಸಿ, ರಾತ್ರಿಯಲ್ಲಿ ಗೀತನೃತ್ಯಾದಿಗಳೊಡನೆ ಜಾಗರ ಮಾಡುತ್ತಾರೋ ಅವರು ಎಲ್ಲಾ ಪಾಪಗಳನ್ನು ಪರಿಹಾರ ಮಾಡಿಕೊಂಡು ಪರಬ್ರಹ್ಮನನ್ನು ಹೊಂದುತ್ತಾರೆ. ॥ ೪೫-೪೬ ॥ ಏಕಾದಶಿವ್ರತದ ನಂತರ ಶಕ್ತ್ಯಾನುಸಾರ ಯಾರು ಪ್ರಯಾಗದಲ್ಲಿ ಉದ್ಯಾಪನೆಯನ್ನು ಮಾಡುವರೋ ಅವರು ಏಕಾದಶೀವ್ರತದಲ್ಲಿನ ಲೋಪದೋಷಗಳೆಲ್ಲವನ್ನು ಕಳೆದುಕೊಂಡು ಸ್ವರ್ಗಕ್ಕೆ ಹೋಗುವರು. ॥ ೪೭ ॥ ಈ ರೀತಿಯಾಗಿ ನಿತ್ಯವಾದ ಮತ್ತು ಕಾಮ್ಯವೂ ಆದ ಏಕಾದಶೀವ್ರತವನ್ನು ನಿಮಗೆ ವಿಧಿವತ್ತಾಗಿ ಹೇಳಿದ್ದಾಯಿತು. ನಿಮಗೆ ಇನ್ನೇನು ಹೇಳಲಿ? ॥ ೪೮ ॥

॥ ಎಪ್ಪತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕಸಪ್ತತಿತಮೋಽಧ್ಯಾಯಃ ॥ ೭೧ ॥

**ಋಷಯ ಊಚುಃ—**

ಮಹಿಮಾ ಭವತಾ ಪ್ರೋಕ್ತೋ ಭವತಾ ಪರಮಾದ್ಭುತಃ ।
ನಿತ್ಯಕಾಮ್ಯವಿಧಿಃ ಸರ್ವಸ್ತದುತ್ಪತ್ತಿಸ್ತು ನೋದಿತಾ ॥ ೧ ॥
ಉತ್ಪನ್ನಾ ಸಾ ಕಥಂ ಸೂತ ಕದಾ ವೈ ಕೇನ ಹೇತುನಾ ।
ಕುತಸ್ವಾತಿಪವಿತ್ರಾಭೂತ್ಸರ್ವಪಾಪಪ್ರಣಾಶಿನೀ ॥ ೨ ॥
ತದುತ್ಪತ್ತಿಂ ಸಮಾಖ್ಯಾಹಿ ಸರ್ವಶ್ರೇಷ್ಠಾ ಯತೋ ಭವೇತ್ ।
ಸರ್ವದುಃಖೌಘಶಮನೀ ಪುತ್ರಪೌತ್ರವಿವರ್ಧಿನೀ ॥ ೩ ॥

## ॥ ಎಪ್ಪತ್ತೊಂದನೆಯ ಅಧ್ಯಾಯವು ॥

**ಋಷಿಗಳು ಹೇಳಿದರು—**

"ತಮ್ಮಿಂದ ಪರಮ ಅದ್ಭುತವಾದ ಜಾಗರಣ ಮಹಿಮೆಯು ಹೇಳಲ್ಪಟ್ಟಿತು; ಹಾಗೆಯೇ ಸತ್ಯ ಮತ್ತು ಕಾಮ್ಯವೆಂಬ ಏಕಾದಶೀವ್ರತದ ಮಹಿಮೆಯು ಹೇಳಲ್ಪಟ್ಟಿತು. ಆದರೆ ಈ ಏಕಾದಶಿಯ ಉತ್ಪತ್ತಿಯನ್ನು ಕುರಿತು ಹೇಳಿಲ್ಲ. ॥ ೧ ॥ ಈ ಏಕಾದಶಿಯೂ ಹೇಗೆ ಉತ್ಪತ್ತಿಯಾಯಿತು? ಯಾವಾಗ? ಮತ್ತು ಯಾವ ಕಾರಣದಿಂದ? ಯಾವ ಕಾರಣದ ದಶೆಯಿಂದ ಇದು ಇಷ್ಟು ಪ್ರಖ್ಯಾತಿಗೆ ಬಂದಿತು? ಮತ್ತು ಪರಮಪವಿತ್ರವಾಗಿದ್ದು ಸರ್ವಪಾಪಗಳನ್ನು ಪರಿಹಾರ ಮಾಡತಕ್ಕದ್ದಾಗಿ ಹೇಗಾಯಿತು? ॥ ೨ ॥ ಅದರ ಉತ್ಪತ್ತಿಯ ಬಗ್ಗೆ ಹೇಳಿರಿ. ಅದು ಹೇಗೆ ಸರ್ವಶ್ರೇಷ್ಠವಾಗುತ್ತದೆ? ಸರ್ವದುಃಖಗಳನ್ನು ನಾಶ ಮಾಡುವುದಲ್ಲದೆ ಮಕ್ಕಳುಮೊಮ್ಮಕ್ಕಳುಗಳಿಗೆ ಅಭಿವೃದ್ಧಿಯನ್ನು ಯಾವ ಕಾರಣದಿಂದ ತಂದುಕೊಡುವುದು?" ॥ ೩ ॥

**ಸೂತ ಉವಾಚ—**

ಮುರನಾಮಾ ಮಹಾದೈತ್ಯಃ ಸರ್ವದೇವೋಪತಾಪನಃ ।
ಯುಯುಧೇ ನಿರ್ಜರೈಸ್ಸರ್ವೈರ್ಬಲವಾನ್ರಣದುರ್ಮದಃ ॥ ೪ ॥
ತದಾ ಪರಾಜಿತಾಸ್ಸರ್ವೇ ತೇನ ದೇವಾಸ್ಸವಾಸವಾಃ ।
ಬ್ರಹ್ಮಲೋಕೇ ತದಾ ಗತ್ವಾ ಬ್ರಹ್ಮಾಣಮಿದಮಬ್ರುವನ್ ॥ ೫ ॥

**ಸೂತರು ಹೇಳಿದರು—**

"ಹಿಂದೆ ಮುರನೆಂಬ ಮಹಾದೈತ್ಯನಿದ್ದನು. ಇವನು ದೇವತೆಗಳಿಗೆ ಬಹಳ ಉಪದ್ರವಗಳನ್ನು ಕೊಟ್ಟನು. ಎಲ್ಲ ದೇವತೆಗಳೊಡನೆಯೂ ಯುದ್ಧ ಮಾಡಿದ್ದನು. ಮಹಾ ಬಲಿಷ್ಠನೂ ಮದೋನ್ಮತ್ತನೂ ಆಗಿದ್ದನು. ॥೪ ॥ ಅವನಿಂದ ಪರಾಜಿತರಾಗಿದ್ದ ದೇವತೆಗಳೆಲ್ಲರೂ ಇಂದ್ರನಿಂದ ಕೂಡಿಕೊಂಡು ಬ್ರಹ್ಮನ ಲೋಕಕ್ಕೆ ಹೋಗಿ ಬ್ರಹ್ಮದೇವರನ್ನು ಕುರಿತು ಈ ರೀತಿಯಾಗಿ ಹೇಳಿದರು. ॥ ೫ ॥

ದೇವಾ ಊಚುಃ—

ಬ್ರಹ್ಮನ್ಪರಾಜಿತಾಸ್ಸರ್ವೇ ಮುರೇಣ ಬಲಿನಾ ವಯಮ್ ।
ಶರಣಂ ತ್ವಾಂ ಪ್ರಪನ್ನಾಃ ಸ್ಮ ತದುಪಾಯಂ ವದಸ್ವ ನಃ ॥ ೬ ॥

ದೇವತೆಗಳು ಹೇಳಿದರು—

''ಹೇ ಬ್ರಹ್ಮದೇವರೇ! ಬಲಿಷ್ಠನಾದ ಮುರನಾಮಕ ಅಸುರನಿಂದ ನಾವೆಲ್ಲರೂ ಸೋಲಿಸಲ್ಪಟ್ಟಿದ್ದೇವೆ. ತಮ್ಮನ್ನು ಈಗ ಶರಣು ಹೊಕ್ಕಿದ್ದೇವೆ. ನಮಗೆ ಉಪಾಯವೊಂದನ್ನು ಹೇಳಿರಿ. ॥ ೬ ॥

ಬ್ರಹ್ಮೋವಾಚ—

ಅಹೋ ಸುರಗಣಾ ಯೂಯಂ ಶೃಣುಧ್ವಂ ವಚನಂ ಮಮ ।
ಬಿಭೇಮಿ ತಂ ಮಹಾದೈತ್ಯಂ ಬ್ರಹ್ಮಲೋಕಸ್ಥಿತೋಽಪ್ಯಹಮ್ ॥ ೭ ॥

ಅತೋ ಮೇ ನಾಸ್ತಿ ಸಾಮರ್ಥ್ಯಂ ಬಲಿನಸ್ತಸ್ಯ ನಾಶನೇ ।
ಪ್ರಬಲಂ ಧೂರ್ಜಟಿಂ ಯಾತ ಸ ಉಪಾಯಂ ವಿಧಾಸ್ಯತಿ ॥ ೮ ॥

ಏವಂ ನಿರಾಕೃತಾಸ್ತೇನ ನಿರಾಶಾ ದೇವತಾಗಣಾಃ ।
ಕೈಲಾಸೇ ಶರಣಂ ಜಗ್ಮುಶ್ಶಂಕರಂ ಲೋಕಶಂಕರಮ್ ॥ ೯ ॥

ಗತ್ವಾ ಪ್ರಣಮ್ಯ ವಿಧಿವತ್ಸರ್ವೇ ಪ್ರಾಂಜಲಯಸ್ಸುರಾಃ ।
ದುಃಖಂ ನಿವೇದಯಾಮಾಸುಸ್ತಸ್ಮೈ ಮುರಸಮುದ್ಭವಮ್ ॥ ೧೦ ॥

ಬ್ರಹ್ಮದೇವರು ಹೇಳಿದರು—

ಎಲೈ ದೇವತೆಗಳಿರಾ! ಕಷ್ಟವು! ನೀವೆಲ್ಲರೂ ನಾನು ಹೇಳುವುದನ್ನು ಕೇಳಿರಿ. ಸತ್ಯಲೋಕದಲ್ಲಿದ್ದಾಗ್ಯೂ ನಾನೇ ಆ ದೈತ್ಯನಿಗಾಗಿ ಭಯಪಡುತ್ತೇನೆ. ॥ ೭ ॥ ಆದ್ದರಿಂದ ಬಲಿಷ್ಠನಾದ ಅವನನ್ನು ನಾಶ ಮಾಡಲು ನಾನೂ ಸಮರ್ಥನಲ್ಲ. ಪ್ರಬಲನಾಗಿರತಕ್ಕ ಶ್ರೀರುದ್ರದೇವರ ಹತ್ತಿರ ಹೋಗಿ; ಅವರು ಒಂದು ಉಪಾಯವನ್ನು ಮಾಡುವರು. ॥ ೮ ॥ ಹೀಗೆ ಬ್ರಹ್ಮದೇವರಿಂದ ನಿರಾಕೃತರಾದ ದೇವತೆಗಳು ನಿರಾಶರಾಗಿ ಲೋಕಕ್ಕೆ ಮಂಗಳವನ್ನುಂಟು ಮಾಡುವ ರುದ್ರದೇವರನ್ನು ಕೈಲಾಸಕ್ಕೆ ಹೋಗಿ ದರ್ಶನ ಮಾಡಿದರು. ॥ ೯ ॥ ಅಲ್ಲಿಗೆ ಹೋಗಿ ವಿಧಿವತ್ತಾಗಿ ನಮಸ್ಕಾರ ಮಾಡಿ ಕೈಗಳೆರಡನ್ನು ಜೋಡಿಸಿಕೊಂಡು ಮುರನಿಂದ ತಮಗಾಗಿರುವ ಭಂಗವನ್ನೆಲ್ಲ ನಿವೇದಿಸಿದರು. ॥ ೧೦ ॥'

ದೇವಾ ಊಚುಃ—

ಸದಾಶಿವ ವಯಂ ಸರ್ವೇ ಭವದೀಯಾಃ ಪರಾಜಿತಾಃ ।
ದೈತ್ಯೇನ ಬಲಿನಾ ಕ್ವಾಪಿ ಸ್ಥಾನಂ ನೈವ ಲಭಾಮಹೇ ॥ ೧೧ ॥

ಅತಸ್ತ್ವಾಂ ಶರಣಂ ಪ್ರಾಪ್ತಾಃ ಪ್ರಪನ್ನಾರ್ತಿಹರಂ ಗುರುಮ್ ।
ತಥಾ ಕುರು ದಯಾಸಿಂಧೋ ಯಥಾ ನಶ್ಯೇತ ಕಂಟಕಃ ॥ ೧೨ ॥

**ದೇವತೆಗಳು ಹೇಳಿದರು—**

''ಯಾವಾಗಲೂ ಮಂಗಳಕರನಾಗಿರುವ ಸದಾಶಿವನೇ! ನಿಮ್ಮವರೇ ಆದ ನಾವೆಲ್ಲರೂ ಬಲಿಷ್ಠನಾದ ಮುರನಾಮಕ ದೈತ್ಯನಿಂದ ಪರಾಜಿತರಾಗಿದ್ದೇವೆ. ಎಲ್ಲಿಯೂ ನಮಗೆ ಸ್ಥಾನವೇ ಇಲ್ಲದ ಹಾಗಿದೆ. ॥ ೧೧ ॥ ಶರಣಾದವರ ದುಃಖವನ್ನು ಪರಿಹಾರ ಮಾಡತಕ್ಕ ನಿನ್ನನ್ನು ಮೊರೆ ಹೊಕ್ಕಿದ್ದೇವೆ; ನಮ್ಮ ಕಷ್ಟವು ಹೇಗೆ ಪರಿಹಾರವಾಗುವುದೋ ಹಾಗೆ ಮಾಡು'' ॥ ೧೨ ॥

**ಶಂಕರ ಉವಾಚ—**

**ಭೋ ದೇವಾಃ ಕಿಂ ಮಯಾ ಕಾರ್ಯಂ ವಿಷ್ಣುನಾ ಪ್ರಭವಿಷ್ಣುನಾ ।**
**ಪ್ರಸನ್ನೇನ ವರೋ ದತ್ತಸ್ತಸ್ಮೈ ದುಷ್ಟಾಯ ದುರ್ಜರಃ ॥ ೧೩ ॥**
**ದೇವೇಭ್ಯೋ ದಾನವೇಭ್ಯಶ್ಚ ಮನುಷ್ಯೇಭ್ಯಸ್ತಥೈವ ಚ ।**
**ಸರ್ವೇಭ್ಯಃ ಪುರುಷೇಭ್ಯಸ್ತೇ ನೈವ ನಾಶೋ ಭವಿಷ್ಯತಿ ॥ ೧೪ ॥**
**ಅತಃ ಕಸ್ಯಾಪಿ ಸಾಮರ್ಥ್ಯಂ ನಾಸ್ತಿ ತಸ್ಯ ವಿನಾಶನೇ ।**
**ಅತಸ್ಸರ್ವೇ ವಯಂ ವಿಷ್ಣುಂ ಪ್ರಾರ್ಥಯಿಷ್ಯಾಮಹೇಽಂಜಸಾ ॥ ೧೫ ॥**
**ಇತ್ಯುಕ್ತ್ವಾ ಶಂಕರೋ ಬ್ರಹ್ಮಾ ಸರ್ವೇ ದೇವಾಸ್ಸವಾಸವಾಃ ।**
**ಗತ್ವಾ ಕ್ಷೀರಾಬ್ಧಿಶಯನಂ ಮಹಾವಿಷ್ಣುಂ ಪ್ರತುಷ್ಟುವುಃ ॥ ೧೬ ॥**

**ರುದ್ರದೇವರು ಹೇಳಿದರು—**

''ಹೇ ದೇವತೆಗಳಿರಾ! ನಾನು ಏನು ತಾನೇ ಮಾಡಲಿ? ದುಷ್ಟನೂ ದುರ್ಜಯನೂ ಆದ ಆ ದೈತ್ಯನಿಗೆ ಅವನ ತಪಸ್ಸಿನಿಂದ ಸಂತುಷ್ಟನಾದ ಸರ್ವಸಮರ್ಥನಾದ ಶ್ರೀವಿಷ್ಣುವೇ ವರವನ್ನು ಕೊಟ್ಟಿದ್ದಾನೆ. ॥ ೧೩ ॥ ''ಸಮಸ್ತ ದೇವತೆಗಳಿಂದ, ದಾನವರಿಂದಲೂ, ಮನುಷ್ಯರಿಂದಲೂ ಮತ್ತು ಎಲ್ಲ ಪುರುಷರುಗಳಿಂದಲೂ ನಿನಗೆ ನಾಶವಿಲ್ಲ'' ಎಂಬುದಾಗಿ. ॥ ೧೪ ॥ ಆದ್ದರಿಂದ ಯಾರ ಸಾಮರ್ಥ್ಯದಿಂದಲೂ ಅವನ ನಾಶವಾಗಲು ಶಕ್ಯವಿಲ್ಲ. ಆದ್ದರಿಂದ ನಾವೆಲ್ಲರೂ ಬೇಗನೆ ಶ್ರೀಮಹಾವಿಷ್ಣುವನ್ನು ಪ್ರಾರ್ಥನೆ ಮಾಡೋಣ. ॥ ೧೫ ॥ ಹೀಗೆ ಹೇಳಿ ಶ್ರೀರುದ್ರದೇವರು, ಬ್ರಹ್ಮದೇವರು ಮತ್ತು ಇಂದ್ರನಿಂದ ಸಹಿತರಾದ ಎಲ್ಲ ದೇವತೆಗಳೂ ಕ್ಷೀರಸಮುದ್ರಕ್ಕೆ ಹೋಗಿ ಅಲ್ಲಿ ಶ್ರೀಶೇಷದೇವರ ಮೇಲೆ ಮಲಗಿರತಕ್ಕ ಶ್ರೀಮಹಾವಿಷ್ಣುವನ್ನು ಪ್ರಸನ್ನ ಮಾಡಿಕೊಳ್ಳಲು ಈ ರೀತಿ ಪ್ರಾರ್ಥಿಸಿದರು. ॥ ೧೬ ॥

ದೇವಾ ಊಚುಃ—

ನಮಸ್ತೇ ಪುಂಡರೀಕಾಕ್ಷ ಭಕ್ತಸಂಕಟನಾಶನ ।
ಶರಣಂ ತ್ವಾಂ ಪ್ರಪನ್ನಾಃ ಸ್ಮೋ ಮುರದೈತ್ಯಪರಾಜಿತಾಃ ॥ ೧೭ ॥
ಭವದ್ದ್ವರೋ ದುಷ್ಟೋ ಬಾಧತೇಽಸ್ಮಾನಹರ್ನಿಶಮ್ ।
ತದ್ರಕ್ಷಾಸ್ಮಾನ್ ಯಥಾ ಭೂಯೋ ಭಜಿಷ್ಯಾಮಃ ಸ್ವಲೋಕತಾಮ್ ॥ ೧೮ ॥

**ದೇವತೆಗಳು ಹೇಳಿದರು—**

"ಕಮಲದಳದಂತೆ ವಿಶಾಲವಾದ ಕಣ್ಣುಗಳುಳ್ಳವನೇ! ಭಕ್ತರ ಕಷ್ಟಗಳನ್ನು ಪರಿಹಾರ ಮಾಡುವವನೇ! ಮುರನೆಂಬ ದೈತ್ಯನಿಂದ ಪರಾಜಿತರಾಗಿರತಕ್ಕ ನಾವೆಲ್ಲರೂ ಈಗ ನಿನ್ನನ್ನು ಶರಣು ಹೊಕ್ಕಿದ್ದೇವೆ. ॥ ೧೭ ॥ ನೀವು ಕೊಟ್ಟ ವರದಿಂದ ಸೊಕ್ಕಿ ದುಷ್ಟನಾಗಿರುವ ಮುರನಾಮಕ ದೈತ್ಯನು ನಮ್ಮನ್ನು ಹಗಲು ರಾತ್ರಿ ಬಾಧಿಸುತ್ತಿದ್ದಾನೆ. ಪುನಃ ನಾವುಗಳು ನಮ್ಮ ನಮ್ಮ ಸ್ಥಾನಗಳನ್ನೂ ಲೋಕಗಳನ್ನೂ ಹೊಂದುವಂತೆ ಏನು ಮಾಡಬೇಕೋ ಅದನ್ನು ಮಾಡಿ ನಮ್ಮನ್ನು ರಕ್ಷಿಸಿ." ॥ ೧೮ ॥

**ಸೂತ ಉವಾಚ—**

ಇತಿ ತೇಷಾಂ ವಚೋ ದೀನಾಂ ಶ್ರುತ್ವಾನಂತಾಸನೋ ಹರಿಃ ।
ಜಗಾದ ತಾನ್ಮಹಾಮಾಯೋ ಮೇಘಗಂಭೀರಯಾ ಗಿರಾ ॥ ೧೯ ॥

**ಸೂತರು ಹೇಳಿದರು—**

"ಈ ರೀತಿಯಾಗಿ ದೈನ್ಯದಿಂದ ಹೇಳಲ್ಪಟ್ಟ ಅವರುಗಳ ಪ್ರಾರ್ಥನೆಯನ್ನು ಆಲಿಸಿದ ಶೇಷಶಾಯಿಯಾಗಿದ್ದ ಶ್ರೀನಾರಾಯಣನು ಮಹದಿಚ್ಛೆಯುಳ್ಳವನಾಗಿ ಮೇಘದಂತೆ ಗಂಭೀರ-ವಾಗಿರುವ ವಾಣಿಯಿಂದ ಅವರುಗಳಿಗೆ ಹೇಳಿದನು." ॥ ೧೯ ॥

**ಶ್ರೀವಿಷ್ಣುರುವಾಚ—**

ಮಾ ಭೈಷ್ಟ ಸಕಲಾ ದೇವಾ ನಾಶಯಾಮಿ ಮುರಾಸುರಮ್ ।
ಇತ್ಯುಕ್ತ್ವಾ ಖಗಮಾರುಹ್ಯ ಗದಾಪಾಣಿಸ್ತಮನ್ವಗಾತ್ ॥ ೨೦ ॥
ತತ್ಪೃಷ್ಠೇ ದಂಶಿತಾ ಜಗ್ಮುಸ್ಸರ್ವೇ ದೇವಗಣಾ ಅಪಿ ।
ಬ್ರಹ್ಮಾ ಮಹೇಶ್ವರಶ್ಚೋಭೌ ಸ್ವಂ ಸ್ವಂ ಸ್ಥಾನಂ ಪ್ರಜಗ್ಮತುಃ ॥ ೨೧ ॥
ಇತಿ ದೇವೋದ್ಯಮಂ ಶ್ರುತ್ವಾ ಮುರೋಽಪಿ ಸ್ವಬಲಾವೃತಃ ।
ಯೋದ್ಧುಮಭ್ಯಾಯಯೌ ಶೀಘ್ರಂ ಸನ್ನದ್ಧೋ ರಣದುರ್ಮದಃ ॥ ೨೨ ॥
ತತೋ ದೇವಾಸುರಂ ಯುದ್ಧಂ ತುಮುಲಂ ರೋಮಹರ್ಷಣಮ್ ।
ಬಭೂವ ಶಸ್ತ್ರಸಂಪಾತೈರ್ದಶರಾತ್ರಮಹರ್ನಿಶಮ್ ॥ ೨೩ ॥
ತತೋ ವರಪ್ರಭಾವೇನ ಮುರೇಣಾಪೀಡಿತಾ ಸುರಾಃ ।
ಪಲಾಯನಪರಾಸ್ಸರ್ವೇ ಭೇಜುರ್ದಶದಿಶೋಽಬಲಾಃ ॥ ೨೪ ॥
ಏವಂ ಪಲಾಯಿತಾನ್ವೀಕ್ಷ್ಯ ದೇವಾನ್ವಿಷ್ಣುಃ ಸ್ವಯಂ ತದಾ ।
ಯುಯುಧೇ ಬಲಿನಾ ತೇನ ಶಸ್ತ್ರಾಸ್ತ್ರೈ ರಣಕೋವಿದಃ ॥ ೨೫ ॥
ಪರಾಜಯಂ ನ ಲೇಭೇಽಸೌ ದೈತ್ಯರಾಜೋ ಯದಾ ತದಾ ।
ಪ್ರಾಗ್ದತ್ತಂ ಸ್ವವರಂ ಸ್ಮೃತ್ವಾ ಸ್ವಯಂ ನಿವವೃತೇ ರಣಾತ್ ॥ ೨೬ ॥
ತತೋಽಸೌ ಮೇರವೀಂ ಗತ್ವಾ ಗುಹಾಂ ದ್ವಾದಶಯೋಜನಾಮ್ ।
ಪ್ರವಿಶ್ಯಾಂತಸ್ಸುಖಂ ತತ್ರ ಸುಷ್ವಾಪಾಶು ಜನಾರ್ದನಃ ॥ ೨೭ ॥

ಪೃಷ್ಠತಸ್ತೋಽಪ್ಯಗಾದ್ದೈತ್ಯೋ ದೃಷ್ಟ್ವಾ ಹರಿಮರಿಂ ತತಃ ।
ಪ್ರವಿವೇಶ ಗುಹಾಮಧ್ಯೇ ಏಕಾಕೀ ಯುದ್ಧಕಾಮುಕಃ ॥ ೨೮ ॥
ತತ್ರ ದೃಷ್ಟ್ವಾ ಮಹಾವಿಷ್ಣುಂ ಪ್ರಸುಪ್ತಂ ಪ್ರಹಸನ್ಮುರಃ ।
ಉವಾಚ ವಚನಂ ಹಾಸ್ಯಂ ಜಯಪ್ರಾಪ್ತಮದೋದ್ಧತಃ ॥ ೨೯ ॥

ಶ್ರೀಮಹಾವಿಷ್ಣುವು ಹೇಳಿದನು—

''ಎಲೈ ಸರ್ವದೇವತೆಗಳಿರಾ! ಹೆದರಬೇಡಿ, ನಾನು ಮುರಾಸುರನನ್ನು ನಾಶ ಮಾಡುವೆನು'' ಎಂದು ಹೇಳಿ ತನ್ನ ಗದೆಯ ಸಹಿತ ಗರುಡನನ್ನೇರಿ ಹೊರಟ ಶ್ರೀಮಹಾವಿಷ್ಣುವನ್ನು ಸಮಸ್ತ ದೇವತೆಗಳು ಕವಚಗಳನ್ನು ತೊಟ್ಟು ತಾವೂ ಹಿಂಬಾಲಿಸಿದರು. ಬ್ರಹ್ಮ ಮತ್ತು ರುದ್ರದೇವರು ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ॥ ೨೦-೨೧ ॥ ಈ ರೀತಿಯಾದ ದೇವತೆಗಳ ಹವ್ಯಾಸವನ್ನು ತಿಳಿದ, ಯುದ್ಧದಲ್ಲಿ ದುರ್ಮದನಾದ ಮುರದೈತ್ಯನು ತನ್ನ ಸೈನ್ಯದೊಡನೆ ಯುದ್ಧ ಮಾಡಲು ಎದುರಾಗಿ ಬಂದನು. ॥ ೨೨ ॥ ದೇವಾಸುರರಿಬ್ಬರಿಗೂ ರೋಮಾಂಚನಕಾರಿಯಾದ ಮುಗಿಲು ಮುಟ್ಟುವ ಯುದ್ಧವು ಹಗಲುರಾತ್ರಿಗಳಲ್ಲಿಯೂ ಒಂದೇ ಸಮನಾಗಿ ಹತ್ತು ದಿನ ನಡೆಯಿತು. ॥ ೨೩ ॥ ಅನಂತರ ವರದ ಬಲವಿದ್ದ ಮುರಾಸುರನಿಂದ ಚೆನ್ನಾಗಿ ಪೀಡಿತರಾದ ದೇವತೆಗಳು ಪಲಾಯನ ಮಾಡಲು ಪ್ರಾರಂಭಿಸಿ ಹತ್ತು ದಿಕ್ಕುಗಳಲ್ಲೂ ಓಡಿದರು. ॥ ೨೪ ॥ ಈ ರೀತಿಯಾಗಿ ಓಡುತ್ತಿರುವ ದೇವತೆಗಳನ್ನು ನೋಡಿ ರಣವಿಶಾರದನಾದ ಮಹಾವಿಷ್ಣುವು ಶಸ್ತ್ರಾಸ್ತ್ರಗಳಿಂದ ಬಲಿಷ್ಠನಾದ ಮುರನೊಡನೆ ಯುದ್ಧ ಮಾಡಿದನು. ॥ ೨೫ ॥ ಯಾವಾಗ ದೈತ್ಯರಾಜನು ಪರಾಜಿತನಾಗಲಿಲ್ಲವೋ ಆಗ ಶ್ರೀವಿಷ್ಣುವು ಹಿಂದೆ ತಾನು ಈ ದೈತ್ಯನಿಗೆ ಕೊಟ್ಟಿದ್ದ ವರವನ್ನು ಜ್ಞಾಪಿಸಿಕೊಂಡು ತಾನೇ ಯುದ್ಧರಂಗದಿಂದ ಹಿಂತೆಗೆದನು. ॥ ೨೬ ॥ ಆಗ ವಿಷ್ಣುವು ಮೇರುಪರ್ವತದಲ್ಲಿರುವ ಹನ್ನೆರಡು ಯೋಜನ ಉದ್ದದ ಗುಹೆಯನ್ನು ಹೊಕ್ಕು ಅಲ್ಲಿ ಸುಖವಾಗಿ ಮಲಗಿ ನಿದ್ದೆ ಮಾಡಿದನು. ॥ ೨೭ ॥ ಅವನನ್ನು ಬೆನ್ನಟ್ಟಿ ಬಂದ ದೈತ್ಯನು ತನ್ನ ಶತ್ರುವಾದ ಹರಿಯನ್ನು ನೋಡಿ ಯುದ್ಧದೀಕ್ಷೆಯಿಂದ ಗುಹೆಯೊಳಗೆ ಒಬ್ಬಂಟಿಗನಾಗಿ ಪ್ರವೇಶಿಸಿದನು. ॥ ೨೮ ॥ ಅಲ್ಲಿ ಮಹಾವಿಷ್ಣುವನ್ನು ನೋಡಿ ಮೊದಲೇ ಗಳಿಸಿದ್ದ ಜಯದಿಂದ ಉನ್ಮತ್ತನಾಗಿ ಮುರದೈತ್ಯನು ಮಹಾವಿಷ್ಣುವನ್ನು ಕುರಿತು ಹಾಸ್ಯ ಮಾಡಿ ವ್ಯಂಗ್ಯ ಮಾತುಗಳನ್ನು ಆಡಿದನು. ॥ ೨೯ ॥

ಮುರ ಉವಾಚ—

ಪಲಾಯನಂ ಕಥಂ ಯೋಗ್ಯಂ ಸಂಗ್ರಾಮಾದನಿವರ್ತಿನಃ ।
ಗುಹಾಪ್ರವೇಶಸ್ತತ್ರಾಪಿ ಶಯನಂ ಭೀತಭೀತವತ್ ॥ ೩೦ ॥
ಏವಂ ವಿಕತ್ಥಮಾನೇಽಸ್ಮಿನ್ವಿಷ್ಣುನಿಶ್ವಾಸತಃ ಪರಾ ।
ಆದಿಶಕ್ತಿಸ್ಸಮುದ್ಭೂತಾ ಯುಯುಧೇ ಚಾರಿಣಾ ಸಮಮ್ ॥ ೩೧ ॥
ತಯಾ ಪರಾಜಿತೋ ದೈತ್ಯೋ ವಿಷ್ಣುಚಕ್ರೇಣ ಭಾಸ್ವತಾ ।
ನಿಹತಶ್ಚ ಮಹಾದೈತ್ಯಸ್ಸರ್ವಸೈನ್ಯಸಮನ್ವಿತಃ ॥ ೩೨ ॥
ಕ್ಷಣೇನ ತದ್ಬಲಂ ಸರ್ವಂ ನಾಶಯಿತ್ವಾ ಪುನಃ ಸ್ವಯಮ್ ।
ಗುಹಾಮಾಗತ್ಯ ಸಾ ವಿಷ್ಣೋಸ್ತಸ್ಥೌ ಪ್ರಾಂಜಲಿರಗ್ರತಃ ॥ ೩೩ ॥

**ಪ್ರತಿಬದ್ಧಸ್ತತೋ ವಿಷ್ಣುರ್ನಾಪಶ್ಯದಸುರಂ ಪುರಃ ।**
**ತಾಮಪಶ್ಯತ್ ಸ್ತ್ರಿಯಂ ದಿವ್ಯಾಂ ಪ್ರಾಂಜಲಿಂ ಪುರತಃ ಸ್ಥಿತಾಮ್ ॥ ೩೪ ॥**

**ಮುರನು ಹೇಳಿದನು—**

"ಯುದ್ಧವು ಸಮಾಪ್ತಿಯಾಗದೇ ಯುದ್ಧಭೂಮಿಯಿಂದ ಕಾಲ್ತೆಗೆದು ಪಲಾಯನ ಮಾಡುವುದಲ್ಲದೇ, ಗುಹೆಯನ್ನು ಹೊಕ್ಕು ಹೆದರಿದವನಂತೆ ನಿದ್ದೆ ಮಾಡುವುದು ನಿನಗೆ ಹೇಗೆ ಸರಿಹೋಗುವುದು?" ॥ ೩೦ ॥ ಈ ರೀತಿಯಾಗಿ ಮುರನು ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿರಲಾಗಿ ಶ್ರೀಮಹಾವಿಷ್ಣುವಿನ ನಿಶ್ವಾಸದಿಂದ ಅತ್ಯುತ್ತಮಳಾದ ಆದಿಶಕ್ತಿಯು ಉದ್ಭವಿಸಿ ಸಂಚರಿಸುತ್ತಿದ್ದ ಆ ದೈತ್ಯನೊಡನೆ ಯುದ್ಧಮಾಡಿದಳು. ॥ ೩೧ ॥ ಆದಿಶಕ್ತಿಯು ಪ್ರಯೋಗ ಮಾಡಿದ ವಿಷ್ಣುಚಕ್ರದಿಂದ ಆ ದೈತ್ಯನ ಸೈನ್ಯವೆಲ್ಲವೂ ನಾಶವಾಯಿತು. ಆದಿಶಕ್ತಿಯು ದೈತ್ಯನನ್ನೂ ಪರಾಜಯಗೊಳಿಸಿ ಸಂಹಾರ ಮಾಡಿ, ತದನಂತರದ ಕ್ಷಣದಲ್ಲಿ ಅವನ ಉಳಿದ ಸೈನ್ಯವನ್ನೆಲ್ಲಾ ಧ್ವಂಸ ಮಾಡಿದ ಮೇಲೆ ಗುಹೆಯನ್ನು ಪ್ರವೇಶಿಸಿ ಕೈ ಮುಗಿದು ಶ್ರೀಮಹಾವಿಷ್ಣುವಿನ ಸಮ್ಮುಖದಲ್ಲಿ ನಿಂತಳು. ॥ ೩೨-೩೩ ॥ ನಿದ್ದೆಯಿಂದೆದ್ದ ಶ್ರೀಮಹಾವಿಷ್ಣುವು ಆ ದೈತ್ಯನನ್ನು ಪುನಃ ಕಾಣಲಿಲ್ಲ. ಆದರೆ ಕೈಮುಗಿದು ಎದುರಿಗೆ ನಿಂತಿರುವ ಸ್ತ್ರೀಯನ್ನು ಕಂಡನು. ॥ ೩೪ ॥

**ವಿಷ್ಣುರುವಾಚ—**

**ತಾಮುವಾಚಾಥ ಭಗವಾನ್ ಕಾಸಿ ತ್ವಂ ಕಂಜಲೋಚನೇ ।**
**ಮುರನಾಮಾಸುರಃ ಕ್ವಾಸ್ತೇ ಯೋಽಯುಧ್ಯತ ಮಯಾ ಸಹ ॥ ೩೫ ॥**
**ಏವಮುಕ್ತ್ವಾ ವಿನಿಕ್ರಮ್ಯ ಗುಹಾಯಾ ದದೃಶೇ ಬಹಿಃ ।**
**ಸನಾಥಮಾಸುರಂ ಸೈನ್ಯಂ ಪತಿತಂ ತದ್ರಣಾಜಿರೇ ॥ ೩೬ ॥**
**ಪತಿತಂ ದಾನವಂ ದೃಷ್ಟ್ವಾ ಸ ದೇವೋಽತೀವವಿಸ್ಮಿತಃ ।**
**ಕೇನಾಸೌ ಪಾತಿತೋ ದೈತ್ಯಃ ಕಸ್ಯ ಕರ್ಮ ನ ವಿದ್ಮಹೇ ॥ ೩೭ ॥**
**ನ ದೇವೋ ನ ಚ ಗಂಧರ್ವೋ ಯೇನಾಸೌ ದಾನವೋ ಹತಃ ।**
**ವಿಸ್ಮಯೋ ಮೇ ಮಹಾನ್ಜಾತಃ ಕಸ್ಯೇದಂ ಕರ್ಮ ದುಷ್ಕರಮ್ ॥ ೩೮ ॥**

**ವಿಷ್ಣುವು ಹೇಳಿದನು—**

"ನನ್ನೊಡನೆ ಯುದ್ಧ ಮಾಡಿದ ಮುರಾಸುರನು ಎಲ್ಲಿದ್ದಾನೆ?" ಎಂದು ಹೇಳಿ ಗುಹೆಯಿಂದ ಹೊರಗೆ ಬಂದು ಯುದ್ಧರಂಗದಲ್ಲಿ ಸತ್ತು ಬಿದ್ದಿರುವ ಸೈನಿಕರನ್ನು ಮತ್ತು ರಾಕ್ಷಸನನ್ನೂ ನೋಡಿ ಬಹಳ ಆಶ್ಚರ್ಯಗೊಂಡು "ಇವನು ಯಾರಿಂದ ಕೊಲ್ಲಲ್ಪಟ್ಟಿದ್ದಾನೆ? ಇದು ಯಾರ ಕೆಲಸ? ತಿಳಿಯದು. ॥ ೩೫-೩೭ ॥ ದೇವತೆಯಾಗಲೀ ಗಂಧರ್ವನಾಗಲೀ ಇವನನ್ನು ಕೊಲ್ಲಲು ಸಾಧ್ಯವಿಲ್ಲ. ಯಾರಿಂದ ಈ ದೈತ್ಯನು ಸಂಹರಿಸಲ್ಪಟ್ಟಿದ್ದಾನೆ? ನನಗೆ ಬಹು ಆಶ್ಚರ್ಯವಾಗಿದೆ. ಈ ಅಸಾಧ್ಯಕಾರ್ಯವು ಯಾರದ್ದು?" ಎಂದು ಕೇಳಿದನು. ॥ ೩೮ ॥

ಶಕ್ತಿರುವಾಚ—

ಶ್ರೀವಿಷ್ಣೋರ್ವಚನಂ ಶ್ರುತ್ವಾ ಪ್ರಾಹಸತ್ಕಮಲೇಕ್ಷಣಾ ।
ಮಯಾಯಂ ನಿಹತೋ ದೈತ್ಯಸ್ತ್ವಚ್ಛಕ್ತ್ಯಾ ವಿಸ್ಮಯೋಽತ್ರ ಕಃ ॥ ೩೯ ॥
ತಚ್ಛ್ರುತ್ವಾತೀವಸಂಹೃಷ್ಟೋ ಹಸಂಸ್ತಾಂ ಪ್ರತ್ಯಭಾಷತ ।
ಕಾ ವಾ ಕಸ್ಯಾಸಿ ಶಕ್ತಿಸ್ತ್ವಂ ಸರ್ವಂ ಮೇ ವದ ಸತ್ವರಮ್ ॥ ೪೦ ॥

ಶಕ್ತಿಯು ಹೇಳಿದಳು—

ಶ್ರೀಮಹಾವಿಷ್ಣುವಿನ ಮಾತನ್ನು ಕೇಳಿದ ಆ ಕಮಲಲೋಚನೆಯಾದ ಆದಿಶಕ್ತಿಯು "ನಿನ್ನ ಶಕ್ತಿಯ ಪ್ರಭಾವದಿಂದ ನನ್ನಿಂದಲೇ ಈ ದೈತ್ಯನು ಹತನಾದನು. ಇದರಲ್ಲಿ ಆಶ್ಚರ್ಯವೇನಿದೆ?" ಎಂದು ಪ್ರಶ್ನಿಸಿದಳು. ॥ ೩೯ ॥ ಅದನ್ನು ಕೇಳಿದ ವಿಷ್ಣುವು ಸಂತೋಷಗೊಂಡು ನಗುತ್ತಾ "ನೀನು ಯಾರು? ನೀನು ಯಾರ ಶಕ್ತಿಯಾಗಿದ್ದಿ? ಎಲ್ಲವನ್ನು ಬೇಗ ಹೇಳು" ಎಂದು ಹೇಳಿದನು. ॥ ೪೦ ॥

ಶಕ್ತಿರುವಾಚ—

ತ್ವಯಿ ಸುಪ್ತೇ ಜಗನ್ನಾಥ ಸ ದೈತ್ಯೋಽತ್ರ ಸಮಾಗತಃ ।
ಘಾತುಕಂ ಶಕ್ತಿಪಾಣಿಂ ತಂ ಮಯಾ ದೃಷ್ಟ್ವಾ ನಿಪಾತಿತಃ ॥ ೪೧ ॥
ತವ ಚಕ್ರೇಣ ತತ್ಸೈನ್ಯಂ ಮಯಾ ಸರ್ವಂ ನಿಪಾತಿತಮ್ ।
ಆಜ್ಞಾಪಯಸಿ ಯಚ್ಚಾನ್ಯತ್ತತ್ಕರಿಷ್ಯಾಮಿ ಸರ್ವಥಾ ॥ ೪೨ ॥

ಶಕ್ತಿಯು ಹೇಳಿದಳು—

ಎಲೈ ಜಗನ್ನಾಥನೇ! ನೀನು ಮಲಗಿದ ಮೇಲೆ ಶಸ್ತ್ರಪಾಣಿಯಾಗಿ ಬಂದ ಈ ದೈತ್ಯನನ್ನು ನೋಡಿ ಅವನು ಘಾತುಕನೆಂದು ತಿಳಿದು ಸಂಹಾರ ಮಾಡಿದೆನು. ॥ ೪೧ ॥ ನಿನ್ನ ಚಕ್ರದಿಂದಲೇ ಅವನ ಸೈನ್ಯವನ್ನೆಲ್ಲಾ ನಾಶ ಮಾಡಿದೆನು. ನೀನು ಬೇರೆ ಇನ್ನೇನನ್ನು ಆಜ್ಞಾಪಿಸುವಿಯೋ ಅದನ್ನು ಮಾಡುವೆನು. ॥ ೪೨ ॥

ಶ್ರೀಭಗವಾನುವಾಚ—

ತಪಸುತುಷ್ಟೇನ ದತ್ತಾಸ್ಮೈ ಪುರುಷಾವಧ್ಯತಾ ಮಯಾ ।
ತದ್ವಾಕ್ಯಪಾಲನಾಯೈವಾಹಂ ಚ ತಸ್ಮಾತ್ಪಲಾಯಿತಃ ॥ ೪೩ ॥
ದಶರಾತ್ರಮಹೋರಾತ್ರಂ ಕೃತಂ ಯುದ್ಧಂ ಮಯಾಮುನಾ ।
ನಿಹತೋಽಯಂ ಮಹಾದೈತ್ಯಸ್ತ್ವಯೈಕಾದಶಮೇ ದಿನೇ ॥ ೪೪ ॥
ಏಕಾದಶೀತಿ ನಾಮ್ನಾ ತ್ವಂ ಪ್ರಥಮಾಪ್ಸ್ಯಸಿ ಪಾವನಿ ।
ಮಚ್ಚಕ್ರಂ ಚ ಗೃಹಾಣೇದಂ ವರಂ ವರಯ ಕಾಂಕ್ಷಿತಮ್ ॥ ೪೫ ॥

ಶ್ರೀಹರಿಯು ಹೇಳಿದನು—

" ಈ ದೈತ್ಯನ ತಪಸ್ಸಿನಿಂದ ಸಂತುಷ್ಟನಾದ ನಾನು "ಪುರುಷರಿಂದ ಸಾಯಲ್ಪಡದಿರುವ ವರವನ್ನು ಇವನಿಗ ಕೊಟ್ಟಿದ್ದೆನು. ನಾನು ಕೊಟ್ಟ ಮಾತನ್ನು ಪಾಲಿಸುವುದಕ್ಕಾಗಿಯೇ ಯುದ್ಧದಿಂದ

ಪಲಾಯನ ಮಾಡಿದೆನು. ॥ ೪೩ ॥ ಇವನೊಡನೆ ನಾನು ಹಗಲು ರಾತ್ರಿ ಹತ್ತು ದಿವನ ಯುದ್ಧ ಮಾಡಿದೆನು. ಹನ್ನೊಂದನೇ ದಿವಸದಲ್ಲಿ ಇವನು ನಿನ್ನಿಂದ ಸಂಹೃತನಾದನು. ॥ ೪೪ ॥ ಆದ್ದರಿಂದ ''ಏಕಾದಶೀ'' ಎಂಬ ಹೆಸರನ್ನು ನೀನು ಮೊದಲು ಪಡೆಯುತ್ತಿ. ನೀನು ಪರಮ ಪಾವನೆಯು. ನನ್ನ ಚಕ್ರವನ್ನು ಧಾರಣೆ ಮಾಡು. ಅಪೇಕ್ಷಿತವರವನ್ನು ಕೇಳಿಕೋ'' ಎಂದು ಹೇಳಿದನು. ॥ ೪೫ ॥

**ಶಕ್ತಿರುವಾಚ—**

**ಯದಿ ತುಷ್ಟೋಽಸಿ ಭಗವನ್ವರಮೇಕಂ ಪ್ರಯಚ್ಛ ಮೇ ।**
**ತಿಥಿರೇಕಾದಶೀ ತೇಽಹಂ ವಲ್ಲಭಾ ಸ್ಯಾಂ ತಥಾ ಕುರು ॥ ೪೬ ॥**
**ಸರ್ವಪಾಪಕ್ಷಯಕರೀ ಬ್ರಹ್ಮಹತ್ಯಾದಿನಾಶಿನೀ ।**
**ಸರ್ವತೀರ್ಥವ್ರತಶ್ರೇಷ್ಠಾ ಸ್ವರ್ಗಮೋಕ್ಷಪ್ರದಾಯಿನೀ ॥ ೪೭ ॥**
**ಮದ್ವ್ರತಂ ಯೇ ಕರಿಷ್ಯಂತಿ ನಿತ್ಯಂ ಕಾಮ್ಯಂ ಚ ಮಾನವಾಃ ।**
**ಸರ್ವಪಾಪವಿನಿರ್ಮುಕ್ತಾಃ ಪ್ರಯಾಂತು ತವ ಸನ್ನಿಧಿಮ್ ॥ ೪೮ ॥**

**ಆದಿಶಕ್ತಿಯು ಹೇಳಿದಳು—**

''ಸ್ವಾಮಿ, ನೀನು ಸಂತುಷ್ಟನಾಗಿದ್ದರೆ ವರವೊಂದನ್ನು ನನಗೆ ಕೊಡು, ಏಕಾದಶೀತಿಥಿಯು ನಿನಗೆ ಪ್ರಿಯವಾಗುವಂತೆ ಮಾಡು. ॥ ೪೬ ॥ ಅದು ಎಲ್ಲ ಪಾಪಗಳನ್ನು ಪರಿಹಾರ ಮಾಡುವುದದ್ದಾಗಿಯೂ, ಬ್ರಹ್ಮಹತ್ಯೆಯ ದೋಷವನ್ನು ಪರಿಹಾರ ಮಾಡತಕ್ಕದ್ದಾಗಿಯೂ, ಎಲ್ಲ ತೀರ್ಥಗಳೂ ಮತ್ತು ವ್ರತಗಳಿಗಿಂತಲೂ ಶ್ರೇಷ್ಠವಾದ್ದನ್ನಾಗಿಯೂ, ಹಾಗೂ ಸ್ವರ್ಗ ಮತ್ತು ಮೋಕ್ಷವನ್ನು ಕೊಡತಕ್ಕದ್ದಾಗಿಯೂ ಆಗಲಿ ॥ ೪೭ ॥ ಹಾಗೂ ಯಾರು ನನ್ನ ನಿತ್ಯವಾದ ಮತ್ತು ಕಾಮ್ಯವಾದ ಈ ವ್ರತವನ್ನು ಮಾಡುವರೋ ಅವರು ಎಲ್ಲ ಪಾಪಗಳಿಂದ ಪರಿಹೃತರಾಗಿ ನಿನ್ನ ಲೋಕಕ್ಕೆ ಬರಲಿ ಎಂದು ಅನುಗ್ರಹಿಸಿ'' ಎಂದಳು. ॥ ೪೮ ॥

**ವಿಷ್ಣುರುವಾಚ—**

**ಇತಿ ತದ್ವಚನಂ ಶ್ರುತ್ವಾ ಪ್ರೀತೋ ವಿಷ್ಣುರುವಾಚ ತಾಮ್ ।**
**ಯತ್ತ್ವಮಿಚ್ಛಸಿ ಕಲ್ಯಾಣಿ ಭವಿಷ್ಯತಿ ತತೋಽಧಿಕಮ್ ॥ ೪೯ ॥**

**ವಿಷ್ಣುವು ಹೇಳಿದನು—**

ಇದನ್ನು ಕೇಳಿದ ಶ್ರೀವಿಷ್ಣುವು ತುಂಬಾ ಪ್ರೀತನಾಗಿ ಶಕ್ತಿಯನ್ನು ಕುರಿತು ಹೇಳಿದನು. ''ನೀನು ಹೇಗೆ ಅಪೇಕ್ಷಿಸುವಿಯೋ ಅದಕ್ಕಿಂತಲೂ ಅಧಿಕವಾಗಿಯೇ ಆಗಲಿ''. ॥ ೪೯ ॥

**ಸೂತ ಉವಾಚ—**

**ಇತಿ ದತ್ವಾ ವರಂ ತಸ್ಯೈ ದೇವರ್ಷಿಗಣಸಂಸ್ತುತಃ ।**
**ದೇವಕಾರ್ಯಂ ಸಮಾಸಾದ್ಯ ವೈಕುಂಠಭವನಂ ಯಯೌ ॥ ೫೦ ॥**

ಏಕಾದಶೀಸಮುತ್ಪತ್ತಿರೇವಮುಕ್ತ್ವಾ ಮಹರ್ಷಯಃ ।
ಶೃಣುಯಾಚ್ಛ್ರಾವಯೇದ್ಯಸ್ತು ಸರ್ವಪಾಪೈಃ ಪ್ರಮುಚ್ಯತೇ ॥ ೫೧ ॥
ಏಕಾದಶೀವ್ರತಮಿದಂ ಸಾಂಗೋಪಾಂಗಂ ನಿರೂಪಿತಮ್ ।
ಮಹ್ಯಂ ಶ್ರೀಗುರುಣಾ ಪ್ರೋಕ್ತಂ ಕಿಮನ್ಯತ್ಕ್ರವದಾಮಿ ವಃ ॥ ೫೨ ॥

॥ ಇತಿ ಏಕಸಪ್ತತಿತಮೋಽಧ್ಯಾಯಃ ॥

**ಸೂತರು ಹೇಳಿದರು—**

ವಿಷ್ಣುವು ಈ ರೀತಿಯಾಗಿ ಆದಿಶಕ್ತಿಗೆ ವರವನ್ನಿತ್ತು ದೇವರ್ಷಿಗಣಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ದೇವತಾಕಾರ್ಯವನ್ನು ಮುಗಿಸಿಕೊಂಡು ತನ್ನ ವೈಕುಂಠನಗರಿಗೆ ಪ್ರಯಾಣ ಮಾಡಿದನು. ॥ ೫೦ ॥ ಎಲೈ ಶೌನಕಾದಿ ಋಷಿಗಳೇ! ಈ ರೀತಿಯಾಗಿ ಏಕಾದಶಿಯ ಉತ್ಪತ್ತಿಯು ನನ್ನಿಂದ ಹೇಳಲ್ಪಟ್ಟಿತು. ಇದನ್ನು ಹೇಳಿದವರು ಮತ್ತು ಶ್ರವಣಮಾಡಿದವರು ಎಲ್ಲ ಪಾಪಗಳಿಂದಲೂ ಮುಕ್ತರಾಗುತ್ತಾರೆ. ॥ ೫೧ ॥ ನನ್ನ ಗುರುಗಳಾದ ಶ್ರೀವೇದವ್ಯಾಸದೇವರು ನನಗೆ ಹೇಳಿದ್ದ ಈ ಏಕಾದಶೀವ್ರತವು ಸಾಂಗೋಪಾಂಗವಾಗಿ ಹೇಳಲ್ಪಟ್ಟಿತು. ನಿಮಗೆ ಮತ್ತೇನನ್ನು ನಿರೂಪಿಸಲಿ?'' ॥ ೫೨ ॥

॥ ಎಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಿಸಪ್ತತಿತಮೋಽಧ್ಯಾಯಃ ॥ ೭೨ ॥

ಋಷಯ ಊಚುಃ—

ಸ್ನಾನಂ ದಾನಂ ಜಪೋ ಹೋಮೋ ಯಜ್ಞವ್ರತತಪಾಂಸಿ ಚ ।
ಅನಂತಫಲದಂ ಸರ್ವಂ ಪ್ರಯಾಗೇ ಭವತೋದಿತಮ್ ॥ ೧ ॥
ಜ್ಞಾನತೋಽಜ್ಞಾನತೋ ವಾಪಿ ಯತ್ಕಿಂಚಿತ್ಸುಕೃತಂ ಕೃತಮ್ ।
ಅಕ್ಷಯಂ ಜಾಯತೇ ಸರ್ವಂ ಮಾಧವಸ್ಯ ಪ್ರಸಾದತಃ ॥ ೨ ॥
ಪ್ರಯಾಗಮಕ್ಷಯಂ ಕ್ಷೇತ್ರಮಕ್ಷಯ್ಯಾ ತತ್ರ ಭೂಮಿಕಾ ।
ಅಕ್ಷಯೋ ಹಿ ವಟೋ ಯತ್ರ ಕಿಂ ನ ತತ್ರಾಕ್ಷಯಂ ಭವೇತ್ ॥ ೩ ॥
ಅಕ್ಷಯಂ ವಟಮಾಹಾತ್ಮ್ಯಂ ಸ್ವರೂಪಂ ಪೂಜನೇ ಫಲಮ್ ।
ಸರ್ವಂ ವದ ಸುನಿಶ್ಚಿತ್ಯ ತತ್ರ ತೃಷ್ಣಾಯತೇ ಮನಃ ॥ ೪ ॥

## ॥ ಎಪ್ಪತ್ತೆರಡನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

ಪ್ರಯಾಗದಲ್ಲಿ ಮಾಡಿದ ಸ್ನಾನವು, ದಾನವು, ಜಪವು, ಹೋಮವು, ಯಜ್ಞವು, ವ್ರತವು ಮತ್ತು ತಪಸ್ಸು ಇವುಗಳೆಲ್ಲವೂ ಎಣೆಯಿಲ್ಲದಷ್ಟು ಫಲಗಳನ್ನು ಕೊಡುವುವೆಂದು ತಮ್ಮಿಂದ ಹೇಳಲ್ಪಟ್ಟಿತು. ॥ ೧ ॥ ಅಲ್ಲಿ ತಿಳಿದೋ ತಿಳಿಯದೆಯೋ ಮಾಡಲ್ಪಟ್ಟ ಸ್ವಲ್ಪ ಪುಣ್ಯದ ಕಾರ್ಯವೂ ಮಾಧವನ ದಯೆಯಿಂದ ಶಾಶ್ವತವಾದ ಫಲಪ್ರದಾಯಕವಾಗುತ್ತದೆ. ॥ ೨ ॥ ಪ್ರಯಾಗವು ಅಕ್ಷಯಕ್ಷೇತ್ರವು. ಅಲ್ಲಿರುವ ಭೂಭಾಗವು ಅಕ್ಷಯವೇ. ಎಲ್ಲಿ ಅಕ್ಷಯವಟವೃಕ್ಷವು ಇದೆಯೋ ಅಲ್ಲಿ ಯಾವುದು ತಾನೇ ಅಕ್ಷಯವಾಗುವುದಿಲ್ಲ? ॥ ೩ ॥ ಆದ್ದರಿಂದ ಅಕ್ಷಯವಟದ ಮಾಹಾತ್ಮ್ಯೆಯನ್ನು, ಸ್ವರೂಪವನ್ನು, ಪೂಜಾದಿಗಳಲ್ಲಿರತಕ್ಕ ಫಲಗಳನ್ನೂ ಚೆನ್ನಾಗಿ ನಿಶ್ಚಯಿಸಿ ವಟಮಾಹಾತ್ಮ್ಯೆಯನ್ನು ತಾವು ಹೇಳಿರಿ. ಈ ವಿಷಯವನ್ನರಿಯಲು ನಮ್ಮ ಮನಸ್ಸು ಹಾತೊರೆಯುತ್ತಿದೆ.'' ॥ ೪ ॥

ಸೂತ ಉವಾಚ—

ವಿಷ್ಣುನಾ ಬ್ರಹ್ಮಪುತ್ರೇಭ್ಯೋ ಯತ್ಪ್ರೋಕ್ತಂ ಮುನಿಪುಂಗವಾಃ ।
ತತ್ಸರ್ವಂ ವರ್ಣಯಿಷ್ಯೇಽಹಂ ವಟಮಾಹಾತ್ಮ್ಯಮುತ್ತಮಮ್ ॥ ೫ ॥
ಕದಾಚಿದ್ಬ್ರಹ್ಮಣಃ ಪುತ್ರಾಶ್ಚತ್ವಾರಸ್ಸನಕಾದಯಃ ।
ಗತಾ ವೈಕುಂಠಭವನಂ ವಿಷ್ಣುದರ್ಶನಕಾಂಕ್ಷಿಣಃ ॥ ೬ ॥
ಭಗವಾನಪಿ ತಾನ್ದೃಷ್ಟ್ವಾ ಸ್ವಾಗತೀಕೃತ್ಯ ಭಕ್ತಿತಃ ।
ಉಪವೇಶ್ಯಾಸನೇಽನ್ವೇತಾನುವಾಚ ಮಧುರಂ ವಚಃ ॥ ೭ ॥

ಸೂತರು ಹೇಳಿದರು—

ಮಹಾವಿಷ್ಣುವಿನಿಂದ ಸನಕಾದಿಗಳಿಗೆ ಏನೇನು ಉತ್ತಮವಾದ ಅಕ್ಷಯ ವಟಮಹಾತ್ಮ್ಯೆಯು ಹೇಳಲ್ಪಟ್ಟಿತೋ ಅವೆಲ್ಲವನ್ನೂ ನಿಮಗೆ ಹೇಳುತ್ತೇನೆ. ॥ ೫ ॥ ಒಂದಾನೊಂದು ಸಲ

ಚತುರ್ಮುಖಬ್ರಹ್ಮದೇವರ ಮಕ್ಕಳಾದ ಸನಕಾದಿಗಳು ಶ್ರೀಮಹಾವಿಷ್ಣುವಿನ ದರ್ಶನದ ಅಪೇಕ್ಷೆಯಿಂದ ವೈಕುಂಠಕ್ಕೆ ಬಂದರು. ॥ ೬ ॥ ಭಗವಂತನಾದರೋ ಅವರುಗಳನ್ನು ನೋಡಿ ಭಕ್ತಿಯಿಂದ ಅವರನ್ನು ಬರಮಾಡಿಕೊಂಡು ಆಸನದಲ್ಲಿ ಕೂಡಿಸಿ ಮಧುರವಾಗಿ ಮಾತನಾಡಿದನು. ॥ ೭ ॥

**ಶ್ರೀಭಗವಾನುವಾಚ—**

ಅಪೂರ್ವಂ ಕಥ್ಯತಾಂ ವಿಪ್ರಾಃ ಕಿಂಚಿದ್ಬ್ರಹ್ಮಾಂಡಮಂಟಪೇ ।
ಯಾತಾಯಾತೇಷು ಯಚ್ಚಿತ್ರಂ ದೃಷ್ಟಂ ಮೇ ಭವದಾದಿಭಿಃ ॥ ೮ ॥

**ಭಗವಂತನು ಹೇಳಿದನು—**

''ಬ್ರಹ್ಮಾಂಡದಲ್ಲಿ ಹೋಗಿ ಬರುತ್ತಿರುವ ನಿಮ್ಮಿಂದ ನೋಡಲ್ಪಟ್ಟ ಅಪೂರ್ವವಾದ ಯಾವ ಸಂಗತಿಯಿದೆಯೋ ಅದನ್ನು ನನಗೆ ಹೇಳಿರಿ'' ॥ ೮ ॥

**ಸನಕಾದಯ ಊಚುಃ—**

ವರ್ತತೇ ಸಕಲಾಶ್ಚರ್ಯಂ ತ್ವಯ್ಯಾಶ್ಚರ್ಯಮಯೇ ವಿಭೋ ।
ತ್ವಯಿ ದೃಷ್ಟೇಽಖಿಲಾಶ್ಚರ್ಯಮಸ್ಮಾಭಿರ್ದೃಷ್ಟಮೇವ ತು ॥ ೯ ॥
ಅಥಾಪ್ಯೇಕಂ ಮಹಾಶ್ಚರ್ಯಂ ಪ್ರಯಾಗೇ ದೃಷ್ಟಮದ್ಯ ವೈ ।
ಏಕೋ ಮಹಾನ್ವಟೋ ದೃಷ್ಟಸ್ಸರ್ವಾಶ್ಚರ್ಯಮಯೋ ಹಿ ಸಃ ॥ ೧೦ ॥
ಪಂಚಯೋಜನವಿಸ್ತಾರಃ ಶತಶಾಖೋ ಮಹಾದ್ರುಮಃ ।
ಮೂಲಂ ನ ದೃಶ್ಯತೇ ತಸ್ಯ ಸಪ್ತಪಾತಾಲಗಾ ಜಟಾಃ ॥ ೧೧ ॥
ಪತ್ರಾಣಿ ರುಕ್ಮವರ್ಣಾನಿ ಫಲಾನಿ ಮಧುರಾಣಿ ಚ ।
ವೈಡೂರ್ಯಸನ್ನಿಭಾ ಛಾಯಾ ಉಪರ್ಯಂತೋ ನ ವಿದ್ಯತೇ ॥ ೧೨ ॥
ತನ್ಮೂಲೇ ಕೋಽಪಿ ಪುರುಷಸ್ತೇಜಃಪುಂಜಾನ್ವಿತೋ ಮಹಾನ್ ।
ದೃಷ್ಟಶ್ಚತುರ್ಭುಜಃ ಸ್ರಗ್ವೀ ಶ್ಯಾಮಃ ಪೀತಾಂಬರಾವೃತಃ ॥ ೧೩ ॥
ತದ್ದೃಷ್ಟ್ವಾ ಮಹದಾಶ್ಚರ್ಯಂ ಭ್ರಮಂತೋ ವಯಮಾಗತಾಃ ।
ತತ್ಪ್ರಕಾಶಮಿದಾನೀಂ ತ್ವಂ ತತ್ಸರ್ವಂ ಕಥಯಾಶು ನಃ ॥ ೧೪ ॥

**ಸನಕಾದಿಗಳು ಹೇಳಿದರು—**

''ಆಶ್ಚರ್ಯವೇ ಪ್ರಚುರವಾಗಿರತಕ್ಕ ನಿನ್ನಲ್ಲಿಯೇ ಸಕಲವಾದ ಆಶ್ಚರ್ಯವೂ ಇದೆ. ನಿನ್ನನ್ನು ನೋಡುತ್ತಿರಲಾಗಿ ನಮ್ಮಿಂದ ಎಲ್ಲಾ ಆಶ್ಚರ್ಯವು ನೋಡಲ್ಪಟ್ಟ ಹಾಗೆಯೇ ॥ ೯ ॥ ಹಾಗಿದ್ದರೂ ಈಗ ನಮ್ಮಿಂದ ಪ್ರಯಾಗದಲ್ಲಿ ಒಂದು ಮಹಾಶ್ಚರ್ಯವು ನೋಡಲ್ಪಟ್ಟಿತು. ಒಂದು ಮಹಾವಟವೃಕ್ಷವನ್ನು ನೋಡಿದೆವು. ಅದು ಆಶ್ಚರ್ಯಪ್ರಧಾನವಾದುದೇ ಸರಿ. ॥ ೧೦ ॥ ಅದು ಐದು ಯೋಜನ ವಿಸ್ತಾರವುಳ್ಳದ್ದು ನೂರಾರು ಕೊಂಬೆಗಳುಳ್ಳ ಮಹಾವೃಕ್ಷವು. ಅದರ ಮೂಲವೇ ಕಂಡುಬರಲಿಲ್ಲ. ಅದರ ಬಿಳಿಲುಗಳು ಕೆಳಗಿನ ಏಳು ಪಾತಾಳಾದಿಲೋಕಗಳಿಗೂ ಇಳಿದಿವೆ. ॥ ೧೧ ॥

ಅದರ ಎಲೆಗಳು ಬಂಗಾರದ ಬಣ್ಣದಿಂದ ಕೂಡಿವೆ. ಹಣ್ಣುಗಳು ಸಿಹಿಯಾಗಿವೆ. ಅದರ ನೆರಳು ವೈಡೂರ್ಯದಂತಿದೆ ಮತ್ತು ಎಷ್ಟು ಮೇಲಕ್ಕೆ ಹೋಗಿದೆಯೋ ಅದೂ ಗೊತ್ತೇ ಆಗುವುದಿಲ್ಲ. ॥ ೧೨ ॥ ಅದರ ಕೆಳಗೆ ಯಾವನೋ ಒಬ್ಬ ಪುರುಷನಿದ್ದಾನೆ. ಅವನು ಮಹಾತೇಜಸ್ವಿಯಾಗಿ ಕಾಣುವನು. ನಾಲ್ಕು ಭುಜಗಳುಳ್ಳವನು. ಮಾಲಾಗಳಿಂದ ವಿಭೂಷಿತನು. ಶ್ಯಾಮಲ ಬಣ್ಣದವನು ಮತ್ತು ಪೀತಾಂಬರಧಾರಿಯು. ॥ ೧೩ ॥ ಅಲೆದಾಡುತ್ತಿರುವ ನಮಗೆ ಅವನನ್ನು ನೋಡಿ ಮಹದಾಶ್ಚರ್ಯವಾಯಿತು. ಈಗ ಈ ವಿಷಯವನ್ನು ನಿಮ್ಮ ಮುಂದೆ ಇಟ್ಟದ್ದೇವೆ; ಅವನ ಎಲ್ಲ ವಿಷಯವನ್ನೂ ನೀವು ನಮಗೆ ಹೇಳಿರಿ. ॥ ೧೪ ॥

ಶ್ರೀಭಗವಾನುವಾಚ—

ಭೋ ಭೋ ಬ್ರಹ್ಮಸುತಾ ಯೂಯಂ ಶೃಣ್ವಂತು ಪ್ರಣಿಧಾನತಃ ।
ತಸ್ಯ ಕ್ಷೇತ್ರಸ್ಯ ವೃಕ್ಷಸ್ಯ ಸ್ವರೂಪಂ ಪುರುಷಸ್ಯ ಚ ॥ ೧೫ ॥
ಪ್ರಯಾಗಂ ವೈಷ್ಣವಂ ಕ್ಷೇತ್ರಂ ವೈಕುಂಠಾದಧಿಕಂ ಮಮ ।
ವೃಕ್ಷೋಽಕ್ಷಯವಟಸ್ತತ್ರ ಮದಾಧಾರೋ ವಿರಾಜತೇ ॥ ೧೬ ॥
ಮೂಲೇ ಯಃ ಪುರುಷೋ ದೃಷ್ಟಸ್ಸೋಽಹಮಕ್ಷಯಮಾಧವಃ ।
ವಟಮಾಧವನಾಮಾಪಿ ಮೂಲಮಾಧವ ಇತ್ಯಪಿ ॥ ೧೭ ॥
ಏವಂ ತ್ರಿನಾಮಾ ತತ್ರಾಹಂ ವಸಾಮ್ಯಕ್ಷಯಪಾದಪೇ ।
ಬ್ರಹ್ಮಾದಿಭಿಸ್ಸುರೈಸ್ಸರ್ವೈಸ್ಸಹಿತಸ್ತೀರ್ಥನಾಯಕೇ ॥ ೧೮ ॥
ಸರ್ವವಿಘ್ನವಿನಾಶಾರ್ಥಂ ಭಕ್ತಾನಾಂ ಕಾರ್ಯಸಿದ್ಧಯೇ ।
ದಿಗ್ವಿದಿಕ್ಷ್ವನ್ಯರೂಪೇಣ ಚಾಷ್ಟನಾಮಾ ವಸಾಮ್ಯಹಮ್ ॥ ೧೯ ॥
ಶಂಖಚಕ್ರಗದಾಪದ್ಮಾನಂತಬಿಂದುಮನೋಹರಾಃ ।
ಅಸಿಮಾಧವ ಇತ್ಯಷ್ಟೌ ಮನ್ನಾಮಾನಿ ನಿಬೋಧತ ॥ ೨೦ ॥
ಸಂಕಷ್ಟಹರರೂಪೇಣ ಭಕ್ತಸಂಕಷ್ಟನಾಶನೇ ।
ಸರ್ವತ್ರ ಸರ್ವದಾ ತಿಷ್ಠೇ ಯಥಾಕಾರ್ಯಂ ಭ್ರಮನ್ನಹಮ್ ॥ ೨೧ ॥
ವೇಣೀಮಾಧವನಾಮಾಹಂ ಗಂಗಾಯಮುನಸಂಗಮೇ ।
ಮುಖ್ಯೋ ವಸಾಮಿ ಭಕ್ತಾನಾಂ ಧರ್ಮಕಾಮಾರ್ಥಮೋಕ್ಷದಃ ॥ ೨೨ ॥
ಸರ್ವರೂಪಾಣಿ ಸಂಹೃತ್ಯ ಬಾಲರೂಪಧರಸ್ತತಃ ।
ಬ್ರಹ್ಮಾಂಡಮುದರೇ ಕೃತ್ವಾ ಶಯೇಽಂತೇಽಕ್ಷಯಪಾದಪೇ ॥ ೨೩ ॥
ತಸ್ಯಾಹಂ ಕಲ್ಪವೃಕ್ಷಸ್ಯ ಸ್ವರೂಪಂ ವೇದ್ಮಿ ನಾಪರಃ ।
ಪ್ರಪಂಚಬೀಜಭೂತಸ್ಯ ತದ್ವಸ್ಸರ್ವೇ ನಿರೂಪಿತಮ್ ॥ ೨೪ ॥

ಭಗವಂತನು ಹೇಳಿದನು—

''ಹೇ ಬ್ರಹ್ಮನ ಮಕ್ಕಳಾದ ಸನಕಾದಿಗಳೇ! ನಾನು ಹೇಳುವುದನ್ನು ಗಮನವಿಟ್ಟು ಕೇಳಿರಿ. ಆ ಕ್ಷೇತ್ರದ ಆ ಮರದ ಮತ್ತು ಆ ಪುರುಷನ ವಿಷಯವನ್ನು ಹೇಳುವೆನು. ॥ ೧೫ ॥ ನೀವು ನೋಡಿರುವ

ಆ ಕ್ಷೇತ್ರವು ವಿಷ್ಣುಸಂಬಂಧವಾದ ವೈಷ್ಣವಕ್ಷೇತ್ರವು. ಇದು ವೈಕುಂಠಕ್ಕಿಂತಲೂ ಹೆಚ್ಚು ಶ್ರೇಷ್ಠವಾದುದು. ಅಲ್ಲಿರುವುದು ಅಕ್ಷಯವಟವೃಕ್ಷವು. ಅದು ನನಗೆ ಆಶ್ರಯವಾಗಿ ವಿರಾಜಮಾನವಾಗಿದೆ. ॥ ೧೬ ॥ ಅದರ ಮೂಲದಲ್ಲಿ ನೀವು ನೋಡಿದ ಪುರುಷನು ನಾನೇ. ಅಕ್ಷಯಮಾಧವ, ವಟಮಾಧವ ಮತ್ತು ಮೂಲಮಾಧವ ಎಂಬ ಮೂರು ಹೆಸರುಗಳುಳ್ಳವನಾಗಿ ನಾನು ಆ ಅಕ್ಷಯಮರದಲ್ಲಿ ವಾಸಮಾಡುತ್ತಿದ್ದೇನೆ. ನನ್ನ ಜೊತೆಗೆ ಅಲ್ಲಿ ಬ್ರಹ್ಮಾದಿದೇವತೆಗಳೂ ಆ ತೀರ್ಥರಾಜನಾದ ಪ್ರಯಾಗದಲ್ಲಿ ಇದ್ದಾರೆ. ॥ ೧೭-೧೮ ॥ ಭಕ್ತರ ಎಲ್ಲ ವಿಘ್ನಗಳ ನಿವಾರಣೆಗಾಗಿಯೂ ಮತ್ತು ಅವರ ಸಕಲ ಕಾರ್ಯಗಳ ಸಿದ್ಧಿಗಾಗಿಯೂ ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಸೇರಿ ಒಟ್ಟು ಎಂಟು ಹೆಸರುಗಳುಳ್ಳವನಾಗಿ ಅಲ್ಲಿ ನಾನು ಇದ್ದೇನೆ. ॥ ೧೯ ॥ ಶಂಖಮಾಧವ, ಚಕ್ರಮಾಧವ, ಗದಾಮಾಧವ, ಪದ್ಮಮಾಧವ, ಅನಂತಮಾಧವ, ಬಿಂದುಮಾಧವ, ಮನೋಹರಮಾಧವ, ಅಸಿಮಾಧವ ಎಂದು ಎಂಟು ಹೆಸರುಗಳಿಂದ ಕರೆಯಲ್ಪಡುತ್ತೇನೆ. ॥ ೨೦ ॥ ಇವುಗಳಲ್ಲದೆ ಭಕ್ತರ ಸಂಕಟಗಳನ್ನು ಪರಿಹಾರ ಮಾಡುವುದಕ್ಕಾಗಿ ಸಂಕಟಹರ ಮಾಧವನ ಹೆಸರಿನಿಂದ ಎಲ್ಲ ಕಡೆಯಲ್ಲೂ ಯಾವಾಗಲೂ ಸಂಚರಿಸುತ್ತಾ ಇರುತ್ತೇನೆ. ॥ ೨೧ ॥ ಗಂಗಾಯಮುನೆಯರ ಸಂಗಮದಲ್ಲಿ ಇರುವ ನನ್ನನ್ನು ವೇಣೀಮಾಧವನೆಂದು ಕರೆಯುವರು. ಇದು ನನ್ನ ಮುಖ್ಯವಾದ ರೂಪವಾಗಿದ್ದು ಭಕ್ತರಿಗೆ ಧರ್ಮ, ಕಾಮ, ಅರ್ಥ ಮತ್ತು ಮೋಕ್ಷವೆಂಬ ನಾಲ್ಕು ವಿಧ ಪುರುಷಾರ್ಥಗಳನ್ನು ಕೊಡತಕ್ಕ ರೂಪವು. ॥ ೨೨ ॥ ಇದರ ಜೊತೆಗೆ, ನನ್ನ ಎಲ್ಲ ರೂಪಗಳನ್ನು ಅಡಗಿಸಿ ಬಾಲರೂಪವನ್ನು ತೆಗೆದುಕೊಂಡು ಇಡೀ ಬ್ರಹ್ಮಾಂಡವನ್ನೇ ನನ್ನ ಹೊಟ್ಟೆಯೊಳಗೆ ಇಟ್ಟುಕೊಂಡು ಈ ಅಕ್ಷಯವಟವೃಕ್ಷದ ಎಲೆಯ ಮೇಲೆ ಪ್ರಳಯಕಾಲದಲ್ಲಿ ಮಲಗುತ್ತೇನೆ. ॥ ೨೩ ॥ ಆದ್ದರಿಂದ ನಾನೊಬ್ಬನೇ ಈ ಕಲ್ಪವೃಕ್ಷದಂತಿರುವ ಈ ವಟವೃಕ್ಷದ ಸ್ವರೂಪವನ್ನು ತಿಳಿದಿದ್ದೇನೆ. ಬೇರೆ ಯಾರೂ ತಿಳಿದಿಲ್ಲ. ಪ್ರಪಂಚದ ಸೃಷ್ಟಿಗೆ ಬೀಜಭೂತವಾದ ಈ ಸಕಲವನ್ನೂ ನಿಮಗೋಸ್ಕರ ಹೇಳಿದ್ದೇನೆ.'' ॥ ೨೪ ॥

ಸೂತ ಉವಾಚ—

ಏವಂ ಪ್ರಯಾಗತೀರ್ಥಸ್ಯ ಮಾಧವಸ್ಯ ವಟಸ್ಯ ಚ ।
ಮಾಹಾತ್ಮ್ಯಂ ಸಕಲಂ ಶ್ರುತ್ವಾ ನತ್ವಾ ಬ್ರಹ್ಮಸುತಾ ಗತಾಃ ॥ ೨೫ ॥
ತಸ್ಮಾದೇವಂವಿಧೋ ವೃಕ್ಷೋ ನಾಸ್ತಿ ಬ್ರಹ್ಮಾಂಡಗೋಲಕೇ ।
ಅತೋಽರ್ಚಯಂತ್ಯಮುಂ ದೇವಾ ಮನುಷ್ಯಾಣಾಂ ತು ಕಾ ಕಥಾ ॥ ೨೬ ॥
ತಸ್ಮಾನ್ಮುನಿವರಾ ಯೂಯಮೇನಂ ಪೂಜಯತಾಕ್ಷಯಮ್ ।
ಯೇಽನ್ಯೇಽಪಿ ಪೂಜಯಿಷ್ಯಂತಿ ಪ್ರಾಪ್ಸ್ಯಂತೇ ತೇ ಮನೋಗತಮ್ ॥ ೨೭ ॥
ಯಾತ್ರಾರ್ಥಮಾಗತಾ ಯೇ ವೈ ನರಾ ನಾರ್ಯೋಽಮಲಾಶಯಾಃ ।
ಸಂಪೂಜ್ಯ ಪ್ರಾರ್ಥಯಂತ್ಯೇತೇ ಲಭಂತೇ ಫಲಮಕ್ಷಯಮ್ ॥ ೨೮ ॥
ಸೃಷ್ಟಿಕರ್ತಾ ಯದಾ ಬ್ರಹ್ಮಾ ನ ಲೇಭೇ ಸೃಷ್ಟಿಸಾಧನಮ್ ।
ತದಾಕ್ಷಯವಟಂ ಚೈನಂ ಪೂಜಯಾಮಾಸ ಕಾಮದಮ್ ॥ ೨೯ ॥

ತತೋಽಕ್ಷಯಾಂ ಸೃಷ್ಟಿದೃಷ್ಟಿಂ ಲೇಭೇ ಬ್ರಹ್ಮಾ ದ್ವಿಜೋತ್ತಮಾಃ ।
ಸೃಷ್ಟಿಂ ಚಕಾರ ಸೋಽಕ್ಷಯ್ಯಮಂಡಜಾದಿಚತುರ್ವಿಧಾಮ್ ॥ ೩೦ ॥
ಬ್ರಾಹ್ಮಣಾ ಕ್ಷತ್ರಿಯಾ ವೈಶ್ಯಾ ಶೂದ್ರಾ ನಾರ್ಯಶ್ಚ ಸತ್ತಮಾಃ ।
ಪೂಜನಾದಸ್ಯ ಸಂಸಿದ್ಧಿಂ ಯಾಸ್ಯಂತ್ಯತ್ರ ನ ಸಂಶಯಃ ॥ ೩೧ ॥
ಪುತ್ರಪೌತ್ರಪ್ರಪೌತ್ರಾಶ್ಚ ಕುಲವೃದ್ಧಿಃ ಪ್ರಜಾಯತೇ ।
ಸೌಭಾಗ್ಯಂ ಲಭತೇ ನಾರೀ ಪೂಜನಾಜ್ಜನ್ಮಜನ್ಮನಿ ॥ ೩೨ ॥
ಮೃತವಂಧ್ಯಾ ಮುಖ್ಯವಂಧ್ಯಾ ಕಾಕವಂಧ್ಯಾ ಚ ಯಾಬಲಾ ।
ಕನ್ಯಾವಂಧ್ಯಾ ಚ ಸತ್ಪುತ್ರಂ ಪ್ರಾಪ್ನೋತ್ಯಸ್ಯ ಪ್ರಪೂಜನಾತ್ ॥ ೩೩ ॥
ಯಾನ್ಯಾನ್ಯಭೀಪ್ಸತೇ ಕಾಮಾಂಸ್ತಾನ್ಸರ್ವಾನ್ಪ್ರದದಾತ್ಯಸೌ ।
ಸಂತಾನವರ್ಧನಶ್ಚಾಪಿ ಸರ್ವಸಂಪತ್ಕರೋಽಪಿ ಚ ॥ ೩೪ ॥
ಸಂಶೇತೇ ವೈ ಪ್ರಧಾನಾದ್ಯಸ್ಸಂಹೃತ್ಯ ಭುವನತ್ರಯಮ್ ।
ಪಾದಾಂಗುಷ್ಠಂ ಕರೇ ಧೃತ್ವಾ ಪಿಬನ್ನಾಸ್ತೇಽತ್ರ ಬಾಲಕಃ ॥ ೩೫ ॥
ತಸ್ಯ ರೂಪಂ ಪ್ರವಕ್ಷ್ಯಾಮಿ ಗುಣತ್ರಯಮಯಂ ಚ ತತ್ ।
ತಂ ಕಲ್ಪವೃಕ್ಷಮಿತ್ಯಾಹುರಪರೇ ವೇದಸಂಜ್ಞಕಮ್ ॥ ೩೬ ॥
ಪ್ರಣವಂ ಕೇಚಿದಿತ್ಯಾಹುರ್ಮಾಯಾವೃಕ್ಷಮಥಾಪರೇ ।
ಪ್ರಧಾನಪುರುಷಂ ಕೇಚಿತ್ಕೇಚಿತ್ಸಂಸ್ಕೃತಿಕಾರಣಮ್ ॥ ೩೭ ॥
ವಿಶ್ವೇಶ್ವರಸ್ತ್ರಿಶೂಲಾಗ್ರೇ ಕಾಶೀಮಾರೋಪ್ಯ ಸತ್ವರಮ್ ।
ತಿಷ್ಠತಿ ಪ್ರಲಯೇ ಯಸ್ಯ ಮೂಲೇ ನೃತ್ಯನ್ಪ್ರಹರ್ಷಿತಃ ॥ ೩೮ ॥
ತಸ್ಮಿನ್ಕಾಲೇ ವಟೇ ಸರ್ವೇ ಪ್ರಾರ್ಥಯಂತೀಮಮಕ್ಷಯಮ್ ।
ಪೂಜಯಂತಿ ನಮಸ್ಯಂತಿ ಗೃಣಂತಿ ಚ ಪುರಃಸ್ಥಿತಾಃ ॥ ೩೯ ॥
ವಟಸ್ಯ ಪ್ರಣಿಪಾತೇನ ಸರ್ವದೇವಪ್ರಿಯೋ ಭವೇತ್ ।
ವಟಸ್ಯ ಧ್ಯಾನಮಾತ್ರೇಣ ಸರ್ವೇ ಧ್ಯಾತಾ ನ ಸಂಶಯಃ ॥ ೪೦ ॥
ಗಂಗಾಯಮುನಯೋರ್ಮಧ್ಯೇ ಯಾವತ್ತಸ್ಯ ಕೂಲದರ್ಶನಮ್ ।
ತಾವತ್ಕ್ಷೇತ್ರಂ ವಟಸ್ಯಾಸ್ತಿ ತದಕ್ಷಯಮುದಾಹೃತಮ್ ॥ ೪೧ ॥
ನಮಸ್ತೇ ವೃಕ್ಷರಾಜಾಯ ಬ್ರಹ್ಮವಿಷ್ಣುಶಿವಾತ್ಮಕ ।
ಸಪ್ತಪಾತಾಲಸಂಸ್ಥಾಯ ವಿಚಿತ್ರಫಲದಾಯಿನೇ ॥ ೪೨ ॥
ನಮೋ ಭೇಷಜರೂಪಾಯ ಮಾಯಾಯಾಃ ಪತಯೇ ನಮಃ ।
ಮಾಧವಸ್ಯ ಜಲಕ್ರೀಡಾಲೋಲಪಲ್ಲವಕಾರಿಣೇ ॥ ೪೩ ॥
ಪ್ರಪಂಚಬೀಜಭೂತಾಯ ವಿಚಿತ್ರಫಲದಾಯ ಚ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋ ನಮಃ ॥ ೪೪ ॥

ಏವಂ ಯಃ ಸ್ತೌತಿ ತಂ ಭಕ್ತ್ಯಾ ನಾರೀ ವಾ ಪುರುಷೋऽಪಿ ವಾ ।
ಭುಕ್ತ್ವೇಹ ವಿಪುಲಾನ್ಭೋಗಾನ್ಪರತ್ರ ಸುಖಮಶ್ನುತೇ ॥ ೪೫ ॥
ಆಯುರಾರೋಗ್ಯಸೌಭಾಗ್ಯಸಂಪತ್ಸಂತತಿಕಾಮ್ಯಯಾ ।
ಯಾ ನಾರೀ ವಟಸಾವಿತ್ರೀ ವ್ರತಮತ್ರ ಕರಿಷ್ಯತಿ ॥ ೪೬ ॥
ಗೃಹೀತ್ವಾ ತತ್ರ ಸಿದ್ಧ್ಯರ್ಥಮುದ್ಯಾಪನಮಥಾಪಿ ವಾ ।
ಯಥಾಶಕ್ತಿ ಯಥಾವಿತ್ತಂ ಸಾ ತತ್ಫಲಮವಾಪ್ಸ್ಯತಿ ॥ ೪೭ ॥
ಏವಂ ವೋ ವಟಮಾಹಾತ್ಮ್ಯಂ ಮಯಾ ಪ್ರೋಕ್ತಂ ಮುನೀಶ್ವರಾಃ ।
ಹರಿಣಾ ಸನಕಾದಿಭ್ಯಃ ಪ್ರೋಕ್ತಂ ಸರ್ವಫಲಪ್ರದಮ್ ॥ ೪೮ ॥
ಅಕ್ಷಯ್ಯವಟಮಾಹಾತ್ಮ್ಯಂ ಬಹುವರ್ಷಶತೈರಪಿ ।
ವಕ್ತುಂ ಕೋ ವಾ ಸಮರ್ಥೋऽಸ್ತಿ ಮಯೋಕ್ತಂ ಕೃಪಯಾ ಗುರೋಃ ೪೯ ॥

॥ ಇತಿ ದ್ವಿಸಪ್ತತಿತಮೋऽಧ್ಯಾಯಃ ॥

**ಸೂತರು ಹೇಳಿದರು—**

ಈ ರೀತಿಯಾಗಿ ಪ್ರಯಾಗತೀರ್ಥದ, ಮಾಧವನ ಮತ್ತು ವಟವೃಕ್ಷದ ಎಲ್ಲ ಮಾಹಾತ್ಮ್ಯೆಯನ್ನು ಕೇಳಿ ಸನಕಾದಿಗಳು ಶ್ರೀಮಹಾವಿಷ್ಣುವಿಗೆ ನಮಸ್ಕರಿಸಿ ಅಲ್ಲಿಂದ ಹೊರಟುಹೋದರು. ॥೨೫॥ ಈ ವಿಧವಾದ ವೃಕ್ಷದಂತಹ ಬೇರೊಂದು ವೃಕ್ಷವು ಇಡೀ ಬ್ರಹ್ಮಾಂಡದಲ್ಲಿ ಎಲ್ಲಿಯೂ ಇಲ್ಲ. ಆದ್ದರಿಂದಲೇ ದೇವತೆಗಳೂ ಈ ವೃಕ್ಷವನ್ನು ಪೂಜಿಸುತ್ತಾರೆ, ಎಂದ ಮೇಲೆ ಇನ್ನು ಮನುಷ್ಯರ ಬಗ್ಗೆ ಹೇಳತಕ್ಕದ್ದೇನಿದೆ? ॥ ೨೬ ॥ ಆದ್ದರಿಂದ ಹೇ ಮುನಿವರ್ಯರೇ! ನೀವೂ ಈ ವೃಕ್ಷವನ್ನು ಪೂಜಿಸಿರಿ. ಪೂಜೆ ಮಾಡಿದ ಎಲ್ಲರೂ ಅವರವರ ಮನೋರಥಗಳನ್ನು ಪಡೆಯುತ್ತಾರೆ. ॥ ೨೭ ॥ ಯಾತ್ರೆಗಾಗಿ ಬಂದ ಸದಭಿಲಾಷೆಯುಳ್ಳ ಪುರುಷರಾಗಲೀ ಸ್ತ್ರೀಯರಾಗಲೀ ಈ ಅಕ್ಷಯ ವಟವೃಕ್ಷವನ್ನು ಪೂಜಿಸಿ ತಮ್ಮ ಮನೋಭೀಷ್ಟವನ್ನು ಹೊಂದುತ್ತಾರೆ. ॥ ೨೮ ॥ ಬ್ರಹ್ಮಾಂಡದ ಒಳಗಿನ ಸೃಷ್ಟಿಕಾರ್ಯಕ್ಕೆ ತೊಡಗಿದ ಚತುರ್ಮುಖಬ್ರಹ್ಮನಿಗೆ ಸೃಷ್ಟಿಸಲು ಬೇಕಾದ ಸಾಧನಗಳು ಸಿಗದಿದ್ದಾಗ ಈ ಅಕ್ಷಯ ವಟವೃಕ್ಷವನ್ನು ಪೂಜಿಸಿ ತನ್ನ ಮನೋಭಿಲಾಷೆಯನ್ನು ಹೊಂದಿದನು. ॥ ೨೯ ॥ ಎಲೈ ಶೌನಕಾದಿಗಳೇ! ಆಗ ಬ್ರಹ್ಮನಿಗೆ ಸೃಷ್ಟಿಗೆ ಬೇಕಾದ ಜ್ಞಾನವು ಲಭ್ಯವಾಯಿತು. ಕೂಡಲೇ ಬ್ರಹ್ಮನು ಅಂಡಜ, ಸ್ವೇದಜ, ಗರ್ಭಜ ಮತ್ತು ಉದ್ಭಿಜ ಎಂಬ ನಾಲ್ಕು ಬಗೆಯ ಜೀವಿಗಳ ಸೃಷ್ಟಿಯನ್ನು ಮಾಡಿದನು. ॥ ೩೦ ॥ ಎಲೈ ಉತ್ತಮರಾದ ಶೌನಕಾದಿಗಳೇ! ಕೇಳಿರಿ. ನಾಲ್ಕು ವರ್ಣದವರು ಈ ವೃಕ್ಷದ ಪೂಜಾ ಮಾಡಿ ಸಿದ್ಧಿಯನ್ನು ಪಡೆಯುತ್ತಾರೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ॥ ೩೧ ॥ ಅವರಿಗೆ ಮಕ್ಕಳು, ಮೊಮ್ಮಕ್ಕಳು ಮತ್ತು ಮರಿಮಕ್ಕಳುಗಳು ಆಗಿ ಕುಲದ ವೃದ್ಧಿಯೂ ಆಗುವುದು. ಸ್ತ್ರೀಯರು ಈ ವೃಕ್ಷವನ್ನು ಪೂಜಿಸಿ ಜನ್ಮ ಜನ್ಮಾಂತರಗಳಲ್ಲಿಯೂ ಸೌಭಾಗ್ಯವನ್ನು ಹೊಂದಿರುತ್ತಾರೆ. ॥ ೩೨ ॥ ಮೃತವಂಧ್ಯೆಯು, ಮುಷ್ಟಿವಂಧ್ಯೆಯು, ಕಾಕವಂಧ್ಯೆಯು ಮತ್ತು ಅಜಲೆಯಾದ ಕನ್ಯಾವಂಧ್ಯೆಯು ಇದನ್ನು ಪೂಜಿಸಿ ಮಕ್ಕಳನ್ನು ಪಡೆಯುತ್ತಾಳೆ. ॥ ೩೩ ॥ ಯಾರು ಯಾವ ಯಾವ ಅಪೇಕ್ಷೆಗಳನ್ನು ಬಯಸುತ್ತಾರೋ ಅವೆಲ್ಲವನ್ನು ಈ ವೃಕ್ಷವು ಕೊಡುವುದು. ಸಂತಾನವನ್ನು ವೃದ್ಧಿ ಮಾಡುವುದಲ್ಲದೆ ಸಂಪತ್ತನ್ನು ಅಭಿವೃದ್ಧಿಗೊಳಿಸುವುದು. ॥ ೩೪ ॥ ಆದಿಪುರುಷನಾದ ಶ್ರೀಮಹಾವಿಷ್ಣುವು ಬಾಲಕನ

ರೂಪದಲ್ಲಿ ಈ ಮರದ ಎಲೆಯ ಮೇಲೆ ತನ್ನ ಕೈಯಿಂದ ತನ್ನ ಕಾಲಿನ ಹೆಬ್ಬೆರಳನ್ನು ಬಾಯಿಯಲ್ಲಿ ಇಟ್ಟುಕೊಂಡು ಚೀಪುತ್ತಾ ಮಲಗುವನು. ॥ ೩೫ ॥ ಇಂತಹ ಸತ್ವರಜಸ್ತಮೋಗುಣಗಳ ಪ್ರಕೃತಿಸಂಬಂಧವಿಲ್ಲದ ಈ ಬಾಲಕನ ರೂಪವನ್ನು ಹೇಳುವೆನು. ಈ ಬಾಲಕನನ್ನೇ ಕಲ್ಪವೃಕ್ಷವೆಂದೂ (ಬೇಕಾದ ಆಶೆಗಳನ್ನು ನೆರವೇರಿಸುವವನೆಂದೂ) ವೇದದಿಂದಲೇ ತಿಳಿಯಲ್ಪಡತಕ್ಕವನೆಂದೂ ಪ್ರಣವಸ್ವರೂಪನೆಂದೂ ಮಾಯಾವೃಕ್ಷದಲ್ಲಿರುವ ಉತ್ತಮ ಪುರುಷನೆಂದೂ ಸೃಷ್ಟಿಗೆ ಮುಖ್ಯ ಕಾರಣನೆಂದೂ ಹೀಗೆ ಬೇರೆ ಬೇರೆಯವರು ಬೇರೆಬೇರೆ ಬಗೆಯಾಗಿ ವರ್ಣಿಸುವರು. ॥ ೩೬-೩೭ ॥ ಪ್ರಳಯ ಕಾಲದಲ್ಲಿ ಈಶ್ವರನು ತನ್ನ ತ್ರಿಶೂಲಾಗ್ರದಲ್ಲಿ ಕಾಶೀಪಟ್ಟಣವನ್ನು ನಿಲ್ಲಿಸಿ ಕಲ್ಪವೃಕ್ಷದ ಮೂಲದಲ್ಲಿ ಸಂತೋಷದಿಂದ ನರ್ತನ ಮಾಡುತ್ತಿರುವನು; ಆಗ ಎಲ್ಲರೂ ಈ ವಟದ ಎದುರಿಗೆ ನಿಂತು ಈ ವಟಮಾಧವನನ್ನೂ, ಅಕ್ಷಯವಟವಕ್ಷವನ್ನೂ ಪ್ರಾರ್ಥಿಸುತ್ತಾರೆ, ನಮಸ್ಕರಿಸುತ್ತಾರೆ ಮತ್ತು ಜಪಿಸುತ್ತಾರೆ. ॥ ೩೮-೩೯ ॥ ಈ ವಟಕ್ಕೆ ನಮಸ್ಕಾರ ಮಾಡಿದವರು ಎಲ್ಲ ದೇವತೆಗಳಿಗೂ ಪ್ರಿಯರಾಗುವರು. ಈ ವಟದ ಧ್ಯಾನಮಾತ್ರದಿಂದಲೇ ಎಲ್ಲ ದೇವತೆಗಳು ಧ್ಯಾನಿಸಲ್ಪಟ್ಟಂತೆಯೇ ಸರಿ; ಇದರಲ್ಲಿ ಸಂದೇಹ ಬೇಡ. ॥ ೪೦ ॥ ಗಂಗಾಯಮುನೆಯರ ಆರು ತೀರಗಳು ಎಲ್ಲಿಯವರೆಗೆ ಕಣ್ಣಿಗೆ ಕಾಣಿಸುವುದೋ ಅದಷ್ಟು ಜಾಗವು ವಟವೃಕ್ಷದ ಅಕ್ಷಯಕ್ಷೇತ್ರವೆಂದು ಹೇಳಲ್ಪಡುವುದು. ॥ ೪೧ ॥ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರನ್ನು ಮೂಲ, ಮಧ್ಯ ಮತ್ತು ಅಗ್ರಭಾಗಗಳಲ್ಲಿ ಹೊಂದಿರುವ, ಏಳು ಪಾತಾಳಲೋಕಗಳಲ್ಲಿಯೂ ಬಿಳಲುಗಳಿಂದ ವ್ಯಾಪ್ತಿಯುಳ್ಳ ಮತ್ತು ವಿಚಿತ್ರವಾದ ಹಣ್ಣುಗಳನ್ನು ಕೊಡುವ ವೃಕ್ಷರಾಜನಾದ ವಟವೇ! ನಿನಗೆ ನಮಸ್ಕಾರಗಳು. ॥ ೪೨ ॥ ಭವರೋಗಕ್ಕೆ ಔಷಧಿಯಾಗಿರುವ, (ಲಕ್ಷ್ಮೀದೇವಿಯ ಗಂಡನಾಗಿರುವ ಮತ್ತು ತನ್ನ ಚಂಚಲವಾದ ಎಲೆಗಳಿಂದ ಮಾಧವನ ಜಲಕ್ರೀಡೆಗೆ ಕಾರಣವಾಗಿರತಕ್ಕ ವಟವೃಕ್ಷವೇ! ನಿನಗೆ ನಮಸ್ಕಾರಗಳು. ॥ ೪೩ ॥ ಜಗತ್ಸೃಷ್ಟಿಗೆ ಕಾರಣೀಭೂತನಾಗಿರುವ ವಿಚಿತ್ರವಾದ ಹಣ್ಣುಗಳನ್ನು ಕೊಡತಕ್ಕಂತಹ ವಟರಾಜನೇ! ನಿನಗೆ ನಮಸ್ಕಾರ, ನಮಸ್ಕಾರ, ನಮಸ್ಕಾರ, ಮತ್ತೆಮತ್ತೆ ನಮಸ್ಕಾರ. ॥ ೪೪ ॥ ಯಾವ ಸ್ತ್ರೀಯಾಗಲೀ ಪುರುಷನಾಗಲೀ ಈ ವೃಕ್ಷವನ್ನು ಈ ರೀತಿಯಾಗಿ ಸ್ತೋತ್ರ ಮಾಡುವರೋ ಅವರು ಇಲ್ಲಿ ಬಹಳ ಭೋಗಭಾಗ್ಯಗಳನ್ನು ಅನುಭವಿಸಿ ಪರಲೋಕದಲ್ಲಿಯೂ ಬಹುಸುಖವನ್ನು ಅನುಭವಿಸುತ್ತಾರೆ. ॥ ೪೫ ॥ ಯಾವ ಸ್ತ್ರೀಯು, ಆಯುಸ್ಸು, ಆರೋಗ್ಯ, ಸೌಭಾಗ್ಯ, ಐಶ್ವರ್ಯ ಮತ್ತು ಪುತ್ರಸಂತಾನಾಪೇಕ್ಷೆಯಿಂದ ವಟಸಾವಿತ್ರೀ ವ್ರತವನ್ನು ಈ ವಟವೃಕ್ಷದ ಸನ್ನಿಧಾನದಲ್ಲಿ ಮಾಡುವಳೋ ಮತ್ತು ಅಲ್ಲಿ ಉದ್ಯಾಪನೆಯನ್ನು ತನ್ನ ಕಾಮನೆಗಳ ಸಿದ್ಧಿಗಾಗಿ, ತನ್ನ ಶಕ್ತ್ಯಾನುಸಾರ, ತನ್ನ ಹಣದ ಶಕ್ತಿಯಿರುವಂತೆ ಆಚರಿಸುತ್ತಾಳೋ ಅವಳಿಗೆ ಅವಳ ಅಪೇಕ್ಷೆಗಳ ರೂಪದ ಫಲಗಳೆಲ್ಲವೂ ಸಿಗುವುವು. ॥ ೪೬-೪೭ ॥ ಹೇ ಶೌನಕಾದಿ ಮುನೀಶ್ವರರೇ! ಈ ರೀತಿಯಾಗಿ ಸಾಕ್ಷಾತ್ ಶ್ರೀಹರಿಯಿಂದ ಸನಕಾದಿಗಳಿಗೆ ಹೇಳಲ್ಪಟ್ಟ ಈ ವಟದ ಮಾಹಾತ್ಮ್ಯೆಯು ನನ್ನಿಂದ ನಿಮಗೆ ಹೇಳಲ್ಪಟ್ಟಿತು. ॥ ೪೮ ॥ ನೂರಾರು ವರ್ಷಗಳವರೆಗೆ ಹೇಳಿಯೂ ಯಾರು ಈ ವಟದ ಮಾಹಾತ್ಮ್ಯೆಯನ್ನು ಹೇಳಲು ಸಮರ್ಥರು; ಮತ್ತು ಯಾರು ತಾನೆ ಇದನ್ನು ಹೇಳಿ ಮುಗಿಸಬಲ್ಲರು? ಆದರೂ ನನ್ನ ಗುರುಗಳಾದ ಶ್ರೀವೇದವ್ಯಾಸರ ಅನುಗ್ರಹದಿಂದ ಇದನ್ನು ಹೇಳಿದ್ದೇನೆ. ॥ ೪೯ ॥

॥ ಎಪ್ಪತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರಿಸಪ್ತತಿತಮೋऽಧ್ಯಾಯಃ ॥ ೭೩ ॥

ಋಷಯ ಊಚುಃ—

ಯೇ ತ್ವಯಾಭಿಹಿತಾಸ್ಸೂತ ಮಾಧವಾ ಬಹುನಾಮಕಾಃ ।
ಸಂಕ್ಷೇಪೇಣಾಧುನಾ ತೇಷಾಂ ವರ್ಣನಂ ವಿಸ್ತರಾತ್ಕುರು ॥ ೧ ॥

## ॥ ಎಪ್ಪತ್ತಮೂರನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

ಹೇ ಸೂತ ಪುರಾಣಿಕರೇ! ತಾವು ಇದುವರೆಗೂ ಸಂಕ್ಷೇಪವಾಗಿ ಮಾಧವನಿಗೆ ಸಂಬಂಧಪಟ್ಟ ಅನೇಕ ನಾಮಗಳನ್ನು ವರ್ಣಿಸಿದ್ದೀರಿ. ಈ ನಾಮಗಳನ್ನು ವಿಸ್ತಾರವಾಗಿ ವರ್ಣಿಸಿರಿ. ॥ ೧ ॥

ಸೂತ ಉವಾಚ—

ವಟಸ್ಯ ದಕ್ಷಿಣೇ ಭಾಗೇ ದೇವರ್ಷಿಗಣಸೇವಿತಮ್ ।
ಸರ್ವಸಿದ್ಧಿಕರಂ ನೃಣಾಂ ವೈಷ್ಣವಂ ಪೀಠಮುತ್ತಮಮ್ ॥ ೨ ॥
ಮೂಲಮಾಧವನಾಮಾಸೌ ತತ್ರ ತಿಷ್ಠತಿ ಮಾಧವಃ ।
ಅಕ್ಷಯ್ಯಮಾಧವಶ್ಚೋದಾ ವಟಾಧೋ ವಟಮಾಧವಃ ॥ ೩ ॥
ಸ ವಟಸ್ಯಾಸ್ಯ ಪೀಠಸ್ಯ ಮಾಧವಸ್ಯ ಪ್ರಸಾದತಃ ।
ಪ್ರಲಯೇ ವಿಲಯೋ ನಾಸ್ತಿ ಶೌನಕಾದ್ಯಾ ಮಹರ್ಷಯಃ ॥ ೪ ॥
ಸರ್ವಾಣಿ ಯಾನಿ ಪೀಠಾನಿ ಶಾಕ್ತಸೌರಾದಿಕಾನಿ ಚ ।
ಗಾಣಪತ್ಯಾನಿ ಶೈವಾನಿ ತಾನ್ಯತ್ರೈವ ವಸಂತಿ ಹಿ ॥ ೫ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಮ್ ।
ಯತ್ಕಿಂಚಿತ್ಕ್ರಿಯತೇ ಕರ್ಮ ತದಕ್ಷಯಮುದಾಹೃತಮ್ ॥ ೬ ॥
ಶೂಲಟಂಕೇಶ್ವರಸ್ತೇಷಾಮಸ್ವಹಂ ಪೂಜನಂ ಮುದಾ ।
ಕೃತ್ವಾ ಪ್ರಾರ್ಥಯತೇ ಭಕ್ತ್ಯಾ ವೇದಸೂಕ್ತೈಶ್ಚ ಧೂರ್ಜಟಿಃ ॥ ೭ ॥
ನಾನಾದೇಶಗತಾ ಯೇ ಚ ಪ್ರಯಾಗಂ ಯಾಂತಿ ಯಾತ್ರಿಕಾಃ ।
ಏತೇಷಾಂ ಪೂಜನಾತ್ತೇಷಾಂ ಪೂರ್ಣಯಾತ್ರಾಫಲಂ ಭವೇತ್ ॥ ೮ ॥
ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ಬ್ರಾಹ್ಮಣಾಯ ದರಿದ್ರೋऽಪಿ ತಸ್ಯ ತನ್ಮೇರುಣಾ ಸಮಮ್ ॥ ೯ ॥
ಅಥಾಸ್ಯಮಾಧವಂ ವಕ್ಷ್ಯೇ ಇಂದ್ರಸ್ಯೋಪವನಾಂತಿಕೇ ।
ಕ್ಷೇತ್ರಸ್ಯ ಪೂರ್ವದಿಗ್ಭಾಗೇ ವರ್ತತೇ ಶಂಖಮಾಧವಃ ॥ ೧೦ ॥
ಶಂಖಧಾರೀ ಬ್ರಹ್ಮಚಾರೀ ಸರ್ವಸಿದ್ಧಿರ್ನಿಷೇವಿತಃ ।
ಮಾಯಾವೇಷವಿಹಾರೀ ಚ ಮಾಯಾತಟನರೇಶ್ವರಃ ॥ ೧೧ ॥

ಮಾಯಾಪಾಶವಿನಾಶೀ ಚ ಮಾಯಾಕಾರ್ಯಾದ್ಬಹಿಃ ಸ್ಥಿತಃ ।
ಮಾಯಾಗುಣವಿಹಾರೀ ಚ ಮಾಯಯಾ ಧೃತವಿಗ್ರಹಃ ॥ ೧೨ ॥
ಶಂಖನಾದೇನ ಮಹತಾ ಜೀವಮಾಯಾಂ ವಿದಾರಯನ್ ।
ತ್ರಾತಿ ವಿಶ್ವಂ ಸ ವಿಶ್ವೇಶೋ ವಿಶ್ವರೂಪೋ ಜನಾರ್ದನಃ ॥ ೧೩ ॥
ಪ್ರಲಯೇ ಸರ್ವಭೂತಾನಾಂ ಸಂಪ್ರಾಪ್ತೇ ಭಕ್ತವತ್ಸಲಃ ।
ಕ್ಷೇತ್ರಂ ಶಂಖಸ್ಯ ತೋಯೇನ ವೇಷ್ಟಯಿತ್ವಾ ಸಮಂತತಃ ॥ ೧೪ ॥
ಪ್ರಯಾಗಂ ಸರ್ವದೇವಾನಾಮಧಿಷ್ಠಾನಂ ಮುನೀಶ್ವರಾಃ ।
ಸರ್ವೋಪದ್ರವಘಾತೇಭ್ಯಃ ಕ್ಷೇತ್ರಂ ರಕ್ಷತಿ ಯಸ್ಸದಾ ॥ ೧೫ ॥
ತಂ ಶಂಖಮಾಧವಂ ದೃಷ್ಟ್ವಾ ಸರ್ವೋಪದ್ರವನಾಶನಮ್ ।
ಲಭತೇ ಸರ್ವದಾ ಸೌಖ್ಯಂ ಯತ್ರ ಕುತ್ರಾಪಿ ಸಂಸ್ಥಿತಃ ॥ ೧೬ ॥
ಬಾಲ್ಯಾದಾರಭ್ಯ ಯತ್ಪಾಪಂ ವಾಙ್ಮನಃಕಾಯಸಂಚಿತಮ್ ।
ಶಂಖಮಾಧವನಾಮ್ನಾ ತತ್ಸರ್ವಮಾಯಾತಿ ಸಂಕ್ಷಯಮ್ ॥ ೧೭ ॥
ಮಾಘಮಾಸೇಽಥ ವೈಶಾಖೇ ಶಂಖಮಾಧವದರ್ಶನಮ್ ।
ಪೂಜನಂ ಯೇ ಕರಿಷ್ಯಂತಿ ತೇಷಾಂ ಪುಣ್ಯಮನಂತಕಮ್ ॥ ೧೮ ॥
ನಾನಾಪುಷ್ಪೈಸ್ತಮಿಂದ್ರೋಽಪಿ ಪೂಜಯಿತ್ವಾ ಜಯಸ್ತವೈಃ ।
ಶ್ರೀಶಂಖಮಾಧವಂ ಸ್ತೌತಿ ಸ್ವಪದಸ್ಥಿತಯೇಽನ್ವಹಮ್ ॥ ೧೯ ॥
ಕದಾಚಿತ್ತಂ ಸಮಾಗತ್ಯ ಸಿದ್ಧಯೋಽಷ್ಟೌ ವಿಜಿಜ್ಞಷುಃ ।
ವಯಂ ಕಿಂ ಕುರ್ಮಹೇ ನಾಥ ಭವದ್ದಾಸ್ಯೋಽತ್ರ ಸಂಸ್ಥಿತಾಃ ॥ ೨೦ ॥

**ಸೂತರು ಹೇಳಿದರು—**

ವಟವೃಕ್ಷದ ದಕ್ಷಿಣಭಾಗವು ದೇವತೆಗಳಿಂದಲೂ ಮತ್ತು ಋಷಿಗಳಿಂದಲೂ ಸೇವಿತವಾಗಿದೆ. ಇದು ಮನುಷ್ಯರಿಗೆ ಎಲ್ಲ ರೀತಿಯ ಸಿದ್ಧಿಗಳನ್ನೂ ಕೊಡತಕ್ಕದ್ದು. ಹಾಗೂ ಉತ್ತಮವಾದ ವಿಷ್ಣುಸನ್ನಿಧಾನವಿರುವ ಸ್ಥಾನವು. ॥ ೨ ॥ ಇಲ್ಲಿ ''ಮೂಲ ಮಾಧವನು'' ಇದ್ದಾನೆ. ಈ ವೃಕ್ಷದ ಉತ್ತರದಲ್ಲಿ ''ಅಕ್ಷಯಮಾಧವ''ನಿದ್ದಾನೆ. ಇನ್ನು ವಟವೃಕ್ಷದ ಕೆಳಗೆ ''ವಟ ಮಾಧವ''ನು ಇದ್ದಾನೆ. ॥ ೩. ॥ ವಟವೃಕ್ಷದಿಂದ ಕೂಡಿದ ಈ ಸ್ಥಾನದಲ್ಲಿ ಶ್ರೀಮಾಧವನ ಪ್ರಸಾದದಿಂದ ಪ್ರಲಯ ಕಾಲದಲ್ಲಿಯೂ ನಾಶವೆಂಬುದಿಲ್ಲ. ॥ ೪ ॥ ಶಾಕ್ತ, ಸೌರ ಮತ್ತು ಗಾಣಪತ್ಯ ಶೈವ ಮುಂತಾದ ಎಲ್ಲ ಮತಗಳ ಪೀಠಗಳೂ ಇಲ್ಲೇ ಇವೆ. ॥ ೫ ॥ ಈ ಸ್ಥಳದಲ್ಲಿ ಸ್ನಾನ, ದಾನ, ಜಪ, ಹೋಮ, ವೇದಶಾಸ್ತ್ರಧ್ಯಯನ ಮತ್ತು ಪಿತೃತರ್ಪಣ ಇವೇ ಮೊದಲಾದವುಗಳನ್ನು ಸ್ವಲ್ಪ ಮಾಡಿದರೂ ನಾಶವಾಗದ ಫಲವು ಬರುವುದು. ॥ ೬ ॥ ಈ ಮಾಧವಮೂರ್ತಿಗಳನ್ನು ಪ್ರತಿದಿನವೂ ಶೂಲಟಂಕೇಶ್ವರನು ಸಂತೋಷದಿಂದ ಪೂಜಿಸಿ ಭಕ್ತಿಪೂರಿತನಾಗಿ ವೇದಸೂಕ್ತಗಳಿಂದ ಪ್ರಾರ್ಥಿಸುತ್ತಾನೆ. ॥ ೭ ॥ ನಾನಾದೇಶಗಳಿಂದ ಪ್ರಯಾಗಕ್ಕೆ ಬಂದಿರುವ ಯಾತ್ರಿಕರು ಈ ಮಾಧವ ದೇವರುಗಳನ್ನು ಪೂಜಿಸಿ ಯಾತ್ರೆಯ ಪೂರ್ಣ ಫಲ ಪಡೆಯುವರು. ॥ ೮ ॥ ನನ್ನ ಮೇಲಿನ

ಭಕ್ತಿಯಿಂದ ದರಿದ್ರರಾದರೂ ಯಾರು ಇಲ್ಲಿ ಎಲೆ, ಹೂವು, ಹಣ್ಣು ಮತ್ತು ಜಲ ಇವು ಯಾವುದನ್ನಾದರೂ ಬ್ರಾಹ್ಮಣರಿಗೆ ದಾನ ಮಾಡುತ್ತಾರೋ ಅವರ ಪುಣ್ಯವು ಮೇರುಪರ್ವತದಷ್ಟು ಬೆಳೆಯುವುದು. (ಹೀಗೆ ಭಗವಂತನ ವಚನವಿದೆಯೆಂದು ಅಭಿಪ್ರಾಯ) ॥ ೯ ॥ ಇನ್ನು ಇಂದ್ರನ ಉಪವನವಾದ ನಂದನವನದ ಸಮೀಪದಲ್ಲಿರುವ ಮಾಧವನ ಬಗ್ಗೆ ಹೇಳುವೆನು. ಈ ಕ್ಷೇತ್ರದ ಪೂರ್ವದಿಗ್ಭಾಗದಲ್ಲಿ "ಶಂಖಮಾಧವ"ನಿದ್ದಾನೆ. ॥ ೧೦ ॥ ಇವನು ಶಂಖವನ್ನು ಧರಿಸಿದ್ದಾನೆ. ಬ್ರಹ್ಮಚಾರಿಯೂ, ಮೋಹಕವೇಷವನ್ನೂ ಧರಿಸಿರುವವನಾಗಿ ಇಲ್ಲಿರುವ ಮಾಯಾ ಎಂಬ ಸರಸ್ಸಿನ ದಡಕ್ಕೆ ಅಧಿಪತಿಯಾಗಿದ್ದು ತನ್ನನ್ನು ಸೇವಿಸಿದವರ ಎಲ್ಲ ಸಿದ್ಧಿಗಳನ್ನು ಪೂರೈಸುವವನಾಗಿದ್ದಾನೆ. ಜೀವದ ಸ್ವರೂಪಕ್ಕೆ ಅನಾದಿಕಾಲದಿಂದಲೂ ಪರಮಾತ್ಮನ ಇಚ್ಛಾದಿಂದ ಆವರಕವಾಗಿದ್ದು ಸಂಸಾರದ ಬಗ್ಗೆ ನಾನು, ನನ್ನದು ಎಂಬ ಅಹಂ ಮಮಕಾರವನ್ನುಂಟುಮಾಡುವ ಮಾಯೆಯೆಂಬ ಆವರಕವನ್ನು ಕತ್ತರಿಸುವವನಾಗಿ ತನ್ನ ಇಚ್ಛಾದಿಂದಲೇ ನಿರ್ಮಿತವಾಗಿರತಕ್ಕ ಜಗತ್ತಿನಲ್ಲಿ ಸೇರಿಕೊಂಡು ತನ್ನ ಮಾಯಾಕಾರ್ಯಗಳಲ್ಲಿ ವಿಹಾರ ಮಾಡುತ್ತಿದ್ದರೂ ತಾನು ಮಾತ್ರ ಮಾಯಾಗುಣಗಳಾದ ಸತ್ವರಜಸ್ತಮೋಗುಣವ್ಯಾಪಾರದಿಂದ ಲೇಪವಿಲ್ಲದೆ ಇರುವ ತನ್ನ ಇಚ್ಛಾದಿಂದ ಸ್ವೀಕರಿಸಲ್ಪಟ್ಟ ಶಂಖಮಾಧವನೆಂಬ ಈ ರೂಪವು ಈ ದಿಕ್ಕಿನಲ್ಲಿ ಇದೆ. ॥ ೧೧-೧೨ ॥ ತನ್ನನ್ನು ಸೇವಾ ಮಾಡಿದವರಿಗೆ ಅನಾದಿಯಾದ ಜೀವಾವರಕವನ್ನು ತನ್ನ ಮಹತ್ತರವಾದ ಶಂಖನಾದದಿಂದ ಸೀಳಿ ಜಗತ್ತನ್ನೇ ರಕ್ಷಣ ಮಾಡತಕ್ಕ, ಜಗತ್ಪ್ರಭುವಾದ, ವಿಶ್ವದಲ್ಲಿ ಸರ್ವತ್ರ ವ್ಯಾಪಿಸಿಕೊಂಡಿರುವ ಜನಾರ್ದನ ನಾಮಕ ಶ್ರೀಹರಿಯೇ ಇವನು. ॥ ೧೩ ॥ ಪ್ರಲಯಕಾಲದಲ್ಲಿ ಎಲ್ಲ ಭೂತಗಳೂ ಲಯವನ್ನು ಹೊಂದುತ್ತಿರಲಾಗಿ ಭಕ್ತವತ್ಸಲನಾದ ಈ ಶಂಖಮಾಧವನು ತನ್ನ ಶಂಖದ ಜಲದಿಂದ ಈ ಕ್ಷೇತ್ರವನ್ನು ತುಂಬಿ ಅದನ್ನು ರಕ್ಷಿಸುತ್ತಿರುತ್ತಾನೆ. ॥ ೧೪ ॥ ಮುನೀಶ್ವರರೇ, ಈ ಪ್ರಯಾಗವು ಎಲ್ಲ ದೇವತೆಗಳಿಗೂ ವಾಸಕ್ಕೆ ಅಧಿಷ್ಠಾನವು. ಅವರನ್ನು ಈ ಮಾಧವನು ಸರ್ವ ಉಪದ್ರವಗಳಿಂದ ರಕ್ಷಿಸುತ್ತಾನೆ. ॥ ೧೫ ॥ ಯಾರು ಎಲ್ಲಿಯೇ ಇರಲಿ, ಶಂಖಮಾಧವನನ್ನು ದರ್ಶಿಸಿ ಎಲ್ಲಾ ಉಪದ್ರವಗಳ ನಾಶವನ್ನು, ಯಾವಾಗಲೂ ಎಲ್ಲ ಸುಖಗಳನ್ನು ಪಡೆಯುವರು. ॥ ೧೬ ॥ ಬಾಲ್ಯದಿಂದ ಆರಂಭಿಸಿ ವಾಕ್, ಮನಸ್ಸು ಮತ್ತು ದೇಹ ಇವುಗಳಿಂದ ಸಂಪಾದಿಸಿರುವ ಪಾಪವೆಲ್ಲವೂ ಶ್ರೀಶಂಖಮಾಧವನ ಸ್ಮರಣೆಯಿಂದ ನಾಶವಾಗುವುವು. ॥ ೧೭ ॥ ಮಾಘ ಮತ್ತು ವೈಶಾಖ ಮಾಸಗಳಲ್ಲಿ ಯಾರು ಶಂಖಮಾಧವನನ್ನು ದರ್ಶನ ಮಾಡುವರೋ ಅವರ ಪುಣ್ಯವು ಕೊನೆಯಿಲ್ಲದ್ದು. ॥ ೧೮ ॥ ನಾನಾವಿಧಗಳಾದ ಹೂವುಗಳಿಂದಲೂ ಜಯ ಸ್ತೋತ್ರಗಳಿಂದಲೂ ಈ ಶಂಖಮಾಧವನನ್ನು ಪೂಜಿಸಿ ಸ್ತೋತ್ರ ಮಾಡಿಯೇ ಇಂದ್ರನು ತನ್ನ ಸ್ಥಾನದಲ್ಲಿ ಯಾವಾಗಲೂ ಇದ್ದಾನೆ. ॥ ೧೯ ॥ ಒಂದು ಬಾರಿ ಅಣಿಮಾದಿ ಅಷ್ಟ ಸಿದ್ಧಿಗಳ ದೇವತೆಗಳು ಈ ಶಂಖಮಾಧವ ದೇವರನ್ನು ಸಮೀಪಿಸಿ "ಸ್ವಾಮಿ! ನಾವೆಲ್ಲರೂ ತಮ್ಮ ದಾಸಿಯರು, ಇಲ್ಲಿಯೇ ಇದ್ದೇವೆ, ನಾವು ಏನನ್ನು ಮಾಡಬೇಕು?" ಎಂದು ಶಂಖಮಾಧವನನ್ನು ಪ್ರಶ್ನಿಸಿದರು. ॥ ೨೦ ॥

ಶ್ರೀಶಂಖಮಾಧವ ಉವಾಚ—

> ಭವತ್ಯೋ ಯದಿ ಮೇ ದಾಸ್ಯೋ ವಚನಂ ಕುರುತಾಂ ಶುಭಮ್ ।
> ತಾವತ್ಯೈವಾಖಿಲಾ ಸೇವಾ ಭವತೀಭಿಃ ಕೃತಾ ಮಮ ॥ ೨೧ ॥
> ಆಯಾಸ್ಯಂತಿ ಜನಾ ಯೇಽತ್ರ ಮದ್ಭಕ್ತ್ಯಾ ಮಮ ಪೂಜಕಾಃ ।
> ತೇಭ್ಯೋ ಯೂಯಂ ಪ್ರಸೀದಧ್ವಂ ಮದ್ವಾಕ್ಯಾದವಿಶಂಕಿತಾಃ ॥ ೨೨ ॥

**ಮಾಧವನು ಹೇಳಿದನು—**

"ನೀವುಗಳು ನನ್ನ ದಾಸಿಯರಾಗಿದ್ದರೆ ನಾನು ಹೇಳಿದಂತೆ ಈ ಶುಭಕಾರ್ಯವನ್ನು ಮಾಡಿರಿ. ಆಗಲೇ ನಿಮ್ಮ ಎಲ್ಲಾ ಸೇವೆಯು ನನಗೆ ಸಂದಂತಾಗುವುದು. ॥ ೨೧ ॥ ನನ್ನ ಮೇಲಿನ ಭಕ್ತಿಯಿಂದ ನನ್ನ ಭಕ್ತರು ನನ್ನನ್ನು ಪೂಜೆ ಮಾಡಲು ಇಲ್ಲಿಗೆ ಬರುವರು. ನನ್ನ ಮಾತಿನಂತೆ ಅನುಮಾನವಿಲ್ಲದೆ ನೀವುಗಳು ಅವರನ್ನು ಸಂತೋಷಪಡಿಸಿ." ॥ ೨೨ ॥

**ಸೂತ ಉವಾಚ—**

ಅತೋಽತ್ರ ಯಸ್ಸಮಾಗತ್ಯ ಶಂಖಮಾಧವಮರ್ಚಯೇತ್ ।
ಅಣಿಮಾದ್ಯಾ ಪ್ರಸೀದಂತಿ ಸಿದ್ಧಯಸ್ತಸ್ಯ ನಿಶ್ಚಿತಮ್ ॥ ೨೩ ॥
ಕ್ಷೇತ್ರಸ್ಯಾಗ್ನೇಯದಿಗ್ಭಾಗೇ ವಹ್ನ್ಯಾಶ್ರಮಸಮೀಪತಃ ।
ಚತುರ್ಭುಜಶ್ಚಕ್ರಧಾರೀ ವರ್ತತೇ ಚಕ್ರಮಾಧವಃ ॥ ೨೪ ॥
ಪ್ರಯಾಗೇ ವಸತೋ ಲೋಕಾನ್ ಸ್ವಭಕ್ತಾಂಶ್ಚ ವಿಶೇಷತಃ ।
ಚಕ್ರೇಣ ಸಕಲಾಪದ್ಭ್ಯೋ ಸಂತಾರಯತಿ ನಿತ್ಯಶಃ ॥ ೨೫ ॥
ಕ್ಷೇತ್ರಂ ಸಂರಕ್ಷತೇ ನಿತ್ಯಂ ಚಕ್ರೇಣ ತ್ರಾಸಯನ್ನಘಾನ್ ।
ನಾನಾವಿಘ್ನಕರಾನುದ್ಧಾಂಸ್ತೀರ್ಥನಿಂದಾಪರಾನ್ ಜನಾನ್ ॥ ೨೬ ॥
ತತ್ರ ಗತ್ವಾಗ್ನಿಕುಂಡೇ ಯೇ ಸ್ನಾತ್ವಾ ಸಂತರ್ಪ್ಯ ದೇವತಾಃ ।
ಮಾಧವಂ ಪೂಜಯಂತ್ಯದ್ಧಾ ತೇ ಲಭಂತೇಽಕ್ಷಯಾಂ ಮತಿಮ್ ॥ ೨೭ ॥
ಅಗ್ನಿಸ್ತಂ ವಿಧಿವತ್ಪೂಜ್ಯ ಸಾಧನೈಶ್ಚಕ್ರಮಾಧವಮ್ ।
ಸ್ವಕೃತಸ್ತೋತ್ರಮಂತ್ರೈಶ್ಚ ಗೃಣಾತಿ ಪ್ರತ್ಯಹಂ ದ್ವಿಜಾಃ ॥ ೨೮ ॥
ತತ್ಸಮೀಪಂ ಚ ಯೇ ಗತ್ವಾ ಕುರ್ವತೇ ತಸ್ಯ ಪೂಜನಮ್ ।
ಭಕ್ತ್ಯಾ ನಾನೋಪಚಾರೈಶ್ಚ ತೇಷಾಂ ತೀರ್ಥಫಲಂ ಧ್ರುವಮ್ ॥ ೨೯ ॥
ತತ್ರ ಗತ್ವಾ ತು ಯೇ ದಾನಂ ಕಿಂಚಿತ್ಕುರ್ವಂತಿ ಭಕ್ತಿತಃ ।
ತೇಷಾಂ ತತ್ಕೋಟಿಗುಣಿತಂ ಜಾಯತೇ ಕ್ಷೇತ್ರಗೌರವಾತ್ ॥ ೩೦ ॥
ಕದಾಚಿದಾಗತಾಸ್ತತ್ರ ಸೇವಿತುಂ ಚಕ್ರಮಾಧವಮ್ ।
ಚತುರ್ದಶಮಹಾವಿದ್ಯಾ ನಮಸ್ಕೃತ್ವಾ ವಿಜಿಜ್ಞಯುಃ ॥ ೩೧ ॥

**ಸೂತರು ಹೇಳಿದರು—**

"ಆದ್ದರಿಂದಲೇ ಯಾವನು ಇಲ್ಲಿಗೆ ಬಂದು ಶಂಖಮಾಧವನನ್ನು ಪೂಜಿಸುವನೋ, ಅವನನ್ನು ಅಣಿಮಾದಿ ಅಷ್ಟಸಿದ್ಧಿಗಳು ಖಂಡಿತವಾಗಿ ಸಂತೋಷಗೊಳಿಸುತ್ತವೆ." ॥ ೨೩ ॥ ಈ ಪ್ರಯಾಗದ ಆಗ್ನೇಯ ದಿಕ್ಕಿನಲ್ಲಿ ಇರುವ ಅಗ್ನಿಯಾಶ್ರಮದ ಹತ್ತಿರ ಚಕ್ರಮಾಧವನಿದ್ದಾನೆ. ಇವನು ಚತುರ್ಭುಜಯುಕ್ತನೂ, ಚಕ್ರಧಾರಿಯೂ ಆಗಿದ್ದಾನೆ. ॥ ೨೪ ॥ ಇವನು ನಿತ್ಯವೂ ಪ್ರಯಾಗದಲ್ಲಿ ವಾಸಮಾಡುವವರಿಗೆ ಮತ್ತು ವಿಶೇಷವಾಗಿ ತನ್ನ ಭಕ್ತರಿಗೆ ಬರುವ ಸಕಲ ಆಪತ್ತನ್ನೂ ತನ್ನ ಚಕ್ರದಿಂದ ನಿವಾರಿಸುತ್ತಾನೆ. ॥ ೨೫ ॥ ಈ ಮಾಧವನು ತನ್ನ ಚಕ್ರದಿಂದ ಈ ಕ್ಷೇತ್ರವನ್ನು ರಕ್ಷಿಸುತ್ತಾ ಸಕಲ

ಪಾಪಗಳನ್ನು ಹೆದರಿಸುತ್ತಾನೆ ಮತ್ತು ಅಲ್ಲಿರುವ ಯಾತ್ರಿಕರಿಗೆ ನಾನಾವಿಧ ವಿಘ್ನಗಳನ್ನುಂಟು ಮಾಡುವವರನ್ನೂ, ತೀರ್ಥದ ನಿಂದೆ ಮಾಡುವವರನ್ನೂ ಹೆದರಿಸಿ ಓಡಿಸುತ್ತಾನೆ. ॥ ೨೬ ॥ ಅಲ್ಲಿಗೆ ಬಂದು ಅಗ್ನಿಕುಂಡದಲ್ಲಿ ಸ್ನಾನ ಮಾಡಿ ದೇವತೆಗಳಿಗೆ ತರ್ಪಣ ಕೊಟ್ಟು ಚೆನ್ನಾಗಿ ಮಾಧವನನ್ನು ಯಾರು ಪೂಜಿಸುತ್ತಾರೋ ಅವರು ಶಾಶ್ವತವಾದ ಬುದ್ಧಿಯನ್ನು ಹೊಂದುವರು. ॥ ೨೭ ॥ ಅಗ್ನಿಯು ಆ ಚಕ್ರಮಾಧವನನ್ನು ಪೂಜಾಸಾಧನೆಗಳಿಂದ ವಿಧಿವತ್ತಾಗಿ ಪೂಜಿಸಿ, ತನ್ನಿಂದ ರಚಿತವಾದ ಸ್ತೋತ್ರಮಂತ್ರಗಳಿಂದ ಪ್ರತಿನಿತ್ಯವೂ ಸ್ತೋತ್ರ ಮಾಡುತ್ತಾನೆ. ॥ ೨೮ ॥ ಆ ಚಕ್ರಮಾಧವನ ಸಮೀಪಕ್ಕೆ ಹೋಗಿ, ಭಕ್ತಿಯಿಂದ ಹಾಗೂ ನಾನಾ ಉಪಚಾರಗಳಿಂದ, ಯಾರು ಚಕ್ರಮಾಧವನನ್ನು ಪೂಜಿಸುತ್ತಾರೋ ಅವರಿಗೆ ನಿಶ್ಚಯವಾಗಿಯೂ ತೀರ್ಥದ ಫಲವು ದೊರಕುವುದು. ॥ ೨೯ ॥ ಅಲ್ಲಿಗೆ ಹೋಗಿ ಭಕ್ತಿಯಿಂದ ಯಾರು ಸ್ವಲ್ಪವನ್ನಾದರೂ ದಾನ ಮಾಡುತ್ತಾರೋ ಅವರಿಗೆ ಈ ಕ್ಷೇತ್ರದ ವೈಶಿಷ್ಟ್ಯದಿಂದ ತಾವು ದಾನ ಮಾಡಿದ್ದಕ್ಕಿಂತ ಕೋಟಿಗುಣ ಹೆಚ್ಚಾದ ಫಲವು ದೊರಕುವುದು. ॥ ೩೦ ॥ ಒಂದು ಸಲ ಹದಿನಾಲ್ಕು ವಿದ್ಯೆಗಳ ಅಭಿಮಾನಿ ದೇವತೆಗಳು ಚಕ್ರಮಾಧವನನ್ನು ಸೇವಾ ಮಾಡಲು ಅಲ್ಲಿಗೆ ಬಂದು ನಮಸ್ಕರಿಸಿ ವಿಜ್ಞಾಪನೆ ಮಾಡಿಕೊಂಡರು. ॥ ೩೧ ॥

ವಿದ್ಯಾ ಊಚುಃ—

> ಕೃಷ್ಣ ವಿಷ್ಣೋ ಜಗನ್ನಾಥ ಭಗವಂಶ್ಚಕ್ರಮಾಧವ ।
> ಸೇವಿತುಂ ತ್ವಾಂ ವಯಂ ಯಾತಾಃ ಸ್ವಸ್ವಲೋಕಾತ್ತವಾಂತಿಕಮ್ ॥ ೩೨ ॥
> ಭವತ್ಸೇವಾಂ ವಿಧಾಸ್ಯಾಮಃ ಕೃಪಯಾನುಗೃಹಾಣ ನಃ ।
> ಗಮಿಷ್ಯಾಮೋ ನ ಲೋಕಾನ್ಸ್ವಾನತ್ರ ನೋ ರಮತೇ ಮನಃ ॥ ೩೩ ॥

ಹದಿನಾಲ್ಕು ವಿದ್ಯೆಗಳ ಅಭಿಮಾನಿ ದೇವತೆಗಳು ಹೇಳಿದರು—

ಹೇ ಕೃಷ್ಣ! ಹೇ ವಿಷ್ಣೋ! ಹೇ ಜಗನ್ನಾಥ! ಹೇ ಭಗವನ್! ಚಕ್ರಮಾಧವ! ನಮ್ಮ ನಮ್ಮ ಲೋಕಗಳಿಂದ ನಿನ್ನನ್ನು ಸೇವಾ ಮಾಡಲು ನಾವುಗಳು ಬಂದಿದ್ದೇವೆ. ॥ ೩೨ ॥ ನಿಮ್ಮ ಸೇವಾವನ್ನು ಮಾಡುತ್ತೇವೆ; ದಯಮಾಡಿ ನಮ್ಮನ್ನು ಅನುಗ್ರಹಿಸು. ಇಲ್ಲಿಯೇ ಇರಲು ನಮ್ಮ ಮನಸ್ಸು ಬಹಳವಾಗಿ ಇಷ್ಟಪಡುತ್ತಿದೆ. ಆದ್ದರಿಂದ ನಮ್ಮ ಲೋಕಗಳಿಗೆ ಹಿಂತಿರುಗಿ ಹೋಗುವುದಿಲ್ಲ. ॥ ೩೩ ॥

ಚಕ್ರಮಾಧವ ಉವಾಚ—

> ತದುದೀರಿತಮಾಕರ್ಣ್ಯ ಪ್ರಾಹ ತಾಶ್ಚಕ್ರಮಾಧವಃ ।
> ಭವತೀಭಿರಿಹ ಸ್ಥೇಯಂ ಕಾರ್ಯಂ ಚ ವಚನಂ ಮಮ ॥ ೩೪ ॥
> ಭವತ್ಯಃ ಪ್ರಥಿತಾ ಲೋಕೇ ಮಹಾವಿದ್ಯಾಶ್ಚತುರ್ದಶ ।
> ಪೂರಯಂತ್ವಲ್ಪಕಾಲೇನ ಸ್ವೋಪಾಸಕಮನೋರಥಾನ್ ॥ ೩೫ ॥
> ತದತ್ರ ಯೂಯಂ ಮದ್ವಾಕ್ಯಾದಲ್ಪಕಾಲೇನ ದೇಹಿನಾಮ್ ।
> ಅತ್ರಾಗತಾನಾಂ ಭಕ್ತಾನಾಂ ಕಾಮಪೂರಾ ಭವಂತು ವೈ ॥ ೩೬ ॥
> ಯೇ ಯಾತ್ರಿಕಾಸ್ಸಮಾಯಾಂತಿ ದರ್ಶನಾರ್ಥಂ ಮಮಾತ್ರ ವೈ ।
> ತೇಭ್ಯಃ ಪ್ರಸನ್ನೀಭವತ ಸಂತೋಷಸ್ತೇನ ಮೇ ಭವೇತ್ ॥ ೩೭ ॥

ಇತಿ ಶ್ರುತ್ವಾ ವಚೋ ರಮ್ಯಂ ಚಕ್ರಮಾಧವಭಾಷಿತಮ್ ।
ಓಮಿತ್ಯುಕ್ತ್ವಾ ಸ್ಥಿತಾಸ್ತೂಷ್ಣೀಂ ಪುರಃ ಪ್ರಾಂಜಲಯಃ ಪ್ರಭೋಃ ॥ ೩೮ ॥

**ಚಕ್ರಮಾಧವನು ಹೇಳಿದನು—**

ಅವರು ಮಾಡಿದ ವಿಜ್ಞಾಪನೆಯನ್ನು ಆಲಿಸಿದ ಚಕ್ರಮಾಧವನು ಅವರನ್ನು ಕುರಿತು ಹೇಳಿದನು,''ನೀವುಗಳು ಇಲ್ಲಿಯೇ ಇರಿ. ನಾನು ಹೇಳಿದ ಮಾತನ್ನು ನಡೆಸಿರಿ.'' ॥ ೩೪ ॥ ನೀವುಗಳು ಲೋಕದಲ್ಲಿ ಹದಿನಾಲ್ಕು ಮಹಾವಿದ್ಯೆಗಳೆಂದು ಪ್ರಸಿದ್ಧರಾಗಿದ್ದೀರಿ. ನೀವು ನಮ್ಮ ಉಪಾಸಕರ ಮನೋರಥಗಳನ್ನು ಬೇಗನೆ ಪೂರ್ಣಮಾಡಿರಿ. ॥ ೩೫ ॥ ನನ್ನ ಅಪೇಕ್ಷೆಯಂತೆ ನೀವುಗಳು ಇಲ್ಲಿಗೆ ಬರುವ ಭಕ್ತರ ಅಭಿಲಾಷೆಗಳನ್ನು ಅಲ್ಪಕಾಲದಲ್ಲಿಯೇ ಪೂರ್ಣ ಮಾಡಿರಿ. ಇಲ್ಲಿಗೆ ನನ್ನ ದರ್ಶನಕ್ಕಾಗಿ ಬರುವ ಯಾತ್ರಾರ್ಥಿಗಳಿಗೆ ನೀವು ಪ್ರಸನ್ನರಾಗಿರಿ. ಅವರ ಇಷ್ಟಾರ್ಥಗಳನ್ನು ನೆರವೇರಿಸಿ, ಇದರಿಂದ ನನಗೆ ಸಂತಸವಾಗುವುದು,'' ॥ ೩೬-೩೭ ॥ ಹೀಗೆ ಹೇಳಿದ ಚಕ್ರಮಾಧವನ ರಮ್ಯವಾದ ಮಾತಿನಿಂದ ಸಂತುಷ್ಟರಾದ ಆ ದೇವತೆಗಳು ''ಓಂ'' ಎಂದು ಹೇಳಿ ಒಪ್ಪಿಗೆಯನ್ನು ಸೂಚಿಸಿ ಕೈಮುಗಿದು ಮಾಧವನ ಮುಂದೆ ನಿಂತರು. ॥ ೩೮ ॥

**ಸೂತ ಉವಾಚ—**

ತಸ್ಮಾದ್ಯೇಽತ್ರ ಸಮಾಯಾಂತಿ ಪೂಜಯಂತಿ ಚ ಮಾಧವಮ್ ।
ಗೃಣಂತಿ ಚ ನಮಸ್ಯಂತಿ ತೇಷಾಂ ತಾಸ್ಸಕಲಪ್ರದಾಃ ॥ ೩೯ ॥
ವಕ್ಷ್ಯಾಮ್ಯಥ ಮುನಿಶ್ರೇಷ್ಠಾಃ ಕ್ಷೇತ್ರಂ ಯಾಮ್ಯೇ ಯಮಾಂತಿಕೇ ।
ಗದಾಮಾಧವನಾಮಾಸ್ತೇ ಹರಿಃ ಪೀಠೇ ತೃತೀಯಕೇ ॥ ೪೦ ॥
ಗದಾಘಾತೇನ ದುರ್ವೃತ್ತಾಂಶ್ಚಿತ್ತವಿಭ್ರಂಶಕಾರಕಾನ್ ।
ತ್ರಾಸಯನ್ನಖಿಲಾನುದ್ಧಾನ್ಸ್ವರ್ಮಂ ಕಾರಯತಿ ಸ್ವಯಮ್ ॥ ೪೧ ॥
ವೈಶಾಖೇ ಮಾಸಿ ಸಂಪ್ರಾಪ್ತೇ ಯೇ ಗದಾಮಾಧವಂ ಜನಾಃ ।
ಸಂಪೂಜಯಂತಿ ಮಾಸಂ ವಾ ಪಕ್ಷಂ ಪಕ್ಷಾರ್ಧಮೇವ ವಾ ॥ ೪೨ ॥
ಪಂಚ ತ್ರ್ಯೇಕದಿನಂ ವಾಪಿ ಯಥಾಸಂಭಾರವಿಸ್ತರೈಃ ।
ಮಾಧವಸ್ಯ ಪ್ರಸಾದೇನ ತೇಷಾಂ ಕಾಲಭಯಂ ನ ಹಿ ॥ ೪೩ ॥
ಕಿಂಚಿದ್ದತ್ತಂ ಹುತಂ ಜಪ್ತಂ ಶ್ರೀಗದಾಮಾಧವಾಂತಿಕೇ ।
ಜಾಯತೇ ತದನಂತಂ ವೈ ಗದಾಮಾಧಸನ್ನಿಧೌ ॥ ೪೪ ॥
ಶ್ರೀಗದಾಮಾಧವಂ ನಿತ್ಯಂ ಪೂಜಾಸಂಭಾರವಿಸ್ತರೈಃ ।
ಯಮಸ್ಸಂಪೂಜ್ಯ ಧರ್ಮಾತ್ಮಾ ಗೃಣಾತಿ ಚ ಯಥಾಮತಿ ॥ ೪೫ ॥
ಕದಾಚಿದಾಗತಾಸ್ತತ್ರ ಚತುಷ್ಷಷ್ಟಿಕಲಾ ದ್ವಿಜಾಃ ।
ಸಂಪೂಜ್ಯ ಪ್ರಾರ್ಥಯಾಮಾಸುಃ ಶ್ರೀಗದಾಮಾಧವಂ ಪ್ರಭುಃ ॥ ೪೬ ॥

**ಸೂತರು ಹೇಳಿದರು—**

ಆದ್ದರಿಂದ ಇಲ್ಲಿಗೆ ಬಂದು ಮಾಧವನನ್ನು ಪೂಜಿಸುವವರಿಗೆ, ಪೊಗಳುವವರಿಗೆ ಮತ್ತು ನಮಸ್ಕಾರ ಮಾಡುವವರಿಗೆ ಆ ದೇವತೆಗಳು ಸಕಲವನ್ನೂ ಕೊಟ್ಟು ಅನುಗ್ರಹಿಸುವರು. ॥ ೩೯ ॥ ಅನಂತರ ಮುನಿಶ್ರೇಷ್ಠರೇ! ಯಮದೇವರ ದಿಕ್ಕಿನಲ್ಲಿರುವ ಯಮಕ್ಷೇತ್ರದಲ್ಲಿ ಗದಾಮಾಧವನೆಂಬ ಹೆಸರಿನಿಂದ ಶ್ರೀಹರಿಯು ಇದ್ದಾನೆ; ಇದು ಮೂರನೆಯ ಹರಿಪೀಠವು. ॥ ೪೦ ॥ ಇವನು ಮನಸ್ಸಿಗೆ ಖೇದವನ್ನುಂಟುಮಾಡುವ ದುಷ್ಟಪ್ರವೃತ್ತಿಯುಳ್ಳವರನ್ನೆಲ್ಲಾ ಗದೆಯಿಂದ ಘಾಸಿಪಡಿಸಿ ಧರ್ಮವನ್ನು ಮಾಡಿಸುತ್ತಾನೆ. ॥ ೪೧ ॥ ವೈಶಾಖಮಾಸದಲ್ಲಿ ಯಾರು ಈ ಗದಾಮಾಧವನನ್ನು ಬೇಕಾದ ಪೂಜಾಸಾಮಗ್ರಿಗಳಿಂದ ಮಾಸವಾಗಲೀ, ಪಕ್ಷವಾಗಲೀ, ಪಕ್ಷಾರ್ಧವಾಗಲೀ ಕೊನೆಗೆ ಐದು, ಮೂರು ಅಥವಾ ಒಂದು ದಿವಸವಾಗಲೀ ಪೂಜಿಸುವರೋ ಇವರಿಗೆ ಮರಣಭಯವೇ ಇಲ್ಲವಾಗುವುದು. ॥ ೪೨-೪೩ ॥ ಈ ಗದಾಮಾಧವನ ಸನ್ನಿಧಿಯಲ್ಲಿ ಏನು ದಾನ ಮಾಡಿದರೂ, ಹೋಮ ಮಾಡಿದರೂ ಮತ್ತು ಸ್ತೋತ್ರ ಮಾಡಿದರೂ ಶ್ರೀ ಮಾಧವನ ಅನುಗ್ರಹದಿಂದ ಅವುಗಳ ಫಲಗಳು ಅನಂತವಾಗುವುವು. ॥ ೪೪ । ಧರ್ಮಾತ್ಮರಾದ ಯಮದೇವರು ಪ್ರತಿನಿತ್ಯವೂ ಸಕಲ ಪೂಜಾ ಸಾಮಗ್ರಿಗಳೊಡನೆ ಶ್ರೀಗದಾಮಾಧವನನ್ನು ಪೂಜಿಸುವರು ಮತ್ತು ಸ್ತೋತ್ರ ಮಾಡುವರು. ॥ ೪೫ ॥ ಎಲೈ ಮುನಿಗಳಿರಾ, ಒಂದಾನೊಂದು ಸಲ ಅರವತ್ತನಾಲ್ಕು ಕಲೆಗಳ ಅಭಿಮಾನಿಗಳಾದ ದೇವತೆಗಳು, ಪ್ರಭುವಾದ ಶ್ರೀಗದಾಮಾಧವದೇವರನ್ನು ಪೂಜಿಸಿ ಪ್ರಾರ್ಥನೆ ಮಾಡಿದರು. ॥ ೪೬ ॥

**ಕಲಾ ಊಚುಃ—**

> **ಭ್ರಮಿತ್ವಾ ಸಕಲೇ ಲೋಕೇ ಪರಿಶ್ರಾಂತಾ ವಯಂ ವಿಭೋ ।**
> **ತ್ವತ್ಸಕಾಶಂ ವಯಂ ಪ್ರಾಪ್ತಾಃ ಪ್ರಸೀದಾನುಗ್ರಹಂ ಕುರು ॥ ೪೭ ॥**
> **ಉಷಿತ್ವಾತ್ರ ಯಥಾಕಾಮಂ ಕರಿಷ್ಯಾಮಸ್ತವೇಪ್ಸಿತಮ್ ।**
> **ನಾನ್ಯತ್ರೇತೋ ಗಮಿಷ್ಯಾಮೋ ಗದಾಮಾಧವ ಶಾಧಿ ನಃ ॥ ೪೮ ॥**

**ಅರವತ್ತನಾಲ್ಕು ಕಲೆಗಳ ಅಭಿಮಾನಿಗಳಾದ ದೇವತೆಗಳು ಹೇಳಿದರು—**

"ಹೇ ಪ್ರಭುವೇ! ಎಲ್ಲ ಲೋಕಗಳಲ್ಲಿಯೂ ಸಂಚರಿಸಿ ನಾವು ಬಳಲಿದ್ದು, ಈಗ ನಿನ್ನ ಹತ್ತಿರಕ್ಕೆ ಬಂದಿದ್ದೇವೆ. ಸಂತುಷ್ಟನಾಗಿ ಅನುಗ್ರಹಿಸು ॥ ೪೭ ॥ ಗದಾಮಾಧವನೇ! ನಾವು ಇಲ್ಲಿಯೇ ವಾಸ ಮಾಡಿಕೊಂಡಿದ್ದು ತಮ್ಮ ಮನಸ್ಸಿನ ಇಂಗಿತದಂತೆ ಮಾಡುತ್ತೇವೆ. ಇಲ್ಲಿಂದ ಬೇರೆಲ್ಲಿಗೂ ಹೋಗುವುದಿಲ್ಲ. ನಮ್ಮನ್ನು ಕಾಪಾಡು." ॥ ೪೮ ॥

**ಗದಾಮಾಧವ ಉವಾಚ—**

> **ಭವತ್ಯೋಽತ್ರೈವ ತಿಷ್ಠಂತು ಕುರ್ವಂತು ಚ ಮಮೇಪ್ಸಿತಮ್ ।**
> **ಫಲಂ ಯಚ್ಛಂತು ಲೋಕಾನಾಮಾಗಚ್ಛಂತು ಮಮಾಶ್ರಮಾನ್ ॥ ೪೯ ॥**
> **ಯಾತ್ರಾರ್ಥಂ ಯೇ ಸಮಾಯಾಂತಿ ಜ್ಞಾನಿನೋಽಜ್ಞಾನಿನೋ ಜನಾಃ ।**
> **ನರಾ ವಾ ಯದಿ ವಾ ನಾರ್ಯೋ ಯೂಯಂ ತೇಷಾಂ ಪ್ರಸೀದತ॥ ೫೦ ॥**

ಗದಾಮಾಧವನು ಹೇಳಿದನು—

"ತಾವುಗಳು ಇಲ್ಲಿಯೇ ಉಳಿಯಿರಿ. ನನ್ನ ಮನಸ್ಸಿನ ಅಪೇಕ್ಷೆಯಂತೆ ನಡೆದುಕೊಳ್ಳಿರಿ. ಯಾತ್ರಾರ್ಥಿಗಳಾಗಿ ನನ್ನ ಆಶ್ರಮಕ್ಕೆ ಬರುವ ಯಾತ್ರಿಕರು ಪುರುಷರಾಗಿರಲಿ, ಸ್ತ್ರೀಯರಾಗಿರಲಿ, ಜ್ಞಾನಿಗಳಾಗಿರಲಿ ಅಥವಾ ಅಜ್ಞಾನಿಗಳಾಗಿರಲಿ, ನೀವು ಅವರಿಗೆ ಫಲಗಳನ್ನು ಕೊಟ್ಟು ಸಂತೋಷದಿಂದ ಇಡಿರಿ." ॥ ೪೯-೫೦ ॥

ಸೂತ ಉವಾಚ—

ಶ್ರುತ್ವೇತ್ಥಂ ಭಗವದ್ವಾಕ್ಯಂ ಬಾಢಮುಕ್ತ್ವಾ ಮಹರ್ಷಯಃ ।
ಗದಾಮಾಧವವಾಕ್ಯೇನ ಸುಖಂ ತತ್ರೈವ ಸಂಸ್ಥಿತಾಃ ॥ ೫೧ ॥
ತದತ್ರ ಯೇ ಜನಾ ಯಾಂತಿ ಪೂಜಯಂತಿ ಚ ಮಾಧವಮ್ ।
ಕಲಾವಂತೋ ಭವಂತ್ಯೇತೇ ಗದಾಮಾಧವಶಾಸನಾತ್ ॥ ೫೨ ॥
ಸ್ವಶಕ್ತ್ಯಾನೇಕದಾನಾನಿ ಕಿಂಚಿದ್ದಾನಮಥಾಪಿ ವಾ ।
ಫಲಪುಷ್ಪಾದಿಕಂ ವಾಪಿ ದದತಾಮತುಲಂ ಫಲಮ್ ॥ ೫೩ ॥
ಮಯ್ಯೈವಂ ವರ್ಣಿತಾ ವಿಪ್ರಾ ಮಾಧವಾಷ್ಷಟ್ಸುಖಪ್ರದಾಃ ।
ಭವತಾಂ ಪರಮಪ್ರೀತ್ಯೈ ವರ್ಣಯಿಷ್ಯಾಮಿ ಚಾಪರಾನ್ ॥ ೫೪ ॥

॥ ಇತಿ ತ್ರಿಸಪ್ತತಿತಮೋಽಧ್ಯಾಯಃ ॥

ಸೂತರು ಹೇಳಿದರು—

ಎಲೈ ಮಹರ್ಷಿಗಳೇ, ಈ ರೀತಿಯಾಗಿ ಹೇಳಲ್ಪಟ್ಟ ಗದಾಮಾಧವನ ವಾಕ್ಯಗಳನ್ನು ಕೇಳಿದ ದೇವತೆಗಳು ಅವನ ಆಣತಿಯಂತೆ ಸುಖವಾಗಿ ಅಲ್ಲಿಯೇ ನೆಲಸಿದರು. ॥ ೫೧ ॥ ಆದ್ದರಿಂದ ಈ ಕ್ಷೇತ್ರಕ್ಕೆ ಹೋಗಿ ಗದಾಮಾಧವನನ್ನು ಯಾರು ಪೂಜಿಸುತ್ತಾರೋ ಅವರು ಶ್ರೀಮಾಧವನ ಆಜ್ಞೆಯಂತೆ ಸಕಲ ಕಲಾಭಿಜ್ಞರಾಗುತ್ತಾರೆ. ॥ ೫೨ ॥ ಈ ಸನ್ನಿಧಿಯಲ್ಲಿ ಶಕ್ತರು ಅನೇಕ ದಾನಗಳನ್ನು, ಇಲ್ಲವಾದಲ್ಲಿ ಹೂವು ಹಣ್ಣು ಇತ್ಯಾದಿ ಸ್ವಲ್ಪದಾನವನ್ನಾದರೂ ಮಾಡಿದರೆ ಅದರಿಂದ ಅಧಿಕವಾದ ಫಲವು ದೊರೆಯುವುದು ॥ ೫೩ ॥ ಹೇ ವಿಪ್ರೋತ್ತಮರೇ! ನನ್ನಿಂದ ಸುಖವನ್ನು ಕೊಡುವ ಆರು ಬಗೆಯ ಶ್ರೀಮಾಧವದೇವರ ರೂಪಗಳು ವರ್ಣಿಸಲ್ಪಟ್ಟವು. ತಮ್ಮಗಳ ಹೆಚ್ಚಿನ ಸಂತೋಷಕ್ಕಾಗಿ ಬೇರೆ ರೂಪಗಳನ್ನು ವರ್ಣಿಸುವೆನು." ॥ ೫೪ ॥

॥ ಎಪ್ಪತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುಸ್ಸಪ್ತತಿತಮೋಽಧ್ಯಾಯಃ ॥ ೭೪ ॥

ಸೂತ ಉವಾಚ—

ಕ್ಷೇತ್ರಸ್ಯ ನೈರ್ಋತೇ ಭಾಗೇ ವರ್ತತೇ ಪದ್ಮಮಾಧವಃ ।
ಚತುರ್ಥೇ ವೈಷ್ಣವೇ ಪೀಠೇ ಯೋಗಿನಾಂ ಸಿದ್ಧಿದಾಯಕೇ ॥ ೧ ॥
ಪದ್ಮಮಾಲಾವಿನೀತಾಂಗಃ ಪದ್ಮಗರ್ಭಾರುಣೇಕ್ಷಣಃ ।
ಸ್ಥಿತ್ವೈತದಖಿಲಂ ಕ್ಷೇತ್ರಂ ಪಾತಿ ಸರ್ವಭಯಾದಸೌ ॥ ೨ ॥
ಪ್ರಿಯಯಾ ಪೂಜ್ಯತೇ ನಿತ್ಯಂ ಸಹಸ್ರೈಃ ಪದ್ಮಕುಡ್ಮಲೈಃ ।
ನಾನೋಪಚಾರೈರ್ಭೂಷಾಭಿಃ ಪದ್ಮಯಾ ಪದ್ಮಹಸ್ತಯಾ ॥ ೩ ॥
ಕದಾಚಿತ್ಪರಯಾ ಭಕ್ತ್ಯಾ ಪೂಜ್ಯೈನಂ ಪದ್ಮಮಾಧವಮ್ ।
ಪ್ರಣಮ್ಯ ಪುರತಃ ಸ್ಥಿತ್ವಾ ಬದ್ಧಾಂಜಲಿಃ ಪುರಾಬ್ರವೀತ್ ॥ ೪ ॥

## ॥ ಎಪ್ಪತ್ತನಾಲ್ಕನೆಯ ಅಧ್ಯಾಯವು ॥

ಸೂತರು ಹೇಳಿದರು—

ಈ ಪ್ರಯಾಗಕ್ಷೇತ್ರದ ನೈಋತ್ಯಭಾಗದಲ್ಲಿ ಪದ್ಮಮಾಧವನು ಇದ್ದಾನೆ. ಇದು ನಾಲ್ಕನೆಯ ವೈಷ್ಣವಕ್ಷೇತ್ರವು. ಇದು ಯೋಗಿಗಳಿಗೂ ಸಿದ್ಧಿಯನ್ನುಕೊಡತಕ್ಕ ಸ್ಥಳವು. ॥ ೧ ॥ ಈ ಪದ್ಮಮಾಧವನು ಪದ್ಮಗಳ ಹಾರದಿಂದ ಅಲಂಕೃತವಾದ ಶರೀರವುಳ್ಳವನು, ಕಮಲದ ಮಧ್ಯದಲ್ಲಿರುವ ಕೆಂಪು ಬಣ್ಣದಂತೆ ಕೆಂಪಗಿರುವ ಅರುಣೇಕ್ಷನೂ ಆಗಿದ್ದಾನೆ. ಇವನು ಈ ನೈಋತ್ಯ ಭಾಗದಲ್ಲಿ ಇದ್ದು ಈ ಕ್ಷೇತ್ರವನ್ನು ಎಲ್ಲ ಭಯದಿಂದಲೂ ರಕ್ಷಿಸುತ್ತಿದ್ದಾನೆ. ॥ ೨ ॥ ತನ್ನ ಪ್ರಿಯೆಯಾದ ಪದ್ಮಪಾಣಿಯಾದ ಲಕ್ಷ್ಮೀದೇವಿಯಿಂದ ನಿತ್ಯವೂ ನಾನಾ ಉಪಚಾರಗಳಿಂದ, ಆಭರಣಗಳಿಂದ, ಸಹಸ್ರಕಮಲದ ಮೊಗ್ಗುಗಳಿಂದ ಪೂಜಿಸಲ್ಪಡುತ್ತಾನೆ. ॥ ೩ ॥ ಶ್ರೀಲಕ್ಷ್ಮೀದೇವಿಯು ಒಂದು ಸಲ ಭಕ್ತಿಯಿಂದ ಇವನನ್ನು ಪೂಜಿಸಿ ನಮಸ್ಕಾರ ಮಾಡಿ ಎದುರಿಗೆ ನಿಂತು ಕೈಗಳನ್ನು ಜೋಡಿಸಿ ಈ ರೀತಿಯಾಗಿ ಬಿನ್ನವಿಸಿಕೊಂಡಳು. ॥ ೪ ॥

ಪದ್ಮೋವಾಚ—

ಭಗವನ್ಪದ್ಮಪತ್ರಾಕ್ಷ ಪುಣ್ಯಶ್ಲೋಕಶಿಖಾಮಣೇ ।
ಭವಾನ್ವೈಕುಂಠಭವನಂ ತ್ಯಕ್ತ್ವಾತ್ರೈವ ಸಮಾಗತಃ ॥ ೫ ॥
ತ್ವದ್ವಿನಾ ತತ್ರ ಮೇ ವಾಸೋ ಜಾಯತೇ ನ ಸುಖಾವಹಃ ।
ಅಥಸ್ತ್ವತ್ಪಾದಪಾಥೋಜಮಹಂ ಸೇವಿತುಮಾಗತಾ ॥ ೬ ॥
ತವಾತ್ರಾಗಮನಂ ಕಸ್ಮಾದಭೂದ್ವೈಕುಂಠವಾಸಿನಃ ।
ಇತಿ ಜ್ಞಾತುಂ ಚ ತತ್ತ್ವಂ ಮಾಂ ಕೃಪಯಾ ವದ ಸತ್ವರಮ್ ॥ ೭ ॥

ಶ್ರೀಲಕ್ಷ್ಮೀದೇವಿಯು ಹೇಳಿದಳು—

''ಅವ್ಯಾಹತ ಷಡ್ಗುಣೈಶ್ವರ್ಯಸಂಪನ್ನನಾದವನೇ! ಪದ್ಮದ ದಳದಂತೆ ಕಣ್ಣುಗಳುಳ್ಳವನೇ!

ಪುಣ್ಯಕರವಾಗಿ ಕೀರ್ತಿಮಾಡಿಸಿಕೊಳ್ಳುವವರಲ್ಲಿ ಶ್ರೇಷ್ಠನೇ! ತಾವು ವೈಕುಂಠನಗರವನ್ನು ಬಿಟ್ಟು ಇಲ್ಲಿಯೇ ನೆಲಸಿದ್ದೀರಿ. ॥ ೫ ॥ ನೀವಿಲ್ಲದೆ ಅಲ್ಲಿ ನನ್ನ ವಾಸವು ಸುಖಕರವಾಗಿಲ್ಲ. ಆದ್ದರಿಂದ ತಮ್ಮ ಪಾದಕಮಲಗಳನ್ನು ಸೇವಿಸಲು ನಾನು ಇಲ್ಲಿಗೆ ಬಂದಿದ್ದೇನೆ. ॥ ೬ ॥ ವೈಕುಂಠದಲ್ಲಿ ವಾಸಮಾಡಬೇಕಾಗಿರುವ ತಮ್ಮ ಆಗಮನವು ಈ ಕ್ಷೇತ್ರಕ್ಕೆ ಹೇಗೆ ಆಯಿತು? ಈ ವಿಷಯದ ಯಥಾರ್ಥತೆಯನ್ನು ತಿಳಿಯಬಯಸುತ್ತೇನೆ. ತಾವು ದಯಮಾಡಿ ಹೇಳಬೇಕು.'' ॥ ೭ ॥

ಪದ್ಮಮಾಧವ ಉವಾಚ—

ಪದ್ಮೇ ಪದ್ಮಪಲಾಶಾಕ್ಷಿ ವೈಕುಂಠಾದಧಿಕಂ ಮಮ ।
ಪ್ರಯಾಗಾಖ್ಯಮಿದಂ ಕ್ಷೇತ್ರಮಸ್ತಿ ಯದ್ವಲ್ಲಭಂ ಮಮ ॥ ೮ ॥
ತಸ್ಮಾದತ್ರೈವ ಮೇ ವಾಸೋ ರೋಚತೇ ಕಮಲಾಲಯೇ ।
ತ್ವಮಪ್ಯತ್ರೈವ ತಿಷ್ಠಸ್ವ ಮದಾರಾಧನತತ್ಪರಾ ॥ ೯ ॥
ಪೀಠೇಽಸ್ಮಿನ್ಯೇ ಸಮಾಯಾಂತಿ ಮದ್ಭಕ್ತಾ ಯಾತ್ರಿಕಾ ಜನಾಃ ।
ಪ್ರಸನ್ನಾ ಭವ ತೇಭ್ಯಸ್ತ್ವಂ ಮದ್ವಾಕ್ಯಾದವಿಶಂಕಿತಾ ॥ ೧೦ ॥

ಪದ್ಮಮಾಧವನು ಹೇಳಿದನು—

''ಪದ್ಮದಳದಂತೆ ಕಣ್ಣುಗಳುಳ್ಳವಳೇ! ಈ ಪ್ರಯಾಗವೆಂಬ ಕ್ಷೇತ್ರವು ನನಗೆ ವೈಕುಂಠಕ್ಕಿಂತಲೂ ಹೆಚ್ಚು ಶ್ರೇಷ್ಠವೂ, ಪ್ರಿಯಕರವೂ ಆದುದು. ॥ ೮ ॥ ಎಲೈ ಕಮಲದಲ್ಲಿ ಹುಟ್ಟಿದವಳೇ! ಈ ಕಾರಣದಿಂದಲೇ ನಾನು ಇಲ್ಲಿಯೇ ಇರಲು ಬಯಸುತ್ತೇನೆ. ನೀನೂ ಕೂಡ ನನ್ನನ್ನು ಆರಾಧನೆ ಮಾಡಿಕೊಂಡು ಇಲ್ಲಿಯೇ ವಾಸಿಸು. ॥ ೯ ॥ ಈ ವೈಷ್ಣವ ಪೀಠಕ್ಕೆ ನನ್ನ ಭಕ್ತರುಗಳು ಯಾತ್ರಿಕರಾಗಿ ಬರುತ್ತಾರೆ. ನನ್ನ ಮಾತಿನಿಂದ ನಿಶ್ಶಂಕಳಾಗಿ ಅವರ ವಿಷಯದಲ್ಲಿ ನೀನು ಪ್ರಸನ್ನಳಾಗು'' ಎಂದು ಆಜ್ಞಾಪಿಸಿದರು. ॥ ೧೦ ॥

ಸೂತ ಉವಾಚ—

ಇತಿ ಪ್ರಿಯವಚಃ ಶ್ರುತ್ವಾ ಪದ್ಮಾ ಪದ್ಮದಲೇಕ್ಷಣಾ ।
ಚಕಾರ ವಸತಿಂ ತತ್ರ ಪೀಠೇ ಸಂಹೃಷ್ಟಮಾನಸಾ ॥ ೧೧ ॥
ಅತೋ ಗಚ್ಛಂತಿ ಯೇ ತತ್ರ ನರಾ ನಾರ್ಯೋಽಮಲಾಶಯಾಃ ।
ಪೂಜಯಂತ್ಯುಪಚಾರೈಶ್ಚ ಭಕ್ತ್ಯಾ ಶ್ರೀಪದ್ಮಮಾಧವಮ್ ॥ ೧೨ ॥
ಸೌಭಾಗ್ಯಮಚಲಾಂ ಲಕ್ಷ್ಮೀಂ ಪುತ್ರಪೌತ್ರಾದಿಸಂಪದಃ ।
ಲಭಂತೇಽತ್ರ ಪರಾಂ ಭಕ್ತಿಂ ಪರತ್ರ ಚ ಪರಾಂ ಗತಿಮ್ ॥ ೧೩ ॥
ಸ್ನಾನಂ ದಾನಂ ತಪೋ ಹೋಮಂ ಜಪಶ್ರಾದ್ಧಾದಿಕಾಃ ಕ್ರಿಯಾಃ ।
ವಿಕಟೇ ಯೇ ಕರಿಷ್ಯಂತಿ ತೇಷಾಂ ತುಷ್ಯತಿ ಮಾಧವಃ ॥ ೧೪ ॥
ನಿರ್ಋತಿಃ ಶ್ರದ್ಧಯಾ ತತ್ರ ಶ್ರಾದ್ಧಾನಿ ವಿಧಿಪೂರ್ವಕಮ್ ।
ವಿಧಾಯ ಮಾಧವಂ ದೇವಂ ಸಂತೋಷಯತಿ ನಿತ್ಯಶಃ ॥ ೧೫ ॥
ಕ್ಷೇತ್ರಸ್ಯ ಪಶ್ಚಿಮೇ ಭಾಗೇ ದ್ಯೋತತೇಽನಂತಮಾಧವಃ ।

ಪಂಚಮೇ ವೈಷ್ಣವೇ ಪೀಠೇ ವರುಣಾಶ್ರಮಸನ್ನಿಧೌ ॥ ೧೬ ॥
ವರುಣಸ್ತತ್ರ ತಂ ಭಕ್ತ್ಯಾ ಸಂಪೂಜ್ಯ ವಿಮಲಾಶಯಃ ।
ವಿಚಿತ್ರೈರ್ವಿವಿಧೈಃ ಸ್ತೋತ್ರೈಸ್ತುವನ್ನಾಸ್ತೇ ಸದಾಚಲಃ ॥ ೧೭ ॥
ತತ್ರೈಕದಾ ಸಮಾಜಗ್ಮುರ್ದೇವಾ ಸೂರ್ಯಪುರೋಗಮಾಃ ।
ಪೂಜಯಾಂಚಕ್ರಿರೇ ಭಕ್ತ್ಯಾನಂತಮಾಧವಮಾದರಾತ್ ॥ ೧೮ ॥
ಸಂಪೂಜ್ಯ ವಿವಿಧೈರ್ದ್ರವ್ಯೈರಾನಂದಾಶ್ರುಭಿರಾಕುಲಾಃ ।
ಪುಲಕೋದ್ಭಿನ್ನಸರ್ವಾಂಗಾ ತುಷ್ಟುವುರ್ಜಗದೀಶ್ವರಮ್ ॥ ೧೯ ॥

**ಸೂತರು ಹೇಳಿದರು—**

ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ ಕಮಲದಂತೆ ಕಣ್ಣುಳ್ಳ ಲಕ್ಷ್ಮೀದೇವಿಯು ಆ ಪೀಠದಲ್ಲಿ ಸಂತೋಷದಿಂದ ವಾಸಮಾಡಿದಳು. ॥ ೧೧ ॥ ಆದ್ದರಿಂದ ಯಾವ ಪುರುಷನಾಗಲೀ ಸ್ತ್ರೀಯಾಗಲೀ ಈ ನಿರ್ಋತಿಯ ಆಶ್ರಮವಾದ ವಿಕರಕ್ಷೇತ್ರಕ್ಕೆ ಹೋಗಿ ಅಲ್ಲಿ ಸಾತ್ವಿಕವಾದ ಭಾವನೆಗಳುಳ್ಳವರಾಗಿ ಭಕ್ತಿಯಿಂದ ಶ್ರೀಪದ್ಮಮಾಧವನನ್ನು ಷೋಡಶೋಪಚಾರಗಳಿಂದ ಪೂಜಿಸುವರೋ ಅವರಿಗೆ ಶಾಶ್ವತವಾದ ಸೌಭಾಗ್ಯವೂ ಸಂಪತ್ತೂ, ಮಕ್ಕಳು, ಮೊಮ್ಮಕ್ಕಳುಗಳು ಮುಂತಾದ ಭಾಗ್ಯವೂ ಮತ್ತು ಮಾಧವನಲ್ಲಿ ಪರಮಭಕ್ತಿಯೂ ಬರುವುದಲ್ಲದೆ ಪರಲೋಕದಲ್ಲಿ ಮುಕ್ತಿಯೇ ಮೊದಲಾದುವನ್ನೂ ಹೊಂದುವರು. ॥ ೧೨-೧೩ ॥ ಈ ವಿಕರಕ್ಷೇತ್ರದಲ್ಲಿ ಯಾರು , ಸ್ನಾನ, ದಾನ, ಹೋಮ, ಜಪ ಮತ್ತು ಶ್ರಾದ್ಧ ಇವುಗಳನ್ನು ಮಾಡುವರೋ ಅವರ ವಿಷಯದಲ್ಲಿ ಪದ್ಮಮಾಧವನು ಸಂತುಷ್ಟನಾಗುವನು. ॥ ೧೪ ॥ ನಿರ್ಋತಿಯು ಇಲ್ಲಿ ಶ್ರದ್ಧೆಯಿಂದ ಶ್ರಾದ್ಧಾದಿಗಳನ್ನು ನಿತ್ಯವೂ ಮಾಡಿ ಶ್ರೀಮಾಧವನನ್ನು ಸಂತೋಷಗೊಳಿಸುವನು. ॥ ೧೫ ॥ ಇನ್ನು ಪ್ರಯಾಗ ಕ್ಷೇತ್ರದ ಪಶ್ಚಿಮಭಾಗದಲ್ಲಿ ಅನಂತ ಮಾಧವನೆಂಬ ಶ್ರೀಹರಿಯ ಮೂರ್ತಿಯಿರುವುದು. ಇದು ವರುಣಾಶ್ರಮದ ಸನ್ನಿಧಿಯಲ್ಲಿದ್ದು ಐದನೇ ವೈಷ್ಣವ ಪೀಠವಾಗಿದೆ ॥ ೧೬ ॥ ಪಶ್ಚಿಮದಿಕ್ಪಾಲಕನಾದ ವರುಣನು ಇಲ್ಲಿ ಈ ಅನಂತಮಾಧವನನ್ನು ಭಕ್ತಿಯಿಂದ ಪೂಜಿಸಿ, ಸದಭಿಪ್ರಾಯದಿಂದ ವಿಚಿತ್ರವಾದ ನಾನಾಸ್ತೋತ್ರಗಳಿಂದ ಸ್ತೋತ್ರ ಮಾಡುತ್ತಾ ಅಲ್ಲಿಯೇ ಸ್ಥಿರವಾಗಿ ಇದ್ದಾನೆ. ॥ ೧೭ ॥ ಒಂದು ಸಾರಿ ಸೂರ್ಯನೇ ಮೊದಲಾದ ದೇವತೆಗಳು ಈ ವರುಣಾಶ್ರಮಕ್ಕೆ ಬಂದು ಭಕ್ತಿಯಿಂದಲೂ, ಆದರದಿಂದಲೂ ಅನಂತಮಾಧವನನ್ನು ಪೂಜಾ ಮಾಡಿದರು. ॥ ೧೮ ॥ ವಿವಿಧಸಾಮಗ್ರಿಗಳಿಂದ ಅನಂತಮಾಧವನನ್ನು ಪೂಜಾ ಮಾಡಿ ಆನಂದಾಶ್ರುಗಳನ್ನು ಸುರಿಸುತ್ತಾ ರೋಮಾಂಚನಗೊಂಡರು, ನಂತರ ಜಗದೀಶ್ವರನನ್ನು ಪ್ರಾರ್ಥಿಸಿದರು. ॥ ೧೯ ॥

**ದೇವಾ ಊಚುಃ—**

ಹರೇ ಸರ್ವಜಗನ್ನಾಥ ಜಗದ್ವಂದ್ಯ ಜಗನ್ಮಯ ।
ಜಗದಾಧಾರ ಭೂತೇಶ ಹೃಷೀಕೇಶ ನಮೋಽಸ್ತು ತೇ ॥ ೨೦ ॥
ಭಕ್ತಕಾಮಪ್ರದಾನಂತ ಭಕ್ತಾನಾಮಭಯಂಕರ ।
ಭಜನೀಯ ಪರಸ್ವಾಮಿನ್ಕೃಪಯಾನುಗೃಹಾಣ ನಃ ॥ ೨೧ ॥

ತ್ವಾಮತ್ರಾಗತಮಾಜ್ಞಾಯ ವಯಂ ಸರ್ವೇ ಸಮಾಗತಾಃ ।
ಆಜ್ಞಾಂ ದೇಹಿ ಸ್ವಭೃತ್ಯೇಷು ಪ್ರಸೀದ ಕರವಾಮ ಕಿಮ್ ॥ ೨೨ ॥
ಇತಿ ದೇವವಚಃ ಶ್ರುತ್ವಾ ಪ್ರಸನ್ನೋಽನಂತಮಾಧವಃ ।
ತಾನೂಚೇ ವಚನಂ ರಮ್ಯಂ ಮುನಯಶ್ಶೌನಕಾದಯಃ ॥ ೨೩ ॥

ಸೂರ್ಯಾದಿ ದೇವತೆಗಳು ಹೇಳಿದರು—

ಹರಿಯೇ! ಎಲ್ಲ ಜಗತ್ತಿನ ಸ್ವಾಮಿಯೇ! ಜಗತ್ತಿಗೇ ಮುಖ್ಯವಂದ್ಯನಾದವನೇ! ಜಗತ್ತಿನ ಒಳಗೂ ಹೊರಗೂ ನಿಯಾಮಕನೂ ಪ್ರಧಾನನೂ ಆಗಿ ಜಗನ್ಮಯನೆಂದೆನಿಸಿಕೊಂಡವನೇ! ಜಗತ್ತಿಗೇ ಮುಖ್ಯಾಶ್ರಯನೇ! ಸಮಸ್ತ ಜೀವಿಗಳಿಗೂ ಪಂಚಭೂತಗಳಿಗೂ ಸ್ವಾಮಿಯೇ, ಇಂದ್ರಿಯಗಳಿಗೆ ನಿಯಾಮಕನಾಗಿ ಅವುಗಳ ಸ್ವಾಮಿಯಾಗಿರುವವನೇ! ನಿನಗೆ ನಮಸ್ಕಾರಗಳು. ॥ ೨೦ ॥ ಭಕ್ತರ ಅಭೀಷ್ಟಗಳನ್ನು ಕೊಡತಕ್ಕವನೇ! ದೇಶತಃ ಕಾಲತಃ ಅಂತವಿಲ್ಲದವನೇ! ಭಕ್ತರಿಗೆ ಅಭಯವನ್ನುಂಟುಮಾಡುವವನೇ! ರಮಾಬ್ರಹ್ಮರುದ್ರಾದಿ ಸಮಸ್ತರಿಂದಲೂ ನಮಸ್ಕರಿಸಲ್ಪಡ ತಕ್ಕವನೇ! ಸರ್ವೋತ್ತಮನಾಗಿ ಎಲ್ಲರಿಗೂ ಸ್ವಾಮಿಯಾದವನೇ! ದಯಮಾಡಿ ನಮ್ಮ ಮೇಲೆ ಅನುಗ್ರಹಿಸು. ॥ ೨೧ ॥ ನೀನು ಇಲ್ಲಿಗೆ ಬಂದಿರುವುದು ತಿಳಿದು ನಾವೆಲ್ಲರೂ ಇಲ್ಲಿಗೆ ಬಂದಿದ್ದೇವೆ. ನಾವೆಲ್ಲರೂ ನಿನ್ನ ಭೃತ್ಯರು. ನೀನು ಸಂತೋಷದಿಂದ ನಮಗೆ ಆಜ್ಞೆ ಮಾಡು! ಅದನ್ನೆಲ್ಲಾ ಮಾಡುವೆವು. ॥ ೨೨ ॥ ಎಲೈ ಶೌನಕಾದಿ ಮುನಿಗಳಿರಾ! ಈ ರೀತಿಯಾಗಿ ಹೇಳಿದ ದೇವತೆಗಳ ಪ್ರಾರ್ಥನೆಯನ್ನು ಕೇಳಿದ ಅನಂತ ಮಾಧವನು ಸಂತುಷ್ಟನಾಗಿ ಅವರುಗಳನ್ನು ಕುರಿತು ರಮ್ಯವಾಗಿ ಹೇಳಿದನು. ॥ ೨೩ ॥

ಅನಂತಮಾಧವ ಉವಾಚ—

ಭವಂತೋಽಪ್ಯತ್ರ ತಿಷ್ಠಂತು ಮಾಂ ಭಜಂತು ದಿವೌಕಸಃ ।
ಪೂರಯಂತೋಽಖಿಲಾನ್ಕಾಮಾನ್ಭಕ್ತಾನಾಂ ಮಮ ಸರ್ವದಾ ॥ ೨೪ ॥

ಅನಂತಮಾಧವನು ಹೇಳಿದನು—

"ಎಲೈ ದೇವತೆಗಳಿರಾ! ನೀವು ಇಲ್ಲಿಯೇ ಇದ್ದು ಸರ್ವದಾ ನನ್ನನ್ನು ಸೇವಿಸಿ ಇಲ್ಲಿಗೆ ಬರತಕ್ಕ ಭಕ್ತರ ಸಕಲ ಅಭೀಷ್ಟಗಳನ್ನು ಯಾವಾಗಲೂ ಪೂರೈಸುತ್ತಿರಿ." ॥ ೨೪ ॥

ಸೂತ ಉವಾಚ—

ಇತ್ಯನಂತವಚಸ್ಸರ್ವೇ ಶಿರಸಾ ಗೃಹ್ಯ ಸಾದರಾಃ ।
ತದಾಜ್ಞಾಕಾರಿಣಸ್ತಸ್ಥುರ್ವರುಣಾತ್ರಮಮಂಡಲೇ ॥ ೨೫ ॥
ತತ್ರ ಗತ್ವಾತು ಯೇ ಕೇಚಿತ್ತತ್ರಪುಷ್ಪಫಲಾದಿಭಿಃ ।
ಅನಂತಮಾಧವಂ ಪೂಜ್ಯ ಪ್ರಾಪ್ನುವಂತಿ ಮನೋಗತಮ್ ॥ ೨೬ ॥
ತತ್ರ ಯೇ ಬ್ರಾಹ್ಮಣಾದಿಭ್ಯೋ ವಸನಾನ್ನಜಲಾದಿಕಮ್ ।
ದಾಸ್ಯಂತಿ ಮಾಧವಪ್ರೀತ್ಯೈ ತೇ ಯಾಂತಿ ಪರಮಾಂ ಗತಿಮ್ ॥ ೨೭ ॥

ಅಥ ವಾಯವ್ಯದಿಗ್ಭಾಗೇ ಷಾಷ್ಠೇ ವೈಷ್ಣವಪೀಠಕೇ ।
ವಾಯುಮಂಡಲಮಾಶ್ರಿತ್ಯ ವರ್ತತೇ ಬಿಂದುಮಾಧವಃ ॥ ೨೮ ॥
ಕಲ್ಪದ್ರುಮಪ್ರಸೂನಾನಿ ವಾಯುರಾನೀಯ ನಿತ್ಯಶಃ ।
ಬಿಂದುಮಾಧವಮಭ್ಯರ್ಚ್ಯ ತಂ ಸ್ತೌತಿ ಪುರತಃ ಸ್ಥಿತಃ ॥ ೨೯ ॥
ಅತೋಽತ್ರ ಬಿಂದುನಾಮಾನಂ ಮಾಧವಂ ಯೇಽರ್ಚಯಂತಿ ತೇ ।
ಕೃತಕೃತ್ಯಾಃ ಪ್ರಜಾಯಂತೇ ನಾನಾಜನ್ಮಸು ನಿಶ್ಚಿತಮ್ ॥ ೩೦ ॥
ಕದಾಚಿದಾಗತಾಸ್ತತ್ರ ದೇವಬ್ರಹ್ಮರ್ಷಯೋ ಮುದಾ ।
ಭರದ್ವಾಜಾದಯಃ ಸಪ್ತ ಮಾಧವಾಲೋಕನೋತ್ಸುಕಾಃ ॥ ೩೧ ॥
ಆಗತ್ಯ ಪೂಜಯಿತ್ವೈನಂ ಪ್ರಣಿಪತ್ಯ ಪುರಃ ಸ್ಥಿತಾಃ ।
ಈಡಿರೇ ವೈದಿಕೈಸ್ಸೂಕ್ತೈರ್ಬಿಂದುಮಾಧವತುಷ್ಟಯೇ ॥ ೩೨ ॥
ತೇಷಾಂ ಸ್ತುತಿಂ ಸಮಾಕರ್ಣ್ಯ ಪ್ರಸನ್ನೋ ಬಿಂದುಮಾಧವಃ ।
ಅವಾದೀನ್ಮಂಜುವಚನಮೀಷತ್ಸ್ಮಿತಮುಖಾಂಬುಜಃ ॥ ೩೩ ॥

**ಸೂತರು ಹೇಳಿದರು—**

ಈ ರೀತಿಯಾದ ಶ್ರೀಅನಂತಮಾಧವದೇವರ ಮಾತುಗಳನ್ನು ಕೇಳಿದ ಆ ದೇವತೆಗಳು ಅವನ ಆಜ್ಞಾವನ್ನು ಶಿರಸಾ ಧಾರಣೆಮಾಡಿ ಆ ವರುಣಾಶ್ರಮದಲ್ಲಿ ಆ ಮಾಧವನ ಆಜ್ಞಾವನ್ನು ಪರಿಪಾಲಿಸುತ್ತಾ ಇದ್ದುಬಿಟ್ಟರು. ॥ ೨೫ ॥ ಆ ಆಶ್ರಮಕ್ಕೆ ಯಾತ್ರಿಕರು ಬಂದು ಎಲೆಗಳು, ಹೂವುಗಳು ಮತ್ತು ಹಣ್ಣುಗಳಿಂದ ಕೂಡಿ ಶ್ರೀಅನಂತ ಮಾಧವದೇವರನ್ನು ಪೂಜಿಸಿ ತಮ್ಮ ತಮ್ಮ ಮನೋಭೀಷ್ಟಗಳನ್ನು ಪಡೆಯುತ್ತಾರೆ. ॥ ೨೬ ॥ ಅಲ್ಲಿ ಶ್ರೀಮಾಧವನ ಪ್ರೀತಿಗಾಗಿ ಯಾರು ಬ್ರಾಹ್ಮಣರಿಗೆ ವಸ್ತ್ರ ಅನ್ನ ಮತ್ತು ಜಲ ಇವುಗಳನ್ನು ಕೊಡುತ್ತಾರೋ ಅವರು ಪರಮಗತಿಯನ್ನು ಅಂದರೆ ಮುಕ್ತಿಯನ್ನು ಹೊಂದುತ್ತಾರೆ. ॥ ೨೭ ॥ ಆಮೇಲೆ ವಾಯವ್ಯಭಾಗದಲ್ಲಿರುವ ವಾಯವ್ಯ ಮಂಡಲವನ್ನು ಆಶ್ರಯಿಸಿಕೊಂಡಿರುವ ಶ್ರೀಹರಿಯ ಮೂರ್ತಿಯು "ಬಿಂದುಮಾಧವ"ನೆಂಬುದು. ಇದು ಆರನೆಯ ವೈಷ್ಣವಪೀಠವು. ॥ ೨೮ ॥ ವಾಯುವು ಪ್ರತಿನಿತ್ಯವೂ ಕಲ್ಪವೃಕ್ಷದ ಹೂವುಗಳನ್ನು ತಂದು ಶ್ರೀಬಿಂದುಮಾಧವನನ್ನು ಪೂಜಿಸಿ ಎದುರಿಗೆ ನಿಂತು ಸ್ತೋತ್ರ ಮಾಡುತ್ತಾನೆ. ॥ ೨೯ ॥ ಆದ್ದರಿಂದ ಯಾರು ಇಲ್ಲಿ ಇರುವ ಬಿಂದುಮಾಧವನನ್ನು ಅರ್ಚಿಸುವರೋ ಅವರು ಅನೇಕ ಜನ್ಮಗಳಾದ ಮೇಲೆ ಕೃತಕೃತ್ಯರಾಗುತ್ತಾರೆ. ಇದು ನಿಶ್ಚಯ. ॥ ೩೦ ॥ ಒಂದು ಬಾರಿ ಅಲ್ಲಿಗೆ ದೇವರ್ಷಿಗಳೂ ಬ್ರಹ್ಮರ್ಷಿಗಳೂ ಭರದ್ವಾಜಾದಿಗಳೇ ಮೊದಲಾದ ಸಪ್ತ ಋಷಿಗಳೂ ಶ್ರೀಮಾಧವನ ದರ್ಶನದಲ್ಲಿ ಉತ್ಸುಕರಾಗಿ ಸಂತಸದಿಂದ ಆಗಮಿಸಿದರು. ॥ ೩೧ ॥ ನಂತರ ಈ ಬಿಂದು ಮಾಧವನನ್ನು ಪೂಜಿಸಿ ಇವನಿಗೆ ನಮಸ್ಕರಿಸಿ, ಅವನ ಎದುರಿಗೆ ಕೈಮುಗಿದು ನಿಂತು ವೇದೋಕ್ತವಾದ ಸೂಕ್ತಗಳಿಂದ ಸ್ತೋತ್ರ ಮಾಡಿದರು. ॥ ೩೨ ॥ ಅವರ ಸ್ತುತಿಯನ್ನು ಚೆನ್ನಾಗಿ ಆಲಿಸಿ ಪ್ರಸನ್ನನಾದ ಬಿಂದುಮಾಧವನು ಸ್ವಲ್ಪ ಮುಗುಳು ನಗುತ್ತ ತನ್ನ ಮುಖಕಮಲದಿಂದ ನುಡಿದನು. ॥ ೩೩ ॥

**ಬಿಂದುಮಾಧವ ಉವಾಚ—**

ಕಿಮರ್ಥಮಾಗತಾ ಯೂಯಂ ಕಶ್ಯಪಾದ್ಯಾ ಮಹರ್ಷಯಃ ।
ತದ್ಬ್ರೂತ ಕಾರಣಂ ತಥ್ಯಂ ಮಾ ವಿಲಂಬೋ ವಿಧೀಯತಾಮ್ ॥ ೩೪ ॥
ಶ್ರುತ್ವಾ ತೇ ವಚನಂ ಬಿಂದುಮಾಧವೀಯಂ ಮನೋರಮಮ್ ।
ಪ್ರಹೃಷ್ಟಾಃ ಪುನರೂಚುಸ್ತಂ ಸಾರಾಸಾರವಿಚಕ್ಷಣಾಃ ॥ ೩೫ ॥

**ಬಿಂದುಮಾಧವನು ಹೇಳಿದನು—**

ಎಲೈ ಕಶ್ಯಪಾದಿ ಮಹರ್ಷಿಗಳೇ! ಏತಕ್ಕಾಗಿ ತಾವುಗಳು ಬಂದಿದ್ದೀರಿ? ಈ ವೃತ್ತಾಂತವೆಲ್ಲವನ್ನು ವಿಳಂಬಮಾಡದೆ ಯಥಾರ್ಥವಾಗಿ ಹೇಳಿರಿ. ॥ ೩೪ ॥ ಜಗತ್ತಿನ ಸಾರಾಸಾರವನ್ನು ತಿಳಿದ ಮಹರ್ಷಿಗಳು ಬಿಂದುಮಾಧವದೇವರ ಮನೋಹರವಾದ ಈ ಮಾತನ್ನು ಕೇಳಿ ಸಂತುಷ್ಟರಾಗಿ ಮಾಧವನನ್ನು ಕುರಿತು ಹೇಳಿದರು. ॥ ೩೫ ॥

**ಕಶ್ಯಪಾದಯ ಊಚುಃ—**

ನಮಸ್ತೇ ಪುರುಷಾಧ್ಯಕ್ಷ ಬಿಂದುಮಾಧವ ತೇ ನಮಃ ।
ದ್ರಷ್ಟುಂ ತ್ವಾಂ ವಯಮಾಯಾತಾಸ್ಸೇವಿತುಂ ಚ ಜಗತ್ಪತೇ ॥ ೩೬ ॥

**ಕಶ್ಯಪಾದಿ ಋಷಿಗಳು ಹೇಳಿದರು—**

ಕ್ಷರಾಕ್ಷರಪುರುಷರಿಗಿಂತ ಅತ್ಯಂತ ಉತ್ತಮನಾಗಿರುವವನೇ! ಬಿಂದುಮಾಧವನೆಂಬ ಹೆಸರಿನಿಂದ ವಿರಾಜಮಾನನಾಗಿರುವ ಶ್ರೀಹರಿಯೇ! ನಿನಗೆ ನಮಸ್ಕಾರಗಳು. ಜಗತ್ತಿಗೆಲ್ಲ ಮುಖ್ಯ ಒಡೆಯನಾದ ನಿನ್ನ ದರ್ಶನ ಮಾಡಿ ಸೇವಾ ಮಾಡಲು ನಾವುಗಳು ಬಂದಿದ್ದೇವೆ. ॥ ೩೬ ॥

**ಬಿಂದುಮಾಧವ ಉವಾಚ—**

ಜ್ಞಾತ್ವಾ ತದಾಶಯಂ ಪ್ರಾಹ ಪುನಸ್ತಾನ್ಬಿಂದುಮಾಧವಃ।
ಏವಂ ಚೇದತ್ರ ತಿಷ್ಠಂತು ವಿಧಾಯ ಪೃಥಗಾಶ್ರಮಾನ್ ॥ ೩೭ ॥
ಆಗಚ್ಛಂತಿ ಜನಾ ಯೇಽತ್ರ ಮಮ ಸಂದರ್ಶನೋತ್ಸುಕಾಃ ।
ಭವತಃ ಪೂಜಯಿತ್ವಾ ತೇ ಪಶ್ಚಾನ್ಮಾಂ ಪೂಜಯಂತು ವೈ ॥ ೩೮ ॥

**ಬಿಂದುಮಾಧವನು ಹೇಳಿದನು—**

ಆ ಸಪ್ತ ಋಷಿಗಳ ಅಭಿಲಾಷೆಯನ್ನು ತಿಳಿದ ಶ್ರೀಬಿಂದುಮಾಧವನು ಅವರಿಗೆ ಪುನಃ ಹೇಳಿದನು. "ಹಾಗಿದ್ದರೆ ಇಲ್ಲಿಯೇ ಇರಿ. ನಿಮ್ಮಗಳದೇ ಆದ ಬೇರೆ ಬೇರೆ ಆಶ್ರಮಗಳನ್ನು ಮಾಡಿಕೊಳ್ಳಿರಿ. ॥ ೩೭ ॥ ಇಲ್ಲಿಗೆ ನನ್ನ ಸಂದರ್ಶನಾರ್ಥವಾಗಿ ಬರುವ ಯಾತ್ರಿಕರು ನನ್ನ ಸಂದರ್ಶನದ ಮೊದಲು ತಮ್ಮಗಳನ್ನು ಪೂಜಿಸಿ ಅನಂತರ ನನ್ನ ಸಂದರ್ಶನ ಪೂಜಾದಿಗಳನ್ನು ಮಾಡಲಿ. ॥ ೩೮ ॥

**ಸೂತ ಉವಾಚ—**

**ಅತೋ ಮುನಿವರಾಸ್ತತ್ರ ಪೂಜ್ಯಾದೌ ಕಶ್ಯಪಾದಿಕಾನ್ ।**
**ಪೂಜಯಂತಿ ತತೋ ಬಿಂದುಮಾಧವಂ ಯಾಂತಿ ತೇ ಸುಖಮ್ ॥ ೩೯ ॥**
**ಪೂಜನಂ ಹವನಂ ದಾನಂ ಜಪಂ ಸ್ವಾಧ್ಯಾಯಮೇವ ಚ ।**
**ಬ್ರಹ್ಮಯಜ್ಞಂ ಚ ಕುರ್ವಂತಿ ಮುನಿರೂಪಾ ಭವಂತಿ ತೇ ॥ ೪೦ ॥**

**॥ ಇತಿ ಚತುಸ್ಸಪ್ತತಿತಮೋಽಧ್ಯಾಯಃ ॥**

**ಸೂತರು ಹೇಳಿದರು—**

''ಆದ್ದರಿಂದ ಹೇ ಶೌನಕಾದಿ ಋಷಿಗಳೇ! ಯಾತ್ರಾರ್ಥಿಗಳು ಕಶ್ಯಪಾದಿಗಳನ್ನು ಮೊದಲು ಪೂಜಿಸಿ ನಂತರ ಶ್ರೀಬಿಂದುಮಾಧವದೇವರನ್ನು ಪೂಜಿಸಿ ಆನಂದ ಪಡುತ್ತಾರೆ. ॥ ೩೯ ॥ ಆದ್ದರಿಂದ ಈ ವಾಯುಮಂಡಲದಲ್ಲಿ ಪೂಜೆ, ಹೋಮ, ದಾನ, ಜಪ, ಶಾಸ್ತ್ರಾಧ್ಯಯನ ಮತ್ತು ಬ್ರಹ್ಮಯಜ್ಞಗಳನ್ನು ಯಾರು ಮಾಡುತ್ತಾರೋ ಅವರು ಮನನಶೀಲರಾಗಿ ಮುನಿಗಳಂತೆಯೇ ಆಗುತ್ತಾರೆ.'' ॥ ೪೦ ॥

॥ ಎಪ್ಪತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಸಪ್ತತಿತಮೋಽಧ್ಯಾಯಃ ॥ ೭೫ ॥

ಸೂತ ಉವಾಚ—

ಅಥ ಕ್ಷೇತ್ರೋತ್ತರೇ ಭಾಗೇ ಕುಬೇರಾಶ್ರಮಸನ್ನಿಧೌ ।
ಸಪ್ತಮೇ ವೈಷ್ಣವೇ ಪೀಠೇ ಶ್ರೀಮನೋಹರಮಾಧವಃ ॥ ೧ ॥
ಭೂಷಣೈಃ ಸ್ವರ್ಣವಸನೈ ರತ್ನೈರ್ಮೌಕ್ತಿಕದಾಮಭಿಃ ।
ಕುಬೇರಃ ಪೂಜಯತ್ಯೇನಂ ಶ್ರೀಮನೋಹರಮಾಧವಮ್ ॥ ೨ ॥
ಪ್ರತ್ಯಹಂ ಪೂಜಯಿತ್ವೈನಂ ದಂಡವತ್ಪ್ರಣಿಪತ್ಯ ಚ ।
ಕರೋತಿ ಸ್ತವನಂ ತಸ್ಯ ಪ್ರಾಂಜಲಿಃ ಪುರತಃ ಸ್ಥಿತಃ ॥ ೩ ॥

## ॥ ಎಪ್ಪತ್ತೈದನೆಯ ಅಧ್ಯಾಯವು ॥

ಸೂತರು ಹೇಳಿದರು—

ಪ್ರಯಾಗದ ಉತ್ತರಭಾಗದಲ್ಲಿ ಕುಬೇರನ ಆಶ್ರಮದ ಸನ್ನಿಧಾನದಲ್ಲಿ ಇರತಕ್ಕ ಏಳನೆಯ ವೈಷ್ಣವಪೀಠದಲ್ಲಿ ಶ್ರೀಹರಿಯು "ಮನೋಹರಮಾಧವ" ಎಂಬ ಹೆಸರಿನಿಂದ ವಿರಾಜಮಾನನಾಗಿದ್ದಾನೆ. ॥ ೧ ॥ ಕುಬೇರನು ಸ್ವರ್ಣಾಭರಣಗಳಿಂದಲೂ ಬಂಗಾರದ ಜರಿಪೀತಾಂಬರಗಳಿಂದಲೂ ಮತ್ತು ರತ್ನಗಳ ನಡುಪಟ್ಟಿಗಳಿಂದಲೂ ಇವನನ್ನು ಪ್ರತಿನಿತ್ಯವೂ ಪೂಜಿಸುವನು. ॥ ೨ ॥ ಈ ರೀತಿಯಾಗಿ ಪ್ರತಿನಿತ್ಯವೂ ಪೂಜಿಸಿ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ಶ್ರೀಮಾಧವನ ಎದುರಿಗೆ ನಿಂತು ಅವನ ಸ್ತೋತ್ರಾದಿಗಳನ್ನು ಹೇಳುತ್ತಾನೆ. ॥ ೩ ॥

ಕುಬೇರ ಉವಾಚ—

ನಮಸ್ತೇ ಕಾಮರೂಪಾಯ ಲಾವಣ್ಯಾಕರಭೂಮಯೇ ।
ಮನೋಹರಾಯ ದೇವಾಯ ಮಾಧವಾಯ ನಮೋ ನಮಃ ॥ ೪ ॥
ಇದಂ ಕಂದರ್ಪದರ್ಪಘ್ನಂ ದೃಷ್ಟ್ವಾ ರೂಪಂ ತವ ಪ್ರಭೋ ।
ಪ್ರಸನ್ನಂ ಮಾನಸಂ ಮೇಽಭೂಚ್ಛ್ರೀಮನೋಹರಮಾಧವ ॥ ೫ ॥
ಧನ್ಯೋಽಯಮಾಶ್ರಮೋ ಮೇಽಸ್ತಿ ಯತ್ರ ಸನ್ನಿಹಿತೋ ಭವಾನ್।
ಅಹಮಪ್ಯಸ್ಮಿ ಧನ್ಯೋ ವೈ ಸರ್ವದಾ ತವ ದರ್ಶನಾತ್ ॥ ೬ ॥
ಸ್ತುತ್ವಾ ಪುನಃ ಪುನಸ್ತ್ವೈವಂ ಶ್ರೀಮನೋಹರಮಾಧವಮ್ ।
ಪ್ರಸನ್ನಮಾನಸಸ್ತತ್ರ ವಸತೇಸ್ಮ ಧನಾಧಿಪಃ ॥ ೭ ॥
ತತ್ರೈಕದಾ ಸಗಂಧರ್ವಾ ಉರ್ವಶ್ಯಾದ್ಯಾ ವರಾಂಗನಾಃ ।
ನೃತ್ಯಸಾಧನಸಂಪನ್ನಾಸ್ತಂ ದ್ರಷ್ಟುಂ ಸಮುಪಾಗತಾಃ ॥ ೮ ॥
ನತ್ವಾ ಸಂಪೂಜ್ಯ ಸರ್ವಾಸ್ತಾ ಆಲಾಪ್ಯಸ್ವರಮಂಡಲಮ್ ।
ನನೃತುಃ ಪುರತಸ್ತಸ್ಯ ನಾನಾವಾದ್ಯಾನುಸಾರತಃ ॥ ೯ ॥

ವೀಣಾವೇಣುಮೃದಂಗಾನಾಂ ಧ್ವನಯಃ ಸಂಬಭೂವಿರೇ ।
ಸಪ್ತಸ್ವರೈರ್ಯಥಾಭೇದ್ಯೈಃ ಪ್ರಜಗುಸ್ತಾಃ ಸಮೂರ್ಛನೈಃ ॥ ೧೦ ॥
ಸುಪ್ರಸನ್ನಸ್ತದಾ ತಾಸಾಂ ವಾದ್ಯಗಾಯನನರ್ತನೈಃ ।
ಪ್ರೋವಾಚ ಸಸ್ಮಿತಂ ವಾಕ್ಯಂ ಶ್ರೀಮನೋಹರಮಾಧವಃ ॥ ೧೧ ॥

**ಕುಬೇರನು ಹೇಳಿದನು—**

ಹೇ ಇಚ್ಛಾರೂಪವನ್ನು ಸ್ವೀಕರಿಸಬಲ್ಲವನೇ! ಲಾವಣ್ಯದ ನಿಧಿಯೇ, ಉತ್ಪತ್ತಿ ಸ್ಥಾನನೇ! ಮನೋಹರನೇ! ದೇವಾಧಿದೇವನೇ! ಮುಖ್ಯತಃ ಮಾಧವ ಶಬ್ದವಾಚನೇ! ನಿನಗೆ ನಮಸ್ಕಾರಗಳು. ॥ ೪ ॥ ಮನೋಹರ ಮಾಧವನೇ! ಮನ್ಮಥನ ಸೌಂದರ್ಯವನ್ನೇ ಧಿಕ್ಕರಿಸತಕ್ಕ ನಿನ್ನ ರೂಪವನ್ನು ನೋಡಿ ನನ್ನ ಮನಸ್ಸು ಪ್ರಸನ್ನಗೊಂಡಿದೆ. ॥ ೫ ॥ ನೀನಿರುವ ಈ ಆಶ್ರಮವು ಧನ್ಯ ಮತ್ತು ನಾನು ಯಾವಾಗಲೂ ನಿನ್ನ ದರ್ಶನಭಾಗ್ಯವನ್ನು ಪಡೆದು ಧನ್ಯನಾದೆನು. ॥ ೬ ॥ ಈ ರೀತಿಯಾಗಿ ಪುನಃ ಪುನಃ ಸ್ತೋತ್ರ ಮಾಡಿ ಪ್ರಸನ್ನ ಮನಸ್ಕನಾಗಿ ಕುಬೇರನು ಆ ಕುಬೇರಾಶ್ರಮದಲ್ಲಿಯೇ ವಾಸ ಮಾಡಿದನು. ॥ ೭ ॥ ಒಂದು ಬಾರಿ ಗಂಧರ್ವರೊಡಗೂಡಿ ಊರ್ವಶಿಯೇ ಮೊದಲಾದ ಉತ್ತಮಸ್ತ್ರೀಯರು ನರ್ತನ ಸಾಮಗ್ರಿಗಳೊಡನೆ ಆ ಮನೋಹರಮಾಧವನನ್ನು ನೋಡಲು ಅಲ್ಲಿಗೆ ಆಗಮಿಸಿದರು. ॥ ೮ ॥ ಶ್ರೀಮಾಧವನನ್ನು ಚೆನ್ನಾಗಿ ಪೂಜಿಸಿ ಅವರೆಲ್ಲರೂ ಸಪ್ತಸ್ವರಗಳ ಮಂಡಳವನ್ನು ಆಲಾಪನೆ ಮಾಡಿ, ನಾನಾಬಗೆಯ ವಾದ್ಯಗಳಿಗನುಸಾರವಾಗಿ ಮಾಧವನ ಮುಂದೆ ನರ್ತನ ಮಾಡಿದರು. ॥ ೯ ॥ ಕೊಳಲು, ವೀಣೆ, ಮೃದಂಗಗಳ ಧ್ವನಿಗಳು ಚೆನ್ನಾಗಿ ಆದುವು. ಸಪ್ತಸ್ವರಗಳ ವ್ಯತ್ಯಾಸಗಳು ಹೇಗೆ ಇರಬೇಕೋ ಹಾಗೆಯೇ ಆದುವು. ॥ ೧೦ ॥ ಅವರುಗಳ ವಾದ್ಯ, ಗಾಯನ ಮತ್ತು ನರ್ತನಗಳಿಂದ ಆಗ ಸುಪ್ರಸನ್ನನಾದ ಶ್ರೀಮನೋಹರ ಮಾಧವನು ಮಂದಸ್ಮಿತನಾಗಿ ಹೇಳಿದನು. ॥ ೧೧ ॥

**ಶ್ರೀಮನೋಹರಮಾಧವ ಉವಾಚ—**

ವಾದ್ಯೇನ ಭವತೀನಾಂ ಮೇ ಪರಾನಂದೋ ವ್ಯಜಾಯತ ।
ಯದರ್ಥಮಾಗತಾ ಯೂಯಂ ಯಾಚಯಧ್ವಂ ಮನೋಗತಮ್ ॥ ೧೨ ॥

**ಮನೋಹರಮಾಧವನು ಹೇಳಿದನು—**

ನಿಮ್ಮಗಳ ಗಾನವಾದ್ಯನರ್ತನಗಳಿಂದ ನನಗೆ ಪರಮಾನಂದವಾಗಿದೆ. ನೀವುಗಳು ಏತಕ್ಕಾಗಿ ಇಲ್ಲಿಗೆ ಬಂದಿದ್ದೀರಿ? ನಿಮ್ಮ ಮನೋರಥವೇನಿದ್ದರೂ ಅದನ್ನು ಕೇಳಿಕೊಳ್ಳಿರಿ. ॥ ೧೨ ॥

**ಅಪ್ಸರಸ ಊಚುಃ—**

ವಯಂ ತ್ವಾಮಾಗತಾ ದ್ರಷ್ಟುಮಿಂದ್ರಲೋಕಾದ್ರಮಾಪತೇ ।
ಶ್ರುತ್ವಾ ಚ ತತ್ರ ಮಾಹಾತ್ಮ್ಯಮತಸ್ತ್ವಾಂ ಸೇವಯಾಮಹೇ ॥ ೧೩ ॥

**ಅಪ್ಸರೆಯರು ಹೇಳಿದರು—**

"ತಮ್ಮ ದರ್ಶನಕ್ಕಾಗಿ ನಾವು ಇಂದ್ರಲೋಕದಿಂದ ಬಂದಿದ್ದೇವೆ. ತಮ್ಮ ಮಾಹಾತ್ಮ್ಯೆಯನ್ನು ಕೇಳಿ ತಮ್ಮ ಸೇವೆ ಮಾಡಲು ಬಂದಿದ್ದೇವೆ." ॥ ೧೩ ॥

**ಸೂತ ಉವಾಚ—**

**ಇತಿ ತದ್ವಾಚಮಾಕರ್ಣ್ಯ ಶ್ರೀಮನೋಹರಮಾಧವಃ ।**
**ತಾ ಊಚೇ ವಚನಂ ಕಾಂತಂ ಸಸ್ಮಿತಾಧರಪಲ್ಲವಃ ॥ ೧೪ ॥**

**ಸೂತರು ಹೇಳಿದರು—**

ಈ ರೀತಿಯಾಗಿ ಹೇಳಿದ ಅವರ ಮಾತುಗಳನ್ನು ಕೇಳಿದ ಶ್ರೀಮಾಧವನು ತನ್ನ ತುಟಿಗಳಲ್ಲಿ ಮುಗುಳ್ನಗೆಯನ್ನು ಚೆಲ್ಲುತ್ತಾ ಮನೋಹರವಾದ ಈ ಮಾತುಗಳನ್ನು ಹೇಳಿದನು. ॥ ೧೪ ॥

**ಶ್ರೀಮನೋಹರಮಾಧವ ಉವಾಚ—**

**ಸುಖಮತ್ರೈವ ತಿಷ್ಠಂತು ಭವತ್ಯಸ್ಸಪರಿಚ್ಛದಾಃ ।**
**ನಾಟ್ಯಂ ನೃತ್ಯಂ ಪ್ರಕುರ್ವಂತು ಪೂಜನಾವಸರೇ ಮಮ ॥ ೧೫ ॥**

**ಮನೋಹರಮಾಧವನು ಹೇಳಿದನು—**

''ನಿಮ್ಮ ನರ್ತನಗಳಿಗೆ ಬೇಕಾಗಿರುವ ಉಡುಪು, ಸಾಧನ, ಸಾಮಗ್ರಿಗಳು ವಾದ್ಯಗಳು. ಸಹಕಾರೀ ದಾಸದಾಸಿಯರೊಡನೆ ಸುಖವಾಗಿ ಇಲ್ಲಿಯೇ ವಾಸ ಮಾಡಿ ನನ್ನ ಪೂಜಾಸಮಯದಲ್ಲಿ ಹಾಡುತ್ತಾ ನರ್ತನಾದಿಗಳನ್ನು ಮಾಡಿರಿ'' ॥ ೧೫ ॥

**ಸೂತ ಉವಾಚ—**

**ತದಾದ್ಯಪ್ಸರಸಸ್ಸರ್ವಾಸ್ಸಗಂಧರ್ವಾಃ ಪ್ರಹರ್ಷಿತಾಃ ।**
**ಸಂಸ್ಥಿತಾ ಮುನಯಃ ಪ್ರೀತ್ಯಾ ತಸ್ಮಿನ್ಕೌಬೇರಮಂಡಲೇ ॥ ೧೬ ॥**
**ಅತಸ್ತತ್ರ ಚ ಯೇ ಗತ್ವಾ ನರಾ ನಾರ್ಯೋ ದೃಢವ್ರತಾಃ ।**
**ಪೂಜಯಂತಿ ನಮಸ್ಯಂತಿ ಶ್ರೀಮನೋಹರಮಾಧವಮ್ ॥ ೧೭ ॥**
**ಸೌಭಾಗ್ಯಪುತ್ರಪೌತ್ರಾದಿಧನಧಾನ್ಯಸಮಾಕುಲಾಃ ।**
**ಭುಕ್ತ್ವಾತ್ರ ವಿವಿಧಾನ್ಭೋಗಾನ್ ವೈಕುಂಠಂ ವೈ ವ್ರಜಂತಿ ತೇ ॥ ೧೮ ॥**
**ಕ್ಷೇತ್ರಸ್ಯೇಶಾನದಿಗ್ಭಾಗೇ ಶಂಕರಾಶ್ರಮಮಂಡಲೇ ।**
**ಅಷ್ಟಮೇ ವೈಷ್ಣವೇ ಪೀಠೇ ವರೀವರ್ತ್ಯಸಿ ಮಾಧವಃ ॥ ೧೯ ॥**
**ಅತಸೀಪುಷ್ಪಸಂಕಾಶಃ ಪೀತಾಂಬರಧರೋ ಯುವಾ ।**
**ಭೀಷಣಾಕೃತಿರಾಬದ್ಧಕುಟಿಲಾಲಕಸಂಹತಿಃ ॥ ೨೦ ॥**
**ಅಸಿಚರ್ಮಧರಃ ಸ್ರಗ್ವೀ ಕ್ರೂರಃ ಕೋಕನದೇಕ್ಷಣಃ ।**
**ಬದ್ಧ್ವಾ ಪರಿಕರಂ ತತ್ರ ಸರ್ವದಾಸ್ತೇ ಶಿವಾಂತಿಕೇ ॥ ೨೧ ॥**
**ದೇವದಾನವಗಂಧರ್ವಾನ್ ದೈತ್ಯಾನ್ ರಾಕ್ಷಸಪನ್ನಗಾನ್ ।**
**ನಾನಾವಿಘ್ನಕರಾನ್ ಶಾಸ್ತಿ ತೀರ್ಥೋಪದ್ರವಕಾರಕಾನ್ ॥ ೨೨ ॥**
**ವಿಧಾಯ ಪೂಜನಂ ತಸ್ಯ ಶಕ್ತಿಕಲ್ಪಿತಸಾಧನೈಃ ।**
**ಗೃಹ್ಣಾತಿ ಚ ವಿರಾಟ್ಸ್ತುತ್ಯಾ ಪರಮೋ ವೈಷ್ಣವಶ್ಶಿವಃ ॥ ೨೩ ॥**

ತತ್ರೈಕದಾ ಸಮಾಜಗ್ಮುಃ ಪಾತಾಲತಲವಾಸಿನಃ ।
ನಾಗಾಶ್ಚ ನಾಗಕನ್ಯಾಶ್ಚ ದ್ರಷ್ಟುಂ ಹರಿಹರೌ ಸಮಮ್ ॥ ೨೪ ॥
ಉಭಾವಪಿ ಚ ಸಂಪೂಜ್ಯ ಭಕ್ತಿಪೂರ್ಣೇನ ಚೇತಸಾ ।
ಬದ್ಧಾಂಜಲಿಪುಟಾಸ್ತಸ್ಥು ರಮಾಮಾಧವಯೋಃ ಪುರಃ ॥ ೨೫ ॥
ತಥಾವಿಧಾಂಶ್ಚ ತಾನ್ ದೃಷ್ಟ್ವಾ ವಾಕ್ಯಮೂಚೇಽಸಿಮಾಧವಃ ।
ಕುತೋಽತ್ರಾಗಮನಂ ಜಾತಂ ಭವತಾಂ ತಲವಾಸಿನಾಮ್ ॥ ೨೬ ॥
ಇತಿ ಮಾಧವಜಂ ವಾಕ್ಯಂ ಶ್ರುತ್ವಾ ಪ್ರಮುದಿತಾನನಾಃ ।
ನಾಗಾಶ್ಚ ನಾಗಪತ್ನ್ಯಶ್ಚ ಪ್ರಾಪ್ನುವನ್ನಸಿಮಾಧವಮ್ ॥ ೨೭ ॥

**ಸೂತರು ಹೇಳಿದರು—**

ಹೇ ಶೌನಕಾದಿ ಋಷಿಗಳಿರಾ! ಅಂದಿನಿಂದ ಮೊದಲ್ಗೊಂಡು ಗಂಧರ್ವರಿಂದ ಸಹಿತರಾದ ಎಲ್ಲ ಅಪ್ಸರೆಯರು ಪ್ರಹರ್ಷಿತರಾಗಿ ಆ ಕುಬೇರ ಮಂಡಲದಲ್ಲಿ ವಾಸ ಮಾಡಲು ಆರಂಭಿಸಿದರು. ॥ ೧೬ ॥ ಆದ್ದರಿಂದ ಇಲ್ಲಿಗೆ ಹೋಗಿ ಯಾವ ನರನಾರಿಯರು ದೃಢವಾದ ವ್ರತವುಳ್ಳವರಾಗಿ ಶ್ರೀಮನೋಹರಮಾಧವದೇವರನ್ನು ಪೂಜೆ ಮಾಡುತ್ತಾರೋ ಮತ್ತು ನಮಸ್ಕರಿಸುತ್ತಾರೋ ಅವರು ಸೌಭಾಗ್ಯವನ್ನು, ಮಕ್ಕಳು, ಮೊಮ್ಮಕ್ಕಳುಗಳನ್ನೂ ಹೊಂದಿ ಧನ ಧಾನ್ಯದಿಂದ ಕೂಡಿದವರಾಗಿ ಈ ಲೋಕದಲ್ಲಿ ನಾನಾವಿಧವಾದ ಭೋಗಗಳನ್ನು ಅನುಭವಿಸಿ ನಂತರ ವೈಕುಂಠಕ್ಕೆ ತೆರಳುವರು. ॥ ೧೭-೧೮ ॥ ಈ ಪ್ರಯಾಗಕ್ಷೇತ್ರದ ಈಶಾನ್ಯದಿಗ್ಭಾಗದಲ್ಲಿರುವ ಶಂಕರಾಶ್ರಮ ಮಂಡಲದಲ್ಲಿ ಎಂಟನೆಯ ವೈಷ್ಣವಪೀಠವಿರುವುದು. ಇಲ್ಲಿ ಶ್ರೀಹರಿಯ ''ಅಸಿಮಾಧವ'' ಎಂಬ ಮೂರ್ತಿಯಿರುವುದು. ॥ ೧೯ ॥ ಈ ಅಸಿಮಾಧವನು ಅಗಸೆಯ ಹೂವಿನ ಬಣ್ಣುವುಳ್ಳವನೂ, ಪೀತಾಂಬರಧಾರಿಯೂ, ಯುವಕನೂ ಭಯಂಕರವಾದ ಆಕಾರವುಳ್ಳವನೂ ಆಗಿದ್ದು ಇವನ ಗುಂಗುರುಕೂದಲು ಕಟ್ಟಲ್ಪಟ್ಟಿವೆ. ॥ ೨೦ ॥ ಇವನು ಕತ್ತಿ ಮತ್ತು ಗುರಾಣಿಯನ್ನು ಹಿಡಿದಿದ್ದಾನೆ. ಮಾಲಾವನ್ನು ಧರಿಸಿದ್ದಾನೆ, ಕ್ರೂರವಾಗಿದ್ದಾನೆ, ಕಮಲದಳದಂತೆ ಕಣ್ಣುಳ್ಳವನು, ಸೊಂಟ ಕಟ್ಟಿಕೊಂಡು ಅಲ್ಲಿನ ಸೇವಕವೃಂದವನ್ನು ಹದ್ದುಬಸ್ತಿನಲ್ಲಿಡುವಂತೆ ಶಿವನ ಪಕ್ಕದಲ್ಲಿ ಇರುವನು. ॥ ೨೧ ॥ ದೇವತೆಗಳು, ದಾನವರು, ಗಂಧರ್ವರು, ದೈತ್ಯರು, ರಾಕ್ಷಸರುಗಳು, ಹಾವಿನ ಜಾತಿಗಳು, ಮತ್ತು ನಾನಾವಿಧಗಳಾದ ವಿಘ್ನಕಾರಿಗಳನ್ನೂ ತೀರ್ಥಕ್ಕೆ ಉಪದ್ರವವನ್ನುಂಟುಮಾಡುವರನ್ನೂ ಶಿಕ್ಷಿಸುತ್ತಾನೆ. ॥ ೨೨ ॥ ಇಲ್ಲಿ ಪರಮ ವೈಷ್ಣವನಾಗಿರತಕ್ಕ ರುದ್ರದೇವರು ಅವರ ಶಕ್ತ್ಯನುಸಾರವಾಗಿ ಸಂಗ್ರಹಿಸಿದ ಪೂಜಾಸಾಧನಗಳಿಂದ ಈ ಅಸಿಮಾಧವನನ್ನು ಪೂಜಾ ಮಾಡುತ್ತಾ ವಿರಾಟ್ ಸ್ತೋತ್ರದಿಂದ ಅವನನ್ನು ಜಪಿಸುತ್ತಿರುತ್ತಾನೆ. ॥ ೨೩ ॥ ಈ ಕ್ಷೇತ್ರಕ್ಕೆ ಒಂದು ಬಾರಿ ಪಾತಾಳಲೋಕದಲ್ಲಿ ವಾಸ ಮಾಡಿಕೊಂಡಿರುವ ನಾಗಗಳೂ ಮತ್ತು ನಾಗಕನ್ಯೆಯರೂ ಒಟ್ಟಿಗೆ ಇರುವ ಹರಿಹರರಿಬ್ಬರನ್ನೂ ನೋಡಲು ಬಂದರು. ॥ ೨೪ ॥ ಭಕ್ತಿಯಿಂದ ತುಂಬಿದ ಮನಸ್ಸಿನಿಂದ ಅಲ್ಲಿ ಅವರು ಇಬ್ಬರನ್ನೂ ಪೂಜಿಸಿ ಕೈಗಳನ್ನು ಜೋಡಿಸಿ ಉಮಾ ಮತ್ತು ರಮಾದೇವಿಯರ ಪತಿಗಳಾದ ಶ್ರೀಮಹರುದ್ರರ ಮತ್ತು ಶ್ರೀಅಸಿಮಾಧವರ ಮುಂದೆ ನಿಂತುಕೊಂಡರು. ॥ ೨೫ ॥ ಆ ರೀತಿಯಾಗಿ ನಿಂತಿದ್ದ ಅವರನ್ನು ಕುರಿತು ಶ್ರೀಅಸಿಮಾಧವ ದೇವರು ಕೇಳಿದರು. ''ಪಾತಾಳವಾಸಿಗಳಾದ ತಾವೆಲ್ಲರೂ ಏತಕ್ಕೋಸ್ಕರ ಇಲ್ಲಿಗೆ ಬಂದಿದ್ದೀರಿ?'' ॥ ೨೬ ॥ ಈ ರೀತಿ

ಹೇಳಿದ ಮಾಧವನ ಮಾತನ್ನು ಕೇಳಿದ ನಾಗರೂ, ನಾಗಪತ್ನಿಯರೂ ಸಂತೋಷವನ್ನು ವ್ಯಕ್ತಪಡಿಸುವ ಮುಖವುಳ್ಳವರಾಗಿ ಶ್ರೀಅಸಿಮಾಧವನ ಸಮೀಪಕ್ಕೆ ಬಂದು ಹೇಳಿದರು. ॥ ೨೭ ॥

**ನಾಗಾದಯ ಊಚುಃ—**

> **ದುರ್ಲಭಂ ದರ್ಶನಂ ಲೋಕೇ ತವ ವೈಕುಂಠವಾಸಿನಃ ।**
> **ಕೈಲಾಸವಾಸಿನೋಽಪ್ಯಸ್ಯ ಸರ್ವೇಷಾಂ ನೋ ವಿಶೇಷತಃ ॥ ೨೮ ॥**
> **ತೀರ್ಥರಾಜಪ್ರಭಾವೇನ ಯುವಯೋರ್ದರ್ಶನಂ ಸಮಮ್ ।**
> **ಭವಿಷ್ಯತೀತಿ ನಿಶ್ಚಿತ್ಯ ವಯಂ ಸರ್ವೇ ಸಮಾಗತಾಃ ॥ ೨೯ ॥**
> **ದರ್ಶನಂ ವಾಮಭೂತನ್ನಃ ಸಂಪ್ರಾಪ್ತಂ ಜನ್ಮನಃ ಫಲಮ್ ।**
> **ಆಜ್ಞಾಂ ಕುರು ನಮಸ್ತುಭ್ಯಂ ನಾಥೌ ಕಿಂ ಕರವಾಮಹೇ ॥ ೩೦ ॥**
> **ಇತ್ಯಾಕರ್ಣ್ಯ ವಚಸ್ತೇಷಾಂ ಭಕ್ತ್ಯುತ್ಕಲಿತಚೇತಸಾಮ್ ।**
> **ಊಚತುಃ ಸದಯಂ ವಾಕ್ಯಂ ಮಾಧವೋಮಾಪತೀ ದ್ವಿಜಾಃ ॥ ೩೧ ॥**

**ನಾಗರು ಹೇಳಿದರು—**

ವೈಕುಂಠವಾಸಿಯಾಗಿರುವ ನಿನ್ನ ದರ್ಶನವೂ ಮತ್ತು ಕೈಲಾಸವಾಸಿಯಾಗಿರುವ ಶ್ರೀರುದ್ರದೇವರ ದರ್ಶನವೂ ಈ ಭೂಲೋಕದಲ್ಲಿ ಪ್ರಾಪ್ತವಾಗುವುದು ದುರ್ಲಭವೇ ಸರಿ. ಇದೊಂದು ನಮ್ಮಗಳಿಗೆಲ್ಲ ವಿಶೇಷವೇ ಸರಿ! ॥ ೨೮ ॥ ತೀರ್ಥರಾಜನಾದ ಈ ಪ್ರಯಾಗಮಾಧವನ ಅನುಗ್ರಹದಿಂದಲೇ ನಮಗೆ ಒಟ್ಟಿಗೆ ಕಲೆತಿರುವ ಇವರೀರ್ವರ ದರ್ಶನವು ಲಭ್ಯವಾಗುವುದೆಂದು ನಿಶ್ಚಯಿಸಿಕೊಂಡೇ ನಾವೆಲ್ಲರೂ ಇಲ್ಲಿಗೆ ಬಂದೆವು. ॥ ೨೯ ॥ ನಮಗೆಲ್ಲ ನಿಮ್ಮಿಬ್ಬರ ದರ್ಶನವು ಲಭ್ಯವಾಗಿ ನಾವು ಜನ್ಮ ತಾಳಿದ್ದಕ್ಕೆ ತಕ್ಕ ಫಲಪ್ರಾಪ್ತಿಯಾಗಿದೆ. ನಿಮ್ಮಿಬ್ಬರಿಗೂ ನಮಸ್ಕಾರಗಳು. ನೀವಿಬ್ಬರೂ ನಮಗೆ ಆಜ್ಞಾವನ್ನು ಮಾಡಿ; ನಾವುಗಳೆಲ್ಲಾ ಏನು ಮಾಡಬೇಕು? ॥ ೩೦ ॥ ಈ ರೀತಿಯಾಗಿ ಹೇಳಲ್ಪಟ್ಟ, ಭಕ್ತಿಯಿಂದ ಅತ್ಯುತ್ಸಾಹಗೊಂಡ ಅವರ ಮಾತನ್ನು ಕೇಳಿದ ಈ ಉಮಾಪತಿರಮಾಪತಿಯರು ಆ ನಾಗಗಳನ್ನು ಕುರಿತು ಹೇಳಿದರು. ॥ ೩೧ ॥

**ಮಾಧವೋಮಾಪತೀ ಊಚತುಃ—**

> **ಸ್ಥಾತವ್ಯಮತ್ರ ಸತ್ತೀರ್ಥೇ ಆವಯೋರಾಶ್ರಮಾಂತಿಕೇ ।**
> **ಭವದ್ಭಿರ್ಭವತೀಭಿಶ್ಚ ಸಾಚಿವ್ಯಂ ಕ್ರಿಯತಾಂ ಚ ನೌ ॥ ೩೨ ॥**

**ಅಸಿಮಾಧವ ಮತ್ತು ಉಮಾಪತಿಯರು ಹೇಳಿದರು—**

ನಮ್ಮಿಬ್ಬರ ಆಶ್ರಮದ ಸಮೀಪದಲ್ಲಿರುವ ಈ ಸತ್ತೀರ್ಥದಲ್ಲಿ ನೀವು ವಾಸ ಮಾಡಿರಿ. ನಿಮ್ಮಲ್ಲಿನ ನಾಗಗಳೂ ನಾಗಕನ್ನಿಕೆಯರೂ ನಮಗೆ ಸ್ನೇಹಿತರೂ ಸ್ನೇಹಿತೆಯರೂ ಆಗಿ ಇಲ್ಲಿ ಇರಿ. ॥ ೩೨ ॥

**ಸೂತ ಉವಾಚ—**

> **ಇತ್ಥಂ ತದ್ವಚ ಆಕರ್ಣ್ಯ ಸರ್ವೇ ಪಾತಾಲವಾಸಿನಃ ।**
> **ಸ್ಥಿತ್ವಾತತ್ರ ಯಥಾಸ್ಥಾನಮುಭಾವಪಿ ಸಿಷೇವಿರೇ ॥ ೩೩ ॥**

ತತ್ತ್ರ ಯೇ ಗಮಿಷ್ಯಂತಿ ಜನಾಃ ಪಾಪಕೃತೋಽಪಿ ಹ ।
ತೇ ತಯೋರ್ದರ್ಶನಾರ್ಚಾಭ್ಯಾಂ ತಯೋರ್ಯಾಸ್ಯಂತಿ ಸತ್ಪದೇ ॥ ೩೪ ॥
ಯತ್ಕಿಂಚಿತ್ಸುಕೃತಂ ಯೇಽತ್ರ ಕರಿಷ್ಯಂತಿ ಚ ಮಾನವಾಃ ।
ಅಪ್ರಾಪ್ಯಾನಪರೈರ್ದಿವ್ಯಾನ್ಪ್ರಾಪ್ಸ್ಯಂತೇ ತೇ ಮನೋರಥಾನ್ ॥ ೩೫ ॥
ಏವಂ ದಿಙ್ಮಾಧವಾ ಹ್ಯಷ್ಟೌ ಕಥಿತಾಃ ಶೌನಕಾದಯಃ ।
ಇದಾನೀಂ ನವಮಂ ವಕ್ಷ್ಯೇ ಸಂಕಷ್ಟಹರಮಾಧವಮ್ ॥ ೩೬ ॥
ಸರ್ವೇಽಪಿ ಪೂಜಯಂತ್ಯೇನಂ ಸಂಸ್ತುವಂತಿ ಚ ಸರ್ವದಾ ।
ಸರ್ವಸಂಕಷ್ಟನಾಶಾರ್ಥಮಸೌ ಸರ್ವತ್ರ ತಿಷ್ಠತಿ ॥ ೩೭ ॥
ತಥಾಪಿ ವರ್ತತೇ ಸಂಧ್ಯಾವಟಾಧಸ್ತಸ್ಯ ಚಾಶ್ರಮಃ ।
ತಸ್ಮಿನ್ವಸತಿ ಧರ್ಮಾತ್ಮಾ ಸಂಕಷ್ಟಹರಮಾಧವಃ ॥ ೩೮ ॥
ಯಸ್ಯ ಯಸ್ಯ ಯದಾ ಯದ್ಯತ್ಸಂಕಷ್ಟಂ ಜಾಯತೇ ಭೃಶಮ್ ।
ತಸ್ಯ ತಸ್ಯ ತದಾ ತತ್ತನ್ನಿವಾರಯತಿ ಮಾಧವಃ ॥ ೩೯ ॥
ಸಾಯಂಪ್ರಾತರ್ದ್ವಿಜಾಸ್ಸರ್ವೇ ಸಿದ್ಧಾಶ್ಚ ಪರಮರ್ಷಯಃ ।
ಉಪಾಸತೇ ಸದಾ ಸಂಧ್ಯಾಂ ಪೂಜಯಂತಿ ಚ ಮಾಧವಮ್ ॥ ೪೦ ॥
ಸಂಧ್ಯಾವಟಸ್ಯ ಮಾಹಾತ್ಮ್ಯಂ ಗದಿತುಂ ಕೇಽಪಿ ನೇಶತೇ ।
ಸಂಧ್ಯಾವಂದನಲೋಪೋತ್ಥಂ ಪಾತಕಂ ಯತ್ರ ನ ಸ್ಪೃಶೇತ್ ॥ ೪೧ ॥

**ಸೂತರು ಹೇಳಿದರು—**

ಈ ರೀತಿಯಾದ ಅವರಿಬ್ಬರ ಮಾತನ್ನು ಕೇಳಿದ ಆ ಪಾತಾಳವಾಸಿಗಳು ಹಸನ್ಮುಖಿಗಳಾಗಿ ಆ ಆಶ್ರಮದಲ್ಲಿ ಸೂಚಿತವಾಗಿರತಕ್ಕ ಸ್ಥಾನಗಳಲ್ಲಿದ್ದು ಮಾಧವದೇವರನ್ನು ಮತ್ತು ರುದ್ರದೇವರನ್ನು ಸೇವಾ ಮಾಡಿದರು. ॥ ೩೩ ॥ ಅಲ್ಲಿಗೆ ಹೋದವರು ಪಾಪಗಳನ್ನು ಮಾಡಿದ್ದರೂ ಈ ದೇವರುಗಳ ದರ್ಶನ ಮತ್ತು ಪೂಜಾಗಳಿಂದ ಅವರವರ ಲೋಕಗಳಾದ ವೈಕುಂಠಕ್ಕೂ ಮತ್ತು ಕೈಲಾಸಕ್ಕೂ ಹೋಗುವರು. ॥ ೩೪ ॥ ಈ ಆಶ್ರಮದಲ್ಲಿ ಯಾವುದಾದರೂ ಸ್ವಲ್ಪಪುಣ್ಯವನ್ನು ಮಾಡುವ ಜನರು ಬೇರೆಯವರಿಂದ ಹೊಂದಲಾಗದ ಮನೋರಥಗಳನ್ನೆಲ್ಲಾ ಹೊಂದುತ್ತಾರೆ.॥ ೩೫ ॥ ಹೇ ಶೌನಕಾದಿಗಳೇ! ಈ ಎಂಟು ದಿಕ್ಕುಗಳಲ್ಲಿಯೂ ಇರುವ ವೈಷ್ಣವಪೀಠಗಳ ಬಗ್ಗೆಯೂ ಆಯಾಯಾ ಮಾಧವರೂಪಗಳ ಬಗ್ಗೆಯೂ ಹೇಳಲ್ಪಟ್ಟಿತು. ಈಗ ಒಂಬತ್ತನೆಯದಾದ ಸಂಕಷ್ಟಹರ ಮಾಧವನ ಬಗ್ಗೆ ಹೇಳುತ್ತೇನೆ. ॥ ೩೬ ॥ ಎಲ್ಲರೂ ಇವನನ್ನು ಪೂಜಿಸುತ್ತಾರೆ. ಸ್ತೋತ್ರವನ್ನು ಮಾಡುತ್ತಾರೆ. ಇವನು ಎಲ್ಲರ ಸಂಕಷ್ಟಗಳನ್ನು ಪರಿಹಾರ ಮಾಡುವುದಕ್ಕಾಗಿ ಆಶ್ರಮದಲ್ಲಿ ಎಲ್ಲೆಲ್ಲಿಯೂ ಇರುವನು. ॥ ೩೭ ॥ ಹಾಗಿದ್ದಾಗ್ಯೂ ಸಂಧ್ಯಾವಟವೆಂಬ ವೃಕ್ಷದ ಬುಡದಲ್ಲಿ ಆತನ ಆಶ್ರಮವು ಇದೆ. ಆ ಆಶ್ರಮದಲ್ಲಿ ಧರ್ಮಾತ್ಮನಾದ ಸಂಕಷ್ಟಹರ ಮಾಧವನು ವಾಸ ಮಾಡುತ್ತಾನೆ. ॥ ೩೮ ॥ ಯಾರ್ಯಾರಿಗೆ ಯಾವ ಯಾವ ಸಂಕಟವು ಹುಟ್ಟಿಕೊಳ್ಳುತ್ತದೋ ಆಗಾಗಲೇ ಅವುಗಳನ್ನು ಈ ಮಾಧವನು ನಿವಾರಣೆ ಮಾಡುವನು. ॥ ೩೯ ॥ ಸಾಯಂಕಾಲ ಮತ್ತು ಬೆಳಿಗ್ಗೆ ಮತ್ತು ಮಧ್ಯಾಹ್ನಕಾಲಗಳಲ್ಲಿ ಎಲ್ಲ ಬ್ರಾಹ್ಮಣರೂ ಸಿದ್ಧರೂ ಮತ್ತು ಋಷಿವರ್ಯರೂ ಇಲ್ಲಿ ಸಂಧ್ಯೆಯನ್ನು ಉಪಾಸನೆ

ಮಾಡುತ್ತಾರೆ ಮತ್ತು ಈ ಸಂಕಷ್ಟಹರ ಮಾಧವನನ್ನು ಪೂಜಿಸುತ್ತಾರೆ. ॥ ೪೦ ॥ ಈ ಸಂಧ್ಯಾವಟವೃಕ್ಷದ ಮಾಹಾತ್ಮ್ಯೆಯನ್ನು ಹೇಳಲು ಯಾರು ಸಮರ್ಥರು? ಇಲ್ಲಿ ಸಂಧ್ಯಾವಂದನಲೋಪದಿಂದ ಉಂಟಾಗುವ ಪಾತಕವು ಸ್ಪರ್ಶಿಸುವುದಿಲ್ಲ. ॥ ೪೧ ॥

**ಸೂತ ಉವಾಚ—**

ತಸ್ಮಾದ್ ದ್ವಿಜವರಾಸ್ಸರ್ವೇ ಗತ್ವಾ ಸಂಧ್ಯಾವಟಾಂತಿಕೇ ।
ಸಂಧ್ಯಾಮುಪಾಸ್ಯ ವಿಧಿವತ್ಪೂಜಯಂತಿ ಚ ಮಾಧವಮ್ ॥ ೪೨ ॥
ಅಕಾಲೇಽಪ್ಯಥವಾ ಕಾಲೇ ಸಂಧ್ಯಾ ನೋಪಾಸಿತಾ ಮಯಾ ।
ತದಘಂ ಹರ ಮೇ ಸರ್ವಂ ಸಂಧ್ಯಾವಟ ನಮೋಽಸ್ತು ತೇ ॥ ೪೩ ॥
ಏವಂ ಸಂಧ್ಯಾವಟಂ ಪ್ರಾರ್ಥ್ಯ ಮುಚ್ಯತೇ ಲೋಪಪಾತಕಾತ್ ।
ಪ್ರಸನ್ನಶ್ಚಾಭವತ್ತೇಷಾಂ ಸಂಕಷ್ಟಹರಮಾಧವಃ ॥ ೪೪ ॥
ಗಂಗಾಯಮುನಯೋಸ್ತೀರೇ ವೇಣೀಕ್ಷೇತ್ರೇ ಮನೋಹರೇ ।
ಮಧ್ಯವೇಣೀತಟೇ ವೇಣೀಮಾಧವೋಽಸೌ ವಿರಾಜತೇ ॥ ೪೫ ॥
ಧನುರ್ವಿಂಶತಿವಿಸ್ತೀರ್ಣಸ್ತಸ್ಯಾಶ್ರಮ ಉದಾಹೃತಃ ।
ತಸ್ಮಿಂಸ್ತಿಷ್ಠತ್ಯಸೌ ಲಕ್ಷ್ಮ್ಯಾ ತ್ರಿವೇಣ್ಯಾ ಸಹಿತಸ್ಸದಾ ॥ ೪೬ ॥
ಇಂದೀವರದಲಶ್ಯಾಮಃ ಕುಶೇಶಯನಿಭೇಕ್ಷಣಃ ।
ಚತುರ್ಭುಜಶ್ಶಂಖಚಕ್ರಗದಾಪದ್ಮಧರಃ ಪ್ರಭುಃ ॥ ೪೭ ॥
ಶ್ರೀವತ್ಸಕೌಸ್ತುಭಾಶೋಭೀ ಪೀತಾಂಬರವಿರಾಜಿತಃ ।
ನಾನಾಲಂಕಾರಶೋಭಿಷ್ಠಃ ಪ್ರಸನ್ನಮುಖಪಂಕಜಃ ॥ ೪೮ ॥
ತ್ರಿವರ್ಣಾ ತ್ರಿಗುಣಾ ತ್ರ್ಯಕ್ಷಾ ತ್ರಿವಿಧಾಘವಿನಾಶಿನೀ ।
ತ್ರಿಮಾರ್ಗಗಾ ಪುರಸ್ತಸ್ಯ ತ್ರಿವೇಣೀ ರಾಜತೇ ಭೃಶಮ್ ॥ ೪೯ ॥
ದೇವದಾನವಗಂಧರ್ವಾ ಋಷಯಸ್ಸಿದ್ಧಚಾರಣಾಃ ।
ಚತುಷ್ಷಷ್ಟಿಕಲಾ ವಿದ್ಯಾ ಸಿದ್ಧಯೋಽಪ್ಸರಸಸ್ತಥಾ ॥ ೫೦ ॥
ಸರ್ವಪೀಠಸ್ಥಿತಾಸ್ಸರ್ವೇ ತತ್ರ ಗತ್ವಾ ಸಸಾಧನಾಃ ।
ಪ್ರತ್ಯಹಂ ಪೂಜಯಂತ್ಯೇನಂ ವೇಣೀಮಾಧವಮಾದರಾತ್ ॥ ೫೧ ॥
ಫಲಂ ದದಾತಿ ಸರ್ವೇಷಾಂ ಕುಶಲಾಕುಶಲಾತ್ಮನಾಮ್ ।
ಶ್ರಮಾನಪೇಕ್ಷ್ಯ ಹ್ಯಖಿಲಂ ಭಕ್ತಾನಾಂ ತು ವಿಶೇಷತಃ ॥ ೫೨ ॥
ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚೇತಿ ಚತುಷ್ಟಯಮ್ ।
ಪ್ರಯಚ್ಛಂತಿ ಯಥಾಕಾಮಮಕಾಮೇ ಮೋಕ್ಷಮೇವ ಹಿ ॥ ೫೩ ॥
ಶ್ರುತಿಸ್ಮೃತಿಪುರಾಣಾನಿ ಯಂ ಸ್ತುವಂತಿ ಹಿ ಮಾಧವಮ್ ।
ಅಮುಷ್ಮಿನ್ನಾಗರೂಕೇಽತ್ರ ಕಃ ಪದಾರ್ಥೋಽಸ್ತಿ ದುರ್ಲಭಃ ॥ ೫೪ ॥

ಕಾಶ್ಯಾಂ ವಿಶ್ವೇಶ್ವರಃ ಸಾಕ್ಷಾದುಪದಿಶ್ಯ ತು ತಾರಕಮ್ ।
ಮುಕ್ತಿಂ ದದಾತಿ ಪಾಪಾನಾಂ ಭೋಗಂ ಚೈವ ಯಥಾಯಥಮ್ ॥ ೫೫ ॥
ಅತ್ರ ಸರ್ವಾಣಿ ಪಾಪಾನಿ ಮರಣೇ ಸಮುಪಸ್ಥಿತೇ ।
ವಿಲಯಂತೇ ಯಥಾಕಾಮಂ ಭುಕ್ತಿರ್ಮುಕ್ತಿಶ್ಚ ಸಿದ್ಧ್ಯತಿ ॥ ೫೬ ॥
ಅತೋಽಸ್ಮಾದಪರಂ ಕಂ ವಾ ದಯಾಲುಂ ಶರಣಂ ವಯಮ್ ।
ವ್ರಜೇಮ ನ ತಥಾನ್ಯೋಽಸ್ತಿ ಭುವನೇಷ್ವಖಿಲೇಷ್ವಪಿ ॥ ೫೭ ॥
ಇತಿ ನಿಶ್ಚಿತ್ಯ ಸರ್ವೇಽಪಿ ಯಾಂತಿ ತಚ್ಛರಣಾಂತಿಕೇ ।
ಯಂ ಯಮರ್ಥಮಪೇಕ್ಷಂತೇ ತಂ ತಮರ್ಥಂ ಲಭಂತಿ ತೇ ॥ ೫೮ ॥
ಅತೋ ಜನ್ಮ ಸಮಾಸಾದ್ಯ ದುರ್ಲಭಂ ಮಾನುಷಂ ವರಮ್ ।
ಸಕೃದಪ್ಯತ್ರ ಯೇ ಯಾಂತಿ ಲಬ್ಧಂ ತೈರೇವ ತತ್ಫಲಮ್ ॥ ೫೯ ॥
ಗಂಗಾಯಮುನಸಂಭೇದೇ ಸ್ನಾತ್ವೈನಂ ಪೂಜಯಂತಿ ಯೇ ।
ತೇಷಾಂ ಕರಗತಂ ಜಾತಂ ಪುರುಷಾರ್ಥಚತುಷ್ಟಯಮ್ ॥ ೬೦ ॥
ಮುಖ್ಯಾನ್ಮುಖ್ಯತಮೋ ವೇಣೀಮಾಧವೋ ವರ್ಣಿತೋ ಮಯಾ ।
ಕೃಪಯಾ ಶ್ರೀಗುರೋರ್ವಿಪ್ರಾಃ ಕಿಮನ್ಯತ್ಕಥಯಾಮಿ ವಃ ॥ ೬೧ ॥

॥ ಇತಿ ಪಂಚಸಪ್ತತಿತಮೋಽಧ್ಯಾಯಃ ॥

**ಸೂತರು ಹೇಳಿದರು—**

ಆದ್ದರಿಂದ ಎಲ್ಲ ಬ್ರಾಹ್ಮಣರುಗಳು ಸಂಧ್ಯಾವಟದ ಸಮೀಪಕ್ಕೆ ಹೋಗಿ ಸಂಧ್ಯೆಯನ್ನು ಆಚರಿಸಿ ವಿಧಿವತ್ತಾಗಿ ಶ್ರೀಮಾಧವನನ್ನು ಪೂಜೆ ಮಾಡುವರು. ॥ ೪೨ ॥ "ಸಕಾಲದಲ್ಲಾಗಲೀ ಅಕಾಲದಲ್ಲಾಗಲೀ ನನ್ನಿಂದ ಸಂಧ್ಯೆಯು ಉಪಾಸಿಸಲ್ಪಟ್ಟಿಲ್ಲ; ಅದರಿಂದ ಹುಟ್ಟಿದ ಪಾಪಗಳೆಲ್ಲವನ್ನೂ ಪರಿಹರಿಸು, ಎಲೈ ಸಂಧ್ಯಾವಟವೇ! ನಿನಗೆ ನಮಸ್ಕಾರಗಳು." ॥ ೪೩ ॥ ಈ ರೀತಿ ಸಂಧ್ಯಾವಟವನ್ನು ಪ್ರಾರ್ಥಿಸುವವರಿಗೆ ಎಲ್ಲ ಪಾಪಗಳೂ ಪರಿಹಾರವಾಗುವುವು. ಅಲ್ಲದೆ ಅವರ ವಿಷಯದಲ್ಲಿ ಸಂಕಟಹರಮಾಧವನೂ ಪ್ರಸನ್ನನಾಗುವನು. ॥ ೪೪ ॥ ಗಂಗಾಯಮುನೆಯರ ದಡದಲ್ಲಿ ಮನೋಹರವಾದ ವೇಣೀಕ್ಷೇತ್ರದಲ್ಲಿ ಇರುವ ಮಧ್ಯವೇಣೀ ದಡದಲ್ಲಿ ಈ ವೇಣೀಮಾಧವನು ವಿರಾಜಮಾನನಾಗಿದ್ದಾನೆ. ॥ ೪೫ ॥ ಇವನ ಆಶ್ರಮವು ಇಪ್ಪತ್ತು ಬಾಣಗಳ ವಿಸ್ತಾರವುಳ್ಳದ್ದು ಎಂದು ಹೇಳಲ್ಪಟ್ಟಿದೆ. ಇಲ್ಲಿ ಈ ಮಾಧವನು ತ್ರಿವೇಣೀ, ಲಕ್ಷ್ಮೀಸಹಿತನಾಗಿ ಇದ್ದಾನೆ. ॥ ೪೬ ॥ ಈ ತ್ರಿವೇಣೀಮಾಧವನು ಕಸ್ತೂರಿಯಂತೆ ನೀಲ ವರ್ಣದಿಂದ ಕೂಡಿದ್ದಾನೆ. ಕೆಂದಾವರೆಯ ದಳದಂತೆ ಇವನ ಕಣ್ಣುಗಳಿವೆ. ಇವನು ಶಂಖ, ಚಕ್ರ, ಗದೆ ಮತ್ತು ಪದ್ಮವನ್ನು ಧರಿಸಿದ್ದಾನೆ, ನಾಲ್ಕು ಭುಜಗಳಿಂದ ಕೂಡಿದ್ದಾನೆ. ಇವನು ಜಗತ್ತಿಗೇ ಮುಖ್ಯಪ್ರಭುವು. ॥ ೪೭ ॥ ಇವನ ವಕ್ಷಃಸ್ಥಳದಲ್ಲಿ ಲಕ್ಷ್ಮೀದೇವಿಯ ಚಿಹ್ನೆಯಾದ ಶ್ರೀವತ್ಸಲಾಂಛನವಿದೆ, ಕೌಸ್ತುಭವನ್ನು ಕೊರಳಲ್ಲಿಟ್ಟಿದ್ದಾನೆ. ಹಳದೀ ರೇಶ್ಮೆ ಪೀತಾಂಬರವನ್ನುಟ್ಟಿದ್ದಾನೆ. ನಾನಾವಿಧವಾದ ಅಲಂಕಾರಗಳಿಂದ ಕಂಗೊಳಿಸುತ್ತಿದ್ದಾನೆ. ಅವನ ಮುಖಕಮಲವು ಪ್ರಸನ್ನತೆಯಿಂದ ಕೂಡಿದೆ. ॥ ೪೮ ॥ ಮೂರು ಬಣ್ಣಗಳಿಂದ, ಮೂರು ಗುಣಗಳಿಂದ ಕೂಡಿದ, ಮೂರು ಕಣ್ಣುಳ್ಳ ತಾಪತ್ರಯಗಳನ್ನು ನಾಶಮಾಡತಕ್ಕ, ತ್ರಿಲೋಕಗಳಲ್ಲಿ

ಹರಿವುಳ್ಳ ಗಂಗೆಯನ್ನೊಳಗೊಂಡ, ಮೂರು ಅಕ್ಷರಗಳಿಂದ ಪ್ರತಿಪಾದ್ಯವಾದ ತ್ರಿವೇಣಿಯು ಈ ವೇಣಿಮಾಧವನ ಎದುರಿಗೆ ಶೋಭಿಸುತ್ತಿದೆ. ॥ ೪೯ ॥ ದೇವತೆಗಳು, ದಾನವರು, ಗಂಧರ್ವರು, ಋಷಿಗಳು, ಸಿದ್ಧರು, ಚಾರಣರು, ಅರವತ್ತುನಾಲ್ಕು ಕಲಾಭಿಮಾನಿ ದೇವತೆಗಳು, ಅಪ್ಸರೆಯರು ಮತ್ತು ಇಲ್ಲಿರುವ ಸಮಸ್ತವೈಷ್ಣವಪೀಠಗಳಲ್ಲಿ ಬಂದು ನೆಲೆಸಿರುವವರೆಲ್ಲರೂ ಪ್ರತಿನಿತ್ಯವೂ ಸಕಲ ಪೂಜಾ ಸಾಮಗ್ರಿ ಸಹಿತನಾಗಿ ಬಂದು ಈ ವೇಣೀಮಾಧವನನ್ನು ಪೂಜಿಸುತ್ತಾರೆ. ॥ ೫೦-೫೧ ॥ ಈ ವೇಣೀಮಾಧವನು ಪುಣ್ಯಾತ್ಮರಾಗಿರಲಿ ಆಗದಿರಲಿ, ಎಲ್ಲರಿಗೂ ಅವರ ಶ್ರಮವನ್ನನುಸರಿಸಿ ಫಲಗಳನ್ನು ಕೊಡುತ್ತಾನೆ. ಭಕ್ತರಿಗಂತೂ ವಿಶೇಷವಾಗಿ ಫಲ ಕೊಡುವನು. ॥ ೫೨ ॥ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳನ್ನೂ ಅವರವರ ಅಪೇಕ್ಷೆಯಂತೆ ಕೊಡುವನು. ನಿಷ್ಕಾಮಿಗಳಿಗೆ ಮುಕ್ತಿಯನ್ನೇ ಕೊಟ್ಟು ಕರುಣಿಸುವನು. ॥ ೫೩ ॥ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ ಮುಂತಾದುವು ಮಾಧವನನ್ನೇ ಸ್ತುತಿಸುತ್ತಿವೆ. ಅಂತಹ ಈ ಮಾಧವನ ದಯಾದೃಷ್ಟಿಯಿರಲು ಯಾವುದು ತಾನೇ ದುರ್ಲಭವು? ॥ ೫೪ ॥ ಕಾಶಿಯಲ್ಲಿ ಸಾಕ್ಷಾತ್ ವಿಶ್ವೇಶ್ವರನೇ ಪಾಪ ಮಾಡಿದವರಿಗೆ ಪಾಪಗಳನ್ನು ಪರಿಹಾರ ಮಾಡಿ ಭೋಗಗಳನ್ನು ಅವರವರ ಯೋಗ್ಯತೆ ಮತ್ತು ಸಾಧನೆಗಳಿಗನುಸಾರವಾಗಿ ಕೊಟ್ಟು, ತಾರಕಮಂತ್ರವನ್ನು ಉಪದೇಶಿಸಿ ತನ್ಮೂಲಕ ಮೋಕ್ಷವನ್ನು ಕೊಡಿಸುತ್ತಾನೆ. ॥ ೫೫ ॥ ಈ ತ್ರಿವೇಣಿಯಲ್ಲಿ ಮರಣವು ಸನ್ನಿಹಿತ-ವಾಗುತ್ತಿರಲು ಎಲ್ಲ ಪಾಪಗಳೂ ಪರಿಹಾರವಾಗಿ ಅವರವರ ಅಪೇಕ್ಷೆಗೆ ತಕ್ಕಂತೆ ಎಲ್ಲವೂ ಸಿದ್ಧಿಸಿ ಭೋಗವೂ ಮುಕ್ತಿಯೂ ದೊರಕುವುದು. ॥ ೫೬ ॥ ಆದ್ದರಿಂದ ಇವನಿಂದ ಬೇರೆಯಾದ ಯಾವ ದಯಾಳುವನ್ನು ನಾವು ಶರಣು ಹೋಗೋಣ? ಇಂತಹ ಬೇರೆಯಾರು ಈ ಹದಿನಾಲ್ಕು ಲೋಕಗಳಲ್ಲಿ ಇದ್ದಾರೆ? ॥ ೫೭ ॥ ಹೀಗೆಂದು ನಿಶ್ಚಯಮಾಡಿಕೊಂಡೇ ಎಲ್ಲರೂ ಈ ಮಾಧವನ ಚರಣಕಮಲವನ್ನು ಹಿಡಿದು ಏನನ್ನು ಅಪೇಕ್ಷಿಸುತ್ತಾರೋ ಅವೆಲ್ಲವನ್ನು ಪಡೆಯುವರು. ॥ ೫೮ ॥ ಆದ್ದರಿಂದ ದುರ್ಲಭವಾದ ಮಾನುಷಜನ್ಮವನ್ನು ಹೊಂದಿದವನು ಒಂದು ಬಾರಿಯಾದರೂ ಈ ಪ್ರಯಾಗಕ್ಷೇತ್ರಕ್ಕೆ ಹೋದರೆ ತನ್ನ ಮನುಷ್ಯಜನ್ಮಸಂಪಾದನೆಗೆ ಸಾರ್ಥಕ್ಯವನ್ನು ಪಡೆಯುವನು. ॥ ೫೯ ॥ ಗಂಗಾಯಮುನೆಯರ ಸಂಗಮದಲ್ಲಿ ಈ ಮಾಧವನನ್ನು ಪೂಜಿಸುವವರು ಪುರುಷಾರ್ಥ ಚತುಷ್ಟಯಗಳನ್ನೂ ತಮ್ಮ ಅಂಗೈಯಲ್ಲಿ ಇಟ್ಟುಕೊಳ್ಳುವರು. ॥ ೬೦ ॥ ಎಲ್ಲ ಮುಖ್ಯವಾದುವು-ಗಳಿಗಿಂತ ಮುಖ್ಯವಾದುದು. ಈ ತ್ರಿವೇಣಿಯ ಮಾಧವನು. ನಮ್ಮ ಗುರುಗಳಾದ ಶ್ರೀವೇದವ್ಯಾಸರ ಕೃಪೆಯಿಂದ ಇದನ್ನು ವರ್ಣಿಸಲಾಯಿತು. ತಮ್ಮಗಳಿಗೆ ಇನ್ನೇನನ್ನು ಹೇಳಲಿ? ॥ ೬೧ ॥

॥ ಎಪ್ಪತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಟ್ಸಪ್ತತಿತಮೋಽಧ್ಯಾಯಃ ॥ ೭೬ ॥

ಋಷಯ ಊಚುಃ—

ಸೂತ ಸೂತ ಮಹಾಬುದ್ಧೇ ಶ್ರುತ್ವಾ ಮಾಧವವರ್ಣನಮ್ ।
ವಯಂ ಪ್ರಮುದಿತಾಸ್ಸರ್ವೇ ಯತಃ ಪುಣ್ಯವಿವರ್ಧನಮ್ ॥ ೧ ॥
ಅವಾಂತರಾಣಿ ತೀರ್ಥಾನಿ ತಥಾ ಪುಣ್ಯಸ್ಥಲಾನಿ ಚ ।
ಪರೋಪಕೃತಯೇಽಸ್ಮಾಕಂ ತಾನಿ ವರ್ಣಯ ವಿಸ್ತರಾತ್ ॥ ೨ ॥

## ॥ ಎಪ್ಪತ್ತಾರನೆಯ ಅಧ್ಯಾಯವು ॥

ಶೌನಕಾದಿ ಋಷಿಗಳು ಹೇಳಿದರು—

ಎಲೈ ಸೂತರೇ! ಮಹಾಬುದ್ಧಿವಂತರಾದವರೇ! ನಿಮ್ಮಿಂದ ವರ್ಣಿಸಲ್ಪಟ್ಟ ಶ್ರೀಮಾಧವದೇವರ ವರ್ಣನೆಯನ್ನು ಕೇಳಿ ನಾವುಗಳು ಸಂತುಷ್ಟರಾಗಿದ್ದೇವೆ, ಇದರಿಂದ ನಮ್ಮಗಳ ಪುಣ್ಯವೂ ಹೆಚ್ಚಾಗಿದೆ. ॥ ೧ ॥ ಅಷ್ಟು ಮುಖ್ಯವಲ್ಲದ ತೀರ್ಥಗಳನ್ನು ಮತ್ತು ಪುಣ್ಯಸ್ಥಳಗಳನ್ನು ಪರೋಪಕಾರದ ದೃಷ್ಟಿಯಿಂದ ನಮಗೆ ವಿಸ್ತಾರವಾಗಿ ಹೇಳಿರಿ. ॥ ೨ ॥

ಸೂತ ಉವಾಚ—

ಸಮ್ಯಕ್ಪೃಷ್ಟಂ ಮುನಿಶ್ರೇಷ್ಠಾ ಪರೋಪಕೃತಿವಾಂಛಯಾ ।
ಭವದ್ಭಿಸ್ತದಹಂ ವಕ್ಷ್ಯೇ ಶೇಷಪ್ರೋಕ್ತಂ ನಿಬೋಧತ ॥ ೩ ॥

ಸೂತರು ಹೇಳಿದರು—

ಎಲೈ ಶೌನಕಾದಿಗಳೇ! ಪರೋಪಕಾರದ ಆಸೆಯಿಂದ ನಿಮ್ಮಿಂದ ಚೆನ್ನಾಗಿ ಕೇಳಲ್ಪಟ್ಟಿತು. ಈ ವಿಷಯದಲ್ಲಿ ಶ್ರೀಶೇಷದೇವರಿಂದ ಹೇಳಲ್ಪಟ್ಟದ್ದನ್ನು ವಿವರಿಸುವೆನು. ॥ ೩ ॥

ಶೇಷ ಉವಾಚ—

ಭೋ ಭೋ ಬ್ರಹ್ಮಸುತಾ ಯೂಯಮಿದಾನೀಂ ಶೃಣುತಾದೃತಾಃ ।
ವಕ್ಷ್ಯೇಽವಾಂತರತೀರ್ಥಾನಾಂ ನಾಮಯಾತ್ರಾವಿಧಿಕ್ರಮಮ್ ॥ ೪ ॥
ವಟಸ್ಯ ದಶಹಸ್ತಾಂತೇ ಶೂಲಟಂಕೇಶ್ವರಸ್ಥಲಮ್ ।
ಉತ್ತರೇ ವರ್ತತೇ ಪುಣ್ಯಂ ಪುಣ್ಯಾತಿಶಯಕಾರಕಮ್ ॥ ೫ ॥
ಶೂಲಟಂಕೇಶ್ವರಸ್ತತ್ರ ವರ್ತತೇ ಪರಮೇಶ್ವರಃ ।
ಮಾಧವಸ್ಯ ಪ್ರಸಾದಾರ್ಥಂ ವಿಹಾಯಾನಂದಕಾನನಮ್ ॥ ೬ ॥
ತತ್ರ ಗತ್ವಾ ಚ ಯೇ ಲೋಕಾ ಭಕ್ತ್ಯಾ ತಂ ಪೂಜಯಂತಿ ತೇ ।
ಪತ್ರಪುಷ್ಪಫಲೈಸ್ತೋಯೈಃ ಪ್ರಾಪ್ನುವಂತಿ ಮನೋಗತಮ್ ॥ ೭ ॥
ತ್ರಿರಾತ್ರಮೇಕರಾತ್ರಂ ವಾ ನಿರನ್ನಾಸ್ತತ್ರ ಯೇ ಜನಾಃ ।
ರುದ್ರಾಧ್ಯಾಯಂ ರುದ್ರಸೂಕ್ತಂ ಶಿವಪಂಚಾಕ್ಷರಂ ಮನುಮ್ ॥ ೮ ॥

ದಕ್ಷಿಣಾಮೂರ್ತಿಮಂತ್ರಂ ವಾಘೋರಮಂತ್ರಂ ಚ ವೈದಿಕಮ್ ।
ಜಪಂತಿ ಪ್ರಯತಾತ್ಮಾನಸ್ತೇಷಾಂ ಸಿದ್ಧಿಃ ಕರೇ ಸ್ಥಿತಾ ॥ ೯ ॥
ತತ್ರ ಜಪ್ತಂ ಹುತಂ ದತ್ತಂ ಯತ್ಕಿಂಚಿಚ್ಛಿವತೋಷಣಮ್ ।
ಶಂಕರಸ್ಯ ಪ್ರಸಾದೇನ ತಸ್ಯ ಕಾಲಭಯಂ ನ ಹಿ ॥ ೧೦ ॥
ತಿಲಭಾಂಡೇಶ್ವರಸ್ತತ್ರ ಪಶ್ಚಿಮೇ ವರ್ತತೇ ಶಿವಃ ।
ತಸ್ಯ ಪೂಜನಮಾತ್ರೇಣ ಪ್ರಾಪ್ಯತೇ ಪುಣ್ಯಮುತ್ತಮಮ್ ॥ ೧೧ ॥
ಶೂಲಟಂಕೇಶ್ವರೇ ಯೇ ವೈ ತಿಲಭಾಂಡೇಶ್ವರೇ ತಥಾ ।
ರುದ್ರಾಭಿಷೇಕಂ ಕುರ್ವಂತಿ ತೇಷಾಂ ಪುಣ್ಯಮನಂತಕಮ್ ॥ ೧೨ ॥
ಕರ್ಮಸಾಕ್ಷೀ ಜಗತ್ಪೂಜ್ಯಸ್ತತ್ರೈವಾಸ್ತೇ ವಿನಾಯಕಃ ।
ಸಾಕ್ಷೀವಿನಾಯಕೋ ನಾಮ್ನಾ ಫಲಸಂಪೂರ್ತಿಕಾರಕಃ ॥ ೧೩ ॥
ಸಂಪೂಜಯಂತಿ ಯೇ ಭಕ್ತ್ಯಾ ಸ್ತುವಂತಿ ಚ ನಮಂತಿ ಚ ।
ನಿವೇದಯಂತಿ ಯಾತ್ರಾಂ ಚ ತೇಷಾಂ ಪೂರ್ಣಫಲಂ ಲಭೇತ್ ॥ ೧೪ ॥
ತಸ್ಯೈವ ಪಶ್ಚಿಮೇ ಭಾಗೇ ಕುಲಸ್ತಂಭೋಽಸ್ತಿ ಶೋಭನಃ ।
ಬ್ರಹ್ಮಣಾ ಸ್ಥಾಪಿತೋ ಯಜ್ಞೇ ಕುಲವೃದ್ಧಿಕರಸ್ಸತಾಮ್ ॥ ೧೫ ॥
ತಂ ಪಶ್ಯಂತಿ ನಮಸ್ಯಂತಿ ಪೂಜಯಂತಿ ಪರಿಕ್ರಮೈಃ ।
ಕುಲವೃದ್ಧಿರ್ಭವೇತ್ತೇಷಾಂ ಯಾವಚ್ಚಂದ್ರಾರ್ಕಮೇದಿನಿ ॥ ೧೬ ॥
ತಸ್ಯೋತ್ತರೇಽಸ್ತಿ ಲಲಿತಾ ಕಲ್ಯಾಣೀತಿ ಚ ಗೀಯತೇ ।
ದರ್ಶನಸ್ತವಪೂಜಾಭಿಸ್ಸರ್ವೇಷಾಂ ಸರ್ವಕಾಮದಾ ॥ ೧೭ ॥
ತತ್ರೈವ ವರ್ತತೇ ಸಾಕ್ಷಾದೀಶ್ವರೋ ಲಲಿತೇಶ್ವರಃ ।
ತಸ್ಯ ಪೂಜನಮಾತ್ರೇಣ ಜಾಯತೇ ಶಿವವಲ್ಲಭಃ ॥ ೧೮ ॥
ವಟಸ್ಯ ಪಶ್ಚಿಮೇ ಭಾಗೇ ಸೂರ್ಯಕುಂಡೋಽಸ್ತಿ ಶೋಭನಃ ।
ಸೂರ್ಯಸ್ತತ್ರ ತಪಸ್ತೇಪೇ ಮುನಯೋ ಬಹುವಾಸರಮ್ ॥ ೧೯ ॥

ಶೇಷದೇವರು ಹೇಳಿದರು—

ಎಲೈ ಬ್ರಹ್ಮಪುತ್ರರಾದ ಸನಕಾದಿಗಳೇ! ಆದರದಿಂದ ಆಲಿಸಿರಿ. ನಾನು ಅಪ್ರಧಾನವಾದ ತೀರ್ಥಗಳ ಒಂದೊಂದೇ ಹೆಸರುಗಳನ್ನು ಕ್ರಮವಾಗಿ ಹೇಳುತ್ತಾ ಅವುಗಳ ಮಹಿಮೆಯನ್ನು ವರ್ಣಿಸುತ್ತೇನೆ. ॥ ೪ ॥ ಅಕ್ಷಯವಟಕ್ಕೆ ಹತ್ತು ಕೈಯಳತೆ ದೂರದಲ್ಲಿ ಉತ್ತರಕ್ಕೆ ಶೂಲಟಂಕೇಶ್ವರನ ಮಂದಿರವಿದೆ. ಇದು ಪುಣ್ಯಕರವೂ ಮತ್ತು ಪುಣ್ಯವನ್ನು ಬೆಳೆಸತಕ್ಕದ್ದೂ ಆಗಿದೆ. ॥ ೫ ॥ ಮಹರುದ್ರದೇವರು ಶೂಲಟಂಕೇಶ್ವರನಾಗಿ ಶ್ರೀಮಾಧವನ ಅನುಗ್ರಹಕ್ಕೋಸ್ಕರ ಆನಂದವನವನ್ನು ಪರಿತ್ಯಾಗ ಮಾಡಿ ಇಲ್ಲಿ ವಿಹಾರಮಾಡಿಕೊಂಡಿದ್ದಾರೆ. ॥ ೬ ॥ ಅಲ್ಲಿಗೆ ಹೋದ ಭಕ್ತರು ಪತ್ರ, ಪುಷ್ಪ, ಫಲ ಮತ್ತು ಜಲದಿಂದ ಅವನನ್ನು ಪೂಜಿಸಿದವರು ಅವರ ಮನಸ್ಸಿನ ಅಪೇಕ್ಷೆಗಳನ್ನೆಲ್ಲಾ ಹೊಂದುವರು. ॥ ೭ ॥ ಯಾರು ಮೂರು ರಾತ್ರಿಯಾಗಲೀ ಅಥವಾ ಒಂದು ರಾತ್ರಿಯಾಗಲೀ

ಇಲ್ಲಿ ಇದ್ದು ರುದ್ರಾಧ್ಯಾಯ, ರುದ್ರಸೂಕ್ತ, ಶಿವಪಂಚಾಕ್ಷರಮಂತ್ರ, ದಕ್ಷಿಣಾಮೂರ್ತಿಸ್ತೋತ್ರ, ಅಘೋರಮಂತ್ರ ಇವುಗಳನ್ನು ಪ್ರಯತ್ನಪಟ್ಟು ಜಪಿಸುತ್ತಾರೋ, ಅವರಿಗೆ ಅಂಗೈಯಲ್ಲಿಯೇ ಸಕಲಸಿದ್ಧಿಯೂ ಇರುವುದು. ॥ ೮-೯ ॥ ಅಲ್ಲಿ ಮಾಡಿದ ಜಪ, ಹೋಮ, ದಾನ ಸ್ವಲ್ಪವಾದರೂ ಆ ಶಿವನನ್ನು ಸಂತುಷ್ಟಿಗೊಳಿಸುವ ಕಾರ್ಯಗಳು, ಇವುಗಳಿಂದ ಈಶ್ವರನು ಪ್ರಸನ್ನನಾಗಿ ಅವರಿಗೆ ಅಪಮೃತ್ಯುವಿನ ಅಥವಾ ಯಮನ ಭಯವಿರುವುದಿಲ್ಲ. ॥ ೧೦ ॥ ಅಲ್ಲಿಯೇ ಪಶ್ಚಿಮಕ್ಕೆ ಇರುವ ತಿಲಭಾಂಡೇಶ್ವರನ ಪೂಜಾ ಮಾಡುವುದರಿಂದ ಉತ್ತಮಪುಣ್ಯಪ್ರಾಪ್ತಿಯಾಗುವುದು. ॥ ೧೧ ॥ ಶ್ರೀಶೂಲ ಟಂಕೇಶ್ವರನಿಗೂ ಮತ್ತು ತಿಲಭಾಂಡೇಶ್ವರನಿಗೂ ರುದ್ರಾಭಿಷೇಕವನ್ನು ಮಾಡುವವರು ಅನಂತ ಪುಣ್ಯವನ್ನು ಪಡೆಯುವರು. ॥ ೧೨ ॥ ಅಲ್ಲಿ ಜಗತ್ತಿಗೆ ಕಣ್ಣನಂತಿದ್ದು, ಸಕಲಕರ್ಮಗಳಿಗೆ ಸಾಕ್ಷಿಯಾಗಿರುವ ಸಾಕ್ಷೀವಿನಾಯಕನು ಇದ್ದಾನೆ; ಇವನು ಫಲಗಳಿಗೆ ಪರಿಪೂರ್ಣತೆಯನ್ನು ತಂದುಕೊಡುವನು. ॥ ೧೩ ॥ ಇವನನ್ನು ಯಾರು ಚೆನ್ನಾಗಿ ಪೂಜಿಸಿ, ಭಕ್ತಿಯಿಂದ ನಮಸ್ಕರಿಸಿ ತಮ್ಮ ಯಾತ್ರೆಯ ವಿವರಗಳನ್ನು ನಿವೇದನೆ ಮಾಡಿಕೊಳ್ಳುತ್ತಾರೋ ಅವರುಗಳಿಗೆ ಯಾತ್ರೆಯ ಪೂರ್ಣಫಲವು ದೊರಕುವುದು. ॥ ೧೪ ॥ ಅದಕ್ಕೆ ಪಶ್ಚಿಮಕ್ಕೆ ಮಂಗಳಕರವಾದ ಬ್ರಹ್ಮದೇವರಿಂದ ಸ್ಥಾಪಿತವಾದ ಕುಲಸ್ತಂಭವಿದೆ. ಇದು ವಂಶವನ್ನು ಉದ್ಧಾರ ಮಾಡತಕ್ಕದ್ದು. ॥ ೧೫ ॥ ಇದನ್ನು ದರ್ಶನ ಮಾಡಿ ಪ್ರದಕ್ಷಿಣೆ ನಮಸ್ಕಾರಗಳಿಂದ ಯಾರು ಪೂಜಿಸುವರೋ ಅವರ ವಂಶವು ಸೂರ್ಯ, ಚಂದ್ರ ಮತ್ತು ಭೂಮಿಯಿರುವವರೆಗೂ ವೃದ್ಧಿಗೊಳ್ಳುವುದು. ॥ ೧೬ ॥ ಅದಕ್ಕೆ ಉತ್ತರದಲ್ಲಿ ಕಲ್ಯಾಣಿಯೆಂದೆನಿಸುವ ಲಲಿತೆಯು (ಪಾರ್ವತೀದೇವಿ) ಇದ್ದಾಳೆ; ಇವಳ ದರ್ಶನ ಮತ್ತು ಸ್ತೋತ್ರ ಮಾಡುವುದರಿಂದ ಎಲ್ಲರ ಇಷ್ಟಾರ್ಥಗಳೂ ನೆರವೇರುವುದು. ॥ ೧೭ ॥ ಅಲ್ಲಿಯೇ ಈ ಲಲಿತಾದೇವಿಯ ಪತಿಯಾದ ಲಲಿತೇಶ್ವರನಿದ್ದು, ಅವನ ದರ್ಶನ ಮಾಡುವವರು ಶಿವಪ್ರಿಯ ರಾಗುತ್ತಾರೆ ॥ ೧೮ ॥ ಅಕ್ಷಯವಟವೃಕ್ಷದ ಪಶ್ಚಿಮಕ್ಕೆ ಮಂಗಳಕರವಾದ ಸೂರ್ಯಕುಂಡವಿದೆ. ಅಲ್ಲಿ ಸೂರ್ಯದೇವನೂ ಋಷಿಗಳೂ ಬಹುದಿವಸ ತಪಸ್ಸು ಮಾಡಿದರು. ॥ ೧೯ ॥

**ಋಷಯ ಊಚುಃ—**

> **ಕುತಸ್ತೋಽತ್ರ ತಪಸ್ತೇಪೇ ಭಾಸ್ಕರೋ ದೇವಸತ್ತಮಃ ।**
> **ತದ್ ಬ್ರೂಹಿ ಸೂತ ನಸ್ಸರ್ವಂ ಶ್ರವಣೇಚ್ಛಾವಗಾಹತೇ ॥ ೨೦ ॥**

**ಋಷಿಗಳು ಹೇಳಿದರು—**

ಎಲೈ ಸೂತಪುರಾಣಿಕರೇ! ದೇವಶ್ರೇಷ್ಠನಾದ ಸೂರ್ಯನು ಏತಕ್ಕಾಗಿ ಇಲ್ಲಿ ತಪಸ್ಸು ಮಾಡಿದನು? ಇದನ್ನು ಹೇಳಿರಿ. ಇದನ್ನು ಕೇಳಲು ನಮಗೆ ಇಚ್ಛೆಯಾಗುತ್ತಿದೆ. ॥ ೨೦ ॥

**ಸೂತ ಉವಾಚ—**

> **ವೇದೋದಿತಾನಿ ಕರ್ಮಾಣಿ ಸ್ವರ್ಗಮೋಕ್ಷಕರಾಣಿ ಚ ।**
> **ತೇಷಾಂ ಪ್ರವರ್ತಕಃ ಸೂರ್ಯಸ್ತಪಸ್ತೇಪೇ ಪುರಾನಘಾಃ ॥ ೨೧ ॥**
> **ಏವಂ ತಪಸ್ಯತಸ್ತಸ್ಯ ಶೌನಕಾದ್ಯಾ ಮಹರ್ಷಯಃ ।**
> **ಪ್ರಸನ್ನಸ್ತಪಸಾತ್ಯರ್ಥಂ ತಮಾಹ ವಟಮಾಧವಃ ॥ ೨೨ ॥**

ದಕ್ಷಿಣಾಮೂರ್ತಿಮಂತ್ರಂ ವಾಘೋರಮಂತ್ರಂ ಚ ವೈದಿಕಮ್ ।
ಜಪಂತಿ ಪ್ರಯತಾತ್ಮಾನಸ್ತೇಷಾಂ ಸಿದ್ಧಿಃ ಕರೇ ಸ್ಥಿತಾ ॥ ೯ ॥
ತತ್ರ ಜಪ್ತಂ ಹುತಂ ದತ್ತಂ ಯತ್ಕಿಂಚಿಚ್ಛಿವತೋಷಣಮ್ ।
ಶಂಕರಸ್ಯ ಪ್ರಸಾದೇನ ತಸ್ಯ ಕಾಲಭಯಂ ನ ಹಿ ॥ ೧೦ ॥
ತಿಲಭಾಂಡೇಶ್ವರಸ್ತತ್ರ ಪಶ್ಚಿಮೇ ವರ್ತತೇ ಶಿವಃ ।
ತಸ್ಯ ಪೂಜನಮಾತ್ರೇಣ ಪ್ರಾಪ್ಯತೇ ಪುಣ್ಯಮುತ್ತಮಮ್ ॥ ೧೧ ॥
ಶೂಲಟಂಕೇಶ್ವರೇ ಯೇ ವೈ ತಿಲಭಾಂಡೇಶ್ವರೇ ತಥಾ ।
ರುದ್ರಾಭಿಷೇಕಂ ಕುರ್ವಂತಿ ತೇಷಾಂ ಪುಣ್ಯಮನಂತಕಮ್ ॥ ೧೨ ॥
ಕರ್ಮಸಾಕ್ಷೀ ಜಗತ್ಪೂಜ್ಯಸ್ತತ್ರೈವಾಸ್ತೇ ವಿನಾಯಕಃ ।
ಸಾಕ್ಷಿವಿನಾಯಕೋ ನಾಮ್ನಾ ಫಲಸಂಪೂರ್ತಿಕಾರಕಃ ॥ ೧೩ ॥
ಸಂಪೂಜಯಂತಿ ಯೇ ಭಕ್ತ್ಯಾ ಸ್ತುವಂತಿ ಚ ನಮಂತಿ ಚ ।
ನಿವೇದಯಂತಿ ಯಾತ್ರಾಂ ಚ ತೇಷಾಂ ಪೂರ್ಣಫಲಂ ಲಭೇತ್ ॥ ೧೪ ॥
ತಸ್ಯೈವ ಪಶ್ಚಿಮೇ ಭಾಗೇ ಕುಲಸ್ತಂಭೋಽಸ್ತಿ ಶೋಭನಃ ।
ಬ್ರಹ್ಮಣಾ ಸ್ಥಾಪಿತೋ ಯಜ್ಞೇ ಕುಲವೃದ್ಧಿಕರಸ್ಸತಾಮ್ ॥ ೧೫ ॥
ತಂ ಪಶ್ಯಂತಿ ನಮಸ್ಯಂತಿ ಪೂಜಯಂತಿ ಪರಿಕ್ರಮೈಃ ।
ಕುಲವೃದ್ಧಿರ್ಭವೇತ್ತೇಷಾಂ ಯಾವಚ್ಚಂದ್ರಾರ್ಕಮೇದಿನಿ ॥ ೧೬ ॥
ತಸ್ಯೋತ್ತರೇಽಸ್ತಿ ಲಲಿತಾ ಕಲ್ಯಾಣೀತಿ ಚ ಗೀಯತೇ ।
ದರ್ಶನಸ್ತವಪೂಜಾಭಿಸ್ಸರ್ವೇಷಾಂ ಸರ್ವಕಾಮದಾ ॥ ೧೭ ॥
ತತ್ರೈವ ವರ್ತತೇ ಸಾಕ್ಷಾದೀಶ್ವರೋ ಲಲಿತೇಶ್ವರಃ ।
ತಸ್ಯ ಪೂಜನಮಾತ್ರೇಣ ಜಾಯತೇ ಶಿವವಲ್ಲಭಃ ॥ ೧೮ ॥
ವಟಸ್ಯ ಪಶ್ಚಿಮೇ ಭಾಗೇ ಸೂರ್ಯಕುಂಡೋಽಸ್ತಿ ಶೋಭನಃ ।
ಸೂರ್ಯಸ್ತತ್ರ ತಪಸ್ತೇಪೇ ಮುನಯೋ ಬಹುವಾಸರಮ್ ॥ ೧೯ ॥

ಶೇಷದೇವರು ಹೇಳಿದರು—

ಎಲೈ ಬ್ರಹ್ಮಪುತ್ರರಾದ ಸನಕಾದಿಗಳೇ! ಆದರದಿಂದ ಆಲಿಸಿರಿ. ನಾನು ಅಪ್ರಧಾನವಾದ ತೀರ್ಥಗಳ ಒಂದೊಂದೇ ಹೆಸರುಗಳನ್ನು ಕ್ರಮವಾಗಿ ಹೇಳುತ್ತಾ ಅವುಗಳ ಮಹಿಮೆಯನ್ನು ವರ್ಣಿಸುತ್ತೇನೆ. ॥ ೪ ॥ ಅಕ್ಷಯವಟಕ್ಕೆ ಹತ್ತು ಕೈಯಳತೆ ದೂರದಲ್ಲಿ ಉತ್ತರಕ್ಕೆ ಶೂಲಟಂಕೇಶ್ವರನ ಮಂದಿರವಿದೆ. ಇದು ಪುಣ್ಯಕರವೂ ಮತ್ತು ಪುಣ್ಯವನ್ನು ಬೆಳೆಸತಕ್ಕದ್ದೂ ಆಗಿದೆ. ॥ ೫ ॥ ಮಹರುದ್ರದೇವರು ಶೂಲಟಂಕೇಶ್ವರನಾಗಿ ಶ್ರೀಮಾಧವನ ಅನುಗ್ರಹಕ್ಕೋಸ್ಕರ ಆನಂದವನವನ್ನು ಪರಿತ್ಯಾಗ ಮಾಡಿ ಇಲ್ಲಿ ವಿಹಾರಮಾಡಿಕೊಂಡಿದ್ದಾರೆ. ॥ ೬ ॥ ಅಲ್ಲಿಗೆ ಹೋದ ಭಕ್ತರು ಪತ್ರ, ಪುಷ್ಪ, ಫಲ ಮತ್ತು ಜಲದಿಂದ ಅವನನ್ನು ಪೂಜಿಸಿದವರು ಅವರ ಮನಸ್ಸಿನ ಅಪೇಕ್ಷೆಗಳನ್ನೆಲ್ಲಾ ಹೊಂದುವರು. ॥ ೭ ॥ ಯಾರು ಮೂರು ರಾತ್ರಿಯಾಗಲೀ ಅಥವಾ ಒಂದು ರಾತ್ರಿಯಾಗಲೀ

ಇಲ್ಲಿ ಇದ್ದು ರುದ್ರಾಧ್ಯಾಯ, ರುದ್ರಸೂಕ್ತ ಶಿವಪಂಚಾಕ್ಷರಮಂತ್ರ, ದಕ್ಷಿಣಾಮೂರ್ತಿಸ್ತೋತ್ರ, ಅಘೋರಮಂತ್ರ ಇವುಗಳನ್ನು ಪ್ರಯತ್ನಪಟ್ಟು ಜಪಿಸುತ್ತಾರೋ, ಅವರಿಗೆ ಅಂಗೈಯಲ್ಲಿಯೇ ಸಕಲಸಿದ್ಧಿಯೂ ಇರುವುದು. ॥ ೮-೯ ॥ ಅಲ್ಲಿ ಮಾಡಿದ ಜಪ, ಹೋಮ, ದಾನ ಸ್ವಲ್ಪವಾದರೂ ಆ ಶಿವನನ್ನು ಸಂತುಷ್ಟಿಗೊಳಿಸುವ ಕಾರ್ಯಗಳು, ಇವುಗಳಿಂದ ಈಶ್ವರನು ಪ್ರಸನ್ನನಾಗಿ ಅವರಿಗೆ ಅಪಮೃತ್ಯುವಿನ ಅಥವಾ ಯಮನ ಭಯವಿರುವುದಿಲ್ಲ. ॥ ೧೦ ॥ ಅಲ್ಲಿಯೇ ಪಶ್ಚಿಮಕ್ಕೆ ಇರುವ ತಿಲಭಾಂಡೇಶ್ವರನ ಪೂಜಾ ಮಾಡುವುದರಿಂದ ಉತ್ತಮಪುಣ್ಯಪ್ರಾಪ್ತಿಯಾಗುವುದು. ॥ ೧೧ ॥ ಶ್ರೀಶೂಲ ಟಂಕೇಶ್ವರನಿಗೂ ಮತ್ತು ತಿಲಭಾಂಡೇಶ್ವರನಿಗೂ ರುದ್ರಾಭಿಷೇಕವನ್ನು ಮಾಡುವವರು ಅನಂತ ಪುಣ್ಯವನ್ನು ಪಡೆಯುವರು. ॥ ೧೨ ॥ ಅಲ್ಲಿ ಜಗತ್ತಿಗೆ ಕಣ್ಣನಂತಿದ್ದು, ಸಕಲಕರ್ಮಗಳಿಗೆ ಸಾಕ್ಷಿಯಾಗಿರುವ ಸಾಕ್ಷೀವಿನಾಯಕನು ಇದ್ದಾನೆ; ಇವನು ಫಲಗಳಿಗೆ ಪರಿಪೂರ್ಣತೆಯನ್ನು ತಂದುಕೊಡುವನು. ॥ ೧೩ ॥ ಇವನನ್ನು ಯಾರು ಚೆನ್ನಾಗಿ ಪೂಜಿಸಿ, ಭಕ್ತಿಯಿಂದ ನಮಸ್ಕರಿಸಿ ತಮ್ಮ ಯಾತ್ರೆಯ ವಿವರಗಳನ್ನು ನಿವೇದನೆ ಮಾಡಿಕೊಳ್ಳುತ್ತಾರೋ ಅವರುಗಳಿಗೆ ಯಾತ್ರೆಯ ಪೂರ್ಣಫಲವು ದೊರಕುವುದು. ॥ ೧೪ ॥ ಅದಕ್ಕೆ ಪಶ್ಚಿಮಕ್ಕೆ ಮಂಗಳಕರವಾದ ಬ್ರಹ್ಮದೇವರಿಂದ ಸ್ಥಾಪಿತವಾದ ಕುಲಸ್ತಂಭವಿದೆ. ಇದು ವಂಶವನ್ನು ಉದ್ಧಾರ ಮಾಡತಕ್ಕದ್ದು. ॥ ೧೫ ॥ ಇದನ್ನು ದರ್ಶನ ಮಾಡಿ ಪ್ರದಕ್ಷಿಣೆ ನಮಸ್ಕಾರಗಳಿಂದ ಯಾರು ಪೂಜಿಸುವರೋ ಅವರ ವಂಶವು ಸೂರ್ಯ, ಚಂದ್ರ ಮತ್ತು ಭೂಮಿಯಿರುವವರೆಗೂ ವೃದ್ಧಿಗೊಳ್ಳುವುದು. ॥ ೧೬ ॥ ಅದಕ್ಕೆ ಉತ್ತರದಲ್ಲಿ ಕಲ್ಯಾಣಿಯೆಂದೆನಿಸುವ ಲಲಿತೆಯು (ಪಾರ್ವತೀದೇವಿ) ಇದ್ದಾಳೆ; ಇವಳ ದರ್ಶನ ಮತ್ತು ಸ್ತೋತ್ರ ಮಾಡುವುದರಿಂದ ಎಲ್ಲರ ಇಷ್ಟಾರ್ಥಗಳೂ ನೆರವೇರುವುದು. ॥ ೧೭ ॥ ಅಲ್ಲಿಯೇ ಈ ಲಲಿತಾದೇವಿಯ ಪತಿಯಾದ ಲಲಿತೇಶ್ವರನಿದ್ದು, ಅವನ ದರ್ಶನ ಮಾಡುವವರು ಶಿವಪ್ರಿಯ ರಾಗುತ್ತಾರೆ ॥ ೧೮ ॥ ಅಕ್ಷಯವಟವೃಕ್ಷದ ಪಶ್ಚಿಮಕ್ಕೆ ಮಂಗಳಕರವಾದ ಸೂರ್ಯಕುಂಡವಿದೆ. ಅಲ್ಲಿ ಸೂರ್ಯದೇವನೂ ಋಷಿಗಳೂ ಬಹುದಿವಸ ತಪಸ್ಸು ಮಾಡಿದರು. ॥ ೧೯ ॥

**ಋಷಯ ಊಚುಃ—**

> **ಕುತಸ್ತೋಽತ್ರ ತಪಸ್ತೇಪೇ ಭಾಸ್ಕರೋ ದೇವಸತ್ತಮಃ ।**
> **ತದ್ ಬ್ರೂಹಿ ಸೂತ ನಸ್ಸರ್ವಂ ಶ್ರವಣೇಚ್ಛಾವಗಾಹತೇ ॥ ೨೦ ॥**

**ಋಷಿಗಳು ಹೇಳಿದರು—**

ಎಲೈ ಸೂತಪುರಾಣಿಕರೇ! ದೇವಶ್ರೇಷ್ಠನಾದ ಸೂರ್ಯನು ಏತಕ್ಕಾಗಿ ಇಲ್ಲಿ ತಪಸ್ಸು ಮಾಡಿದನು? ಇದನ್ನು ಹೇಳಿರಿ. ಇದನ್ನು ಕೇಳಲು ನಮಗೆ ಇಚ್ಛೆಯಾಗುತ್ತಿದೆ. ॥ ೨೦ ॥

**ಸೂತ ಉವಾಚ—**

> **ವೇದೋದಿತಾನಿ ಕರ್ಮಾಣಿ ಸ್ವರ್ಗಮೋಕ್ಷಕರಾಣಿ ಚ ।**
> **ತೇಷಾಂ ಪ್ರವರ್ತಕಃ ಸೂರ್ಯಸ್ತಪಸ್ತೇಪೇ ಪುರಾನಘಾಃ ॥ ೨೧ ॥**
> **ಏವಂ ತಪಸ್ಯತಸ್ತಸ್ಯ ಶೌನಕಾದ್ಯಾ ಮಹರ್ಷಯಃ ।**
> **ಪ್ರಸನ್ನಸ್ತಪಸಾತ್ಯರ್ಥಂ ತಮಾಹ ವಟಮಾಧವಃ ॥ ೨೨ ॥**

**ಸೂತರು ಹೇಳಿದರು—**

ಎಲೈ ಅನಘರಾದ ಶೌನಕಾದಿಗಳೇ! ವೇದಗಳಲ್ಲಿ ಹೇಳಿರತಕ್ಕ ಕರ್ಮಗಳು ಸ್ವರ್ಗ ಮತ್ತು ಮೋಕ್ಷಗಳನ್ನು ಕೊಡತಕ್ಕವುಗಳಾಗಿದ್ದು ಅವುಗಳ ಪ್ರವರ್ತಕನೂ ಸೂರ್ಯನೇ. ಅಂತಹ ಸೂರ್ಯನು ಹಿಂದೆ ಇಲ್ಲಿ ತಪಸ್ಸು ಮಾಡಿದ್ದನು. ॥ ೨೧ ॥ ಎಲೈ ಶೌನಕಾದಿ ಮಹರ್ಷಿಗಳೇ! ಈ ರೀತಿಯಾಗಿ ತಪಸ್ಸು ಮಾಡಿದ ಆ ಸೂರ್ಯನಿಗೆ ಸಂತುಷ್ಟನಾದ ಮಾಧವನು ಹೇಳಿದನು. ॥ ೨೨ ॥

**ಮಾಧವ ಉವಾಚ—**

ತಪನ ತ್ವಂ ತಪಃ ಕಸ್ಮಾತ್ತಪಸ್ಯತ್ರೋಽಪತಾಪನಮ್ ।
ತದ್ ಬ್ರೂಹಿ ತಪಸಾಂ ಶ್ರೇಷ್ಠ ತಪಸಃ ಕಾರಣಂ ಪರಮ್ ॥ ೨೩ ॥

**ಮಾಧವದೇವರು ಹೇಳಿದರು—**

ಬೆಳಗುತ್ತಿರುವ ಸೂರ್ಯನೇ! ಇಲ್ಲಿ ಮಹಾಕಷ್ಟಕರವಾದ ತಪಸ್ಸನ್ನು ಏತಕ್ಕಾಗಿ ಮಾಡುತ್ತಿದ್ದೀಯೆ? ತಪಸ್ವಿಗಳಿಗೆ ಅಗ್ರಗಣ್ಯನಾಗಿರುವವನೇ! ಅದನ್ನು ಹೇಳು. ॥ ೨೩ ॥

**ಸೂರ್ಯ ಉವಾಚ—**

ಭಗವಂಸ್ತಪತಾಂ ಕೇನ ಕರ್ಮಣಾ ಸ್ಯಾಮಹಂ ಪ್ರಭುಃ ।
ಸರ್ವೇಷಾಂ ಕರ್ಮಫಲದಸ್ತನ್ಮಮಾಚಕ್ಷ್ವ ಮಾಧವ ॥ ೨೪ ॥
ಇದಂ ಹಿ ತ್ವತ್ಪ್ರಿಯಂ ಕ್ಷೇತ್ರಂ ದೃಷ್ಟ್ವಾ ನಾನ್ಯತ್ರ ಮೇ ಮನಃ ।
ಗಂತುಮುತ್ಸಹತೇ ನಾಥ ತತೋಽತ್ರೈವ ವಸಾಮ್ಯಹಮ್ ॥ ೨೫ ॥
ಇತಿ ಸೌರಂ ವಚಃ ಶ್ರುತ್ವಾ ಮಾಧವೋ ಭಕ್ತವತ್ಸಲಃ ।
ಪ್ರತ್ಯುವಾಚ ವಚೋ ರಮ್ಯಂ ಸೂರ್ಯಮಾತ್ಮಸ್ವರೂಪಿಣಮ್ ॥ ೨೬ ॥

**ಸೂರ್ಯನು ಹೇಳಿದನು—**

ಹೇ ಭಗವಂತನೇ! ಏನು ಕರ್ಮ ಮಾಡುವುದರಿಂದ ನಾನು ತಪಸ್ವಿಗಳಿಗೆ ಪ್ರಭುವಾಗುವೆನು? ಮತ್ತು ಎಲ್ಲರಿಗೂ ಅವರವರ ಕರ್ಮಗಳಿಗೆ ಫಲ ಕೊಡುವೆನು? ॥ ೨೪ ॥ ಈ ಕ್ಷೇತ್ರವು ನಿನಗೆ ಪ್ರಿಯವಾದುದು ಎಂದು ತಿಳಿದು ಬೇರೆಲ್ಲಿಯೂ ಹೋಗಲು ನನ್ನ ಮನಸ್ಸು ಒಪ್ಪುತ್ತಿಲ್ಲ. ಸ್ವಾಮಿಯೇ! ನಾನು ಇಲ್ಲಿಯೇ ವಾಸಿಸುವೆನು. ॥ ೨೫ ॥ ಈ ರೀತಿಯಾಗಿ ಹೇಳಿದ ಸೂರ್ಯನ ಮಾತನ್ನು ಕೇಳಿದ ಭಕ್ತವತ್ಸಲನಾದ ಮಾಧವನು ಅಂತರ್ಯಾಮಿಯಾಗಿ ತನ್ನ ಸವಿತೃನಾಮಕ ಭಗವದ್ರೂಪವುಳ್ಳ ಆ ಸೂರ್ಯನನ್ನು ಕುರಿತು ಹೇಳಿದನು. ॥ ೨೬ ॥

**ಮಾಧವ ಉವಾಚ—**

ಸಂತುಷ್ಟಸ್ತಪಸಾ ತೇಽಹಂ ಪ್ರಯಚ್ಛಾಮಿ ತವೇಪ್ಸಿತಮ್ ।
ಮದಾಜ್ಞಯಾ ತ್ವಂ ಸರ್ವೇಷಾಮಾದಿತ್ಯಾನಾಂ ಪ್ರಭುರ್ಭವ ॥ ೨೭ ॥
ಸ್ವಸ್ಥಾನಂ ಗಚ್ಛ ಭದ್ರಂ ತೇ ಜಗತಾಂ ಧುರಮಾವಹ ।
ಸರ್ವೇಷಾಂ ತ್ವದ್ವಿನಾ ಕರ್ಮ ಸರ್ವಂ ಲುಪ್ತಂ ಭವಿಷ್ಯತಿ ॥ ೨೮ ॥

ಅತ್ರಾಪ್ಯಂಶೇನ ತಿಷ್ಠಸ್ವ ಕೃತ್ವಾಸ್ಥಾನಮನುತ್ತಮಮ್ ।
ಫಲದೋ ಭವ ಭಕ್ತಾನಾಂ ಯಾತ್ರಿಕಾಣಾಂ ವಿಶೇಷತಃ ॥ ೨೯ ॥
ಆದಿಷ್ಟೋ ಮಾಧವೇನೈವಮೋಮಿತ್ಯುಕ್ತ್ವಾ ಗಭಸ್ತಿಮಾನ್ ।
ಸ್ವಸ್ಥಾನಂ ಪರಮಂ ಚಕ್ರೇ ಸೂರ್ಯಕುಂಡಂ ಮನೋಹರಮ್ ॥ ೩೦ ॥
ರೋಗಾಪನೋದನಂ ನಾಮ ಸ್ನಾತಾನಾಂ ಬಲವರ್ಧನಮ್ ।
ಕ್ಷಯಾಪಸ್ಮಾರಕುಷ್ಠಾದಿಮಹಾರೋಗನಿವಾರಣಮ್ ॥ ೩೧ ॥
ಅತೋಽತ್ರ ಸೂರ್ಯಕುಂಡೇ ಯೇ ಸ್ನಾನಂ ಕುರ್ವಂತಿ ಮಾನವಾಃ ।
ಮುಚ್ಯಂತೇ ಸರ್ವರೋಗೇಭ್ಯಃ ಪಾಪೇಭ್ಯಶ್ಚ ಮುನೀಶ್ವರಾಃ ॥ ೩೨ ॥
ಸೂರ್ಯಕುಂಡೇ ನರಃ ಸ್ನಾತ್ವಾ ಯಃ ಕುರ್ಯಾತ್ಸೂರ್ಯಪೂಜನಮ್ ।
ಯಾವಜ್ಜನ್ಮ ನಿರೋಗೀಸ್ಯಾದಿತಿ ಮಾಧವಶಾಸನಮ್ ॥ ೩೩ ॥
ದೇವಾಶ್ಚ ಋಷಯಸ್ಸರ್ವೇ ಸೂರ್ಯಕುಂಡೇ ಸಮಂತತಃ ।
ತಿಷ್ಠಂತಿ ಸ್ವಾಶ್ರಮಾನ್ಕೃತ್ವಾ ಸೂರ್ಯಭಕ್ತಿಪರಾಯಣಾಃ ॥ ೩೪ ॥
ಪುಷ್ಯಾರ್ಕವಾಸರೇ ಪ್ರಾಪ್ತೇ ರವಾವನುದಿತೇ ಸತಿ ।
ಸ್ನಾತ್ವಾ ಕುಂಡೇ ವಿಧಾನೇನ ಸೂರ್ಯಂ ಸಂಪೂಜಯಂತಿ ಯೇ ॥ ೩೫ ॥
ಆರೋಗ್ಯಂ ಪರಮಾಂ ವೃದ್ಧಿಂ ತೇಜಸ್ತೇಜಸ್ವಿನಸ್ಸುತಾನ್ ।
ಲಭಂತೇ ತೇ ಮಹಾವಿದ್ಯಾಂ ಸೂರ್ಯಲೋಕಂ ವ್ರಜಂತಿ ಚ ॥ ೩೬ ॥
ಪ್ರದಕ್ಷಿಣಂ ಕರಿಷ್ಯಂತಿ ಸೂರ್ಯಕುಂಡಸ್ಯ ಯೇ ನರಾಃ ।
ಪ್ರದಕ್ಷಿಣೀಕೃತಂ ಸರ್ವಂ ತೈಃ ಪೂರ್ಣಾವನಿಮಂಡಲಮ್ ॥ ೩೭ ॥
ಯೇ ಕುರ್ವಂತಿ ನಮಸ್ಕಾರಾನ್ ಸೌರಮಂತ್ರೈರ್ಯಥಾವಿಧಿ ।
ಋಚಾ ಕಲ್ಪೇನ ತೇ ಸದ್ಯಃ ಪ್ರಾಪ್ನುವಂತೀಪ್ಸಿತಂ ಫಲಮ್ ॥ ೩೮ ॥
ಭಾನೌ ಭಾನೌ ಮಹಾಪೂಜಾಂ ಸಂಕ್ರಾಂತಿಷು ವಿಶೇಷತಃ ।
ಮನುಜಾ ಯೇ ಕರಿಷ್ಯಂತಿ ಸ್ವೇಷ್ಟಂ ತೇಷಾಂ ಭವಿಷ್ಯತಿ ॥ ೩೯ ॥
ಸಂಕ್ರಾಂತಿಷು ತುಲಾದಾನಂ ವಿಶೇಷಾದ್ವಿಷುವಾಯನೇ ।
ಯೇ ಕುರ್ವಂತಿ ಯಥಾಶಕ್ತ್ಯಾ ಸೂರ್ಯಸ್ತೇಭ್ಯಃ ಪ್ರಸೀದತಿ ॥ ೪೦ ॥
ಏವಂ ವಸ್ಸೂರ್ಯಕುಂಡಸ್ಯ ಮಹಿಮಾ ವರ್ಣಿತೋಽನಘಾಃ ।
ಅಥಾನ್ಯಾನ್ಯಪಿ ತೀರ್ಥಾನಿ ಪ್ರವಕ್ಷ್ಯಾಮಿ ನಿಬೋಧತ ॥ ೪೧ ॥

॥ ಇತಿ ಷಟ್ಸಪ್ತತಿತಮೋಽಧ್ಯಾಯಃ ॥

ಮಾಧವನು ಹೇಳಿದನು—

"ನಿನ್ನ ತಪಸ್ಸಿನಿಂದ ನಾನು ಸಂತುಷ್ಟಗೊಂಡಿದ್ದೇನೆ. ತಪಸ್ಸಿನಿಂದ ನೀನು ಬಯಸುತ್ತಿರುವುದನ್ನು ಕೊಡುವೆನು. ನನ್ನ ಆಜ್ಞೆಯಿಂದ ನೀನು ಎಲ್ಲ ಆದಿತ್ಯರುಗಳಿಗೂ

ಅಧಿಪನಾಗು. ॥ ೨೭ ॥ ನೀನು ನಿನ್ನ ಸ್ಥಾನಕ್ಕೆ ಹೋಗಿ. ಜಗತ್ತಿನ ಭಾರವನ್ನು ವಹಿಸು, ಬಿಟ್ಟರೆ ಎಲ್ಲರ ಕರ್ಮಗಳೂ ಲೋಪವಾಗುವುದು, ನಿನಗೆ ಮಂಗಳವಾಗಲಿ. ॥ ೨೮ ॥ ಇಲ್ಲಿ ಕೂಡ ನೀನು ಒಂದು ಅಂಶದಿಂದ ಇದ್ದು ಈ ಸ್ಥಾನವನ್ನು ಅತ್ಯುತ್ತಮವಾದುದನ್ನಾಗಿ ಮಾಡು. ಭಕ್ತರಿಗೂ ಅದರಲ್ಲೂ ಯಾತ್ರಿಕರಿಗೆ, ಫಲಗಳನ್ನು ಕೊಡತಕ್ಕವನಾಗು." ॥ ೨೯ ॥ ಮಾಧವನಿಂದ ಈ ರೀತಿಯಾಗಿ ಆಜ್ಞಪ್ತನಾದ ಸೂರ್ಯನು "ಓಂ" ಎಂದು ಹೇಳಿ ಸ್ವಸ್ಥಾನವನ್ನು ಸೇರಿದ್ದಲ್ಲದೆ, ಸೂರ್ಯಕುಂಡವನ್ನು ಪರಮೋತ್ಕೃಷ್ಟವಾದದ್ದನ್ನಾಗಿಯೂ ಮನೋಹರವಾದದ್ದನ್ನಾಗಿಯೂ ಮಾಡಿದನು. ॥ ೩೦ ॥ ಈ ಸೂರ್ಯಕುಂಡವು ರೋಗಪರಿಹಾರಕವೆಂಬ ಹೆಸರನ್ನು ಹೊಂದಿದೆ ಮತ್ತು ಸ್ನಾನ ಮಾಡಿದವರ ಬಲವನ್ನು ಹೆಚ್ಚಿಸುವುದು, ಹಾಗೂ ಕ್ಷಯ, ಮೂರ್ಛೆ ಮತ್ತು ಕುಷ್ಠರೋಗಗಳಂತಹ ಮಹಾರೋಗಗಳನ್ನೂ ನಿವಾರಣೆ ಮಾಡುವುದು. ॥ ೩೧ ॥ ಎಲೈ ಮುನೀಶ್ವರರೇ! ಆದ್ದರಿಂದ ಈ ಸೂರ್ಯಕುಂಡದಲ್ಲಿ ಸ್ನಾನ ಮಾಡುವವರು ಸರ್ವಪಾಪಗಳಿಂದಲೂ ಮತ್ತು ಸರ್ವರೋಗಗಳಿಂದಲೂ ಮುಕ್ತರಾಗುತ್ತಾರೆ. ॥ ೩೨ ॥ ಈ ಸೂರ್ಯಕುಂಡದಲ್ಲಿ ಸ್ನಾನ ಮಾಡಿ ಸೂರ್ಯನನ್ನು ಪೂಜಾ ಮಾಡಿದವರು ಆಯುಸ್ಸು ಇರುವವರೆಗೂ ನಿರೋಗಿಗಳಾಗಿ ಇರುತ್ತಾರೆಂದು ಶ್ರೀಮಾಧವನ ಶಾಸನವು. ॥ ೩೩ ॥ ದೇವತೆಗಳೂ ಋಷಿಗಳೂ ಸೂರ್ಯಕುಂಡದ ಸುತ್ತಲೂ ತಮ್ಮ ತಮ್ಮ ಆಶ್ರಮಗಳನ್ನು ಮಾಡಿಕೊಂಡು ಯಾವಾಗಲೂ ಇರುತ್ತಾರೆ. ॥ ೩೪ ॥ ಪುಷ್ಯಾರ್ಕಯೋಗದಿಂದ ಕೂಡಿದ ರವಿವಾರದಲ್ಲಿ ಸೂರ್ಯನು ಉದಯಿಸುವ ಮೊದಲೇ ಸೂರ್ಯಕುಂಡದಲ್ಲಿ ಸ್ನಾನ ಮಾಡಿ ವಿಧಿವತ್ತಾಗಿ ಸೂರ್ಯನನ್ನು ಪೂಜಿಸುವರು, ಆರೋಗ್ಯವನ್ನು, ಏಳಿಗೆಯನ್ನು ತೇಜಸ್ಸನ್ನು ಪಡೆಯುವುದಲ್ಲದೆ ತೇಜಸ್ವಿಯಾದ ಮಕ್ಕಳನ್ನೂ ಪಡೆಯುತಾರೆ. ಇವರು ಮಹಾವಿದ್ಯೆಯನ್ನು ಪಡೆದು ಸೂರ್ಯಲೋಕವನ್ನು ಕುರಿತು ಹೋಗುವರು. ಇದು ಖಂಡಿತವು. ॥ ೩೫-೩೬ ॥ ಯಾರು ಸೂರ್ಯಕುಂಡದ ಸುತ್ತಲೂ ಪ್ರದಕ್ಷಿಣೆ ಹಾಕುತ್ತಾರೋ ಅವರು ಇಡೀ ಭೂಮಂಡಲವನ್ನೇ ಪ್ರದಕ್ಷಿಣೆ ಮಾಡುತ್ತಿದ್ದಾರೆಂದು ತಿಳಿಯಬೇಕು. ॥ ೩೭ ॥ ಯಾರು ಸೌರಮಂತ್ರಗಳಿಂದಲೂ, ಸೌರಸೂಕ್ತದಿಂದಲೂ, ಋಗ್ವೇದದ ಕಲ್ಪದ ಪ್ರಕಾರ ನಮಸ್ಕಾರಗಳನ್ನು ಮಾಡುವರೋ ಅವರು ಆಗಲೇ ತಾವು ಅಪೇಕ್ಷಿಸಿದ ಫಲವನ್ನು ಪಡೆಯುತ್ತಾರೆ. ॥ ೩೮ ॥ ಯಾರು ಪ್ರತಿಭಾನುವಾರವೂ, ವಿಶೇಷವಾಗಿ ಸಂಕ್ರಾಂತಿದಿವಸಗಳಲ್ಲಿಯೂ ಸೂರ್ಯನ ಮಹಾಪೂಜೆಯನ್ನು ಮಾಡುವರೋ ಅವರು ತಮ್ಮ ಇಷ್ಟಗಳನ್ನೆಲ್ಲಾ ಹೊಂದುವರು. ॥ ೩೯ ॥ ಸಂಕ್ರಾಂತಿಗಳಲ್ಲಿ ಅದರಲ್ಲೂ ಮೇಷ ಹಾಗೂ ತುಲಾ ಸಂಕ್ರಮಣಗಳಲ್ಲಿ ಯಾರು ತುಲಾಭಾರವನ್ನು ಮಾಡಿಸಿಕೊಳ್ಳುವರೋ ಅಂಥವರ ಇಷ್ಟಾರ್ಥಗಳೆಲ್ಲವೂ ನೆರವೇರುವುವು. ॥ ೪೦ ॥ ಎಲೈ ಪಾಪರಹಿತರಾದ ಶೌನಕಾದಿಗಳೇ! ಈ ರೀತಿಯಾಗಿ ನನ್ನಿಂದ ಪ್ರಯಾಗದ ಅವಾಂತರ ತೀರ್ಥಗಳ ಮತ್ತು ಸೂರ್ಯಕುಂಡದ ಮಹಿಮೆಯು ವರ್ಣಿಸಲ್ಪಟ್ಟಿದೆ. ಅನಂತರ ಪ್ರಯಾಗದ ಅನ್ಯಾನ್ಯತೀರ್ಥಗಳ ವಿಷಯಗಳನ್ನು ಹೇಳುವೆನು, ಕೇಳಿ ತಿಳಿಯಿರಿ. ॥ ೪೧ ॥

॥ ಎಪ್ಪತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತಸಪ್ತತಿತಮೋಽಧ್ಯಾಯಃ ॥ ೭೭ ॥

**ಶೇಷ ಉವಾಚ—**

ಅಂತರ್ವೇದೀಸ್ಥತೀರ್ಥಾನಾಂ ನಾಮಗ್ರಹಣಪೂರ್ವಕಮ್ ।
ಸರ್ವೇಷಾಮಥ ವಕ್ಷ್ಯೇಽಹಂ ಸ್ನಾನದಾನಾದಿಜಂ ಫಲಮ್ ॥ ೧ ॥
ವಟಸ್ಯ ದಕ್ಷಿಣೇ ಭಾಗೇ ಆದಿವೇಣೀ ವಿರಾಜತೇ ।
ದೇವಾಶ್ಚ ಋಷಯಸ್ಸರ್ವೇ ವೇದಾಸ್ತಾಂ ಸಮುಪಾಸತೇ ॥ ೨ ॥

## ॥ ಎಪ್ಪತ್ತೇಳನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಈಗ ''ಅಂತ್ಯವೇದಿ''ಯಲ್ಲಿರುವ ತೀರ್ಥಗಳ ಬಗ್ಗೆ ಅವುಗಳ ಹೆಸರುಗಳನ್ನು ಉಚ್ಚರಿಸುತ್ತಾ ಅವುಗಳಲ್ಲಿನ ಸ್ನಾನದಾನಾದಿಗಳ ಫಲವನ್ನು ಹೇಳುವೆನು. ॥ ೧ ॥ ಅಕ್ಷಯವಟದ ಬಲಭಾಗದಲ್ಲಿ ಆದಿವೇಣಿಯು ವಿರಾಜಮಾನವಾಗಿದೆ. ದೇವತೆಗಳೂ, ಋಷಿಗಳೂ ಮತ್ತು ವೇದಗಳೂ ಇದನ್ನು ಉಪಾಸನೆಮಾಡುತ್ತವೆ. ॥ ೨ ॥

**ಸನಕಾದಯ ಊಚುಃ—**

ಅವಿಮುಕ್ತಂ ನ ಮುಂಚಂತಿ ದೇವಾಶ್ಚ ಮುನಯಸ್ತಥಾ ।
ಇತ್ಯಸ್ಮಾಭಿಃ ಶ್ರುತಂ ಪೂರ್ವಂ ತೇಽತ್ರಾಪಿ ಕುತ ಆಗತಾಃ ॥ ೩ ॥

**ಸನಕಾದಿಗಳು ಹೇಳಿದರು—**

ಹೇ ಶೇಷದೇವರೇ! ದೇವತೆಗಳೂ ಮತ್ತು ಮುನಿಗಳೂ ಅವಿಮುಕ್ತಸ್ಥಾನಗಳನ್ನು ಬಿಟ್ಟು ಭೂಲೋಕಾದಿಗಳಿಗೆ ಬರುವುದಿಲ್ಲವೆಂದು ನಮ್ಮಗಳಿಂದ ಕೇಳಲ್ಪಟ್ಟಿದೆ. ಆದಿವೇಣೀಕ್ಷೇತ್ರದಲ್ಲಿ ಇವರೆಲ್ಲಾ ಇದ್ದು ಸೇವಾ ಮಾಡುತ್ತಾರೆ ಎಂದು ತಾವು ಹೇಳಿದಿರಿ. ಅವರು ಇಲ್ಲಿಗಾದರೂ ಏನು ಕಾರಣದಿಂದ ಬಂದರು? (ವೈಕುಂಠಾದಿಗಳು ಮುಕ್ತಸ್ಥಾನಗಳು. ಇಲ್ಲಿ ಹೋದವರು ಅವುಗಳನ್ನು ಬಿಟ್ಟು ಬರುವುದಿಲ್ಲ. ವಾಸುದೇವನಾಮಕ ಪರಮಾತ್ಮನ ಸಾಕ್ಷಾತ್ಕಾರವಾಗಿ ಇವನಿಂದ ''ಮುಕ್ತೋ ಭವ'' ಎಂದು ಹೇಳಿಸಿಕೊಳ್ಳಲ್ಪಟ್ಟವರು ಮುಕ್ತಸ್ಥಾನದಲ್ಲಿದ್ದು ತಮ್ಮ ಸ್ವರೂಪದ ಜ್ಞಾನಾನಂದಾದಿಗಳ ಆವಿರ್ಭಾವವಾಗಿ ಮೋಕ್ಷಸುಖವನ್ನು ಅನುಭವಿಸುವರು. ಇಂಥವರು ಈ ವೈಕುಂಠಾದಿ ಲೋಕಗಳಿಂದ ಅನ್ಯತ್ರ ಬರುವ ಪ್ರಶ್ನೆಯೇ ಇರುವುದಿಲ್ಲ. ಆದಕ್ಕೇ ಜ್ಞಾನಭಕ್ತಿವೈರಾಗ್ಯಾದಿಗಳಿಂದ ಸಾಧನೆ ಮಾಡಿಕೊಂಡಿರುವರು. ಮುಮುಕ್ಷುಗಳಾದ ಸಜ್ಜೀವಿಗಳಿಗೆ ಈ ಮುಕ್ತಸ್ಥಾನಕ್ಕೆ ಹೋಗುವ ಮುನ್ನ ಶ್ರೀಶಿಂಶುಮಾರದೇವರ ದರ್ಶನವಾಗುವುದು. ಇದಾದಮೇಲೆ ಅವರಿಗೆ ಪುನರ್ಜನ್ಮಗಳಿಲ್ಲ. ಇಂಥವರು ಅವಿಮುಕ್ತಸ್ಥಾನಗಳಲ್ಲಿ ಇದ್ದು ಭಗವದ್ಧ್ಯಾನಾದಿಸಾಧನೆಗಳಲ್ಲಿ ತಲ್ಲೀನರಾಗಿರುವರು. ಈ ಲೋಕಗಳಲ್ಲಿ ದೇವತೆಗಳೂ, ಋಷಿಗಳೂ ಇರುವರು. ಮನುಷ್ಯೋತ್ತಮರೂ, ರಾಜರ್ಷಿಗಳೂ ಇರುವರು. ಇಂತಹ ಅವಿಮುಕ್ತಸ್ಥಾನದಲ್ಲಿರುವವರು ಮುಕ್ತಸ್ಥಾನಗಳಿಗೆ ಹೋಗಲು ಬಯಸುತ್ತಾರೆಯೇ ಹೊರತು ಬ್ರಹ್ಮಾಂಡದಲ್ಲಿರುವ ಭೂಲೋಕ, ಸ್ವರ್ಗ, ಪಾತಾಳಾದಿ ಲೋಕಗಳಿಗೂ ಬರಲು ಬಯಸುವುದಿಲ್ಲ. ಹೀಗಿರುವಾಗ ಈ ರೀತಿಯಾಗಿ ಅಪರೋಕ್ಷಿಸಿಕೊಂಡ ಶಿಂಶುಮಾರ

ದೇವರುಳ್ಳ ಸಜ್ಜೀವಿಗಳು ಪ್ರಯಾಗಕ್ಷೇತ್ರಕ್ಕೆ ಯಾವ ಕಾರಣದಿಂದ ಬರುತ್ತಾರೆ ಎಂಬ ಸನಕಾದಿಗಳ ಪ್ರಶ್ನೆಗೆ ಇಲ್ಲಿ ಶ್ರೀಆದಿಶೇಷದೇವರು ಸಮಾಧಾನ ಹೇಳುತ್ತಾರೆ.) ॥ ೩ ॥

**ಶೇಷ ಉವಾಚ—**

ಭೋ ಭೋ ಬ್ರಹ್ಮಸುತಾಸ್ಸರ್ವೇ ಶೃಣ್ವಂತು ತ್ಯಕ್ತಸಂಶಯಾಃ ।
ನಿರ್ಗುಣಂ ಪದಮಾಸಾದ್ಯ ಸಗುಣಂ ಕೋಽನುಸೇವತೇ ॥ ೪ ॥
ಸ್ವೇಚ್ಛಯಾ ಲಭ್ಯತೇ ಯತ್ರ ತತ್ರಾನ್ಯಂ ಕೋ ಹಿ ಯಾಚತೇ ।
ಫಲಂ ನಾನಾವಿಧಂ ವಾತ್ರ ನೈಕಮೇವಾಭಿಕಾಂಕ್ಷತಿ ॥ ೫ ॥
ಚತುರಂಗಬಲಂ ಯತ್ರ ನೈಕಮಾಶ್ರಯತೇ ಬಲಮ್ ।
ಯಾನಂ ಬಹುವಿಧಂ ಯತ್ರ ನೈಕಮೇವಾಧಿರೋಹತಿ ॥ ೬ ॥
ಸುಪ್ರಾಪ್ತೇ ಚಕ್ರವರ್ತಿತ್ವೇ ಸಾಮಂತತ್ವಂ ನ ವಾಂಛತಿ ।
ಲಭ್ಯಮಾನೇ ಚ ದೇವತ್ವೇ ಮನುಷ್ಯತ್ವಂ ಕ ಇಚ್ಛತಿ ॥ ೭ ॥
ನರೋ ಬಹುಗುಣಾಕಾಂಕ್ಷೀ ನೈಕಮಾಶ್ರಯತೇ ಗುಣಮ್ ।
ತಥಾ ಸ್ವರ್ಗಫಲಾಕಾಂಕ್ಷೀ ಪ್ರಯಾಗಂ ಸೇವತೇ ಧ್ರುವಮ್ ॥ ೮ ॥
ವೃಕ್ಷಂ ವೃಕ್ಷಮಟಿತ್ವಾಪಿ ಕಲ್ಪವೃಕ್ಷಂ ನ ಮುಂಚತಿ ।
ತಥಾ ಭೂವಲಯಂ ದೃಷ್ಟ್ವಾ ಪ್ರಯಾಗಂ ನ ವಿಮುಂಚತಿ ॥ ೯ ॥
ಪ್ರತ್ಯಕ್ಷಂ ಸುಖಮುತ್ಸೃಜ್ಯ ಸ್ವಾಪ್ನಿಕಂ ಕೋಽಪಿ ನೇಚ್ಛತಿ ।
ತಥಾ ಪ್ರಯಾಗಮುತ್ಸೃಜ್ಯಾವಿಮುಕ್ತಂ ಕೋಽಪಿ ನೇಚ್ಛತಿ ॥ ೧೦ ॥
ಸುಖೇನ ಲಭ್ಯತೇ ಯತ್ರ ಪುರುಷಾರ್ಥಚತುಷ್ಟಯಮ್ ।
ತತ್ತ್ಯಕ್ತ್ವಾ ಮುಕ್ತಿಮಾತ್ರಂ ಕಃ ಕಾಮಯೇದ್ಭೋಗವರ್ಜಿತಮ್ ॥ ೧೧ ॥
ತಾವದ್ಗರ್ಜಂತಿ ತೀರ್ಥಾನಿ ಪೃಥಿವ್ಯಾಂ ಸ್ವಸ್ವಮಂಡಲೇ ।
ಯಾವನ್ನ ಶ್ರೂಯತೇ ಶ್ರೇಷ್ಠಃ ಪ್ರಯಾಗಸ್ತೀರ್ಥನಾಯಕಃ ॥ ೧೨ ॥
ಉಪದೇಶಂ ವಿನಾ ಮೋಕ್ಷಂ ವಿನಾ ಕ್ಲೇಶಮಘಾರ್ದನಮ್ ।
ದೇಹತ್ಯಾಗೇನ ವೈದೇಹ್ಯಂ ಯೋ ದತ್ತೇ ಕಃ ಪರಸ್ತತಃ ॥ ೧೩ ॥
ಪಾಪಹಾರೀಣಿ ತೀರ್ಥಾನಿ ಯಾನಿ ಸಂತಿ ಜಗತ್ತ್ರಯೇ ।
ಪುನಂತಿ ತಾನಿ ನಾತ್ಮಾನಂ ತೀರ್ಥರಾಜಂ ವಿನಾ ಕ್ವಚಿತ್ ॥ ೧೪ ॥
ತಸ್ಮಾದತ್ರೈವ ತಿಷ್ಠಂತಿ ತೀರ್ಥದೇವರ್ಷಯೋಽಖಿಲಾಃ ।
ಜಾನೀಧ್ವಂ ನಿಶ್ಚಿತಮಿದಂ ಸನಕಾದ್ಯಾ ಮಹರ್ಷಯಃ ॥ ೧೫ ॥
ಅತೋಽಸ್ಯಾಮಾದಿವೇಣ್ಯಾಂ ಯೇ ಸ್ನಾನಂ ಕುರ್ವಂತಿ ವೈ ನರಾಃ ।
ತರ್ಪಯಂತಿ ನಿಜಾನ್ಪಿತ್ರ್ರಂಸ್ತೇ ವೈ ವೈಕುಂಠಗಾಮಿನಃ ॥ ೧೬ ॥
ಆದಿವೇಣ್ಯಾಂ ತು ಯೇ ಕಿಂಚಿತ್ಸ್ನಾನದಾನಜಪಾದಿಕಮ್ ।
ಕುರ್ವಂತಿ ಕೋಟಿಗುಣಿತಮೇತೇಷಾಂ ಭವತಿ ಧ್ರುವಮ್ ॥ ೧೭ ॥

ತಸ್ಯಾಸ್ತು ಪಶ್ಚಿಮೇ ಭಾಗೇ ಘೃತಕುಲ್ಯಾಸು ಶೋಭನಾಃ ।
ತದಗ್ರೇ ಮಧುಕುಲ್ಯಾ ಚ ತೀರ್ಥದ್ವಯಮಿದಂ ವರಮ್ ॥ ೧೮ ॥
ಸ್ವಯಜ್ಞಾವಸರೇ ಧಾತ್ರಾ ಬ್ರಾಹ್ಮಣಾರ್ಥಂ ವಿನಿರ್ಮಿತೇ ।
ಸರ್ಪಿಷಾ ಮಧುನಾ ಪೂರ್ವಂ ವಾಹಿನ್ಯೌ ಸರಿತೌ ಶುಭೇ ॥ ೧೯ ॥
ಸರ್ವೇಽಪಿ ಋತ್ವಿಜಸ್ತತ್ರ ಸರ್ವೇಽನ್ಯೇ ಬ್ರಾಹ್ಮಣಾ ಅಪಿ ।
ಯಥೇಚ್ಛಂ ಪಪುರಾಕಂಠಂ ಘೃತಂ ಚ ಮಧುರಂ ಮಧು ॥ ೨೦ ॥
ತಯೋಃ ಸ್ನಾತ್ವಾ ಚ ಯೋ ಭಕ್ತ್ಯಾ ತರ್ಪಯೇತ್ಪಿತೃದೇವತಾಃ ।
ದೇವಾಶ್ಚ ಪಿತರಸ್ತಸ್ಮೈ ಪ್ರಯಚ್ಛಂತಿ ವರಾನ್ಬಹೂನ್ ॥ ೨೧ ॥
ಆಶ್ವಿನಾಸಿತಪಕ್ಷೇ ಯೇ ತತ್ರ ಶ್ರಾದ್ಧಂ ಪ್ರಕುರ್ವತೇ ।
ಆವರ್ಷಂ ಪಿತರಸ್ತೇಷಾಂ ತೃಪ್ತಾಸ್ತಿಷ್ಠಂತಿ ವೈ ದಿವಿ ॥ ೨೨ ॥
ತತ್ರ ದಾನಂ ಕೃತಂ ಕಿಂಚಿತ್ತತ್ಸರ್ವಂ ಬಹು ಜಾಯತೇ ।
ಫಲಂ ದದಾತಿ ದಾತೄಣಾಮಿಹ ಲೋಕೇ ಪರತ್ರ ಚ ॥ ೨೩ ॥
ತಯೋಸ್ತು ಪಶ್ಚಿಮೇ ತೀರ್ಥಮಾದಿತ್ಯಸ್ಯ ನಿರಂಜನಮ್ ।
ಸರ್ವದಾ ಯತ್ರ ತಿಷ್ಠಂತಿ ದೇವಾಸ್ಸರ್ವೇ ಸವಾಸವಾಃ ॥ ೨೪ ॥
ತತ್ರ ಯೇ ಯಾತ್ರಿಕಾ ಲೋಕಾ ಗತ್ವಾ ಸ್ನಾನಂ ಪ್ರಕುರ್ವತೇ ।
ಉಪಾಸ್ಯ ಮಧ್ಯಮಾಂ ಸಂಧ್ಯಾಮುಪತಿಷ್ಠಂತಿ ಪೂಷಣಮ್ ॥ ೨೫ ॥
ದೇವರ್ಷಿಪಿತೄಣಾಂ ತೃಪ್ತಿಂ ನಿವಾಪಾಂಜಲಿಭಿಶ್ಚ ಯೇ ।
ಕುರ್ವಂತಿ ಚ ಯಥಾಶಕ್ತಿ ದಾನಾನ್ಯಪಿ ಮುನೀಶ್ವರಾಃ ॥ ೨೬ ॥
ವಿಮುಕ್ತಪಾತಕಾಸ್ಸರ್ವೇ ಸೂರ್ಯಲೋಕಂ ವ್ರಜಂತಿ ತೇ ।
ಸ್ಥಿತ್ವಾ ಬಹುಸುಖಂ ತತ್ರ ಜಾಯಂತೇ ವೈದಿಕಾ ದ್ವಿಜಾಃ ॥ ೨೭ ॥
ತಸ್ಯಾಥ ಪಶ್ಚಿಮೇ ತೀರ್ಥಮೃಣಕ್ಷಯಕರಂ ಪರಮ್ ।
ಋಣಪ್ರಮೋಚನಂ ನಾಮ ದೇವರ್ಷಿಪಿತೃಸೇವಿತಮ್ ॥ ೨೮ ॥
ಪಂಚದಂಡಪ್ರಮಾಣಂ ತತ್ತೀರ್ಥಂ ಪರಮಪಾವನಮ್ ।
ಋಣಾಪಕಾರಣಂ ಶ್ರೇಷ್ಠಮೃಣತ್ರಯವಿಮೋಕ್ಷಣಮ್ ॥ ೨೯ ॥
ಜನ್ಮಜನ್ಮಾಂತರಾಣಾಂ ಸ್ಯಾದೇತಜ್ಜನ್ಮೋದ್ಭವಂ ತಥಾ ।
ತತ್ಸರ್ವಂ ನಾಶಮಾಯಾತಿ ತತ್ತೀರ್ಥೇ ಸ್ನಾನಮಾತ್ರತಃ ॥ ೩೦ ॥
ತತ್ರ ಸ್ನಾನೇನ ಪೂರ್ಣಾಯಾಂ ಪುನಶ್ಚ ನ ಭವೇದೃಣಮ್ ।
ವಿಮುಕ್ತೋ ಜಾಯತೇ ಸದ್ಯೋ ದೇವರ್ಷಿಪಿತೃಣಾಮೃಣಾತ್ ॥ ೩೧ ॥
ಅತಸ್ತತ್ರ ಚ ಯೇ ಗತ್ವಾ ಸ್ನಾನಂ ದಾನಂ ಪ್ರಕುರ್ವತೇ ।
ಋಣಮುಕ್ತಾ ಭವಂತ್ಯೇತೇ ಇಹ ಲೋಕೇ ಪರತ್ರ ಚ ॥ ೩೨ ॥

ಬಹವಸ್ತತ್ರ ನಿರ್ಮುಕ್ತಾ ಐಹಿಕಾಮುಷ್ಮಿಕಾದ್ಭಯಾತ್ ।
ಏತತ್ಸರ್ವಂ ಮಯಾ ದೃಷ್ಟಂ ಬ್ರಹ್ಮಪುತ್ರಾ ಮಹೌಜಸಃ ॥ ೩೩ ॥

॥ ಇತಿ ಸಪ್ತಸಪ್ತತಿತಮೋಽಧ್ಯಾಯಃ ॥

**ಶ್ರೀಶೇಷದೇವರು ಹೇಳಿದರು—**

ಹೇ ಬ್ರಹ್ಮನ ಮಕ್ಕಳಾದ ಸನಕಾದಿಗಳೇ! ನೀವೆಲ್ಲರು ನಿಸ್ಸಂಶಯವಾಗಿ ಈ ವಿಷಯವನ್ನು ಕೇಳಿ ತಿಳಿದುಕೊಳ್ಳಿರಿ. ಸತ್ವರಜಸ್ತಮೋಗುಣಗಳ ವ್ಯಾಪಾರವಿಲ್ಲದ ಸ್ಥಾನವನ್ನು ತಲುಪಿದ ಯಾವನು ತಾನೇ ಸಗುಣವಾದ ವ್ಯಾಪಾರಕ್ಕೆ ಬದ್ಧವಾಗಿರುವ ಸ್ಥಾನವನ್ನು ಬಯಸುತ್ತಾರೆ? ॥ ೪ ॥ ಬೇಕಾದ್ದೆಲ್ಲವೂ ಸ್ವೇಚ್ಛೆಯಾ ಸಿಗುತ್ತಿರುವಾಗ ಬೇರೆಯವರನ್ನು ಯಾರು ತಾನೇ ಯಾಚಿಸುವರು? ಇಲ್ಲಿ ಬೇಡದೆಯೇ ನಾನಾವಿಧಗಳಾದ ಫಲಗಳು ಸಿಗುತ್ತಿರಲಾಗಿ ಒಂದೇ ಒಂದು ಫಲವನ್ನು ಬೇಡುವ ಸ್ಥಿತಿಯನ್ನು ಯಾರು ಇಚ್ಛಿಸುತ್ತಾರೆ? ॥ ೫ ॥ ಚತುರಂಗಬಲವು ಸ್ವಾಧೀನದಲ್ಲಿರುವಾಗ ಯಾರು ತಾನೇ ಒಂದೇ ಒಂದು ಬಗೆಯ ಸೈನ್ಯಕ್ಕೆ ಬಯಸುವರು? ಬಹುವಿಧಗಳಾದ ವಾಹನಗಳಿರುವಾಗ ಒಂದೇ ಒಂದು ವಾಹನದಿಂದ ಯಾರೂ ತೃಪ್ತಿಪಟ್ಟುಕೊಳ್ಳುವುದಿಲ್ಲ. ॥ ೬ ॥ ಚಕ್ರವರ್ತಿಪದವಿಯು ಅದಾಗದೇ ಬಂದಿರುವಾಗ ಸಾಮಂತರಾಜನ ಪದವಿಗೆ ಯಾರು ತಾನೇ ಆಶಿಸುತ್ತಾರೆ? ದೈವತ್ವವೇ ಲಭಿಸುತ್ತಿರುವಾಗ ಮನುಷ್ಯತ್ವವನ್ನು ಯಾರೂ ಬಯಸರು. ॥ ೭ ॥ ಬಹುಗುಣಗಳಿಗೆ ಆಸೆಪಡುತ್ತಿರುವವನು ಒಂದೇ ಒಂದನ್ನು ಎಂದಿಗೂ ಆಶ್ರಯಿಸನು. ಹಾಗೆಯೇ ಸರ್ವತೋಮುಖವಾದ ಫಲಗಳ ಆಸೆಯುಳ್ಳವನು ಪ್ರಯಾಗವನ್ನೇ ಆಶ್ರಯಿಸುತ್ತಾನೆ. ॥ ೮ ॥ ಮರದಿಂದ ಮರವನ್ನು ಹುಡುಕಿ ಅಲೆಯುತ್ತಿರುವವನು ಕಲ್ಪವೃಕ್ಷವು ಸಿಕ್ಕಿದ ಮೇಲೆ ಬೇರೆಯಾದ ಮರವನ್ನು ಅಪೇಕ್ಷಿಸನು. ಹಾಗೆಯೇ ಭೂಮಂಡಲದಲ್ಲೆಲ್ಲಾ ಹುಡುಕಿ ಅಲೆದಾಡಿದವನು ಪ್ರಯಾಗವು ಸಿಕ್ಕಿದಾಗ ಅದನ್ನು ಬಿಡುವುದಿಲ್ಲ. ॥ ೯ ॥ ಪ್ರತ್ಯಕ್ಷವಾಗಿ ಸುಖವು ಸಿಗುತ್ತಿರುವಾಗ ಸ್ವಾಪ್ನಸುಖವನ್ನು ಯಾರೂ ಬಯಸರು. ಹಾಗೆಯೇ ಪ್ರಯಾಗವನ್ನು ಬಿಟ್ಟು ವಿಮುಕ್ತಸ್ಥಾನದಲ್ಲಿರಲು ಯಾರೂ ಬಯಸರು. ॥ ೧೦ ॥ ಪ್ರಯಾಗದಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ಪುರುಷಾರ್ಥಚತುಷ್ಟಯವೂ ಸಿಗುತ್ತಿರಲು ಯಾರು ತಾನೇ ಪುನರ್ಜನ್ಮವಿಲ್ಲದ ಕೇವಲ ಮುಕ್ತಿಯನ್ನು ಅಪೇಕ್ಷಿಸಿಯಾನು? ॥ ೧೧ ॥ ಎಲ್ಲ ತೀರ್ಥಗಳು ಅವರವರು ತಾವೇ ಶ್ರೇಷ್ಠವೆಂದೂ, ಮುಕ್ತಿಸಹಿತ ಸರ್ವಫಲದಾಯಕವೆಂದೂ ಎಲ್ಲಿಯವರೆಗೆ ಈ ತೀರ್ಥರಾಜನ ಹೆಸರು ಕೇಳುವುದಿಲ್ಲವೋ ಅಲ್ಲಿಯವರೆಗೆ ಗರ್ಜಿಸುತ್ತಿರುತ್ತವೆ. ॥ ೧೨ । ಗುರುಗಳ ಉಪದೇಶವಿಲ್ಲದೆ ಎಲ್ಲಿ ಮುಕ್ತಿ ಸಿಗುವುದೋ, ವ್ರತ ನೇಮನಿಷ್ಠಾದಿ ಕ್ಲೇಶಗಳಿಲ್ಲದೇ ಎಲ್ಲಿ ಪಾಪಗಳು ನಾಶವಾಗುವುವೋ, ಬರೇ ದೇಹತ್ಯಾಗದಿಂದ ಎಲ್ಲಿ ಪುನರ್ಜನ್ಮವಿಲ್ಲದೇ ಮುಕ್ತಿಪ್ರಾಪ್ತಿಯೋ ಅಂತಹ ಫಲವನ್ನು ಕ್ಷೇತ್ರ ನಾಯಕನನ್ನು ಬಿಟ್ಟರೆ ಯಾರು ತಾನೆ ಕೊಡಬಲ್ಲರು? ॥ ೧೩ ॥ ಪಾಪಪರಿಹಾರಕಗಳೆಂದು ಯಾವ ಯಾವ ತೀರ್ಥಗಳು ಮೂರು ಲೋಕಗಳಲ್ಲಿ ಇವೆಯೋ ಅವುಗಳೆಲ್ಲಾ ಎಂದೆಂದಿಗೂ ಈ ತೀರ್ಥರಾಜನನ್ನು ಬಿಟ್ಟರೆ ತಮ್ಮನ್ನು ತಾವೇ ಪವಿತ್ರಗಳನ್ನಾಗಿ ಮಾಡಿಕೊಳ್ಳಲಾರವು. ॥ ೧೪ ॥ ಆದ್ದರಿಂದಲೇ ದೇವತೆಗಳು ಋಷಿಗಳು ಮತ್ತು ತೀರ್ಥದೇವತೆಗಳೆಲ್ಲರೂ ಇಲ್ಲಿಯೇ ಇರುತ್ತಾರೆ. ಸನಕಾದಿ ಮಹರ್ಷಿಗಳೇ! ಈ ವಿಷಯವನ್ನು ಸ್ಪಷ್ಟವಾಗಿ ತಿಳಿಯಿರಿ. ॥ ೧೫ ॥ ಈ ಆದಿವೇಣಿಯಲ್ಲಿ ಸ್ನಾನ ಮತ್ತು ಪಿತೃತರ್ಪಣವನ್ನು ಮಾಡುವ ಮನುಷ್ಯರೆಲ್ಲರೂ ವೈಕುಂಠಲೋಕಕ್ಕೆ ಹೋಗತಕ್ಕವರು. ಮುಕ್ತಿಯನ್ನು ಪಡೆಯ

ತಕ್ಕವರು. ॥ ೧೬ ॥ ಈ ಆದಿವೇಣಿಯಲ್ಲಿ ಯಾರು ಅಲ್ಪಸ್ವಲ್ಪವಾದರೂ ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡುತ್ತಾರೋ ಅವರುಗಳಿಗೆ ಇವೆಲ್ಲವೂ ಕೋಟಿ ಸಂಖ್ಯಾದಷ್ಟು ಫಲಗಳನ್ನು ಕೊಡುವುವು. ಇದು ನಿಶ್ಚಯವು. ॥ ೧೭ ॥ ಆದಿವೇಣಿಯ ಪಶ್ಚಿಮದಲ್ಲಿ "ತುಪ್ಪದ ಕೊಳ" ಮತ್ತು ಅದರ ಅಗ್ರಭಾಗದಲ್ಲಿ "ಜೇನುತುಪ್ಪದ ಕೊಳ"ವೆಂದೂ ಅತಿಮಂಗಳಕರವಾದ ಎರಡು ಶ್ರೇಷ್ಠತೀರ್ಥಗಳಿವೆ. ॥ ೧೮ ॥ ತನ್ನ ಅಶ್ವಮೇಧದ ಸಮಯದಲ್ಲಿ ಶ್ರೀಬ್ರಹ್ಮದೇವರು ಈ ಎರಡು ತೀರ್ಥಗಳನ್ನು ನಿರ್ಮಿಸಿದರು. ಇವೆರಡೂ ಮಂಗಳಕರವಾದ ತುಪ್ಪದ ಮತ್ತು ಜೇನಿನ ಪ್ರವಾಹಗಳಾಗಿದ್ದುವು. ॥ ೧೯ ॥ ಎಲ್ಲ ಋತ್ವಿಜರೂ ಮತ್ತು ಬೇರೆ ಬೇರೆ ಬ್ರಾಹ್ಮಣರುಗಳೂ ಇವುಗಳಿಂದ ಕಂಠಪೂರ್ತಿ ತುಪ್ಪವನ್ನೂ ಜೇನನ್ನೂ ಕುಡಿಯುತ್ತಿದ್ದರು. ॥ ೨೦ ॥ ಇವೆರಡರಲ್ಲಿ ಸ್ನಾನ ಮಾಡಿ ಪಿತೃತರ್ಪಣಗಳನ್ನು ಕೊಟ್ಟವರಿಗೆ ದೇವತೆಗಳೂ ಮತ್ತು ಪಿತೃದೇವತೆಗಳೂ ಯಥೇಚ್ಛವಾಗಿ ವರಗಳನ್ನು ಕೊಡುತ್ತಾರೆ. ॥ ೨೧ ॥ ಆಶ್ವೀಜಬಹುಳದಲ್ಲಿ ಇವೆರಡರ ಸನ್ನಿಧಾನದಲ್ಲಿ ಯಾರು ಶ್ರಾದ್ಧವನ್ನು ಮಾಡುತ್ತಾರೋ ಅಂಥವರ ಪಿತೃಗಳು ಸ್ವರ್ಗದಲ್ಲಿ ಆ ವರ್ಷಪೂರ್ತಿಯಾಗಿ ತೃಪ್ತಿಯಿಂದಿರುತ್ತಾರೆ.(ಭಾದ್ರಪದ ಪೂರ್ಣಿಮೆಗೆ ಭಾದ್ರಪದ ಮಾಸವು ಮುಗಿಯುತ್ತದೆ. ಆ ನಂತರ ಆಶ್ವಿಜ ಮಾಸದ ಆರಂಭ. ಹೀಗಾಗಿ ಆಶ್ವೀಜ ಕೃಷ್ಣಪಕ್ಷವೆಂದರೆ ಇಲ್ಲಿ ಪಿತೃಪಕ್ಷವನ್ನು ಇಟ್ಟುಕೊಳ್ಳಬೇಕು.) ॥ ೨೨ ॥ ಅಲ್ಲಿ ಮಾಡಿದ ಅಲ್ಪದಾನವೂ ಕೂಡ ಬಹಳ ಫಲಪ್ರದವಾಗಿ ಪರಿಣಮಿಸುತ್ತದೆ ಮತ್ತು ದಾನ ಮಾಡಿದವರಿಗೆ ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಬಹುಫಲಗಳನ್ನು ಕೊಡುತ್ತವೆ. ॥ ೨೩ ॥ ಇವುಗಳ ಪಶ್ಚಿಮಭಾಗದಲ್ಲಿ ಆದಿತ್ಯನ ತೀರ್ಥವಿರುವುದು. ಇದು ಶುದ್ಧವೂ ಪವಿತ್ರವೂ ಆಗಿರುವುದು. ಇಲ್ಲಿ ಎಲ್ಲ ಕಾಲದಲ್ಲಿಯೂ ಎಲ್ಲ ದೇವತೆಗಳೂ ಇರುತ್ತಾರೆ. ॥ ೨೪ ॥ ಈ ತೀರ್ಥಕ್ಕೆ ಹೋಗಿ ಯಾವ ಯಾತ್ರಿಕನು ಸ್ನಾನವನ್ನು ಮಾಡಿ ಮಾಧ್ಯಾಹ್ನಿಕಸಂಧ್ಯೆಯನ್ನು ಮಾಡಿ ಸೂರ್ಯದೇವನನ್ನು ಉಪಾಸಿಸುತ್ತಾನೋ ಮತ್ತು ಜಲತರ್ಪಣದಿಂದ ದೇವತೆಗಳು, ಋಷಿಗಳು ಮತ್ತು ಪಿತೃಗಳನ್ನು ತೃಪ್ತಿಪಡಿಸುತ್ತಾನೋ ಮತ್ತು ಯಥಾಶಕ್ತಿ ದಾನಗಳನ್ನು ಕೊಡುತ್ತಾನೋ ಅವನು ಸರ್ವಪಾಪಗಳಿಂದ ವಿಮುಕ್ತನಾಗಿ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಬಹಳ ಸುಖದಿಂದ ಬಹುಕಾಲವಿದ್ದು ಅನಂತರ ಒಳ್ಳೆಯ ವೈದಿಕಬ್ರಾಹ್ಮಣನಾಗಿ ಹುಟ್ಟುತ್ತಾನೆ. ॥ ೨೫-೨೭ ॥ ಇದರ ಪಶ್ಚಿಮಕ್ಕೆ "ಋಣವಿಮೋಚಕ" ಎಂಬ ತೀರ್ಥವಿದೆ. ಇದು ಉತ್ತಮವಾದ ತೀರ್ಥವು. ಇದನ್ನು ದೇವತೆಗಳು, ಋಷಿಗಳು ಮತ್ತು ಪಿತೃಗಳು ಸೇವಿಸುತ್ತಾರೆ. ॥ ೨೮ ॥ ಐದು ದಂಡಗಳ ಆಳತೆಯ ಈ ತೀರ್ಥವು ಪರಮಪಾವನಕರವಾದುದು. ಋಣಪರಿಹಾರ ಮಾಡತಕ್ಕದ್ದು. ಮತ್ತು ದೇವ, ಋಷಿ ಮತ್ತು ಪಿತೃಋಣದಿಂದ ವಿಮೋಚನೆ ಮಾಡುವಂತಹುದು. ॥ ೨೯ ॥ ಈ ತೀರ್ಥದಲ್ಲಿ ಕೇವಲ ಸ್ನಾನ ಮಾಡುವುದರಿಂದಲೇ ಜನ್ಮಜನ್ಮಾಂತರದ ಮತ್ತು ಈ ಜನ್ಮದ ಪಾಪಗಳೂ, ಋಣಗಳೂ ಪರಿಹಾರವಾಗುವುದು. ॥ ೩೦ ॥ ಇದರಲ್ಲಿ ಪೌರ್ಣಮಿಯಂದು ಸ್ನಾನ ಮಾಡುವುದರಿಂದ ಪುನಃ ಋಣಪ್ರಾಪ್ತಿಯಾಗದು. ದೇವ ಋಷಿ ಪಿತೃ ಋಣಗಳಿಂದ ವಿಮೋಚನೆ ಹೊಂದುವನು. ॥ ೩೧ ॥ ಆದ್ದರಿಂದ ಇದರಲ್ಲಿ ಸ್ನಾನ ಮಾಡಿ ದಾನಾದಿಗಳನ್ನು ಮಾಡಿದವರು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಋಣ ವಿಮುಕ್ತರಾಗುತ್ತಾರೆ. ॥ ೩೨ ॥ ಇಲ್ಲಿ ಬಹು ಮಂದಿ ಇಹಲೋಕದ ಮತ್ತು ಪರಲೋಕದ ಋಣದಿಂದ ವಿಮೋಚನೆ ಹೊಂದಿದ್ದಾರೆ. ಎಲೈ ಬ್ರಹ್ಮಪುತ್ರರೇ, ನಾನು ಇದನ್ನು ಕಂಡಿದ್ದೇನೆ. ॥ ೩೩ ॥

॥ ಎಪ್ಪತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಸಪ್ತತಿತಮೋಽಧ್ಯಾಯಃ ॥ ೭೮ ॥

**ಶೇಷ ಉವಾಚ—**

ಅಸ್ಮಿನ್ನರ್ಥೇಽಥ ವಕ್ಷ್ಯೇಽಹಮಿತಿಹಾಸಂ ಪುರಾತನಮ್ ।
ಯಸ್ಯ ಶ್ರವಣಮಾತ್ರೇಣ ಸರ್ವಸ್ಮಾನ್ಮುಚ್ಯತೇ ಋಣಾತ್ ॥ ೧ ॥
ಆನಂದಕಾನನೇ ಕಶ್ಚಿದ್ಬ್ರಾಹ್ಮಣೋ ವಾಮನಾಭಿಧಃ ।
ಕುಟುಂಬೀ ಮಮತಾಸಕ್ತೋ ವೇದವೇದಾಂಗಪಾರಗಃ ॥ ೨ ॥
ಕರ್ಮಕಾಂಡೇಽತಿನಿಷ್ಣಾತಃ ಸಮರ್ಥೋಽತಿಪರಾಕ್ರಮೀ ।
ಪ್ರತಿಗ್ರಹಸಮರ್ಥಶ್ಚ ಪ್ರತಿಗ್ರಹಪರೋಽಪಿ ಚ ॥ ೩ ॥
ಸರ್ವಪ್ರತಿಗ್ರಹಗ್ರಾಹೀ ಗ್ರಾಹ್ಯಾಗ್ರಾಹ್ಯವಿವರ್ಜಿತಃ ।
ದುಷ್ಟದಾನಪ್ರತಿಗ್ರಾಹೀ ಸರ್ವದಾನಮಹೋದ್ಯತಃ ॥ ೪ ॥
ಸರ್ವೋಽಜ್ಝಿತಪ್ರತಿಗ್ರಾಹೀ ಶಾವಕರ್ಮಪರಾಯಣಃ ।
ಏಕಾದಶಾನ್ನಭೋಜೀ ಚ ಪ್ರೇತಶಯ್ಯಾಪರಾಯಣಃ ॥ ೫ ॥
ಯಸ್ತೇನ ನ ಗೃಹೀತೋಽಸ್ತಿ ವಾರಾಣಸ್ಯಾಂ ಪ್ರತಿಗ್ರಹಃ ।
ನೈತಾದೃಕ್ ದೃಶ್ಯತೇ ಕೋಽಪಿ ಕುತ್ರಾಪಿ ಸನಕಾದಯಃ ॥ ೬ ॥
ಇತಿ ನಾನಾವಿಧೋಪಾಯೈರ್ದುಷ್ಟೈಃ ಸಂಚಿತವಾನ್ಧನಮ್ ।
ತಥಾಪಿ ಚ ದರಿದ್ರಃ ಸ್ಯಾದೃಣಂ ಗೃಹ್ಣಾತಿ ಸರ್ವತಃ ॥ ೭ ॥
ಋಣಂ ಗೃಹೀತ್ವಾ ವಿಪ್ರೇಭ್ಯಃ ಕುಟುಂಬಂ ಪೋಷಯತ್ಯಸೌ ।
ಸ್ವಯಂ ಮಿಷ್ಟಾನ್ನಮಶ್ನಾತಿ ಸರ್ವದಾ ಯತ್ರ ಕುತ್ರಚಿತ್ ॥ ೮ ॥
ಕಿಂ ಚಿತ್ರಂ ಯುಕ್ತಮೇವೈತತ್ಕುಮಾರ್ಗಾಸಾದಿತಂ ಧನಮ್ ।
ಶೀಘ್ರಂ ನಶ್ಯತ್ಯವಿಜ್ಞಾತಂ ಭುಂಕ್ತೇ ಪಾಪಫಲಂ ತ್ವಸೌ ॥ ೯ ॥
ಸನ್ಮಾರ್ಗೇಣಾರ್ಜಿತಂ ದ್ರವ್ಯಮಲ್ಪಮಪ್ಯಧಿಕಾಯತೇ ।
ನ ನಶ್ಯತಿ ಕದಾಪ್ಯೇತತ್ಫಲಂ ಯಚ್ಛತಿ ಶೋಭನಮ್ ॥ ೧೦ ॥
ತ ಏವಾತ್ರ ದ್ವಿಜಾ ಧನ್ಯಾ ಸತ್ವಥಾಪ್ತಧನೇನ ಯೇ ।
ಪೋಷಯಂತಿ ಕುಟುಂಬಂ ಸ್ವಂ ಪಾಪದ್ರವ್ಯಪರಾಙ್ಮುಖಾಃ ॥ ೧೧ ॥
ತಸ್ಯೇತ್ಥಂ ವರ್ತಮಾನಸ್ಯ ಕುಟುಂಬಾಸಕ್ತಚೇತಸಃ ।
ದುರ್ಜರಂ ಪಾತಕಂ ಜಾತಂ ಬಹೂನಾಂ ಚ ಋಣಂ ತಥಾ ॥ ೧೨ ॥
ಋಣದ್ರವ್ಯೇನ ಮಿಷ್ಟಾನ್ನಂ ಭುನಕ್ತಿ ಪ್ರಿಯಮಾತ್ಮನಃ ।
ಯೋ ದ್ರವ್ಯಂ ಯಾಚತೇ ಸ್ವೀಯಂ ನ ತೇನ ಸಹ ಭಾಷತೇ ॥ ೧೩ ॥
ತದ್ಭಯಾತ್ಸ್ವಗೃಹೇ ನೈವ ದಿವಸೇ ತಿಷ್ಠತಿ ಸ್ವಯಮ್ ।
ಮುಕ್ತಿಮಂಟಪಿಕಾಯಾಂ ತು ರಾತ್ರೌ ಸ್ವಪಿತಿ ನಿತ್ಯಶಃ ॥ ೧೪ ॥

ನಿಂದ್ಯಮಾನಸ್ತತಃ ಕಾಶ್ಯಾಂ ಸರ್ವೇಷಾಮೃಣಪೀಡಿತಃ ।
ತ್ಯಕ್ತ್ವಾ ಕಾಶೀಂ ಜಗಾಮಾಸೌ ಗ್ರಾಮಾಂತರಮಲಕ್ಷಿತಃ ॥ ೧೫ ॥
ತತ್ರಾಪ್ಯನೇಕಮಾರ್ಗೇಣ ಬಿಭರ್ತಿ ಸ್ವೋದರಂ ಶಠಃ ।
ತತೋ ಬಹುತರೇ ಕಾಲೇ ವೃದ್ಧಃ ಪಂಚತ್ವಮಾಪ ಸಃ ॥ ೧೬ ॥
ಕ್ರಿಯಾಕರ್ತುರಭಾವೇನ ಸ್ವೀಯಪಾಪವಶಾತ್ತದಾ ।
ನಾಗ್ನಿದಾಹೋಽಭವತ್ತಸ್ಯ ನಕರ್ಮಾಪ್ಯೌರ್ಧ್ವದೈಹಿಕಮ್ ॥ ೧೭ ॥
ಯಮಲೋಕಮಥೋ ನೇತುಂ ಕಾಲದೂತಾಸ್ಸಮಾಗತಾಃ ।
ಕರಾಲಾಃ ಪಾಶಹಸ್ತಾಶ್ಚ ಯಮಶಾಸನಕಾರಿಣಃ ॥ ೧೮ ॥
ಅಂಗುಷ್ಠಮಾತ್ರಂ ಪುರುಷಂ ಪಾಶೈರ್ಬದ್ಧ್ವಾ ಯಮಾಲಯಮ್ ।
ನಿನ್ಯುಸ್ತ್ರಿಭಿರ್ಮುಹೂರ್ತೈಶ್ಚ ತಾಡಯಂತಃ ಕಶಾದಿಭಿಃ ॥ ೧೯ ॥
ನೀತ್ವಾ ಸಂಯಮನೀಂ ಶೀಘ್ರಮಂತಕಾಯ ನಿವೇದ್ಯ ತಮ್ ।
ಪ್ರಾಹುಃ ಪ್ರಾಂಜಲಯೋ ದೂತಾ ಧರ್ಮರಾಜಂ ವಚೋ ಮೃದು ॥ ೨೦ ॥

**॥ ಎಪ್ಪತ್ತೆಂಟನೆಯ ಅಧ್ಯಾಯವು ॥**

**ಶೇಷದೇವರು ಹೇಳಿದರು—**

ಈ ಋಣಪ್ರಮೋಚನೀತೀರ್ಥದ ಋಣವಿಮೋಚಕಸಾಮರ್ಥ್ಯದ ಬಗ್ಗೆ ಒಂದು ಪುರಾತನ ಇತಿಹಾಸವಿದೆ. ಅದನ್ನು ಹೇಳುತ್ತೇನೆ. ಇದನ್ನು ಶ್ರವಣಮಾಡಿದ ಮಾತ್ರದಿಂದಲೇ ಎಲ್ಲ ಬಗೆಯ ಋಣಗಳ ದೆಶೆಯಿಂದಲೂ ಬಿಡುಗಡೆಯಾಗುತ್ತದೆ. ॥ ೧ ॥ ಕಾಶೀಪಟ್ಟಣದಲ್ಲಿರುವ ಆನಂದವನದಲ್ಲಿ ವೇದವೇದಾಂಗಗಳಲ್ಲಿ ಪಾರಂಗತನಾದ ವಾಮನನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನು ಕುಟುಂಬಸ್ಥನಾಗಿದ್ದನು ಮತ್ತು ಕುಟುಂಬದಲ್ಲಿ ಅತಿಯಾದ ವ್ಯಾಮೋಹವನ್ನು ಇಟ್ಟುಕೊಂಡಿದ್ದನು. ॥ ೨ ॥ ಇವನು ಸಮರ್ಥನೂ ಕರ್ಮಕಾಂಡದಲ್ಲಿ ನಿಷ್ಣಾತನೂ ಆಗಿದ್ದನು. ಪರಾಕ್ರಮಿಯೂ, ದಾನಸ್ವೀಕಾರ ಮಾಡುವುದು ಹೇಗೆಂದು ಚೆನ್ನಾಗಿ ಬಲ್ಲವನೂ ಆಗಿದ್ದು ದಾನವನ್ನು ಚೆನ್ನಾಗಿ ಸ್ವೀಕಾರ ಮಾಡುತ್ತಲೂ ಇದ್ದನು. ॥ ೩ ॥ ಎಲ್ಲ ಬಗೆಯ ದಾನಗಳನ್ನೂ ಸ್ವೀಕರಿಸುತ್ತಿದ್ದನು. ಇಂತಹುದನ್ನು ತೆಗೆದುಕೊಳ್ಳಬಹುದು ಮತ್ತು ಇಂತಹುದನ್ನು ತೆಗೆದುಕೊಳ್ಳಬಾರದು ಎಂಬ ವಿಚಾರವೇ ಅವನಿಗೆ ಇರಲಿಲ್ಲ. ದುಷ್ಟದಾನಗಳನ್ನೂ ತೆಗೆದುಕೊಳ್ಳುತ್ತಿದ್ದನು ಮತ್ತು ಎಲ್ಲಾ ದಾನಗಳನ್ನು ತಾನೇ ಸ್ವೀಕಾರ ಮಾಡಲು ಮಹಾಪ್ರಯತ್ನವನ್ನೂ ನಡೆಸುತ್ತಿದ್ದನು. ॥ ೪ ॥ ಎಲ್ಲರಿಂದಲೂ ತಿರಸ್ಕರಿಸಿದ್ದನ್ನೂ ದಾನ ತೆಗೆದುಕೊಳ್ಳುತ್ತಿದ್ದನು. ಸತ್ತ ಹನ್ನೊಂದನೆಯ ದಿವಸದ ಭೋಜನವನ್ನೂ ಮಾಡುತ್ತಿದ್ದನು. ಹೆಣಕ್ಕೆ ಸಂಬಂಧಪಟ್ಟ ಕಾರ್ಯಗಳನ್ನೆಲ್ಲಾ ಮಾಡಿಸುವುದರಲ್ಲಿಯೇ ಆಸಕ್ತನಾಗಿದ್ದನು. ಪ್ರೇತ ಶಯ್ಯಾದಾನವನ್ನೂ ತೆಗೆದುಕೊಳ್ಳುತ್ತಿದ್ದನು. ॥ ೫ ॥ ಇಡೀ ವಾರಾಣಸೀಪಟ್ಟಣವಲ್ಲಿ ಅವನು ಸ್ವೀಕಾರ ಮಾಡದಂತಹ ದಾನವೊಂದೂ ಇರಲಿಲ್ಲ. ಹೇ ಸನಕಾದಿಗಳೇ! ಇವನಂತಹವರು ಬೇರೆ ಯಾರೂ ನೋಡಲೂ ಸಹ ಎಲ್ಲಿಯೂ ಸಿಗುವುದಿಲ್ಲ. ॥ ೬ ॥ ಈ ರೀತಿಯಾಗಿ ನಾನಾವಿಧಗಳಾದ ದುಷ್ಟ ಉಪಾಯಗಳಿಂದ ಹಣವನ್ನು ಸಂಪಾದಿಸಿದ್ದನು. ಹಾಗಿದ್ದರೂ ದರಿದ್ರನಂತೆಯೇ ಇದ್ದನು.

ಎಲ್ಲರಿಂದಲೂ ಹಣವನ್ನು ಸಾಲವನ್ನಾಗಿ ಪಡೆಯುತ್ತಿದ್ದನು. ॥ ೭ ॥ ಇವನು ಬ್ರಾಹ್ಮಣರುಗಳಿಂದ ಸಾಲ ತಂದು ತನ್ನ ಸಂಸಾರವನ್ನು ಸಾಗಿಸುತ್ತಿದ್ದನು. ಎಲ್ಲಿ ಭೋಜನಕ್ಕೆ ಹೋದರೂ, ಅಲ್ಲಿ ತಾನು ಮಾತ್ರ ಭಕ್ಷ್ಯಭೋಜ್ಯಗಳನ್ನೂ ಸಿಹಿಯಾದ ಮಿಠಾಯಿಗಳನ್ನೂ ತಿನ್ನುತ್ತಿದ್ದನು. ॥ ೮ ॥ ಅಹೋ! ಇದೇನಾಶ್ಚರ್ಯವು. ಕಾರಣವೆಂದರೆ ಕೆಟ್ಟಮಾರ್ಗದಿಂದ ಸಂಪಾದಿಸಿದ ಹಣವು ಬೇಗನೆ ತನಗರಿವಿಲ್ಲದೆಯೇ ಹಾಳಾಗಿ ನಂತರ ಅವನು ಅವನ ಪಾಪದ ಫಲವನ್ನು ಮಾತ್ರ ಅನುಭವಿಸುವನು. ॥ ೯ ॥ ಸನ್ಮಾರ್ಗದಿಂದ ಸಂಪಾದಿಸಿದ ಹಣವು ಅಲ್ಪವಾದರೂ ಅದು ವೃದ್ಧಿಯಾಗುತ್ತದೆ. ಇದು ಎಂದೂ ನಾಶವಾಗುವುದಿಲ್ಲ. ಅಲ್ಲದೆ ಮಂಗಳವನ್ನೇ ತಂದುಕೊಡುವುದು. ॥ ೧೦ ॥ ಪಾಪದಿಂದ ಬರುವ ಹಣವನ್ನು ತಿರಸ್ಕರಿಸಿ ಒಳ್ಳೆಯ ದಾರಿಯಲ್ಲಿ ಸಂಪಾದಿಸಿದ ಹಣದಿಂದ ತಮ್ಮ ಕುಟುಂಬವನ್ನು ಪೋಷಿಸುವ ಬ್ರಾಹ್ಮಣರೇ ಧನ್ಯರು. ॥ ೧೧ ॥ ಈ ರೀತಿಯಾಗಿ ಕೇವಲ ದುಷ್ಟಮಾರ್ಗಗಳಿಂದಲೇ ಸಂಪಾದಿಸುತ್ತ ತನ್ನ ಕುಟುಂಬಪೋಷಣೆಯಲ್ಲಿಯೇ ಆಸಕ್ತನಾಗಿದ್ದ ಆ ಕಾಶಿಯ ಬ್ರಾಹ್ಮಣನಲ್ಲಿ ಜೀರ್ಣಿಸಿಕೊಳ್ಳಲಾಗದಷ್ಟು ಪಾಪದ ಹೊರೆ ಮತ್ತು ಬಹುಜನರ ಋಣದ ಹೊರೆಯೂ ಸೇರಿದ್ದವು. ॥ ೧೨ ॥ ಈ ರೀತಿಯಾಗಿ ಸಾಲ ಮಾಡಿ ತಂದ ಹಣದಿಂದ ತಾನು ಮೃಷ್ಟಾನ್ನವನ್ನು ಭೋಜನ ಮಾಡುತ್ತಿದ್ದನು. ಆದರೆ ಸಾಲಗಾರರು ಬಂದರೆ ಅವರೊಡನೆ ಮಾತನ್ನೂ ಕೂಡ ಆಡುತ್ತಿರಲಿಲ್ಲ. ॥ ೧೩ ॥ ಅವನು ಸಾಲಗಾರರ ಭಯದಿಂದ ಹಗಲು ಮನೆಯಲ್ಲೇ ಇರುತ್ತಿರಲಿಲ್ಲ ಮತ್ತು ರಾತ್ರಿಯಲ್ಲಿ ಮುಕ್ತಿಮಂಟಪದಲ್ಲಿ ಹೋಗಿ ಮಲಗುತ್ತಿದ್ದನು. ॥ ೧೪ ॥ ಒಂದು ದಿನ ಋಣಕ್ಕಾಗಿ ತಗಾದೆ ಮಾಡುವವರ ಕಾಟ ಹೆಚ್ಚಾಗಲು, ಯಾರ ಕಣ್ಣಿಗೂ ಬೀಳದೆ ಕಾಶಿಯನ್ನು ಬಿಟ್ಟು ಬೇರೆ ಊರಿಗೆ ಹೊರಟುಹೋದನು. ॥ ೧೫ ॥ ಅಲ್ಲಿಯೂ ಈ ಮೂರ್ಖನು ಅನೇಕ ದುರ್ಮಾರ್ಗಗಳಿಂದಲೇ ತನ್ನ ಹೊಟ್ಟೆಹೊರೆಯುತ್ತಿದ್ದನು. ಹೀಗಿರಲು ಬಹಳ ವರ್ಷಗಳ ನಂತರ ವೃದ್ಧಾಪ್ಯ ಬಂದು ಅವನು ಪ್ರಾಣಬಿಟ್ಟನು. ॥ ೧೬ ॥ ಇವನ ಪಾಪದ ಕಾರಣದಿಂದಾಗಿ ಯಾವ ಪುರೋಹಿತರೂ ಇವನಿಗೆ ಅಂತ್ಯಸಂಸ್ಕಾರಾದಿಗಳನ್ನು ದಿನವಾರವನ್ನೂ ಮಾಡಿಸಲು ಒಪ್ಪಲಿಲ್ಲ. ಅವನ ದೇಹಕ್ಕೆ ಅಗ್ನಿಸಂಸ್ಕಾರವೂ ಆಗಲಿಲ್ಲ. ॥ ೧೭ ॥ ಹೀಗಿರಲು, ಯಮದೂತರು ಅವನನ್ನು ಒಯ್ಯಲು ಬಂದರು. ಇವರು ಯಮ ಪಾಶವನ್ನು ಕೈಯಲ್ಲಿ ಹಿಡಿದಿದ್ದರು, ಕರಾಳವಿಕಾರರಾಗಿದ್ದರು. ॥ ೧೮ ॥ ಅಂಗುಷ್ಠ ಮಾತ್ರ ದೇಹದ ಇವನನ್ನು ಹಗ್ಗದಿಂದ ಬಿಗಿದು ಚಾವಟಿಗಳಿಂದ ಹೊಡೆಯುತ್ತಾ ಮೂರು ಮುಹೂರ್ತಗಳೊಳಗೆ ಯಮಪಟ್ಟಣಕ್ಕೆ ಎಳೆದುಕೊಂಡು ಹೋದರು. ॥ ೧೯ ॥ ಯಮದೇವರ ಪಟ್ಟಣವಾದ ಸಂಯಮಿನೀಪುರಕ್ಕೆ ಇವನನ್ನು ಕರೆದುಕೊಂಡು ಹೋಗಿ ಯಮರಾಜರೆದುರಿಗೆ ಕೈಜೋಡಿಸಿ ನಿಂತು ಯಮದೂತರು ಇವನ ಬಗ್ಗೆ ಕಠಿಣವಾದ ಮಾತುಗಳನ್ನು ಹೇಳಿದರು. ॥ ೨೦ ॥

ದೂತಾ ಊಚುಃ—

ಧರ್ಮರಾಜ ದ್ವಿಜಶ್ಚಾಯಮಾನೀತೋ ವಾಮನಾಭಿಧಃ ।
ಆಜ್ಞಾಂ ದೇಹಿ ಸ್ವದೂತೇಷು ಕಿಂಕರ್ತವ್ಯಮಮುಷ್ಯ ವೈ ॥ ೨೧ ॥
ದೂತವಾಕ್ಯಂ ಸಮಾಕರ್ಣ್ಯ ಚಿತ್ರಗುಪ್ತಂ ವಚೋಽಬ್ರವೀತ್ ।
ಯದ್ಯವೇತ್ತಸ್ಯ ಕರ್ತವ್ಯಂ ದೃಷ್ಟ್ವಾ ತದ್ಬ್ರೂಹಿ ಸತ್ವರಮ್ ॥ ೨೨ ॥

ಚಿತ್ರಗುಪ್ತೋಽಪಿ ದೃಷ್ಟ್ವೈನಮೂಚೇ ಸಂಯಮಿನೀಪತಿಮ್ ।
ಕ್ರಮೇಣ ಸರ್ವನರಕೇಷ್ವಯಂ ಪಾತ್ಯೋಽತಿಪಾತಕೀ ॥ ೨೩ ॥
ಶ್ರುತ್ವಾ ತದುದ್ಯತಾಸ್ಸರ್ವೇ ನಿನ್ಯುಸ್ತಂ ನರಕಾಂತಿಕಮ್ ।
ಯಾತನಾಯೋದ್ಯಮಂ ಚಕ್ರುಸ್ತಾವಚ್ಚಿತ್ರಮಭೂದ್ದ್ವಿಜಾಃ ॥ ೨೪ ॥
ತಸ್ಮಿನ್ಕಾಲೇ ಮಹಾನ್ಕಶ್ಚಿದ್ಗೃಧ್ರಸ್ತಸ್ಯ ಕಲೇವರಾತ್ ।
ಖಂಡಮೇಕಮುಪಾದಾಯ ಗಗನೇ ಚೋದಡೀಯತ ॥ ೨೫ ॥
ತತ್ಪೃಷ್ಠೇ ಬಹವೋ ಗೃಧ್ರಾಃ ಸಮಾಯಾತಾಃ ಪಲೇಚ್ಛಯಾ ।
ತಾನ್ದೃಷ್ಟ್ವಾತಿದ್ರುತೋ ಗೃಧ್ರಃ ಸೋಽಪಿ ಯಾತೋ ವಿಹಾಯಸಾ ॥ ೨೬ ॥
ಆಜಗಾಮ ಗೃಹೀತ್ವಾ ತತ್ತ್ರ್ಯಾಗಸ್ಯೋಪಮಂಡಲೇ ।
ಋಣಪ್ರಮೋಚನಾದೂರ್ಧ್ವಂ ತಾವತ್ತೇಽಪಿ ಸಮಾಗತಾಃ ॥ ೨೭ ॥
ತಸ್ಯ ತೈರಭವದ್ಯುದ್ಧಂ ಬಲಿನೋ ಬಲಿಭಿಸ್ಸಹ ।
ತದಂತರೇ ತದಾಸ್ಯಾತ್ತತ್ಪಲಂ ನಿಪಪಾತ ಹ ॥ ೨೮ ॥
ಪತಿತಂ ತನ್ಮಹಾಪುಣ್ಯೇ ಋಣಮೋಚನಮಂಡಲೇ ।
ತೇನಾಸೌ ಮುಮುಚೇ ಪಾಪಾದಧಮರ್ಣಾಚ್ಚ ವಾಮನಃ ॥ ೨೯ ॥
ತತೋ ವಿಮಾನಮಾರುಹ್ಯ ವಿಷ್ಣುದೂತಾ ಯಮಾಂತಿಕಮ್ ।
ಗತ್ವಾಭಿಜಗದುಃ ಕಾಲಂ ವಿಪ್ರೋಽಸೌ ಮುಚ್ಯತಾಮಿತಿ ॥ ೩೦ ॥
ಇತ್ಯುಕ್ತ್ವಾ ತಂ ಸಮಾಕೃಷ್ಯ ವಿಪ್ರಂ ದಿವ್ಯವಪುರ್ಧರಮ್ ।
ಸ್ವವಿಮಾನೇ ಸಮಾರೋಪ್ಯ ನಿನ್ಯುರ್ವೈಕುಂಠಮಂದಿರೇ ॥ ೩೧ ॥
ಋಣಮೋಚನಮಾಹಾತ್ಮ್ಯಂ ಕೋ ವಾ ಗದಿತುಮರ್ಹತಿ ।
ಯದ್ಭೂಮಿಸ್ಪರ್ಶಮಾತ್ರೇಣ ಸ ಮುಕ್ತೋ ಋಣಪಾತಕೈಃ ॥ ೩೨ ॥
ತಸ್ಮಾದತ್ರ ಮುನಿವ್ಯಾಘ್ರಾ ದೇಶದೇಶಾಂತರಾಗತಾಃ ।
ಸ್ನಾನದಾನಾದಿಕಂ ಕರ್ಮ ಕರಿಷ್ಯಂತ್ಯೃಣಮೋಚನೇ ॥ ೩೩ ॥
ಋಣೈರ್ವಿಮುಕ್ತಾಸ್ತೇ ಸರ್ವೇ ಸಪ್ತಜನ್ಮಕೃತೈರಪಿ ।
ನಿಷ್ಪಾಪಾ ನಿರ್ಮಲಾ ಭೂತ್ವಾ ಯಾಸ್ಯಂತಿ ಹರಿಮಂದಿರಮ್ ॥ ೩೪ ॥
ಋಣಮೋಚನಮಾಹಾತ್ಮ್ಯಮೇವಮುಕ್ತಂ ಯಥಾಶ್ರುತಮ್ ।
ಅಥಾಪರಂ ಪ್ರವಕ್ಷ್ಯಾಮಿ ಸುತೀರ್ಥಂ ಸನಕಾದಯಃ ॥ ೩೫ ॥

॥ ಇತಿ ಅಷ್ಟಸಪ್ತತಿತಮೋಽಧ್ಯಾಯಃ ॥

ಯಮದೂತರು ಹೇಳಿದರು—

"ಎಲೈ ಧರ್ಮರಾಜರೇ! ಈ ವಾಮನನೆಂಬ ಹೆಸರುಳ್ಳ ಬ್ರಾಹ್ಮಣನನ್ನು ಎಳೆದುಕೊಂಡು ಬಂದಿದ್ದೇವೆ. ಇವನಿಗೆ ಏನು ಮಾಡಬೇಕೆನ್ನುವುದಕ್ಕೆ ಯಮಕಿಂಕರಿಗೆ ಆಜ್ಞೆ ಮಾಡಿರಿ." ॥ ೨೧ ॥

ದೂತರ ಮಾತನ್ನು ಕೇಳಿದ ಧರ್ಮರಾಜನು ಚಿತ್ರಗುಪ್ತರನ್ನು ಕುರಿತು ''ಅವನಿಗೆ ಏನು ಮಾಡ ಬೇಕೋ ಅದನ್ನು ನೋಡಿ ಜಾಗ್ರತೆಯಾಗಿ ಹೇಳಿ'' ಎಂದನು. ॥ ೨೨ ॥ ಚಿತ್ರಗುಪ್ತರಾದರೋ ಇವನನ್ನು ನೋಡಿ ಸಂಯಮಿನೀಪತಿಯಾದ ಧರ್ಮರಾಜನನ್ನು ಕುರಿತು, ''ಇವನು ಅತಿಪಾತಕೀ, ಕ್ರಮೇಣ ಎಲ್ಲ ನರಕಗಳಲ್ಲೂ ಹಾಕತಕ್ಕದ್ದು.'' ಎಂದು ಹೇಳಿದರು. ॥ ೨೩ ॥ ಇದನ್ನು ಕೇಳಿ ಯಮದೂತರು ಅವನನ್ನು ನರಕಗಳ ಸಮೀಪಕ್ಕೆ ಒಯ್ದರು ಮತ್ತು ಯಾತನೆಗಳನ್ನು ಕೊಡಲು ಯತ್ನಶೀಲರಾದರು. ಹೇ ಸನಕಾದಿದ್ವಿಜೋತ್ತಮರೇ! ಕೇಳಿರಿ. ಅಷ್ಟರಲ್ಲಿ ಒಂದು ಚಮತ್ಕಾರವು ನಡೆಯಿತು. ॥ ೨೪ ॥ ಆ ಸಮಯದಲ್ಲಿ ಒಂದು ದೊಡ್ಡ ಹದ್ದು ಬಂದು ಇವನ ಯಾತನಾದೇಹದ ಒಂದು ತುಂಡುಮಾಂಸವನ್ನು ಕಚ್ಚಿಕೊಂಡು ಹೋಯಿತು. ॥ ೨೫ ॥ ಅದರ ಹಿಂದೆ ಅನೇಕ ಹದ್ದುಗಳು ಮಾಂಸದ ಆಸೆಯಿಂದ ಹಿಂಬಾಲಿಸಿ ಹಾರಿದವು. ಅವುಗಳನ್ನು ಕಂಡ ಆ ಹದ್ದು ಆಕಾಶದಲ್ಲಿ ವೇಗವಾಗಿ ಹಾರಿತು. ॥ ೨೬ ॥ ಆ ಮಾಂಸದ ತುಂಡನ್ನು ಕಚ್ಚಿಕೊಂಡು ಪ್ರಯಾಗ ಮಂಡಲದಲ್ಲಿರುವ ಋಣಮೋಚನಸರಸ್ಸಿನ ಮೇಲೆ ಹಾರಿ ಬರುತ್ತಿರುವಾಗ ಆ ಹದ್ದುಗಳು ಪರಸ್ಪರ ಹೋರಾಡಲಾರಂಭಿಸಿದವು. ॥ ೨೭ ॥ ಆಗ ಆ ಹದ್ದಿನ ಬಾಯಿಯಿಂದ ಮಾಂಸದ ತುಂಡು ಮಹಾಪುಣ್ಯಕರವಾದ ಋಣಮೋಚನಮಂಡಲದಲ್ಲಿ ಬಿದ್ದಿತು. ॥ ೨೮ ॥ ಆದ್ದರಿಂದಲೇ ಈ ವಾಮನನು ನೀಚವಾದ ಋಣದ ದೆಶೆಯಿಂದಲೂ ಪಾಪದ ದೆಶೆಯಿಂದಲೂ ಮುಕ್ತನಾದನು. ॥ ೨೯ ॥ ಅನಂತರ ವಿಷ್ಣುದೂತರು ವಿಮಾನದಲ್ಲಿ ಕುಳಿತುಕೊಂಡು ಯಮನ ಸಮೀಪಕ್ಕೆ ಬಂದರು. ಬಂದು ಯಮಧರ್ಮನನ್ನು ''ಈ ಬ್ರಾಹ್ಮಣನನ್ನು ಬಿಟ್ಟು ಬಿಡು'' ಎಂದು ಹೇಳಿದರು. ॥ ೩೦ ॥ ಹೀಗೆ ಹೇಳಿ ಆ ವಿಷ್ಣುದೂತರು ಆ ಬ್ರಾಹ್ಮಣನನ್ನು ಎಳೆದುಕೊಂಡು ಹೋದರು. ಅಷ್ಟರಲ್ಲಿಯೇ ಅವನಿಗೆ ದಿವ್ಯಶರೀರವು ಬಂದಿತು. ಅವನನ್ನು ತಮ್ಮ ವಿಮಾನದಲ್ಲಿ ಕೂಡಿಸಿಕೊಂಡು ವೈಕುಂಠನಗರಿಗೆ ಒಯ್ದರು. ॥ ೩೧ ॥ ಯಾವ ಭೂಮಿಯ ಸ್ಪರ್ಶಮಾತ್ರದಿಂದಲೇ ಋಣ ಸಂಬಂಧವಾದ ಪಾತಕಗಳೆಲ್ಲವೂ ನಾಶವಾಗುವುವೋ ಅಂತಹ ಋಣಮೋಚನಸರಸ್ಸಿನ ಮಾಹಾತ್ಮ್ಯೆಯನ್ನು ಯಾರಿಂದ ವರ್ಣಿಸಲು ಸಾಧ್ಯ? ॥ ೩೨ ॥ ಮುನಿಶ್ರೇಷ್ಠರೇ! ಆದ್ದರಿಂದಲೇ, ದೇಶದೇಶಾಂತರಗಳಲ್ಲಿರುವವರೂ ಈ ಋಣಮೋಚನಸರಸ್ಸಿನಲ್ಲಿ ಸ್ನಾನದಾನಾದಿಕರ್ಮಗಳನ್ನು ಮಾಡುತ್ತಾರೆ. ॥ ೩೩ ॥ ಅವರೆಲ್ಲರು ಏಳೇಳು ಜನ್ಮಗಳಲ್ಲಿ ಮಾಡಿರುವ ಋಣಗಳಿಂದ ಬಿಡಲ್ಪಟ್ಟವರಾಗಿ ಶ್ರೀಹರಿಯ ಮಂದಿರವಾದ ವೈಕುಂಠಕ್ಕೆ ಹೋಗುವರು. ॥ ೩೪ ॥ ನಾನು ಹೇಗೆ ಶ್ರವಣಮಾಡಿದ್ದೆನೋ ಹಾಗೆಯೇ ಋಣಮೋಚನತೀರ್ಥದ ಮಾಹಾತ್ಮ್ಯೆಯನ್ನು ಹೇಳಿದ್ದೇನೆ. ಇನ್ನು ಬೇರೆ ಬೇರೆ ಒಳ್ಳೆಯ ತೀರ್ಥಗಳ ವಿಷಯವಾಗಿಯೂ ಹೇಳುವೆನು. ॥ ೩೫ ॥

॥ ಎಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನಾಶೀತಿತಮೋಽಧ್ಯಾಯಃ ॥ ೭೯ ॥

ಶೇಷ ಉವಾಚ—

ತಸ್ಯ ಪಶ್ಚಿಮಭಾಗೇಽಸ್ತಿ ಪಾಪಮೋಚನಮುತ್ತಮಮ್ ।
ತೀರ್ಥಸಂಭೂತಪಾಪಘ್ನಮನ್ಯಪಾಪವಿನಾಶಕಮ್ ॥ ೧ ॥
ಕಾಯಿಕಂ ವಾಚಿಕಂ ಪಾಪಂ ಮಾನಸಂ ತ್ರಿವಿಧಂ ಹ್ಯಘಮ್ ।
ಏತಜ್ಜನ್ಮಪ್ರಭೂತಂ ಚ ಜನ್ಮಜನ್ಮಾಂತರಾರ್ಜಿತಮ್ ॥ ೨ ॥
ಆರ್ದ್ರಂ ಶುಷ್ಕಂ ಲಘು ಸ್ಥೂಲಂ ಜ್ಞಾತಮಜ್ಞಾತಪಾತಕಮ್ ।
ತತ್ಸರ್ವಂ ನಾಶಮಾಯಾತಿ ತತ್ತೀರ್ಥೇ ಸ್ನಾನಮಾತ್ರತಃ ॥ ೩ ॥
ತತ್ರ ಸ್ನಾತ್ವಾ ಚ ಯೇ ಮರ್ತ್ಯಾಸ್ತರ್ಪಯಂತಿ ಪಿತೄನ್ಸ್ವಕಾನ್ ।
ತದೈವ ಪಿತರಸ್ತೇಷಾಮಾಪ್ನುವಂತಿ ಪರಾಂ ಗತಿಮ್ ॥ ೪ ॥
ದಶದಂಡಾತ್ಮಕಂ ತೀರ್ಥಂ ತದ್ಧಿ ಪ್ರೋಕ್ತಂ ಪುರಾತನೈಃ ।
ತತ್ರಾಕ್ಷಯ್ಯಕೃತಂ ಕರ್ಮ ಸ್ನಾನದಾನಜಪಾದಿಕಮ್ ॥ ೫ ॥
ಅಸ್ಮಿನ್ನರ್ಥೇ ಮುನಿಶ್ರೇಷ್ಠಾ ವಾಚ್ಯಂ ಪುಣ್ಯಂ ಕಥಾನಕಮ್ ।
ಸಮ್ಯಙ್ಮನಸ್ಸಮಾಧಾಯ ತತ್ಸರ್ವಮವಧಾರ್ಯತಾಮ್ ॥ ೬ ॥
ಪುರಾ ಚಂದ್ರಪುರೇ ರಮ್ಯೇ ವಿಪ್ರ ಆಸೀನ್ಮಹಾಮತಿಃ ।
ವೇದಶಾಸ್ತ್ರಪ್ರವೀಣಶ್ಚ ಸದಾಚಾರರತಸ್ಸದಾ ॥ ೭ ॥
ತತ್ಪತ್ನೀ ಲಲಿತಾನಾಮ್ನೀ ಪತಿಶುಶ್ರೂಷಣೇ ರತಾ ।
ಸ್ವಧರ್ಮನಿರತಾ ನಿತ್ಯಂ ಸತ್ಯವಾಗಲ್ಪಭಾಷಿಣೀ ॥ ೮ ॥
ತಯಾ ಸಾಕಂ ಸ ಧರ್ಮಾತ್ಮಾ ಗಾರ್ಹಸ್ಥ್ಯಂ ಬುಭುಜೇ ಸುಖಮ್ ।
ಷಟ್ಕರ್ಮಾಣ್ಯಾಚರನ್ನಾಸ್ತೆ ವಿಷ್ಣುಭಕ್ತಿಪರಾಯಣಃ ॥ ೯ ॥
ಏವಂ ಕಾಲೇ ಸುಸಂವೃತ್ತೇ ಮಧ್ಯಮೇ ವಯಸಿ ಸ್ಥಿತಃ ।
ಜ್ವರೇಣ ಪೀಡಿತೋಽತ್ಯರ್ಥಂ ಮಮಾರ ಸನಕಾದಯಃ ॥ ೧೦ ॥
ಸ ಸದಾಚರಣೇನಾಪಿ ಧರ್ಮಾಚರಣತೋಽಪಿ ಚ ।
ಸ್ವರ್ಗಂ ಪ್ರಾಪ್ಯಾಮರೋ ಭೂತ್ವಾ ಭುಂಜನ್ಭೋಗಾನುವಾಸ ಹ ॥ ೧೧ ॥
ಅಥಾತ್ರ ಲಲಿತಾ ದೃಷ್ಟ್ವಾ ಮೃತಂ ಪತಿಮಪುತ್ರಕಾ ।
ಭೃಶಂ ವಿಲಾಪ್ಯ ಕರುಣಂ ಸಂಸ್ತಭ್ಯಾತ್ಮಾನಮಾತ್ಮನಾ ॥ ೧೨ ॥
ತತ್ಸಾಂಪರಾಯಿಕಂ ಕೃತ್ಯಂ ಬ್ರಾಹ್ಮಣಾನಾಮನುಜ್ಞಯಾ ।
ಯಥಾಶಕ್ತಿ ಯಥಾವಿತ್ತಂ ಸ್ವಯಮೇವ ಚಕಾರ ಹ ॥ ೧೩ ॥
ತತಸ್ತಸ್ಥೌ ಸ್ವಗೇಹೇ ಸಾ ಸ್ವಧರ್ಮನಿರತಾ ಸದಾ ।
ಸ್ವದೇಹಂ ಶೋಧಯಾಮಾಸ ವ್ರತೈರ್ನಾನಾವಿಧೈರಪಿ ॥ ೧೪ ॥

ಸ್ತ್ರೀಣಾಮಯಂ ಪರೋ ಧರ್ಮಃ ಶ್ರುತಿಸ್ಮೃತಿವಿನಿಶ್ಚಿತಃ ।
ಪತಿಸೇವಾನುವರ್ತಿತ್ವಂ ತದ್ವಚಃಪರಿಪಾಲನಮ್ ॥ ೧೫ ॥
ಮೃತೇಽನ್ವಾರೋಹಣಂ ತಸ್ಮಿನ್ಬ್ರಹ್ಮಚರ್ಯಮಥಾಪಿ ವಾ ।
ಯಾವಜ್ಜೀವಂ ಪ್ರಕರ್ತವ್ಯಂ ತೇನ ತಾಸಾಂ ಸತೀಗತಿಃ ॥ ೧೬ ॥
ಇತ್ಥಂ ಸಾ ವರ್ತಮಾನಾಪಿ ದುಷ್ಪ್ರಾಚೀನಕರ್ಮಣಾ ।
ತರುಣೀರೂಪಸಂಪನ್ನಾ ಮತಿಭೇದಮವಾಪ ಸಾ ॥ ೧೭ ॥
ತಾಂ ದೃಷ್ಟ್ವಾ ಲಲಿತಾಂ ಖಿನ್ನಾಂ ಭೃಶಂ ಲಲಿತಯೌವನಾಮ್ ।
ಏಕಾಕಿನೀಂ ಭೋಕ್ತುಕಾಮಾ ನಾನೋಪಾಯಾತ್ಪ್ರಚಕ್ರಿರೇ ॥ ೧೮ ॥
ತತ್ಸಮೀಪೇ ಸ್ಥಿತಾ ಕಾಚಿದ್ಬ್ರಾಹ್ಮಣೀ ವ್ಯಭಿಚಾರಿಣೀ ।
ತದ್ದ್ವಾರಾ ಬೋಧಯಾಮಾಸುರ್ಲಲಿತಾಂ ಲಲಿತಾಕೃತಿಮ್ ॥ ೧೯ ॥
ಸಾ ತತ್ಸಮೀಪಮಾಗತ್ಯ ವ್ಯಭಿಚಾರಧುರಂಧರಾ ।
ಸಂಭಲೀತ್ವಮುರೀಕೃತ್ಯ ಜಗಾದ ಲಲಿತಂ ವಚಃ ॥ ೨೦ ॥

## ॥ ಎಪ್ಪತ್ತೊಂಬತ್ತನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಈ ಆದಿವೇಣಿಯ ಪಶ್ಚಿಮದಿಗ್ಭಾಗದಲ್ಲಿ ಉತ್ತಮವಾದ ಪಾಪಮೋಚನವೆಂಬ ತೀರ್ಥವಿದೆ. ಇದು ತೀರ್ಥಕ್ಷೇತ್ರಗಳಲ್ಲಿ ಮಾಡಿರುವ ಪಾಪಗಳಲ್ಲದೆ ಅನ್ಯಪಾಪಗಳನ್ನೂ ಪರಿಹಾರಮಾಡುವುದು. ॥ ೧ ॥ ಕಾಯಿಕ, ವಾಚಿಕ ಮತ್ತು ಮಾನಸಿಕ ಎಂಬ ತ್ರಿವಿಧಪಾಪಗಳನ್ನು ನಾಶಮಾಡುವುದಲ್ಲದೆ ಈ ಜನ್ಮದಲ್ಲಿ ಹುಟ್ಟಿರುವ ಮತ್ತು ಜನ್ಮಜನ್ಮಾಂತರಗಳಲ್ಲಿಯೂ ಹುಟ್ಟಿರುವ ಪಾಪಗಳನ್ನೂ ನಾಶಮಾಡುವುದು. ॥ ೨ ॥ ಈ ತೀರ್ಥದಲ್ಲಿ ಕೇವಲ ಸ್ನಾನ ಮಾಡುವುದರಿಂದ ಹೊಸದಾಗಿ ಮಾಡಿರತಕ್ಕ, ತುಂಬಾ ಹಳೆಯದಾದ, ಹಗುರವಾದ, ಭಾರಿಯಾದ, ತಿಳಿದೂ ತಿಳಿದೂ ಮಾಡಿರುವ ಮತ್ತು ತಿಳಿಯದೇ ಮಾಡಿರುವ ಪಾಪಗಳೆಲ್ಲವೂ ನಾಶವಾಗುವುವು. ॥ ೩ ॥ ಈ ತೀರ್ಥದಲ್ಲಿ ಸ್ನಾನ ಮಾಡಿ ತನ್ನ ಪಿತೃಗಳಿಗೆ ತರ್ಪಣ ಕೊಟ್ಟರೆ ಆ ಪಿತೃಗಳು ಆಗಲೇ ಪರಮಗತಿಯನ್ನು ಪಡೆಯುತ್ತಾರೆ. ॥ ೪ ॥ ಹತ್ತು ದಂಡ ಉದ್ದಗಲಗಳುಳ್ಳ ದಶದಂಡ ತೀರ್ಥವೆಂಬುದೊಂದು ಅಲ್ಲಿಯೇ ಇದೆ. ಪುರಾತನ ಬ್ರಾಹ್ಮಣೋತ್ತಮರ ಹೇಳಿಕೆಯಂತೆ ಇಲ್ಲಿ ಮಾಡಿದ ಸ್ನಾನ, ದಾನ ಮತ್ತು ಜಪಾದಿಗಳು ಅಕ್ಷಯವಾಗುವುದು. ॥ ೫ ॥ ಈ ವಿಷಯವನ್ನೇ ಪುಷ್ಟೀಕರಿಸತಕ್ಕ ಒಂದು ಪುಣ್ಯಕರವಾದ ಕಥೆಯನ್ನು ಹೇಳುವೆನು. ಸನಕಾದಿಗಳೇ! ಚೆನ್ನಾಗಿ ಗಮನಿಸಿ ಕೇಳಿ, ಮನಸ್ಸಿಗೆ ತಂದುಕೊಳ್ಳಿರಿ. ॥ ೬ ॥ ಹಿಂದೆ ಚಂದ್ರಪುರವೆಂಬ ಊರಿನಲ್ಲಿ ಮಹಾ ಬುದ್ಧಿವಂತನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ವೇದಶಾಸ್ತ್ರಾದಿಗಳಲ್ಲಿ ಪಂಡಿತನಾಗಿದ್ದಲ್ಲದೆ ಸದಾಚಾರಸಂಪನ್ನನೂ ಆಗಿದ್ದನು. ॥ ೭ ॥ ಲಲಿತಾ ಎಂಬ ಹೆಸರಿನ ಅವನ ಹೆಂಡತಿಯು ಪತಿಸೇವಾದಲ್ಲಿ ಯಾವಾಗಲೂ ನಿರತಳಾಗಿದ್ದು, ಸ್ವಧರ್ಮದಲ್ಲಿ ನಿತ್ಯವೂ ಆಸಕ್ತಳಾಗಿದ್ದಳು. ಅಲ್ಲದೆ ಸತ್ಯವನ್ನು ನುಡಿಯತಕ್ಕವಳೂ, ಅಲ್ಪಭಾಷಿಣಿಯೂ ಆಗಿದ್ದಳು. ॥ ೮ ॥ ಇವಳೊಡನೆ ಕೂಡಿಕೊಂಡು ಧರ್ಮಾತ್ಮನಾಗಿದ್ದ ಆ ಬ್ರಾಹ್ಮಣನು ಸುಖವಾಗಿ ಗಾರ್ಹಸ್ಥ್ಯಜೀವನವನ್ನು ನಡೆಸುತ್ತಿದ್ದನು. ತನ್ನ

ವರ್ಣಕ್ಕೆ ಉಚಿತವಾದ ಷಟ್ಕರ್ಮಗಳನ್ನು ಮಾಡುತ್ತಿದ್ದನು ಮತ್ತು ಪರಮವಿಷ್ಣುಭಕ್ತನೂ ಆಗಿದ್ದನು. ॥ ೯ ॥ ಹೇ, ಸನಕಾದಿಗಳೇ! ಹೀಗಿರುತ್ತಿರಲು ಮಧ್ಯವಯಸ್ಸಿನಲ್ಲಿದ್ದ ಅವನು ಅತೀವಜ್ವರದಿಂದ ಪೀಡಿತನಾಗಿ ಸತ್ತುಹೋದನು. ॥ ೧೦ ॥ ಅವನು ತನ್ನ ಸದಾಚಾರಗಳಿಂದಲೂ ಧರ್ಮನಿಷ್ಠೆಯಿಂದಲೂ ಸ್ವರ್ಗಕ್ಕೆ ಹೋಗಿ ಅಲ್ಲಿ ದೇವತಾಶರೀರವನ್ನು ಪಡೆದು ಸುಖಭೋಗ-ಗಳನ್ನು ಅನುಭವಿಸಿದನು. ॥ ೧೧ ॥ ಈ ಭೂಲೋಕದಲ್ಲಿ ಲಲಿತೆಯು ಮಕ್ಕಳಿಲ್ಲದವಳಾಗಿದ್ದರೂ ಮೃತನಾದ ಗಂಡನನ್ನು ಕಂಡು ಬಹುವಾಗಿ ಪರಿತಪಿಸಿದಳು. ಮೃತ್ಯುವಿನ ಕಾರಣವನ್ನು ತಿಳಿದು ಹೇಗೋ ತನ್ನನ್ನು ತಾನೇ ಸಮಾಧಾನಪಡಿಸಿಕೊಂಡಳು. ॥ ೧೨ ॥ ಬ್ರಾಹ್ಮಣರುಗಳ ಸಹಾಯದಿಂದ ತಾನೇ ತನ್ನ ಶಕ್ತಿ ಮತ್ತು ಧನದ ಪ್ರಕಾರ ಪತಿಯ ಸಂಸ್ಕಾರಗಳನ್ನೆಲ್ಲ ಮಾಡಿ ಮುಗಿಸಿದಳು. ॥ ೧೩ ॥ ಅನಂತರ ತನ್ನ ಮನೆಯಲ್ಲೇ ಇದ್ದುಕೊಂಡು ತನ್ನ ವೈಧವ್ಯಕ್ಕೆ ಸಮ್ಮತವಾದ ಧರ್ಮಗಳಲ್ಲಿ ನಿರತಳಾಗಿದ್ದು ನಾನಾವಿಧಗಳಾದ ವ್ರತಾದಿಗಳಿಂದ ತನ್ನ ದೇಹವನ್ನು ಶೋಧಿಸಿದಳು. ॥ ೧೪ ॥ ಸ್ತ್ರೀಯರಿಗೆ ಗಂಡನಿರುವಾಗ ಗಂಡನ ಸೇವೆಯಲ್ಲಿಯೇ ಆಸಕ್ತಳಾಗಿರುವುದು ಮತ್ತು ಗಂಡನ ಇಚ್ಛೆಗೆ ಅನುಸರಿಸಿ ಇರುವುದು ಮತ್ತು ಅವನ ಮಾತನ್ನು ಪರಿಪಾಲಿಸುವುದು - ಈ ಧರ್ಮವು ಶ್ರುತಿ, ಸ್ಮೃತಿಗಳಲ್ಲಿ ನಿಶ್ಚಯಿಸಲ್ಪಟ್ಟಿದೆ. ಇದು ಎಲ್ಲಾ ಕಾಲಕ್ಕೂ ಅನ್ವಯಿಸುವುದು. ॥ ೧೫ ॥ ಅವನು ಮೃತನಾದಮೇಲೆ ಅವನ ಜೊತೆಗೆ ಚಿತೆಯನ್ನೇರಿ ದೇಹತ್ಯಾಗ ಮಾಡುವುದು. ಇದು ಸಾಧ್ಯವಿಲ್ಲದಿರುವಾಗ ಬದುಕಿರುವವರೆಗೂ ಬ್ರಹ್ಮಚರ್ಯದಿಂದ ಇರುವುದು. ಹೀಗೆ ಮಾಡುವವರಿಗೆ ''ಸತೀ'' ಎಂಬ ಹೆಸರು ಪ್ರಾಪ್ತವಾಗುವುದು. ॥ ೧೬ ॥ ಈ ರೀತಿಯಾಗಿ ಅವಳು ಇದ್ದರೂ ಕೂಡಾ ಅವಳ ದುಷ್ಟ ಪ್ರಾಚೀನ ಕರ್ಮದ ಫಲವಾಗಿ ತರುಣಿಯೂ ರೂಪಸಂಪನ್ನೆಯೂ ಆದ ಆಕೆಯು ಕೆಟ್ಟ ಮನಸ್ಸನ್ನು ಹೊಂದಿ ಮತಿಭೇದವನ್ನು ಪಡೆದಳು. ॥ ೧೭ ॥ ಇವಳು ಕೋಮಲವಾಗಿದ್ದಳು. ಖಿನ್ನಳಾಗಿದ್ದಳು. ಅತಿಯಾದ ಲಾಲಿತ್ಯದಿಂದ ಕೂಡಿದ ಯೌವನವನ್ನು ಪಡೆದಿದ್ದಳು. ಜೊತೆಗೆ ಒಬ್ಬಳೇ ಇದ್ದಳು. ಹೀಗಿರುವ ಇವಳನ್ನು ನೋಡಿ ಇವಳನ್ನು ವಶಪಡಿಸಿಕೊಂಡು ಭೋಗಿಸಲು ನಾನಾವಿಧಗಳಾದ ಉಪಾಯಗಳನ್ನು ಪರಪುರುಷರು ಮಾಡುತ್ತಿದ್ದರು. ॥ ೧೮ ॥ ಅವಳ ಸಮೀಪದಲ್ಲಿಯೇ ಒಬ್ಬ ಬ್ರಾಹ್ಮಣ ವ್ಯಭಿಚಾರಿಣಿಯು ಇದ್ದಳು. ಸುಮನೋಹರಳೂ, ಮನೋಹರವಾದ ಶರೀರವುಳ್ಳವಳೂ ಆಗಿದ್ದ ಇವಳನ್ನು ಆ ವ್ಯಭಿಚಾರಿ ಹೆಂಗಸಿನ ಮೂಲಕ ವಿಟಪುರುಷರು ಪ್ರಚೋದನಕ್ಕೆ ಪ್ರಾರಂಭಿಸಿದರು. ॥ ೧೯ ॥ ಆ ಬ್ರಾಹ್ಮಣಸ್ತ್ರೀಯು ವ್ಯಭಿಚಾರ ಮಾಡುವುದರಲ್ಲಿ ಅಗ್ರಗಣ್ಯೆಯಾಗಿದ್ದಳು. ಆದ್ದರಿಂದ ತಾನು ಆ ವಿಧವೆಯ ಸಮೀಪಕ್ಕೆ ಬಂದು ವ್ಯಭಿಚಾರಿಗಳ ದೂತೆಯಾಗಿ ಮೃದುಮಧುರವಾದ ಮಾತುಗಳನ್ನು ಹೇಳಿದಳು. ॥ ೨೦ ॥

ಸಂಭಲ್ಯುವಾಚ—

ಲಲಿತೇ ತವ ಸೌಂದರ್ಯಂ ದೃಷ್ಟ್ವಾ ತಾರುಣ್ಯಮೇವ ಚ ।
ಭೋಗಹೀನಮಿತಿ ಜ್ಞಾತ್ವಾ ಭೃಶಂ ತಪ್ಯಾಮ್ಯಹಂ ಮುಹುಃ ॥ ೨೧ ॥
ತವೇದಂ ಯೌವನಂ ವ್ಯರ್ಥಂ ಸುರೂಪಂ ಚ ಸುಶೋಭನಮ್ ।
ಗತಂ ನ ಪುನರಾಯಾತಿ ವಿನಾ ಜನ್ಮಾಂತರಂ ಖಲು ॥ ೨೨ ॥
ಭೋಗಾಂಸ್ತ್ವಂ ಭುಂಕ್ಷ್ವ ಸತತಂ ಜಾರೈಸ್ಸಹ ಸುಮಧ್ಯಮೇ ।
ಗತೇ ಜಲೇ ಪುನರ್ವ್ಯರ್ಥಂ ಕೇದಾರಕರಣಂ ಯತಃ ॥ ೨೩ ॥

ಮದ್ಗೇಹೇ ಬಹವೋ ಯಾಂತಿ ಸುರೂಪಾಸ್ತರುಣಾ ನರಾಃ ।
ಅಹಂ ಭುನಜ್ಮಿ ತೈಸ್ಸಾಕಂ ಜಾರಸಂಭೋಗಜಂ ಸುಖಮ್ ॥ ೨೪ ॥
ಮಯಾನುಭೂತಂ ತತ್ಸೌಖ್ಯಂ ತವ ಚಾಸ್ತ್ವಿತಿ ಮೇ ಮತಿಃ ।
ಆರ್ತೇ ದಾನಂ ಪ್ರಶಂಸಂತಿ ಸರ್ವಶಾಸ್ತ್ರೇಷು ಪಂಡಿತಾಃ ॥ ೨೫ ॥
ಆಜ್ಞಾಪಯಸಿ ಚೇನ್ಮಹ್ಯಮಧುನೈವ ತ್ವದಂತಿಕೇ ।
ತಾನಾನಯಾಮಿ ತರುಣಾನ್ಸುರೂಪಾನ್ಭೋಗಕೋವಿದಾನ್ ॥ ೨೬ ॥
ಸಕೃತ್ತ್ವಯಾನುಭೂತಂ ಚೇತ್ತತ್ಸುಖಂ ಕಾಮತಪ್ತಯಾ ।
ನ ತ್ಯಕ್ಷ್ಯಸಿ ಕದಾಪ್ಯೇನಾನ್ ಸ್ವಯಮಾಕಾರಯಿಷ್ಯಸಿ ॥ ೨೭ ॥
ಏವಂ ಪ್ರಲೋಭಿತಾ ವಾಕ್ಯೈರ್ಲಲಿತಾ ಕಾಮಭರ್ಜಿತಾ ।
ಅಂಗೀಚಕಾರ ತದ್ವಾಕ್ಯಂ ತಥಾಚರದಶಂಕಿತಾ ॥ ೨೮ ॥
ತೇಽಪಿ ತದ್ವಚಸಾ ನಿತ್ಯಮಾಗತ್ಯೈತದ್ಗೃಹಂ ವಿಟಾಃ ।
ಲಲಿತಾಂ ಚ್ಯಾವಯಾಮಾಸುಃ ಸ್ವೀಯಧರ್ಮಾದಧರ್ಮಿಣಃ ॥ ೨೯ ॥
ಪಾಪಕರ್ಮ ತತೋ ನಿತ್ಯಂ ಚರತುಸ್ತೇ ಉಭೇ ಸ್ತ್ರಿಯೌ ।
ಧನಂ ಜಗೃಹತುಸ್ತೇಭ್ಯಃ ಸ್ವಭೋಗಾರ್ಥಂ ವಿಶೇಷತಃ ॥ ೩೦ ॥
ಕುಲಜಾತಿವಯೋರೂಪಪ್ರೇಮಕ್ರೀಡಾಪರಾಙ್ಮುಖೇ ।
ದ್ರವ್ಯಮಾತ್ರರತೇ ನಿತ್ಯಂ ಚಕ್ರತುರ್ವ್ಯಭಿಚಾರಕಮ್ ॥ ೩೧ ॥
ಏಕಸ್ಮಿನ್ದಿವಸೇ ಕೋಽಪಿ ನಾಗತಾ ಧನಿನಸ್ತದಾ ।
ಪ್ರತೀಕ್ಷಾಂ ಚಕ್ರತುರ್ದ್ವಾರೇ ತೇ ಉಭೇ ಪ್ರಹರಾವಧಿ ॥ ೩೨ ॥
ತತಸ್ತೇನ ಯಥಾಕಶ್ಚಿದ್ಗಚ್ಛನ್ವಿಪ್ರೋ ವಿಲೋಕಿತಃ ।
ತಮಾಹೂಯ ಗೃಹಂ ನೀತ್ವಾ ಬುಭುಜಾತೇಽಮುನಾ ಸುಖಮ್ ॥ ೩೩ ॥
ನಿದ್ರಿತಾಸ್ತೇ ತತಸ್ಸರ್ವೇಽನಂಗಯುದ್ಧಶ್ರಮಾಕುಲಾಃ ।
ರಾತ್ರ್ಯಂತೇ ಕಾಲಸರ್ಪೇಣ ಸಂದಷ್ಟೇ ತೇ ಉಭೇ ಸ್ತ್ರಿಯೌ ॥ ೩೪ ॥
ಪಾಪರಾಶೀ ಮೃತೇ ದೃಷ್ಟ್ವಾ ಯಮದೂತಾಸ್ಸಮಾಗತಾಃ ।
ಬಧ್ವಾ ಪಾಶೈರುಭೇ ನಿನ್ಯುರಂಜಸಾ ಶಮನಾಲಯಮ್ ॥ ೩೫ ॥
ತತೋ ದೃಷ್ಟ್ವಾ ತಯೋಃ ಕರ್ಮ ನರಕಾರ್ಹಂ ವಿಚಿಂತ್ಯ ಚ ।
ಯಮಾಜ್ಞಾಂ ಪ್ರಾಪ್ಯ ತೇ ದೂತಾ ನಿನ್ಯುರ್ನಿರಯಸನ್ನಿಧಿಮ್ ॥ ೩೬ ॥
ಪ್ರಾತರುತ್ಥಾಯ ವಿಪ್ರೋಽಸಾವುಭೇ ದೃಷ್ಟ್ವಾ ಮೃತೇ ಸ್ತ್ರಿಯೌ ।
ಶುಶೋಚ ಭಿನ್ನಹೃದಯೋ ಭೃಶಂ ತದ್ವಿರಹಾಕುಲಃ ॥ ೩೭ ॥
ಪಶ್ಯತಾಹೋ ಮಹಾಶ್ಚರ್ಯಂ ಸಾಂಪ್ರತಂ ದುರ್ಭಗಸ್ಯ ಮೇ ।
ಸಂಗಮಾತ್ರಾನ್ಮೃತೇ ಚೋಭೇ ಧಿಙ್ಮಾಂ ಪಾಪನಿಧಿಂ ಬತ ॥ ೩೮ ॥

ವಿಲಪ್ಯೈವಂ ಸುದುಃಖೇನ ತ್ಯಕ್ತ್ವಾ ಸ್ವೀಯಂ ಗೃಹಾದಿಕಮ್ ।
ತಯೋರ್ವಸ್ತ್ರೇ ಸಮಾದಾಯ ನಿಃಸೃತಸ್ತತ್ಪುರಾದ್ದ್ವಿಜಃ ॥ ೩೯ ॥
ದುಃಖೇನ ಮಹತಾ ವ್ಯಾಪ್ತಃ ಕ್ಷುತ್ತೃಡಾಕುಲಿತೇಂದ್ರಿಯಃ ।
ವಿಲಪನ್ವಿಭ್ರಮನ್ವಿಪ್ರಸ್ತೀರ್ಥರಾಜಂ ಸಮಾಗತಃ ॥ ೪೦ ॥
ಪಾಪಮೋಚನದಿಗ್ಭಾಗೇ ಸಮಾಸ್ತೀರ್ಯ ಸ ವಾಸಸೀ ।
ಶ್ರಾಂತಸ್ತತ್ರ ಪ್ರಸುಷ್ವಾಪ ವಿಲಪ್ಯ ಚ ಪುನಃ ಪುನಃ ॥ ೪೧ ॥
ಪಾಪಮೋಚನಭೂಭಾಗಸ್ಪರ್ಶಮಾತ್ರೇಣ ವಾಸಸೋಃ ।
ನಷ್ಟಂ ಪಾಪಂ ತಯೋಃ ಸರ್ವಂ ವ್ಯಭಿಚಾರಾದಿಸಂಭವಮ್ ॥ ೪೨ ॥
ತಾವತ್ತು ವೈಷ್ಣವಾನೀತಂ ವಿಮಾನಮಧಿರುಹ್ಯತೇ ।
ಬ್ರಾಹ್ಮಣೋಪಕೃತಿಂ ಜ್ಞಾತ್ವಾ ಸಮಾಯಾತೇ ತದಂತಿಕೇ ॥ ೪೩ ॥
ಗತ್ವಾ ತಮೂಚತುರ್ವಿಪ್ರಂ ಕಿಂ ಸುಪ್ತೋಽಸಿ ಮಹಾಮತೇ ।
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ತ್ವಯಾವಾಂ ತಾರಿತೇ ಬಲಾತ್ ॥ ೪೪ ॥
ಇತಿ ಶ್ರುತ್ವಾ ಸ ಚೋತ್ಥಾಯ ಪೂರ್ವದೃಷ್ಟೇ ವಿಲೋಕ್ಯ ತೇ ।
ಸ್ನಾತ್ವಾ ತದಾಜ್ಞಯಾ ವಿಪ್ರೋ ದೇವಯಾನಂ ಸಮಾರುಹತ್ ॥ ೪೫ ॥
ದಿವ್ಯರೂಪಧರಾಃ ಸರ್ವೇ ದಿವ್ಯವಸ್ತ್ರವಿಭೂಷಣಾಃ ।
ಜಗ್ಮುರ್ವೈಕುಂಠಭವನಂ ದಿವ್ಯಸ್ರಗನುಲೇಪನಾಃ ॥ ೪೬ ॥
ಪಾಪಮೋಚನಮಾಹಾತ್ಮ್ಯಮೇವಂ ವಃ ಕಥಿತಂ ಮಯಾ ।
ವಸ್ತ್ರಸಂಪರ್ಕಮಾತ್ರೇಣ ಯತ್ರ ಪಾಪಾ ದಿವಂ ಗತಾಃ ॥ ೪೭ ॥
ಅತೋಽತ್ರ ಯೇ ಕರಿಷ್ಯಂತಿ ಸ್ನಾನದಾನಜಪಾದಿಕಮ್ ।
ತೇ ಪಾಪನಿಗಡಂ ಭಿತ್ವಾ ಯಾಸ್ಯಂತಿ ಹರಿಸನ್ನಿಧಿಮ್ ॥ ೪೮ ॥
ಪಾಪಮೋಚನತೀರ್ಥಸ್ಯ ಮಹಿಮಾ ವರ್ಣಿತೋ ಮಯಾ ।
ಅಥಾನ್ಯತೀರ್ಥಮಾಹಾತ್ಮ್ಯಂ ವಕ್ಷ್ಯಾಮಿ ಸನಕಾದಯಃ ॥ ೪೯ ॥

॥ ಇತಿ ಏಕೋನಾಶೀತಿತಮೋಽಧ್ಯಾಯಃ ॥

**ದೂತಿಯು ಹೇಳಿದಳು—**

ಎಲೈ ಸುಂದರಿಯೇ! ನಿನ್ನ ಸೌಂದರ್ಯವನ್ನೂ ಮತ್ತು ತಾರುಣ್ಯವನ್ನೂ ನೋಡಿ ಈ ತಾರುಣ್ಯವು ಭೋಗದಿಂದ ಹೀನವಾಗಿರುವುದು ತಿಳಿದು ನನಗೆ ಬಹಳ ದುಃಖವಾಗುತ್ತಿದೆ. ॥೨೧॥ ನಿನ್ನ ಈ ಯೌವನವು ವ್ಯರ್ಥವಾಗಿ ಹೋಗುತ್ತಿದೆ. ನಿನಗೆ ಒಪ್ಪುತ್ತಿರುವ ಈ ಸುರೂಪವೂ ವ್ಯರ್ಥವಾಗುತ್ತಿದೆ. ಕಳೆದುಹೋದ ರೂಪ ಮತ್ತು ಯೌವನಗಳು ಮುಂದಿನ ಜನ್ಮಗಳಲ್ಲದೆ ಪುನಃ ಹಿಂದಿರುಗಿ ಬರುವುದಿಲ್ಲ. ಇದು ನಿಶ್ಚಯ. ॥೨೨॥ ತೆಳು ನಡುವಿನ ಸುಂದರಿಯೇ, ನೀನು ಒಂದೇ ಸಮನಾಗಿ ಜಾರಪುರುಷರೊಡನೆ ಭೋಗಗಳನ್ನು ಅನುಭವಿಸು. ನೀರು ಮುಗಿದು ಹೋದ ಮೇಲೆ ವ್ಯವಸಾಯ ಮಾಡಲು ಪ್ರಯತ್ನಿಸುವುದು ವ್ಯರ್ಥ ಯತ್ನವೇ ಸರಿ. ॥ ೨೩ ॥ ನನ್ನ ಮನೆಗೆ

ಸುಂದರರೂ ಯೌವನವುಳ್ಳವರೂ ಆದ ಬಹಳ ಪುರುಷರುಗಳು ಬರುತ್ತಾರೆ. ಅವರುಗಳೊಡನೆ ಸಂಭೋಗ ಹೊಂದಿ ಸುಖವನ್ನು ಅನುಭವಿಸುತ್ತೇನೆ. ॥ ೨೪ ॥ ನಾನು ಅನುಭವಿಸುತ್ತಿರುವ ಈ ಸುಖವು ನಿನಗೂ ಆಗಲೆಂದು ನನ್ನ ಅಭಿಪ್ರಾಯವು. ದುಃಖದಲ್ಲಿರುವವರಿಗೆ ಸಹಾಯ ಮಾಡಬೇಕಾದುದನ್ನು ಎಲ್ಲ ಶಾಸ್ತ್ರಗಳಲ್ಲಿ ಹೇಳಿರುವುದಾಗಿ ಪಂಡಿತರುಗಳು ಶ್ಲಾಘನೆ ಮಾಡುತ್ತಾರೆ. ॥ ೨೫ ॥ ನೀನು ನನಗೆ ಆಜ್ಞೆ ಮಾಡಿದರೆ ನಾನು ಈಗಲೇ ನಿನ್ನ ಸಮೀಪಕ್ಕೆ ಸುಂದರರಾಗಿರತಕ್ಕ ಭೋಗಕಲೆಯಲ್ಲಿ ಕುಶಲಿಗಳಾದ ತರುಣರನ್ನು ಕಳುಹಿಸುತ್ತೇನೆ. ॥ ೨೬ ॥ ಕಾಮದಿಂದ ಸಂತಪ್ತಳಾಗಿರುವ ನಿನ್ನಿಂದ ಒಂದು ಸಲ ಅವರುಗಳೊಡನೆ ಸಂಭೋಗವಾದ ನಂತರ ಆ ಸುಖವನ್ನು ತಿಳಿದ ಮೇಲೆ ನೀನು ಇವರುಗಳನ್ನು ಎಂದೆಂದೂ ಬಿಡುವುದಿಲ್ಲ ಮತ್ತು ನೀನೇ ಅವರುಗಳಿಗೆ ಹೇಳಿಕಳುಹಿಸುತ್ತೀಯೆ.'' ॥ ೨೭ ॥ ಕಾಮದ ಆಸೆಯಲ್ಲಿ ಬೆಂದು ಹೋಗಿದ್ದ ಆ ಲಲಿತೆಯು ಈ ರೀತಿಯಾದ ಮಾತುಗಳಿಂದ ಆಸೆಗೆ ಒಳಪಟ್ಟವಳಾಗಿ ಅವಳ ಮಾತುಗಳನ್ನು ಒಪ್ಪಿಕೊಂಡಳು; ನಂತರ ಈ ದುರಾಚಾರದ ಶಂಕೆಯೂ ಅವಳಿಗೆ ಬರಲಿಲ್ಲ. ॥ ೨೮ ॥ ಆ ಅಧರ್ಮಿಗಳಾದ ವಿಟಪುರುಷರು ದೂತಿಯ ಮಾತಿನಿಂದ ನಿತ್ಯವೂ ಲಲಿತೆಯ ಮನೆಗೆ ಬಂದು ಅವಳನ್ನು ಅವಳ ಸತೀಧರ್ಮದಿಂದ ಕೆಳಕ್ಕೆ ಕೆಡವಿದರು. ॥ ೨೯ ॥ ಇದಾದ ಮೇಲೆ ಈ ಇಬ್ಬರು ಹೆಂಗಸರೂ ಇದೇ ಪಾಪಕಾರ್ಯವನ್ನು ನಿತ್ಯವೂ ನಡೆಸುತ್ತಿದ್ದು ತಮ್ಮ ಭೋಗಗಳಿಗಾಗಿ ವಿಶೇಷವಾಗಿ ಆ ವಿಟಪುರುಷರ ದೆಶೆಯಿಂದ ಹಣವನ್ನು ಸಂಪಾದಿಸುತ್ತಿದ್ದರು. ॥ ೩೦ ॥ ತಮ್ಮ ವಯಸ್ಸು, ರೂಪ, ಪ್ರೇಮಕ್ರೀಡಾ ಇವುಗಳಲ್ಲಿ ಹಿಂಜರಿಯುತ್ತಿದ್ದ ಮತ್ತು ದ್ರವ್ಯಸಂಪಾದನೆಯಲ್ಲಿ ಮಾತ್ರ ಆಸಕ್ತಿಯಿದ್ದ ಅವರಲ್ಲಿ ವ್ಯಭಿಚಾರವು ಮನೆಮಾಡಿಕೊಂಡಿತು. ॥ ೩೧ ॥ ಒಂದು ದಿವಸ ಯಾವ ಧನಿಕರೂ ಅವರಲ್ಲಿಗೆ ಬರಲಿಲ್ಲ. ಅವರಿಬ್ಬರೂ ವಿಟಪುರುಷರಿಗಾಗಿ ಬಾಗಿಲಲ್ಲಿ ನಿರೀಕ್ಷಣೆ ಮಾಡಿ ಒಂದು ಪ್ರಹರದ ಕಾಲ ಕಾದು ನೋಡಿದರು. ॥ ೩೨ ॥ ಅನಂತರ ಆ ದಾರಿಯಲ್ಲಿ ಹೋಗುತ್ತಿದ್ದ ಯಾವನೋ ಒಬ್ಬ ಧನಿಕನಲ್ಲದ ಬ್ರಾಹ್ಮಣನನ್ನು ಅವರಿಬ್ಬರೂ ನೋಡಿದರು. ಅವನನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಅವರಿಬ್ಬರೂ ಅವನಿಂದ ಸುಖದಿಂದ ಸಂಭೋಗ ಮಾಡಿಸಿಕೊಂಡರು. ॥ ೩೩ ॥ ಕಾಮಕೇಳಿಯಿಂದ ಆಯಾಸಗೊಂಡಿದ್ದ ಅವರೆಲ್ಲರೂ ಗಾಢನಿದ್ರೆಯಲ್ಲಿದ್ದರು. ಆಗ ರಾತ್ರಿಯು ಮುಗಿಯುತ್ತಿದ್ದಂತೆ ಆ ಇಬ್ಬರು ಸ್ತ್ರೀಯರನ್ನು ಕಾಳಸರ್ಪವು ಕಡಿಯಿತು. ॥ ೩೪ ॥ ಪಾಪದ ಹೊರೆ ಹೊತ್ತಿರುವ ಆ ಇಬ್ಬರು ಸ್ತ್ರೀಯರು ಮೃತರಾಗಿರುವದನ್ನು ಅರಿತು ಯಮದೂತರು ಅಲ್ಲಿಗೆ ಧಾವಿಸಿ ಬಂದರು; ಅವರನ್ನು ಹಗ್ಗದಿಂದ ಕಟ್ಟಿ ಯಮನ ಸಮೀಪಕ್ಕೆ ಕರೆದೊಯ್ದರು. ॥ ೩೫ ॥ ಯಮರಾಜನು ಅವರಿಬ್ಬರ ಕುಕರ್ಮಗಳನ್ನು ತಿಳಿದು ಸ್ವಲ್ಪಕಾಲ ಮಾಡಬೇಕಾದ್ದನ್ನು ಯೋಚಿಸಿದನು. ಅನಂತರ ದೂತರು ಯಮನ ಆಜ್ಞೆಯನ್ನು ಪಡೆದು ಅವರಿಬ್ಬರನ್ನು ನರಕದ ಸಮೀಪಕ್ಕೆ ಒಯ್ದರು. ॥ ೩೬ ॥ ಅವರಿಬ್ಬರೊಡನೆ ಮಲಗಿದ್ದ ಬ್ರಾಹ್ಮಣನು ಬೆಳಿಗ್ಗೆ ಎದ್ದು ಆ ಇಬ್ಬರು ಸ್ತ್ರೀಯರೂ ಮೃತರಾಗಿರುವುದನ್ನು ತಿಳಿದು ಎದೆ ಒಡೆದವನಾಗಿ ಅವರ ವಿರಹಕ್ಕಾಗಿ ಬಹಳ ದುಃಖಪಟ್ಟನು. ॥ ೩೭ ॥ ''ದುರದೃಷ್ಟನಾದ ನನಗೆ ಇದೇನು ಆಶ್ಚರ್ಯದ ಸಂಗತಿ ಈಗ ಬಂದಿದೆ? ನನ್ನ ಜೊತೆ ಸಂಭೋಗ ಮಾಡಿದ್ದರಿಂದಲೇ ಈ ಇಬ್ಬರು ಸ್ತ್ರೀಯರೂ ಮೃತರಾಗಿದ್ದಾರೆ. ಪಾಪದ ನಿಧಿಯಾಗಿರುವ ನನಗೆ ಧಿಕ್ಕಾರವು.'' ॥ ೩೮ ॥ ಹೀಗೆಂದು ಬಹಳ ಹೊತ್ತು ಅಳುತ್ತಾ ಇದ್ದು ಅನಂತರ ತನ್ನ ಮನೆಯನ್ನೂ ತ್ಯಜಿಸಿ ಆ ಸ್ತ್ರೀಯರ ವಸ್ತ್ರಗಳನ್ನು ತೆಗೆದುಕೊಂಡು ಊರಿಂದ ಹೊರಗೆ

ಬಂದನು. ॥ ೩೯ ॥ ಬಹಳ ದುಃಖದಿಂದ ಕೂಡಿದವನಾಗಿ ಹಸಿವು ಮತ್ತು ನೀರಡಿಕೆಯಿಂದ ದುರ್ಬಲಗಳಾದ ಇಂದ್ರಿಯಗಳೊಡನೆ ಅಲೆಯುತ್ತಾ ಅಳುತ್ತಾ ತೀರ್ಥರಾಜನಾದ ಪ್ರಯಾಗ ಕ್ಷೇತ್ರಕ್ಕೆ ಬಂದನು. ॥ ೪೦ ॥ ಪಾಪಮೋಚನ ತೀರ್ಥದ ಪಕ್ಕದಲ್ಲಿ ಆ ಸೀರೆಗಳನ್ನು ಹರಡಿ ಬಿಕ್ಕಿ ಬಿಕ್ಕಿ ಅಳುತ್ತಾ ಶ್ರಾಂತನಾಗಿ ಅಲ್ಲಿ ಮಲಗಿ ನಿದ್ರೆಹೋದನು. ॥ ೪೧ ॥ ಆ ಸೀರೆಗಳಿಗೆ ಪಾಪ ವಿಮೋಚನ ತೀರ್ಥಕ್ಷೇತ್ರದ ಸ್ಪರ್ಶಮಾತ್ರದಿಂದ ಆ ಸ್ತ್ರೀಯರಿಬ್ಬರ ವ್ಯಾಪಾರದ ಪಾಪವೆಲ್ಲವೂ ನಾಶವಾಗಿ ಹೋಯಿತು. ॥ ೪೨ ॥ ಆ ಸ್ತ್ರೀಯರಿಬ್ಬರೂ ವಿಷ್ಣುಲೋಕದಿಂದ ಬಂದ ವಿಮಾನದಲ್ಲಿ ಕುಳಿತುಕೊಂಡು ಈ ಬ್ರಾಹ್ಮಣನಿಂದ ಆದ ಉಪಕಾರವನ್ನು ತಿಳಿದು ಅವನ ಸಮೀಪಕ್ಕೆ ಬಂದರು. ॥ ೪೩ ॥ ಅಲ್ಲಿಗೆ ಹೋಗುತ್ತಲೇ ಆ ಬ್ರಾಹ್ಮಣನನ್ನು ಕುರಿತು "ಮಹಾಬುದ್ಧಿವಂತನಾದ ಬ್ರಾಹ್ಮಣನೇ! ಏತಕ್ಕಾಗಿ ನಿದ್ರಿಸುತ್ತಿದ್ದಿ? ಏಳು, ಏಳು. ನಿನಗೆ ಮಂಗಳವಾಗಲಿ. ಬಲವಂತವಾಗಿ ನಾವಿಬ್ಬರೂ ನಿನ್ನಿಂದ ಉದ್ಧೃತರಾಗಿದ್ದೇವೆ." ॥ ೪೪ ॥ ಈ ರೀತಿಯಾಗಿ ಹೇಳಿದ ಮಾತುಗಳನ್ನು ಕೇಳಿದ ಆ ಬ್ರಾಹ್ಮಣನು ಎದ್ದು ಕುಳಿತು ಮೊದಲೇ ನೋಡಿದ್ದ ಆ ಸ್ತ್ರೀಯರಿಬ್ಬರನ್ನೂ ನೋಡಿದನು. ಅವರ ಆಜ್ಞಾದಿಂದ ಸ್ನಾನ ಮಾಡಿ ಆ ಬ್ರಾಹ್ಮಣನು ಆ ವೈಷ್ಣವವಿಮಾನವನ್ನು ಹತ್ತಿದನು. ॥ ೪೫ ॥ ಆಗ ಅವರೆಲ್ಲರೂ ದಿವ್ಯವಾದ ವಸ್ತ್ರಗಳನ್ನು ಧರಿಸಿದ್ದರು, ದಿವ್ಯಾಭರಣಗಳಿಂದ ಅಲಂಕೃತರಾಗಿದ್ದರು ಮತ್ತು ದಿವ್ಯವಾದ ಮಾಲಾಗಳನ್ನು ಧರಿಸಿ ದಿವ್ಯವಾದ ಗಂಧವನ್ನು ಹಚ್ಚಿಕೊಂಡು ವೈಕುಂಠನಗರಕ್ಕೆ ಹೋದರು. ॥ ೪೬ ॥ ಪಾಪಮೋಚನತೀರ್ಥದ ಮಾಹಾತ್ಮ್ಯೆಯನ್ನು ನಾನು ನಿಮಗಾಗಿ ಹೇಳಿದ್ದೇನೆ. ಈ ತೀರ್ಥಕ್ಷೇತ್ರದ ಸಂಸರ್ಗದಿಂದಲೇ ಪಾಪಿಗಳು ಪಾಪದಿಂದ ಪರಿಹೃತರಾಗಿ ವೈಕುಂಠನಗರಿಗೆ ಹೋದರು. ॥ ೪೭ ॥ ಆದ್ದರಿಂದ ಇಲ್ಲಿ ಯಾರು ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡುತ್ತಾರೋ ಅವರು ಬಲವಾಗಿ ಸುತ್ತಿಕೊಂಡಿರುವ ಪಾಪರೂಪಬೇಡಿಯನ್ನು ಕತ್ತರಿಸಿ ವೈಕುಂಠಕ್ಕೆ ಪ್ರಯಾಣ ಮಾಡುವರು. ॥ ೪೮ ॥ ಹೇ ಸನಕಾದಿಗಳೇ! ಪಾಪ ವಿಮೋಚನ ತೀರ್ಥದ ಮಹಿಮೆಯು ನನ್ನಿಂದ ವರ್ಣಿಸಲ್ಪಟ್ಟಿತು. ಬೇರೆ ತೀರ್ಥಗಳ ಮಾಹಾತ್ಮ್ಯೆಯನ್ನು ಹೇಳುವೆನು. ॥ ೪೯ ॥

॥ ಎಪ್ಪತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಶೀತಿತಮೋಽಧ್ಯಾಯಃ ॥ ೮೦ ॥

**ಸೂತ ಉವಾಚ—**

ರಾಮತೀರ್ಥಮಥೋ ವಕ್ಷ್ಯೇ ರಾಮೇಣಾಧಿಷ್ಠಿತಂ ಯತಃ ।
ನಿಂದಾಪೈಶೂನ್ಯಘಾತಾದಿಪಾಪಕ್ಷಯಕರಂ ಪರಮ್ ॥ ೧ ॥
ದೇವನಿಂದಾಪರಾ ಯೇ ಚ ಗುರುನಿಂದಾಪರಾಶ್ಚ ಯೇ ।
ವೇದನಿಂದಾಪರಾ ಯೇ ಚ ತೀರ್ಥನಿಂದಾಪರಾಯಣಾಃ ॥ ೨ ॥
ಪಿತೃನಿಂದಾಪರಾ ಯೇ ಚ ಪರನಿಂದಾಪರಾಶ್ಚ ಯೇ ।
ತೇಽತ್ರ ಮಜ್ಜನಮಾತ್ರೇಣ ಪೂತಾತ್ಮಾನೋ ಭವಂತಿ ವೈ ॥ ೩ ॥
ಸರ್ವಕಾಮಪ್ರದಂ ತೀರ್ಥಂ ಜಾಮದಗ್ನ್ಯಪ್ರಕಾಶಿತಮ್ ।
ಸರ್ವರೋಗಹರಂ ಪಥ್ಯಂ ಪರಾಕ್ರಮವಿವರ್ಧನಮ್ ॥ ೪ ॥

## ॥ ಎಂಬತ್ತನೆಯ ಅಧ್ಯಾಯವು ॥

**ಸೂತರು ಹೇಳಿದರು—**

ಇನ್ನು ರಾಮತೀರ್ಥವನ್ನು ಕುರಿತು ಹೇಳುವೆನು. ಇಲ್ಲಿ ಶ್ರೀಪರಶುರಾಮನು ವಾಸಮಾಡಿದನು. ಈ ಸ್ಥಳದಲ್ಲಿ ನಿಂದೆ ಮಾಡುವುದು ಮತ್ತು ಸುಳ್ಳು ಹುಟ್ಟಿಸಿ ಚಾಡಿ ಹೇಳುವುದು, ಕೊಲೆ ಮಾಡುವುದು ಮುಂತಾದವುಗಳಿಂದ ಹುಟ್ಟುವ ಪಾಪವು ಪರಿಹಾರವಾಗುವುವು. ॥ ೧ ॥ ದೇವನಿಂದೆ, ಗುರುನಿಂದೆ, ವೇದನಿಂದೆ, ತೀರ್ಥನಿಂದೆ, ಪಿತೃನಿಂದೆ ಮತ್ತು ಮತ್ತೊಬ್ಬರ ನಿಂದೆ ಹೀಗೆ ನಿಂದಾಗಳಲ್ಲಿಯೇ ಆಸಕ್ತರಾದವರು ಈ ರಾಮತೀರ್ಥದಲ್ಲಿ ಕೇವಲ ಸ್ನಾನ ಮಾಡುವುದರಿಂದಲೇ ತಮ್ಮ ಪಾಪಗಳಿಂದ ವಿಮೋಚಿತರಾಗಿ ಪರಿಶುದ್ಧರಾಗುತ್ತಾರೆ. ॥ ೨-೩ ॥ ಈ ತೀರ್ಥವು ಎಲ್ಲ ಕಾರ್ಯಗಳ ಉಪಯೋಗಕ್ಕೆ ಬರುವುದು. ಇದನ್ನು ಪರಶುರಾಮದೇವರು ಪ್ರಕಾಶಕ್ಕೆ ತಂದರು. ಇದು ಪಥ್ಯರೂಪದಲ್ಲಿದ್ದು ಎಲ್ಲ ರೋಗಗಳನ್ನು ವಾಸಿಮಾಡುವುದಲ್ಲದೆ ಎಲ್ಲರ ಪರಾಕ್ರಮವನ್ನೂ ಬೆಳೆಸುವುದು. ॥ ೪ ॥

**ಸನಕಾದಯ ಊಚುಃ—**

ಕಥಂ ವೈ ಜಾಮದಗ್ನ್ಯೇನ ತದ್ಧಿತಾರ್ಥಂ ಪ್ರಕಾಶಿತಮ್ ।
ತದ್ವದಸ್ವ ಯಥಾಪೂರ್ವಂ ಯೇನ ನಶ್ಯೇತ ಸಂಶಯಃ ॥ ೫ ॥

**ಸನಕಾದಿಗಳು ಹೇಳಿದರು—**

"ಜಮದಗ್ನಿ ಋಷಿಗಳ ಮಕ್ಕಳಾದ ಶ್ರೀಪರಶುರಾಮದೇವರು ಈ ತೀರ್ಥವನ್ನು ತಮ್ಮ ಹಿತಕ್ಕೋಸ್ಕರ ಹೇಗೆ ಬೆಳಕಿಗೆ ತಂದರು? ಹಿಂದೆ ಹೇಗೆ ನಡೆಯಿತೋ ಹಾಗೆ ಈ ವಿಷಯವನ್ನು ವರ್ಣಿಸಿರಿ. ಇದರಿಂದ ನಮ್ಮ ಸಂಶಯವು ನಾಶವಾಗುವುದು." ॥ ೫ ॥

**ಶೇಷ ಉವಾಚ—**

ಪೂರ್ವಂ ಪರಶುರಾಮೇಣ ಸತ್ವರಂ ಪಿತುರಾಜ್ಞಯಾ ।
ರೇಣುಕಾ ನಿಹತಾ ಮಾತಾ ಜಮದಗ್ನೇಃ ಪ್ರಿಯಂ ಕೃತಮ್ ॥ ೬ ॥
ತತೋ ಮಾತೃವಧೇನಾಸೌ ಪ್ರಸನ್ನೋ ಮುನಿರಾಹ ತಮ್ ।
ರಾಮ ತೇಽಹಂ ಪ್ರಸನ್ನೋಽಸ್ಮಿ ಮದ್ವಾಕ್ಯಪರಿಪಾಲನಾತ್ ॥ ೭ ॥
ವರಂ ವರಯ ಭದ್ರಂ ತೇ ಮತ್ತಃ ಶೀಘ್ರಂ ಮನೋಗತಮ್ ।
ಶ್ರುತ್ವಾ ತಾಂ ಪೈತೃಕೀಂ ವಾಣೀಂ ಯಯಾಚೇ ಮಾತೃಜೀವನಮ್ ॥ ೮ ॥
ಮುನಿಸ್ತಥೇತಿ ಪ್ರಾಹ ರೇಣುಕಾಪ್ಯುತ್ಥಿತಾ ಸತೀ ।
ದೃಷ್ಟ್ವಾಪಿ ತಾಂ ಸ ಸಂತೇಪೇ ಸ್ವಮಾತುಃ ಪ್ರಾಕ್ಕೃತಾದ್ವಧಾತ್ ॥ ೯ ॥
ಪಾಪಂ ಮನಸಿ ಸಂಧಾಯ ಪಿತರಂ ಪ್ರಾಹ ಭಾರ್ಗವಃ ।
ಮಯಾ ಚರಿತಪಾಪಸ್ಯ ನಿಷ್ಕೃತಿಂ ಬ್ರೂಹಿ ಮೇ ಪಿತಃ ॥ ೧೦ ॥
ಸ ಹೋವಾಚ ಪುನಾ ರಾಮಂ ಪಾಪಂ ಮಾತೃವಧೋದ್ಭವಮ್ ।
ಸಮಸ್ತತೀರ್ಥಯಾತ್ರಾಭಿಃ ಪರಾಣುದ ಮಮಾಜ್ಞಯಾ ॥ ೧೧ ॥
ತತ್ಪಿತುರ್ವಚನಂ ಶ್ರುತ್ವಾ ಗೃಹೀತ್ವಾ ಪರಶುಂ ಸ್ವಕಮ್ ।
ಚಚಾಲ ತೀರ್ಥಯಾತ್ರಾಯೈ ಸಹಿತೋ ಮುನಿಭಿಃ ಪುರಾತ್ ॥ ೧೨ ॥
ಪೃಥಿವ್ಯಾಮಟಮಾನೋಽಸೌ ತೀರ್ಥಯಾತ್ರಾಪ್ರಸಂಗತಃ ।
ಪ್ರಯಾಗಮಾಜಗಾಮಾಂತೇ ಬಹುಭಿಃ ಪರಿವಾರಿತಃ ॥ ೧೩ ॥
ಪಾಪಮೋಚನತೀರ್ಥಸ್ಯ ಪಶ್ಚಿಮೇ ಭೂಮಿಮಂಡಲೇ ।
ಉವಾಸ ಸರ್ವಸಹಿತಃ ಪ್ರಸನ್ನಾತ್ಮಾ ಸ ಭಾರ್ಗವಃ ॥ ೧೪ ॥
ತತಃ ಸ್ನಾತ್ವಾ ತ್ರಿವೇಣ್ಯಾಂ ತೇ ಕೃತ್ವಾ ಮುಂಡನಮುತ್ತಮಮ್ ।
ಬ್ರಾಹ್ಮಣಾನ್ಭೋಜಯಾಮಾಸುಃ ಕೃತ್ವಾ ಶ್ರಾದ್ಧಾನಿ ವಿಸ್ತರಾತ್ ॥ ೧೫ ॥
ರಾಮೋಽಪಿ ಸಕಲಂ ಕೃತ್ಯಂ ಕೃತ್ವಾ ಶ್ರಾದ್ಧಾಂತಮುತ್ತಮಮ್ ।
ಗೋದಾನಾನಿ ಚಕಾರಾಥ ಬ್ರಾಹ್ಮಣೇಭ್ಯೋ ಯಥಾವಿಧಿ ॥ ೧೬ ॥
ಪೂರ್ವೋಕ್ತೇನ ವಿಧಾನೇನ ಮುಖ್ಯಕಲ್ಪಾನುಸಾರತಃ ।
ದದೌ ಪರಶುರಾಮೋಽತ್ರ ಕೋಟಿಧೇನೂರಲಂಕೃತಾಃ ॥ ೧೭ ॥
ಬಹೂನ್ಯನ್ಯಾನಿ ದಾನಾನಿ ಯಥಾವಿಧಿ ಯಥಾಧನಮ್ ।
ದ್ವಿಜೇಭ್ಯಃ ಪ್ರದದೌ ಭಕ್ತ್ಯಾ ಮಾಧವಪ್ರೀತಯೇ ಪರಃ ॥ ೧೮ ॥
ಚಕ್ರುರನ್ಯೇಽಪಿ ದಾನಾನಿ ಸ್ವಸ್ವವಿತ್ತಾನುಸಾರತಃ ।
ಬ್ರಾಹ್ಮಣಾಂಸ್ತೋಷಯಾಮಾಸುಸ್ತೀರ್ಥರಾಜನಿವಾಸಿನಃ ॥ ೧೯ ॥
ಜ್ಞಾತ್ವಾ ತೀರ್ಥಸ್ಯ ಮಾಹಾತ್ಮ್ಯಂ ರಾಮಃ ಸಂತುಷ್ಟಮಾನಸಃ ।
ನಿವಾಸಾಯ ಮತಿಂ ಚಕ್ರೇ ಕೃತ್ವಾಶ್ರಮಮನುತ್ತಮಮ್ ॥ ೨೦ ॥

**ತದಾರಭ್ಯ ತು ತತ್ತೀರ್ಥಂ ರಾಮತೀರ್ಥಮಿತಿ ಸ್ಮೃತಮ್ ।**
**ತ್ರಿಂಶದ್ಧನುಃಪ್ರಮಾಣಂ ತದ್ಧರ್ಮಬಾಹುಲ್ಯಕಾರಕಮ್ ॥ ೨೧ ॥**
**ತಸ್ಮಿಂಸ್ತೀರ್ಥೇ ತು ಯಃ ಕಶ್ಚಿದ್ಗೋದಾನಂ ಕುರುತೇ ನರಃ ।**
**ಕೋಟಿಗೋದಾನಜಂ ಪುಣ್ಯಂ ಸಂಪ್ರಾಪ್ನೋತಿ ನ ಸಂಶಯಃ ॥ ೨೨ ॥**
**ಕದಾಚಿದಾಗತಾ ವಾಣೀ ವೀಣಾಪುಸ್ತಕಧಾರಿಣೀ ।**
**ರಾಮಾಶ್ರಮಪದಂ ದ್ರಷ್ಟುಂ ತೀರ್ಥಪ್ರಾಂತವಿಹಾರಿಣೀ ॥ ೨೩ ॥**
**ಜಾಮದಗ್ನ್ಯಸ್ತು ತಾಂ ದೃಷ್ಟ್ವಾ ಸಹಸೋತ್ಥಾಯ ಸಾದರಮ್ ।**
**ಪ್ರಾಂಜಲಿಃ ಪುರತಃ ಸ್ಥಿತ್ವಾ ನತ್ವಾ ಸುತ್ವಾಬ್ರವೀದ್ವಚಃ ॥ ೨೪ ॥**

**ಶೇಷದೇವರು ಹೇಳಿದರು—**

ಪೂರ್ವದಲ್ಲಿ ತಂದೆಯಾದ ಜಮದಗ್ನಿಯ ಆಜ್ಞೆಯಂತೆ ಅವರ ಮಗನಾದ ಪರಶುರಾಮನು ತನ್ನ ತಾಯಿಯಾದ ರೇಣುಕೆಯನ್ನು ಸಂಹಾರಮಾಡಿ ತನ್ನ ತಂದೆಗೆ ಹಿತವನ್ನು ಮಾಡಿದನು. ॥ ೬ ॥ ತಾಯಿಯ ವಧೆಯಿಂದ ಸಂತುಷ್ಟನಾದ ಆ ಮುನಿಯು ರಾಮನನ್ನು ಕುರಿತು ಹೇಳಿದನು— "ರಾಮನೇ! ನನ್ನ ಮಾತನ್ನು ಪರಿಪಾಲಿಸಿದ್ದರಿಂದ ನಿನ್ನ ವಿಷಯದಲ್ಲಿ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ನನ್ನಿಂದ ನಿನ್ನ ಮನಸ್ಸಿನಲ್ಲಿರುವ ವರವನ್ನು ಬೇಡಿಕೊ." ಆ ಪಿತೃವಾಕ್ಯವನ್ನು ಕೇಳಿದ ಪರಶುರಾಮನು ತಾಯಿಯನ್ನು ಪುನಃ ಬದುಕಿಸಿಕೊಡಲು ಬೇಡಿದನು. ॥ ೭-೮ ॥ ಆ ಋಷಿಯು 'ಹಾಗೆಯೇ ಆಗಲೆಂದು' ಒಪ್ಪಿದನು. ತಾಯಿಯು ಎದ್ದು ಕೂತಳು. ಅವಳ ಕಳಂಕವೆಲ್ಲವೂ ಹೋಗಿ "ಸತಿ"ಯಾಗಿ ವಿರಾಜಮಾನಳಾದಳು. ಹೆಂಡತಿ ರೇಣುಕೆಯು ಪುನಃ ಜೀವಿತಳಾದುದರಿಂದ ಜಮದಗ್ನಿಗಳಿಗೆ ಸಂತೋಷವಾಯಿತು. ತನ್ನಿಂದ ತಾಯಿಯ ವಧೆಯಾದ್ದರಿಂದ ಉಂಟಾದ ಮಾತೃವಧಾಪಾಪದ ಪ್ರಾಯಶ್ಚಿತ್ತಕ್ಕಾಗಿ ತಂದೆಯನ್ನು ಪ್ರಾರ್ಥಿಸಿದನು. ತಾನೆಸಗಿದ ಪಾಪವನ್ನು ಮನಸ್ಸಿನಲ್ಲಿಟ್ಟುಕೊಂಡು ರಾಮನು ಕೇಳಿದನು, "ನನ್ನಿಂದ ನಡೆದಿರುವ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಿ." ॥ ೯-೧೦ ॥ ಆಗ ಜಮದಗ್ನಿ ಋಷಿಯು ರಾಮನನ್ನು ಕುರಿತು ಹೇಳಿದನು. "ತಾಯಿಯ ಹತ್ಯೆಯಿಂದ ಹುಟ್ಟಿರುವ ಪಾಪವನ್ನು ಸಮಸ್ತತೀರ್ಥಗಳ ಯಾತ್ರೆಯ ಮೂಲಕ ಹೋಗಲಾಡಿಸಿಕೋ." ॥ ೧೧ ॥ ತನ್ನ ತಂದೆಯ ಮಾತನ್ನು ಕೇಳಿ ರಾಮನು ತನ್ನ ಕೊಡಲಿಯ ಸಹಿತ ಮುನಿಗಳೊಡಗೂಡಿ ತೀರ್ಥಯಾತ್ರೆಗೆ ಹೊರಟನು. ॥ ೧೨ ॥ ತೀರ್ಥಯಾತ್ರೆಯ ಪ್ರಸಂಗದಿಂದ ಭೂಮಿಯಲ್ಲೆಲ್ಲಾ ಸಂಚಾರ ಮಾಡುತ್ತಾ ಕೊನೆಗೆ ಪರಿವಾರಸಮೇತನಾಗಿ ಪ್ರಯಾಗಕ್ಷೇತ್ರಕ್ಕೆ ಬಂದನು. ॥ ೧೩ ॥ ಈ ಕ್ಷೇತ್ರದ ಪಶ್ಚಿಮದಲ್ಲಿರುವ ಪಾಪಮೋಚನತೀರ್ಥದ ಪಶ್ಚಿಮದಿಗ್ಭಾಗದಲ್ಲಿರುವ ಭೂಭಾಗದಲ್ಲಿ ಎಲ್ಲರೊಡಗೂಡಿ ಸಂತೋಷದಿಂದ ವಾಸಮಾಡಿದನು. ॥ ೧೪ ॥ ಅನಂತರ ಬ್ರಾಹ್ಮಣರು ತ್ರಿವೇಣಿಯಲ್ಲಿ ಸ್ನಾನ ಮಾಡಿ ವಿಧಿವತ್ತಾಗಿ ಉತ್ತಮವಾಗಿ ಕ್ಷೌರವನ್ನು ಮಾಡಿಸಿಕೊಂಡು ವಿಸ್ತಾರವಾಗಿ ಶ್ರಾದ್ಧವನ್ನು ಮಾಡಿ ಬ್ರಾಹ್ಮಣರುಗಳಿಗೆ ಭೋಜನವನ್ನು ಮಾಡಿಸಿದರು. ॥ ೧೫ ॥ ಭಾರ್ಗವರಾಮನೂ ಶ್ರಾದ್ಧದ ಸಮಾಪ್ತಿಯವರೆಗೆ ಎಲ್ಲ ಕೃತ್ಯಗಳನ್ನೂ ವಿಧಿವತ್ತಾಗಿ ಮಾಡಿ ಯಥಾವಿಧಿಯಾಗಿ ಬ್ರಾಹ್ಮಣರುಗಳಿಗೆ ಗೋದಾನಗಳನ್ನು ಕೊಟ್ಟನು. (ಜೀವತ್ಪಿತೃವಾಗಿದ್ದರೂ ಪರಶುರಾಮನು ಲೋಕಶಿಕ್ಷಣಾರ್ಥವಾಗಿ ಚಿರಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಾದಿಗಳನ್ನು

ಮಾಡಿದ್ದಾರೆ.) ॥ ೧೬ ॥ ಮೊದಲೇ ಹೇಳಿದ ವಿಧಿವಿಧಾನಗಳಿಂದಲೂ ಮುಖ್ಯವಾದ ಕಲ್ಪಾನುಸಾರವಾಗಿಯೂ ಇಲ್ಲಿ ಪರಶುರಾಮನು ಚೆನ್ನಾಗಿ ಅಲಂಕೃತವಾದ ಕೋಟಿಧೇನುಗಳನ್ನು ದಾನ ಮಾಡಿದನು. ॥ ೧೭ ॥ ಸರ್ವೋತ್ತಮನಾದ ಈ ರಾಮನು ಬೇರೆ ಬೇರೆ ಬಹಳ ದಾನಗಳನ್ನೂ ವಿಧಿವತ್ತಾಗಿ ಯಥಾಯೋಗ್ಯದಕ್ಷಿಣೆಗಳೊಂದಿಗೆ ಬ್ರಾಹ್ಮಣರುಗಳಿಗೆ ಮಾಧವನ ಪ್ರೀತಿಗಾಗಿ ದಾನ ಮಾಡಿದನು. ॥ ೧೮ ॥ ಉಳಿದ ಮುನಿಗಳೂ ಈ ಪ್ರಯಾಗಕ್ಷೇತ್ರವಾಸಿಗಳಾದ ಬ್ರಾಹ್ಮಣರುಗಳಿಗೆ ಯಥಾವಿಧಿ ಧನದೊಂದಿಗೆ ಬೇರೆ ಬೇರೆ ದಾನಗಳನ್ನೂ ತಮ್ಮ ಹಣದ ಸೌಕರ್ಯಾನುಸಾರ ದಾನ ಮಾಡಿ ಅವರನ್ನು ಸಂತೋಷಗೊಳಿಸಿದರು. ॥ ೧೯ ॥ ಈ ತೀರ್ಥದ ಮಾಹಾತ್ಮ್ಯೆಯನ್ನು ತಿಳಿದ ರಾಮನು ಸಂತುಷ್ಟಿಗೊಂಡ ಮನಸ್ಸುಳ್ಳವನಾಗಿ ಅತ್ಯಂತ ಉತ್ತಮವಾಗಿರುವ ಆಶ್ರಮವನ್ನು ಮಾಡಿಸಿ ಈ ಕ್ಷೇತ್ರದಲ್ಲಿಯೇ ವಾಸಿಸಲು ಮನಸ್ಸು ಮಾಡಿದನು. ॥ ೨೦ ॥ ಅಂದಿನಿಂದ ಆರಂಭಿಸಿ ಆ ಜಾಗವು ರಾಮತೀರ್ಥವೆಂದು ಸ್ಮರಣೆ ಮಾಡಲ್ಪಡುತ್ತಿದೆ. ಮೂವತ್ತು ಧನುಸ್ಸುಗಳ ವಿಸ್ತಾರವುಳ್ಳ ಈ ಜಾಗವು ಧರ್ಮದ ಬಾಹುಳ್ಯಕ್ಕೆ ಮೂಲಕಾರಣವಾಗಿದೆ. ॥ ೨೧ ॥ ಯಾರೇ ಆಗಲೀ ಆ ತೀರ್ಥದಲ್ಲಿ ಗೋದಾನವನ್ನು ಮಾಡಿದರೆ ಅವನು ಕೋಟಿಧೇನುಗಳ ದಾನಪುಣ್ಯವನ್ನು ಪಡೆಯುವನು; ಇದರಲ್ಲಿ ಸಂದೇಹವೇ ಇಲ್ಲ. ॥ ೨೨ ॥ ಒಂದು ಸಲ, ವೀಣೆ ಮತ್ತು ಪುಸ್ತಕಗಳನ್ನು ಕೈಯಲ್ಲಿ ಇಟ್ಟುಕೊಂಡು ಈ ಪ್ರಯಾಗಕ್ಷೇತ್ರಪ್ರಾಂತ್ಯದಲ್ಲಿ ಅಲೆದಾಡುತ್ತಾ ಹಾಗೆಯೇ ರಾಮಾಶ್ರಮವನ್ನು ನೋಡಲು ಸರಸ್ವತಿಯು ಬಂದಳು. ॥ ೨೩ ॥ ಜಮದಗ್ನಿಯ ಮಗನಾದ ರಾಮನಾದರೋ ಆಕೆಯನ್ನು ನೋಡಿ ಸಂತೋಷಗೊಂಡು ಥಟ್ಟನೆ ಎದ್ದು ಆದರದಿಂದ ಕೈಮುಗಿದು ಎದುರಿಗೆ ನಿಂತು ನಮಸ್ಕರಿಸಿ ಈ ಮಾತುಗಳನ್ನು ಹೇಳಿದನು. ॥ ೨೪ ॥

ರಾಮ ಉವಾಚ—

> ಸರಸ್ವತಿ ನಮಸ್ತೇಽಸ್ತು ತ್ವಂ ಕುತೋಽತ್ರ ಸಮಾಗತಾ ।
> ತದ್ಬ್ರೂಹಿ ಸಕಲಂ ವೃತ್ತಂ ಪ್ರಸಾದಂ ಕುರು ತೇ ನಮಃ ॥ ೨೫ ॥
> ಜಾಮದಗ್ನ್ಯವಚಃ ಶ್ರುತ್ವಾ ತೀರ್ಥರಾಜೇಽತಿಲಾಲಸಾ ।
> ವೀಣಾವಾದ್ಯರಸಾಭಿಜ್ಞಾ ಪ್ರೋವಾಚೈನಂ ಸರಸ್ವತೀ ॥ ೨೬ ॥

ಪರಶುರಾಮನು ಹೇಳಿದನು—

''ಎಲೈ, ಸರಸ್ವತೀದೇವಿಯೇ! ನಿನಗೆ ನಮಸ್ಕಾರಗಳು. ನೀನು ಇಲ್ಲಿ ಎಲ್ಲಿಗೆ ಬಂದಿದ್ದೀಯೆ? ನಿನ್ನ ವೃತ್ತಾಂತವೆಲ್ಲವನ್ನೂ ಹೇಳಿ ಅನುಗ್ರಹಿಸು. ನಿನಗೆ ವಂದನೆಗಳು''. ಪರಶುರಾಮದೇವರ ಮಾತನ್ನು ಕೇಳಿ ತೀರ್ಥರಾಜನ ಬಗ್ಗೆ ಅತಿಲಾಲಸೆಯುಳ್ಳ, ವೀಣಾವಾದನದ ರಸವನ್ನು ಚೆನ್ನಾಗಿ ಅರಿತಿರುವ ಸರಸ್ವತಿಯು ರಾಮನನ್ನು ಕುರಿತು ಹೇಳಿದಳು. ॥ ೨೫-೨೬ ॥

ಸರಸ್ವತ್ಯುವಾಚ—

> ರಾಮ ರಾಮ ಮಹಾಬಾಹೋ ಕ್ಷೇತ್ರಮೇತದನುತ್ತಮಮ್ ।
> ಬ್ರಹ್ಮಾಂಡಾದಧಿಕಂ ದೃಷ್ಟ್ವಾ ವಸಾಮ್ಯತ್ರ ಯಥಾಸುಖಮ್ ॥ ೨೭ ॥
> ಗಂಗಾಯಮುನಯೋಃ ಸಂಧೌ ಗುಪ್ತರೂಪಾ ವಸಾಮ್ಯಹಮ್ ।
> ಪಂಚಕ್ರೋಶಾತ್ಮಕೇ ಕ್ಷೇತ್ರೇ ಯಥೇಚ್ಛಂ ವಿಚರಾಮಿ ಚ ॥ ೨೮ ॥

ಅದ್ಯ ತ್ವಾಮಾಗತಂ ಜ್ಞಾತ್ವಾ ದ್ರಷ್ಟುಂ ತ್ವಾಮಹಮಾಗತಾ ।
ತ್ವಮಪ್ಯತ್ರೈವ ತಿಷ್ಠಸ್ವ ತೀರ್ಥೇ ಸರ್ವೋತ್ತಮೋತ್ತಮೇ ॥ ೨೯ ॥
ಇತಿ ಸಾರಸ್ವತೀಂ ವಾಚಂ ಶ್ರುತ್ವಾ ರಾಮೋಽಪಿ ಹರ್ಷಿತಃ ।
ಉಪವೇಶ್ಯಾಸನೇ ವಾಣೀಂ ವಚನಂ ಪುನರಬ್ರವೀತ್ ॥ ೩೦ ॥

ಸರಸ್ವತಿಯು ಹೇಳಿದಳು—

''ಮನೋಹರನಾದ ರಾಮನೇ! ದೀರ್ಘವಾದ ಬಾಹುಗಳುಳ್ಳವನೇ! ಈ ಕ್ಷೇತ್ರವು ಇಡೀ ಬ್ರಹ್ಮಾಂಡದಲ್ಲಿ ಅತ್ಯಧಿಕಶ್ರೇಷ್ಠತ್ವವುಳ್ಳದ್ದು. ಇದನ್ನರಿತು ನಾನು ಇಲ್ಲಿ ಸುಖವಾಗಿ ವಾಸಿಸಲು ನಿಶ್ಚಯಿಸಿದ್ದೇನೆ. ॥ ೨೭ ॥ ಗಂಗಾಯಮುನೆಯರ ಸಂಗಮದಲ್ಲಿ ಗುಪ್ತವಾಗಿ ವಾಸಿಸಿ ಪಂಚಕ್ರೋಶರೂಪ ಕ್ಷೇತ್ರದಲ್ಲಿ ಇಚ್ಛಾನುಸಾರ ಸಂಚರಿಸುತ್ತೇನೆ. ॥ ೨೮ ॥ ಇಲ್ಲಿ ಬಂದಿರುವುದಾಗಿ ತಿಳಿದು ನಿನ್ನನ್ನು ನೋಡಲು ಬಂದೆನು. ಸರ್ವೋತ್ತಮಕ್ಷೇತ್ರಗಳಿಗಿಂತ ಉತ್ತಮವಾದ ಈ ಕ್ಷೇತ್ರದಲ್ಲಿ ನೀನೂ ವಾಸಮಾಡು.'' ॥ ೨೯ ॥ ಈ ರೀತಿಯಾಗಿ ಸರಸ್ವತಿದೇವಿಯ ಮಾತನ್ನು ಕೇಳಿ ಸಂತೋಷಗೊಂಡ ಪರಶುರಾಮದೇವರು, ದೇವಿಯನ್ನು ಆಸನದಲ್ಲಿ ಕೂಡಿಸಿ ಮತ್ತೆ ಮಾತನಾಡಿದರು ॥ ೩೦ ॥

ರಾಮ ಉವಾಚ—

ತ್ವಮಸ್ಯ ತೀರ್ಥರಾಜಸ್ಯ ಸ್ತವನಂ ಕುರು ಶಾರದೇ ।
ತಚ್ಛ್ರುತ್ವಾತ್ರೈವ ತಿಷ್ಠಾಮಿ ನ ಯಾಮೀತಃ ಕ್ವಚ ಸ್ಥಲೇ ॥ ೩೧ ॥

ಪರಶುರಾಮನು ಹೇಳಿದನು—

''ಎಲೈ ಶಾರದೆಯೇ! ನೀನು ಈ ತೀರ್ಥರಾಜನ ಸ್ತೋತ್ರವನ್ನು ಮಾಡು, ಅದನ್ನು ಆಲಿಸುತ್ತಾ ಇಲ್ಲಿಯೆ ಇರುವೆನು. ಇನ್ನು ಇಲ್ಲಿಂದ ಎಲ್ಲಿಗೂ ಹೋಗೆನು.'' ॥ ೩೧ ॥

ಸರಸ್ವತ್ಯುವಾಚ—

ಪರರೂಪಾ ಚ ಪಶ್ಯಂತೀ ಮಧ್ಯಮಾ ವೈಖರೀತಿ ಚ ।
ಚತೂರೂಪಾಹಮೇವಾಸ್ಮಿ ಪಂಚಮೀ ನಾಸ್ತಿ ಕಾಚನ ॥ ೩೨ ॥
ಸಾಹಮಸ್ಯ ಸ್ತವೇ ಪೂರ್ವಂ ಪ್ರವೃತ್ತಾ ವಿಧಿಶಾಸನಾತ್ ।
ಯಾವಚ್ಛಕ್ಯಂ ಸ್ತುತಿಂ ಕೃತ್ವಾ ಗುಣಾನಂತ್ಯಾತ್ತರಾವೃತಾ ॥ ೩೩ ॥
ತದಾಽಯಾಸೇನ ರಕ್ತಾಽಸಂಸ್ತವಾಸಾಮರ್ಥ್ಯಜಾತಯಾ ।
ಹ್ರಿಯಾ ಗುಪ್ತಾ ವಸಾಮ್ಯಂತರ್ಗಂಗಾಯಮುನಸಂಗಮೇ ॥ ೩೪ ॥
ಅತೋಽಸ್ಯ ಸ್ತವನಂ ಕರ್ತುಂ ಕ ಶಕ್ತೋಽಸ್ತಿ ಜಗತ್ತ್ರಯೇ ।
ತ್ಯಕ್ತ್ವಾ ವೈಕುಂಠಭವನಂ ಹರಿರ್ಯತ್ರಾಧಿತಿಷ್ಠತಿ ॥ ೩೫ ॥
ಅಸ್ಮಿನ್ನೇವಾಶ್ರಮೇ ರಾಮ ತ್ವಯಾ ಸ್ಥೇಯಂ ಯಥಾಸುಖಮ್ ।
ರಾಮತೀರ್ಥಮಿತಿ ಖ್ಯಾತಿಂ ಯಾಸ್ಯತೀದಂ ತವ ಸ್ಥಲಮ್ ॥ ೩೬ ॥

ರಾಜ್ಯಕಾಮಾಶ್ಚ ಯೇ ಕೇಚಿತ್ ಕರಿಷ್ಯಂತಿ ದೃಢಾಶಯಾಃ ।
ಪಂಚಾಗ್ನಿದ್ವಾದಶಾಗ್ನೀನಾಂ ಸಾಧನಂ ಚ ಯಥಾವಿಧಿ ॥ ೩೭ ॥
ಧೂಮ್ರಪಾನಂ ತಥಾಕಾಶಜಲವಾಸಂ ವಿಕರ್ತನಮ್ ।
ಕೃತ್ವಾ ಚಾಗ್ನಿವಿಧಾನಂ ಹಿ ಲಪ್ಸ್ಯಂತೇ ತೇ ಮನೋಗತಮ್ ॥ ೩೮ ॥
ಅನ್ಯಾನಿ ಕ್ರೂರಕರ್ಮಾಣಿ ಕುರ್ವತಾಮತ್ರ ವೈ ನೃಣಾಮ್ ।
ಅಖಂಡಭೂಪತಿತ್ವಾದಿ ಫಲಂ ತೇಷಾಂ ತು ನಿಶ್ಚಿತಮ್ ॥ ೩೯ ॥

॥ ಇತಿ ಅಶೀತಿತಮೋಽಧ್ಯಾಯಃ ॥

**ಸರಸ್ವತಿಯು ಹೇಳಿದಳು—**

''ಪರರೂಪಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂದು ನಾಲ್ಕು ರೂಪಗಳುಳ್ಳವಳು ನಾನೇ ಆಗಿದ್ದೇನೆ. ಇನ್ನು ಐದನೇ ರೂಪವನ್ನು ಹೊಂದಿ ''ಪಂಚಮೀ'' ಎಂದು ಹೆಸರುಳ್ಳವಳು ಬೇರೆ ಯಾರೂ ಇಲ್ಲ. ॥ ೩೨ ॥ ನಾನು ಮೊದಲೇ ಶ್ರೀಬ್ರಹ್ಮದೇವರ ಆಜ್ಞಾನುಸಾರ ಈ ಪ್ರಯಾಗಮಾಧವನ ಸ್ತೋತ್ರದಲ್ಲಿ ಪ್ರವೃತ್ತಳಾಗಿದ್ದೆ. ನನ್ನ ಶಕ್ತ್ಯನುಸಾರ ಸ್ತುತಿಯನ್ನು ಮಾಡಿದೆನು. ಮಾಧವನ ಗುಣಗಳು ಅನಂತವಾದುದರಿಂದ ನಾನು ಸುಮ್ಮನಾಗಿ ನಿವೃತ್ತಳಾಗಬೇಕಾಯಿತು. ॥ ೩೩ ॥ ಆಗ ಈ ಮಾಧವನ ಸ್ತೋತ್ರಗಳನ್ನು ರಚಿಸಲು ನನ್ನ ಅಸಾಮರ್ಥ್ಯದಿಂದ ಲಜ್ಜಿತಳಾದ ನಾನು ಕೆಂಪೇರಿ ಗಂಗಾಯಮುನೆಯರ ಸಂಗಮದಲ್ಲಿ ಅಡಗಿ ಗುಪ್ತವಾಗಿ ಹರಿಯುತ್ತಿದ್ದೇನೆ. ॥ ೩೪ ॥ ಶ್ರೀಹರಿಯು ವೈಕುಂಠವನ್ನು ಬಿಟ್ಟು ಯಾವ ಕ್ಷೇತ್ರದಲ್ಲಿ ವಾಸ ಮಾಡಿಕೊಂಡಿದ್ದಾನೋ ಅಂತಹ ಈ ಈ ಕ್ಷೇತ್ರದ ಸ್ತೋತ್ರವನ್ನು ರಚನೆ ಮಾಡಲು ಮೂರು ಲೋಕಗಳಲ್ಲಿ ಯಾರು ತಾನೇ ಸಮರ್ಥರು? ॥ ೩೫ ॥ ಎಲೈ ರಾಮನೇ! ಇದೇ ಆಶ್ರಮದಲ್ಲಿಯೇ ನೀನೂ ಸುಖವಾಗಿ ಇದ್ದುಬಿಡು. ಈ ಆಶ್ರಮವೂ ''ರಾಮತೀರ್ಥ'' ಎಂಬ ಹೆಸರನ್ನು ಪಡೆಯಲಿ. ॥ ೩೬ ॥ ರಾಜ್ಯಾಪೇಕ್ಷೆಯುಳ್ಳವರು ದೃಢವಾದ ಆಶಾಗಳುಳ್ಳವರಾಗಿ ಪಂಚಾಗ್ನಿಸಾಧನೆ, ಹನ್ನೆರಡು ಅಗ್ನಿಗಳ ಸಾಧನೆ, ಧೂಮವನ್ನು ಪಾನ ಮಾಡುವುದು, ಆಕಾಶ ಮತ್ತು ನೀರಿನಲ್ಲಿ ವಾಸ ಮತ್ತು ಸೂರ್ಯನ ಬಿಸಿಲಿನಲ್ಲಿಯೇ ವಾಸ ಮಾಡುವುದು ಮುಂತಾದವುಗಳನ್ನೂ ಇನ್ನೂ ಅನೇಕ ಅಗ್ನಿಸಂಬಂಧವಾದ ಸಾಧನಗಳನ್ನೂ ಇಲ್ಲಿ ವಿಧಿಪೂರ್ವಕವಾಗಿ ಮಾಡುತ್ತಾ ತಮ್ಮ ಮನೋರಥಗಳನ್ನೆಲ್ಲಾ ಹೊಂದುತ್ತಾರೆ. ॥ ೩೭-೩೮ ॥ ಇನ್ನೂ ಬೇರೆ ಬೇರೆಯಾದ ಕ್ಲಿಷ್ಟ ಕರ್ಮಗಳನ್ನು ಇಲ್ಲಿ ಮಾಡುವ ಮನುಷ್ಯರುಗಳಿಗೆ ಇಡೀ ಭೂಮಂಡಲದ ಆಧಿಪತ್ಯ ಮುಂತಾದುವು ನಿಶ್ಚಯವಾಗಿ ದೊರಕುವುದು. ॥ ೩೯ ॥

॥ ಎಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಏಕಾಶೀತಿತಮೋಽಧ್ಯಾಯಃ ॥ ೮೧ ॥

ರಾಮ ಉವಾಚ—

ಪಂಚಾಗ್ನ್ಯಾದೇಸ್ತಥಾ ಧೂಮಪಾನಾದೇಶ್ಚ ವಿಧಿಂ ವದ ।
ತಮಹ್ನಾಯ ಕರಿಷ್ಯಾಮಿ ಕರಿಷ್ಯಂತ್ಯಪರೇ ಜನಾಃ ॥ ೧ ॥

## ॥ ಎಂಬತ್ತೊಂದನೆಯ ಅಧ್ಯಾಯವು ॥

ಪರಶುರಾಮನು ಹೇಳಿದನು—

''ಎಲೈ ಸರಸ್ವತೀದೇವಿಯೇ! ಪಂಚಾಗ್ನಿಯ ಮತ್ತು ಧೂಮಪಾನ ಉಪಾಸನೆಗಳ ವಿಧಿಗಳನ್ನು ಹೇಳು. ನಾನು ಅವುಗಳನ್ನು ಶೀಘ್ರವಾಗಿಆಚರಿಸುತ್ತೇನೆ ಮತ್ತು ಇತರರೂ ಆಚರಿಸುವರು.'' ॥ ೧ ॥

ಸರಸ್ವತ್ಯುವಾಚ—

ಪಂಚಾಗ್ನ್ಯಾದೇಸ್ಸಾಧನಸ್ಯ ವಿಧಿಂ ವಕ್ಷ್ಯೇ ಪ್ರಯತ್ನತಃ ।
ತಥೈವ ಜಲವಾಸಾದೇಃ ಶೃಣು ರಾಮ ಯಥಾಶ್ರುತಮ್ ॥ ೨ ॥
ಆದೌ ಭೂಶೋಧನಂ ಕುರ್ಯಾಚ್ಚಿಕೀರ್ಷನ್ನಗ್ನಿಸಾಧನಮ್ ।
ಪ್ರಾಚೀಂ ಸಂಸಾಧ್ಯ ಯತ್ನೇನ ವೇದೀಂ ಕುರ್ಯಾನ್ಮನೋರಮಾಮ್ ॥ ೩ ॥
ಪಂಚದ್ವಾದಶಹಸ್ತೈಶ್ಚ ವಿಸ್ತೃತಾಂ ಚ ಕರೋಚ್ಛ್ರಿತಾಮ್ ।
ಕೂರ್ಮಪೃಷ್ಠೋನ್ನತಾಂ ಶ್ಲಕ್ಷ್ಣಾಂ ಗೋಮಯಾದ್ಯನುಲೇಪಿತಾಮ್ ॥ ೪ ॥
ತಸ್ಯಾಂ ದಿಕ್ಷು ಪ್ರಕುರ್ವೀತ ಸಮಕುಂಡಚತುಷ್ಟಯಮ್ ।
ಚತುರ್ವಿಂಶಾಂಗುಲಂ ಯೋನಿಮೇಖಲಾಕಂಠಭೂಷಿತಮ್ ॥ ೫ ॥
ಹಸ್ತಮಾತ್ರಾ ಪ್ರಕರ್ತವ್ಯಾ ಮಧ್ಯೇ ಸ್ವಾಸನವೇದಿಕಾ ।
ಪಂಚಾಗ್ನಿಸಾಧನೇ ಪ್ರೋಕ್ತಂ ವೇದೀಕುಂಡಾದಿಲಕ್ಷಣಮ್ ॥ ೬ ॥
ಯದಾ ತು ದ್ವಾದಶಾಗ್ನೀನಾಂ ಸಾಧನಂ ಕರ್ತುಮೀಹತೇ ।
ಕುಂಡಾನಾಂ ತು ಚತುಷ್ಕಂ ಪ್ರಾಕ್ಪಶ್ಚಾದಪಿ ತಥೈವ ತತ್ ॥ ೭ ॥
ಕುಂಡದ್ವಯಂ ತಥಾ ಯಾಮ್ಯಾಮೇಕಕುಂಡಂ ತಥೋತ್ತರೇ ।
ಮಧ್ಯೇ ತು ಪೂರ್ವವದ್ವೇದೀಂ ಸ್ವಾಸನಾರ್ಥಂ ಪ್ರಕಲ್ಪಯೇತ್ ॥ ೮ ॥
ತತಃ ಶುಭೇಽಹ್ನಿ ಕರ್ತಾ ಚ ಕೃತನಿತ್ಯಕ್ರಿಯಶ್ಶುಚಿಃ ।
ದೇಶಕಾಲಾವನುಸ್ಮೃತ್ಯ ಫಲಮುಲ್ಲಿಖ್ಯ ಮಾನಸಮ್ ॥ ೯ ॥
ಸಂಕಲ್ಪ್ಯ ಪೂಜಯೇತ್ಪಶ್ಚಾದ್ವಿಘ್ನೇಶಂ ಸ್ವಸ್ತಿ ವಾಚಯೇತ್ ।
ದ್ವಿಜೈಸ್ಸಹ ಸ್ವಗೃಹ್ಯೋಕ್ತವಿಧಿನಾಭ್ಯುದಯಾದಿಕಮ್ ॥ ೧೦ ॥
ದಿಕ್ಪಾಲಾನ್ಪೂಜಯೇತ್ಪಶ್ಚಾದಿಂದ್ರಾದೀನ್ದಶ ಚ ಕ್ರಮಾತ್ ।
ಕಲಶಾನ್ ಸ್ಥಾಪಯೇತ್ತತ್ರ ವಾರಿಪೂರ್ಣಾನಲಂಕೃತಾನ್ ॥ ೧೧ ॥

ಬಲಿದಾನಂ ಪ್ರಕರ್ತವ್ಯಂ ಮಾಷಾನ್ನೇನಾಷ್ಟದಿಕ್ಷ್ವಪಿ ।
ತತೋಽಗ್ನಿಸ್ಥಾಪನಂ ಕುರ್ಯಾತ್ಸ್ವಗೃಹ್ಯೋಕ್ತವಿಧಾನತಃ ॥ ೧೨ ॥
ಅರಣೀಸಂಭವಂ ವಹ್ನಿಂ ಸೂರ್ಯಕಾಂತಸಮುದ್ಭವಮ್ ।
ಅಥಾಗ್ನಿಂ ಶ್ರೋತ್ರಿಯಾಗಾರಾದಾನೀಯ ಸ್ಥಾಪಯೇತ್ಕ್ರಮಾತ್ ॥ ೧೩ ॥
ಆಗ್ನೇಯ್ಯಾಂ ತು ಸಹಸ್ರಾರ್ಚಿಂ ನೈರ್ಋತ್ಯಾಂ ಸ್ವಸ್ತಿನಾಮಕಮ್ ।
ಸಪ್ತಜಿಹ್ವತು ವಾಯವ್ಯಾಮೀಶೇ ವೈಶ್ವಾನರಂ ತಥಾ ॥ ೧೪ ॥
ಸ್ಥಾಪನಂ ದ್ವಾದಶಾಗ್ನೀನಾಮೀಶಾನೀತಃ ಕ್ರಮಾಚ್ಚರೇತ್ ।
ಸಹಸ್ರಾರ್ಚಿಶ್ಚತುಶ್ಶೃಂಗಸ್ಸಪ್ತಜಿಹ್ವೋ ದ್ವಿಶೀರ್ಷಕಃ ॥ ೧೫ ॥
ವೈಶ್ವಾನರೋ ಜಾತವೇದಾ ಧೂಮವ್ಯಾಪೀ ಹುತಾಶನಃ ।
ಹವ್ಯವಾಟ್ಕಖಿನಾಮಾ ಚ ದೇವಯೋಷಸ್ತಥಾಂತಿಮಃ ॥ ೧೬ ॥
ಏವಂ ವಹ್ನಿಂ ಪ್ರತಿಷ್ಠಾಪ್ಯ ಧ್ಯಾತ್ವಾ ಪರಿಸಮೂಹ್ಯ ಚ ।
ಪರಿಸ್ತೀರ್ಯಾಥ ಪರ್ಯುಕ್ಷ್ಯ ಜುಹುಯಾತ್ಸಘೃತಾಂಸ್ತಿಲಾನ್ ॥ ೧೭ ॥
ಸಹಸ್ರಂ ಜುಹುಯಾದಿಷ್ಟಮಂತ್ರೇಣ ಪ್ರಥಮೇ ದಿನೇ ।
ಪ್ರತ್ಯಹಂ ತು ದಶಾಂಶೇನ ಜಪಸ್ಯ ಹವನಂ ಚರೇತ್ ॥ ೧೮ ॥
ಏವಂ ಹುತ್ವಾ ಮಹತ್ಕಾಷ್ಠೈಃ ಪ್ರಜ್ವಾಲ್ಯಾಗ್ನಿಂ ಸಮಂತತಃ ।
ಭೂತಶುದ್ಧ್ಯಾದಿಕಂ ಕೃತ್ವಾ ಧ್ಯಾಯೇತ್ಸ್ವೇಷ್ಟದೇವತಾಮ್ ॥ ೧೯ ॥
ಮಧ್ಯೇ ಸ್ಥಿತ್ವಾ ಜಪನ್ಮಂತ್ರಂ ರವೌ ವಿನ್ಯಸ್ತಲೋಚನಃ ।
ಅನಾವೃತಾಂಗಃ ಕುರ್ವೀತ ಪುರಶ್ಚರಣಮುತ್ತಮಮ್ ॥ ೨೦ ॥
ಮುಹೂರ್ತತ್ರಿತಯಂ ನಿತ್ಯಂ ಕರ್ಮ ಕೃತ್ವಾ ತತಃ ಪರಮ್ ।
ಉಪವಿಶ್ಯಾಸನೇ ಮಧ್ಯೇ ವಹ್ನಿಜ್ವಾಲಾಪರೀವೃತಃ ॥ ೨೧ ॥
ಮುಹೂರ್ತತ್ರಿತಯಂ ಯಾವದ್ದಿನಶೇಷಮತಂದ್ರಿತಃ ।
ಪ್ರಸನ್ನಾಚಲಚಿತ್ತಸ್ಸನ್ನಿಷ್ಟಮಂತ್ರಂ ಸಮಭ್ಯಸೇತ್ ॥ ೨೨ ॥
ವಸಂತಗ್ರೀಷ್ಮಯೋ ಕುರ್ಯಾದೇತತ್ಕರ್ಮತ್ರಯಂ ಬುಧಃ ।
ಕರ್ಮದ್ವಯಮಿದಂ ಪ್ರೋಕ್ತಂ ತೃತೀಯಮವಧಾರಯ ॥ ೨೩ ॥
ವಕ್ಷ್ಯೇ ಪರಶುರಾಮಾಥ ಧೂಮ್ರಪಾನವಿಧಿಂ ಶುಭಮ್ ।
ಯಸ್ಯಾನುಷ್ಠಾನಮಾತ್ರೇಣ ಸ್ವೇಷ್ಟಸಿದ್ಧಿರ್ನ ಸಂಶಯಃ ॥ ೨೪ ॥
ಪೂರ್ವೋಕ್ತವಿಧಿನಾ ಕೃತ್ವಾ ವೇದೀಂ ಪಂಚಕರಾಂ ಶುಭಾಮ್ ।
ಹಸ್ತಮಾತ್ರಂ ತು ತನ್ಮಧ್ಯೇ ಕುಂಡಂ ಕುರ್ಯಾತ್ಸಲಕ್ಷಣಮ್ ॥ ೨೫ ॥
ದಕ್ಷಿಣೋತ್ತರಯೋರ್ವೇದ್ಯಾಃ ಪಂಚಹಸ್ತೌ ಸಕರ್ಣಕೌ ।
ಕ್ಷೀರವೃಕ್ಷಭವೌ ಸ್ತಂಭೌ ನಿಖನೇತ್ಪಂಚಮಾಂಶತಃ ॥ ೨೬ ॥

ತನ್ಮಧ್ಯೇ ವಲಿಕಾಂ ದತ್ವಾ ಸರಲಾಂ ಸುದೃಢಾಂ ನವಾಮ್ ।
ತಸ್ಯಾಃ ಕೋಟಿದ್ವಯೇ ಕಾರ್ಯೌ ತ್ರಿಶೂಲೌ ಷೋಡಶಾಂಗುಲೌ॥ ೨೭ ॥
ಮಂಡಪಸ್ತತ್ರ ಕರ್ತವ್ಯಃ ಪತಾಕಾ ಧ್ವಜಭೂಷಿತಃ ।
ಸರ್ವಲಕ್ಷಣಸಂಪನ್ನ ಇತಿ ಕೇಚನ ಮನ್ವತೇ ॥ ೨೮ ॥
ಸುಮುಹೂರ್ತೇ ತತಃ ಕರ್ತಾ ಕೃತನಿತ್ಯಕ್ರಿಯಶ್ಶುಚಿಃ ।
ಗಣೇಶಂ ಪೂಜಯಿತ್ವಾ ಚ ಪುಣ್ಯಾಹಂ ವಾಚಯೇದ್ದ್ವಿಜೈಃ ॥ ೨೯ ॥
ಸ್ವಶಾಖೋಕ್ತವಿಧಾನೇನ ಕುಂಡೇಽಗ್ನಿಂ ಸ್ಥಾಪ್ಯ ಪೂರ್ವವತ್ ।
ಕೃತ್ವಾ ಧ್ಯಾನಾದಿಕಂ ಸರ್ವಂ ತತೋ ಹವನಮಾಚರೇತ್ ॥ ೩೦ ॥
ತಿಲವ್ರೀಹಿಯವಾನಾಜ್ಯಾನ್ಸಾಂಗಾರೇಽಗ್ನೌ ಸಹಸ್ರಕಮ್ ।
ಗಾಯತ್ರ್ಯಾ ಜುಹುಯಾದ್ಯದ್ವಾ ಸ್ವೇಷ್ಟಮಂತ್ರೇಣ ಸಾಧಕಃ ॥ ೩೧ ॥
ತತೋಽಂಜಸಾಗ್ನಿಮಾಚ್ಛಾದ್ಯ ಶರಾವೇಣ ಸಮಂತತಃ ।
ತನ್ಮಧ್ಯೇ ವಿವರಂ ಕುರ್ಯಾಚ್ಚತುರಂಗುಲಮಾನಕಮ್ ॥ ೩೨ ॥
ತಸ್ಮಿನ್ನಿವೇಶ್ಯ ಸುಶ್ಲಕ್ಷ್ಣಾ ನಲಿಕಾ ದ್ವಾದಶಾಂಗುಲಾ ।
ಮೂಲೇ ಸ್ಥೂಲಾ ಚ ಸರಲಾ ಸಂಕೋಚಾಗ್ರಾ ಬಿಲಾನ್ವಿತಾ ॥ ೩೩ ॥
ತಸ್ಯೋಪರಿ ಸ್ವಯಂ ತಿಷ್ಠೇಲ್ಲಮ್ಬಮಾನೋಹ್ಯಧೋಮುಖಃ ।
ಸ್ಥೂಲಾಯಾ ಮಧ್ಯಮೇ ಭಾಗೇ ರಜ್ಜ್ವಾ ಬದ್ಧಪದಾಂಬುಜಃ ॥ ೩೪ ॥
ನಲಿಕಾಗ್ರಂ ಮುಖೇ ಕ್ಷಿಪ್ತ್ವಾ ಪಿಬೇದ್ಧೂಮಂ ಶನೈಶ್ಶನೈಃ ।
ಸ್ವೇಷ್ಟಮಂತ್ರಂ ಜಪಂಸ್ತಿಷ್ಠೇನ್ಮುಹೂರ್ತತ್ರಿತಯಾವಧಿ ॥ ೩೫ ॥
ಮುಹೂರ್ತತ್ರಿತಯಂ ಪ್ರಾತರ್ದಿನಾಂತೇ ತಾವದೇವ ಹಿ ।
ಕಾಲದ್ವಯೇಽಪಿ ಕುರ್ವೀತ ಧೂಮ್ರಪಾನಮತಂದ್ರಿತಃ ॥ ೩೬ ॥
ಪ್ರಾತರ್ಜಪದಶಾಂಶೇನ ಹುತ್ವಾ ಸಾಯಂ ಪಿಬೇದಮುಮ್ ।
ಸಾಯಂ ಜಪದಶಾಂಶೇನ ಪ್ರಾತರ್ಹುತ್ವಾ ಪಿಬೇದಮುಮ್ ॥ ೩೭ ॥
ಅನೇನ ವಿಧಿನಾ ಯಸ್ತು ತಪಶ್ಚರತಿ ದಾರುಣಮ್ ।
ಸರ್ವಾನ್ಕಾಮಾನವಾಪ್ನೋತಿ ಕಿಂಕರ್ಯಸ್ತಸ್ಯ ಸಿದ್ಧಯಃ ॥ ೩೮ ॥
ಪ್ರಯಾಗೇ ಯಸ್ತು ಕುರ್ವೀತ ವರ್ಷಸಾಧ್ಯಮಿದಂ ತಪಃ ।
ಇಹ ಲೋಕೇ ಪರತ್ರಾಪಿ ಸ ಲಭೇದ್ವಾಂಛಿತಂ ಫಲಮ್ ॥ ೩೯ ॥
ಆಕಾಶವಾಸಂ ಕುರ್ವೀತ ವರ್ಷಾಸು ಚ ಶರದ್ಯಪಿ ।
ಜಲವಾಸಂ ಪ್ರಕುರ್ವೀತ ಹೇಮಂತೇ ಶಿಶಿರೇಽಪಿ ಚ ॥ ೪೦ ॥
ಛಿತ್ವಾ ಸ್ವದೇಹಂ ಮಾಂಸಾನಿ ಶಕುನೇಭ್ಯೋ ದದಾತಿ ಯಃ ।
ಸಮಾಃ ಲಕ್ಷಂ ಸುಖಂ ಸ್ವರ್ಗೇ ಭುಕ್ತ್ವಾ ಭೂಮಿಪತಿರ್ಭವೇತ್ ॥ ೪೧ ॥

ಶುಷ್ಕಗೋಮಯಖಂಡಾನಾಂ ಚೂರ್ಣಪೂರ್ಣಾವಟೇ ಸ್ವಯಮ್ ।
ಕೃತನಿತ್ಯಕ್ರಿಯಃ ಸ್ಥಿತ್ವಾ ಕಂಠಂ ಚೂರ್ಣೇನ ಪೂರಯೇತ್ ॥ ೪೨ ॥
ಪುರತೋ ವಹ್ನಿಮುದ್ಬೋಧ್ಯ ಫಲಮುಲ್ಲಿಖ್ಯ ವಾಂಛಿತಮ್ ।
ಜಪನ್ಮಂತ್ರಂ ಹರಿಂ ಧ್ಯಾಯನ್ಭಸ್ಮೀಕುರ್ಯಾತ್ಸ್ವಕಾಂ ತನುಮ್ ॥ ೪೩ ॥
ಏವಂ ಯಃ ಕುರುತೇ ಕ್ರೂರಂ ಪ್ರಯಾಗೇ ಕರ್ಮ ಮಾನವಃ ।
ಯಂ ಯಂ ಕಾಮಯತೇ ಕಾಮಂ ತಂ ತಂ ಪ್ರಾಪ್ನೋತಿ ನಿಶ್ಚಿತಮ್ ॥ ೪೪ ॥
ಸ್ವಲೋಮಸಮಸಂಖ್ಯಾಬ್ದಂ ಭುಕ್ತ್ವಾ ಸ್ವರ್ಗಸುಖಂ ತ್ವಸೌ ।
ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಾಧಿಪೋ ಭವೇತ್ ॥ ೪೫ ॥
ಅಕಾಮೋ ಮುಕ್ತಿಕಾಮೋ ವಾ ಪ್ರಯಾಗೇಽನೇನ ಕರ್ಮಣಾ ।
ಮಾಧವಸ್ಯ ಪ್ರಸಾದೇನ ಮುಕ್ತಿಮಾಪ್ನೋತಿ ನಿಶ್ಚಿತಮ್ ॥ ೪೬ ॥
ಇತಿ ತೇ ಕಥಿತಂ ಸರ್ವಂ ಮಯಾ ಭಾರ್ಗವನಂದನ ।
ಪಾರ್ವತ್ಯೈ ಶಂಕರೇಣೋಕ್ತಂ ತತ್ಪ್ರೀತ್ಯಾ ಕರ್ಮಸಪ್ತಕಮ್ ॥ ೪೭ ॥

**ಸರಸ್ವತಿಯು ಹೇಳಿದಳು—**

"ಹೇ ರಾಮನೇ! ಪಂಚಾಗ್ನಿಸಾಧನೆಯ ವಿಧಿಯನ್ನು ಪ್ರಯತ್ನ ಮಾಡಿ ಹೇಳುವೆನು. ಹಾಗೆಯೇ ಧೂಮಪಾನ ಮತ್ತು ಜಲವಾಸದ ವಿಧಾನವನ್ನೂ ನಾನು ಕೇಳಿ ಉಪದಿಷ್ಟಳಾಗಿರುವಂತೆ ಹೇಳುವೆನು. ॥ ೨ ॥ ಪಂಚಾಗ್ನಿಸಾಧಕನು ಮೊದಲು ಭೂಮಿಯನ್ನು ಶುದ್ಧಿಮಾಡಬೇಕು. ಪೂರ್ವದಿಕ್ಕನ್ನು ನಿಶ್ಚಯಿಸಿ ಅಲ್ಲಿ ಸುಂದರವಾದ ವೇದಿಕೆಯನ್ನು ಮಾಡಬೇಕು. ॥ ೩ ॥ ಈ ವೇದಿಕೆಯು ಹನ್ನೆರಡು ಹಸ್ತ ಉದ್ದ ಮತ್ತು ಐದು ಹಸ್ತ ಅಗಲದ ವಿಸ್ತಾರವಾಗಿದ್ದು, ಎತ್ತರವು ಆಮೆಯ ಬೆನ್ನಿನಷ್ಟು ಇರಬೇಕು. ವೇದಿಕೆಯು ರಮ್ಯವಾಗಿದ್ದು, ಅದನ್ನು ಗೋಮಯದಿಂದ ಸಾರಿಸಿ ರಂಗವಲ್ಲಿ ಕೆಮ್ಮಣ್ಣಿನಿಂದ ಅಲಂಕರಿಸಬೇಕು. ॥ ೪ ॥ ಆ ವೇದಿಕೆಯ ನಾಲ್ಕು ದಿಕ್ಕುಗಳಲ್ಲಿಯೂ ಸಮವಾಗಿರತಕ್ಕ, ಇಪ್ಪತ್ತುನಾಲ್ಕು ಅಂಗುಲ ಆಳತೆಯ; ಯೋನಿ, ಮೇಖಲಾ ಮತ್ತು ಕುಂಡಕಂಠಗಳನ್ನು ಹೊಂದಿರುವ ನಾಲ್ಕು ಅಗ್ನಿಕುಂಡಗಳನ್ನೂ ಮಾಡಬೇಕು. ॥ ೫ ॥ ಮಧ್ಯದಲ್ಲಿ ಒಂದು ಮೊಳ ಆಳತೆಯುಳ್ಳ ತಾನು ಕೂಡುವ ವೇದಿಕೆಯನ್ನು ರಚಿಸಬೇಕು. ಈ ರೀತಿಯಾಗಿ ಪಂಚಾಗ್ನಿಸಾಧನೆಯ ವೇದಿಕೆಯ ಲಕ್ಷಣಗಳನ್ನು ಹೇಳಿಯಾಯಿತು. ॥ ೬ ॥ ಇನ್ನು ದ್ವಾದಶಾಗ್ನಿ ಸಾಧನೆಯನ್ನು ಮಾಡಲು ಬೇಕಾದ ವೇದಿಕೆಯ ವಿವರಗಳನ್ನು ಹೇಳುವೆನು. ಮೊದಲು ಪೂರ್ವದಿಕ್ಕಿನಲ್ಲಿ ಒಂದೇ ಸಮನಾದ ನಾಲ್ಕು ಕುಂಡಗಳನ್ನೂ ಅದಕ್ಕೆ ಎದುರುಪಾರ್ಶ್ವದಲ್ಲಿ ಅದೇ ರೀತಿಯ ನಾಲ್ಕು ಕುಂಡಗಳನ್ನೂ ಇಡಬೇಕು. ಅದೇ ಆಳತೆಯ ಎರಡು ಕುಂಡಗಳನ್ನು ದಕ್ಷಿಣಪಾರ್ಶ್ವದಲ್ಲಿಯೂ ಮತ್ತು ಉತ್ತರಪಾರ್ಶ್ವದಲ್ಲಿಯೂ ಇಡಬೇಕು. ಮೊದಲೇ ಹೇಳಿದಂತೆ ಮಧ್ಯದಲ್ಲಿ ಸಾಧಕನು ಕೂಡುವುದಕ್ಕೆ ಒಂದು ವೇದಿಕೆಯನ್ನು ನಿರ್ಮಿಸಬೇಕು. ॥ ೭-೮ ॥ ನಂತರ ಒಂದು ಶುಭದಿನದಲ್ಲಿ ಕರ್ತೃವು ತನ್ನ ನಿತ್ಯಕರ್ಮಗಳನ್ನು ಮುಗಿಸಿ ಶುಚಿರ್ಭೂತನಾಗಿದ್ದು ದೇಶಕಾಲಗಳನ್ನುಚ್ಚರಿಸಿ, ಈ ಸಾಧನೆಯ ಫಲವನ್ನುದ್ದೇಶಿಸಿ, ಮನಸ್ಸಿನಲ್ಲಿ ಸಂಕಲ್ಪ ಮಾಡಬೇಕು. ॥ ೯ ॥ ನಂತರ ಗಣೇಶನನ್ನು ಪೂಜಿಸಿ, ಬ್ರಾಹ್ಮಣರುಗಳಿಂದ ಸ್ವಸ್ತಿವಾಚನಾದಿಗಳನ್ನು, ತನ್ನ

ಗೃಹ್ಯೋಕ್ತ ವಿಧಿಯಿಂದ ಅಭ್ಯುದಯಾದಿಗಳನ್ನು ಸ್ವೀಕರಿಸಬೇಕು. ॥ ೧೦ ॥ ನಂತರ ಇಂದ್ರಾದಿ ದಶದಿಕ್ಪಾಲಕರುಗಳನ್ನು ಕ್ರಮವಾಗಿ ಪೂಜಿಸಿ, ನೀರಿನಿಂದ ಪೂರ್ಣವಾಗಿರುವ ಅಲಂಕೃತವಾದ ಕಳಶಗಳನ್ನು ಸ್ಥಾಪಿಸಬೇಕು. ॥ ೧೧ ॥ ಉದ್ದುಮಿಶ್ರಿತ ಅನ್ನವನ್ನು ಬಲಿದಾನಕ್ಕಾಗಿ ಹಾಕಿ, ನಂತರ ತಮ್ಮ ತಮ್ಮ ಗೃಹ್ಯೋಕ್ತವಿಧಿಯಂತೆ ಅಗ್ನಿಯನ್ನು ಸ್ಥಾಪಿಸಬೇಕು. ॥ ೧೨ ॥ ಅರಣೀಕಟ್ಟಿಗೆಯನ್ನು ಕಡೆದು ಅಥವಾ ಸೂರ್ಯನ ಕಿರಣಗಳಿಂದ ಉತ್ಪತ್ತಿ ಮಾಡಿದ ಅಥವಾ ಶ್ರೋತ್ರಿಯರ ಮನೆಯಿಂದ ತಂದ ಅಗ್ನಿಯನ್ನು ಕುಂಡಗಳಲ್ಲಿ ಸ್ಥಾಪಿಸಬೇಕು. ॥ ೧೩ ॥ ಆಗ್ನೇಯದ ಕುಂಡದಲ್ಲಿ 'ಸಹಸ್ರಾರ್ಚಿ'ನಾಮಕ ಅಗ್ನಿಯನ್ನೂ, ನೈರುತ್ಯದ ಕುಂಡದಲ್ಲಿ "ಸ್ವಸ್ತಿನಾಮಕ" ಅಗ್ನಿಯನ್ನೂ, "ಸಪ್ತಜಿಹ್ವಾಖ್ಯ" ಅಗ್ನಿಯನ್ನು ವಾಯವ್ಯದ ಕುಂಡದಲ್ಲಿಯೂ, "ವೈಶ್ವಾನರಾಖ್ಯ" ಅಗ್ನಿಯನ್ನು ಈಶಾನ್ಯದಲ್ಲಿರುವ ಕುಂಡ-ದಲ್ಲಿಯೂ ಸ್ಥಾಪನೆ ಮಾಡಬೇಕು. ॥ ೧೪ ॥ ದ್ವಾದಶಾಗ್ನಿಗಳ ಸ್ಥಾಪನೆಯನ್ನು ಈಶಾನ್ಯಮೂಲೆ-ಯಿಂದ ಪ್ರಾರಂಭ ಮಾಡಿಕೊಂಡು ಕ್ರಮವಾಗಿ ಮೇಲೆ ಹೇಳಿದಂತೆ ಮಾಡಬೇಕು. ಈ ಹನ್ನೆರಡು ಅಗ್ನಿಗಳ ಹೆಸರುಗಳು ಈ ರೀತಿಯಾಗಿವೆ. ಸಹಸ್ರಾರ್ಚಿ, ಚತುಶ್ಶೃಂಗ, ಸಪ್ತಜಿಹ್ವ, ದ್ವಿಶೀರ್ಷಕ, ವೈಶ್ವಾನರ, ಜಾತವೇದಾ, ಧೂಮವ್ಯಾಪೀ, ಹುತಾಶನ, ಹವ್ಯವಾಟ್, ಶಿಖಿ, ದೇವಯೋಷ, ಅಂತಿಮ. ॥ ೧೫-೧೬ ॥ ಈ ರೀತಿಯಾಗಿ ಅಗ್ನಿಯನ್ನು ಹನ್ನೆರಡು ಕುಂಡಗಳಲ್ಲಿ ಸ್ಥಾಪಿಸಿ, ಧ್ಯಾನ ಮಾಡಿ ಪರ್ಯುಕ್ಷಣಂ, ಪರಿಶೇಚನಂ, ಪರಿಸಮೂಹನಂ, ಪರಿಸ್ತೀರ್ಯ ಎಂದು ಹೇಳಿ ನಾಲ್ಕು ಕಡೆಗೂ ನೀರು ಹಾಕಿ ಎಂಟು ದಿಕ್ಕಿನಲ್ಲಿ ಅಕ್ಷತೆಯನ್ನಿಟ್ಟು ಅನಂತರ ತುಪ್ಪದ ಜೊತೆಗೆ ಎಳ್ಳನ್ನು ಹೋಮ ಮಾಡತಕ್ಕದ್ದು. ॥ ೧೭ ॥ ನಂತರ ಉದ್ದಿಷ್ಟವಾದ ಕಾರ್ಯಕ್ಕೆ ಉಚಿತವಾದ ಮಂತ್ರದಿಂದ ಮೊದಲನೇ ದಿವಸ ಸಾವಿರ ಬಾರಿ ಹೋಮ ಮಾಡಬೇಕು. ಅಲ್ಲಿಂದ ಪ್ರತಿನಿತ್ಯವೂ ಜಪ ಮಾಡಿ ಇದರ ಹತ್ತನೇ ಒಂದು ಭಾಗದಷ್ಟು ಸಂಖ್ಯೆಯಲ್ಲಿ ಹೋಮವನ್ನು ಮಾಡಬೇಕು. ॥ ೧೮ ॥ ಹೀಗೆ ಹೋಮ ಮಾಡಿ ದೊಡ್ಡ ದೊಡ್ಡ ಕಾಷ್ಠಗಳಿಂದ ಎಲ್ಲ ಕುಂಡಗಳಲ್ಲಿಯೂ ಅಗ್ನಿಯನ್ನು ಪ್ರಜ್ವಲಿಸಬೇಕು. ನಂತರ ಭೂತಶುದ್ಧಿಯನ್ನು ಮಾಡಿ ತಮ್ಮ ಇಷ್ಟದೇವತೆಗಳನ್ನು ಧ್ಯಾನ ಮಾಡಬೇಕು. ॥ ೧೯ ॥ ಅನಂತರ ಕೌಪೀನವನ್ನು ಮಾತ್ರ ಧಾರಣ ಮಾಡಿ ಈ ಕುಂಡಗಳ ಮಧ್ಯದಲ್ಲಿ ನಿಂತುಕೊಂಡು ಸೂರ್ಯನಲ್ಲಿ ಕಣ್ಣುಗಳನ್ನು ಇರಿಸಿ ಪುರಶ್ಚರಣವನ್ನು ಉತ್ತಮವಾಗಿ ಮಾಡಬೇಕು. ॥ ೨೦ ॥ ಪ್ರತಿನಿತ್ಯವೂ ನಿತ್ಯಕರ್ಮಗಳನ್ನು ಮುಗಿಸಿ,ಮೂರು ಮುಹೂರ್ತ ಕಾಲ ಜ್ವಲಿಸುತ್ತಿರುವ ಜ್ವಾಲೆಗಳ ಅಗ್ನಿಕುಂಡಗಳ ಮಧ್ಯದಲ್ಲಿ ಇರುವ ಆಸನದಲ್ಲಿ ಕುಳಿತಿರಬೇಕು. ದಿನ ಮುಗಿಯಲು ಇನ್ನೂ ಮೂರು ಮುಹೂರ್ತಗಳಿರುವರೆಗೂ ಪ್ರಸನ್ನಚಿತ್ತನಾಗಿದ್ದು ಪುನಃ ಚಿತ್ತ ಚಾಂಚಲ್ಯವಿಲ್ಲದೆ ಈ ಕರ್ಮಕ್ಕೆ ಸಂಬಂಧಪಟ್ಟ ಮಂತ್ರವನ್ನು ಧ್ಯಾನಮಾಡುತ್ತಿರಬೇಕು. ॥ ೨೧ - ೨೨ ॥ ವಸಂತಋತುವಿನಲ್ಲಾಗಲೀ ಅಥವಾ ಗ್ರೀಷ್ಮಋತುವಿನಲ್ಲಾಗಲೀ ಈ ಮೂರು ಕರ್ಮಗಳನ್ನು ಮಾಡಬೇಕು. ಈಗ ಎರಡು ಕರ್ಮಗಳನ್ನು ವಿವರಿಸಿದ್ದಾಯಿತು. ಇನ್ನು ಮೂರನೆಯದಾದ ಧೂಮಪಾನಕರ್ಮವನ್ನು ವಿವರಿಸುವೆನು. ॥ ೨೩ ॥ ಹೇ ಪರಶುರಾಮ!, ಮಂಗಳಕರವಾದ ಧೂಮಪಾನದ ವಿಧಿವತ್ತಾದ ಕರ್ಮಾನುಷ್ಠಾನ ಮಾತ್ರದಿಂದ ಕರ್ತೃವಿನ ಇಷ್ಟಸಿದ್ಧಿಯೆಲ್ಲವೂ ಖಂಡಿತವಾಗಿ ಆಗುವುದು. ॥ ೨೪ ॥ ಐದು ಬಾಹುಗಳಳತೆಯ ಚೌಕವಾದ ವೇದಿಕೆಯನ್ನು ಹಿಂದೆ ಹೇಳಿರುವಂತೆ ಮಂಗಳಮಯವಾಗಿ ನಿರ್ಮಿಸಬೇಕು. ಎಲ್ಲ ಲಕ್ಷಣದಿಂದ ಕೂಡಿರುವ ಒಂದು ಕೈಯಳತೆಯ ಕುಂಡವನ್ನು ಅದರ ಮಧ್ಯೆ ನಿರ್ಮಾಣ ಮಾಡಬೇಕು. ॥ ೨೫ ॥ ಈ ವೇದಿಕೆಯ ದಕ್ಷಿಣ ಮತ್ತು ಉತ್ತರಭಾಗಗಳಲ್ಲಿ ಐದು ಕೈ ಎತ್ತರವಿರುವ ಕೊಂಬುಗಳುಳ್ಳ, ಹಾಲು

ಸುರಿಸತಕ್ಕ ಎಕ್ಕೆ, ಆಲ ಮುಂತಾದ ಮರಗಳ ಎರಡು ಕಂಭಗಳನ್ನು ರೆಂಬೆಗಳ ಐದನೆ ಒಂದು ಭಾಗದಷ್ಟು ಭೂಮಿಯಲ್ಲಿ ಹೂಳಿರುವಂತೆ ನೆಡಬೇಕು. ।। ೨೬ ।। ಅವುಗಳ ಮಧ್ಯೆ ಎರಡು ತುದಿಗಳುಳ್ಳ ಒಂದು ದೃಢವಾದ ಸರಳವಾದ ವಲಿಯವನ್ನು (ವಲಿ- ಅಡ್ಡಲಾಗಿ ಕಟ್ಟುವ ಸಲಾಕೆ) ಕಟ್ಟಬೇಕು. ಆ ವಲಿಯ ಎರಡು ತುದಿಗಳಿಗೂ ಎರಡು ಹದಿನಾರು ಅಂಗುಲಗಳ ಉದ್ದವುಳ್ಳ ತ್ರಿಶೂಲಗಳನ್ನು ಕಟ್ಟಬೇಕು. ।। ೨೭ ।। ಇವಿಷ್ಟನ್ನೂ ಒಳಗೊಂಡಿರುವಂತೆ ಧ್ವಜ, ಪತಾಕೆಗಳಿಂದ ಸುಂದರವಾಗಿ ಅಲಂಕರಿಸಲ್ಪಟ್ಟ ಒಂದು ಎಲ್ಲಾ ಲಕ್ಷಣಗಳಿಂದ ಕೂಡಿದ ಮಂಟಪವನ್ನು ರಚನೆ ಮಾಡಬೇಕು ಎಂದು ಕೆಲವರ ಅಭಿಪ್ರಾಯ. ।। ೨೮ ।। ಶುಭತಿಥಿಯಲ್ಲಿ, ಶುಭಮುಹೂರ್ತದಲ್ಲಿ ಕರ್ತೃವು ನಿತ್ಯಕರ್ಮಗಳನ್ನು ಮುಗಿಸಿ, ಶುಚಿರ್ಭೂತನಾಗಿ ಗಣೇಶನ ಪೂಜೆಯನ್ನು ಮಾಡಿ, ಪುಣ್ಯಾಹವಾಚನವನ್ನು ಬ್ರಾಹ್ಮಣರುಗಳಿಂದ ಹೇಳಿಸಿ, ತನ್ನ ಶಾಖೆಗೆ ಅನುಸಾರಿಯಾದ ವಿಧಾನದಿಂದ ಮೊದಲಿನಂತೆ ಕುಂಡದಲ್ಲಿ ಅಗ್ನಿಯನ್ನು ಸ್ಥಾಪಿಸಿ ಪೂರ್ವದಂತೆ ಧ್ಯಾನಾದಿಗಳನ್ನು ಮಾಡಿ ಅನಂತರ ಹವನವನ್ನು ಮಾಡಬೇಕು. ।। ೨೯-೩೦ ।। ಗಾಯತ್ರೀಮಂತ್ರದಿಂದ ಎಳ್ಳು, ಭತ್ತ ಮತ್ತು ಜವೆ ಗೋಧಿ ಇವುಗಳನ್ನು ತುಪ್ಪದ ಸಹಿತ ಸಾವಿರ ಸಲ ಹೋಮ ಮಾಡಬೇಕು. ಅಥವಾ ತಮ್ಮ ಇಷ್ಟವಾದ ಮಂತ್ರದಿಂದಲಾದರೂ ಈ ಹೋಮವನ್ನು ಮಾಡಬಹುದು. ।। ೩೧ ।। ಅನಂತರ ಆ ಅಗ್ನಿಯನ್ನು ಮಧ್ಯದಲ್ಲಿ ನಾಲ್ಕು ಅಂಗುಲದ ಒಂದು ರಂಧ್ರವುಳ್ಳ ಮಣ್ಣಿನ ತಟ್ಟೆಯಿಂದ ಮುಚ್ಚಬೇಕು ।। ೩೨ ।। ಆ ರಂಧ್ರದ ಮಧ್ಯದಲ್ಲಿ ಹನ್ನೆರಡು ಅಂಗುಲ ಉದ್ದದ ರಂಧ್ರವಿರುವ ಒಂದು ಕೊಳವೆಯನ್ನು ತೂರಿಸಬೇಕು. ಈ ಕೊಳವೆಯು ಬುಡದಲ್ಲಿ ದಪ್ಪವಾಗಿದ್ದು, ತುದಿಯಲ್ಲಿ ಸಣ್ಣದಾಗಿರಬೇಕು. ।। ೩೩ ।। ಅದರ ಮೇಲೆ ಕೆಳಮುಖ ಮಾಡಿಕೊಂಡು ಸ್ಥೂಲವಾದ ವಲಿಯ ಮಧ್ಯಭಾಗದಲ್ಲಿ ಎರಡು ಕಾಲುಗಳನ್ನು ಹಗ್ಗದಿಂದ ಬಲವಾಗಿ ಬಿಗಿದು ಎಳೆದು ಕಟ್ಟಿಕೊಂಡು ಜೋತಾಡುತ್ತಾ ನಿಲ್ಲಬೇಕು. ।। ೩೪ ।। ನಳಿಕೆಯ ಅಗ್ರಭಾಗವನ್ನು ಮುಖದಲ್ಲಿ ಇಟ್ಟುಕೊಂಡು ಮೆಲ್ಲಮೆಲ್ಲಗೆ ಧೂಮವನ್ನು ಮೂರು ಮುಹೂರ್ತಗಳ ಕಾಲ ತನ್ನ ಇಷ್ಟಸಿದ್ಧಿ ಕೊಡತಕ್ಕ ಮಂತ್ರವನ್ನು ಜಪಿಸುತ್ತಾ ಕುಡಿಯಬೇಕು. ।। ೩೫ ।। ಆಲಸ್ಯವಿಲ್ಲದೆ ಈ ರೀತಿ ಬೆಳಿಗ್ಗೆ ಮೂರು ಮುಹೂರ್ತಗಳವರೆಗೆ ಮತ್ತು ಹಗಲಿನ ಕೊನೆಗೆ ಮೂರು ಮುಹೂರ್ತಗಳವರೆಗೆ ಎರಡು ಸಾರಿಯೂ ಮಾಡಬೇಕು. ।। ೩೬ ।। ಬೆಳಿಗ್ಗೆ ಮಾಡಿದ ಜಪದ ಸಂಖ್ಯೆಯ ಹತ್ತನೇ ಒಂದು ಭಾಗದ ಸಂಖ್ಯೆಯಷ್ಟು ಹೋಮಮಾಡಿ ಸಾಯಂಕಾಲ ಧೂಮಪಾನ ಮಾಡಬೇಕು. ಸಾಯಂಕಾಲದ ಜಪ ಸಂಖ್ಯೆಯ ಹತ್ತನೇ ಒಂದು ಭಾಗದಷ್ಟು ಮಾರನೆಯ ದಿನದ ಬೆಳಿಗ್ಗೆ ಹೋಮಮಾಡಿ ಮೂರು ಮುಹೂರ್ತ ಕಾಲ ಧೂಮಪಾನ ಮಾಡಬೇಕು. ।। ೩೭ ।। ಈ ವಿಧಾನದಿಂದ ಯಾರು ದಾರುಣವಾದ ಈ ತಪಸ್ಸನ್ನು ಮಾಡುವನೋ ಅವನ ಸರ್ವಕಾಮನೆಗಳೂ ಸಿದ್ಧಿಸುವುವು ಮತ್ತು ಎಲ್ಲ ಸಿದ್ಧಿಗಳೂ ಅವನ ದಾಸಿಯರಿದ್ದಂತೆ ಆಗುವುವು. ।। ೩೮ ।। ಪ್ರಯಾಗಕ್ಷೇತ್ರದಲ್ಲಿ ಇಡೀ ವರ್ಷ ಯಾರು ಈ ಸಾಧನೆಯನ್ನು ಮಾಡುವರೋ ಅವರು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಅಪೇಕ್ಷಿತಫಲಗಳನ್ನೆಲ್ಲಾ ಹೊಂದುವರು. ।। ೩೯ ।। ವರ್ಷಋತುವಿನಲ್ಲಿ ಮತ್ತು ಶರದೃತುವಿನಲ್ಲಿ ಆಕಾಶವಾಸವನ್ನು ಯಾರು ಮಾಡುತ್ತಾರೋ(ಅಂದರೆ ಬಟ್ಟ ಬಯಲಿನಲ್ಲಿ ಯಾವಾಗಲೂ ಇರುವದು), ಹೇಮಂತಋತುವಿನಲ್ಲಿ ಮತ್ತು ಶಿಶಿರಋತುವಿನಲ್ಲಿ ಯಾರು ಜಲವಾಸ ಮಾಡುತ್ತಾರೋ ಮತ್ತು ಯಾರು ತನ್ನ ಅಂಗಾಂಗಗಳ ಮಾಂಸಗಳನ್ನು ತುಂಡುತುಂಡಾಗಿ ಕತ್ತರಿಸಿ ಕತ್ತರಿಸಿ ಪಕ್ಷಿಗಳಿಗೆ ತಿನ್ನಲು ಹಾಕುತ್ತಾರೋ ಅಂತಹವರು ಒಂದು ಲಕ್ಷವರ್ಷ ಸ್ವರ್ಗದಲ್ಲಿದ್ದು ಪುನಃ

ಭೂಮಿಯಲ್ಲಿ ರಾಜನಾಗಿ ಹುಟ್ಟುತ್ತಾರೆ. ॥ ೪೦-೪೧ ॥ ಅಕ್ಷಯವಟದ ಸನ್ನಿಧಿಯಲ್ಲಿ ಆಕಳ ಸಗಣಿಯ ಒಣಗಿದ ಬೆರಣಿಯ ಉಂಡೆಗಳ ಪುಡಿಯಿಂದ ತುಂಬಿದ ಹಳ್ಳದಲ್ಲಿ ನಿತ್ಯಕ್ರಿಯೆಗಳಾದ ನಂತರ ಕುತ್ತಿಗೆಯವರೆಗೂ ಈ ಪುಡಿಯನ್ನು ರಾಶಿರಾಶಿಯಾಗಿ ಸುರಿದುಕೊಂಡು ತಾನೇ ತನ್ನ ಎದುರಿಗೆ ಆ ಗೊಬ್ಬರಕ್ಕೆ ಬೆಂಕಿಯನ್ನಿಟ್ಟುಕೊಂಡು ತನಗೆ ಇಷ್ಟವಾದ ಫಲವನ್ನು ಉದ್ದೇಶಿಸಿ ಘೋಷಣೆ ಮಾಡಿ ತನಗೆ ಇಷ್ಟವಾಗಿರತಕ್ಕ ಮಂತ್ರವನ್ನು ಜಪಿಸುತ್ತಾ ಶ್ರೀಹರಿಯನ್ನು ಧ್ಯಾನಮಾಡುತ್ತಾ ತನ್ನ ಶರೀರವನ್ನೆಲ್ಲಾ ಭಸ್ಮ ಮಾಡಿಕೊಳ್ಳಬೇಕು. ॥ ೪೨-೪೩ ॥ ಯಾವ ಮಾನವನು ಈ ಕ್ರೂರಕರ್ಮವನ್ನು ಪ್ರಯಾಗದಲ್ಲಿ ಮಾಡುವನೋ ಅವನು ಏನೇನು ಫಲಗಳನ್ನು ಅಪೇಕ್ಷಿಸುತ್ತಾನೋ ಅವುಗಳೆಲ್ಲಾ ಸಿದ್ಧಿಸುವುವು. ॥ ೪೪ ॥ ಅವನು ತನ್ನ ಶರೀರದ ಕೂದಲುಗಳ ಸಂಖ್ಯೆಯಷ್ಟು ವರ್ಷಗಳವರೆಗೆ ಸ್ವರ್ಗಸುಖವನ್ನನುಭವಿಸಿ ನಂತರ ಭೂಲೋಕದಲ್ಲಿ ಹುಟ್ಟಿ ಜಂಬೂದ್ವೀಪದ ಅಧಿಪತಿಯಾಗುವನು. ॥ ೪೫ ॥ ಯಾವ ಅಪೇಕ್ಷೆಯೂ ಇಲ್ಲದವನು ಮತ್ತು ಮುಕ್ತಿಯನ್ನು ಬಯಸುವವನು ಈ ಕರ್ಮವನ್ನು ಪ್ರಯಾಗದಲ್ಲಿ ಆಚರಿಸಿದರೆ ಮಾಧವನ ಅನುಗ್ರಹದಿಂದ ನಿಶ್ಚಯವಾಗಿಯೂ ಮುಕ್ತಿಯನ್ನು ಪಡೆಯುವನು. ॥ ೪೬ ॥ ಈ ರೀತಿಯಾಗಿ, ಹೇ ಪರಶುರಾಮನೇ! ನಿನಗೋಸ್ಕರ ನಾನು ಎಲ್ಲವನ್ನೂ ಹೇಳಿಯಾಯಿತು. ಈ ಏಳು ಕರ್ಮಗಳ ಬಗ್ಗೆ ಮಹೇಶ್ವರನು ಹಿಂದೆ ಪಾರ್ವತೀದೇವಿಗೆ ಉಪದೇಶಿಸಿದ್ದಾನೆ. ॥ ೪೭ ॥ (ಪಂಚಾಗ್ನಿ ತಪಸ್ಸು, ದ್ವಾದಶಾಗ್ನಿ ತಪಸ್ಸು, ಧೂಮಪಾನ, ಆಕಾಶವಾಸ, ಜಲವಾಸ, ಸ್ವಮಾಂಸಚ್ಛೇದನ, ಅಗ್ನಿಪ್ರವೇಶ ಹೀಗೆ ಏಳು ಕರ್ಮಗಳು. ಇವುಗಳಲ್ಲಿ ಮೊದಲನೆಯ ಐದು ಹಾಗೂ ಏಳನೇ ತಪಸ್ಸುಗಳನ್ನು ಸಜ್ಜನರು ಅನುಷ್ಠಾನ ಮಾಡಿದ ಮತ್ತು ಆರನೆಯದನ್ನು ರಾಕ್ಷಸರು ಮಾಡಿದ ಉಲ್ಲೇಖವಿದೆ.)

**ಶೇಷ ಉವಾಚ—**

ಇತಿ ಸಾರಸ್ವತಂ ವಾಕ್ಯಂ ಶ್ರುತ್ವಾಸೌ ಭೃಗುನಂದನಃ ।
ಪುನರಪ್ಯವದದ್ವಾಣೀಂ ವಾಣೀಮತಿಮನೋರಮಾಮ್ ॥ ೪೮ ॥

**ಶೇಷದೇವರು ಹೇಳಿದರು—**

ಈ ರೀತಿಯಾದ ಸರಸ್ವತೀದೇವಿಯ ಉಪದೇಶವನ್ನು ಕೇಳಿದ ಶ್ರೀಪರಶುರಾಮನು ಮನೋಹರಳಾದ ಆಕೆಯನ್ನು ಕುರಿತು ಮನೋಹರವಾದ ಈ ಮಾತುಗಳನ್ನು ಹೇಳಿದನು. ॥೪೮॥

**ಪರಶುರಾಮ ಉವಾಚ—**

ಸಮ್ಯಗುಕ್ತಂ ಭವತ್ಯೇದಂ ಪ್ರಯಾಗೇ ಕರ್ಮಸಪ್ತಕಮ್ ।
ತಚ್ಛ್ರುತ್ವಾನಂದಮಾಪನ್ನಂ ಮಾನಸಂ ಮಮ ಶಾರದೇ ॥ ೪೯ ॥
ಮಮಾಶ್ರಮಾಂತಿಕೇ ಸ್ಥೇಯಂ ಭವತ್ಯಾನುಗ್ರಹಾನ್ಮಯಿ ।
ಸರ್ವಲೋಕೋಪಕಾರಾರ್ಥಮತ್ರ ಸ್ಥಾನಾಂತರಂ ಕುರು ॥ ೫೦ ॥
ತಥೇತಿ ತಂ ಪ್ರತಿಜ್ಞಾಯ ಕೃತ್ವಾ ತೀರ್ಥಂ ಮನೋರಮಮ್ ।
ನಾಮ್ನಾ ಸರಸ್ವತೀಕುಂಡಂ ತತ್ರಾಪ್ಯಂಶೇನ ಸಾ ಸ್ಥಿತಾ ॥ ೫೧ ॥
ತಸ್ಮಿನ್ಕುಂಡೇ ತು ಯೇ ಸ್ನಾನಂ ದಾನಂ ತಸ್ಯಾಃ ಪ್ರಪೂಜನಮ್ ।
ಕರಿಷ್ಯಂತಿ ನರಾ ನಾರ್ಯಸ್ತೇ ಯಾಂತಿ ಬ್ರಹ್ಮಣಃ ಪದಮ್ ॥ ೫೨ ॥

ತದಗ್ರೇ ಚಾಪರಂ ತೀರ್ಥಂ ನಾಮ್ನಾ ಗೋಘಟ್ಟಗಂ ಸ್ಮೃತಮ್ ।
ಗವಾಂ ಸಂಘಟನೇನೇದಂ ದತ್ತಾನಾಂ ಭಾರ್ಗವೇಣ ತು ॥ ೫೩ ॥
ತತ್ರಾಪಿ ಸ್ನಾನದಾನಾದಿಕರಣಾದೀಪ್ಸಿತಂ ಫಲಮ್ ।
ತೀರ್ಥತ್ರಯಮಿದಂ ಪ್ರೋಕ್ತಮಥೋಽನ್ಯಚ್ಚ ವದಾಮಿ ವಃ ॥ ೫೪ ॥

॥ ಇತಿ ಏಕಾಶೀತಿತಮೋಽಧ್ಯಾಯಃ ॥

**ಪರಶುರಾಮನು ಹೇಳಿದನು—**

''ಹೇ ಶಾರದಾದೇವಿಯೇ! ತಮ್ಮಿಂದ ಈ ಏಳು ಕರ್ಮಗಳು ಪ್ರಯಾಗದಲ್ಲಿ ಅತ್ಯಂತಫಲದಾಯಕಗಳೆಂದು ಹೇಳಲ್ಪಟ್ಟಿತು. ಇದನ್ನು ಆಲಿಸಿ ನನ್ನ ಮನಸ್ಸಿಗೆ ಆನಂದವಾಗಿದೆ. ॥ ೪೯ ॥ ತಾವು ನನ್ನ ಮೇಲೆ ಅನುಗ್ರಹ ಮಾಡಿ ನನ್ನ ಆಶ್ರಮದಲ್ಲಿ ವಾಸಿಸಿರಿ. ಸರ್ವಜನರ ಉಪಕಾರಕ್ಕಾಗಿ ತಾವು ಇಲ್ಲಿ ಮತ್ತೊಂದು ವಾಸಸ್ಥಳವನ್ನು ಮಾಡಿಕೊಳ್ಳಿರಿ. ॥ ೫೦ ॥ ''ಹಾಗೆಯೇ ಆಗಲಿ'' ಎಂದು ಶಾರದೆಯು ಹೇಳಿ ಸರಸ್ವತೀ ಕುಂಡವೆಂಬ ಮನೋಹರವಾದ ತೀರ್ಥವನ್ನು ಮಾಡಿ ಅದರಲ್ಲಿ ಸನ್ನಿಹಿತಳಾಗಿ ಒಂದಂಶದಿಂದ ವಾಸ ಮಾಡಿದಳು. ॥ ೫೧ ॥ ಯಾರು ಆ ಕುಂಡದಲ್ಲಿ ಸ್ನಾನದಾನಾದಿಗಳನ್ನು ಮಾಡಿ ಶಾರದೆಯ ಪೂಜೆಯನ್ನು ಮಾಡುವರೋ ಅವರು ಪರಬ್ರಹ್ಮನ ಲೋಕವಾದ ವೈಕುಂಠಕ್ಕೆ ಹೋಗುವರು. ॥ ೫೨ ॥ ಈ ಪರಶುರಾಮಾಶ್ರಮದ ಮುಂದೆ ಇನ್ನೊಂದು ತೀರ್ಥವಿದೆ. ಇದರ ಹೆಸರು 'ಗೋಘಟ್ಟನತೀರ್ಥ''ವೆಂದು. ಶ್ರೀ ಪರಶುರಾಮರು ದಾನ ಮಾಡಿದ ಗೋವುಗಳು ಒಂದಕ್ಕೊಂದು ಹೊಡೆದಾಡಿದಾಗ ಈ ತೀರ್ಥವು ನಿರ್ಮಾಣವಾಯಿತು. ॥ ೫೩ ॥ ಇಲ್ಲಿ ಕೂಡಾ ಸ್ನಾನ ಮತ್ತು ದಾನಾದಿಗಳನ್ನು ಮಾಡುವುದರಿಂದ ಅಪೇಕ್ಷಿತಫಲಗಳು ಸಿಗುವುವು. ಈ ರೀತಿಯಾಗಿ ಪರಶುರಾಮ ಕ್ಷೇತ್ರದಲ್ಲಿರುವ ಮೂರು ತೀರ್ಥಗಳ ಬಗ್ಗೆಯೂ ಹೇಳಿಯಾಯಿತು. ಇನ್ನು ಬೇರೆ ಬೇರೆ ತೀರ್ಥಗಳ ವಿಷಯವಾಗಿಯೂ ಹೇಳುವೆನು. ॥ ೫೪ ॥

॥ ಎಂಬತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ದ್ವ್ಯಶೀತಿತಮೋಽಧ್ಯಾಯಃ ॥ ೮೨ ॥

ಶೇಷ ಉವಾಚ—

ತಸ್ಯಾಪಿ ಪಶ್ಚಿಮೇ ಭಾಗೇ ವರ್ತತೇ ಸನಕಾದಯಃ ।
ಪಿಶಾಚಮೋಚನಂ ನಾಮ ತೀರ್ಥಂ ಪರಮಪಾವನಮ್ ॥ ೧ ॥
ತತ್ತೀರ್ಥಸ್ನಾನಮಾತ್ರೇಣ ಪಾಪಂ ನಶ್ಯತಿ ತತ್ಕ್ಷಣಾತ್ ।
ರಕ್ಷೋಭೂತಪಿಶಾಚಾನಾಂ ಭಯಂ ಚಾಪಿ ಪ್ರಣಶ್ಯತಿ ॥ ೨ ॥
ಯೇ ಕೇಚಿತ್ಸ್ವಕುಲೇ ಜಾತಾ ಪಿಶಾಚಾ ಪಾಪಕರ್ಮಣಃ ।
ತತ್ರ ಸ್ನಾನೇನ ದಾನೇನ ತೇಷಾಂ ಮೋಕ್ಷೋ ಭವೇದ್ಧ್ರುವಮ್ ॥ ೩ ॥
ತಸ್ಯಾಥ ಪಶ್ಚಿಮೇ ಭಾಗೇ ಕಾಮತೀರ್ಥಮನುತ್ತಮಮ್ ।
ಕಾಮೇಶ್ವರೋಽಪಿ ತತ್ರಾಸ್ತೇ ತಸ್ಯ ತೀರ್ಥಸ್ಯ ದೈವತಮ್ ॥ ೪ ॥
ತಸ್ಮಿಂಸ್ತೀರ್ಥೇ ತು ಯಃ ಸ್ನಾತ್ವಾ ಕಾಮೇಶ್ವರಮಥೋಽರ್ಚಯೇತ್ ।
ಸರ್ವಕಾಮಸಮೃದ್ಧೋಽಸೌ ಪರತ್ರೇಹಾಪಿ ಜಾಯತೇ ॥ ೫ ॥
ತಸ್ಯಾಪಿ ಪಶ್ಚಿಮೇ ಭಾಗೇ ಕಾಪಿಲಂ ತೀರ್ಥಮುತ್ತಮಮ್ ।
ಜ್ಞಾನಪ್ರದಂ ಚ ಭಕ್ತಾನಾಂ ಕಪಿಲೇನ ಪ್ರಕಾಶಿತಮ್ ॥ ೬ ॥
ಕಪಿಲೇನೈವ ತತ್ತೀರ್ಥೇ ಸ್ಥಾಪಿತಶ್ಚಂದಿರೇಶ್ವರಃ ।
ತಸ್ಯ ದರ್ಶನಮಾತ್ರೇಣ ಕೃತಕೃತ್ಯೋ ಭವೇನ್ನರಃ ॥ ೭ ॥
ಸ್ನಾತ್ವಾತು ಕಾಪಿಲೇ ತೀರ್ಥೇ ಪೂಜಯೇದಿಂದಿರೇಶ್ವರಮ್ ।
ಯೋಽಸೌ ಪಾಪವಿನಿರ್ಮುಕ್ತೋ ವಿಜ್ಞಾನಂ ಲಭತೇಽಮಲಮ್ ॥ ೮ ॥
ಇಂದಿರೇಶ್ವರಮಾರಭ್ಯ ಯಾವತ್ತಕ್ಷಕಮಂಡಲಮ್ ।
ಅಸಂಖ್ಯಾತಾನಿ ತೀರ್ಥಾನಿ ತನ್ಮಧ್ಯೇ ನಿವಸಂತಿ ಹಿ ॥ ೯ ॥
ಯತ್ರ ಕುತ್ರಾಪಿ ತನ್ಮಧ್ಯೇ ಸ್ನಾನದಾನಜಪಾದಿಕಮ್ ।
ಕುರ್ವತಾಂ ಪಾಪನಾಶಃ ಸ್ಯಾತ್ಫಲಂ ಚಾವಿಕಲಂ ಭವೇತ್ ॥ ೧೦ ॥
ಅಥ ತಕ್ಷಕತೀರ್ಥಸ್ಯ ಮಹಿಮಾನಂ ಬ್ರುವೇಽನಘಾಃ ।
ತತ್ರಾಸ್ತಿ ತಕ್ಷಕಂ ಕುಂಡಂ ತಥಾಸ್ತೇ ತಕ್ಷಕೇಶ್ವರಃ ॥ ೧೧ ॥
ತಸ್ಮಿನ್ಕುಂಡೇ ನರಃ ಸ್ನಾತ್ವಾ ಪೂಜಯೇತ್ತಕ್ಷಕೇಶ್ವರಮ್ ।
ಯಸ್ಯ ದರ್ಶನಮಾತ್ರೇಣ ವಿಷಬಾಧಾ ನ ಜಾಯತೇ ॥ ೧೨ ॥
ಸರ್ವೇಭ್ಯೋ ವೃಶ್ಚಿಕೇಭ್ಯಶ್ಚ ವಿಷವಲ್ಲೀಭ್ಯ ಏವ ಚ ।
ನಾನಾವಿಷವಿಘಾತೇಭ್ಯೋ ಭಯಂ ನೈವ ಪ್ರಜಾಯತೇ ॥ ೧೩ ॥
ಕದಾಚಿದಶ್ವಿನೌ ದೇವೌ ಶಸ್ತೇ ಪಾರದಕರ್ಮಣಿ ।
ಕೃತೋದ್ಯೋಗೌ ವನಂ ಯಾತೌ ಕಿಷ್ಕಿಂಧೇ ಪರ್ವತೋತ್ತಮೇ ॥ ೧೪ ॥

ರಸರಾಜಂ ವಿನಿರ್ಮಾಯ ಕಷ್ಟೇನ ಪರಮೇಣ ತೌ ।
ಸಂಸ್ಥಾಪ್ಯ ಕಂದರಾಯಾಂ ತಂ ಗುಪ್ತಮಾಯಯತುರ್ಗೃಹಮ್ ॥ ೧೫ ॥
ತದಾಸೌ ತಕ್ಷಕೋ ಹ್ರೀಯಚ್ಛಲೇನ ಪೀಯತೇ ರಸಮ್ ।
ಗತ್ವಾ ಪಾತಾಲವಿವರಂ ಸಾಶಂಕಸ್ತತ್ರ ತಸ್ಥಿವಾನ್ ॥ ೧೬ ॥
ತತಸ್ತಾವಾಗತೌ ತತ್ರ ನಾಸತ್ಯೌ ರಸಭಾಜನೇ ।
ಉತ್ಥಾಪ್ಯಾಲೋಕ್ಯ ತಚ್ಛೂಷ್ಕಂ ವಿಸ್ಮಿತಾವಿದಮೂಚತುಃ ॥ ೧೭ ॥
ಕೇನ ನೀತಂ ಕಥಂ ನೀತಂ ಕಸ್ಯ ಜಾತಂ ಫಲೋನ್ಮುಖಮ್ ।
ಏಕೇನ ಸಾಧ್ಯತೇನ್ಯೇನ ಭುಜ್ಯತೇ ನಿಶ್ಚಿತಾ ಮತಿಃ ॥ ೧೮ ॥
ತಥಾಪಿ ಸ್ವರ್ಗಿಣಾಂ ದೇವಂ ಕಥಯಾವಃ ಪ್ರಭುಂ ಕಿಲ ।
ವಿಚಾರ್ಯೈವಂ ಗತೌ ಸ್ವರ್ಗಂ ಕಥಯಾಮಾಸತುರ್ಹರಿಮ್ ॥ ೧೯ ॥

## ॥ ಎಂಬತ್ತೆರಡನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಹೇ ಸನಕಾದಿಗಳೇ! ಆದಿವೇಣಿಯ ಪಶ್ಚಿಮಭಾಗದಲ್ಲಿ ''ಪಿಶಾಚಮೋಚನ''ವೆಂಬ ಹೆಸರುಳ್ಳ ಪರಮಪಾವನವಾದ ತೀರ್ಥವಿದೆ. ॥ ೧ ॥ ಆ ತೀರ್ಥದಲ್ಲಿ ಸ್ನಾನ ಮಾಡುವ ಮಾತ್ರದಿಂದಲೇ ತಕ್ಷಣವೇ ಪಾಪವು ನಾಶವಾಗುವದು. ರಾಕ್ಷಸ, ಭೂತ ಮತ್ತು ಪಿಶಾಚಗಳ ಭಯವೂ ಕೂಡ ನಾಶವಾಗುವುದು. ॥ ೨ ॥ ಈ ತೀರ್ಥದಲ್ಲಿ ಸ್ನಾನ ಮತ್ತು ದಾನ ಮಾಡುವವರ ಕುಲದಲ್ಲಿ ಯಾರಾದರೂ ತಮ್ಮ ಪಾಪಗಳಿಂದ ಪಿಶಾಚಿಗಳಾಗಿದ್ದರೆ ಅವರು ಖಂಡಿತವಾಗಿಯೂ ಪಿಶಾಚಿರೂಪದಿಂದ ಬಿಡುಗಡೆ ಹೊಂದುತ್ತಾರೆ. ॥ ೩ ॥ ಈ ಪಿಶಾಚಮೋಚಕ ತೀರ್ಥದ ಪಶ್ಚಿಮಕ್ಕೆ ಕಾಮೇಶ್ವರನು ದೇವತೆಯಾದ ಅತ್ಯುತ್ತಮವಾದ ''ಕಾಮತೀರ್ಥ''ವಿದೆ. ॥ ೪ ॥ ಇದರಲ್ಲಿ ಸ್ನಾನ ಮಾಡಿ ಯಾರು ಕಾಮೇಶ್ವರನನ್ನು ಪೂಜಿಸುತ್ತಾರೋ ಅವನಿಗೆ ಈ ಲೋಕದ ಮತ್ತು ಪರಲೋಕದ ಸರ್ವ ಅಪೇಕ್ಷೆಗಳೂ ಕೈಗೂಡುತ್ತವೆ. ॥ ೫ ॥ ಇದರ ಪಶ್ಚಿಮಭಾಗದಲ್ಲಿ ''ಕಾಪಿಲತೀರ್ಥ''ವೆಂಬ ಉತ್ತಮವಾದ ತೀರ್ಥವಿದೆ. ಇದನ್ನು ಕಪಿಲಮಹರ್ಷಿಯು ಬೆಳಕಿಗೆ ತಂದನು. ಇದು ತನ್ನ ಭಕ್ತರಿಗೆ ಜ್ಞಾನವನ್ನು ಕೊಡುವುದು. ॥ ೬ ॥ ಈ ತೀರ್ಥದಲ್ಲಿ ಕಪಿಲಋಷಿಯಿಂದಲೇ ಸ್ಥಾಪಿತವಾಗಿರುವ ಇಂದಿರೇಶ್ವರನು ತನ್ನ ದರ್ಶನಮಾತ್ರದಿಂದಲೇ ಭಕ್ತರನ್ನು ಕೃತಕೃತ್ಯರನ್ನಾಗಿ ಮಾಡುವನು. ॥ ೭ ॥ ಯಾರು ಕಾಪಿಲತೀರ್ಥದಲ್ಲಿ ಸ್ನಾನ ಮಾಡಿ ಇಂದಿರೇಶ್ವರನನ್ನು ಪೂಜಿಸುವನೋ ಅವರು ಪಾಪಗಳಿಂದ ಬಿಡಲ್ಪಟ್ಟವರಾಗಿ ನಿರ್ಮಲವಾದ ಪಾರಮಾರ್ಥಿಕ ತತ್ತ್ವಜ್ಞಾನವನ್ನು ಪಡೆಯುವರು. ॥ ೮ ॥ ಇಂದಿರೇಶ್ವರ ತೀರ್ಥದಿಂದ ಆರಂಭಿಸಿ ''ತಕ್ಷಕ''ತೀರ್ಥದವರೆಗೆ ಲೆಕ್ಕವಿಲ್ಲದಷ್ಟು ತೀರ್ಥಗಳಿವೆ. ॥ ೯ ॥ ಇವುಗಳಲ್ಲಿ ಯಾವ ಒಂದರಲ್ಲಿಯಾದರೂ ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡಿದರೂ ಪಾಪಗಳು ಪರಿಹಾರವಾಗಿ ಫಲಗಳೂ ಹೆಚ್ಚಾಗಿ ಬರುವುವು. ॥ ೧೦ ॥ ಹೇ ಪಾಪವಿಲ್ಲದ ಸನಕಾದಿಗಳೇ! ಇನ್ನು ತಕ್ಷಕತೀರ್ಥದ ಮಹಿಮೆಯನ್ನು ಹೇಳುವೆನು. ಅಲ್ಲಿ ''ತಕ್ಷಕಕುಂಡ''ವಿದೆ ಮತ್ತು ''ತಕ್ಷಕೇಶ್ವರನೂ'' ಇದ್ದಾನೆ. ॥ ೧೧ ॥ ಈ ಕುಂಡದಲ್ಲಿ ಸ್ನಾನ ಮಾಡಿ ತಕ್ಷಕೇಶ್ವರನನ್ನು ಪೂಜಿಸತಕ್ಕದ್ದು. ಈ ತಕ್ಷಕೇಶ್ವರನ ದರ್ಶನಮಾತ್ರದಿಂದಲೇ ವಿಷದ

## ॥ ದ್ವ್ಯಶೀತಿತಮೋಽಧ್ಯಾಯಃ ॥ ೮೨ ॥

ಶೇಷ ಉವಾಚ—

ತಸ್ಯಾಪಿ ಪಶ್ಚಿಮೇ ಭಾಗೇ ವರ್ತತೇ ಸನಕಾದಯಃ ।
ಪಿಶಾಚಮೋಚನಂ ನಾಮ ತೀರ್ಥಂ ಪರಮಪಾವನಮ್ ॥ ೧ ॥
ತತ್ತೀರ್ಥಸ್ನಾನಮಾತ್ರೇಣ ಪಾಪಂ ನಶ್ಯತಿ ತತ್ಕ್ಷಣಾತ್ ।
ರಕ್ಷೋಭೂತಪಿಶಾಚಾನಾಂ ಭಯಂ ಚಾಪಿ ಪ್ರಣಶ್ಯತಿ ॥ ೨ ॥
ಯೇ ಕೇಚಿತ್ಸ್ವಕುಲೇ ಜಾತಾ ಪಿಶಾಚಾ ಪಾಪಕರ್ಮಣಃ ।
ತತ್ರ ಸ್ನಾನೇನ ದಾನೇನ ತೇಷಾಂ ಮೋಕ್ಷೋ ಭವೇದ್ಧ್ರುವಮ್ ॥ ೩ ॥
ತಸ್ಯಾಥ ಪಶ್ಚಿಮೇ ಭಾಗೇ ಕಾಮತೀರ್ಥಮನುತ್ತಮಮ್ ।
ಕಾಮೇಶ್ವರೋಽಪಿ ತತ್ರಾಸ್ತೇ ತಸ್ಯ ತೀರ್ಥಸ್ಯ ದೈವತಮ್ ॥ ೪ ॥
ತಸ್ಮಿಂಸ್ತೀರ್ಥೇ ತು ಯಃ ಸ್ನಾತ್ವಾ ಕಾಮೇಶ್ವರಮಥೋಽರ್ಚಯೇತ್ ।
ಸರ್ವಕಾಮಸಮೃದ್ಧೋಽಸೌ ಪರತ್ರೇಹಾಪಿ ಜಾಯತೇ ॥ ೫ ॥
ತಸ್ಯಾಪಿ ಪಶ್ಚಿಮೇ ಭಾಗೇ ಕಾಪಿಲಂ ತೀರ್ಥಮುತ್ತಮಮ್ ।
ಜ್ಞಾನಪ್ರದಂ ಚ ಭಕ್ತಾನಾಂ ಕಪಿಲೇನ ಪ್ರಕಾಶಿತಮ್ ॥ ೬ ॥
ಕಪಿಲೇನೈವ ತತ್ತೀರ್ಥೇ ಸ್ಥಾಪಿತಶ್ಚಂದಿರೇಶ್ವರಃ ।
ತಸ್ಯ ದರ್ಶನಮಾತ್ರೇಣ ಕೃತಕೃತ್ಯೋ ಭವೇನ್ನರಃ ॥ ೭ ॥
ಸ್ನಾತ್ವಾ ತು ಕಾಪಿಲೇ ತೀರ್ಥೇ ಪೂಜಯೇದಿಂದಿರೇಶ್ವರಮ್ ।
ಯೋಽಸೌ ಪಾಪವಿನಿರ್ಮುಕ್ತೋ ವಿಜ್ಞಾನಂ ಲಭತೇಽಮಲಮ್ ॥ ೮ ॥
ಇಂದಿರೇಶ್ವರಮಾರಭ್ಯ ಯಾವತ್ತಕ್ಷಕಮಂಡಲಮ್ ।
ಅಸಂಖ್ಯಾತಾನಿ ತೀರ್ಥಾನಿ ತನ್ಮಧ್ಯೇ ನಿವಸಂತಿ ಹಿ ॥ ೯ ॥
ಯತ್ರ ಕುತ್ರಾಪಿ ತನ್ಮಧ್ಯೇ ಸ್ನಾನದಾನಜಪಾದಿಕಮ್ ।
ಕುರ್ವತಾಂ ಪಾಪನಾಶಃ ಸ್ಯಾತ್ಫಲಂ ಚಾವಿಕಲಂ ಭವೇತ್ ॥ ೧೦ ॥
ಅಥ ತಕ್ಷಕತೀರ್ಥಸ್ಯ ಮಹಿಮಾನಂ ಬ್ರುವೇಽನಘಾಃ ।
ತತ್ರಾಸ್ತಿ ತಕ್ಷಕಂ ಕುಂಡಂ ತಥಾಸ್ತೇ ತಕ್ಷಕೇಶ್ವರಃ ॥ ೧೧ ॥
ತಸ್ಮಿನ್ಕುಂಡೇ ನರಃ ಸ್ನಾತ್ವಾ ಪೂಜಯೇತ್ತಕ್ಷಕೇಶ್ವರಮ್ ।
ಯಸ್ಯ ದರ್ಶನಮಾತ್ರೇಣ ವಿಷಬಾಧಾ ನ ಜಾಯತೇ ॥ ೧೨ ॥
ಸರ್ವೇಭ್ಯೋ ವೃಶ್ಚಿಕೇಭ್ಯಶ್ಚ ವಿಷವಲ್ಲೀಭ್ಯ ಏವ ಚ ।
ನಾನಾವಿಷವಿಘಾತೇಭ್ಯೋ ಭಯಂ ನೈವ ಪ್ರಜಾಯತೇ ॥ ೧೩ ॥
ಕದಾಚಿದಶ್ವಿನೌ ದೇವೌ ಶಸ್ತೇ ಪಾರದಕರ್ಮಣಿ ।
ಕೃತೋದ್ಯೋಗೌ ವನಂ ಯಾತೌ ಕಿಷ್ಕಿಂಧೇ ಪರ್ವತೋತ್ತಮೇ ॥ ೧೪ ॥

ರಸರಾಜಂ ವಿನಿರ್ಮಾಯ ಕಷ್ಟೇನ ಪರಮೇಣ ತೌ ।
ಸಂಸ್ಥಾಪ್ಯ ಕಂದರಾಯಾಂ ತಂ ಗುಪ್ತಮಾಯಯತುರ್ಗೃಹಮ್ ॥ ೧೫ ॥
ತದಾಸೌ ತಕ್ಷಕೋ ಹ್ರೀಯಚ್ಛಲೇನ ಪೀಯತೇ ರಸಮ್ ।
ಗತ್ವಾ ಪಾತಾಲವಿವರಂ ಸಾಶಂಕಸ್ತತ್ರ ತಸ್ಥಿವಾನ್ ॥ ೧೬ ॥
ತತಸ್ತಾವಾಗತೌ ತತ್ರ ನಾಸತ್ಯೌ ರಸಭಾಜನೇ ।
ಉತ್ಥಾಪ್ಯಾಲೋಕ್ಯ ತಚ್ಛುಷ್ಕಂ ವಿಸ್ಮಿತಾವಿದಮೂಚತುಃ ॥ ೧೭ ॥
ಕೇನ ನೀತಂ ಕಥಂ ನೀತಂ ಕಸ್ಯ ಜಾತಂ ಫಲೋನ್ಮುಖಮ್ ।
ಏಕೇನ ಸಾಧ್ಯತೇನ್ಯೇನ ಭುಜ್ಯತೇ ನಿಶ್ಚಿತಾ ಮತಿಃ ॥ ೧೮ ॥
ತಥಾಪಿ ಸ್ವರ್ಗಿಣಾಂ ದೇವಂ ಕಥಯಾವಃ ಪ್ರಭುಂ ಕಿಲ ।
ವಿಚಾರ್ಯೈವಂ ಗತೌ ಸ್ವರ್ಗಂ ಕಥಯಾಮಾಸತುರ್ಹರಿಮ್ ॥ ೧೯ ॥

## ॥ ಎಂಬತ್ತೆರಡನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಹೇ ಸನಕಾದಿಗಳೇ! ಆದಿವೇಣಿಯ ಪಶ್ಚಿಮಭಾಗದಲ್ಲಿ ''ಪಿಶಾಚಮೋಚನ''ವೆಂಬ ಹೆಸರುಳ್ಳ ಪರಮಪಾವನವಾದ ತೀರ್ಥವಿದೆ. ॥ ೧ ॥ ಆ ತೀರ್ಥದಲ್ಲಿ ಸ್ನಾನ ಮಾಡುವ ಮಾತ್ರದಿಂದಲೇ ತಕ್ಷಣವೇ ಪಾಪವು ನಾಶವಾಗುವದು. ರಾಕ್ಷಸ, ಭೂತ ಮತ್ತು ಪಿಶಾಚಗಳ ಭಯವೂ ಕೂಡ ನಾಶವಾಗುವುದು. ॥ ೨ ॥ ಈ ತೀರ್ಥದಲ್ಲಿ ಸ್ನಾನ ಮತ್ತು ದಾನ ಮಾಡುವವರ ಕುಲದಲ್ಲಿ ಯಾರಾದರೂ ತಮ್ಮ ಪಾಪಗಳಿಂದ ಪಿಶಾಚಿಗಳಾಗಿದ್ದರೆ ಅವರು ಖಂಡಿತವಾಗಿಯೂ ಪಿಶಾಚಿರೂಪದಿಂದ ಬಿಡುಗಡೆ ಹೊಂದುತ್ತಾರೆ. ॥ ೩ ॥ ಈ ಪಿಶಾಚಮೋಚಕ ತೀರ್ಥದ ಪಶ್ಚಿಮಕ್ಕೆ ಕಾಮೇಶ್ವರನು ದೇವತೆಯಾದ ಅತ್ಯುತ್ತಮವಾದ ''ಕಾಮತೀರ್ಥ''ವಿದೆ. ॥ ೪ ॥ ಇದರಲ್ಲಿ ಸ್ನಾನ ಮಾಡಿ ಯಾರು ಕಾಮೇಶ್ವರನನ್ನು ಪೂಜಿಸುತ್ತಾರೋ ಅವನಿಗೆ ಈ ಲೋಕದ ಮತ್ತು ಪರಲೋಕದ ಸರ್ವ ಅಪೇಕ್ಷೆಗಳೂ ಕೈಗೂಡುತ್ತವೆ. ॥ ೫ ॥ ಇದರ ಪಶ್ಚಿಮಭಾಗದಲ್ಲಿ ''ಕಾಪಿಲತೀರ್ಥ''ವೆಂಬ ಉತ್ತಮವಾದ ತೀರ್ಥವಿದೆ. ಇದನ್ನು ಕಪಿಲಮಹರ್ಷಿಯು ಬೆಳಕಿಗೆ ತಂದನು. ಇದು ತನ್ನ ಭಕ್ತರಿಗೆ ಜ್ಞಾನವನ್ನು ಕೊಡುವುದು. ॥ ೬ ॥ ಈ ತೀರ್ಥದಲ್ಲಿ ಕಪಿಲಋಷಿಯಿಂದಲೇ ಸ್ಥಾಪಿತವಾಗಿರುವ ಇಂದಿರೇಶ್ವರನು ತನ್ನ ದರ್ಶನಮಾತ್ರದಿಂದಲೇ ಭಕ್ತರನ್ನು ಕೃತಕೃತ್ಯರನ್ನಾಗಿ ಮಾಡುವನು. ॥ ೭ ॥ ಯಾರು ಕಾಪಿಲತೀರ್ಥದಲ್ಲಿ ಸ್ನಾನ ಮಾಡಿ ಇಂದಿರೇಶ್ವರನನ್ನು ಪೂಜಿಸುವನೋ ಅವರು ಪಾಪಗಳಿಂದ ಬಿಡಲ್ಪಟ್ಟವರಾಗಿ ನಿರ್ಮಲವಾದ ಪಾರಮಾರ್ಥಿಕ ತತ್ವಜ್ಞಾನವನ್ನು ಪಡೆಯುವರು. ॥ ೮ ॥ ಇಂದಿರೇಶ್ವರ ತೀರ್ಥದಿಂದ ಆರಂಭಿಸಿ 'ತಕ್ಷಕ''ತೀರ್ಥದವರೆಗೆ ಲೆಕ್ಕವಿಲ್ಲದಷ್ಟು ತೀರ್ಥಗಳಿವೆ. ॥ ೯ ॥ ಇವುಗಳಲ್ಲಿ ಯಾವ ಒಂದರಲ್ಲಿಯಾದರೂ ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡಿದರೂ ಪಾಪಗಳು ಪರಿಹಾರವಾಗಿ ಫಲಗಳೂ ಹೆಚ್ಚಾಗಿ ಬರುವುವು. ॥ ೧೦ ॥ ಹೇ ಪಾಪವಿಲ್ಲದ ಸನಕಾದಿಗಳೇ! ಇನ್ನು ತಕ್ಷಕತೀರ್ಥದ ಮಹಿಮೆಯನ್ನು ಹೇಳುವೆನು. ಅಲ್ಲಿ ''ತಕ್ಷಕಕುಂಡ''ವಿದೆ ಮತ್ತು ''ತಕ್ಷಕೇಶ್ವರನೂ'' ಇದ್ದಾನೆ. ॥ ೧೧ ॥ ಈ ಕುಂಡದಲ್ಲಿ ಸ್ನಾನ ಮಾಡಿ ತಕ್ಷಕೇಶ್ವರನನ್ನು ಪೂಜಿಸತಕ್ಕದ್ದು. ಈ ತಕ್ಷಕೇಶ್ವರನ ದರ್ಶನಮಾತ್ರದಿಂದಲೇ ವಿಷದ

ಬಾಧೆಗಳೆಲ್ಲವೂ ಮಾಯವಾಗುವುವು ಮತ್ತು ಹಾವು, ಚೇಳು ಮತ್ತು ವಿಷಬಳ್ಳಿಗಳಿಂದ ಆಗುವ ನಾನಾವಿಧವಾದ ವಿಷದ ಭಯವೂ ಇರುವುದಿಲ್ಲ. ॥ ೧೨-೧೩ ॥ ಒಂದಾನೊಂದು ಸಲ ಅಶ್ವಿನೀದೇವತೆಗಳು ಪಾದರಸಕ್ಕೆ ಸಂಬಂಧಪಟ್ಟ ಪದಾರ್ಥಗಳನ್ನು ಹುಡುಕುವುದರಲ್ಲಿ ಆಸಕ್ತರಾಗಿ ಪರ್ವತಶ್ರೇಷ್ಠವಾದ ಕಿಷ್ಕಿಂಧೆಗೆ ಬಂದರು. ॥ ೧೪ ॥ ಕಷ್ಟಪಟ್ಟು ಪಾದರಸದಿಂದ ರಸರಾಜನಾದ ಸಿಂಧೂರವನ್ನು ನಿರ್ಮಾಣ ಮಾಡಿ ಅದನ್ನು ಈ ಪರ್ವತದ ಗುಹೆಯಲ್ಲಿಟ್ಟು ತಮ್ಮ ನಿವಾಸಕ್ಕೆ ಹೊರಟು ಹೋದರು. ॥ ೧೫ ॥ ಆಗ ಅಲ್ಲಿ ಗುಹೆಗಳಲ್ಲಿ ಆಹಾರಕ್ಕಾಗಿ ಸಂಚರಿಸುತ್ತಿದ್ದ ತಕ್ಷಕನು ಈ ರಸರಾಜನನ್ನು ಅಪಹಾರ ಮಾಡಿ ತನ್ನ ಲೋಕವಾದ ಪಾತಾಲಕ್ಕೆ ಹೋಗಿ ಭಯದಿಂದಲೇ ಅಲ್ಲಿ ಇದ್ದುಬಿಟ್ಟನು. ॥ ೧೬ ॥ ಅಶ್ವಿನಿದೇವತೆಗಳು ರಸರಾಜನನ್ನಿಟ್ಟಿದ್ದ ಸ್ಥಳಕ್ಕೆ ಬಂದು ಪಾತ್ರೆಯನ್ನು ಎತ್ತಿ ನೋಡಲಾಗಿ ಅದರೊಳಗೆ ರಸರಾಜನಿರಲಿಲ್ಲ ಮತ್ತು ಪಾತ್ರೆಯು ಒಣಗಿತ್ತು. ಇದರಿಂದ ಆಶ್ಚರ್ಯಗೊಂಡ ಅವರು ಈ ರೀತಿಯಾಗಿ ಹೇಳಿದರು. ॥ ೧೭ ॥ ''ಯಾರಿಂದ ತೆಗೆದುಕೊಳ್ಳಲ್ಪಟ್ಟಿದೆ? ಹೇಗೆ ತೆಗೆದುಕೊಳ್ಳಲ್ಪಟ್ಟಿತು? ಫಲ ಕೊಡತಕ್ಕ ಸ್ಥಿತಿಯಲ್ಲಿರುವ ಇದು ಯಾರ ಭಾಗ್ಯಕ್ಕೆ ದಕ್ಕಿದೆ? ಒಬ್ಬನಿಂದ ಸಾಧಿಸಲ್ಪಟ್ಟಿದ್ದನ್ನು ಇನ್ನೊಬ್ಬನು ಅನುಭವಿಸುವನು. ಶ್ರುತಿಗಳಲ್ಲಿಯೂ ಈ ರೀತಿಯಾಗಿ ಹೇಳಲ್ಪಟ್ಟಿದೆ ಮತ್ತು ನಿಶ್ಚಯ ಮಾಡಲ್ಪಟ್ಟಿದೆ. ॥ ೧೮ ॥ ಸ್ವರ್ಗಾಧಿಪತಿಯಾದ ಇಂದ್ರನಿಗೆ ದೂರು ಸಲ್ಲಿಸೋಣ.'' ಹೀಗೆ ವಿಚಾರ ಮಾಡಿ ಅವರಿಬ್ಬರೂ ಇಂದ್ರನಿಗೆ ದೂರು ಕೊಟ್ಟರು. ॥ ೧೯ ॥

ನಾಸತ್ಯಾವೂಚತುಃ—

ದೇವೇಂದ್ರ ವಾಂ ನ ಜಾನೀವಃ ಕೇನ ನಾವೌಷಧಂ ಹೃತಮ್ ।
ಜಾನಾಸಿ ತ್ವಂ ಯದಿ ಬ್ರೂಹಿ ಕರಿಷ್ಯಾವಸ್ತಥೋದ್ಯಮಮ್ ॥ ೨೦ ॥
ತಚ್ಛ್ರುತ್ವೇಂದ್ರೋಽವದತ್ತಾಭ್ಯಾಂ ನೈತಾದೃಕ್ಕೋಽಪಿ ದೃಶ್ಯತೇ ।
ತ್ರೈಲೋಕ್ಯೇ ಕೋಽಸ್ತಿ ತಂ ಶಾಸ್ಮಿ ಯತ್ರ ಕುತ್ರಾಪಿ ದೃಶ್ಯತಾಮ್ ॥ ೨೧ ॥
ಅನ್ವಿಷ್ಯತೌ ತತಃ ಸ್ವರ್ಗೇ ಮೃತ್ಯುಲೋಕೇ ವಿಲೋಕ್ಯ ಚ ।
ಪಾತಾಲಮೀಯತುಸ್ತೂರ್ಣಮನ್ವೇಷ್ಟುಂ ರಸತಸ್ಕರಮ್ ॥ ೨೨ ॥
ಜ್ಞಾತ್ವಾ ತಾವಾಗತೌ ದ್ರಷ್ಟುಮಾತ್ಮಾನಂ ತಕ್ಷಕಃ ಸ್ಥಲೀಮ್ ।
ಪಲಾಯನಂ ನಿಲೀಯಾಶು ಚಕ್ರೇ ಪಾತಾಲತೋ ಬಲೀ ॥ ೨೩ ॥
ಆಗತ್ಯ ತೀರ್ಥರಾಜೇಽಸೌ ಪ್ರಯಾಗೇ ಗತಸಾಧ್ವಸಃ ।
ಪ್ರವಿಶ್ಯ ಯಾಮುನೇ ಕುಂಡೇ ನಿಲೀಯಾವಸ್ಥಿತಸ್ತದಾ ॥ ೨೪ ॥
ಅಥಾಶ್ವಿನೌ ತಮನ್ವಿಷ್ಯ ಪಾತಾಲೇ ಸರ್ವತಸ್ತದಾ ।
ಅದೃಷ್ಟ್ವಾ ತಂ ತತೋ ಗತ್ವಾ ದೇವೇಂದ್ರಂ ಪುನರೂಚತುಃ ॥ ೨೫ ॥
ತ್ರೈಲೋಕ್ಯೇ ಸಕಲಂ ದೃಷ್ಟಂ ನ ಪ್ರಾಪ್ತೋ ರಸತಸ್ಕರಃ ।
ಪರಂತು ತಕ್ಷಕೋ ನಾಗಃ ಪಾತಾಲೇಽಪಿ ನ ದೃಶ್ಯತೇ ॥ ೨೬ ॥
ಸ ಏವ ಹೃತವಾನ್ಕಿಂ ವಾ ಕ್ವಾಸ್ತೇ ಸಂಪ್ರತಿ ತಕ್ಷಕಃ ।
ಇತ್ಯಾವಾಂ ನೈವ ಜಾನೀವಸ್ತ್ವಯೇದಮವಧಾರ್ಯತಾಮ್ ॥ ೨೭ ॥

**ಇಂದ್ರೋಽಪಿ ತದ್ವಚಃ ಶ್ರುತ್ವಾ ಮಾಯಯಾ ಪುರುಷರೂಪಭಾಕ್ ।**
**ದದರ್ಶ ಸರ್ವತಃ ಸ್ತೇನಮದೃಷ್ಟ್ವಾ ಗುರುಮಬ್ರವೀತ್ ॥ ೨೮ ॥**

**ಅಶ್ವಿನೀದೇವತೆಗಳು ಹೇಳಿದರು—**

''ದೇವೇಂದ್ರನೇ! ನಮ್ಮ ರಸರಾಜಾಖ್ಯ ಔಷಧವು ಯಾರಿಂದ ಅಪಹೃತವಾಗಿದೆಯೋ ತಿಳಿಯದು. ತಿಳಿದಿದ್ದರೆ ನೀವು ಹೇಳಿರಿ. ಆದರಂತೆ ನಾವು ಅದನ್ನು ಹುಡುಕುವ ಪ್ರಯತ್ನ ಮಾಡುತ್ತೇವೆ.'' ॥ ೨೦ ॥ ಇದನ್ನು ಕೇಳಿ ಇಂದ್ರನು ''ಅಂತಹವನು ಯಾರೂ ಕಾಣಬರುತ್ತಿಲ್ಲ. ಮೂರು ಲೋಕದಲ್ಲಿ ಇದರ ಅಪಹಾರಕನು ಎಲ್ಲಿದ್ದರೂ ಅವನನ್ನು ನಾನು ದಂಡಿಸುತ್ತೇನೆ. ಎಲ್ಲಿದ್ದರೂ ಹುಡುಕಿರಿ.'' ಎಂದು ಹೇಳಿದನು. ॥ ೨೧ ॥ ಅವರು ರಸರಾಜನನ್ನು ಸ್ವರ್ಗಲೋಕ, ಮೃತ್ಯುಲೋಕಗಳಲ್ಲೆಲ್ಲಾ ಹುಡುಕಿ ಪಾತಾಳಲೋಕಕ್ಕೆ ಬಂದರು. ॥ ೨೨ ॥ ತಾನು ತಂದಿರುವ ರಸರಾಜನನ್ನು ಹುಡುಕಿಕೊಂಡು ಅಶ್ವಿನೀದೇವತೆಗಳು ಬಂದಿರುವುದನ್ನು ತಕ್ಷಕನು ತಿಳಿದು ಹೆದರಿ ಯಾರಿಗೂ ಕಾಣದಂತೆ ಅಲ್ಲಿಂದ ಓಡಿಹೋದನು. ॥ ೨೩ ॥ ತಕ್ಷಕನು ಪ್ರಯಾಗಕ್ಷೇತ್ರಕ್ಕೆ ಓಡಿ ಬಂದು ಜಾಗ್ರತೆಯಾಗಿ ಅಲ್ಲಿರುವ ಯಮುನಾಮಡುವಿನಲ್ಲಿ ಬಚ್ಚಿಟ್ಟುಕೊಂಡನು. ॥ ೨೪ ॥ ಅಶ್ವಿನೀದೇವತೆಗಳು ಪಾತಾಲದಲ್ಲಿ ಅವನಿಗಾಗಿ ಎಲ್ಲೆಡೆಯಲ್ಲಿಯೂ ಹುಡುಕಿ ಪತ್ತೆಯಾಗದೆ ಹಿಂದಿರುಗಿ ಪುನಃ ದೇವೇಂದ್ರನನ್ನು ಕುರಿತು ಹೇಳಿದರು. ॥ ೨೫ ॥ ''ಮೂರು ಲೋಕಗಳಲ್ಲಿ ಎಲ್ಲಿಯೂ ರಸಕಳ್ಳನು ಕಂಡುಬರುತ್ತಿಲ್ಲ. ಆದರೆ ತಕ್ಷಕನು ಮಾತ್ರ ಪಾತಾಳಲೋಕದಲ್ಲೂ ಕಂಡುಬರುತ್ತಿಲ್ಲ. ॥ ೨೬ ॥ ಅವನೇ ಅದನ್ನು ಅಪಹರಿಸಿದ್ದಾನೋ ಏನೋ? ಅವನು ಈಗ ಎಲ್ಲಿದ್ದಾನೆ ಎಂಬುದೂ ನಮ್ಮಿಬ್ಬರಿಗೆ ತಿಳಿಯದು. ನೀವು ಇದನ್ನು ಮನಸ್ಸಿಗೆ ತಂದುಕೊಳ್ಳಿರಿ.'' ॥ ೨೭ ॥ ಇಂದ್ರನಾದರೋ ಅವರ ಹೇಳಿಕೆಯನ್ನು ಕೇಳಿ ತನ್ನ ಮಾಯಾಶಕ್ತಿಯಿಂದ ಮನುಷ್ಯನ ರೂಪವನ್ನು ಧರಿಸಿ ತಕ್ಷಕನಿಗಾಗಿ ಸರ್ವತ್ರ ಹುಡುಕಿ ಅವನನ್ನು ಕಾಣದಿರಲು ಗುರುಗಳಾದ ಶ್ರೀಬೃಹಸ್ಪತ್ಯಾಚಾರ್ಯರಿಗೆ ಹೇಳಿದನು. ॥ ೨೮ ॥

**ಇಂದ್ರ ಉವಾಚ—**

**ನ ಜಾನೇಽಹಂ ಗುರೋ ಕೃತ್ಯಂ ಕಸ್ಯ ಜಾತಮಲೌಕಿಕಮ್ ।**
**ಮಯಾ ತು ಸರ್ವತೋ ದೃಷ್ಟಂ ತ್ವಮಿದಾನೀಂ ವಿಚಾರಯ ॥ ೨೯ ॥**

**ಇಂದ್ರನು ಹೇಳಿದನು—**

ಈ ಕಾರ್ಯವನ್ನು ಯಾರು ಮಾಡಿದ್ದಾರೆಂದು ನನಗೆ ತಿಳಿಯದಾಗಿದೆ. ಇದು ಅಲೌಕಿಕವಾಗಿದೆ. ನನ್ನಿಂದ ಎಲ್ಲ ಕಡೆಯೂ ಹುಡುಕಲ್ಪಟ್ಟಿದೆ. ಈಗ ತಾವೇ ಇದನ್ನು ವಿಚಾರಿಸಿರಿ.'' ॥ ೨೯ ॥

**ಗುರುರುವಾಚ—**

**ಜಾನೇಽಹಂ ತಕ್ಷಕಸ್ಯೈವ ಕರ್ಮೇದಮಿತಿ ನಿಶ್ಚಿತಮ್ ।**
**ತಥಾಪಿ ಸುಲಭೋ ನಾಯಂ ಯತಸ್ತೀರ್ಥೇ ತದಾಶ್ರಯಃ ॥ ೩೦ ॥**
**ಪೀತಂ ತತ್ತಕ್ಷಕೇನೈವ ಸೋಽವಧ್ಯೋಽಸ್ತಿ ಚ ಭೂತಲೇ ।**
**ಅಕ್ಷಯ್ಯವಟಮಧ್ಯಾಸ್ತೇ ಕ್ಷೇತ್ರರಾಜಸ್ಯ ಮಂಡಲೇ ॥ ೩೧ ॥**

ಸರ್ವದಾ ಮಾಧವಂ ಧ್ಯಾಯನ್ವರ್ತತೇ ಯಾಮುನೇ ಹ್ರದೇ ।
ತತ್ಕ್ಷೇತ್ರಸ್ಯ ನಿವಾಸೇನ ನ ಸ ವಧ್ಯೋಽಸ್ತಿ ಕಸ್ಯಚಿತ್ ॥ ೩೨ ॥
ಅಥೋಪರಮ್ಯತಾಮಿಂದ್ರ ತ್ವಯೈತಾಭ್ಯಾಂ ಚ ಸರ್ವಥಾ ।
ಭವತಾಮುದ್ಯಮೋ ಮೋಘಃ ಸರ್ವಥೈವ ಭವಿಷ್ಯತಿ ॥ ೩೩ ॥
ಭೂಯಂ ಸಂಪಾದಯದ್ವಂ ತ್ವಂ ರಸರಾಜಂ ಯಥಾವಿಧಿ ।
ಕಿಂ ವ್ಯರ್ಥೇನಾಗ್ರಹೇಣಸ್ಯಾದತೋ ಭವತ ನಿಶ್ಚಲಾಃ ॥ ೩೪ ॥
ಗುರೋರ್ವಚನಮಾಕರ್ಣ್ಯ ತ್ರಯೋಽಪೀಂದ್ರಾದಯಸ್ತಥಾ ।
ತ್ಯಕ್ತ್ವಾಶಾಂ ಸದನಂ ಸ್ವಂ ಸ್ವಂ ಜಗ್ಮುರ್ಮ್ಲಾನಮುಖಶ್ರಿಯಃ ॥ ೩೫ ॥
ತದಾರಭ್ಯ ಪ್ರಸಿದ್ಧಂ ತತ್ತಕ್ಷಕಂ ಕುಂಡಮುತ್ತಮಮ್ ।
ಸರ್ವಪಾಪಪ್ರಶಮನಂ ಸರ್ವೋಪದ್ರವನಾಶನಮ್ ॥ ೩೬ ॥
ಸರ್ವಸ್ಯಾಂ ಶುಕ್ಲಪಂಚಮ್ಯಾಂ ಮಾರ್ಗಶ್ರಾವಣಯೋಃ ಪರಮ್ ।
ಯಃ ಸ್ನಾಯಾತ್ತಕ್ಷಕೇ ಕುಂಡೇ ವಿಷಬಾಧಾ ನ ತತ್ಕುಲೇ ॥ ೩೭ ॥
ಯಃ ಸ್ನಾತ್ವಾತತ್ರ ಕುರ್ವೀತ ಸ್ನಾನದಾನಜಪಾದಿಕಮ್ ।
ತಕ್ಷಕೇಶ್ವರಪೂಜಾಂ ಚ ಧನವಾನ್ಸ ಭವೇತ್ಸದಾ ॥ ೩೮ ॥
ಏವಂ ತಕ್ಷಕತೀರ್ಥಸ್ಯ ಮಾಹಾತ್ಮ್ಯಂ ಗದಿತಂ ಮಯಾ ।
ತೀರ್ಥಾಂತರಮಥೋ ವಕ್ಷ್ಯೇ ಶೃಣ್ವಂತು ಸನಕಾದಯಃ ॥ ೩೯ ॥

॥ ಇತಿ ದ್ವ್ಯಶೀತಿತಮೋಽಧ್ಯಾಯಃ ॥

ಬೃಹಸ್ಪತ್ಯಾಚಾರ್ಯರು ಹೇಳಿದರು—

"ನಿಶ್ಚಯವಾಗಿಯೂಇದು ತಕ್ಷಕನದೇ ಕೆಲಸವೆಂದು ನಾನು ಚೆನ್ನಾಗಿ ತಿಳಿದಿದ್ದೇನೆ. ಅವನು ತೀರ್ಥದೊಳಗೆ ಅವಿತುಕೊಂಡಿರುವುದರಿಂದ ಅವನನ್ನು ಕಂಡುಹಿಡಿಯುವುದು ಸುಲಭವಲ್ಲ. ॥ ೩೦ ॥ ರಸರಾಜನನ್ನು ತಕ್ಷಕನೇ ಪಾನಮಾಡಿದ್ದಾನೆ. ಅವನು ಈಗ ಭೂಲೋಕದಲ್ಲಿ ಅವಧ್ಯನು. ಪ್ರಯಾಗವೆಂಬ ಕ್ಷೇತ್ರರಾಜನಿಗೆ ಸೇರಿದ ಭೂಮಂಡಲದಲ್ಲಿರುವ ಅಕ್ಷಯ್ಯವಟಕ್ಷೇತ್ರದ ಆಶ್ರಯದಲ್ಲಿದ್ದಾನೆ. ॥ ೩೧ ॥ ಅದಲ್ಲದೆ ಯಮುನಾಮಡುವಿನೊಳಗೆ ಅಡಗಿದ್ದು ಯಾವಾಗಲೂ ಶ್ರೀಮಾಧವನನ್ನೇ ಧ್ಯಾನಮಾಡುತ್ತಿದ್ದಾನೆ. ಮಾಧವನ ಕ್ಷೇತ್ರದಲ್ಲಿ ವಾಸ ಮಾಡಿರುವುದರಿಂದ ಅವನು ಯಾರಿಂದಲೂ ಅವಧ್ಯನು. ॥ ೩೨ ॥ ಇಂದ್ರನೇ! ನಿನ್ನಿಂದಲಾಗಲೀ ಈ ಅಶ್ವಿನೀದೇವತೆಗಳಿಂದಲಾಗಲೀ, ಇವನನ್ನು ಹುಡುಕುವ ವ್ಯರ್ಥವಾದ ಶ್ರಮವು ಕೈಬಿಡತಕ್ಕದ್ದು. ॥ ೩೩ ॥ ಯಥಾವಿಧಿಯಾಗಿ ಪುನಃ ಈ ರಸರಾಜನ ಉತ್ಪತ್ತಿಗೆ ಪ್ರಯತ್ನ ನಡೆಯಲಿ. ವ್ಯರ್ಥವಾದ ಆಗ್ರಹದಿಂದ ಏನು ಪ್ರಯೋಜನ? ತಾವುಗಳೆಲ್ಲರೂ ಸುಮ್ಮನಿದ್ದುಬಿಡಿ." ॥ ೩೪ ॥ ಬೃಹಸ್ಪತ್ಯಾಚಾರ್ಯರ ಮಾತನ್ನು ಕೇಳಿ ಆ ಅಶ್ವಿನೀದೇವತೆಗಳು ಮತ್ತು ಇಂದ್ರಾದಿಗಳು ತಮ್ಮ ಆಶೆಗಳನ್ನು ಬಿಟ್ಟು ಬಾಡಿದ ಮುಖಕಮಲವುಳ್ಳವರಾಗಿ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು. ॥ ೩೫ ॥ ಇದಾದಮೇಲೆ ಆ ಯಮುನಾಕುಂಡವು ತಕ್ಷಕಕುಂಡವೆಂದು ಪ್ರಸಿದ್ಧಿ ಹೊಂದಿ,

ಉತ್ತಮವೂ ಸರ್ವಪಾಪಪರಿಹಾರಕವೂ ಮತ್ತು ಸರ್ವ ಉಪದ್ರವನಿವಾರಕವೂ ಎಂದು ಸುಪ್ರಸಿದ್ಧವಾಯಿತು. ॥ ೩೬ ॥ ಯಾರು ಈ ತಕ್ಷಕಕುಂಡದಲ್ಲಿ ಎಲ್ಲ ಮಾಸಗಳ ಶುಕ್ಲಪಂಚಮಿಯಂದು, ವಿಶೇಷವಾಗಿ ಮಾರ್ಗಶೀರ್ಷ ಹಾಗೂ ಶ್ರಾವಣಗಳ ಶುಕ್ಲ ಪಂಚಮಿಯಂದು ಸ್ನಾನ ಮಾಡುವರೋ ಅವರ ಕುಲದಲ್ಲಿಯೇ ವಿಷದ ಬಾಧೆಯು ಯಾರಿಗೂ ಇರುವುದಿಲ್ಲ. ॥ ೩೭ ॥ ಯಾರು ಇಲ್ಲಿ ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡಿ ತಕ್ಷಕೇಶ್ವರನನ್ನು ಪೂಜೆ ಮಾಡುವರೋ ಅವರು ಐಶ್ವರ್ಯವಂತರಾಗುತ್ತಾರೆ. ॥ ೩೮ ॥ ಈ ರೀತಿಯಾಗಿ ತಕ್ಷಕತೀರ್ಥದ ಮಾಹಾತ್ಮ್ಯೆಯನ್ನು ನಾನು ಹೇಳಿಯಾಯಿತು. ಬೇರೆ ತೀರ್ಥಗಳ ವಿಷಯವಾಗಿ ಹೇಳುವೆನು; ಕೇಳಿರಿ. ॥ ೩೯ ॥

॥ ಎಂಬತ್ತೆರಡನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ತ್ರ್ಯಶೀತಿತಮೋಽಧ್ಯಾಯಃ ॥ ೮೩ ॥

**ಶೇಷ ಉವಾಚ—**

ಕಾಲಿಯಸ್ಯ ಹ್ರದೋಽಪ್ಯಸ್ತಿ ತಸ್ಯೈವ ನಿಕಟೇ ಮಹಾನ್ ।
ಸರ್ವರೋಗಹರಃ ಪುಣ್ಯಃ ಸರ್ವಪಾಪಪ್ರಣಾಶನಃ ॥ ೧ ॥
ಯಮಾಶ್ರಿತ್ಯ ಸುಖಂ ಪ್ರಾಪ ಕಾಲಿಯಸ್ತಾರ್ಕ್ಷ್ಯಪೀಡಿತಃ ।
ತ್ಯಕ್ತ್ವಾ ರಮಣಕದ್ವೀಪಂ ಸುಖಂ ಸುಸ್ವಾಪ ಸಾನುಗಃ ॥ ೨ ॥
ತತ್ರಯಾಂತಿ ನರಾ ಯೇ ಚ ಪೂಜಯಂತಿ ಚ ಕಾಲಿಯಮ್ ।
ಸರ್ವಬಾಧಾವಿನಿರ್ಮುಕ್ತಾ ಬಲವಂತೋ ಭವಂತಿ ತೇ ॥ ೩ ॥
ಸ್ನಾನಂ ದಾನಂ ಜಪಂ ಹೋಮಂ ಸ್ವಾಧ್ಯಾಯಂ ಪಿತೃತರ್ಪಣಂ ।
ಕುರ್ವತಾ ಜಾಯತೇ ತಸ್ಮಿನ್ನೈಹಿಕಾಮುಷ್ಮಿಕಂ ಫಲಮ್ ॥ ೪ ॥

## ॥ ಎಂಬತ್ತಮೂರನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಈ ತಕ್ಷಕತೀರ್ಥಕ್ಕೆ ಹತ್ತಿರದಲ್ಲಿಯೇ ಸರ್ವರೋಗಗಳ ನಿವಾರಕವು, ಪುಣ್ಯಕರವಾದುದು ಮತ್ತು ಎಲ್ಲ ಪಾಪಗಳ ಪರಿಹಾರಕವು ಅತಿ ಉತ್ತಮವೂ ಆದ ಕಾಲಿಯ ಹ್ರದವೆಂಬ ಮಡುವೊಂದು ಇದೆ. ॥ ೧ ॥ ಗರುಡನಿಂದ ಪೀಡಿತನಾದ ಕಾಲಿಯನೆಂಬ ಸರ್ಪವು ಯಾವುದನ್ನು ಆಶ್ರಯಿಸಿ ಸುಖವಾಗಿದ್ದಾನೆಯೋ ಮತ್ತು ತನ್ನ ಪರಿವಾರಸಹಿತನಾಗಿ ತಾನಿದ್ದ ''ರಮಣಕ ದ್ವೀಪ''ವನ್ನು ಬಿಟ್ಟು ಯಾವುದರಲ್ಲಿ ಸುಖವಾಗಿ ನಿದ್ದೆ ಮಾಡಿಕೊಂಡಿದ್ದಾನೋ ಅಂತಹ ಕಾಲಿಯಹ್ರದದ ವಿಷಯ ಹೇಳುವೆನು. ॥ ೨ ॥ ಈ ಹ್ರದಕ್ಕೆ ಹೋಗಿ ಈ ಕಾಲಿಯಸರ್ಪವನ್ನು ಪೂಜಾ ಮಾಡುವ ಮನುಷ್ಯನು ಎಲ್ಲ ಪಾಪಗಳಿಂದ ಬಿಡಲ್ಪಟ್ಟವನಾಗಿ ಬಲಿಷ್ಠನಾಗುವನು. ॥ ೩ ॥ ಇದರಲ್ಲಿ ಸ್ನಾನ, ದಾನ, ಜಪ, ಹೋಮ, ಸ್ವಾಧ್ಯಾಯ ಮತ್ತು ಪಿತೃತರ್ಪಣವನ್ನು ಮಾಡತಕ್ಕವನು ಇಹಲೋಕದ ಮತ್ತು ಪರಲೋಕದ ಫಲಗಳನ್ನು ಹೊಂದಿದವನಾಗುತ್ತಾನೆ. ॥ ೪ ॥

**ಸನಕಾದಯ ಊಚುಃ—**

ದ್ವೀಪಂ ರಮಣಕಂ ರಮ್ಯಂ ಕುತಸ್ತ್ಯಾಜ ಕಾಲಿಯಃ ।
ಗರುಡೇನ ವಿರೋಧಶ್ಚ ಕುತೋ ವಾಽಭೂದನೇನ ಹಿ ॥ ೫ ॥
ಏತನ್ನಃ ಸರ್ವಮಾಚಕ್ಷ್ವ ಕೃಪಯಾ ಧರಣೀಧರ ।
ಏತಸ್ಯ ಶ್ರವಣೇಽಸ್ಮಾಕಂ ಪರಮಾಸ್ತೇ ಕುತೂಹಲಂ ॥ ೬ ॥

**ಸನಕಾದಿಗಳು ಹೇಳಿದರು—**

''ಕಾಲಿಯನು ರಮಣೀಯವಾಗಿರತಕ್ಕ ರಮಣಕದ್ವೀಪವನ್ನು ಏತಕ್ಕಾಗಿ ಬಿಟ್ಟುಬಂದನು? ಇವನಿಗೆ ಶ್ರೀಗರುಡದೇವರೊಡನೆ ಹೇಗೆ ವಿರೋಧವು ಬಂದಿತು? ಎಲೈ ಭೂಮಿಯನ್ನು ತಮ್ಮ ಹೆಡೆಗಳ ಮೇಲೆ ಹೊತ್ತಿರುವ ಶ್ರೀಶೇಷದೇವರೇ! ಈ ಸರ್ವವಿಷಯವನ್ನೂ ನಮಗೆ ದಯಮಾಡಿ

ಹೇಳಿರಿ. ಈ ವಿಷಯವನ್ನು ತಿಳಿಯಲು ನಮಗೆ ಬಹಳ ಕುತೂಹಲವಿರುವುದು.'' ॥ ೫-೬ ॥

**ಶೇಷ ಉವಾಚ—**

ಕಶ್ಯಪಸ್ಯ ಉಭೇ ಭಾರ್ಯೇ ಕದ್ರುಶ್ಚ ವಿನತಾ ತಥಾ ।
ಕದ್ರುಸ್ಸಂತಾನಸಂಪನ್ನಾ ವಿನತಾ ನ ತಥಾ ಪುನಃ ॥ ೭ ॥
ಸಂತಾನಗರ್ವಿತಾ ಕದ್ರೂರ್ವಿನತಾಮವಜಾನತಿ ।
ಆಸತುರ್ವಿನತಾಪುತ್ರೌ ದ್ವಾವೇವ ಗರುಡಾರುಣೌ ॥ ೮ ॥
ವಿನತಾ ಸರ್ವದಾ ಗೇಹೇ ಪುತ್ರಚಿಂತಾಸಮಾಕುಲಾ ।
ತಿಷ್ಠತಿ ಮ್ಲಾನವಕ್ತ್ರಾಸಾ ಪತಿಸೇವಾಪರಾಯಣಾ ॥ ೯ ॥
ಕದಾಚಿದ್ವೈನತೇಯೋಽಸೌ ಮಾತುರಂತಿಕಮಾಗತಃ ।
ಪಪ್ರಚ್ಛ ಮಾತರಂ ಕಿಂ ತ್ವಂ ಭಾಸಿ ಚಿಂತಾಸಮಾಕುಲಾ ॥ ೧೦ ॥

**ಶೇಷದೇವರು ಹೇಳಿದರು—**

ಶ್ರೀಕಶ್ಯಪ ಋಷಿಗಳಿಗೆ ವಿನತಾ ಮತ್ತು ಕದ್ರು ಎಂಬ ಇಬ್ಬರು ಹೆಂಡತಿಯರಿದ್ದರು. ಕದ್ರುವಿಗೆ ಅನೇಕಸಂತಾನವಿದ್ದವು. ಅಷ್ಟೊಂದು ಮಕ್ಕಳು ವಿನತಾಗೆ ಇರಲಿಲ್ಲ. ॥ ೭ ॥ ಅನೇಕ ಮಕ್ಕಳ ತಾಯಿಯಾಗಿದ್ದ ಕದ್ರುವು ವಿನತಾಳನ್ನು ಹೀಯಾಳಿಸುತ್ತಿದ್ದಳು. ವಿನತಾ ದೇವಿಗೆ ಗರುಡ, ಅರುಣ ಎಂಬ ಎರಡೇ ಮಕ್ಕಳು ಇದ್ದರು. ॥ ೮ ॥ ವಿನತೆಯು ಯಾವಾಗಲೂ ಸಂತಾನಚಿಂತೆಯಿಂದ ವ್ಯಾಕುಲಗೊಂಡು ಬಾಡಿದ ಮುಖವುಳ್ಳವಳಾಗಿ ಪತಿಸೇವಾ ಮಾಡಿಕೊಂಡು ಮನೆಯಲ್ಲೇ ಇರುತ್ತಿದ್ದಳು. ॥ ೯ ॥ ಒಂದಾನೊಂದು ಸಾರಿ ಗರುಡದೇವರು ತಾಯಿಯ ಹತ್ತಿರ ಬಂದು ''ನೀನು ಏತಕ್ಕಾಗಿ ಚಿಂತೆಯಿಂದ ಕೂಡಿದವಳಾಗಿ ಕಾಣುತ್ತೀ?'' ಎಂದು ಕೇಳಿದರು. ॥ ೧೦ ॥

**ವಿನತಾ ಉವಾಚ—**

ಇತಿ ಪುತ್ರವಚಃ ಶ್ರುತ್ವಾ ವಿನತೋವಾಚ ದುಃಖಿತಾ ।
ಗರುತ್ಮನ್ಸಂತತೇರ್ದುಃಖಾದ್ದುಃಖಮನ್ಯನ್ನ ಯೋಷಿತಾಮ್ ॥ ೧೧ ॥
ತ್ವಂ ಜ್ಯೇಷ್ಠೋ ಮಮ ಪುತ್ರೋಽಸಿ ಪಕ್ಷೀ ತಿರ್ಯಕ್ಕರೋಮಿ ಕಿಂ ।
ಅರುಣಶ್ಚಾಪರಃ ಪುತ್ರ ಇತಿ ಚಿಂತಾಕುಲಾಮ್ಯಹಮ್ ॥ ೧೨ ॥
ಸಪತ್ನ್ಯಾ ಬಹವಃ ಪುತ್ರಾಃ ಕಾದ್ರವೇಯಾ ಮಹಾಬಲಾಃ ।
ಪ್ರೌಢಾಃ ಪ್ರತಾಪಸಂಪನ್ನಾಃ ಸಂತಿ ಸರ್ಪಾ ಮಹಾಭಯಾಃ ॥ ೧೩ ॥
ಇತಿ ಮಾತೃವಚಃ ಶ್ರುತ್ವಾ ದುಃಖಿತಾಮವಲೋಕ್ಯ ತಾಮ್ ।
ಉವಾಚ ಸತ್ವಸಂಪನ್ನೋ ಗರುತ್ಮಾನ್ಮಾತರಂ ವಚಃ ॥ ೧೪ ॥

**ವಿನತೆಯು ಹೇಳಿದಳು—**

ಈ ರೀತಿಯಾದ ಮಗನ ಮಾತನ್ನು ಕೇಳಿ ವಿನತೆಯು ಹೇಳಿದಳು. ''ಹೇ ಗರುಡನೇ! ಮಕ್ಕಳಾಗದಿರುವ ಚಿಂತೆಗಿಂತ ಬೇರೆಯಾವ ಚಿಂತೆಯು ತಾನೇ ನಾರಿಯರಿಗೆ

ಇರುವುದು?'' ॥ ೧೧ ॥ ನೀನು ನನ್ನ ಜ್ಯೇಷ್ಠಮಗನು. ನೀನು ಪಕ್ಷಿಜಾತಿಯವನಾಗಿದ್ದಿ. ನೀನು ಏನನ್ನು ತಾನೇ ಮಾಡಬಲ್ಲೆ? ಅರುಣನು ಇನ್ನೊಬ್ಬ ಮಗನು. ಅವನಿಗ ತೊಡಗಳೇ ಇಲ್ಲ. ಆದ್ದರಿಂದ ಚಿಂತಾಕುಲಳಾಗಿದ್ದೇನೆ. ॥ ೧೨ ॥ ನನ್ನ ಸವತಿ ಕದ್ರುವಿಗೆ ಸರ್ಪಜಾತಿಯ ಬಹುಮಕ್ಕಳಿದ್ದಾರೆ. ಅವರೆಲ್ಲಾ ಬಲಿಷ್ಠರು ಮತ್ತು ಬಹುಪ್ರತಾಪಿಗಳು''. ॥ ೧೩ ॥ ಈ ರೀತಿಯಾಗಿ ತಾಯಿಯು ಆಡಿದ ಮಾತುಗಳನ್ನು ಕೇಳಿದ ಗರುಡದೇವರು ದುಃಖಿತಳಾಗಿರುವ ತಾಯಿಯನ್ನು ನೋಡಿ ಸತ್ವಯುತವಾದ ಮಾತುಗಳನ್ನು ಹೇಳಿದರು. ॥ ೧೪ ॥

**ಗರುಡ ಉವಾಚ—**

ಕಿಂಜಾತೈರ್ಬಹುಭಿಃ ಪುತ್ರೈಃ ಮಾತಃ ಸಂತಾಪಕಾರಕೈಃ ।
ವರಮೇಕಃ ಕುಲಾಲಂಬೀ ಯೇನ ಖ್ಯಾತಿಂ ಲಭೇತ್ಕುಲಮ್ ॥ ೧೫ ॥
ಮತ್ಸಮಃ ಕೋಸ್ತಿ ಹೇ ಮಾತಃ ಸರ್ವಬ್ರಹ್ಮಾಂಡಗೋಲಕೇ ।
ತ್ವಮದ್ಯ ಮೇ ಬಲಂ ಪಶ್ಯ ದರ್ಶಯೇ ತವ ತುಷ್ಟಯೇ ॥ ೧೬ ॥
ಇತ್ಯುಕ್ತ್ವೋಡ್ಡೀಯ ಸಹಸಾ ಖಂ ಜಗಾಮ ಖಗೇಶ್ವರಃ ।
ಪಕ್ಷಾಭ್ಯಾಮೀರಯನ್ವಾಯುಂ ಸ್ವಸಾಮರ್ಥ್ಯಂ ಪ್ರದರ್ಶಯನ್ ॥ ೧೭ ॥
ಗರುಡೋದ್ವಾತಮಾತ್ರೇಣ ತ್ರಯೋ ಲೋಕಾಃ ಪ್ರಕಂಪಿತಾಃ ।
ಪ್ರಕಂಪಿತಾಮಹೀ ಸರ್ವಾ ಸಶೈಲವನಕಾನನಾ ॥ ೧೮ ॥
ಗಗನಂ ನಷ್ಟಚಂದ್ರಾರ್ಕಂ ಜ್ಯೋತಿರ್ನೈವ ಪ್ರಕಾಶತೇ ।
ದೇವತಾ ಭಯಭೀತಾಶ್ಚ ಮಾರುತೋಽಪಿ ಪ್ರವಾತಿ ನ ॥ ೧೯ ॥
ಸೂರ್ಯೋ ವಿಯತಿ ಬಭ್ರಾಮ ಚಂದ್ರೋಽಪಿ ಚಲಿತಃ ಪದಾತ್ ।
ಭೂಚರಾಣಿ ನ ದೃಶ್ಯಂತೇ ಖೇಚರಾಣಿ ಕುತಃ ಪುನಃ ॥ ೨೦ ॥
ಪಿನಾಕೀ ಸಪರೀವಾರಃ ಸ್ವಕದರ್ಯಾಮಲೀಯತ ।
ಬ್ರಹ್ಮಾ ಜಲನಿಧೌ ಮಗ್ನೋಽಹಂ ಚ ಮೌಲಿಂ ವ್ಯಕಂಪಯಮ್ ॥ ೨೧ ॥
ಏವಂ ಜಗದ್ವ್ಯತಿಕರಂ ಕುರ್ವನ್ನಾಗಾಂತಕೋ ಯಯೌ ।
ಕ್ಷೀರಾಬ್ಧಿ ಶಯನಂ ವಿಷ್ಣುಂ ಸರ್ವಾನಗಣಯನ್ಬಲಾತ್ ॥ ೨೨ ॥
ಭಗವಾನಪಿ ತಂ ದೃಷ್ಟ್ವಾ ಕಾಶ್ಯಪೇಯಂ ಮಹಾಬಲಂ ।
ಉತ್ಥಾಯ ಯುಯುಧೇ ತೇನ ಜ್ಞಾತುಂ ತದ್ವಿಕ್ರಮಾವಧಿಂ ॥ ೨೩ ॥
ಘಟಾತ್ಕಾರೇಣ ತಂ ದೂರೇ ಚಕಾರ ಗರುಡಸ್ತದಾ ।
ನಿರಾಯುಧೋ ಮಹಾವಿಷ್ಣುರ್ಯುಯುಧೇ ತೇನ ಮುಷ್ಟಿಭಿಃ ॥ ೨೪ ॥
ಚಿರಕಾಲಮಭೂದ್ಯುದ್ಧಂ ವಿಷ್ಣುನಾ ಗರುಡೇನ ವೈ ।
ಖಗೇಂದ್ರಃ ಪ್ರಾಪ ಕಿಮಪಿ ತಥಾಪಿ ನ ಪರಾಜಯಮ್ ॥ ೨೫ ॥
ತಥಾ ತಸ್ಯ ಬಲಂ ದೃಷ್ಟ್ವಾ ತುತೋಷ ಭಗವಾನ್ಹರಿಃ ।
ಉವಾಚ ಚ ವಚೋ ರಮ್ಯಂ ಕರಮುದ್ಯಮ್ಯ ಸಾದರಮ್ ॥ ೨೬ ॥

**ಗರುಡದೇವರು ಹೇಳಿದರು—**

ತಾಯಿಗೆ ಸಂತಾಪವನ್ನುಂಟುಮಾಡುವ ಬಹಳ ಮಕ್ಕಳುಗಳಿಂದೇನು ಪ್ರಯೋಜನ? ಕುಲಕ್ಕೆ ಕಂಬದಂತಿರುವ ಮತ್ತು ಕುಲಕ್ಕೆ ಖ್ಯಾತಿಯನ್ನು ತರುವ ಒಬ್ಬನೇ ಮಗನು ಶ್ರೇಷ್ಠನು. ॥ ೧೫ ॥ ಎಲೈ ತಾಯಿಯೇ! ಇಡೀ ಬ್ರಹ್ಮಾಂಡದಲ್ಲಿ ನನ್ನ ಸಮರು ಯಾರಿದ್ದಾರೆ? ಈಗಲೇ ನನ್ನ ಬಲವನ್ನು ನೋಡು, ನಿನ್ನ ಸಂತೋಷಕ್ಕೋಸ್ಕರ ಅದನ್ನು ತೋರಿಸುತ್ತೇನೆ. ॥ ೧೬ ॥ ಹೀಗೆ ಹೇಳಿ ಥಟ್ಟನೇ ಆಕಾಶಕ್ಕೆ ಹಾರಿ ಆ ಪಕ್ಷಿರಾಜನಾದ ಗರುಡನು ತನ್ನ ರೆಕ್ಕೆಗಳಿಂದ ಗಾಳಿಯನ್ನು ಪ್ರೇರಿಸುತ್ತಾ ತನ್ನ ಸಾಮರ್ಥ್ಯವನ್ನು ತೋರಿಸಿದನು. ॥ ೧೭ ॥ ಗರುಡನಿಂದ ಹುಟ್ಟಿಸಲ್ಪಟ್ಟ ಕೇವಲ ಆ ಗಾಳಿಯಿಂದಲೇ ಮೂರು ಲೋಕಗಳೂ ನಡುಗಿದವು. ಪರ್ವತಗಳು, ವನಗಳು ಮತ್ತು ಕಾಡುಗಳ ಸಹಿತ ಇಡೀ ಭೂಮಿಯೇ ನಡುಗತೊಡಗಿತು. ॥ ೧೮ ॥ ಆಕಾಶದಲ್ಲಿ ಸೂರ್ಯಚಂದ್ರರ ಬೆಳಕಿಲ್ಲದಂತಾಯಿತು. ಅಗ್ನಿ ನಕ್ಷತ್ರಗಳು ಬೆಳಗದಂತಾಯಿತು. ಗಾಳಿಯೂ ಬೀಸದಂತಾಗಿ ದೇವತೆಗಳು ಭಯದಿಂದ ಬೆದರಿದರು. ॥ ೧೯ ॥ ಸೂರ್ಯನು ಆಕಾಶದಲ್ಲಿ ಪರದಾಡು-ವಂತಾಯಿತು, ಚಂದ್ರನೂ ತನ್ನ ಸ್ಥಾನದಿಂದ ಭ್ರಷ್ಟನಾದನು. ಭೂಮಿಯಲ್ಲಿ ಸಂಚರಿಸುವ ಯಾವ ಪ್ರಾಣಿಗಳೂ ಕಂಡುಬರದಂತಾಯಿತು. ಇನ್ನು ಆಕಾಶದಲ್ಲಿ ಪಕ್ಷಿಗಳ ಪಾಡೇನು? ॥ ೨೦ ॥ ಶಿವನು ತನ್ನ ಪರಿವಾರದೊಡನೆ ತನ್ನ ಗುಹೆಯೊಳಗೆ ಸೇರಿಕೊಂಡನು. ಬ್ರಹ್ಮನು ಸಮುದ್ರದೊಳಗೆ ಅಡಗಿಕೊಂಡನು. ನಾನೂ ನನ್ನ ಹೆಡೆಗಳನ್ನು ಅಲ್ಲಾಡಿಸಲು ಶುರುಮಾಡಿದೆ. ॥ ೨೧ ॥ ಈ ರೀತಿಯಾಗಿ ಜಗತ್ತಿನ ಅವಸಾನವೋ ಎನ್ನುವಷ್ಟು ಆತಂಕವನ್ನುಂಟುಮಾಡಿ, ನಾಗರ ಅಂತಕನಾದ ಗರುಡನು ಕ್ಷೀರಸಾಗರದಲ್ಲಿ ಮಲಗಿರತಕ್ಕ ಶ್ರೀವಿಷ್ಣುವಿನ ಸಮೀಪಕ್ಕೆ ಹೋದನು. ॥ ೨೨ ॥ ಭಗವಂತನಾದರೋ ಕಶ್ಯಪಋಷಿಗಳ ಮಗನಾದ ಗರುಡನನ್ನು ಮಹಾಬಲಿಷ್ಠನೆಂದು ತಿಳಿದು ಅವನ ಬಲದ ಅವಧಿಯನ್ನು ತಿಳಿಸಲು ಅವನೊಡನೆ ಯುದ್ಧಮಾಡಿದನು. ॥ ೨೩ ॥ ಗರುಡನು ತನ್ನ ಪಕ್ಷಗಳಿಂದ ಫಟಫಟನೆ ಬಡಿದು ಅವನನ್ನು ದೂರಕ್ಕೆ ತಳ್ಳಿದನು. ನಿರಾಯುಧನಾಗಿ ಶ್ರೀವಿಷ್ಣುವು ಅವನೊಡನೆ ಮುಷ್ಟಿಗಳಿಂದ ಯುದ್ಧಮಾಡಿದನು. ॥ ೨೪ ॥ ಗರುಡನಿಗೂ ವಿಷ್ಣುವಿಗೂ ಬಹುಕಾಲ ಯುದ್ಧವಾಯಿತು. ಆದರೂ, ಗರುಡನು ಸ್ವಲ್ಪವೂ ಪರಾಜಯವನ್ನು ಹೊಂದಲಿಲ್ಲ ॥ ೨೫ ॥ ಆರೀತಿಯಾದ ಗರುಡನ ಬಲವನ್ನು ತಿಳಿದು ಶ್ರೀವಿಷ್ಣುವು ಸಂತುಷ್ಟನಾದನು. ಕೈಯನ್ನು ಮೇಲಕ್ಕೆತ್ತಿ ಆದರದಿಂದ ರಮ್ಯವಾಗಿ ಈ ರೀತಿ ಮಾತುಗಳನ್ನಾಡಿದನು. ॥ ೨೬ ॥

**ಶ್ರೀ ಭಗವಾನುವಾಚ—**

ಧನ್ಯೋಽಸಿ ವಿನತಾಪುತ್ರ ಸಮ್ಮತೋ ಮೇ ಪರಾಕ್ರಮೇ ।
ತುಷ್ಟೋಹಂ ತವ ಯುದ್ಧೇನ ವರಂ ವರಯ ಕಾಂಕ್ಷಿತಮ್ ॥ ೨೭ ॥
ಧನ್ಯೇಯಂ ವಿನತಾ ಸಾಧ್ವೀ ಯಯಾ ಕುಕ್ಷೌ ಧೃತೋ ಭವಾನ್ ।
ಏಕೋಽಪಿ ತ್ವಾದೃಶಃ ಪುತ್ರೋ ವರಂ ನ ಬಹವೋಽಪರೇ ॥ ೨೮ ॥

**ಭಗವಂತನು ಹೇಳಿದನು—**

"ಎಲೈ ವಿನತಾಪುತ್ರನಾದ ಗರುಡನೇ! ನೀನು ಧನ್ಯನು. ನೀನು ಬಲಿಷ್ಠನೆಂಬುದರಲ್ಲಿ ನನ್ನ ಒಪ್ಪಿಗೆಯಿದೆ. ನಿನ್ನ ಯುದ್ಧಕೌಶಲದಿಂದ ನಾನು ಸಂತೋಷಗೊಂಡೆನು. ಬೇಕಾದ ವರವನ್ನು ಕೇಳಿಕೋ. ॥ ೨೭ ॥ ಯಾರು ನಿನ್ನಂತಹ ಮಗನನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಅವನಿಗೆ

ಜನ್ಮಕೊಟ್ಟಿದ್ದಾಳೋ ಆ ವಿನತೆಯು ಧನ್ಯಳು. ಬೇರೆ ಹಲವು ಮಕ್ಕಳುಗಳನ್ನು ಪಡೆಯುವುದಕ್ಕಿಂತ ನಿನ್ನಂತಹ ಒಬ್ಬ ಪುತ್ರನೇ ಶ್ರೇಷ್ಠನು.'' ॥ ೨೮ ॥

ಗರುಡ ಉವಾಚ—

ಯೋಽಯಂ ಜಯತಿ ಸಂಗ್ರಾಮೇ ತಸ್ಮೈ ದತ್ತಾದ್ ವರಂ ತು ಸಃ ।
ಅತಸ್ತ್ವಮೇವ ಜೇತಾರಂ ಮಾಂ ಯಾಚಯ ಪರಂ ಬಲಂ ॥ ೨೯ ॥

ಗರುಡದೇವರು ಹೇಳಿದರು—

''ಯಾರು ಯುದ್ಧದಲ್ಲಿ ಜಯವನ್ನು ಹೊಂದುವನೋ ಅವನು ಸೋತವನಿಗೆ ವರವನ್ನು ಕೊಡುವನು. ನಾನೇ ಈಗ ಗೆದ್ದವನು. ಆದ್ದರಿಂದ ಗೆದ್ದಿರುವ ಮಹಾ ಬಲಿಷ್ಠನಾದ ನನ್ನಿಂದ ನೀನೇ ವರವನ್ನು ಬೇಡು. ॥ ೨೯ ॥

ಶ್ರೀ ಭಗವಾನುವಾಚ—

ಸತ್ಯಮೇತಾದೃಶೋಽಸಿ ತ್ವಂ ವಿಕ್ರಮೇಣ ಬಲೇನ ವಾ ।
ಮಮ ಭಾರವಹಂ ಯಾನಂ ಭವ ತ್ವಂ ವಿನತಾಸುತ ॥ ೩೦ ॥
ಆಶ್ರಯಶ್ಚ ಭವೇತ್ಯುಕ್ತೇ ತಮೋಮಿತಿ ವದನ್ ಖಗಃ ।
ಸ್ವಪೃಷ್ಠೇ ತಂ ಮಹಾವಿಷ್ಣುಂ ಸಲಕ್ಷ್ಮೀಕಮುವಾಹ ಸಃ ॥ ೩೧ ॥
ಕುತ್ರ ಯಾಮೀತಿ ತೇನೋಕ್ತೇ ವಿಷ್ಣುಸ್ತಮವದದ್ವಚಃ ।
ಸ್ವಗೃಹಂ ನಯ ಮಾಂ ಭದ್ರ ವಿನತಾತೋಷಕಾರಣಾತ್ ॥ ೩೨ ॥
ಇತಿ ಶ್ರುತ್ವಾ ವಚೋ ಹೃದ್ಯಂ ತದಾ ಲಕ್ಷ್ಮೀಪತೇಃ ಶುಭಂ ।
ಖಮುತ್ಪಪಾತ ಗರುಡಃ ಸ್ವಗೃಹಾಭಿಮುಖಂ ಯಯೌ ॥ ೩೩ ॥
ಏತಸ್ಮಿನ್ನಂತರೇ ಶ್ರುತ್ವಾ ವಿನತಾ ತೀವ್ರನಿಸ್ವನಂ ।
ದದೃಶೇ ಪುತ್ರಮಾಯಾಂತಂ ಸಲಕ್ಷ್ಮೀಪತಿಕಂ ಪುರಃ ॥ ೩೪ ॥
ತತೋ ದೃಷ್ಟ್ವಾ ಘನಶ್ಯಾಮಂ ಪೀತಕೌಶೇಯವಾಸಸಂ ।
ಚತುರ್ಬಾಹುಂ ವಿಶಾಲಾಕ್ಷಂ ಶಂಖಚಕ್ರಾದಿಭೂಷಿತಮ್ ॥ ೩೫ ॥
ಪ್ರಸನ್ನವದನಂ ವಿಷ್ಣುಂ ವಾಮಾಂಕಸ್ಥ ಶ್ರಿಯಾ ಯುತಮ್ ।
ಪತಿತ್ವಾ ದಂಡವತ್ ಭೂಮಾವುತ್ಥಾಪ್ಯ ಪ್ರಾಂಜಲಿಃ ಸ್ಥಿತಾ ॥ ೩೬ ॥
ವಿನತಾಮುದ್ಗಲದ್ಬಾಷ್ಪಾಂ ಪ್ರಾಂಜಲೀಂ ಪುರತಃ ಸ್ಥಿತಾಮ್ ।
ಭಗವಾನ್ಪ್ರಾಹ ತೇ ಪುತ್ರೋ ಜೇತಾ ಮೇ ವಿನತೇ ಭವೇತ್ ॥ ೩೭ ॥
ಅಮುನಾ ಮೇ ವರೋ ದತ್ತೋ ಮಯಾಽಯಂ ವಾಹನೇ ವೃತಃ ।
ಗೃಹಾಣೇಮಂ ಸ್ವಪುತ್ರಂ ತ್ವಂ ವಿನತೇ ಮಮ ವಲ್ಲಭಮ್ ॥ ೩೮ ॥

ಭಗವಂತನು ಹೇಳಿದನು—

''ಹೇ ವಿನತೆಯ ಮಗನೇ! ನಿಶ್ಚಯವಾಗಿಯೂ ನೀನು ಜಯವನ್ನು ಗಳಿಸಲು ಬೇಕಾದ ಬಲ

ಮತ್ತು ಪರಾಕ್ರಮವನ್ನು ಹೊಂದಿರುವೆ. ಆದ್ದರಿಂದ ನೀನು ನನ್ನ ಭಾರವನ್ನು ಹೊರುವ ವರವನ್ನು ನಾನು ನಿನ್ನಿಂದ ಪಡೆದಿರುವೆನು. ನೀನು ನಾನು ಹೇಳಿದಂತೆ ಕೇಳುವವನಾಗು'' ಎಂದನು. ಗರುಡನು ವಿಷ್ಣುವಿನ ಆಜ್ಞೆಯನ್ನು ಒಪ್ಪಿ ''ಓಂ'' ಎಂದು ಹೇಳಿ ತನ್ನ ಬೆನ್ನಿನ ಮೇಲೆ ಶ್ರೀಮಹಾಲಕ್ಷ್ಮೀ ಸಮೇತನಾದ ಮಹಾವಿಷ್ಣುವನ್ನು ಹೊತ್ತುಕೊಂಡನು. ॥ ೩೦-೩೧ ॥ ''ಎಲ್ಲಿ ಹೋಗಲಿ?'' ಎಂದು ಗರುಡನು ಪ್ರಶ್ನಿಸಲು ಭಗವಂತನು ಹೇಳಿದನು; ''ಮಂಗಳಕರನೇ! ನಿನ್ನ ಮನೆಗೆ ಕರೆದೊಯ್ಯಿ. ನಿನ್ನಂತಹ ಮಗನನ್ನು ಪಡೆದು ಅವಳು ಜಗತ್ತಿಗೆ ಮಾಡಿರುವ ಉಪಕಾರವನ್ನು ಅವಳಿಗೆ ತಿಳಿಸಲು ಮತ್ತು ವಿನತೆಗೆ ಪ್ರಸನ್ನತೆಯನ್ನುಂಟುಮಾಡಲು ಇದು ಆವಶ್ಯಕವು.'' ॥ ೩೨ ॥ ಲಕ್ಷ್ಮೀಪತಿಯ ಈ ಆಪ್ಯಾಯಮಾನವಾದ ಮಾತನ್ನು ಕೇಳಿದ ಗರುಡನು ಆಕಾಶಕ್ಕೆ ಹಾರಿ ತನ್ನ ಮನೆಯ ಕಡೆ ಹೊರಟನು. ॥ ೩೩ ॥ ಇಷ್ಟರಲ್ಲಿಯೇ ಜೋರಾದ ಶಬ್ದವನ್ನು ಕೇಳಿದ ವಿನತೆಯು ಲಕ್ಷ್ಮೀಪತಿಯನ್ನು ಬೆನ್ನಿನ ಮೇಲೆ ಕೂಡಿಸಿಕೊಂಡು ಬರುತ್ತಿರುವ ತನ್ನ ಮಗನನ್ನು ನೋಡಿದಳು. ॥ ೩೪ ॥ ವಿನತೆಯು ಮೇಘದಂತೆ ನೀಲವರ್ಣದಿಂದ ಕೂಡಿದ, ಹಳದೀ ರೇಶ್ಮೆ ಪೀತಾಂಬರವನ್ನು ಉಟ್ಟಿರುವ, ನಾಲ್ಕು ಬಾಹುಗಳುಳ್ಳ, ವಿಶಾಲವಾದ ಕಣ್ಣುಗಳುಳ್ಳ, ಪ್ರಸನ್ನವಾಗಿರುವ ಮುಖದಿಂದ ಕೂಡಿರುವ, ಎಡತೊಡೆಯ ಮೇಲೆ ಕೂಡಿಸಿಕೊಂಡಿರುವ ಶ್ರೀಲಕ್ಷ್ಮೀದೇವಿಯನ್ನುಳ್ಳ ಮಹಾವಿಷ್ಣುವನ್ನು ನೋಡಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ನಂತರ ಎದ್ದು ಕೈಮುಗಿದು ನಿಂತಳು. ॥ ೩೫-೩೬ ॥ ಆನಂದಬಾಷ್ಪಗಳನ್ನು ಸುರಿಸುತ್ತಾ ಕೈಮುಗಿದು ನಿಂತಿರುವ ಆ ವಿನತೆಯನ್ನು ಕುರಿತು ಭಗವಂತನು ಹೇಳಿದನು. ''ಹೇ ವಿನತೆಯೇ! ನಿನ್ನ ಮಗನು ನನ್ನನ್ನು ಸೋಲಿಸಿದವನು ಆಗಿದ್ದಾನೆ. ॥ ೩೭ ॥ ಇಂದು ಇವನಿಂದ ನನಗೆ ವಾಹನವಾಗುವನೆಂದು ವರವು ಕೊಡಲ್ಪಟ್ಟಿತು. ವಿನತೆಯೇ! ನೀನು ನಿನ್ನ ಮಗನನ್ನು ಸ್ವೀಕರಿಸು. ಇವನು ನನಗೆ ಬಹಳ ಬೇಕಾದವನು.'' ॥ ೩೮ ॥

ವಿನತೋವಾಚ—

ಧನ್ಯಾ ಮಾತಾ ಪಿತಾ ಧನ್ಯೋ ಧನ್ಯಂ ಧನಕುಲಾದಿಕಮ್ ।
ತಸ್ಯ ಯಸ್ಯ ಕುಲೇ ಭಾಗ್ಯೋ ಜಾಯತೇ ವೈಷ್ಣವಸ್ಸುತಃ ॥ ೩೯ ॥
ಅಯಂ ತು ತ್ವಾಂ ಸಪತ್ನೀಕಂ ಪೃಷ್ಠೇನೋವಾಹ ಮತ್ಸುತಃ ।
ಅತೋಽನೇನಾಥ ಭಗವನ್ಪಾವಿತಂ ಕಾಶ್ಯಪಂ ಕುಲಮ್ ॥ ೪೦ ॥
ಯೋಗ್ಯಸ್ವಪುತ್ರವಿರಹಾದ್ಯಶ್ಶೋಕೋ ಮೇಽಪ್ಯಭೂತ್ಪುರಾ ।
ಅದ್ಯ ಯೋಗ್ಯತಮಂ ಪುತ್ರಂ ಜ್ಞಾತ್ವಾ ಸುವಿಲಯಂ ಗತಃ ॥ ೪೧ ॥
ಕಿಮತ್ರ ಕಾರ್ಯಮೇತಸ್ಯ ಸರ್ವದಾಸ್ತು ತವಾಂತಿಕೇ ।
ಉಚ್ಚೈಷ್ಷಭುಗ್ವದ್ದ್ವಾರೇ ಸೇವಾಕಾರೋಽವತಿಷ್ಠತು ॥ ೪೨ ॥
ವಿನತಾಯಾಃ ವಚಃ ಶ್ರುತ್ವಾ ಪ್ರಸನ್ನೋ ಭಗವಾಂಸ್ತದಾ ।
ವೈಕುಂಠಭವನಂ ಯಾತೋ ಗರುಡಾಧಿಷ್ಠಿತೋ ವಿಭುಃ ॥ ೪೩ ॥
ತತ್ರಾಗತ್ಯಾಥ ಭಗವಾನ್ ಗರುಡಂ ಪರಯಾ ಮುದಾ ।
ಸ್ವತೋರಣೇ ಪ್ರತಿಷ್ಠಾಪ್ಯ ಮಂದಿರಂ ಸ್ವಯಮಾವಿಶತ್ ॥ ೪೪ ॥
ನಾನಾಭಕ್ಷೈಶ್ಚ ಭೋಜ್ಯೈಶ್ಚ ವಿಷ್ಣುನಿರ್ಮಾಲ್ಯಧಾರಣೈಃ ।
ಪರಮಾನಂದಮನುಪ್ರಾಪ್ತಸ್ತ್ವಾ ತತ್ರೈವ ಕಾಶ್ಯಪಿಃ ॥ ೪೫ ॥

ಕದಾಚಿದಾಗತಸ್ತತ್ರ ನಾರದೋ ಭಗವತ್ಪ್ರಿಯಃ ।
ಭ್ರಮನ್ಸರ್ವೇಷು ಲೋಕೇಷು ಭಗವದ್ದರ್ಶನೋತ್ಸುಕಃ ॥ ೪೬ ॥
ತಂ ದೃಷ್ಟ್ವಾ ಗರುಡಸ್ತೂರ್ಣಂ ಸಮುತ್ಥಾಯ ನನಾಮ ಚ ।
ನಾರದೋ ಗರುಡಂ ದೃಷ್ಟ್ವಾ ವಚನಂ ಸಮವೋಚತ ॥ ೪೭ ॥

ವಿನತೆಯು ಹೇಳಿದಳು—

"ಇವನ ತಾಯಿಯು ಧನ್ಯಳು, ತಂದೆಯು ಧನ್ಯನು, ಇವನ ಕುಲವು ಮತ್ತು ಸಂಪತ್ತು ಧನ್ಯವಾದುವು. ಯಾರ ಕುಲದಲ್ಲಿ ಭಾಗ್ಯವಂತನಾದ ವಿಷ್ಣುಭಕ್ತನಾದ ಇಂತಹ ಮಗನು ಹುಟ್ಟುವನೋ ಆದೂ ಧನ್ಯವು, ಅವರೂ ಧನ್ಯರು. ॥ ೩೯ ॥ ಇವನಾದರೋ ಹೆಂಡತಿಯಿಂದ ಕೂಡಿದ ನಿನ್ನನ್ನು ಬೆನ್ನಿನ ಮೇಲೆ ಹೊತ್ತಿದ್ದಾನೆ; ಆದ್ದರಿಂದ ಕಶ್ಯಪರ ಕುಲವು ಉದ್ಧೃತವಾಯಿತು. ॥ ೪೦ ॥ ಯೋಗ್ಯನಾದ ಪುತ್ರನು ನನಗೆ ಇಲ್ಲದ್ದರಿಂದ ಯಾವ ದುಃಖವು ಇದ್ದಿತೋ ಅದು ಈಗ ಅತ್ಯಂತ ಯೋಗ್ಯವಾದ ಮಗನಿವನು ಎಂದು ತಿಳಿದು ಮಾಯವಾಯಿತು. ॥ ೪೧ ॥ ಇವನಿಗೆ ಇಲ್ಲಿ ಏನು ಕೆಲಸವಿದೆ? ಯಾವಾಗಲೂ ನಿನ್ನ ಸಮೀಪದಲ್ಲಿಯೇ ಇರಲಿ. ನಿನ್ನ ಸೇವಕನಾಗಿ ನಿನ್ನ ಸಮೀಪದಲ್ಲಿಯೇ ಇದ್ದು ನಿನ್ನ ನೈವೇದ್ಯಶೇಷವನ್ನು ತಿಂದುಕೊಂಡಿರಲಿ." ॥ ೪೨ ॥ ವಿನತೆಯ ಈ ಮಾತನ್ನು ಕೇಳಿದ ಭಗವಂತನು ಗರುಡನ ಮೇಲೆ ಕುಳಿತುಕೊಂಡು ವೈಕುಂಠಲೋಕಕ್ಕೆ ಹೋದನು. ॥ ೪೩ ॥ ಅಲ್ಲಿಗೆ ಬಂದ ಭಗವಂತನು ಗರುಡನನ್ನು ತನ್ನ ಭವನದ ಹೆಬ್ಬಾಗಿಲಿನ ಹತ್ತಿರ ಸಂತಸದಿಂದ ನಿಲ್ಲಿಸಿ, ತನ್ನ ಮಂದಿರವನ್ನು ಪ್ರವೇಶ ಮಾಡಿದನು. ॥ ೪೪ ॥ ಈ ಕಶ್ಯಪರ ಮಗನಾದ ಗರುಡನು ಪರಮಾತ್ಮನಿಗೆ ನಿವೇದಿತವಾಗಿರತಕ್ಕ ನಾನಾಭಕ್ಷ್ಯಭೋಜ್ಯಾದಿಗಳನ್ನು ಭೋಜನ ಮಾಡುತ್ತಾ ಭಗವನ್ನಿರ್ಮಾಲ್ಯವನ್ನು ಕೊರಳಲ್ಲಿ ಧಾರಣೆ ಮಾಡಿಕೊಂಡು, ಪರಮಾನಂದವನ್ನು ಪಡೆದು ಆ ವೈಕುಂಠದಲ್ಲಿಯೇ ಇದ್ದುಬಿಟ್ಟನು. ॥ ೪೫ ॥ ಒಂದಾನೊಂದು ದಿನ ಭಗವಂತನ ಏಕಾಂತಭಕ್ತರಾದ ನಾರದಋಷಿಗಳು ಎಲ್ಲ ಲೋಕಗಳಲ್ಲಿಯೂ ಸಂಚಾರ ಮಾಡಿ ಭಗವಂತನ ದರ್ಶನಕ್ಕಾಗಿ ವೈಕುಂಠಕ್ಕೆಬಂದರು. ॥ ೪೬ ॥ ಅವರನ್ನು ನೋಡಿ ಗರುಡನು ಥಟ್ಟನೆ ಎದ್ದುನಮಸ್ಕರಿಸಿದನು. ಆಗ ರುಡನನ್ನು ನೋಡಿ ನಾರದರು ಹೇಳಿದರು. ॥ ೪೭ ॥

ನಾರದ ಉವಾಚ—

ಗರುತ್ಮನ್ ದುರ್ಬಲಃ ಕಸ್ಮಾತ್ ದೃಶ್ಯಸೇ ಕಾರಣಂ ವದ ।
ವೈಕುಂಠೇ ವಸತಿಸ್ತೇತ್ರ ಕಿಂ ಸುಖಾಯ ನ ಜಾಯತೇ ॥ ೪೮ ॥

ನಾರದರು ಹೇಳಿದರು—

"ಹೇ ಗರುಡನೇ! ಏಕೆ ನೀನು ದುರ್ಬಲನಾಗಿ ಕಾಣುತ್ತೀಯೆ? ವೈಕುಂಠದಲ್ಲಿನ ವಾಸವು ನಿನಗೆ ಸುಖಮಯವಾಗಿಲ್ಲವೇ?" ॥ ೪೮ ॥

ಗರುಡ ಉವಾಚ—

ಸುಖಂ ತಿಷ್ಠಾಮಿ ಭಗವದ್ದರ್ಶನೇನ ಭವಾದೃಶಾಮ್ ।
ವಿಷ್ಣುನಿರ್ಮಾಲ್ಯಲಾಭೇನ ಕೃತಾರ್ಥೋಽಹಂ ನ ಸಂಶಯಃ ॥ ೪೯ ॥

ಗರುಡನು ಹೇಳಿದನು—

"ಎಲೈ ಪೂಜ್ಯರೇ! ನಿಮ್ಮಂತಹವರ ದರ್ಶನಲಾಭದಿಂದ ನಾನು ಬಹುಸುಖವಾಗಿದ್ದೇನೆ. ವಿಷ್ಣುವಿಗೆ ನಿವೇದಿತವಾದವುಗಳನ್ನು ಭುಂಜಿಸಿ ಕೃತಾರ್ಥನಾಗಿದ್ದೇನೆ. ಈ ವಿಷಯದಲ್ಲಿ ಸಂಶಯವು ಬೇಡ." ॥ ೪೯ ॥

ನಾರದ ಉವಾಚ—

ಭೂಮಂಡಲಾದಹಂ ಯಾತಸ್ತತ್ರೈಕಂ ದೃಷ್ಟಮದ್ಭುತಂ ।
ಸರ್ವಲೋಕಾಸ್ತವ ಭ್ರಾತೄನ್ ಪೂಜಯಂತಿ ಫಣೇಶ್ವರಾನ್ ॥ ೫೦ ॥
ಅಪದಾ ಅಪಿ ಪೂಜ್ಯಂತೇ ಹ್ಯಶ್ರುತಾಃ ಫಣಿನಃ ಕಥಮ್ ।
ತವ ಪೂಜಾಂ ನ ಕುರ್ವಂತಿ ಕಾರಣಂ ತತ್ರ ಕಿಂ ವದ ॥ ೫೧ ॥

ನಾರದರು ಹೇಳಿದರು—

ಭೂಮಂಡಲದಿಂದ ಬರುತ್ತಿರುವ ನಾನು, ಅಲ್ಲಿ ಒಂದು ಅದ್ಭುತವನ್ನು ನೋಡಿದೆನು. ಎಲ್ಲ ಜನರೂ ನಿನ್ನ ಅಣ್ಣತಮ್ಮಂದಿರಾದ ಫಣೆಯುಳ್ಳ ನಾಗಗಳನ್ನು ಪೂಜಿಸುವರು. ॥ ೫೦ ॥ ಕಾಲು ಮತ್ತು ಕಿವಿಗಳಿಲ್ಲದಿದ್ದರೂ ನಾಗಗಳನ್ನು ಏಕೆ ಪೂಜಿಸುತ್ತಾರೆ? ನಿನ್ನ ಪೂಜೆಯನ್ನು ಯಾರೂ ಮಾಡುವುದೇ ಇಲ್ಲ. ಏನು ಕಾರಣ? ಅದನ್ನು ಹೇಳು. ॥ ೫೧ ॥

ಗರುಡ ಉವಾಚ—

ಅಕೃತೋಪದ್ರವಂ ಕಂಚಿತ್ ಮಹಾನಪಿ ನ ಪೂಜ್ಯತೇ ।
ಅತ್ರೇದಮೇವ ಜಾನೀಹ ಕಾರಣಂ ಮುನಿಪುಂಗವ ॥ ೫೨ ॥

ಗರುಡನು ಹೇಳಿದನು—

"ಬಾಧೆಯನ್ನುಂಟುಮಾಡದಿರುವ ಯಾವುದನ್ನು ದೊಡ್ಡವರು ಕೂಡಾ ಪೂಜಿಸುವುದಿಲ್ಲ. ಇಲ್ಲಿ ಇದೇ ಕಾರಣವೆಂದು ಮುನಿಶ್ರೇಷ್ಠರಾದ ತಾವು ತಿಳಿಯಿರಿ." ॥ ೫೨ ॥

ನಾರದ ಉವಾಚ—

ತವ ಭಾಗೋಽಪಿ ತತ್ರೈವ ದೀಯತೇ ಸಕಲೈರ್ಜನೈಃ ।
ಭ್ರಾತೃಭ್ಯೋ ಯತ್ತ್ವದೈರ್ದತ್ತಂ ಸರ್ವೇಷಾಂ ತತ್ಸಮಂ ಯತಃ ॥ ೫೩ ॥

ನಾರದರು ಹೇಳಿದರು—

"ಎಲ್ಲರಿಂದಲೂ ನಿನ್ನ ಭಾಗವೂ ಕೂಡ ಆ ನಾಗಗಳಿಗೇ ಕೊಡಲ್ಪಡುತ್ತಿದೆ. ಬೇರೆಯವರಿಂದ ಕೊಡಲ್ಪಡತಕ್ಕವುಗಳೆಲ್ಲ ಎಲ್ಲ ಅಣ್ಣತಮ್ಮಂದಿರಿಗೂ ಸಮವಾಗಿ ಹಂಚಲ್ಪಡಬೇಕು." ॥ ೫೩ ॥

ಗರುಡ ಉವಾಚ—

ಮಮ ಭಾಗಂ ನ ಯಚ್ಛಂತಿ ಕಸ್ಮಾದ್ಗೃಣ್ಹಂತಿ ಭೋಗಿನಃ ।
ಗಚ್ಛಾಮಿ ಭೂತಲಂ ಶೀಘ್ರಂ ಭಾಗಂ ಗೃಹ್ಣಾಮಿ ತಂ ಮುನೇ ॥ ೫೪ ॥

ಇತ್ಯುಕ್ತ್ವಾ ಗರುಡಃ ಶೀಘ್ರಂ ಗತ್ವಾ ಪನ್ನಗಸನ್ನಿಧಿಮ್ ।
ಸ್ವೀಯಂ ಭಾಗಂ ಯಯಾಚೇ ತಾಂಸ್ತೇಽಪಿ ತಸ್ಮೈ ದದುರ್ಧೃತಮ್ ॥ ೫೫ ॥
ತತ್ರೈಕಃ ಕಾಲಿಯೋ ನಾಗೋ ನ ದದೌ ಬಲವತ್ತರಃ ।
ಯುಯುಧೇ ಗರುಡಸ್ತೇನ ಪರಾಜಿತ್ಯ ಬಬಂಧ ತಮ್ ॥ ೫೬ ॥
ತತಶ್ಛಲೇನ ನಿಷ್ಕ್ರಮ್ಯ ಕಾಲಿಯೋಽಸೌ ಪಲಾಯಿತಃ ।
ಯಾತಃ ಪ್ರಯಾಗಯಮುನಾಹ್ರದೇ ಲೀನೋ ವ್ಯತಿಷ್ಠತ ॥ ೫೭ ॥
ಅದೃಷ್ಟ್ವಾ ಕಾಲಿಯಂ ಪಶ್ಚಾದ್ಗರುಡೋಽನ್ವಿಷ್ಯ ತಂ ಬಹು ।
ತೀರ್ಥರಾಜಾಶ್ರಿತಂ ಜ್ಞಾತ್ವಾ ಜಗಾಮ ಹರಿಸನ್ನಿಧಿಮ್ ॥ ೫೮ ॥
ತದಾರಭ್ಯ ಪ್ರಸಿದ್ಧೋಽಯಂ ಪ್ರಯಾಗೇ ಕಾಲಿಯೋ ಹ್ರದಃ ।
ಉಕ್ತಮೇತಸ್ಯ ಮಾಹಾತ್ಮ್ಯಂ ತೀರ್ಥಾಂತರಮಥೋಚ್ಯತೇ ॥ ೫೯ ॥

॥ ಇತಿ ತ್ರ್ಯಶೀತಿತಮೋಽಧ್ಯಾಯಃ ॥

**ಗರುಡನು ಹೇಳಿದನು—**

''ನನ್ನ ಭಾಗವನ್ನು ನನಗೆ ಕೊಡದೇ ನಾಗಗಳೇ ಏತಕ್ಕಾಗಿ ಎಲ್ಲವನ್ನೂ ತೆಗೆದುಕೊಳ್ಳುತ್ತಾರೆ? ಜಾಗ್ರತೆ ಭೂಲೋಕಕ್ಕೆ ಹೋಗಿ ನನ್ನ ಭಾಗವನ್ನು ನಾನು ತೆಗೆದುಕೊಳ್ಳುವೆನು.'' ॥ ೫೪ ॥ ಎಂದು ಹೇಳಿ ಶೀಘ್ರವಾಗಿ ಗರುಡನು ನಾಗಗಳ ಸಮೀಪಕ್ಕೆ ಬಂದು ಅವುಗಳನ್ನು ತನ್ನ ಭಾಗಕ್ಕಾಗಿ ಕೇಳಿದನು. ಅವುಗಳು ಭಾಗವನ್ನು ಅವನಿಗೆ ಕೊಟ್ಟವು. ॥ ೫೫ ॥ ಆದರೆ, ಬಲಿಷ್ಠವಾದ ''ಕಾಲಿಯ''ವೆಂಬ ನಾಗನು ಗರುಡನ ಭಾಗವನ್ನು ಕೊಡಲಿಲ್ಲ. ಗರುಡನು ಅವನೊಡನೆ ಹೋರಾಡಿ ಅವನನ್ನು ಬಂಧಿಸಿದನು. ॥ ೫೬ ॥ ಕಾಲಿಯನು ಹೇಗೋ ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಪ್ರಯಾಗದ ಯಮುನೆಯ ಹ್ರದದಲ್ಲಿ ಅವಿತುಕೊಂಡನು. ॥ ೫೭ ॥ ಕಾಲಿಯನಾಗನನ್ನು ಕಾಣದೆ ಗರುಡನು ಅವನಿಗಾಗಿ ಹುಡುಕಿದನು. ಕಡೆಗೆ ಅವನು ತೀರ್ಥರಾಜನ ಆಶ್ರಯದಲ್ಲಿರುವುದನ್ನು ಅರಿತು ವೈಕುಂಠಕ್ಕೆ ಬಂದನು. ॥ ೫೮ ॥ ಅಲ್ಲಿಂದ ಪ್ರಾರಂಭವಾಗಿ ಈ ಹ್ರದವು ಉತ್ತಮವಾದ ಪ್ರಯಾಗದಲ್ಲಿ ಕಾಲಿಯಮಡುವೆಂದು ಪ್ರಸಿದ್ಧವಾಗಿದೆ. ಈ ರೀತಿಯಾಗಿ ಈ ಕಾಲಿಯಮಡುವಿನ ಮಾಹಾತ್ಮ್ಯೆಯನ್ನು ಹೇಳಿದ್ದಾಯಿತು. ಇನ್ನು ಬೇರೆ ತೀರ್ಥಗಳ ಬಗ್ಗೆ ಹೇಳುವೆನು. ॥ ೫೯ ॥

॥ ಎಂಬತ್ತಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಚತುರಾಶೀತಿತಮೋಽಧ್ಯಾಯಃ ॥ ೮೪ ॥

ಶೇಷ ಉವಾಚ—

ತಸ್ಯಾಪಿ ಪಶ್ಚಿಮೇ ಪ್ರಾಂತೇ ಚಕ್ರತೀರ್ಥಂ ಮನೋರಮಮ್ ।
ಸರ್ವಬಾಧಾಪ್ರಶಮನಂ ಸರ್ವಾರಿಷ್ಟನಿವಾರಣಮ್ ॥ ೧ ॥
ಗತ್ವಾ ಪರಮಯಾ ಭಕ್ತ್ಯಾ ತತ್ರ ಯಃ ಸ್ನಾತಿ ಮಾನವಃ ।
ಚಕ್ರದಿವ್ಯವಪುರ್ಭೂತ್ವಾ ಸ ಗಚ್ಛೇದ್ವೈಷ್ಣವಂ ಪದಮ್ ॥ ೨ ॥
ಯತ್ಕಿಂಚಿತ್ಸುಕೃತಂ ತತ್ರ ದಾನಹೋಮಜಪಾದಿಕಮ್ ।
ಯಃ ಕರೋತಿ ಸ ಧರ್ಮಾತ್ಮಾ ವಾಂಛಿತಂ ಲಭತೇ ಫಲಮ್ ॥ ೩ ॥
ಸುದರ್ಶನಸ್ಯ ಮಂತ್ರಸ್ಯ ಯಃ ಕುರ್ಯಾತ್ತತ್ರ ವೈ ಜಪಂ ।
ತಸ್ಯಾಧೀನಂ ಭವೇಚ್ಚಕ್ರಂ ಸರ್ವಕಾರ್ಯಾರ್ಥಸಾಧಕಮ್ ॥ ೪ ॥
ತತ್ಪಶ್ಚಿಮೇ ಪರತೀರ್ಥಂ ಪ್ರಸಿದ್ಧಂ ಸಿಂಧುಸಾಗರಮ್ ।
ಸರ್ವಾಘನಾಶನಂ ಪುಣ್ಯಂ ವರ್ತತೇ ಸನಕಾದಯಃ ॥ ೫ ॥
ತತ್ರ ಯೇ ಸ್ನಾಂತಿ ಮನುಜಾಃ ಸಿಂಧುಸಾಗರಸಂಗಮೇ ।
ತೇ ವಿಧ್ವಸ್ತಾಖಿಲಾಘೌಘಾಃ ಯಾಂತಿ ವಿಷ್ಣೋಃ ಪರಂ ಪದಮ್ ॥ ೬ ॥
ಯತ್ಕಿಂಚಿದಪಿ ಸತ್ಕರ್ಮ ತತ್ರ ಯತ್ಕ್ರಿಯತೇ ನರೈಃ ।
ತತ್ತೀರ್ಥಸ್ಯ ಪ್ರಭಾವೇನ ತತ್ಸಾಗರ ಇವೈಧತೇ ॥ ೭ ॥
ತದುತ್ತರೇ ಪರಂ ತೀರ್ಥಂ ಪಾಂಡವೈರ್ಯದಧಿಷ್ಠಿತಮ್ ।
ಪಂಚಾನಾಂ ಸುಖದಂ ಯಸ್ಮಾತ್ತಸ್ಮಾತ್ತತ್ಪಂಚಪಾಂಡವಮ್ ॥ ೮ ॥
ಪಂಚಾಪಿ ಪಾಂಡವಸ್ತತ್ರ ಚಕ್ರಿರೇ ಸ್ವಾಶ್ರಮಂ ಮುದಾ ।
ತತ್ತೀರ್ಥಸ್ಯ ಪ್ರಭಾವೇನ ಲೇಭಿರೇ ಸ್ವಮನೋಗತಮ್ ॥ ೯ ॥
ರಾಜ್ಯಂ ಪ್ರಾಪ್ತಂ ಯಶೋ ಜಾತಂ ರಿಪೂಣಾಂ ಮರಣಂ ತಥಾ ।
ಕೃಷ್ಣಸ್ಯ ದರ್ಶನಂ ನಿತ್ಯಂ ಕ್ಷೇತ್ರಸ್ಯಾಸ್ಯ ಪ್ರಭಾವತಃ ॥ ೧೦ ॥
ಸ್ನಾತ್ವಾ ಪಾಂಡವಕೂಪೇ ಯೇ ಸಂಸ್ಥಿತಾ ಪಾಂಡವೈಃ ಸಹ ।
ಗೋವಿಂದಸ್ಮರಣಂ ಭಕ್ತ್ಯಾ ಕುರ್ವಂತ್ಯೇತೇಽಚ್ಯುತಪ್ರಿಯಾಃ ॥ ೧೧ ॥
ಸ್ನಾನದಾನಾದಿಕಂ ಯೇತ್ರ ಯತ್ಕಿಂಚಿದಪಿ ಕುರ್ವತೇ ।
ಪೂಜನಂ ಪಾಂಡವಾನಾಂ ಚ ತತ್ತೇಷಾಮಕ್ಷಯಂ ಭವೇತ್ ॥ ೧೨ ॥
ತದುತ್ತರೇಽಸ್ತಿ ವರುಣಸ್ಯಾಶ್ರಮಃ ಪ್ರಾಗುದಾಹೃತಃ ।
ಋಷಿಸಿದ್ಧಸುರೈರ್ಜುಷ್ಟಸ್ಸರ್ವಕಾಮಫಲಪ್ರದಃ ॥ ೧೩ ॥
ಸ್ನಾತ್ವಾ ವೈ ವಾರುಣೇ ಕುಂಡೇ ವರುಣಂ ಪೂಜಯಂತಿ ಯೇ ।
ದಾನಂ ಚ ಕುರ್ವತೇ ಭಕ್ತ್ಯಾ ಲಭಂತೇ ತೇ ಮನೋಗತಮ್ ॥ ೧೪ ॥

ಋಷೀಣಾಮಾಶ್ರಮಾಃ ಪುಣ್ಯಾ ಬಹವಸ್ತತ್ರ ಸಂತಿ ವೈ ।
ತೇಷಾಂ ಪ್ರಾಧಾನಿಕಾನಕ್ಷ್ಯೇ ಪುಣ್ಯಾನ್ಯೇಕೇಷಾಂಚಿದಾಶ್ರಮಾನ್ ॥ ೧೫ ॥
ವರುಣಸ್ಯೋತ್ತರೇ ಭಾಗೇ ವರ್ತತೇ ಕಶ್ಯಪಾಶ್ರಮಃ ।
ನಾನಾವೃಕ್ಷಲತಾಕೀರ್ಣೋ ದರ್ಶನಾನಂದವರ್ಧನಃ ॥ ೧೬ ॥
ಕಶ್ಯಪೋಽತ್ರ ತಪಸ್ತೇಪೇ ಸೃಷ್ಟಿಕಾಮಃ ಪುರಾನಘಃ ।
ತತ್ಪ್ರಭಾವಾಚ್ಚಕಾರಾಸೌ ತತಃ ಸೃಷ್ಟಿಂ ಚ ಕಾಶ್ಯಪೀಮ್ ॥ ೧೭ ॥
ತತ್ರ ಗತ್ವಾತು ಯೇ ಲೋಕಾ ಪೂಜಯಂತಿ ಚ ಕಶ್ಯಪಮ್ ।
ಅವಿಚ್ಛಿನ್ನಾ ಭವೇತ್ತೇಷಾಂ ಪುತ್ರಪೌತ್ರಾದಿಸಂತತಿಃ ॥ ೧೮ ॥
ಏಕರಾತ್ರಂ ದ್ವಿರಾತ್ರಂ ವಾ ತ್ರಿರಾತ್ರಂ ವಾಪಿ ಯೇ ನರಾಃ ।
ತತ್ರವಾಸಂ ಪ್ರಕುರ್ವಂತಿ ಸಿದ್ಧಯಸ್ತತ್ಕರೇ ಸ್ಥಿತಾಃ ॥ ೧೯ ॥
ಸಿದ್ಧಿದಶ್ಚಾಶ್ರಮೋಽಸ್ಯತ್ರೇರವಿದೂರೇ ತದುತ್ತರೇ ।
ಯತ್ರಾನಸೂಯಯಾ ಸಾರ್ಧಂ ವರ್ತತೇಽತ್ರಿಃ ಸ್ವಭಾರ್ಯಯಾ ॥ ೨೦ ॥
ಪುರಾ ತತ್ರ ತಪಸ್ತೇಪೇ ಸುಚಿರಂ ಪುತ್ರಕಾಮ್ಯಯಾ ।
ತುಷ್ಟೇಭ್ಯೋ ಮಾಧವಾದಿಭ್ಯೋ ದತ್ತಾದೀನಾಪ ಸತ್ಸುತಾನ್ ॥ ೨೧ ॥
ಅತಸ್ತದಾಶ್ರಮೇ ಯಸ್ತು ಪುತ್ರಮಿಚ್ಛುಸ್ತಪಶ್ಚರೇತ್ ।
ಅಚಿರಾತ್ತತ್ಪ್ರಸಾದೇನ ಸತ್ಪುತ್ರತ್ವಮವಾಪ್ನುಯಾತ್ ॥ ೨೨ ॥
ಯೋ ನರಃ ಪೂಜಯೇದತ್ರಿಂ ಸಾನುಸೂಯಂ ಯಥಾವಿಧಿ ।
ದದ್ಯಾಚ್ಚ ತತ್ರ ಯತ್ಕಿಂಚಿತ್ ಸೋಽಪಿ ಸ್ವೇಷ್ಟಮವಾಪ್ನುಯಾತ್ ॥ ೨೩ ॥
ತದುತ್ತರೇಽತಿರಮ್ಯೋಽಸ್ತಿ ಭಾರದ್ವಾಜಾಶ್ರಮೋ ಮಹಾನ್ ।
ತಪಸ್ತಪ್ತ್ವಾ ಪುರಾ ಯತ್ರ ಪರಂ ಸಿದ್ಧಿಮವಾಪ್ತವಾನ್ ॥ ೨೪ ॥
ಪ್ರಾಗಾಸೀತ್ಸಕಲರ್ಷಿಭ್ಯೋ ಭರದ್ವಾಜಾಶ್ರಮೋಽನಘಾಃ ।
ಸಮಾಯಾತಾಸ್ತತಶ್ಚಾನ್ಯೇ ಋಷಯಃ ಕಶ್ಯಪಾದಯಃ ॥ ೨೫ ॥
ಭರದ್ವಾಜೇಶ್ವರಸ್ತತ್ರ ಸ್ಥಾಪಿತೋ ಮುನಿನಾಽಮುನಾ ।
ತಯೋರ್ದರ್ಶನಮಾತ್ರೇಣ ಕಲ್ಪಿತಂ ಜಾಯತೇ ಫಲಮ್ ॥ ೨೬ ॥
ಪೂಜಯೇದ್ಭಕ್ತಿಮಾನ್ಯಸ್ತು ಭಾರದ್ವಾಜಂ ಮಹೇಶ್ವರಂ ।
ಸರ್ವಾನ್ಕಾಮಾನವಾಪ್ನೋತಿ ಭರದ್ವಾಜಪ್ರಸಾದತಃ ॥ ೨೭ ॥
ಪ್ರಯಾಗಮಾಗತೋ ಯಸ್ತು ಭಾರದ್ವಾಜಂ ನ ಗಚ್ಛತಿ ।
ತಸ್ಯ ಯಾತ್ರಾಫಲಂ ಶೂನ್ಯಂ ಜಾಯತೇ ನಾತ್ರ ಸಂಶಯಃ ॥ ೨೮ ॥
ತ್ರಿರಾತ್ರಮೇಕರಾತ್ರಂ ವಾ ತತ್ರ ವಾಸಂ ಕರೋತಿ ಯಃ ।
ಜಪಾದಿನಿರತೋ ಭಕ್ತ್ಯಾ ಕಾಮಾನಾಪ್ನೋತಿ ಪುಷ್ಕಲಾನ್ ॥ ೨೯ ॥

ತಸ್ಯೋತ್ತರೇಽಸ್ತಿ ವಿಪ್ರೇಂದ್ರಾ ಸೀತಾರಾಮಾಶ್ರಮೋ ಮಹಾನ್ ।
ಯಸ್ಯ ದರ್ಶನಮಾತ್ರೇಣ ಜಾಯತೇ ರಾಮ ವಲ್ಲಭಃ ॥ ೩೦ ॥
ಯದಾ ದಾಶರಥೋ ರಾಮೋ ಸೀತಾಲಕ್ಷ್ಮಣಸಂಯುತಃ ।
ಪ್ರವೇಷ್ಟುಂ ದಂಡಕಾನ್ಯಗ್ರೇ ಸಾಕೇತಾದ್ಗುರ್ವನುಜ್ಞಯಾ ॥ ೩೧ ॥
ತದಾಗತ್ಯಾತ್ರ ವೈ ರಾಮೋ ಭರದ್ವಾಜಸ್ಯ ಸನ್ನಿಧೌ ।
ಸ್ಥಿತ್ವಾ ತದಾಜ್ಞಯಾ ಪಶ್ಚಾಚ್ಚಿತ್ರಕೂಟಗಿರಿಂ ಗತಃ ॥ ೩೨ ॥
ತದಾರಭ್ಯಾತ್ರ ವೈ ವಿಖ್ಯಾತಃ ಸೀತಾರಾಮಾಶ್ರಮಃ ಕಿಲ ।
ಕಾಮಿತಾರ್ಥಪ್ರದಃ ಪುಂಸಾಂ ಸರ್ವಪಾಪವಿನಾಶಕೃತ್ ॥ ೩೩ ॥
ತತ್ರ ಗತ್ವಾ ಚ ಯೇ ರಾಮಂ ಸೀತಾಲಕ್ಷ್ಮಣಸಂಯುತಂ ।
ಪೂಜಯಂತಿ ನರಾ ನಾರ್ಯೋ ಯಾಂತಿ ತೇ ರಾಮಸನ್ನಿಧಿಂ ॥ ೩೪ ॥
ವಿಶ್ವಾಮಿತ್ರಾಶ್ರಮಸ್ತಸ್ಯಾಪ್ಯುತ್ತರೇ ವರ್ತತೇ ಮಹಾನ್ ।
ತಸ್ಮಿನ್ನಮನಮಾತ್ರೇಣ ಪಾಪಂ ನಶ್ಯತಿ ತತ್‌ಕ್ಷಣಾತ್ ॥ ೩೫ ॥
ಯೇಽರ್ಚಯಂತಿ ನರಾ ಭಕ್ತ್ಯಾ ವಿಶ್ವಾಮಿತ್ರಂ ಮಹಾಮುನಿಂ ।
ಸರ್ವಾನ್ಕಾಮಾನವಾಪ್ಯಾಂತೇ ಬ್ರಹ್ಮಲೋಕಂ ವ್ರಜಂತಿ ತೇ ॥ ೩೬ ॥
ತತ್ರಾಚರಂತಿ ಗಾಯತ್ರ್ಯಾಃ ಪುರಶ್ಚರಣಮುತ್ತಮಮ್ ।
ಯೇ ತೇ ಪಾಪವಿನಿರ್ಮುಕ್ತಾಃ ಪ್ರಯಾಂತಿ ಬ್ರಹ್ಮಣಃ ಪದಮ್ ॥ ೩೭ ॥
ತಸ್ಯಾಪ್ಯುತ್ತರತಃ ಕುಂಡಂ ವರ್ತತೇ ಗೌತಮಾಶ್ರಮಃ ।
ಸಾಹಲ್ಯಸ್ತಿಷ್ಠತೇ ಯತ್ರ ಗೌತಮೋಽಖಿಲಕರ್ಮಕೃತ್ ॥ ೩೮ ॥
ತಂ ನಮಸ್ಯಂತಿ ಯೇ ಲೋಕಾಃ ಪೂಜಯಂತಿ ಸ್ತುವಂತಿ ಚ ।
ಗೌತಮಸ್ಯ ಪ್ರಸಾದಾತ್ತೇ ಯಾಸ್ಯಂತಿ ಗತಿಮುತ್ತಮಾಮ್ ॥ ೩೯ ॥
ತಸ್ಯೋದಗಾಶ್ರಮಶ್ಚಾಸ್ತಿ ಜಮದಗ್ನೇರ್ಮಹಾಮುನೇಃ ।
ರೇಣುಕಾಸಹಿತೋ ಯತ್ರ ಜಮದಗ್ನಿರ್ವಿರಾಜತೇ ॥ ೪೦ ॥
ತಂ ಪೂಜಯಂತಿ ಯೇ ಲೋಕಾ ಭಕ್ತ್ಯಾ ನಾನೋಪಸಾಧನೈಃ ।
ಪ್ರಸನ್ನೋ ಜಾಯತೇ ತೇಷಾಂ ಜಮದಗ್ನಿಃ ಸರೇಣುಕಃ ॥ ೪೧ ॥
ತತ್ರವಾಸಾಜ್ಜಪಾದ್ದಾನಾನ್ನಮನಾತ್ಪೂಜನಾದಪಿ ।
ಲಭಂತೇ ವಾಂಛಿತಂ ಲೋಕಾ ಇಹಾಮುತ್ರಚ ನಿಶ್ಚಿತಮ್ ॥ ೪೨ ॥
ವಶಿಷ್ಠಸ್ಯಾಶ್ರಮಃ ಪುಣ್ಯಸ್ತಸ್ಯಾಪ್ಯುತ್ತರತೋ ಮಹಾನ್ ।
ಅಸ್ತಿ ಯತ್ರ ಸಪತ್ನೀಕೋ ವಸಿಷ್ಠೋ ಮುನಿಸತ್ತಮಃ ॥ ೪೩ ॥
ತತ್ರ ಗತ್ವಾ ಚ ಯೇ ಲೋಕಾ ಏಕದ್ವಿತ್ರಿದಿನೋಷಿತಾಃ ।
ನಮಂತಿ ಪೂಜಯಂತ್ಯೇನಂ ಜೀವನ್ಮುಕ್ತಾ ಭವಂತಿ ತೇ ॥ ೪೪ ॥

ಯತ್ಕಿಂಚಿತ್ಸುಕೃತಂ ತತ್ರ ಕೃತಮಣ್ವಪಿ ಭಕ್ತಿತಃ ।
ಸ್ನಾನದಾನಜಪಾರ್ಚಾದಿ ತದಾನಂತ್ಯಾಯ ಕಲ್ಪತೇ ॥ ೪೫ ॥
ವರುಣಾಶ್ರಮಮಾರಭ್ಯ ಯಾವದ್ವಾಯವ್ಯಮಂಡಲಂ ।
ಋಷೀಣಾಮಪರೇಷ ಚ ಸಂತ್ಯಷ್ಟಾಶೀತಿರಾಶ್ರಮಾಃ ॥ ೪೬ ॥
ಭಿನ್ನಶೋ ವರ್ಣನೇ ತೇಷಾಂ ಕಃ ಕಲ್ಪಃ ಸನಕಾದಯಃ ।
ನಮಸ್ಕುರ್ಯಾದತಸ್ತೇಭ್ಯೋ ಭಕ್ತಿಮಾನ್ಯಾತ್ರಿಕೋ ನರಃ ॥ ೪೭ ॥
ಏವಂ ಪಶ್ಚಿಮತೀರ್ಥಾನಿ ಕಥಿತಾನಿ ಯಥಾಮತಿ ।
ವಕ್ಷ್ಯೇಽಥೋತ್ತರತೀರ್ಥಾನಿ ಶೃಣುಧ್ವಮವಧಾನತಃ ॥ ೪೮ ॥

॥ ಇತಿ ಚತುರಾಶೀತಿತಮೋಽಧ್ಯಾಯಃ ॥

## ॥ ಎಂಬತ್ತನಾಲ್ಕನೆಯ ಅಧ್ಯಾಯವು ॥

**ಶೇಷದೇವರು ಹೇಳಿದರು—**

ಈ ಕಾಲೀಯತೀರ್ಥದ ಪಶ್ಚಿಮಭಾಗದಲ್ಲಿ ಎಲ್ಲ ಕಷ್ಟಗಳನ್ನು ನಿವಾರಣೆ ಮಾಡತಕ್ಕ ಮತ್ತು ಎಲ್ಲ ಅನಿಷ್ಟಗಳನ್ನು ಹೋಗಲಾಡಿಸತಕ್ಕ ಮನೋಹರವಾದ ಚಕ್ರತೀರ್ಥವಿದೆ. ॥ ೧ ॥ ಈ ಪ್ರಾಂತ್ಯಕ್ಕೆ ಹೋಗಿ ಯಾರು ಪರಮಭಕ್ತಿಯಿಂದ ಸ್ನಾನ ಮಾಡುವರೋ ಅವರು ಸುದರ್ಶನಚಕ್ರದಂತೆ ಪ್ರಕಾಶಮಾನವಾದ ದೇಹವನ್ನು ಪಡೆದು ವೈಕುಂಠಕ್ಕೆ ಪ್ರಯಾಣ ಮಾಡುವರು. ॥ ೨ ॥ ಧರ್ಮಾತ್ಮರಾದ ಯಾರೇ ಆಗಲೀ ಅಲ್ಲಿ ದಾನ, ತಪಸ್ಸು, ಹೋಮ ಮತ್ತು ಜಪಾದಿ ಸಾತ್ವಿಕಕಾರ್ಯಗಳನ್ನು ಮಾಡಿದರೆ ಅಪೇಕ್ಷಿತಫಲಗಳನ್ನೆಲ್ಲಾ ಹೊಂದುವರು. ॥ ೩ ॥ ಅಲ್ಲಿ ಸುದರ್ಶನಚಕ್ರಮಂತ್ರವನ್ನು ಯಾರು ಜಪಿಸುತ್ತಾರೋ ಅವರಿಗೆ ಎಲ್ಲ ಕೆಲಸಗಳನ್ನು ಸಾಧಿಸಬಲ್ಲ ಸುದರ್ಶನಚಕ್ರವು ಅಧೀನವಾಗುವುದು. ॥ ೪ ॥ ಈ ತೀರ್ಥದ ಪಶ್ಚಿಮದಲ್ಲಿ ಅತ್ಯುತ್ತಮವಾದ ಪ್ರಸಿದ್ಧವಾದ ''ಸಿಂಧುಸಾಗರಸಂಗಮ'' ತೀರ್ಥವಿದೆ. ಹೇ ಸನಕಾದಿಗಳಾ! ಈ ತೀರ್ಥವು ಎಲ್ಲ ಪಾಪಗಳನ್ನು ಪರಿಹರಿಸತಕ್ಕದ್ದು ಮತ್ತು ಪುಣ್ಯಕರವಾದದ್ದು. ಇದರಲ್ಲಿ ಯಾರು ಸ್ನಾನ ಮಾಡುವರೋ ಅವರ ಪಾಪಗಳೆಲ್ಲಾ ಪರಿಹಾರವಾಗಿ ಅವರು ವಿಷ್ಣುಲೋಕಕ್ಕೆ ಹೋಗುವರು. ॥ ೫-೬ ॥ ಇಲ್ಲಿ ಮಾಡಿದ ಯಾವ ಕಾರ್ಯವಾಗಲೀ ಅವು ಈ ತೀರ್ಥದ ಪ್ರಭಾವದಿಂದ ಸಾಗರದಷ್ಟು ಪುಣ್ಯಪ್ರದವಾಗಿ ಬೆಳೆಯುವುದು. ॥ ೭ ॥ ಇದಕ್ಕೆ ಉತ್ತರದಲ್ಲಿ ಪಂಚಪಾಂಡವತೀರ್ಥವಿದೆ. ಇದೂ ಉತ್ತಮವಾದ ತೀರ್ಥವು. ಇದರ ದಡದಲ್ಲಿ ಪಂಚಪಾಂಡವರು ವಾಸಮಾಡಿದ್ದರು. ಇದು ಅತ್ಯಂತ ಸುಖವನ್ನು ಕೊಡತಕ್ಕದ್ದು. ಇದರ ಪ್ರಭಾವದಿಂದ ಅವರ ಮನೋರಥಗಳೆಲ್ಲ ಈಡೇರಿ ಶತ್ರುಗಳೂ ನಾಶವಾಗಿ, ರಾಜ್ಯವನ್ನು ಪಡೆದರು. ಈ ಕ್ಷೇತ್ರದ ಪ್ರಭಾವದಿಂದ ಅವರಿಗೆ ನಿತ್ಯವೂ ಶ್ರೀಕೃಷ್ಣನ ದರ್ಶನವು ಲಭ್ಯವಾಗುತ್ತಿತ್ತು. ಇಲ್ಲಿ ಪಾಂಡವರ ಜೊತೆಯಲ್ಲಿದ್ದು ಈ ತೀರ್ಥದಲ್ಲಿ ಸ್ನಾನ ಮಾಡಿದವರು ಅಚ್ಯುತನಿಗೆ ಪ್ರಿಯರಾಗುವರು. ॥ ೮-೧೧ ॥ ಇಲ್ಲಿ ಯಾರು ಸ್ನಾನ ಮತ್ತು ದಾನಾದಿಸತ್ಕಾರ್ಯಗಳನ್ನು ಮಾಡಿ ಪಂಚಪಾಂಡವರ ಪೂಜೆಯನ್ನು ಮಾಡುವರೋ ಅವರ ಕಾರ್ಯಗಳಿಗೆ ಅಕ್ಷಯಫಲಗಳು ಲಭಿಸುವುವು. ॥ ೧೨ ॥ ಇದಕ್ಕೆ ಉತ್ತರದಲ್ಲಿ ಮೊದಲೇ ವರ್ಣಿಸಿರತಕ್ಕ ''ವರುಣಾಶ್ರಮವು'' ಇದೆ. ಇದು ಋಷಿಸಿದ್ಧರುಗಳಿಂದ ತುಂಬಿದೆ. ಇದು ಎಲ್ಲರ

ಅಪೇಕ್ಷಿತವಾದ ಫಲವನ್ನು ಕೊಡುತ್ತದೆ. ॥ ೧೩ ॥ ವರುಣಾಶ್ರಮದಲ್ಲಿನ ಕುಂಡದಲ್ಲಿ ಸ್ನಾನ ಮಾಡಿ ಭಕ್ತಿಯಿಂದ ದಾನವನ್ನು ಮಾಡುವವರ ಅಪೇಕ್ಷೆಗಳೆಲ್ಲ ಸಿದ್ಧಿಸುವುವು ॥ ೧೪ ॥ ಅಲ್ಲಿ ಅನೇಕ ಪುಣ್ಯಕರವಾದ ಋಷ್ಯಾಶ್ರಮಗಳಿವೆ. ಅವುಗಳಲ್ಲಿ ಪ್ರಧಾನವಾಗಿರತಕ್ಕ ಪುಣ್ಯಕರವಾದ ಕೆಲವನ್ನು ವರ್ಣಿಸುತ್ತೇನೆ. ॥ ೧೫ ॥ ವರುಣಾಶ್ರಮದ ಉತ್ತರಭಾಗದಲ್ಲಿ ಕಶ್ಯಪರ ಆಶ್ರಮವಿದೆ. ಅದು ನಾನಾವಿಧಗಳಾದ ಮರಗಳು ಮತ್ತು ಬಳ್ಳಿಗಳಿಂದ ಕೂಡಿದ್ದು ನೋಡಲಿಕ್ಕೆ ಆನಂದವನ್ನು ಉಂಟುಮಾಡುವುದು. ॥ ೧೬ ॥ ಪ್ರಪ್ರಥಮ ಸೃಷ್ಟಿಯನ್ನು ಮಾಡುವ ಸಲುವಾಗಿ ಕಶ್ಯಪರು ಇಲ್ಲಿ ತಪಸ್ಸು ಮಾಡಿದರು. ಅದರ ಪ್ರಭಾವದಿಂದಲೇ ಕಶ್ಯಪರು ಕಾಶ್ಯಪೀಸೃಷ್ಟಿಯನ್ನು ಮಾಡಲು ಶಕ್ತರಾದರು. ॥ ೧೭ ॥ ಇಲ್ಲಿ ಹೋಗಿ ಯಾರು ಕಶ್ಯಪರನ್ನು ಪೂಜಿಸುತ್ತಾರೋ ಅವರಿಗೆ ಪುತ್ರಪೌತ್ರರು ಆದಿಯಾಗಿ ಸಂತತಿಯ ಅಭಿವೃದ್ಧಿಯಾಗುವುದು. ॥ ೧೮ ॥ ಇಲ್ಲಿ ಯಾರು ಒಂದು, ಎರಡು ಅಥವಾ ಮೂರು ರಾತ್ರಿಗಳ ವಾಸವನ್ನು ಮಾಡುವರೋ ಸಿದ್ಧಿಗಳೆಲ್ಲವೂ ಅವರ ಅಂಗೈಯಲ್ಲಿಯೇ ಇರುವುದು. ॥ ೧೯ ॥ ಇದಕ್ಕೆ ಉತ್ತರದಲ್ಲಿ ಸ್ವಲ್ಪ ದೂರದಲ್ಲಿಯೇ ಎಲ್ಲ ಸಿದ್ಧಿಗಳನ್ನು ಕೊಡಬಲ್ಲ ಅತ್ರಿಋಷಿಗಳ ಆಶ್ರಮವಿರುವುದು. ಇಲ್ಲಿ ತನ್ನ ಹೆಂಡತಿಯಾದ ಅನಸೂಯಾದೇವಿಯೊಡನೆ ಅತ್ರಿಋಷಿಗಳು ವಾಸಮಾಡಿದ್ದರು. ॥ ೨೦ ॥ ಹಿಂದೆ ಇಲ್ಲಿ ಅತ್ರಿಋಷಿಗಳು ಪುತ್ರಾಪೇಕ್ಷೆಯಿಂದ ಬ್ರಹ್ಮವಿಷ್ಣುಮಹೇಶ್ವರರನ್ನು ಕುರಿತು ತಪಸ್ಸು ಮಾಡಿದರು. ಬಹಳ ಕಾಲ ಮಾಡಿದ ಅವರ ತಪಸ್ಸಿನಿಂದ ತುಷ್ಟರಾದ ಈ ಮೂವರು ದೇವತೆಗಳ ಅನುಗ್ರಹದಿಂದ ದತ್ತಾತ್ರೇಯನೇ ಮೊದಲಾದ ಮಕ್ಕಳನ್ನು ಪಡೆದರು. ॥ ೨೧ ॥ ಆದ್ದರಿಂದ ಈ ಆಶ್ರಮದಲ್ಲಿ ಪುತ್ರಾಪೇಕ್ಷೆಯಿಂದ ಯಾರು ತಪಸ್ಸು ಮಾಡುವರೋ ಅವರಿಗೆ ಅತ್ರಿಋಷಿಗಳ ಅನುಗ್ರಹದಿಂದ ಸತ್ಸಂತಾನವು ಪ್ರಾಪ್ತವಾಗುವುದು. ॥ ೨೨ ॥ ಯಾರು ಅನಸೂಯಾದೇವಿಯಿಂದ ಕೂಡಿದ ಅತ್ರಿಋಷಿಗಳನ್ನು ಪೂಜಿಸುವರೋ ಮತ್ತು ಅಲ್ಪಸ್ವಲ್ಪವಾದರೂ ದಾನವನ್ನು ಮಾಡುವರೋ ಅವರು ತಮ್ಮ ಅಪೇಕ್ಷೆಗಳನ್ನೆಲ್ಲಾ ಹೊಂದುವರು. ॥ ೨೩ ॥ ಇದಕ್ಕೆ ಉತ್ತರದಲ್ಲಿ ಅತ್ಯಂತ ರಮಣೀಯವಾದ ಭರದ್ವಾಜಾಶ್ರಮವಿರುವುದು. ಇಲ್ಲಿ ಶ್ರೀಭರದ್ವಾಜಋಷಿಗಳು ತಪಸ್ಸನ್ನು ಮಾಡಿ ಪರಮಸಿದ್ಧಿಯನ್ನು ಪಡೆದರು. ॥ ೨೪ ॥ ಎಲ್ಲ ಋಷಿಗಳೂ ಬರುವ ಮುನ್ನ ಇಲ್ಲಿ ಕೇವಲ ಭರದ್ವಾಜರ ಆಶ್ರಮವೊಂದೇ ಇದ್ದಿತು. ನಂತರ ಪಾಪರಹಿತರಾದ ಕಶ್ಯಪಾದಿ ಅನೇಕಋಷಿಗಳು ಇಲ್ಲಿಗೆ ಬಂದರು. ॥ ೨೫ ॥ ಭರದ್ವಾಜನಿಂದ ಅಲ್ಲಿ ''ಭರದ್ವಾಜೇಶ್ವರ''ನು ಸ್ಥಾಪಿಸಲ್ಪಟ್ಟನು. ಈ ರುದ್ರದೇವರ ಮತ್ತು ಭರದ್ವಾಜರ ದರ್ಶನದಿಂದ ಅಪೇಕ್ಷಿತ ಎಲ್ಲ ಕಾಮನೆಗಳೂ ಸಿದ್ಧಿಸುವುವು. ॥ ೨೬ ॥ ಭಕ್ತಿಯಿಂದ ಭರದ್ವಾಜೇಶ್ವರನನ್ನು ಮತ್ತು ಭರದ್ವಾಜರನ್ನೂ ಪೂಜಿಸುವವನು, ಅವರ ಅನುಗ್ರಹದಿಂದ ಸರ್ವ ಅಭೀಷ್ಟಗಳನ್ನು ಹೊಂದುವನು. ॥ ೨೭ ॥ ಪ್ರಯಾಗಕ್ಕೆ ಬಂದಿರುವ ಯಾವನಾಗಲೀ, ಈ ಭರದ್ವಾಜಾಶ್ರಮಕ್ಕೆ ಬರದಿದ್ದರೆ ಅವನ ಯಾತ್ರಾಫಲವು ಶೂನ್ಯವಾಗುವುದು. ಇದರಲ್ಲಿ ಸಂದೇಹವೇ ಬೇಡ. ॥ ೨೮ ॥ ಒಂದು ರಾತ್ರಿಯಾಗಲೀ, ಮೂರು ರಾತ್ರಿಯಾಗಲೀ ಈ ಭರದ್ವಾಜಾಶ್ರಮದಲ್ಲಿ ಇದ್ದು ಜಪಾದಿಗಳಲ್ಲಿ ನಿರತರಾದವರ ಅಪೇಕ್ಷೆಗಳೆಲ್ಲಾ ಸಿದ್ಧವಾಗುವುವು. ॥ ೨೯ ॥ ಶೌನಕಾದಿಗಳೇ! ಈ ಭರದ್ವಾಜಾಶ್ರಮದ ಉತ್ತರಕ್ಕೆ, ಶ್ರೀಸೀತಾರಾಮಾಶ್ರಮವೆಂಬ ಮಹಾನಾಶ್ರಮವಿರುವುದು. ಇದರ ದರ್ಶನಮಾತ್ರದಿಂದಲೇ ಯಾತ್ರಿಕರು ರಾಮದೇವರಿಗೆ ಪ್ರಿಯರಾಗುವರು. ॥ ೩೦ ॥ ಶ್ರೀರಾಮನು ಸೀತಾದೇವಿ ಮತ್ತು ಲಕ್ಷ್ಮಣನೊಡನೆ ಅಯೋಧ್ಯಾವನ್ನು ಬಿಟ್ಟು ದಂಡಕಾರಣ್ಯಕ್ಕೆ ದಶರಥನ ಆಜ್ಞಾದಿಂದ ಹೊರಟಾಗ

ಮೊದಲು ಭರದ್ವಾಜಾಶ್ರಮಕ್ಕೆ ಬಂದು ಈ ಸ್ಥಳದಲ್ಲಿಯೇ ಇದ್ದು ಅನಂತರ ಭರದ್ವಾಜರ ಆಜ್ಞಾದಿಂದ ಚಿತ್ರಕೂಟಕ್ಕೆ ತೆರಳಿದನು. ॥ ೩೧-೩೨ ॥ ಅಲ್ಲಿಂದ ಆರಂಭವಾಗಿ ಈ ಸ್ಥಳವು ''ಸೀತಾರಾಮಾಶ್ರಮ''ವೆಂದು ಪ್ರಸಿದ್ಧಿಪಡೆದಿದೆ. ಈ ಆಶ್ರಮವು ಮನುಷ್ಯರ ಸಕಲಅಪೇಕ್ಷೆಗಳನ್ನು ಕೊಡುವುದಲ್ಲದೆ, ಸಕಲಪಾಪಗಳನ್ನೂ ಪರಿಹರಿಸುತ್ತದೆ. ॥ ೩೩ ॥ ಈ ಆಶ್ರಮಕ್ಕೆ ಹೋಗಿ ಯಾರು ಸೀತಾಲಕ್ಷ್ಮಣರೊಡನಿರುವ ಶ್ರೀರಾಮನನ್ನು ಪೂಜಿಸುತ್ತಾರೋ ಅಂತಹ ನರನಾರಿಯರು ವೈಕುಂಠಕ್ಕೆ ಪ್ರಯಾಣ ಮಾಡುವರು. ॥ ೩೪ ॥ ಇದಕ್ಕೆ ಉತ್ತರದಲ್ಲಿ ಅತಿಶ್ರೇಷ್ಠವಾದ ವಿಶ್ವಾಮಿತ್ರಾಶ್ರಮವಿದೆ. ಇದನ್ನು ನೋಡಿ ನಮಸ್ಕಾರ ಮಾಡುವುದರಿಂದಲೇ ಎಲ್ಲಪಾಪಗಳೂ ತಕ್ಷಣವೇ ನಾಶವಾಗುವುವು. ॥ ೩೫ ॥ ಯಾರು ಮಹಾಮುನಿಯಾದ ವಿಶ್ವಾಮಿತ್ರನನ್ನು ಭಕ್ತಿಯಿಂದ ಅರ್ಚಿಸುತ್ತಾರೋ ಅವರು ಸಕಲ ಇಷ್ಟಾರ್ಥಗಳನ್ನೂ ಪಡೆದು ಬ್ರಹ್ಮಲೋಕವನ್ನೂ ಪಡೆಯುತ್ತಾರೆ. ॥ ೩೬ ॥ ವಿಶ್ವಾಮಿತ್ರರ ಆಶ್ರಮದಲ್ಲಿ ಗಾಯತ್ರೀಮಂತ್ರಗಳ ಪುರಶ್ಚರಣವನ್ನು ಆಚರಿಸಿದವರು ಪಾಪವಿಮುಕ್ತರಾಗಿ ಸಾಕ್ಷಾತ್ ವಿಷ್ಣುವಿನ ಲೋಕಕ್ಕೆ ಹೋಗುವರು. ॥ ೩೭ ॥ ಅದಕ್ಕೆ ಉತ್ತರದಲ್ಲಿ ಗೌತಮಾಶ್ರಮವಿದ್ದು ಅಲ್ಲಿ ಗೌತಮ ಕುಂಡವಿದೆ. ಈ ಆಶ್ರಮದಲ್ಲಿ ಗೌತಮರು ಪತ್ನೀ ಅಹಲ್ಯೆಯೊಡನೆ ಇದ್ದು ಎಲ್ಲರಿಗೂ ಆನಂದವನ್ನುಂಟುಮಾಡುತ್ತಿದ್ದರು. ॥ ೩೮ ॥ ಇವರನ್ನು ನಮಸ್ಕರಿಸಿ, ಪೂಜೆ ಮಾಡಿ ಮತ್ತು ಸ್ತೋತ್ರ ಮಾಡತಕ್ಕವರು ಗೌತಮರ ಪ್ರಸಾದದಿಂದ ಉತ್ತಮಗತಿಯನ್ನು ಹೊಂದುತ್ತಾರೆ. ॥ ೩೯ ॥ ಇದಕ್ಕೆ ಉತ್ತರದಲ್ಲಿ ಮಹಾಮುನಿಯಾದ ಜಮದಗ್ನಿಗಳ ಆಶ್ರಮವಿದೆ. ಅಲ್ಲಿ ಪತ್ನೀ ರೇಣುಕಾದೇವಿಯೊಡನೆ ಜಮದಗ್ನಿಋಷಿಗಳು ವಿರಾಜಮಾನರಾಗಿದ್ದಾರೆ. ॥ ೪೦ ॥ ನಾನಾವಿಧಗಳಾದ ಪೂಜಾಸಾಮಗ್ರಿಗಳಿಂದ ಅವರನ್ನು ಯಾರು ಪೂಜಿಸುವರೋ, ಅವರಿಗೆ ರೇಣುಕಾಸಹಿತರಾದ ಜಮದಗ್ನಿಗಳು ಪ್ರಸನ್ನರಾಗಿ ಅನುಗ್ರಹ ಮಾಡುವರು. ॥ ೪೧ ॥ ಅಲ್ಲಿವಾಸಮಾಡಿ, ಜಪ ಮಾಡಿ, ಅನ್ನದಾನ ಮಾಡಿ, ನಮಸ್ಕಾರ ಮತ್ತು ಪೂಜಾದಿಗಳನ್ನು ಮಾಡುವವರು ಈ ಲೋಕದಲ್ಲಿ ಅವರವರ ಅಪೇಕ್ಷೆಗಳನ್ನೆಲ್ಲಾ ಪಡೆದು ಪರಲೋಕದ ಆಸೆಗಳನ್ನೆಲ್ಲಾ ಹೊಂದುವರು, ಇದು ನಿಶ್ಚಯವು. ॥ ೪೨ ॥ ಇದಕ್ಕೆ ಉತ್ತರದಲ್ಲಿರುವ ವಸಿಷ್ಠರ ಆಶ್ರಮವು ಅತಿ ಉತ್ತಮವಾದುದು ಮತ್ತು ಪುಣ್ಯಕರವಾದುದು. ಇಲ್ಲಿ ಪತ್ನಿಯಾದ ಅರುಂಧತೀದೇವಿಯೊಡನೆ ವಸಿಷ್ಠರು ಇದ್ದಾರೆ. ॥ ೪೩ ॥ ಈ ಆಶ್ರಮಕ್ಕೆ ಹೋಗಿ ಯಾರು ಒಂದು, ಎರಡು ಅಥವಾ ಮೂರು ದಿವಸಗಳಿದ್ದು ಈ ಮಹಾಮುನಿಯನ್ನು ನಮಿಸಿ ಪೂಜಿಸುತ್ತಾರೋ ಅವರು ಜೀವನ್ಮುಕ್ತರಾಗುತ್ತಾರೆ. ॥ ೪೪ ॥ ಈ ವಸಿಷ್ಠಾಶ್ರಮದಲ್ಲಿ ಅಣುವಿನಷ್ಟು ಸಣ್ಣ ಪ್ರಮಾಣದ ಪುಣ್ಯಕಾರ್ಯವನ್ನು ಭಕ್ತಿಯಿಂದ ಮಾಡಿದವನು, ಅಂದರೆ ಸ್ನಾನ, ದಾನ ಮತ್ತು ಜಪಾದಿಗಳನ್ನು ಮಾಡಿದವನು ನಾಶವಾಗದ ಜ್ಞಾನಾನಂದಾದಿಸ್ವರೂಪವುಳ್ಳ ಮೋಕ್ಷವನ್ನು ಪಡೆಯುತ್ತಾನೆ. ॥ ೪೫ ॥ ವರುಣಾಶ್ರಮದಿಂದ ಆರಂಭಿಸಿ ವಾಯುವಿನ ಆಶ್ರಮದ ತನಕ ಮಧ್ಯೆ ಎಂಬತ್ತೆಂಟು ಋಷ್ಯಾಶ್ರಮಗಳಿವೆ. ॥ ೪೬ ॥ ಇವುಗಳೊಂದೊಂದನ್ನೂ ಬಿಡಿಸಿ ಬಿಡಿಸಿ ಯಾರು ತಾನೇ ವರ್ಣಿಸಲು ಸಾಧ್ಯವು? ಆದ್ದರಿಂದ ಅವುಗಳನ್ನೆಲ್ಲಾ ಸೇರಿಸಿ ಸಾಕಲ್ಯೇನ ಯಾತ್ರಿಕನು ನಮಸ್ಕರಿಸಬೇಕು. ॥ ೪೭ ॥ ಋಷಿಗಳಿರಾ! ಈ ರೀತಿಯಾಗಿ ಪ್ರಯಾಗದ ಪಶ್ಚಿಮಭಾಗದ ತೀರ್ಥಗಳನ್ನು ಹೇಳಿದ್ದಾಯಿತು. ಇನ್ನು ಮುಂದೆ ಪ್ರಯಾಗದ ಉತ್ತರಕ್ಕೆ ಇರುವ ತೀರ್ಥಗಳನ್ನು ವರ್ಣಿಸುವೆ, ಕೇಳಿರಿ. ॥ ೪೮ ॥

॥ ಎಂಬತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಪಂಚಾಶೀತಿತಮೋಽಧ್ಯಾಯಃ ॥ ೮೫ ॥

ಶೇಷ ಉವಾಚ—

ಅಶ್ವಸ್ಥಾನಮಥೋ ವಕ್ಷ್ಯೇ ವಾಯುಮಂಡಲಪೂರ್ವತಃ ।
ವಿಜಯೈಶ್ವರ್ಯದಂ ಪುಂಸಾಂ ಸರ್ವಶತ್ರುವಿನಾಶನಮ್ ॥ ೧ ॥
ಪ್ರಯಾಗೇ ದಾನಮಾಹಾತ್ಮ್ಯಂ ಶ್ರುತ್ವಾನಂತಫಲಾನ್ವಿತಮ್ ।
ಇಂದ್ರಃ ಕದಾಚಿದಾಗತ್ಯ ಹಯದಾನೇ ಮತಿಂ ದಧೌ ॥ ೨ ॥
ಉಚ್ಚೈಃಶ್ರವಸಮಾನೀಯ ಹಯರತ್ನಂ ಪುರಂದರಃ ।
ಯದಾ ದಾತುಂ ಮನಶ್ಚಕ್ರೇ ತದಾ ವಿಧಿರವಿಘ್ನಯತ್ ॥ ೩ ॥
ಅಶ್ವದಾನೇ ಸಮಾರಬ್ಧೇ ಬ್ರಹ್ಮಾದ್ಯಾ ದೇವತಾಸ್ತದಾ ।
ಗುರುಂ ಪ್ರಣಮ್ಯ ಪಪ್ರಚ್ಛುರ್ಹಯದಾನಸ್ಯ ಕಾರಣಮ್ ॥ ೪ ॥

## ॥ ಎಂಬತ್ತೈದನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಎಲೈ ಶೌನಕಾದಿಗಳೇ! ವಾಯುಮಂಡಲದ ಪೂರ್ವಭಾಗದಲ್ಲಿ ''ಅಶ್ವಸ್ಥಾನ''ವೆಂಬ ಕ್ಷೇತ್ರವಿದೆ. ಇದು ಮನುಷ್ಯರಿಗೆ ಶತ್ರುನಾಶವನ್ನಲ್ಲದೆ ವಿಜಯವನ್ನೂ ಐಶ್ವರ್ಯವನ್ನೂ ತಂದುಕೊಡುತ್ತದೆ. ॥ ೧ ॥ ಪ್ರಯಾಗದಲ್ಲಿ ಮಾಡುವ ದಾನವು ಎಣೆಯಿಲ್ಲದಷ್ಟು ಫಲಪ್ರದವೆಂದು ಕೇಳಿದ ಇಂದ್ರನು ಒಂದು ಬಾರಿ ಪ್ರಯಾಗಕ್ಕೆ ಬಂದು ಅಲ್ಲಿ ಕುದುರೆಗಳನ್ನು ದಾನ ಕೊಡಲು ನಿರ್ಧಾರಮಾಡಿದನು. ॥ ೨ ॥ ಯಾವಾಗ ಉಚ್ಚೈಃಶ್ರವಸ್ಸೆಂಬ ಅಶ್ವರತ್ನವನ್ನು ದಾನಕೊಡಲು ಇಂದ್ರನು ಮನಸ್ಸು ಮಾಡಿದನೋ ಆವಾಗ ಚತುರ್ಮುಖಬ್ರಹ್ಮದೇವರು ಅವನ ಈ ದಾನಕ್ಕೆ ವಿಘ್ನವನ್ನುಂಟುಮಾಡಿದರು. ॥ ೩ ॥ ಅಶ್ವದಾನವು ಪ್ರಾರಂಭವಾಗಲು ಬ್ರಹ್ಮಾದಿದೇವತೆಗಳು ಬಂದು ತಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ನಮಸ್ಕರಿಸಿ, ಈ ಹಯದಾನದ ಕಾರಣವನ್ನು ಕೇಳಿದರು. ॥ ೪ ॥

ಬ್ರಹ್ಮಾದಯ ಊಚುಃ—

ಮರುತ್ವಾನ್ ದಾನಶೂರೋಽಭೂತ್ ಪ್ರಯಾಗೇ ಭಗವನ್ಕುತಃ ।
ತತ್ಸರ್ವಂ ವದ ಚಾಸ್ಮಾಕಂ ಯೇನ ನಶ್ಯೇತ ನೋ ಭಯಮ್ ॥ ೫ ॥
ದಶಧೇನುಸಮೋಽನಡ್ವಾನ್ದಶಭಿಸ್ತೈಸ್ಸಮೋ ಹಯಃ ।
ತಂ ಪ್ರಯಾಗೇ ತು ಯೋ ದದ್ಯಾನ್ಮತ್ಪದಂ ತತ್ಕರೇ ಸ್ಥಿತಮ್ ॥ ೬ ॥
ಸ್ವಪದಚ್ಯುತಿಭೀತೋಽಹಂ ಪೃಚ್ಛಾಮಿ ತ್ವಾಂ ಬೃಹಸ್ಪತೇ ।
ನಿಶ್ಚಿತ್ಯ ಮನಸಾ ಸರ್ವಂ ಸಾಧ್ವಸಂ ಮೇ ನಿವಾರಯ ॥ ೭ ॥

ಬ್ರಹ್ಮಾದಿಗಳು ಹೇಳಿದರು—

''ಹೇ ಆಚಾರ್ಯರೇ! ಇಂದ್ರನು ದಾನಶೂರನೆಂದು ಪ್ರಸಿದ್ಧನಾಗಿದ್ದರೂ, ಪ್ರಯಾಗದಲ್ಲಿ

ಏತಕ್ಕಾಗಿ ದಾನಮಾಡಲು ಅಪೇಕ್ಷಿಸುತ್ತಾನೆ? ಪೂಜ್ಯರಾದ ತಾವು ವಿಚಾರಮಾಡಿ ಈ ವಿಷಯದ ಬಗ್ಗೆ ಎಲ್ಲವನ್ನೂ ಹೇಳಿರಿ. ಇದರಿಂದ ನಮ್ಮ ಭಯವು ನಿವಾರಣೆಯಾಗುವುದು. ॥ ೫ ॥ ಹತ್ತು ಆಕಳುಗಳಿಗೆ ಒಂದು ವೃಷಭ ಮತ್ತು ಹತ್ತು ವೃಷಭಗಳಿಗೆ ಒಂದು ಕುದುರೆಯು ಸಮ. ಹೀಗಿರುವಾಗ ಪ್ರಯಾಗದಲ್ಲಿ ಯಾರು ಅಶ್ವವನ್ನು ದಾನ ಮಾಡುತ್ತಾರೋ ಅವನ ಕೈಯಲ್ಲಿ ನನ್ನ ಪದವಿಯು ಇರುವುದು. ॥ ೬ ॥ ಹೇ ಬೃಹಸ್ಪತಿಯೇ! ನನ್ನ ಪದವಿಗೆ ಎಲ್ಲಿ ಚ್ಯುತಿ ಬರುವುದೋ ಎಂಬ ಭಯದಿಂದ ನಿಮ್ಮನ್ನು ಪ್ರಶ್ನಿಸುತ್ತಿದ್ದೇನೆ. ಮನಸ್ಸಿನಲ್ಲಿ ಎಲ್ಲವನ್ನೂ ನಿಶ್ಚಯಿಸಿ ನನ್ನ ಭಯವನ್ನು ನಿವಾರಣೆ ಮಾಡಿ. ॥ ೭ ॥

ಬೃಹಸ್ಪತಿರುವಾಚ—

ಬಹುಧಾ ಮಾಧವಪ್ರೀತ್ಯೈ ನ ಪದಪ್ರಾಪ್ತಯೇ ತವ ।
ಪ್ರಯಾಗೇ ಮಘವಾ ಬ್ರಹ್ಮನ್ನಶ್ವಂ ದಾತುಂ ಸಮುದ್ಯತಃ ॥ ೮ ॥
ಗೌರವೀಂ ವಾಚಮಾಕರ್ಣ್ಯ ಸಂದಿಹಾನಸ್ತಥಾಪ್ಯಸೌ ।
ಅಶ್ವಂ ಸಂಸ್ತಂಭಯಾಮಾಸ ಬ್ರಹ್ಮಾ ಸ್ತಂಭನವಿದ್ಯಯಾ ॥ ೯ ॥
ತತೋಽಸೌ ಜಡತಾಂ ಪ್ರಾಪ್ತಃ ಸಮರ್ಥೋಽಪೀಂದ್ರವಾಜಿರಾಟ್ ।
ತಥಾಭೂತಂ ತಮಾಲಕ್ಷ್ಯ ಪಪ್ರಚ್ಛೇಂದ್ರೋಽಪಿ ವಾಕ್ಪತಿಮ್ ॥ ೧೦ ॥

ಬೃಹಸ್ಪತ್ಯಾಚಾರ್ಯರು ಹೇಳಿದರು—

ಹೇಗೆ ಹೇಗೆ ಯೋಚಿಸಿದರೂ ಇಂದ್ರನು ಮಾಡುತ್ತಿರುವ ದಾನವು ಶ್ರೀಮಾಧವನ ಪ್ರೀತಿಗಾಗಿಯೇ, ನಿನ್ನ ಸ್ಥಾನವನ್ನು ಪಡೆಯುವುದಕ್ಕಾಗಿ ಅಲ್ಲ. ಮಾಧವನನ್ನು ಪ್ರೀತಿ ಪಡಿಸುವುದಕ್ಕಾಗಿಯೇ ಇಂದ್ರನು ಪ್ರಯಾಗದಲ್ಲಿ ಕುದುರೆಯನ್ನು ದಾನ ಮಾಡುವನು.'' ॥ ೮ ॥ ಬೃಹಸ್ಪತ್ಯಾಚಾರ್ಯರ ಮಾತಿನಿಂದ ಬ್ರಹ್ಮದೇವರ ಸಂದೇಹ ನಿವಾರಣೆಯಾಗಲಿಲ್ಲ. ಅವನು ಆ ಕುದುರೆಯನ್ನು ಸ್ತಂಭನವಿದ್ಯೆಯಿಂದ ಕಂಭದಂತೆ ಜಡವನ್ನಾಗಿ ಮಾಡಿದನು. ॥ ೯ ॥ ಅನಂತರ ಇಂದ್ರನ ಆ ಅಶ್ವರಾಜವು ಸಮರ್ಥವಾಗಿದ್ದರೂ ಜಡವಾಯಿತು. ಆರೀತಿ ಜಡವಾದ ಕುದುರೆಯನ್ನು ನೋಡಿ ಇಂದ್ರನು ಬೃಹಸ್ಪತ್ಯಾಚಾರ್ಯರನ್ನು ಕೇಳಿದನು. ॥ ೧೦ ॥

ಇಂದ್ರ ಉವಾಚ—

ಸಮಾನೀತೋ ಮಯಾ ದಾತುಂ ಮಾಧವಪ್ರೀತಯೇ ಹಯಃ ।
ಪದಮಾತ್ರಂ ನ ಚಲತಿ ಪ್ರಯಾಗೇಽಸೌ ಕುತೋ ವದ ॥ ೧೧ ॥

ಇಂದ್ರನು ಹೇಳಿದನು—

''ಹೇ ಆಚಾರ್ಯರೇ! ಮಾಧವನ ಪ್ರೀತಿಗಾಗಿ ದಾನ ಮಾಡಲು ನಾನು ಈ ಕುದುರೆಯನ್ನು ತಂದೆನು. ಏತಕ್ಕಾಗಿ ಇದು ಒಂದು ಹೆಜ್ಜೆಯನ್ನೂ ಇಡಲಾರದಾಗಿದೆ, ಹೇಳಿರಿ?'' ॥ ೧೧ ॥

ಗುರುರುವಾಚ—

ಯಥಾ ಪೃಥೋಸ್ತ್ವಯಾ ಶಕ್ರ ಯಜ್ಞಾಶ್ವೋ ಮುಷಿತಃ ಪುರಾ ।
ತಥಾ ಧಾತ್ರಾಪಿ ದಾನಾಶ್ವಸ್ತವಾಯಂ ಸ್ತಂಭಿತೋ ಬಲಾತ್ ॥ ೧೨ ॥

ತಸ್ಮಾದುಪರಮಸ್ವ ತ್ವಂ ಪ್ರಯಾಗೇ ಹಯದಾನತಃ ।
ಪ್ರೀತ ಏವಾಸ್ತಿ ತೇ ಶಕ್ರ ಮಾಧವೋ ಭಕ್ತವತ್ಸಲಃ ॥ ೧೩ ॥
ಪ್ರಯಾಗೇಽಲ್ಪಂಚ ಯದ್ದಾನಂ ಪುಣ್ಯಾತಿಶಯಕಾರಣಂ ।
ಬ್ರಹ್ಮಾ ಬಿಭೇತಿ ಮಘವನ್ನೇತಸ್ಮಾತ್ಸ್ವಪದಚ್ಯುತೇಃ ॥ ೧೪ ॥
ಏಕೇನೈವಾಶ್ವದಾನೇನ ಪ್ರಾಪ್ಯತೇ ಬ್ರಹ್ಮಣಃ ಪದಮ್ ।
ಏಕೇನೈವಾಶ್ವಮೇಧೇನ ಪುರುಹೂತಪದಂ ವ್ರಜೇತ್ ॥ ೧೫ ॥
ಏಕೇನ ಧೇನುದಾನೇನ ಲಕ್ಷಗೋದಾನಜಂ ಫಲಮ್ ।
ಏಕೇನ ವೃಷದಾನೇನ ಕೈಲಾಸೇ ವಸತೇ ನರಃ ॥ ೧೬ ॥
ಏವಂ ಸರ್ವಾಣಿ ದಾನಾನಿ ಪ್ರಯಾಗೇಷು ಶತಾಧಿಕಮ್ ।
ಫಲಂ ಯಚ್ಛಂತಿ ದೇವೇಂದ್ರ ವಿಘ್ನಂ ಕುರ್ವಂತ್ಯತೋಽಮರಾಃ ॥ ೧೭ ॥
ಯೇಽತ್ರ ದಾನಂ ಕರ್ತುಕಾಮಾಸ್ತಾನನ್ಯತ್ರ ನಯಂತಿ ತೇ ।
ಕಾರಯಂತಿ ಚ ದಾನಾನಿ ತೀರ್ಥೇ ವಾಸವ ಭಂಗುರೇ ॥ ೧೮ ॥
ಮಾಧವೀಯಾ ಕೃಪಾ ಯಸ್ಮಿನ್ಪರಿಪೂರ್ಣಾ ಭವಿಷ್ಯತಿ ।
ದಾನಂ ಘಟೇತ ತಸ್ಯೈವ ಪ್ರಯಾಗೇ ಮಾಧವಪ್ರಿಯೇ ॥ ೧೯ ॥

ಬೃಹಸ್ಪತ್ಯಾಚಾರ್ಯರು ಹೇಳಿದರು—

"ಇಂದ್ರನೇ, ನೀನು ಯಾವ ರೀತಿ ಪೃಥುರಾಜನ ಯಜ್ಞಾಶ್ವವನ್ನು ನಿನ್ನ ಸ್ಥಾನಕ್ಕೆ ಎಲ್ಲಿ ಚ್ಯುತಿ ಬರುವುದೋ ಎಂಬ ಭಯದಿಂದ ಅಪಹಾರ ಮಾಡಿದ್ದೆಯೋ ಅದೇ ರೀತಿ ಈಗ ಚತುರ್ಮುಖ ಬ್ರಹ್ಮನು ಅವನ ಪದವಿಗೆ ನೀನು ಎಲ್ಲಿ ಚ್ಯುತಿಯನ್ನುಂಟುಮಾಡುವಿಯೋ ಎಂದು ಹೆದರಿ ನಿನ್ನ ಕುದುರೆಯನ್ನು ಜಡವಾದುದ್ದನ್ನಾಗಿ ಮಾಡಿದ್ದಾನೆ. ॥ ೧೨ ॥ ಆದ್ದರಿಂದ ಇಂದ್ರನೇ! ನೀನು ಹಯದಾನವನ್ನು ಪ್ರಯಾಗದಲ್ಲಿ ಬಿಟ್ಟುಬಿಡು. ಭಕ್ತವತ್ಸಲನಾದ ಮಾಧವನು ನಿನ್ನ ವಿಷಯದಲ್ಲಿ ಪ್ರೀತನಾಗಿಯೇ ಇದ್ದಾನೆ. ॥ ೧೩ ॥ ಪ್ರಯಾಗದಲ್ಲಿ ಮಾಡಿದ ಅಲ್ಪ ದಾನವೂ ಪುಣ್ಯದ ಅತಿಶಯಕ್ಕೆ ಕಾರಣವಾಗುವುದು. ಇಂದ್ರನೇ! ನೀನು ಮಾಡುವ ಈ ದಾನದಿಂದ ತನ್ನ ಪದಚ್ಯುತಿಯಾಗುವುದೆಂದು ಬ್ರಹ್ಮನು ಹೆದರುತ್ತಿದ್ದಾನೆ. ॥ ೧೪ ॥ ಪ್ರಯಾಗದಲ್ಲಿ ಒಂದೇ ಕುದುರೆಯ ದಾನದಿಂದಲೇ ಬ್ರಹ್ಮನ ಪದವಿಯು ಪ್ರಾಪ್ಯವಾಗುವದು ಮತ್ತು ಒಂದು ಅಶ್ವಮೇಧ ಯಾಗದಿಂದಲೇ ಇಂದ್ರಪದವಿಯು ಲಭ್ಯವಾಗುವುದು. ॥ ೧೫ ॥ ಒಂದು ಗೋವಿನ ದಾನದಿಂದ ಲಕ್ಷ ಗೋದಾನದ ಫಲವು ಸಿಗುವುದು, ಒಂದು ವೃಷಭದಾನದಿಂದ ಕೈಲಾಸದಲ್ಲಿ ವಾಸವು ಲಭ್ಯವಾಗುವುದು. ॥ ೧೬ ॥ ದೇವೇಂದ್ರನೇ! ಈ ರೀತಿಯಾಗಿ ಪ್ರಯಾಗದಲ್ಲಿ ಮಾಡಿದ ಒಂದೊಂದು ದಾನವೂ ನೂರರಷ್ಟು ಫಲದಾಯಕವು. ಈ ಕಾರಣಕ್ಕಾಗಿಯೇ ದಾನ ಮಾಡುವವರಿಗೆ ದೇವತೆಗಳು ಪ್ರಯಾಗದಲ್ಲಿ ವಿಘ್ನವನ್ನುಂಟುಮಾಡುತ್ತಾರೆ. ॥ ೧೭ ॥ ಇಲ್ಲಿ ದಾನ ಮಾಡಲು ಪ್ರವೃತ್ತರಾದವರನ್ನು ದೇವತೆಗಳು ಬೇರೆ ಕಡೆಗೆ ಅಲ್ಲಿ ದಾನಕೊಡೆಂದು ಹೇಳುತ್ತಾ ಒಯ್ಯುತ್ತಾರೆ. ಬೇರೆ ಕಡೆ ಮಾಡಿದ ದಾನದ ಫಲವು ನೀರುಗುಳ್ಳೆಯಂತೆ ಕ್ಷಣಭಂಗುರವಾದದ್ದು. ॥ ೧೮ ॥ ಯಾರ ಮೇಲೆ ಮಾಧವನ ಕೃಪೆಯು ಪರಿಪೂರ್ಣವಾಗಿದೆಯೋ ಅವನಿಂದಲೇ ಮಾಧವನ ಪ್ರಿಯ ಕ್ಷೇತ್ರವಾದ ಪ್ರಯಾಗದಲ್ಲಿ ದಾನವು ಜರುಗುತ್ತದೆ. ॥ ೧೯ ॥

ಶೇಷ ಉವಾಚ—

ಇತಿ ವಾಕ್ಯಂ ಗುರೋಃ ಶ್ರುತ್ವಾ ಪ್ರಸನ್ನಹೃದಯಾಂಬುಜಃ ।
ಇಂದ್ರೋಽಪಿ ವಿರತೋ ದಾನಾತ್ ಪ್ರೀತ್ಯಾ ಚಾತ್ಮಭುವಸ್ತಥಾ ॥ ೨೦ ॥
ತದಾರಭ್ಯ ಹರೇಸ್ತತ್ರ ವರ್ತತೇ ಸ್ತಂಭಿತೋ ಹಯಃ ।
ತಸ್ಯ ಪೂಜನಮಾತ್ರೇಣ ಸಂಪ್ರೀಣಾತಿ ಶಚೀಪತಿಃ ॥ ೨೧ ॥
ಪರಿಕ್ರಮಂತಿ ಯೇ ಲೋಕಾಃ ಪೂಜಯಿತ್ವಾತು ತಂ ಹಯಮ್ ।
ಪ್ರದಕ್ಷಿಣೀಕೃತಂ ಜ್ಞೇಯಮೇತ್ತೈರವನಿಮಂಡಲಮ್ ॥ ೨೨ ॥
ತಸ್ಯೈವ ನಿಕಟೇ ಪೂರ್ವೇ ವೃಷರೂಪೋಽಸ್ತಿ ಧರ್ಮರಾಟ್ ।
ತಸ್ಯ ದರ್ಶನಮಾತ್ರೇಣ ಧರ್ಮಿಷ್ಠೋ ಜಾಯತೇ ನರಃ ॥ ೨೩ ॥
ತಂ ಯೇಽರ್ಚಯಂತಿ ಮನುಜಾ ಧರ್ಮರಾಜಂ ಯತವ್ರತಾಃ ।
ವಾಂಛಿತಂ ಫಲಮಾಯಾಂತಿ ಧರ್ಮಸ್ತೇಭ್ಯಃ ಪ್ರಸೀದತಿ ॥ ೨೪ ॥
ತಸ್ಯಾಪಿ ಪೂರ್ವದಿಗ್ಭಾಗೇ ವಾಸುಕೇರುತ್ತರೇ ತಥಾ ।
ಅಸ್ತಿ ಭೋಗವತೀತೀರ್ಥಂ ದರ್ಶನಾದಘನಾಶನಮ್ ॥ ೨೫ ॥
ಯದಾಸಿಮಾಧವಾಭ್ಯಾಶೇ ಸರ್ವಪಾತಾಲವಾಸಿನಃ ।
ಸಮಾಯಾತಾಸ್ತದಾ ಸೋಽಪಿ ಸಮಾಯಾತೋ ಧರಾತಲಾತ್ ॥ ೨೬ ॥

ಶೇಷದೇವರು ಹೇಳಿದರು—

ಬೃಹಸ್ಪತ್ಯಾಚಾರ್ಯರ ಮಾತುಗಳನ್ನು ಕೇಳಿ ಇಂದ್ರನ ಮನಸ್ಸಿಗೆ ಹರ್ಷವಾಯಿತು. ತಾನು ದಾನದದಶೆಯಿಂದ ನಿವೃತ್ತನಾದನು. ಬ್ರಹ್ಮದೇವರೂ ಸಂತುಷ್ಟರಾದರು. ॥ ೨೦ ॥ ಅವತ್ತಿನಿಂದಲೂ ಇಂದ್ರನ ಆ ಕುದುರೆಯು ಅಲ್ಲಿಯೇ ಜಡವಾಗಿ ಇದೆ. ಅದನ್ನು ಪೂಜೆಮಾಡುವದರಿಂದ ಇಂದ್ರನಿಗೆ ಸಂತೋಷವಾಗುವುದು. ॥ ೨೧ ॥ ಯಾರು ಈ ಕುದುರೆಯನ್ನು ಪ್ರದಕ್ಷಿಣೆಮಾಡುವರೋ ಮತ್ತು ಪೂಜಿಸುತ್ತಾರೋ ಅವರು ಇಡೀ ಭೂಮಂಡಲವನ್ನೇ ಪ್ರದಕ್ಷಿಣೆ ಮಾಡುತ್ತಾರೆಂದು ತಿಳಿಯಬೇಕು. ॥ ೨೨ ॥ ಈ ಕುದುರೆಯ ಪೂರ್ವಕ್ಕೆ ಹತ್ತಿರದಲ್ಲಿಯೇ ಯಮಧರ್ಮರಾಜನು ಎತ್ತಿನ ರೂಪದಲ್ಲಿದ್ದಾನೆ. ಇದರ ದರ್ಶನಮಾತ್ರದಿಂದಲೇ ಜೀವಿಗಳು ಧರ್ಮಿಷ್ಠರಾಗುತ್ತಾರೆ. ॥ ೨೩ ॥ ವ್ರತದ ದೀಕ್ಷೆಯಿಂದ ಯಾರು ಈ ಧರ್ಮರಾಜನನ್ನು ಪೂಜಿಸುತ್ತಾರೋ ಅವರು ಅಪೇಕ್ಷಿಸಿದ್ದನ್ನೆಲ್ಲಾ ಹೊಂದುವರು ಮತ್ತು ಧರ್ಮವು ಅವರಿಗೆ ಒಲಿಯುವುದು. ॥ ೨೪ ॥ ಇದರ ಪೂರ್ವಕ್ಕೆ, ವಾಸುಕೀತೀರ್ಥದ ಉತ್ತರಕ್ಕೆ ಭೋಗವತೀ ತೀರ್ಥವಿದೆ. ಇದರ ದರ್ಶನದಿಂದ ಪಾಪಗಳು ಪರಿಹಾರವಾಗುವುವು. ॥ ೨೫ ॥ ಅಸಿಮಾಧವನ ಆಶ್ರಮದ ಸಮೀಪದಲ್ಲಿ ಹಿಂದೆ ಸಮಸ್ತರಾದ ಪಾತಾಲವಾಸಿಗಳು ಬಂದು ತಂಗಿದ್ದರು. ಆಗ ಮಾಧವನೂ ಅಲ್ಲಿಗೆ ಬಂದಿದ್ದನು. ॥ ೨೬ ॥

ಸನಕಾದಯ ಊಚುಃ—

ಕಸ್ಮಾತ್ಭೋಗವತೀತ್ಯಾಖ್ಯಾಂ ಪ್ರಾಪ ಸಾ ನಾಗರಾಟ್ ಪ್ರಭೋ ।
ತನ್ನಃ ಕಥಯ ಬೋಧಾಯ ಬುದ್ಧಾರ್ಥೋ ಯಾತಿ ಪುಣ್ಯತಾಮ್ ॥ ೨೭ ॥

**ಸನಕಾದಿಗಳು ಹೇಳಿದರು—**

''ಹೇ ಪ್ರಭುವಾದ ನಾಗರಾಜರೇ! ಈ ತೀರ್ಥಕ್ಕೆ ಭೋಗವತೀ ಎಂಬ ಹೆಸರು ಹೇಗೆ ಬಂದಿತು? ಇದನ್ನು ನಮಗೆ ಹೇಳಿರಿ. ಇದನ್ನು ತಿಳಿಯುವುದೂ ಪುಣ್ಯಕರವೇ'' ಎಂದರು. ॥ ೨೭ ॥

**ಶೇಷ ಉವಾಚ—**

ಯದಾ ನಿಪತಿತಾ ಗಂಗಾ ಸ್ವಸ್ಥಾ ಪಾತಾಲಮಾಗತಾ ।<br>
ಮಮ ಭೋಗೇ ಮುನಿಂದ್ರಾಃ ಸಾ ತಸ್ಮಾತ್ ಭೋಗವತೀ ಸ್ಮೃತಾ ॥ ೨೮ ॥<br>
ಸ್ವರ್ಗೇ ಮಂದಾಕಿನೀ ಪ್ರೋಕ್ತಾ ಮಂದಗತ್ಯಾ ಪತಾಕಿನೀ ।<br>
ಗಾಂ ಗತಾ ಗೀತಯಾ ಗಂಗಾ ತಸ್ಮಾತ್‌ತ್ರಿಪಥಗಾ ಸ್ಮೃತಾ ॥ ೨೯ ॥<br>
ಭಗೀರಥಸಮಾನೀತಾ ಪ್ರೋಕ್ತಾ ಭಾಗೀರಥೀತಿ ಚ ।<br>
ಜಹ್ನುಪೀತಪರಿತ್ಯಕ್ತಾ ಜಾಹ್ನವೀತಿ ಚ ಗೀಯತೇ ॥ ೩೦ ॥<br>
ವಿಷ್ಣುಪಾದಾತ್ಪ್ರಭೂತತ್ವಾದ್ವೈಷ್ಣವೀತಿ ಚ ಕೀರ್ತ್ಯತೇ ।<br>
ಇತ್ಯನೇಕವಿಧೇಯಾ ಸಾ ವಸ್ತುತೋ ಬ್ರಹ್ಮರೂಪಿಣೀ ॥ ೩೧ ॥<br>
ಏವಂ ಭೋಗವತೀ ತೀರ್ಥಂ ವರ್ತತೇ ಕಾಮಿತಪ್ರದಮ್ ।<br>
ತತ್ರ ಸ್ನಾತ್ವಾ ಚ ಪೀತ್ವಾ ಚ ಸರ್ವಾನ್ಕಾಮಾನವಾಪ್ನುಯಾತ್ ॥ ೩೨ ॥<br>
ಯತ್ಕಿಂಚಿತ್ಸುಕೃತಂ ಕರ್ಮ ಕೃತಂ ಭೋಗವತೀಹ್ರದೇ ।<br>
ಸ್ನಾನದಾನಜಪಾರ್ಚಾದಿ ತದಕ್ಷಯಮುದಾಹೃತಮ್ ॥ ೩೩ ॥<br>
ತಸ್ಯಾಭ್ಯಾಶೇ ಪರಂ ಪುಣ್ಯಮಸ್ತಿ ವಾಸುಕಿಮಂಡಲೇ ।<br>
ಮಮ ಸ್ಥಾನಂ ಚ ತತ್ರೈವ ವರ್ತತೇ ಸನಕಾದಯಃ ॥ ೩೪ ॥<br>
ಪುರಾ ತತ್ರ ತಪಸ್ತೇಪೇ ದಿವೋದಾಸೋ ಮಹಾತಪಾಃ ।<br>
ಷಷ್ಟಿವರ್ಷಸಹಸ್ರಾಣಿ ಮದಾರಾಧನತತ್ಪರಃ ॥ ೩೫ ॥<br>
ಪ್ರಾದುರಾಸಮಹಂ ತತ್ರ ಫಣಾಮಂಡಲಮಂಡಿತಃ ।<br>
ದೃಷ್ಟ್ವಾ ತುಷ್ಟಾವ ಮಾಂ ತತ್ರ ದಿವೋದಾಸಃ ಕೃತಾಂಜಲಿಃ ॥ ೩೬ ॥

**ಶ್ರೀ ಶೇಷದೇವರು ಹೇಳಿದರು—**

ಗಂಗೆಯು ಊರ್ಧ್ವಲೋಕಗಳಿಂದ ಅಧೋಲೋಕಗಳಿಗೆ ಇಳಿದುಬಂದಾಗ ಪಾತಾಳಕ್ಕೆ ಬಿದ್ದಳು. ಆಗ ಅವಳು ನನ್ನ ದೇಹದ ಮೇಲೆ ಬಿದ್ದು ಅಲ್ಲಿಯೇ ಇದ್ದುಬಿಟ್ಟಳು. ಆದ್ದರಿಂದ ಅವಳಿಗೆ ''ಭೋಗವತೀ'' ಎಂಬ ಹೆಸರು ಬಂದಿತು. ॥ ೨೮ ॥ ಇವಳು ಮಂದಗತಿಯಿಂದ ಸ್ವರ್ಗದಲ್ಲಿ ಹರಿಯುವುದರಿಂದ ಮಂದಾಕಿನೀ ಎಂದು, ಪಾತಾಳದಲ್ಲಿ ಹರಿಯುವವಳಾದ್ದರಿಂದ ಪತಾಕಿನೀ, ಭೋರ್ಗರೆಯುತ್ತಾ ಹರಿಯುವುದರಿಂದ ಗಂಗಾ ಎಂದೂ ಮತ್ತು ಮೂರು ಲೋಕಗಳಲ್ಲೂ ಹರಿಯುವವಳಾದ್ದರಿಂದ ತ್ರಿಪಥಗಾ ಎಂದೂ ಹೆಸರುಳ್ಳವಳು. ॥ ೨೯ ॥ ಭಗೀರಥನು ಇವಳನ್ನು ಸ್ವರ್ಗದಿಂದ ಭೂಮಿಗೂ ಮತ್ತು ಭೂಲೋಕದಿಂದ ಪಾತಾಳಕ್ಕೂ ಕರೆತಂದಿದ್ದರಿಂದ ಇವಳಿಗೆ

ಭಾಗೀರಥೀ ಎಂದು, ಜಹ್ನುಋಷಿಯು ಪಾನಮಾಡಿ ಬಿಟ್ಟಿದ್ದರಿಂದ ಜಾಹ್ನವೀ ಎಂದು ಹೆಸರಾಯಿತು. ॥ ೩೦ ॥ ವಿಷ್ಣುಪಾದದಲ್ಲಿ ಹುಟ್ಟಿದ್ದರಿಂದ ''ವೈಷ್ಣವೀ'' ಎಂದು ಹೆಸರಾಯಿತು. ಈ ರೀತಿಯಾಗಿ ಗಂಗೆಯು ಅನೇಕ ಹೆಸರಿನಲ್ಲಿ ಕರೆಯಲ್ಪಟ್ಟಿದ್ದಾಳೆ. ಆದರೆ ವಾಸ್ತವವಾಗಿ ಅವಳು ಸಾಕ್ಷಾತ್ ಪರಬ್ರಹ್ಮನ ಸ್ವರೂಪಳೇ. (ಪರಬ್ರಹ್ಮನ ಸನ್ನಿಧಾನಕ್ಕೆ ಪಾತ್ರಳೆಂದರ್ಥ) ॥ ೩೦ ॥ ಈ ರೀತಿಯಾದ ಭೋಗವತೀತೀರ್ಥವು ಅಲ್ಲಿ ಇದೆ. ಇದು ಅಪೇಕ್ಷಿಸಲ್ಪಟ್ಟದ್ದನ್ನು ಕೊಡುವುದು. ಅದರಲ್ಲಿ ಸ್ನಾನಮಾಡಿದವರೂ, ಆ ಜಲವನ್ನು ಪಾನಮಾಡಿದವರೂ ಎಲ್ಲಾ ಅಪೇಕ್ಷೆಗಳನ್ನೂ ಪಡೆಯುವರು. ॥ ೩೨ ॥ ಸ್ನಾನ, ದಾನ, ಜಪ, ಅರ್ಚನೆ ಮುಂತಾದ ಅಲ್ಪಸ್ವಲ್ಪ ಸತ್ಕಾರ್ಯಗಳನ್ನು ಭೋಗವತೀಕುಂಡದಲ್ಲಿ ಮಾಡಿದರೆ ಅದರ ಫಲ ಅಕ್ಷಯವಾಗುವುದೆಂದು ಹೇಳಲ್ಪಟ್ಟಿದೆ. ॥ ೩೩ ॥ ಎಲೈ! ಸನಕಾದಿಗಳಿರಾ, ಅದರ ಸಮೀಪದಲ್ಲಿ ವಾಸುಕಿ ಮಂಡಲದಲ್ಲಿ ಮಹಾಪುಣ್ಯಕರವಾದ ನನ್ನ ಸ್ಥಾನವೂ ಇದೆ. ಹಿಂದೆ, ಮಹಾತಪಸ್ವಿಯಾದ ದಿವೋದಾಸನು ಈ ಭೋಗವತೀ ತೀರ್ಥದ ತೀರದಲ್ಲಿ ತಪಸ್ಸು ಮಾಡಿದನು. ನನ್ನ ಆರಾಧನೆಯಲ್ಲೇ ತತ್ಪರನಾಗಿ ಅರವತ್ತು ಸಹಸ್ರ ವರ್ಷಗಳು ತಪಸ್ಸನ್ನಾಚರಿಸಿದನು. ॥ ೩೪-೩೫ ॥ ನನ್ನ ಬಹುಫಣೆಗಳೊಡನೆ ನಾನು ಅವನಿಗೆ ಪ್ರತ್ಯಕ್ಷನಾದೆನು. ದಿವೋದಾಸನು ಕೈ ಜೋಡಿಸಿಕೊಂಡು ನನ್ನನ್ನು ಸ್ತೋತ್ರದಿಂದ ಸಂತೋಷಗೊಳಿಸಿದನು. ॥ ೩೬ ॥

ದಿವೋದಾಸ ಉವಾಚ—

ನಮಾಮಿ ತ್ವಾಂ ಶಾಶ್ವತಂ ಶೇಷರಾಜಂ
ವಿಶ್ವೋತ್ಪತ್ತಿಸ್ಥಾನಸಂಹಾರಹೇತುಂ ।
ನಾಗೇಶಂ ತ್ವಾಂ ಸರ್ಪನಾಥಂ ಹ್ಯನಂತಂ
ಸರ್ವಾಧ್ಯಕ್ಷಂ ವಾಸುಕಿಂ ತ್ವಾಂ ನಮಾಮಿ ॥ ೩೭ ॥
ಫಣಿನಂಫಣೀಂದ್ರಂ ಫಣಿನಾಂ ಗಣ್ಯೈರ್ಯುತಂ
ಫಣಾತಪತ್ರಂ ಫಣಿರಾಜರಾಜಿತಮ್ ।
ಫಣಾಸಹಸ್ರಸ್ಥಕಿರೀಟಶೋಭಿತಂ
ತಂ ವಾಸುಕಿಂ ದೇವಮಹಂ ಪ್ರಪದ್ಯೇ ॥ ೩೮ ॥
ಬಿಭರ್ತಿ ಯಂ ವೈ ಸತತಂ ಮಹೇಶೋ
ಬಿಭರ್ತಿ ಯಂ ವೈ ಶಿರಸಾ ಗಣೇಶಃ ।
ನಮಂತಿ ಯಂ ವೈ ದಿನಕೃತ್ಸುರೇಶಾ-
ಸ್ತಂ ವಾಸುಕಿಂ ತ್ವಾಮಹಮಾನತೋಽಸ್ಮಿ ॥ ೩೯ ॥
ಯೇ ದೇಹಭಾಜಾಂ ಪ್ರಣಿಧಾಯ ಕುಂಡಲೀಂ
ನಾರೀಷು ಯಾ ಕುಂಡಲಿನೀತಿ ಗೀಯತೇ ।
ಕುರ್ವಂತ್ಯುಪರ್ಯಸ್ಯ ಬಲೇನ ಯೋಗಿನೋ
ಯೋಗಸ್ಯ ಸಿದ್ಧಿಂ ತಮಹಂ ನತೋಽಸ್ಮಿ ॥ ೪೦ ॥
ಅಭಿನವತರರೂಪಂ ಗೂಢಪಾದಂ ಫಣೀಂದ್ರಂ
ಸುನಯನಶ್ರುತಿಯುಕ್ತಂ ಖ್ಯಾತಕಾಕೋದರಂ ತಮ್ ।

ಅವಿದಿತಗತಿಮಂತಂ ಸರ್ಪರಾಜಂ ದ್ವಿಜಿಹ್ವಂ
ಸಕಲಭುವನವೀರಂ ವಾಸುಕಿಂ ತ್ವಾಂ ನಮಾಮಿ ॥ ೪೧ ॥
ಸ್ತುವತೀತಿ ದಿವೋದಾಸೇ ಸುಪ್ರಸನ್ನಃ ಕೃತಾಂಜಲೌ ।
ಸ್ತೋತ್ರೇಣ ಪರಭಕ್ತ್ಯಾಹಮವೋಚಮನಘಾ ಇತಿ ॥ ೪೨ ॥

**ದಿವೋದಾಸನು ಹೇಳಿದನು—**

ಅನೇಕ ಕಲ್ಪಗಳ ಆಯಸ್ಸಿದ್ದು ಶಾಶ್ವತನೆಂದು ಖ್ಯಾತಿ ಪಡೆದವರೇ! ಶೇಷ ಎಂಬ ಹೆಸರಿನಿಂದ ವಿರಾಜಮಾನರಾಗಿರುವವರೇ! ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಲಯವನ್ನುಂಟುಮಾಡುವ ಸಂಕರ್ಷಣದೇವರನ್ನು ಅಂತರ್ಯಾಮಿಯಾಗಿ ಉಳ್ಳವರೇ! ಸರ್ಪಗಳಿಗೆಲ್ಲಾ ಅಧಿಪತಿಯಾಗಿರುವವರೇ! ವಾರುಣೀದೇವಿಗೆ ಪತಿಯಾಗಿರುವವರೇ! ಅನಂತನೆಂಬ ಹೆಸರುಳ್ಳವರೇ! ಎಲ್ಲರಿಗೂ ಶ್ರೇಷ್ಠರಾಗಿರುವವರೇ! ಮತ್ತು ವಾಸಸುಖವನ್ನು ಕೊಡುವುದರಿಂದ ವಾಸುಕಿ ಎಂಬ ನಾಮವುಳ್ಳವರೇ! ನಿಮಗೆ ನಮಸ್ಕಾರಗಳು. ॥ ೩೭ ॥ ಹೆಡೆಯಿಂದ "ಫಣಿ" ಎಂದು ಕರೆಯಲ್ಪಟ್ಟವರೇ! ಹೆಡೆಯುಳ್ಳ ನಾಗಗಳಿಗೆ ಶ್ರೇಷ್ಠನಾಗಿರುವರೇ! ಹೆಡೆಯುಳ್ಳ ಹಾವುಗಳಿಂದ ಕೂಡಿರುವವರೇ! ಫಣಿರಾಜನೆಂಬ ಪದವಿಯಿಂದ ವಿರಾಜಮಾನರಾಗಿರುವವರೇ! ಸಹಸ್ರ ಫಣೆಗಳ ಮೇಲೂ ಕಿರೀಟವುಳ್ಳವರೇ! ಮತ್ತು ವಾಸುಕಿ ಎಂಬ ಹೆಸರುಳ್ಳವರೆ! ನಿಮಗೆ ನಮಸ್ಕಾರಗಳು. ॥ ೩೮ ॥ ಯಾರನ್ನು ರುದ್ರದೇವರು ಕೊರಳಲ್ಲಿ ಧಾರಣೆ ಮಾಡಿದ್ದಾರೋ, ಯಾರನ್ನು ಗಣೇಶನು ಹೊಟ್ಟೆಯ ಮೇಲೆ ಧಾರಣೆ ಮಾಡಿದ್ದಾನೋ, ಯಾರನ್ನು ಯಾವಾಗಲೂ ಇಂದ್ರ ಮತ್ತು ಸೂರ್ಯನು ನಮಸ್ಕರಿಸುತ್ತಾರೋ, ಅಂಥ ವಾಸುಕಿಯೆಂಬ ಹೆಸರಿನಿಂದ ವಿರಾಜಮಾನರಾಗಿರುವ ಶೇಷದೇವರೇ! ನಿಮಗೆ ನಮಿಸುತ್ತೇನೆ. ॥ ೩೯ ॥ ಪುರುಷರಲ್ಲಿ ಮತ್ತು ನಪುಂಸಕರಲ್ಲಿ ಇರುವ ಈ ಶೇಷದೇವರ ರೂಪಕ್ಕೆ "ಕುಂಡಲೀ" ಎಂದು ಸ್ತ್ರೀಯರಲ್ಲಿರುವ ಈ ರೂಪಕ್ಕೆ ಕುಂಡಲಿನೀ ಎಂದು ಹೇಳಲ್ಪಡುತ್ತದೆ. ಯೋಗಿಗಳ ಜೊತೆ ಊರ್ಧ್ವಮುಖವಾಗಿ ಹೋಗಿ ಅವರಿಗೆ ಭೋಗದ ಪರಮಾವಧಿಯಾದ ಬ್ರಹ್ಮಾನಂದವನ್ನು ಉಣಿಸುವ ಶ್ರೀ ಶೇಷದೇವರೆ! ನಿಮಗೆ ನಮಸ್ಕಾರಗಳು. (ಕುಂಡಲಿನೀ ಎಂಬ ಪ್ರಖ್ಯಾತ ನಾಮಾಂಕಿತರಾದ ಶೇಷದೇವರು ಎಲ್ಲ ಜೀವಿಗಳ ಮೂಲಾಧಾರಸ್ಥಾನದಲ್ಲಿರುವ ಸುಷುಮ್ನಾ ನಾಡಿಯ ರಂಧ್ರವನ್ನು ನಿರೋಧಿಸುತ್ತ ಚಿತ್ತೈಕಾಗ್ರತೆಯಿಂದ ಸಮಾಧಿಯಲ್ಲಿದ್ದು ಭಗವಧ್ಯಾನಾಸಕ್ತರಾಗಿರುತ್ತಾರಲ್ಲದೇ ಆಹಾರವು ಜೀರ್ಣವಾಗುವುದಕ್ಕೂ ಮತ್ತು ಸೃಷ್ಟಿಕಾರ್ಯವು ಮುಂದುವರೆಯುವುದಕ್ಕೂ ಸಹಾಯ ಮಾಡುತ್ತಾರೆ. ಸಮಾಧಿಯಲ್ಲಿರುವ ಶೇಷನು ಯೋಗಿಗಳಲ್ಲಿ ಜಾಗ್ರತನಾಗಿದ್ದು ಯೋಗಿಗಳು ಬ್ರಹ್ಮಮಾರ್ಗದಲ್ಲಿ ಯಾತ್ರೆಮಾಡಲು ಪ್ರಾರಂಭಿಸಿದಾಗ ಮಾತ್ರ ಚಿತ್ತೈಕಾಗ್ರತೆಯಿಂದ ಎಚ್ಚರಗೊಂಡು ನಿರೋಧಿಸಿಕೊಂಡಿರುವ ರಂಧ್ರವನ್ನು ತೆಗೆಯುತ್ತಾರೆ. ಕುಂಡಲಿನಿಯು ಸುರಳಿಯ ಆಕಾರದಲ್ಲಿ ಅಧೋಮುಖವಾಗಿದ್ದ ಶೇಷನು, ಯೋಗಿಗಳು ಬ್ರಹ್ಮಮಾರ್ಗದಲ್ಲಿ ಪ್ರಯಾಣ ಮಾಡುವಾಗ ತಲೆಯನ್ನೆತ್ತಿ ಹೆಡೆಯನ್ನು ಬಿಚ್ಚಿ ಊರ್ಧ್ವಮುಖಿಯಾಗುತ್ತಾನೆ. ಯೋಗಿಗಳು ಬ್ರಹ್ಮಮಾರ್ಗದಲ್ಲಿ ಹೋಗಿ ಬ್ರಹ್ಮಾನಂದವನ್ನು ಅನುಭವಿಸುವಾಗ ಊರ್ಧ್ವಮುಖವಾಗಿ ಸಂಚರಿಸಿ ಅವರಿಗೆ ಬ್ರಹ್ಮಾನಂದದ ಅಮೃತವನ್ನು ಪಾನಮಾಡಿಸಿ ನಂತರ ಅವರು ಎಚ್ಚರಗೊಂಡಾಗ ಅಧೋಭಾಗದ ಮೂಲಾಧಾರಕ್ಕೆ ಬಂದು ಸೇರುತ್ತಾರೆ.) ॥ ೪೦ ॥ ಈಗ ನವೀನವಾದ ವಾಸುಕಿಯ ರೂಪದಲ್ಲಿರುವವರೇ! ನಿಮ್ಮ ಶರೀರದಲ್ಲಿ ಅಡಗಿರುವ

ಪಾದಗಳುಳ್ಳವರೇ! ಹೆಡೆಯುಳ್ಳ ಸರ್ಪಗಳಿಗೆಲ್ಲಾ ರಾಜರಾಗಿರುವವರೇ! ಕಣ್ಣಿನಲ್ಲಿಯೇ ಶ್ರೋತ್ರೇಂದ್ರಿಯವನ್ನೂ (ಕುಂಡಲೀ ಗೂಢಪಾಚ್ಚಕ್ಷುಃ - ಅಮರಕೋಶ) ಹೊಂದಿರತಕ್ಕವರೇ! ಕಾಕೋದರನೆಂಬ ಪ್ರಸಿದ್ಧ ಹೆಸರುಳ್ಳವರೇ! ಯಾರಿಂದಲೂ ಗುರುತಿಸಲಾಗದ ಚಲನದ ಮಾರ್ಗವುಳ್ಳವರೇ, ಸರ್ಪಜಾತಿಗೆ ರಾಜರೇ, ಎರಡು ನಾಲಿಗೆಯುಳ್ಳವರೇ! ಎಲ್ಲ ಲೋಕಗಳಲ್ಲಿ ಅತಿಪರಾಕ್ರಮಶಾಲಿಗಳಾದವರೇ! ವಾಸುಕಿಯೆಂಬ ಹೆಸರುಳ್ಳವರೇ! ನಿಮಗೆ ನಮಸ್ಕಾರಗಳು. ॥ ೪೧ ॥ ಈ ರೀತಿಯಾದ ಸ್ತೋತ್ರದಿಂದ ಸ್ತುತಿಸಿ ದಿವೋದಾಸನು ಕೈಜೋಡಿಸುತ್ತಿರಲಾಗಿ, ಎಲೈ! ಪಾಪರಹಿತರಾದ ಸನಕಾದಿಗಳೇ, ಸುಪ್ರಸನ್ನನಾದ ನಾನು ಅವನ ಉತ್ತಮ ಭಕ್ತಿಗೆ ಪ್ರಸನ್ನನಾಗಿ, ಅವನನ್ನು ಕುರಿತು ಮುಂದೆ ಹೇಳುವಂತೆ ಮಾತನಾಡಿದೆನು. ॥ ೪೨ ॥

**ಶೇಷ ಉವಾಚ—**

> ವರಂ ಬ್ರೂಹಿ ವರಂ ಬ್ರೂಹಿ ದಿವೋದಾಸ ಸಸತ್ವರಂ ।
> ಸರ್ವಾರ್ಥಸಾಧನಂ ಬ್ರೂಹಿ ಯತ್ತೇ ಮನಸಿ ವರ್ತತೇ ॥ ೪೩ ॥

**ಶೇಷದೇವರು ಹೇಳಿದರು—**

''ಹೇ ದೇವೋದಾಸ! ನಿನಗೆ ವಾಂಛಿತವಾದ ವರವನ್ನು ಹೇಳು. ನಿನ್ನ ಮನಸ್ಸಿನಲ್ಲಿರುವ ಸರ್ವ ಅರ್ಥಗಳನ್ನೊಳಗೊಂಡ ಪುರುಷಾರ್ಥಗಳನ್ನೊಳಗೊಂಡ ವರವನ್ನೂ, ಮೋಕ್ಷಕ್ಕೆ ಸಾಧನೀಭೂತವಾದ ವರವನ್ನೂ ಕೇಳಿಕೋ.'' ॥ ೪೩ ॥

**ದಿವೋದಾಸ ಉವಾಚ—**

> ಯದಿ ಪ್ರಸನ್ನೋ ಭಗವಾನ್ ಭವಾನ್ ಸರ್ವಾರ್ಥಸಾಧಕಮ್ ।
> ವಾರಾಣಸ್ಯಾಧಿಪತ್ಯಂ ಮೇಽಚಲಂ ದೇಹಿ ಪತಂಜಲೇ ॥ ೪೪ ॥

**ದಿವೋದಾಸನು ಹೇಳಿದನು—**

''ಪತಂಜಲಿ'' ಎಂಬ ಸುಪ್ರಸಿದ್ಧ ನಾಮಾಂಕಿತರೇ! ಪೂಜ್ಯರಾದ ತಾವು ಪ್ರಸನ್ನರಾಗಿದ್ದರೆ, ನಾಲ್ಕು ವಿಧ ಪುರುಷಾರ್ಥಗಳನ್ನು ಸಾಧಿಸಲು ಯೋಗ್ಯವಾದ ವಾರಾಣಸಿಯ ಶಾಶ್ವತಾಧಿಪತ್ಯವನ್ನು ನನಗೆ ಕರುಣಿಸಿ'' ಎಂದು ಬೇಡಿದನು. ॥ ೪೪ ॥

> ತಥೇತ್ಯುಕ್ತೋ ಮಯಾ ಪಶ್ಚಾತ್ ದಿವೋದಾಸೋ ಮಹೀಪತಿಃ ।
> ಕಾಶ್ಯಾಂ ಗತ್ವಾ ಪ್ರಜಾಸ್ಸರ್ವಾಃ ಧರ್ಮೇಣಾಪಾಲಯಚ್ಚಿರಮ್ ॥ ೪೫ ॥
> ತಸ್ಯೈವ ಪೌರುಷಂ ವಕ್ತುಂ ನ ಕೋಽಪಿ ಭುವನೇ ಪ್ರಭುಃ ।
> ವಿಶ್ವೇಶೋಽಪಿ ಗತೋ ದೂರೇ ವಿಹಾಯ ನಂದಕಾನನಮ್ ॥ ೪೬ ॥
> ಏವಂ ವಿಧಮಿದಂ ಕ್ಷೇತ್ರಂ ವಾಸುಕೇರ್ಮಮ ಚ ಪ್ರಿಯಮ್ ।
> ತ್ರಿಂಶದ್ದಂಡಾತ್ಮಕಂ ಕ್ಷೇತ್ರಂ ನಾನಾ ನಾಗಗಣಾನ್ವಿತಮ್ ॥ ೪೭ ॥
> ಯಃ ಸ್ನಾತ್ವಾ ಮಾಮಕೇ ಕುಂಡೇ ವಾಸುಕಿಂ ಮಾಂ ಪ್ರಪೂಜಯೇತ್ ।
> ಪ್ರಾಪ್ನೋತಿ ಸಕಲಾನರ್ಥಾನಿಹ ಪ್ರೇತ್ಯ ದಿವಂ ವ್ರಜೇತ್ ॥ ೪೮ ॥

**ಶ್ರಾವಣೇ ಶುಕ್ಲ ಪಂಚಮ್ಯಾಂ ಪಕ್ಷೇ ಯೇ ಯಾತ್ರಿಕಾ ಜನಾಃ ।**
**ಪೂಜಯಂತಿ ವಿಶೇಷೇಣ ತೇಷಾಂ ತುಷ್ಟೋ ಭವಾಮ್ಯಹಮ್ ॥ ೪೯ ॥**
**ಸ್ನಾನದಾನಾದಿಕಂ ತತ್ರ ಕುರ್ವತಾಮಖಿಲೇ ಕುಲೇ ।**
**ಅಸ್ಮಜ್ಜಾತಿಕೃತಾ ಬಾಧಾ ನ ಭವೇದಿತಿ ಶಾಸನಮ್ ॥ ೫೦ ॥**
**ಉತ್ತರಾವಧಿಭೂತಂ ತತ್ಪ್ರಯಾಗಸ್ಯ ಮುನೀಶ್ವರಾಃ ।**
**ವರ್ಣಿತಂ ವಾಸುಕಿಕ್ಷೇತ್ರಮಥಾನ್ಯದಪಿ ವಚ್ಮಿ ವಃ ॥ ೫೧ ॥**

**॥ ಇತಿ ಪಂಚಾಶೀತಿತಮೋऽಧ್ಯಾಯಃ ॥**

''ಹಾಗೆಯೇ ಆಗಲಿ'' ಎಂದು ನನ್ನಿಂದ ಹೇಳಿಸಿಕೊಂಡ ದಿವೋದಾಸರಾಜನು ಕಾಶಿಗೆ ಹೋಗಿ ಬಹುಕಾಲ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿದನು. ॥ ೪೫ ॥ ಅವನ ಪರಾಕ್ರಮವನ್ನು ವರ್ಣಿಸಲು ಈ ಲೋಕದಲ್ಲಿ ಯಾರೂ ಶಕ್ತನಲ್ಲ. ಏಕೆಂದರೆ ಸಾಕ್ಷಾತ್ ಈಶ್ವರನೇ ದಿಗ್ಭ್ರಾಂತನಾಗಿ ಕಾಶಿಯನ್ನು ಬಿಟ್ಟು ಪ್ರಯಾಗದ ಪೂರ್ವಭಾಗದಲ್ಲಿರುವ ನಂದನವನಕ್ಕೆ ಹೊರಟುಹೋದನು. (ಇದು ಅತಿಶಯೋಕ್ತ್ಯಲಂಕಾರವು). ಈ ರೀತಿಯಾಗಿರತಕ್ಕ ಈ ಕ್ಷೇತ್ರವು ನನಗೂ, ನನ್ನ ರೂಪವೇ ಆದ ವಾಸುಕಿಗೂ ಬಹು ಪ್ರಿಯವಾದದ್ದು. ॥ ೪೬ ॥ ಮೂವತ್ತು ದಂಡಗಳ ವಿಸ್ತಾರವುಳ್ಳದ್ದು. (ಡೋಲು ಶಬ್ದ ಕೇಳಿಸುವ ವಿಸ್ತಾರಕ್ಕೆ ಒಂದು ದಂಡವೆಂದು ಹೆಸರು). ಇದು ನಾನಾ ಬೆಟ್ಟಗಳ ಶ್ರೇಣಿಗಳಿಂದ ಕೂಡಿದೆ. ॥ ೪೭ ॥ ನನಗೆ ಸಂಬಂಧಪಟ್ಟ ಈ ವಾಸುಕೀ ಕುಂಡದಲ್ಲಿ ಯಾರು ಸ್ನಾನಮಾಡಿ ವಾಸುಕಿಯನ್ನೂ ಮತ್ತು ನನ್ನನ್ನೂ ಪೂಜಿಸುವರೋ ಅವರು ಎಲ್ಲ ಪುರುಷಾರ್ಥಗಳನ್ನೂ ಹೊಂದಿ ಸ್ವರ್ಗಲೋಕಕ್ಕೂ ತೆರಳುವರು. ॥ ೪೮ ॥ ಶ್ರಾವಣಮಾಸದ ಶುಕ್ಲಪಕ್ಷದಲ್ಲಿನ ಪಂಚಮಿಯಂದು ಯಾರು ನನ್ನನ್ನು ಪೂಜಿಸುವರೋ ಅಂತಹ ಯಾತ್ರಿಕನಿಗೆ ನಾನು ಬಹು ಪ್ರಸನ್ನನಾಗುತ್ತೇನೆ. ॥ ೪೯ ॥ ಅಲ್ಲಿ ಸ್ನಾನ ದಾನಾದಿಗಳನ್ನು ಮಾಡುವವರ ಕುಲಕ್ಕೆ ಸೇರಿದವರ್ಯಾರಿಗೂ ನಮ್ಮ ಸರ್ಪಗಳ ಭಯವು ಇರುವುದಿಲ್ಲ. ಹೀಗೆಂದು ನನ್ನ ಶಾಸನವಿದೆ. ॥ ೫೦ ॥ ಉತ್ತರ ದಿಕ್ಕಿನವರೆಗೆ ಇರುವ ಪ್ರಯಾಗದಲ್ಲಿನ ವಾಸುಕೀ ತೀರ್ಥಕ್ಷೇತ್ರವನ್ನು ವರ್ಣಿಸಿದ್ದಾಯಿತು. ಹೇ ಋಷಿಗಳಿರಾ! ಬೇರೇ ತೀರ್ಥಗಳನ್ನು ಹೇಳುವೆ. ॥ ೫೧ ॥

॥ ಎಂಬತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಡಶೀತಿತಮೋಽಧ್ಯಾಯಃ ॥ ೮೬ ॥

ಶೇಷ ಉವಾಚ—

ಗಂಗಾಯಾಃ ಪಶ್ಚಿಮೇ ತೀರೇ ವಾಸುಕೇರ್ದಕ್ಷಿಣೇ ಶುಭಮ್ ।
ಆಧಿವ್ಯಾಧಿಹರಂ ಪುಣ್ಯಂ ಬ್ರಹ್ಮಕುಂಡೋ ವಿರಾಜತೇ ॥ ೧ ॥
ಬ್ರಹ್ಮಣಾ ನಿರ್ಮಿತಂ ಕುಂಡಂ ಬ್ರಹ್ಮಹತ್ಯಾನಿವಾರಕಮ್ ।
ಬ್ರಹ್ಮಣಾಧಿಷ್ಠಿತಂ ಶಶ್ವತ್ಸರ್ವಕಾಮಕರಂಡಕಮ್ ॥ ೨ ॥
ತತ್ರ ಸ್ನಾತ್ವಾ ಚ ಯೇ ಲೋಕಾಸ್ತರ್ಪಯಂತಿ ಸ್ವಕಾನ್ಪಿತೄನ್ ।
ತದೈವ ಪಿತರಸ್ತೇಷಾಂ ಗಚ್ಛಂತಿ ಬ್ರಹ್ಮಣಃ ಪದಮ್ ॥ ೩ ॥
ಸ್ನಾನಹೋಮತಪೋದಾನಜಪಸ್ವಾಧ್ಯಾಯಪೂಜನಮ್ ।
ಭಕ್ತ್ಯಾ ಕುರ್ವಂತಿ ಯೇ ವಿಪ್ರಾ ಬ್ರಹ್ಮಲೋಕೇ ವಸಂತಿ ತೇ ॥ ೪ ॥
ತಸ್ಯ ದಕ್ಷಿಣದಿಗ್ಭಾಗೇ ತ್ರಿಷು ಲೋಕೇಷು ವಿಶ್ರುತಂ ।
ದಶಾಶ್ವಮೇಧಿಕಂ ತೀರ್ಥಂ ವರ್ತತೇ ಪಾಪನಾಶನಮ್ ॥ ೫ ॥
ತಸ್ಮಿನ್ನೇಕಗುಣಂ ಪುಣ್ಯಂ ದಶವೃದ್ಧ್ಯಾ ವಿವರ್ಧತೇ ।
ಪಾಪಂ ಪ್ರಶಮಮಾಯಾತಿ ವಾಙ್ಮನಃಕಾಯಸಂಚಿತಮ್ ॥ ೬ ॥
ಅನ್ಯತ್ರ ಶತಯಜ್ಞೈರ್ಯನ್ನರೈಃ ಫಲಮವಾಪ್ಯತೇ ।
ತದತ್ರೈಕೇನ ಯಜ್ಞೇನ ಪ್ರಾಪ್ಯತೇ ಸಕಲಂ ಫಲಮ್ ॥ ೭ ॥
ಅತ ಏವ ಪುರಾ ತತ್ರ ವಾಜಿಮೇಧಾಃ ಕೃತಾ ದಶ ।
ಬ್ರಹ್ಮಣಾ ದೇವಮುಖ್ಯೇನ ತೇನ ಖ್ಯಾತಂ ತಥೈವ ತತ್ ॥ ೮ ॥
ದಶಾಶ್ವಮೇಧಿಕೇ ತೀರ್ಥೇ ವೈಶಾಖೇ ಮಾಸಿ ಯೋ ನರಃ ।
ನಿಯತಂ ಪ್ರತ್ಯಹಂ ಸ್ನಾತಿ ಸೋಽಶ್ವಮೇಧಫಲಂ ಲಭೇತ್ ॥ ೯ ॥
ಯಸ್ಯಕಸ್ಯಾಪಿ ಧಾನ್ಯಸ್ಯ ತುಲಾಂ ತತ್ರ ಕರೋತಿ ಯಃ ।
ಸುವರ್ಣಾದಿತುಲಾಪುಣ್ಯಂ ಭಕ್ತ್ಯಾ ಪ್ರಾಪ್ನೋತಿ ಮಾನವಃ ॥ ೧೦ ॥
ದಶಾಶ್ವಮೇಧಿಕೇ ತೀರ್ಥೇ ಪಂಚಯಜ್ಞಾನ್ಕರೋತಿ ಯಃ ।
ಪಂಚಾಶ್ವಮೇಧಜಂ ಪುಣ್ಯಂ ಪ್ರಾಪ್ನೋತ್ಯೇವ ನ ಸಂಶಯಃ ॥ ೧೧ ॥
ಧನುಃಶತಮಿತೇ ತಸ್ಮಿನ್ ದೇಹತ್ಯಾಗಂ ಕರೋತಿ ಯಃ ।
ನ ವೈ ಸ ಪುನರಾಯಾತಿ ಸಂಸೃತಿಂ ಸನಕಾದಯಃ ॥ ೧೨ ॥
ಸ್ನಾನತರ್ಪಣತೋ ದಾನಾದ್ಧೋಮಾತ್ ಸ್ವಾಧ್ಯಾಯತೋ ಜಪಾತ್ ।
ಅಸಂಖ್ಯಂ ಸುಕೃತಂ ಯತ್ರ ಪ್ರಾಪ್ನೋತಿ ಶ್ರದ್ಧಯಾ ಜನಃ ॥ ೧೩ ॥
ಪ್ರಾತಃ ಸ್ನಾತ್ವಾ ವಿಧಾನೇನ ಗಂಗಾಯಮುನಸಂಗಮೇ ।
ತತ್ರ ಮಾಧ್ಯಾಹ್ನಿಕಂ ಕೃತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೧೪ ॥

ಯಾತ್ರಾರ್ಥಮಾಗತಾ ಯೇ ಚ ಪ್ರಯಾಗೇ ಸಕಲಾ ಜನಾಃ ।
ದಶಾಶ್ವಮೇಧೇ ನ ಸ್ನಾಂತಿ ಬ್ರಹ್ಮಾ ತೇಭ್ಯಃ ಪ್ರಕುಪ್ಯತೇ ॥ ೧೫ ॥
ತಸ್ಯೈವ ಪಶ್ಚಿಮೇ ಭಾಗೇ ಶಿವಸ್ಯ ಸ್ಥಾನಮುತ್ತಮಮ್ ।
ತತ್ರ ಗತ್ವಾ ಶಿವಂ ಭಕ್ತ್ಯಾ ತತ್ತೀರ್ಥೇಶಂ ನಮಂತಿ ಯೇ ॥ ೧೬ ॥
ಪೂಜಯಂತ್ಯುಪಚಾರೈಶ್ಚ ಬಿಲ್ವಪತ್ರಾದಿಭಿಶ್ಶುಭೈಃ ।
ತೇಷಾಂ ಯಾತ್ರಾಫಲಂ ಪೂರ್ಣಂ ಜಾಯತೇ ನಾತ್ರ ಸಂಶಯಃ ॥ ೧೭ ॥
ಗಂಗಾಯಾಃ ಪಶ್ಚಿಮೇ ಭಾಗೇ ಲಕ್ಷ್ಮೀತೀರ್ಥಂ ತದಂತಿಕೇ ।
ತಪಸ್ತಪ್ತ್ವಾ ಪುರಾ ಯತ್ರ ಮಾಧವಂ ಪ್ರಾಪ ವಲ್ಲಭಮ್ ॥ ೧೮ ॥
ಲಕ್ಷ್ಮೀತೀರ್ಥಾತ್ಪರಂ ತೀರ್ಥಂ ಲಕ್ಷ್ಮೀಪ್ರಾಪ್ತಿಕರಂ ನ ಹಿ ।
ಸ್ನಾತ್ವಾ ಪೂಜನದಾನಾದ್ಯೈರ್ಗೃಹೇ ಲಕ್ಷ್ಮೀಃ ಸ್ಥಿರಾಯತೇ ॥ ೧೯ ॥
ತೀರ್ಥಂ ಮಹೋದಧೇಸ್ತತ್ರ ದಕ್ಷಿಣೇಽಸ್ತಿ ಮಲಾಪಹಮ್ ।
ತಸ್ಯ ದರ್ಶನಮಾತ್ರೇಣ ಸರ್ವಂ ನಶ್ಯಂತಿ ಸಂಕಟಮ್ ॥ ೨೦ ॥
ಜಗತ್ತ್ರಯಗತಾಃ ಸರ್ವೇ ತೀರ್ಥರಾಜೇ ಸಮಾಗತಾಃ ।
ತದಾರಭ್ಯಾಂಶತಸ್ತತ್ರ ತಿಷ್ಠಂತ್ಯೇವಾಭಿಲಾಷಕಾಃ ॥ ೨೧ ॥
ಮಹೋದಧೌ ಸ್ನಾನಪಾನಾದ್ದೇವರ್ಷಿಪಿತೃತರ್ಪಣಾತ್ ।
ಸರ್ವಪಾಪವಿಶುದ್ಧಾತ್ಮಾ ಯಾತಿ ವಿಷ್ಣುಪರಂ ಪದಂ ॥ ೨೨ ॥
ಯತ್ಕಿಂಚಿತ್ಕುರುತೇ ದಾನಂ ನರೋ ಭಕ್ತ್ಯಾ ಮಹೋದಧೌ ।
ತಸ್ಯ ತದ್ದಾನಜಂ ಪುಣ್ಯಂ ಪ್ರಲಯೇಽಪಿ ನ ನಶ್ಯತಿ ॥ ೨೩ ॥
ತಸ್ಯಾಥ ದಕ್ಷಿಣೇ ಭಾಗೇ ಹ್ಯುರ್ವಶೀಕುಂಡಮುತ್ತಮಂ ।
ವರ್ತತೇಽಮಲಪಾನೀಯಂ ಋಷಿಸಿದ್ಧಸುರೈರ್ವೃತಮ್ ॥ ೨೪ ॥
ತತ್ರ ಸ್ನಾನಾಚ್ಚ ಪಾನಾಚ್ಚ ದೇವರ್ಷಿಪಿತೃತರ್ಪಣಾತ್ ।
ಯತ್ಫಲಂ ಸಮವಾಪ್ನೋತಿ ತದನ್ಯತ್ರ ಸುದುರ್ಲಭಮ್ ॥ ೨೫ ॥
ತ್ರಿರಾತ್ರಂ ಪಂಚರಾತ್ರಂ ವಾ ಸಪ್ತರಾತ್ರಮಥತ್ರ ಯಃ ।
ಸ್ಥಿತ್ವಾ ಸ್ನಾನಜಪಾರ್ಚಾದಿ ಕುರುತೇ ನಿಯತವ್ರತಃ ॥ ೨೬ ॥
ರೂಪವಾನ್ ಗುಣವಾನ್ ದಕ್ಷೋ ಧನೀಭೂತ್ವಾ ಸ ಧಾರ್ಮಿಕಃ ।
ಊರ್ವಶೀಸದೃಶೀನಾಂ ತು ಸ್ತ್ರೀಣಾಂ ಭವತಿ ವಲ್ಲಭಃ ॥ ೨೭ ॥
ಅಪರಂ ಚೋರ್ವಶೀಕುಂಡಂ ಯಮುನಾದಕ್ಷಿಣೇ ತಟೇ ।
ವಿದ್ಯತೇ ಸನಿಮಿತ್ತಂ ತದ್ವದಿಷ್ಯೇ ಮುನಿಪುಂಗವಾಃ ॥ ೨೮ ॥
ಬ್ರಹ್ಮನಾಲಮಥೋ ವಕ್ಷ್ಯೇ ಯಸ್ಮಾತ್ಬ್ರಹ್ಮಾ ಪ್ರಜಾಯತೇ ।
ಪ್ರಲಯೇ ಲಯಮಾಪ್ನೋತಿ ಸಂಹೃತ್ಯ ಸಕಲಂ ಜಗತ್ ॥ ೨೯ ॥

ತಸ್ಮಾತ್ತತ್ಪಾವನಂ ತೀರ್ಥಂ ಧನುರ್ವಿಂಶತಿಮಂಡಲಮ್ ।
ವಾಸೇನೇಷ್ಟಪ್ರದಂ ನೃಣಾಂ ಮರಣಾನ್ಮರಣಾಪಹಮ್ ॥ ೩೦ ॥
ಸ್ನಾನಸಂಧ್ಯಾರ್ಚನಧ್ಯಾನದಾನಹೋಮಾದಿತರ್ಪಣೈಃ ।
ಅನಂತಪುಣ್ಯಮಾಪ್ನೋತಿ ಭಕ್ತಿಮಾನ್ಯಾತ್ರಿಕೋ ನರಃ ॥ ೩೧ ॥
ಏನಮನ್ಯಾನ್ಯತೀರ್ಥಾನಿ ವರ್ಣಿತಾನಿ ಯಥಾಶ್ರುತಂ ।
ಯಾತ್ರಾಮಮೀಷಾಂ ಕೃತ್ವಾಂತೇ ಪುನರ್ವೇಣ್ಯಾಂ ವ್ರಜೇನ್ನರಃ ॥ ೩೨ ॥
ತತ್ರ ಸ್ನಾತ್ವಾ ತಥಾ ಕೃತ್ವಾ ವೇಣೀಮಾಧವಪೂಜನಂ ।
ಸಂಪ್ರಾರ್ಥ್ಯ ದಂಡವನ್ನತ್ವಾ ತತೋ ಯಾತ್ರಾಂ ನಿವೇದಯೇತ್ ॥ ೩೩ ॥
ಏವಂ ಯಃ ಕುರುತೇ ಯಾತ್ರಾಂ ಭಕ್ತಿಮಾನ್ಯಾತ್ರಿಕೋ ನರಃ ।
ಯಾತ್ರಾಸಾಫಲ್ಯಮಾಸಾದ್ಯ ಪ್ರಾಪ್ನುಯಾತ್ಸ ಮಹತ್ಫಲಮ್ ॥ ೩೪ ॥

## ॥ ಎಂಬತ್ತಾರನೆಯ ಅಧ್ಯಾಯವು ॥

**ಶ್ರೀ ಶೇಷದೇವರು ಹೇಳಿದರು—**

ಗಂಗೆಯ ಪಶ್ಚಿಮಕ್ಕೂ ಮತ್ತು ವಾಸುಕೀತೀರ್ಥದ ದಕ್ಷಿಣಕ್ಕೂ ಬ್ರಹ್ಮಕುಂಡವೆಂಬ ತೀರ್ಥವಿದೆ. ಇದು ಸಕಲ ದೈಹಿಕ ವ್ಯಾಧಿಗಳನ್ನೂ, ಮಾನಸಿಕ ವ್ಯಥೆಗಳನ್ನೂ ಪರಿಹಾರ ಮಾಡುವುದಾಗಿದ್ದು ಅತ್ಯಂತ ಶುಭಕರವೂ, ಪುಣ್ಯಪ್ರದವೂ ಆಗಿದೆ. ॥ ೧ ॥ ಈ ಕುಂಡವು ಬ್ರಹ್ಮದೇವರಿಂದ ನಿರ್ಮಿತವಾದದ್ದು. ಇದರಲ್ಲಿ ಬ್ರಹ್ಮನು ಶಾಶ್ವತವಾಗಿ ವಾಸಮಾಡಿಕೊಂಡಿದ್ದಾನೆ. ಇದು ಬ್ರಹ್ಮಹತ್ಯೆಯ ದೋಷಪರಿಹಾರಮಾಡುವುದು, ಎಲ್ಲಾ ಕಾಮನೆಗಳಿಗೆ ಪೆಟ್ಟಿಗೆಯಿದ್ದಂತೆ ಇರುವುದು. ॥ ೨ ॥ ಇಲ್ಲಿಸ್ನಾನಮಾಡಿ ಪಿತೃತರ್ಪಣ ಮಾಡಿದವರ ಪಿತೃಗಳು ಆಗಲೇ ವೈಕುಂಠವನ್ನು ಕುರಿತು ಹೋಗುವರು. ॥ ೩ ॥ ಇಲ್ಲಿ ಸ್ನಾನ, ದಾನ, ಜಪ, ತಪ, ಸ್ವಾಧ್ಯಾಯ ಮತ್ತು ಪೂಜೆಯನ್ನು ಭಕ್ತಿಯಿಂದ ಮಾಡುವ ವಿಪ್ರರು ಬ್ರಹ್ಮಲೋಕದಲ್ಲಿವಾಸಿಸುವರು. ॥ ೪ ॥ ಈ ಬ್ರಹ್ಮಕುಂಡದ ದಕ್ಷಿಣ ದಿಗ್ಭಾಗದಲ್ಲಿ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವ ಪಾಪಪರಿಹಾರಕವಾದ ''ದಶಾಶ್ವಮೇಧ'' ತೀರ್ಥವಿದೆ. ॥ ೫ ॥ ಅಲ್ಲಿ ಪುಣ್ಯ ಬರುವಷ್ಟು ಒಂದು ಸತ್ಕಾರ್ಯ ಮಾಡಿದರೂ ಅದು ಹತ್ತರಷ್ಟು ವೃದ್ಧಿಯಾಗುವುದು. ವಾಕ್, ಮನಸ್ಸು ಮತ್ತು ಶರೀರ ಇವುಗಳಿಂದ ಆಗಿರತಕ್ಕ ಪಾಪಗಳೆಲ್ಲಾ ನಿವೃತ್ತಿಯಾಗುವುವು. ॥ ೬ ॥ ಬೇರೆ ಬೇರೆ ತೀರ್ಥಗಳಲ್ಲಿ ಮಾಡಲ್ಪಟ್ಟ ನೂರು ಯಜ್ಞಗಳ ಫಲವು ಇಲ್ಲಿ ಒಂದೇ ಒಂದು ಯಜ್ಞಮಾಡುವುದರಿಂದಲೇ ಲಭ್ಯವಾಗುವುವು. ॥ ೭ ॥ ಆದ್ದರಿಂದ ಬ್ರಹ್ಮದೇವರಿಂದ ಅಲ್ಲಿ ಹತ್ತು ಅಶ್ವಮೇಧ ಯಾಗಗಳು ಆಚರಿಸಲ್ಪಟ್ಟವು. ಆದ್ದರಿಂದಲೇ ''ದಶಾಶ್ವಮೇಧತೀರ್ಥ''ವೆಂದು ಈ ಕ್ಷೇತ್ರಕ್ಕೆ ಹೆಸರು ಬಂದಿತು. ॥ ೮ ॥ ಈ ತೀರ್ಥದಲ್ಲಿ ವೈಶಾಖಮಾಸದಲ್ಲಿ ಪ್ರತಿನಿತ್ಯವೂ ಯಾರು ಸ್ನಾನಮಾಡುವರೋ ಅವರಿಗೆ ಅಶ್ವಮೇಧಯಾಗದ ಫಲವು ಲಭಿಸುವುದು. ॥ ೯ ॥ ಯಾರು ಭಕ್ತಿಯಿಂದ ಇಲ್ಲಿ ಯಾವುದೇ ಧಾನ್ಯದ ತುಲಾಭಾರ ಮಾಡಿಸಿಕೊಂಡು ಆ ಧಾನ್ಯವನ್ನು ದಾನಮಾಡಿದರೆ ಅವರಿಗೆ ಬಂಗಾರದಿಂದ ತುಲಾಭಾರ ಮಾಡಿಸಿಕೊಂಡು ಆ ಬಂಗಾರವಷ್ಟನ್ನೂ ದಾನಮಾಡಿದರೆ ಬರುವ ಪೂರಾ ಪುಣ್ಯವು ಪ್ರಾಪ್ತವಾಗುವುದು. ॥ ೧೦ ॥ ಈ ದಶಾಶ್ವಮೇಧ ತೀರ್ಥದಲ್ಲಿಯಾರು ಪಂಚಮಹಾಯಜ್ಞಗಳನ್ನು

ಮಾಡುವವನೋ ಅವನಿಗೆ ಐದು ಅಶ್ವಮೇಧಯಾಗ ಮಾಡಿದ ಫಲವು ಬರುವುದು. ಇದರಲ್ಲಿ ಸಂದೇಹವಿಲ್ಲ. ॥ ೧೧ ॥ ನೂರು ಬಾಣಗಳ ವಿಸ್ತಾರವುಳ್ಳ ಈ ತೀರ್ಥದಲ್ಲಿ ಯಾರು ದೇಹತ್ಯಾಗ ಮಾಡುವವರೋ ಅವರಿಗೆ ಪುನರ್ಜನ್ಮವಿಲ್ಲ. ಅಂದರೆ ಅವರು ಮುಕ್ತರಾಗುತ್ತಾರೆ. ॥ ೧೨ ॥ ಶ್ರದ್ಧೆಯಿಂದ ಇಲ್ಲಿ ಸ್ನಾನ, ದಾನ, ತರ್ಪಣ, ಹೋಮ, ಸ್ವಾಧ್ಯಾಯ ಮತ್ತು ಜಪ ಇವುಗಳನ್ನು ಮಾಡುವ ದಶೆಯಿಂದ ಎಲ್ಲಾ ಪಾಪಗಳೂ ಪರಿಹಾರವಾಗುವುವು. ॥ ೧೩ ॥ ಗಂಗೆ-ಯಮುನೆಯರ ಸಂಗಮದಲ್ಲಿ ವಿಧಿಪೂರ್ವಕವಾಗಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಮತ್ತು ಅಲ್ಲಿ ಮಾಧ್ಯಾಹ್ನಿಕ ಮಾಡಿದವನ ಎಲ್ಲ ಪಾಪಗಳೂ ಪರಿಹಾರವಾಗುತ್ತದೆ. ॥ ೧೪ ॥ ಯಾತ್ರೆಗಾಗಿ ಪ್ರಯಾಗಕ್ಕೆ ಬಂದು ದಶಾಶ್ವಮೇಧ ಕುಂಡದಲ್ಲಿ ಯಾರು ಸ್ನಾನಮಾಡುವುದಿಲ್ಲವೋ ಅವರ ಬಗ್ಗೆ ಚತುರ್ಮುಖ ಬ್ರಹ್ಮದೇವರು ಕುಪಿತರಾಗುವರು. ॥ ೧೫ ॥ ಈ ದಶಾಶ್ವಮೇಧ ಕುಂಡದ ಪಶ್ಚಿಮಭಾಗದಲ್ಲಿ ಉತ್ತಮವಾದ ಮಹಾರುದ್ರ ದೇವರ ಸ್ಥಾನವಿದೆ. ಅಲ್ಲಿಗೆ ಹೋಗಿ ಈ ತೀರ್ಥದ ಸ್ವಾಮಿಯಾದ ಶಿವನನ್ನು ನಮಸ್ಕರಿಸಿ, ಬಿಲ್ವಪತ್ರೆಯಿಂದಲೂ ಮತ್ತು ಷೋಡಶೋಪಚಾರ ಪೂಜಾದಿಗಳಿಂದಲೂ ಸೇವಿಸಿದವರಿಗೆ ಪ್ರಯಾಗದ ಯಾತ್ರೆಯ ಪೂರ್ಣಫಲವು ಸಿಗುವುದು. ॥ ೧೬-೧೭ ॥ ಈ ಶಿವಸ್ಥಾನದ ಹತ್ತಿರದಲ್ಲೇ ಗಂಗೆಯ ಪಶ್ಚಿಮಕ್ಕೆ ಲಕ್ಷ್ಮೀತೀರ್ಥವಿದೆ. ಇಲ್ಲಿ ಹಿಂದೆ ಶ್ರೀ ಲಕ್ಷ್ಮೀದೇವಿಯು ತಪಸ್ಸನ್ನು ಮಾಡಿ ಶ್ರೀ ಮಾಧವನನ್ನು ತನ್ನ ಗಂಡನನ್ನಾಗಿ ಪಡೆದಳು. ಲಕ್ಷ್ಮೀತೀರ್ಥಕ್ಕಿಂತ ಹೆಚ್ಚಿಗೆ ಐಶ್ವರ್ಯವನ್ನು ಕೊಡತಕ್ಕ ಬೇರೊಂದು ತೀರ್ಥವಿಲ್ಲವು. ಯಾರು ಇಲ್ಲಿ ಸ್ನಾನಾದಿಗಳನ್ನು ಮಾಡಿ ಪೂಜೆ, ದಾನಾದಿಗಳನ್ನು ಮಾಡುವರೋ ಅವರ ಮನೆಯಲ್ಲಿ ಸಂಪತ್ತು ಶಾಶ್ವತವಾಗಿರುತ್ತದೆ. ॥ ೧೮-೧೯ ॥ ಇದಕ್ಕೆ ದಕ್ಷಿಣದಲ್ಲಿ ಮಲವನ್ನು ಪರಿಹರಿಸುವ 'ಮಹೋದಧಿ' ಎಂಬ ತೀರ್ಥವಿದೆ. ಇದರ ದರ್ಶನ ಮಾತ್ರದಿಂದಲೇ ಎಲ್ಲ ಸಂಕಷ್ಟಗಳೂ ಪರಿಹಾರವಾಗುವವು. ॥ ೨೦ ॥ ಮೂರು ಲೋಕಗಳಲ್ಲಿರುವ ಎಲ್ಲ ತೀರ್ಥದೇವತೆಗಳೂ ಪ್ರಯಾಗದಲ್ಲಿ ಹಿಂದೆ ಸಮ್ಮಿಳಿತರಾಗಿದ್ದರು. ಅಲ್ಲಿಂದ ಮೊದಲ್ಗೊಂಡು ಅವರೆಲ್ಲರೂ ಒಂದಂಶದಿಂದ ಪ್ರಯಾಗದಲ್ಲೇ ಇದ್ದುಬಿಟ್ಟಿದ್ದಾರೆ. ॥ ೨೧ ॥ ಈ ಮಹೋದಧಿ ತೀರ್ಥದಲ್ಲಿ ಸ್ನಾನ, ಪಾನ, ದೇವ ಋಷಿ ಪಿತೃತರ್ಪಣ, ಮುಂತಾದುವುಗಳನ್ನು ಮಾಡಿದವರು ಎಲ್ಲ ಪಾಪಗಳಿಂದ ವಿಮುಕ್ತರಾಗಿ ಶ್ರೀ ವೈಕುಂಠವನ್ನು ಕುರಿತು ಹೋಗುವರು. ॥ ೨೨ ॥ ಈ ಮಹೋದಧಿ ತೀರ್ಥದಲ್ಲಿ ಯಾರು ಏನು ಸ್ವಲ್ಪ ದಾನವನ್ನು ಭಕ್ತಿಯಿಂದ ಮಾಡಿದರೂ ಆ ದಾನದಿಂದ ಉಂಟಾದ ಪುಣ್ಯವು ಪ್ರಳಯದಲ್ಲಿಯೂ ನಾಶವಾಗುವುದಿಲ್ಲ. ॥ ೨೩ ॥ ಈ ಮಹೋದಧಿ ತೀರ್ಥದ ದಕ್ಷಿಣಕ್ಕೆ ಉತ್ತಮವಾದ ಊರ್ವಶೀಕುಂಡವಿದೆ. ಇದರ ನಿರ್ಮಲವಾದ ನೀರನ್ನು ಸೇವಿಸಿಕೊಂಡು ಋಷಿಗಳೂ ಸಿದ್ಧರೂ ಅಲ್ಲಿ ತಂಗಿದ್ದಾರೆ. ॥ ೨೪ ॥ ಇಲ್ಲಿ ಸ್ನಾನ, ದಾನ ಮತ್ತು ದೇವರ್ಷಿ ಪಿತೃತರ್ಪಣ ಇವುಗಳನ್ನು ಮಾಡುವುದರಿಂದ ಲಭ್ಯವಾಗುವ ಪುಣ್ಯವು ಮತ್ತೆಲ್ಲಿಯೂ ಸಿಗುವುದಿಲ್ಲ. ॥ ೨೫ ॥ ಇಲ್ಲಿ ಮೂರು ರಾತ್ರಿ, ಐದು ರಾತ್ರಿ ಅಥವಾ ಏಳು ರಾತ್ರಿಗಳು ಇದ್ದು, ನಿಯತವ್ರತಿಯಾಗಿ ಯಾರು ಸ್ನಾನ, ಜಪ, ಪೂಜಾ ಮತ್ತು ದಾನಾದಿಗಳನ್ನು ಮಾಡುವನೋ ಅಂತಹವನು ರೂಪವಂತನೂ, ಗುಣವಂತನೂ, ಧನಿಕನೂ ಮತ್ತು ಧಾರ್ಮಿಕನೂ ಆಗುವುದಲ್ಲದೆ ಊರ್ವಶಿಯಂಥಾ ಸ್ತ್ರೀಯರಿಗೆ ಪತಿಯಾಗುವನು. ॥ ೨೬-೨೭ ॥ ಹೇ, ಮುನಿಶ್ರೇಷ್ಠರೇ! ಯಮುನಾನದಿಯ ದಕ್ಷಿಣತೀರದಲ್ಲಿ ಇನ್ನೊಂದು ಊರ್ವಶೀ ತೀರ್ಥವಿರುವುದು. ಈ ರೀತಿಯಾಗಿ ಎರಡೆರಡು ಊರ್ವಶೀ ತೀರ್ಥವಿರುವುದಕ್ಕೆ ಕಾರಣವನ್ನು ಮುಂದೆ ಹೇಳುವೆನು. ॥ ೨೮ ॥ ಈಗ ''ಬ್ರಹ್ಮನಾಲ ತೀರ್ಥ''ವನ್ನು ವರ್ಣಿಸುತ್ತೇನೆ. ಇದರಿಂದಲೇ ಚತುರ್ಮುಖ ಬ್ರಹ್ಮನು ಹುಟ್ಟಿದ. ಪ್ರಲಯ

ಕಾಲದಲ್ಲಿ ಇಡೀ ಜಗತ್ತನ್ನೆಲ್ಲಾ ಸಂಹರಿಸಿ ಪರಬ್ರಹ್ಮನು ಈ ಬ್ರಹ್ಮನಾಲ ತೀರ್ಥದಲ್ಲಿ ಲೀನಮಾಡಿ ಇಟ್ಟುಕೊಂಡಿರುವನು. ॥ ೨೯ ॥ ಆದ್ದರಿಂದಲೇ ಈ ತೀರ್ಥವು ಅತಿ ಪಾವನವಾದದ್ದು, ಇದರ ವಿಸ್ತಾರವು ಇಪ್ಪತ್ತು ಬಾಣಗಳಷ್ಟು (೧೨೦ ಅಡಿಗಳಷ್ಟು). ಇಲ್ಲಿ ವಾಸಮಾಡಿದವರ ಸಕಲ ಇಷ್ಟಾರ್ಥಗಳೂ ಲಭ್ಯವಾಗುವುವು ಮತ್ತು ಇಲ್ಲಿ ಮೃತರಾದವರಿಗೆ ಪುನರ್ಜನ್ಮವಿರುವುದಿಲ್ಲ. ॥ ೩೦ ॥ ಇಲ್ಲಿ ಸ್ನಾನ, ದಾನ, ಧ್ಯಾನ, ಸಂಧ್ಯಾ, ಅರ್ಚನೆ, ಹೋಮ ಮತ್ತು ತರ್ಪಣ ಇವುಗಳನ್ನು ಭಕ್ತಿಯಿಂದ ಮಾಡಿದ ಯಾತ್ರಿಕನು ಎಣೆಯಿಲ್ಲದಷ್ಟು ಪುಣ್ಯವನ್ನು ಪಡೆಯುವನು. ॥ ೩೧ ॥ ನಾನು ಕೇಳಿರುವಂತೆಯೇ ಇನ್ನೂ ಬೇರೆ ಬೇರೆ ತೀರ್ಥಗಳೂ ವರ್ಣಿಸಲ್ಪಟ್ಟಿವೆ. ಯಾತ್ರಿಕನು ಇವೆಲ್ಲವುಗಳ ಸೇವೆಯನ್ನು ಮಾಡಿ ಮುಗಿಸಿ ಪುನಃ ತ್ರಿವೇಣಿಯನ್ನು ಪ್ರವೇಶಿಸತಕ್ಕದ್ದು. ॥ ೩೨ ॥ ತ್ರಿವೇಣಿಯಲ್ಲಿ ಸ್ನಾನಮಾಡಿ ಹಿಂದೆ ಹೇಳಿರುವಂತೆ ವೇಣೀಮಾಧವನ ಪೂಜೆಯನ್ನು ಮಾಡಿ, ಸಾಷ್ಟಾಂಗ ನಮಸ್ಕಾರವನ್ನೆರಗಿ ಯಾತ್ರೆಯ ಪರಿಪೂರ್ಣತೆಗಾಗಿ ನಿವೇದನೆ ಮಾಡಬೇಕು. ॥ ೩೩ ॥ ಯಾವ ಯಾತ್ರಿಕನು ಈ ರೀತಿಯಾಗಿ ಭಕ್ತಿಭರಿತನಾಗಿ ಯಾತ್ರೆಯನ್ನು ಮುಗಿಸುವನೋ ಅಂಥಹವನು ಯಾತ್ರೆಯ ಸಾಫಲ್ಯವನ್ನು ಪಡೆದು ಮಹಾಫಲವನ್ನು ಹೊಂದುವನು. ॥ ೩೪ ॥

**ಸನಕಾದಯೋ ಊಚುಃ—**

**ಅತ್ಯದ್ಭುತಾನಿ ತೀರ್ಥಾನಿ ದೇವತಾಯತನಾನಿ ಚ ।**
**ತ್ವನ್ಮುಖಾಂಭೋಜತಃ ಸ್ವಾದ್ಯ ಶ್ರುತ್ವಾನಂದಮುಪಾಗತಾಃ ॥ ೩೫ ॥**
**ವಿಧಿನಾ ಕೇನ ಕರ್ತವ್ಯೋ ಯಾತ್ರಾ ವಿಧಿರಯ ನೃಭಿಃ।**
**ತಂ ವದಸ್ವ ಸುಬೋಧಾಯ ಸರ್ವಲೋಕೋಪಕಾರಕಃ ॥ ೩೬ ॥**

**ಸನಕಾದಿಗಳು ಹೇಳಿದರು—**

''ಅತಿ ಅದ್ಭುತಗಳಾದ ತೀರ್ಥಗಳು ಮತ್ತು ಆ ತೀರ್ಥದೇವತೆಗಳ ಮಂದಿರಗಳು ಇವುಗಳ ಬಗ್ಗೆ ತಮ್ಮ ಮುಖಕಮಲದಿಂದ ಕೇಳಿ ನಮಗೆ ಅತ್ಯಾನಂದವಾಗಿದೆ. ॥ ೩೫ ॥ ಎಲ್ಲರೂ ಯಾವಾಗಲೂ ಯಾವ ವಿಧಿವಿಧಾನಗಳಿಂದ ಯಾತ್ರೆಯನ್ನು ಮಾಡಬೇಕು? ನಮ್ಮ ಅರಿವಿಗೋಸ್ಕರ ಎಲ್ಲ ಜನರ ಉಪಕಾರ ಮಾಡತಕ್ಕ ನೀವು ಅದನ್ನು ಹೇಳಿರಿ'' ॥ ೩೬ ॥

**ಶೇಷ ಉವಾಚ—**

**ಸಮ್ಯಕ್ ಪೃಷ್ಟಂ ಮುನಿಶ್ರೇಷ್ಠಾ ಭವದ್ಭಿರ್ಲೋಕಮಂಗಲೈಃ ।**
**ಶೃಣ್ವಂತು ಪ್ರಣಿಧಾನೇನ ತೀರ್ಥಯಾತ್ರಾವಿಧಿಂ ಬ್ರುವೇ ॥ ೩೭ ॥**
**ದಾನಾಧ್ಯಯನಶಕ್ತಾನಾಂ ಜಪಧ್ಯಾನರತಾತ್ಮನಾಮ್ ।**
**ನಾವಶ್ಯಕೋ ವೋ ಮುನಯಸ್ತೀರ್ಥಯಾತ್ರಾವಿಧಿಃ ಸ್ಮೃತಃ ॥ ೩೮ ॥**
**ಏತದರ್ಥೋಽಸಮರ್ಥಾನಾಂ ರಂಕವೈಧೇಯರೋಗಿಣಾಂ ।**
**ತೀರ್ಥಾಽವಾಂತರತೀರ್ಥಾನಾಂ ಯಾತ್ರಾ ಪ್ರೋಕ್ತಾ ಮನೀಷಿಭಿಃ॥ ೩೯ ॥**
**ಪುಣ್ಯಮಾಸೇಽಮಲೇ ಪಕ್ಷೇ ಸುತಿಥೌ ಶುಭವಾಸರೇ ।**
**ಪರ್ವಕಾಲೇ ಚ ಸಂಕ್ರಾಂತೌ ಮನ್ವಾದಿಷು ಯುಗಾದಿಷು ॥ ೪೦ ॥**

ಪ್ರಾತಃ ಸ್ನಾತ್ವಾ ವಿಧಾನೇನ ಗಂಗಾಯಮುನಸಂಗಮೇ ।
ನಿವರ್ತ್ಯ ನಿಖಿಲಂ ನಿತ್ಯವತ್ತಪೂಜನಸಾಧನಃ ॥ ೪೧ ॥

ಶ್ರೀಮಾಧವ ದಯಾಸಿಂಧೋ ವಾಂಛಿತಾರ್ಥಫಲಪ್ರದ ।
ಅನುಜಾನೀಹಿ ಮಾಮದ್ಯ ತ್ವತ್ತೀರ್ಥಾನಾಂ ಪರಿಕ್ರಮೇ ॥ ೪೨ ॥

ನ ಜಾನೇ ತೀರ್ಥನಾಮಾನಿ ದೇವತಾಯತನಾನಿ ಚ ।
ಅತಃ ಪರಿಕ್ರಮಾನ್ಕುರ್ವೇ ಹ್ಯಂತರ್ವೇದ್ಯಾ ಯಥಾಕ್ರಮಮ್ ॥ ೪೩ ॥

ಇತಿ ಸಂಪ್ರಾರ್ಥ್ಯ ಮತಿಮಾನ್ ಸಪತ್ನೀಕೋಽಥವೈಕಲಃ ।
ಅಕ್ಷತಾನ್ವಿಕಿರನ್ಗಚ್ಛೇದುಕ್ತಪೂರ್ವಾಂ ಪ್ರದಕ್ಷಿಣಾಮ್ ॥ ೪೪ ॥

ಸ್ನಾಯಾನ್ಮಹತ್ಸು ತೀರ್ಥೇಷು ಗಂಗಾಯಮುನತೀರ್ಥಯೋಃ ।
ಮಾರ್ಜನಾಚಮನೇ ಕುರ್ಯಾತ್ಕ್ವಚಿತ್ಪೂಜಾ ಕ್ವಚಿನ್ನತಿಃ ॥ ೪೫ ॥

ದುಷ್ಟಾಲಾಪವೃಥಾಲಾಪಸಂಸಾರಾಲಾಪವರ್ಜಿತಃ ।
ಮಾಧವಂ ಮನಸಾ ಧ್ಯಾಯನ್ ಮಾಧವೇತೀರಯನ್ ಪುನಃ ॥ ೪೬ ॥

ಯಥಾ ಪ್ರಾಗುಕ್ತತೀರ್ಥಾನಾಂ ಭಕ್ತ್ಯಾ ಕೃತ್ವಾ ಪ್ರದಕ್ಷಿಣಾಂ ।
ಪುನರ್ವೇಣೀಂ ಸಮಾಸಾದ್ಯ ಸ್ನಾತ್ವಾ ಸರ್ವಂ ನಿವೇದಯೇತ್ ॥ ೪೭ ॥

ಮಾಧವಾನಂತ ಗೋವಿಂದ ಜಗನ್ನಾಥ ಜಗತ್ಪತೇ ।
ಗೃಹಾಣ ಮತ್ಕೃತಾಂ ಯಾತ್ರಾಂ ಫಲದೋ ಭವ ತೇ ನಮಃ ॥ ೪೮ ॥

ಏವಂ ಯಃ ಕುರುತೇ ಯಾತ್ರಾಂ ಅಂತರ್ವೇದ್ಯಾ ಯಥಾವಿಧಿ ।
ಅಗಣ್ಯಂ ಪುಣ್ಯಮಾಪ್ನೋತಿ ಮಾಧವಶ್ಚ ಪ್ರಸೀದತಿ ॥ ೪೯ ॥

ಪ್ರಯಾಗಕೃತಪಾಪಾನಾಂ ಅಜ್ಞಾನೇನ ವಿಶುದ್ಧಯೇ ।
ಲಘೂನಾಂ ಹಿ ವಿನಾಶಾಯ ವರ್ಷೇ ಕುರ್ಯಾತ್ಪ್ರದಕ್ಷಿಣಮ್ ॥ ೫೦ ॥

ತತ್ರಸ್ಥಾನಾಂ ವಿಧಿಶ್ಚಾಯಂ ಪ್ರಾಯಶ್ಚಿತ್ತಸ್ವರೂಪಕಃ ।
ಯಾತ್ರಿಕಾನಾಂ ಯಥಾಕಾಲಂ ತದಭಾವೇಽಫಲಪ್ರದಃ ॥ ೫೧ ॥

ಅಂತರ್ವೇದೀಸ್ಥತೀರ್ಥಾನಿ ತೇಷಾಂ ಯಾತ್ರಾವಿಧಿಶ್ಚ ಯಃ ।
ನಿರೂಪಿತೋ ಮುನಿಶ್ರೇಷ್ಠಾಃ ಸರ್ವೇಷಾಮುಪಕಾರಕಃ ॥ ೫೨ ॥

ಪದ್ಭ್ಯಾಂ ಪೂರ್ಣಫಲಶ್ಚಾಯಮರ್ಧಾದಿ ವಾಹನಾದಿತಃ ।
ಅಸಮರ್ಥೋ ದ್ವಿಜದ್ವಾರಾ ಸಂಪೂರ್ಣೋ ಭೃತಿದಾನತಃ ॥ ೫೩ ॥

ಅಶಕ್ತಾನಾಂ ದರಿದ್ರಾಣಾಂ ಸರ್ವೇಷಾಂ ಪಾಪಸಂಭವೇ ।
ಯಾತ್ರಾವಿಧಿಫಲಂ ಪೂರ್ಣಂ ಯಥಾಸ್ಯಾತ್ತನ್ನಿಬೋಧತ ॥ ೫೪ ॥

ಅರುಣೋದಯವೇಲಾಯಾಂ ಗಂಗಾಯಮುನಸಂಗಮೇ ।
ತೀರ್ಥಾನಿ ದೇವತಾ ನದ್ಯಃ ಸ್ನಾನಮಾಯಾಂತಿ ನಿತ್ಯಶಃ ॥ ೫೫ ॥

ಅಥ ತತ್ಸಮಯೇ ತತ್ರ ಸ್ನಾತ್ವಾ ಧ್ಯಾತ್ವಾಖಿಲಾನಪಿ ।
ತದರ್ಥಂ ಚ ಪುನಃ ಸ್ನಾತ್ವಾ ತೀರ್ಥಯಾತ್ರಾಫಲಂ ಲಭೇತ್ ॥ ೫೬ ॥
ಅಂತರ್ವೇದೀ ಮುನಿಶ್ರೇಷ್ಠಾಃ ಸಾಂಗೋಪಾಂಗಾ ನಿರೂಪಿತಾ ।
ಅಥೋ ಮಧ್ಯಬಹಿರ್ವೇದ್ಯೌ ವರ್ಣಯಾಮಿ ಯಥಾಮತಿ ॥ ೫೭ ॥

॥ ಇತಿ ಷಡಶೀತಿತಮೋಽಧ್ಯಾಯಃ ॥

ಶೇಷದೇವರು ಹೇಳಿದರು—

ಹೇ ಮುನಿಶ್ರೇಷ್ಠರಾದ ಸನಕಾದಿಗಳೇ! ಲೋಕಕ್ಕೇ ಮಂಗಳಕರರಾಗಿರತಕ್ಕ ನಿಮ್ಮಗಳಿಂದ ಚೆನ್ನಾಗಿ ಪ್ರಶ್ನೆ ಮಾಡಲ್ಪಟ್ಟಿತು. ನಾನು ತೀರ್ಥಯಾತ್ರೆಯ ವಿಧಿಯನ್ನು ಹೇಳುವೆನು, ಗಮನವಿಟ್ಟು ಕೇಳಿರಿ. ॥ ೩೭ ॥ ಹೇ ಮುನಿಗಳೇ! ದಾನ, ಅಧ್ಯಯನದಲ್ಲಿ ಸಮರ್ಥರಾದ ಮತ್ತು ಜಪಧ್ಯಾನದಲ್ಲಿ ಆಸಕ್ತರಾದ ನಿಮಗೆ ಈ ತೀರ್ಥಯಾತ್ರಾವಿಧಿಯು ಆವಶ್ಯಕವಿಲ್ಲವು. ॥ ೩೮ ॥ ಈ ಅಧ್ಯಯನಾದಿಗಳಿಗೆ ಅಸಮರ್ಥರಾದ ದರಿದ್ರರು, ರೋಗಿಗಳು, ಅಜ್ಞಾನಿಗಳು ಮುಂತಾದವರಿಗೆ ಈ ತೀರ್ಥಗಳ, ಅವಾಂತರ ತೀರ್ಥಕ್ಷೇತ್ರಗಳ ವಿಧಿವಿಧಾನಗಳನ್ನು ಜ್ಞಾನಿಗಳು ಹೇಳಿದ್ದಾರೆ. ॥ ೩೯ ॥ ಪುಣ್ಯಕರವಾದ ಮಾಸಗಳಲ್ಲಿ, ಶುಕ್ಲಪಕ್ಷದಲ್ಲಿ, ಶುಭವಾರದಲ್ಲಿ, ಪರ್ವಕಾಲದಲ್ಲಿ, ಸಂಕ್ರಾಂತಿಯಲ್ಲಿ ಮನ್ವಾದಿಗಳಲ್ಲಿ ಮತ್ತು ಯುಗಾದಿಗಳಲ್ಲಿ ಬೆಳಿಗ್ಗೆ ವಿಧಿವಿಧಾನಗಳಿಂದ ಗಂಗಾ-ಯಮುನೆಯರ ಸಂಗಮದಲ್ಲಿ ಎಲ್ಲ ನಿತ್ಯಕರ್ಮಗಳನ್ನೂ ಮುಗಿಸಿಕೊಂಡು, ಎಲ್ಲಾ ಪೂಜಾ ಸಾಮಗ್ರಿಗಳನ್ನು ಸಂಗ್ರಹಿಸಿ ''ಹೇ ಮಾಧವ, ಹೇ ದಯಾಸಮುದ್ರನೇ, ಅಪೇಕ್ಷಿತವಾದ ಫಲವನ್ನು ಕೊಡತಕ್ಕವನೇ, ನಿನ್ನ ತೀರ್ಥಗಳ ಪ್ರದಕ್ಷಿಣೆ ಮಾಡಲು ನನಗೆ ಅಪ್ಪಣೆಯನ್ನು ಕೊಡು. ॥ ೪೦-೪೨ ॥ ತೀರ್ಥಗಳ ಹೆಸರುಗಳು ನನಗೆ ತಿಳಿಯದು. ದೇವತಾ ಮಂದಿರಗಳ ಹೆಸರೂ ತಿಳಿಯದು. ಈ ಕಾರಣದಿಂದಲೇ ಅಂತರ್ವೇದಿಯ ಪ್ರದಕ್ಷಿಣೆಯನ್ನು ಕ್ರಮವಾಗಿ ಮಾಡುವೆನು.'' ॥ ೪೩ ॥ ಈ ರೀತಿ ಪ್ರಾರ್ಥಿಸಿ ಬುದ್ಧಿವಂತನಾದವನು ತನ್ನ ಹೆಂಡತಿಯೊಡನಾಗಲೀ, ತಾನೊಬ್ಬನೇ ಆಗಲಿ ಹೋಗುವ ದಾರಿಯಲ್ಲಿ ಅಕ್ಷತೆಯನ್ನು ಚೆಲ್ಲುತ್ತಾ ಅಂತರ್ವೇದಿಯ ಪ್ರದಕ್ಷಿಣೆಯನ್ನು ಹಾಕತಕ್ಕದ್ದು. ॥ ೪೪ ॥ ಮಹಾ ಮಹಾ ಸುತೀರ್ಥಗಳಲ್ಲಿ ಕೆಲವು ಸಮಯದಲ್ಲಿ ಸ್ನಾನಮಾಡಬೇಕು, ಕೆಲವು ವೇಳೆ ಪ್ರೋಕ್ಷಿಸಿಕೊಳ್ಳಬೇಕು, ಕೆಲವು ಸಮಯದಲ್ಲಿ ಬರೇ ಆಚಮನ ಮಾಡಬೇಕು, ಕೆಲವು ಸಲ ಪೂಜಾ ಮಾಡಬೇಕು, ಮತ್ತು ಕೆಲವು ವೇಳೆ ನಮಸ್ಕರಿಸಬೇಕು. ॥ ೪೫ ॥ ದುಷ್ಟ ಮಾತುಗಳನ್ನೂ, ವ್ಯರ್ಥ ಮಾತುಗಳನ್ನೂ ಮತ್ತು ಸಂಸಾರಕ್ಕೆ ಸಂಬಂಧಪಟ್ಟ ಮಾತುಗಳನ್ನೂ ಬಿಟ್ಟು ಕೇವಲ ಮಾಧವನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ''ಮಾಧವ! ಮಾಧವ!'' ಎಂದು ಉಚ್ಚರಿಸುತ್ತಾ ಹಿಂದೆ ಹೇಳಿದ ತೀರ್ಥಗಳನ್ನು ಭಕ್ತಿಯಿಂದ ನಮಸ್ಕರಿಸಿ ಪುನಃ ವೇಣೀ ಸಂಗಮಕ್ಕೆ ಬಂದು ಅಲ್ಲಿ ಎಲ್ಲವನ್ನೂ ನಿವೇದಿಸಬೇಕು. ॥ ೪೬-೪೭ ॥ ''ಶ್ರೀ ಲಕ್ಷ್ಮೀಪತಿಯಾಗಿದ್ದು ಮಾಧವನೆಂಬ ಹೆಸರುಳ್ಳವನೇ!, ನಿತ್ಯನಾಗಿರುವವನೇ! ವೇದಪ್ರತಿಪಾದ್ಯನೇ! ಜಗತ್ತಿಗೆ ಸ್ವಾಮಿಯೇ! ಜಗತ್ಪತಿಯೇ! ನಾನು ಮಾಡಿರುವ ಯಾತ್ರೆಯನ್ನು ಸ್ವೀಕರಿಸಿ, ನನಗೆ ಫಲವನ್ನು ಕೊಡತಕ್ಕವನಾಗು''. ॥ ೪೮ ॥ ಈ ರೀತಿಯಾಗಿ ಯಾರು ಅಂತರ್ವೇದಿಯ ಯಾತ್ರೆಯನ್ನು ವಿಧಿವತ್ತಾಗಿ ಪರಿಸಮಾಪ್ತಿಗೊಳಿಸುವರೋ ಅವರಿಗೆ ಅಪರಿಮಿತ ಪುಣ್ಯಪ್ರಾಪ್ತಿಯಾಗಿ ಶ್ರೀ ಮಾಧವನೂ ಒಲಿಯುವನು. ॥ ೪೯ ॥ ಅಜ್ಞಾನದಿಂದ ಪ್ರಯಾಗದಲ್ಲಿ ಮಾಡಿದ ಸಣ್ಣ ಪಾಪಗಳು ನಾಶವಾಗಲು

ವರ್ಷಕ್ಕೊಮ್ಮೆಯಾದರೂ ಪ್ರಯಾಗದ ಪ್ರದಕ್ಷಿಣೆಯನ್ನು ಮಾಡಬೇಕು. ॥ ೫೦ ॥ ಈ ಕಟ್ಟಳೆಯು ಪ್ರಯಾಗದಲ್ಲಿ ವಾಸಮಾಡಿಕೊಂಡಿರುವವರಿಗೆ ಪ್ರಾಯಶ್ಚಿತ್ತರೂಪವಾದದ್ದು. ಬೇರೆ ಯಾತ್ರಿಕರಿಗೆ ವರ್ಷಕ್ಕೊಮ್ಮೆ ಪ್ರದಕ್ಷಿಣೆಯಿಲ್ಲದಿದ್ದರೂ, ಕೇವಲ ಒಮ್ಮೆ ಪ್ರದಕ್ಷಿಣೆಮಾಡುವುದರಿಂದಲೇ ಫಲವು ದೊರಕುವುದು. ॥ ೫೧ ॥ ಈ ಅಂತರ್ವೇದಿಯಲ್ಲಿರತಕ್ಕ ತೀರ್ಥಸೇವನೆಯು ನನ್ನಿಂದ ನಿರೂಪಿತವಾಯಿತು. ಇದು ಎಲ್ಲರಿಗೂ ಉಪಯುಕ್ತವಾದುದು. ॥ ೫೨ ॥ ಕಾಲ್ನಡಿಗೆಯಿಂದ ಪ್ರದಕ್ಷಿಣೆಮಾಡಿದರೆ ಪೂರ್ಣ ಫಲವೂ, ವಾಹನದಲ್ಲಿ ಪ್ರದಕ್ಷಿಣೆ ಮಾಡಿದರೆ ಅರ್ಧ ಫಲವೂ ಸಿಗುತ್ತದೆ. ಅಸಮರ್ಥರಾದವರು ಹಣಕೊಟ್ಟು ಬ್ರಾಹ್ಮಣರ ಮೂಲಕ ಪ್ರದಕ್ಷಿಣೆ ಮಾಡಿಸಿದರೂ ಪೂರ್ಣಫಲವು ಸಿಗುವದು. ॥ ೫೩ ॥ ಅಶಕ್ತರೂ, ದರಿದ್ರರೂ ಮತ್ತು ಪಾಪಿಗಳಿಗೂ ಯಾತ್ರೆಯ ಪೂರ್ಣಫಲವು ಸಿಗಬೇಕಾದರೆ ವಿಧಿವತ್ತಾಗಿ ಯಾತ್ರೆಯನ್ನು ಹೇಗೆ ಮಾಡಬೇಕೋ ಅಂತಹ ವಿಧಿವಿಧಾನವನ್ನು ಹೇಳುತ್ತೇನೆ. ಚೆನ್ನಾಗಿ ಅರ್ಥಮಾಡಿಕೊಳ್ಳಿರಿ. ॥ ೫೪ ॥ ಪ್ರತಿ ದಿನವೂ ಅರುಣೋದಯ ಕಾಲದಲ್ಲಿ ತೀರ್ಥ ದೇವತೆಗಳೂ, ನದೀ ದೇವತೆಗಳೂ, ಗಂಗೆ-ಯಮುನೆಯರ ಸಂಗಮ ಕ್ಷೇತ್ರವಾದ ತ್ರಿವೇಣಿಯಲ್ಲಿ ಸ್ನಾನಮಾಡಲು ಬರುತ್ತಾರೆ. ॥ ೫೫ ॥ ಆದೇ ಸಮಯದಲ್ಲಿ ಸಂಗಮದಲ್ಲಿ ಸ್ನಾನ ಮಾಡಿ ಮತ್ತೆ ಎಲ್ಲಾ ನದೀ ದೇವತೆಗಳನ್ನು ಧ್ಯಾನ ಮಾಡಿ ಪುನಃ ಸ್ನಾನ ಮಾಡಿದರೆ ಅಂತಹ ಯಾತ್ರಿಕನಿಗೆ ಪೂರ್ಣ ಫಲವು ದೊರಕುವದು. ॥ ೫೬ ॥ ಹೇ ಮುನಿಶ್ರೇಷ್ಠರೆ! ಅಂತರ್ವೇದಿಯಲ್ಲಿರುವ ತೀರ್ಥಗಳನ್ನು ಸಾಂಗೋಪಾಂಗವಾಗಿ ನಿರೂಪಿಸಿದ್ದೇನೆ. ಇನ್ನು ಮಧ್ಯವೇದಿಯಲ್ಲಿನ ಮತ್ತು ಬಹಿರ್ವೇದಿಯಲ್ಲಿನ ತೀರ್ಥಗಳ ಬಗ್ಗೆ ನನಗೆ ತಿಳಿದಿರುವಂತೆ ನಿರೂಪಿಸುವೆನು. ॥ ೫೭ ॥

॥ ಎಂಬತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತಾಶೀತಿತಮೋಽಧ್ಯಾಯಃ ॥ ೮೭ ॥

ಶೇಷ ಉವಾಚ—

ಮಧ್ಯವೇದ್ಯಾಮಥೋ ವಕ್ಷ್ಯೇ ಮುಖ್ಯತೀರ್ಥಾನಿ ಸುವ್ರತಾಃ ।
ಯೇಷಾಂ ದರ್ಶನಮಾತ್ರೇಣ ನಿಷ್ಪಾಪಸ್ತ್ರಿದಿವಂ ವ್ರಜೇತ್ ॥ ೧ ॥
ಕ್ಷೇತ್ರಸ್ಯಾಗ್ನೇಯದಿಗ್ಭಾಗೇ ಪ್ರಾಂತವೇಣ್ಯಾಂ ಅವಾಕ್ತಟೇ ।
ಸೋಮತೀರ್ಥಂ ಶ್ರುತಿಖ್ಯಾತಂ ತ್ರಿಷು ಲೋಕೇಷು ವಿಶ್ರುತಮ್ ॥ ೨ ॥
ಯತ್ರಾಗತ್ಯ ಪುರಾ ಸೋಮೋ ಪೀಡಿತೋ ರಾಜಯಕ್ಷ್ಮಣಾ ।
ಶಿವಸ್ಯಾರಾಧನಂ ಚಕ್ರೇ ಭಕ್ತ್ಯಾ ತದಪನುತ್ತಯೇ ॥ ೩ ॥
ತತಸ್ತತ್ತಪಸಾ ತುಷ್ಟಃ ಶಂಕರೋ ಲೋಕಶಂಕರಃ ।
ಗತ್ವಾ ಯಥೇಪ್ಸಿತಾನ್ ಕಾಮಾನ್ ವಚನಂ ಚೇದಮಬ್ರವೀತ್ ॥ ೪ ॥

## ॥ ಎಂಬತ್ತೇಳನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಎಲೈ ಸನಕಾದಿಗಳೇ! ಪ್ರಯಾಗದ ಮಧ್ಯವೇಣಿಯಲ್ಲಿರುವ ಮುಖ್ಯವಾದ ತೀರ್ಥಗಳ ಬಗ್ಗೆ ಹೇಳುತ್ತೇನೆ. ಈ ತೀರ್ಥಗಳ ದರ್ಶನಮಾತ್ರದಿಂದಲೇ ಜನರು ಪಾಪರಹಿತರಾಗಿ ಸ್ವರ್ಗವನ್ನು ಕುರಿತು ಹೋಗುವರು. ॥ ೧ ॥ ಪ್ರಯಾಗ ಕ್ಷೇತ್ರದ ಆಗ್ನೇಯ ದಿಗ್ಭಾಗದಲ್ಲಿರುವ ಮಧ್ಯವೇಣೀಯಲ್ಲಿ ಪ್ರುತಿಪ್ರಸಿದ್ಧವಾದ ಮತ್ತು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಸೋಮತೀರ್ಥವು ಇದೆ. ॥ ೨ ॥ ಹಿಂದೆ ಕ್ಷಯರೋಗದಿಂದ ಪೀಡಿತನಾಗಿದ್ದ ಚಂದ್ರನು ಇಲ್ಲಿಗೆ ಬಂದು ಇದರ ನಿವಾರಣೆಗಾಗಿ ಶಿವನನ್ನು ಕುರಿತು ತಪಸ್ಸು ಮಾಡಿದನು. ॥ ೩ ॥ ಅನಂತರ ಲೋಕಕ್ಕೆ ಮಂಗಳವನ್ನುಂಟುಮಾಡುವ ಶಂಕರನು ಆ ಚಂದ್ರನ ತಪಸ್ಸಿನಿಂದ ತುಷ್ಟನಾಗಿ ಅವನ ಅಪೇಕ್ಷೆಗಳನ್ನೆಲ್ಲಾ ಕೊಟ್ಟು ಈ ರೀತಿಯಾಗಿ ಮಾತನಾಡಿದನು. ॥ ೪ ॥

ಶಂಕರ ಉವಾಚ—

ಅತ್ರಿನೇತ್ರಸಮುದ್ಭೂತ ಸೋಮಾಸ್ಮಿಂಸ್ತೀರ್ಥನಾಯಕೇ ।
ಮಾಮುಪಾಸಿತವಾನ್ಯತ್ತ್ವಂ ದ್ರುತಂ ತೇನಾಹಮಾಗತಃ ॥ ೫ ॥
ಆಜನ್ಮ ವಿವಿಧಾಯಾಸೇ ಸ್ಥಾನೇಽನ್ಯತ್ರಾಸ್ಮದಾದಯಃ ।
ಉಪಾಸಿತಾಃ ಪ್ರಸೀದಂತಿ ನದ್ಯಾಗತ್ರ ತು ಮಂಕ್ಷು ತೇ ॥ ೬ ॥
ಅತಸ್ತ್ವಮಪ್ಯದೋ ಭಕ್ತ್ಯಾ ಸೇವಸ್ವ ಗತಮತ್ಸರಃ ।
ಮಾಂ ಪ್ರತಿಷ್ಠಾಪ್ಯ ವಿಧಿವನ್ ಮಂತ್ರಂ ಚೇಮಂ ಜಪಾನಿಶಮ್ ॥ ೭ ॥
ಯತ್ರ ಗಂಗಾ ಚ ಯಮುನಾ ಯತ್ರ ಪ್ರಾಚೀ ಸರಸ್ವತೀ ।
ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧಿ ॥ ೮ ॥
ಏವಂ ಕೃತೇ ತವಾಭೀಷ್ಟಮಖಿಲಂ ಸೇತ್ಸ್ಯತಿ ಧ್ರುವಮ್ ।
ಪರಂ ಕಾಮ್ಯಮಿದಂ ಸ್ಥಾನಂ ಸರ್ವೇಷಾಂ ಚ ಭವಿಷ್ಯತಿ ॥ ೯ ॥

**ಶಂಕರನು ಹೇಳಿದನು—**

''ಅತ್ರಿ ಋಷಿಗಳ ಕಣ್ಣಿನಿಂದ ಹುಟ್ಟಿಬಂದಿರುವ ಚಂದ್ರನೇ! ಈ ಶ್ರೇಷ್ಠವಾದ ಸೋಮವೆಂಬ ತೀರ್ಥಕ್ಷೇತ್ರದಲ್ಲಿ ನೀನು ನನ್ನನ್ನು ಉಪಾಸನೆ ಮಾಡಿದ್ದರಿಂದ ನಾನು ಬಂದಿದ್ದೇನೆ. ॥ ೫ ॥ ಬೇರೆ ಬೇರೆ ಕ್ಷೇತ್ರಗಳಲ್ಲಿ ನಾವುಗಳು ಬೇಗನೆ ಪ್ರಸನ್ನರಾಗದೇ ಹುಟ್ಟಿದಾಗಿನಿಂದ ಆಚರಿಸುವ ಕಷ್ಟಸಾಧ್ಯಗಳಾದ ತಪಸ್ಸಿನಿಂದ ಮಾತ್ರ ಸಂತುಷ್ಟರಾಗುತ್ತೇವೆ; ಆದರೆ ಇಲ್ಲಿಯಾದರೋ ಜಾಗ್ರತೆಯಾಗಿ ಪ್ರಸನ್ನರಾಗುತ್ತೇವೆ. ॥ ೬ ॥ ಆದ್ದರಿಂದ ನೀನು ಯಾವ ಮಾತ್ಸರ್ಯವೂ ಇಲ್ಲದೆ ಭಕ್ತಿಯಿಂದ ಈ ಕ್ಷೇತ್ರವನ್ನು ಸೇವಿಸು. ಇಲ್ಲಿ ನನ್ನನ್ನು ವಿಧಿವತ್ತಾಗಿ ಪ್ರತಿಷ್ಠಾಪಿಸಿ ನನ್ನನ್ನು ಮತ್ತು ಈ ಕ್ಷೇತ್ರವನ್ನೂ ಈ ಮಂತ್ರದಿಂದ ಜಪಮಾಡು. ॥ ೭ ॥ ''ಎಲ್ಲಿ ಗಂಗೆಯು, ಯಮುನೆಯು ಮತ್ತು ಪೂರ್ವದಿಕ್ಕಿಗೆ ಪ್ರವಹಿಸುವ ಸರಸ್ವತಿಯು ಮತ್ತು ಎಲ್ಲಿ ಸೋಮೇಶ್ವರ ದೇವರೂ ಇದ್ದಾರೆಯೋ ಅಲ್ಲಿ ನನ್ನನ್ನು ಮರಣರಹಿತನನ್ನಾಗಿ ಮಾಡು''. ॥ ೮ ॥ ಈ ರೀತಿಯಾಗಿ ಜಪ ಮಾಡಿದರೆ ನಿನ್ನ ಎಲ್ಲಾ ಅಭೀಷ್ಟಗಳೂ ನಿಶ್ಚಯವಾಗಿ ಸಿದ್ಧಿಸುವುವು. ಅಪೇಕ್ಷೆಗಳನ್ನೆಲ್ಲಾ ಸಿದ್ಧಿಸುವ ಕ್ಷೇತ್ರಗಳಲ್ಲಿ ಈ ಕ್ಷೇತ್ರವು ಅತಿ ಶ್ರೇಷ್ಠವಾದುದು ಮತ್ತು ಎಲ್ಲರ ಅಭೀಷ್ಟಗಳೂ ಇಲ್ಲಿ ಸಿದ್ಧಿಸುತ್ತವೆ. ॥ ೯ ॥

**ಶೇಷ ಉವಾಚ—**

ಇತಿ ವಾಚಃ ಸಮಾಕರ್ಣ್ಯ ಶಾಂಕರೀಂ ಶಂಕರಪ್ರಿಯಃ ।
ಶಂಭೋರ್ಲಿಂಗಂ ಪ್ರತಿಷ್ಠಾಪ್ಯ ಸೋಮಸ್ಸೋಮೇಶ್ವರಾಭಿಧಮ್ ॥ ೧೦ ॥
ತತ್ರಾಶ್ರಮಪದಂ ಚಕ್ರೇ ಮಾಧವಸ್ಯಾಪ್ಯದೂರತಃ ।
ನಾನಾವೃಕ್ಷಲತಾರಮ್ಯಂ ನಂದನಂ ನಂದನಾತಿಗಮ್ ॥ ೧೧ ॥
ತತ್ರ ಸ್ಥಿತ್ವೋಷಸಿ ಸ್ನಾತ್ವಾ ಪ್ರಾಂತವೇಣ್ಯಾಂ ಯಥಾವಿಧಿಮ್ ।
ಜಜಾಪ ಮಂತ್ರಮನಿಶಂ ಶಿವಾದಿಷ್ಟಂ ಸಮಾಹಿತಃ ॥ ೧೨ ॥
ದ್ವಿಜಾನಾಮೌಷಧೀನಾಂ ಚಾಪ್ಯಧಿಪೋ ನಿರ್ಗದೋಽಪ್ಯಭೂತ್ ।
ತದಾದಿ ಖ್ಯಾತಿಮಾಯಾತಂ ತೀರ್ಥಂ ಸೋಮೇಶ್ವರಾಭಿಧಮ್ ॥ ೧೩ ॥
ತಸ್ಮಾತ್ತತ್ರ ತು ಯೇ ಗತ್ವಾ ಸ್ನಾತ್ವಾ ಸೋಮೇಶ್ವರಂ ಪ್ರಭುಂ ।
ಪೂಜಯಿಷ್ಯಂತಿ ಮನುಜಾ ಯಥೋಪಕರಣಾದಿಭಿಃ ॥ ೧೪ ॥
ರುದ್ರಾಭಿಷೇಕಂ ಸೂಕ್ತಾನಿ ಶಿವಪಂಚಾಕ್ಷರೀಜಪಮ್ ।
ಸ್ವಾಧ್ಯಾಯಂ ಬ್ರಹ್ಮಯಜ್ಞಂ ಚ ದಾನಂ ಬ್ರಾಹ್ಮಣಭೋಜನಮ್ ॥ ೧೫ ॥
ಯೇ ಕುರ್ವಂತಿ ನರಾ ಭಕ್ತ್ಯಾ ತೇಷಾಂ ಸೋಮೇಶ್ವರಾಭಿಧಃ ।
ಶಿವಸ್ತದೇಕತಾಪನ್ನೋ ಮಾಧವಶ್ಚ ಪ್ರಸೀದತಿ ॥ ೧೬ ॥
ಏಕರುದ್ರಮಹಾರುದ್ರಫಲಂ ತತ್ರ ಪ್ರಜಾಯತೇ ।
ಶೈವಮಂತ್ರಸ್ಯ ಸಿದ್ಧಿಃ ಸ್ಯಾತ್ ಸಹಸ್ರಜಪಮಾತ್ರತಃ ॥ ೧೭ ॥
ಸೋಮವತ್ಯಾಮಮಾಯಾಂ ಯಃ ಕುರ್ಯಾತ್ಸೋಮೇಶಪೂಜನಮ್ ।
ಸ ಸೋಮಯಾಗಜಂ ಪುಣ್ಯಂ ಪ್ರಾಪ್ನುಯಾನ್ನಾತ್ರ ಸಂಶಯಃ ॥ ೧೮ ॥

ಇತ್ಯಾದಿಗುಣಮಾಪನ್ನಂ ಸೋಮತೀರ್ಥಂ ಮುನೀಶ್ವರಾಃ ।
ವರ್ಣಿತಂ ವೋ ತತೋಽನ್ಯಾನಿ ವರ್ಣಯಾಮಿ ಯಥಾಕ್ರಮಮ್॥ ೧೯ ॥
ಪಶ್ಚಿಮೇ ಸೋಮತೀರ್ಥಸ್ಯ ಸೂರ್ಯತೀರ್ಥಮಿತಿ ಸ್ಮೃತಮ್ ।
ತತ್ರ ಸ್ನಾನಾಚ್ಚ ಪಾನಾಚ್ಚ ಸೂರ್ಯಲೋಕೇ ಮಹೀಯತೇ ॥ ೨೦ ॥
ಪ್ರಸಿದ್ಧಂ ಧನದಂ ತೀರ್ಥಂ ಕೌಬೇರಂ ತಸ್ಯ ಪಶ್ಚಿಮೇ ।
ಸ್ನಾನದಾನಾದಿಭಿಸ್ತತ್ರ ಧನಿನಃ ಸ್ಯುಃ ಪುನಃ ಪುನಃ ॥ ೨೧ ॥
ತಸ್ಯಾಪಿ ಪಶ್ಚಿಮೇ ರಮ್ಯಂ ವಾಯುತೀರ್ಥಂ ವರಪ್ರದಂ ।
ಸ್ನಾತಾನಾಂ ತತ್ರ ಭೂತಾನಾಂ ವಾಯುಬಾಧಾ ನ ಜಾಯತೇ ॥ ೨೨ ॥
ಅಥ ತತ್ಪಶ್ಚಿಮೇ ತ್ವಗ್ನಿತೀರ್ಥಂ ಪರಮಪಾವನಮ್ ।
ಸ್ನಾತೋ ಹ್ಯಗ್ನಿಸಮಸ್ತಸ್ಮಿನ್ನಗ್ನಿಲೋಕಂ ವ್ರಜೇನ್ನರಃ ॥ ೨೩ ॥
ಪಶ್ಚಿಮೇ ಧರ್ಮರಾಜಸ್ಯ ತೀರ್ಥಂ ತ್ವನರಕಂ ಸ್ಮೃತಂ ।
ಸ್ನಾನಾಚ್ಚ ತರ್ಪಣಾತ್ತತ್ರ ನರಕಂ ನ ಪ್ರಪದ್ಯತೇ ॥ ೨೪ ॥
ವಾರುಣೇ ತಸ್ಯ ವಿಖ್ಯಾತಂ ವೀರತೀರ್ಥಂ ಚ ವರ್ತತೇ ।
ತತ್ರ ಮಜ್ಜನತೋ ಜಂತುರ್ಲಭತೇ ಶೂರವೀರತಾಮ್ ॥ ೨೫ ॥
ತದಂತಿಕೇ ವರೀವರ್ತಿ ಪ್ರಾಗುಕ್ತೋ ಮಾಧವಾಶ್ರಮಃ ।
ಸ್ನಾನಪೂಜನವಾಸಾದ್ಯೈಃ ವೈಕುಂಠಂ ತತ್ರ ಗಚ್ಛತಿ ॥ ೨೬ ॥
ತಸ್ಯಾದೂರೇ ವರೀವರ್ತಿ ಯಾಮ್ಯಂ ತೀರ್ಥಂ ಮುನೀಶ್ವರಾಃ ।
ತತ್ರ ಸ್ನಾನಾರ್ಚನಾಭ್ಯಾಂ ಚ ನ ಯಾತಿ ಯಮಸಾದನಮ್ ॥ ೨೭ ॥
ತಥಾಽವಿದೂರೇ ವಾರುಣ್ಯಾಂ ರಾಮತೀರ್ಥಂ ವಿಶಾರದಮ್ ।
ಸೀತಾಕುಂಡಂ ತತಃ ಪಶ್ಚಾದ್ಧನುಮತ್ತೀರ್ಥಮುತ್ತಮಮ್ ॥ ೨೮ ॥
ಯದಾಹಿ ಭಗವಾನ್ವಿಷ್ಣುರ್ದೇವದ್ವಿಜಸುಖೇಚ್ಛಯಾ ।
ಆವಿರ್ಬಭೂವ ಯಃ ಕ್ಷೋಣ್ಯಾಂ ಸಾಕೇತಾಧಿಪತೇಃ ಕುಲೇ ॥ ೨೯ ॥
ರಾಮೋಲಕ್ಷ್ಮಣಶತ್ರುಘ್ನಭರತಾಖ್ಯಾಭಿರನ್ವಿತಃ ।
ಬಾಲಲೀಲಾಹೃತಸ್ವಾಂತೋ ವಿಶ್ವಾಮಿತ್ರಪ್ರಿಯಾನ್ವಿತಃ ॥ ೩೦ ॥
ಗಾಧಿಜಾನುಚರಶ್ರೇಷ್ಠಸ್ತತ್ಪ್ರಾಪ್ತಬಲಾಬಲಃ ।
ತಾಟಕಾಜಠರಚ್ಛೇದೀ ಪ್ರಾಪ್ತ ಗಾಧಿಸುತಾಶ್ರಮಃ ॥ ೩೧ ॥
ಕ್ರವ್ಯಾನ್ನಿ ಧನನಿರ್ವಿಘ್ನಸಮಾಪಿತತದಧ್ವರಃ ।
ಮಿಥಿಲೇಶಾಧ್ವರಾಲೋಕೋತ್ಕಲಿತರ್ಷಿಪದಾನುಗಃ ॥ ೩೨ ॥
ರುಷ್ಟಗೌತಮಸಂಶಪ್ತಾಹಲ್ಯೋದ್ಧಾರಯಶಸ್ಕರಃ ।
ಮಹೇಶ್ವರಧನುರ್ಭಂಗಪ್ರಾಪ್ತಸೀತಾಪರಿಗ್ರಹಃ ॥ ೩೩ ॥

ಜಾಮದಗ್ನ್ಯಮದಧ್ವಂಸೀ ಮಾತಾಪಿತೃಪ್ರಿಯಂಕರಃ ।
ಮಂಥರಾದಿಷ್ಟಕೈಕೇಯೀವಾಗ್ಬದ್ಧಜನಕೇಷ್ಟಕೃತ್ ॥ ೩೪ ॥
ಸ್ವೇಚ್ಛಂ ಸನಾಭಯೇ ದತ್ತರಾಜ್ಯಃ ಸೀತಾನುಜಾನ್ವಿತಃ ।
ಗುಹೋತ್ತೀರ್ಣಮಹಾಗಂಗೋ ಭರದ್ವಾಜಾನುಮೋದಿತಃ ॥ ೩೫ ॥
ತದ್ವೇದಿತಾಖಿಲೋದಂತಸ್ತಚ್ಛಿಷ್ಯೋತ್ತೀರ್ಣತಾರಣಿಃ ।
ಚಿತ್ರಕೂಟಕೃತಾವಾಸೋ ವಿಹಿತಸ್ವೀಯಸಾಂತ್ವನಃ ॥ ೩೬ ॥
ಪ್ರವಿಷ್ಟದಂಡಕಾರಣ್ಯೋ ವಿರಾಧಪ್ರಾಣದಾರಣಃ ।
ಶರಭಂಗಂ ಸುತೀಕ್ಷ್ಣಂ ಚಾಪ್ಯಗಸ್ತ್ಯಂ ಭ್ರಾತೃಸಂಯುತಮ್ ॥ ೩೭ ॥
ದೃಷ್ಟ್ವಾ ನತ್ವಾ ಕೃತಾತಿಥ್ಯೋ ತದ್ಗೃಹೀತೇಂದ್ರಕಾರ್ಮುಕಃ ।
ಪ್ರತಿಜ್ಞಾತಾಸ್ರಪವಧಃ ಪ್ರಾಪ್ತಪಂಚವಟೀತಟಃ ॥ ೩೮ ॥
ತತ್ಕೃತಾಶ್ರಮವಾಸೀ ಚ ರಾಕ್ಷಸೀನಾಸಿಕಾಹರಃ ।
ಖರತ್ರಿಶಿರದೂಷಘ್ನೋ ಹತಮಾಯಾಮೃಗಃ ಕ್ಷಣಾತ್ ॥ ೩೯ ॥
ವಿಜ್ಞಾತಾಖಿಲದುಶ್ಚೇಷ್ಟಃ ಪ್ರಾಕೃತಂ ಭಾವಮಾಗತಃ ।
ಜಟಾಯುಲಬ್ಧವೃತ್ತಾಂತಸ್ತಸ್ಯ ಮುಕ್ತಿಪ್ರದಾಯಕಃ ॥ ೪೦ ॥
ತದುಕ್ತಶಬರೀಪ್ರೋಕ್ತಪಂಪಾವಾಯುಸುತಾನ್ವಿತಃ ।
ಸುಗ್ರೀವಕೃತಸೌಹಾರ್ದೋ ತದ್ವಾಲಿಕೃತಘಾತನಃ ॥ ೪೧ ॥
ಹನೂಮದ್ವಿಕ್ರಮಪ್ರಾಪ್ತಸೀತೋದಂತಶ್ಚ ತೈರ್ಯುತಃ ।
ನಲಾಶ್ಮಬದ್ಧಸತ್ಸೇತುಃ ಪ್ರೋತ್ತೀರ್ಣಲವಣಾರ್ಣವಃ ॥ ೪೨ ॥
ವಿಭೀಷಣಸಖಃ ಸಂಖ್ಯೇಽಶೇಷರಾಕ್ಷಸಮರ್ದನಃ ।
ಸ್ವಹಸ್ತಹತಲಂಕೇಶೋ ವಿಭೀಷಣವರಪ್ರದಃ ॥ ೪೩ ॥
ಅಂಗೀಕೃತಾವನಿಸುತೋ ಜೀವಿತಾಮೃತವಾನರಃ ।
ವಿಭೀಷಣಾದಿಸಂವೀತಃ ಪುಷ್ಪಕಾಧಿಷ್ಠಿತಃ ಸ್ವರಾಟ್ ॥ ೪೪ ॥
ಯಥಾಗತಂ ಸಮಾಯಾತೋ ಯಮುನಾದಕ್ಷಿಣೇ ತಟೇ ।
ತತ್ರಾವತೀರ್ಯ ತೇ ಸರ್ವೇ ವೇಣ್ಯಾಂ ಸ್ನಾತ್ವಾ ಪ್ರಹರ್ಷಿತಾಃ ॥ ೪೫ ॥
ಬ್ರಾಹ್ಮಣೇಭ್ಯೋ ಧನಂ ಭೂರಿ ದದುಃ ಸರ್ವೇ ಯದೃಚ್ಛಯಾ ।
ಸೀತಾ ಬ್ರಾಹ್ಮಣಪತ್ನೀಭ್ಯೋ ವಾಯನಾನಿ ದದೌ ಸ್ವಯಮ್ ॥ ೪೬ ॥
ಭೂಷಣಾನಿ ವಿಚಿತ್ರಾಣಿ ಮಣಿಮುಕ್ತಾನ್ವಿತಾನಿ ಚ ।
ವೇಣೀದಾನಂ ಕೃತಸ್ನಾನಾ ವೇಣ್ಯಾಂ ರಾಮೇಣ ಹರ್ಷಿತಾ ॥ ೪೭ ॥
ನವರತ್ನಾದಿಸಂಯುಕ್ತಾಂ ಚಕಾರ ತ್ರ್ಯಂಗುಲಂ ಸತೀ ।
ಯದ್ಯತ್ಪೂರ್ವಂ ಮತಂ ವೇಣ್ಯೈ ತತ್ತತ್ ಕೃತ್ವಾ ಪತಿಪ್ರಿಯಾ ॥ ೪೮ ॥

ಕಾರಯಾಮಾಸ ವಿಧಿನಾ ದಂಪತೀನಾಂಚ ಭೋಜನಮ್ ।
ರಾಮಸ್ತ್ರಿವೇಣೀಂ ಸಂಪೂಜ್ಯ ಮಾಧವಂ ಚಾಕ್ಷಯಂ ವಟಮ್ ॥ ೪೯ ॥
ಭರದ್ವಾಜಾಂತಿಕಂ ಗತ್ವಾ ಕಥಿತಾಶೇಷಸತ್ಕಥಃ ।
ಹನೂಮಂತಂ ಪುರಃ ಪ್ರೇಷ್ಯ ಸ್ವಯಂ ಚಾನುಜಗಾಮ ಸಃ ॥ ೫೦ ॥
ಭರತಾದಿಕೃತಾಹ್ಲಾದಃ ಕೃತ್ವಾ ರಾಜ್ಯಮಕಂಟಕಃ ।
ಯಜ್ಞಾಶ್ಚ ವಿವಿಧಾನ್ ಕೃತ್ವಾ ಜಗಾಮ ಸ ನಿಜಂ ಪದಮ್ ॥ ೫೧ ॥
ತದಾದಿ ಖ್ಯಾತಿಮಾಯಾತಂ ತೀರ್ಥತ್ರಯಮಿದಂ ಪರಂ ।
ಏಷು ಸ್ನಾನಾರ್ಚನಾವಾಸೈಃ ಪ್ರಾಪ್ನುಯಾದೀಪ್ಸಿತಂ ಫಲಂ ॥ ೫೨ ॥
ಸೀತಾಕುಂಡೇ ಚ ಯೇ ನಾರ್ಯೋ ಗತ್ವಾ ಸ್ನಾತ್ವಾ ಯಥಾವಿಧಿ ।
ರಾಮಂ ಸೀತಾಂ ಹನೂಮಂತಂ ಪೂಜಯಂತ್ಯುಪಸಾಧನೈಃ ॥ ೫೩ ॥
ಜನ್ಮಜನ್ಮನಿ ಸೌಭಾಗ್ಯಂ ಸಂತತಿಂ ಚ ಪರಾಂ ಶ್ರಿಯಂ ।
ಭುಕ್ತ್ವೇಹ ಪತಿಭಿಸ್ಸಾಕಮಂತೇ ಯಾಸ್ಯಂತಿ ಸದ್ಗತಿಂ ॥ ೫೪ ॥
ಏತದೇತಾನಿ ತೀರ್ಥಾನಿ ವರ್ಣಿತಾನಿ ಪುರಾತನೈಃ ।
ಅತ ಊರ್ಧ್ವಂ ವದಿಷ್ಯಾಮಿ ನೈರ್ಋತ್ಯಾಂ ತಾನಿ ಯಾನಿ ತು ॥ ೫೫ ॥

॥ ಇತಿ ಸಪ್ತಾಶೀತಿತಮೋಽಧ್ಯಾಯಃ ॥

ಶೇಷದೇವರು ಹೇಳಿದರು—

ಹೀಗೆಂದು ಹೇಳಿದ ರುದ್ರದೇವರ ಮಾತುಗಳನ್ನು ಆಲಿಸಿದ, ರುದ್ರದೇವರಿಗೆ ಪ್ರಿಯನಾದ ಚಂದ್ರನು "ಸೋಮೇಶ್ವರ"ವೆಂಬ ಹೆಸರುಳ್ಳ ಈಶ್ವರನ ಲಿಂಗವನ್ನು ಪ್ರತಿಷ್ಠಾಪಿಸಿ ಅಲ್ಲಿ ಮಾಧವದೇವರ ಸಮೀಪದಲ್ಲಿಯೇ ನಂದನವನ್ನು ಮೀರಿಸುವಂತಹ ಒಂದು ಆಶ್ರಮವನ್ನೂ ಮಾಡಿದನು. ಇದು ನಾನಾ ಬಗೆಯ ಮರ, ಬಳ್ಳಿಗಳಿಂದ ಕೂಡಿದ್ದಿತು. ॥ ೧೦-೧೧ ॥ ಇಲ್ಲಿಯೇ ಇದ್ದುಕೊಂಡು ಈ ಪ್ರಾಂತ್ಯದ ವೇಣಿಯಲ್ಲಿ ಉಷಃಕಾಲದಲ್ಲಿ ವಿಧ್ಯುಕ್ತವಾಗಿ ಸ್ನಾನಮಾಡಿ ಶಿವನಿಂದ ಉಪದಿಷ್ಟವಾದ ಮಂತ್ರವನ್ನು ಮನಸ್ಸನ್ನಿಟ್ಟು ಜಪಮಾಡಿದನು. ॥ ೧೨ ॥ ಪಕ್ಷಿಗಳಿಗೂ ಮತ್ತು ಸಸ್ಯಗಳಿಗೂ ಅಧಿಪತಿಯಾದ ಚಂದ್ರನು ಆರೋಗ್ಯವಂತನಾದನು. ಅಂದಿನಿಂದ ಈ ಸೋಮತೀರ್ಥವು ಸೋಮೇಶ್ವರತೀರ್ಥವೆಂಬ ಹೆಸರನ್ನು ಪಡೆಯಿತು. ॥ ೧೩ ॥ ಆದ್ದರಿಂದ ಅಲ್ಲಿಗೆ ಹೋಗಿ ಯಾರು ಭಕ್ತಿಯಿಂದ ಸ್ನಾನಮಾಡಿ ಸೋಮೇಶ್ವರನನ್ನು ಸಕಲ ಪೂಜಾಸಾಮಗ್ರಿಗಳೊಡನೆ ಪೂಜಿಸುತ್ತಾರೋ ಮತ್ತು ರುದ್ರಾಭಿಷೇಕವನ್ನು ಮಾಡುತ್ತಾರೋ, ರುದ್ರಾಭಿಷೇಕ ಸೂಕ್ತಗಳನ್ನು ಹೇಳಿ ಶಿವಪಂಚಾಕ್ಷರೀ ಜಪವನ್ನು ಮಾಡಿ, ಜೊತೆಗೆ ಅಧ್ಯಯನ, ಬ್ರಹ್ಮಯಜ್ಞ, ದಾನಾದಿಗಳು ಮತ್ತು ಬ್ರಾಹ್ಮಣ ಭೋಜನವನ್ನು ಮಾಡಿಸುವರೋ ಅಂಥವರಲ್ಲಿ ಸೋಮೇಶ್ವರನು ಆತ್ಮೀಯವಾದ ಅಭಿಮಾನವನ್ನು ತೋರುವನು ಮತ್ತು ಶ್ರೀ ಮಾಧವನೂ ಪ್ರಸನ್ನನಾಗುವನು. ॥ ೧೪-೧೬ ॥ ಅಲ್ಲಿ ಏಕರುದ್ರ ಮತ್ತು ಮಹಾರುದ್ರದ ಫಲವೂ ಸಿಗುವುದು. ಸಾವಿರ ಸಲ ಜಪಮಾಡಿದವರಿಗೆ ಶೈವ ಮಂತ್ರದ ಸಿದ್ಧಿಯೂ ಆಗುವುದು. ॥ ೧೭ ॥ ಈ ಕ್ಷೇತ್ರದಲ್ಲಿ ಸೋಮವಾರ ಅಮಾವಾಸ್ಯೆಯಂದು ಯಾರು ಸೋಮೇಶ್ವರನನ್ನು ಪೂಜಿಸುವರೋ ಅವರು

ಖಂಡಿತ ಸೋಮಯಾಗದ ಪುಣ್ಯವನ್ನು ಹೊಂದುವರು. ॥ ೧೮ ॥ ಹೇ ಸನಕಾದಿ ಮುನೀಶ್ವರರೇ! ಇದೇ ಮೊದಲಾದ ಗುಣಗಳಿಂದ ಕೂಡಿದ ಸೋಮತೀರ್ಥವನ್ನು ವರ್ಣಿಸಿದ್ದಾಯಿತು. ಇನ್ನು ಬೇರೆ ಬೇರೆ ತೀರ್ಥಗಳನ್ನೂ ಕ್ರಮವಾಗಿ ವರ್ಣಿಸುವೆನು. ॥ ೧೯ ॥ ಈ ಸೋಮತೀರ್ಥದ ಪಶ್ಚಿಮಕ್ಕೆ ಸೂರ್ಯತೀರ್ಥವಿದೆ. ಇದರಲ್ಲಿ ಸ್ನಾನ, ಪಾನಾದಿಗಳನ್ನು ಮಾಡಿದರೆ ಸೂರ್ಯಲೋಕದ ಪ್ರಾಪ್ತಿಯುಂಟಾಗುತ್ತದೆ. ॥ ೨೦ ॥ ಕುಬೇರಾಶ್ರಮದ ಪಶ್ಚಿಮಕ್ಕೆ ಪ್ರಸಿದ್ಧವಾದ ''ಧನದ''ವೆಂಬ ಸರೋವರವಿದೆ. ಇದರಲ್ಲಿ ಸ್ನಾನ ದಾನಾದಿಗಳನ್ನು ಮತ್ತೆ ಮತ್ತೆ ಮಾಡುವುದರಿಂದ ಧನಿಕರಾಗುತ್ತಾರೆ. ॥ ೨೧ ॥ ಈ ಧನದ ತೀರ್ಥದ ಪಶ್ಚಿಮಕ್ಕೆ ವಾಯುತೀರ್ಥವಿದೆ. ಇದು ವರವನ್ನು ಕೊಡತಕ್ಕದ್ದು. ಇಲ್ಲಿ ಸ್ನಾನಮಾಡುವವರಿಗೆ ವಾಯು ಸಂಬಂಧವಾದ ಬಾಧೆಗಳು ಇರುವುದಿಲ್ಲ. ॥ ೨೨ ॥ ಇದಕ್ಕೆ ಪಶ್ಚಿಮದಲ್ಲಿ ಪರಮಪಾವನವಾದ ಅಗ್ನಿ ತೀರ್ಥವಿದೆ. ಇದರಲ್ಲಿ ಸ್ನಾನಮಾಡಿದವರು ಅಗ್ನಿಯಂತೆ ತೇಜೋಮಯರಾಗುವುದಲ್ಲದೆ, ಅಗ್ನಿಲೋಕಕ್ಕೆ ಪ್ರಯಾಣಮಾಡುವರು. ॥ ೨೩ ॥ ಇದಕ್ಕೆ ಪಶ್ಚಿಮದಲ್ಲಿ ''ಧರ್ಮತೀರ್ಥ''ವೆಂಬುದು ಇದೆ. ಇದು ತನ್ನ ಸೇವಾಮಾಡಿದವರನ್ನು ನರಕದಿಂದ ತಪ್ಪಿಸುವುದರಿಂದ ಇದು ''ಅನರಕ'' ತೀರ್ಥವೆಂದು ಸ್ಮರಣೆಮಾಡಲ್ಪಡುತ್ತದೆ. ಇಲ್ಲಿ ಸ್ನಾನಮಾಡಿ ತರ್ಪಣ ಕೊಡುವವರಿಗೂ ಮತ್ತು ಅವರ ಪಿತೃಗಳಿಗೂ ನರಕವು ಪ್ರಾಪ್ತವಾಗುವುದಿಲ್ಲ. ॥ ೨೪ ॥ ಇದರ ಪಶ್ಚಿಮಭಾಗದಲ್ಲಿ (ವರುಣದಿಕ್ಕಿನಲ್ಲಿ) ''ವೀರತೀರ್ಥ''ವು ಇದೆ. ಇದು ಪ್ರಸಿದ್ಧವಾದುದು. ಇದರಲ್ಲಿ ಸ್ನಾನ ಮಾಡಿದವರು ಶೂರರೂ ವೀರರೂ ಆಗುವರು. ॥ ೨೫ ॥ ಅದರ ಸಮೀಪದಲ್ಲಿ ಹಿಂದೆ ಹೇಳಲ್ಪಟ್ಟ ಮಾಧವಾಶ್ರಮವಿದೆ. ಇಲ್ಲಿ ಸ್ನಾನ ಪೂಜೆ ಮತ್ತು ವಾಸಮಾಡುವುದರಿಂದ ವೈಕುಂಠವು ಪ್ರಾಪ್ತವಾಗುವುದು. ॥ ೨೬ ॥ ಹೇ ಮುನೀಶ್ವರರೇ! ಅದರ ಸಮೀಪದಲ್ಲಿಯೇ ಯಮಧರ್ಮರಾಜನ ತೀರ್ಥವಿದೆ. ಇದರಲ್ಲಿ ಸ್ನಾನ ಅರ್ಚನಾದಿಗಳನ್ನು ಮಾಡುವವರು ಯಮಧರ್ಮನ ಲೋಕಕ್ಕೆ ಹೋಗುವುದಿಲ್ಲ. ॥ ೨೭ ॥ ಅದಕ್ಕೆ ಹತ್ತಿರದಲ್ಲಿಯೇ ಪಶ್ಚಿಮ ದಿಗ್ಭಾಗದಲ್ಲಿ ವಿಶಾಲವಾದ ''ರಾಮತೀರ್ಥ''ವಿದೆ. ಇದು ತನ್ನ ಸೇವಾ ಮಾಡಿದವರನ್ನು ಜ್ಞಾನಿಗಳನ್ನಾಗಿ ಮಾಡುವುದು. ಇದಾದ ಮೇಲೆ ''ಸೀತಾ ಕುಂಡ''ವೂ ಅನಂತರ ''ಹನುಮತೀರ್ಥ''ವೂ ಇವೆ. ಇವೆಲ್ಲ ಉತ್ತಮ ತೀರ್ಥಗಳು. ॥ ೨೮ ॥ ಹಿಂದೆ ತ್ರೇತಾಯುಗದಲ್ಲಿ ಅವ್ಯಾಹತಷಡ್ಗುಣಸಂಪನ್ನನಾದ ಶ್ರೀ ಮಹಾವಿಷ್ಣುವು ದೇವ ಬ್ರಾಹ್ಮಣರ ಹಿತಕ್ಕಾಗಿ ಅಯೋಧ್ಯಾಪತಿಯಾಗಿದ್ದ ದಶರಥರಾಜನ ವಂಶದಲ್ಲಿ ಆವಿರ್ಭವಿಸಿದನು. (ಅಂದರೆ ಕೌಸಲ್ಯೆಯ ಗರ್ಭದಿಂದ ಬರಲಿಲ್ಲವೆಂದು ತಿಳಿಯಬೇಕು). ಮಹಾವಿಷ್ಣುವಿನ ಈ ಅವತಾರವು ಭೂಮಿಯಲ್ಲಿ ಮಹಾಯಶಸ್ವಿಯಾದದ್ದು. ॥ ೨೯ ॥ ಇವನೇ ಶ್ರೀ ರಾಮನು. ಇವನು ಲಕ್ಷ್ಮಣ, ಭರತ, ಶತ್ರುಘ್ನರೆಂಬ ತಮ್ಮಂದಿರೊಡಗೂಡಿ ಬಾಲಲೀಲೆಗಳಿಂದ ಅಯೋಧ್ಯಾನಗರವಾಸಿಗಳ ಮನಸ್ಸನ್ನು ಅಪಹಾರಮಾಡಿದನು. ಇವನು ವಿಶ್ವಾಮಿತ್ರನಿಗೆ ಅನುಚರನಂತೆಯೂ, ಶಿಷ್ಯನಂತೆಯೂ ಇದ್ದು ಅವರಿಂದ ಬಲ, ಅತಿಬಲ ಎಂಬ ಮಂತ್ರಗಳನ್ನು ಪಡೆದನು, ತಾಟಕಿಯೆಂಬ ರಾಕ್ಷಸಿಯನ್ನು ಬಾಣದಿಂದ ಸಂಹರಿಸಿದನು ಕೊನೆಗೆ ಗಾಧಿಸುತನಾದ ವಿಶ್ವಾಮಿತ್ರರ ಸಿದ್ಧಾಶ್ರಮಕ್ಕೆ ಹೋದನು. ॥ ೩೦-೩೧ ॥ ಅಲ್ಲಿ ರಾಕ್ಷಸರುಗಳನ್ನು ಧ್ವಂಸಮಾಡಿ ಯಜ್ಞಕ್ಕೆ ಒದಗಿದ್ದ ವಿಘ್ನಗಳನ್ನು ಪರಿಹರಿಸಿ, ಮಿಥಿಲಾ ಪಟ್ಟಣದ ದೊರೆಯ ಯಜ್ಞವನ್ನು ನೋಡುವುದರಲ್ಲಿ ಆಸಕ್ತರಾದ ವಿಶ್ವಾಮಿತ್ರರನ್ನೇ ಅನುಸರಿಸಿ ಹೊರಟು, ಕುಪಿತರಾದ ಗೌತಮರಿಂದ ಶಾಪಹೊಂದಿದ್ದ ಅಹಲ್ಯೆಯನ್ನು ತನ್ನ ಕೃಪಾದೃಷ್ಟಿಯಿಂದ ಉದ್ಧರಿಸಿ, ಶಿವಧನುಸ್ಸನ್ನು ಭಂಗಮಾಡಿ ಮಹಾಯಶಸ್ಸು ಪಡೆದು, ಸೀತೆಯನ್ನು

ಪಾಣಿಗ್ರಹಣ ಮಾಡಿಕೊಂಡು, ಜಮದಗ್ನಿ ಪುತ್ರನಾದ ಪರಶುರಾಮದೇವರನ್ನು ಪರಾಭವಗೊಳಿಸಿದಂತೆ ಜಗತ್ತಿಗೆ ತೋರಿಸಿ ನಂತರ ಅಯೋಧ್ಯೆಯಲ್ಲಿ ತಾಯಿ ತಂದೆಯರಿಗೆ ಸಂತೋಷವನ್ನುಂಟುಮಾಡಿದನು. ಅನಂತರ ರಾಮನು ಮಂಥರೆಯ ಉಪದೇಶಕ್ಕೆ ಜೋತುಬಿದ್ದ ಕೈಕೇಯಿಗೆ ಕೊಟ್ಟ ವಚನಕ್ಕೆ ಕಟ್ಟುಬಿದ್ದಾಗ ತನ್ನ ತಂದೆಯ ಅಪೇಕ್ಷೆಯನ್ನು ನೆರವೇರಿಸುವುದಕ್ಕಾಗಿ ತನ್ನ ಇಚ್ಛೆಯಿಂದಲೇ ಭರತನಿಗೆ ರಾಜ್ಯವನ್ನು ಒಪ್ಪಿಸಿ, ಸೀತೆ ಮತ್ತು ತಮ್ಮನಾದ ಲಕ್ಷ್ಮಣರಿಂದೊಡಗೂಡಿ ವನಕ್ಕೆ ಹೊರಟನು. ಅಲ್ಲಿ ಅಡ್ಡವಾಗಿ ಬಂದ ಗಂಗೆಯನ್ನು ಗುಹನೆಂಬ ಬೆಸ್ತನ ಹರಿಗೋಲಿನ ಮೂಲಕ ದಾಟಿದನು. ಆಮೇಲೆ ಭರದ್ವಾಜರಿಂದ ಒಪ್ಪಿಗೆಯನ್ನು ಪಡೆದು, ಅವರಿಂದ ಅವಶ್ಯಕವಾದ ಸಕಲ ವೃತ್ತಾಂತವನ್ನೂ ತಿಳಿದು, ಭರದ್ವಾಜರ ಶಿಷ್ಯನಿಂದ ಯಮುನಾನದಿಯನ್ನು ಹರಿಗೋಲಿನಲ್ಲಿ ದಾಟಿಸಲ್ಪಟ್ಟು ಚಿತ್ರಕೂಟಕ್ಕೆ ಬಂದು ಅಲ್ಲಿ ವಾಸಮಾಡಿ ಸಮಾಧಾನದಿಂದ ಇದ್ದನು. ॥ ೩೨-೩೬ ॥ ಆಮೇಲೆ ದಂಡಕಾರಣ್ಯವನ್ನು ಪ್ರವೇಶಿಸಿದನು. ಅಲ್ಲಿ ವಿರಾಧನನ್ನು ಸಂಹರಿಸಿದನು. ತಮ್ಮನಾದ ಲಕ್ಷ್ಮಣನೊಡನೆ ಶರಭಂಗಋಷಿಗಳನ್ನೂ, ಸುತೀಕ್ಷ್ಣರನ್ನೂ ಮತ್ತು ಅಗಸ್ತ್ಯರನ್ನೂ ನೋಡಿದನು. ॥ ೩೭ ॥ ಅಗಸ್ತ್ಯರಿಗೆ ನಮಸ್ಕರಿಸಿ ಅವರ ಅತಿಥಿಸತ್ಕಾರವನ್ನು ಸ್ವೀಕರಿಸಿ ಅವರಿಂದ ಇಂದ್ರಧನುಸ್ಸನ್ನು ಸ್ವೀಕರಿಸಿ ಅವರ ಸಮ್ಮುಖದಲ್ಲಿ ರಾಕ್ಷಸರ ವಧೆಗಾಗಿ ಪ್ರತಿಜ್ಞೆಯನ್ನು ಮಾಡಿದನು. ಅಲ್ಲಿಂದ ಶ್ರೀ ರಾಮನು ಪಂಚವಟಿಗೆ ಬಂದನು. ॥ ೩೮ ॥ ಅಲ್ಲಿ ಆಶ್ರಮವನ್ನು ನಿರ್ಮಿಸಿ ವಾಸಮಾಡಿದನು. ರಾವಣನ ತಂಗಿ ಶೂರ್ಪಣಖಾ ರಾಕ್ಷಸಿಯ ಕಿವಿ, ಮೂಗುಗಳನ್ನು ಲಕ್ಷ್ಮಣನು ಕತ್ತರಿಸಿದನು. ಇವರೊಡನೆ ಮುಯ್ಯಿತೀರಿಸಲು ಬಂದ ತ್ರಿಶಿರ, ಖರ ಮತ್ತು ದೂಷಣರೆಂಬ ರಾಕ್ಷಸರನ್ನು ಸಂಹರಿಸಿದನು. ಮಾಯಾ ಜಿಂಕೆಯ ರೂಪದಲ್ಲಿ ವಂಚಿಸಲು ಬಂದಿದ್ದ ಮಾರೀಚನನ್ನು ಒಂದು ಕ್ಷಣದಲ್ಲಿ ಸಂಹರಿಸಿದನು. ॥ ೩೯ ॥ ರಾವಣ ಮತ್ತು ಮಾರೀಚರ ಎಲ್ಲ ಕೆಟ್ಟ ವ್ಯಾಪಾರಗಳನ್ನು ತಿಳಿದಿದ್ದರೂ, ಸೀತಾವಿಯೋಗದಿಂದ ದುಃಖ, ವಿರಹಾದಿಗಳುಳ್ಳ ಮಾನುಷ ಭಾವವನ್ನು ಪ್ರದರ್ಶಿಸುತ್ತಾ, ಜಟಾಯುವಿನಿಂದ ತಿಳಿಸಲ್ಪಟ್ಟ ಸೀತಾಪಹರಣದ ವೃತ್ತಾಂತವುಳ್ಳವನಾಗಿ, ಆ ಜಟಾಯುವಿಗೆ ಮುಕ್ತಿಯನ್ನು ಕೊಡತಕ್ಕವನಾದನು. ॥ ೪೦ ॥ ಜಟಾಯುವಿನಿಂದ ಬೀಳ್ಕೊಂಡು ಶಬರಿಯ ಆತಿಥ್ಯವನ್ನು ಸ್ವೀಕರಿಸಿ ಪಂಪಾಸರೋವರಕ್ಕೆ ಬಂದು ಅಲ್ಲಿ ವಾಯುಸುತನಾದ ಹನುಮಂತನನ್ನು ಕಂಡನು. ಹನುಮಂತನ ಮೂಲಕ ಸುಗ್ರೀವನೊಡನೆ ಸಖ್ಯ ಮಾಡಿಕೊಂಡು, ನಂತರ ವಾಲಿಯನ್ನೂ ಸಂಹರಿಸಿದನು. ॥ ೪೧ ॥ ಹನುಮಂತನ ಪರಾಕ್ರಮದಿಂದ ಆದ ಸಮುದ್ರೋಲ್ಲಂಘನ, ಲಂಕಾಭಂಗರೂಪಗಳಿಂದ ತಿಳಿದ ಸೀತಾ ದೇವಿಯ ವೃತ್ತಾಂತವುಳ್ಳವನಾಗಿ, ಸೀತಾದೇವಿಗೆ ರಾವಣನಿಂದಾದ ಹಿಂಸೆಯನ್ನು ಅರಿತು ನಳನೆಂಬ ವಾನರನಿಂದ ಬೆಟ್ಟಗುಡ್ಡಗಳನ್ನು ಉಪಯೋಗಿಸಿ ಸೇತುವೆಯನ್ನು ಕಟ್ಟಿಸಿ ಸಮುದ್ರವನ್ನು ದಾಟಿದನು. ॥ ೪೨ ॥ ರಾಮನು ವಿಭೀಷಣನೊಡನೆ ಸಖ್ಯ ಮಾಡಿಕೊಂಡನು ಮತ್ತು ಅನೇಕ ರಾಕ್ಷಸರುಗಳನ್ನು ಸಂಹರಿಸಿದನು. ನಂತರ ತನ್ನ ಕೈಯಿಂದಲೇ ರಾವಣನನ್ನು ಸಂಹರಿಸಿ ವಿಭೀಷಣನಿಗೆ ರಾಜ್ಯಾಭಿಷೇಕರೂಪ ವರವನ್ನಿತ್ತನು. ॥ ೪೩ ॥ ಯುದ್ಧದಲ್ಲಿ ಸತ್ತಿರುವ ವಾನರಗಳನ್ನು ಬದುಕಿಸಿದನು. ಅಗ್ನಿಪ್ರವೇಶದ ಮೂಲಕ ಸೀತಾದೇವಿಯನ್ನು ಅಂಗೀಕಾರ ಮಾಡಿ ನಂತರ ವಿಭೀಷಣಾದಿಗಳೊಡನೆ ಪುಷ್ಪಕ ವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಹಿಂತಿರುಗಿದನು. ॥ ೪೪ ॥ ಬರುತ್ತಿರುವಾಗ ಯಮುನಾನದಿಯು ಕಂಡುಬಂದಿತು. ಎಲ್ಲರೂ ಆ ನದಿಯ ದಕ್ಷಿಣತೀರದಲ್ಲಿ ಇಳಿದು "ವೇಣಿ"ಯಲ್ಲಿ ಸ್ನಾನಮಾಡಿ ಸಂತೋಷಭರಿತರಾದರು. ॥ ೪೫ ॥ ಬ್ರಾಹ್ಮಣರಿಗೆ

ಇಷ್ಟಬಂದಷ್ಟು ಭೂರಿದಕ್ಷಿಣೆಗಳನ್ನು ಕೊಟ್ಟರು. ಸೀತಾದೇವಿಯೂ ಬ್ರಾಹ್ಮಣ ಪತ್ನಿಯರಿಗೆ ತಾನೇ ಮರದ ಬಾಗಿನಗಳನ್ನು ಕೊಟ್ಟಳು. ॥ ೪೬ ॥ ವಿಚಿತ್ರವಾದ ನವರತ್ನಖಚಿತದ ಆಭರಣಗಳನ್ನು ದಾನ ಮಾಡಿದಳು. ಶ್ರೀ ರಾಮಚಂದ್ರರೊಡನೆ ಸಂತೋಷದಿಂದ ಎಲ್ಲರೂ ತ್ರಿವೇಣಿಯಲ್ಲಿ ಸ್ನಾನವನ್ನು ಮಾಡಿ ವೇಣೀ ದಾನವನ್ನು ಮಾಡಿದರು. ॥ ೪೭ ॥ ಸೀತಾದೇವಿಯೂ ತನ್ನ ಹೆರಳಿನ ಮೂರು ಅಂಗುಲ ಕೂದಲಿನ ತುದಿಯನ್ನು ಕತ್ತರಿಸಿ ನವರತ್ನಗಳ ಸಹಿತವಾಗಿ ವೇಣಿಗೆ ದಾನಮಾಡಿದಳು. ಗಂಡನಿಗೆ ಪ್ರಿಯಳಾಗಿದ್ದ ಸೀತೆಯು ಏನೇನು ದಾನಗಳನ್ನು ಮನಸ್ಸಿನಲ್ಲಿ ಅಂದುಕೊಂಡಿದ್ದಳೋ ಅವುಗಳನ್ನೆಲ್ಲಾ ಕೊಟ್ಟಳು. ॥ ೪೮ ॥ ಶ್ರೀ ರಾಮಚಂದ್ರನೂ ವಿಧಿವತ್ತಾಗಿ ದಂಪತಿಗಳ ಭೋಜನವನ್ನು ಮಾಡಿಸಿದನು, ತ್ರಿವೇಣಿಯನ್ನೂ, ವೇಣೀಮಾಧವನನ್ನೂ ಮತ್ತು ಅಕ್ಷಯವಟವೃಕ್ಷವನ್ನೂ ಪೂಜೆಮಾಡಿದನು. ॥ ೪೯ ॥ ಭಾರದ್ವಾಜರ ಸಮೀಪಕ್ಕೆ ಹೋಗಿ ಅವರಿಗೆ ನಡೆದಿರುವ ಎಲ್ಲ ವೃತ್ತಾಂತಗಳನ್ನೂ ಹೇಳಿದನು. ಹನುಮಂತನನ್ನು ಮೊದಲೇ ಅಯೋಧ್ಯೆಗೆ ಕಳುಹಿಸಿ ತಾನೂ ಅವನನ್ನು ಹಿಂಬಾಲಿಸಿದನು. ॥ ೫೦ ॥ ಅಯೋಧ್ಯೆಗೆ ಹೋಗಿ, ಭರತನಿಗೆ ಆಹ್ಲಾದವನ್ನುಂಟುಮಾಡಿದನು. ರಾಜ್ಯಾಭಿಷಿಕ್ತನಾಗಿ ನಿಷ್ಕಂಟಕವಾಗಿ ರಾಜ್ಯಭಾರ ಮಾಡಿದನು. ನಾನಾವಿಧಗಳಾದ ಯಜ್ಞಗಳನ್ನು ಮಾಡಿ ಅನಂತರ ತನ್ನ ಲೋಕಕ್ಕೆ ಹಿಂತಿರುಗಿದನು. ॥ ೫೧ ॥ ಇದಾದ ನಂತರ ಈ ಮೂರೂ ತೀರ್ಥಗಳು ಪ್ರಸಿದ್ಧಿಪಡೆದವು. ಇವುಗಳಲ್ಲಿ ವಾಸಿಸಿ ಯಾರು ಸ್ನಾನ ಮತ್ತು ಅರ್ಚನೆಗಳನ್ನು ಮಾಡುವರೋ ಅವರು ತಮ್ಮ ಅಪೇಕ್ಷೆಗಳನ್ನೆಲ್ಲಾ ಹೊಂದುವರು ॥ ೫೨ ॥ ಸೀತಾಕುಂಡದಲ್ಲಿ ಯಾವ ಸ್ತ್ರೀಯರು ವಿಧಿವತ್ತಾಗಿ ಸ್ನಾನಮಾಡಿ, ರಾಮ, ಸೀತೆ ಮತ್ತು ಹನುಮಂತನನ್ನು ಪೂಜಿಸುತ್ತಾರೋ ಅವರು ಜನ್ಮ ಜನ್ಮಾಂತರದಲ್ಲಿಯೂ ಸೌಭಾಗ್ಯವನ್ನೂ, ಸಂತತಿಯನ್ನೂ ಮತ್ತು ಅಪಾರ ಐಶ್ವರ್ಯವನ್ನೂ ಈ ಲೋಕದಲ್ಲಿ ತಮ್ಮ ಪತಿಗಳೊಡನೆ ಪಡೆದು ನಂತರ ಸದ್ಗತಿಯನ್ನು ಪಡೆಯುತ್ತಾರೆ. ॥ ೫೩-೫೪ ॥ ಈ ರೀತಿಯಾದ ಪುರಾತನಗಳಾದ ಈ ತೀರ್ಥಗಳು ವರ್ಣಿಸಲ್ಪಟ್ಟಿವೆ. ಇನ್ನು ನೈರುತ್ಯದಿಕ್ಕಿನಲ್ಲಿರುವ ತೀರ್ಥಗಳನ್ನೂ ವರ್ಣಿಸುವೆ. ॥ ೫೫ ॥

॥ ಎಂಬತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಅಷ್ಟಾಶೀತಿತಮೋಽಧ್ಯಾಯಃ ॥ ೮೮ ॥

ಶೇಷ ಉವಾಚ—

ತೇಷಾಮದೂರೇ ವಿಖ್ಯಾತಮುರ್ವಶೀಕುಂಡಮುತ್ತಮಮ್ ।
ಪ್ರಾಕ್‌ಪಂಚಾಪ್ಸರಸಾಂ ಮಧ್ಯೇ ಶಪ್ತೇಂದ್ರೇಣ ಕ್ರುಧೋರ್ವಶೀ ॥ ೧ ॥
ಸದ್ಯೋ ಭೂತಲಮಾಯಾತಾ ಪುರೂರವಸಮಾಶ್ರಿತಾ ।
ಶಚೀಪತೇಃ ಸಭಾಂ ಕಾಂತ್ಯಾ ದ್ಯೋತಯಂತೀಂ ವರಾಂಗನಾಮ್ ॥ ೨ ॥
ಲಾವಣ್ಯಹ್ರದಿನೀಂ ಮತ್ವಾ ತಾಮುವಾಚ ಪುರೂರವಾಃ ।
ಕಾಸಿ ತ್ವಂ ವದವಾಮೋರು ಕುತೋ ವಾತ್ರ ಸಮಾಗಮಃ ॥ ೩ ॥
ಸತ್ಯಂ ವದಾಖಿಲಂ ವೃತ್ತಂ ಸ್ವೀಯಂ ಮಾನಸಹಾರಿಣೀ ।
ರಾಜವಾಕ್ಯಂ ಸಮಾಕರ್ಣ್ಯ ಹೃಷ್ಟೋವಾಚ ತಮುರ್ವಶೀ ॥ ೪ ॥

## ॥ ಎಂಬತ್ತೆಂಟನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಈಗ ಹೇಳಿದ ತೀರ್ಥಗಳಿಗೆ ಹತ್ತಿರದಲ್ಲಿಯೇ ಊರ್ವಶೀಕುಂಡವಿದೆ. ಇದು ಉತ್ತಮವಾದುದೂ, ಪ್ರಸಿದ್ಧವಾದ ಐದು ಅಪ್ಸರೆಯರಲ್ಲಿ ಒಬ್ಬಳಾದ ಊರ್ವಶಿಯು ಕೋಪಗೊಂಡ ಇಂದ್ರನಿಂದ ಶಾಪವನ್ನು ಹೊಂದಿದಳು. ॥ ೧ ॥ ಊರ್ವಶಿಯು ಕೂಡಲೇ ಭೂಮಿಗೆ ಬಂದು ಪುರೂರವನನ್ನು ಆಶ್ರಯಿಸಬಯಸಿದಳು. ತನ್ನ ದೇಹಕಾಂತಿಯಿಂದ ಇಡೀ ಇಂದ್ರನ ಸಭೆಯನ್ನು ಬೆಳಗುತ್ತಿದ್ದ ಲಾವಣ್ಯದ ಮಡುವಿನಂತಿರುವ ಊರ್ವಶಿಯನ್ನು ಕುರಿತು ಪುರೂರವನು ಹೇಳಿದನು. ''ಚಿತ್ತಾಪಹಾರಕವಾಗಿರುವ ಸುಂದರವಾದ ತೊಡೆಗಳುಳ್ಳವಳೇ! ನೀನು ಯಾರು? ಇಲ್ಲಿಗೆ ಬಂದ ಕಾರಣವೇನು? ಎಲ್ಲಾ ವೃತ್ತಾಂತವನ್ನು ಸತ್ಯವಾಗಿ ಹೇಳು'' ಎಂಬ ಪುರೂರವರಾಜನ ಪ್ರಶ್ನೆಯಿಂದ ಸಂತುಷ್ಟಳಾದ ಊರ್ವಶಿಯು ಅವನನ್ನು ಕುರಿತು ಹೇಳಿದಳು. ॥ ೨-೪ ॥

ಊರ್ವಶ್ಯುವಾಚ—

ಶಚೀಪತೇಃ ಪುರೇ ಪಂಚ ಘೃತಾಚ್ಯಾದ್ಯಾಃ ಸುರಾಂಗನಾಃ ।
ತಾಸಾಂ ಯಾ ಹ್ಯುರ್ವಶೀ ಸಾಹಂ ದೈವಾದಿಹ ಸಮಾಗತಾಃ ॥ ೫ ॥
ಇಂದ್ರಾನುಜ್ಞಾಪರಾ ನಿತ್ಯಂ ವರ್ತಮಾನಾಪ್ಯಹಂ ಪ್ರಭೋ ।
ನಾಗಾಂ ಶಚೀಪತೇಃ ಪಾರ್ಶ್ವಂ ಕದಾಚಿದ್ದೈವಚೋದಿತಾ ॥ ೬ ॥
ತಮೇವ ಹೇಲನಂ ಜ್ಞಾತ್ವಾ ಕುಪಿತೇನ ಮರುತ್ವತಾ ।
ಶತಂ ಸಮಾ ಭುವಂ ಯಾಹೀತ್ಯೇವಂ ಶಪ್ತಾ ಸ್ವಕರ್ಮಣಾ ॥ ೭ ॥
ತೇನ ಭೂಮಂಡಲಂ ಪ್ರಾಪ್ಯ ಸ್ವವಾಸಾಯೋಚಿತಂ ಸ್ಥಲಂ ।
ಸರ್ವತ್ರಾನ್ವಿಷ್ಯ ಚಾಪ್ರಾಪ್ಯ ತ್ವಾಮಹಂ ಶರಣಂ ಗತಾ ॥ ೮ ॥

ಅತಸ್ತ್ವಂ ಯತ್ರ ಮೇ ಸ್ಥಾನಂ ದಾಸ್ಯಸ್ಯತ್ರ ಸ್ಥಿತಾ ಸತೀ ।
ಕ್ಷಪಯಿತ್ವಾ ನಿಜಂ ಶಾಪಂ ಗಮಿಷ್ಯಾಮ್ಯಮರಾವತೀಮ್ ॥ ೯ ॥

**ಊರ್ವಶಿಯು ಹೇಳಿದಳು—**

''ಶಚೀಪತಿಯಾದ ಇಂದ್ರನ ಅಮರಾವತೀನಗರದಲ್ಲಿ ಇರುವ ಘೃತಾಚಿಯೇ ಮೊದಲಾದ ಅಪ್ಸರ ಸ್ತ್ರೀಯರಲ್ಲಿ ನಾನೂ ಒಬ್ಬಳು. ನಾನು ಯಾವಾಗಲೂ ಇಂದ್ರನ ಸರ್ವೋತ್ಕೃಷ್ಟವಾದ ಆಜ್ಞೆಗೆ ಒಳಪಟ್ಟಿದ್ದರೂ ದೈವಚೋದಿತಳಾಗಿ ಒಂದು ದಿನ ಇಂದ್ರನ ಪಕ್ಕಕ್ಕೆ ಹೋಗಲಿಲ್ಲ. ಅದನ್ನು ತನಗಾದ ಅವಮಾನವೆಂದು ತಿಳಿದ ಇಂದ್ರನು ''ನೀನು ನೂರು ವರ್ಷಗಳವರೆಗೆ ಭೂಲೋಕದಲ್ಲಿರು'' ಎಂದು ಶಪಿಸಿದನು. ॥ ೫-೭ ॥ ಆದ್ದರಿಂದ ಭೂಮಂಡಲಕ್ಕೆ ಬಂದು ನನ್ನ ವಾಸಕ್ಕೆ ಉಚಿತವಾದ ಸ್ಥಳವನ್ನು ಹುಡುಕಿ, ಅಂತಹ ಸ್ಥಳವ್ಯಾವುದೂ ಸಿಗದೆ ಈಗ ನಿನ್ನನ್ನು ಶರಣುಹೊಕ್ಕಿದ್ದೇನೆ. ॥ ೮ ॥ ಆದ್ದರಿಂದ ನೀನು ಎಲ್ಲಿ ನನಗೆ ಜಾಗವನ್ನು ಕೊಡುತ್ತೀಯೋ ಅಲ್ಲಿ ಇದ್ದುಕೊಂಡು ನನ್ನ ಶಾಪದ ಅವಧಿಯನ್ನು ಕಳೆದು ಅಮರಾವತಿಗೆ ಹಿಂತಿರುಗುವೆನು''. ॥ ೯ ॥

**ಪುರೂರವಾ ಉವಾಚ—**

ಕಿಮರ್ಥಂ ಖಿದ್ಯತೇ ಬಾಲೇ ತ್ವಮತ್ರೈವ ವಸಾನಿಶಮ್ ।
ಶತಕ್ರತೋರಧೀನಾಹಮಿತಿ ಚೇತ್ತಾನ್ಕರೋಮ್ಯಹಮ್ ॥ ೧೦ ॥
ಏವಮುಕ್ತ್ವಾ ಸಮಾರೇಭೇ ಕ್ರತೂನಾಂ ವೈ ಸಹಸ್ರಕಮ್ ।
ತದಾ ದುಂದುಭಯೋ ನೇದುರ್ಭುವಿ ಜಾತೋ ಮಹೋತ್ಸವಃ ॥ ೧೧ ॥
ತಚ್ಛ್ರುತ್ವಾ ಸಹಸಾ ಬ್ರಹ್ಮಾ ಚಕಂಪೇ ಸ್ವಪದೇ ಸ್ಥಿತಃ ।
ಸ್ವಪದಚ್ಯುತಿಭೀತಸ್ಸನ್ ವೃದ್ಧಬ್ರಾಹ್ಮಣರೂಪತಃ ॥ ೧೨ ॥
ಯಜ್ಞಾನ್ವಿಘ್ನಯಿತುಂ ತೂರ್ಣಂ ಯಜ್ಞವಾಟಂ ಸಮಾಗತಃ ।
ರಾಜಾ ಸಂಪೂಜಯಾಮಾಸ ತಮುವಾಚ ಪಿತಾಮಹಃ ॥ ೧೩ ॥

**ಪುರೂರವನು ಹೇಳಿದನು—**

''ಎಲೈ ಬಾಲೆಯೇ! ನೀನು ಏತಕ್ಕಾಗಿ ದುಃಖಿಸುತ್ತಿ? ನೀನು ಇಲ್ಲಿಯೇ ಯಾವಾಗಲೂ ಇದ್ದುಬಿಡು. ನಾನು ಇಂದ್ರನ ಅಧೀನನೆಂದು ನೀನು ತಿಳಿದಿದ್ದರೆ ನಾನೂ ನೂರು ಯಜ್ಞಗಳನ್ನು ಆಚರಿಸಿ ಶತಕ್ರತುವೆನಿಸಿರುವ ಇಂದ್ರನಿಗೆ ಸಮನಾಗುವೆನು.'' ॥ ೧೦ ॥ ಹೀಗೆ ಹೇಳಿದವನೇ ಸಾವಿರ ಯಜ್ಞಗಳನ್ನು ಮಾಡಲು ಪ್ರಾರಂಭಿಸಿದನು. ಆಗ ದೇವದುಂದುಭಿಗಳು ಮೊಳಗಿದುವು ಮತ್ತು ಭೂಮಿಯಲ್ಲಿ ಮಹೋತ್ಸವವು ಉಂಟಾಯಿತು. ॥ ೧೧ ॥ ಬ್ರಹ್ಮಪದವಿಯಲ್ಲಿರುವ ಚತುರ್ಮುಖ ಬ್ರಹ್ಮನು ನಡುಗಿದನು. ತನ್ನ ಪದವಿಗೆ ಚ್ಯುತಿ ಬಂದೀತೆಂದು ಹೆದರಿ ವೃದ್ಧ ಬ್ರಾಹ್ಮಣವೇಷದಿಂದ ಯಜ್ಞಗಳಿಗೆ ವಿಘ್ನವನ್ನುಂಟುಮಾಡುವ ಉದ್ದೇಶದಿಂದ ಪುರೂರವನ ಯಜ್ಞಮಂಟಪವನ್ನು ಪ್ರವೇಶಮಾಡಿದನು. ॥ ೧೨-೧೩ ॥

**ಬ್ರಹ್ಮೋವಾಚ—**

ಯಜ್ವನ್ದಾನವತಾಂ ಶ್ರೇಷ್ಠ ದ್ವಿಜಕಾಮಪ್ರಪೂರಕ ।
ಭವಾನ್ದದಾತು ಭಿಕ್ಷಾಂ ಮೇ ಯಾಚಕೋಽಹಂ ಸಮಾಗತಃ ॥ ೧೪ ॥

ಬ್ರಹ್ಮದೇವರು ಹೇಳಿದರು—

''ಎಲೈ, ಯಜ್ಞಗಳನ್ನು ಮಾಡಿ ದಾನಗಳನ್ನು ಕೊಡತಕ್ಕವರಲ್ಲಿ ಅಗ್ರಗಣ್ಯನೇ! ಮತ್ತು ಬ್ರಾಹ್ಮಣರ ಅಪೇಕ್ಷೆಗಳನ್ನು ಪೂರೈಸತಕ್ಕವನೇ! ನಾನು ಯಾಚಕನು, ಯಾಚನೆಗಾಗಿ ಬಂದಿದ್ದೇನೆ. ತಾವು ನನಗೆ ಭಿಕ್ಷೆಯನ್ನು ಕೊಡಿ''. ಎಂದನು. ॥ ೧೪ ॥

ಪುರೂರವಾ ಉವಾಚ—

ಧನಧಾನ್ಯಗೃಹಗ್ರಾಮರತ್ನಾನಿ ಚ ವಸುಂಧರಾಮ್ ।
ಕಿಂ ವಾಂಛಸಿ ಸಮಾಚಕ್ಷ್ವ ದಾಸ್ಯಾಮಿ ದ್ವಿಜಸತ್ತಮ ॥ ೧೫ ॥

ಪುರೂರವನು ಹೇಳಿದನು—

''ಹೇ, ಬ್ರಾಹ್ಮಣ ಶ್ರೇಷ್ಠನೇ! ಧನ, ಧಾನ್ಯ, ಮನೆ, ಗ್ರಾಮ ಮತ್ತು ಭೂಮಿಯನ್ನು ಏನನ್ನು ಬೇಡುವೆಯೋ ಅದನ್ನು ಕೊಡುವೆನು''. ॥ ೧೫ ॥

ದ್ವಿಜ ಉವಾಚ—

ದಾನಶೂರೋಽಸಿ ಜಾನಾಮಿ ಯದೀಪ್ಸಿತಮಿದಂ ಕುರು ।
ಪ್ರಯಾಗೇ ಮಾ ಕುರು ಕ್ಷೇತ್ರೇ ಯಜ್ಞಾನಕ್ಷಯಕಾಮದಾನ್ ॥ ೧೬ ॥
ಊರ್ವಶೀ ತ್ವಂ ಸುಖಂ ಭುಂಕ್ಷ್ವ ಯಾವದ್ವೈರಾಗ್ಯಮಾವಹೇತ್ ।
ತತಃ ಸಾ ತ್ವದನುಜ್ಞಾತಾ ಯಾತು ಪಾರ್ಶ್ವಂ ಶಚೀಪತೇಃ ॥ ೧೭ ॥

ಬ್ರಾಹ್ಮಣನು ಹೇಳಿದನು—

''ಹೇ ರಾಜನೇ! ನೀನು ದಾನಮಾಡುವುದರಲ್ಲಿ ಶೂರನಾಗಿದ್ದಿ. ಅದು ನನಗೆ ಗೊತ್ತು. ಈಗ ನನ್ನ ಮನಸ್ಸಿನಲ್ಲಿರುವ ಈ ಕಾರ್ಯವನ್ನು ಮಾಡು. ಎಣೆಯಿಲ್ಲದಷ್ಟು ಅಪೇಕ್ಷೆಗಳು ಸಿಗುವ ಯಜ್ಞಗಳನ್ನು ಪ್ರಯಾಗದಲ್ಲಿ ಮಾಡಬೇಡ. ॥ ೧೬ ॥ ಊರ್ವಶಿಯೊಡನೆ ಅವಳಿಗೆ ವೈರಾಗ್ಯ ಬರುವವರೆಗೂ ಸುಖಪಡು. ಅವಳಿಗೆ ವೈರಾಗ್ಯ ಬಂದನಂತರ ಅವಳು ನಿನ್ನ ಆಜ್ಞೆಪಡೆದು ಇಂದ್ರನ ಹತ್ತಿರ ಹೋಗಲಿ''. ॥ ೧೭ ॥

ತತೋ ನಿವವೃತೇ ರಾಜಾ ಯಜ್ಞೇಭ್ಯೋ ಬ್ರಹ್ಮವಾಕ್ಯತಃ ।
ಸಕಲಾನ್ವಿಷಯಾನ್ದಿವ್ಯಾನುರ್ವಶ್ಯಾ ಬುಭುಜೇ ಸುಖಮ್ ॥ ೧೮ ॥
ಊರ್ವಶೀ ತತ್ರ ವಿಪುಲಂ ಕುಂಡಂ ನಿರ್ಮಾಯ ನಿರ್ಮಲಮ್ ।
ಪುಷ್ಪವೃಕ್ಷಲತಾಕೀರ್ಣಂ ಸರ್ವದಾ ತತ್ರ ತಿಷ್ಠತಿ ॥ ೧೯ ॥
ನಿತ್ಯಂ ವೇಣ್ಯಾಮುಷಃ ಸ್ನಾತ್ವಾ ಸ್ವಾಶ್ರಮೇ ಚಾಸನೇ ಸ್ಥಿತಾ ।
ಆಮಧ್ಯಾಹ್ನಂ ಹರಿಂ ಧ್ಯಾತ್ವಾ ತತೋ ವಿಷಯಭೋಗಕೃತ್ ॥ ೨೦ ॥
ತದಾರಭ್ಯೋರ್ವಶೀನಾಮ್ನಾ ಕುಂಡಂ ಖ್ಯಾತಮಿದಂ ಭುವಿ ।
ವಿಚಿತ್ರ ಫಲದಂ ನೃಣಾಂ ಸ್ತ್ರೀಣಾಂ ಸೌಭಾಗ್ಯವರ್ಧನಂ ॥ ೨೧ ॥
ಸ್ನಾನದಾನಾರ್ಚನಧ್ಯಾನಹೋಮಸ್ವಾಧ್ಯಾಯತರ್ಪಣಮ್ ।
ಆಚರಂಸ್ತತ್ರ ನಿಷ್ಪಾಪಃ ಸ್ವರ್ಗಲೋಕೇ ವಸೇಚ್ಚಿರಂ ॥ ೨೨ ॥

ತತಃ ಸುಧಾರಸಂ ನಾಮ ತೀರ್ಥಂ ಪರಮಪಾವನಮ್ ।
ವರ್ತತೇ ಯಮುನಾತೀರೇ ಯಮಬಾಧಾನಿವಾರಣಮ್ ॥ ೨೩ ॥
ಸ್ನಾನೇನ ಸರ್ವರೋಗಾಣಾಂ ನಾಶನಂ ಚಾಮಲೋದಕಮ್ ।
ಸೇವನಾತ್ಸ್ವಲ್ಪಕಾಲೇನ ಸ್ವರ್ಗಭೋಗಪ್ರದಾಯಕಮ್ ॥ ೨೪ ॥
ತಸ್ಯ ದಕ್ಷಿಣತೋಽದೂರೇ ಕಂಬಲಾಶ್ವತರಾವುಭೌ ।
ವರ್ತತೇ ತೌ ಮಹಾನಾಗೌ ತಯೋಸ್ತತ್ತೀರ್ಥಮುತ್ತಮಮ್ ॥ ೨೫ ॥
ಬ್ರಹ್ಮಣಾ ಸ್ಥಾಪಿತೌ ಪೂರ್ವಂ ಸರ್ವವಿಘ್ನನಿವಾರಣೇ ।
ಯಜ್ಞಾಂತೇ ವರದಾನಂ ಚ ಪ್ರಸನ್ನೇನಾಮುನಾ ಕೃತಮ್ ॥ ೨೬ ॥
ಭವದ್ಭ್ಯಾಂ ಮಮ ಸಾಹಾಯ್ಯಂ ಯಾಜ್ಞಿಕಂ ಬಹುಧಾ ಕೃತಮ್ ।
ಅತೋಽತ್ರ ತಿಷ್ಠತಾಂ ಪ್ರೀತ್ಯಾ ಸರ್ವೇಷಾಂ ಫಲದಾಯಿನೌ ॥ ೨೭ ॥
ವಿಪ್ರಾಣಾಂ ಚ ತಥಾ ರಾಜ್ಞಾಂ ದ್ರವ್ಯಂ ಪ್ರತಿಗ್ರಹಾದಿಜಮ್ ।
ಅತ್ರಾಮಿತಂ ವರೀವರ್ತಿ ಯುವಾಂ ತಸ್ಯಾಧಿಕಾರಿಣೌ ॥ ೨೮ ॥
ಯೇಽತ್ರ ಯಾತ್ರಾರ್ಥಮಾಯಾಂತಿ ಪೂಜಯಿಷ್ಯಂತಿ ನೋ ಯುವಾಂ ।
ತದ್ಯಾತ್ರಾಫಲಭಾಗಾನಾಂ ಭಾಗಿನೌ ಭವತಂ ಯುವಾಂ ॥ ೨೯ ॥
ಅತಸ್ತತ್ಪೂಜನಂ ಕಾರ್ಯಮವಶ್ಯಂ ಸ್ವಫಲಾರ್ಥಿಭಿಃ ।
ಗ್ರಾಮಸ್ಥೈರ್ಯಾತ್ರಿಕೈರ್ವಾಪಿ ವರ್ಷೇ ವರ್ಷೇ ಯಥಾವಿಧಿ ॥ ೩೦ ॥
ಪೂರ್ಣಾಯಾಂ ಸಿತಪಂಚಮ್ಯಾಂ ಅನ್ಯೇಷ್ವಪಿ ಚ ಪರ್ವಸು ।
ಪಂಚಾಮೃತೈರ್ಧೂಪದೀಪೈರ್ನೈವೇದ್ಯೈಃ ಪೂಜಯೇದಲಮ್ ॥ ೩೧ ॥
ಏವಂ ಪೂಜಯತಾಂ ಭಕ್ತ್ಯಾ ಪ್ರಸನ್ನೌ ಭವತಶ್ಚ ತೌ ।
ಆರೋಗ್ಯಂ ವಿಪುಲಂ ದ್ರವ್ಯಂ ದತ್ತೋ ಯಾವದಪೇಕ್ಷಿತಮ್ ॥ ೩೨ ॥
ಪೂಜನಾದಿಷ್ವಸಾಮರ್ಥ್ಯೇ ಸ್ನಾತ್ವಾ ವೇಣ್ಯಾಂ ಯತವ್ರತೈಃ।
ಮನಸಾ ದೂಯಮಾನೇನ ನಮಸ್ಕಾರ್ಯೌ ತತಃ ಸುಖಮ್ ॥ ೩೩ ॥
ತಸ್ಯಾಥ ಪಶ್ಚಿಮೇ ಭಾಗೇ ವಿಕಿರಂ ಪುಣ್ಯಸಾಧನಂ ।
ನಿರ್ಋತ್ಯಾಧಿಷ್ಠಿತಂ ದಿವ್ಯಂ ಮಾಧವೇನ ಚ ಭೂಷಿತಮ್ ॥ ೩೪ ॥
ಪ್ರಾಗೇತದ್ವರ್ಣಿತಂ ಪ್ರಾಯೋ ಮಧ್ಯವೇದೀಪ್ರಸಂಗತಃ ।
ಪುನರುಕ್ತಂ ಮುನಿಶ್ರೇಷ್ಠಾ ನಾನಾ ಶುಭಫಲಪ್ರದಮ್ ॥ ೩೫ ॥
ಸೋಮೇಶ್ವರಂ ಸಮಾರಭ್ಯ ವಿಕಿರಾಂತಂ ಯಥಾಮತಿ ।
ಕಾನಿ ಚೋಕ್ತಾನಿ ತೀರ್ಥಾನಿ ಪ್ರಸಿದ್ಧಾನ್ಯಖಿಲಾನಿ ಭೋಃ ॥ ೩೬ ॥
ಸರ್ವೇಷಾಂ ವರ್ಣನೇ ಕೋ ವಾ ಯಮುನಾತೀರವಾಸಿನಾಂ ।
ತೀರ್ಥಾನಾಂ ಹಿ ಸಮರ್ಥೋಽಸ್ತಿ ತಸ್ಮಾತ್ತೇಭ್ಯೋ ನಮೋನಮಃ ॥ ೩೭ ॥

ತತೋ ಧನದದಿಗ್ಭಾಗೇ ವಿದೂರೇ ಬಹುಮೂಲಕಃ ।
ನಾಗಸ್ತು ವರ್ತತೇ ತೀರ್ಥಾವಧಿಸ್ತಂಭಧರಃ ಪರಃ ॥ ೩೮ ॥
ತಂ ಚ ಯಃ ಪೂಜಯೇದ್ಭಕ್ತ್ಯಾ ತೀರ್ಥಸ್ಥೋ ಯಾತ್ರಿಕೋಽಪಿ ವಾ ।
ಪುತ್ರಪೌತ್ರಸುಖಾವಾಪ್ತಿಂ ಧನಪ್ರಾಪ್ತಿಂ ಚ ವಿಂದತಿ ॥ ೩೯ ॥
ತದುದಗ್ ಭಾರ್ಗವಂ ತೀರ್ಥಂ ಗಾಲವಂ ಚಾಪರಂ ತಥಾ ।
ಯೇಷು ಸ್ನಾನೇನ ಪೂತಾತ್ಮಾ ವ್ರಜೇತ್ಸ್ವರ್ಗಂ ಪ್ರಭಾಮಯಃ ॥ ೪೦ ॥
ಕೋಟಿತೀರ್ಥಂ ತು ತತ್ಪೂರ್ವೇ ಗಂಗಾಯಾ ದಕ್ಷಿಣೇ ತಟೇ ।
ವರ್ತತೇ ಪರಮಸ್ಥಾನಂ ಕೋಟಿತೀರ್ಥಫಲಪ್ರದಮ್ ॥ ೪೧ ॥
ಸರ್ವದಾ ಪುಣ್ಯಕಾಲೇ ವಾ ತೀರ್ಥಸ್ಥಾ ಯಾತ್ರಿಕಾಸ್ತಥಾ ।
ಕೋಟಿತೀರ್ಥಂ ಸಮಾಸಾದ್ಯ ಯತ್ಕರಿಷ್ಯಂತಿ ತದ್ಬಹು ॥ ೪೨ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ರುದ್ರಾಭಿಷೇಕಸ್ತನ್ಮಂತ್ರಜಪಃ ಪಾರ್ಥಿವಪೂಜನಮ್ ॥ ೪೩ ॥
ತದನ್ಯತ್ಸುಕೃತಂ ಕಿಂಚಿದ್ಭಕ್ತಿಮದ್ಭಿರ್ನರೈಃ ಕೃತಂ ।
ಸರ್ವಂಕೋಟಿಗುಣಂ ತತ್ರ ಜಾಯತೇ ನಾತ್ರ ಸಂಶಯಃ ॥ ೪೪ ॥
ತಸ್ಮಿನ್ನಭಸ್ಸಿತಾಷ್ಟಮ್ಯಾಮಿಂದುಯೋಗೇ ವಿಶೇಷತಃ ।
ಪುಣ್ಯಂ ಕೋಟಿಗುಣಂ ಧತ್ತೇ ಕೋಟಿತೀರ್ಥೇಶಪೂಜನಮ್ ॥ ೪೫ ॥
ಗಂಗಾಯಾ ಉತ್ತರೇ ತೀರೇ ಮಾನಸಂ ತೀರ್ಥಮುತ್ತಮಮ್ ।
ಸ್ನಾನಮಾತ್ರೇಣ ತತ್ರಾಶು ಮಾನಸಂ ನಶ್ಯತೇ ಮಲಮ್ ॥ ೪೬ ॥
ತಸ್ಯೈವ ಪೂರ್ವದಿಗ್ಭಾಗೇ ಹಂಸತೀರ್ಥಂ ಮನೋಹರಮ್ ।
ತತ್ರ ಸ್ನಾನೇನ ಪಾನೇನ ಹಂಸವನ್ನಿರ್ಮಲೋ ಭವೇತ್ ॥ ೪೭ ॥
ಕಾಲಕೂಪಮಥೋ ವಕ್ಷ್ಯೇ ಕಾಲಬಾಧಾನಿವಾರಣಮ್ ।
ಸ್ನಾನಾತ್ತತ್ರ ಚತುರ್ದಶ್ಯಾಂ ನರಕಂ ನೈವ ಪಶ್ಯತಿ ॥ ೪೮ ॥
ತಸ್ಯಾಗ್ರೇ ಶಾಲ್ಮಲೀತೀರ್ಥಂ ಶಾಲ್ಮಲೀವೃಕ್ಷಚಿಹ್ನಿತಮ್ ।
ತಚ್ಛಾಯಾಸ್ಪರ್ಶನೇನೈವ ಪಾಪಿನಃ ಶುದ್ಧಿಮಾಗತಾಃ ॥ ೪೯ ॥
ತತ್ಪುರೋ ಬ್ರಹ್ಮಕುಂಡೋಽಸ್ತಿ ಧನುರಾಕಾರ ಆಯತಃ ।
ತತ್ರ ಸ್ನಾನೇನ ಪಾನೇನ ಬ್ರಹ್ಮಲೋಕಮವಾಪ್ನುಯಾತ್ ॥ ೫೦ ॥
ತದರ್ವಾಕ್ ಪರಮಂ ತೀರ್ಥಂ ಹಂಸಪ್ರಪತನಂ ಸ್ಮೃತಂ ।
ತತ್ರ ತಿಷ್ಠಂತಿ ಯೇ ಜೀವಾ ಹಂಸಾ ಏವ ನ ಸಂಶಯಃ ॥ ೫೧ ॥
ಹಂಸರೂಪೀ ಜಗನ್ನಾಥಸ್ತತ್ರಾಸ್ತೇ ಸರ್ವದಾ ಕಿಲ ।
ತತ್ರ ಸ್ನಾನಾಚ್ಚ ಪಾನಾಚ್ಚ ನರೋ ಹಂಸಗತಿಂ ಲಭೇತ್ ॥ ೫೨ ॥

ಪ್ರತಿಷ್ಠಾನೇ ಮಹಾನ್ಕೂಪಃ ಸಮುದ್ರಾಖ್ಯೋ ವಿರಾಜತೇ ।
ದರ್ಶನಾದ್ಯಸ್ಯ ಪಾನಾಚ್ಚ ನರೋ ನಿಷ್ಕಲ್ಮಷೋ ಭವೇತ್ ॥ ೫೩ ॥
ಅಮಾಯಾಂ ಪೌರ್ಣಮಾಸ್ಯಾಂ ವಾ ಚಂದ್ರಸೂರ್ಯಗ್ರಹೇ ತಥಾ ।
ಯತ್ಪರಿಕ್ರಮನಾದ್ಭೂಮಿಪ್ರದಕ್ಷಿಣಫಲಂ ಲಭೇತ್ ॥ ೫೪ ॥
ಸ್ನಾನದಾನಾದಿಜಂ ತತ್ರ ಸುಕೃತಂ ಬಹು ವರ್ಧತೇ ।
ತತ್ರ ವೈ ಮರಣಾತ್ಸ್ವರ್ಗಂ ಪ್ರಾಪ್ನೋತ್ಯತ್ರ ನ ಸಂಶಯಃ ॥ ೫೫ ॥
ತಸ್ಯಾಪಿ ದಕ್ಷಿಣೇ ಭಾಗೇ ವ್ಯಾಸತೀರ್ಥಂ ಮನೋಹರಂ ।
ತತ್ರ ವ್ಯಾಸಾಶ್ರಮಶ್ಚಾಸ್ತಿ ದೇವರ್ಷಿಗಣಸಂವೃತಃ ॥ ೫೬ ॥
ತತ್ರ ವಿಶ್ರಾಮ್ಯ ಸಂಪೂಜ್ಯ ದಂಡವತ್ಪ್ರಣಿಪತ್ಯ ತಂ ।
ಪ್ರಾರ್ಥಯೇದ್ಭಕ್ತಿಮಾನ್ಯೋ ವೈ ವಿದ್ಯಾವಾನ್ ಸ ಭವೇದ್ ಧ್ರುವಮ್ ॥ ೫೭ ॥
ತಸ್ಯೈವಾಗ್ನೇಯದಿಗ್ಭಾಗೇ ಪ್ರಾಂತವೇಣ್ಯಾ ಉದಕ್ತಟೇ ।
ವರ್ತತೇ ನಾಗತೀರ್ಥಂ ಹಿ ನಾಗನಾಗೀಗಣಾವೃತಮ್ ॥ ೫೮ ॥
ತತ್ರ ಗತ್ವಾತು ಯೇ ಜೀವಾ ದಧಿದುಗ್ಧಾದಿಸಾಧನೈಃ ।
ಪೂಜಯಂತಿ ನಮಸ್ಯಂತಿ ತೇಷಾಂ ಪುಣ್ಯಮನಂತಕಂ ॥ ೫೯ ॥
ಏವಂ ಮಧ್ಯಬಹಿರ್ವೇದ್ಯೋರ್ಮುಖ್ಯ ತೀರ್ಥಾನಿ ಯತ್ನತಃ ।
ಮಯಾ ವಃ ಕಥಿತಾನ್ಯದ್ಯ ಪರೋಪಕೃತಯೇಽಮಲಾಃ ॥ ೬೦ ॥
ಪಂಚಯೋಜನವಿಸ್ತೀರ್ಣೇ ಮಂಡಲೇ ಯಾನಿ ಸಂತಿ ವೈ ।
ತಾನಿ ವಕ್ತುಮಶೇಷೇಣ ನ ಶಕ್ತೋಽಹಂ ಕುತೋಽಪರೇ ॥ ೬೧ ॥
ಪುನಶ್ಚ ಯಮುನಾಸಂಗಾದ್ಗಂಗಾಸಂಗಾದ್ಬಹೂನಿ ಚ ।
ಸಮಾಗತಾನಿ ತೀರ್ಥಾನಿ ಗಣನಾ ಕೇನ ಶಕ್ಯತೇ ॥ ೬೨ ॥
ಏಕೈವ ಯಮುನಾ ಯತ್ರ ದರ್ಶನಾತ್ಪಾಪನಾಶಿನೀ ।
ತಥೈವ ಗಂಗಾ ಕಿಂ ತಸ್ಯ ವರ್ಣ್ಯಂ ಮಾಹಾತ್ಮ್ಯವೈಭವಂ ॥ ೬೩ ॥
ತಸ್ಯಾಸ್ಯ ತೀರ್ಥರಾಜಸ್ಯ ಬ್ರಹ್ಮಪುತ್ರಾ ಭವತ್ಯೃತೇ ।
ವೇದೀನಾಂ ತ್ರಿತಯಂ ಪ್ರೋಕ್ತಂ ಕಿಮನ್ಯಚ್ಛ್ರೋತುಮಿಚ್ಛಥ ॥ ೬೪ ॥

॥ ಇತಿ ಅಷ್ಟಾಶೀತಿತಮೋಽಧ್ಯಾಯಃ ॥

ಇದಾದ ನಂತರ ಪುರೂರವಸನು ಯಜ್ಞಮಾಡುವುದನ್ನು ನಿಲ್ಲಿಸಿದನು. ಬ್ರಹ್ಮದೇವರ ಆಜ್ಞಾಪ್ರಕಾರ ಊರ್ವಶಿಯೊಡನೆ ದಿವ್ಯವಾಗಿರತಕ್ಕ ಸಕಲ ಭೋಗಗಳನ್ನೂ ಅನುಭವಿಸಿದನು. ॥ ೧೮ ॥ ಊರ್ವಶಿಯಾದರೋ ಅಲ್ಲಿ ವಿಶಾಲವಾದ ವನವನ್ನು ಮತ್ತು ಸರೋವರನ್ನು ನಿರ್ಮಾಣ ಮಾಡಿದಳು. ಅದು ಅಲ್ಲಿ ಈಗಲೂ ಪುಷ್ಪಗಳಿಂದಲೂ, ಸಮೃದ್ಧವಾದ ಮರಗಳಿಂದಲೂ, ಬಳ್ಳಿಗಳಿಂದಲೂ ಶೋಭಾಯಮಾನವಾಗಿದೆ. ॥ ೧೯ ॥ ಊರ್ವಶಿಯು ನಿತ್ಯವೂ ಉಷಃ ಕಾಲದಲ್ಲಿ ವೇಣೀಯಲ್ಲಿ ಸ್ನಾನಮಾಡಿ ತನ್ನ ಆಶ್ರಮಕ್ಕೆ ಬಂದು ಆಸನದಲ್ಲಿ ಕುಳಿತು ಮಧ್ಯಾಹ್ನ

ಆಗುವವರೆಗೂ ಶ್ರೀಹರಿಯನ್ನು ಧ್ಯಾನಿಸುತ್ತಿದ್ದು ಅನಂತರ ತನ್ನ ವಿಷಯಭೋಗಗಳಲ್ಲಿ ಆಸಕ್ತಳಾಗುತ್ತಿದ್ದಳು. ॥ ೨೦ ॥ ಅಲ್ಲಿಂದ ಆರಂಭವಾಗಿ ಈ ಕುಂಡವು ''ಊರ್ವಶೀಕುಂಡ''ವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ ಮತ್ತು ಪುರುಷರಿಗೆ ವಿಚಿತ್ರ ಫಲಗಳನ್ನೂ, ಸ್ತ್ರೀಯರ ಸೌಭಾಗ್ಯವನ್ನೂ ಅಭಿವೃದ್ಧಿ ಮಾಡತಕ್ಕದ್ದೂ ಆಗಿದೆ. ॥ ೨೧ ॥ ಇಲ್ಲಿ ಸ್ನಾನ, ದಾನ, ದೇವತಾರ್ಚನಾ, ಧ್ಯಾನ, ಹೋಮ, ಸ್ವಾಧ್ಯಾಯ ಮತ್ತು ತರ್ಪಣ ಇವುಗಳನ್ನು ಮಾಡುವವರು ಪಾಪಗಳಿಂದ ವಿಮುಕ್ತರಾಗಿ ಸ್ವರ್ಗಲೋಕದಲ್ಲಿ ವಿಹಾರಮಾಡುತ್ತಾರೆ. ॥ ೨೨ ॥ ಅಲ್ಲಿಂದ ಹತ್ತಿರದಲ್ಲೇ ಪರಮಪಾವನವಾದ ''ಸುಧಾರಸತೀರ್ಥ'' ವೆಂಬುದು ಇದೆ. ಇದೂ ಯಮುನಾತೀರದಲ್ಲಿದೆ. ಇದು ಯಮನಿಂದ ಕೂಡಿರುವ ನರಕಬಾಧೆಗಳನ್ನು ತಪ್ಪಿಸುತ್ತದೆ. ॥ ೨೩ ॥ ಇದು ನಿರ್ಮಲವಾದ ಜಲದಿಂದ ಕೂಡಿದೆ. ಇಲ್ಲಿ ಸ್ನಾನ ಮಾಡಿದರೆ ಸರ್ವರೋಗಗಳೂ ನಾಶವಾಗುವುವು. ಇದನ್ನು ಸೇವಿಸುವುದರಿಂದ ಸ್ವರ್ಗಭೋಗವು ಲಭ್ಯವಾಗುವುದು. ॥ ೨೪ ॥ ಇದಕ್ಕೆ ದಕ್ಷಿಣಕ್ಕೆ ಹತ್ತಿರದಲ್ಲೇ ''ಕಂಬಲ'' ಮತ್ತು ''ಅಶ್ವತರ'' ಎಂಬ ಎರಡು ಮಹಾನಾಗದೇವತೆಗಳಿದ್ದಾರೆ. ಈ ದೇವತೆಗಳ ತೀರ್ಥಗಳೂ ಇವುಗಳಾಗಿವೆ. ಇವೆರಡೂ ಉತ್ತಮ ತೀರ್ಥಗಳು. ॥ ೨೫ ॥ ಪೂರ್ವದಲ್ಲಿ ಇವೆರಡೂ ತೀರ್ಥಗಳೂ ಬ್ರಹ್ಮನಿಂದ ಸ್ಥಾಪಿಸಲ್ಪಟ್ಟುವು. ಇವು ಯಜ್ಞದ ವಿಘ್ನಗಳನ್ನು ಪರಿಹರಿಸತಕ್ಕವು. ಯಜ್ಞವೆಲ್ಲವೂ ಮುಗಿದ ಮೇಲೆ ಬ್ರಹ್ಮನಿಂದ ಇವರಿಗೆ ''ನಿಮ್ಮಿಬ್ಬರಿಂದ ಯಜ್ಞಕ್ಕೆ ಬಹು ಸಹಾಯಮಾಡಲ್ಪಟ್ಟಿತು. ಆದ್ದರಿಂದ ನೀವಿಬ್ಬರೂ ಇಲ್ಲಿಯೇ ಇರಿ. ಎಲ್ಲರಿಗೂ ಅವರವರ ಅಪೇಕ್ಷಿತ ಫಲಗಳನ್ನು ಕೊಡಿರಿ. ॥ ೨೬-೨೭ ॥ ಇಲ್ಲಿ ಬ್ರಾಹ್ಮಣರ ಮತ್ತು ರಾಜರಿಗೆ ಸೇರಿದ ಪ್ರತಿ ಗ್ರಹಾದಿಗಳಿಂದ ಬಂದ ಬಹು ದ್ರವ್ಯವಿರುವದು. ಇದಕ್ಕೆ ನೀವಿಬ್ಬರೂ ಅಧಿಕಾರಿಗಳು. ॥ ೨೮ ॥ ಇಲ್ಲಿ ಯಾತ್ರೆಗಾಗಿ ಬಂದವರು ನಿಮ್ಮಿಬ್ಬರನ್ನೂ ಯಾರು ಪೂಜಿಸುವುದಿಲ್ಲವೋ ಅಂಥವರ ಯಾತ್ರೆಯ ಫಲದ ಭಾಗವು ಪೂರಾ ನಿಮಗೇ ಸೇರಲಿ'' ಎಂದು ಹೇಳಲ್ಪಟ್ಟಿತು. ॥ ೨೯ ॥ ಆದ್ದರಿಂದ ಯಾತ್ರೆಯ ಫಲವನ್ನು ಅಪೇಕ್ಷಿಸುವವರು ಮತ್ತು ಈ ಗ್ರಾಮಸ್ಥರು ಅವಶ್ಯವಾಗಿ ಈ ಇಬ್ಬರು ನಾಗದೇವತೆಗಳನ್ನು ಪ್ರತಿವರ್ಷವೂ ಪೂಜೆ ಮಾಡಬೇಕು. ॥ ೩೦ ॥ ಹುಣ್ಣಿಮೆಯ ದಿನ, ಶುಕ್ಲಪಕ್ಷದ ಪಂಚಮೀ ಮತ್ತು ಬೇರೆ ಬೇರೆ ಪರ್ವಕಾಲದ ದಿವಸ ಈ ನಾಗದೇವತೆಗಳನ್ನು ಪಂಚಾಮೃತಾಭಿಷೇಕ, ಧೂಪ, ದೀಪ ಮತ್ತು ನೈವೇದ್ಯಾದಿಗಳಿಂದ ಪೂಜಿಸತಕ್ಕದ್ದು. ॥ ೩೧ ॥ ಈ ರೀತಿಯಾಗಿ ಭಕ್ತಿಯಿಂದ ಪೂಜಿಮಾಡುವವರಿಗೆ ಈ ಇಬ್ಬರು ನಾಗದೇವತೆಗಳೂ ಪ್ರಸನ್ನರಾಗಿ ಆರೋಗ್ಯ, ವಿಪುಲವಾದ ಹಣ ಮತ್ತು ಅವರಿಂದ ಅಪೇಕ್ಷಿತವಾದ ಸಕಲವನ್ನೂ ಕೊಡುತ್ತಾರೆ. ॥ ೩೨ ॥ ಪೂಜಾದಿಗಳನ್ನು ಮಾಡಲು ಸಾಮರ್ಥ್ಯವಿಲ್ಲದಿದ್ದರೆ ವೇಣೀ ಸಂಗಮದಲ್ಲಿ ಸ್ನಾನ ಮಾಡಿ ತನ್ನ ಅಸಾಮರ್ಥ್ಯಕ್ಕಾಗಿ ಮನಸ್ಸಿನಲ್ಲಿ ಮರುಗಿ, ಎಷ್ಟು ಕೈಲಾಗುವುದೋ ಅಷ್ಟು ನಮಸ್ಕಾರಗಳನ್ನು ಮಾಡುವುದು. ಹೀಗೆ ಮಾಡಿದರೂ ಅವರಿಗೆ ಒಳ್ಳೆಯದಾಗುವುದು. ॥ ೩೩ ॥ ಈ ನಾಗದೇವತೆಗಳ ಕ್ಷೇತ್ರದ ಪಶ್ಚಿಮ ಭಾಗದಲ್ಲಿ ಪುಣ್ಯಸಾಧನೆಯಾಗತಕ್ಕ ''ವಿಕಿರ'' ಕ್ಷೇತ್ರವಿದೆ. ಇದು ಪ್ರಯಾಗದ ನೈರುತ್ಯದಿಕ್ಕಿನಲ್ಲಿದೆ. ಈ ಕ್ಷೇತ್ರದಲ್ಲಿ ನೈರುತ್ಯದಿಕ್ಪಾಲಕನಾದ ನಿರ್ಋತಿಯಿದ್ದಾನೆ. ಇದೂ ಶ್ರೀ ಮಾಧವನಿಂದ ಅಲಂಕೃತವಾಗಿದೆ. ॥ ೩೪ ॥ ಮೊದಲೇ ಮಧ್ಯವೇಣೀಯ ಪ್ರಸಂಗದಲ್ಲಿ ಇದನ್ನು ವರ್ಣಿಸಿಯಾಗಿದೆ. ಇದು ನಾನಾವಿಧವಾದ ಫಲಗಳನ್ನು ಕೊಡತಕ್ಕ ಕ್ಷೇತ್ರವು. ಆದ್ದರಿಂದ ಇದನ್ನು ಪುನಃ ವರ್ಣಿಸಲಾಗಿದೆ. ॥ ೩೫ ॥ ಸೋಮೇಶ್ವರದಿಂದ ಆರಂಭಮಾಡಿ ವಿಕಿರ ಕ್ಷೇತ್ರದ ವರೆಗೆ ಇರುವ ಕೆಲವು ತೀರ್ಥಗಳನ್ನು ವರ್ಣಿಸುವೆನು. ಇವುಗಳೆಲ್ಲವೂ ಪ್ರಸಿದ್ಧವಾದುವುಗಳು. ॥ ೩೬ ॥

ಯಮುನೆಯ ದಡದಲ್ಲಿರತಕ್ಕ ಎಲ್ಲಾ ತೀರ್ಥಗಳನ್ನೂ ವರ್ಣಿಸಲು ಯಾರಿಗೆ ತಾನೇ ಸಾಧ್ಯವು? ಆದ್ದರಿಂದ ಆ ತೀರ್ಥಗಳಿಗೆಲ್ಲಾ ಒಟ್ಟಾರೆ ನಮಸ್ಕಾರಗಳು. ॥ ೩೭ ॥ ಅನಂತರ ಕುಬೇರನ ಉತ್ತರ ದಿಗ್ಭಾಗದ ಹತ್ತಿರದಲ್ಲೇ ''ಬಹುಮೂಲಕ''ವೆಂಬ ನಾಗವು ಇದೆ. ಇದು ತೀರ್ಥಗಳ ಸರಣಿಗೆ ಕೊನೆಯ ಸ್ಥಂಭದಂತಿದ್ದು ಅವುಗಳ ಅವಧಿಯಾಗಿದೆ. ॥ ೩೮ ॥ ಪ್ರಯಾಗವಾಸಿಯಾಗಲೀ ಅಥವಾ ಯಾತ್ರಿಕನಾಗಲೀ ಯಾರು ಈ ನಾಗನನ್ನು ಪೂಜಿಸುವರೋ ಅವರಿಗೆ ಮಕ್ಕಳು, ಮೊಮ್ಮಕ್ಕಳ ಸುಖವೂ, ಅಪಾರ ಧನಪ್ರಾಪ್ತಿಯೂ ಆಗುತ್ತದೆ. ॥ ೩೯ ॥ ಇದರ ಉತ್ತರ ಭಾಗದಲ್ಲಿ ''ಭಾರ್ಗವ'', ಮತ್ತು ''ಗಾಲವ'' ವೆಂಬ ತೀರ್ಥಗಳಿವೆ. ಇವುಗಲ್ಲಿ ಸ್ನಾನಮಾಡಿದವನು ತೇಜಸ್ವಿಯಾಗಿಯೂ ಪವಿತ್ರನಾಗಿಯೂ ಇದ್ದು ಸ್ವರ್ಗಕ್ಕೆ ಪ್ರಯಾಣಮಾಡುವನು ॥ ೪೦ ॥ ಇದರ ಪೂರ್ವಕ್ಕೆ, ಗಂಗೆಯ ದಕ್ಷಿಣ ದಡದಲ್ಲಿ ಅತಿ ಶ್ರೇಷ್ಠವಾದ ಬಹು ಫಲಪ್ರದಾಯಕವಾದ ಕೋಟತೀರ್ಥವೆಂಬ ಕ್ಷೇತ್ರವಿದೆ. ॥ ೪೧ ॥ ಎಲ್ಲಾ ಕಾಲದಲ್ಲಿಯೂ ಅಥವಾ ಪುಣ್ಯಕಾಲದಲ್ಲಿ ತೀರ್ಥವಾಸಿಗಳಾಗಲೀ ಅಥವಾ ಯಾತ್ರಿಕರಾಗಲೀ ಈ ಕ್ಷೇತ್ರಕ್ಕೆ ಬಂದು ಯಾವ ಸತ್ಕಾರ್ಯವನ್ನು ಮಾಡಿದರೂ ಅದು ಬಹು ಫಲಪ್ರದಾಯಕವಾಗುವುದು. ॥ ೪೨ ॥ ಈ ಕ್ಷೇತ್ರದಲ್ಲಿ ಸ್ನಾನ, ದಾನ, ಜಪ, ಹೋಮ, ಸ್ವಾಧ್ಯಾಯ, ಪಿತೃತರ್ಪಣ, ರುದ್ರಾಭಿಷೇಕ, ರುದ್ರಮಂತ್ರ ಮತ್ತು ಭೂ ಪೂಜೆ ಅಶ್ವತ್ಥ, ಬಿಲ್ವಾದಿ ಮರಗಳ ಪೂಜೆ ಇವುಗಳನ್ನು ಮತ್ತು ಬೇರೆ ಬೇರೆ ಸತ್ಕಾರ್ಯಗಳನ್ನೂ ಮಾಡಿದವನಿಗೆ ಕೋಟಿಯಷ್ಟು ಪ್ರಮಾಣದಲ್ಲಿ ಪುಣ್ಯವು ಸಲ್ಲುವುದರಲ್ಲಿ ಸಂಶಯವಿಲ್ಲ. ॥ ೪೩-೪೪ ॥ ಈ ಪುಣ್ಯಕಾರ್ಯಗಳನ್ನು ಶ್ರಾವಣಶುಕ್ಲ ಅಷ್ಟಮಿಯಂದು, ಅದರಲ್ಲೂ ಸೋಮವಾರದಂದು ಮಾಡಿದವರಿಗೆ ಪುಣ್ಯಕೋಟಿಯು ದೊರಕುವುದಲ್ಲದೇ, ಕೋಟಿತೀರ್ಥಗಳನ್ನು ಸೇವಾಮಾಡಿದ ಫಲ ಬರುವುದು. ॥ ೪೫ ॥ ಇನ್ನು ಗಂಗೆಯ ಉತ್ತರ ತೀರದಲ್ಲಿ ಉತ್ತಮವಾದ ''ಮಾನಸ'' ವೆಂಬ ತೀರ್ಥವಿದೆ. ಇದರಲ್ಲಿ ಸ್ನಾನಮಾಡುವುದರಿಂದಲೇ ಮನಸ್ಸಿಗೆ ಸಂಬಂಧಪಟ್ಟ ಕಲ್ಮಶಗಳೆಲ್ಲವೂ ಜಾಗ್ರತೆಯಾಗಿ ನಾಶವಾಗುವುವು. ॥ ೪೬ ॥ ಅದರ ಪೂರ್ವಕ್ಕೆ ಮನೋಹರವಾದ ಹಂಸತೀರ್ಥವಿದೆ. ಇದರಲ್ಲಿ ಸ್ನಾನ, ಪಾನಾದಿಗಳನ್ನು ಮಾಡಿದವರು ಹಂಸಪಕ್ಷಿಯಂತೆ ನಿರ್ಮಲರಾಗುತ್ತಾರೆ. ॥ ೪೭ ॥ ಈಗ ''ಕಾಲಕೂಪ''ವನ್ನು ವರ್ಣಿಸುತ್ತೇನೆ. ಇದು ಯಮನ ಅಥವಾ ಮೃತ್ಯುವಿನ ಭಯವನ್ನು ನಿವಾರಣೆ ಮಾಡುವುದು. ಅಲ್ಲಿ ಚತುರ್ದಶಿಯ ದಿವಸ ಸ್ನಾನಮಾಡುವುದರಿಂದ ನರಕದ ದರ್ಶನವೇ ತಪ್ಪಿಹೋಗುವುದು. ॥ ೪೮ ॥ ಅದರ ಎದುರಿಗೆ ''ಶಾಲ್ಮಲೀ'' ತೀರ್ಥವಿದೆ. ಇದು ಶಾಲ್ಮಲೀ ವೃಕ್ಷಗಳ ನೆರಳಿನಿಂದ ಚಿಹ್ನಿತವಾಗಿದೆ; ಈ ವೃಕ್ಷಗಳ ನೆರಳಿನ ಸ್ಪರ್ಶಮಾತ್ರದಿಂದಲೇ ಪಾಪಿಗಳು ಶುದ್ಧಿಯನ್ನು ಹೊಂದುವರು. ॥ ೪೯ ॥ ಅದರ ಎದುರಿಗೆ ಧನುಸ್ಸಿನ ಆಕಾರವಿರುವ ''ಬ್ರಹ್ಮಕುಂಡ''ವೆಂಬುದಿದೆ. ಅಲ್ಲಿ ಸ್ನಾನ, ಪಾನಾದಿಗಳನ್ನು ಮಾಡುವುದರಿಂದ ಬ್ರಹ್ಮಲೋಕವನ್ನು ಹೊಂದುವರು. ॥ ೫೦ ॥ ಇದರ ಹಿಂದೆ ಪರಮೋತ್ತಮವಾದ ''ಹಂಸಪ್ರಪತನ'' ವೆಂಬ ತೀರ್ಥವಿದೆ. ಅಲ್ಲಿ ಇರುವವರು ಸಂನ್ಯಾಸಿಗಳಂತೆಯೇ, ಇದರಲ್ಲಿ ಯಾವ ಸಂಶಯವೂ ಇಲ್ಲ. ॥ ೫೧ ॥ ಈ ಕ್ಷೇತ್ರದಲ್ಲಿ ಹಂಸರೂಪೀ ಪರಮಾತ್ಮನು ಯಾವಾಗಲೂ ಸನ್ನಿಹಿತನಾಗಿರುವನು. ಈ ತೀರ್ಥದಲ್ಲಿ ಸ್ನಾನ, ಪಾನಾದಿಗಳನ್ನು ಮಾಡಿದ ಮನುಷ್ಯನು ಸನ್ಯಾಸಿಯ ಸಿದ್ಧಿಯನ್ನು ಹೊಂದುತ್ತಾನೆ. ॥ ೫೨ ॥ ಇನ್ನು ಪ್ರತಿಷ್ಠಾನದಲ್ಲಿ ''ಸಮುದ್ರತೀರ್ಥ'' ವೆಂಬ ಮಹಾ ಸರಸ್ಸು ವಿರಾಜಮಾನವಾಗಿದೆ. ಇದರ ದರ್ಶನ

ಮತ್ತು ಪಾನದಿಂದ ಮನುಷ್ಯನು ಪಾಪಗಳನ್ನು ಕಳೆದುಕೊಳ್ಳುತ್ತಾನೆ. ॥ ೫೩ ॥ ಅಮಾವಾಸ್ಯೆ, ಪೌರ್ಣಿಮೆ ಮತ್ತು ಸೂರ್ಯಚಂದ್ರಗ್ರಹಣದಲ್ಲಿ ಈ ಕ್ಷೇತ್ರವನ್ನು ಪ್ರದಕ್ಷಿಣೆ ಮಾಡಿದರೆ ಭೂಪ್ರದಕ್ಷಿಣೆಯ ಫಲವು ಲಭಿಸುವುದು. ॥ ೫೪ ॥ ಇಲ್ಲಿ ಸ್ನಾನ, ಪಾನಾದಿಗಳಿಂದ ಪುಣ್ಯವು ಬೆಳೆಯುವುದು. ಇಲ್ಲಿ ದೇಹತ್ಯಾಗ ಮಾಡುವುದರಿಂದ ಸ್ವರ್ಗಪ್ರಾಪ್ತಿಯಾಗುವದು. ಈ ವಿಷಯದಲ್ಲಿ ಯಾವ ಸಂಶಯವೂ ಬೇಡ. ॥ ೫೫ ॥ ಇದರ ದಕ್ಷಿಣಕ್ಕೆ ಮನೋಹರವಾದ ವ್ಯಾಸತೀರ್ಥವಿದೆ. ಇಲ್ಲಿ ವ್ಯಾಸಾಶ್ರಮವಿದ್ದು ದೇವತೆಗಳೂ, ಋಷಿಗಳೂ ಮತ್ತು ಗಂಧರ್ವರು ಇರುತ್ತಾರೆ. ॥ ೫೬ ॥ ಇಲ್ಲಿ ವಾಸಮಾಡಿ ಈ ತೀರ್ಥಕ್ಕೆ ಮತ್ತು ಶ್ರೀ ವ್ಯಾಸಮಹರ್ಷಿಗಳಿಗೆ ಪೂಜೆಯನ್ನು ಸಲ್ಲಿಸಿ, ನಮಸ್ಕಾರ ಮಾಡಿ ಭಕ್ತಿಯಿಂದ ಪ್ರಾರ್ಥಿಸಿದರೆ ಅವರಿಗೆ ತತ್ತ್ವಜ್ಞಾನದ ಅರಿವಾಗುವುದು. ಇದು ನಿಶ್ಚಯ. ॥ ೫೭ ॥ ಇದರ ಆಗ್ನೇಯ ಭಾಗದಲ್ಲಿ ವೇಣೀಯ ಉತ್ತರ ದಡದಲ್ಲಿ ''ನಾಗ ತೀರ್ಥ''ವಿದೆ. ಇದು ಗಂಡು ಹೆಣ್ಣು ಸರ್ಪಗಳಿಂದ ತುಂಬಿದೆ. ॥ ೫೮ ॥ ಅಲ್ಲಿಗೆ ಹೋಗಿ ಯಾರು ಹಾಲು ಮತ್ತು ಮೊಸರು ಮುಂತಾದುವುಗಳಿಂದ ಈ ನಾಗಗಳನ್ನು ಪೂಜಿಸಿ ನಮಿಸುತ್ತಾರೋ ಅವರಿಗೆ ಅಪಾರವಾದ ಪುಣ್ಯಪ್ರಾಪ್ತಿಯಿದೆ. ॥ ೫೯ ॥ ಈ ರೀತಿಯಾಗಿ ಮಧ್ಯ ಮತ್ತು ಬಹಿರ್ವೇದಿಗಳಲ್ಲಿರತಕ್ಕ ಮುಖ್ಯ ತೀರ್ಥಗಳನ್ನು ಪ್ರಯತ್ನಪೂರ್ವಕವಾಗಿ ನಿಮಗೆ ಪರೋಪಕಾರ ದೃಷ್ಟಿಯಿಂದ ಹೇಳಿದ್ದಾಯಿತು. ॥ ೬೦ ॥ ಐದು ಯೋಜನ ವಿಸ್ತೀರ್ಣವುಳ್ಳ ಈ ಮಂಡಲದಲ್ಲಿ ಯಾವ ಯಾವ ತೀರ್ಥ-ಗಳಿವೆಯೋ ಅವುಗಳನ್ನೆಲ್ಲಾ ಪೂರ್ತಿಯಾಗಿ ಹೇಳಲು ನಾನೇ ಸಮರ್ಥನಲ್ಲ; ಹೀಗಿರುವಾಗ ಬೇರೆಯವರಿಗೆ ಹೇಗೆ ತಾನೇ ಸಾಧ್ಯವು? ॥ ೬೧ ॥ ಇದಲ್ಲದೆ ಯಮುನೆಯೊಡನೆ ಸಂಗಮವಾಗುವ ಮತ್ತು ಗಂಗೆಯೊಡನೆ ಸಂಗಮವಾಗುತ್ತಿರುವ ಅನೇಕ ತೀರ್ಥಗಳಿವೆ. ಇವುಗಳ ಲೆಕ್ಕವನ್ನಿಡಲು ಯಾರಿಗೆ ತಾನೇ ಸಾಧ್ಯವು? ॥ ೬೨ ॥ ಯಮುನೆಯೊಂದರ ದರ್ಶನದಿಂದಲೇ ಎಲ್ಲ ಪಾಪಗಳ ಪರಿಹಾರವಾಗುವುದು. ಹಾಗೆಯೇ ಗಂಗೆಯೂ ಕೂಡ. ಇವೆರಡನ್ನೂ ಹೊಂದಿರುವ ಪ್ರಯಾಗ ಕ್ಷೇತ್ರದ ಮಾಹಾತ್ಮ್ಯೆಯ ವೈಭವವನ್ನು ಹೇಗೆ ತಾನೇ ವರ್ಣನೆ ಮಾಡುವುದು? ॥ ೬೩ ॥ ಹೇ ಬ್ರಹ್ಮನ ಮಕ್ಕಳಾದ ಸನಕಾದಿಗಳೇ! ನಿಮಗೋಸ್ಕರ ಈ ಮೂರು ವೇಣಿಗಳ ಮಾಹಾತ್ಮ್ಯೆಯನ್ನು ಹೇಳಿರುವೆನು. ಬೇರೆ ಇನ್ನೇನು ಕೇಳಬಯಸುತ್ತೀರಿ? ॥ ೬೪ ॥

॥ ಎಂಬತ್ತೆಂಟನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕೋನನವತಿತಮೋಽಧ್ಯಾಯಃ ॥ ೮೯ ॥

ಋಷಯ ಊಚುಃ—

ವೇದೀತ್ರಯಸ್ಯ ತೀರ್ಥಾನಿ ವರ್ಣಿತಾನಿ ತ್ವಯಾನಘ ।
ಯಮುನಾಯಾಶ್ಚ ಮಾಹಾತ್ಮ್ಯಂ ಶ್ರುತ್ವಾನಂದಮುಪಾಗತಾಃ ॥ ೧ ॥
ಇದಾನೀಂ ಯಮುನೋತ್ಪತ್ತಿಂ ಶ್ರೋತುಮಿಚ್ಛಾಮಹೇ ವಯಮ್ ।
ತತ್ಸರ್ವಂ ನಃ ಸಮಾಚಕ್ಷ್ವ ಸೂತ ಸರ್ವೋಪಕಾರಕಃ ॥ ೨ ॥

### ॥ ಎಂಬತ್ತೊಂಬತ್ತನೆಯ ಅಧ್ಯಾಯವು ॥

ಶೌನಕಾದಿಗಳು ಹೇಳಿದರು—

ನಿರ್ದುಷ್ಟರಾದ ಶ್ರೀ ಸೂತರೇ! ಮೂರು ವೇದಿಗಳಲ್ಲಿರತಕ್ಕ ತೀರ್ಥಗಳು ತಮ್ಮಿಂದ ವರ್ಣಿಸಲ್ಪಟ್ಟಿತು. ಯಮುನಾನದಿಯ ಮಾಹಾತ್ಮ್ಯೆಯನ್ನು ಕೇಳಿ ಆನಂದವಾಯಿತು. ॥ ೧ ॥ ಈಗ ಯಮುನೆಯ ಉತ್ಪತ್ತಿಯ ಬಗ್ಗೆ ಕೇಳಲು ಬಯಸುತ್ತೇವೆ. ತಾವು ಎಲ್ಲರಿಗೂ ಉಪಕಾರಮಾಡತಕ್ಕವರು. ಆದ್ದರಿಂದ ಈ ವಿಷಯವಾಗಿ ಎಲ್ಲವನ್ನೂ ಹೇಳಬೇಕೆಂದು ಪ್ರಾರ್ಥಿಸುತ್ತೇವೆ. ॥ ೨ ॥

ಸೂತ ಉವಾಚ—

ಇಮಮೇವ ಪುರಾ ಪ್ರಶ್ನಂ ಸನಕಾದ್ಯಾ ಮಹರ್ಷಯಃ ।
ಶೇಷಮಾಪೃಷ್ಟವಂತಸ್ತಾನ್ ಸ ಯಥೋಚೇ ತಥೋಚ್ಯತೇ ॥ ೩ ॥

ಸೂತರು ಹೇಳಿದರು—

ಹಿಂದೆ ಇದೇ ಪ್ರಶ್ನೆಯನ್ನು ಸನಕಾದಿಗಳು ಶೇಷದೇವರನ್ನು ಕೇಳಿದ್ದರು. ಅವರಿಗೆ ಶೇಷದೇವರು ಹೇಗೆ ಉಪದೇಶ ಮಾಡಿದರೋ ಹಾಗೆಯೇ ಹೇಳುವೆನು. ॥ ೩ ॥

ಶೇಷ ಉವಾಚ—

ಶೃಣುಧ್ವಂ ಬ್ರಹ್ಮತನಯಾ ಯಮುನೋತ್ಪತ್ತಿಮಾದರಾತ್ ।
ಆಗಮಂ ಚ ಪ್ರಭಾವಂ ಚ ಸಮುದ್ರಾಂತಮಹಂ ಬ್ರುವೇ ॥ ೪ ॥
ವಿವಸ್ವತಶ್ಚ ಸಂಜ್ಞಾಯಾಂ ತ್ವಾಷ್ಟ್ರ್ಯಾಂ ವೈವಸ್ವತಾದನು ।
ಅಪತ್ಯಂ ದ್ವಂದ್ವಮುತ್ಪನ್ನಂ ಶ್ರೋತುಃ ಕಲ್ಮಶನಾಶನಂ ॥ ೫ ॥
ಪೂರ್ವಂ ಸಂಜ್ಞಾ ತಪಸ್ತೇಪೇ ವರಪುತ್ರೇಚ್ಛಯಾ ಸತೀ ।
ತತ್ತಪಃ ಸಫಲಂ ಕರ್ತುಂ ಬ್ರಹ್ಮಾ ತತ್ರ ಸಮಾಯಯೌ ॥ ೬ ॥

ಶೇಷದೇವರು ಹೇಳಿದರು—

ಹೇ ಸನಕಾದಿ ಮುನಿಗಳೇ! ನಿಮಗೆ ಯಮುನೆಯ ಉತ್ಪತ್ತಿಯ ಬಗ್ಗೆ ಹೇಳುವೆನು, ಕೇಳಿರಿ. ಅದು ಹುಟ್ಟಿದ್ದು ಹರಿದದ್ದು ಮತ್ತು ಶೋಭಿಸುತ್ತಾ ಸಮುದ್ರದವರೆಗೆ ಇರುವುದು ಇವಿಷ್ಟನ್ನೂ ಹೇಳುವೆನು. ॥ ೪ ॥ ಸೂರ್ಯನಿಗೆ ವೈವಸ್ವತ ಮನುವಿನ ನಂತರ ವಿಶ್ವಕರ್ಮನ ಮಗಳಾದ

ಸಂಜ್ಞಾದೇವಿಯಲ್ಲಿ ಅವಳೀ ರೂಪದಲ್ಲಿ ಇಬ್ಬರು ಮಕ್ಕಳಾದರು. ಇವರ ಉತ್ಪತ್ತಿಯ ಕಥೆಯನ್ನು ಕೇಳಿದವರ ಸಕಲ ಪಾಪಗಳೂ ಪರಿಹಾರವಾಗುವುವು. ॥ ೫ ॥ ಹಿಂದೆ ಮಹಾಪತಿವ್ರತೆಯಾದ ಸಂಜ್ಞಾದೇವಿಯು ಶ್ರೇಷ್ಠನಾದ ಮಗನನ್ನು ಪಡೆಯಲು ಬ್ರಹ್ಮನನ್ನು ಕುರಿತು ತಪಸ್ಸುಮಾಡಿದಳು. ಅವಳ ತಪಸ್ಸು ಸಫಲವಾಗಲು ಬ್ರಹ್ಮದೇವರೇ ಅವಳಲ್ಲಿಗೆ ಬಂದರು. ॥ ೬ ॥

ಆತ್ಮಾನಂ ದರ್ಶಯಾಮಾಸ ವರದೋಽಸ್ಮೀತ್ಯಭ್ಯಭಾಷತ ।
ಪ್ರಸನ್ನೋ ಯದಿ ಮೇ ಬ್ರಹ್ಮನ್ಧರ್ಮಮಷ್ಟಾಂಗಲಕ್ಷಣಮ್ ॥ ೭ ॥
ಪುತ್ರಮಿಚ್ಛಾಮಿ ಧರ್ಮೇಣ ಭಾಸ್ಕರಾತ್ ತ್ವತ್ಪ್ರಸಾದತಃ ।
ಸಾಕ್ಷಾದ್ದಂಡಧರೋ ಧರ್ಮಃ ಸೂರ್ಯಾ ತ್ತ್ವಯಿ ಭವಿಷ್ಯತಿ ॥ ೮ ॥
ಪರಿತ್ರಾಸ್ಯತಿ ಯೋ ಧರ್ಮಮಧರ್ಮಂ ನಿಹನಿಷ್ಯತಿ ।
ಇತ್ಯುಕ್ತ್ವಾಂತರ್ದಧೇ ಬ್ರಹ್ಮಾ ಸಂಜ್ಞಾ ವರಮವಾಪ್ಯ ಚ ॥ ೯ ॥
ಸಾನಂದಾದಿತ್ಯಮಭ್ಯೇತ್ಯ ಗರ್ಭಮಾಪ ಸುಮಧ್ಯಮಾ ।
ನಿಯಮೇನ ಪರೇಣಾಸೌ ಗರ್ಭಂ ಯಾವಚ್ಛತಂ ಸಮಾಃ ॥ ೧೦ ॥
ಧಾರಯಾಮಾಸ ನಿಯತಂ ಸುವ್ರತಾ ಸಂಯತೇಂದ್ರಿಯಾ ।
ಕದಾಚಿತ್ತಾಂ ಸಹಸ್ರಾಂಶುರಾಲೋಕ್ಯಾಸ್ತಾಚಲೋಪರಿ ॥ ೧೧ ॥
ಆಲಭ್ಯ ಚ ಕರೈಸ್ತೈರಿದಮಾಹ ರುಷಾನ್ವಿತಃ ।
ಕಿಮರ್ಥಂ ತಪ್ಯಸೇ ಭೀರು ಮುಂಚ ಗರ್ಭಂ ಚಿರೋಷಿತಮ್ ॥ ೧೨ ॥
ಅತಿಖಿನ್ನಾಸಿ ಸಾಧ್ವೀ ತ್ವಂ ಧರ್ಮಜ್ಞಾ ಸಹಚಾರಿಣೀ ।
ಇತ್ಯುಕ್ತ್ವಾ ಸಾ ಕರೈಸ್ತಪ್ತಾ ಸಂಜ್ಞಾ ಗರ್ಭಮಥಾತ್ಯಜತ್ ॥ ೧೩ ॥
ಸ ಗರ್ಭಸ್ತತ್ಕರೈಃ ಸ್ಪೃಷ್ಟಃ ಶ್ಯಾಮೋ ಭೂತ್ವಾಪತದ್ದ್ವಿಧಾ ।
ಪುತ್ರಸ್ತು ಕಠಿನೋ ಭಾಗೋ ಯಮ ಇತ್ಯುಚ್ಯತೇ ಸಃ ॥ ೧೪ ॥
ದ್ರವರೂಪೇಣ ಯಮುನಾ ಪ್ರಸವಾಪಃ ಸುತಾಭವತ್ ।
ಏವಂ ತದ್ಯುಗಲಾಪತ್ಯಂ ಪರಮಾಶ್ಚರ್ಯಕಾರಕಮ್ ॥ ೧೫ ॥
ನಿಷ್ಕ್ರಾಂತಂ ಜಠರಾನ್ಮಾತುರಭವತ್ತದಚೇತನಮ್ ।
ಅಥಾಗತ್ಯ ಸುಪರ್ವಾಣಃ ಬ್ರಹ್ಮಾವಿಷ್ಣುಶಿವಾದಯಃ ॥ ೧೬ ॥
ಸ್ವಸ್ತಿ ಸ್ವಸ್ತೀತಿ ಜಲ್ಪಂತಃ ತತ್ಸಮಾವೃತ್ಯ ತಸ್ಥಿರೇ ।
ದ್ರುಹಿಣೋಽಮೃತಮಿಶ್ರಾಂಬುಪರಿಕ್ಲಿನ್ನೇನ ಪಾಣಿನಾ ॥ ೧೭ ॥
ಪಸ್ಪರ್ಶಾಥ ಸ್ವಯಂ ವಿಷ್ಣುಃ ಪ್ರವಿಶ್ಯಾಜೀವಯದ್ಧಿ ತತ್ ।
ಐಶ್ವರ್ಯಮದಧಾತ್ತಸ್ಮಿನ್ನೀಶ್ವರಃ ಸ್ವಯಮವ್ಯಯಃ ॥ ೧೮ ॥
ಏವಮನ್ಯೇ ಸುಪರ್ವಾಣಃ ಸ್ವಪ್ರಭಾವೈರಯೋಜಯನ್ ।
ತತಃ ಸಂಪ್ರಾಪ್ಯ ಸಂಜ್ಞಾಂ ಸ ಧರ್ಮರಾಜಃ ಸಮುತ್ಥಿತಃ ॥ ೧೯ ॥

ಶ್ಯಾಮಃ ಪ್ರಭುರ್ಲೋಹಿತಾಕ್ಷಶ್ಚಲತ್ಕುಂಡಲಮೂರ್ಧಜಃ ।
ತಥೈವ ಯಮುನಾ ಶ್ಯಾಮಾ ಪದ್ಮಪತ್ರಾರುಣೇಕ್ಷಣಾ ॥ ೨೦ ॥
ಸ್ವಭಾಸಾ ಭಾಸಯಾಮಾಸ ಸಮಸಾಂಸ್ತಾನ್ಸುರಃ ಸ್ಥಿತಾನ್ ।
ಯಮಂಚ ಯಮುನಾಂಚೈವ ದೃಷ್ಟ್ವಾ ದೇವಾಃ ಸಚೇತನೌ ॥ ೨೧ ॥
ವವೃಷುರ್ದಿವ್ಯಕುಸುಮೈರ್ನಾನಾವಾದ್ಯಾನ್ಯವಾದಯನ್ ।
ಸಿದ್ಧಾ ಕಿಂಪುರುಷಾಶ್ಚಾಪಿ ತುಷ್ಟುವುರ್ಹರ್ಷನಿರ್ಭರಾಃ ॥ ೨೨ ॥
ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ।
ಪ್ರಸೇದುಶ್ಚ ದಿಶೋ ವಾತಾ ವವುರ್ಮಂದಂ ಚ ಮಂಗಲಮ್ ॥ ೨೩ ॥
ತತಃ ಸ್ವಾಂಕೇ ಸಮಾದಾಯ ಬ್ರಹ್ಮಾದ್ಭುತತನುಂ ಯಮಮ್ ।
ಯಮುನಾಂ ಚಾಚ್ಯುತಃ ಸ್ವಾಂಕೇ ಆಶ್ಲಿಷ್ಯ ಪರಮಾದರಾತ್ ॥ ೨೪ ॥
ದೇವರ್ಷಿಗಣಸಂಯುಕ್ತಸ್ಸರ್ವಸಾಧನಸಂಯುತಃ ।
ಸಂಸ್ಕಾರೈರ್ಯೋಜಯಾಮಾಸ ಜಾತಕರ್ಮಾದಿಭಿಃ ಕ್ರಮಾತ್ ॥ ೨೫ ॥
ತತಸ್ತಂ ಸಂಸ್ಕೃತಂ ದೃಷ್ಟ್ವಾ ಬ್ರಹ್ಮಾದಿತ್ಯತನೂದ್ಭವಮ್ ।
ಅನುಗ್ರಹಾಯ ಸಾಧೂನಾಂ ನಿಗ್ರಹಾಯ ಚ ಪಾಪಿನಾಮ್ ॥ ೨೬ ॥
ಆಧಿಪತ್ಯೇ ಪರೇತಾನಾಂ ಲೋಕಪಾಲಿಕದೇವತಾಂ ।
ದಂಡಂ ಸಮರ್ಪ್ಯ ತಸ್ಯಾಥ ಯಥಾವಚ್ಚಾಭ್ಯಷೇಚಯತ್ ॥ ೨೭ ॥
ಅಭಿಷಿಚ್ಯ ತತೋ ವೇಧಾಃ ಸೂರ್ಯಪುತ್ರಮಶಿಕ್ಷಯತ್ ।
ಯಮೋಸಿ ತ್ವಂ ನಿಯಂತಾಸಿ ಮಿತ್ರೋದಾಸೀನಶತ್ರುಷು ॥ ೨೮ ॥
ಯಾತನಾಭಿಃ ಪಾಪಕೃತಸ್ತ್ವಯಾ ಶಾಸ್ಯಾ ಸದೈವ ಹಿ ।
ಸ್ಥಾನಾನಿ ರೌರವಾದೀನಿ ಯಾತನಾನಾಂ ತವಾಜ್ಞಯಾ ॥ ೨೯ ॥
ಶ್ವಾಕಗೃಧ್ರಚಾಂಡಾಲಕ್ರವ್ಯಾದಸ್ತವ ಕಿಂಕರಾಃ ।
ಪಾಪಿನೋ ನಿಗೃಹೀಷ್ಯಂತೇ ಕ್ರೂರೈಃ ಪಾಪೈರಹರ್ನಿಶಮ್ ॥ ೩೦ ॥
ನ ಕೃಪಾ ಭವತಾ ಕಾರ್ಯಾ ಸ್ವಪುತ್ರೇಽಪ್ಯಪರಾಧಿನಿ ।
ನಿಯೋಗಿನಾಮಯಂ ಧರ್ಮಃ ಸ್ವನಿಯೋಗೈಕಪಾಲನಮ್ ॥ ೩೧ ॥
ಮೃತ್ಯುಃ ಕಾಲಶ್ಚಿತ್ರಗುಪ್ತಃ ಸಹಾಯಾ ಭವತಸ್ತ್ರಯಃ ।
ದಕ್ಷಿಣಸ್ಯಾಂ ಚ ತೇ ವಾಸೋ ದಿಶಿ ಖ್ಯಾತೋ ಭವಿಷ್ಯಸಿ ॥ ೩೨ ॥
ಯಾನಂ ತೇ ಕೃಷ್ಣಮಹಿಷಃ ಶೀಘ್ರಗೋಽಸ್ತು ಮನೋಜವಃ ।
ಏವಂ ಮದುಕ್ತಮಖಿಲಂ ದೇಶಕಾಲೋಚಿತಂ ಕುರುಂ ॥ ೩೩ ॥

ಬಂದ ಬ್ರಹ್ಮದೇವರನ್ನು ನೋಡಿ ಸಂಜ್ಞಾದೇವಿಯು ಹೇಳಿದಳು. "ಎಲೈ ಬ್ರಹ್ಮದೇವನೇ! ನೀನು ಸಂತುಷ್ಟನೇ ಆಗಿದ್ದರೆ ನಿಮ್ಮ ಅನುಗ್ರಹದಿಂದ, ಸೂರ್ಯನ ದೆಸೆಯಿಂದ,

ಅಷ್ಟಾಂಗಲಕ್ಷಣಗಳಿಂದ ಕೂಡಿದ ಧರ್ಮನನ್ನು ನಾನು ಪುತ್ರನನ್ನಾಗಿ ಇಚ್ಛಿಸುತ್ತೇನೆ''. ''ಸೂರ್ಯನ ದಶೆಯಿಂದಲೇ ಶಾಸನಮಾಡತಕ್ಕ ದಂಡಧರನು ನಿನ್ನ ಮಗನಾಗುವನು. ಇವನು ಧರ್ಮವನ್ನು ರಕ್ಷಿಸುವನು ಮತ್ತು ಅಧರ್ಮವನ್ನು ನಾಶಮಾಡುವನು.'' ಹೀಗೆ ಹೇಳಿ ಬ್ರಹ್ಮನು ಮಾಯವಾದನು. ಸಂಜ್ಞೆಯಾದರೋ ವರವನ್ನು ಪಡೆದು, ಆನಂದವನ್ನು ಹೊಂದಿ ಸೂರ್ಯನಿಂದ ಗರ್ಭವನ್ನು ಧಾರಣೆಮಾಡಿದಳು. ಒಳ್ಳೆಯ ವ್ರತದಲ್ಲಿದ್ದ ಸಂಜ್ಞೆಯು ಅತ್ಯುತ್ತಮ ನಿಯಮಗಳಿಂದ ಜಿತೇಂದ್ರಿಯಳಾಗಿದ್ದು, ನೂರು ವರ್ಷಗಳವರೆಗೆ ಪರಮಾತ್ಮನ ಇಚ್ಛೆಗೆ ಒಳಪಟ್ಟಂಥ ಆ ಗರ್ಭವನ್ನು ಧಾರಣೆ ಮಾಡಿದಳು. ಒಂದು ಸಲ ಸೂರ್ಯನು ಅವಳನ್ನು ಅಸ್ತಾಚಲದಲ್ಲಿ ನೋಡಿದನು ॥ ೭-೧೧ ॥ ಆಗ ಸೂರ್ಯನು ಅವಳನ್ನು ತನ್ನ ಕಿರಣಗಳಿಂದ ಮುಟ್ಟಿ ಕೋಪದಿಂದ ಹೀಗೆ ಹೇಳಿದನು, ''ಎಲೈ ಸಂಜ್ಞೆಯೇ! ಏಕೆ ವೃಥಾ ತಾಪಗೊಂಡಿದ್ದೀ? ನೀನು ಬಹು ಕಾಲದಿಂದ ಧೃತವಾದ ಗರ್ಭವನ್ನು ವಿಸರ್ಜಿಸು. ॥ ೧೨ ॥ ನೀನು ಬಹಳ ಖಿನ್ನಳಾಗಿದ್ದಿ, ಪತಿವ್ರತೆಯಾದ ಧರ್ಮವನ್ನು ತಿಳಿದ ನೀನು ನನ್ನ ಧರ್ಮಪತ್ನಿಯು''. ಎಂದು ಹೇಳಿ ಸೂರ್ಯನು ಸಂಜ್ಞಾಗರ್ಭವನ್ನು ತನ್ನ ಕಿರಣಗಳಿಂದ ಕಾಯಿಸಿದನು. ಕೂಡಲೇ ಸಂಜ್ಞೆಯು ಗರ್ಭವನ್ನು ವಿಸರ್ಜಿಸಿದಳು. ॥ ೧೩ ॥ ಸೂರ್ಯನ ಕಿರಣಗಳಿಂದ ಸ್ಪರ್ಶವಾಗಿದ್ದ ಆ ಗರ್ಭವು ಕಪ್ಪುಬಣ್ಣವನ್ನು ಪಡೆದು ಭೂಮಿಗೆ ಬಿದ್ದು ಎರಡು ಭಾಗವಾಯಿತು. ಆ ಕೆಳಗೆ ವಿಸರ್ಜಿತ ಘನ ಭಾಗವು ಸೂರ್ಯನ ಪುತ್ರನಾಗಿ ''ಯಮ'' ನೆಂದೆನಿಸಿದನು (ಈ ಕಾರಣದಿಂದಲೇ ಯಮನದೇಹದ ಬಣ್ಣವು ಕಪ್ಪು). ಇನ್ನು ಉಳಿದಿರುವ ಪ್ರಸವದ ಜಲವು ನದಿಯಾಗಿ ಹರಿದು ''ಯಮುನೆ''ಯೆಂದು ಮಗಳಾದಳು. ॥ ೧೪ ॥ ಇವಳು ಸೂರ್ಯನ ಮಗಳೂ ಯಮಧರ್ಮರಾಜನ ತಂಗಿಯೂ ಆದಳು. (ಈ ಕಾರಣದಿಂದಲೇ ಯಮುನೆಯ ನೀರು ಕಪ್ಪಗಿದೆ). ಈ ರೀತಿಯಾಗಿ ಪರಮಾಶ್ಚರ್ಯಕರವಾಗಿ ಈ ಅವಳೀ ಮಕ್ಕಳು ಹುಟ್ಟಿದುವು. ॥ ೧೫ ॥ ತಾಯಿಯ ಉದರದಿಂದ ಹೊರಬಿದ್ದ ಅವೆರಡೂ ಅಚೇತನವಾಗಿದ್ದವು. ಅನಂತರ ಉತ್ತಮ ದೇವತೆಗಳಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಅಲ್ಲಿಗೆ ಆಗಮಿಸಿದರು. ॥ ೧೬ ॥ ''ಸ್ವಸ್ತಿ, ಸ್ವಸ್ತಿ'' ಎಂದು ಹೇಳುತ್ತಾ ಇವರೆಲ್ಲರೂ ಈ ಇಬ್ಬರು ಶಿಶುಗಳ ಸುತ್ತಲೂ ನಿಂತುಕೊಂಡರು. ಬ್ರಹ್ಮನು ಅಮೃತದಿಂದ ತೊಯ್ದಿರುವ ಹಸ್ತದಿಂದ ಆ ಗರ್ಭಜನಿತ ಶಿಶುಗಳನ್ನು ಸ್ಪರ್ಶಿಸಿದನು. ॥ ೧೭ ॥ ಇದೇ ರೀತಿಯಾಗಿ ಶ್ರೀ ಮಹಾವಿಷ್ಣುವೂ ಆ ಗರ್ಭಜನಿತ ಶಿಶುಗಳೊಳಗೆ ಪ್ರವೇಶಿಸಿ ಅವುಗಳನ್ನು ಉಜ್ಜೀವನಗೊಳಿಸಿದನು. ನಾಶರಹಿತನಾಗಿರುವ ಈಶ್ವರನು ಅವುಗಳಿಗೆ ಸಕಲ ಐಶ್ವರ್ಯಗಳನ್ನೂ ಕೊಟ್ಟನು. ॥ ೧೮ ॥ ಇದೇ ರೀತಿಯಾಗಿ ಅನೇಕ ದೇವತೆಗಳು ತಮ್ಮ ತಮ್ಮ ವಿಭೂತಿಮತ್ತ್ವಗಳನ್ನು ಅವುಗಳಿಗೆ ಕೊಟ್ಟರು. ಅನಂತರ ಜ್ಞಾನವನ್ನು ಹೊಂದಿ ಧರ್ಮರಾಜನು ಯಮನೆಂದು ಹೆಸರುಳ್ಳವನಾಗಿ ಎದ್ದುಕುಳಿತನು. ॥ ೧೯ ॥ ಈ ಯಮರಾಜನು ಕಪ್ಪಗಿದ್ದು ಕೆಂಪಗಿದ್ದ ಕಣ್ಣುಗಳುಳ್ಳವನಾಗಿ ಸಮರ್ಥನಾಗಿ ಕಾಣುತ್ತಿದ್ದನು. ಚಲಿಸುತ್ತಿರುವ ಕರ್ಣಕುಂಡಲಗಳಿಂದಲೂ ಕಪ್ಪು ಕೂದಲುಗಳಿಂದಲೂ ಶೋಭಾಯಮಾನವಾಗಿದ್ದನು. ಹಾಗೆಯೇ ಯಮುನೆಯೂ 'ಕೃಷ್ಣವರ್ಣ-ದವಳಾಗಿದ್ದಳು'' ಕಣ್ಣುಗಳು ಪದ್ಮಪುಷ್ಪದಳದಂತೆ ಕೆಂಪಗಿತ್ತು. ॥ ೨೦ ॥ ಈ ಇಬ್ಬರು ಮಕ್ಕಳೂ ತಮ್ಮ ತೇಜಸ್ಸಿನಿಂದ ತಮ್ಮ ಎದುರಿಗೆ ಇರತಕ್ಕ ಸಮಸ್ತರ ಮೇಲೂ ಬೆಳಕನ್ನು ಚೆಲ್ಲಿದರು. ಪುನಃ ಬದುಕಿಕೊಂಡಿರುವ ಯಮ ಮತ್ತು ಯಮುನೆಯರನ್ನು ನೋಡಿ ದೇವತೆಗಳು ಪುಷ್ಪವೃಷ್ಟಿಕರೆದರು ಮತ್ತು ನಾನಾವಿಧವಾದ ವಾದ್ಯಗಳನ್ನು ನುಡಿಸಿದರು. ಸಿದ್ಧರೂ, ಕಿಂಪುರುಷರೂ ಗಾಢವಾದ ಹರ್ಷದಿಂದ ಸಂತುಷ್ಟರಾದರು. ॥ ೨೧-೨೨ ॥ ಗಂಧರ್ವಶ್ರೇಷ್ಠರುಗಳು ಹಾಡಿದರು ಮತ್ತು

ಅಪ್ಸರೆಯರು ನರ್ತನಮಾಡಿದರು. ದಿಕ್ಕುಗಳು ಪ್ರಸನ್ನವಾದುವು. ಗಾಳಿಯು ಮಂದವಾಗಿ ಬೀಸಿ ಅವರಿಗೆ ಮಂಗಳವನ್ನು ಹಾಡಿತು. ॥ ೨೩ ॥ ನಂತರ ಬ್ರಹ್ಮನು ಅದ್ಭುತ ಶರೀರವುಳ್ಳ ಯಮನನ್ನು ತೊಡೆಯ ಮೇಲೆ ಕೂಡಿಸಿಕೊಂಡನು. ಶ್ರೀ ಮಹಾವಿಷ್ಣುವು ಯಮುನೆಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಆದರದಿಂದ ಆಲಂಗಿಸಿಕೊಂಡನು. ॥ ೨೪ ॥ ದೇವಋಷಿಗಳ ಸಮೂಹದಲ್ಲಿ ಸಂಸ್ಕಾರಕ್ಕೆ ಬೇಕಾದ ಸಾಧನೆಗಳ ಸಹಿತವಾಗಿ ಜಾತಕರ್ಮ ಮತ್ತು ನಾಮಕರ್ಮಾದಿ ಸಂಸ್ಕಾರಗಳನ್ನು ಸೂರ್ಯನು ಇಬ್ಬರಿಗೂ ಕ್ರಮವಾಗಿ ಮಾಡಿದನು. ॥ ೨೫ ॥ ನಂತರ ಸಂಸ್ಕಾರ ಮಾಡಿಸಿಕೊಳ್ಳಲ್ಪಟ್ಟ ಸೂರ್ಯನ ಮಗನನ್ನು ಬ್ರಹ್ಮನು ಸಾಧುಗಳ ಅನುಗ್ರಹಕ್ಕಾಗಿಯೂ, ಪಾಪಿಗಳ ನಿಗ್ರಹಕ್ಕಾಗಿಯೂ ಪ್ರೇತಗಳ ಅಧಿಪತ್ಯದೊಳಗೆ ದಕ್ಷಿಣದಿಕ್ಪಾಲಕನನ್ನಾಗಿ ನಿಯೋಜಿಸಿ ಅವನಿಗೆ ಪಾಪಮಾಡಿದವರನ್ನು ಶಿಕ್ಷಿಸುವ ಅಧಿಕಾರದಲ್ಲಿ ಪಟ್ಟಾಭಿಷೇಕ ಮಾಡಿದನು. ॥ ೨೬-೨೭ ॥ ಈ ರೀತಿಯಾಗಿ ಅಭಿಷೇಕಮಾಡಿ ಬ್ರಹ್ಮನು ಸೂರ್ಯಪುತ್ರನಿಗೆ ಶಾಸನ ಮಾಡಿದನು. ''ನೀನು ಯಮನಾಗಿದ್ದಿ. ಮಿತ್ರರು, ಉದಾಸೀನರು ಮತ್ತು ಶತ್ರುಗಳನ್ನು ಯಾವ ತಾರತಮ್ಯವಿಲ್ಲದೆ ಅವರವರ ಪಾಪಕೃತ್ಯಗಳನ್ನು ಸ್ಮರಿಸಿ ನಿಯಂತ್ರಣ ಮಾಡಬೇಕು. ॥ ೨೮ ॥ ಪಾಪಿಷ್ಠರನ್ನು ಯಾವಾಗಲೂ ಯಾತನೆಗಳಿಂದ ನೀನು ಶಾಸನ ಮಾಡಬೇಕು. ಪಾಪಿಷ್ಠರಿಗೆ ಯಾತನೆಯನ್ನು ಕೊಡುವ ಸ್ಥಾನಗಳು ರೌರವಾದಿ ನರಕಗಳು. ಅಲ್ಲಿ ಈ ಶಿಕ್ಷೆಗಳನ್ನು ಕೊಡುವವರು ನಾಯಿಗಳು, ಕಾಗೆಗಳು, ಹದ್ದುಗಳು, ಚಂಡಾಲರು ಮತ್ತು ರಾಕ್ಷಸರುಗಳು. ಇವರುಗಳು ನಿನ್ನ ಸೇವಕರಾಗಿರುವರು. ಪಾಪಿಗಳು ಇವರುಗಳಿಂದ ಹಗಲೂ, ರಾತ್ರಿಯೂ ನಿಗ್ರಹಿಸಲ್ಪಡುವರು. ॥ ೨೯-೩೦ ॥ ನಿನ್ನ ಮಕ್ಕಳೇ ಆಗಿದ್ದರೂ ಅಪರಾಧಿಗಳಾಗಿದ್ದರೆ ಅವರ ಬಗ್ಗೆ ಕರುಣೆಯನ್ನು ತೋರಬಾರದು. ಅಧಿಕಾರಿಗಳದ್ದು ಇದೇ ಧರ್ಮವು. ಈ ಧರ್ಮವನ್ನು ಕಾಪಾಡುವುದೇ ಅವರ ಕರ್ತವ್ಯ ಧರ್ಮವು. ॥ ೩೧ ॥ ಮೃತ್ಯು, ಕಾಲ ಮತ್ತು ಚಿತ್ರಗುಪ್ತರೆಂಬ ದೇವತೆಗಳು ನಿನಗೆ ಸಹಾಯ ಮಾಡುವರು. ದಕ್ಷಿಣದಿಕ್ಕಿನಲ್ಲಿ ನಿನ್ನ ವಾಸವು ಪ್ರಸಿದ್ಧಿ ಹೊಂದುವುದು. ॥ ೩೨ ॥ ಕಪ್ಪು ಕೋಣವು ನಿನ್ನ ವಾಹನವಾಗಲಿ. ಅದು ಮನೋವೇಗದಂತೆ ಶೀಘ್ರವಾಗಿ ಚಲಿಸುವಂತಾಗಲಿ. ಈಗ ಹೇಳುವ ನನ್ನ ಉಕ್ತಿಗಳನ್ನು ದೇಶ, ಕಾಲಕ್ಕೆ ತಕ್ಕಂತೆ ನಿನ್ನ ವಿವೇಕವನ್ನು ಉಪಯೋಗಿಸಿ ಅನುಸರಿಸತಕ್ಕದ್ದು'' ಎಂದು ಉಪದೇಶ ಮಾಡಿದರು. ॥ ೩೩ ॥

ಶೇಷ ಉವಾಚ—

ಇತ್ಯುಕ್ತೋ ವೇಧಸಾ ಸೋಽಥ ತಥೇತ್ಯುಕ್ತ್ವಾ ಪರೇತರಾಟ್ ।
ಪ್ರಣಿಪತ್ಯಾಮುಮಾಮಂತ್ರ್ಯ ತದಾದಿಷ್ಟಮಥಾಕರೋತ್ ॥ ೩೪ ॥

ಯಮುನಾಪ್ಯಚ್ಯುತೇನೈವಂ ಸಂಸ್ಕೃತಾಥ ಸುಶಿಕ್ಷಿತಾ ।
ಶಂಖಾಂಬುನಾಭಿಷಿಚ್ಯೈನಾಂ ತ್ವದನ್ಯಾ ನಾಸ್ತಿ ಪಾವನೀ ॥ ೩೫ ॥

ಗಚ್ಛಾಶ್ರಿತೋಪಿ ಪಾಪಾ ಯೇ ತಾನ್ ಪುನೀಹಿ ಕೃಪಾವತೀ ।
ಜಲೇಸ್ಥಲೇಽ ಚಲೇ ವ್ಯೋಮ್ನಿ ಪಾತಾಲೇಪ್ಯನಿಲೇಽನಲೇ ॥ ೩೬ ॥

ಭವಿಷ್ಯತಿ ಪ್ರಸಾದಾನ್ಮೇ ತವಾಪ್ರತಿಹತಾ ಗತಿಃ ।
ಅಪಿ ಬ್ರಹ್ಮಹಣಃ ಪಾಪಮಪನೇಷ್ಯಸಿ ಸೇವಿತಾ ॥ ೩೭ ॥

ಇತ್ಥಂ ಜನಾರ್ದನವಚಾಂಸ್ಯವಧಾರ್ಯ ಸೌರೀ
ಕೃತ್ವಾಪ್ರದಕ್ಷಿಣಮಥ ಪ್ರಣಿಪತ್ಯ ದೇವಂ ।
ಸಾನಂದಮೇತ್ಯ ಪಿತರೌ ಚ ಸಹೋದರಂ ಸಾ
ಪುಣ್ಯಾಸ್ತಪರ್ವತಗತಾ ಯಮುನಾ ವವರ್ಧ ॥ ೩೮ ॥

॥ ಇತಿ ಏಕೋನನವತಿತಮೋಽಧ್ಯಾಯಃ ॥

**ಶೇಷದೇವರು ಹೇಳಿದರು—**

ಈ ರೀತಿಯಾಗಿ ಬ್ರಹ್ಮದೇವರಿಂದ ಆದೇಶವನ್ನು ಪಡೆದ ಯಮಧರ್ಮನು ''ಹಾಗೆಯೇ ಆಗಲಿ'' ಎಂದು ಹೇಳಿ ಅವರಿಗೆ ನಮಸ್ಕರಿಸಿ ಅವರಿಂದ ಬೀಳ್ಕೊಂಡು ಅವರು ಹೇಳಿದಂತೆಯೇ ಮಾಡತೊಡಗಿದನು. ॥ ೩೪ ॥ ಶ್ರೀ ಹರಿಯಿಂದ ಯಮುನೆಯು ಸಂಸ್ಕಾರವನ್ನು ಪಡೆದು ಚೆನ್ನಾಗಿ ಉಪದಿಷ್ಟಳಾದಳು. ಶ್ರೀಹರಿಯು ಅವಳನ್ನು ಶಂಖದ ಜಲದಿಂದ ಅಭಿಷೇಕಮಾಡಿ ನಿನಗೆ ಸರಿಸಮನಾದ ಪಾವನಕರ ನದಿಯು ಇನ್ನೊಂದಿಲ್ಲವು. ॥ ೩೫ ॥ ಶೀಘ್ರವಾಗಿ ನೀನು ಇಲ್ಲಿಂದ ಹರಿದುಹೋಗಿ ಪಾಪಮಾಡಿದವರನ್ನು ಪವಿತ್ರರನ್ನಾಗಿ ಮಾಡಿ ಉದ್ಧರಿಸು. ನಿನ್ನಪ್ರವಾಹಕ್ಕೆ ನೀರು, ಭೂ ಪರ್ವತಗಳು, ಆಕಾಶ, ಪಾತಾಳ, ಗಾಳಿ ಮತ್ತು ಬೆಂಕಿ ಇವು ಯಾವುವೂ ನನ್ನ ಪ್ರಸಾದದ ದಶೆಯಿಂದ ಅಡ್ಡಿಬರುವುದಿಲ್ಲ. ಬ್ರಹ್ಮಹತ್ಯೆ ಮಾಡಿದವನಾಗಲೀ, ನಿನ್ನ ಸೇವಾಮಾಡಿದಲ್ಲಿ ಅವನನ್ನೂ ಪಾಪರಹಿತನನ್ನಾಗಿ ಮಾಡು. ॥ ೩೬-೩೭ ॥ ಸೂರ್ಯನ ಮಗಳಾದ ಯಮುನೆಯು ಈ ರೀತಿಯಾದ ಶ್ರೀ ವಿಷ್ಣುವಿನ ಮಾತುಗಳನ್ನು ಸ್ವೀಕಾರ ಮಾಡಿ, ದೇವದೇವನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಆದರದಿಂದ ತನ್ನ ತಂದೆ ತಾಯಿಯರುಗಳಾದ ಸೂರ್ಯನನ್ನೂ ಮತ್ತು ಸಂಜ್ಞಾದೇವಿಯನ್ನೂ ತನ್ನ ಅಣ್ಣನಾದ ಯಮಧರ್ಮನನ್ನೂ ವಂದಿಸಿ, ಅಲ್ಲಿಂದ ಅಸ್ತಾಚಲಾಗ್ರವನ್ನುತಲುಪಿ, ಅಲ್ಲಿಂದ ನದಿಯಾಗಿ ಹರಿಯತೊಡಗಿದಳು. ॥ ೩೮ ॥

॥ ಎಂಬತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ನವತಿತಮೋಽಧ್ಯಾಯಃ ॥ ೯೦ ॥

ಶೇಷ ಉವಾಚ—

> ಕದಾಚಿತ್ಸ್ವಪದಂ ಗಂತುಮಾಮಂತ್ರ್ಯ ಪಿತರೌ ಯಮಃ ।
> ಯಮುನಾಮಬ್ರವೀದ್ಭಕ್ತ್ಯಾ ಭಗಿನ್ಯೇಹಿ ಮಮಾಲಯಮ್ ॥ ೧ ॥
> ಲೋಕಪಾಲಪದಂ ಪ್ರಾಪ್ತಂ ದುಷ್ಪ್ರಾಪಂ ಯತ್ಸುರೈರಪಿ ।
> ತ್ವಂ ಮಮೈಶ್ವರ್ಯಮಾಲೋಕ್ಯ ಪರಾಂ ಪ್ರೀತಿಂ ಗಮಿಷ್ಯಸಿ ॥ ೨ ॥
> ಅಹಂ ಪತ್ಯಾ ಪ್ರಜಾನಾಂ ಹಿ ವ್ಯಾದಿಷ್ಟಃ ಪಾಪನಿಗ್ರಹೇ ।
> ತಥೈವ ಚ ಪ್ರತಿಜ್ಞಾತಂ ಮಹಾಕಾರ್ಯಂ ಸದೈವ ತತ್ ॥ ೩ ॥

## ॥ ತೊಂಬತ್ತನೆಯ ಅಧ್ಯಾಯವು ॥

ಶ್ರೀ ಶೇಷದೇವರು ಹೇಳಿದರು—

ಒಂದಾನೊಂದು ಸಲ ಯಮದೇವರು ತನ್ನ ಮಾತಾಪಿತೃಗಳಾದ ಸೂರ್ಯನನ್ನೂ ಮತ್ತು ಸಂಜ್ಞಾದೇವಿಯನ್ನೂ ತನ್ನ ಲೋಕಕ್ಕೆ ಆಹ್ವಾನಿಸಿದನು. ಅದೇ ಸಂದರ್ಭದಲ್ಲಿ ಭಕ್ತಿಯಿಂದ ತನ್ನ ತಂಗಿಯಾದ ಯಮುನೆಯನ್ನು ಕುರಿತು ಈ ರೀತಿಯಾಗಿ ಪ್ರಾರ್ಥಿಸಿದನು. ''ಯಮುನೆಯೇ! ನನ್ನ ಲೋಕಕ್ಕೆ ಆಗಮಿಸು. ॥ ೧ ॥ ದೇವಶ್ರೇಷ್ಠರುಗಳಿಗೂ ದುರ್ಲಭವಾದ ಲೋಕಪಾಲತ್ವವು ನನಗೆ ಪ್ರಾಪ್ತವಾಗಿದೆ. ಈಗಿರುವ ನನ್ನ ಐಶ್ವರ್ಯವನ್ನು ನೋಡಿ ನೀನು ಪರಮ ಸಂತೋಷವನ್ನು ಹೊಂದುವೆ. ॥ ೨ ॥ ಪ್ರಜಾಪತಿಗಳಾದ ಶ್ರೀ ಬ್ರಹ್ಮದೇವರಿಂದ ಪಾಪಿಗಳನ್ನು ದಂಡಿಸಲು ಆಜ್ಞಪ್ತನಾಗಿದ್ದೇನೆ. ಅವರ ಆಜ್ಞೆಯಂತೆಯೇ ಈ ಮಹಾಕಾರ್ಯವನ್ನು ಮಾಡುವುದಾಗಿ ಅವರ ಸಮ್ಮುಖದಲ್ಲಿ ವಾಗ್ದಾನ ಮಾಡಿದ್ದೇನೆ.'' ॥ ೩ ॥

ಯಮುನೋವಾಚ—

> ಕೇ ಕೇ ತ್ವಯಾ ವಿನಿಗ್ರಾಹ್ಯಾ ಪಾಪಿನಸ್ತಾನ್ ಬ್ರವೀಹಿ ಮೇ ।
> ಶ್ರುತ್ವಾ ಯಥೇಚ್ಛಯಾ ಪಶ್ಚಾತ್ಕರಿಷ್ಯಂತ್ಯಸ್ಮಿ ಭಾಸ್ಕರೇ ॥ ೪ ॥

ಯಮುನೆಯು ಹೇಳಿದಳು—

''ಮಹಾ ಪರಾಕ್ರಮಶಾಲಿಯಾದ ಯಮನೇ! ಯಾವ ಯಾವ ಪಾಪಿಗಳನ್ನು ನೀನು ಶಿಕ್ಷಿಸುವೆ? ಇದನ್ನು ತಿಳಿದು ಯಥೇಚ್ಛವಾಗಿ ಮಾಡತಕ್ಕವಳಾಗುತ್ತೇನೆ. ॥ ೪ ॥

ಯಮ ಉವಾಚ—

> ಬ್ರಹ್ಮಹಾ ಮದ್ಯಪಶ್ಚೈವ ಸ್ವರ್ಣಹೃದ್ಗುರುತಲ್ಪಗಃ ।
> ಮಹಾಪಾಪಿನ ಏತೇ ಸ್ಯುಸ್ತತ್ಸಂಸರ್ಗೀ ಚ ಪಂಚಮಃ ॥ ೫ ॥
> ತ್ಯಕ್ತಾಧೀತಶ್ಚ ದೇವರ್ಷಿಗುರುಯಜ್ಞಾದಿನಿಂದಕಃ ।
> ನಾಸ್ತಿಕೋ ವ್ಯರ್ಥಕೃಶರಮಧುಪಾಯಸಮಾಂಸಭುಕ್ ॥ ೬ ॥

ಇತ್ಥಂ ಜನಾರ್ದನವಚಾಂಸ್ಯವಧಾರ್ಯ ಸೌರೀ
ಕೃತ್ವಾಪ್ರದಕ್ಷಿಣಮಥ ಪ್ರಣಿಪತ್ಯ ದೇವಂ ।
ಸಾನಂದಮೇತ್ಯ ಪಿತರೌ ಚ ಸಹೋದರಂ ಸಾ
ಪುಣ್ಯಾಸ್ತಪರ್ವತಗತಾ ಯಮುನಾ ವವರ್ಧ ॥ ೩೮ ॥

॥ ಇತಿ ಏಕೋನನವತಿತಮೋऽಧ್ಯಾಯಃ ॥

**ಶೇಷದೇವರು ಹೇಳಿದರು—**

ಈ ರೀತಿಯಾಗಿ ಬ್ರಹ್ಮದೇವರಿಂದ ಆದೇಶವನ್ನು ಪಡೆದ ಯಮಧರ್ಮನು ''ಹಾಗೆಯೇ ಆಗಲಿ'' ಎಂದು ಹೇಳಿ ಅವರಿಗೆ ನಮಸ್ಕರಿಸಿ ಅವರಿಂದ ಬೀಳ್ಕೊಂಡು ಅವರು ಹೇಳಿದಂತೆಯೇ ಮಾಡತೊಡಗಿದನು. ॥ ೩೪ ॥ ಶ್ರೀ ಹರಿಯಿಂದ ಯಮುನೆಯು ಸಂಸ್ಕಾರವನ್ನು ಪಡೆದು ಚೆನ್ನಾಗಿ ಉಪದಿಷ್ಟಳಾದಳು. ಶ್ರೀಹರಿಯು ಅವಳನ್ನು ಶಂಖದ ಜಲದಿಂದ ಅಭಿಷೇಕಮಾಡಿ ನಿನಗೆ ಸರಿಸಮನಾದ ಪಾವನಕರ ನದಿಯು ಇನ್ನೊಂದಿಲ್ಲವು. ॥ ೩೫ ॥ ಶೀಘ್ರವಾಗಿ ನೀನು ಇಲ್ಲಿಂದ ಹರಿದುಹೋಗಿ ಪಾಪಮಾಡಿದವರನ್ನು ಪವಿತ್ರರನ್ನಾಗಿ ಮಾಡಿ ಉದ್ಧರಿಸು. ನಿನ್ನ ಪ್ರವಾಹಕ್ಕೆ ನೀರು, ಭೂ ಪರ್ವತಗಳು, ಆಕಾಶ, ಪಾತಾಳ, ಗಾಳಿ ಮತ್ತು ಬೆಂಕಿ ಇವು ಯಾವುವೂ ನನ್ನ ಪ್ರಸಾದದ ದೆಶೆಯಿಂದ ಅಡ್ಡಿಬರುವುದಿಲ್ಲ. ಬ್ರಹ್ಮಹತ್ಯೆ ಮಾಡಿದವನಾಗಲೀ, ನಿನ್ನ ಸೇವಾಮಾಡಿದಲ್ಲಿ ಅವನನ್ನೂ ಪಾಪರಹಿತನನ್ನಾಗಿ ಮಾಡು. ॥ ೩೬-೩೭ ॥ ಸೂರ್ಯನ ಮಗಳಾದ ಯಮುನೆಯು ಈ ರೀತಿಯಾದ ಶ್ರೀ ವಿಷ್ಣುವಿನ ಮಾತುಗಳನ್ನು ಸ್ವೀಕಾರ ಮಾಡಿ, ದೇವದೇವನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಆದರದಿಂದ ತನ್ನ ತಂದೆ ತಾಯಿಯರುಗಳಾದ ಸೂರ್ಯನನ್ನೂ ಮತ್ತು ಸಂಜ್ಞಾದೇವಿಯನ್ನೂ ತನ್ನ ಅಣ್ಣನಾದ ಯಮಧರ್ಮನನ್ನೂ ವಂದಿಸಿ, ಅಲ್ಲಿಂದ ಅಸ್ತಾಚಲಾಗ್ರವನ್ನು ತಲುಪಿ, ಅಲ್ಲಿಂದ ನದಿಯಾಗಿ ಹರಿಯತೊಡಗಿದಳು. ॥ ೩೮ ॥

॥ ಎಂಬತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ನವತಿತಮೋಽಧ್ಯಾಯಃ ॥ ೯೦ ॥

**ಶೇಷ ಉವಾಚ—**

ಕದಾಚಿತ್ಸ್ವಪದಂ ಗಂತುಮಾಮಂತ್ರ್ಯ ಪಿತರೌ ಯಮಃ ।
ಯಮುನಾಮಬ್ರವೀದ್ವಕ್ತ್ಯಾ ಭಗಿನ್ಯೇಹಿ ಮಮಾಲಯಮ್ ॥ ೧ ॥
ಲೋಕಪಾಲಪದಂ ಪ್ರಾಪ್ತಂ ದುಷ್ಪ್ರಾಪಂ ಯತ್ಸುರೈರಪಿ ।
ತ್ವಂ ಮಮೈಶ್ವರ್ಯಮಾಲೋಕ್ಯ ಪರಾಂ ಪ್ರೀತಿಂ ಗಮಿಷ್ಯಸಿ ॥ ೨ ॥
ಅಹಂ ಪತ್ಯಾ ಪ್ರಜಾನಾಂ ಹಿ ವ್ಯಾದಿಷ್ಟಃ ಪಾಪನಿಗ್ರಹೇ ।
ತಥೈವ ಚ ಪ್ರತಿಜ್ಞಾತಂ ಮಹಾಕಾರ್ಯಂ ಸದೈವ ತತ್ ॥ ೩ ॥

## ॥ ತೊಂಬತ್ತನೆಯ ಅಧ್ಯಾಯವು ॥

**ಶ್ರೀ ಶೇಷದೇವರು ಹೇಳಿದರು—**

ಒಂದಾನೊಂದು ಸಲ ಯಮದೇವರು ತನ್ನ ಮಾತಾಪಿತೃಗಳಾದ ಸೂರ್ಯನನ್ನೂ ಮತ್ತು ಸಂಜ್ಞಾದೇವಿಯನ್ನೂ ತನ್ನ ಲೋಕಕ್ಕೆ ಆಹ್ವಾನಿಸಿದನು. ಅದೇ ಸಂದರ್ಭದಲ್ಲಿ ಭಕ್ತಿಯಿಂದ ತನ್ನ ತಂಗಿಯಾದ ಯಮುನೆಯನ್ನು ಕುರಿತು ಈ ರೀತಿಯಾಗಿ ಪ್ರಾರ್ಥಿಸಿದನು. ''ಯಮುನೆಯೇ! ನನ್ನ ಲೋಕಕ್ಕೆ ಆಗಮಿಸು. ॥ ೧ ॥ ದೇವಶ್ರೇಷ್ಠರುಗಳಿಗೂ ದುರ್ಲಭವಾದ ಲೋಕಪಾಲತ್ವವು ನನಗೆ ಪ್ರಾಪ್ತವಾಗಿದೆ. ಈಗಿರುವ ನನ್ನ ಐಶ್ವರ್ಯವನ್ನು ನೋಡಿ ನೀನು ಪರಮ ಸಂತೋಷವನ್ನು ಹೊಂದುವೆ. ॥ ೨ ॥ ಪ್ರಜಾಪತಿಗಳಾದ ಶ್ರೀ ಬ್ರಹ್ಮದೇವರಿಂದ ಪಾಪಿಗಳನ್ನು ದಂಡಿಸಲು ಆಜ್ಞಪ್ತನಾಗಿದ್ದೇನೆ. ಅವರ ಆಜ್ಞೆಯಂತೆಯೇ ಈ ಮಹಾಕಾರ್ಯವನ್ನು ಮಾಡುವುದಾಗಿ ಅವರ ಸಮ್ಮುಖದಲ್ಲಿ ವಾಗ್ದಾನ ಮಾಡಿದ್ದೇನೆ.'' ॥ ೩ ॥

**ಯಮುನೋವಾಚ—**

ಕೇ ಕೇ ತ್ವಯಾ ವಿನಿಗ್ರಾಹ್ಯಾ ಪಾಪಿನಸ್ತಾನ್ ಬ್ರವೀಹಿ ಮೇ ।
ಶ್ರುತ್ವಾ ಯಥೇಚ್ಛಯಾ ಪಶ್ಚಾತ್ಕರಿಷ್ಯಂತ್ಯಸ್ಮಿ ಭಾಸ್ಕರೇ ॥ ೪ ॥

**ಯಮುನೆಯು ಹೇಳಿದಳು—**

''ಮಹಾ ಪರಾಕ್ರಮಶಾಲಿಯಾದ ಯಮನೇ! ಯಾವ ಯಾವ ಪಾಪಿಗಳನ್ನು ನೀನು ಶಿಕ್ಷಿಸುವೆ? ಇದನ್ನು ತಿಳಿದು ಯಥೇಚ್ಛವಾಗಿ ಮಾಡತಕ್ಕವಳಾಗುತ್ತೇನೆ. ॥ ೪ ॥

**ಯಮ ಉವಾಚ—**

ಬ್ರಹ್ಮಹಾ ಮದ್ಯಪಶ್ಚೈವ ಸ್ವರ್ಣಹೃದ್ಗುರುತಲ್ಪಗಃ ।
ಮಹಾಪಾಪಿನ ಏತೇ ಸ್ಯುಸ್ತತ್ಸಂಸರ್ಗೀ ಚ ಪಂಚಮಃ ॥ ೫ ॥
ತ್ಯಕ್ತಾಗ್ನೀತಶ್ಚ ದೇವರ್ಷಿಗುರುಯಜ್ಞಾದಿನಿಂದಕಃ ।
ನಾಸ್ತಿಕೋ ವ್ಯರ್ಥಕೃಶರಮಧುಪಾಯಸಮಾಂಸಭುಕ್ ॥ ೬ ॥

ವಿಶ್ವಸ್ತಬಾಲಭೃತ್ಯಸ್ತ್ರೀತಪಸ್ವಿಬ್ರಹ್ಮಘಾತಕಃ ।
ಅಗಮ್ಯಗಾಮೀ ನೀತ್ಯಘ್ನಃ ಪ್ರಾಪ್ತಾತಿಥಿಪರಾಙ್ಮುಖಃ ॥ ೭ ॥
ತ್ಯಕ್ತಾದೋಷಕಲತ್ರಾದಿಃ ಸ್ತ್ರ್ಯಾದಿಶುಲ್ಕೋಪಜೀವಿನಃ ।
ಕ್ರೀತಕನ್ಯಃ ಕೃತಘ್ನಶ್ಚ ಸಾಧುದ್ವೇಷೀ ದುರಾಶಯಃ ॥ ೮ ॥
ಏತ ಉದ್ದೇಶತಃ ಪ್ರೋಕ್ತಾ ಪಾಪಿನೋ ಬಹವಃ ಪರೇ ।
ಯೇ ಭವಿಷ್ಯಂತಿ ಯಮುನೇ ನಿಗ್ರಹಿಷ್ಯಾಮಿ ತಾನಹಮ್ ॥ ೯ ॥

**ಯಮದೇವರು ಹೇಳಿದರು—**

ಬ್ರಹ್ಮಹತ್ಯೆ ಮಾಡುವವನು, ಮದ್ಯಪಾನ ಮಾಡುವವರು, ಬಂಗಾರವನ್ನು ಅಪಹಾರ ಮಾಡುವವರು ಮತ್ತು ತನ್ನ ಗುರುಗಳ ಧರ್ಮಪತ್ನಿಯೊಡನೆ ಸಂಭೋಗ ಮಾಡುವವರು; ಈ ನಾಲ್ವರ ಜೊತೆಗೆ ಸಂಪರ್ಕ ಮಾಡುವವರು ಸೇರಿ ಈ ಐವರೂ ಮಹಾ ಪಾಪಿಗಳೆಂದು ಪರಿಗಣಿಸಲ್ಪಟ್ಟಿದ್ದಾರೆ. ॥ ೫ ॥ ಅಧ್ಯಯನವನ್ನು ಬಿಟ್ಟವನು, ದೇವ, ಋಷಿ ಮತ್ತು ಯಜ್ಞಾದಿಗಳ ನಿಂದಕರು, ದೇವರಿಲ್ಲವೆಂದು ವಾದಿಸುವವರು ಅಥವಾ ತಾನೇ ದೇವರೆಂದು ಹೇಳಿಕೊಳ್ಳುವವರು, ಹವಿಸ್ಸಿಗಾಗಿ ಸಿದ್ಧವಾಗಿರುವ ಎಳ್ಳು ಜೊತೆ ಬೇಯಿಸಿದ ಅನ್ನ, ಜೇನುತುಪ್ಪ, ಪಾಯಸ, ಮಾಂಸ ಇವುಗಳನ್ನು ವ್ಯರ್ಥವಾಗಿ ಭಕ್ಷಣ ಮಾಡುವವರು, ॥ ೬ ॥ ತಮ್ಮನ್ನೇ ನಂಬಿಕೊಂಡಿರುವ ಬಾಲಕರು, ಸೇವಕರು, ಸ್ತ್ರೀಯರು, ತಪಸ್ವಿಗಳು ಮತ್ತು ಬ್ರಾಹ್ಮಣರ ಕೊಲೆಪಾತಕಿಗಳು, ಯಾರೊಡನೆ ಸಂಭೋಗಮಾಡಬಾರದೋ ಅವರೊಡನೆ ಸಂಭೋಗಮಾಡುವವರು, ಮನೆಗೆ ಬಂದ ಅತಿಥಿಗಳನ್ನು ನಿರಾದರಣೆ ಮಾಡುವವರು, ॥ ೭ ॥ ನಿರ್ದೋಷಿಯಾದ ಹೆಂಡತಿಯನ್ನು ತ್ಯಜಿಸುವವರು, ಮಗಳು, ಸೊಸೆ ಮುಂತಾದವರನ್ನು ವ್ಯಭಿಚಾರಕ್ಕೆ ಒಳಪಡಿಸಿ ಹಣ ಸಂಪಾದನೆ ಮಾಡುವವರು, ಅವಿವಾಹಿತ ಕನ್ಯೆಯರನ್ನು ಕೊಂಡುಕೊಳ್ಳುವವರು ಮತ್ತು ಮಾರುವವರು, ಕೃತಘ್ನರು, ಸಾಧುಗಳನ್ನು ದ್ವೇಷಿಸುವವರು ಮತ್ತು ದುರಾಶೆಪಡುವವರು ॥ ೮ ॥ ಹೀಗೆ ಕೆಲವು ಪಾಪಗಳನ್ನು ಉದ್ದೇಶಪೂರ್ವಕವಾಗಿ ಹೇಳಲಾಯಿತು. ಆದರೆ ಪಾಪಗಳು ಬಹಳ ಪ್ರಕಾರಗಳಲ್ಲಿವೆ. ಅಂದರೆ ಪಾಪಿಗಳೂ ಅನೇಕ ಪ್ರಕಾರದವರು. ಇವರುಗಳೆಲ್ಲರೂ ನಾನು ಮುಂದೆ ಕೊಡಲಿರುವ ಶಿಕ್ಷೆಗಳಿಗೆ ಅರ್ಹರು. ॥ ೯ ॥

**ಯಮುನೋವಾಚ—**

ಸಾಕ್ಷಾದ್ಧರ್ಮೋಽಸಿ ಜಾತಸ್ತ್ವಂ ಪಿತೃಭ್ಯಾಮಪಿ ದಾರುಣಃ ।
ಪಾಪೇಷ್ವಪ್ಯಧಿಕಂ ಕಾರ್ಯಾ ಸಮರ್ಥೈಸ್ಸತತಂ ಕೃಪಾ ॥ ೧೦ ॥
ಸ್ವಸ್ತ್ಯಸ್ತು ಗಚ್ಛ ಪಂಥಾನಃ ಶಿವಾಸ್ತೇ ಸಂತು ನಿತ್ಯಶಃ ।
ಅಹಂ ಜಲಮಯೀ ಭೂತ್ವಾ ವ್ರಜಾಮ್ಯವನಿಮಂಡಲಮ್ ॥ ೧೧ ॥
ವಿನಿಗ್ರಾಹ್ಯಾ ತ್ವಯಾ ಭ್ರಾತರ್ಯೇ ನರಾಃ ಪಾಪಕಾರಿಣಃ ।
ತಾನಹಂ ತಾರಯಿಷ್ಯಾಮಿ ನೇಷ್ಯಾಮಿ ಚ ಸುರಾಲಯಮ್ ॥ ೧೨ ॥
ಸಪ್ತದ್ವೀಪಾನ್ ಸಮುದ್ರಾಂಶ್ಚ ಪಾವಯಂತ್ಯಸ್ಸಪರ್ವತಾತ್ ।
ಗಚ್ಛಾಮ್ಯನುಜ್ಞಯಾ ವಿಷ್ಣೋರುದಯಾದ್ರಿಂ ಜಗತ್ಪತೇ ॥ ೧೩ ॥

**ಯಮುನೆಯು ಹೇಳಿದಳು—**

ಹೇ ಧರ್ಮರಾಜನೇ! ನೀನು ನಮ್ಮ ತಂದೆ ತಾಯಿಗಳಿಗೆ ಹುಟ್ಟಿದ ಸಾಕ್ಷಾತ್ ಧರ್ಮದೇವತೆಯಾಗಿದ್ದೀ. ಆದರೂ ಅವರಿಗಿಂತಲೂ ಕ್ರೂರನಾಗಿದ್ದೀ. ಸಮರ್ಥರಾದವರು ಪಾಪಿಗಳ ಮೇಲೆ ಯಾವಾಗಲೂ ಹೆಚ್ಚಿಗೆ ಕೃಪೆ ತೋರುವರು. ॥ ೧೦ ॥ ನಿನಗೆ ಮಂಗಳವಾಗಲಿ. ಹೋಗಿ ಬಾ. ನಿನಗೆ ದಾರಿಯುದ್ದಕ್ಕೂ ಮಂಗಳವಾಗಲಿ. ನಿತ್ಯವೂ ಒಳ್ಳೆಯದಾಗಲಿ. ನಾನು ಜಲರೂಪದಿಂದ ಭೂಮಂಡಲಕ್ಕೆ ಹೋಗುವೆನು. ॥ ೧೧ ॥ ಹೇ ಅಣ್ಣನೇ! ನಿನ್ನಿಂದ ನಿಗ್ರಹಮಾಡಲ್ಪಡುವ ಪಾಪಕರ್ಮಿಗಳಾದ ಮನುಷ್ಯರನ್ನು ನಾನು ಕಷ್ಟಗಳಿಂದ ದಾಟಿಸುತ್ತೇನೆ ಮತ್ತು ಸ್ವರ್ಗಲೋಕಕ್ಕೆ ಒಯ್ಯುತ್ತೇನೆ. ॥ ೧೨ ॥ ಶ್ರೀ ಮಹಾವಿಷ್ಣುವಿನ ಆಜ್ಞೆಯಿಂದ ನಾನು ಅಸ್ತಾಚಲದಿಂದ ಹೊರಟು ಏಳು ದ್ವೀಪಗಳು, ಏಳು ಸಮುದ್ರಗಳು ಇವುಗಳನ್ನು ಪಾವನಗೊಳಿಸಿ ಜಗತ್ತಿನ ಕಲ್ಯಾಣಕ್ಕಾಗಿ ಉದಯಾದ್ರಿಯವರೆಗೆ ಪ್ರವಹಿಸುತ್ತಾ ಪ್ರಯಾಣ ಮಾಡುವೆನು'' ॥ ೧೩ ॥

**ಯಮ ಉವಾಚ—**

ಇತ್ಯುಕ್ತಸ್ಸ ತಯಾ ಭ್ರಾತಾ ಯಮುನಾಮಬ್ರವೀದ್ವಚಃ ।
ಯಮುನೇ ಕೃಪಯಾ ಪಾಪಾನವಶ್ಯಂ ತಾರಯಿಷ್ಯಸಿ ॥ ೧೪ ॥
ತ್ವಯಾ ಸಹಾಹಂ ಜಾತೋ ಹಿ ಕೃಪಾ ಕಾರ್ಯಾ ಸದಾ ಮಯಿ ।
ಆದಿಷ್ಟಂ ಗಚ್ಛ ಪಂಥಾನಂ ಯಥೇಚ್ಛಂ ಕುರು ಪಾವನಿ ॥ ೧೫ ॥
ಅಪ್ಯಂಬುಮಾತ್ರದಾನೇನ ಸತ್ಕಾರ್ಯೋಽಹಂ ತ್ವಯಾ ಸ್ವಸಃ ।
ಅಹಂ ಚ ತ್ವದ್ಗೃಹಂ ಯಾಸ್ಯೇ ಪ್ರತಿಸಂವತ್ಸರಂ ಸಕೃತ್ ॥ ೧೬ ॥

**ಯಮದೇವರು ಹೇಳಿದರು—**

ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ ಅಣ್ಣನಾದ ಯಮನು ತಂಗಿ ಯಮುನೆಯನ್ನು ಕುರಿತು ಹೇಳಿದನು. ''ಎಲೈ ಯಮುನೆಯೇ! ನೀನು ಕೃಪೆಮಾಡಿ ಪಾಪಿಗಳನ್ನು ಅವಶ್ಯವಾಗಿ ಕಷ್ಟದಿಂದ ಪಾರುಮಾಡು. ॥ ೧೪ ॥ ಈ ರೀತಿಯಾಗಿ ನೀನು ಸಹಾಯ ಮಾಡುತ್ತಾ ನನ್ನ ಮೇಲೆ ಕೃಪೆ ಮಾಡು. ನಿನ್ನ ದಾರಿಯನ್ನು ಹಿಡಿದು ನೀನು ಹೋಗು. ನಿನಗೆ ಅಣ್ಣನಾದ ನನ್ನ ಅನುಮತಿಯಿದೆ. ನಿನ್ನ ಇಚ್ಛೆಯಂತೆ ಪಾಪಿಗಳನ್ನು ಪಾವನಗೊಳಿಸು. ॥ ೧೫ ॥ ಎಲೈ ತಂಗಿಯೇ! ನಿನ್ನ ನೀರನ್ನು ನರರು ತರ್ಪಣ ಅಥವಾ ಅರ್ಘ್ಯರೂಪದಿಂದ ಕೊಡುವುದರಿಂದಲೇ ನಾನು ನಿನ್ನಿಂದ ಸತ್ಕರಿಸಲ್ಪಡುತ್ತೇನೆ. ನಾನು ವರ್ಷದಲ್ಲಿ ಒಂದು ದಿನ ನಿನ್ನ ಮನೆಯಲ್ಲಿ ಇರುವೆನು''. ॥ ೧೬ ॥

**ಯಮುನೋವಾಚ—**

ಏವಮಸ್ತು ಮದಾಂಭೋಭಿಃ ಸ್ನಾತ್ವಾ ಯಸ್ತ್ವಾಂ ದೃಢವ್ರತಃ ।
ದಶಭಿಶ್ಚ ಚತುರ್ಭಿಶ್ಚ ತರ್ಪಯಿಷ್ಯಂತಿ ನಾಮಭಿಃ ॥ ೧೭ ॥
ತೇನ ಹಿಂಸಾಪರೋ ನಿತ್ಯಂ ಹೃತಕಲ್ಮೋಭವಿಷ್ಯತಿ ।
ನಿರಾತಂಕಾ ಭವಿಷ್ಯಂತಿ ಭವತೋ ಯೇಽಪಿ ಪಾಪಿನಃ ॥ ೧೮ ॥

ವಿಶ್ವಸ್ತಬಾಲಭೃತ್ಯಸ್ತ್ರೀತಪಸ್ವಿಬ್ರಹ್ಮಘಾತಕಃ ।
ಅಗಮ್ಯಗಾಮೀ ನೀತ್ಯಘ್ನಃ ಪ್ರಾಪ್ತಾತಿಥಿಪರಾಙ್ಮುಖಃ ॥ ೭ ॥
ತ್ಯಕ್ತಾದೋಷಕಲತ್ರಾದಿಃ ಸ್ತ್ರ್ಯಾದಿಶುಕ್ಲೋಪಜೀವಿನಃ ।
ಕ್ರೀತಕನ್ಯಃ ಕೃತಘ್ನಶ್ಚ ಸಾಧುದ್ವೇಷೀ ದುರಾಶಯಃ ॥ ೮ ॥
ಏತ ಉದ್ದೇಶತಃ ಪ್ರೋಕ್ತಾ ಪಾಪಿನೋ ಬಹವಃ ಪರೇ ।
ಯೇ ಭವಿಷ್ಯಂತಿ ಯಮುನೇ ನಿಗ್ರಹಿಷ್ಯಾಮಿ ತಾನಹಮ್ ॥ ೯ ॥

ಯಮದೇವರು ಹೇಳಿದರು—

ಬ್ರಹ್ಮಹತ್ಯೆ ಮಾಡುವವನು, ಮದ್ಯಪಾನ ಮಾಡುವವರು, ಬಂಗಾರವನ್ನು ಅಪಹಾರ ಮಾಡುವವರು ಮತ್ತು ತನ್ನ ಗುರುಗಳ ಧರ್ಮಪತ್ನಿಯೊಡನೆ ಸಂಭೋಗ ಮಾಡುವವರು; ಈ ನಾಲ್ವರ ಜೊತೆಗೆ ಸಂಪರ್ಕ ಮಾಡುವವರು ಸೇರಿ ಈ ಐವರೂ ಮಹಾ ಪಾಪಿಗಳೆಂದು ಪರಿಗಣಿಸಲ್ಪಟ್ಟಿದ್ದಾರೆ. ॥ ೫ ॥ ಅಧ್ಯಯನವನ್ನು ಬಿಟ್ಟವನು, ದೇವ, ಋಷಿ ಮತ್ತು ಯಜ್ಞಾದಿಗಳ ನಿಂದಕರು, ದೇವರಿಲ್ಲವೆಂದು ವಾದಿಸುವವರು ಅಥವಾ ತಾನೇ ದೇವರೆಂದು ಹೇಳಿಕೊಳ್ಳುವವರು, ಹವಿಸ್ಸಿಗಾಗಿ ಸಿದ್ಧವಾಗಿರುವ ಎಳ್ಳು ಜೊತೆ ಬೇಯಿಸಿದ ಅನ್ನ, ಜೇನುತುಪ್ಪ, ಪಾಯಸ, ಮಾಂಸ ಇವುಗಳನ್ನು ವ್ಯರ್ಥವಾಗಿ ಭಕ್ಷಣ ಮಾಡುವವರು, ॥ ೬ ॥ ತಮ್ಮನ್ನೇ ನಂಬಿಕೊಂಡಿರುವ ಬಾಲಕರು, ಸೇವಕರು, ಸ್ತ್ರೀಯರು, ತಪಸ್ವಿಗಳು ಮತ್ತು ಬ್ರಾಹ್ಮಣರ ಕೊಲೆಪಾತಕಿಗಳು, ಯಾರೊಡನೆ ಸಂಭೋಗಮಾಡಬಾರದೋ ಅವರೊಡನೆ ಸಂಭೋಗಮಾಡುವವರು, ಮನೆಗೆ ಬಂದ ಅತಿಥಿಗಳನ್ನು ನಿರಾದರಣೆ ಮಾಡುವವರು, ॥ ೭ ॥ ನಿರ್ದೋಷಿಯಾದ ಹೆಂಡತಿಯನ್ನು ತ್ಯಜಿಸುವವರು, ಮಗಳು, ಸೊಸೆ ಮುಂತಾದವರನ್ನು ವ್ಯಭಿಚಾರಕ್ಕೆ ಒಳಪಡಿಸಿ ಹಣ ಸಂಪಾದನೆ ಮಾಡುವವರು, ಅವಿವಾಹಿತ ಕನ್ಯೆಯರನ್ನು ಕೊಂಡುಕೊಳ್ಳುವವರು ಮತ್ತು ಮಾರುವವರು, ಕೃತಘ್ನರು, ಸಾಧುಗಳನ್ನು ದ್ವೇಷಿಸುವವರು ಮತ್ತು ದುರಾಶೆಪಡುವವರು ॥ ೮ ॥ ಹೀಗೆ ಕೆಲವು ಪಾಪಗಳನ್ನು ಉದ್ದೇಶಪೂರ್ವಕವಾಗಿ ಹೇಳಲಾಯಿತು. ಆದರೆ ಪಾಪಗಳು ಬಹಳ ಪ್ರಕಾರಗಳಲ್ಲಿವೆ. ಅಂದರೆ ಪಾಪಿಗಳೂ ಅನೇಕ ಪ್ರಕಾರದವರು. ಇವರುಗಳೆಲ್ಲರೂ ನಾನು ಮುಂದೆ ಕೊಡಲಿರುವ ಶಿಕ್ಷೆಗಳಿಗೆ ಅರ್ಹರು. ॥ ೯ ॥

ಯಮುನೋವಾಚ—

ಸಾಕ್ಷಾದ್ಧರ್ಮೋಽಸಿ ಜಾತಸ್ತ್ವಂ ಪಿತೃಭ್ಯಾಮಪಿ ದಾರುಣಃ ।
ಪಾಪೇಷ್ವಪ್ಯಧಿಕಂ ಕಾರ್ಯಾ ಸಮರ್ಥೈಸ್ಸತತಂ ಕೃಪಾ ॥ ೧೦ ॥
ಸ್ವಸ್ತ್ಯಸ್ತು ಗಚ್ಛ ಪಂಥಾನಃ ಶಿವಾಸ್ತೇ ಸಂತು ನಿತ್ಯಶಃ ।
ಅಹಂ ಜಲಮಯೀ ಭೂತ್ವಾ ವ್ರಜಾಮ್ಯವನಿಮಂಡಲಮ್ ॥ ೧೧ ॥
ವಿನಿಗ್ರಾಹ್ಯಾ ತ್ವಯಾ ಭ್ರಾತರ್ಯೇ ನರಾಃ ಪಾಪಕಾರಿಣಃ ।
ತಾನಹಂ ತಾರಯಿಷ್ಯಾಮಿ ನೇಷ್ಯಾಮಿ ಚ ಸುರಾಲಯಮ್ ॥ ೧೨ ॥
ಸಪ್ತದ್ವೀಪಾನ್ ಸಮುದ್ರಾಂಶ್ಚ ಪಾವಯಂತ್ಯಸ್ತಪರ್ವತಾತ್ ।
ಗಚ್ಛಾಮ್ಯನುಜ್ಞಯಾ ವಿಷ್ಣೋರುದಯಾದ್ರಿಂ ಜಗತ್ಯತೇ ॥ ೧೩ ॥

**ಯಮುನೆಯು ಹೇಳಿದಳು—**

ಹೇ ಧರ್ಮರಾಜನೇ! ನೀನು ನಮ್ಮ ತಂದೆ ತಾಯಿಗಳಿಗೆ ಹುಟ್ಟಿದ ಸಾಕ್ಷಾತ್ ಧರ್ಮದೇವತೆಯಾಗಿದ್ದೀ. ಆದರೂ ಅವರಿಗಿಂತಲೂ ಕ್ರೂರನಾಗಿದ್ದೀ. ಸಮರ್ಥರಾದವರು ಪಾಪಿಗಳ ಮೇಲೆ ಯಾವಾಗಲೂ ಹೆಚ್ಚಿಗೆ ಕೃಪೆ ತೋರುವರು. ॥ ೧೦ ॥ ನಿನಗೆ ಮಂಗಳವಾಗಲಿ. ಹೋಗಿ ಬಾ. ನಿನಗೆ ದಾರಿಯುದ್ದಕ್ಕೂ ಮಂಗಳವಾಗಲಿ. ನಿತ್ಯವೂ ಒಳ್ಳೆಯದಾಗಲಿ. ನಾನು ಜಲರೂಪದಿಂದ ಭೂಮಂಡಲಕ್ಕೆ ಹೋಗುವೆನು. ॥ ೧೧ ॥ ಹೇ ಅಣ್ಣನೇ! ನಿನ್ನಿಂದ ನಿಗ್ರಹಮಾಡಲ್ಪಡುವ ಪಾಪಕರ್ಮಿಗಳಾದ ಮನುಷ್ಯರನ್ನು ನಾನು ಕಷ್ಟಗಳಿಂದ ದಾಟಿಸುತ್ತೇನೆ ಮತ್ತು ಸ್ವರ್ಗಲೋಕಕ್ಕೆ ಒಯ್ಯುತ್ತೇನೆ. ॥ ೧೨ ॥ ಶ್ರೀ ಮಹಾವಿಷ್ಣುವಿನ ಆಜ್ಞೆಯಿಂದ ನಾನು ಅಸ್ತಾಚಲದಿಂದ ಹೊರಟು ಏಳು ದ್ವೀಪಗಳು, ಏಳು ಸಮುದ್ರಗಳು ಇವುಗಳನ್ನು ಪಾವನಗೊಳಿಸಿ ಜಗತ್ತಿನ ಕಲ್ಯಾಣಕ್ಕಾಗಿ ಉದಯಾದ್ರಿಯವರೆಗೆ ಪ್ರವಹಿಸುತ್ತಾ ಪ್ರಯಾಣ ಮಾಡುವೆನು'' ॥ ೧೩ ॥

**ಯಮ ಉವಾಚ—**

ಇತ್ಯುಕ್ತಸ್ತ ತಯಾ ಭ್ರಾತಾ ಯಮುನಾಮಬ್ರವೀದ್ವಚಃ ।
ಯಮುನೇ ಕೃಪಯಾ ಪಾಪಾನವಶ್ಯಂ ತಾರಯಿಷ್ಯಸಿ ॥ ೧೪ ॥
ತ್ವಯಾ ಸಹಾಹಂ ಜಾತೋ ಹಿ ಕೃಪಾ ಕಾರ್ಯಾ ಸದಾ ಮಯಿ ।
ಆದಿಷ್ಟಂ ಗಚ್ಛ ಪಂಥಾನಂ ಯಥೇಚ್ಛಂ ಕುರು ಪಾವನಿ ॥ ೧೫ ॥
ಅರ್ಘ್ಯಂಬುಮಾತ್ರದಾನೇನ ಸತ್ಕಾರ್ಯೋಽಹಂ ತ್ವಯಾ ಸ್ವಸಃ ।
ಅಹಂ ಚ ತ್ವದ್ಗೃಹಂ ಯಾಸ್ಯೇ ಪ್ರತಿಸಂವತ್ಸರಂ ಸಕೃತ್ ॥ ೧೬ ॥

**ಯಮದೇವರು ಹೇಳಿದರು—**

ಈ ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟ ಅಣ್ಣನಾದ ಯಮನು ತಂಗಿ ಯಮುನೆಯನ್ನು ಕುರಿತು ಹೇಳಿದನು. ''ಎಲೈ ಯಮುನೆಯೇ! ನೀನು ಕೃಪೆಮಾಡಿ ಪಾಪಿಗಳನ್ನು ಅವಶ್ಯವಾಗಿ ಕಷ್ಟದಿಂದ ಪಾರುಮಾಡು. ॥ ೧೪ ॥ ಈ ರೀತಿಯಾಗಿ ನೀನು ಸಹಾಯ ಮಾಡುತ್ತಾ ನನ್ನ ಮೇಲೆ ಕೃಪೆ ಮಾಡು. ನಿನ್ನ ದಾರಿಯನ್ನು ಹಿಡಿದು ನೀನು ಹೋಗು. ನಿನಗೆ ಅಣ್ಣನಾದ ನನ್ನ ಅನುಮತಿಯಿದೆ. ನಿನ್ನ ಇಚ್ಛೆಯಂತೆ ಪಾಪಿಗಳನ್ನು ಪಾವನಗೊಳಿಸು. ॥ ೧೫ ॥ ಎಲೈ ತಂಗಿಯೇ! ನಿನ್ನ ನೀರನ್ನು ನರರು ತರ್ಪಣ ಅಥವಾ ಅರ್ಘ್ಯರೂಪದಿಂದ ಕೊಡುವುದರಿಂದಲೇ ನಾನು ನಿನ್ನಿಂದ ಸತ್ಕರಿಸಲ್ಪಡುತ್ತೇನೆ. ನಾನು ವರ್ಷದಲ್ಲಿ ಒಂದು ದಿನ ನಿನ್ನ ಮನೆಯಲ್ಲಿ ಇರುವೆನು''. ॥ ೧೬ ॥

**ಯಮುನೋವಾಚ—**

ಏವಮಸ್ತು ಮದಾಂಭೋಭಿಃ ಸ್ನಾತ್ವಾ ಯಸ್ತ್ವಾಂ ದೃಢವ್ರತಃ ।
ದಶಭಿಶ್ಚ ಚತುರ್ಭಿಶ್ಚ ತರ್ಪಯಿಷ್ಯಂತಿ ನಾಮಭಿಃ ॥ ೧೭ ॥
ತೇನ ಹಿಂಸಾಪರೋ ನಿತ್ಯಂ ಹೃತಕಲ್ಮೋಽಭವಿಷ್ಯತಿ ।
ನಿರಾತಂಕಾ ಭವಿಷ್ಯಂತಿ ಭವತೋ ಯೇಽಪಿ ಪಾಪಿನಃ ॥ ೧೮ ॥

**ಯಮುನೆಯು ಹೇಳಿದಳು—**

"ಈ ರೀತಿಯಾಗೇ ಆಗಲಿ. ನನ್ನ ಪ್ರವಾಹದಲ್ಲಿ ಸ್ನಾನಮಾಡಿ, ದೃಢವಾದ ವ್ರತದೀಕ್ಷೆಯಿಂದ ನಿನ್ನ ಹತ್ತು ನಾಮಗಳಿಂದಲಾಗಲೀ ಅಥವಾ ನಾಲ್ಕು ನಾಮಗಳಿಂದಾಗಲೀ ತರ್ಪಣವನ್ನು ಕೊಡತಕ್ಕವರು ಎಷ್ಟೇ ಹಿಂಸಾಚಾರವುಳ್ಳವರಾಗಿದ್ದರೂ ಅವರ ಕಳಂಕಗಳು ಹೋಗಿ ಅವರ ಆತಂಕಗಳೆಲ್ಲಾ ಪರಿಹಾರವಾಗುವುವು." ॥ ೧೭-೧೮ ॥

ಇತ್ಯನ್ಯೋನ್ಯಂ ಸಮಾಭಾಷ್ಯ ಕೃತ್ವಾ ಸಂವಿದಮಪ್ಯುಭೌ ।
ಯಥೋಕ್ತಸಾಧನೌ ದೇವೌ ಪ್ರಯಾತೌ ಯಮುನಾಯಮೌ ॥ ೧೯ ॥
ಯಮೋ ಯಾಮ್ಯಾಂ ಪುರೀಂ ಗತ್ವಾ ಯಾತನಾಭಿರಧಾರ್ಮಿಕಾನ್ ।
ಯಾತಯಾಮಾಸ ಸತತಂ ತತೋ ದಾರುಣಕರ್ಮಭಿಃ ॥ ೨೦ ॥
ಯಮುನಾಂಬುವಪುರ್ಭೂತ್ವಾ ಪುಣ್ಯತೋಯಾಭಿನಾಮಿನೀ ।
ವೈಷ್ಣವಂ ಯೋಗಮಾಸ್ಥಾಯ ಸಾವತೀರ್ಣಾಸ್ತಪರ್ವತಾತ್ ॥ ೨೧ ॥
ಅರ್ಘ್ಯಾದಿಕೃತಸತ್ಕಾರಾ ಭಿತ್ವಾ ಚಾಂಬುನಿಧಿಂ ತತಃ ।
ಸಂಪ್ರಾಪ್ಯ ಪುಷ್ಕರದ್ವೀಪಂ ಪುಷ್ಕರದ್ವೀಪವಾಸಿಭಿಃ ॥ ೨೨ ॥
ಪೂಜ್ಯಮಾನಾ ವಿವೇಶಾಶು ಕ್ಷೀರಾಬ್ಧಿಂ ತೇನ ಸತ್ಕೃತಾ ।
ನಿರ್ಗತ್ಯಾಥ ಗತಾ ಪುಣ್ಯಾ ಶಾಕದ್ವೀಪಮಧಿಷ್ಠಿತಾ ॥ ೨೩ ॥
ತಮುತ್ತೀರ್ಯ ಗತಾ ದೇವೀ ದಧ್ಯಬ್ಧಿಮಭಿನಂದಿತಾ ।
ತೇನ ಸಂಪೂಜಿತಾ ಭಕ್ತ್ಯಾ ಕ್ರೌಂಚದ್ವೀಪಮಥಾವಿಶತ್ ॥ ೨೪ ॥
ತದ್ವಾಸಿಭಿಃ ಸ್ತುತಾ ಸರ್ಪಿಸ್ಸಮುದ್ರಮವತೀರ್ಯ ಚ ।
ಕೃತಾರ್ಘ್ಯಾ ತೇನ ನಿಷ್ಕ್ರಮ್ಯ ಕುಶದ್ವೀಪಮಭೂಷಯತ್ ॥ ೨೫ ॥
ತದಾಲಯೈರರ್ಚಿತಾಥ ಸುರೋದಧಿಮಥಾವಿಶತ್ ।
ತೇನಾದೃತಾಽಥ ಭಿತ್ವಾತಂ ಶಾಲ್ಮಲೀದ್ವೀಪಮಾಶ್ರಿತಾ ॥ ೨೬ ॥
ತದಾಶ್ರಿತೈಸ್ಸೇವಿತಾಽಥ ಪ್ರವಿಷ್ಟೇಕ್ಷುರಸೋದಧಿಂ ।
ತೇನಾಪಿ ಮೂರ್ಧ್ನಿ ವಿಧೃತಾ ಪ್ಲಕ್ಷದ್ವೀಪಮಥಾಗತಾ ॥ ೨೭ ॥
ತತ್ರಸ್ಥಜನವೃಂದೇನ ಕೃತಾರ್ಘ್ಯೇಯಂ ಯಥಾವಿಧಿ ।
ಲವಣಾಬ್ಧಿಂ ಸಮಾಗತ್ಯ ತತ್ಪೂಜಾಂ ಪ್ರತಿಗೃಹ್ಯ ಚ ॥ ೨೮ ॥
ಸಂಪ್ರಾಪ್ತಾ ಭಾರತಂ ವರ್ಷಂ ಜಂಬೂದ್ವೀಪಸ್ಯ ದಕ್ಷಿಣಂ ।
ಕರ್ಮಕ್ಷೇತ್ರಮಧರ್ಮಿಷ್ಠಧರ್ಮಿಷ್ಠಜನಮಿಶ್ರಿತಮ್ ॥ ೨೯ ॥
ಪದೇ ಪದೇ ಕೃತಾರ್ಘ್ಯಾ ಸಾ ಬ್ರಹ್ಮಕ್ಷೇತ್ರೇ ದ್ವಿಜಾತಿಭಿಃ ।
ಪುನಃ ಕ್ಷೀರಾಬ್ಧಿಮಾಸಾದ್ಯ ಪ್ಲಕ್ಷ ದ್ವೀಪಂ ಚ ಪಾವನೀ ॥ ೩೦ ॥
ತಥೇಕ್ಷುಸಾಗರಂ ಸೌರೀ ಶಾಲ್ಮಲೀ ದ್ವೀಪಮೇವ ಚ ।
ಸುರಾಬ್ಧಿಂ ಚ ಕುಶದ್ವೀಪಂ ಘೃತೋದಂ ಕ್ರೌಂಚಸಂಜ್ಞಿತಮ್ ॥ ೩೧ ॥

ದ್ವೀಪಂ ಚ ದಧಿಮಣ್ಡೋದಂ ಶಾಕದ್ವೀಪಂ ಪಯೋನಿಧಿಮ್ ।
ದ್ವೀಪಂ ಪುಷ್ಕರಸಂಜ್ಞಂ ಚ ಸ್ವಾದೂದಕಮಥಾರ್ಣವಮ್ ॥ ೩೨ ॥
ಭಿತ್ವಾ ಯಥಾಕ್ರಮಂ ಸೌರೀ ಪಾವಯಿತ್ವಾ ಚ ಸರ್ವಶಃ ।
ಲೋಕಾಲೋಕಗಿರೇಃ ಶೃಂಗಂ ಸಮಾಸಾದ್ಯೋದಯಾಚಲಮ್ ॥ ೩೩ ॥
ವಿವೇಶೋಷಸಿ ತಿಗ್ಮಾಂಶುಂ ನಿರ್ಮಲಾ ಸಾ ತ್ರಯೀಮಯೀ ।
ಮಾತರಂ ಪಿತರಂ ಪ್ರೀತ್ಯಾ ತೋಷಯಾಮಾಸ ಪಾವನೀ ॥ ೩೪ ॥
ಇತ್ಥಂ ದಿನೇಶತನಯಾ ಭಿತ್ವಾ ಸಪ್ತೋದಧೀನ್ಸರಿತ್ ।
ಸಪ್ತದ್ವೀಪಾಂಶ್ಚ ಸತತಂ ವರ್ತತೇ ಸಾ ಯಮಸ್ವಸಾ ॥ ೩೫ ॥

ಹೀಗೆ ಅನ್ಯೋನ್ಯವಾಗಿ ಮಾತನಾಡಿಕೊಂಡು, ಒಂದು ಅರಿವುಳ್ಳ ಒಪ್ಪಂದಕ್ಕೆ ಬಂದು ಈ ಇಬ್ಬರು ಯಮ, ಯಮುನಾ ಎಂಬ ದೇವತೆಗಳು ಹಿಂದೆ ತಿಳಿಸಿರುವ ಸಾಧನ ಸಂಪತ್ತುಳ್ಳವರಾಗಿ ಅಲ್ಲಿಂದ ತಮ್ಮ ತಮ್ಮ ಕಾರ್ಯಕ್ಷೇತ್ರಗಳಿಗೆ ತೆರಳಿದರು. ॥ ೧೯ ॥ ಯಮಧರ್ಮನಾದರೋ ತನ್ನ ಯಮಲೋಕಕ್ಕೆ ಹೋಗಿ ಅಧರ್ಮಿಷ್ಠರನ್ನು ದಾರುಣವಾದ ಯಾತನೆಗಳಿಂದ ಯಾವಾಗಲೂ ಹಿಂಸಿಸಿದನು. ॥ ೨೦ ॥ ಯಮುನಾದೇವಿಯಾದರೋ ಜಲದ ರೂಪವನ್ನು ತಾಳಿ ''ಪುಣ್ಯತೋಯಾ'' (ಪುಣ್ಯದ ನೀರುಳ್ಳವಳು) ಎಂಬ ಹೆಸರುಳ್ಳವಳಾಗಿ ವಿಷ್ಣು ಸಂಬಂಧವಾದ ಯೋಗದೀಕ್ಷೆ ಉಳ್ಳವಳಾಗಿ, ಅಸ್ತಾಚಲದಿಂದ ಕೆಳಕ್ಕೆ ಇಳಿದಳು. ಹಾಗೇ ಹರಿಯುತ್ತಾ ಹೋಗಿ ಅಲ್ಲಲ್ಲೇ ಅರ್ಘ್ಯಾದಿಗಳಿಂದ ಸತ್ಕೃತಳಾಗಿ ಸಮುದ್ರವನ್ನು ಸೇರಿ ಅದನ್ನು ಭೇದಿಸಿ ಪುಷ್ಕರದ್ವೀಪವನ್ನು ಪ್ರವೇಶಿಸಿದಳು. ಅಲ್ಲಿ ಪುಷ್ಕರದ್ವೀಪವಾಸಿಗಳಿಂದ ಪೂಜಾಮಾಡಿಸಿಕೊಂಡು ನಂತರ ಕ್ಷೀರ ಸಮುದ್ರವನ್ನು ಹೊಕ್ಕಳು, ಅಲ್ಲಿ ಕ್ಷೀರ ಸಮುದ್ರರಾಜನಿಂದ ಸತ್ಕೃತಳಾಗಿ ಅಲ್ಲಿಂದ ಹೊರಟು ಶಾಕ ದ್ವೀಪಕ್ಕೆ ಬಂದಳು. ಅನಂತರ ದಧಿ ಸಮುದ್ರಕ್ಕೆ ಬಂದಳು. ಅಲ್ಲಿ ಸತ್ಕಾರ ಮಾಡಿಸಿಕೊಂಡು ಅಲ್ಲಿಂದ ಕ್ರೌಂಚ ದ್ವೀಪಕ್ಕೆ ಬಂದಳು. ಅಲ್ಲಿ ಸ್ತೋತ್ರ ಮಾಡಿಸಿಕೊಂಡು ಅಲ್ಲಿಂದ ಘೃತ ಸಮುದ್ರಕ್ಕೆ ಬಂದಳು. ಇಲ್ಲಿ ಅರ್ಘ್ಯಾದಿಗಳನ್ನು ಕೊಟ್ಟು ಅವಳನ್ನು ಪೂಜಿಸಿದರು. ಅನಂತರ ಅಲ್ಲಿಂದ ಹೊರಟು ಕುಶದ್ವೀಪಕ್ಕೆ ಆಗಮಿಸಿದಳು. ಅಲ್ಲಿರುವವರಿಂದ ಪೂಜಿತಳಾಗಿ ಅವಳು ಸುರಾ ಸಮುದ್ರವನ್ನು ಹೊಕ್ಕಳು. ಅಲ್ಲಿಯೂ ಸತ್ಕೃತಳಾಗಿ ನಂತರ ಶಾಲ್ಮಲೀದ್ವೀಪವನ್ನು ಸೇರಿದಳು. ಅಲ್ಲಿರುವವರಿಂದ ಆದರ ಹೊಂದಿದ ಯಮುನೆಯು ಕಬ್ಬಿನ ರಸದ ಸಮುದ್ರವನ್ನು ಹೊಕ್ಕಳು. ಅಲ್ಲಿಯೂ ಆದರವನ್ನು ಪಡೆದು ಪ್ಲಕ್ಷದ್ವೀಪವನ್ನು ಪ್ರವೇಶಿಸಿದಳು. ಅಲ್ಲಿರುವ ಜನಸ್ತೋಮಗಳಿಂದ ಅರ್ಘ್ಯ, ಪಾದ್ಯಾದಿಗಳನ್ನು ಸ್ವೀಕರಿಸಿ ಅಲ್ಲಿಂದ ಲವಣ ಸಮುದ್ರಕ್ಕೆ ಬಂದಳು. ಅಲ್ಲಿಯೂ ಪೂಜಾದಿಗಳನ್ನು ಹೊಂದಿ ಜಂಬೂದ್ವೀಪದ ದಕ್ಷಿಣಕ್ಕಿರುವ ಭಾರತದೇಶಕ್ಕೆ ಬಂದಳು. ಈ ಭಾರತ ದೇಶವು ಧರ್ಮಿಷ್ಠರಿಂದಲೂ, ಅಧರ್ಮಿಷ್ಠರಿಂದಲೂ ತುಂಬಿರುವ ಮಿಶ್ರ ದೇಶ. ಬ್ರಹ್ಮಕ್ಷೇತ್ರವೆಂದೆನಿಸಿಕೊಂಡಿರುವ ಇಲ್ಲಿ ಬ್ರಾಹ್ಮಣರುಗಳು ಹೆಜ್ಜೆ ಹೆಜ್ಜೆಗೂ ಅರ್ಘ್ಯಾದಿಗಳಿಂದ ಆರಾಧಿಸಿದರು. ಅಲ್ಲಿಂದ ಲವಣ ಸಮುದ್ರದ ಮೂಲಕ ಪುನಃ ಪ್ಲಕ್ಷದ್ವೀಪಕ್ಕೆ ಬಂದಳು. ॥ ೨೧-೩೦ ॥ ಹಾಗೆಯೇ ಇಕ್ಷು ಸಮುದ್ರಕ್ಕೂ, ಅದರ ಮೂಲಕ ಶಾಲ್ಮಲೀ ದ್ವೀಪಕ್ಕೂ ಅಲ್ಲಿಂದ ಸುರಾಸಮುದ್ರವನ್ನೂ, ಕುಶದ್ವೀಪವನ್ನೂ ನಂತರ ತುಪ್ಪದ ಸಮುದ್ರವನ್ನೂ ನಂತರ ಕ್ರೌಂಚದ್ವೀಪವನ್ನೂ ಅಲ್ಲಿಂದ ಮೊಸರು ಸಮುದ್ರವನ್ನೂ ಅನಂತರ ಶಾಕದ್ವೀಪವನ್ನೂ ಅಲ್ಲಿಂದ

ಕ್ಷೀರ ಸಾಗರವನ್ನೂ, ನಂತರ ಪುಷ್ಕರ ದ್ವೀಪವನ್ನೂ ನಂತರ ಸಿಹಿನೀರಿನ ಸಮುದ್ರವನ್ನೂ ಪ್ರವೇಶಿಸಿದಳು. ಈ ರೀತಿಯಾಗಿ ಎಲ್ಲವನ್ನೂ ಪವಿತ್ರಗೊಳಿಸುತ್ತಾ, ಲೋಕಾಲೋಕಪರ್ವತದ ಶಿಖರವನ್ನೂ ಹೊಕ್ಕು ಅಲ್ಲಿಂದ ಉದಯಾಚಲಕ್ಕೆ ಬಂದಳು. ನಂತರ ನಿರ್ಮಲಳಾಗಿರತಕ್ಕ ಈ ಯಮುನೆಯು ಉಷಃಕಾಲದಲ್ಲಿ ಉಜ್ವಲ ಉಷ್ಣಕಿರಣರಾಶಿಗಳಿಂದ ಬೆಳಗುತ್ತಿರುವ ತನ್ನ ತಂದೆ ಸೂರ್ಯದೇವನನ್ನೂ ಮತ್ತು ತಾಯಿಯಾದ ಸಂಜ್ಞಾದೇವಿಯನ್ನೂ ಸಂಧಿಸಿ ಅವರನ್ನು ವಂದಿಸಿ ಸಂತೋಷಪಡಿಸಿದಳು. ಈ ರೀತಿಯಾಗಿ ಸೂರ್ಯನ ಮಗಳಾದ ಯಮುನೆಯು ಏಳು ಸಮುದ್ರಗಳನ್ನೂ ಮತ್ತು ಏಳು ದ್ವೀಪಗಳನ್ನೂ ಪ್ರವೇಶಮಾಡಿ ಅಲ್ಲೆಲ್ಲಾ ಯಾವಾಗಲೂ ಇದ್ದಾಳೆ. ॥ ೩೧-೩೫ ॥

**ಮುನಯ ಊಚುಃ—**

ವಿಚಿತ್ರಮಿದಮಾಖ್ಯಾತಂ ಮಾಹಾತ್ಮ್ಯಂ ಶಮನಸ್ವಸುಃ ।
ಭಗವಂಸ್ತತ್ಸ್ವರೂಪಂ ತು ಶ್ರೋತುಮಿಚ್ಛಾಮಹೇ ವಯಮ್ ॥ ೩೬ ॥

**ಸನಕಾದಿಮುನಿಗಳು ಹೇಳಿದರು—**

"ಯಮನ ತಂಗಿಯ ಈ ಆಖ್ಯಾನವು ಬಹಳ ವಿಚಿತ್ರವಾಗಿದೆ. ಅವಳ ಮಾಹಾತ್ಮ್ಯೆಯೂ ಅಷ್ಟೇ. ಎಲೈ, ಪೂಜ್ಯರೆ! ಈ ಯಮುನೆಯ ಸ್ವರೂಪವನ್ನು ತಿಳಿಯಬಯಸುತ್ತೇವೆ." ಎಂದು ಪ್ರಾರ್ಥಿಸಿದರು. ॥ ೩೬ ॥

**ಶೇಷ ಉವಾಚ—**

ತ್ರಯ್ಯೇಷಾ ಋಗ್ಯಜುಃ ಸಾಮ್ನಾಮಾದಿತ್ಯ ಇತಿ ಗೀಯತೇ ।
ತತ್ಸ್ವರೂಪಾ ಜಗತ್ಕರ್ಮಸಂತಾನೈಕಪ್ರವರ್ತಿಕಾ ॥ ೩೭ ॥
ರಸೋ ಯಃ ಪರಮಾಧಾರಃ ಸಚ್ಚಿದಾನಂದಲಕ್ಷಣಃ ।
ಬ್ರಹ್ಮೇತ್ಯುಪನಿಷದ್ಗೇಯಂ ತದೇವ ಯಮುನಾ ಸ್ವಯಮ್ ॥ ೩೮ ॥
ಪಾವನಾ ಯಾಸ್ಯ ಜಗತಃ ಸರಿದ್ಭೂತ್ವಾ ಸಸಾರ ತತ್ ।
ಋಗಾವತೀ ಯಜುರ್ವೇದಾ ಸಾಮವೀಚಿರ್ಮಹತ್ತ್ವನಾ ॥ ೩೯ ॥
ಚತುರ್ಮುಖಮುಖಾಂಭೋಜಮಕರಂದರಸಾವಹಾ ।
ಜ್ಞಾನರೂಪಾ ತು ದಧತೀ ಸದಾ ನಾರಾಯಣೀಂ ತನುಂ ॥ ೪೦ ॥
ಬಿಭ್ರತೀ ಮತ್ಸ್ಯಕೂರ್ಮಾದಿರೂಪಿಣೀ ಹರಿಸಂಯುತಾ ।
ಅಪರಿತ್ಯಕ್ತಶಂಖಾಬ್ಜ ಚಕ್ರಕೌಮೋದಕೀ ಸ್ವಯಮ್ ॥ ೪೧ ॥
ಸುವರ್ಣಪತ್ರಾ ಸುಗತಿದ್ವಿಜಸಂಘಸಮಾವೃತಾ ।
ಶಂಭೋರಂಭೋಮಯೀ ಮೂರ್ತಿಃ ಖೇಟಖಟ್ವಾಂಗಧಾರಿಣೀ ॥ ೪೨ ॥
ತ್ರಯೀಮಯೀ ನದೀ ಸೌರೀ ಬ್ರಹ್ಮವಿದ್ಯಾ ಸುಧಾವಹಾ ।
ನಾರಾಯಣೀಶ್ವರೀ ಬ್ರಾಹ್ಮೀ ಧರ್ಮಮೂರ್ತಿಃ ಕೃಪಾವತೀ ॥ ೪೩ ॥

ಪಾವನೀ ಪುಣ್ಯತೋಯೌಘಾ ಸಪ್ತಸಾಗರಸಂಗತಾ ।
ತಾಪಿನೀ ಯಮುನಾ ಯಾಮೀ ಸ್ವರ್ಗಸೋಪಾನಪದ್ಧತಿಃ ॥ ೪೪ ॥
ಕಾಲಿಂದೀ ಕಾಲಸಲಿಲಾ ಸರ್ವತೀರ್ಥಮಯೀ ವರಾ ।
ನೀಲೋತ್ಪಲದಲಶ್ಯಾಮಾ ಮಹಾಪಾತಕಭೇಷಜಮ್ ॥ ೪೫ ॥
ದೈತ್ಯಾರಿರ್ವಿಷ್ಣುದಯಿತಾ ಹ್ಯವಾರಿತಗತಿಸ್ಸರಿತ್ ।
ಶರಣತ್ರಾಣಸಂಪನ್ನಾ ಸಗುಣಾ ನಿರ್ಗುಣಾ ಗುಣಾ ॥ ೪೬ ॥
ಏಭಿರ್ನಾಮಪದ್ಯೈಃ ಯಸ್ತಾಂ ಪ್ರಭಾತೇ ಸಂಸ್ಮರೇನ್ನರಃ ।
ನಾನಾಪಾತಕಜಾಲೇಭ್ಯೋ ದೂರಸ್ಥೋಽಪಿ ವಿಮುಚ್ಯತೇ ॥ ೪೭ ॥

**ಶ್ರೀ ಶೇಷದೇವರು ಹೇಳಿದರು—**

"ಇವಳು ಋಕ್, ಯಜುರ್ ಮತ್ತು ಸಾಮವೇದಗಳ ಪ್ರವರ್ತಕನಾದ ಸೂರ್ಯನ ಸ್ವರೂಪಳೆಂದೂ ತಿಳಿಯಲ್ಪಟ್ಟಿದ್ದಾಳೆ. ಇವಳೇ ಜಗತ್ತಿನ ಎಲ್ಲ ಕರ್ಮ ಮತ್ತು ಸಂತಾನದ ಅಭಿವೃದ್ಧಿಗೆ ಸೂರ್ಯನಂತೆ ಪ್ರವರ್ತಕಳು ॥ ೩೭ ॥ ಜಗತ್ತಿಗೆ ಪರಮಾಧಾರವಾಗಿ ಮುಖ್ಯ ಪ್ರವರ್ತಕನಾಗಿರತಕ್ಕವನೂ ಸಚ್ಚಿದಾನಂದ ಶರೀರವುಳ್ಳವನೂ ಇತ್ಯಾದಿ ಲಕ್ಷಣಗಳುಳ್ಳವನೇ ಪರಬ್ರಹ್ಮನೆಂದು ಬ್ರಹ್ಮಮೀಮಾಂಸಾಶಾಸ್ತ್ರವೂ ಉಪನಿಷತ್ತುಗಳೂ ಹೇಳುತ್ತಿವೆ. ಆ ಪರಬ್ರಹ್ಮನೇ ಈ ಯಮುನಾದೇವಿಯು. (ಯಮುನೆಯಲ್ಲಿ ಪರಬ್ರಹ್ಮನು ಸನ್ನಿಹಿತನಾಗಿದ್ದಾನೆಂದರ್ಥ) ॥ ೩೮ ॥ ಆ ಪರಬ್ರಹ್ಮನೇ ಈ ಜಗತ್ತನ್ನು ಪಾವನಗೊಳಿಸಲು ನದಿಯಾಗಿ ಹರಿಯುತ್ತಿದ್ದಾನೆ. ಋಗ್ವೇದವೇ ಇವಳ ಸುಳಿಗಳು, ಯಜುರ್ವೇದಗಳು ಇವಳ ಪ್ರವಾಹವು ಮತ್ತು ಸಾಮವೇದಗಳು ಇವಳ ತರಂಗಗಳು. ॥ ೩೯ ॥ ಇವಳು ಚತುರ್ಮುಖ ಬ್ರಹ್ಮದೇವರ ಮುಖ ಕಮಲಗಳ ಮಕರಂದವನ್ನು ಹೊತ್ತುಕೊಂಡು ಪ್ರವಾಹವಾಗಿ ಹರಿಯುತ್ತಿದ್ದಾಳೆ. ಇವಳು ಜ್ಞಾನರೂಪವನ್ನು ಧಾರಣೆ ಮಾಡಿ ಪ್ರವಾಹದಂತೆ ಇರುವ ಪರಮಾತ್ಮನ ಸ್ತ್ರೀರೂಪವಾದ ಸಾಕ್ಷಾತ್ ನಾರಾಯಣಿಯನ್ನು ಧರಿಸಿದ್ದಾಳೆ. ॥ ೪೦ ॥ ಮತ್ಸ್ಯ, ಕೂರ್ಮಾದಿ ಅನಂತ ರೂಪಗಳನ್ನು ಧಾರಣೆ ಮಾಡಿರುವ ಪರಮಾತ್ಮನೇ ತಾನಾಗಿ ಹರಿಯುತ್ತಿದ್ದಾಳೆ. ತಾನು ಶಂಖ, ಪದ್ಮ, ಚಕ್ರ, ಮತ್ತು ಕೌಮೋದಕೀ ಎಂಬ ಶ್ರೀ ವಿಷ್ಣುವಿನ ಆಯುಧಗಳನ್ನು ಯಾವಾಗಲೂ ಧರಿಸಿರುವವಳು. ॥ ೪೧ ॥ ಇವಳು ಸುವರ್ಣ ಪಕ್ಷಗಳುಳ್ಳ ಗರುಡನಂತೆ ಶೀಘ್ರಗಮನವುಳ್ಳವಳು; ತನ್ನ ಪ್ರವಾಹದುದ್ದಕ್ಕೂ, ಬ್ರಾಹ್ಮಣರುಗಳ ವೃಂದದಿಂದ ಕೂಡಿರುವವಳು, ಈಶ್ವರನ ಅಂಶವನ್ನೂ ತನ್ನಲ್ಲಿಟ್ಟುಕೊಂಡಿರುವವಳು ಮತ್ತು ಧರಿಸಿರುವವಳು. ॥ ೪೨ ॥ ಋಗ್ಯಜುಸ್ಸಾಮವೆಂಬ ಮೂರು ವೇದಗಳ ಮೂರ್ತಿಸ್ವರೂಪಿಣಿಯಾಗಿ ನದೀರೂಪದಲ್ಲಿ ಹರಿಯುತ್ತಿದ್ದಾಳೆ. ಇವಳು ಸೂರ್ಯನ ಮಗಳಾದರೂ ಬ್ರಹ್ಮಜ್ಞಾನ ಸ್ವರೂಪಳು ಮತ್ತು ತನ್ನ ಪ್ರವಾಹದಲ್ಲಿ ಸುಧೆಯನ್ನು ಹೊಂದಿದವಳು. ಅಂದರೆ ತನ್ನ ಜಲಸೇವನೆ ಮಾಡಿದವರಿಗೆ ಮುಕ್ತಿಯನ್ನು ಕೊಡತಕ್ಕವಳು. ಇವಳು ಸ್ತ್ರೀರೂಪದಲ್ಲಿರುವ ನಾರಾಯಣಿಯು. ತನ್ನಲ್ಲಿ ಬ್ರಹ್ಮ ಮತ್ತು ಶಿವನ ಅಂಶಗಳುಳ್ಳವಳು. ಇವಳು ಧರ್ಮದ ಸ್ವರೂಪಳು ಮತ್ತು ಅತ್ಯಂತ ಕರುಣಾಮಯಿಯು. ॥ ೪೩ ॥ ಇವಳು ಪರಮ ಪಾವನಳು. ಪುಣ್ಯಕರವಾದ ನೀರಿನ ಪ್ರವಾಹಯುಕ್ತಳು. ಏಳು ಸಮುದ್ರಗಳಲ್ಲೂ ತನ್ನ ಪ್ರವಾಹವುಳ್ಳವಳು. ಇವಳು ಸೂರ್ಯನ ಇನ್ನೊಬ್ಬ ಕನ್ಯೆಯಾದ ತಪತಿಯು, ಈ ಯಮುನೆಯು ಯಮನ ತಂಗಿಯು. ಮತ್ತು ಸ್ವರ್ಗಕ್ಕೆ ಹೋಗಲು ಸೋಪಾನದಂತೆ ಇದ್ದು

ಸ್ವರ್ಗಪ್ರಾಪ್ತಿಗೆ ಸುಲಭಸಾಧ್ಯಳು. ॥ ೪೪ ॥ ಇವಳು ಕಾಳಿಂದೀ, ಕರೀನೀರುಳ್ಳವಳು, ಎಲ್ಲ ತೀರ್ಥಗಳನ್ನೂ ತನ್ನಲ್ಲಿ ಒಳಗೊಂಡವಳು, ಅತಿ ಶ್ರೇಷ್ಠಳು, ಕನ್ನೈದಿಲೆಯ ಬಣ್ಣದಂತೆ ಬಣ್ಣವುಳ್ಳವಳು ಮತ್ತು ಮಹಾಪಾತಕಗಳ ನಾಶಕ್ಕೆ ಔಷಧಿ ಸ್ವರೂಪಳು. ॥ ೪೫ ॥ ದೈತ್ಯರನ್ನು ನಾಶಪಡಿಸತಕ್ಕವಳು, ಶ್ರೀ ವಿಷ್ಣುವಿನ ಪತ್ನಿ, ಎಡೆತಡೆಯಿಲ್ಲದ ಪ್ರವಾಹದ ಗತಿಯುಳ್ಳ ನದಿಯು, ಶರಣುಹೊಕ್ಕವರನ್ನು ರಕ್ಷಿಸುವ ಸ್ವಭಾವವುಳ್ಳವಳು, ಸದ್ಗುಣದಿಂದ ಕೂಡಿದವಳು, ಸತ್ವರಜಸ್ತಮೋಗುಣ ಬದ್ಧನಲ್ಲದ ಸಾಕ್ಷಾತ್ ನಾರಾಯಣನ ಪ್ರತೀಕವೂ ಆಗಿರತಕ್ಕ, ಜ್ಞಾನಾನಂದಸ್ವರೂಪವುಳ್ಳ ಪರಮಾತ್ಮನೇ ಆಗಿರುವವಳು. ಇತ್ಯಾದಿ ಅರ್ಥವುಳ್ಳ ಪದಗಳಿಂದ ಸಂಬೋಧಿತಳಾಗಿರುವವಳು. ॥ ೪೬ ॥ ಈ ನಾಮಗಳಿಂದ ಯಾರು ಬೆಳಿಗ್ಗೆ ಎದ್ದು ಅವಳನ್ನು ಸ್ಮರಿಸುತ್ತಾರೋ, ಅವರು ನಾನಾವಿಧಗಳಾದ ಪಾಪಗಳಿಂದ ದೂರರಾಗಿದ್ದು ಸದ್ಗತಿ ಪಡೆಯುತ್ತಾರೆ. ॥ ೪೭ ॥

**ಋಷಯ ಊಚುಃ—**

> **ಭಗವನ್ ಸೂರ್ಯಕನ್ಯಾऽಪಿ ಕಾಲಿಂದೀತ್ಯಭಿಧಾಂ ಪುನಃ ।**
> **ಕಥಂ ಪ್ರಾಪ್ತಾ ತದಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೪೮ ॥**

**ಶ್ರೀ ಸನಕಾದಿಗಳು ಕೇಳುತ್ತಾರೆ—**

"ಪೂಜ್ಯರೇ! ಈ ಸೂರ್ಯನ ಮಗಳಿಗೆ ಕಾಲಿಂದೀ ಎಂಬ ಹೆಸರು ಹೇಗೆ ಬಂದಿತು. ಇದನ್ನು ತಿಳಿಯಲು ನಮಗೆ ಬಹಳ ಕುತೂಹಲವಾಗಿದೆ. ಅದನ್ನು ದಯಮಾಡಿ ಹೇಳಿ" ಎಂದರು. ॥ ೪೮ ॥

**ಶೇಷ ಉವಾಚ—**

> **ಜಂಬೂದ್ವೀಪೇ ಮಹಾಕಾಯೋ ಗಿರಿರಾಜೋ ಮಹಾಚಲಃ ।**
> **ಅಧೋಮುಖಶ್ಶಯಾನೋಽಸೌ ಧರಣೀಧಾರಣಕ್ಷಮಃ ॥ ೪೯ ॥**
> **ಪೂರ್ವೇ ಕ್ಷಾರೋದಧೌ ತಸ್ಯ ಮಗ್ನೌ ಪಾದೌ ಮಹಾತಲೌ ।**
> **ಸಶಿರಸ್ಕೌ ತಥಾ ಹಸ್ತೌ ಪ್ರತೀಚ್ಯಾಂ ಲವಣಾರ್ಣವೇ ॥ ೫೦ ॥**
> **ಶೃಂಗಮೇಕಗಿರೇಸ್ತಸ್ಯ ಕಲಿಂದ ಇತಿ ವಿಶ್ರುತಮ್ ।**
> **ನಾನಾವನಲತಾಕೀರ್ಣಂ ನಾನಾಸಿದ್ಧೈರಧಿಷ್ಠಿತಮ್ ॥ ೫೧ ॥**
> **ತ್ಯಕ್ತ್ವಾ ಕ್ಷಾರೋದಧಿಂ ಸ್ವಾರಾದ್ಯದಾಯಾತಾರ್ಕನಂದಿನೀ ।**
> **ಕೃತಾರ್ಥ್ಯಾ ಸಾ ತದಾ ತೇನ ಪ್ರಸನ್ನಾ ಯಮುನಾ ಭವೇತ್ ॥ ೫೨ ॥**

**ಶ್ರೀ ಶೇಷದೇವರು ಹೇಳಿದರು—**

ಜಂಬೂದ್ವೀಪದಲ್ಲಿ ಮಹಾಶರೀರವುಳ್ಳ ಪರ್ವತಗಳಿಗೆ ಶ್ರೇಷ್ಠನಾಗಿರುವ ಒಂದು ಮಹಾಪರ್ವತವಿದೆ. ಇದು ಕೆಳಗೆ ಮುಖಮಾಡಿಕೊಂಡು ಮಲಗಿ ಭೂಮಿಯನ್ನು ಹೊರಲು ಸಮರ್ಥವಾಗಿದೆ. ॥ ೪೯ ॥ ಪೂರ್ವದ ಉಪ್ಪಿನ ಸಮುದ್ರದಲ್ಲಿ ಕಾಲುಗಳನ್ನೂ, ಪಶ್ಚಿಮದ ಉಪ್ಪಿನ ಸಮುದ್ರದಲ್ಲಿ ತಲೆ ಮತ್ತು ಕೈಗಳನ್ನು ಚಾಚಿ ಮಲಗಿರುವ ಪರ್ವತದ ಒಂದು ಶಿಖರವು ಕಳಿಂದವೆಂದು ಪ್ರಸಿದ್ಧವಾಗಿದೆ. ॥ ೫೦ ॥ ಇದು ನಾನಾಬಗೆಯ ಬಳ್ಳಿಗಳಿಂದಲೂ ವನಗಳಿಂದಲೂ ತುಂಬಿ ಹೋಗಿದೆ ಮತ್ತು ಸಿದ್ಧರು ಇದನ್ನು ಆಶ್ರಯಿಸಿದ್ದಾರೆ. ॥ ೫೧ ॥ ಉಪ್ಪಿನ ಸಮುದ್ರವನ್ನು ಬಿಟ್ಟು ಈ

ಪರ್ವತಕ್ಕೆ ಸೂರ್ಯನ ಮಗಳು ಭೋರ್ಗರೆಯುವ ಶಬ್ದದಿಂದ ಬಂದಾಗ ಕಾಲಿಂದೀ ಪರ್ವತರಾಜನು ಅವಳನ್ನು ಅರ್ಘ್ಯಾದಿಗಳಿಂದ ಪೂಜೆಮಾಡಿದನು. ಇದರಿಂದ ಯಮುನೆಗೆ ಸಂತಸವಾಯಿತು. ॥ ೫೨ ॥

**ಯಮುನೋವಾಚ—**

> ವರಂ ಬ್ರೂಹೀತಿ ತಂ ಪ್ರಾಹ ಪ್ರಸನ್ನಾಸ್ಮಿ ತವಾಚಲ ।
> ಕಾರ್ಯೇಷು ವಿವಿಧಾರ್ಥೇಷು ಯಮಿಚ್ಛಸಿ ವೃಣುಷ್ವತಮ್ ॥ ೫೩ ॥

**ಯಮುನಾದೇವಿಯು ಹೇಳಿದಳು—**

"ಎಲೈ ಪರ್ವತಶ್ರೇಷ್ಠನೇ, ನಿನಗೆ ನಾನು ಪ್ರಸನ್ನನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೊ. ವಿವಿಧವಾದ ಅಪೇಕ್ಷೆಗಳಲ್ಲಿ ಯಾವುದು ಬೇಕೋ ಅದನ್ನು ಕೇಳು". ॥ ೫೩ ॥

**ಕಲಿಂದ ಉವಾಚ—**

> ಮಮೋದರಂ ಪ್ರವಿಶ್ಯ ತ್ವಂ ಗಚ್ಛ ಚಾದಿತ್ಯನಂದಿನಿ ।
> ಕಾಲಿಂದೀತಿ ಸಮಾಖ್ಯಾತಿರಸ್ತು ಲೋಕತ್ರಯೇ ತವ ॥ ೫೪ ॥
> ಅನಪತ್ಯಸ್ಯ ಲೋಕಾ ವೈ ನ ಭವಂತಿ ಸನಾತನಾಃ ।
> ವಿಖ್ಯಾತಿಶ್ಚ ಭವೇನ್ನೈವ ತೇನ ತ್ವಾಮರ್ಥಯಾಮ್ಯಹಂ ॥ ೫೫ ॥

**ಕಲಿಂದನು ಹೇಳಿದನು—**

ಎಲೈ ಸೂರ್ಯಕುವರಿಯೇ! ನನ್ನ ಹೊಟ್ಟೆಯನ್ನು ಪ್ರವೇಶಿಸಿ ಪ್ರಯಾಣ ಮಾಡು ಮತ್ತು ನಿನಗೆ "ಕಾಳಿಂದೀ" ಎಂಬ ಹೆಸರು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿ ಹೊಂದಲಿ ಮತ್ತು ಮಕ್ಕಳಿಲ್ಲದವನಿಗೆ ಉತ್ತಮಲೋಕಗಳು ಪ್ರಾಪ್ತವಾಗುವುದಿಲ್ಲವಾದ ಕಾರಣ "ಮಕ್ಕಳಿಲ್ಲದವ" ಎಂಬ ಹೆಸರು ನನಗೆ ಬರದಿರಲು - (ನೀನು ನನ್ನ ಹೊಟ್ಟೆಯಿಂದ ಹೊರಬರುವುದರಿಂದಲೇನೇ ನೀನು ನನ್ನ ಮಗಳು) ಈ ರೀತಿ ನಿನ್ನನ್ನು ಪ್ರಾರ್ಥಿಸುತ್ತಿದ್ದೇನೆ". ॥ ೫೪-೫೫ ॥

> ತಥೇತ್ಯುಕ್ತ್ವಾ ತು ಯಮುನಾ ಕಲಿಂದಾಚಲಮೂರ್ಧನಿ ।
> ಸಮಾರುಹ್ಯ ಜಗಾಮಾಗ್ರೇ ಕಾಲಿಂದೀತಿ ತತೋಽಭವತ್ ॥ ೫೬ ॥
> ಏವಂ ಬಹೂನಿ ಕೃತ್ಯಾನಿ ಕುರ್ವತೀ ಸಾ ಮನೋಜವಾ ।
> ಜಗಾಮ ಭಾರತಂ ವರ್ಷಂ ಪುನಾನಾ ಪಾವನೈರ್ಜಲೈಃ ॥ ೫೭ ॥

**॥ ಇತಿ ನವತಿತಮೋಽಧ್ಯಾಯಃ ॥**

"ಹಾಗೆಯೇ ಆಗಲಿ", ಎಂದು ಹೇಳಿ ಯಮುನೆಯು ಕಳಿಂದನ ಶಿಖರದಿಂದ ಕೆಳಕ್ಕೆ ಇಳಿದು ಹರಿದು ತಾನು "ಕಾಳಿಂದೀ" ಎಂಬ ಹೆಸರನ್ನು ಪಡೆದಳು. ॥ ೫೬ ॥ ಮನೋವೇಗದಿಂದ ಸಂಚರಿಸುವ ಆ ಯಮುನೆಯು ಈ ರೀತಿಯಾಗಿ ಬಹುವ್ಯಾಪಾರಗಳನ್ನು ಮಾಡುತ್ತಾ ಪಾವನವಾದ ನೀರುಗಳಿಂದ ಭಾರತವರ್ಷವನ್ನು ಪವಿತ್ರ ಗೊಳಿಸುತ್ತಾ ಪ್ರಯಾಣಮಾಡಿದಳು. ॥ ೫೭ ॥

॥ ತೊಂಬತ್ತನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಏಕನವತಿತಮೋಽಧ್ಯಾಯಃ ॥ ೯೧ ॥

ಋಷಯ ಊಚುಃ—

ಶ್ರುತಂ ತು ಯಮುನಾರೂಪಂ ಕಾಲಿಂದೀನಾಮಕಾರಣಂ ।
ಭಾರತೇ ಗಮನಂ ತಸ್ಯಾಃ ಸಾಂಗಂ ಸಾಂತಂ ನಿರೂಪ್ಯತಾಮ್ ॥ ೧ ॥

## ॥ ತೊಂಬತ್ತೊಂದನೆಯ ಅಧ್ಯಾಯವು ॥

ಸನಕಾದಿಗಳು ಹೇಳಿದರು—

ಯಮುನೆಯ ಸ್ವರೂಪವನ್ನೂ ಶ್ರವಣ ಮಾಡುತ್ತಾ ಯಮುನೆಗೆ ಕಾಳಿಂದೀ ಎಂಬ ಹೆಸರು ಹೇಗೆ ಬಂದಿತೆಂಬುದನ್ನು ತಮ್ಮಿಂದ ತಿಳಿದಾಯಿತು. ಭಾರತ ದೇಶದಲ್ಲಿ ಆಕೆಯ ಹರಿವನ್ನೂ ಗಮನವನ್ನೂ ವಿವರವಾಗಿ ನಿರೂಪಣೆ ಮಾಡಿರಿ. ॥ ೧ ॥

ಶೇಷ ಉವಾಚ—

ಕಾಲಿಂದಾದಥ ಉತ್ತೀರ್ಯ ಹಿಮಾದ್ರೇಃ ಪೃಷ್ಠಮಾಗತಾ ।
ಪೂಜಿತಾ ತೇನ ವಿಧಿವತ್ ಪ್ರವಿಷ್ಟಾ ಕಶ್ಯಪಾಶ್ರಮಮ್ ॥ ೨ ॥
ಸತ್ಕೃತ್ಯ ಕಶ್ಯಪೇನೇಯಂ ತತಃ ಸ್ವಾಂಕೇ ನಿವೇಶಿತಾ ।
ಪ್ರೇಮ್ಣಾ ಮೂರ್ಧಾನಮಾಘ್ರಾಯ ಸುಪ್ರೀತೇನ ವಿಸರ್ಜಿತಾ ॥ ೩ ॥
ತದಾಶ್ರಮಂ ಪರಿಕ್ರಮ್ಯ ಪ್ರಾಪ್ತಾ ರೈಭ್ಯಮುನೇಃ ಪದಮ್ ।
ಶ್ರದ್ಧಯಾಭ್ಯರ್ಚಿತಾ ತೇನ ಕಪಿಲಾಶ್ರಮಮಭ್ಯಗಾತ್ ॥ ೪ ॥
ಪ್ರತ್ಯುತ್ಥಾಯಾಥ ಮುನಿನಾ ಸಾಂಖ್ಯಾಚಾರ್ಯೇಣ ಪೂಜಿತಾ ।
ಆಗಚ್ಛಾದಿತ್ಯದುಹಿತರ್ಭವತ್ಯಾ ಪಾವಿತಾ ವಯಮ್ ॥ ೫ ॥
ವಾಲಖಿಲ್ಯಶತೋಪೇತಂ ವೈಶ್ವಾನರಶತೈರ್ವೃತಂ ।
ಪ್ರದಕ್ಷಿಣಾಮುಪಾವೃತ್ಯ ಗಾಲವಾಶ್ರಮಮಭ್ಯಗಾತ್ ॥ ೬ ॥
ಗಾಲವೇನಾರ್ಚಿತಾ ಸಮ್ಯಗವತೀರ್ಯ ಹಿಮಾಚಲಾತ್ ।
ಅದೂರಂ ಸತ್ಯತಪಸಾ ವಿಧಾನೇನಾರ್ಕನಂದಿನೀ ॥ ೭ ॥
ಸಪುಷ್ಪಾರ್ಘ್ಯೈಃ ಪ್ರವಾಹಸ್ಸನ್ನದೀತ್ವಮುಗಮದ್ವರಮ್ ।
ಪುಷ್ಪಭದ್ರೇತಿ ಕಾಲಿಂದೀಂ ಪ್ರವಿಷ್ಟಾ ಸರಿದುತ್ತಮಾ ॥ ೮ ॥
ಕಯೋಃ ಸ ಸಂಗಮಃ ಪುಣ್ಯಃ ಸೇವ್ಯತೇ ದೈವತೈರಪಿ ।
ಸತ್ಯಯುಕ್ತೈಶ್ಚ ಮುನಿಭಿರ್ಜನ್ಮಮೃತ್ಯುಜರಾಪಹಃ ॥ ೯ ॥
ಆಪ್ಲಾವ್ಯ ತದ್ವನಂ ಪಶ್ಚಾತ್ಪ್ರವಿಶ್ಯ ಮದನಾಟವೀಂ ।
ವಿಜಿತ್ಯೋ ಯತ್ರ ಗಿರಿಶೋ ಮದನೇನ ಪ್ರತಾಪಿತಃ ॥ ೧೦ ॥
ವಾರಂ ವಾರಂ ಕ್ಷಮಾಯುಕ್ತಃ ಕ್ರೋಧೇನ ಚ ನಿಯೋಜಿತಃ ।
ಪ್ರಸಭಂ ಕೋಪಿತಸ್ಯಾಸ್ಯ ನೇತ್ರಾತ್ಸಮಭವಚ್ಛಿಖೀ ॥ ೧೧ ॥

ಸ ದಗ್ಧ್ವಾ ಮದನಂ ತಸ್ಯ ವನಂ ಚ ದಶಯೋಜನಮ್ ।
ಶಾಂತೋಭೂತ್ತದ್ವನಂ ಕೃತ್ಸ್ನಂ ಪ್ರಕ್ಷಾಲ್ಯ ಶಿವಪೂಜನಮ್ ॥ ೧೨ ॥
ಕ್ರುದ್ಧಃ ಶಾಂತಿಮಗಾದೀಶಸ್ತ ಚ್ಛಾಂತಿಪುರಮುಚ್ಯತೇ ।
ತಸ್ಯ ಮಧ್ಯಮಥೋ ಯಾಂತ್ಯಾ ಪ್ಲಾವಯಿತ್ವಾ ಸ್ವವಾರಿಣಾ ॥ ೧೩ ॥
ಇಂದ್ರದ್ಯುಮ್ನಸ್ಯ ರಾಜರ್ಷೇರ್ಮುಕ್ತಿಸ್ಥಾನಂ ನೃಗಸ್ಯ ತು ।
ಸ್ಯಮಂತಪಂಚಕಂಚಾಪಿ ಮನ್ಮಥಾಶ್ರಮಮೇವ ಚ ॥ ೧೪ ॥
ಖಾಂಡವಂ ವನಮಾಸಾದ್ಯ ತತ್ರತ್ಯೈರ್ಬಹುಪೂಜಿತಾ ।
ತಿಲಪ್ರಸ್ಥಂ ಪಾವಯಿತ್ವಾ ಬ್ರಹ್ಮವಿಷ್ಣುಶಿವಾಲಯಮ್ ॥ ೧೫ ॥
ರಮ್ಯಮಪ್ಸರಸಾಂ ಸ್ಥಾನಂ ಯಸ್ಮಿನ್ಚಂಚಲತಾಂ ಗತಃ ।
ಯಾಯಾವರಃ ಪುರಾವಿಪ್ರಸ್ತಪಸ್ಯಾವಿಜಿತೇಂದ್ರಿಯಃ ॥ ೧೬ ॥
ಶಪ್ತಂ ಪುರಂದರೇಣೇಮಂ ಪಾವನೀಕೃತ್ಯ ಪಾವನೀ ।
ಮಥುರಾಮಂಡಲಂ ಪ್ರಾಪ್ತಾ ಪುಣ್ಯದೇವರ್ಷಿಪೂಜಿತಾ ॥ ೧೭ ॥
ಪೂರಯಿತ್ವಾ ಕುರೂನ್ದೇಶಾನ್ಶೂರಸೇನಾನ್ಸಮಾವಿಶತ್ ।
ವನಾನಿ ದ್ವಾದಶಸ್ಥೀತಸ್ಫೀತಾನಿ ಗುಣಸಂಪದಾ ॥ ೧೮ ॥
ಕ್ರಮಾದ್ವಿಶ್ರಾಂತಿಮಾಸಾದ್ಯ ವಿಶ್ರಾಂತಾ ಕೇಶವಾಲಯೇ ।
ಆಶ್ಲಿಷ್ಟಾ ವಾಸುದೇವೇನ ಸಂಸ್ಕೃತ್ಯಾಭ್ಯರ್ಚಿತಾ ಯಮೀ ॥ ೧೯ ॥
ಅನುಜ್ಞಾತಾ ಗತಾ ಪುಣ್ಯಾ ಸುಪುಣ್ಯಂ ಧ್ರೌವಮಾಶ್ರಮಂ ।
ಯತ್ರ ಸಿದ್ಧೋ ಧ್ರುವಃ ಪೂರ್ವಂ ತತಃ ಸಪ್ತರ್ಷಿಪೂಜಿತಾ ॥ ೨೦ ॥
ಸಂಪ್ರಾಪ್ತಾ ಪುಣ್ಯಸಲಿಲಾ ಪವಿತ್ರಂ ರೇಣುಕಾಶ್ರಮಮ್ ।
ದೀಕ್ಷಿತೋ ಯತ್ರ ರಾಮೋಽಭೂತ್ ದೃಪ್ತಕ್ಷತ್ರಕ್ಷಯಾಧ್ವರೇ ॥ ೨೧ ॥
ಕೃತ್ವಾಯೂಪಂ ಸ್ವಪರಶುಂ ಕಾರ್ತವೀರ್ಯಂ ಮಹಾಪಶುಂ ।
ಅಪಿ ಸ್ವಮಾತರಂ ಹತ್ವಾ ಸ ಸ್ನಾತ್ವಾ ಯಮುನಾ ಜಲೇ ॥ ೨೨ ॥
ತಸ್ಮಿನ್ನೇವಾಶ್ರಮೇ ಸದ್ಯೋ ವಿಶುದ್ಧಿಂ ಪರಮಾಂ ಗತಃ ।
ಪುನಃ ಸಾ ಪ್ರಾಙ್ಮುಖೀ ಭೂತ್ವಾ ಸಂಪ್ರಾಪ್ತಾ ಸೌಕರೀಂ ಪುರೀಮ್ ॥ ೨೩ ॥
ಯತ್ರ ಧಾತ್ರೀಂ ಸಮುದ್ಧರ್ತುಮುತ್ಪನ್ನಶ್ಚಾದಿಶೂಕರಃ ।
ಪ್ರಾಪ್ಯ ವಿಷ್ಣುರ್ವರಾಹತ್ವಂ ತ್ರೈಲೋಕ್ಯಂ ಪರ್ಯಪಾಲಯತ್ ॥ ೨೪ ॥
ಧರಾಭಾರಾರ್ದಿತಸ್ಸೋಪಿ ಶ್ರದ್ಧಯಾ ಸ್ನಾಪಿತೋನಯಾ ।
ತತಸ್ತಾಂ ನಗರೀಂ ಸೌರೀ ಭೂತ್ವಾ ಪ್ರತ್ಯಕ್ಪರಾಙ್ಮುಖೀ ॥ ೨೫ ॥
ತತಸ್ಸಾ ಶೂರಸೇನೇಭ್ಯಃ ಪಾಂಚಾಲಾನಾಂ ವಿಮುಕ್ತಿದಾ ।
ಇಷ್ಟಕಾಶ್ರಮಮಾಸಾದ್ಯ ವಶಿಷ್ಠಾಯತನಂ ಮಹತ್ ॥ ೨೬ ॥

ದೂರ್ವಾಸಸಾರ್ಚಿತಾ ಭೂತ್ವಾವಶಿಷ್ಟೇನಾಸಿತೇನ ಚ ।
ಏಕಚಕ್ರಂ ಸಮಾಸಾದ್ಯ ಸಂಪ್ರಾಪ್ತೋಶನಸೋಽರ್ಹಣಾಮ್ ॥ ೨೭ ॥
ತತೋ ವಾಚಸ್ಪತೇಃ ಪೂಜಾಮಾದಾಯಾಶ್ರುತದಾಶ್ರಮಾತ್ ।
ಕರಜಾಶ್ರಮಮಾಸಾದ್ಯ ದೇಶಾದ್ದೇಶಾಂತರಂ ಗತಾ ॥ ೨೮ ॥
ಪ್ಲಾವಯಂತೀ ಸುಧಾಂಭೋಭಿಃ ಪಾವಯಂತೀ ಚ ಪಾಪಿನಃ ।
ಬ್ರಹ್ಮಣೋ ಮಧ್ಯಮಾಂ ವೇದೀಂ ಪ್ರಯಾಗಸ್ಯ ವಿವೇಶ ಸಾ ॥ ೨೯ ॥
ಭರದ್ವಾಜೇನ ಮುನಿನಾ ಮಾಧವೇನ ಶ್ರಿಯಾ ಸಹ ।
ಮಹೇಶ್ವರೇಣ ಪಾರ್ವತ್ಯಾ ತಥಾನ್ಯೈರಪಿ ದೇವತೈಃ ॥ ೩೦ ॥
ಸಂಸ್ತೂಯ ಪರಮಪ್ರೀತ್ಯಾ ಸಮಾಶ್ಲಿಷ್ಯ ವಿಸರ್ಜಿತಾ ।
ತತೋ ವಿಂಧ್ಯಾದ್ರಿಮಾಸಾದ್ಯ ಗತಾ ವಾರಣಸೀಪುರೀಂ ॥ ೩೧ ॥
ದೃಢಕರ್ಮಮಹಾರಜ್ಜುಬಂಧನಚ್ಛೇದಕರ್ತರೀ ।
ಯತ್ರಾದಿಕೇಶವಶ್ಶಂಭುಸ್ತೀರ್ಥಾನ್ಯಾಯತನಾನಿ ಚ ॥ ೩೨ ॥
ತತಃ ಪ್ರಯಾತಾ ಯಮುನಾ ಭರತಸ್ಯಾಶ್ರಮಾಂತಿಕಮ್ ।
ತತೋ ದೇವೀ ಬಹೂನ್ದೇಶಾನ್ಪ್ಲಾವಯಂತೀ ಚ ಪಾಪಿನಃ ॥ ೩೩ ॥
ಪ್ರಕ್ಷಾಲಯಂತೀ ಪಾಪಾನಿ ಪ್ರಭಾವೈರುತ್ತಮೈರ್ನಿಜೈಃ ।
ತತ್ರ ತತ್ರ ಚ ದೇವರ್ಷಿಬ್ರಹ್ಮರ್ಷಿಗಣಪೂಜಿತಾ ॥ ೩೪ ॥
ಸ್ತುತಾ ರಾಜರ್ಷಿವೃಂದೇನ ಪ್ರವಿಶ್ಯ ಲವಣಾಂಬುಧಿಂ ।
ನಾನಾ ನದನದೀಭಿಶ್ಚ ಕ್ರೀಡತೇ ಸಾಗರೇಽನಿಶಮ್ ॥ ೩೫ ॥

ಶ್ರೀ ಶೇಷದೇವರು ಹೇಳಿದರು—

ಯಮುನೆಯು ಕಾಳಿಂದಪರ್ವತದಿಂದ ಕೆಳಗಿಳಿದು ಹಿಮಾಲಯದ ಹಿಂದಿನಿಂದ ಬಂದು, ಹಿಮವಂತನಿಂದ ಪೂಜಿತಳಾಗಿ ಕಾಶ್ಯಪಾಶ್ರಮಕ್ಕೆ ಬಂದಳು. ॥ ೨ ॥ ಅಲ್ಲಿ ಕಶ್ಯಪರಿಂದ ಸತ್ಕೃತಳಾದಳು. ಕಶ್ಯಪರು ಮೊಮ್ಮಗಳಾದ ಯಮುನೆಯನ್ನು ತೊಡೆಯ ಮೇಲೆ ಕೂಡಿಸಿ ಅವಳ ಶಿರಸ್ಸನ್ನು ಮೂಸಿನೋಡಿ, ಸಂತೋಷಗೊಂಡು ಅವಳನ್ನು ಬೀಳ್ಕೊಟ್ಟರು. ॥ ೩ ॥ ಅವರ ಆಶ್ರಮವನ್ನು ಪ್ರದಕ್ಷಿಣೆ ಮಾಡಿ ಅಲ್ಲಿರುವ ಋಷಿಗಳಿಂದ ಶ್ರದ್ಧೆಯಿಂದ ಪೂಜೆಮಾಡಿಸಿ-ಕೊಳ್ಳಲ್ಪಟ್ಟವಳಾಗಿ ಅಲ್ಲಿಂದ ಕಪಿಲಾಶ್ರಮಕ್ಕೆ ಬಂದಳು. ॥ ೪ ॥ ಸಾಂಖ್ಯಮತಪ್ರವರ್ತಕರಾದ ಕಪಿಲಾಚಾರ್ಯರು ಎದ್ದು ಇವಳನ್ನು ಸ್ವಾಗತಿಸಿ ಪೂಜಿಸಿ, "ಹೇ ಸೂರ್ಯನ ಮಗಳೇ, ಬಾ; ನಿನ್ನಿಂದ ನಾವು ಪಾವನವಾದೆವು" ಎಂದರು. ॥ ೫ ॥ ವಾಲಿಖಿಲ್ಯರೆಂಬ ನೂರುಮಂದಿ ಮಹಾಮುನಿಗಳಿಂದಲೂ ಮತ್ತು ನೂರಾರು ಅಗ್ನಿಹೋತ್ರದ ಹೋಮಕುಂಡಗಳಿಂದಲೂ ಕೂಡಿದ ಈ ಆಶ್ರಮವನ್ನು ಸುತ್ತಿ ನಂತರ ಗಾಲವರ ಆಶ್ರಮಕ್ಕೆ ಬಂದಳು. ॥ ೬ ॥ ಹಿಮಾಲಯದಿಂದ ಕೆಳಗೆ ಇಳಿದು ಹತ್ತಿರದಲ್ಲೇ ಇದ್ದ ಸತ್ಯವಾದ ತಪಸ್ಸಿನಲ್ಲಿ ಆಸಕ್ತರಾಗಿದ್ದ ಗಾಲವರಿಂದ ಪುಷ್ಪ-ಅರ್ಘ್ಯಾದಿಗಳಿಂದ ಪೂಜಿಸಲ್ಪಟ್ಟಳು. ಈ ಪುಷ್ಪ ಸಮೇತವಾದ ಅರ್ಘ್ಯವು 'ಪುಷ್ಪಭದ್ರಾ' ಎಂಬ ಒಂದು ಸಣ್ಣ ನದಿಯಾಗಿ ಹರಿದು ಕಾಳಿಂದೀ ಪ್ರವಾಹದಲ್ಲಿ ಸಂಗಮವಾಯಿತು. ॥ ೭-೮ ॥ ಈ ಎರಡು ನದಿಗಳ

ಸಂಗಮವು ಪುಣ್ಯಕರವಾದುದು. ಇದನ್ನು ದೇವತೆಗಳೂ ಸೇವಿಸುತ್ತಾರೆ. ಸತ್ಯನಿಷ್ಠರಾದ ಋಷಿಗಳೂ ಸ್ನಾನಜಪತಪಾದಿಗಳನ್ನು ಮಾಡಿಕೊಂಡು ಇಲ್ಲಿ ಇರುತ್ತಾರೆ. ಈ ಸಂಗಮವು ಹುಟ್ಟು, ಸಾವು ಮತ್ತು ಮುಪ್ಪನ್ನು ಪರಿಹರಿಸಿ ಮುಕ್ತಿಯನ್ನು ಕೊಡತಕ್ಕದ್ದು. ॥ ೯ ॥ ಈ ಕಪಿಲಾಶ್ರಮವನ್ನು ಪ್ರವಾಹದಿಂದ ತುಂಬಿ, ನಂತರ ಮದನ ವನವನ್ನು ಹೊಕ್ಕಳು. ಈ ಸ್ಥಳದಲ್ಲಿ ಮನ್ಮಥನು ಈಶ್ವರನನ್ನು ಜಯಿಸಿದ್ದನು ಮತ್ತು ತಾಪಗೊಳಿಸಿದ್ದನು. ॥ ೧೦ ॥ ಇವನ ಅತಿಯಾದ ಸಾಹಸಕ್ಕೆ ಇವನನ್ನು ರುದ್ರದೇವನು ಪದೇ ಪದೇ ಕ್ಷಮಿಸಿ ಕೊನೆಗೆ ಕೋಪಗೊಂಡು ತನ್ನ ಹಣೆಗಣ್ಣಿನ ಅಗ್ನಿಜ್ವಾಲೆಯಿಂದ ಮದನನನ್ನೂ, ಅವನು ನಿರ್ಮಿಸಿಕೊಂಡಿದ್ದ ಹತ್ತು ಯೋಜನ ವಿಸ್ತೀರ್ಣದ ವನವನ್ನೂ ದಹಿಸಿಬಿಟ್ಟನು. ಆಮೇಲೆ ವನವೆಲ್ಲವೂ ತಣ್ಣಗಾಯಿತು ಮತ್ತು ಶಿವನೂ ಶಾಂತನಾದನು. ॥ ೧೧- ೧೨ ॥ ರುದ್ರದೇವರು ಶಾಂತರಾದ್ದರಿಂದ ಮದನ ವನವನ್ನು 'ಶಾಂತಿ ವನ'ವೆಂದು ಕರೆಯುತ್ತಾರೆ. ಈ ವನದ ಮಧ್ಯದಲ್ಲಿ ಹರಿದ ಯಮುನೆಯು ಅದನ್ನು ಕೊಚ್ಚಿಹೋಗುವಂತೆ ಮಾಡಿದಳು. ॥ ೧೩ ॥ ಅನಂತರ ಯಮುನೆಯು ಇಂದ್ರದ್ಯುಮ್ನನೆಂಬ ರಾಜನ ಸ್ಥಾನಕ್ಕೂ ಮತ್ತು ನೃಗನೆಂಬುವನ ಮುಕ್ತಿಸ್ಥಾನಕ್ಕೂ ಅಲ್ಲಿಂದ ಶ್ಯಮಂತಪಂಚಕವೆಂಬ ಸ್ಥಾನಕ್ಕೂ ಮತ್ತು ಮನ್ಮಥಾಶ್ರಮಕ್ಕೂ ಬಂದಳು. ॥ ೧೪ ॥ ಅಲ್ಲಿಂದ ಹೊರಟು ಖಾಂಡವವನಕ್ಕೆ ಬಂದಳು. ಅಲ್ಲಿ ಪೂಜಾಸ್ವೀಕಾರ ಮಾಡಿ ನಂತರ ತಿಲಪ್ರಸ್ಥವನ್ನು ಸುತ್ತಿಕೊಂಡು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಮಂದಿರಗಳಿರತಕ್ಕ ಸ್ಥಳಕ್ಕೆ ಬಂದಳು. ॥ ೧೫ ॥ ಇದು ರಮ್ಯವಾದ ಅಪ್ಸರೆಯರಿರತಕ್ಕ ಸ್ಥಳವು. ಇಲ್ಲಿ ಯಾಯಾವರದ ನಿಯಮದಲ್ಲಿದ್ದ ಘೋರ ತಪಸ್ವಿಯೂ, ಜಿತೇಂದ್ರಿಯನೂ ಆಗಿದ್ದ ಒಬ್ಬ ವ್ಯಕ್ತಿಯು, ಅಪ್ಸರೆಯರ ದರ್ಶನದಿಂದ ಇಂದ್ರಿಯನಿಗ್ರಹವನ್ನು ಕಳೆದುಕೊಂಡಾಗ ಇಂದ್ರನು ಅವನಿಗೆ ''ಜಡವಾಗೆಂದು'' ಶಾಪವನ್ನು ಕೊಟ್ಟನು. ಯಮುನೆಯು ಈ ಸ್ಥಳಕ್ಕೆ ಹರಿದು ಬಂದು ಈ ಜಡವಾಗಿದ್ದ ವ್ಯಕ್ತಿಯನ್ನು ಪವಿತ್ರಗೊಳಿಸಿದಳು. ಈ ರೀತಿಯ ಅದ್ಭುತ ವ್ಯಾಪಾರವನ್ನು ಮಾಡಿ ನಂತರ ಮಥುರಾ ಪ್ರಾಂತ್ಯಕ್ಕೆ ಬಂದು ಅಲ್ಲಿ ದೇವತೆಗಳಿಂದಲೂ, ಋಷಿಗಳಿಂದಲೂ ಪೂಜಿತಳಾದಳು. ॥ ೧೬-೧೭ ॥ ನಂತರ ಕುರುದೇಶವನ್ನು ಹೊಕ್ಕು ಅಲ್ಲಿಂದ ಶೂರಸೇನರಾಜ್ಯಕ್ಕೆ ಬಂದಳು. ಅನಂತರ ಹನ್ನೆರಡು ಸಮೃದ್ಧವಾದ ವನಗಳ ಮೂಲಕ ಕ್ರಮವಾಗಿ ಹರಿದುಹೋಗಿ ಆಯಾಸಗೊಂಡವಳಾಗಿ ಶ್ರೀ ಕೃಷ್ಣನ ಸ್ಥಳವಾದ ಬೃಂದಾವನದಲ್ಲಿ ವಿಶ್ರಾಂತಿ ಪಡೆದಳು. ಆಗ ವಸುದೇವನ ಮಗನಾದ ಕೃಷ್ಣನು ಇವಳನ್ನು ಆಲಿಂಗನ ಮಾಡಿಕೊಂಡು ಪೂಜಾದಿಗಳಿಂದ ಸತ್ಕರಿಸಿದನು. ॥ ೧೮- ೧೯ ॥ ಶ್ರೀಕೃಷ್ಣನ ಆಜ್ಞೆಯನ್ನು ಪಡೆದು ಅಲ್ಲಿಂದ ಅತ್ಯಂತ ಪುಣ್ಯಕರವಾದ ಧ್ರುವಾಶ್ರಮಕ್ಕೆ ಬಂದಳು. ಇಲ್ಲಿ ಸಪ್ತಋಷಿಗಳಿಂದ ಪೂಜಿತಳಾದಳು. ಅನಂತರ ಸಿದ್ಧನಾಗಿದ್ದ ಧ್ರುವನಿಂದ ಪೂಜೆಗೊಂಡಳು. ॥ ೨೦ ॥ ಪುಣ್ಯಕರವಾದ ನೀರಿನಿಂದ ತುಂಬಿರುವ ಯಮುನೆಯು ರೇಣುಕಾಶ್ರಮವನ್ನು ಪ್ರವೇಶಿಸಿದಳು. ಪೃಥ್ವಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡುವೆನೆಂಬ ಪ್ರತಿಜ್ಞೆಯುಳ್ಳ ಪರಶುರಾಮನು ಕ್ಷತ್ರಿಯ ಸಂಹಾರರೂಪ ಯಾಗವನ್ನು ಮಾಡಿ, ಆ ಯಾಗದಲ್ಲಿ ದುರಹಂಕಾರಿಗಳಾಗಿದ್ದ ದುಷ್ಟ ಕ್ಷತ್ರಿಯರುಗಳೆಂಬ ಬಲಿಪಶುಗಳನ್ನು ತನ್ನ ಕೊಡಲಿಯೆಂಬ ಯೂಪಸ್ತಂಭದಲ್ಲಿ ಬಲಿಕೊಟ್ಟನು. ಇವನ ಈ ಕಾರ್ಯದಲ್ಲಿ ಕಾರ್ತವೀರ್ಯಾರ್ಜುನನು ಮುಖ್ಯ ಪಶುವಾದವನು. ಇವನು ಕೊಡಲಿಯಿಂದ ಜಮದಗ್ನಿಯ ಆಜ್ಞೆಯಂತೆ ತನ್ನ ತಾಯಿ ರೇಣುಕಾದೇವಿಯನ್ನು ಶಿರಚ್ಛೇದನ ಮಾಡಿ ಸಂಹರಿಸಿದನು. ಈ ರೀತಿಯಾಗಿ ತಾಯಿಯನ್ನು ಸಂಹರಿಸಿದ ಪರಶುರಾಮನು ನಂತರ ಯಮುನೆಯಲ್ಲಿ ಸ್ನಾನಮಾಡಿದನು. ಪುನಃ ಅಲ್ಲಿಂದ ಯಮುನೆಯು ಪೂರ್ವಾಭಿಮುಖವಾಗಿ ಹರಿದು ''ಸೌಕರೀ''

ಪಟ್ಟಣಕ್ಕೆ ಬಂದಳು. ॥ ೨೧-೨೩ ॥ ಹಿಂದೆ ಹಿರಣ್ಯಾಕ್ಷನೆಂಬ ದೈತ್ಯನು ಭೂಮಿಯನ್ನು ಅಪಹರಿಸಿದ್ದನು. ಆಗ ಮಹಾವಿಷ್ಣುವು ಈ ಸೌಕರೀ ಪಟ್ಟಣದಲ್ಲಿ ವರಾಹರೂಪದಲ್ಲಿ ಅವತರಿಸಿ ಹಿರಣ್ಯಾಕ್ಷನನ್ನು ಸಂಹರಿಸಿ ಭೂಮಿಯನ್ನು ಉದ್ಧಾರಮಾಡಿದ್ದನು ಮತ್ತು ಮೂರು ಲೋಕಗಳನ್ನು ರಕ್ಷಿಸಿದ್ದನು. ॥ ೨೪ ॥ ಭೂಮಿಯನ್ನು ಹೊತ್ತುಕೊಂಡು ಬಂದಿದ್ದರಿಂದ ಆಯಾಸಗೊಂಡಿದ್ದ ವರಾಹರೂಪೀ ಶ್ರೀ ಮಹಾವಿಷ್ಣುವನ್ನು ಯಮುನೆಯು ತನ್ನ ಜಲದಿಂದ ಅಭಿಷೇಕ ಮಾಡಿದ್ದಳು. ಆಮೇಲೆ ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ತನ್ನ ಪ್ರವಾಹದ ಪಾತ್ರಕ್ಕೆ ಹಿಂತಿರುಗಿದಳು. ॥ ೨೫ ॥ ಶೂರಸೇನರ ರಾಜ್ಯದಿಂದ ಯಮುನೆಯು ಪಾಂಚಾಲದೇಶಕ್ಕೆ ಬಂದು ಅಲ್ಲಿ ಪಾಂಚಾಲರಿಗೆ ಮುಕ್ತಿಯನ್ನು ಪ್ರದಾನ ಮಾಡಿದಳು. ಅಲ್ಲಿಂದ ಮುಂದಕ್ಕೆ ಹರಿದು ವಶಿಷ್ಠರು ವಾಸಿಸುತ್ತಿದ್ದ ಇಷ್ಟಕಾಶ್ರಮಕ್ಕೆ ಬಂದಳು. ॥ ೨೬ ॥ ಅಲ್ಲಿಂದ ಮುಂದಕ್ಕೆ ಹರಿದು ದೂರ್ವಾಸರಿಂದಲೂ, ವಶಿಷ್ಠರಿಂದಲೂ ಮತ್ತು ಅಸಿತರಿಂದಲೂ ಪೂಜಿತಳಾಗಿ, ಏಕಚಕ್ರ ನಗರಕ್ಕೆ ಬಂದು ಶುಕ್ರಾಚಾರ್ಯರ ಆಶ್ರಮಕ್ಕೆ ಬಂದಳು. ॥ ೨೭ ॥ ಅಲ್ಲಿಂದ ಮುಂದೆ ಹೊರಟು ಬೃಹಸ್ಪತ್ಯಾಚಾರ್ಯರ ಆಶ್ರಮಕ್ಕೆ ಬಂದು ಅವರಿಂದ ಪೂಜಿಸಲ್ಪಟ್ಟಳು. ಅಲ್ಲಿಂದ ಮುಂದೆ ಹರಿದು ಶೀಘ್ರವಾಗಿ ಕರಜರ ಆಶ್ರಮಕ್ಕೂ ಬಂದು ಅಲ್ಲಿಂದ ನಾನಾ ದೇಶ-ದೇಶಾಂತರಗಳನ್ನೂ ಸುತ್ತಿದಳು. ॥ ೨೮ ॥ ಹೀಗೆ ಸಂಚರಿಸುವಾಗ ತಾನು ಹೋದಲ್ಲೆಲ್ಲಾ ತನ್ನ ಅಮೃತಸಮಾನವಾದ ನೀರಿನಿಂದ ಪಾಪಿಗಳನ್ನು ಪವಿತ್ರರನ್ನಾಗಿ ಮಾಡುತ್ತಾ, ಕಡೆಗೆ ಬ್ರಹ್ಮದೇವರು ದಶಾಶ್ವಮೇಧಯಾಗವನ್ನು ಮಾಡಿದ್ದ ಪ್ರಯಾಗಕ್ಷೇತ್ರದ 'ಮಧ್ಯವೇದಿ'ಯನ್ನು ಪ್ರವೇಶಿಸಿದಳು. ॥ ೨೯ ॥ ಅಲ್ಲಿ ಭಾರದ್ವಾಜ ಋಷಿಗಳಿಂದಲೂ, ಶ್ರೀ ವೇಣೀಮಾಧವದೇವರು, ಶ್ರೀ ಲಕ್ಷ್ಮೀ ದೇವಿ, ಶ್ರೀ ಮಹೇಶ್ವರ, ಪಾರ್ವತೀ ದೇವಿ ಮತ್ತು ಅಲ್ಲಿ ಸನ್ನಿಹಿತರಾಗಿರುವ ನಾನಾ ದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟವಳಾಗಿ ಮತ್ತು ಪರಮ ಪ್ರೇಮದಿಂದ ಆಲಿಂಗನಮಾಡಿಸಿಕೊಳ್ಳಲ್ಪಟ್ಟವಳಾಗಿ ಅವರುಗಳಿಂದ ಬೀಳ್ಕೊಂಡು ವಿಂಧ್ಯಪರ್ವತಕ್ಕೂ ಅಲ್ಲಿಂದ ವಾರಣಾಸಿಗೂ ಬಂದಳು. ॥ ೩೦- ೩೧ ॥ ಇಲ್ಲಿ ಕರ್ಮಪಾಶದಿಂದ ಬಿಗಿಯಲ್ಪಟ್ಟ ಸಂಸಾರಿಗಳ ಪಾಶವನ್ನು ಕತ್ತರಿಸುವ ಯಮುನಾದೇವಿಯು ಆದಿಕೇಶವ, ಮಹರುದ್ರದೇವರಿರುವ ಸ್ಥಾನಕ್ಕೂ, ಕಾಶೀವಿಶ್ವನಾಥನ ಮತ್ತು ಬಿಂದುಮಾಧವದೇವರ ಸನ್ನಿಧಾನಕ್ಕೂ ಮತ್ತು ಬೇರೆ ಬೇರೆ ದೇವಾಲಯಗಳನ್ನೂ ಸಂಪರ್ಕಿಸಿ ನಂತರ ಭರತನ ಆಶ್ರಮದ ಸಮೀಪಕ್ಕೆ ಬಂದಳು. ಅನಂತರ ಬಹಳ ದೇಶಗಳನ್ನೂ, ಅಲ್ಲಿವಾಸಿಸುವ ಪ್ರಜೆಗಳನ್ನೂ ಪವಿತ್ರಗೊಳಿಸಿ, ಅವರವರ ಪಾಪಗಳನ್ನು ತನ್ನ ಉತ್ತಮವಾದ ಪ್ರಭಾವದಿಂದ ತೊಳೆಯುತ್ತಾ, ಅಲ್ಲಲ್ಲಿ ದೇವರ್ಷಿ ಮತ್ತು ಬ್ರಹ್ಮರ್ಷಿಗಣಗಳಿಂದ ಪೂಜಿಸಲ್ಪಟ್ಟು ಮತ್ತು ರಾಜರ್ಷಿಗಳಿಂದ ಸ್ತೋತ್ರಮಾಡಿಸಿಕೊಂಡು ಉಪ್ಪಿನ ಸಮುದ್ರವನ್ನು ಪ್ರವೇಶಿಸಿ ಅಲ್ಲಿ ವಿರಾಜಮಾನರಾಗಿರುವ ನದಿಗಳೊಡನೆ ಯಾವಾಗಲೂ ಕ್ರೀಡೆಯಾಡಿಕೊಂಡಿರುತ್ತಾಳೆ. ॥ ೩೨-೩೫ ॥

ಋಷಯ ಊಚುಃ—

ಪ್ರಯಾಗಾದಂಬುಧಿಂ ಸ್ವಾಮಿನ್ ಸರ್ವೈರ್ಗಂಗೈವ ಗೀಯತೇ ।
ವದಂತಿ ಯಮುನಾಂ ನೈವ ಕೋ ಹೇತುಸ್ತತ್ರ ಕಥ್ಯತಾಮ್ ॥ ೩೬ ॥

ಋಷಿಗಳು ಹೇಳಿದರು—

ಪ್ರಯಾಗ ಕ್ಷೇತ್ರದಿಂದ ಆರಂಭಿಸಿ ಸಮುದ್ರವನ್ನು ಸೇರುವವರೆಗೆ ಇರುವ ಈ ಗಂಗೆ,

ಯಮುನೆ ಮತ್ತು ಸರಸ್ವತೀ ನದಿಗಳನ್ನು ಗಂಗಾನದಿಯೆಂದೇ ಕರೆಯುತ್ತಾರೆ. ಎಲ್ಲಿಯೂ ಇದನ್ನು ಯಮುನೆಯೆಂದು ಕರೆಯುವುದೇಯಿಲ್ಲ. ಇದಕ್ಕೆ ಕಾರಣವೇನು? ಪೂಜ್ಯರೇ ದಯವಿಟ್ಟು ಹೇಳಿ ॥ ೩೬ ॥

ಶೇಷ ಉವಾಚ—

ಪುರಾ ಭಗೀರಥೋ ರಾಜಾ ಮುನಿಕೋಪದವಾಗ್ನಿನಾ ।
ದಗ್ಧಾನಶೇಷಾನಾಕರ್ಣ್ಯ ನಿಜಾನ್ಪೂರ್ವಾನ್ಯಶಸ್ವಿನಃ ॥ ೩೭ ॥

ತಾನ್ಸಮುದ್ಧರ್ತುಮಾನಿನ್ಯೇ ವಿಷ್ಣುಪಾದೋದಕಂ ವರಂ ।
ಯಮೇನ ಪರಮೇಣಾಸೌ ಕಷ್ಟೇನ ಮಹತಾ ಭವಮ್ ॥ ೩೮ ॥

ಪ್ರಾಪಯಾಮಾಸ ತದ್ವಾರಿ ಪೂತಂ ರಾಜರ್ಷಿಸತ್ತಮಃ ।
ಸಂಪ್ರಾಪ್ಯ ಗಾಮಂಬುಭರೋ ಗಂಗೇತ್ಯಾಖ್ಯಾಂ ಜಗಾಮ ಸಾ ॥ ೩೯ ॥

ನದೀತ್ವಮಗಮತ್ಪುಣ್ಯಂ ಸರ್ವಲೋಕೋತ್ತಮೋತ್ತಮಂ ।
ಯಮುನಾಸನ್ನಿಧಿಂ ಪ್ರಾಪ್ತಾ ಪ್ರಯಾಗಾಭ್ಯಾಶವಾಹಿನೀ ॥ ೪೦ ॥

ಅರ್ಘ್ಯೇನಾದರಪೂರ್ವೇಣ ಯಮುನಾ ತಾಮಥಾಭ್ಯಗಾತ್ ।
ಗೃಹಾಣಾರ್ಘ್ಯಂ ಮಯಾ ದತ್ತಂ ವಿಧಿವತ್ತ್ರಿದಶಾಲಯೇ ॥ ೪೧ ॥

ಆದರೇಣಾಪಿ ದತ್ತಂ ಸಾ ನಾರ್ಘ್ಯಂ ಗಂಗಾಭ್ಯನಂದಯತ್ ।
ತದಾ ಸಂದೇಹಮಾಪನ್ನಾ ಯಮುನಾ ತಾಮುವಾಚ ಹ ॥ ೪೨ ॥

ಶ್ರೀ ಶೇಷದೇವರು ಹೇಳಿದರು—

''ಹಿಂದೆ ಅರವತ್ತು ಸಹಸ್ರ ಮಂದಿ ಸಗರ ಚಕ್ರವರ್ತಿಯ ಮಕ್ಕಳು ಪಾತಾಳದಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲನಾಮಕ ಭಗವಂತನಿಂದ ಭಸ್ಮೀಭೂತರಾಗಿದ್ದರು. ಇವರೆಲ್ಲರೂ ಮಹಾಯಶಸ್ವಿಗಳಾಗಿದ್ದ ಭಗೀರಥನ ಪೂರ್ವಿಕರು. ಇವರನ್ನು ಉದ್ಧಾರಮಾಡಲು ಭಗೀರಥನು ಬಹಳ ಕಷ್ಟದಿಂದ ಸ್ವರ್ಗದಲ್ಲಿ ಇದ್ದ ಗಂಗೆಯನ್ನು ಭೂಲೋಕಕ್ಕೆ ತಂದನು. ಬಹಳ ಸಂಯಮದಿಂದ ಶಿವನ ಜಟೆಯಿಂದಲೂ ಮತ್ತು ಜಹ್ನು ಋಷಿಗಳ ದಶೆಯಿಂದಲೂ ಭಗೀರಥನು ಈ ಗಂಗೆಯನ್ನು ದಾಟಿಸಿಕೊಂಡು ಧರೆಗೆ ತಂದನು. ಹೀಗೆ ಭೂಮಿಗೆ ಆಗಮಿಸಿದ ನೀರಿನಿಂದ ತುಂಬಿದ ಈ ನದಿಯನ್ನು 'ಗಂಗೆ' ಎಂದು ಕರೆಯುತ್ತಾರೆ. ॥ ೩೭-೩೯ ॥ ಈ ರೀತಿಯಾಗಿ ಪುಣ್ಯಕರಳಾಗಿಯೂ, ಉತ್ತಮೋತ್ತಮಳಾಗಿಯೂ ಹರಿದ ಗಂಗೆಯು ಪ್ರಯಾಗ ಕ್ಷೇತ್ರದ ಯಮುನೆಗೆ ಬಂದಳು. ಆಗ ಅಲ್ಲಿ ಯಮುನೆಯು ಈ ಗಂಗೆಯನ್ನು ಆದರದಿಂದ ಸ್ವಾಗತಿಸಿ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿದಳು. ''ದೇವಲೋಕದಲ್ಲಿ ಇರುವ ಗಂಗಾದೇವಿಯೇ! ನಾನು ಕೊಡುವ ಅರ್ಘ್ಯವನ್ನು ಸ್ವೀಕರಿಸು'' ಎಂದು ಪ್ರಾರ್ಥಿಸಿದಳು. ॥ ೪೦-೪೧ ॥ ಆದರದಿಂದಲೇ ಅರ್ಪಿಸಿದರೂ ಆ ಅರ್ಘ್ಯವನ್ನು ಗಂಗೆಯು ಸ್ವೀಕರಿಸಲಿಲ್ಲ. ಆಗ ಯಮುನೆಯು ಗಂಗೆಯನ್ನು ಪ್ರಶ್ನಿಸಿದಳು. ॥ ೪೨ ॥

ಯಮುನೋವಾಚ—

ಪೂಜನೀಯಾಸಿ ಮೇ ಗಂಗೇ ಅರ್ಘ್ಯಾದ್ಯೈಃ ಕೇನ ಹೇತುನಾ ।
ಪೂಜಾಂ ನೇಚ್ಛಸಿ ಮದ್ದತ್ತಾಂ ತದಾಖ್ಯಾಹಿ ಯಥಾಮತಮ್ ॥ ೪೩ ॥

ಯಮುನೆಯು ಹೇಳಿದಳು—

''ಎಲೈ ಗಂಗಾದೇವಿಯೇ! ನೀನು ಪೂಜನೀಯಳಾಗಿದ್ದರೂ ನಾನು ನೀಡಿದ ಅರ್ಘ್ಯಾದಿಗಳನ್ನು ಏತಕ್ಕೆ ಸ್ವೀಕರಿಸಲಿಲ್ಲ? ಈ ಬಗ್ಗೆ ನಿನ್ನ ಅನಿಸಿಕೆಯನ್ನು ಯಥಾರ್ಥವಾಗಿ ಹೇಳು.'' ॥ ೪೩ ॥

ಗಂಗೋವಾಚ—

ಸರಿತಾಮಗ್ರಜಾಸಿ ತ್ವಂ ಪ್ರವಿಶ್ಯ ಭವತೀಮಿತಃ ।
ಅಧುನಾ ಮೇ ಪ್ರಯಾತಾಯಾ ನಾಮ ನಾಶಂ ಪ್ರಯಾಸ್ಯತಿ ॥ ೪೪ ॥
ಯದಿ ಮೇ ನಾಮ ಸುಸ್ಥಂ ಸ್ಯಾದ್ಯಮುನೇ ಸಂಗಮಾತ್ತವ ।
ತರ್ಹಿ ತ್ವದರ್ಹಣಂ ಪ್ರಾಪ್ಯ ಪ್ರವಿಶ್ಯೇ ಭವತೀಂ ವ್ರಜೇ ॥ ೪೫ ॥

ಗಂಗಾದೇವಿಯು ಹೇಳಿದಳು—

''ಯಮುನಾದೇವಿಯೇ! ನೀನು ನದಿಗಳಲ್ಲಿ ಅಗ್ರಗಣ್ಯಳು. ನಿನ್ನೊಳಗೆ ನಾನು ಸಂಗಮವಾಗುವುದರಿಂದ ನನ್ನ ಹೆಸರು ಇನ್ನುಮುಂದೆ ನಾಶವಾಗುವುದು. ॥ ೪೪ ॥ ನನ್ನ ಹೆಸರು ನಾಶವಾಗದೆ ಶಾಶ್ವತವಾಗಿ ಉಳಿಯುವ ಹಾಗಿದ್ದರೆ ನಿನ್ನ ಅರ್ಘ್ಯಾದಿಗಳನ್ನು ಸ್ವೀಕರಿಸುತ್ತೇನೆ ಮತ್ತು ನಿನ್ನೊಡನೆ ಸಂಗಮವಾಗಿ ಮುಂದೆ ಹರಿದುಹೋಗುವೆನು.'' ॥ ೪೫ ॥

ಯಮುನೋವಾಚ—

ಇತಸ್ತೇ ಯೋಜನಶತಂ ಗಂಗಾ ನಾಮ ಭವಿಷ್ಯತಿ ।
ಅತಃ ಪರಂ ಪೃಥಗ್ಭೂತ್ವಾ ಗಂತವ್ಯಂ ಹಿ ತ್ವಯಾ ಸಖಿ ॥ ೪೬ ॥
ಅನ್ಯೋನ್ಯಂ ಸಂವಿದಂ ಕೃತ್ವಾ ಏವಂ ತೇ ಸರಿದುತ್ತಮೇ ।
ಪ್ರಯಾಗೇ ಸಂಗಮೇ ಪ್ರೇಮ್ಣಾ ಗತೇ ಚ ಶತಯೋಜನಂ ॥ ೪೭ ॥
ತತೋ ಗಂಗಾ ಪೃಥಗ್ಭೂತ್ವಾನುಜ್ಞಾತಾ ಪ್ರಾಙ್ಮುಖೀ ತಯಾ ।
ಹೃಷ್ಟಾ ವಿವೇಶ ಜಲಧಿಂ ಮಾನಯಂತೀ ಭಗೀರಥಮ್ ॥ ೪೮ ॥
ಯಸ್ಮಿಂಸ್ತೀರ್ಥೇ ಪೃಥಗ್ಭೂತೇ ತೇ ಉಭೇ ಸರಿದುತ್ತಮೇ ।
ಗಂಗೋದ್ಭೇದ ಇತಿ ಖ್ಯಾತಂ ತತ್ತೀರ್ಥಂ ಪುಣ್ಯಪಾವನಂ ॥ ೪೯ ॥
ತತಶ್ಚ ಶತಧಾ ಭೂತ್ವಾ ಯಮುನಾಂಬುನಿಧಿಂ ಗತಾ ।
ಸಹಸ್ರಧಾ ತಥಾ ಗಂಗಾ ಪ್ರವಿಷ್ಟಾ ಲವಣಾಂಬುಧಿಂ ॥ ೫೦ ॥
ಏವಂ ಹಿ ಯಮುನೋತ್ಪತ್ತಿಸ್ಸನಕಾದ್ಯಾ ಮಹರ್ಷಯಃ ।
ಮಯೋಕ್ತಾ ಭವತಾಂ ಪ್ರೀತ್ಯಾ ಕಿಮನ್ಯತ್ಪ್ರವದಾಮಿ ವಃ ॥ ೫೧ ॥

॥ ಇತಿ ಏಕನವತಿತಮೋಽಧ್ಯಾಯಃ ॥

**ಯಮುನೆಯು ಹೇಳಿದಳು—**

''ಹೇ ಗಂಗಾದೇವಿಯೇ! ಇಲ್ಲಿಂದ ನೂರು ಯೋಜನ ದೂರದವರೆಗೆ ನಿನ್ನ ಹೆಸರೇ ಇರಲಿ. ಅನಂತರ ನೀನು ನನ್ನಿಂದ ಬೇರೆಯಾಗಿ ಹರಿಯಲು ಪ್ರಾರಂಭಿಸಿ ಮುಂದೆ ಹೋಗು'' ॥ ೪೬ ॥ ಎಂದಳು. ಹೀಗೆ ಅನ್ಯೋನ್ಯವಾಗಿ ಒಪ್ಪಂದವನ್ನು ಮಾಡಿಕೊಂಡು, ಈ ಉತ್ತಮವಾದ ಎರಡು ನದೀ ದೇವತೆಗಳೂ, ಪ್ರೇಮದಿಂದ ಪ್ರಯಾಗದಲ್ಲಿ ಸಂಗಮವಾಗಿ ಅಲ್ಲಿಂದ ಒಟ್ಟಿಗೆ ನೂರು ಯೋಜನ ದೂರ ಹರಿಯುತ್ತಾರೆ. ॥ ೪೭ ॥ ಅಲ್ಲಿಂದ ಗಂಗೆಯು ಯಮುನೆಯಿಂದ ಆಜ್ಞೆಯನ್ನು ಪಡೆದು, ಬೇರೆಯಾಗಿ ಪೂರ್ವಕ್ಕೆ ಹರಿದು ಹೋಗಿ ಭಗೀರಥನ ಇಚ್ಛೆಯನ್ನು ಮನ್ನಿಸಿದಳು. (ಭೂಮಿಯಿಂದ ಪಾತಾಳಕ್ಕೂ ಭಗೀರಥನು ಅವಳನ್ನು ಕರೆದುಕೊಂಡು ಹೋದನು. ಇದರ ಸ್ಪರ್ಶದಿಂದ ಪಾತಾಳದಲ್ಲಿ ದಗ್ಧರಾಗಿ ಬಿದ್ದಿದ್ದ ಭಗೀರಥನ ಪೂರ್ವಿಕರೆಲ್ಲ ಸ್ವರ್ಗವನ್ನು ಸೇರಿದರು) ॥ ೪೮ ॥ ಈ ಎರಡು ನದಿಗಳು ಎಲ್ಲಿ ಬೇರೆಯಾಗುವರೋ ಆ ಸ್ಥಾನಕ್ಕೆ 'ಗಂಗೋದ್ಭೇದ' ಎಂದು ಹೆಸರು. ಈ ಸ್ಥಳವು ಪರಮಪಾವನವಾದ ಪುಣ್ಯತೀರ್ಥವು. ॥ ೪೯ ॥ ಇದಾದಮೇಲೆ ಯಮುನೆಯು ನೂರು ಭಾಗವಾಗಿ ಸಮುದ್ರವನ್ನು ಸೇರುತ್ತಾಳೆ ಮತ್ತು ಗಂಗೆಯು ಸಹಸ್ರ ಭಾಗವಾಗಿ ಸಮುದ್ರವನ್ನು ಸೇರುತ್ತಾಳೆ. ॥ ೫೦ ॥ ಈ ರೀತಿಯಾಗಿ, ಸನಕಾದಿಗಳೇ! ಯಮುನೆಯ ಉತ್ಪತ್ತಿಯನ್ನು ಪ್ರೀತಿಯಿಂದ ನಿಮಗೆ ಹೇಳಿದ್ದಾಯಿತು. ಬೇರೆ ಇನ್ನೇನನ್ನು ಉಪದೇಶಿಸಲಿ? ॥ ೫೧ ॥

॥ ತೊಂಬತ್ತೊಂದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ದ್ವಿನವತಿತಮೋಽಧ್ಯಾಯಃ ॥ ೯೨ ॥

ಮುನಯ ಊಚುಃ—

ಜನ್ಮಾದ್ಯಬ್ಧಿಗಮಂ ಯಾವದ್ಯಮುನಾಚೇಷ್ಟಿತಂ ಶ್ರುತಂ ।
ಸ್ನಾನದಾನವಿಧಿಂ ತಸ್ಯಾಂ ತತ್ಫಲಂ ಚ ವದಸ್ವ ನಃ ॥ ೧ ॥

## ॥ ತೊಂಬತ್ತೆರಡನೆಯ ಅಧ್ಯಾಯವು ॥

ಸನಕಾದಿಗಳು ಹೇಳಿದರು—

"ಯಮುನಾನದಿಯ ಉತ್ಪತ್ತಿಯಿಂದ ಆರಂಭಿಸಿ ಸಮುದ್ರದ ಸಂಗಮದವರೆಗೆ ಈ ನದಿಯ ವ್ಯಾಪಾರವೆಲ್ಲವೂ ಹೇಳಿಯಾಯಿತು. ಈಗ ಆ ನದಿಯ ದಡದಲ್ಲಿ ಮಾಡುವ ಸ್ನಾನದಾನ ಕರ್ಮಗಳ ಫಲವನ್ನು ಹೇಳಿರಿ." ॥ ೧ ॥

ಶೇಷ ಉವಾಚ—

ಪ್ರಾತರ್ಮಧ್ಯಾಹ್ನಯೋಃ ಸ್ನಾನಂ ಯಮುನಾಯಾಂ ಮಹಾಫಲಮ್ ।
ಯಥಾಧಿಕಾರಂ ಕರ್ತವ್ಯಂ ಸಮಂತ್ರಾಮಂತ್ರಕಂ ಜನೈಃ ॥ ೨ ॥
ಸ್ನಾನಂ ಕರಿಷ್ಯನ್ನಭ್ಯೇತ್ಯ ಪ್ರಣಮ್ಯ ಯಮುನಾಂ ಬುಧಃ ।
ಪ್ರಾರ್ಥಯೇತ ಶುಚಿಶ್ಶಾಂತೋ ಯಮುನಾಮಿತಿ ಮಂತ್ರತಃ ॥ ೩ ॥
ಆದಿತ್ಯದುಹಿತರ್ದೇವಿ ಯಮಜ್ಯೇಷ್ಠೇ ಯಶಸ್ವಿನಿ ।
ತ್ರೈಲೋಕ್ಯವಂದಿತೇ ದೇವಿ ಪಾಪಂ ಮೇ ಯಮುನೇ ಹರ ॥ ೪ ॥
ಪ್ರಾರ್ಥ್ಯೈವಂ ಮಾಸಪಕ್ಷಾದಿಸಮುಲ್ಲೇಖನಪೂರ್ವಕಮ್ ।
ಮಾನಸಂ ಫಲಮುಲ್ಲಿಖ್ಯ ಸ್ನಾಯಾದ್ವಿಧಿವದಾದೃತಃ ॥ ೫ ॥
ಸ್ನಾನಾಂಗಂ ತರ್ಪಣಂ ಕೃತ್ವಾ ಸ್ವೇಚ್ಛಂ ಸವ್ಯಾಪಸವ್ಯತಃ ।
ಚತುರ್ದಶಾಂಜಲೀನ್ ದದ್ಯಾದ್ಯಮಾಯೇತ್ಯಾದಿ ನಾಮಭಿಃ ॥ ೬ ॥
ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।
ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥ ೭ ॥
ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ॥ ೮ ॥
ದೇವತರ್ಪಣವದ್ದದ್ಯಾಚ್ಚತುರ್ದಶಜಲಾಂಜಲೀನ್ ।
ಪಿತೃತರ್ಪಣವದ್ವಾಪಿ ಸಲಿಲಾಂಸ್ತಾವದಂಜಲೀನ್ ॥ ೯ ॥
ಪುನಃ ಸ್ನಾತ್ವಾ ಶಿಖಾವಸ್ತ್ರೇ ನಿಷ್ಪೀಡ್ಯಾಚಮ್ಯವಾಗ್ಯತಃ ।
ಅಹತೇ ವಾಸಸೀ ಧೃತ್ವಾ ಸಂಧ್ಯಾವಂದನಮಾಚರೇತ್ ॥ ೧೦ ॥
ನಿತ್ಯನೈಮಿತ್ತಿಕೇ ಕಾಮ್ಯೇ ವಿವಿಧೇ ಸ್ನಾನಕರ್ಮಣಿ ।
ವಿಶೇಷೋ ವಿಧಿದೃಷ್ಟೋಽಯಂ ಮಯಾ ವೋ ವಿನಿರೂಪಿತಃ ॥ ೧೧ ॥

ಫಲಂ ಚ ಯತ್ರಕುತ್ರಾಪಿ ಸ್ನಾನಾತ್ಪಾಪವಿನಾಶನಮ್ ।
ಸ್ಥಲಭೇದವಿಶೇಷೇಣ ಕಾಮ್ಯಂ ನಾನಾವಿಧಂ ಫಲಮ್ ॥ ೧೨ ॥
ಧ್ಯಾನಾತ್ಸಂಕೀರ್ತನಾದ್ದಾನಾನ್ನಿವಾಸಾತ್ಪಿತೃತರ್ಪಣಾತ್ ।
ಜಪಸ್ವಾಧ್ಯಾಯಹೋಮೇಭ್ಯಸ್ಸೂರ್ಯವಿಷ್ಣುಪ್ರಪೂಜನಾತ್ ॥ ೧೩ ॥
ನಿತ್ಯೇಭ್ಯಃ ಪಂಚಯಜ್ಞೇಭ್ಯಃ ಸೋಮಾದಿಭ್ಯಶ್ಚ ಯತ್ಫಲಂ ।
ಯಮುನಾತೀರವರ್ತಿಭ್ಯಃ ಪ್ರವಕ್ಷ್ಯಾಮಿ ಯಥಾಮತಿ ॥ ೧೪ ॥
ಕಾಲಿಂದ್ಯಾಮನ್ಯತೀರ್ಥೇಭ್ಯಃ ಫಲಂ ಸ್ನಾತುಃ ಶತಾಧಿಕಂ ।
ಗಂಡೂಷಮಾತ್ರಮಪ್ಯಂಬು ಪೀತ್ವಾ ಭವತಿ ಸೋಮಪಾಃ ॥ ೧೫ ॥
ಯತ್ಕಿಂಚಿದ್ದೀಯತೇ ತಸ್ಯಾಮನಲ್ಪಂ ಸ್ವಲ್ಪಮೇವ ಚ ।
ಸುಮೇರು ಸದೃಶಂ ಭೂತ್ವಾ ತದ್ದಾತುರುಪತಿಷ್ಠತೇ ॥ ೧೬ ॥
ದೂರಸ್ಥೇನಾಪಿ ಯಮುನಾ ಧ್ಯಾತಾ ಹಂತಿ ಮನಸ್ಕೃತಂ ।
ವಾಚಿಕಂ ಕೀರ್ತಿತಾ ಹಂತಿ ಸ್ನಾನಾತ್ಕರ್ಮಕೃತಂ ಮಲಮ್ ॥ ೧೭ ॥
ಅಯಥಾವದಧೀತಾನ್ವಾ ಮಂತ್ರಾನ್ಸ್ಯಾಮಾನ್ಜಪೇನ್ನರಃ ।
ಭಕ್ತ್ಯಾ ಸಮಗ್ರಂ ಲಭತೇ ಸೋಽಪಿ ಸ್ವಾಧ್ಯಾಯಜಂ ಫಲಮ್ ॥ ೧೮ ॥
ಜಪ್ತ್ವಾ ಸ್ಯಾಮೇವ ಗಾಯತ್ರೀಮಯುತಂ ನಿಯಮಾದ್ದ್ವಿಜಃ ।
ಬ್ರಹ್ಮಹತ್ಯಾದಿ ಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧೯ ॥
ಸಾಯಂ ಪ್ರಾತರ್ದ್ವಿಜಸ್ಸಂಧ್ಯಾಮುಪಾಸ್ತೇ ಸಕೃದೇವ ಯಃ ।
ಕಾಲಿಂದ್ಯಾಂ ನ ಸ ದೋಷೇಣ ಸಂಧ್ಯಾಲೋಪಸ್ಯ ಲಿಪ್ಯತೇ ॥ ೨೦ ॥
ತರ್ಪಯಿತ್ವಾ ನರೋ ದೇವಾನ್ಮನುಷ್ಯಾಂಶ್ಚ ಪಿತೄನಥ ।
ಶ್ರದ್ಧಯಾ ಯಮುನಾವಾರ್ಭಿಃ ಪುನಾತ್ಯೇವ ಕುಲತ್ರಯಮ್ ॥ ೨೧ ॥
ಜುಹೋತಿ ಯಸ್ತಿಲಾನಾಜ್ಯಾನ್ ಸಾವಿತ್ರ್ಯಾ ಶತಸಂಖ್ಯಯಾ ।
ತೇನೇಷ್ಟಂ ಕ್ರತುಭಿರ್ಮುಖ್ಯೈಃ ಸಹಸ್ರಂ ಶತದಕ್ಷಿಣೈಃ ॥ ೨೨ ॥
ಪಂಚಯಜ್ಞಾಂಸ್ತು ಯೋಮರ್ತ್ಯಸ್ತಸ್ಯಾಸ್ತೀರೇ ಕರೋತಿ ವೈ ।
ಸೋಮಯಾಗಾದಿಜಂ ಪುಣ್ಯಂ ಜಾಯತೇ ತಸ್ಯ ನಿಶ್ಚಿತಮ್ ॥ ೨೩ ॥
ಸೋಮಸಂಸ್ಥಾವಿಧಾನಂ ಯಃ ಕರೋತಿ ಯಮುನಾತಟೇ ।
ಅಧ್ವರಾಚರಣಂ ತೇನ ಕೃತಂ ನಾತ್ರ ವಿಚಾರಣಮ್ ॥ ೨೪ ॥
ಪಿಂಡಂ ದತ್ವಾ ಪಿತೃಭ್ಯೋ ಯಸ್ತದದ್ಭಿರವನೇಜಯೇತ್ ।
ಪಾಪಿನೋಽಪಿ ಪಿತೄನ್ ಸ್ವೀಯಾನ್ಬ್ರಹ್ಮಲೋಕಂ ನಯತ್ಯಸೌ ॥ ೨೫ ॥
ಯಃ ಸ್ನಾತ್ವಾ ಯಮುನಾವಾರ್ಭಿಃ ಕೇಶವಂ ಶಿವಮೇವ ಚ ।
ರವಿಂ ವಾ ಪೂಜಯೇದ್ಭಕ್ತ್ಯಾ ನ ಸ ಶೋಚ್ಯೋ ಭವೇನ್ನರಃ ॥ ೨೬ ॥

ಏಕಮಪ್ಯುಪವಾಸಂ ಯಃ ಕರೋತಿ ಯಮುನಾಂತಿಕೇ ।
ಸದೋಪವಾಸೀ ವಿಜ್ಞೇಯಃ ಕೃತಸರ್ವವ್ರತಃ ಪುಮಾನ್ ॥ ೨೭ ॥
ಯದ್ಯದ್ಕರ್ಮ ಚ ಕಾಲಿಂದ್ಯಾಂ ಶುಭಂ ವಾ ಯದಿ ವಾಽಶುಭಮ್ ।
ತತ್ತದೇವಾಮಿತಗುಣಂ ಭೂತ್ವಾ ತಸ್ಯೋಪತಿಷ್ಠತಿ ॥ ೨೮ ॥
ಸ್ನಾನಾದಿಕರ್ಮ ಕಾಲಿಂದ್ಯಾಂ ಯೇನ ಕೇನಾಪಿ ಯತ್ಕೃತಮ್ ।
ಯಥಾವದಯಥಾವದ್ವಾ ತತ್ಸಾಧ್ಯುಫಲವದ್ಭವೇತ್ ॥ ೨೯ ॥
ಸಂಕ್ರಾಂತೌ ರವಿವಾರೇ ಚ ಸಪ್ತಮ್ಯಾಂ ವೈಧೃತೌ ತಥಾ ।
ವ್ಯತೀಪಾತೇ ಚ ಹಸ್ತರ್ಕ್ಷೇ ತ್ವಾಷ್ಟ್ರೇ ಪೌಷ್ಣೇ ಪುನರ್ವಸೌ ॥ ೩೦ ॥
ಏಕಾದಶ್ಯಾಂ ಚತುರ್ದಶ್ಯಾಂ ಅಷ್ಟಮ್ಯಾಂ ಚ ವಿಧುಕ್ಷಯೇ ।
ಪೌರ್ಣಮಾಸ್ಯಾಂಚ ಪೂರ್ವೋಕ್ತಂ ಫಲಂ ಶತಗುಣಂ ಭವೇತ್ ॥ ೩೧ ॥
ತದೇವ ಸ್ಯಾತ್ ಕೋಟಿಗುಣಂ ಗ್ರಹಣೇ ಚಂದ್ರ ಸೂರ್ಯಯೋಃ ।
ತಥೈವ ಫಲಮುದ್ದಿಷ್ಟಂ ಮನ್ವಾದಿಷು ಯುಗಾದಿಷು ॥ ೩೨ ॥
ದ್ವಾದಶ್ಯಾಮರ್ಚಯೇದ್ವಿಷ್ಣುಂ ಏಕಾದಶ್ಯಾಮುಪೋಷಿತಃ ।
ಕಾಲಿಂದ್ಯಾಂ ತಸ್ಯ ಸುಲಭಂ ತದ್ವಿಷ್ಣೋಃ ಪರಮಂ ಪದಮ್ ॥ ೩೩ ॥
ಯಮುನಾದಕ್ಷಿಣೇ ಕೂಲೇ ಫಲಮುಕ್ತಮಿದಂ ಮಯಾ ।
ತದೇವ ಚೋತ್ತರೇ ಕೂಲೇ ಫಲಂ ಶತಗುಣಾಧಿಕಮ್ ॥ ೩೪ ॥
ಕಲಿಂಗಪರ್ವತೋದ್ಭೇದೇ ಮಥುರಾಯಾಂ ತಥಾ ಪುರಿ ।
ಪ್ರತ್ಯಙ್ಮುಖ್ಯಾಂ ಪ್ರಯಾಗೇ ಚ ಭಾಗೀರಥ್ಯಾಶ್ಚ ಸಂಗಮೇ ॥ ೩೫ ॥
ಗಂಗೋದ್ಭೇದೇ ಮಹಾತೀರ್ಥೇ ಯಮುನಾಸಾಗರೇ ತಥಾ ।
ಉತ್ತರೋತ್ತರಭೂಯಿಷ್ಠಂ ಫಲಂ ಸ್ನಾನಾದಿಕಾರಣಮ್ ॥ ೩೬ ॥
ಮಥುರಾಸಂಗತಾಯಾಂ ತು ಹರೇರೇವ ನಿಮಜ್ಜನಾತ್ ।
ಪಾತಕೀ ಪಾತಕಾನ್ಮುಕ್ತೋ ಧನಾಢ್ಯಃ ಸ್ಯಾದಪಾತಕೀ ॥ ೩೭ ॥
ಊರ್ಜೇ ಶುಕ್ಲದ್ವಿತೀಯಾಂ ಯಃ ಸ್ನಾತ್ವಾ ಪೂಜಯೇದ್ಯಮಮ್ ।
ಕುಲೇ ಯಮಭಯಂ ತಸ್ಯ ಜಾಯತೇ ನೈವ ನಿಶ್ಚಿತಮ್ ॥ ೩೮ ॥
ದೇಹತ್ಯಾಗೋ ಭವೇದ್ಯಸ್ಯ ಕಾಲಿಂದ್ಯಾಂ ಪುಣ್ಯಕರ್ಮಣಃ ।
ಸೂರ್ಯಲೋಕಮವಾಪ್ನೋತಿ ದೀಪ್ತಿಮಾಂಸ್ತತ್ರ ಮೋದತೇ ॥ ೩೯ ॥
ಮಥುರಾಯಾಂ ಪ್ರಯಾಗೇ ಚ ಸಮುದ್ರೇಣ ಸಮಾಗಮೇ ।
ಮುಕ್ತಿಶ್ಚ ಜಾಯತೇ ನೃಣಾಂ ಭಕ್ತಾನಾಮುಚಿತಾತ್ಮನಾಂ ॥ ೪೦ ॥
ಪ್ರತ್ಯಂಗುಲಂ ಹಿ ತೀರ್ಥಾನಿ ಪ್ರತಿಹಸ್ತಂ ಸುರಾಲಯಾಃ ।
ಋಷಯೋ ಮುನಯೋಃ ಸಿದ್ಧಾಃ ಸಂತ್ಯಸ್ಯಾಂ ಕೂಲಯೋರ್ದ್ವಯೋಃ ॥ ೪೧ ॥

ಏವಂ ಮಾಹಾತ್ಮ್ಯಮಾಖ್ಯಾತಂ ಯಮುನಾಯಾ ಮುನೀಶ್ವರಾಃ ।
ವಿಶೇಷೇಣಾಧಿಕಂ ವಕ್ತುಂ ಬ್ರಹ್ಮಣಾಽಪಿ ನ ಶಕ್ಯತೇ ॥ ೪೨ ॥
ಮಾಹಾತ್ಮ್ಯಂ ಯಮುನಾಯಾಸ್ತು ಶೃಣುಯಾಚ್ಛ್ರಾವಯೇಚ್ಚ ಯಃ ।
ವಿಧೂಯ ಸರ್ವಪಾಪಾನಿ ಸೂರ್ಯಲೋಕಮವಾಪ್ನುಯಾತ್ ॥ ೪೩ ॥

॥ ಇತಿ ದ್ವಿನವತಿತಮೋಽಧ್ಯಾಯಃ ॥

**ಶ್ರೀ ಶೇಷದೇವರು ಹೇಳಿದರು—**

ಈ ಯಮುನಾನದಿಯ ಪ್ರಾತಃ ಸ್ನಾನವೂ ಮತ್ತು ಮಧ್ಯಾಹ್ನದ ಸ್ನಾನವೂ ಎರಡೂ ಬಹು ಫಲಪ್ರದವು. ಅವರವರ ಅಧಿಕಾರಕ್ಕೆತಕ್ಕ ಮಂತ್ರಸಹಿತವಾಗಿ ಅಥವಾ ಮಂತ್ರವಿಲ್ಲದೆಯೇ ಈ ಸ್ನಾನಗಳನ್ನು ಮಾಡತಕ್ಕದ್ದು. ॥ ೨ ॥ ಸ್ನಾನ ಮಾಡುವ ಅಪೇಕ್ಷೆ ಇರುವವನು ಯಮುನಾ ನೀರಿನ ಸಮೀಪಕ್ಕೆ ಬಂದು ಅದಕ್ಕೆ ನಮಸ್ಕಾರ ಮಾಡಿ, ಶುಚಿರ್ಭೂತನಾಗಿ, ಶಾಂತಚಿತ್ತದಿಂದ ಯಮುನೆಯನ್ನು ಈ ಕೆಳಗಿನ ಮಂತ್ರದಿಂದ ಪ್ರಾರ್ಥನೆ ಮಾಡತಕ್ಕದ್ದು. ॥ ೩ ॥ ಸೂರ್ಯನ ಮಗಳಾದ ದೇವಿಯೇ! ಯಮನನ್ನು ಅಣ್ಣನನ್ನಾಗಿ ಪಡೆದವಳೇ! ಮಹಾ ಯಶಸ್ಸುಳ್ಳವಳೇ! ಮೂರು ಲೋಕಗಳಿಂದಲೂ ವಂದಿಸಲ್ಪಡತಕ್ಕವಳೇ! ಹೇ ಯಮುನಾ ದೇವಿಯೇ! ನನ್ನ ಪಾಪವನ್ನು ಪರಿಹರಿಸು. ॥ ೪ ॥ ಹೀಗೆ ಪ್ರಾರ್ಥನೆ ಮಾಡಿ ಮಾಸಪಕ್ಷಾದಿಗಳನ್ನು ಉಚ್ಚರಿಸಿ ಮಾನಸಿಕವಾಗಿ ಫಲವನ್ನು ಸಂಕಲ್ಪಿಸಿ ವಿಧಿಪೂರ್ವಕವಾಗಿ ಆದರದಿಂದ ಸ್ನಾನಮಾಡಬೇಕು. ॥ ೫ ॥ ಅನಂತರ ಸ್ನಾನದ ಭಾಗವಾಗಿರುವ ತರ್ಪಣವನ್ನು ಬಿಡಬೇಕು. ಸೌಕರ್ಯವಿದ್ದಂತೆ ಸವ್ಯ ಮತ್ತು ಅಪಸವ್ಯದಲ್ಲಿ ಜನಿವಾರವನ್ನು ಹಾಕಿಕೊಂಡು ಹದಿನಾಲ್ಕು ನಾಮಗಳಿಂದ ಯಮದೇವರಿಗೆ ಜಲತರ್ಪಣವನ್ನು ಕೊಡಬೇಕು. ॥ ೬ ॥ ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ಸರ್ವಭೂತಕ್ಷಯ, ಔದುಂಬರ, ದಧ್ನ, ನೀಲಾ, ಪರಮೇಷ್ಠೀ, ವೃಕೋದರ, ಚಿತ್ರ ಮತ್ತು ಚಿತ್ರಗುಪ್ತ. - (ಯಮ - ದುಷ್ಟರನ್ನು ನರಕದಲ್ಲಿ ದಂಡನೆ ಮಾಡುವುದರಿಂದ, ಧರ್ಮರಾಜ- ಧರ್ಮವನ್ನು ರಕ್ಷಣೆ ಮಾಡುವ ಅಧಿಕಾರ ಸಂಪನ್ನನಾದ್ದರಿಂದ, ಮೃತ್ಯು - ಸಂಸಾರದಲ್ಲಿರತಕ್ಕ ಎಲ್ಲಾ ಜೀವಿಗಳಿಗೂ ಮೃತ್ಯುವನ್ನು ಕೊಡತಕ್ಕದ್ದರಿಂದ, ಅಂತಕ - ಎಲ್ಲರಿಗೂ ಜೀವನದ ಅಂತ್ಯವನ್ನು ಕೊಡುವುದರಿಂದ, ವೈವಸ್ವತ - ಸೂರ್ಯನ ಮಗನಾದ್ದರಿಂದ, ಕಾಲ - ಮೃತ್ಯುಪದನಾದ, ಸರ್ವಭೂತಕ್ಷಯ - ಎಲ್ಲ ಜೀವಿಗೆ ಮರಣರೂಪ ನಾಶವನ್ನು ಕೊಡತಕ್ಕವನು, ಔದುಂಬರ - ಔದುಂಬರ ವಂಶದಲ್ಲಿ ಬಂದದ್ದರಿಂದ, ದಧ್ನ - ದಾನಶೀಲನಾದ್ದರಿಂದ, ನೀಲಾ - ಕಪ್ಪುವರ್ಣದ ದೇಹಕಾಂತಿಯುಳ್ಳವನಾದ್ದರಿಂದ, ಪರಮೇಷ್ಠೀ - ಉತ್ತಮ ಯಜ್ಞಗಳನ್ನು ಮಾಡಿರುವುದರಿಂದ, ವೃಕೋದರ - ವೃಕವೆಂಬ ಜಠರಾಗ್ನಿಯಿಂದ ಕೂಡಿರುವುದರಿಂದ, ಚಿತ್ರ - ಚಿತ್ರನೆಂಬ ಯಮ ಕಿಂಕರನನ್ನು ಹೊಂದಿರುವುದರಿಂದ, ಚಿತ್ರಗುಪ್ತ - ಚಿತ್ರಗುಪ್ತನೆಂಬ ಇನ್ನೊಬ್ಬ ಕಿಂಕರನನ್ನು ಹೊಂದಿರುವುದರಿಂದ) ನಿನಗೆ ನಮಸ್ಕಾರಗಳು. ॥ ೭-೮ ॥ ದೇವತರ್ಪಣದಂತೆಯೇ ಈ ಹದಿನಾಲ್ಕು ತರ್ಪಣಗಳನ್ನೂ ಕೊಡತಕ್ಕದ್ದು. ಪಿತೃತರ್ಪಣದಂತೆಯೇ ಅಪಸವ್ಯದಿಂದ ಕರೀ ಎಳ್ಳು ಸಹಿತವಾಗಿ ತಿಲಾಂಜಲಿಯನ್ನು ಕೊಡಬಹುದು. (ಜೀವತ್ಪಿತೃಕರು ಸವ್ಯದಿಂದ ದೇವತರ್ಪಣದಂತೆ ಪ್ರಮೀತ ಪಿತೃಕರು ಅಪಸವ್ಯದಿಂದ ಪಿತೃತರ್ಪಣದಂತೆ ಎಂದು ಭಾವ) ॥ ೯ ॥ ಇದಾದಮೇಲೆ ಪುನಃ ಸ್ನಾನ ಮಾಡಿ ಶಿಖೆಯನ್ನೂ, ಹೊದ್ದಿರುವ ಬಟ್ಟೆಯನ್ನೂ ಹಿಂಡಿ ಆ ನೀರನ್ನು

ತರ್ಪಣರೂಪದಲ್ಲಿ ಬಿಟ್ಟು ನಂತರ ಮೌನದಿಂದ ಒಣಗಿದ ಧೋತ್ರವನ್ನು ಧರಿಸಿ ಸಂಧ್ಯಾವಂದನೆಯನ್ನು ಮಾಡಬೇಕು. ॥ ೧೦ ॥ ನಿತ್ಯನೈಮಿತ್ತಿಕವಾದ, ಕಾಮ್ಯವಾದ ವಿವಿಧವಾದ ಸ್ನಾನಕರ್ಮಗಳಲ್ಲಿ ವಿಧಿಯಿಂದ ಹೇಳಲ್ಪಟ್ಟ ಈ ವಿಶೇಷವನ್ನು ನಿಮಗೋಸ್ಕರ ನಿರೂಪಿಸಿದ್ದೇನೆ. ॥ ೧೧ ॥ ಈ ನದಿಯಲ್ಲಿ ಎಲ್ಲಿ ಸ್ನಾನಮಾಡಿದರೂ ಪಾಪವು ಪರಿಹಾರವಾಗುವುದು. ಕಾಮ್ಯಸ್ನಾನವೂ ಸ್ಥಾನಗಳ ಭೇದದಿಂದ ಬಗೆಬಗೆಯ ಫಲಗಳನ್ನು ಕೊಡತಕ್ಕವುಗಳಾಗಿವೆ. ॥ ೧೨ ॥ ಈ ಯಮುನೆಯ ತೀರದಲ್ಲಿ ಭಗವದ್ ಧ್ಯಾನ ಮಾಡುವುದರಿಂದ, ದೇವರ ಸಂಕೀರ್ತನೆಯಿಂದ, ದಾನಾದಿಗಳಿಂದ, ಅಲ್ಲಿ ವಾಸಮಾಡುವುದರಿಂದ ಮತ್ತು ಪಿತೃತರ್ಪಣ ಕೊಡುವುದರಿಂದ, ಜಪ, ತಪ, ಹೋಮ, ಸ್ವಾಧ್ಯಾಯ, ಸೂರ್ಯ ಮತ್ತು ವಿಷ್ಣು ಇವರುಗಳ ಪೂಜೆ ಮಾಡುವುದರಿಂದ ನಿತ್ಯವೂ ಆಚರಿಸತಕ್ಕ ಪಂಚಯಜ್ಞಗಳಿಂದ ಮತ್ತು ಹೋಮಾದಿಗಳಿಂದಲೂ ಯಾವ ಫಲವು ಲಭ್ಯವಾಗುವುವೋ ಅವುಗಳನ್ನು ನಿಮಗಾಗಿ ನನಗೆ ತೋರಿದಷ್ಟು ವಿವರಿಸುತ್ತೇನೆ. ॥ ೧೩-೧೪ ॥ ಈ ಕಾಳಿಂದೀ ನದಿಯಲ್ಲಿ ಸ್ನಾನ ಮಾಡಿದರೆ ಬೇರೆಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದ್ದಕ್ಕಿಂತ ನೂರರಷ್ಟು ಹೆಚ್ಚು ಫಲವು ಲಭ್ಯವಾಗುತ್ತದೆ. ಬರೀ ಬಾಯಿಮುಕ್ಕಳಿಸುವಷ್ಟು ಈ ನೀರನ್ನು ಕುಡಿದರೆ ಸೋಮಪಾನದ ಫಲವು ಬರುವುದು. ॥ ೧೫ ॥ ಸ್ವಲ್ಪವೇ ಆಗಲಿ, ಬಹಳವೇ ಆಗಲಿ ಇಲ್ಲಿ ಮಾಡಿದ ದಾನದಿಂದ ಮೇರುಪರ್ವತಕ್ಕಿಂತ ಹೆಚ್ಚಿಗೆ ಫಲಪ್ರಾಪ್ತಿಯು ಆ ದಾನಿಗೆ ಸಲ್ಲುವುದು. ॥ ೧೬ ॥ ದೂರದಲ್ಲಿದ್ದು ಯಮುನೆಯನ್ನು ಧ್ಯಾನಮಾಡಿದವನ ಮಾನಸಿಕ ಮತ್ತು ವಾಚನಿಕ ಪಾಪಗಳು ನಾಶವಾಗುವುವು. ಇನ್ನು ಅವಳನ್ನು ಕೀರ್ತನೆ ಮಾಡಿದರೆ ಇನ್ನೂ ಹೆಚ್ಚಿನ ಪಾಪಗಳೂ ನಾಶವಾಗುವುವು. ಇವಳಲ್ಲಿ ಸ್ನಾನ ಮಾಡಿದವರ ಪೂರ್ವಾರ್ಜಿತ ಕರ್ಮಗಳ ಪಾಪಗಳೂ ಪರಿಹಾರವಾಗುವುವು. ॥ ೧೭ ॥ ನಿಯಮಬದ್ಧವಾಗಿ ಅಧ್ಯಯನ ಮಾಡಿರಲಿ ಮಾಡದಿರಲಿ, ಅವನು ಇಷ್ಟಪಟ್ಟು ಜಪಿಸುವ ಮಂತ್ರಗಳು ನಿಯಮದಿಂದ ಅಧ್ಯಯನ ಮಾಡಿದವನಿಂದ ಮಾಡಲ್ಪಟ್ಟ ಅಧ್ಯಯನದಷ್ಟೇ ಫಲವನ್ನು ತಂದುಕೊಡುವುವು. ॥ ೧೮ ॥ ಇವಳ ತೀರದಲ್ಲಿ ಹತ್ತು ಸಾವಿರ ಗಾಯಿತ್ರೀಜಪವನ್ನು ಭಕ್ತಿಯಿಂದ ಮಾಡಿದವನ ಬ್ರಹ್ಮಹತ್ಯಾದಿ ಪಾಪಗಳೂ ನಿವಾರಣೆಯಾಗುವುವು, ಈ ವಿಷಯದಲ್ಲಿ ಸಂದೇಹವು ಬೇಡ. ॥ ೧೯ ॥ ಒಂದು ಬಾರಿ ಯಾರು ಯಮುನೆಯಲ್ಲಿ ಪ್ರಾತಸ್ಸಂಧ್ಯೆಯನ್ನು ಮತ್ತು ಸಾಯಂ ಸಂಧ್ಯೆಯನ್ನು ಆಚರಿಸುವನೋ ಅವನ ಸಂಧ್ಯಾಚರಣೆಯ ಲೋಪದೋಷಗಳೆಲ್ಲಾ ನಾಶವಾಗುವುವು. ॥ ೨೦ ॥ ಯಾರು ಇಲ್ಲಿ ದೇವತೆಗಳಿಗೆ, ಪಿತೃಗಳಿಗೆ ಮತ್ತು ಮನುಷ್ಯರಿಗೆ ತರ್ಪಣವನ್ನು ಕೊಡುತ್ತಾರೋ ಅವನು ಮೂರು ಕುಲವನ್ನು (ತಂದೆ, ತಾಯಿ ಮತ್ತು ಪತ್ನಿ) ಪವಿತ್ರಗೊಳಿಸುತ್ತಾನೆ. ॥ ೨೧ ॥ ಯಾರು ಇಲ್ಲಿ ಎಳ್ಳು ಮತ್ತು ತುಪ್ಪವನ್ನು ಬೆರಸಿದ ಹವಿಸ್ಸನ್ನು ಗಾಯತ್ರೀ ಮಂತ್ರದಿಂದ ನೂರು ಬಾರಿ ಹೋಮ ಮಾಡುತ್ತಾರೋ ಅವರು ನೂರಾರು, ಸಹಸ್ರಾರು ಸಂಖ್ಯಾಕ ದಕ್ಷಿಣೆಗಳಿಂದ ಮಾಡಿದ ಯಜ್ಞಗಳ ಫಲವನ್ನು ಪಡೆಯುವನು. ॥ ೨೨ ॥ ಯಾರು ಪಂಚಯಜ್ಞಗಳನ್ನು ಈ ನದೀ ತೀರದಲ್ಲಿ ಮಾಡುವರೋ ಅವರು ಖಂಡಿತವಾಗಿಯೂ ಸೋಮಯಾಗದ ಫಲವನ್ನು ಪಡೆಯುತ್ತಾರೆ. ॥ ೨೩ ॥ ಯಮುನಾತೀರದಲ್ಲಿ ಸೋಮಯಾಗವನ್ನು ಯಾರು ಮಾಡುವರೋ ಅವರು ಅನೇಕ ಯಜ್ಞಗಳನ್ನು ಅವಭೃತಸ್ನಾನದವರೆಗೆ ಮಾಡಿದವರೇ ಸರಿ. ಈ ವಿಷಯದಲ್ಲಿ ಬೇರೆ ವಿಚಾರವೇ ಬೇಡ. ॥ ೨೪ ॥ ಇನ್ನು ಯಾರು ತಮ್ಮ ಪಿತೃಗಳಿಗೆ ಪಿಂಡವನ್ನು ಕೊಟ್ಟು ಆ ಪಿಂಡಗಳನ್ನು ಯಮುನೆಯ ಜಲದಲ್ಲಿ ವಿಸರ್ಜಿಸುತ್ತಾರೋ ಅಂಥವರ ಪಿತೃಗಳು ಮಹಾಪಾಪಿಗಳಾಗಿದ್ದರೂ, ಸತ್ಯಲೋಕಕ್ಕೆ ಪ್ರಯಾಣಮಾಡುವರು. ॥ ೨೫ ॥ ಯಾರು

ಯಮುನೆಯಲ್ಲಿ ಸ್ನಾನ ಮಾಡಿ, ಕೇಶವನನ್ನೂ, ಈಶ್ವರನನ್ನೂ ಮತ್ತು ಸೂರ್ಯನನ್ನೂ ಭಕ್ತಿಯಿಂದ ಪೂಜಿಸುವರೋ ಅಂಥವರಿಗೆ ಈ ಲೋಕದಲ್ಲಾಗಲೀ, ಪರಲೋಕದಲ್ಲಾಗಲೀ ದುಃಖ ಎಂಬುದಿಲ್ಲ. ॥ ೨೬ ॥ ಯಮುನಾ ತೀರದಲ್ಲಿ ಒಂದು ದಿವಸವಾದರೂ ಉಪವಾಸ ಮಾಡಿದವನಿಗೆ ಸಮಸ್ತ ಏಕಾದಶ್ಯಾದಿ ದಿನಗಳಲ್ಲಿ ಉಪವಾಸಮಾಡಿದ ಫಲವೂ ಮತ್ತು ಸಮಸ್ತ ವ್ರತಾಚರಣೆಯಿಂದ ಬರುವ ಫಲಗಳೂ ಸಿಗುವುವು. ॥ ೨೭ ॥ ಯಮುನಾತೀರದಲ್ಲಿ ಎಸಗಿದ ಶುಭಾಶುಭ ಕರ್ಮಗಳೆಲ್ಲವೂ ಲೆಕ್ಕವಿಲ್ಲದಷ್ಟು ಬೆಳೆದು ಅವನಿಗೆ ಫಲವನ್ನು ಸಂಪಾದಿಸಿಕೊಡುವುವು. ॥ ೨೮ ॥ ನಿಯಮದಿಂದಲೋ ಅಥವಾ ನಿಯಮವಿಲ್ಲದೆಯೋ, ಯಮುನೆಯಲ್ಲಿ ಮಾಡಿದ ಕರ್ಮಗಳು ಒಳ್ಳೆಯ ಫಲಗಳನ್ನು ತಂದುಕೊಡುತ್ತವೆ. ॥ ೨೯ ॥ ಸಂಕ್ರಾಂತಿ, ಭಾನುವಾರ, ಸಪ್ತಮೀಗಳಲ್ಲಿ, ವೈಧೃತಿಯಲ್ಲಿ, ವ್ಯತೀಪಾತದಲ್ಲಿ, ಹಸ್ತಾ, ಚಿತ್ತಾ, ರೇವತೀ ಮತ್ತು ಪುನರ್ವಸು ನಕ್ಷತ್ರಗಳಲ್ಲಿ, ಏಕಾದಶೀ, ಚತುರ್ದಶೀ, ಅಷ್ಟಮೀ, ಅಮಾವಾಸ್ಯ ಮತ್ತು ಪೌರ್ಣಮೆಯಂದು ಯಮುನೆಯಲ್ಲಿ ಮಾಡಿದ ಸ್ನಾನ ದಾನಾದಿಗಳು ನೂರರಷ್ಟು ಹೆಚ್ಚಿಗೆ ಫಲಕಾರಿಯಾಗುತ್ತದೆ. ಈ ಯಮುನೆಯಲ್ಲಿ ಸೂರ್ಯ-ಚಂದ್ರಗ್ರಹಣಗಳಲ್ಲಿ ಸ್ನಾನ ಮಾಡಿದರೆ ಬೇರೆ ತೀರ್ಥಗಳಲ್ಲಿ ಈ ದಿನಗಳಲ್ಲಿ ಮಾಡಿದ್ದರಿಂದ ಬರುವ ಫಲದ ಕೋಟಿಯಷ್ಟು ಹೆಚ್ಚು ಫಲವು ಬರುವುದು. ಅದೇ ರೀತಿ ಫಲವು ಮನ್ವಾದಿಗಳಲ್ಲಿಯೂ, ಯುಗಾದಿಗಳಲ್ಲಿಯೂ ಸ್ನಾನ ಮಾಡುವುದರಿಂದ ಬರುವುದು. ॥ ೩೦-೩೨ ॥ ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶಿಯ ದಿನ ಶ್ರೀ ಮಹಾವಿಷ್ಣುವನ್ನು ಅರ್ಚನೆ ಮಾಡಿದವನಿಗೆ ವಿಷ್ಣುಲೋಕ ಪ್ರಾಪ್ತಿಯು ಅತ್ಯಂತ ಸುಲಭವು. ॥ ೩೩ ॥ ಇದುವರೆಗೆ ಯಮುನೆಯ ದಕ್ಷಿಣತೀರದಲ್ಲಿದ್ದು ಯಮುನೆಯಲ್ಲಿ ಮಾಡಿದ ಸೇವೆಗಳ ಫಲಗಳನ್ನು ಹೇಳಿಯಾಯಿತು. ಇದೇ ಸೇವೆಗಳು ಯಮುನೆಯ ಉತ್ತರ ತೀರದಲ್ಲಿ ಮಾಡಿದರೆ ದಕ್ಷಿಣದಲ್ಲಿನ ಸೇವೆಯ ಫಲಗಳಿಗಿಂತ ನೂರರಷ್ಟು ಹೆಚ್ಚಿಗೆ ಫಲವು ಲಭ್ಯವಾಗುವದು. ॥ ೩೪ ॥ ಕಾಳಿಂದ ಪರ್ವತದಲ್ಲಿ ಹುಟ್ಟಿ ಮಥುರೆಯ ಮೂಲಕ ಮುಂದೆ ಪಶ್ಚಿಮವಾಹಿನಿಯಾಗಿ ಹರಿದು ಪ್ರಯಾಗದಲ್ಲಿ ಭಾಗೀರಥಿಯೊಡನೆ ಸಂಗಮ ಹೊಂದಿ ಅಲ್ಲಿಂದ ಪೂರ್ವಕ್ಕೆ ಹರಿದು ಗಂಗೋದ್ಭೇದವೆಂಬ ಮಹಾ ತೀರ್ಥದ ಮೂಲಕ ಯಮುನಾಸಾಗರಸಂಗಮದವರೆಗೆ ಹರಿಯುತ್ತಿರುವ ಈ ಯಮುನೆಯು ತನ್ನನ್ನು ಸೇವಿಸಿದವರಿಗೆ ಈ ಸ್ಥಳಗಳಲ್ಲಿ ಉತ್ತರೋತ್ತರ ಹೆಚ್ಚು ಹೆಚ್ಚು ಫಲಗಳನ್ನು ಕೊಡತಕ್ಕವಳಾಗಿದ್ದಾಳೆ. ॥ ೩೫ - ೩೬ ॥ ಮಥುರೆಯಲ್ಲಿ ಹರಿಯುತ್ತಿರುವ ಈ ಯಮುನೆಯಲ್ಲಿ ಸ್ನಾನಮಾಡಿದವರು ಪಾಪಗಳಿಂದ ನಿವೃತ್ತರಾಗುವುದಲ್ಲದೆ ಐಶ್ವರ್ಯವಂತರೂ ಆಗುತ್ತಾರೆ; ಇದಕ್ಕೆ ಕಾರಣ ಇವಳ ಉದಕದಿಂದ ಮಥುರಾನಾಥನ ಸ್ನಾನಾದಿಗಳಾಗುವುದೇ. ॥ ೩೭ ॥ ಕಾರ್ತೀಕ ಶುದ್ಧ ಬಿದಿಗೆಯ ದಿವಸ ಯಮುನೆಯಲ್ಲಿ ಸ್ನಾನ ಮಾಡಿ ಯಾರು ಯಮದೇವರನ್ನು ಪೂಜಿಸುವರೋ ಅವರ ಕುಲದಲ್ಲಿಯೇ ಯಾರಿಗೂ ನರಕದ ಭಯವಿರುವುದಿಲ್ಲ, ಇದು ನಿಶ್ಚಿತವಾದ ಮಾತು. ॥ ೩೮ ॥ ಈ ಯಮುನೆಯಲ್ಲಿ ಯಾವ ಪುಣ್ಯಕರ್ಮಿಯ ದೇಹತ್ಯಾಗವಾಗುವುದೋ ಅವನು ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪ್ರಕಾಶಮಾನವಾಗಿದ್ದು ಸಂತಸ ಹೊಂದುವನು. ॥ ೩೯ ॥ ಯೋಗ್ಯರಾದ ಭಕ್ತಜನರು ಮಥುರೆಯಲ್ಲಿ, ಪ್ರಯಾಗದಲ್ಲಿ ಮತ್ತು ಸಮುದ್ರ ಸಂಗಮದಲ್ಲಿ ಅಸುನೀಗಿದರೆ ಅವರಿಗೆ ಮೋಕ್ಷವೇ ಸಿಗುವುದು. ॥ ೪೦ ॥ ಯಮುನೆಯ ಎರಡು ತೀರದ ಪ್ರತಿ ಅಂಗುಲವೂ ತೀರ್ಥಗಳೇ ಮತ್ತು ಪ್ರತಿ ಹಸ್ತವೂ ದೇವಮಂದಿರಗಳೇ. ಇದರ ಎರಡು ದಡಗಳಲ್ಲಿಯೂ ಸಿದ್ಧರು, ಋಷಿಗಳು ಮತ್ತು ಮುನಿಗಳು ಇರುತ್ತಾರೆ. ॥ ೪೧ ॥ ಈ ರೀತಿಯಾಗಿ, ಹೇ

ಮುನೀಶ್ವರರೇ! ಯಮುನೆಯ ವೃತ್ತಾಂತವು ಹೇಳಲ್ಪಟ್ಟಿತು; ವಿಶೇಷವಾಗಿ ಹೆಚ್ಚಿಗೆ ಹೇಳಲು ಬ್ರಹ್ಮದೇವರಿಗೂ ಅಸಾಧ್ಯವು. ॥ ೪೨ ॥ ಈ ಯಮುನೆಯ ಮಹಾತ್ಮೆಯನ್ನು ಯಾರು ಕೇಳುತ್ತಾರೋ ಮತ್ತು ಯಾರು ಅನುವಾದ ಮಾಡುತ್ತಾರೋ ಅವರು ಎಲ್ಲ ಪಾಪಗಳನ್ನೂ ಕಳೆದುಕೊಂಡು ಸೂರ್ಯಲೋಕಕ್ಕೆ ಪ್ರಯಾಣ ಮಾಡುವರು. ॥ ೪೩ ॥

॥ ತೊಂಬತ್ತೆರಡನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ತ್ರಿನವತಿತಮೋಽಧ್ಯಾಯಃ ॥ ೯೩॥

ಋಷಯ ಊಚುಃ—

ಶ್ರುತಂ ತು ಯಮುನಾಖ್ಯಾನಂ ಗಂಗಾಖ್ಯಾನಮಥೋಚ್ಯತಾಮ್ ।
ಸೂತ ಸರ್ವಜ್ಞ ವಕ್ತಾ ತ್ವಂ ಶ್ರೋತಾರೋ ವಯಮೇವ ತು ॥ ೧ ॥
ಶ್ರವಣಂ ಕೀರ್ತನಂ ಧ್ಯಾನಂ ಸ್ಮರಣಂ ದರ್ಶನಂ ತಥಾ ।
ಸ್ನಾನಂ ದಾನಂ ಜಪೋ ಹೋಮಸ್ತರ್ಪಣಂ ಶ್ರಾದ್ಧ ಮೇವ ಚ ॥ ೨ ॥
ಉಪವಾಸೋ ಜಪಾರ್ಚಾ ಚ ಮರಣಂ ಚ ಮಹಾಮತೇ ।
ಸರ್ವಾಣ್ಯೇತಾನಿ ಗಂಗಾಯಾಂ ಫಲಂ ಯಚ್ಛಂತಿ ಕಿಂ ಕಿಯತ್ ॥ ೩ ॥
ಏತತ್ಸರ್ವಂ ತದುತ್ಪತ್ತಿ ರ್ವರ್ಣ್ಯತಾಂ ಪರಮಾದರಾತ್ ।
ಏತೇಷಾಂ ಶ್ರವಣೇಽಸ್ಮಾಕಂ ಪುನಃ ಪರಮಲಾಲಸಮ್ ॥ ೪ ॥

## ॥ ತೊಂಬತ್ತಮೂರನೆಯ ಅಧ್ಯಾಯವು ॥

ಋಷಿಗಳು ಹೇಳಿದರು—

"ಹೇ, ಸೂತರೇ! ಯಮುನೆಯ ವೃತ್ತಾಂತವನ್ನು ನಾವು ಕೇಳಿಯಾಯಿತು. ಈಗ ಗಂಗೆಯ ವೃತ್ತಾಂತವನ್ನು ಹೇಳುವವರಾಗಿ. ತಾವು ಸರ್ವವನ್ನು ತಿಳಿದಿರುವ ವಕ್ತಾರರು. ನಾವಾದರೋ ಶ್ರವಣಮಾಡತಕ್ಕವರು". ॥ ೧ ॥ ಮಹಾಮತಿಗಳಾದ ಸೂತರೇ!, ಗಂಗೆಯಲ್ಲಿ ಮಾಡಿದ ಶ್ರವಣವು, ಕೀರ್ತನೆಯು, ಧ್ಯಾನವು, ಸ್ಮರಣೆಯು, ದರ್ಶನವು, ಸ್ನಾನವು, ದಾನವು, ಜಪವು, ಹೋಮವು, ತರ್ಪಣವು, ಪಿತೃಶ್ರಾದ್ಧವು, ಉಪವಾಸವು, ಜಪವು, ಅರ್ಚನೆಯು ಮತ್ತು ಅಲ್ಲಿ ಆದ ಮರಣವು, ಹೀಗೆ ಇವೆಲ್ಲವೂ ಏನೇನು ಫಲಗಳನ್ನು ಎಷ್ಟೆಷ್ಟು ಕೊಡುವುದು ಎಂಬುದನ್ನು ನಿರೂಪಿಸಿರಿ. ॥ ೨-೩ ॥ ಇದರ ಉತ್ಪತ್ತಿಯನ್ನೂ ಆದರದಿಂದ ವರ್ಣಿಸಿರಿ. ಇವೆಲ್ಲವನ್ನೂ ಕೇಳಲು ನಮ್ಮ ಮನಸ್ಸು ಹಾತೊರೆಯುತ್ತಿದೆ. ॥ ೪ ॥

ಸೂತ ಉವಾಚ—

ಸಮ್ಯಕ್ ಪೃಷ್ಟಂ ಮುನಿಶ್ರೇಷ್ಠಾ ಗಂಗಾಮಾಹಾತ್ಮ್ಯಮುತ್ತಮಂ ।
ಶೇಷಪ್ರೋಕ್ತಂ ಜಗತ್ಸಾರಂ ಭವದ್ಭ್ಯೋ ವರ್ಣಯಾಮ್ಯಹಮ್ ॥ ೫ ॥

ಸೂತರು ಹೇಳಿದರು—

ಈ ಪ್ರಶ್ನೆಯು ನಿಮ್ಮಿಂದ ಚೆನ್ನಾಗಿ ಕೇಳಲ್ಪಟ್ಟಿದೆ. ಹೇ ಶೌನಕಾದಿಗಳೇ! ಗಂಗೆಯ ಮಹಾತ್ಮೆಯು ಅತ್ಯುತ್ತಮವಾದುದು. ಇದು ಜಗತ್ತಿನಲ್ಲೇ ಅತಿ ಮುಖ್ಯವಾದುದು. ಇದು ಶ್ರೀ ಶೇಷದೇವರಿಂದ ನಿರೂಪಿಸಲ್ಪಟ್ಟಿತ್ತು. ಅದನ್ನು ಆದರಂತೆಯೇ ಹೇಳುತ್ತೇನೆ ॥ ೫ ॥

ಶೌನಕ ಉವಾಚ—

ನದಾ ನದ್ಯಶ್ಚ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಗಂಗಾಬಿಂದ್ವಭಿಷೇಕಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೬ ॥

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯಃ ಕಿಂ ತಯಾ ಸದೃಶಂ ಭವೇತ್ ॥ ೭ ॥
ಯನ್ಮೃತ್ತಿಕಾ ಲಲಾಟೇ ವೈ ಧ್ರಿಯತೇ ಯತ್ರ ಮಾನವೈಃ ।
ತತ್ರೈವ ಜಾಯತೇ ನೇತ್ರಂ ತೃತೀಯಂ ಕಿಂ ತಯಾ ಸಮಮ್ ॥ ೮ ॥
ಯನ್ಮಜ್ಜನಂ ಮಹಾಪುಣ್ಯಂ ದುರ್ಲಭಂ ತ್ರಿದಿವೌಕಸಾಮ್ ।
ಸಾರೂಪ್ಯದಾಯಕಂ ವಿಷ್ಣೋಃ ಕಿಮಸ್ಯಾಂ ಕಥ್ಯತೇ ಪರಮ್ ॥ ೯ ॥
ಯತ್ರ ಸ್ನಾತಾಃ ಪಾಪಿನೋಽಪಿ ಸರ್ವಪಾಪವಿಮೋಚಿತಾಃ ।
ವಿಮಾನವರಮಾರುಹ್ಯ ಪ್ರಯಾಂತಿ ಪರಮಂ ಪದಮ್ ॥ ೧೦ ॥
ಯತ್ರ ಸ್ನಾತ್ವಾ ಮಹಾತ್ಮಾನಃ ಪಿತೃಮಾತೃಕುಲಾನಿ ಚ ।
ಸಹಸ್ರಾಣಿ ಸಮುದ್ಧೃತ್ಯ ವಿಷ್ಣುಲೋಕೇ ವ್ರಜಂತಿ ತೇ ॥ ೧೧ ॥
ಸ ಸ್ನಾತಃ ಸರ್ವತೀರ್ಥೇಷು ಗಂಗಾಂ ಸ್ಮರತಿ ಯೋ ನರಃ ।
ಪುಣ್ಯಕ್ಷೇತ್ರೇಷು ಸರ್ವೇಷು ಸ್ಥಿತವಾನ್ನ ಸಂಶಯಃ ॥ ೧೨ ॥
ಯತ್ರ ಸ್ನಾತಂ ನರಂ ದೃಷ್ಟ್ವಾ ಪಾಪೋಽಪಿ ಸ್ವರ್ಗಭೂಮಿಭಾಕ್ ।
ಯದಂಗಸ್ಪರ್ಶಮಾತ್ರೇಣ ದೇವಾನಾಮಧಿಪೋ ಭವೇತ್ ॥ ೧೩ ॥
ತುಲಸೀಮೂಲಸಂಭೂತಾ ದ್ವಿಜಪಾದಸಮುದ್ಭವಾ ।
ಗಂಗೋದ್ಭವಾ ಚ ಮೃಲ್ಲೋಕಾನ್ನಯತ್ಯಚ್ಯುತರೂಪತಾಮ್ ॥ ೧೪ ॥
ಕದಾ ಯಾಸ್ಯಾಮ್ಯಹಂ ಗಂಗಾಂ ಕದಾ ಪಶ್ಯಾಮಿ ತಾಮಹಮ್ ।
ಅನುತಾಪೀ ತಯಾ ನಿತ್ಯಂ ಸ ವಿಷ್ಣುಪದಮಶ್ನುತೇ ॥ ೧೫ ॥
ಗಂಗಾಯಾ ಮಹಿಮಾ ನೂನಂ ವಕ್ತುಂ ವರ್ಷಶತೈರಪಿ ।
ನ ಶಕ್ಯತೇ ವಿಷ್ಣುನಾಪಿ ಕಿಮನ್ಯೈರ್ಮಿತಬುದ್ಧಿಭಿಃ ॥ ೧೬ ॥
ಅಹೋ ಮೇ ಮಾಯಯಾ ಸರ್ವಂ ಜಗನ್ಮೋಹಮುಪಾಗತಮ್ ।
ಯತಸ್ತೇ ನರಕಂ ಯಾಂತಿ ಗಂಗಾನಾಮ್ನಿ ಸ್ಥಿತೇ ಸತಿ ॥ ೧೭ ॥
ಸಕೃದಪ್ಯುಚ್ಚರೇದ್ಯಸ್ತು ಗಂಗಾಗಂಗೇತಿ ಯೋ ನರಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೧೮ ॥
ಯೋಜನಂ ತ್ರಿತಯಂ ಯಸ್ತು ಗಂಗಾಯಾಮಿತಿ ಗಚ್ಛತಿ ।
ಸರ್ವಪಾಪವಿನಿರ್ಮುಕ್ತಃ ಸರ್ವಾನ್ಕಾಮಾನ್ಸಮಶ್ನುತೇ ॥ ೧೯ ॥
ಯಾಃ ಪುಣ್ಯಾಸ್ತಿಥಯಃ ಪ್ರೋಕ್ತಾ ಶಾಸ್ತ್ರೇಷು ಮುನಿಭಿರ್ದ್ವಿಜೈಃ ।
ತಾಸು ಸರ್ವಜಲಸ್ಥಾ ಸಾ ಭಕ್ತ್ಯಾ ಪಾಲಯತೇಽಖಿಲಮ್ ॥ ೨೦ ॥
ಅಹೋ ಗಂಗಾ ಜಗದ್ಧಾತ್ರೀ ಸ್ನಾನಪಾನಾದಿಭಿರ್ಜಗತ್ ।
ಪುನಂತೀ ಪರಮಪ್ರೇಮ್ಣಾ ನ ಕಥಂ ಸೇವ್ಯತೇ ಬುಧೈಃ ॥ ೨೧ ॥

ಯಾಂ ಗಂಗಾಂ ಭಜತೇ ನಿತ್ಯಂ ಶಂಕರೋ ಲೋಕಶಂಕರಃ ।
ಸರ್ವಜ್ಯೇಷ್ಠಃ ಕಥಂ ತಸ್ಯಾ ಮಹಿಮಾ ಪರಿಕೀರ್ತ್ಯತೇ ॥ ೨೨ ॥
ಗಂಗಾಯಾಃ ಪರಮಂ ನಾಮ ಪಾಪಾರಣ್ಯದವಾನಲಃ ।
ಭವವ್ಯಾಧಿಹರಾ ಗಂಗಾ ತಸ್ಮಾತ್ ಸೇವ್ಯಾ ಪ್ರಯತ್ನತಃ ॥ ೨೩ ॥
ಅಹೋ ಗಂಗಾ ಮಹಾಭಾಗಾ ಸ್ಮೃತಾ ಪಾಪಪ್ರಣಾಶಿನೀ ।
ಹರಿಲೋಕಪ್ರದಾ ದೃಷ್ಟ್ವಾ ಪೀತಾ ಸಾರೂಪ್ಯದಾಯಿನೀ ॥ ೨೪ ॥
ಗಂಗಾಜಲಕಣೇನಾಪಿ ಯಸ್ಸಿಕ್ತೋ ಮನುಜೋತ್ತಮಃ ।
ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಪರಮಂ ಪದಮ್ ॥ ೨೫ ॥
ತಪಸಾ ಬ್ರಹ್ಮಚರ್ಯೇಣ ಯಜ್ಞೈಸ್ತ್ಯಾಗೇನ ವಾ ಪುಮಾನ್ ।
ತಾಂ ಗತಿಂ ನೈವ ಲಭತೇ ಗಂಗಾಂ ಸಂಸೇವ್ಯ ಯಾಂ ವ್ರಜೇತ್ ॥ ೨೬ ॥
ಸ್ನಾತಾನಾಂ ಶುಚಿಭಿಸ್ತೋಯೈರ್ಗಂಗಾಯಾ ನಿಯತಾತ್ಮನಾಮ್ ।
ಶುದ್ಧಿರ್ಭವತಿ ಯಾ ಪುಂಸಾಂ ನ ಸಾ ಕ್ರತುಶತೈರಪಿ ॥ ೨೭ ॥
ಅಗ್ನಿಂ ಪ್ರಾಪ್ಯ ಯಥಾ ಸದ್ಯಸ್ತೂಲರಾಶಿರ್ವಿನಶ್ಯತಿ ।
ಗಂಗಾಂ ಪ್ರಾಪ್ಯ ತಥಾ ನೃಣಾಂ ಪಾಪರಾಶಿರ್ವಿನಶ್ಯತಿ ॥ ೨೮ ॥
ಚಾಂದ್ರಾಯಣಸಹಸ್ರೈಸ್ತು ಯಶ್ಚರೇತ್ಕಾಯಶೋಧನಂ ।
ಪಿಬೇದ್ಯಥೇಷ್ಟಂ ಗಂಗಾಂಭಃ ಸಮೌ ಸ್ಯಾತಾಮುಭಾವಪಿ ॥ ೨೯ ॥
ತಿಷ್ಠೇದ್ಯುಗಸಹಸ್ರಂ ತು ಪದೇನೈಕೇನ ಯಃ ಪುಮಾನ್ ।
ಪಿಬೇದ್ಯಥೇಷ್ಟಂ ಗಂಗಾಂಭೋ ಯಃ ಸ ತಸ್ಮಾದ್ವಿ ಶಿಷ್ಯತೇ ॥ ೩೦ ॥
ಲಂಬೇಧಶ್ಶಿರಶ್ಚೋರ್ಧ್ವಪಾದಶ್ಚ ಬಹುವಾಸರಮ್ ।
ಗಂಗಾಸ್ನಾಯೀ ಚ ನಿಯತಮುಭಾವಪಿ ಸಮೌ ಮತೌ ॥ ೩೧ ॥
ಅಶಕ್ತಾನಾಂ ದರಿದ್ರಾಣಾಂ ಬಾಲಿಶಾನಾಂ ಚ ಭೂತಲೇ ।
ಗತಿಮನ್ವೇಷಮಾಣಾನಾಂ ನಾಸ್ತಿ ಗಂಗಾಸಮಾ ಗತಿಃ ॥ ೩೨ ॥
ಶ್ರುತಾ ವಾ ಕೀರ್ತಿತಾ ಧ್ಯಾತಾ ದೃಷ್ಟ್ವಾ ಪೀತಾವಗಾಹಿತಾ ।
ಗಂಗಾ ತಾರಯತೇ ಪುಂಸಾಮುಭೌ ವಂಶೌ ವಿಶೇಷತಃ ॥ ೩೩ ॥
ಜಾತ್ಯಂಧೈರಿಹ ತುಲ್ಯಾಸ್ತೇ ಮೃತೈಃ ಪಂಗುಭಿರೇವ ವಾ ।
ಸಮರ್ಥಾ ಯೇ ನ ಪಶ್ಯಂತಿ ಗಂಗಾಂ ಪುಣ್ಯಜಲಾಂ ನದೀಮ್ ॥ ೩೪ ॥
ತ್ರಿಕಾಲದರ್ಶಿಭಿರ್ನಿತ್ಯಂ ಸೇವಿತಾ ಮುನಿಪುಂಗವೈಃ ।
ದೇವೈಃ ಸೇಂದ್ರೈಶ್ಚ ವಿಬುಧೈಸ್ತಾಂ ಗಂಗಾಂ ಕೋ ನ ಸೇವ್ಯತೇ ॥ ೩೫ ॥
ಉತ್ಕ್ರಾಮದ್ಭಿಶ್ಚಲೈಃ ಪ್ರಾಣೈಃ ಪ್ರಯತಃ ಪ್ರಾಂಜಲಿಃ ಸ್ಥಿತಃ ।
ಚಿಂತಯೇನ್ಮನಸಾ ಗಂಗಾಂ ಸೋಽಪಿ ಗಚ್ಛೇತ್ಪರಾಂ ಗತಿಮ್ ॥ ೩೬ ॥

ಗಂಗಾಜಲೋರ್ಮಿನಿರ್ಧೂತಂ ತ್ವಕ್ಚರ್ಮಾಸ್ಥಿ ಶರೀರಿಣಾಮ್ ।
ಕೇಶಾ ನಖಾಶ್ಚ ಯೇಷಾಂ ತೇ ಶುದ್ಧಾಃ ಸ್ವರ್ಗಮುಪಾಸತೇ ॥ ೩೭ ॥
ಆಕಾಶಾತ್ ಪರಮಾಂ ಪುಣ್ಯಾಂ ಪತಂತೀಂ ಯಾಂ ಮಹೇಶ್ವರಃ ।
ದಧಾರ ಶಿರಸಾ ದೇವೀಂ ತಾಂ ಗಂಗಾಂ ಕೋ ನ ಸೇವತೇ ॥ ೩೮ ॥
ಅಂಧಾಃ ಕ್ಲೀಬಾ ಜಡಾ ವ್ಯಂಗಾಃ ಪತಿತಾ ರೋಗಿಣೋಽಂತ್ಯಜಾಃ ।
ಗಂಗಾಂ ಸಂಸೇವ್ಯ ಪುರುಷಾ ದೇವೈರ್ಗಚ್ಛಂತಿ ಸಾಮ್ಯತಾಮ್ ॥ ೩೯ ॥
ಕಾಂಕ್ಷಂತಿ ಪಿತರಸ್ತೇಷಾಂ ಸರ್ವೇಷಾಂ ಮುನಿಪುಂಗವಾಃ ।
ಮದ್ವಂಶೇ ಕೋಽಪಿ ಧರ್ಮಾತ್ಮಾ ಕದಾ ಗಂಗಾಂ ಗಮಿಷ್ಯತಿ ॥ ೪೦ ॥
ದೂರಸ್ಥೋಽಪಿ ಯದಾ ಮರ್ತ್ಯಃ ಸ್ವಪಿತೄಂಸ್ತರ್ಪಯಿಷ್ಯತಿ ।
ತದಾಸ್ಮಜ್ಜನ್ಮಸಾಫಲ್ಯಂ ಸ ಧನಃ ಪುರುಷೋ ಭುವಿ ॥ ೪೧ ॥
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ।
ಸ್ಥಲತ್ರಯೇ ಮಹಾಪುಣ್ಯೇ ಮಧ್ಯೇ ಕೋಟಿಗುಣಂ ಭವೇತ್ ॥ ೪೨ ॥
ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಮ್ ।
ಪೂಜನಂ ಚ ಪುರಶ್ಚರ್ಯಾ ತತ್ರ ಕೋಟಿಗುಣಂ ಭವೇತ್ ॥ ೪೩ ॥
ತತ್ರಾಪ್ಯಲಭ್ಯಯೋಗೇಷು ವಾರುಣ್ಯರ್ಧೋದಯಾದಿಷು ।
ಕ್ರಿಯತೇ ಸುಕೃತಂ ತಸ್ಯಾಂ ತತ್ಸರ್ವಂ ಮೇರುತಾಂ ವ್ರಜೇತ್ ॥ ೪೪ ॥
ಗಂಗಾಯಾಃ ಪುಲಿನೇ ಯಸ್ತು ಪಿಂಡಾನ್ನಿರ್ವಪತೇ ನರಃ ।
ಗಂಗಾಜಲಸಮಾಯುಕ್ತಂ ಮುಕ್ತಾಸ್ತತ್ಪಿತರೋಽಖಿಲಾಃ ॥ ೪೫ ॥
ಗಂಗಾಯಾಂ ಯತ್ರ ಕುತ್ರಾಪಿ ಪ್ರಾಣಾಂಸ್ತ್ಯಜತಿ ಯಃ ಪುಮಾನ್ ।
ಪ್ರಯಾಗೇ ತು ವಿಶೇಷೇಣ ಸ ಮುಕ್ತೋ ನಾತ್ರ ಸಂಶಯಃ ॥ ೪೬ ॥
ಗಂಗಾಯಾಂ ದೀಕ್ಷಿತಾ ಯೇ ಚ ಸಂಸ್ಕಾರೈಶ್ಚಾಪಿ ಸಂಸ್ಕೃತಾಃ ।
ಬ್ರಾಹ್ಮಣ್ಯಂ ದುರ್ಲಭಂ ಲೋಕೇ ತೇಷ್ವೇವ ಪರಿಶಿಷ್ಯತೇ ॥ ೪೭ ॥
ಸರ್ವತ್ರೈವ ಸಮಾ ಗಂಗಾ ದೇಶಕಾಲಾದಿಭೇದತಃ ।
ಶ್ರೇಷ್ಠಾ ಶ್ರೇಷ್ಠತರಾ ಜ್ಞೇಯಾ ಫಲಾನಾಂ ತಾರತಮ್ಯತಃ ॥ ೪೮ ॥
ಘೋರೇ ಕಲಿಯುಗೇ ಚಾಸ್ಮಿನ್ ಪಾಪಿಷ್ಠಾನಾಂ ನೃಣಾಮಿದಮ್ ।
ಗಂಗಾಸ್ನಾನಂ ಹರೇರ್ನಾಮಕೀರ್ತನಂ ತಾರಕಂ ಮತಮ್ ॥ ೪೯ ॥
ವೇದಶಾಸ್ತ್ರಪುರಾಣಾನಿ ದೇವಾಶ್ಚ ಋಷಯಸ್ತಥಾ ।
ಪುನಃ ಪುನಃ ಸಮಾಲೋಕ್ಯ ಇದಮೇವ ರಟಂತಿ ತೇ ॥ ೫೦ ॥
ಯಾ ಪುತ್ರಾನ್ನೃಪಸ್ಯಾದ್ಭೂತಾನ್ ಸಗರಸ್ಯಾನಯದ್ದಿವಮ್ ।
ಅತೋ ಲೋಕತ್ರಯೇಽಪ್ಯಸ್ಯಾಃ ಪುಣ್ಯತ್ವಾತ್ ಪ್ರಥಿತಂ ಯಶಃ ॥ ೫೧ ॥

ಆರಾಧ್ಯ ತಪಸೋಗ್ರೇಣ ಯಾಂ ಗಂಗಾಂ ಸ ಭಗೀರಥಃ ।
ಪೂರ್ವಜೋದ್ಧಾರಣಾರ್ಥಾಯ ಮೇರೋಃ ಶೃಂಗಾದಿಹಾನಯತ್ ॥ ೫೨ ॥
ಕಸ್ತಾಂ ವರ್ಣಯಿತುಂ ಶಕ್ತೋ ನಿರ್ಗುಣಾಂ ಬ್ರಹ್ಮರೂಪಿಣೀಮ್ ।
ತಥಾಪಿ ಭವತಾಂ ಭಕ್ತ್ಯಾ ಮಯಾ ಪ್ರೋಕ್ತಂ ಯಥಾಮತಿ ॥ ೫೩ ॥

॥ ಇತಿ ತ್ರಿನವತಿತಮೋಽಧ್ಯಾಯಃ ॥

**ಶೇಷದೇವರು ಹೇಳಿದರು—**

ಎಲೈ ಸನಕಾದಿಗಳೇ!, ಜಗತ್ತಿನ ಎಲ್ಲ ನದಗಳೂ ನದಿಗಳೂ, ತೀರ್ಥಗಳೂ, ಪುಣ್ಯಕರವಾದ ದೇವಮಂದಿರಗಳೂ ಗಂಗೆಯಲ್ಲಿ ಮಾಡುವ ಸ್ನಾನದ ಫಲದ ಹದಿನಾರನೇ ಒಂದು ಭಾಗದಷ್ಟೂ ಪುಣ್ಯದಾಯಕವಲ್ಲ. ॥ ೬ ॥ ನೂರು ಯೋಜನಗಳ ದೂರದಿಂದ 'ಗಂಗಾ, ಗಂಗೇ' ಎಂದು ಉಚ್ಚರಿಸುವವನು ತನ್ನೆಲ್ಲಾ ಪಾಪಗಳನ್ನೂ ಕಳೆದುಕೊಳ್ಳುವನು. ಹೀಗಿರುವ ಗಂಗೆಗೆ ಯಾವುದು ತಾನೇ ಸರಿಸಮವು? ॥ ೭ ॥ ಯಾರ ಮೃತ್ತಿಕೆಯು ಮನುಷ್ಯರಿಂದ ಹಣೆಯಲ್ಲಿ ಧರಿಸಲ್ಪಟ್ಟರೆ ಅವರಿಗೆ ಸ್ಥಲದಲ್ಲಿಯೇ ಜ್ಞಾನದೃಷ್ಟಿಯೂ ಉತ್ಪತ್ತಿಯಾಗುವುದೋ ಅಂಥಾ ಗಂಗೆಗೆ ಯಾರು ಸಮರು? ॥ ೮ ॥ ಯಾವ ಗಂಗೆಯಲ್ಲಿ ಸ್ನಾನ ಮಾಡುವುದು ಮಹಾ ಪುಣ್ಯವೋ, ದೇವತೆಗಳಿಗೂ ದುರ್ಲಭವಾದದ್ದೋ, ವೈಕುಂಠದಲ್ಲಿ ಸಾರೂಪ್ಯವು ಆ ಜನ್ಮದಲ್ಲೇ ಕೊಡತಕ್ಕದ್ದೋ, ಇಂಥ ಗಂಗೆಗೆ ಯಾವುದು ತಾನೇ ಸಮವಾದೀತು? ॥ ೯ ॥ ಇಲ್ಲಿ ಸ್ನಾನ ಮಾಡಿದ ಮಹಾ ಪಾಪಿಗಳೂ ತಮ್ಮ ಎಲ್ಲ ಪಾಪಗಳಿಂದ ವಿಮೋಚಿತರಾಗಿ ವಿಮಾನವನ್ನು ಹತ್ತಿಕೊಂಡು ವೈಕುಂಠಕ್ಕೆ ತೆರಳುವರು. ॥ ೧೦ ॥ ಇಲ್ಲಿ ಸ್ನಾನಮಾಡಿದ ಮಹಾತ್ಮರು ತಮ್ಮ ತಂದೆ ಮತ್ತು ತಾಯಿಯ ಸಹಸ್ರಾರು ಕುಲಗಳನ್ನು ಉದ್ಧರಿಸಿ ಶ್ರೀ ವಿಷ್ಣುವಿನ ಲೋಕಕ್ಕೆ ತೆರಳುವರು. ॥ ೧೧ ॥ ಯಾರು ಗಂಗೆಯನ್ನು ಸ್ಮರಿಸುವರೋ ಅವರು ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದಂತೆ. ಸರ್ವಪುಣ್ಯ ಕ್ಷೇತ್ರಗಳಲ್ಲಿ ವಾಸಮಾಡಿದಂತೆಯೇ ಸರಿ. ಇದರಲ್ಲಿ ಸಂಶಯವಿಲ್ಲ. ॥ ೧೨ ॥ ಗಂಗೆಯಲ್ಲಿ ಸ್ನಾನಮಾಡಿದವರನ್ನು ದರ್ಶನ ಮಾಡಿದ ಪಾಪಿಯೂ ಕೂಡ ಸ್ವರ್ಗಭೂಮಿಯಲ್ಲಿ ವಾಸಮಾಡುವವನಾಗುವನು ಮತ್ತು ಇಂತಹವನ ಅಂಗಸ್ಪರ್ಶ ಮಾಡಿದವರೂ ದೇವತೆಗಳಿಗೆ ರಾಜನಾದ ಇಂದ್ರನಂತಾಗುವರು. ॥ ೧೩ ॥ ತುಳಸೀ ಗಿಡದ ಬುಡದಲ್ಲಿರುವ, ಬ್ರಾಹ್ಮಣರ ಪಾದದಲ್ಲಿರುವ ಮತ್ತು ಗಂಗೆಯಲ್ಲಿ ಉದ್ಭವವಾಗಿರತಕ್ಕ ಮೃತ್ತಿಕೆಯನ್ನು ಯಾರು ಹಣೆಯ ಮೇಲೆ ಧರಿಸುವರೋ ಅವರು ವೈಕುಂಠಕ್ಕೆ ತೆರಳಿ ಅಲ್ಲಿ ಜ್ಞಾನಾನಂದ ಶರೀರವನ್ನು ಸಂಪಾದಿಸಿ ಜ್ಞಾನಾನಂದಸ್ವರೂಪನಾದ ಶ್ರೀ ಮಹಾವಿಷ್ಣುವಿನ ಸಾದೃಶ್ಯವನ್ನು ಪಡೆಯುವನು. ॥ ೧೪ ॥ ಯಾವಾಗ ನಾನು ಗಂಗೆಗೆ ಹೋಗೇನು. ಯಾವಾಗ ಅವಳನ್ನು ನಾನು ಕಂಡೇನು ಎಂದು ನಿತ್ಯವೂ ಹಂಬಲಿಸುವವನು ವಿಷ್ಣುಲೋಕಕ್ಕೆ ಹೋಗುವನು. ॥ ೧೫ ॥ ನಿಶ್ಚಯವಾಗಿಯೂ ಶ್ರೀ ಮಹಾವಿಷ್ಣುವಿಗೇ ಗಂಗೆಯ ಮಹಿಮೆಯನ್ನು ನೂರು ವರ್ಷಗಳವರೆಗೆ ಹೇಳಿದರೂ ಸಾಧ್ಯವಾಗದು. ಹೀಗಿರಲು ಮಿತ ಬುದ್ಧಿಯುಳ್ಳ ಬೇರೆಯವರ ಪಾಡೇನು? (ಈ ಶ್ಲೋಕದ ಅಭಿಪ್ರಾಯವು ಗಂಗೆಯ ಮಹಿಮೆಯ ಅತಿಶಯವನ್ನು ಒತ್ತಿ ಹೇಳುವುದಕ್ಕಾಗಿಯೇ ಹೊರತು ಶ್ರೀ ಮಹಾವಿಷ್ಣುವಿನ ಅಸಾಮರ್ಥ್ಯತೆಯನ್ನು ಎತ್ತಿ ತೋರಿಸುವುದಕ್ಕಲ್ಲ ಎಂದು ತಿಳಿಯಬೇಕು). ॥ ೧೬ ॥ ಗಂಗೆಯ ಹೆಸರಿರುತ್ತಿರಲಾಗಿ ಅದನ್ನು ಉಚ್ಚರಿಸದ ಜನರು ನರಕಕ್ಕೆ ಹೋಗುತ್ತಿದ್ದಾರೆಂದರೆ ಇದು ಶ್ರೀ ವಿಷ್ಣುವಿನ ಮಾಯೆಯೇ ಸರಿ. ॥ ೧೭ ॥

ಏಕೆಂದರೆ ಯಾವಾಗಲೋ ಒಂದು ಬಾರಿ 'ಗಂಗಾ, ಗಂಗಾ' ಎಂದು ಉಚ್ಚರಿಸಿದ ಮನುಷ್ಯನು ಸಕಲ ಪಾಪಗಳಿಂದ ನಿವೃತ್ತನಾಗಿ ವಿಷ್ಣುವಿನ ಲೋಕಕ್ಕೆ ಹೋಗಿ ಅಲ್ಲಿ ವಿರಾಜಮಾನನಾಗುವನು. ॥ ೧೮ ॥ ಯಾವ ಗಂಗೆಯ ಸುತ್ತಲೂ ಇರುವ ಮೂರು ಯೋಜನ ಮಿತಿಯೊಳಗೆ ಬಂದವನು ಕೂಡ ಎಲ್ಲ ಪಾಪಗಳನ್ನು ಕಳೆದುಕೊಂಡು ತನ್ನೆಲ್ಲಾ ಅಭೀಷ್ಟಗಳನ್ನೂ ಹೊಂದುವನು. ॥ ೧೯ ॥ ಪುಣ್ಯತೀರ್ಥಗಳೆಂದು ಶಾಸ್ತ್ರಗಳಲ್ಲಿ ಮುನಿಗಳಿಂದಲೂ ಮತ್ತು ದ್ವಿಜರಿಂದಲೂ ಯಾವುದು ಹೇಳಲ್ಪಟ್ಟವೆಯೋ ಆ ಸರ್ವತೀರ್ಥಗಳಲ್ಲಿ ಸಾನ್ನಿಧ್ಯವಿರುವ ಗಂಗೆಯು ದೃಢವಾದ ಭಕ್ತಿಯಿಂದ ತನ್ನನ್ನೂ ಭಗವಂತನನ್ನೂ ಸೇವಿಸುವವರನ್ನು ಅತಿ ಸ್ನೇಹದಿಂದ ಕಾಪಾಡುವಳು. ॥ ೨೦ ॥ ಈ ರೀತಿಯಾಗಿ ಜಗತ್ತನ್ನೇ ಧಾರಣೆಮಾಡಿರುವ ಗಂಗೆಯು ತನ್ನಲ್ಲಿ ಸ್ನಾನ, ಪಾನ ಮಾಡುವವರನ್ನು ಅತಿ ಪ್ರೀತಿಯಿಂದ ಪವಿತ್ರಗೊಳಿಸುತ್ತಾಳೆ. ಇಂತಹವಳನ್ನು ಜ್ಞಾನಿಗಳು ಹೇಗೆ ತಾನೇ ಸೇವಿಸದೆ ಇರುವರು? ॥ ೨೧ ॥ ಯಾರನ್ನು ಲೋಕಕ್ಕೇ ಮಂಗಳವನ್ನುಂಟುಮಾಡುವ, ಎಲ್ಲರಿಗೂ ಜ್ಯೇಷ್ಠನಾಗಿರುವ ಮಹಾರುದ್ರದೇವರೇ ತನ್ನ ಶಿರಸ್ಸಿನಲ್ಲಿ ಇಟ್ಟುಕೊಂಡು ಸೇವಿಸುತ್ತಿದ್ದಾರೋ ಅಂತಹ ಗಂಗೆಯ ಮಹಿಮೆಯು ಯಾರಿಂದ ತಾನೇ ಕೊಂಡಾಡಲ್ಪಡುವುದಿಲ್ಲ? ॥ ೨೨ ॥ ಗಂಗೆಯ ಹೆಸರು ಸರ್ವೋತ್ತಮವು ಮತ್ತು ಪಾಪವೆಂಬ ಅರಣ್ಯಕ್ಕೆ ಕಾಡುಕಿಚ್ಚಿನಂತಿರತಕ್ಕದ್ದು. ಗಂಗೆಯು ಸಂಸಾರವೆಂಬ ವ್ಯಾಧಿಗೆ ಔಷಧಿಯಂತಿರತಕ್ಕವಳು. ಆದ್ದರಿಂದ ಈ ಗಂಗೆಯನ್ನು ಪ್ರಯತ್ನಪಟ್ಟಾದರೂ ಸ್ಮರಿಸಬೇಕು. ॥ ೨೩ ॥ ಆಶ್ಚರ್ಯವು! ಗಂಗೆಯು ಮಹಾನುಭಾವಳು, ಸ್ಮರಿಸಿದವರ ಪಾಪಪರಿಹಾರಕಳು. ಅವಳ ದರ್ಶನ ಮಾಡಿದವರಿಗೆ ಶ್ರೀಹರಿಯ ಲೋಕಗಳಾದ ವೈಕುಂಠಾದಿಗಳನ್ನು ಕೊಡಿಸತಕ್ಕವಳು. ತನ್ನ ಜಲವನ್ನು ಪಾನಮಾಡಿದವರಿಗೆ ಮುಕ್ತಿಯಲ್ಲಿ 'ಸಾರೂಪ್ಯ'ವೆಂಬ ಸ್ಥಾನವನ್ನು ದೊರಕಿಸುವಳು. ॥ ೨೪ ॥ ಯಾರು ಗಂಗೆಯ ನೀರಿನ ಹನಿಗಳಿಂದ ತೊಯ್ದುಹೋಗುವರೋ ಅವರು ಸಕಲ ಪಾಪಗಳನ್ನು ಕಳೆದುಕೊಂಡು ವೈಕುಂಠಕ್ಕೆ ಹೋಗುವರು. ॥ ೨೫ ॥ ಮನುಷ್ಯನು, ತಪಸ್ಸು, ಬ್ರಹ್ಮಚರ್ಯ ಯಜ್ಞ ಮತ್ತು ತ್ಯಾಗಗಳಿಂದ ಹೊಂದಲಾರದ ಸದ್ಗತಿಯು ಕೇವಲ ಗಂಗೆಯ ಸೇವನೆಯಿಂದ ಪ್ರಾಪ್ತವಾಗುವುದು. ॥ ೨೬ ॥ ಗಂಗೆಯಲ್ಲಿಯೇ ನೆಟ್ಟ ಮನಸ್ಸಿನಿಂದ ಗಂಗಾನದಿಯ ಸ್ವಚ್ಛ ಜಲದಲ್ಲಿ ಸ್ನಾನದಿಂದ ಮನುಷ್ಯನು ಪವಿತ್ರವಾಗುವಷ್ಟು ನೂರಾರು ಯಜ್ಞಗಳ ಆಚರಣೆಯಿಂದಲೂ ಆಗುವುದಿಲ್ಲ. ॥ ೨೭ ॥ ಅಗ್ನಿಯ ಸ್ಪರ್ಶದಿಂದ ಹತ್ತಿಯು ತಕ್ಷಣವೇ ಸುಟ್ಟುಹೋಗುವಂತೆ ಗಂಗೆಯನ್ನು ಸೇವಿಸಿದ ನರನ ಪಾಪರಾಶಿಗಳು ತಕ್ಷಣವೇ ಭಸ್ಮೀಭೂತವಾಗುವುವು. ॥ ೨೮ ॥ ದೇಹಶುದ್ಧಿಗಾಗಿ ಚಾಂದ್ರಾಯಣ ಸಹಸ್ರಗಳ ಆಚರಣೆಯಿಂದಾಗುವ ಪರಿಣಾಮವೂ ಯಥೇಷ್ಟ ಗಂಗಾಜಲಪಾನದ ಪರಿಣಾಮವೂ ಒಂದೇ ಆಗಿದೆ. ॥ ೨೯ ॥ ಸಹಸ್ರಾರು ಯುಗಗಳವರೆಗೆ ಒಂದೇ ಪಾದದ ಮೇಲೆ ನಿಂತು ಮಾಡುವ ತಪಸ್ಸಿಗಿಂದಲೂ ಅಧಿಕವಾದ ಪುಣ್ಯವು ಯಥೇಷ್ಟವಾಗಿ ಗಂಗಾಜಲವನ್ನು ಪಾನಮಾಡುವುದರಿಂದ ಲಭ್ಯವಾಗುವುದು. ॥ ೩೦ ॥ ಬಹಳ ದಿವಸಗಳವರೆಗೆ ಶಿರಸ್ಸನ್ನು ಕೆಳಗೆ ಇಟ್ಟು ಕಾಲುಗಳನ್ನು ಮೇಲೆ ಮಾಡಿ ನಿಂತಿರುವುದರಿಂದ ಬರುವ ಪುಣ್ಯವೂ ನಿಯಮದಿಂದ ಗಂಗೆಯಲ್ಲಿ ಮಾಡುವ ಸ್ನಾನದಿಂದ ಬರುವ ಪುಣ್ಯವೂ ಒಂದೇ ಸಮವಾದುದು. ॥ ೩೧ ॥ ಈ ಭೂಲೋಕದಲ್ಲಿ ಸದ್ಗತಿಯನ್ನು ಹುಡುಕುತ್ತಿರುವ ಅಶಕ್ತರು, ದರಿದ್ರರು ಮತ್ತು ಮೂರ್ಖರು ಇವರುಗಳಿಗೆ ಗಂಗೆಯ ಸೇವನೆಗೆ ಸಮನಾದುದು ಬೇರೊಂದಿಲ್ಲ. ॥ ೩೨ ॥ ಗಂಗೆಯ ಮಹಿಮೆಯ ಶ್ರವಣ, ಕೀರ್ತನೆ, ಧ್ಯಾನ, ದರ್ಶನ, ಗಂಗೆಯ ಪಾನ, ಗಂಗೆಯಲ್ಲಿ ಸ್ನಾನ ಇವುಗಳು ಮನುಷ್ಯನ ತಂದೆ ಮತ್ತು ತಾಯಿಯರ

ವಂಶಗಳೆರಡನ್ನೂ ವಿಶೇಷವಾಗಿ ಉದ್ಧಾರಮಾಡುತ್ತವೆ. ॥ ೩೩ ॥ ಸಾಮರ್ಥ್ಯವಿದ್ದೂ ಯಾರು ಪುಣ್ಯಜಲದಿಂದ ತುಂಬಿರುವ ಗಂಗೆಯ ದರ್ಶನ ಮಾಡುವುದಿಲ್ಲವೋ ಅವನು ಹುಟ್ಟು ಕುರುಡನಿಗೂ, ಮೃತನಾದವನಿಗೂ ಮತ್ತು ಹೆಳವನಿಗೂ ಸಮ. ॥ ೩೪ ॥ ಯಾರು ಮೂರು ಕಾಲಗಳಲ್ಲಿಯೂ ಮುನಿಶ್ರೇಷ್ಠರಿಂದಲೂ ಮತ್ತು ಇಂದ್ರಾದಿದೇವತೆಗಳಿಂದಲೂ ಸೇವಿಸಲ್ಪಡುತ್ತಾಳೋ ಅಂತಹ ಗಂಗೆಯನ್ನು ಯಾರು ತಾನೇ ಸೇವಿಸದಿರುವರು? ॥ ೩೫ ॥ ಯಾವನಿಗೆ ಪ್ರಾಣವು ಹೋಗುತ್ತಿದ್ದರೂ ಪ್ರಯತ್ನಪಟ್ಟು ಕೈಮುಗಿದು ನಿಂತು ಗಂಗೆಯನ್ನು ಮನಸ್ಸಿನಲ್ಲಿ ಧ್ಯಾನಿಸುವನೋ ಅವನು ಉತ್ತಮ ಗತಿಯನ್ನು ಹೊಂದುವನು. ॥ ೩೬ ॥ ಗಂಗೆಯ ತರಂಗಗಳಿಂದ ಯಾರ ಚರ್ಮ, ಮೂಳೆಗಳು, ಕೂದಲುಗಳು ಮತ್ತು ಉಗುರುಗಳಾದರೂ ತೋಯಿಸಲ್ಪಡುವುವೋ ಅವರು ಶುದ್ಧರಾಗಿ ಪರಲೋಕವನ್ನು ಹೊಂದುವರು. ॥ ೩೭ ॥ ಆಕಾಶದಿಂದ ಧುಮ್ಮಿಕ್ಕುತ್ತಿರುವ ಪರಮ ಪುಣ್ಯಕರವಾದ ಗಂಗಾದೇವಿಯನ್ನು ಯಾವ ಮಹೇಶ್ವರನು ತನ್ನ ಶಿರದಲ್ಲಿ ಧಾರಣೆ ಮಾಡಿದ್ದಾನೋ ಅಂತಹ ಗಂಗೆಯನ್ನು ಯಾರು ತಾನೇ ಸೇವಿಸುವುದಿಲ್ಲ? ॥ ೩೮ ॥ ಕುರುಡರು, ಅತ್ಯಂತ ದುರ್ಬಲರು, ದಡ್ಡರು, ಊನವಾದ ಅಂಗಾಂಗವುಳ್ಳವರೂ, ಪತಿತರೂ, ರೋಗಿಗಳು ಮತ್ತು ಅಂತ್ಯಜರೂ ಗಂಗೆಯನ್ನು ಸೇವಿಸಿದರೆ ಅವರು ದೇವತೆಗಳಿಗೆ ಸರಿಸಮನಾಗುತ್ತಾರೆ. ॥ ೩೯ ॥ ಎಲೈ ಮುನಿಶ್ರೇಷ್ಠರೇ! ಎಲ್ಲರ ಪಿತೃಗಳೂ ''ನಮ್ಮ ವಂಶದಲ್ಲಿ ಯಾರಾದರೂ ಯಾವಾಗಾದರೂ ಗಂಗೆಗೆ ಹೋಗುವನಾ?'' ಎಂದು ಅಪೇಕ್ಷಿಸುತ್ತಿರುತ್ತಾರೆ. ॥ ೪೦ ॥. ಗಂಗೆಯಿಂದ ಬಹುದೂರದಲ್ಲಿದ್ದರೂ ನಮ್ಮ ವಂಶದ ಯಾವನಾದರೂ, ಗಂಗೆಯ ಜಲದಿಂದ ನಮಗೆ ತರ್ಪಣವನ್ನು ಕೊಡುವನೇ? ಅಂಥವನು ಇದ್ದರೆ ಅವನೇ ಧನ್ಯನು, ಪುಣ್ಯವಂತನು. ಅವನ ಜೀವನವು ಸಫಲವಾಯಿತು ಎಂದು ಬಯಸುವರು. ಹರಿದ್ವಾರ; ಪ್ರಯಾಗ ಮತ್ತು ಗಂಗಾ ಸಂಗಮ ಈ ಮೂರು ಸ್ಥಳಗಳೂ ಬಹು ಪುಣ್ಯಕರವಾದುವು. ಇವುಗಳ ಮಧ್ಯೆ ಇರುವ ಸ್ಥಳಗಳು ಕೋಟಿಯಷ್ಟು ಹೆಚ್ಚಿಗೆ ಪುಣ್ಯಕರವಾದುವು. ॥ ೪೧-೪೨ ॥ ಇವುಗಳಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ಅಧ್ಯಯನ, ಪಿತೃತರ್ಪಣ, ಪೂಜಾದಿಗಳು ಮತ್ತು ಪುರಶ್ಚರಣ ಮುಂತಾದುವು ಕೋಟಿಯಷ್ಟು ಹೆಚ್ಚು ಪುಣ್ಯಪ್ರದಗಳು. ॥ ೪೩ ॥ ಅದರೊಳಗೂ ಅಪರೂಪವಾಗಿ ಬರತಕ್ಕ ವಾರುಣೀ ಮತ್ತು ಅರ್ಧೋದಯಾದಿ ಯೋಗಗಳಲ್ಲಿ ಗಂಗಾತೀರದಲ್ಲಿ ಮಾಡಿದ ಸ್ವಲ್ಪ ಪುಣ್ಯಕಾರ್ಯವೂ ಮೇರುಪರ್ವತದಷ್ಟು ಪುಣ್ಯವನ್ನು ತಂದುಕೊಡುವುದು. ॥ ೪೪ ॥ ಗಂಗೆಯ ತೀರದಲ್ಲಿ ಯಾರು ಪಿತೃಗಳಿಗೆ ಗಂಗಾ ಜಲ ಸಮೇತವಾದ ಪಿಂಡವನ್ನು ಪ್ರದಾನ ಮಾಡುವರೋ ಮತ್ತು ಅರ್ಘ್ಯಗಳನ್ನು ಗಂಗೆಯ ಜಲದಲ್ಲಿ ವಿಸರ್ಜಿಸುವರೋ ಅವರ ಎಲ್ಲ ಪಿತೃಗಳೂ ಮುಕ್ತರಾಗುತ್ತಾರೆ. ॥ ೪೫ ॥ ಗಂಗೆಯಲ್ಲಿ ಎಲ್ಲಾದರಾಗಲೀ, ಅದರಲ್ಲೂ ಪ್ರಯಾಗ ಕ್ಷೇತ್ರದಲ್ಲಿಯಾದರೂ ಪ್ರಾಣವನ್ನು ತ್ಯಾಗಮಾಡಿದರೆ ಅವರಿಗೆ ಮುಕ್ತಿಯು ಖಂಡಿತವಾಗಿ ಸಿದ್ಧವಾಗುವುದು. ॥ ೪೬ ॥ ಗಂಗೆಯಲ್ಲಿ ಯಾರು ದೀಕ್ಷೆಯನ್ನು ಹೊಂದುತ್ತಾರೋ, ಸಂಸ್ಕಾರಗಳಿಂದ ಸಂಸ್ಕೃತರಾಗುತ್ತಾರೋ, ಅಂಥವರಿಗೆ ಲೋಕದಲ್ಲೇ ಸಿಗಲಾರದ ಬ್ರಾಹ್ಮಣ್ಯವು ಇರುವುದು. ॥ ೪೭ ॥ ಗಂಗೆಯು ಎಲ್ಲೆಡೆಯೂ ಒಂದೇ ಸಮಳು. ಆದರೆ ದೇಶಕಾಲಗಳ ಭೇದದಿಂದ ಫಲಗಳ ವ್ಯತ್ಯಾಸದಿಂದ ಶ್ರೇಷ್ಠತರಳು ಮತ್ತು ಶ್ರೇಷ್ಠತಮಳು ಎಂದು ತಿಳಿಯಬೇಕು. ॥ ೪೮ ॥ ಭಯಂಕರವಾದ ಈ ಕಲಿಯುಗದಲ್ಲಿ ಪಾಪಿಷ್ಠರಾದ ಮನುಷ್ಯರಿಗೆ ಗಂಗಾಸ್ನಾನವು ಮತ್ತು ಹರಿನಾಮ ಸಂಕೀರ್ತನೆಯು ಸಂಸಾರ ಸಮುದ್ರದಿಂದ ದಾಟಿಸತಕ್ಕವು. ॥ ೪೯ ॥ ವೇದಗಳು, ಶಾಸ್ತ್ರಗಳು ಮತ್ತು ಪುರಾಣಗಳು ಹಾಗೂ ದೇವತೆಗಳು ಮತ್ತು ಋಷಿಗಳು ಪುನಃ

ಪುನಃ ವಿಚಾರಮಾಡಿ ಇದನ್ನೇ ಹೇಳುತ್ತಾರೆ. ॥ ೫೦ ॥ ತಮ್ಮ ಪಾಪಾಗ್ನಿಯಿಂದಲೂ ಮತ್ತು ಕಪಿಲನ ನೇತ್ರಾಗ್ನಿಯಿಂದಲೂ ಭಸ್ಮೀಭೂತರಾಗಿದ್ದ ಸಗರನ ಮಕ್ಕಳು ಯಾವ ಗಂಗೆಯ ಸ್ಪರ್ಶದಿಂದ ಸ್ವರ್ಗವನ್ನು ಹೊಕ್ಕರೋ ಅಂತಹ ಗಂಗೆಯು ತನ್ನ ಪುಣ್ಯಪ್ರದಾಯಕತ್ವದಿಂದಲೇ ಪ್ರಸಿದ್ಧಳಾಗಿದ್ದಾಳೆ. ॥ ೫೧ ॥ ಉಗ್ರವಾದ ತಪಸ್ಸುಮಾಡಿ ತನ್ನ ಪೂರ್ವಿಕರ ಉದ್ಧಾರಕ್ಕಾಗಿ ಮೇರುವಿನ ಶಿಖರದಿಂದ ಭಗೀರಥನು ಈ ಭೂಮಿಗೆ ಯಾರನ್ನು ತಂದನೋ ಅಂತಹ ಗಂಗೆಯನ್ನು ಯಾರು ತಾನೇ ವರ್ಣಿಸಿಯಾರು? ಆ ಗಂಗೆಯು ಸತ್ವರಜಸ್ತಮೋಮಯವಾದ ಪ್ರಾಕೃತ ಗುಣಗಳಿಂದ ವರ್ಜಿತವಾದ ಸಾಕ್ಷಾತ್ ಬ್ರಹ್ಮಸ್ವರೂಪವೇ(ಎಂದರೆ, ಪರಬ್ರಹ್ಮನ ವಿಶೇಷ ಸನ್ನಿಧಾನಕ್ಕೆ ಪಾತ್ರಳು) ಹೀಗಿದ್ದರೂ ನಿಮ್ಮಲ್ಲಿನ ಸ್ನೇಹದಿಂದ ನಾನು ಇದನ್ನು ವರ್ಣಿಸುವ ಪ್ರಯತ್ನ ಮಾಡಿದ್ದೇನೆ. ॥ ೫೨-೫೩ ॥

॥ ತೊಂಬತ್ತಮೂರನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ಚತುರ್ನವತಿತಮೋಽಧ್ಯಾಯಃ ॥ ೯೪॥

ಋಷಯ ಊಚುಃ—

ಶೇಷರಾಜ ತ್ವಯೋಕ್ತೋಽಸೌ ಗಂಗಾಯಾ ಮಹಿಮಾದ್ಭುತಃ ।
ಶ್ರುತ್ವಾ ಯನ್ನಿರ್ವೃತಾನ್ಯದ್ಯ ಸಮಸ್ತಾನೀಂದ್ರಿಯಾಣಿ ನಃ ॥ ೧ ॥
ಅಥೈಕಃ ಸಂಶಯೋ ಜಾತಃ ಕಥಂ ಗಂಗಾ ಸುಮೇರುಣಾ ।
ಭಗೀರಥೇನ ಚಾನೀತಾ ವಿಸ್ತರಾತ್ತದ್ವದಸ್ವ ನಃ ॥ ೨ ॥

## ॥ ತೊಂಭತ್ತನಾಲ್ಕನೆಯ ಅಧ್ಯಾಯವು ॥

ಸನಕಾದಿಗಳು ಹೇಳಿದರು—

ಹೇ ಶೇಷನಾಮಕ ರಾಜರೇ!, ನಿಮ್ಮಿಂದ ಹೇಳಲ್ಪಟ್ಟ ಈ ಗಂಗೆಯ ಮಾಹಾತ್ಮ್ಯೆಯು ಅದ್ಭುತವಾದುದು. ಇದನ್ನು ಶ್ರವಣಮಾಡಿ ನಮ್ಮ ಸಮಸ್ತ ಇಂದ್ರಿಯಗಳೂ ಆನಂದ ಹೊಂದಿವೆ. ॥ ೧ ॥ ಸುಮೇರು ಪರ್ವತದಿಂದ ಗಂಗೆಯು ಹೇಗೆ ಭಗೀರಥನಿಂದ ತರಲ್ಪಟ್ಟಳು? ಈ ಒಂದು ವಿಷಯವು ನಮ್ಮನ್ನು ಸಂದೇಹದಲ್ಲಿ ಹಾಕಿದೆ. ಆದ್ದರಿಂದ ಇದನ್ನು ವಿಸ್ತಾರವಾಗಿ ಹೇಳಿರಿ. ॥ ೨ ॥

ಶೇಷ ಉವಾಚ—

ಶೃಣುಧ್ವಂ ಬ್ರಹ್ಮತನಯಾ ಗಂಗೋತ್ಪತ್ತಿಮಿಹಾಗಮಮ್ ।
ವರ್ಣಯಾಮಿ ವಿಶೇಷೇಣ ಸೇತಿಹಾಸಂ ಯಥಾಶ್ರುತಮ್ ॥ ೩ ॥
ಆಸೀದ್ರವಿಕುಲೇ ರಾಜಾ ಸಗರಃ ಸತ್ಯಸಙ್ಗರಃ ।
ತತ್ಪತ್ನ್ಯಾವಾಸತುರ್ದಿವ್ಯೇ ಕೇಶಿನೀ ಸುಮತಿಸ್ತಥಾ ॥ ೪ ॥
ಕೇಶಿನ್ಯಾಸ್ತನಯೋ ಜಜ್ಞೇಽಸಮಂಜಾ ಇತಿ ವಿಶ್ರುತಃ ।
ಪುತ್ರಾಃ ಷಷ್ಟಿಸಹಸ್ರಾಣಿ ಸುಮತೇಸ್ಸಾಗರಾಭವನ್ ॥ ೫ ॥
ಅಂಶುಮಾನ್ನಾಮಪುತ್ರೋಽಭೂತ್ಗುಣವಾನಸಮಂಜಸಃ ।
ಸಗರಸ್ತು ತದಾರಾಜ್ಯಂ ಧರ್ಮೇಣ ಪ್ರಶಶಾಸ ಹ ॥ ೬ ॥
ಸಗರಃ ಸಾಗರಾಂತಾಯಾ ಭುವೋ ರಾಜ್ಯಮಕಂಟಕಂ ।
ಕುರ್ವನ್ ವಿಚಾರಯಾಮಾಸ ಸ್ವಹಿತಂ ಮುನಿಭಿಸ್ಸಹ ॥ ೭ ॥
ತೇಽಪ್ಯೂಚುರಶ್ವಮೇಧೇನ ಯಜಸ್ವ ಪುರುಷಂ ಪರಂ ।
ಇದಮೇವ ಪರಂ ಜ್ಞೇಯಂ ಕೃಚ್ಛ್ರಲಬ್ಧಶ್ರಿಯಃ ಫಲಮ್ ॥ ೮ ॥
ಇತಿ ತದ್ವಚನಂ ಶ್ರುತ್ವಾ ಯಜ್ಞಾರಂಭಮಚೀಕ್ಲೃಪತ್ ।
ಪ್ರಾಕ್ತನಂ ಚಾಶ್ವಮುಕ್ತೇರ್ಯತ್ತತ್ಕೃತ್ಯಂ ಸಮುಪಾದಯತ್ ॥ ೯ ॥
ಅಥಾಶ್ವಂ ಯಜ್ಞಿಯಂ ದಿವ್ಯಂ ಸರ್ವಲಕ್ಷಣಸಂಯುತಮ್ ।
ಮೋಚಯಾಮಾಸ ವಿಧಿವದೇಕರಾಡ್ರಘುನಂದನಃ ॥ ೧೦ ॥

ಅಶ್ವಸ್ಯಾನುಚರಃ ಪೌತ್ರೋ ದೃಢಧನ್ವಾ ಮಹಾಬಲಃ ।
ಅಂಶುಮಾನಭವದ್ವೀರಸ್ಸಮರ್ಥಸ್ಸಗರಾಜ್ಞಯಾ ॥ ೧೧ ॥
ಭ್ರಮಮಾಣಮಥಾಶ್ವಂ ತಂ ಪುರುರೂಪಃ ಪುರಂದರಃ ।
ಹೃತ್ವಾಶ್ವಂ ವಿವರೇ ಗತ್ವಾ ಕಪಿಲಸ್ಯ ಬಬಂಧ ಹ ॥ ೧೨ ॥
ಹೃತೇಽಶ್ವೇ ಯಜ್ಞಿಯೇ ತತ್ರ ಕೇನಾಪಿ ಧರಣೀತಲಾತ್ ।
ಯಾಜಕಾಃ ಸಮುಪಾಗಮ್ಯ ಯಜಮಾನಮಥಾಬ್ರುವನ್ ॥ ೧೩ ॥
ಕೇನಾಪಿ ಪುರುರೂಪೇಣ ಹೃತೋಽಶ್ವಸ್ತವ ಯಜ್ಞಿಯಃ ।
ಹತ್ವಾ ತಮಶ್ವಹಂತಾರಂ ತಮಶ್ವಂ ಶೀಘ್ರಮಾನಯ ॥ ೧೪ ॥
ಯಜ್ಞಚ್ಛಿದ್ರಂ ಮಹಾನಿಷ್ಟಂ ಸರ್ವೇಷಾಮಹಿತಾಯ ನಃ ।
ತತ್ತಥಾ ಕ್ರಿಯತಾಂ ರಾಜನ್ ಯಥಾಽಚ್ಛಿದ್ರಃ ಕ್ರತುರ್ಭವೇತ್ ॥ ೧೫ ॥
ಇತಿ ತೇಷಾಂ ವಚಃ ಶ್ರುತ್ವಾ ತಸ್ಮಿನ್ಸದಸಿ ಪಾರ್ಥಿವಃ ।
ಷಷ್ಟಿಪುತ್ರಸಹಸ್ರಾಣಿ ಸಮಾಹೂಯೇದಮಬ್ರವೀತ್ ॥ ೧೬ ॥
ಶೃಣುಧ್ವಂ ಪುತ್ರಕಾ ವಾಕ್ಯಂ ಯಜ್ಞಿಯೋಽಶ್ವೋ ಹೃತೋ ಮಮ ।
ಕೇನ ವಾ ಕುತ್ರ ವಾ ಸೋಽಸ್ತಿ ತಮಾನಯತ ಸತ್ವರಮ್ ॥ ೧೭ ॥
ಓಂ ಇತ್ಯುಕ್ತ್ವಾಥ ತೇ ಸರ್ವೇ ಪ್ರಸ್ಥಿತಾಶ್ಚಸ್ತ್ರಪ್ರಾಣಯಃ ।
ದಶದಿಕ್ಷ್ವಪ್ಯದೃಷ್ಟ್ವಾ ತಂ ವಿಷಣ್ಣಾಃ ಪುನರಾಗಮನ್ ॥ ೧೮ ॥
ರಾಜನಿರ್ಬಂಧಮಾಲಕ್ಷ್ಯ ಪುನಃ ಸರ್ವೇ ಪ್ರತಸ್ಥಿರೇ ।
ಅವನಿಂ ಖನಯಾಮಾಸುರ್ಯಜ್ಞಿಯಾಶ್ವದಿದೃಕ್ಷಯಾ ॥ ೧೯ ॥
ಪ್ರಾಗುದೀಚ್ಯಾಮಥೋ ಕೇಚಿತ್ಬಿಲಮುತ್ಕೀರ್ಣಮೃತ್ತಿಕಮ್ ।
ದೃಷ್ಟ್ವಾ ಪ್ರವಿವಿಶುಸ್ತಸ್ಮಿನ್ ಸರ್ವೇ ಸಗರನಂದನಾಃ ॥ ೨೦ ॥
ತತ್ರ ತೇ ದದೃಶುಸ್ಸರ್ವೇ ಕಪಿಲಾಖ್ಯಂ ಮಹಾಮುನಿಮ್ ।
ಧ್ಯಾನನಿಷ್ಠಂ ಜಡೀಭೂತಂ ತತ್ರೈವಾಶ್ವಂ ಚ ಯಜ್ಞಿಯಮ್ ॥ ೨೧ ॥
ಪ್ರಮತ್ತಾ ಪಾಪನಿರತಾಸ್ತೇ ಸರ್ವೇಽಪ್ಯವಿವೇಕಿನಃ ।
ಸಮೀಪಂ ಸಹಸಾಭ್ಯೇತ್ಯ ತಂ ಮುನಿಂ ಬದ್ಧುಮುದ್ಯತಾಃ ॥ ೨೨ ॥
ಹನ್ಯತಾಂ ಹನ್ಯತಾಮೇಷ ಬಧ್ಯತಾಂ ಬಧ್ಯತಾಮಯಮ್ ।
ಗೃಹ್ಯತಾಂ ಗೃಹ್ಯತಾಮಾಶು ಇತ್ಯೂಚುಶ್ಚ ಪರಸ್ಪರಮ್ ॥ ೨೩ ॥
ಹೃತಾಶ್ವಸ್ಸಾಧುಭಾವೇನ ಬಕಧ್ಯಾನಪರಾಯಣಃ ।
ಆಡಂಬರಮಹೋ ಲೋಕೇ ಕುರ್ವಂತಿ ಸತತಂ ಖಲಾಃ ॥ ೨೪ ॥
ಪರಸ್ವಂ ಧ್ಯಾಯತೇಽನೇನ ಹ್ರಿಯತೇ ಪರಜೀವನಮ್ ।
ಇತ್ಯುಚ್ಚರಂತೋ ಜಹಸುಃ ಕಪಿಲಂ ತೇ ಮುನೀಶ್ವರಮ್ ॥ ೨೫ ॥

ಸಮಸ್ತೇಂದ್ರಿಯಸಂದೋಹಂ ನಿಯಮ್ಯಾತ್ಮಾನಮಾತ್ಮನಿ ।
ಪಶ್ಯನ್ಮುನಿವರಸ್ತೇಷಾಂ ತತ್ಕರ್ಮ ಜ್ಞಾತವಾನ್ನಹಿ ॥ ೨೬ ॥
ಆಸನ್ನಮೃತ್ಯವಸ್ತೇ ತು ವಿನಷ್ಟಮತಯೋ ಮುನಿಂ ।
ಪದ್ಭಿಸ್ತಂ ತಾಡಯಾಮಾಸುರ್ಬಹವೋ ಜಗೃಹುಃ ಪರೇ ॥ ೨೭ ॥
ಪರಿತ್ಯಕ್ತಸಮಾಧಿಶ್ಚ ತಾನ್ ದೃಷ್ಟ್ವಾ ವಿಸ್ಮಿತೋಽಭವತ್ ।
ಉವಾಚ ಭಾವಗಂಭೀರಂ ವಚನಂ ಖಿನ್ನಮಾನಸಃ ॥ ೨೮ ॥

**ಶೇಷದೇವರು ಹೇಳಿದರು—**

ಎಲೈ ಬ್ರಹ್ಮನ ಮಕ್ಕಳುಗಳಾದ ಸನಕಾದಿಗಳೇ! ಕೇಳಿರಿ. ಗಂಗೆಯ ಉತ್ಪತ್ತಿಯನ್ನೂ, ಇಲ್ಲಿಗೆ ಅವಳ ಆಗಮನವನ್ನೂ, ಇದಕ್ಕೆ ಸಂಬಂಧಪಟ್ಟ ಇತಿಹಾಸದೊಡನೆ ನಾನು ಹ್ಯಾಗೆ ಕೇಳಿದ್ದೇನೆಯೋ ಹಾಗೆಯೇ ವಿಶೇಷವಾಗಿ ಹೇಳುತ್ತೇನೆ. ॥ ೩ ॥ ಸತ್ಯನಿಷ್ಠನಾದ ಸಗರನೆಂಬ ರಾಜನು ಸೂರ್ಯವಂಶದಲ್ಲಿ ಇದ್ದನು. ಅವನಿಗೆ ಕೇಶಿನೀ ಮತ್ತು ಸುಮತೀ ಎಂಬ ಇಬ್ಬರು ಹೆಂಡತಿಯರಿದ್ದರು. ॥ ೪ ॥ ಕೇಶಿನಿಗೆ ಬಹುಪ್ರಸಿದ್ಧನಾದ ಅಸಮಂಜಸನೆಂಬ ಮಗನು ಹುಟ್ಟಿದನು. ಸಗರನಿಗೆ ಸುಮತಿಯಲ್ಲಿ ಅರವತ್ತು ಸಹಸ್ರ ಸಾಗರರೆಂಬ ಪುತ್ರರು ಹುಟ್ಟಿದರು. ॥ ೫ ॥ ಅಸಮಂಜಸನಿಗೆ ಅಂಶುಮಾನ್ ಎಂಬ ಮಗನು ಹುಟ್ಟಿದನು. ಇವನು ಬಹುಗುಣಭರಿತನು. ಆಗ ಸಗರನು ಧರ್ಮದಿಂದ ರಾಜ್ಯವನ್ನು ಆಳುತ್ತಿದ್ದನು. ॥ ೬ ॥ ಸಾಗರಗಳವರೆಗೆ ಇದ್ದ ರಾಜ್ಯವನ್ನು ನಿಷ್ಕಂಟಕವಾಗಿ ಆಳುತ್ತಿದ್ದ ಸಗರನು ಮುನಿಗಳೊಡನೆ ತನ್ನ ಹಿತವನ್ನು ವಿಚಾರ ಮಾಡಿದನು. ॥ ೭ ॥ ಅವರುಗಳು, ''ಅಶ್ವಮೇಧಯಾಗವನ್ನು ಮಾಡಿ ಶ್ರೀ ಪುರುಷೋತ್ತಮನನ್ನು ಸಂತುಷ್ಟಿಗೊಳಿಸು. ಇದೇ ಕಷ್ಟದಿಂದ ಸಂಪಾದಿಸಿದ ಸಂಪತ್ತಿಗೆ ಉತ್ಕೃಷ್ಟವಾದ ಫಲವು ಎಂದರು. ॥ ೮ ॥ ಈ ರೀತಿಯಾದ ಅವರ ಸಲಹೆಯನ್ನು ಕೇಳಿ ಸಗರನು ಅಶ್ವಮೇಧಯಾಗವನ್ನು ಪ್ರಾರಂಭಿಸಿದನು. ಯಜ್ಞಾಶ್ವವನ್ನು ಸಂಚಾರಕ್ಕಾಗಿ ಬಿಡುವ ಪೂರ್ವಭಾಗಿಯಾದ ಕರ್ಮಗಳನ್ನೆಲ್ಲಾ ಅವನು ಮಾಡಿ ಮುಗಿಸಿದನು. ॥ ೯ ॥ ಅನಂತರ ದಿವ್ಯವಾದ, ಸರ್ವಲಕ್ಷಣ ಸಂಪನ್ನವಾದ ಯಜ್ಞಾಶ್ವವನ್ನು ಬಹುಪುತ್ರರ ತಂದೆಯೂ ಮತ್ತು ಭೂಮಂಡಲಕ್ಕೆಲ್ಲಾ ಒಬ್ಬನೇ ರಾಜನೂ ಆಗಿದ್ದ ಸಗರನು ಸಂಚಾರಕ್ಕಾಗಿ ಬಿಟ್ಟನು. ॥ ೧೦ ॥ ಸಗರನ ಮೊಮ್ಮಗ ಅಂಶುಮಾನನು ಆ ಅಶ್ವವನ್ನು ಹಿಂಬಾಲಿಸಿ ಹೋದನು. ಇವನು ದೃಢವಾದ ಧನುರ್ಧಾರಿಯೂ, ಮಹಾಬಲಿಷ್ಠನೂ, ವೀರನೂ ಮತ್ತು ಸಮರ್ಥನೂ ಆಗಿದ್ದನು. ॥ ೧೧ ॥ ವಿಷ್ಣುವಿನ ಅಂಶವುಳ್ಳ ಶತಯಜ್ಞಗಳನ್ನು ಮಾಡಿದ್ದ ಇಂದ್ರನು ಸಂಚಾರಮಾಡುತ್ತಿದ್ದ ಈ ಕುದುರೆಯನ್ನು ಅಪಹರಿಸಿ ಪಾತಾಳದಲ್ಲಿ ತಪಸ್ಸುಮಾಡುತ್ತಿದ್ದ ಕಪಿಲಮಹರ್ಷಿಯ ಸಮೀಪದಲ್ಲಿ ಕಟ್ಟಿಹೋದನು. ॥ ೧೨ ॥ ಹೀಗೆ ಯಜ್ಞಾಶ್ವವು ಭೂತಲದಿಂದ ಅಪಹೃತವಾಗಿರಲು ಯಜ್ಞಮಾಡಿಸುವವರು ಯಜ್ಞದ ಯಜಮಾನನಾದ ಸಗರನನ್ನು ಸಮೀಪಿಸಿ ''ಅದೃಶ್ಯರೂಪದಿಂದ ಬಂದ ಯಾವನೋ ಒಬ್ಬನಿಂದ ನಿನ್ನ ಯಜ್ಞಾಶ್ವವು ಕಳುವಾಗಿದೆ. ಆದ್ದರಿಂದ ಈ ಅಶ್ವದ ಹಾದಿಯನ್ನು ಹುಡುಕಿ ಜಾಗ್ರತೆಯಾಗಿ ಅಶ್ವವನ್ನು ತರಿಸು'', ಮತ್ತು ''ಯಜ್ಞಕ್ಕೆ ಆಗಿರುವ ವಿಘ್ನವು ಮಹಾ ಅನಿಷ್ಟಕಾರಕವು. ಎಲ್ಲರಿಗೂ ಅಹಿತವನ್ನುಂಟುಮಾಡತಕ್ಕದ್ದು. ಆದ್ದರಿಂದ ರಾಜನೇ! ಹೇಗಾದರೂ ಮಾಡಿ ಆ ಅಶ್ವವನ್ನು ಹುಡುಕಿಸಿ ತಂದು ಯಜ್ಞವನ್ನು ನಿರ್ವಿಘ್ನವುಳ್ಳದ್ದನ್ನಾಗಿ ಮಾಡು'' ಎಂದು ಹೇಳಿದರು. ॥ ೧೩-೧೫ ॥ ಈ ರೀತಿಯಾದ ಅವರ

ಮಾತನ್ನು ಕೇಳಿದ ಸಗರ ರಾಜನು ರಾಜಸಭೆಯಲ್ಲಿ ತನ್ನ ಅರವತ್ತು ಸಾವಿರ ಮಂದಿ ಮಕ್ಕಳನ್ನೂ ಕರೆದು "ಯಾರಿಂದಲೋ ಎಲ್ಲಿಯೋ ನನ್ನ ಯಜ್ಞಾಶ್ವವು ಅಪಹರಿಸಲ್ಪಟ್ಟಿದೆ. ಅದನ್ನು ಹುಡುಕಿ ಜಾಗ್ರತೆಯಾಗಿ ತನ್ನಿರಿ" ಎಂದು ಆಜ್ಞಾಪಿಸಿದನು. ॥ ೧೬-೧೭ ॥ "ಆಗಲಿ" ಎಂದು ಹೇಳಿದ ಅವರು ಆಯುಧಗಳಿಂದ ಸಹಿತರಾಗಿ ಹೊರಟು ಹತ್ತು ದಿಕ್ಕುಗಳಲ್ಲಿಯೂ ಹುಡುಕಿ ಕುದುರೆಯನ್ನು ಕಂಡುಹಿಡಿಯದೆ ಖಿನ್ನರಾಗಿ ರಾಜನ ಹತ್ತಿರಕ್ಕೆ ಹಿಂತಿರುಗಿ ಬಂದರು. ॥ ೧೮ ॥ ರಾಜನ ನಿರ್ಬಂಧನೆಯನ್ನು ತಿಳಿದು ಅವರು ಕುದುರೆಯನ್ನು ಹುಡುಕಲು ಮತ್ತೆ ಹೊರಟರು ಮತ್ತು ಕುದುರೆಯನ್ನು ಹುಡುಕಲು ಭೂಮಿಯನ್ನು ತೋಡಿದರು. ॥ ೧೯ ॥ ಮೊದಲೇ ಉತ್ತರದಿಕ್ಕಿನಲ್ಲಿ ಅವರು ತೋಡಲ್ಪಟ್ಟಿದ್ದ ಬಿಲವನ್ನು ನೋಡಿದರು. ಆದರಿಂದ ಮಣ್ಣನ್ನು ಹೊರತೆಗೆದು ರಾಶಿ ಹಾಕಲ್ಪಟ್ಟಿತ್ತು. ಈ ಅರವತ್ತು ಸಾವಿರ ಮಂದಿಗಳೂ ಆ ಬಿಲವನ್ನು ಪ್ರವೇಶ ಮಾಡಿದರು. ॥ ೨೦ ॥ ಮಹಾವಿಷ್ಣುವಿನ ಅವತಾರವೇ ಆಗಿದ್ದ ಕಪಿಲರೆಂಬ ಮಹಾಮುನಿಗಳನ್ನು ಪಾತಾಳದಲ್ಲಿ ಕಂಡರು. ಈ ಮಹಾಮುನಿಯು ಧ್ಯಾನಾಸಕ್ತರಾಗಿದ್ದು ಮರದ ತುಂಡಿನಂತೆ ಜಡೀಭೂತರಾಗಿದ್ದರು. ಅವರ ಸಮೀಪದಲ್ಲಿ ಯಜ್ಞಾಶ್ವವನ್ನು ಕಂಡರು. ॥ ೨೧ ॥ ಈ ಅರವತ್ತು ಸಹಸ್ರ ಸಗರಪುತ್ರರು ಪ್ರಮತ್ತರಾಗಿದ್ದರು. ಪಾಪಕಾರ್ಯದಲ್ಲಿಯೇ ನಿರತರಾಗಿದ್ದರು ಮತ್ತು ಅವಿವೇಕಿಗಳಾಗಿದ್ದರು. ಅವರು ಆ ಮುನಿಯನ್ನು ಸಮೀಪಿಸಿ ಅವರನ್ನು ಕಟ್ಟಿಹಾಕಲು ಪ್ರಯತ್ನಿಸಿದರು. ॥ ೨೨ ॥ ಅವರು ಒಬ್ಬರಿಗೊಬ್ಬರು "ಇವನನ್ನು ಕೊಲ್ಲಿರಿ, ಕಟ್ಟಿಹಾಕಿರಿ, , ಸೆರೆ ಹಿಡಿಯಿರಿ, ಬೇಗನೆ ಮಾಡಿರಿ" ಹೀಗೆ ಕೂಗಾಡಿದರು. ॥ ೨೩ ॥ ಏನಾಶ್ಚರ್ಯ! "ಕದಲದ ಈ ಮುನಿಯು ಮುನಿವೇಷದಲ್ಲಿದ್ದಾನೆ. ಇವನೇ ಕುದುರೆಯನ್ನು ಅಪಹರಿಸಿ ಈಗ ಕೇವಲ ಬಕಧ್ಯಾನದಲ್ಲಿದ್ದಾನೆ . ದುಷ್ಟರು ಯಾವಾಗಲೂ ಲೋಕದಲ್ಲಿ ಆಡಂಬರವನ್ನು ಮಾಡುತ್ತಾರೆ. ॥ ೨೪ ॥ ಇವನು ಬೇರೊಬ್ಬರ ಸ್ವತ್ತಿನ ಬಗ್ಗೆಯೇ ಯೋಚಿಸುತ್ತಿರುತ್ತಾನೆ ಮತ್ತು ಮತ್ತೊಬ್ಬರ ಪ್ರಾಣವನ್ನು ಹರಣಮಾಡುತ್ತಾನೆ", ಹೀಗೆಂದು ಆ ಕಪಿಲಮಹಾಮುನಿಯನ್ನು ನಿಂದೆಮಾಡಿದರು. ॥ ೨೫ ॥ ಆಗ ಆ ಮಹಾಮುನಿಯು ತನ್ನ ಇಂದ್ರಿಯಗಳನ್ನು ತನ್ನ ಆತ್ಮದಲ್ಲಿ ಕೇಂದ್ರೀಕರಿಸಿ ಶ್ರೀಪರಮಾತ್ಮನನ್ನು ತನ್ನ ಅಂತಃಚಕ್ಷುವಿನಿಂದ ನೋಡುತ್ತಿದ್ದುದರಿಂದ ದುಷ್ಟಕರ್ಮಾದಿಗಳಲ್ಲಿ ನಿರತರಾಗಿದ್ದ ಇವರನ್ನು ನೋಡಲಿಲ್ಲ. ॥ ೨೬ ॥ ಅವರೆಲ್ಲರಿಗೂ ಸಾವು ಸಮೀಪಿಸಿತ್ತು. ಆದ್ದರಿಂದ ಅವರ ಬುದ್ಧಿಯು ನಷ್ಟವಾಗಿತ್ತು. ಆ ಮುನಿಯನ್ನು ಅವರು ಕಾಲುಗಳಿಂದ ಒದ್ದರು ಮತ್ತು ಅವನನ್ನು ಬಂಧಿಸುವ ಯತ್ನ ಮಾಡಿದರು. ॥ ೨೭ ॥ ಇದರಿಂದ ಸಮಾಧಿಯಲ್ಲಿದ್ದ ಆ ಮುನಿಯ ಚಿತ್ತೈಕಾಗ್ರತೆಗೆ ಭಂಗವುಂಟಾಯಿತು. ಇವರನ್ನು ನೋಡಿ ಆ ಮುನಿಯು ಆಶ್ಚರ್ಯಚಕಿತನಾದನು. ಖಿನ್ನಮನಸ್ಸಿನಿಂದ ಭಾವಗಂಭೀರವಾದ ಈ ಮಾತುಗಳನ್ನಾಡಿದನು. ॥ ೨೮ ॥

ಕಪಿಲಮುನಿರುವಾಚ—

ಐಶ್ವರ್ಯಮದಮತ್ತಾನಾಂ ಕ್ಷುಧಿತಾನಾಂ ಚ ಕಾಮಿನಾಂ ।
ಅಹಂಕಾರರತಾನಾಂ ಚ ವಿವೇಕೋ ನೈವ ಜಾಯತೇ ॥ ೨೯ ॥
ನಿಧೇರಾಧಾರಮಾತ್ರೇಣ ಮಹೀ ಜ್ವಲತಿ ಸರ್ವದಾ ।
ತಾಮೇವಂ ಮಾನವಾ ಭುಕ್ತ್ವಾ ಜ್ವಲಂತೀಕಿಮದ್ಭುತಮ್ ॥ ೩೦ ॥

ಕಿಮತ್ರಚಿತ್ರಂ ಸುಜನಂ ಬಾಧ್ಯಂತೇ ಯದಿ ದುರ್ಜನಾಃ ।
ಮಹೀರುಹಾಂಶ್ಚಾನುತಟಂ ಪಾತಯಂತಿ ನದೀರಯಾಃ ॥ ೩೦ ॥
ಯತ್ರ ಶ್ರೀಯೌರ್ವನಂ ಶಾರದಾ ವಾಪಿ ತಿಷ್ಠತಿ ।
ಸ ಜಗನ್ಮನುತೇ ತುಚ್ಛಂ ಕಿಮು ತ್ರಿತಯಮಪ್ಯಹೋ ॥ ೩೧ ॥

**ಕಪಿಲ ಮುನಿ ಹೇಳಿದರು**

''ಐಶ್ವರ್ಯದಿಂದ ಮದಿಸಿದವರಿಗೆ, ಹಸಿದಿರುವವರಿಗೆ ಮತ್ತು ಸ್ತ್ರೀ ಕಾಮಿಗಳಿಗೆ ಮತ್ತು ಅಹಂಕಾರದಲ್ಲಿಯೇ ಮಗ್ನರಾದವರಿಗೆ ವಿವೇಕವು ಬರುವುದೇ ಇಲ್ಲ. ॥ ೨೯ ॥ ಬಂಗಾರ ಮುಂತಾದ ನಿಧಿಗಳಿಗೆ ಭೂಮಿಯು ಆಧಾರವಾಗಿದ್ದು ಶೋಭಿಸುತ್ತಿದೆ. ಅದನ್ನು ಮನುಷ್ಯರು ಅನುಭವಿಸಿ ಮೆರೆಯುತ್ತಾರೆಂಬದು ಏನಾಶ್ಚರ್ಯವು? ॥ ೩೦ ॥ ಸಜ್ಜನರನ್ನು ದುರ್ಜನರು ಬಾಧಿಸುತ್ತಾರೆಂದರೆ ಏನಾಶ್ಚರ್ಯವು? ನದಿಯ ಪ್ರವಾಹವು ದಡಗಳಲ್ಲಿರುವ ವೃಕ್ಷಗಳನ್ನೂ, ದಡಗಳನ್ನೂ ಉರುಳಿಸುತ್ತವೆ. ॥ ೩೧ ॥ ಯಾರಲ್ಲಿ ಐಶ್ವರ್ಯವಾಗಲೀ, ಯೌವ್ವನವೂ ಮತ್ತು ವಿದ್ಯೆಯಾಗಲೀ ಇರುವುದೋ ಅವರು ಜನರನ್ನು ತುಚ್ಛವಾಗಿ ಕಾಣುತ್ತಾರೆ. ಇನ್ನು ಇವು ಮೂರೂ ಒಂದೇ ಕಡೆ ಸೇರಿದ್ದರೆ ಹೇಳಬೇಕಾದುದೇ ಇಲ್ಲ. ಏನಾಶ್ಚರ್ಯವು!'' ॥ ೩೨ ॥

ಇತ್ಯುಕ್ತ್ವಾ ಕಪಿಲಃ ಕ್ರುದ್ಧೋ ನೇತ್ರಾದಗ್ನಿಂ ವಿಸೃಷ್ಟವಾನ್ ।
ಸ ವಹ್ನಿಸ್ಸಗರಾನ್ಸರ್ವಾನ್ಭಸ್ಮಸಾದಕರೋತ್ ಕ್ಷಣಾತ್ ॥ ೩೩ ॥
ತದಗ್ನಿತಾಪಿತಾಸ್ಸರ್ವೇ ದಂದಶೂಕಾಶ್ಚ ರಾಕ್ಷಸಾಃ ।
ಸಾಗರಂ ವಿವಿಶುಃ ಶೀಘ್ರಂ ಸತಾಂ ಕೋಪೋ ಹಿ ದುಸ್ಸಹಃ ॥ ೩೪ ॥
ಅಥ ತಸ್ಯ ಮಹೀಶಸ್ಯ ಸಮಾಗಮ್ಯಾಧ್ವರಂ ತಥಾ ।
ನಾರದಃ ಸಗರಾಯೈತದ್ಯಥಾವೃತ್ತಂ ನ್ಯವೇದಯತ್ ॥ ೩೫ ॥
ಏತತ್ಸರ್ವಂ ಸಮಾಕರ್ಣ್ಯ ಸಗರಸ್ಸರ್ವವಿತ್ಪ್ರಭುಃ ।
ದೈವೇನ ಶಿಕ್ಷಿತಾ ದುಷ್ಟಾ ಇತಿ ಮತ್ವಾ ಶುಶೋಚ ಹ ॥ ೩೬ ॥
ಯಸ್ತು ಧರ್ಮೇಷು ನಿರತಸ್ಸರ್ವಲೋಕವಿರೋಧಕೃತ್ ।
ತಂ ರಿಪುಂ ಪರಮಂ ವಿದ್ಯಾತ್ ಶಾಸ್ತ್ರಾಣಾಮೇಷ ನಿರ್ಣಯಃ ॥ ೩೭ ॥
ಯಜ್ಞೇಷ್ವನಧಿಕಾರತ್ವಾದಪುತ್ರಾಣಾಂ ಮಹೀಪತಿಃ ।
ಅಸಮಂಜಸಪುತ್ರಂ ತು ಪೌತ್ರಂ ಜಗ್ರಾಹ ಪುತ್ರವಾನ್ ॥ ೩೮ ॥
ಅಂಶುಮಂತಂ ಮಹಾವೀರ್ಯಂ ಸುಧಿಯಂ ವಾಗ್ವಿದಾಂ ವರಮ್ ।
ಪ್ರಯೋಗಸಾರವಿದ್ಭೂಯೋ ಹಯಶ್ವಾನಯನಕರ್ಮಣಿ ॥ ೩೯ ॥

ಹೀಗೆ ಹೇಳಿ ಕೋಪಗೊಂಡ ಕಪಿಲಮಹರ್ಷಿಯು ತನ್ನ ಕಣ್ಣುಗಳಿಂದ ಬೆಂಕಿಯ ಜ್ವಾಲೆಯನ್ನು ಬಿಟ್ಟನು. ಆ ಅಗ್ನಿಜ್ವಾಲೆಯು ಎಲ್ಲ ಸಗರರನ್ನೂ ಒಂದು ಕ್ಷಣದಲ್ಲಿ ಭಸ್ಮಮಾಡಿತು. (ಕಪಿಲದೇವರ ಕೋಪಾಗ್ನಿಯಿಂದ ಭಸ್ಮರಾದರೆಂಬುದು ಅಜ್ಞ ಜನರ ಮಾತು; ಸಾಗರರು ತಮ್ಮ ಪಾಪಾಗ್ನಿಯಿಂದ ಭಸ್ಮರಾದರು ಎಂದು ಶುಕಾಚಾರ್ಯರು ಹೇಳಿರುತ್ತಾರೆ) ॥ ೩೩ ॥ ಈ

ಅಗ್ನಿಯಿಂದ ತಾಪಗೊಂಡ ಎಲ್ಲ ಸರ್ಪಗಳು ಮತ್ತು ರಾಕ್ಷಸರುಗಳು ಸಾಗರವನ್ನು ಪ್ರವೇಶಿಸಿದರು. ಸಜ್ಜನರ ಕ್ರೋಧವೂ ದುಸ್ಸಹನೀಯವೇ ಅಷ್ಟೇ! ॥ ೩೪ ॥ ಮೂರು ಲೋಕದಲ್ಲಿಯೂ ಪ್ರಸಿದ್ಧನಾಗಿದ್ದ ಈ ಸಗರನ ಯಜ್ಞಶಾಲೆಯನ್ನು ಶ್ರೀ ನಾರದರು ಪ್ರವೇಶ ಮಾಡಿ, ಈ ಯಜ್ಞಾಶ್ವದ ಮತ್ತು ಸಾಗರರ ವೃತ್ತಾಂತವನ್ನು ತಿಳಿಸಿದರು. ॥ ೩೫ ॥ ಇವೆಲ್ಲವನ್ನೂ ಕೇಳಿ, ಎಲ್ಲ ವಿಷಯವನ್ನೂ ಬಲ್ಲ ಸಗರನು ವಿಧಿಯೇ ಈ ದುಷ್ಟ ಸಾಗರರನ್ನು ಶಿಕ್ಷಿಸಿದ್ದಾನೆಂದು ಅರಿತು ದುಃಖಿಸಿದನು. ॥ ೩೬ ॥ ಯಾರು ಯಾವಾಗಲೂ ಅಧರ್ಮದಲ್ಲಿಯೇ ನಿರತರಾಗಿದ್ದು ಎಲ್ಲ ಜನಗಳಿಗೆ ವಿರೋಧ ಬಗೆಯುತ್ತಾರೋ ಅವನು ಯಾರೇ ಆಗಿರಲಿ ಅಂಥವನನ್ನು ತನ್ನ ಪರಮ ಶತ್ರುವನ್ನಾಗಿ ತಿಳಿಯಬೇಕೆಂದು ಶಾಸ್ತ್ರಗಳು ಸಾರುತ್ತಿವೆ. ॥ ೩೭ ॥ ಮಕ್ಕಳಿಲ್ಲದ ತನಗೆ ಯಜ್ಞದ ಅನಧಿಕಾರತ್ವವನ್ನು ತಿಳಿದ ರಾಜನು ಅಸಮಂಜಸನ ಮಗನಾದ ಅಂಶುಮಂತನನ್ನು ಪುತ್ರನೆಂದು ಠರಾವು ಮಾಡಿದನು (ಬಹಳ ಹಿಂದೆ ಅಸಮಂಜಸನನ್ನು ಅವನ ದುರ್ವರ್ತನೆಯಿಂದ ಸಗರನು ರಾಜ್ಯದಿಂದ ಹೊರಕ್ಕೆ ಹಾಕಿದ್ದನು. ಅಸಮಂಜಸನು ವೈರಾಗ್ಯಶಾಲಿಯಾಗಿ ಭಗವದ್ ಧ್ಯಾನದಲ್ಲಿಯೇ ಆಸಕ್ತನಾಗಿ ವನದಲ್ಲಿ ಇದ್ದುಬಿಟ್ಟಿದ್ದರಿಂದ ಈ ರೀತಿ ಮಾಡಬೇಕಾಯಿತು). ॥ ೩೮ ॥ ಮಹಾ ವೀರನೂ, ಬುದ್ಧಿವಂತನೂ ಮತ್ತು ಹೇಳಿದ್ದನ್ನು ಅರ್ಥಮಾಡಿಕೊಳ್ಳಬಲ್ಲವರಲ್ಲಿ ಶ್ರೇಷ್ಠನಾಗಿದ್ದ ಅಂಶುಮಂತನನ್ನು, ಯಾಜ್ಞಿಯ ಪ್ರಯೋಗದಲ್ಲಿ ಮಹಾಜ್ಞಾನವುಳ್ಳ ಸಗರನು ಕರೆದು, ಯಜ್ಞಾಶ್ವವನ್ನು ಹಿಂತಿರುಗಿ ತರಲು ಆಜ್ಞೆಮಾಡಿದನು. ॥ ೩೯ ॥

ಸಗರ ಉವಾಚ—

> ಶೂರಸ್ತ್ವಂ ಕೃತವಿದ್ಯಶ್ಚ ಸರ್ವತುಲ್ಯಪರಾಕ್ರಮಃ ।
> ಅಂಶುಮನ್ ಗಚ್ಛ ಶೀಘ್ರಂ ತ್ವಮಮುಂ ಪ್ರಾರ್ಥ್ಯಾಶ್ವಮಾನಯ ॥ ೪೦ ॥
> ಆರಬ್ಧಯಾಗಂ ದೇವಾನಾಂ ಋಣವಂತಂ ಸಹರ್ತ್ವಿಜಮ್ ।
> ಸಿದ್ಧಾರ್ಥಸ್ತ್ವಂ ಸಮಾಗತ್ಯ ಯಜ್ಞಾದುತ್ತಾರಯಸ್ವ ಮಾಮ್ ॥ ೪೧ ॥

ಸಗರನು ಹೇಳಿದನು—

"ನೀನು ಶೂರನು, ವಿದ್ಯಾಭ್ಯಾಸ ಮಾಡಿದವನು, ಎಲ್ಲದಕ್ಕೂ ಬೇಕಾಗಿರುವಷ್ಟು ಪರಾಕ್ರಮವುಳ್ಳವನು, ನೀನು ಜಾಗ್ರತೆಯಾಗಿ ಹೋಗಿ ಶ್ರೀ ಕಪಿಲರನ್ನು ಪ್ರಾರ್ಥಿಸಿ ಯಜ್ಞಾಶ್ವವನ್ನು ಹಿಂತಿರುಗಿ ತೆಗೆದುಕೊಂಡು ಬಾ. ॥ ೪೦ ॥ ನಾನು ಯಜ್ಞವನ್ನು ಆರಂಭಿಸಿದ್ದೇನೆ. ಋತ್ವಿಜರ ಸಹಿತ ನಾನು ದೇವತೆಗಳಿಗೆ ಋಣಿಯಾಗಿದ್ದೇನೆ. ಕುದುರೆಯನ್ನು ಹಿಂದಕ್ಕೆ ತಂದು ಸಿದ್ಧವಾದ ಪ್ರಯೋಜನವುಳ್ಳವನಾಗಿ ನನ್ನನ್ನು ಈ ಯಜ್ಞದಿಂದ ಉದ್ಧಾರಮಾಡು" ಎಂದನು. ॥ ೪೧ ॥

> ಏವಮುಕ್ತೋಂಶುಮಾನ್ಶೂರಸ್ಸಗರೇಣ ಮಹಾತ್ಮನಾ ।
> ಧನುರಾದಾಯ ಖಡ್ಗಂ ಚ ಯಯೌ ತ್ವರಿತವಿಕ್ರಮಃ ॥ ೪೨ ॥
> ಸ ಗತ್ವಾ ತದ್ಬಿಲದ್ವಾರಾ ದೃಷ್ಟ್ವಾಶ್ವಂ ಕಪಿಲಂ ಮುನಿಂ ।
> ಕೃತಾಂಜಲಿಪುಟೋ ನತ್ವಾ ಸ್ತುತ್ವಾ ವಾಕ್ಯಮುವಾಚ ಹ ॥ ೪೩ ॥

ಶೀಘ್ರವಾದ ವಿಕ್ರಮವ್ಯಾಪಕವುಳ್ಳ ಆ ಅಂಶುಮಂತನು ಮಹಾತ್ಮ ಸಗರನಿಂದ ಈ

ರೀತಿಯಾಗಿ ಹೇಳಿಸಿಕೊಳ್ಳಲ್ಪಟ್ಟವನಾಗಿ ಧನುಸ್ಸನ್ನೂ, ಕತ್ತಿಯನ್ನೂ ತೆಗೆದುಕೊಂಡು ಹೊರಟನು. ॥ ೪೨ ॥ ಅವನು ಆ ಬಿಲದ್ವಾರದ ಮೂಲಕ ಹೊರಟು ಕೊನೆಗೆ ಆ ಕುದುರೆಯನ್ನೂ ಮತ್ತು ಕಪಿಲಋಷಿಗಳನ್ನೂ ಕಂಡನು. ಕೈಮುಗಿದು ನಮಸ್ಕರಿಸಿ ಸ್ತೋತ್ರ ಮಾಡಿ ಮಾತನಾಡಿದನು. ॥ ೪೩ ॥

ಅಂಶುಮಾನುವಾಚ—

ದೌಶ್ಶೀಲ್ಯಂ ಯತ್ಕೃತಂ ಬ್ರಹ್ಮನ್ ಪ್ರಮತ್ತೈಸ್ತತ್ ಕ್ಷಮಸ್ವ ಮೇ ।
ದುಷ್ಟವೃತ್ತಾನಪಶ್ಯಂತಃ ಕ್ಷಮಾಸಾರಾ ಹಿ ಸಾಧವಃ ॥ ೪೪ ॥
ದುರ್ಜನೇಷ್ವಪಿ ಸತ್ತ್ವೇಷು ದಯಾಂ ಕುರ್ವಂತಿ ಸಾಧವಃ ।
ನೋಪಸಂಹರತಿ ಜ್ಯೋತ್ಸ್ನಾಂ ಚಂದ್ರಶ್ಚಾಂಡಾಲವೇಶ್ಮಸು ॥ ೪೫ ॥
ಬಾಧ್ಯಮಾನೋಽಪಿ ಸುಜನಃ ಸರ್ವೇಷಾಂ ಸುಖಕೃದ್ಭವೇತ್ ।
ದದಾತಿ ಪರಮಾಂ ತುಷ್ಟಿಂ ಭಕ್ಷ್ಯಮಾಣೋಽಮರೈಃ ಶಶೀ ॥ ೪೬ ॥
ಇತಿ ಸ್ತುತೋ ಮುನಿಸ್ತೇನ ಪ್ರಸನ್ನವದನಸ್ತದಾ ।
ವರಯೇತಿ ವರಂ ಪ್ರಾಹ ಪ್ರಸನ್ನೋಽಸ್ಮೀತಿ ಸಾದರಮ್ ॥ ೪೭ ॥
ಕಪಿಲೇ ಪ್ರವದತ್ಯೇವಮಂಶುಮಾನ್ ಪ್ರಣಿಪತ್ಯ ತಂ ।
ಪ್ರಾಪಯಾಸ್ಮತ್ಪಿತೄನ್ ಬ್ರಹ್ಮಲೋಕಮಿತ್ಥಮಭಾಷತ ॥ ೪೮ ॥
ತತಸ್ತಸ್ಯಾತಿಸಂತುಷ್ಟೋ ಮುನಿಸ್ತಂ ಪ್ರಾಹ ಸಾದರಮ್ ।
ಏಷಾಂ ಉದ್ಧರಣಂ ನೈವ ಭವೇದ್ಗಂಗಾಗಮಂ ವಿನಾ ॥ ೪೯ ॥
ಪ್ರಾಪಯೇಮಂ ಹಯಂ ಪುತ್ರ ಪಿತಾಮಹಮಖೋಚಿತಂ ।
ಭವ ಧರ್ಮಪರೋ ನಿತ್ಯಂ ತವ ಶ್ರೇಯೋ ಭವಿಷ್ಯತಿ ॥ ೫೦ ॥
ಇತ್ಯುಕ್ತಸ್ತಂ ಪ್ರಣಮ್ಯಾಶು ಹಯಮಾದಾಯ ಸತ್ವರಮ್ ।
ಸಾಗರಾಯ ಹಯಂ ದತ್ವಾ ಯದ್ವೃತ್ತಂ ತನ್ನ್ಯವೇದಯತ್ ॥ ೫೧ ॥
ತತಸ್ತಂ ಹಯಮಾದಾಯ ಋತ್ವಿಗ್ಭಿಸ್ಸಹಿತೋ ನೃಪಃ ।
ಯಜ್ಞಂ ಸಮಾಪಯಾಮಾಸ ಪ್ರಾಯಶ್ಚಿತ್ತಪುರಸ್ಸರಮ್ ॥ ೫೨ ॥
ಸಮಾಪ್ಯ ಯಜ್ಞಂ ಸರ್ವಾಂಸ್ತಾನ್ದಕ್ಷಿಣಾಭಿಃ ಪ್ರತೋಷ್ಯ ಚ ।
ವಿಸೃಜ್ಯ ಚ ಪುನಾ ರಾಜ್ಯಂ ಅತಿಹೃಷ್ಟಶ್ಚಕಾರ ಹ ॥ ೫೩ ॥
ತತೋಽಂಶುಮತಿ ಪೌತ್ರೇ ತದ್ರಾಜ್ಯಂ ನ್ಯಸ್ಯ ದ್ವಿಜೈಃ ಸಹ ।
ಸಪತ್ನೀಕೋ ವನಂ ಗತ್ವಾ ಚಕಾರ ದುಷ್ಕರಂ ತಪಃ ॥ ೫೪ ॥
ತಪೋಭಿಃ ಕ್ಷೀಣದೇಹಸ್ಸನ್ ಹರಿಂ ಹೃದಿ ನಿಧಾಯ ಚ ।
ಸಪತ್ನೀಕಸ್ತತೋ ಲೇಭೇ ತದ್ವಿಷ್ಣೋಃ ಪರಮಂ ಪದಮ್ ॥ ೫೫ ॥

॥ ಇತಿ ಚತುರ್ನವತಿತಮೋಽಧ್ಯಾಯಃ ॥

**ಅಂಶುಮಾನನು ಹೇಳಿದನು-**

''ಹೇ ಮುನಿವರ್ಯರೇ! ನನ್ನ ಪ್ರಮತ್ತರಾದ ಚಿಕ್ಕಪ್ಪಂದಿರಿಂದ ಆದ ಕೆಟ್ಟ ವ್ಯಾಪಾರವನ್ನು ಕ್ಷಮಿಸಿರಿ. ದುಷ್ಟವಾದ ನಡವಳಿಕೆಗಳನ್ನು ನೋಡದೇ ಕ್ಷಮಿಸುವವರೇ ಸಾಧುಗಳು. ॥ ೪೪ ॥ ಜನರು ದುಷ್ಟರಾಗಿದ್ದರೂ ಅವರ ಮೇಲೆ ದಯೆತೋರುವವರೇ ಸಾಧುಗಳು. ಚಂದ್ರನೇನು ಚಂಡಾಲನ ಮನೆಯ ಮೇಲೆ ಕಿರಣಗಳನ್ನು ಬೀಳಿಸದಿರುವುದಿಲ್ಲ. ॥ ೪೫ ॥ ಸಜ್ಜನರು ತಮಗೆ ತೊಂದರೆಯಾದರೂ ಎಲ್ಲರಿಗೂ ಒಳ್ಳೆಯದನ್ನು ಮಾಡುವರು. ಹೀಗೆ ಮಾಡಿ ಪರಮ ತೃಪ್ತಿಯನ್ನು ಹೊಂದುತ್ತಾರೆ. ಚಂದ್ರನ ಕಿರಣಗಳನ್ನು ದೇವತೆಗಳು ಭಕ್ಷಿಸಿದರೂ ಚಂದ್ರನು ಪರಮತುಷ್ಟಿಯನ್ನು ಕೊಡುವನು''. ॥ ೪೬ ॥ ಈ ರೀತಿಯಾಗಿ ಅಂಶುಮಂತನಿಂದ ಸ್ತುತಿಸಲ್ಪಟ್ಟ ಆ ಮಹಾಮುನಿಯು ಪ್ರಸನ್ನವಾದ ಮುಖವುಳ್ಳವನಾಗಿ ''ನಾನು ಪ್ರಸನ್ನನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೋ'' ಎಂದು ಆದರದಿಂದ ಹೇಳಿದನು. ॥ ೪೭ ॥ ಕಪಿಲಮುನಿಯು ಈ ರೀತಿಯಾಗಿ ಹೇಳುತ್ತಲೇ ಅಂಶುಮಂತನು ಅವನಿಗೆ ದಂಡವತ್ ಪ್ರಣಾಮವನ್ನು ಮಾಡಿ ''ನನ್ನ ಪಿತೃಗಳಿಗೆ ಬ್ರಹ್ಮಲೋಕವನ್ನು ಕರುಣಿಸು'' ಎಂದು ಕೇಳಿಕೊಂಡನು. ॥ ೪೮ ॥ ಆಗ ಅವನ ವಿಷಯದಲ್ಲಿ ಬಹು ಸಂತುಷ್ಟನಾದ ಕಪಿಲನು ಆದರದಿಂದ ಹೇಳಿದನು ''ಅಂಶುಮಾನನೇ!, ಗಂಗೆಯ ಆಗಮನವು ಇಲ್ಲಿಗೆ ಆಗುವವರೆಗೂ ಇವರ ಉದ್ಧಾರವಾಗುವುದಿಲ್ಲ ಈ ಕುದುರೆಯನ್ನು ತೆಗೆದುಕೋ. ಇದು ನಿನ್ನ ತಾತನ ಯಜ್ಞಕ್ಕೆ ಉಪಯುಕ್ತವಾಗುತ್ತದೆ. ನೀನು ಯಾವಾಗಲೂ ಧರ್ಮಪರಾಯಣನಾಗಿರು, ನಿನಗೆ ಶ್ರೇಯಸ್ಸಾಗಲಿ.'' ॥ ೪೯ - ೫೦ ॥ ಈ ರೀತಿಯಾಗಿ ಹೇಳಿದ ಆ ಮುನಿಯನ್ನು ಅಂಶುಮಂತನು ನಮಸ್ಕರಿಸಿ ಆ ಕುದುರೆಯನ್ನು ಸ್ವೀಕರಿಸಿ ಜಾಗ್ರತೆಯಾಗಿ ಅದನ್ನು ತಾತನಿಗೆ ಕೊಟ್ಟು ನಡೆದ ವೃತ್ತಾಂತವನ್ನೆಲ್ಲಾ ಹೇಳಿದನು. ॥ ೫೧ ॥ ಅನಂತರ ಸಗರನು ಆ ಕುದುರೆಯನ್ನು ಸ್ವೀಕರಿಸಿ ಋತ್ವಿಜರ ಸಹಿತವಾಗಿ ಪ್ರಾಯಶ್ಚಿತ್ತಪೂರ್ವಕವಾಗಿ ಯಜ್ಞವನ್ನು ಸಮಾಪ್ತಿಗೊಳಿಸಿದನು. ॥ ೫೨ ॥ ಯಜ್ಞವನ್ನು ಮುಗಿಸಿ ದಕ್ಷಿಣಾದಿಗಳಿಂದ ಬ್ರಾಹ್ಮಣರನ್ನೂ, ಋತ್ವಿಜರನ್ನೂ ತೃಪ್ತಿಪಡಿಸಿ ಅವರನ್ನೆಲ್ಲಾ ಬೀಳ್ಕೊಟ್ಟು ಪುನಃ ಸಂತೋಷದಿಂದ ರಾಜ್ಯವನ್ನಾಳಿದನು. ॥ ೫೩ ॥ ಆಮೇಲೆ ಮೊಮ್ಮಗನಾದ ಅಂಶುಮಂತನಿಗೆ ರಾಜ್ಯವನ್ನು ವಹಿಸಿ ಬ್ರಾಹ್ಮಣರಿಂದಲೂ, ಹೆಂಡತಿಯರಿಂದಲೂ ಒಡಗೂಡಿ ವನಕ್ಕೆ ಹೋಗಿ ಕಠಿಣವಾದ ತಪಸ್ಸನ್ನು ಮಾಡಿದನು. ॥ ೫೪ ॥ ತಪಸ್ಸುಗಳಿಂದ ದೇಹವನ್ನು ದಂಡಿಸಿ ಶ್ರೀಹರಿಯನ್ನು ಹೃದಯಕಮಲದಲ್ಲಿ ಧ್ಯಾನಿಸುತ್ತಾ ಹೆಂಡತಿಯರೊಡನೆ ಶ್ರೀ ವಿಷ್ಣುವಿನ ಸ್ಥಾನವನ್ನು ಸೇರಿದನು. ॥ ೫೫ ॥

॥ ತೊಂಬತ್ತನಾಲ್ಕನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ಪಂಚನವತಿತಮೋಽಧ್ಯಾಯಃ ॥ ೯೫॥

ಶೇಷ ಉವಾಚ—

ಅಥಾಂಶುಮಾನ್ನೃಪೋ ರಾಜ್ಯಂ ಚಕಾರ ಸಗರಾರ್ಪಿತಮ್ ।
ಯದ್ರಾಜ್ಯೇ ಸಕಲಾ ಲೋಕಾಃ ಸಗರಾದಪಿ ಹರ್ಷಿತಾಃ ॥ ೧ ॥
ಸೋಽಪಿ ಕೃತ್ವಾ ಕಿಯತ್ಕಾಲಂ ರಾಜ್ಯಂ ಪಶ್ಚಾತ್ಸುತಾಯ ತತ್ ।
ದಿಲೀಪಾಯ ದದೌ ಪ್ರೀತ್ಯಾ ನಿವೃತ್ತಿನಿರತೋಽಪ್ಯಭೂತ್ ॥ ೨ ॥
ವನೇ ಗತ್ವಾ ತಪಸ್ತಪ್ತ್ವಾ ಗಂಗಾಗಮನಕಾಮ್ಯಯಾ ।
ತಪಃಕ್ಷೀಣತನೂ ರಾಜಾ ಸೋಽಪಿ ವೈಕುಂಠಮನ್ವಗಾತ್ ॥ ೩ ॥
ಪ್ರಾಪ್ತರಾಜ್ಯೋ ದಿಲೀಪೋಽಪಿ ಪಿತೃವದ್ರಂಜಯನ್ಪ್ರಜಾಃ ।
ನಿಃಸಪತ್ನಃ ಸಮ್ಯಗುದ್ಬುದ್ಧ್ಯಾ ಶಶಾಸ ಕ್ಷಿತಿಮಂಡಲಮ್ ॥ ೪ ॥
ತಸ್ಯ ಪುತ್ರೋಽಥ ಸಂಜಜ್ಞೇ ಭಕ್ತೋ ನಾಮ ಭಗೀರಥಃ ।
ತಸ್ಮೈ ದತ್ವಾಖಿಲಂ ರಾಜ್ಯಂ ದಿಲೀಪೋಽಗಾತ್ತಪೋವನಂ ॥ ೫ ॥
ಗಂಗಾಪ್ರಾಪ್ತಿರ್ಭವೇನ್ಮಹ್ಯಂ ಯಥೈವಂ ಕರವಾಣ್ಯಹಮ್ ।
ನಿಶ್ಚಿತ್ಯೈವಂ ಚಿರಂ ತೇಪೇ ಹಿಮಾದ್ರೌ ದುಶ್ಚರಂ ತಪಃ ॥ ೬ ॥
ಸೋಽಪಿ ತಾನವಾಪ್ಯೈವ ತಪಃಕ್ಷೀಣಕಲೇವರಃ ।
ತನುಂ ವಿಸೃಜ್ಯ ಕಾಲೇನ ಪೂರ್ವೇಷಾಂ ಗತಿಮಾಪ್ತವಾನ್ ॥ ೭ ॥
ತತೋ ಭಗೀರಥೋ ರಾಜಾ ಹ್ಯಭೂತ್ಪರಮಧಾರ್ಮಿಕಃ ।
ರಾಜ್ಯೇ ನೈವ ಮನಸ್ತಸ್ಯ ಗಂಗಾಯಾಂ ತದಹರ್ನಿಶಮ್ ॥ ೮ ॥
ಸ ತಪೋ ಮಹದಾತಸ್ಥೇ ಗಂಗಾನಯನಕಾಮ್ಯಯಾ ।
ಊರ್ಧ್ವಬಾಹುಃ ಪಂಚತಪಾ ಗ್ರೀಷ್ಮೇ ಭೂತ್ವಾ ಯತವ್ರತಃ ॥ ೯ ॥
ವರ್ಷಾಸ್ವಾಸಾರಸಹನೋ ಹಿಮಂತೇ ಜಲಮಧ್ಯಗಃ ।
ಶೀರ್ಣಪರ್ಣಕೃತಾಹಾರೋ ಯತಾತ್ಮಾ ಸಂಯತೇಂದ್ರಿಯಃ ॥ ೧೦ ॥
ತಸ್ಯ ವರ್ಷಸಹಸ್ರಾಂತೇ ತಪಸೋಗ್ರೇಣ ತೋಷಿತಃ ।
ಆಜಗಾಮಾಶ್ರಮಂ ಬ್ರಹ್ಮಾ ವರಾಣಾಂ ಪ್ರಭುರೀಶ್ವರಃ ॥ ೧೧ ॥
ವೃತಸ್ಸುರಗಣೈಸ್ಸರ್ವೈರ್ವಿಮಾನವರಸಂಸ್ಥಿತಃ ।
ಸ ಚೈನಮಾಭಾಷ್ಯ ತದಾ ತಪ್ಯಮಾನಂ ವಚೋಽಬ್ರವೀತ್ ॥ ೧೨ ॥

## ॥ ತೊಂಬತ್ತೈದನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಸಗರನಿಂದ ಕೊಡಲ್ಪಟ್ಟ ರಾಜ್ಯವನ್ನು ಅಂಶುಮಂತನು ಆಳಿದನು. ಆಗ ಎಲ್ಲ ಜನರೂ ಸಗರಚಕ್ರವರ್ತಿಯ ಕಾಲಕ್ಕಿಂತ ಹೆಚ್ಚು ಸುಖವಾಗಿದ್ದರು. ॥ ೧ ॥ ಅವನು ಸ್ವಲ್ಪಕಾಲ ರಾಜ್ಯವಾಳಿ

ನಂತರ ಮಗ ದಿಲೀಪನಿಗೆ ರಾಜ್ಯವನ್ನು ವಹಿಸಿ ತಾನು ನಿವೃತ್ತಿ ಮಾರ್ಗವನ್ನು ಹಿಡಿದನು. ॥ ೨ ॥ ಅವನು ವನಕ್ಕೆ ಹೋಗಿ ಗಂಗೆಯನ್ನು ಭೂಲೋಕಕ್ಕೆ ತರುವ ಸಲುವಾಗಿ ತಪಸ್ಸನ್ನು ಮಾಡಿ ದೇಹದಂಡನೆ ಮಾಡುತ್ತಿದ್ದು ಕೊನೆಗೆ ಅಸುವನ್ನು ನೀಗಿ ವೈಕುಂಠದ ಯಾತ್ರೆಯ ದಾರಿಯನ್ನು ಹಿಡಿದನು. ॥ ೩ ॥ ಅನಂತರ ರಾಜ್ಯಕ್ಕೆ ಬಂದ ದಿಲೀಪನು ಪ್ರಜೆಗಳನ್ನು ಸಂತುಷ್ಟರನ್ನಾಗಿ ಇಟ್ಟುಕೊಂಡು ಶತ್ರುಗಳ ಬಾಧೆಯಿಲ್ಲದಂತೆ ಒಳ್ಳೆಯ ಬುದ್ಧಿ ಚಾತುರ್ಯದಿಂದ ಇಡೀ ಭೂಮಂಡಲವನ್ನೇ ಆಳಿದನು. ॥ ೪ ॥ ಅವನಿಗೆ ಭಗೀರಥನೆಂಬ ಭಗವದ್ಭಕ್ತಿಯುತನಾದ ಮಗನು ಹುಟ್ಟಿದನು. ಇವನಿಗೆ ರಾಜ್ಯವನ್ನೊಪ್ಪಿಸಿ ದಿಲೀಪನು ವನಕ್ಕೆ ಹೋದನು. ॥ ೫ ॥ ''ಯಾವ ರೀತಿಯಿಂದಲಾದರೂ ಭೂಮಿಗೆ ಗಂಗೆಯು ಬರುವಂತೆ ನಾನು ಮಾಡುವೆನು'' ಈ ರೀತಿಯಾಗಿ ನಿಶ್ಚಯಿಸಿ ಹಿಮವತ್ಪರ್ವತದಲ್ಲಿ ದಿಲೀಪನು ತಪಸ್ಸು ಮಾಡಿದನು. ॥ ೬ ॥ ಇವನೂ ಗಂಗೆಯನ್ನು ಹೊಂದಲಾರದೆ ತಪಸ್ಸಿನಿಂದ ಸೊರಗಿದ ದೇಹವುಳ್ಳವನಾಗಿ ಕೊನೆಗೆ ತನ್ನ ದೇಹವನ್ನು ತ್ಯಜಿಸಿ ತನ್ನ ಪೂರ್ವಿಕರಂತೆ ವೈಕುಂಠದ ಮಾರ್ಗವನ್ನು ಹಿಡಿದನು. ॥ ೭ ॥ ಆಗ ದಿಲೀಪನ ಮಗನಾದ ಭಗೀರಥನು ರಾಜನಾದನು. ಇವನು ಪರಮ ಧಾರ್ಮಿಕನಾಗಿದ್ದು, ರಾಜ್ಯಕಾರ್ಯಕ್ಕಿಂತ ಹೆಚ್ಚಾಗಿ ಗಂಗೆಯನ್ನು ಭೂಲೋಕದಲ್ಲಿ ತರುವ ಕಡೆಗೆ ಮನಸ್ಸನ್ನು ಹಗಲೂ, ರಾತ್ರಿಯೂ ಹರಿಸುತ್ತಿದ್ದನು. ॥ ೮ ॥ ಅವನು ಗಂಗೆಯನ್ನು ಭೂಲೋಕಕ್ಕೆ ತರುವ ಇಚ್ಛೆಯಿಂದ ಘೋರ ತಪಸ್ಸನ್ನು ಮಾಡಿದನು. ಪಂಚಾಗ್ನಿವ್ರತದಲ್ಲಿ ಎರಡು ಬಾಹುಗಳನ್ನೂ ಮೇಲೆತ್ತಿಕೊಂಡು ನಿಂತವನಾಗಿ ಬಹು ಯತ್ನಶೀಲನಾಗಿ ತಪಸ್ಸನ್ನು ಮಾಡಿದನು. ಮಳೆಗಾಲದಲ್ಲಿ ಬಟ್ಟಬಯಲಿನಲ್ಲಿಯೂ, ಹಿಮಂತದಲ್ಲಿ ನೀರಿನಲ್ಲಿಯೂ, ಶಿಶಿರಋತುವಿನಲ್ಲಿ ಉದುರಿದ ಒಣ ಎಲೆಗಳನ್ನು ತಿನ್ನುತ್ತಾ ಜಿತೇಂದ್ರಿಯನಾಗಿ ಮಹಾಯತ್ನ ಶೀಲನಾಗಿ ತಪಸ್ಸು ಮಾಡಿದನು. ॥ ೯-೧೦ ॥ ಅವನು ಆಚರಿಸಿದ ಸಹಸ್ರವರ್ಷಗಳ ಅವಧಿಯ ಉಗ್ರ ತಪಸ್ಸಿನಿಂದ ಸಂತುಷ್ಟರಾದ ಇಡೀ ಬ್ರಹ್ಮಾಂಡದ ಸ್ವಾಮಿಯು ಮತ್ತು ವರಗಳನ್ನು ಕೊಡುವುದರಲ್ಲಿ ಅಗ್ರಗಣ್ಯರಾದ ಬ್ರಹ್ಮದೇವರು ಇವನ ಆಶ್ರಮಕ್ಕೆ ಬಂದರು. ॥ ೧೧ ॥ ಬ್ರಹ್ಮದೇವರು ದೇವತಾಗಣದಿಂದ ಪರಿವೃತರಾಗಿ ವಿಮಾನದಲ್ಲಿ ಉಪಸ್ಥಿತರಿದ್ದರು. ಬ್ರಹ್ಮದೇವರು ತಪಸ್ಸಿನಲ್ಲಿ ನಿರತನಾಗಿರತಕ್ಕ ಭಗೀರಥನನ್ನು ಕುರಿತು ಹೀಗೆ ಹೇಳಿದರು ॥ ೧೨ ॥

ಬ್ರಹ್ಮೋವಾಚ—

> ಭಗೀರಥ ಮಹಾಭಾಗ ಪ್ರೀತಸ್ತೇಹಂ ನರಾಧಿಪ ।
> ಗೃಹಾಣ ವರಮಸ್ಮತ್ತಃ ಕಾಂಕ್ಷಿತಂ ಪೃಥಿವೀಪತೇ ॥ ೧೩ ॥
> ತಮುವಾಚ ತದಾ ರಾಜಾ ಬ್ರಹ್ಮಾಣಂ ಸ್ವಯಮಾಗತಂ ।
> ಭಗೀರಥೋ ಮಹಾತೇಜಾ ಕೃತಾಂಜಲಿರಿದಂ ವಚಃ ॥ ೧೪ ॥

ಬ್ರಹ್ಮದೇವರು ಹೇಳಿದರು—

''ಎಲೈ ಮಹಾರಾಜಾದ ಭಗೀರಥನೇ! ನಿನ್ನ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ಹೇ! ಭೂಪತಿಯೇ, ನಿನಗೆ ಇಷ್ಟವಾದ ವರವನ್ನು ನನ್ನಿಂದ ಹೊಂದು''. ॥ ೧೩ ॥ ತಾನಾಗಿಯೇ ಬಂದಿರತಕ್ಕ ಬ್ರಹ್ಮದೇವರನ್ನು ಕುರಿತು ಮಹಾತೇಜಸ್ವಿಯಾದ ಭಗೀರಥನು ಕೈಮುಗಿದು ಈ ರೀತಿ ಹೇಳಿದನು. ॥ ೧೪ ॥

ಭಗೀರಥ ಉವಾಚ—

ಯದ್ಯಸ್ತಿ ಭಗವಾನ್ ಪ್ರೀತೋ ಯದ್ಯಸ್ತಿ ತಪಸಃ ಫಲಂ ।
ತತಸ್ಸಗರಪುತ್ರಾಸ್ತೇ ಮತ್ತಃ ಸಲಿಲಮಾಪ್ನುಯುಃ ॥ ೧೫ ॥
ಮುನಿಕೋಪಾಗ್ನಿಸಂದಗ್ಧಸಾಗರಾಣಾಂ ಮಹಾಂತಿ ವೈ ।
ಭಸ್ಮಕೂಟಾನಿ ಚಾಪ್ಲಾವ್ಯ ಗಂಗಾ ನಯತು ತಾನ್ದಿವಮ್ ॥ ೧೬ ॥

ಭಗೀರಥನು ಹೇಳಿದನು—

"ಪೂಜ್ಯರಾದ ತಾವು ಪ್ರಸನ್ನರಾಗಿದ್ದರೆ, ನನ್ನ ತಪಸ್ಸಿಗೆ ಫಲವು ಸಿಗುವಹಾಗಿದ್ದರೆ ಆ ಸಗರನ ಪುತ್ರರು ನನ್ನ ದಶೆಯಿಂದ ಗಂಗಾಜಲವನ್ನು ಸ್ಪರ್ಶಮಾಡಲಿ ॥ ೧೫ ॥ ಈ ಬೂದಿಯು ಕಪಿಲಮುನಿಯ ಕೋಪದಿಂದ ದಗ್ಧರಾಗಿ ಬಿದ್ದಿರುವ ನನ್ನ ಚಿಕ್ಕಪ್ಪಂದಿರದು. ದಿವ್ಯವಾದ ಗಂಗಾ ಸ್ಪರ್ಶದಿಂದಲೇ ಅವರಿಗೆ ಮುಕ್ತಿ ದೊರೆಯಬೇಕಾಗಿದೆ." ॥ ೧೬ ॥

ಇತ್ಯುಕ್ತವಂತಂ ರಾಜಾನಂ ಪರಮೇಷ್ಠೀ ಪಿತಾಮಹಃ ।
ಪ್ರತ್ಯುವಾಚ ಪ್ರಿಯಂ ವಾಕ್ಯಂ ಪೂರ್ವಜೋದ್ಧಾರಕಾಂಕ್ಷಿಣಮ್ ॥ ೧೭ ॥

ತನ್ನ ಪೂರ್ವಿಕರ ಉದ್ಧಾರದಲ್ಲಿ ಅಪೇಕ್ಷೆಯುಳ್ಳ ಈ ಭಗೀರಥನನ್ನು ಕುರಿತು ಶ್ರೀ ಚತುರ್ಮುಖ ಬ್ರಹ್ಮನು ಪ್ರಿಯವಾದ ಈ ಮಾತುಗಳನ್ನು ಆಡಿದನು ॥ ೧೭ ॥

ಬ್ರಹ್ಮೋವಾಚ—

ತವ ಭಕ್ತ್ಯಾ ಮಹೀಪಾಲ ತಪಸೋಗ್ರೇಣ ಚಾನಘ ।
ಮದೀಯವರದಾನೇನ ಗಂಗಾ ಯಾಸ್ಯತಿ ನಿಶ್ಚಿತಮ್ ॥ ೧೮ ॥
ಪರಂತು ಯಜ್ಞಲಿಂಗಸ್ಯ ವಿಷ್ಣೋರ್ವಾಮನರೂಪಿಣಃ ।
ಯಾಚಿತಾ ಬಲಿನೋ ಭೂಮಿರಿದ್ರಾರ್ಥಂ ತ್ರಿಪದಚ್ಛಲಾತ್ ॥ ೧೯ ॥
ಊರ್ಧ್ವಂ ಪ್ರಸಾರಿತೋ ವಾಮಪಾದಾಂಗುಷ್ಠೋ ಮಮಾಸನೇ ।
ಲಗ್ನಸ್ತದಾಹಂ ತಂ ದೃಷ್ಟ್ವಾಂಗುಷ್ಠಂ ಸಪ್ತರ್ಷಿಭಿಃ ಸಹ ॥ ೨೦ ॥
ಸಹಸಾಽಪಶ್ಯಮಾನೋಽನ್ಯತ್ಪೂಜಾಸಾಧನಮಾದರಾತ್ ।
ತದಾ ಸ್ವಕರಕಸ್ಥೇನ ಗಾಂಗೇನಾಹಮಪೂಜಯಮ್ ॥ ೨೧ ॥
ತತಸ್ತತ್ಪಾದರಜಸಾ ತುಲಸ್ಯಾ ಚ ತದಿಷ್ಟಯಾ ।
ಯುಕ್ತಾ ಪುಣ್ಯತರಾ ಗಂಗಾ ಸ್ವರ್ಗಲೋಕೇ ಪಪಾತ ಹ ॥ ೨೨ ॥
ಇದಾನೀಂ ಕ್ರೀಡತೇ ತತ್ರ ದೇವದೇವೀಸುಪೂಜಿತಾ ।
ಸ್ವರ್ಗಸ್ಥಾನಾಂ ಕೃತೋದ್ಧಾರಾ ನಾಮ್ನಾ ಮಂದಾಕಿನೀ ಸ್ಮೃತಾ ॥ ೨೩ ॥
ಗಂಗಾಯಾಃ ಪತನಂ ರಾಜನ್ಭೂಮ್ಯಾಂ ಸೋಢುಂ ನ ಶಕ್ಯತೇ ।
ಅತಿವೇಗಾತ್ಪತಂತೀ ಸಾ ಗಾಂ ಭಿತ್ವಾ ತಲಮಾವಿಶೇತ್ ॥ ೨೪ ॥

ಅತಸ್ತದ್ಧಾರಣೇ ಶಕ್ತಂ ಶ್ರೇಷ್ಠಂ ಪರಮಯೋಗಿನಂ ।
ಪರೋಪಕಾರಣಂ ರಾಜನ್ ಶಿವದೇವಂ ಪ್ರಸಾದಯ ॥ ೨೫ ॥
ತಸ್ಯ ಧಾರಣಕರ್ತಾರಂ ನಾನ್ಯಂ ಪಶ್ಯಾಮಿ ಶಂಕರಾತ್ ।
ಇತ್ಯಾಭಾಷ್ಯ ವಿಧಾತಾ ತಂ ಸ ದೇವಃ ಸ್ವಪುರಂ ಯಯೌ ॥ ೨೬ ॥

ಬ್ರಹ್ಮದೇವರು ಹೇಳಿದರು—

''ಎಲೈ ಪಾಪರಹಿತನಾದ ಭೂಪತಿಯೇ!, ನಿನ್ನ ಭಕ್ತಿಯಿಂದಲೂ, ಉಗ್ರವಾದ ತಪಸ್ಸಿನಿಂದಲೂ ನನ್ನ ವರದಾನದಿಂದಲೂ ಗಂಗೆಯು ಖಂಡಿತವಾಗಿಯೂ ಬರುವಳು. ॥ ೧೮ ॥ ಯಜ್ಞಪುರುಷನಾದ ಶ್ರೀ ಮಹಾವಿಷ್ಣುವಿನ ಅವತಾರವೇ ಆದ ಶ್ರೀ ವಾಮನಮೂರ್ತಿಯಿಂದ ಮೂರು ಪಾದಗಳ ನೆಪದಿಂದ ಇಂದ್ರನಿಗೋಸ್ಕರ ಬಲಿಯನ್ನು ಕುರಿತು ಭೂಮಿಯು ಯಾಚಿಸಲ್ಪಟ್ಟಿತು. ॥ ೧೯ ॥ ಆಗ ಮೇಲಕ್ಕೆ ಮೂರು ಹೆಜ್ಜೆಯ ನೆಪದಲ್ಲಿ ವಾಮನನು ಮೇಲಕ್ಕೆ ಹರಡಲ್ಪಟ್ಟ ಎಡಪಾದದ ಹೆಬ್ಬೆಟ್ಟನ್ನು ನನ್ನ ಆಸನದ ಮೇಲೆ ಇಟ್ಟಿದ್ದನ್ನು ಸಪ್ತಋಷಿಗಳ ಜೊತೆ ನಾನು ನೋಡಿದೆನು. ॥ ೨೦ ॥ ಬೇರೊಂದು ಪೂಜಾಸಾಧನವನ್ನು ಕಾಣದೇ ಕೈಯಲ್ಲಿದ್ದ ಕಮಂಡಲದಲ್ಲಿದ್ದ ಜಲದಿಂದ ಪರಮಾತ್ಮನ ಪಾದಪ್ರಕ್ಷಾಳನ ಮಾಡಿದೆನು. ಆಗ ನನ್ನ ಕಮಂಡಲದಲ್ಲಿದ್ದ ಗಂಗೆಯು ವಿಷ್ಣುಪಾದದ ಮೇಲೆ ಬಿದ್ದು ಸ್ವರ್ಗಲೋಕದಲ್ಲಿ ಇಳಿದು ಹರಿಯಿತು. ಹೀಗೆ ಹರಿದ ಗಂಗೆಯು ಪರಮಾತ್ಮನ ಪಾದದ ಧೂಳಿನಿಂದಲೂ, ಪರಮಾತ್ಮನಿಗೆ ಪ್ರಿಯವಾದ ತುಳಸಿಯಿಂದಲೂ ಕೂಡಿತ್ತು. ॥ ೨೧-೨೨ ॥ ಈಗ ಸ್ವರ್ಗದಲ್ಲಿ ದೇವತೆಗಳಿಂದಲೂ ಮತ್ತು ಅವರ ಪತ್ನಿಯರಿಂದಲೂ ಚೆನ್ನಾಗಿ ಪೂಜಿಸಿಕೊಂಡು ಸ್ವರ್ಗವನ್ನು ಉದ್ಧರಿಸಿ ಮಂದಾಕಿನೀಯೆಂಬ ಹೆಸರಿನಿಂದ ಅಲ್ಲಿ ಕ್ರೀಡಾಮಾಡುತ್ತಿರುವಳು. ॥ ೨೩ ॥ ಹೇ ರಾಜನೇ!, ಗಂಗೆಯು ಬೀಳುವ ವೇಗವನ್ನು ಭೂಮಿಯು ತಡೆಯಲು ಶಕ್ತವಾಗಿಲ್ಲ. ಆದ್ದರಿಂದ ಅದು ಭೂಮಿಯನ್ನು ಭೇದಿಸಿಕೊಂಡು ಪಾತಾಳಕ್ಕೆ ಸಾಗುವುದು. ॥ ೨೪ ॥ ಆದ್ದರಿಂದ ಈ ಗಂಗೆಯ ವೇಗವನ್ನು ತಡೆಯಲು ಶಕ್ತನಾದ, ಅತಿಶ್ರೇಷ್ಠನಾದ ಪರಮಶ್ರೇಷ್ಠಯೋಗಿಯಾದ ಮತ್ತು ಪರೋಪಕಾರ ಬುದ್ಧಿಯುಳ್ಳ ಶ್ರೀ ರುದ್ರದೇವರನ್ನು ಸಂತುಷ್ಟಿಗೊಳಿಸು. ॥ ೨೫ ॥ ಈಶ್ವರನನ್ನು ಬಿಟ್ಟು ಬೇರೆ ಯಾರೂ ಈ ಗಂಗೆಯನ್ನು ಧಾರಣೆ ಮಾಡಲು ಶಕ್ತರಲ್ಲ. ಈ ರೀತಿಯಾಗಿ ಭಗೀರಥನಿಗೆ ಹೇಳಿ ಬ್ರಹ್ಮದೇವರು ತನ್ನ ಲೋಕಕ್ಕೆ ತೆರಳಿದರು. ॥ ೨೬ ॥

ಅಬ್ಜಯೋನೌ ಗತೇ ರಾಜಾ ಸ್ವಾಂಗುಷ್ಠಾಗ್ರನಿಪೀಡಿತಾಂ ।
ಕೃತ್ವಾ ವಸುಮತೀಂ ತಸ್ಯಾಮತಿಷ್ಠತ್ಸುದೃಢಾಸನಃ ॥ ೨೭ ॥
ಊರ್ಧ್ವಬಾಹುರ್ನಿರಾಲಂಬೋ ವಾಯುಭಕ್ಷೋ ನಿರಾಶ್ರಯಃ ।
ಅಚಲಃ ಸ್ಥಾಣುವತ್ ಸ್ಥಿತ್ವಾ ರಾತ್ರಂದಿವಮತಂದ್ರಿತಃ ॥ ೨೮ ॥
ಏವಂ ಸಂವತ್ಸರೇ ಪೂರ್ಣೇ ದೇವರ್ಷಿಗಣಪೂಜಿತಃ ।
ಪುರಾರಿಸ್ತತ್ಪುರಃ ಸ್ಥಿತ್ವಾ ತಮುವಾಚ ಭಗೀರಥಮ್ ॥ ೨೯ ॥

ಬ್ರಹ್ಮನು ಅಲ್ಲಿಂದ ತೆರಳುತ್ತಿರಲಾಗಿ, ಭಗೀರಥನು ಭೂಮಿಯನ್ನು ತನ್ನ ಹೆಬ್ಬೆಟ್ಟಿನಿಂದ ಅದುಮಿ ಭದ್ರವಾಗಿ ನಿಂತುಕೊಂಡು, ಎರಡು ಬಾಹುಗಳನ್ನೂ ಮೇಲೆತ್ತಿ ಯಾವ ಬೇರೆ

ಆಧಾರವಿಲ್ಲದವನಾಗಿ ಕೇವಲ ವಾಯುಭಕ್ಷಕನಾಗಿ ಚಲಿಸದೆ ಪರ್ವತದಂತೆ ನಿಂತು ಆಲಸ್ಯವಿಲ್ಲದೆ ತಪಸ್ಸು ಮಾಡಿದನು. ॥ ೨೭-೨೮ ॥ ಈ ರೀತಿಯಾಗಿ ಅವನು ಒಂದು ವರ್ಷಕಾಲ ಕಳೆಯಲು, ದೇವಋಷಿಗಣಗಳಿಂದ ಪೂಜಿತನಾಗುವ ರುದ್ರನು ಅವನಿಗೆ ಪ್ರತ್ಯಕ್ಷವಾಗಿ ಹೇಳಿದನು. ॥ ೨೯ ॥

**ಶಿವ ಉವಾಚ—**

ಪ್ರೀತೋಽಹಂ ಹೇ ನೃಪಶ್ರೇಷ್ಠ ಕರಿಷ್ಯಾಮಿ ತವ ಪ್ರಿಯಮ್ ।
ಶಿರಸಾ ಧಾರಯಿಷ್ಯಾಮಿ ಗಂಗಾಗಮನಮೇಖಲಾಮ್ ॥ ೩೦ ॥

**ಶಿವನು ಹೇಳಿದನು—**

"ಎಲೈ ರಾಜಶ್ರೇಷ್ಠನೇ! ನಿನ್ನ ತಪಸ್ಸಿನಿಂದ ತೃಪ್ತನಾಗಿದ್ದೇನೆ. ನಿನಗೆ ಪ್ರಿಯವಾದುದನ್ನು ಮಾಡುವೆನು. ಗಂಗೆಯ ಗಮನದ ಮುಖ್ಯ ಪ್ರವಾಹವನ್ನೇ ನನ್ನ ಶಿರಸ್ಸಿನಲ್ಲಿ ಧಾರಣೆ ಮಾಡುವೆನು" ॥ ೩೦ ॥

ತತೋ ಹಿಮವತಃ ಶೃಂಗಂ ಸಮಾರುಹ್ಯ ಮಹೇಶ್ವರಃ ।
ಪತಸ್ವೇತ್ಯಬ್ರವಿದ್ಗಂಗಾಂ ಆಭಾಷ್ಯಾಕಾಶಸಂಸ್ಥಿತಾಮ್ ॥ ೩೧ ॥
ಜಟಾಕಲಾಪಂ ವಿಪುಲಂ ಪ್ರವಿಕೀರ್ಯ ಸಮಂತತಃ ।
ಬಹುಯೋಜನವಿಸ್ತಾರಂ ಗಿರಿಕಂದರಸನ್ನಿಭಮ್ ॥ ೩೨ ॥
ತಸ್ಮಿನ್ನಿಪತಿತಾಂ ದೇವೀಂ ತೀವ್ರವೇಗಾಂ ಮಹತ್ಸ್ವನಾಮ್ ।
ದಧಾರ ಪರಮೋ ಯೋಗೀ ಗಂಗಾಂ ಗಮನತಶ್ಚ್ಯುತಾಮ್ ॥ ೩೩ ॥
ಇತ್ಥಂ ಸಾ ಸಹ್ಯವೇಗಾಪಿ ಗಂಗಾ ಸಂಪ್ರಾಪ್ಯ ಧೂರ್ಜಟೀಂ ।
ಜಟಾಜೂಟಂ ಶರದ್ವ್ಯಾವದ್ಭ್ರಾಮಪರಿಮೋಹಿತಾ ॥ ೩೪ ॥
ತತ್ರೈವ ಪ್ರತಿಬದ್ಧಾಂ ತಾಂ ಗಂಗಾಂ ಜ್ಞಾತ್ವಾ ಭಗೀರಥಃ ।
ಪುನಃ ಪ್ರಸಾದಯಾಮಾಸ ಗಂಗಾಂ ಮುಂಚೇತಿ ಶಂಕರಮ್ ॥ ೩೫ ॥
ಪುನಸ್ತತ್ಪ್ರಾರ್ಥನಾದ್ದೇವೋ ಜಟಾಮೇಕಾಂಬಿಲಂಬಿನೀಮ್ ।
ವಿಧಾಯ ಮುಮುಚೇ ಗಂಗಾಂ ತತಃ ಸ್ರೋತಃಸ್ವರೂಪಿಣೀಮ್ ॥ ೩೬ ॥
ತತೋ ವೇಗಸ್ವರೂಪೇಣ ಪತಿತ್ವಾ ಧೋ ಹಿಮಾಲಯಾತ್ ।
ವನಾನಿ ಪ್ಲಾವಯಂತೀ ಸಾ ಪಾತಯಂತೀ ಭುವಸ್ಥಲಮ್ ॥ ೩೭ ॥
ಯಕ್ಷಾಃ ಸಗಣಗಂಧರ್ವಾ ವಸುಧಾತಲವಾಸಿನಃ ।
ನಾಗಾಶ್ಚ ಶೋಧಯಾಮಾಸುರ್ಮಾರ್ಗಮಸ್ಯಾ ಮಹೌಜಸಃ ॥ ೩೮ ॥
ಬ್ರಹ್ಮಪಾತ್ರಪ್ರಸೂತತ್ವಾತ್ ವಿಷ್ಣುಪಾದಾಬ್ಜಸಂಭವಾತ್ ।
ಭವಾಂಗಸಂಗತತ್ವಾಚ್ಚ ಪುಣ್ಯರಾಶಿಶಿರೋಮಣಿಃ ॥ ೩೯ ॥
ಗಾಂ ಗತಾ ಸಾ ಯದಾ ಗಂಗಾ ವಿಸ್ತೀರ್ಣಾ ಸಾ ತದಾಭವತ್ ।
ಮತ್ಸ್ಯಕಚ್ಛಪನಕ್ರೈಶ್ಚ ಶಿಂಶುಮಾರಗ್ರಹಾಕುಲಾ ॥ ೪೦ ॥

ಗಂಗಾಂ ಭೂಮಿಗತಾಂ ಜ್ಞಾತ್ವಾ ಸರ್ವೇ ದೇವರ್ಷಿಪನ್ನಗಾಃ ।
ಆತ್ಮಾನಂ ಶೋಧಯಾಮಾಸುರ್ಭಕ್ತ್ಯಾ ಪಾನಾವಗಾಹನೈಃ ॥ ೪೧ ॥
ಪ್ರಸನ್ನಾ ಸಾ ತದಾ ಗಂಗಾ ಭಗೀರಥಮುವಾಚ ಹ ।
ಯತ್ರ ಮಾಂ ನಯಸೇ ರಾಜನ್ ನಯ ತತ್ರಾಗ್ರತೋ ಭವ ॥ ೪೨ ॥
ಇತ್ಯುಕ್ತಃ ಪ್ರತಿಹೃಷ್ಟಾತ್ಮಾ ಸ್ನಾತ್ವಾ ಪೀತ್ವಾ ಯಥಾಸುಖಮ್ ।
ವಾಯುವೇಗಾಶ್ವಸಂಯುಕ್ತಂ ರಥಮಧ್ಯಾರುಹತ್ಸುಖಮ್ ॥ ೪೩ ॥
ರಥೋ ವೇಗಾತ್ಪುರೋ ಯಾತಿ ಗಂಗಾ ತತ್ಪೃಷ್ಠಚಾರಿಣೀ ।
ಪಾರ್ಶ್ವಯೋಃ ಪಾವಯಂತೀ ಚ ಸ್ಥಿತಾನ್ ಸ್ಥಾವರಜಂಗಮಾನ್ ॥ ೪೪ ॥
ವನಾನ್ಯದ್ರೀಂಶ್ಚ ವಿವಿಧಾನ್ಪುರಗ್ರಾಮವ್ರಜಾಕರಾನ್ ।
ಖೇಟಖರ್ವಟವಾಟೀಶ್ಚ ಪುನಾನಾ ಪೃಷ್ಠತೋಽನ್ವಗಾತ್ ॥ ೪೫ ॥
ಜಹ್ನೋರಾಶ್ರಮಮಾಪನ್ನಾ ರಾಜರ್ಷೇರ್ದೀಕ್ಷಿತಸ್ಯ ಚ ।
ಯಜ್ಞವಾಟಸ್ಯ ಸಂಭಾರಾನಹರನ್ನಿಜವೇಗತಃ ॥ ೪೬ ॥
ತದಾ ತಸ್ಯರ್ತ್ವಿಜಃ ಸರ್ವೇ ಯಜ್ಞನಾಶಂ ವಿಲೋಕ್ಯ ತಮ್ ।
ಜಹ್ನವೇ ಯಜಮಾನಾಯ ಕಥಯಾಮಾಸುರಂಜಸಾ ॥ ೪೭ ॥
ತಚ್ಛ್ರುತ್ವಾ ಸ ಚ ರಾಜರ್ಷಿಃ ಕ್ರುದ್ಧಃ ಕಾಲಾನಲಪ್ರಭಃ ।
ಪೀತ್ವಾ ಗಂಗಾಪ್ರವಾಹಂ ತಂ ಪೂರ್ವವತ್ ಸ್ವಾಸನೇ ಸ್ಥಿತಃ ॥ ೪೮ ॥
ರಾಜಾ ಭಗೀರಥಸ್ತಾವತ್ ಕಿಯದ್ದೂರಂ ವಿನಿರ್ಗತಃ ।
ಅಶ್ರುತ್ವಾ ಗಂಗಸನ್ನಾದಂ ಪೃಷ್ಠತೋಽಪಶ್ಯದಾಕುಲಃ ॥ ೪೯ ॥
ತತೋ ಗಂಗಾಮದೃಷ್ಟ್ವಾಽಸೌ ಜ್ಞಾತ್ವಾ ಜಹ್ನುಕೃತಂ ತ್ವಿದಂ ।
ರಥಂ ನಿವರ್ತಯಾಮಾಸ ತದಾಶ್ರಮಮಥೋಽಭ್ಯಗಾತ್ ॥ ೫೦ ॥
ರಥಾದುತ್ತೀರ್ಯ ಮುನಯೇ ಸಾಷ್ಟಾಂಗಂ ಪ್ರಣಿಪತ್ಯ ಚ ।
ಕೃತಾಂಜಲಿಪುರಸ್ತಿಷ್ಠನ್ನಸ್ತಾವೀತ್ತಂ ಮಹಾಮುನಿಮ್ ॥ ೫೧ ॥
ಸೋಽಪಿ ತತ್ ಸ್ತವನಂ ಶ್ರುತ್ವಾ ಪ್ರಸನ್ನಃ ಸಸ್ಮಿತಾನನಃ ।
ವಿಸೃಜ್ಯ ಸ್ವಾಪರಾಧಂ ತಂ ಭಗೀರಥಮುವಾಚ ಹ ॥ ೫೨ ॥

ಹೀಗೆಂದು ಹೇಳಿ ಶಿವನು ಹಿಮವತ್‌ಪರ್ವತದ ಶಿಖರಕ್ಕೆ ಬಂದು, ಆಕಾಶದಲ್ಲಿಯೇ ನಿಂತಿದ್ದ ಗಂಗೆಗೆ ಭೂಮಿಗೆ ಬೀಳಲು ಹೇಳಿದನು. ॥ ೩೧ ॥ ಬಹುಯೋಜನಗಳ ವಿಸ್ತಾರವುಳ್ಳ ಪರ್ವತದ ಕಣಿವೆಯಂತಾಗಿದ್ದ ಬಹಳ ಬೆಳೆದಿದ್ದ ತನ್ನ ಜಟೆಗಳ ಗುಂಪನ್ನು ರುದ್ರದೇವರು ಹರಡಿದಾಗ, ಅದರಲ್ಲಿ ಮಹಾವೇಗದಿಂದ ಮತ್ತು ಮಹಾ ಶಬ್ದದಿಂದ ಆಕಾಶದಿಂದ ಬೀಳುತ್ತಿರುವ ಆ ಗಂಗೆಯನ್ನು ಧರಿಸಿದರು. ॥ ೩೨-೩೩ ॥ ಈ ರೀತಿಯಾಗಿ ಸಹಿಸಲಾರದ ವೇಗವುಳ್ಳವಳಾದರೂ ಆ ಗಂಗೆಯು ರುದ್ರದೇವರ ಜಟಾಸಮೂಹವೆಂಬ ಮಡುವಿನಲ್ಲಿ ಮೋಹದಿಂದ ವರ್ಷಗಟ್ಟಲೆ ಇದ್ದುಬಿಟ್ಟಳು.

॥ ೩೪ ॥ ಅಲ್ಲಿ ಬಂಧಿಸಲ್ಪಟ್ಟ ಗಂಗೆಯನ್ನು ತಿಳಿದ ಭಗೀರಥನು ರುದ್ರದೇವರನ್ನು ಪುನಃ "ಗಂಗೆಯನ್ನು ಬಿಟ್ಟುಕೊಡಬೇಕೆಂದು" ಪ್ರಾರ್ಥಿಸಿದನು. ॥ ೩೫ ॥ ಪುನಃ ಅವನ ಪ್ರಾರ್ಥನೆಯಂತೆ ಈಶ್ವರನು ಗಂಗೆಯನ್ನು ತನ್ನ ಜಟೆಯಲ್ಲಿ ಅವಲಂಬಿತಳಾದವಳನ್ನಾಗಿ ಮಾಡಿ ಬಿಟ್ಟುಕೊಟ್ಟನು. ಆಗ ಗಂಗೆಯು ನದಿಯ ರೂಪದಲ್ಲಿ ಹೊರಗೆ ಹರಿದುಬಂದಳು. ॥ ೩೬ ॥ ಅನಂತರ ಗಂಗೆಯು ವೇಗವಾಗಿ ಹರಿದು ಹಿಮಾಲಯದಿಂದ ಕೆಳಗೆ ನಾನಾವನಗಳನ್ನು ನೀರಿನಿಂದ ಕೊಚ್ಚಿ ಭೂಮಿಯಲ್ಲಿ ಹರಿಯತೊಡಗಿದಳು. ॥ ೩೭ ॥ ಯಕ್ಷರು, ಗಂಧರ್ವಗಣಗಳು, ಭೂಮಿಯಲ್ಲಿ ವಾಸಿಸುತ್ತಿದ್ದ ನಾಗಗಳು ಈ ಮಹಾವೇಗಸಂಪನ್ನಳಾದ ಗಂಗೆಗೆ ದಾರಿಯನ್ನು ಮಾಡುತ್ತಾ ಹೋದರು. ॥ ೩೮ ॥ ಬ್ರಹ್ಮದೇವರ ಕಮಂಡಲುವಿನಿಂದ ಹೊರಟು ಶ್ರೀ ಮಹಾವಿಷ್ಣುವಿನ ಪಾದವನ್ನು ತೊಳೆದು ರುದ್ರದೇವರ ಅಂಗಾಂಗಗಳ ಸಂಬಂಧವನ್ನು ಹೊಂದಿ ಬಂದಿರುವುದರಿಂದ ಈ ನದಿಯು ಪುಣ್ಯವುಳ್ಳವರಲ್ಲಿ ಸರ್ವಶ್ರೇಷ್ಠಳು. ॥ ೩೯ ॥ ಗಂಗೆಯು ಭೂಮಿಯಲ್ಲಿ ಹರಿದು ಚಾಲನೆಯನ್ನು ಪಡೆದುದರಿಂದ ಅವಳು "ಗಂಗಾ" ಎಂಬ ಹೆಸರನ್ನು ಪಡೆದಳು ಮತ್ತು ಅವಳ ಪಾತ್ರದಲ್ಲಿ ಮೀನುಗಳು, ಆಮೆಗಳು, ಕ್ರೌಂಚಪಕ್ಷಿಗಳು ಮತ್ತು ಚೇಳುಗಳು ಮುಂತಾದವುಗಳು ಹೇರಳವಾಗಿ ವಾಸಿಸುತ್ತವೆ. ॥ ೪೦ ॥ ಭೂಮಿಗೆ ಗಂಗೆಯು ಬಂದಿರುವುದನ್ನು ತಿಳಿದ ಎಲ್ಲ ದೇವತೆಗಳೂ, ಋಷಿಗಳು ಮತ್ತು ನಾಗಗಣಗಳು ಅವಳನ್ನು ಸ್ನಾನ ಪಾನಾದಿಗಳಿಂದ ಸೇವಿಸಿ ತಮ್ಮನ್ನು ಪವಿತ್ರಗೊಳಿಸಿಕೊಂಡರು. ॥ ೪೧ ॥ ಹೀಗಿರಲು ಗಂಗೆಯು ಭಗೀರಥನಿಗೆ ಹೇಳಿದಳು "ನನ್ನನ್ನು ಎಲ್ಲಿಗೆ ಕರೆದೊಯ್ಯಬೇಕೆಂದಿರುವೆಯೋ ಅಲ್ಲಿಗೆ ನನ್ನ ಮುಂದೆ ಮುಂದೆ ಹೋಗುತ್ತಾ ಕರೆದುಕೊಂಡು ಹೋಗು". ॥ ೪೨ ॥ ಈ ರೀತಿಯಾಗಿ ಹೇಳಿಸಿಕೊಂಡ ಸಂತುಷ್ಟನಾದ ಭಗೀರಥನು ಗಂಗೆಯಲ್ಲಿ ಸ್ನಾನಪಾನಾದಿಗಳನ್ನು ಮಾಡಿ ಸುಖದಿಂದ ಇದ್ದು ವಾಯುವೇಗದಂತೆ ಓಡುವ ಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಹರ್ಷದಿಂದ ಕುಳಿತುಕೊಂಡನು. ॥ ೪೩ ॥ ರಥವು ವೇಗದಿಂದ ಹೋಗುತ್ತಿರಲು ಗಂಗೆಯು ಅದರ ಹಿಂದೆ ಹಿಂದೆಯೇ ಹರಿಯುತ್ತಾ, ಹರಿದೆಡೆಯಲ್ಲಲ್ಲಾ ದಡಗಳಲ್ಲಿರುವ ಜೀವಜಡಗಳನ್ನು ಪವಿತ್ರಗೊಳಿಸಿದಳು. ॥ ೪೪ ॥ ಹಾಗೆಯೇ ನಾನಾ ವಿಧಗಳಾದ ವನಗಳು, ಬೆಟ್ಟಗಳು, ಪಟ್ಟಣಗಳು, ಗ್ರಾಮಗಳು, ಗೊಲ್ಲರಹಳ್ಳಿಗಳು, ಗಣಿಗಳು, ಬೇಡರಹಳ್ಳಿಗಳು, ನದಿಯಿಂದ ಕೂಡಿದ ಊರುಗಳು, ಹೂವಾಡಿಗರ ಹಳ್ಳಿಗಳು ಮತ್ತು ತೋಟಗಳು ಇವುಗಳನ್ನು ಪವಿತ್ರಗೊಳಿಸುತ್ತಾ ಭಗೀರಥನ ರಥದ ಹಿಂದೆಯೇ ಹೊರಟಳು. ॥ ೪೫ ॥ ಯಜ್ಞಾಚರಣೆಯ ದೀಕ್ಷೆಯಲ್ಲಿದ್ದ ಜಹ್ನುವೆಂಬ ರಾಜರ್ಷಿಯ ಆಶ್ರಮಕ್ಕೆ ಗಂಗೆಯು ನುಗ್ಗಿ ತನ್ನ ವೇಗದಿಂದ ಆ ರಾಜನ ಯಜ್ಞಸಾಮಗ್ರಿಗಳನ್ನೆಲ್ಲಾ ಕೊಚ್ಚಿಕೊಂಡು ಹೋದಳು. ॥ ೪೬ ॥ ಆಗ ಅವನ ಎಲ್ಲ ಋತ್ವಿಜರು ಯಜ್ಞದ ನಾಶವನ್ನು ಗಮನಿಸಿ ಯಜಮಾನನಾದ ಜಹ್ನುವಿಗೆ ಉಚಿತವಾದದ್ದನ್ನು ಮಾಡಲು ಹೇಳಿದರು. ॥ ೪೭ ॥ ಅವರ ಬಿನ್ನಹವನ್ನು ಆಲಿಸಿದ ರಾಜನು ಕ್ರೋಧದಿಂದ ಪ್ರಳಯಾಗ್ನಿಯಂತೆ ಜ್ವಲಿಸಿ ಗಂಗೆಯ ಪ್ರವಾಹವೆಲ್ಲವನ್ನೂ ಪಾನಮಾಡಿ ಪುನಃ ಯಜ್ಞವನ್ನು ಮುಂದುವರಿಸಲು ತನ್ನ ಯಾಜ್ಞಿಯ ಆಸನದಲ್ಲಿ ಕುಳಿತನು. ॥ ೪೮ ॥ ಆಗ ಭಗೀರಥನು ಎಷ್ಟೋ ದೂರ ಮುಂದೆ ಪ್ರಯಾಣ ಮಾಡಿದ್ದನು, ಗಂಗೆಯ ಗರ್ಜನೆಯನ್ನು ಕೇಳದೆ ಚಕಿತನಾಗಿ ಹಿಂತಿರುಗಿ ನೋಡಿದನು. ॥ ೪೯ ॥ ಆಗ ಗಂಗೆಯನ್ನು ಕಾಣದೆ ವಿಚಾರಿಸಿ ಎಲ್ಲವನ್ನು ತಿಳಿದು ರಥವನ್ನು ಹಿಂತಿರುಗಿಸಿ ಜಹ್ನುರಾಜನ ಆಶ್ರಮಕ್ಕೆ ಬಂದನು. ॥ ೫೦ ॥ ಅಲ್ಲಿ ರಥದಿಂದ ಇಳಿದು ಈ ಮುನಿಗೆ ಸಾಷ್ಟಾಂಗ ನಮನ ಮಾಡಿ ಅವನನ್ನು ಸ್ತೋತ್ರಮಾಡಿದನು. ॥ ೫೧ ॥ ಅವನು ಭಗೀರಥನ

ಸ್ತೋತ್ರದಿಂದ ಪ್ರಸನ್ನನಾಗಿ ಮುಗುಳ್ನಗೆಯನ್ನು ಸೂಸುತ್ತಾ ತನಗಾದ ಅಪರಾಧವನ್ನು ಮರೆತು ಭಗೀರಥನನ್ನು ಕುರಿತು ಇಂತೆಂದನು. ॥ ೫೨ ॥

ಜಹ್ನುರುವಾಚ—

ಭಗೀರಥ ಮಹಾಭಾಗ ಸೂರ್ಯವಂಶಶಿಖಾಮಣೇ ।
ಪ್ರಸನ್ನೋಽಸ್ಮಿ ತ್ವದೀಯೇನ ಗಂಗಾನಯನಕರ್ಮಣಾ ॥ ೫೩ ॥
ಕೋಽಪಿ ನೈತಾದೃಶಂ ಚಕ್ರುಃ ಕರಿಷ್ಯಂತಿ ನ ಚಾಪರೇ ।
ಯದಸಾಧ್ಯಂ ಮಹತ್ಕರ್ಮ ತಮಕಾರ್ಷೀರಿದಂ ಖಲು ॥ ೫೪ ॥

ಜಹ್ನುವು ಹೇಳಿದನು—

"ಎಲೈ ಮಹಾಮಹಿಮನಾದ ಭಗೀರಥನೇ! ನೀನು ಸೂರ್ಯವಂಶಕ್ಕೆ ಶಿರೋರತ್ನಪ್ರಾಯನು. ಗಂಗೆಯನ್ನು ತರಲು ನಡೆಸಿರುವ ನಿನ್ನ ಕರ್ಮದಿಂದ ನಾನು ಪ್ರಸನ್ನನಾಗಿದ್ದೇನೆ. ॥ ೫೩ ॥ ಇದುವರೆಗೆ ಯಾರೂ ಇಂಥಹ ಕಾರ್ಯವನ್ನು ಮಾಡಿಲ್ಲ ಮತ್ತು ಮುಂದೆ ಮಾಡುವುದೂ ಇಲ್ಲ. ಯಾವುದು ಅಸಾಧ್ಯವೋ ಅಂತಹುದನ್ನು ನಿಶ್ಚಯವಾಗಿ ಸಾಧಿಸಿದ್ದೀಯೆ". ॥ ೫೪ ॥

ಇತ್ಯುಕ್ತ್ವಾ ಮುಮುಚೇ ಗಂಗಾಂ ಕರ್ಣರಂಧ್ರಾತ್ಸ್ವದಕ್ಷಿಣಾತ್ ।
ಕೃತಕೃತ್ಯೋ ಭವಸ್ವೇತಿ ಸ್ವಾಶೀರ್ಭಿಸ್ತಂ ಯುಯೋಜ ಚ ॥ ೫೫ ॥
ತತೋ ಭಗೀರಥೋ ನತ್ವಾ ರಥಮಾರುಹ್ಯ ಪೂರ್ವವತ್ ।
ಜಗಾಮ ಗಂಗಾಯಾ ಸಾರ್ಧಂ ಪ್ರಯಾಗಂ ಸಮುಪದ್ಯತ ॥ ೫೬ ॥
ತತ್ರ ತಾಂ ಕುಟಿಲಾಂ ದೃಷ್ಟ್ವಾ ವಿಜ್ಞಾಯ ಚ ತದಾಶಯಂ ।
ಯಮುನಾಂ ಪ್ರಾರ್ಥ್ಯ ಚಾನೀಯ ದ್ವಯೋಃ ಸಖ್ಯಮಕಾರಯತ್ ॥ ೫೭ ॥
ತಯೋರಾಭಾಷಣಂ ಸರ್ವಂ ಪ್ರಯಾಗೇ ವಿನಿರೂಪಿತಂ ।
ಪ್ರಯಾಗಂ ತೀರ್ಥರಾಜಂ ತೇ ಜ್ಞಾತ್ವಾ ಹೃಷ್ಟೇ ಪ್ರತಸ್ಥತುಃ ॥ ೫೮ ॥
ಪುನಶ್ಚ ರಥಮಾರುಹ್ಯ ಗಂಗಾಸಂಗಾತ್ಭಗೀರಥಃ ।
ಸ್ವಕಾರ್ಯಂ ವಿಧಿವತ್ಸರ್ವಂ ಯಥೇಚ್ಛಮಕರೋದ್ವಿಭುಃ ॥ ೫೯ ॥
ವಿಂಧ್ಯವಾರಾಣಸೀಭಾಗಾನ್ಭೂಷಯಿತ್ವಾ ಸ್ವವಾರಿಣಾ ।
ಗಂಗೋದ್ಭೇದಂ ಸಮಾಸಾದ್ಯ ಪೃಥಕ್ಭೂತಾಬ್ಧಿಮಾಪ ಸಾ ॥ ೬೦ ॥
ಇತ್ಯೇವಂ ಮುನಿಶಾರ್ದೂಲಾ ಗಂಗೋತ್ಪತ್ತಿರ್ನಿರೂಪಿತಾ ।
ಸಪ್ರಭಾವಾ ಭವತ್ಪ್ರೀತ್ಯಾ ಕಿಮನ್ಯತ್ಪ್ರವದಾಮಿ ವಃ ॥ ೬೧ ॥

॥ ಇತಿ ಪಂಚನವತಿತಮೋಽಧ್ಯಾಯಃ ॥

ಹೀಗೆ ಹೇಳಿ ತನ್ನ ಬಲಗಿವಿಯಿಂದ ಗಂಗೆಯನ್ನು ಹೊರಕ್ಕೆ ಹರಿಯಬಿಟ್ಟನು. ಹಾಗೂ ನೀನು

ಕೃತಕೃತ್ಯನಾಗೆಂದು ಆಶೀರ್ವಾದವನ್ನು ಮಾಡಿದನು. ॥ ೫೫ ॥ ಅನಂತರ ಭಗೀರಥನು ಜಹ್ನುಮುನಿಯನ್ನು ನಮಸ್ಕರಿಸಿ, ಹಿಂದಿರುಗಿ ರಥವನ್ನೇರಿ ಗಂಗೆಯೊಡನೆ ಪ್ರಯಾಗ ಕ್ಷೇತ್ರಕ್ಕೆ ಬಂದನು. ॥ ೫೬ ॥ ಅಲ್ಲಿ ಗಂಗೆಯು ತನ್ನ ಗತಿಯನ್ನು ಪಕ್ಕಕ್ಕೆ ಸರಿಸಿದ್ದನ್ನು ಗಮನಿಸಿದ ಭಗೀರಥನು ಗಂಗೆಯ ಆಶಯವನ್ನು ತಿಳಿದು ಗಂಗೆ-ಯಮುನೆಯರಿಬ್ಬರಿಗೂ ಸಖ್ಯವನ್ನು ಮಾಡಿಸಿದನು. ॥ ೫೭ ॥ ಆ ಗಂಗಾಯಮುನೆಯರ ಸಂಭಾಷಣೆಯನ್ನು ಹಿಂದೆಯೇ ತಿಳಿಸಲಾಗಿದೆ. ಪ್ರಯಾಗವು ತೀರ್ಥರಾಜನೆಂದು ಅವರಿಬ್ಬರೂ ತಿಳಿದು ಅಲ್ಲಿಂದ ಮುಂದಕ್ಕೆ ಹರಿಯತೊಡಗಿದರು. ॥ ೫೮ ॥ ಭಗೀರಥನು ಪುನಃ ರಥವನ್ನೇರಿ ಗಂಗಾಸಂಗಮದವರೆಗೆ ತನ್ನ ಕಾರ್ಯಗಳನ್ನೆಲ್ಲಾ ವಿಧಿವತ್ತಾಗಿ ಮಾಡಿ ಮುಗಿಸಿದನು. ॥ ೫೯ ॥ ವಿಂಧ್ಯ ಮತ್ತು ವಾರಣಾಸೀ ಪ್ರಾಂತ್ಯವನ್ನು ಗಂಗೆಯು ತನ್ನ ಜಲದಿಂದ ಅಲಂಕರಿಸಿ, ಗಂಗೋದ್ಭೇದದವರೆಗೆ ಯಮುನೆಯೊಡನೆ ಒಟ್ಟಿಗೆ ಹರಿದು ಅಲ್ಲಿಂದ ಬೇರೆಯಾಗಿ ಸಮುದ್ರವನ್ನು ಸೇರಿದಳು. ॥ ೬೦ ॥ ಹೇ ಮುನಿಶ್ರೇಷ್ಠರೇ ನಿಮ್ಮ ಮೇಲಿನ ಪ್ರೇಮದಿಂದ ಗಂಗೆಯ ಉತ್ಪತ್ತಿಯನ್ನು ಕುರಿತು ಹೇಳಿಯಾಯಿತು. ಈ ಕಥಾನಕವು ಅವಳ ಪ್ರಭಾವಗಳಿಂದ ಕೂಡಿದ್ದಾಗಿದೆ. ನಿಮಗೆ ಬೇರೆ ಏನನ್ನು ಹೇಳಲಿ? ॥ ೬೧ ॥

॥ ತೊಂಬತ್ತೈದನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಷಣ್ಣವತಿತಮೋಽಧ್ಯಾಯಃ ॥ ೯೬॥

**ಮುನಯ ಊಚುಃ—**

ಗಂಗಾಖ್ಯಾನಂ ಶ್ರುತಂ ಸಾಂಗಂ ಭವತಃ ಕರುಣಾತ್ಮನಃ ।
ಸರಸ್ವತ್ಯಾಃ ಸಮುತ್ಪತ್ತಿಂ ಶ್ರೋತುಮಿಚ್ಛಾಮಹೇ ವಯಮ್ ॥ ೧ ॥

## ॥ ತೊಂಬತ್ತಾರನೆಯ ಅಧ್ಯಾಯವು ॥

**ಸನಕಾದಿಗಳು ಹೇಳಿದರು—**

"ಕರುಣಾತ್ಮರಾದ ತಮ್ಮಿಂದ ಸಾಂಗವಾಗಿ ಗಂಗೆಯ ಆಖ್ಯಾನವನ್ನು ಕೇಳಿದೆವು. ಸರಸ್ವತಿಯ ಉತ್ಪತ್ತಿಯನ್ನು ಕೇಳಬಯಸುತ್ತೇವೆ". ॥ ೧ ॥

**ಶೇಷ ಉವಾಚ—**

ಯದಾ ಬ್ರಹ್ಮಾಕರೋತ್ ಸೃಷ್ಟಿಂ ಧ್ಯಾಯಮಾನಃ ಪ್ರಜಾ ಬಹು ।
ಮನಸಃ ಕಾಮ ಏವಾಸೀತ್ ಭ್ರೂಮಧ್ಯಾತ್ ಕ್ರೋಧಮೇವ ಚ ॥ ೨ ॥
ಅಧರಾಲ್ಲೋಭ ಏವಾಸೀತ್ ಆಸ್ಯಾದಾಸೀತ್ಸರಸ್ವತೀ ।
ಬ್ರಹ್ಮಾ ತಾಂ ಚಕಮೇ ಕಾಮೀ ತಸ್ಯಾ ಲಾವಣ್ಯಮೋಹಿತಃ ॥ ೩ ॥
ವಿಲೋಕ್ಯ ಮುನಯಃ ಸರ್ವೇ ನಿಷೇಧಂ ಚಕ್ರುರುತ್ತಮಾಃ ।
ನೈತತ್ಪೂರ್ವಂ ಕೃತಂ ಕೈಶ್ಚಿನ್ನ ಭವಿಷ್ಯತಿ ನ ಸಾಂಪ್ರತಂ ॥ ೪ ॥
ತನ್ನ ಯೋಗ್ಯಂ ತವೇದಂ ಭೋ ವಿಚಾರಯ ಮಹಾಮತೇ ।
ತತೋ ನಿವೃತ್ತೋ ನಿರ್ಬಂಧಾತ್ಸಸ್ಮಾರ ಶ್ರೀನಿಕೇತಮ್ ॥ ೫ ॥
ತದೈವಾಂತರ್ದಧೇ ವಾಣೀ ವೀಣಾಪುಸ್ತಕಧಾರಿಣೀ ।
ತಸ್ಯಾಂ ಬ್ರಹ್ಮತನೌ ಭೂಯೋ ಲೀನಾ ಮಾನಸಹಾರಿಣೀ ॥ ೬ ॥
ತತೋ ಬಹುತರೇ ಕಾಲೇ ಪೂರ್ವಚಿತ್ತಿಃ ಸುರಾಪ್ಸರಾಃ ।
ಶ್ರುತ್ವಾ ಪ್ರಭಾಸಮಾಹಾತ್ಮ್ಯಂ ಸತ್ಯಲೋಕಾದವಾತರತು ॥ ೭ ॥
ಲಾವಣ್ಯಶೇವಧಿಂ ಯಾಂತೀಂ ಚಪಲಾಮಿವ ಭಾಸುರಾಂ ।
ದೃಷ್ಟ್ವಾ ದಧೀಚಿಃ ಕಾಮಾರ್ತೋ ಜಾತಸ್ತದ್ವೀರ್ಯಮಚ್ಯವತ್ ॥ ೮ ॥
ತದ್ವೀರ್ಯಂ ತು ಕುಶಕ್ಷೇತ್ರೇ ಪತಿತಂ ಬ್ರಹ್ಮಸಂಭವಂ ॥
ಚರಮಾಣಾ ತದಾ ಕಾಚಿತ್ ವಡವಾ ತದಭಕ್ಷಯತ್ ॥ ೯ ॥
ತಸ್ಯಾಂ ಕಾಲೇನ ಸಂಜಾತೋ ವಾಡವೋ ನಾಮ ಬಾಲಕಃ ।
ಉತ್ಪನ್ನ ಏವ ಕ್ಷುಧಿತೋ ಭೋಕ್ತುಂ ಬ್ರಹ್ಮಾಂಡಮುದ್ಯತಃ ॥ ೧೦ ॥
ಮಾತುಃ ಸ್ತನ್ಯಂ ಪಪೌ ಸರ್ವಂ ತೃಪ್ತಿಂ ನೋ ಯಾತಿ ಬಾಲಕಃ ।
ಜಲಂ ದತ್ತಂ ನೈವ ತೃಪ್ತೋ ರಸಾ ದತ್ತಾಃ ನ ತೃಪ್ತಿದಾಃ ॥ ೧೧ ॥

ತದಾ ಮಾತಾವದತ್ ಕಸ್ತ್ವಂ ಭಕ್ಷಕೋऽಸಿ ಜಗತ್ತ್ರಯಂ ।
ತಥೇತ್ಯೋಮಿತಿ ತದ್ವಾಕ್ಯಂ ಪ್ರಮಾಣಂ ಕೃತವಾನ್ಶಿಶುಃ ॥ ೧೨ ॥
ತತೋ ಬ್ರಹ್ಮಾದಯೋ ದೇವಾಃ ಸಂತ್ರಸ್ತಾ ಇದಮೂಚಿರೇ ।
ಅಯಂ ಬಾಲೋ ನ ವೇತಾಲೋ ನ ರೌದ್ರೋ ಘೋರದರ್ಶನಃ ॥ ೧೩ ॥
ಬ್ರಹ್ಮಾಂಡಂ ಭೋಕ್ತುಕಾಮೋಸ್ತಿ ಬ್ರಹ್ಮವೀರ್ಯಸಮುದ್ಭವಃ ।
ವೀರ್ಯಂ ತಪಸ್ವಿನಾಮುಗ್ರಂ ನಾಸ್ಮಾಕಂ ಪ್ರಭವೇದ್ಬಲಮ್ ॥ ೧೪ ॥
ವರ್ತಮಾನಾ ವೃಥಾ ಶಕ್ತಿರ್ವೈಕುಂಠೋ ಬ್ರಾಹ್ಮಣಪ್ರಿಯಃ ।
ಅತೋऽಸ್ಮಾಕಂ ಕಿಲ ಪ್ರಾಪ್ತಂ ಮರಣಂ ಸರ್ವಥಾ ವೃಥಾ ॥ ೧೫ ॥
ಕಿಂಕರ್ತವ್ಯವಿಮೂಢಾಸ್ತೇ ಯದಾ ಬ್ರಹ್ಮಾದಯೋऽಭವನ್ ।
ತದಾ ಪ್ರಾದುರಭೂದ್ವಾಣೀ ಪ್ರಕಟೀಕೃತವಿಗ್ರಹಾ ॥ ೧೬ ॥

**ಶ್ರೀ ಶೇಷದೇವರು ಹೇಳಿದರು—**

''ಯೋಚಿಸುತ್ತಾ ಬ್ರಹ್ಮನು ಬಹುವಿಧಗಳಾದ ಪ್ರಜೆಗಳನ್ನು ಸೃಷ್ಟಿಸಿದಾಗ ಮನಸ್ಸಿನ ದಶೆಯಿಂದ ಕಾಮವೂ ಮತ್ತು ಹುಬ್ಬುಗಳ ನಡುವೆ ಕ್ರೋಧವೂ ಉತ್ಪತ್ತಿಯಾದುವು. ॥ ೨ ॥ ಇವನ ತುಟಿಯಿಂದ ಲೋಭವೂ ಬಾಯಿಯಿಂದ ಸರಸ್ವತಿಯೂ ಹುಟ್ಟಿದಳು. ಅವಳ ಲಾವಣ್ಯದಿಂದ ಮೋಹಿತನಾಗಿ ಬ್ರಹ್ಮನು ಅವಳನ್ನು ಕಾಮಿಸಿದನು. ॥ ೩ ॥ ಇದನ್ನು ಗಮನಿಸಿದ ಎಲ್ಲಾ ಋಷಿಶ್ರೇಷ್ಠರು ''ಈ ಕಾರ್ಯವನ್ನು ಪೂರ್ವದಲ್ಲಿ ಯಾರೂ ಮಾಡಿಲ್ಲ, ಭವಿಷ್ಯದಲ್ಲಿಯೂ ಯಾರೂ ಮಾಡುವುದಿಲ್ಲ ಈಗಲೂ ಯಾರೂ ಮಾಡುತ್ತಿಲ್ಲ ಎಂದು ಇದನ್ನು ನಿಷೇಧಿಸಿದರು. ॥ ೪ ॥ ಮಹಾ ಜ್ಞಾನಿಗಳಾದ ತಾವು ವಿಚಾರ ಮಾಡಿ ಈ ಬಯಕೆಯು ನಿಮಗೆ ಯೋಗ್ಯವಾದುದಲ್ಲ. ಎಂದು ಹೇಳಿದರು. ಇವರುಗಳ ನಿರ್ಬಂಧದಿಂದ ಬ್ರಹ್ಮನು ಈ ಕಾರ್ಯವನ್ನು ಕೈಬಿಟ್ಟು ತನ್ನಲ್ಲಿ ನಿಯಾಮಕನಾಗಿದ್ದು ಸೃಷ್ಟಿಕಾರ್ಯವನ್ನು ಮಾಡುವ ಲಕ್ಷ್ಮೀಪತಿಯನ್ನು ಸ್ಮರಿಸಿದನು. ॥ ೫ ॥ ಮನಸ್ಸನ್ನು ಅಪಹಾರಮಾಡತಕ್ಕ ವೀಣಾ ಮತ್ತು ಪುಸ್ತಕಹಸ್ತಳಾಗಿದ್ದ ಸರಸ್ವತಿಯು ಆಗ ಮಾಯವಾಗಿ ಬ್ರಹ್ಮದೇವರ ಶರೀರವನ್ನೇ ಸೇರಿಕೊಂಡಳು. ॥ ೬ ॥ ಇದಾದ ಬಹುಕಾಲಾನಂತರ ಪೂರ್ವಚಿತ್ತಿಯೆಂಬ ದೇವತಾಪ್ಸರೆಯು ಪ್ರಭಾಸ ಕ್ಷೇತ್ರದ ಮಾಹಾತ್ಮ್ಯೆಯನ್ನು ಕೇಳಿ ಸತ್ಯಲೋಕದಿಂದ ಭೂಮಿಗೆ ಇಳಿದುಬಂದಳು. ॥ ೭ ॥ ಲಾವಣ್ಯದ ಸಾಗರದಂತೆಯಿದ್ದ ಆ ಅಪ್ಸರ ಸ್ತ್ರೀಯು ಚಪಲಳಾಗಿದ್ದಂತೆ ಕಾಣಬರುತ್ತಿದ್ದಳು. ಅವಳನ್ನು ನೋಡಿದ ದಧೀಚಿ ಋಷಿಯು ಅವಳಲ್ಲಿ ಕಾಮಾಸಕ್ತನಾದನು. ಆಗ ಅವನ ವೀರ್ಯವು ಸ್ಖಲನವಾಯಿತು. ॥ ೮ ॥ ಆ ಬ್ರಾಹ್ಮಣನಿಂದ ಬಿದ್ದ ವೀರ್ಯವು ದರ್ಭೆ ಹುಲ್ಲುಗಳ ಮೇಲೆ ಬಿದ್ದಿತು. ಹುಲ್ಲು ಮೇಯುತ್ತಿದ್ದ ಒಂದು ಹೆಣ್ಣುಕುದುರೆಯು ದರ್ಭೆಯ ಜೊತೆಗೆ ಇದನ್ನು ಭಕ್ಷಣ ಮಾಡಿತು. ॥ ೯ ॥ ಕೆಲ ಕಾಲಾನಂತರ ಇದರ ಗರ್ಭದಲ್ಲಿ ''ವಾಡವ''ನೆಂಬ ಗಂಡು ಶಿಶುವು ಹುಟ್ಟಿತು. ಇದು ಹುಟ್ಟುತ್ತಲೇ ಹಸಿವಿನಿಂದ ಇಡೀ ಬ್ರಹ್ಮಾಂಡವನ್ನೇ ತಿನ್ನಲು ಆರಂಭಿಸಿತು. ॥ ೧೦ ॥ ತಾಯಿಕುದುರೆಯ ಎಲ್ಲ ಹಾಲನ್ನೂ ಕುಡಿದರೂ ಬಾಲಕನಿಗೆ ತೃಪ್ತಿಯಾಗಲಿಲ್ಲ. ನೀರಿನಿಂದಾಗಲೀ ಅನೇಕ ರಸಪದಾರ್ಥಗಳಿಂದಾಗಲೀ ಬಾಲಕನಿಗೆ ತೃಪ್ತಿಯಾಗಲಿಲ್ಲ. ॥ ೧೧ ॥ ಆಗ ತಾಯಿಯು ಮಗುವನ್ನು ಕುರಿತು ''ನೀನು ಯಾರು? ಮೂರು ಲೋಕಗಳನ್ನೂ ಭಕ್ಷಿಸುತ್ತಿದ್ದೀಯೋ?'' ಎಂದು ಕೇಳಿದಳು. ಅದಕ್ಕೆ ಪ್ರತ್ಯುತ್ತರವಾಗಿ ''ಹೌದು

ಹಾಗೆಯೇ ಮಾಡುವೆನು'' ಎಂದು ಹೇಳಿತು ಮತ್ತು ತನ್ನ ಕಾರ್ಯವು ಸರಿಯಾದುದೆಂದು ಹೇಳಿತು. ॥ ೧೨ ॥ ಆಗ ಬ್ರಹ್ಮಾದಿ ದೇವತೆಗಳು ''ಈ ಬಾಲಕನು ಬೇತಾಳನೂ ಅಲ್ಲ, ರುದ್ರದೇವರ ಅನುಯಾಯಿಯಾದ ಭಯಂಕರವಾದ ಭೂತವೂ ಅಲ್ಲ. ಇವನು ತಪಸ್ವಿಯಾದ ಉತ್ತಮನಾದ ಬ್ರಾಹ್ಮಣನ ವೀರ್ಯದಿಂದ ಹುಟ್ಟಿದ್ದಾನೆ. ಇವನನ್ನು ಹದ್ದುಬಸ್ತಿನಲ್ಲಿಡಲು ನಮಗಿರುವ ಶಕ್ತಿಯು ವ್ಯರ್ಥವು ಮತ್ತು ನಮ್ಮ ಶಕ್ತಿಯೂ ಸಾಲದು ವೈಕುಂಠ ನಾಮಕ ಶ್ರೀ ಹರಿಯು ಬ್ರಾಹ್ಮಣರಿಗೆ ಬೇಕಾದವನು. ಮತ್ತು ಈ ಬಾಲಕನು ಶ್ರೀಹರಿಯ ರಕ್ಷಣೆಗೆ ಒಳಪಟ್ಟಿದ್ದಾನೆ. ಆದ್ದರಿಂದ ಸರ್ವಥಾ ಸರ್ವನಾಶವು ಸಿದ್ಧವು. ಏನೂ ಕಾರಣವಿಲ್ಲದೆ ಸಾಯಬೇಕು'' ವಿನಾಕಾರಣ ನಮ್ಮಗಳ ಅಂತ್ಯಕಾಲವೂ ಮತ್ತು ಸರ್ವನಾಶವೂ ಸಿದ್ಧವೆಂದು ಹೆದರಿದರು. ॥ ೧೩-೧೫॥ ಹೀಗೆ ಹೇಳುತ್ತಾ ಏನು ಮಾಡಲೂ ತೋಚದೆ ಬ್ರಹ್ಮಾದಿಗಳು ಇರಲು, ಆಗ ಸರಸ್ವತಿಯು ಪ್ರಾದುರ್ಭೂತಳಾಗಿ ಸಶರೀರಳಾಗಿ ಕಾಣಿಸಿಕೊಂಡು ಬ್ರಹ್ಮದೇವರನ್ನು ಕುರಿತು ಈ ರೀತಿ ಹೇಳಿದಳು. ॥ ೧೬ ॥

ಸರಸ್ವತ್ಯುವಾಚ—

> ಉವಾಚ ಪಿತರಂ ಬ್ರಹ್ಮನ್ ಕಿಂ ತೇ ಕರ್ತವ್ಯಮಾದಿಶ ।
> ತತ್ಸರ್ವಂ ಹಿ ಕರಿಷ್ಯಾಮಿ ಯದ್ಭವಾನ್ಮಾಂ ಪ್ರಭಾಷತೇ ॥ ೧೭ ॥

ಸರಸ್ವತಿಯು ಹೇಳಿದಳು—

''ಹೇ ಬ್ರಹ್ಮದೇವಾ! ನನ್ನ ಕರ್ತವ್ಯವೇನು ಎಂಬುದನ್ನು ಆಜ್ಞಾಪಿಸಿ. ಅದನ್ನೆಲ್ಲಾ ನಾನು ಮಾಡುವೆನು'' ಎಂದಳು. ॥ ೧೭ ॥

ಬ್ರಹ್ಮೋವಾಚ—

> ಬ್ರಹ್ಮವೀರ್ಯಸಮುದ್ಭೂತೋ ಬಾಲೋಽಯಂ ಬಹುವೀರ್ಯವಾನ್ ।
> ಬ್ರಹ್ಮಾಂಡಂ ಭೋಕ್ತುಮುದ್ಯುಕ್ತಸ್ತಸ್ಯ ಶಾಂತಿರ್ವಿಧೀಯತಾಮ್ ॥ ೧೮ ॥
> ಮಯಾಪಿ ವಿಷ್ಣುನಾ ವಾಽಪಿ ಶಂಕರೇಣಾಽಪಿ ಧೀಮತಾ ।
> ಕರ್ತುಂ ನ ಶಕ್ಯತೇ ಭೀತ್ಯಾ ಬ್ರಹ್ಮವೀರ್ಯಸಮುದ್ಭವಾತ್ ॥ ೧೯ ॥
> ತವ ಚೇದಸ್ತಿ ನಿಯತಾ ಶಕ್ತಿಸ್ತರ್ಹಿ ವಧಾದ್ಭತೇ ।
> ಯಥಾಸ್ಮತ್ಪ್ರಾಣರಕ್ಷಾ ಸ್ಯಾತ್ತಥಾ ಕುರು ನಿವಾರಣಮ್ ॥ ೨೦ ॥

''ಬ್ರಾಹ್ಮಣನ ವೀರ್ಯದಿಂದ ಹುಟ್ಟಿದ ಈ ಬಾಲಕನು ಬಹು ವೀರ್ಯವುಳ್ಳವನು. ಬ್ರಹ್ಮಾಂಡವನ್ನೇ ತಿನ್ನಲು ಹೊರಟಿದ್ದಾನೆ. ಅವನ ಈ ಕಾರ್ಯವನ್ನು ಶಾಂತಿಗೊಳಿಸು. ॥ ೧೮ ॥ ಬ್ರಾಹ್ಮಣನ ವೀರ್ಯದ ದೆಶೆಯಿಂದ ಉದ್ಭವಿಸಿರುವ ಈ ಸಮಸ್ಯೆಗೆ ನನ್ನಿಂದಲೂ, ಶ್ರೀ ವಿಷ್ಣುವಿನಿಂದಲೂ ಮತ್ತು ಬುದ್ಧಿವಂತನಾದ ಶಿವನಿಂದಲೂ ಏನು ಮಾಡಲಾಗದ ಭೀತಿಯುಂಟಾಗಿದೆ. ॥ ೧೯ ॥ ನಿನ್ನಲ್ಲಿ ಸಾಕಷ್ಟು ಶಕ್ತಿಯಿದ್ದರೆ ಈತನ ವಧೆಯಾಗದಂತೆ ಈ ಭೀತಿಯನ್ನು ನಿವಾರಿಸಿ ನಮ್ಮೆಲ್ಲರ ಪ್ರಾಣಹಾನಿಯ ರಕ್ಷಣೆಯಾಗುವಂತೆ ಮಾಡು''. ॥ ೨೦ ॥

ಸರಸ್ವತ್ಯುವಾಚ—

ಮತ್ತೋ ವೇದಾಶ್ಚ ಶಾಸ್ತ್ರಾಣಿ ಪುರಾಣಸ್ಮೃತಯಸ್ತಥಾ ।
ಧರ್ಮಾಧರ್ಮಪ್ರಶಂಸಾ ಚ ಅಭವನ್ನಥಮನ್ಯಥಾ ॥ ೨೦ ॥
ಧಾತಸ್ತವಾಹಂ ತನಯಾ ಜಾತಾ ಕೇನಾಪಿ ಕರ್ಮಣಾ ।
ಕರಿಷ್ಯೇ ತತ್ಪ್ರತೀಕಾರಂ ಯೇನ ಸೌಖ್ಯಂ ಭವೇತ್ತವ ॥ ೨೨ ॥
ಏವಮುಕ್ತ್ವಾತಿಲಾವಣ್ಯಾ ವಸ್ತ್ರಾಭರಣಭೂಷಿತಾ ।
ಭೂಮಾವವಾತರದ್ವಾಣೀ ವಾದಯಂತೀ ಚ ಕಚ್ಛಪೀಮ್ ॥ ೨೩ ॥
ರಮ್ಯವೀಣಾನಿನಾದೇನ ಮೋಹಯಂತೀ ಜಗತ್ತ್ರಯಮ್ ।
ಸ್ಥಾವರಾನ್ ಜಂಗಮಾಶ್ಚಕ್ರೇ ಜಂಗಮಾನ್ಸ್ಥಾವರಾಣಿ ಚ ॥ ೨೪ ॥
ತಸ್ಮಿನ್ನವಸರೇ ಸೋಽಥ ವಾಡವಃ ಕ್ಷುಧಿತೋಽಪಿಸನ್ ।
ತದ್ಗಾಯನಾಮೃತಂ ಪೀತ್ವಾ ತದಂತಿಕಮುಪಾಯಯೌ ॥ ೨೫ ॥
ಶುಶ್ರಾವ ಪರಮಪ್ರೀತ್ಯಾ ತದೀಯಂ ಮಂಜುಗಾಯನಂ ।
ವಿಸಸ್ಮಾರ ಕ್ಷುಧಾಂ ಸ್ವೀಯಾಂ ಜಗತ್ತ್ರಯಭಯಾವಹಮ್ ॥ ೨೬ ॥
ಯಥಾ ಬಾಲಃ ಕ್ಷುಧಾರ್ತೋಽಪಿ ದೋಲಾಯಾಂ ಸ್ಥಾಪಿತಃ ಕ್ಷಣಮ್ ।
ರುದನ್ ಗೀತಾಮೃತಂ ಪೀತ್ವಾ ಹೃತೋ ವಿಸ್ಮರತಿ ಕ್ಷುಧಾಮ್ ॥ ೨೭ ॥

ಸರಸ್ವತಿಯು ಹೇಳಿದಳು—

''ಹೇ ಬ್ರಹ್ಮನೇ ನನ್ನ ದೆಶೆಯಿಂದ ವೇದಗಳು, ಶಾಸ್ತ್ರಗಳು, ಪುರಾಣಗಳು, ಸ್ಮೃತಿಗಳು ಮತ್ತು ಧರ್ಮಾಧರ್ಮದ ವಿಚಾರಗಳು ಆಗಿವೆ. ಇವುಗಳು ಹೇಗೆ ತಾನೇ ಅಪ್ರಮಾಣವಾದೀತು. ॥ ೨೦॥ ಎಲೈ ವಿಧಾತನೇ!, ಯಾವುದೋ ಕಾರಣದಿಂದ ನಾನು ನಿನ್ನ ಮಗಳಾಗಿ ಹುಟ್ಟಿದ್ದೇನೆ. ಆದ್ದರಿಂದ ಪ್ರತ್ಯುಪಕಾರ ಬುದ್ಧಿಯಿಂದ ನಿನಗೆ ಸುಖವಾಗುವ ಕಾರ್ಯವನ್ನು ಮಾಡುವೆ'' ಎಂದು ಹೇಳಿ ವಸ್ತ್ರಾಲಂಕಾರಗಳಿಂದ ಭೂಷಿತಳಾದ ಮತ್ತು ಅತಿ ಲಾವಣ್ಯವತಿಯಾದ ಸರಸ್ವತಿಯು ತನ್ನ ''ಕಚ್ಛಪೀ'' ಎಂಬ ವೀಣೆಯನ್ನು ನುಡಿಸುತ್ತಾ ಭೂಮಿಯಲ್ಲಿ ಅವತರಿಸಿದಳು. ॥ ೨೨ - ೨೩ ॥ ಹೀಗೆ ಅವತರಿಸಿದ ವಾಣಿಯು ಮನೋಹರವಾದ ತನ್ನ ವೀಣಾವಾದನ ನಿನಾದದಿಂದ ಮೂರು ಲೋಕಗಳಿಗೂ ಮೋಹವನ್ನುಂಟುಮಾಡಿ ಸ್ಥಾವರಗಳನ್ನು ಜಂಗಮಗಳನ್ನಾಗಿಯೂ, ಜಂಗಮಗಳನ್ನು ಸ್ಥಾವರಗಳನ್ನಾಗಿಯೂ ಮಾಡಿದಳು. ॥ ೨೪ ॥ ಅದೇ ಸಮಯದಲ್ಲಿ ಆ ವಾಡವ ಬಾಲಕನು ಬಹಳ ಹಸಿದಿದ್ದರೂ ಸರಸ್ವತಿಯು ನುಡಿಸುತ್ತಿರುವ ವೀಣೆಯ ನಾದದ ಅಮೃತವನ್ನು ಸವಿಯುತ್ತಾ ಅವಳ ಸಮೀಪಕ್ಕೆ ಬಂದನು ॥ ೨೫ ॥ ಅವಳ ಇಂಪಾದ ಗಾಯನವನ್ನು ಪ್ರೀತಿಯಿಂದ ಆಲಿಸಿದನು ಮತ್ತು ಮೂರು ಲೋಕಕ್ಕೆ ಭಯವನ್ನುಂಟುಮಾಡುತ್ತಿದ್ದ ತನ್ನ ಹಸಿವನ್ನು ಮರೆತುಬಿಟ್ಟನು. ॥ ೨೬ ॥ ಹೇಗೆ ಮಗುವು ಹಸಿದಿದ್ದರೂ ತೊಟ್ಟಿಲಿನಲ್ಲಿ ಮಲಗಿಸಿ ಹಾಡುತ್ತಿದ್ದರೆ ಕ್ಷಣದಲ್ಲಿ ತನ್ನ ಹಸಿವನ್ನೆಲ್ಲಾ ಮರೆತುಬಿಡುವಂತೆ ತನ್ನ ಹಸಿವನ್ನು ಮರೆತನು. ॥ ೨೭ ॥

ವಾಡವ ಉವಾಚ—

ಊಚೇ ಚ ತಾಂ ವಚಃ ಕಾ ತ್ವಂ ಕ್ವ ಯಾಸಿ ಪ್ರಮದೋತ್ತಮೇ ।
ಕಿಂ ತೇಽಭಿಲಷಿತಂ ಚಾಸ್ತಿ ಸರ್ವಂ ಮೇ ವದ ತತ್ತ್ವತಃ ॥ ೨೮ ॥

"ಹೇ ಉತ್ತಮಳಾದ ನಾರಿಯೇ! ನೀನು ಯಾರು? ಎಲ್ಲಿಂದ ಬಂದೆ? ಎಲ್ಲಿಗೆ ಹೋಗುವಿ? ನಿನ್ನ ಅಭಿಲಾಷೆಯು ಏನು? ಎಲ್ಲವನ್ನೂ ಪ್ರಾಮಾಣಿಕವಾಗಿ ಹೇಳು" ಎಂದು ಸರಸ್ವತಿಯನ್ನು ಅವನು ಈ ರೀತಿಯಾಗಿ ಪ್ರಶ್ನಿಸಿಯೂ ಬಿಟ್ಟನು. ॥ ೨೮ ॥

ಸರಸ್ವತ್ಯುವಾಚ—

ಅಹಂ ಬ್ರಹ್ಮಸುತಾ ಬ್ರಹ್ಮನ್ ಚರಾಮಿ ಕ್ಷಿತಿ ಮಂಡಲೇ ।
ಕ್ರೀಡಾಯಾಂ ಪ್ರೇಷಿತಾ ಪಿತ್ರಾ ಯಥೇಚ್ಛಂ ವಿಚರಾಮ್ಯಹಮ್ ॥ ೨೯ ॥
ತಲಾತಲೇ ವಾ ಪಾತಾಲೇ ಭೂತಲೇ ವಾ ನಭಸ್ಥಲೇ ।
ವಿದ್ಧಿ ಬ್ರಹ್ಮಪ್ರಸಾದೇನ ಮಮಾಪ್ರತಿಹತಾ ಗತಿಃ ॥ ೩೦ ॥
ಪರರೂಪಾ ಚ ಪಶ್ಯಂತೀ ಮಧ್ಯಮಾ ವೈಖರೀತಿ ಚ
ಏವಂ ಚತುಸ್ಸ್ವರೂಪಾಂ ಮಾಂ ತ್ವಂ ನಾವೈಷಿ ಕುತೋ ದ್ವಿಜ ॥ ೩೧ ॥

ಸರಸ್ವತಿಯು ಹೇಳಿದಳು—

"ಎಲೈ ಬ್ರಾಹ್ಮಣನೇ! ನಾನು ಚತುರ್ಮುಖ ಬ್ರಹ್ಮನ ಮಗಳು. ಯಥೇಚ್ಛವಾಗಿ ವಿಹಾರ ಮಾಡಲೆಂದು ನನ್ನ ತಂದೆಯಿಂದ ಕಳುಹಿಸಲ್ಪಟ್ಟಿರುವ ನಾನು ಈ ಭೂಮಂಡಲದಲ್ಲಿ ಸಂಚರಿಸುತ್ತಿದ್ದೇನೆ. ॥ ೨೯ ॥ ತಂದೆಯಾದ ಬ್ರಹ್ಮನ ಅನುಗ್ರಹದಿಂದ ತಲಾತಲ, ಪಾತಾಲ, ಭೂತಲ ಅಥವಾ ಆಕಾಶ ಇವುಗಳಲ್ಲಿ ನಾನು ತಡೆಯಿಲ್ಲದ ಗಮನವುಳ್ಳವಳಾಗಿದ್ದೇನೆ. ॥ ೩೦ ॥ ದ್ವಿಜನೇ! "ಪರರೂಪಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ" ಎಂಬ ನಾಲ್ಕು ರೂಪಗಳಲ್ಲಿರುವ ನನ್ನನ್ನು ನೀನು ಏತಕ್ಕಾಗಿ ತಿಳಿದುಕೊಂಡಿಲ್ಲ?" ॥ ೩೧ ॥

ವಾಡವ ಉವಾಚ—

ಕ್ಷುಧಯಾ ಪೀಡಿತಶ್ಚಾಹಂ ನಾನ್ಯಾನ್ ಜಾನಾಮಿ ಕಿಂಚನ ।
ಸರ್ವಂ ಭುಕ್ತ್ವಾಪಿ ನೋ ತೃಪ್ತಿರ್ಮಮ ಕಿಂ ಕರವಾಣ್ಯಹಮ್ ॥ ೩೨ ॥
ಆತ್ಮಾನಮಪ್ಯಹಂ ನೈವ ಜಾನೇಽತ್ಯಂತಂ ಬುಭುಕ್ಷಿತಃ ।
ತವ ಗೀತಾಮೃತಂ ಪೀತ್ವಾ ಕ್ಷುತ್ತೃಟ್‌ಶಾಂತಿರಭೂನ್ಮಮ ॥ ೩೩ ॥
ತ್ವಂ ಚೇತ್ ಭವಸಿ ಮೇ ಭಾರ್ಯಾ ನ ಮಾಂ ಕ್ಷುದ್ಬಾಧಯಿಷ್ಯತಿ ।
ಗಾರ್ಹಸ್ಥ್ಯಂ ಚ ಕರಿಷ್ಯಾಮಿ ತ್ವಯಾ ಸಹ ಸುಮಧ್ಯಮೇ ॥ ೩೪ ॥

ವಾಡವನು ಹೇಳಿದನು—

"ನಾನು ಹಸಿವಿನಿಂದ ಪೀಡಿತನಾಗಿದ್ದೇನೆ. ನನಗೆ ಬೇರೆ ಏನೂ ತೋರುವುದಿಲ್ಲ. ಎಲ್ಲವನ್ನೂ ತಿಂದರೂ ನನಗೆ ತೃಪ್ತಿಯಾಗುವುದಿಲ್ಲ. ನಾನು ಏನು ತಾನೇ ಮಾಡಲಿ? ॥ ೩೨ ॥

ಅತಿಯಾಗಿ ಹಸಿದಿರುವ ನಾನು ನನ್ನನ್ನೇ ತಿಳಿಯದವನಾಗಿದ್ದೇನೆ. ನೀನು ನುಡಿಸಿದ ವೀಣಾವಾದನದ ಅಮೃತವನ್ನು ಪಾನಮಾಡಿ ನನ್ನ ಹಸಿವು ನೀರಡಿಕೆಗಳಿಗೆ ಶಾಂತಿ ಸಿಕ್ಕಿತು. ॥ ೩೩ ॥ ನೀನು ನನ್ನ ಭಾರ್ಯೆಯಾದರೆ ನನಗೆ ಹಸಿವಿನ ಬಾಧೆಯಿರುವುದಿಲ್ಲ. ಎಲೈ ಚಂದದ ನಡುವಿರುವ ಬಾಲೆಯೇ! ನಿನ್ನೊಡನೆ ನಾನು ನನ್ನ ಗೃಹಸ್ಥಾಶ್ರಮವನ್ನು ಕಳೆಯುತ್ತೇನೆ ॥ ೩೪ ॥

ಸರಸ್ವತ್ಯುವಾಚ—

ಸರ್ವಭಕ್ಷ ಕ್ಷುಧಾರ್ತೋ ಯೋ ಗೃಹಭಕ್ಷಃ ಸ ಉಚ್ಯತೇ ।
ಕುಟುಂಬಘಾತಕಂ ತಂ ಹಿ ಪ್ರವದಂತಿ ಮನೀಷಿಣಃ ॥ ೩೫ ॥
ಸರ್ವಭಕ್ಷೋ ನರೋ ಬ್ರಹ್ಮನ್ದರಿದ್ರೋ ಭವತಿ ಧ್ರುವಂ ।
ತಾದೃಶಸ್ಯ ತವಾಹಂ ಸ್ತ್ರೀ ಭವಿಷ್ಯಾಮಿ ಕಥಂ ವದ ॥ ೩೬ ॥
ಯದಿ ಕೇನಾಪ್ಯುಪಾಯೇನ ಕ್ಷುಧಾಂ ಜೇಷ್ಯಸಿ ಚೇದ್ದ್ವಿಜ ।
ಗೃಹಕರ್ಮಾಧಿಕಾರಿತ್ವಂ ತದಾ ಭವಿತುಮರ್ಹಸಿ ॥ ೩೭ ॥

ಸರಸ್ವತಿಯು ಹೇಳಿದಳು—

"ಸರ್ವವನ್ನು ಭಕ್ಷಿಸುವಷ್ಟು ಹಸಿವಿನಿಂದ ಪೀಡಿತನಾದವನು ಹೆಂಡತಿಯನ್ನೂ ತಿನ್ನುವವನನ್ನಾಗಿ "ಗೃಹಭಕ್ಷಕ"ನೆಂದು ಹೇಳುತ್ತಾರೆ. ಅಂಥವನು ಸಂಸಾರಘಾತುಕನೆಂದೂ ಸಹ ತಿಳಿದವರು ಹೇಳುತ್ತಾರೆ. ॥ ೩೫ ॥ ಅದಲ್ಲದೆ, ಎಲೈ ಬ್ರಾಹ್ಮಣನೇ! ಸರ್ವಭಕ್ಷಕನು ಖಂಡಿತ ದರಿದ್ರನಾಗುವನು. ಇಂತಹ ನಿನಗೆ ನಾನು ಹೇಗೆ ತಾನೇ ಹೆಂಡತಿಯಾಗಬಲ್ಲೆ? ನೀನೇ ಹೇಳು. ॥ ೩೬ ॥ ಎಲೈ ದ್ವಿಜನೆ! ಏನಾದರೂ ಉಪಾಯದಿಂದ ನಿನ್ನ ಹಸಿವನ್ನು ಜಯಿಸಿದರೆ ಆಗ ನೀನು ಗೃಹಸ್ಥಾಶ್ರಮ ಕರ್ಮಾಚರಣೆಗೆ ಯೋಗ್ಯನಾಗುವಿ". ॥ ೩೭ ॥

ದ್ವಿಜ ಉವಾಚ—

ತ್ವಮೇವ ಮೇ ವದೋಪಾಯಂ ಕ್ಷುಜ್ಜಯಸ್ಯ ಕೃಪಾವತೀ ।
ಭವದುಕ್ತಂ ಕರಿಷ್ಯಾಮಿ ನಾನ್ಯಥಾ ವಚನಂ ಮಮ ॥ ೩೮ ॥

ಬ್ರಾಹ್ಮಣನು ಹೇಳಿದನು—

"ನೀನು ದಯಾಶೀಲಳು, ಆದ್ದರಿಂದ ನೀನೇ ನನಗೆ ಉಪಾಯವನ್ನು ಹೇಳು. ನೀನು ಹೇಳಿದಂತೆ ಮಾಡುತ್ತೇನೆ. ನನ್ನ ಮಾತು ಸುಳ್ಳಲ್ಲ". ॥ ೩೮ ॥

ಸರಸ್ವತ್ಯುವಾಚ—

ಏವಂ ಚೇದೇಹಿ ಮತ್ಪೃಷ್ಠೇ ತವ ಕ್ಷುತ್ತೃತಿಘಾತಕಂ ।
ಉಪಾಯಂ ದರ್ಶಯಾಮಿ ತ್ವಾಂ ಮಾ ವಿಲಂಬಂ ವೃಥಾ ಕುರು ॥ ೩೯ ॥
ಏವಮುಕ್ತ್ವಾ ಯಯೌ ದೇವೀ ವಾದಯಂತೀ ಚ ಕಚ್ಛಪೀಮ್ ।
ಮೂರ್ಛಯಂತೀ ಸ್ವರಂ ಷಡ್ಜಂ ತತ್ಪೃಷ್ಠೇ ಸೋಽಪ್ಯಗಾತ್ತನ್ವೆಃ ॥ ೪೦ ॥

ಏವಂ ಗಾನರಸೇನಾಮುಂ ಮೋಹಯಂತೀ ಸರಸ್ವತೀ ।
ಸಾಗರಸ್ಯ ತಟಂ ನಿನ್ಯೇ ಕರ್ಷಯಂತೀವ ರಜ್ಜುಭಿಃ ॥ ೪೧ ॥
ಅಥೋ ತಮಬ್ರವೀದ್ದೇವೀ ಕ್ಷುಧಿತಂ ವಡವಾಸುತಮ್ ।
ಏತತ್ಸಮುದ್ರಪಾನೀಯಂ ಯಥೇಚ್ಛಂ ಪಿಬ ವಾಡವ ॥ ೪೨ ॥
ಯಾವತ್ಕ್ಷುಧಾ ಜಲಂ ಪೀತ್ವಾ ಯದಾ ತೃಪ್ತೋ ಭವಿಷ್ಯತಿ ।
ತತೋ ಗೃಹಾಶ್ರಮಂ ಕೃತ್ವಾ ಗಾರ್ಹಸ್ಥ್ಯಂ ಸುಖಮಾವಹ ॥ ೪೩ ॥
ಇತ್ಯುಕ್ತಃ ಸ ತಥೇತ್ಯುಕ್ತ್ವಾ ಪ್ರವಿಶ್ಯ ವರುಣಾಲಯಮ್ ।
ಪಪೌ ಸಾಗರಜಂ ತೋಯಂ ಪ್ರತ್ಯಹಂ ದಶಯೋಜನಂ ॥ ೪೪ ॥
ಏವಂ ಬ್ರಹ್ಮಾದಿ ಸಂಬಾಧಾಂ ವಾರಯಿತ್ವಾ ಸ್ವತೇಜಸಾ ।
ಪರಾವೃತ್ತಾ ಚ ಸಂಹೃಷ್ಟಾ ಪ್ರಯಾಗೇ ಸಮುಪಾಗತಾ ॥ ೪೫ ॥
ಕೃತಕೃತ್ಯಾಂ ಚ ತಾಂ ದೃಷ್ಟ್ವಾ ತದಾ ಬ್ರಹ್ಮಾದಯೋಽಮರಾಃ ।
ಮುನಯೋ ಮುನಿಪತ್ನ್ಯಶ್ಚ ಸಮಾವೃತ್ಯಾವತಸ್ಥಿರೇ ॥ ೪೬ ॥
ಪ್ರಶಶಂಸುಶ್ಚ ತಾಂ ಸರ್ವೇ ಸಾಧು ಕೃತ್ಯಂ ತ್ವಯಾ ಕೃತಂ ।
ವಾಡವಸ್ಯ ಕ್ಷುಧಾಶಾಂತಿರಸ್ಮಾಕಂ ಪ್ರಾಣರಕ್ಷಣಮ್ ॥ ೪೭ ॥
ಇತ್ಯುಕ್ತ್ವಾ ಪೂಜಯಾಂಚಕ್ರುಃ ನಾನಾ ಪೂಜನಸಾಧನೈಃ ।
ಗಂಗಾ ಚ ಯಮುನಾ ಚೋಭೇ ಪೂಜಯಾಮಾಸತುಶ್ಚ ತಾಮ್ ॥ ೪೮ ॥
ಏವಂ ಸಂಪೂಜ್ಯ ಸಂಸ್ತುತ್ಯ ಪ್ರಸನ್ನಾಮಾಸ್ಥಿತಾಂ ಗಿರಂ ।
ಪ್ರೋಚುಃ ಸಂಹತ್ಯ ತೇ ವಾಕ್ಯಂ ಸರ್ವೇಷಾಮುಪಕಾರಕಮ್ ॥ ೪೯ ॥

॥ ಇತಿ ಷಣ್ಣವತಿತಮೋಽಧ್ಯಾಯಃ ॥

ಸರಸ್ವತಿಯು ಹೇಳಿದಳು—

''ಹಾಗಿದ್ದರೆ ವೃಥಾ ಕಾಲ ಹರಣ ಮಾಡದೇ ನನ್ನ ಹಿಂದೆ ಬಾ. ನಿನ್ನ ಹಸಿವು ನೀಗತಕ್ಕ ಉಪಾಯವನ್ನು ತೋರಿಸುವೆನು'' ಎಂದು ಹೇಳಿ, ಆ ದೇವಿಯು ಅಲ್ಲಿಂದ ತನ್ನ ಕಚ್ಛಪೀ ವೀಣೆಯಲ್ಲಿ ಷಡ್ಜ ಸ್ವರವನ್ನು ನುಡಿಸುತ್ತಾ ಹೊರಟಳು. ಅವಳ ಹಿಂದೆ ಆ ಬ್ರಾಹ್ಮಣನೂ ಹೊರಟನು. ॥ ೩೯-೪೦ ॥ ಈ ರೀತಿಯಾಗಿ ತನ್ನ ಗಾನರಸದಿಂದ ಅವನನ್ನು ಮೋಹಗೊಳಿಸಿ, ಸಾಗರದದಡಕ್ಕೆ ಬಂದಳು. ಅವನೂ ಹಗ್ಗಗಳಿಂದ ಎಳೆಯಲ್ಪಟ್ಟವನಂತೆ ಅಲ್ಲಿಗೆ ಬಂದನು. ॥ ೪೧ ॥ ಆಗ ಅವನನ್ನು ಕುರಿತು ಶ್ರೀ ಸರಸ್ವತೀ ದೇವಿಯು ಹೇಳಿದಳು. ''ಹೇ, ಹೆಣ್ಣು ಕುದುರೆಯ ಮಗನೇ! ಈ ಸಮುದ್ರದ ನೀರನ್ನು ಇಚ್ಛೆಯಿದ್ದಷ್ಟು ಪಾನಮಾಡು. ॥ ೪೨ ॥ ಯಾವಾಗ ನೀನು ಈ ಜಲವನ್ನು ಪಾನಮಾಡಿ ಹಸಿವನ್ನು ಜಯಿಸುವೆಯೋ ಆವಾಗ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಗೃಹಸ್ಥಕರ್ಮಗಳಲ್ಲಿ ನಿರತನಾಗು''. ॥ ೪೩ ॥ ಹೀಗೆ ಹೇಳಿಸಿಕೊಂಡ ಆ ಬ್ರಾಹ್ಮಣನು ''ಹಾಗೆಯೇ ಆಗಲಿ'' ಎಂದು ಉತ್ತರಿಸಿ ಆ ಸಾಗರವನ್ನು ಪ್ರವೇಶಿಸಿ ಪ್ರತಿ ದಿನವೂ ಹತ್ತು ಯೋಜನಗಳಷ್ಟು ನೀರನ್ನು ಪಾನಮಾಡಿದನು. ॥ ೪೪ ॥ ಈ ರೀತಿಯಾಗಿ ಬ್ರಹ್ಮಾದಿಗಳ ಬಾಧೆಯನ್ನು ತನ್ನ

ತೇಜಸ್ಸಿನಿಂದ ಬಗೆಹರಿಸಿ ಅಲ್ಲಿಂದ ಹಿಂತಿರುಗಿ ಪ್ರಯಾಗ ಕ್ಷೇತ್ರಕ್ಕೆ ಬಂದಳು. ॥ ೪೫ ॥ ಈ ರೀತಿಯಾಗಿ ಕೃತಕೃತ್ಯಳಾಗಿ ಬಂದ ಆ ದೇವಿಯನ್ನು ನೋಡಿ ಬ್ರಹ್ಮಾದಿ ದೇವತೆಗಳೂ, ಋಷಿಗಳೂ, ಋಷಿಪತ್ನಿಯರುಗಳೂ ಅವಳನ್ನು ಸುತ್ತಿಕೊಂಡು ನಿಂತರು ॥ ೪೬ ॥ ಎಲ್ಲರೂ ಅವಳನ್ನು ''ನೀನು ಒಳ್ಳೆಯದನ್ನು ಮಾಡಿದೆ. ವಡವನ ಹಸಿವಿಗೆ ಮಾಡಿದ ಶಾಂತಿಯು ನಮ್ಮಗಳ ಪ್ರಾಣಗಳ ರಕ್ಷಣೆ ಮಾಡಿತು'' ಎಂದರು. ॥ ೪೭ ॥ ಹೀಗೆ ಹೇಳಿ ಅವರೆಲ್ಲರೂ ಸಕಲ ಪೂಜಾಸಾಮಗ್ರಿಗಳೊಡನೆ ಅವಳನ್ನು ಪೂಜಿಸಿದರು. ಗಂಗಾದೇವಿಯೂ ಮತ್ತು ಯಮುನಾದೇವಿಯೂ ಕೂಡ ಅವಳನ್ನು ಪೂಜಿಸಿದರು. ॥ ೪೮ ॥ ಈ ರೀತಿಯಾಗಿ ಎಲ್ಲರೂ ಚೆನ್ನಾಗಿ ಪೂಜಿಸಿ ಸ್ತೋತ್ರ ಮಾಡಿ ಪ್ರಸನ್ನಳೂ, ಸಂತುಷ್ಟಳೂ ಆಗಿದ್ದ ಆ ಸರಸ್ವತಿಯನ್ನು ಕುರಿತು ಎಲ್ಲರಿಗೂ ಉಪಕಾರವಾಗುವ ಮಾತುಗಳಿಂದ ಹೊಗಳಿದರು. ॥ ೪೯ ॥

॥ ತೊಂಬತ್ತಾರನೆಯ ಅಧ್ಯಾಯವು ಸಮಾಪ್ತವಾಯಿತು ॥

## ॥ ಅಥ ಸಪ್ತನವತಿತಮೋಽಧ್ಯಾಯಃ ॥ ೯೭॥

ಶೇಷ ಉವಾಚ—

ಪ್ರಥಮಂ ಮಾಧವೋ ದೇವಸ್ತಾಮುವಾಚ ಪ್ರಹರ್ಷಿತಃ ।
ತಸ್ಯಾ ನಾದೇನ ನಾದಾತ್ಮಾ ಮೋಹಿತಶ್ಚ ಸರಸ್ವತೀಮ್ ॥ ೧ ॥

## ॥ ತೊಂಬತ್ತೇಳನೆಯ ಅಧ್ಯಾಯವು ॥

ಶ್ರೀ ಶೇಷದೇವರು ಹೇಳಿದರು—

ನಾದಾತ್ಮಕರಾದ ಶ್ರೀ ಮಾಧವದೇವರು ಶ್ರೀ ಸರಸ್ವತೀದೇವಿಯ ವೀಣಾವಾದನದಿಂದ ಪ್ರಸನ್ನಗೊಂಡು ಅವಳನ್ನು ಕುರಿತು ಈ ರೀತಿ ಹೇಳಿದರು ॥ ೧ ॥

ಮಾಧವ ಉವಾಚ—

ತ್ವತ್ತೋ ರೂಪಂ ನ ಪಶ್ಯಾಮಿ ತ್ರೈಲೋಕ್ಯೇಽಹಂ ಮನೋರಮಮ್ ।
ತ್ವದ್ರೂಪಗುಣಲಾವಣ್ಯಮೋಹಿತಾಃ ಸಕಲಾಮರಾಃ ॥ ೨ ॥
ಮಯಾಪಿ ಮೋಹಿನೀರೂಪಂ ಯದ್ವೃತ್ತಂ ದೈತ್ಯಮೋಹನಂ ।
ತತೋಽಪ್ಯತೀವಲಾವಣ್ಯಂ ರೂಪೇ ತೇ ದೃಶ್ಯತೇ ಮಯಾ ॥ ೩ ॥
ಅತಸ್ತ್ವಮತ್ರ ಸಂತಿಷ್ಠ ತಿಸೃಣಾಂ ಸಂಗಮೋಽಸ್ತು ವಃ ।
ಇದಂ ಪ್ರಯಾಗಂ ಸತ್ಕ್ಷೇತ್ರಂ ಸರ್ವೇಷಾಂ ಭುಕ್ತಿಮುಕ್ತಿದಂ ॥ ೪ ॥
ಋಷಿಸಿದ್ಧಸುರೈರ್ಜುಷ್ಟಂ ಮಮ ಚಾತೀವ ವಲ್ಲಭಮ್ ।
ಅತ್ರಾಗತಾಸ್ತಿ ಕಾಲಿಂದೀ ಗಂಗಾ ಚಾನಂತಪುಣ್ಯದಾ ॥ ೫ ॥
ಅನಯೋರಂತರೇ ತ್ವಂ ಚ ತಿಷ್ಠ ಸೂಕ್ಷ್ಮಸ್ವರೂಪತಃ ।
ಭವತೀನಾಂ ತಿಸೃಣಾಂ ಯಃ ಸಂಗಮೇ ಮಜ್ಜತೇ ನರಃ ॥ ೬ ॥
ನಾರೀ ವಾ ಪುರುಷೋ ವಾಪಿ ಮುಕ್ತೋ ಭವತಿ ಬಂಧನಾತ್ ।
ವೇಣೀತಿ ತಿಸೃಣಾಂ ಯೋಗಾಲ್ಲೋಕೇ ಖ್ಯಾತಿರ್ಭವಿಷ್ಯತಿ ॥ ೭ ॥
ಅತ್ರ ವೇಣೀಪ್ರದಾನಂ ಚ ಕರಿಷ್ಯಂತಿ ಚ ಯಾಃ ಸ್ತ್ರಿಯಃ ।
ತಾಸಾಂ ಸಂತತಿಸಂಪತ್ತಿಸೌಭಾಗ್ಯಾಯುರ್ವಿವೃದ್ಧಯಃ ॥ ೮ ॥
ಭವಿಷ್ಯಂತಿ ಪ್ರಸಾದಾನ್ಮೇ ಸ್ವರ್ಗಶ್ಚ ಪತಿಭಿಃ ಸಹ ।
ಇತಿ ಶ್ರೀಮಾಧವಂ ವಾಕ್ಯಂ ಶ್ರುತ್ವಾ ಸರ್ವೇಽನುಮೋದಯನ್ ॥ ೯ ॥
ಇದಂ ಪಥ್ಯಮಿದಂ ಸಾಧು ಸರ್ವೇಷಾಂ ಸಮ್ಮತಂ ಪ್ರಿಯಮ್ ।
ಇತಿ ಸರ್ವಮತಂ ಜ್ಞಾತ್ವಾ ಮಾಧವಪ್ರೀತಿಕಾಮಿನೀ ॥ ೧೦ ॥
ಗಂಗಾಯಮುನಯೋಃ ಪ್ರೀತಿಂ ಕ್ಷೇತ್ರಂ ಚಾದ್ಭುತಮಾ ಸ ಸಾ ।
ತಿಸೃಣಾಂ ಸಂಗಮಂ ಶ್ರುತ್ವಾ ಪ್ರಯಾಗೇ ತೀರ್ಥನಾಯಕೇ ॥ ೧೧ ॥

ಲೋಕತ್ರಯಗತಾಃ ಸರ್ವೇ ಸಪತ್ನೀಕಾಃ ಸಮಾಗತಾಃ ।
ಸಮಾಗತ್ಯ ತ್ರಿವೇಣ್ಯಾಂ ತೇ ಸ್ನಾನಂ ಕೃತ್ವಾ ವಿಧಾನತಃ ॥ ೧೨ ॥
ದಾನಾನಿ ಸ್ವಾನುರೂಪಾಣಿ ಬ್ರಾಹ್ಮಣೇಭ್ಯೋ ದದುರ್ಮುದಾ ।
ದೇವಪತ್ನ್ಯೋ ನಾಗಪತ್ನ್ಯ ಋಷಿಪತ್ನ್ಯಸ್ತಥೈವ ಚ ॥ ೧೩ ॥
ವೇಣೀಪ್ರದಾನಮಾಚೇರುಃ ಯಥಾಮಾನಂ ನಿಜೇಚ್ಛಯಾ ।
ಸಾವಿತ್ರೀ ಪ್ರಥಮಂ ಚಕ್ರೇ ವೇಣೀದಾನಂ ಕ್ಷುರೇಣ ತು ॥ ೧೪ ॥
ಧಾತುಸ್ತ್ರ್ಯಂಗುಲಮಾನೇನ ಛಿತ್ವಾ ರತ್ನಸುಗರ್ಭಿತಾಂ ।
ಸೌಭಾಗ್ಯದ್ರವ್ಯಸಂಯುಕ್ತಾಂ ಪುಷ್ಪಮಾಲಾಸುಶೋಭಿತಾಂ ॥ ೧೫ ॥
ಪೂಜಿತಾಂ ಪರಯಾ ಭಕ್ತ್ಯಾ ಷೋಡಶೈರುಪಚಾರಕೈಃ ।
ಗೃಹೀತ್ವಾ ಸ್ವಾಂಜಲೌ ವೇಣೀಂ ಮಂತ್ರೇಣಾನೇನ ಚಾರ್ಚಯೇತ್॥ ೧೬ ॥
ನಮೋ ವೇಣ್ಯೈ ನಮೋ ವೇಣ್ಯೈ ನಮೋ ವೇಣ್ಯೈ ನಮೋ ನಮಃ ।
ಪಾತಿವ್ರತ್ಯಂ ಸದಾ ಮಹ್ಯಂ ದೇಹಿ ತುಭ್ಯಂ ನಮೋ ನಮಃ ॥ ೧೭ ॥
ಮಂತ್ರೇಣಾನೇನ ತಾಂ ಕ್ಷಿಪ್ತ್ವಾ ಭರ್ತುರಾಜ್ಞಾಪುರಸ್ಸರಂ ।
ಸಮೂಲಂ ವಪನಂ ಪಶ್ಚಾಚ್ಚಕ್ರೇ ಭರ್ತುರನುಜ್ಞಯಾ ॥ ೧೮ ॥
ಮುಂಡನಂ ಚೋಪವಾಸಶ್ಚ ಸರ್ವತೀರ್ಥೇಷ್ವಯಂ ವಿಧಿಃ ।
ಇದಮೇವ ವಚೋ ಬ್ರೂತೇ ಸ್ತ್ರೀಪುಂಸೋರ್ವಪನೇ ಸಮೇ ॥ ೧೯ ॥
ಕೇಶಮೂಲಾನ್ ಸಮಾಶ್ರಿತ್ಯ ಸರ್ವಪಾಪಾನಿ ದೇಹಿನಾಂ ।
ತಿಷ್ಠಂತಿ ಗುಪ್ತರೂಪಾಣಿ ತಸ್ಮಾತ್ ತಾನ್ ಪರಿವಾಪಯೇತ್ ॥ ೨೦ ॥
ಸರ್ವಕ್ಷೌರನಿಷೇಧಾ ಯೇ ಪುರಾಣಾಂತರಕೀರ್ತಿತಾಃ ।
ಪ್ರಯಾಗತೀರ್ಥಯಾತ್ರಾಯಾ ಅನ್ಯಸ್ಮಿನ್ವಿಷಯಾಶ್ಚ ತೇ ॥ ೨೧ ॥
ಸಭರ್ತೃಕಾಣಾಂ ನಾರೀಣಾಂ ಸರ್ವಪಾಪಾಪನುತ್ತಯೇ ।
ಪ್ರಯಾಗೇ ಮುಂಡನಂ ಕಾರ್ಯಂ ನಾನ್ಯಕ್ಷೇತ್ರೇ ಕದಾಚನ ॥ ೨೨ ॥
ತಸ್ಮಾದತ್ರ ಚಿರಂಟೀನಾಂ ಸರ್ವಥಾ ಸರ್ವಮುಂಡನಂ ।
ಭರ್ತುಸ್ಸಮಕ್ಷಂ ಕರ್ತವ್ಯಂ ಸರ್ವಕಾಮಾರ್ಥಸಿದ್ಧಯೇ ॥ ೨೩ ॥
ಅಥಾನ್ಯೇಽಪಿ ವಪೇ ಪಕ್ಷಾಃ ಸಂತಿ ತಾನಪ್ಯಹಂ ಬ್ರುವೇ ।
ಆಚಾರಾತ್ವೇಚ್ಛಯಾ ವಾಪಿ ಕಂಚಿತ್ಪಕ್ಷಂ ಸಮಾಶ್ರಯೇತ್ ॥ ೨೪ ॥
ದ್ವ್ಯಂಗುಲಾ ತ್ರ್ಯಂಗುಲಾ ವಾಪಿ ಪ್ರದೇಯಾ ಚತುರಂಗುಲಾ ।
ಷಡಂಗುಲಾ ವಾ ಗುಚ್ಛಾಂತಾ ಮೂಲಾಂತಾ ವೇತಿ ಷಡ್ವಿಧಾಃ ॥ ೨೫ ॥
ಅನೇನವಿಧಿನಾ ಪಶ್ಚಾತ್ ಐಂದ್ರ್ಯಾಪ್ಯಾದ್ಯಾಃ ಸುರಸ್ತ್ರಿಯಃ ।
ರಂಭಾದ್ಯಾಪ್ಸರಸಃ ಸರ್ವಾ ಋಷಿಪತ್ನ್ಯಶ್ಚ ಸುವ್ರತಾಃ ॥ ೨೬ ॥

ಯಥೇಚ್ಛಂ ಪಕ್ಷಮಾಶ್ರಿತ್ಯ ಸ್ವಸ್ವಭರ್ತುರನುಜ್ಞಯಾ ।
ತ್ರಿವೇಣ್ಯಾಂ ವಿಧಿವತ್ ಸ್ನಾತ್ವಾ ವೇಣೀದಾನಾನಿ ಚಕ್ರಿರೇ ॥ ೨೭ ॥
ತದ್ದೃಷ್ಟ್ವಾ ಪರಮಾಶ್ಚರ್ಯಂ ದೇವಾಶ್ಚ ಋಷಯಃ ಸ್ತ್ರಿಯಃ ।
ಅಹೋ ಸಭರ್ತೃನಾರೀಣಾಂ ಮುಂಡನಂ ಯತ್ರ ಮಂಡನಮ್ ॥ ೨೮ ॥
ಇತ್ಯಾದ್ಯೇವಂ ಪ್ರಶಂಸಂತೋ ಗೀತವಾದ್ಯಪುರಸ್ಸರಂ ।
ಮಂಗಲಾಚಾರಭೂಯಿಷ್ಠಂ ಪ್ರಣೇಮುಶ್ಚ ಪ್ರಹರ್ಷಿತಾಃ ॥ ೨೯ ॥

**ಮಾಧವ ದೇವರು ಹೇಳಿದರು-**

''ಹೇ ಸರಸ್ವತಿಯೇ! ನಿನ್ನ ರೂಪಕ್ಕೆ ಸರಿಸಮನಾದ ಮನೋಹರರೂಪವನ್ನು ನಾನು ಮೂರು ಲೋಕಗಳಲ್ಲಿಯೂ ಕಾಣುತ್ತಿಲ್ಲ. ಸಕಲ ದೇವತೆಗಳೂ ನಿನ್ನ ರೂಪ ಗುಣ ಮತ್ತು ಲಾವಣ್ಯ ಇವುಗಳಿಂದ ಮೋಹಿತರಾಗಿದ್ದಾರೆ. ॥ ೨ ॥ ದೈತ್ಯರನ್ನು ಮೋಹಗೊಳಿಸಲು ನಾನು ತಾಳಿದ್ದ ಮೋಹಿನೀ ರೂಪಕ್ಕಿಂತಲೂ ಈ ನಿನ್ನ ರೂಪವು ಹೆಚ್ಚು ಲಾವಣ್ಯಯುತವಾಗಿ ನನಗೆ ಕಾಣುವುದು. (ವಾಸ್ತವವಾಗಿ ಸರಸ್ವತಿಗಿಂತ ಕೋಟಿ ಗುಣದಷ್ಟು ಲಕ್ಷ್ಮೀ ದೇವಿಯ ರೂಪವು ಅತಿಶಯವಾದುದು. ಆ ಲಕ್ಷ್ಮೀ ರೂಪಕ್ಕಿಂತಲೂ ಅನಂತಗುಣ ಅತಿಶಯವಾದದ್ದು ಶ್ರೀ ನಾರಾಯಣನ ಮೋಹಿನೀ ರೂಪವು. ಹೀಗಿರಬೇಕಾಗಿರುವಾಗ ಮೋಹಿನೀ ರೂಪದ ಲಾವಣ್ಯವು ಸರಸ್ವತಿಯ ರೂಪಲಾವಣ್ಯದಷ್ಟು ಉತ್ಕೃಷ್ಟವಾಗಿಲ್ಲವೆಂಬ ಶ್ರೀ ಮಾಧವದೇವರ ಮಾತು ಸರಸ್ವತಿಯ ಬಗ್ಗೆ ಶ್ರೀ ಮಾಧವದೇವರಿಗೆ ಇರುವ ವಾತ್ಸಲ್ಯ ಮತ್ತು ಅಭಿಮಾನವನ್ನು ತೋರಿಸುವುದು.) ॥ ೩ ॥ ಈ ಪ್ರಯಾಗ ಕ್ಷೇತ್ರವು ಗಂಗೆ, ಯಮುನೆ ಮತ್ತು ಸರಸ್ವತಿಯ ಸಂಗಮವುಳ್ಳ ಕ್ಷೇತ್ರವಾಗಬೇಕೆಂದು ನನ್ನ ಅಭಿಪ್ರಾಯ. ಆಗಲೇ ಎಲ್ಲರಿಗೂ ಮುಕ್ತಿಯನ್ನು ಕೊಡತಕ್ಕ ಸತ್ಕ್ಷೇತ್ರವಾಗಿ ಇದು ಪರಿಣಮಿಸುವುದು. ॥ ೪ ॥ ಈ ಕ್ಷೇತ್ರವು ಋಷಿಗಳು, ಸಿದ್ಧರು, ಮತ್ತು ದೇವತೆಗಳಿಂದ ಸೇವಿಸಲ್ಪಟ್ಟಿದೆ. ಆದ್ದರಿಂದಲೇ ಇದು ನನಗೂ ಪ್ರಿಯವಾದುದು. ಅಷ್ಟೇ ಅಲ್ಲದೆ ಇಲ್ಲಿಗೆ ಯಮುನೆಯೂ ಮತ್ತು ಮಿತಿಯಿಲ್ಲದಷ್ಟು ಪುಣ್ಯವನ್ನು ಕರುಣಿಸತಕ್ಕ ಗಂಗೆಯೂ ಬಂದಿದ್ದಾಳೆ. ॥ ೫ ॥ ಈ ಎರಡೂ ನದಿಗಳ ನಡುವೆ ನೀನು ಸೂಕ್ಷ್ಮಸ್ವರೂಪದಿಂದ ಇರು. ನೀವು ಮೂವರೂ ಇರುವ ಈ ಸಂಗಮದಲ್ಲಿ ಯಾರು ಸ್ನಾನ ಮಾಡುತ್ತಾರೋ ಅಂತಹ ಸ್ತ್ರೀಯರಾಗಲೀ, ಪುರುಷರಾಗಲೀ ಸಂಸಾರಬಂಧನದಿಂದ ಬಿಡಲ್ಪಟ್ಟವರಾಗಿ ಮುಕ್ತಿಯನ್ನು ಪಡೆಯುವರು. ಅಲ್ಲದೆ ನಿಮ್ಮಗಳ ಸಂಗಮವು ''ವೇಣೀ'' ಎಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧವಾಗುವುದು. ॥ ೬-೭ ॥. ಇಲ್ಲಿಯಾವ ಸ್ತ್ರೀಯರು ವೇಣಿಯನ್ನು ಪ್ರದಾನ ಮಾಡುವರೋ ಅವರ ಸಂತಾನವು, ಐಶ್ವರ್ಯವು ಮತ್ತು ಸೌಭಾಗ್ಯವು ಅತಿಶಯವಾಗಿ ವೃದ್ಧಿಯಾಗುವುದು ಮತ್ತು ನನ್ನ ಅನುಗ್ರಹದ ದಶೆಯಿಂದ ಅವರು ತಮ್ಮ ತಮ್ಮ ಪತಿಗಳೊಡನೆ ಸ್ವರ್ಗಕ್ಕೂ ಪ್ರಯಾಣ ಮಾಡುವರು. ಈ ರೀತಿಯಾಗಿ ಉಕ್ತವಾದ ಶ್ರೀ ಮಾಧವದೇವರ ವಾಕ್ಯವನ್ನು ಅಲ್ಲಿ ನೆರೆದಿದ್ದ ಸಕಲರೂ ಅನುಮೋದಿಸಿದರು. ॥ ೮-೯ ॥ ''ಇದು ಸರಿಯಾದುದು ಒಳ್ಳೆಯದು ಎಲ್ಲರ ಒಪ್ಪಿಗೆಗೂ ಪಾತ್ರವಾದುದು, ಹೀಗೆಯೇ ಎಲ್ಲರ ಅಭಿಪ್ರಾಯವೂ ಇರುವುದು ಇದೇ ಶ್ರೀ ಮಾಧವನಿಗೆ ಪ್ರೀತಿ ಪಾತ್ರವಾದುದು'' ಎಂದು ಸರಸ್ವತಿಯು ತಿಳಿದಳು. ॥ ೧೦ ॥ ಗಂಗೆ ಯಮುನೆಯರ ವಿಶ್ವಾಸವನ್ನು ಮತ್ತು ಈ ಕ್ಷೇತ್ರದ ವಿಶೇಷವನ್ನು ಗಮನಿಸಿದ ಆ ಸರಸ್ವತಿಯು ಅಲ್ಲಿ ನೆಲಸತೊಡಗಿದಳು. ॥ ೧೧ ॥ ತೀರ್ಥರಾಜನಾದ ಪ್ರಯಾಗದಲ್ಲಿ ಮೂರು

ನದಿಗಳ ಸಂಗಮವನ್ನು ಕೇಳಿ ಮೂರು ಲೋಕದ ಎಲ್ಲರೂ ತಮ್ಮ ತಮ್ಮ ಪತ್ನಿಯರೊಡಗೂಡಿ ಈ ಸಂಗಮಕ್ಕೆ ಬಂದು ತ್ರಿವೇಣಿಯಲ್ಲಿ ವಿಧಿವತ್ತಾಗಿ ಸ್ನಾನಮಾಡಿ ತಮಗೆ ಅನುರೂಪವಾದ ದಾನಗಳನ್ನು ಬ್ರಾಹ್ಮಣರುಗಳಿಗೆ ಕೊಟ್ಟರು. ಇವರುಗಳಲ್ಲಿ ದೇವತೆಗಳ ಪತ್ನಿಯರೂ, ಋಷಿ ಪತ್ನಿಯರೂ ಮತ್ತು ನಾಗ ಪತ್ನಿಯರೂ ಇದ್ದರು. ।। ೧೨-೧೩ ।। ಇವರೆಲ್ಲರೂ ತಮ್ಮ ಇಚ್ಛೆಯಿಂದಲೇ ವಿಧಿಪೂರ್ವಕವಾಗಿ ವೇಣೀದಾನವನ್ನು ಮಾಡಿದರು. ಈ ರೀತಿ ದಾನ ಕೊಟ್ಟವರಲ್ಲಿ ಬ್ರಹ್ಮದೇವರ ಪತ್ನಿಯಾದ ಶ್ರೀ ಸಾವಿತ್ರೀ ದೇವಿಯು ಮೊದಲನೆಯವಳಾಗಿದ್ದಳು. ।। ೧೪ ।। ಸಾವಿತ್ರೀ ದೇವಿಯು ಬ್ರಹ್ಮದೇವರ ಮೂರು ಬೆರಳುಗಳಷ್ಟು ಉದ್ದದಷ್ಟು ತನ್ನ ಹೆರಳನ್ನು ತನ್ನ ಕೈಯಿಂದ ಹಿಡಿದುಕೊಂಡು ಕತ್ತರಿಸಿ ರತ್ನಾದಿಗಳಿಂದಲೂ, ಸೌಭಾಗ್ಯದ್ರವ್ಯಗಳಿಂದಲೂ, ಹೂವುಗಳಿಂದಲೂ ಮತ್ತು ಪರಮ ಭಕ್ತಿಯಿಂದಲೂ' ಷೋಡಶೋಪಚಾರಗಳಿಂದ ಪೂಜಿಸಿ ಅದನ್ನು ತನ್ನ ಬೊಗಸೆಯಲ್ಲಿಟ್ಟುಕೊಂಡು ಮಂತ್ರಪೂರ್ವಕವಾಗಿ ತನ್ನ ಗಂಡನ ಅನುಜ್ಞೆಯಿಂದ ಪ್ರವಾಹದಲ್ಲಿ ಬಿಟ್ಟಳು. ।। ೧೫-೧೬ ।। ವೇಣೀ ದೇವಿಗೆ ನಮಸ್ಕಾರಗಳು, ವೇಣೀ ದೇವಿಗೆ ನಮಸ್ಕಾರಗಳು, ವೇಣಿಗೆ ದೇವಿಗೆ ನಮಸ್ಕಾರಗಳು, ನಮಸ್ಕಾರಗಳು, ನಮಸ್ಕಾರಗಳು. ನನಗೆ ನಿರಂತರವಾದ ಪಾತಿವ್ರತ್ಯವನ್ನು ಕೊಡು. ನಿನಗೆ ನಮಸ್ಕಾರಗಳು, ನಮಸ್ಕಾರಗಳು. ।। ೧೭ ।। ಪತಿಯ ಅಪ್ಪಣೆಯನ್ನು ಪಡೆದು ಆ ವೇಣಿಯನ್ನು ಮಂತ್ರಪುರಸ್ಸರವಾಗಿ ನೀರಿನಲ್ಲಿ ಹಾಕಿ ಪತಿಯ ಅಪ್ಪಣೆಯಿದ್ದಲ್ಲಿ ಪೂರ ಮುಂಡನವನ್ನು ಸಹ ಮಾಡಿಸಿಕೊಂಡಳು. ।। ೧೮ ।। ಮುಂಡನವನ್ನು ಮಾಡಿಸಿಕೊಳ್ಳುವದು ಮತ್ತು ಉಪವಾಸವು ಎಲ್ಲಾ ಕ್ಷೇತ್ರಗಳಲ್ಲಿಯೂ ಸಾಮಾನ್ಯವಾಗಿ ಮಾಡಬೇಕಾದ ಧರ್ಮವಾಗಿದ್ದು ಇದರ ಬಗ್ಗೆ ಹೇಳಿರುವ ಮಾತುಗಳು ಗಂಡಸರಿಗೂ ಮತ್ತು ಹೆಂಗಸರಿಗೂ ಒಂದೇ ಸಮನಾಗಿವೆ. ।। ೧೯ ।। ಮನುಷ್ಯರ ಎಲ್ಲ ಪಾಪಗಳೂ ಕೂದಲಿನ ಬುಡದಲ್ಲಿರುವ ಕುಳಿಯಲ್ಲಿ ಗುಪ್ತವಾಗಿ ಅಡಗಿಕೊಂಡಿರುತ್ತವೆ. ಆದ್ದರಿಂದ ಅದನ್ನು ಮುಂಡನಮಾಡಿಸಿಕೊಂಡು ತ್ಯಜಿಸಬೇಕು. ।। ೨೦ ।। ಬೇರೆ ಬೇರೆ ಪುರಾಣಗಳಲ್ಲಿ ಕ್ಷೌರದ ಬಗ್ಗೆ ಹೇಳಿರುವ ವಿಧಿನಿಷೇಧಗಳೆಲ್ಲವೂ ಪ್ರಯಾಗವನ್ನು ಬಿಟ್ಟು ಬೇರೆ ಕ್ಷೇತ್ರಗಳಿಗೆ ಅನ್ವಯಿಸಿ ಹೇಳಿದ್ದುವುಗಳೇ ಸರಿ. ।। ೨೧ ।। ಪತಿಯಿರುವ ಸುಮಂಗಲ ಸ್ತ್ರೀಯರಿಗೆ ಹೇಳಿರುವ ಸರ್ವಪಾಪ ಪರಿಹಾರಕ ಮುಂಡನ ಕಾರ್ಯವು ಪ್ರಯಾಗಕ್ಷೇತ್ರಕ್ಕೆ ಮಾತ್ರ ಅನ್ವಯಿಸುವಂತಹುದು. ಬೇರೆ ಕ್ಷೇತ್ರಗಳಿಗೆ ಇದು ಎಂದೂ ಅನ್ವಯಿಸುವುದಿಲ್ಲ. ।। ೨೨ ।। ಆದ್ದರಿಂದ ಇಲ್ಲಿ ಮುತ್ತೈದೆಯರು ಪೂರಾ ತಲೆ ಬೋಳಿಸಿಕೊಳ್ಳುವ ಕಾರ್ಯವನ್ನು ತನ್ನ ಗಂಡನ ಎದುರಿಗೆ ತನ್ನೆಲ್ಲಾ ಅಭೀಷ್ಟಸಿದ್ಧಿಗಾಗಿ ಮಾಡತಕ್ಕದ್ದು. ।। ೨೩ ।। ಈ ಮುಂಡನದ ಬಗ್ಗೆ ಬೇರೆ ಬೇರೆ ಮಾತುಗಳೂ ಇವೆ. ಅವುಗಳನ್ನೂ ನಾನು ಹೇಳುವೆನು ಇವುಗಳಲ್ಲಿ ಯಾವುದಾದರೂ ಒಂದು ಪಕ್ಷದಂತೆ ತನ್ನ ಇಚ್ಛೆಯಿಂದ ಆಚರಿಸಬಹುದು. ।। ೨೪ ।। ಈ ವೇಣೀದಾನಕ್ಕಾಗಿ ಕೊಡುವ ಜಡೆಯ ಉದ್ದವು ಎರಡು, ಮೂರು, ನಾಲ್ಕು ಮತ್ತು ಆರು ಅಂಗುಲ ಅಥವಾ ಜಡೆಯು ಪ್ರಾರಂಭವಾಗುವವರೆಗೆ ಅಥವಾ ಕೂದಲಿನ ಬುಡದವರೆಗೆ ಎಂದು ಆರು ವಿಧಗಳಿವೆ. ।। ೨೫ ।। ಈ ವಿಧಿಯ ಪ್ರಕಾರ ಇಂದ್ರನ ಪತ್ನಿಯರು, ದೇವತಾ ಸ್ತ್ರೀಯರು, ರಂಭೆಯೇ ಮೊದಲಾದ ಅಪ್ಸರ ಸ್ತ್ರೀಯರು ಮತ್ತು ಒಳ್ಳೆಯ ವ್ರತದಲ್ಲಿರುವ ಋಷಿಪತ್ನಿಯರು ಮೊದಲಾದವರು ಇವುಗಳಲ್ಲಿನ ಯಾವುದಾದರೊಂದು ಪಕ್ಷವನ್ನು ಅವಲಂಬಿಸಿ ತಮ್ಮ ತಮ್ಮ ಪತಿಯ ಆಜ್ಞೆಯನ್ನು ಪಡೆದು ತ್ರಿವೇಣಿಯಲ್ಲಿ ವಿಧಿವತ್ತಾಗಿ ಸ್ನಾನಮಾಡಿ ವೇಣೀದಾನಗಳನ್ನು ಮಾಡಿದ್ದಾರೆ. ।। ೨೬-೨೭ ।।

ಇದನ್ನು ನೋಡಿದ ದೇವತೆಗಳು, ಋಷಿಪತ್ನಿಯರು "ಗಂಡನಿರುವ ಸ್ತ್ರೀಯರು ಎಲ್ಲಿ ಮುಂಡನವನ್ನು ಮಾಡಿಸಿಕೊಳ್ಳುವುದೇ ಅಲಂಕಾರವೋ ಅಂತಹ ಪ್ರಯಾಗವು ಎಷ್ಟು ಮಹಿಮೋಪೇತವಾದದ್ದು" ಎಂದು ಗೀತವಾದ್ಯಾದಿಗಳಿಂದಲೂ ಮಂಗಳಾಚಾರಣೆಗಳಿಂದಲೂ ಪ್ರಯಾಗವನ್ನು ನಮಸ್ಕರಿಸಿ ಸಂತುಷ್ಟರಾದರು. ॥ ೨೮ - ೨೯ ॥

ಋಷಯ ಊಚುಃ—

ಶೇಷರಾಜ ಭವತ್ಪ್ರೋಕ್ತಂ ವೇಣೀದಾನಂ ಶ್ರುತಂ ಪರಂ ।
ಇದಾನೀಂ ತದ್ವಿಧಿಂ ಬ್ರೂಹಿ ಕರ್ತುರ್ಯೇನ ಸುಖಂ ಭವೇತ್ ॥ ೩೦ ॥

ಋಷಿಗಳು ಹೇಳಿದರು—

"ತಮ್ಮಿಂದ ಹೇಳಲ್ಪಟ್ಟಿರುವ ಉತ್ತಮವಾದ ವೇಣೀದಾನವನ್ನು ಕೇಳಿದೆವು. ಈಗ ಆ ವೇಣೀದಾನದ ವಿಧಿಯನ್ನು ದಯಮಾಡಿ ಹೇಳಿ. ಯಾವುದನ್ನು ತಿಳಿದು ಅದರಂತೆ ವೇಣೀ ದಾನವನ್ನು ಮಾಡಿದ ಕರ್ತೃವು ಸುಖಿಯಾಗುತ್ತಾನೋ" ಎಂದರು. ॥ ೩೦ ॥

ಶೇಷ ಉವಾಚ—

ಸಭರ್ತೃಕಾನಾಂ ನಾರೀಣಾಂ ವೇಣೀದಾನವಿಧಿಂ ಶುಭೇ ।
ಪ್ರಯಾಗೇ ವೇಣಿಕಾತೀರೇ ಪ್ರವಕ್ಷ್ಯಾಮಿ ನಿಬೋಧತ ॥ ೩೧ ॥
ಪ್ರಥಮೇಹ್ನಿ ಪ್ರಕರ್ತವ್ಯಂ ಅಥವಾ ತದ್ದಿನಾಂತರೇ ।
ತದಾ ತು ನಿರ್ಮಲೇ ಪಕ್ಷೇ ಸುತಿಥೌ ಶುಭವಾಸರೇ ॥ ೩೨ ॥
ಸುನಕ್ಷತ್ರೇ ಸುಯೋಗೇ ಚ ಶೋಭನೇ ಕರಣೇ ತಥಾ ।
ಪತ್ಯುಃ ಚಂದ್ರಸ್ಯ ತಾರಾಣಾಮಾನುಕೂಲ್ಯೇ ಸುಲಗ್ನಕೇ ॥ ೩೩ ॥
ಪೂರ್ವಾಹ್ಣೇ ನಿತ್ಯಕೃತ್ಯಾಂತೇ ಸರ್ವಸಾಧನಸಂಯುತಾ ।
ಪತ್ಯಾ ಸುವಾಸಿನೀಭಿಶ್ಚ ಸಹಿತಾ ವಾದ್ಯಘೋಷಿತಾ ॥ ೩೪ ॥
ಗತ್ವಾ ತ್ರಿವೇಣಿಕಾತೀರೇ ಸಮಾಚಮ್ಯ ಪ್ರಣಮ್ಯ ಚ ।
ತ್ರಿವೇಣೀಂ ಚೈವ ಭರ್ತಾರಂ ಬ್ರಾಹ್ಮಣಾಂಶ್ಚ ಸುವಾಸಿನೀಃ ॥ ೩೫ ॥
ಸಂಕಲ್ಪಂ ತು ತತಃ ಕುರ್ಯಾತ್ ಬ್ರಾಹ್ಮಣೋಕ್ತವಿಧಾನತಃ ।
ನೂತ್ನವಾಸಃ ಪರೀಧಾಯ ಪ್ರಯತಾ ಪ್ರಾಗುದಙ್ಮುಖೀ ॥ ೩೬ ॥
ವಿದ್ಯಮಾನೇಽದ್ಯದಿವಸೇ ತಿಥಿವಾರರ್ಕ್ಷಸಂಯುತೇ ।
ಸುಯೋಗಲಗ್ನಕರಣೇ ಚಂದ್ರತಾರಾಬಲಾನ್ವಿತೇ ॥ ೩೭ ॥
ಜನ್ಮಪ್ರಭೃತಿ ಯತ್ಪಾಪಂ ಕಾಯಿಕಂ ವಾಚಿಕಂ ತಥಾ ।
ಮಾನಸಂ ಚಾಪಿ ಸಂಸರ್ಗಾಜ್ಜಾತಂ ಸ್ಥೂಲಂ ತಥಾ ಲಘು ॥ ೩೮ ॥
ಪಾಣಿಗ್ರಹಣಮಾರಭ್ಯ ಅದ್ಯ ಯಾವತ್ಕೃತಂ ಚ ಯತ್ ।
ಭರ್ತ್ರಾದೀನಾಮಶುಶ್ರೂಷಾ ತದಾಜ್ಞಾಽಪರಿಪಾಲನಮ್ ॥ ೩೯ ॥

ಅನ್ಯಸ್ಮಿನ್ ಪುರುಷೇ ಕಾಮಾತ್ ಸ್ಮರಣಾದ್ಯಷ್ಟಮೈಥುನಂ ।
ಕಾಮಾಂಧ್ಯಾತ್ಕಾಮತೋ ವಾಪಿ ತಥಾ ಪ್ರತ್ಯಕ್ಷಮೈಥುನಂ ॥ ೪೦ ॥
ತಥೋದಕ್ಯಾದ್ಯವಸ್ಥಾಯಾಂ ಭಾಂಡಸ್ಪರ್ಶಾದಿಕಂ ಚ ಯತ್ ।
ಜ್ಞಾನತೋಽಜ್ಞಾನತೋ ವಾಪಿ ಪಾಪಾನ್ಯನ್ಯಾನಿ ಯಾನಿ ಚ ॥ ೪೧ ॥
ಇತ್ಯಾದಿ ಸರ್ವಪಾಪಾನಾಂ ಸಮೂಲಚ್ಛೇದಪೂರ್ವಕಂ ।
ಜನ್ಮಜನ್ಮನಿ ಚಾಖಂಡಸೌಭಾಗ್ಯಪ್ರಾಪ್ತಯೇ ತಥಾ ॥ ೪೨ ॥
ಕಾಂತಸ್ಯ ಚಾಯುರಾರೋಗ್ಯಪ್ರಾಪ್ತ್ಯರ್ಥಂ ಸುಖಹೇತವೇ ।
ಆಯುಷ್ಮತ್‌ಪುತ್ರಪೌತ್ರಶ್ರೀವೃದ್ಧಿಪ್ರಾಪ್ತ್ಯರ್ಥಮೇವ ಚ ॥ ೪೩ ॥
ವೇಣೀಮಾಧವಯೋಃ ಪ್ರೀತ್ಯೈ ಪತಿವಿಪ್ರಾದ್ಯನುಜ್ಞಯಾ ।
ಸ್ನಾನಂ ವೇಣೀಪ್ರದಾನಂ ಚ ಕರಿಷ್ಯೇ ವೇಣಿಕಾತಟೇ ॥ ೪೪ ॥
ಇತಿ ಸಂಕಲ್ಪ್ಯ ಚೋದ್ವರ್ತ್ಯ ಸ್ವಶರೀರಂ ಹರಿದ್ರಯಾ ।
ಪತ್ಯಾ ಸಹ ತತಃ ಸ್ನಾಯಾದ್ವೇಣ್ಯಾಂ ಗ್ರಥಿತವೇಣಿಕಾ ॥ ೪೫ ॥
ಸಮಾಚಮ್ಯ ಸಮಾಗತ್ಯ ತೀರಃ ಸ್ಥಿತ್ವಾ ಸುಖಾಸನೇ ।
ಭರ್ತಾರಂ ಪ್ರಾರ್ಥಯೇದ್ಭಕ್ತ್ಯಾ ಪ್ರಾಙ್ಮುಖೀ ವಾಪ್ಯುದಙ್ಮುಖೀ ॥ ೪೬ ॥
ಅಪರಾಧ ಸಹಸ್ರಾಣಿ ಜಾತಾನಿ ಮಮ ಮೋಹತಃ ।
ತತ್ಸರ್ವಂ ತ್ವಂ ಪ್ರಸನ್ನೇನ ಮನಸಾ ಕ್ಷಂತುಮರ್ಹಸಿ ॥ ೪೭ ॥
ತ್ವತ್‌ಪ್ರಸಾದಾನ್ಮಯಾ ಭೋಗಃ ಸ್ವಾಮಿನ್ ಭುಕ್ತಃ ಸಹಸ್ರಶಃ ।
ಆನೀತಾಸ್ಮಿನ್ ಪ್ರಯಾಗಾಖ್ಯೇ ಕ್ಷೇತ್ರೇ ಕಾಮಫಲಪ್ರದೇ ॥ ೪೮ ॥
ಗಂಗಾಯಮುನಯೋರ್ಯತ್ರ ಸರಸ್ವತ್ಯಾಶ್ಚ ಸಂಗಮಃ ।
ವೇಣೀತಿ ಪ್ರಥಿತಾ ಲೋಕೇ ಭಾಗ್ಯಸೌಭಾಗ್ಯವರ್ಧಿನೀ ॥ ೪೯ ॥
ತತ್ರ ವೇಣೀಂ ಪ್ರದಾಸ್ಯಾಮಿ ಯದ್ಯಾಜ್ಞಾ ಸ್ವಾಮಿನೋ ಭವೇತ್ ।
ಏವಂ ಸಂಪ್ರಾರ್ಥ್ಯ ತಂ ನತ್ವಾ ತದ್ಧಸ್ತೇವೋಪವಿಶೇತ್ಸ್ತ್ರಿಯಮ್ ॥ ೫೦ ॥
ಅಥ ತದ್ವೇಣಿಕಾಂ ಭರ್ತಾ ಪ್ರಾಂತೇ ಧೃತ್ವಾ ಯಥಾಂಗುಲಂ ।
ಸೌಭಾಗ್ಯದ್ರವ್ಯಸಂಯುಕ್ತಾ ಸತ್ಸುಮಂಗಲಮಂತ್ರತಃ ॥ ೫೧ ॥
ಪ್ರಾಗುಕ್ತಾಂಗುಲಿಮಾನೇನ ಕರ್ತರ್ಯಾ ವಾ ಕ್ಷುರೇಣ ವಾ ।
ಛಿತ್ವಾ ಪತ್ನ್ಯಂಜಲೌ ಸ್ಥಾಪ್ಯ ಸೋಪಸ್ಕಾರಾಂ ಪ್ರವಾಹಯೇತ್ ॥ ೫೨ ॥
ವೇಣ್ಯಾಂ ವೇಣೀಪ್ರದಾನೇನ ಮಮ ಪಾಪಂ ವ್ಯಪೋಹತು ।
ಜನ್ಮಾಂತರೇಷ್ವಪಿ ಸದಾ ಸೌಭಾಗ್ಯಂ ಮಮ ವರ್ಧತಾಮ್ ॥ ೫೩ ॥
ವಾಚಯಿತ್ವಾಥ ತಂ ಮಂತ್ರಂ ಪುಷ್ಪಾದಿಭಿರಲಂಕೃತಾಮ್।
ಸುವರ್ಣವೇಣಿಕಾಂ ರತ್ನೈರ್ಯುಕ್ತಾಂ ಪತ್ನ್ಯಾ ಪ್ರವಾಹಯೇತ್ ॥ ೫೪ ॥

ಸುಮಂಗಲಂ ಪುನಃ ಸ್ನಾತ್ವಾ ಕೃತ್ವಾ ವಸ್ತ್ರಾದಿಧಾರಣಂ ।
ಉಭಾವಪ್ಯಾಸನೇ ಸ್ಥಿತ್ವಾ ಕುರ್ಯಾತಾಂ ವೇಣೀಪೂಜನಮ್ ॥ ೫೫ ॥
ಪ್ರಾಗುಕ್ತವರ್ತ್ಮನಾ ಸಮ್ಯಕ್ ತ್ರಿವೇಣೀಂ ಪೂಜ್ಯ ಭಕ್ತಿತಃ ।
ವಸ್ತ್ರಾಲಂಕಾರಸೌಭಾಗ್ಯದ್ರವ್ಯಯುಕ್ತಾನಿ ಮಂತ್ರತಃ ॥ ೫೬ ॥
ದ್ವಿಜೇಭ್ಯೋ ದ್ವಿಜಪತ್ನೀಭ್ಯೋ ವಂಶಪಾತ್ರಾಣಿ ಭಕ್ತಿತಃ ।
ವಾಯನಾರ್ಥೇ ಪ್ರದೇಯಾನಿ ದ್ವಿಜೇಭ್ಯೋ ಭೂಯಸೀಂ ತಥಾ ॥ ೫೭ ॥
ಪುನರ್ವೇಣೀಂ ನಮಸ್ಕೃತ್ಯ ಭರ್ತ್ರಾ ಸಹ ಗೃಹಂ ವ್ರಜೇತ್ ।
ದಂಪತೀಭೋಜನಂ ಕಾರ್ಯಂ ಭೋಕ್ತವ್ಯಂ ಚ ತತಃ ಪರಮ್ ॥ ೫೮ ॥
ವೇಣೀದಾನವಿಧಿಶ್ಚಾಯಂ ಭವದ್ಭ್ಯಃ ಕಥಿತೋ ಮಯಾ ।
ಮಹಾಸೌಭಾಗ್ಯದಃ ಸ್ತ್ರೀಣಾಂ ಪ್ರಯಾಗೇ ತೀರ್ಥನಾಯಕೇ ॥ ೫೯ ॥
ಅತೋಽತ್ರ ಯಾಃ ಸಮಾಗತ್ಯ ಸರ್ವಾ ನಾರ್ಯಶ್ಚಿರಂಟಿಕಾಃ ।
ಏವಂ ವೇಣೀಪ್ರದಾನಂ ಚ ಕರಿಷ್ಯಂತಿ ಪತಿವ್ರತಾಃ ॥ ೬೦ ॥
ಜನ್ಮಜನ್ಮನಿ ಸೌಭಾಗ್ಯಂ ಪಾತಿವ್ರತ್ಯಂ ಸಭಾಗ್ಯತಾಂ ।
ಭರ್ತ್ರಾ ಚ ಸಹ ಸಂಯೋಗಂ ಪುತ್ರಪೌತ್ರಾದಿಸಂತತಿಃ ॥ ೬೧ ॥
ಏವಂ ನಾನಾವಿಧಂ ಸೌಖ್ಯಂ ಭುಂಕ್ತೇ ಹ ಪತಿಭಿಃ ಸಹ ।
ಸ್ವರ್ಗೇಽಪಿ ಪತಿಭಿಃ ಸಾಕಂ ವಾಸಯಂತಿ ಚಿರಂ ಸುಖಮ್ ॥ ೬೨ ॥
ನ ಪುಂವತ್ ಪ್ರತಿಯಾತ್ರಂ ಸ್ಯಾದ್ವೇಣೀದಾನಂ ಚ ಯೋಷಿತಾಂ ।
ವಿನಾ ಭರ್ತ್ರಾಪಿ ತನ್ನ ಸ್ಯಾತ್ ಸ್ನಾನದಾನಾದಿಕಂ ಭವೇತ್ ॥ ೬೩ ॥

॥ ಇತಿ ಸಪ್ತನವತಿತಮೋಽಧ್ಯಾಯಃ ॥

ಶ್ರೀ ಶೇಷದೇವರು ಹೇಳಿದರು—

"ಗಂಡನಿರುವ ಮುತ್ತೈದೆಯರು ಪ್ರಯಾಗದ ವೇಣೀ ತೀರದಲ್ಲಿ ಮಾಡತಕ್ಕ ವೇಣೀದಾನವನ್ನು ಕುರಿತು ಹೇಳುತ್ತೇನೆ, ತಿಳಿದುಕೊಳ್ಳಿ. ॥ ೩೧ ॥ ಪ್ರಯಾಗಕ್ಷೇತ್ರವನ್ನು ತಲುಪಿದ ದಿವಸವೇ ಅಥವಾ ಅದರ ಮಾರನೆಯ ದಿವಸವಾದರೂ ವೇಣಿಯನ್ನು ದಾನ ಮಾಡಬಹುದು. ದಾನಮಾಡುವ ದಿವಸವು ಶುಕ್ಲಪಕ್ಷದ್ದಾಗಿದ್ದು ಒಳ್ಳೆಯ ತಿಥಿ ಮತ್ತು ವಾರದಿಂದ ಕೂಡಿದ್ದಾಗಿರಬೇಕು.॥ ೩೨ ॥ ಒಳ್ಳೆಯ ನಕ್ಷತ್ರ, ಯೋಗಕರಣಗಳಿಂದ ಕೂಡಿದ್ದು ಉತ್ತಮ ಲಗ್ನ ಉಳ್ಳದ್ದಾಗಿ, ಗಂಡನಿಗೆ ಚಂದ್ರಬಲ ಮತ್ತು ತಾರಾಬಲವು ಇರವುದಾಗಿರಬೇಕು. ॥ ೩೩ ॥ ಹೀಗಿರುವ ಶುಭದಿನದಂದು ಪೂರ್ವಾಹ್ಣದಲ್ಲಿ ಆ ದಿನದ ನಿತ್ಯಕರ್ಮದ ನಂತರ ಎಲ್ಲಾ ಪೂಜಾಸಾಮಗ್ರಿಗಳೊಡನೆ, ವಾದ್ಯಘೋಷಗಳೊಡನೆ, ಗಂಡನಿಂದಲೂ ಮತ್ತು ಸುವಾಸಿನಿಯರಿಂದಲೂ ಕೂಡಿ, ತ್ರಿವೇಣಿಯ ತೀರವನ್ನು ತಲುಪಿ ಅದಕ್ಕೆ ನಮಸ್ಕರಿಸಿ, ಗಂಡನನ್ನೂ, ಬ್ರಾಹ್ಮಣರನ್ನೂ ಮತ್ತು ಮುತ್ತೈದೆಯರನ್ನೂ ನಮಸ್ಕರಿಸಿ ಆಚಮನಾದಿಗಳನ್ನು ಮಾಡಿ, ನಂತರ ಸಂಕಲ್ಪವನ್ನು ಪುರೋಹಿತರು ಹೇಳುವ ರೀತಿಯಲ್ಲಿ ಮಾಡಬೇಕು. ಈ ಕಾರ್ಯ ಮಾಡುವಾಗ ಹೊಸ ಸೀರೆಯನ್ನು ಉಡಬೇಕು ಮತ್ತು ಮನಸ್ಸನ್ನು ತ್ರಿವೇಣಿಯಲ್ಲಿ ಕೇಂದ್ರೀಕರಿಸಿ ಪೂರ್ವ ಅಥವಾ

ಉತ್ತರಾಭಿಮುಖವಾಗಿ ಕುಳಿತುಕೊಳ್ಳಬೇಕು. ॥ ೩೪-೩೬ ॥ ಇರುವ ತಿಥಿ, ವಾರ ಮತ್ತು ನಕ್ಷತ್ರಗಳಿಂದ ಕೂಡಿದ, ಉತ್ತಮ ಯೋಗ, ಲಗ್ನ, ಕರಣ ಮತ್ತು ಶುಭ ಚಂದ್ರ ಹಾಗೂ ತಾರಾಬಲದಿಂದ ಕೂಡಿರತಕ್ಕ ಆ ದಿವಸದವರೆಗೆ, ಹುಟ್ಟಿದಾಗಿನಿಂದ ದೈಹಿಕವಾದ, ವಾಚನಿಕವಾದ ಮತ್ತು ಮಾನಸಿಕವಾಗಿ ಸಂಸರ್ಗದ ದಶೆಯಿಂದ ಉಂಟಾದ ಸಣ್ಣ ಸಣ್ಣ ಮತ್ತು ದೊಡ್ಡ ದೊಡ್ಡದಾದ, ಗಂಡನ ಕೈ ಹಿಡಿದಾಗಿನಿಂದ ಹಿಡಿದು ಇಂದಿನವರೆಗೂ ಮಾಡಿರುವ, ಗಂಡ, ಅತ್ತೆ ಮಾವಂದಿರ ಸೇವಾಮಾಡದಿರುವದು ಅವರ ಮಾತುಗಳನ್ನು ಪರಿಪಾಲಿಸದಿರುವುದು, ಪರಪುರುಷನ ಇಚ್ಛೆಯಿಂದ ಸ್ಮರಣೆ ಮೊದಲಾದ ಎಂಟು ವಿಧ ಮೈಥುನ ಕಾಮಾಂಧಳಾಗಿ ಅಥವಾ ಇಚ್ಛಾಪೂರ್ವಕವಾಗಿಯೇ ಮತ್ತು ಪ್ರತ್ಯಕ್ಷವಾಗಿಯೇ ಸಂಭೋಗ ಮಾಡಿದ, ರಜಸ್ವಲೆಯಾಗಿದ್ದಾಗ ಮನೆಯ ಪಾತ್ರೆಗಳನ್ನು ಮುಟ್ಟಿದ ಮತ್ತು ತಿಳಿದೋ ತಿಳಿಯದೆಯೋ ಬೇರೆ ಬೇರೆ ಮಾಡಿರುವ ಪಾಪಗಳೆಲ್ಲವೂ ಮೂಲದಿಂದ ನಾಶವಾಗುವುದಕ್ಕೋಸ್ಕರ, ಜನ್ಮ ಜನ್ಮಾಂತರಗಳಲ್ಲಿಯೂ ಒಂದೇ ಸಮವಾದ ಮುತ್ತೈದೆತನವು ಪ್ರಾಪ್ತವಾಗುವುದಕ್ಕಾಗಿ, ಪತಿಗೆ ಆಯುಸ್ಸು, ಆರೋಗ್ಯವು ಪ್ರಾಪ್ತವಾಗುವುದಕ್ಕಾಗಿ, ತನಗೆ ದೀರ್ಘವಾದ ಆಯುಸ್ಸು ಇರುವುದಕ್ಕಾಗಿಯೂ, ಮಕ್ಕಳು, ಮೊಮ್ಮಕ್ಕಳು ಮತ್ತು ಐಶ್ವರ್ಯದ ವೃದ್ಧಿಯು ಲಭ್ಯವಾಗುವುದಕ್ಕೂ ಮತ್ತು ಶ್ರೀ ವೇಣೀಮಾಧವದೇವರ ಪ್ರೀತ್ಯರ್ಥವಾಗಿಯೂ ತನ್ನ ಪತಿಯ ಆಜ್ಞೆಯಿಂದ ವೇಣೀ ಸ್ನಾನವನ್ನೂ ಮತ್ತು ದಾನವನ್ನೂ ವೇಣೀ ದಡದಲ್ಲಿ ಮಾಡುವೆನು'' ಎಂದು ಸಂಕಲ್ಪವನ್ನು ಮಾಡಿ ಮಂತ್ರಾಕ್ಷತೆ, ನೀರನ್ನು ಬಿಡುವುದು. ॥ ೩೭-೪೪ ॥ ಈ ರೀತಿಯಾಗಿ ಸಂಕಲ್ಪ ಮಾಡಿ ಅರಿಸಿನ ಪುಡಿಯಿಂದ ದೇಹವನ್ನು ತಿಕ್ಕಿ ಸುವಾಸನೆಯುಕ್ತವಾದದ್ದನ್ನಾಗಿ ಮಾಡಿ. ಅಂತರ ಗಂಡನೊಡನೆ ಕೂಡಿಕೊಂಡು ಕೂದಲನ್ನು ಕಟ್ಟಿಕೊಂಡ ಮೇಲೆ ವೇಣಿಯಲ್ಲಿ ಪ್ರವಾಹದ ಎದುರಾಗಿ ಸ್ನಾನ ಮಾಡಬೇಕು. ॥ ೪೫ ॥ ಆಮೇಲೆ, ಆಚಮನ ಮಾಡಿ, ತೀರಕ್ಕೆ ಬಂದು ಸುಖವಾಗಿ ಆಸನದಲ್ಲಿ ಉತ್ತರ ಅಥವಾ ಪೂರ್ವಾಭಿಮುಖವಾಗಿ ಕುಳಿತು ಪತಿಯನ್ನು ಪ್ರಾರ್ಥಿಸಬೇಕು. ॥ ೪೬ ॥ ''ನನ್ನಿಂದ ಮೋಹದಿಂದ ಸಹಸ್ರಾರು ಅಪರಾಧಗಳು ಮಾಡಲ್ಪಟ್ಟಿವೆ. ತಾವು ಪ್ರಸನ್ನಚಿತ್ತರಾಗಿ ಅವುಗಳನ್ನು ಕ್ಷಮಿಸಬೇಕು. ನಿಮ್ಮ ಅನುಗ್ರಹದಿಂದ ನನ್ನಿಂದ ಸಹಸ್ರಾರು ಭೋಗಗಳು ಅನುಭವಿಸಲ್ಪಟ್ಟಿದೆ. ಬಯಸಿದ ಆಸೆಗಳೆಲ್ಲವೂ ಪೂರೈಸಲ್ಪಡುವ ಈ ಪ್ರಯಾಗವೆಂಬ ಕ್ಷೇತ್ರಕ್ಕೆ ಕರೆತರಲ್ಪಟ್ಟಿದ್ದೇನೆ. ಇಲ್ಲಿ ಗಂಗೆ, ಯಮುನೆ ಮತ್ತು ಸರಸ್ವತಿಯ ಸಂಗಮವಾಗಿ ಇದು ತ್ರಿವೇಣೀ ಎಂದು ಪ್ರಸಿದ್ಧವಾಗಿ, ಇದು ಸೌಭಾಗ್ಯವನ್ನು ಬೆಳಸತಕ್ಕದ್ದಾಗಿದೆ. ತಮ್ಮ ಆಜ್ಞೆಯಿದ್ದರೆ ಇಲ್ಲಿ ವೇಣಿಯನ್ನು ದಾನಮಾಡುವೆನು''. ಹೀಗೆ ಪ್ರಾರ್ಥಿಸಿ ಗಂಡನನ್ನು ನಮಸ್ಕರಿಸಿ ತಾನೂ ಆಸನದಲ್ಲಿ ಕುಳಿತುಕೊಳ್ಳಬೇಕು. ॥ ೪೭-೫೦ ॥ ಅನಂತರ ಗಂಡನು ಅವಳ ಜಡೆಯನ್ನು ಕೊನೆಯಲ್ಲಿ ಹಿಡಿದುಕೊಂಡು, ಸೌಭಾಗ್ಯದ್ರವ್ಯಗಳ ಸಹಿತವಾಗಿ ತನ್ನ ಬೆರಳಿನಷ್ಟು ಉದ್ದ ಜಡೆಯನ್ನು ಚೂರಿ ಅಥವಾ ಕತ್ತರಿಯಿಂದ ''ಸತ್ಸುಮಂಗಲ'' ಮಂತ್ರ ಪೂರ್ವಕವಾಗಿ ಕತ್ತರಿಸಬೇಕು. ಅದನ್ನು ಹೆಂಡತಿಯ ಹಸ್ತದಲ್ಲಿ ಇಡಬೇಕು. ಅವಳು ಸಕಲ ಸಾಮಗ್ರಿಗಳೊಡನೆ ವೇಣಿಯಲ್ಲಿ ವೇಣಿಯನ್ನು ಕೊಟ್ಟಿದ್ದರಿಂದ ನನ್ನ ಪಾಪವು ಪರಿಹಾರವಾಗಲಿ ಮತ್ತು ''ಜನ್ಮ ಜನ್ಮಾಂತರಗಳಲ್ಲಿಯೂ ಯಾವಾಗಲೂ ನನಗೆ ಸೌಮಂಗಲ್ಯವಿರಲಿ ಮತ್ತು ವೃದ್ಧಿಯಾಗಲಿ'' ಎಂದು ಸತ್ಸುಮಂಗಲ ಮಂತ್ರವನ್ನು ಹೇಳಿ ಪುಷ್ಪಾದಿಗಳಿಂದಲೂ, ರತ್ನಮಾಣಿಕ್ಯಾದಿಗಳಿಂದಲೂ ಶೋಭಾಯ ಮಾನವಾಗಿ ಕಂಗೊಳಿಸುತ್ತಿರುವ ವೇಣಿಯನ್ನು ಪತಿಯೊಡಗೂಡಿ ಸಂಗಮದ ಪ್ರವಾಹದಲ್ಲಿ

ಹರಿಯಬಿಡಬೇಕು. ॥ ೫೧-೫೪ ॥ ಅನಂತರ ಗಂಡಹೆಂಡತಿಯರಿಬ್ಬರೂ ಮಂಗಳ ಸ್ನಾನವನ್ನು ಮಾಡಿ, ಹೊಸ ವಸ್ತ್ರವನ್ನು ಧಾರಣ ಮಾಡಿ ಇಬ್ಬರೂ, ಆಸನದಲ್ಲಿ ಕುಳಿತುಕೊಂಡು ವೇಣೀ ಪೂಜೆಯನ್ನು ಮಾಡಬೇಕು. ॥ ೫೫ ॥ ಈವರೆಗೆ ಹೇಳಿರುವ ವಿಧಾನದಿಂದ ಭಕ್ತಿಯಿಂದ ತ್ರಿವೇಣಿಯನ್ನು ಪೂಜಿಸಿ ಸೌಭಾಗ್ಯದ್ರವ್ಯ, ವಸ್ತ್ರ ಮತ್ತು ಆಲಂಕಾರಿಕ ಸಾಮಗ್ರಿಗಳಿಂದ ಕೂಡಿದ ವಾಯನದಾನಗಳನ್ನು ಬ್ರಾಹ್ಮಣರುಗಳಿಗೂ ಮತ್ತು ಬ್ರಾಹ್ಮಣರ ಪತ್ನಿಯರಿಗೂ ಮಂತ್ರಪುರಸ್ಸರವಾಗಿ ದಾನ ಮಾಡಬೇಕು. ॥ ೫೬ ॥ ದ್ವಿಜರಿಗೂ, ದ್ವಿಜಪತ್ನಿಯರಿಗೂ ಬಿದಿರಿನ ಮೊರಗಳಲ್ಲಿ ಭಕ್ತಿಪೂರ್ವಕವಾಗಿ ದಾನಗಳನ್ನು ಕೊಡಬೇಕು. ವಾಯನದಾನಗಳ ಉದ್ದೇಶ್ಯದಿಂದ ಭೂರಿದಕ್ಷಿಣೆಯನ್ನು ಕೊಡಬೇಕು. ॥ ೫೭ ॥ ಪುನಃ ವೇಣಿಗೆ ನಮಸ್ಕರಿಸಿ ಗಂಡನೊಡನೆ ಮನೆಗೆ ಬರಬೇಕು. ದಂಪತಿಗಳ ಭೋಜನ ಮಾಡಿಸಿ ನಂತರ ತಾನೂ ಗಂಡನೊಡನೆ ಭೋಜನ ಮಾಡತಕ್ಕದ್ದು. ॥ ೫೮ ॥ ಸನಕಾದಿಗಳೇ! ನಿಮಗಾಗಿ ವೇಣೀದಾನದ ವಿಧಾನವು ನನ್ನಿಂದ ಹೇಳಲ್ಪಟ್ಟಿತು. ತೀರ್ಥನಾಯಕನಾಗಿರುವ ಪ್ರಯಾಗದಲ್ಲಿ ಸ್ತ್ರೀಯರಿಗೆ ಈ ವೇಣೀದಾನವು ಬಹು ಸೌಭಾಗ್ಯಪ್ರದವು. ॥ ೫೯ ॥ ಆದ್ದರಿಂದಲೇ ಎಲ್ಲಾ ಪತಿವ್ರತೆಯರಾದ ಮುತ್ತೈದೆಯರು ಈ ಮೂರು ನದಿಗಳ ಸಂಗಮಕ್ಕೆ ಬಂದು ವೇಣೀದಾನವನ್ನು ಮಾಡುತ್ತಾರೆ. ॥ ೬೦ ॥ ಹೀಗೆ ಮಾಡಿದವರು ಜನ್ಮ ಜನ್ಮಾಂತರದಲ್ಲೂ ಸೌಭಾಗ್ಯವನ್ನೂ, ಪಾತಿವ್ರತ್ಯವನ್ನೂ, ಭಾಗ್ಯಸಂಪತ್ತನ್ನೂ ಪಡೆದು ಪತಿಯೊಡನೆ ಸಹವಾಸವನ್ನೂ ಪುತ್ರಪೌತ್ರಾದಿ ಸಂಪತ್ತನ್ನೂ ಹೊಂದುವರು. ॥ ೬೧ ॥ ಈ ರೀತಿಯಾಗಿ ಗಂಡನೊಡನೆ ನಾನಾ ವಿಧವಾದ ಸೌಖ್ಯಗಳನ್ನು ಅಭವಿಸಿ ಸ್ವರ್ಗದಲ್ಲಿಯೂ ದೀರ್ಘಕಾಲ ಪತಿಯೊಡನೆ ವಾಸಮಾಡುವರು. ॥ ೬೨ ॥ ಸ್ತ್ರೀಯರು ಪುರುಷರಂತೆ ಪ್ರತಿ ಸಲದ ಯಾತ್ರೆಯಲ್ಲಿಯೂ ವೇಣಿಯನ್ನು ದಾನಮಾಡಬಾರದು. ಗಂಡನ ಜೊತೆಗಿರದೆ ಈ ದಾನವನ್ನು ಮಾಡಬಾರದು ಆದರೆ ಮುತ್ತೈದೆಯರು ಸ್ನಾನದಾನಾದಿಗಳನ್ನು ಮಾಡಬಹುದು. ॥ ೬೩ ॥

॥ ತೊಂಬತ್ತೇಳನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ಅಷ್ಟನವತಿತಮೋಽಧ್ಯಾಯಃ ॥ ೯೮॥

ಶೇಷ ಉವಾಚ—

ದೇವಪತ್ನ್ಯಶ್ಚ ಯಾಃ ಕಾಶ್ಚಿದೃಷಿಪತ್ನ್ಯಃ ಪತಿವ್ರತಾಃ ।
ಸಾವಿತ್ರೀಮುಪಸಂಗಮ್ಯ ಪ್ರಣಮ್ಯೋಚುಃ ಪ್ರಹರ್ಷಿತಾಃ ॥ ೧ ॥
ಬ್ರಹ್ಮಪತ್ನಿ ನಮಸ್ತೇಽಸ್ತು ಸರ್ವಲೋಕೋತ್ತರಃ ಪರಃ ।
ದೃಷ್ಟೋಽಸ್ಮಾಭಿಃ ಪ್ರಭಾವೋಽತ್ರ ತ್ವತ್ಪ್ರಸಾದಾತ್ಪತಿವ್ರತೇ ॥ ೨ ॥
ಅಪೂರ್ವಂ ಸ್ನಾನಮಾಹಾತ್ಮ್ಯಂ ಮಾಹಾತ್ಮ್ಯಂ ವಪನಸ್ಯ ತು ।
ಸಭರ್ತೃಕಾ ಮುಂಡನಂ ತು ಕರೋತ್ಯಾಶ್ಚರ್ಯಮದ್ಭುತಮ್ ॥ ೩ ॥

## ॥ ತೊಂಬತ್ತೆಂಟನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಕೆಲವು ದೇವತೆಗಳ ಪತ್ನಿಯರೂ, ಪತಿವ್ರತೆಯರಾದ ಋಷಿಪತ್ನಿಯರೂ, ಶ್ರೀ ಸಾವಿತ್ರೀ ದೇವಿಯನ್ನು ನಮಸ್ಕರಿಸಿ ಹರ್ಷಗೊಂಡು ಹೇಳಿದರು ॥ ೧ ॥ "ಪತಿವ್ರತೆಯಾದ ಬ್ರಹ್ಮಪತ್ನಿಯೇ!, ನಿನಗೆ ಪ್ರಣಾಮಗಳು. ಈ ಪ್ರಯಾಗಕ್ಷೇತ್ರದಲ್ಲಿ ಲೋಕೋತ್ತರವಾದ ಸರ್ವಶ್ರೇಷ್ಠವಾದ ಪ್ರಭಾವವನ್ನು ನಿಮ್ಮ ದಯೆಯಿಂದ ನೋಡಿದೆವು. ॥ ೨ ॥ ಇಲ್ಲಿ ಸ್ನಾನದ ಮತ್ತು ಮುಂಡನದ ಮಹಾತ್ಮೆಯು ಅಪೂರ್ವವಾದುದು. ಮುತ್ತೈದೆಯರ ಮುಂಡನವಾದರೋ ನಮಗೆ ಆಶ್ಚರ್ಯವನ್ನು ಉಂಟುಮಾಡುತ್ತಿದೆ" ಎಂದರು. ॥ ೩ ॥

ಸಾವಿತ್ರ್ಯುವಾಚ—

ಭವತೀಭಿಶ್ಚ ಯತ್ಪ್ರೋಕ್ತಂ ತತ್ಸರ್ವಂ ಸತ್ಯಮೇವ ಹಿ ।
ಸಭರ್ತೃಕಾ ಮುಂಡನೇ ತು ಸ್ವಾನುಭೂತಂ ವದಾಮ್ಯಹಮ್ ॥ ೪ ॥
ಪೂರ್ವಕಲ್ಪೇ ತು ವಾಸಿಷ್ಠೀಂ ಋಷೇರಾಥರ್ವಣಸ್ಯ ಚ ।
ಕನ್ಯಕಾಮಾದದೌ ತಾತೋ ವೇದನಾಮ್ನೇ ವರಾಯ ಚ ॥ ೫ ॥
ವೇದನಾಮಾ ಚ ಮಾಂ ಲಬ್ಧ್ವಾ ಸುರೂಪಗುಣಶಾಲಿನೀಂ ।
ಅಂತರ್ವೇದ್ಯಾಂ ಮಧ್ಯದೇಶೇ ಗೃಹಸ್ಥಾಶ್ರಮಮಾಚರತ್ ॥ ೬ ॥
ತಸ್ಯೈವಂ ವರ್ತಮಾನಸ್ಯ ಸಾಗ್ನಿಕಸ್ಯ ಗತೈನಸಃ ।
ವೇದಶಾಸ್ತ್ರಪ್ರವೀಣಸ್ಯ ಸಂತುಷ್ಟಮನಸೋ ಮಯಿ ॥ ೭ ॥
ಕೌಚಿತ್ಕದಾಚಿದಾಯಾತೌ ಪ್ರಯಾಗಾದಾವಯೋರ್ಗೃಹೇ ।
ಅನ್ಯೋನ್ಯಂ ಪ್ರೀತಿಸಂಯುಕ್ತೌ ವಿಶುದ್ಧೌ ದ್ವಿಜದಂಪತೀ ॥ ೮ ॥
ವೈಶ್ವದೇವಾಂತರೇ ಕಾಲೇ ಮತ್ಪತಿಃ ಸ್ವಗೃಹಾಂಗಣೇ ।
ಸಪತ್ನೀಕಂ ದ್ವಿಜಂ ದೃಷ್ಟ್ವಾ ಮಾಮೂಚೇಽತಿಥಿಧರ್ಮವಿತ್ ॥ ೯ ॥

ಧರ್ಮಪತ್ನ್ಯತಿಥಿಃ ಪ್ರಾಪ್ತೋ ಮಧ್ಯಾಹ್ನೇ ಭಗವತ್ತಮಃ ।
ಅತಸ್ತಂ ಪೂಜಯಿಷ್ಯಾಮಿ ಭೋಜಯಿಷ್ಯಾಮಿ ಚ ಪ್ರಿಯೇ ॥ ೧೦ ॥
ಓಂ ಇತ್ಯುಕ್ತೇ ಮಯಾ ಭರ್ತರಿ ತಂ ಸಪತ್ನೀಕಮಾದರಾತ್ ।
ಅಂತರಾನೀಯ ಸಂಪೂಜ್ಯ ಭೋಜಯಾಮಾಸ ಭಕ್ತಿತಃ ॥ ೧೧ ॥
ಭುಕ್ತ್ವಾ ತೌ ದಂಪತೀ ಹೃಷ್ಟೌ ಸ್ಥಿತೌ ತತ್ರೈವ ತದ್ದಿನೇ ।
ಅಪೂರ್ವಾಂ ತತ್‌ಸ್ತ್ರಿಯಂ ದೃಷ್ಟ್ವಾ ಸ್ತ್ರಿಯಃ ಸರ್ವಾಸ್ಸಮಾಗತಾಃ ॥ ೧೨ ॥
ತಾಂ ದೃಷ್ಟ್ವಾಶ್ಚರ್ಯಸಂಪನ್ನಾ ಸ್ತ್ರಿಯಂ ಮುಂಡಿತಮಸ್ತಕಾಮ್ ।
ಪಪ್ರಚ್ಛುಸ್ತಾಮಿದಂ ವಾಕ್ಯಂ ಮಯಾ ಸಹ ಸುಮಧ್ಯಮಾಃ ॥ ೧೩ ॥

ಸಾವಿತ್ರಿಯು ಹೇಳಿದಳು—

ತಮ್ಮಗಳಿಂದ ಹೇಳಲ್ಪಟ್ಟಿದೆಲ್ಲವೂ ಸತ್ಯವು. ಗಂಡನಿರುವ ನಾರಿಯರ ಮುಂಡನದ ಬಗ್ಗೆ ನನ್ನದೇ ಆದ ಅನುಭವವನ್ನು ಹೇಳುವೆನು. ॥ ೪ ॥ ಹಿಂದಿನ ಕಲ್ಪದಲ್ಲಿ ಅಥರ್ವಣ ಋಷಿಯ ಮಗಳಾಗಿದ್ದ ವಾಸಿಷ್ಠಿ ಎಂಬ ಹೆಸರುಳ್ಳ ನನ್ನನ್ನು ವೇದನೆಂಬ ಹೆಸರಿನ ವರನಿಗೆ ಕೊಟ್ಟು ವಿವಾಹ ವಾಯಿತು. ॥ ೫ ॥ ಸುರೂಪಿಯೂ ಮತ್ತು ಗುಣವಂತಳೂ ಆಗಿದ್ದ ನನ್ನನ್ನು ಪಡೆದ ವೇದನು ಅಂತರ್ವೇದಿಯಲ್ಲಿ ಗೃಹಸ್ಥಾಶ್ರಮವನ್ನು ಆಚರಿಸಲು ಪ್ರಾರಂಭಿಸಿದನು. ॥ ೬ ॥ ಹೀಗಿರುತ್ತಿರಲು, ಪಾಪರಹಿತನೂ ಅಗ್ನಿಹೋತ್ರಿಯೂ, ವೇದಶಾಸ್ತ್ರಸಂಪನ್ನನೂ ಮತ್ತು ನನ್ನಲ್ಲಿ ಸಂತುಷ್ಟವಾದ ಮನಸ್ಸಿದ್ದವನೂ ಆದ ಅವನ ಮನೆಗೆ ಒಂದಾನೊಂದು ದಿವಸ ಒಂದು ದಂಪತಿಗಳು ಪ್ರಯಾಗ ಕ್ಷೇತ್ರದಿಂದ ಆಗಮಿಸಿದರು ಅವರು ಬ್ರಾಹ್ಮಣದಂಪತಿಗಳಾಗಿದ್ದು, ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು ಮತ್ತು ತುಂಬಾ ಶುದ್ಧರಾಗಿದ್ದರು. ॥ ೭ - ೮ ॥ ವೈಶ್ಯದೇವದ ಕಾಲದಲ್ಲಿ ತಮ್ಮ ಮನೆಯ ಅಂಗಳದೊಳಕ್ಕೆ ಪ್ರವೇಶಿಸಿದ ಸಪತ್ನೀಕನಾದ ಆ ಬ್ರಾಹ್ಮಣನನ್ನು ನೋಡಿ ಆತಿಥ್ಯಧರ್ಮವನ್ನು ತಿಳಿದಿದ್ದ ನನ್ನ ಪತಿಯು ನನ್ನನ್ನು ಕುರಿತು ॥ ೯ ॥ ''ಎಲೈ ಧರ್ಮಪತ್ನಿಯೇ! ಮಧ್ಯಾಹ್ನದ ವೇಳೆಯಲ್ಲಿ ಬಂದಿರುವ ಅತಿಥಿಯು ಭಗವಂತನ ಸ್ವರೂಪನು. ಆದ್ದರಿಂದ, ಪ್ರಿಯಳೇ!, ಅವರನ್ನು ಪೂಜಿಸಿ ಅವರಿಗೆ ಭೋಜನವನ್ನು ಮಾಡಿಸುತ್ತೇನೆ'' ಎಂದನು. ॥ ೧೦ ॥ ನಾನು ''ಆಗಲಿ'' ಎಂದು ಹೇಳಲು ನನ್ನಿಂದ ಕೂಡಿಕೊಂಡು ನನ್ನ ಗಂಡನು ಆ ಬ್ರಾಹ್ಮಣನನ್ನು ಒಳಗೆ ಕರೆದುಕೊಂಡು ಬಂದು ಭಕ್ತಿಯಿಂದ ಪೂಜೆಮಾಡಿ ಭೋಜನವನ್ನು ಮಾಡಿಸಿದನು. ॥ ೧೧ ॥ ಊಟಮಾಡಿ ಆ ದಂಪತಿಗಳು ಹರ್ಷಗೊಂಡು ಆ ರಾತ್ರಿ ಅಲ್ಲಿಯೇ ಉಳಿದುಕೊಂಡರು. ಅಪೂರ್ವವಾಗಿದ್ದ ಆ ಸ್ತ್ರೀಯನ್ನು ಸುತ್ತಮುತ್ತಲಿನ ಸ್ತ್ರೀಯರೆಲ್ಲರೂ ಅಲ್ಲಿಗೆ ಬಂದು ನೋಡಿದರು. ॥ ೧೨ ॥ ತಲೆಯನ್ನು ಮುಂಡನಮಾಡಿಸಿಕೊಂಡಿದ್ದ ಅವಳನ್ನು ಅವರೆಲ್ಲರೂ ನನ್ನ ಜೊತೆಯಾಗಿ ಕೇಳಿದರು. ॥ ೧೩ ॥

ಸ್ತ್ರಿಯ ಊಚುಃ—

ಅಹೋಪತಿವ್ರತೇ ನಾರೀ ಚಿರಂಟೀನಾಂ ಧ್ವಜೋಪಮಃ ।
ವೇಣೀಬಂಧೋ ನ ತೇ ಕಸ್ಮಾನ್ನಾರೀಣಾಂ ಪತಿಸೌಖ್ಯದಃ ॥ ೧೪ ॥

ಪರಪುಂಸಿ ರತಾ ನಾರೀ ಮಹಾಪಾಪಪರಾಯಣಾ ।
ಪ್ರಾಯಶ್ಚಿತ್ತೈಃ ಶುದ್ಧಿ ಕಾಮಾ ತಸ್ಯ ಮುಂಡನಮೀದೃಶಮ್ ॥ ೧೫ ॥
ಅಶಿರಸ್ಕಂ ಸಭರ್ತೃಣಾಂ ಸ್ನಾನಂ ಪಾಪವಿಮೋಚನಂ ।
ಸಶಿರಸ್ಕಂ ಯದಿ ಸ್ನಾಯಾತ್ಪುನಃ ಸ್ನಾನೇನ ಶುದ್ಧ್ಯತಿ ॥ ೧೬ ॥
ಅಸ್ಪೃಶ್ಯ ಸ್ಪರ್ಶಿಯುಕ್ತಾಪಿ ಕಂಠಸ್ನಾನೇನ ಶುದ್ಧ್ಯತಿ ।
ಶಯನಾದುತ್ಥಿತಾ ನಾರೀ ಶುಚಿಃಸ್ಯಾದಶುಚಿಃ ಪುಮಾನ್ ॥ ೧೭ ॥
ಭರ್ತಾರಂ ಲಂಘಯೇದ್ಯಾಸ್ತ್ರೀ ವಚಸಾ ಮನಸಾಽಥವಾ ।
ಸಾಽಪವಿತ್ರಾ ನ ಶುದ್ಧ್ಯೇತ ಗಂಗಾಸ್ನಾನಶತೈರಪಿ ॥ ೧೮ ॥
ಭರ್ತೃರಾಜ್ಞಾಕರೀ ನಾರೀ ಭರ್ತೃಪಾದಪರಾಯಣಾ ।
ತಸ್ಯಾಃ ಸಂಸ್ಪರ್ಶನಾದೇವ ಪಾಪಂ ಯಾತಿ ಸಹಸ್ರಧಾ ॥ ೧೯ ॥
ಅತಸ್ತ್ವಂ ನಃ ಸಮಾಚಕ್ಷ್ವ ಶಿರೋ ಮುಂಡನಕಾರಣಂ ।
ಅನ್ಯಥಾ ಸಂಶಯೋಽಸ್ಮಾಕಂ ಸರ್ವಾನಾಂ ಹೃದಿ ಜಾಯತೇ ॥ ೨೦ ॥

ಸ್ತ್ರೀಯರು ಹೇಳಿದರು-

ಎಲೈ ಪತಿವ್ರತೆಯಾದ ನಾರಿಯೇ! ನೀನು ಮುತ್ತೈದೆಯರಿಗೆ ಧ್ವಜಪ್ರಾಯಳಾಗಿದ್ದೀ. ತನ್ನ ಪತಿಗೆ ಸೌಖ್ಯವನ್ನುಂಟುಮಾಡುವಂತೆ ನೀನು ತುರುಬನ್ನು ಕಟ್ಟಲು ಆಗದಿರುವ ಮುಂಡನವನ್ನು ಏಕೆ ಮಾಡಿಸಿಕೊಂಡಿದ್ದೀ? ॥ ೧೪ ॥ ಪರಪುರುಷನೊಡನೆ ವ್ಯವಹಾರಗಳನ್ನಿಟ್ಟುಕೊಂಡ ಮತ್ತು ಪಾಪಾಚರಣೆಗಳಲ್ಲಿಯೇ ಆಸಕ್ತರಾದ ನಾರಿಯರು ಪ್ರಾಯಶ್ಚಿತ್ತಕ್ಕಾಗಿ ಈ ರೀತಿ ಮುಂಡನವನ್ನು ಮಾಡಿಸಿಕೊಳ್ಳುತ್ತಾರೆ. ॥ ೧೫ ॥ ಶಿರಸ್ಸನ್ನು ಬಿಟ್ಟು ಕುತ್ತಿಗೆಯ ವರೆಗೆ ಸ್ನಾನಮಾಡುವುದೇ ನಾರಿಯರಿಗೆ ಪಾಪಪರಿಹಾರಕವು. ಕಾರಣಾಂತರದಿಂದ ತಲೆಯ ಮೇಲೆ ಸ್ನಾನ ಮಾಡಿದಾಗ ಪುನಃ ಕಂಠದವರೆಗೆ ಸ್ನಾನ ಮಾಡಿದರೇನೇ ಶುದ್ಧಿಯೆಂದು ಕೇಳಿದ್ದೇವೆ. ॥ ೧೬ ॥ ಅಸ್ಪೃಶ್ಯ ಸ್ಪರ್ಶವಾದರೂ ಕೇವಲ ಕಂಠಸ್ನಾನದಿಂದ ಶುದ್ಧಿಯಾಗುವುದೆಂದು ಬಲ್ಲೆವು. ಹಾಸಿಗೆಯಿಂದ ಎದ್ದ ಕೂಡಲೇ ನಾರಿಯು ಶುದ್ಧಳಾಗುವಳು. ಶಯನದಿಂದ ಎದ್ದ ಪುರುಷನು ಅಶುಚಿಯಾಗುವನು. ॥ ೧೭ ॥ ಇನ್ನು ಯಾವ ಸ್ತ್ರೀಯು ಗಂಡನನ್ನು ಮೀರಿ ನಡೆಯುತ್ತಾಳೋ ಅವಳಿಗೆ ನೂರು ಸಾರಿ ಮಾಡಿದ ಗಂಗಾಸ್ನಾನದಿಂದಲೂ ಶುದ್ಧಿಯಿಲ್ಲವು. ॥ ೧೮ ॥ ಇನ್ನು ಗಂಡನ ಆಜ್ಞೆಯನ್ನು ಪಾಲನ ಮಾಡಿಕೊಂಡು ಗಂಡನ ಪಾದಸೇವೆ ಮಾಡಿಕೊಂಡಿರುವ ಸ್ತ್ರೀಯರ ಸ್ಪರ್ಶದಿಂದಲೇ ಅನ್ಯರ ಸಹಸ್ರಾರು ಪಾಪಗಳು ನಾಶವಾಗುವುವು. ॥ ೧೯ ॥ ಆದ್ದರಿಂದ ಶಿರಸ್ಸಿನ ಮುಂಡನದ ಕಾರಣವನ್ನು ನಮಗೆ ಹೇಳು. ಇಲ್ಲದಿದ್ದರೆ ನಮ್ಮೆಲ್ಲರ ಹೃದಯದಲ್ಲಿ ಈ ನಿನ್ನ ವರ್ತನೆಯ ಬಗ್ಗೆಯೂ ಈ ವಿಷಯದ ಬಗ್ಗೆಯೂ ಸಂಶಯವು ಇದ್ದೇ ಇರುವುದು ॥ ೨೦ ॥

ಚಿರಂಟಿನ್ಯುವಾಚ—

ಅಹಂ ಗತವತೀ ಸಖ್ಯಃ ಪ್ರಯಾಗಂ ತೀರ್ಥನಾಯಕಂ ।
ಗಂಗಾ ಚ ಯಮುನಾ ಯತ್ರ ಸರಸ್ವತ್ಯಾ ಸುಗರ್ಭಿತಾ ॥ ೨೧ ॥

ತಸ್ಮಿನ್ ಕ್ಷೇತ್ರೇಽಖಿಲಾ ನಾರ್ಯೋ ವೇಣೀದಾನಂ ಪ್ರಕುರ್ವತೇ ।
ತದನಂತಫಲಂ ವೇತ್ತಿ ಪತಿರ್ಮೇಽಹಂ ಕಥಂ ಬ್ರುವೇ ॥ ೨೨ ॥
ಮಯಾ ವೇಣೀಪ್ರದಾನಂ ತು ಕೃತಂ ಪತ್ಯುರನುಜ್ಞಯಾ ।
ತದಾಜ್ಞಾಪಾಲನಂ ಸ್ತ್ರೀಣಾಂ ಪರೋ ಧರ್ಮೋ ಯತಃ ಶ್ರುತಃ ॥ ೨೩ ॥
ಪತಿವ್ರತಾನಾಂ ನಾರೀಣಾಂ ಧರ್ಮೋಽಯಂ ಸಮುದಾಹೃತಃ ।
ನಾಹಂ ಧರ್ಮೇ ಸಮರ್ಥಾಽಸ್ಮಿ ಪತ್ಯುರಾಜ್ಞಾಕರೀ ತಥಾ ॥ ೨೪ ॥
ಶುಭಾ ವಾಪ್ಯಶುಭಾ ವಾಥ ಪುಣ್ಯಾಽಪುಣ್ಯಾಪ್ರಿಯಾಽಪ್ರಿಯಾ ।
ಯಾ ಯಾ ನಿಸ್ಸರತೇ ವಾಣೀ ಮುಖಾತ್ತಸ್ಯ ಕರೋಮಿ ತಾಮ್ ॥ ೨೫ ॥
ನಾನ್ಯಂ ಧರ್ಮಮಹಂ ಜಾನೇ ತದುಚ್ಛಿಷ್ಟಂ ಪ್ರಿಯಂ ಹಿ ಮೇ ।
ಅನ್ನಂ ಭಕ್ಷ್ಯಂ ಚ ಭೋಜ್ಯಂ ಚ ತದುಚ್ಛಿಷ್ಟಂ ಪ್ರಿಯಂ ಮಮ ॥ ೨೬ ॥
ಭರ್ತಾ ಸ್ತ್ರೀಣಾಂ ಪರಂ ದೈವಂ ಕಾಮದಂ ಮುಕ್ತಿದಂ ಶುಭಂ ।
ಭರ್ತಾರಂ ಯಾ ನ ಸೇವೇತ ಸಾ ನಾರೀ ರೌರವಂ ವ್ರಜೇತ್ ॥ ೨೭ ॥
ವಂಚಯೇದ್ವಾ ಪತಿಂ ಭಕ್ಷ್ಯೈರ್ಭೋಜ್ಯೈರ್ಯಾ ಸುಖಸಾಧನೈಃ ।
ಪಾಪಕರ್ಮರತಾ ದುಷ್ಟಾ ಸಾ ಲಭೇದ್ಯಮಯಾತನಾಮ್ ॥ ೨೮ ॥
ನಾರೀಣಾಂ ಪುರುಷಾಣಾಂ ವಾ ಪ್ರಯಾಗೇ ವಪನಂ ಫಲಂ ।
ಕೋಽಪಿ ವಕ್ತುಂ ನ ಶಕ್ನೋತಿ ಬಹುವರ್ಷಶತೈರಪಿ ॥ ೨೯ ॥
ಏವಂ ವಿಚಾರ್ಯ ಪತಿನಾ ತತ್ರ ಮೇ ಮುಂಡನಂ ಕೃತಂ ।
ಮುಂಡನಂ ಮಂಡನಂ ಯತ್ರ ಪ್ರಯಾಗೇ ತೀರ್ಥನಾಯಕೇ ॥ ೩೦ ॥
ಪ್ರಯಾಗೇ ವಪನಂ ರಾತ್ರೌ ನ ನಿಷಿದ್ಧಂ ವಿಧೀಯತೇ ।
ಏಕವಾರಂ ದ್ವಿವಾರಂ ವಾ ಜಾತಕೌರೋಽಪಿ ಕಾರಯೇತ್ ॥ ೩೧ ॥
ಯೋ ಜೀವತ್ಪಿತೃಕಃ ಪುತ್ರಃ ಕುಮಾರೀ ರಾಜಪುತ್ರಕಃ ।
ಯೋ ವಾ ಕೋವಾ ಸದಾ ಕುರ್ಯಾನ್ಮುಂಡನಂ ತೀರ್ಥನಾಯಕೇ ॥ ೩೨ ॥
ಯೇ ವೈ ಕೌರನಿಷೇಧಾಶ್ಚ ತೇ ಚಾತ್ರ ಪ್ರಭವಂತಿ ನ ।
ತಿಥಿವಾರಾದಿದೋಷೋಪಿ ಪ್ರಯಾಗೇ ನ ವಿಧೀಯತೇ ॥ ೩೩ ॥
ಯಾ ಯಾಃ ಪತಿವ್ರತಾಸ್ತಾಸ್ತಾಃ ಪ್ರಯಾಗೇ ತೀರ್ಥನಾಯಕೇ ।
ತಾಸಾಮಯಂ ಪುರಾವಿದ್ಭಿಃ ವಿಧಿಃ ಸಮ್ಯಗುದಾಹೃತಃ ॥ ೩೪ ॥
ಪತಿರ್ಯಾಸಾಂ ಪರಂ ದೈವಂ ಸೌಭಾಗ್ಯಂ ವಿಪುಲಂ ಧನಮ್ ।
ಪತಿಶ್ಚ ಸುಖಭಾಂಡಾರಂ ತಸ್ಯಾಜ್ಞಾಪಾಲಿತಾ ಮಯಾ ॥ ೩೫ ॥

ಮುತ್ತೈದೆಯು ಹೇಳಿದಳು—

ಎಲೈ ಸಖಿಯರೇ! ಗಂಗೆಯೂ, ಯಮುನೆಯೂ ಮತ್ತು ಗುಪ್ತರೂಪದಲ್ಲಿ ಸರಸ್ವತಿಯೂ

ಸೇರಿ ಹರಿಯುತ್ತಿರುವತೀರ್ಥನಾಯಕನಾದ ಪ್ರಯಾಗಕ್ಷೇತ್ರಕ್ಕೆ ನಾನು ಹೋಗಿ ಬಂದಿರುತ್ತೇನೆ. ॥೨೧॥ ಈ ಕ್ಷೇತ್ರದಲ್ಲಿ ಎಲ್ಲ ನಾರಿಯರೂ ತಮ್ಮ ತಮ್ಮ ವೇಣೀ ದಾನವನ್ನು ಮಾಡುತ್ತಾರೆ. ಇದು ಅನಂತ ಪುಣ್ಯಪ್ರದವು ಎಂದು ನನ್ನ ಪತಿಯು ನನಗೆ ಹೇಳಿದ್ದಾರೆ. ಅದನ್ನು ಹೇಳಿ ಸಮರ್ಥಿಸಲು ಸ್ತ್ರೀಯಾದ ನಾನು ಹೇಗೆ ಶಕ್ತಳಾಗುವೆನು? ॥ ೨೨ ॥ ನನ್ನ ಗಂಡನ ಆಜ್ಞೆಯಂತೆ ನಾನು ವೇಣೀ ದಾನವನ್ನು ಮಾಡಿದ್ದೇನೆ. ಈ ರೀತಿ ಮಾಡಲು ನಾರಿಯರು ಗಂಡಂದಿರ ಆಜ್ಞೆಯಂತೆ ನಡೆಯುವುದೇ ಪರಮ ಧರ್ಮವೆಂದು ನಾನು ಕೇಳಿರುವುದೇ ಕಾರಣ. ॥೨೩॥ ಪತಿವ್ರತೆಯರಾದ ಸ್ತ್ರೀಯರಿಗೆ ಇದು ಧರ್ಮವೆಂದು ವೇದಶಾಸ್ತ್ರಗಳಲ್ಲಿ ಹೇಳಿರುವುದಾಗಿ ಕೇಳಿದ್ದೇನೆ. ಧರ್ಮಶಾಸ್ತ್ರದ ಬಗ್ಗೆ ಹೇಳಲು ನಾನು ಅಸಮರ್ಥಳು. ಆದ್ದರಿಂದ ಪತಿಯ ಆಜ್ಞೆಯನ್ನಷ್ಟೇ ಪಾಲಿಸುವೆನು. ॥೨೪॥ ಶುಭ ಅಥವಾ ಅಶುಭವಾದ್ದಾಗಲಿ, ಪುಣ್ಯಕರ ಅಥವ ಅಪುಣ್ಯಕರವಾದ್ದಾಗಲಿ, ಗಂಡನ ಬಾಯಿಂದ ಹೊರಟ ಮಾತಿನಂತೆ ನಾನು ನಡೆಯುತ್ತೇನೆ. ॥ ೨೫ ॥ ಪತಿಯ ವಾಕ್ಯಪರಿಪಾಲನೆಯನ್ನು ಬಿಟ್ಟು ನನಗೆ ಬೇರೆ ಯಾವ ಧರ್ಮವೂ ಗೊತ್ತಿಲ್ಲ, ಅವರ ಎಂಜಲು ಕೂಡ ನನಗೆ ಪ್ರಿಯವಾದುದು. ಅನ್ನವೇ ಆಗಲಿ, ಭಕ್ಷ್ಯವೇ ಆಗಲೀ, ತಿನ್ನತಕ್ಕ ಯಾವ ಪದಾರ್ಥವೇ ಆಗಲಿ ಅವರ ಉಚ್ಛಿಷ್ಟವಾಗಿದ್ದರೆ ನನಗೆ ಅದು ಪ್ರಿಯವು. ॥ ೨೬ ॥ ಗಂಡನು ನಾರಿಯರಿಗೆ ಸಾಕ್ಷಾತ್ ಪರದೇವತೆಯು. ಅವನೇ ಅವರಿಗೆ ಅಪೇಕ್ಷೆಗಳನ್ನೂ ಮಂಗಳಕರವಾದುದನ್ನೂ, ಮತ್ತು ಮುಕ್ತಿಯನ್ನು ಸಹಾ ಕೊಡತಕ್ಕವನು. ಯಾವ ಹೆಂಗಸು ಗಂಡನನ್ನು ಸೇವಿಸುವುದಿಲ್ಲವೋ ಅವಳು ರೌರವಾದಿ ನರಕಗಳಲ್ಲಿ ಬೀಳುವಳು. ॥೨೭॥ ಯಾವ ನಾರಿಯು ಗಂಡನನ್ನು ಭಕ್ಷ್ಯ ಭೋಜ್ಯ ಮತ್ತು ಸುಖಸಾಧನಗಳಲ್ಲಿ ವಂಚಿಸುತ್ತಾಳೋ ಅವಳು ಪಾಪಕಾರ್ಯಗಳನ್ನು ಮಾಡುವವಳು, ದುಷ್ಟಳು ಮತ್ತು ನೀಚಳು. ಆದ್ದರಿಂದ ಅವಳು ನರಕಯಾತನೆಯನ್ನು ಅನುಭವಿಸುತ್ತಾಳೆ. ॥೨೮॥ ಗಂಡಸರಿಗಾಗಲೀ ಹೆಂಗಸರಿಗಾಗಲೀ ಪ್ರಯಾಗದಲ್ಲಿ ಮಾಡಿಸಿಕೊಂಡ ಕ್ಷೌರವು ಪುಣ್ಯಫಲಪ್ರದವು. ಈ ಫಲಗಳ ಬಗ್ಗೆ ಯಾರಿಂದಲೂ ನೂರಾರು ವರ್ಷಗಳವರೆಗೆ ಹೇಳಿದರೂ ಪೂರ್ಣವಾಗಿ ಹೇಳಲು ಅಸಾಧ್ಯವು. ॥ ೨೯ ॥ ಈ ರೀತಿಯಾಗಿ ಎಲ್ಲಾ ವಿಚಾರಗಳನ್ನೂ ಯೋಚಿಸಿಯೇ ನನ್ನ ಪತಿಯು ನನಗೆ ಪ್ರಯಾಗದಲ್ಲಿ ಮುಂಡನವನ್ನು ಮಾಡಿಸಿದ್ದು. ಈ ತೀರ್ಥನಾಯಕನಾದ ಪ್ರಯಾಗದಲ್ಲಿ ಮುಂಡನವು ಅಲಂಕಾರಪ್ರಾಯವಾದುದು. ॥ ೩೦ ॥ ಪ್ರಯಾಗದಲ್ಲಿ ರಾತ್ರಿಯ ಕಾಲದ ಮುಂಡನವೂ ನಿಷೇಧವಲ್ಲ. ಹಿಂದೊಮ್ಮೆ ಒಂದಲ್ಲ ಎರಡು ಮೂರು ಬಾರಿಯೂ ಮುಂಡನ ಮಾಡಿಸಿಕೊಂಡಿದ್ದರೂ ಅಲ್ಲಿ ಮುಂಡನ ಮಾಡಿಸಿಕೊಳ್ಳಬೇಕು. ॥ ೩೧ ॥ ತಂದೆಯಿರುವವನು, ಅವಿವಾಹಿತ ಕನ್ಯೆಯು, ರಾಜಪುತ್ರನು, ಈ ರೀತಿಯಾಗಿ ಯಾವನೇ ಆಗಲೀ, ತೀರ್ಥನಾಯಕನಾದ ಪ್ರಯಾಗದಲ್ಲಿ ಮುಂಡನವನ್ನು ಮಾಡಿಸಿ ಕೊಳ್ಳತಕ್ಕದ್ದು. ॥ ೩೨ ॥ ಕ್ಷೌರಕ್ಕೇ ಸಂಬಂಧಪಟ್ಟ ತಿಥಿ ವಾರವೇ ಮುಂತಾದ ವಿಧಿ ನಿಷೇಧಗಳಾವುವೂ ಪ್ರಯಾಗ ಕ್ಷೇತ್ರದಲ್ಲಿ ಇಲ್ಲ. ॥ ೩೩ ॥ ಯಾವ ಯಾವ ಪತಿವ್ರತೆಯರು ತೀರ್ಥನಾಯಕನಾದ ಪ್ರಯಾಗಕ್ಕೆ ಬಂದು ಹೋಗಿದ್ದಾರೋ ಅವರೆಲ್ಲರಿಗೂ ಜ್ಞಾನಿಗಳಾದ ಪುರಾಣಜ್ಞರೂ ಇದೇ ವಿಧಿಗಳನ್ನು ಹೇಳಿದ್ದಾರೆ. ॥೩೪॥ ಯಾರಿಗೆ ಪತಿಯು ಉತ್ತಮ ದೈವವೋ ಮತ್ತು ಸೌಭಾಗ್ಯವೇ ಉತ್ತಮವಾದ ಐಶ್ವರ್ಯವೋ ಮತ್ತು ಪತಿಯೇ ಅವರ ಸುಖದ ಭಂಡಾರವೋ ಅಂತಹ ಪತಿಯ ಆಜ್ಞೆಯು ನನ್ನಿಂದ ಪಾಲಿಸಲ್ಪಟ್ಟಿದೆ ಎಂದಳು. ॥೩೫॥

ಸ್ತ್ರಿಯ ಊಚುಃ—

ಇತಿ ತಸ್ಯಾ ವಚಃ ಶ್ರುತ್ವಾ ಸರ್ವಾಸ್ತಾ ವಾಮಲೋಚನಾಃ ।
ತಾಮೂಚುಃ ಸುಸತೀತ್ವಂ ತೇ ಸತ್ಯಮೇವ ನ ಸಂಶಯಃ ॥ ೩೬ ॥
ಜನ್ಮಜನ್ಮಾಂತರೇ ಭೂಯಾತ್ ಸತೀತ್ವಂ ತವ ಸೇವಯಾ ।
ಅಸ್ಮಾಕಂ ಚ ತಥಾ ಸ್ಯಾದಿತ್ಯುಕ್ತ್ವಾ ಸ್ವಗೃಹಂ ಯಯುಃ ॥ ೩೭ ॥

ನಾರಿಯರು ಹೇಳಿದರು—

ಈರೀತಿಯಾಗಿ ಹೇಳಿದ ಆ ಸ್ತ್ರೀಯ ಮಾತುಗಳನ್ನು ಕೇಳಿದ ಆ ಸುಂದರ ಸ್ತ್ರೀಯರೆಲ್ಲರೂ ಆಕೆಯನ್ನು ಕುರಿತು ಈ ರೀತಿ ಹೇಳಿದರು, ''ಎಲೈ ಸಾಧ್ವಿಯೇ!, ನಿನ್ನದು ಸತ್ಯವಾಗಿಯೂ ಒಳ್ಳೆಯ ಪಾತಿವ್ರತ್ಯವು. ಇದರಲ್ಲಿ ಏನೂ ದೋಷವಿಲ್ಲ. ॥ ೩೬ ॥ ನಿನ್ನ ಸೇವಾಮಾಡಿದವರಿಗೂ ಜನ್ಮ ಜನ್ಮಾಂತರದಲ್ಲಿಯೂ ಇದೇ ರೀತಿಯಾದ ಪಾತಿವ್ರತ್ಯವಿರಲಿ'' ಹೀಗೆ ಹೇಳಿ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ॥ ೩೭ ॥

ಸ್ತ್ರೀಭಿಃ ಸರ್ವಾಭಿರಸ್ಮಾಭಿಃ ಪೂಜಿತಾ ಭಾವಿತಾ ಭೃಶಂ ।
ಸಾಪಿ ಪ್ರಭಾತೇ ನಿರ್ಯಾತಾ ಮದ್ಗೃಹಾತ್ಪತಿನಾ ಸಹ ॥ ೩೮ ॥
ಪತಿಸ್ತಸ್ಯಾಂ ಪರಂ ಪ್ರೇಮ ಸ್ವಸ್ಮಿನ್ಬಕ್ತ್ಯಾ ಚಕಾರ ಹ ।
ತಯಾ ಸಹ ವ್ರಜನ್ಮಾರ್ಗೇ ಸ್ವಾಶ್ರಮಂ ಪ್ರತ್ಯಪದ್ಯತ ॥ ೩೯ ॥
ತತ್ರೋಷಿತ್ವಾ ಚಿರಂ ಕಾಲಂ ಗೃಹಧರ್ಮಪರಾಯಣಃ ।
ಭಾರ್ಯಯಾ ಗೃಹಮೇಧೀಯಾನ್ನಾನಾಧರ್ಮಾಂಶ್ಚಕಾರ ಹ ॥ ೪೦ ॥
ವಾರ್ಧಕೇ ಸಮನುಪ್ರಾಪ್ತೇ ಗೃಹಂ ಪುತ್ರೇಣ ಯೋಜ್ಯ ತೌ ।
ಮಾಧವಂ ಹೃದಿ ವಿನ್ಯಸ್ಯ ಜಗ್ಮತುಸ್ತೀರ್ಥನಾಯಕಂ ॥ ೪೧ ॥
ಅತ್ರ ಸ್ಥಿತ್ವಾ ಕಿಯತ್ಕಾಲಂ ತಪಃಶೋಷಿತವಿಗ್ರಹೌ ।
ಸ್ಥಾಪಯಾಮಾಸತುರ್ದೇಹಂ ಗಂಗಾಯಮುನಸಂಗಮೇ ॥ ೪೨ ॥
ಸ ತತ್ಪುಣ್ಯಪ್ರಭಾವೇನ ವಸಿಷ್ಠೋಭೂನ್ಮಹಾಮುನಿಃ ।
ಸಾಪಿ ಚಾರುಂಧತೀ ಜಾತಾ ಪಾತಿವ್ರತ್ಯಪ್ರಭಾವತಃ ॥ ೪೩ ॥
ಏವಂ ಪ್ರಭಾವಮಾಲೋಚ್ಯ ತೀರ್ಥರಾಜಪ್ರಯಾಗಜಂ ।
ಮತ್ಪತಿಶ್ಚ ಮಯಾಸಾರ್ಧಮತ್ರಾಗಂತುಂ ಮನೋ ದಧೇ ॥ ೪೪ ॥
ಗೃಹಭಾರಂ ಸುತೇ ಸೋಽಪಿ ನ್ಯಸ್ಯ ಸರ್ವಂ ಮಯಾ ಸಹ ।
ಸಾಗ್ನಿಕಃ ಪ್ರಯಯೌ ಯತ್ರ ಸಂತಿ ಋಷಿಪತ್ನ್ಯೋ ಪತಿವ್ರತಾಃ ॥ ೪೫ ॥
ಗತ್ವಾ ವೇಣೀತಟೇಽಂ ಶೀಘ್ರಂ ಚಕಾರ ಕ್ಷೌರಮಾತ್ಮನಃ ।
ಮಮಾಪಿ ಕ್ಷೌರಮಾಚಕ್ರೇ ವೇಣೀದಾನಪುರಸ್ಸರಮ್ ॥ ೪೬ ॥
ಅಂತರ್ವೇದ್ಯಾಮಿಹ ಸ್ಥಿತ್ವಾ ಗಂಗಾಯಮುನಸನ್ನಿಧೌ ।
ಅಗ್ನಿಹೋತ್ರಾದಿ ವೈತಾನಂ ಮಯಾ ಸಹ ಚಕಾರ ಹ ॥ ೪೭ ॥

ಅಗ್ನಿಸೇವಾಪರೋ ನಿತ್ಯಂ ತೀರ್ಥಸೇವಾಪರಸ್ತಥಾ ।
ಗಂಗಾಯಮುನಯೋರ್ಯೋರ್ಗೇ ತಪಸ್ತೇಪೇಽತಿದುಷ್ಕರಂ ॥ ೪೮ ॥
ಏವಂ ಬಹುದಿನಂ ಕೃತ್ವಾ ತತ್ರಾಸಕ್ತೋಽಗ್ನಿಭಿಃ ಸಹ ।
ವಿಸಸರ್ಜ ನಿಜಂ ದೇಹಂ ಸಂಗಮೇಽಸೌ ಮಯಾ ಸಹ ॥ ೪೯ ॥
ತೇನ ಪುಣ್ಯಪ್ರಭಾವೇನ ವಿಮಾನೇ ದೇವತಾಗಣಾಃ ।
ಆವಾಮಾರೋಪ್ಯ ಸೋದ್ಯೋಗಂ ನಿನ್ಯುರ್ವೈಕುಂಠಮಂದಿರಮ್ ॥ ೫೦ ॥
ತಂ ದೃಷ್ಟ್ವಾ ಮಾಧವಸ್ತಸ್ಮೈ ಬ್ರಹ್ಮತ್ವಮದದಾತ್ ಪ್ರಭುಃ ।
ಪಾತಿವ್ರತ್ಯಾದಹಂ ತಸ್ಯ ಸಾವಿತ್ರೀತ್ಯಭವಂ ಪ್ರಿಯಾ ॥ ೫೧ ॥
ತೀರ್ಥರಾಜಮನುಸೃತ್ಯ ಪುನರಾವಾಮಿಹಾಗತೌ ।
ದೇವೈಶ್ಚ ಋಷಿಭಿಃಸಾಕಂ ಭವತೀಭಿಸ್ಸಹೈವ ಚ ॥ ೫೨ ॥
ಮಯಾನುಭೂತಮಾಖ್ಯಾತಮಿದಂ ವಸ್ತೀರ್ಥಗೌರವಂ ।
ಅತೋ ಬ್ರಹ್ಮಾದಿಭಿರ್ದೇವೈರವಾಚ್ಯೋ ಮಹಿಮಾಸ್ಯ ತು ॥ ೫೩ ॥
ಸ್ತ್ರಿಯಾ ಮಯಾ ಕಥಂ ವಾಚ್ಯಸ್ತಥಾಪ್ಯುಕ್ತೋ ಯಥಾಮತಿ ।
ಭವತೀನಾಂ ಪರಪ್ರೀತ್ಯಾ ಲೋಕೋಪಕೃತಿಯೇ ತಥಾ ॥ ೫೪ ॥

॥ ಇತಿ ಅಷ್ಟನವತಿತಮೋಽಧ್ಯಾಯಃ ॥

ಎಲ್ಲ ಸ್ತ್ರೀಯರಿಂದಲೂ ಪೂಜಿಸಿ, ಗೌರವಿಸಲ್ಪಟ್ಟು ಆ ನಾರೀಮಣಿಯು ಬೆಳಿಗ್ಗೆ ಆಗುತ್ತಲೇ ತನ್ನ ಗಂಡನೊಡನೆ ನನ್ನ ಮನೆಯಿಂದ ಹೊರಟುಬಿಟ್ಟಳು. ॥ ೩೮ ॥ ಅವಳು ತನ್ನ ಪತಿಯಲ್ಲಿ ಇಟ್ಟಿರುವ ಭಕ್ತಿಯಿಂದಲೇ ಅವಳ ಗಂಡನು ಅವಳನ್ನು ಬಹುವಾಗಿ ಪ್ರೀತಿಸಿದನು. ಅನಂತರ ತಮ್ಮ ದಾರಿಯನ್ನು ಹಿಡಿದು ಅವರು ತಮ್ಮ ಆಶ್ರಮಕ್ಕೆ ಹೋದರು. ॥ ೩೯ ॥ ಅಲ್ಲಿಯೇ ವಾಸಮಾಡಿಕೊಂಡಿದ್ದು ಬಹುಕಾಲ ಗೃಹಸ್ಥಾಶ್ರಮಧರ್ಮಗಳನ್ನು ಪಾಲಿಸುತ್ತಿದ್ದು ಗೃಹಧರ್ಮವೆಂಬ ಯಜ್ಞಗಳೆಂಬ ನಾನಾ ಧರ್ಮಗಳನ್ನು ಆಚರಿಸಿ ನಾನಾ ಧರ್ಮಗಳನ್ನೂ ಎಸಗಿದರು. ॥ ೪೦ ॥ ಮುಪ್ಪು ಬರುತ್ತಿರಲು ಅವರು ಮನೆಯ ಸರ್ವಸ್ವವನ್ನೂ ಮಗನಿಗೆ ಒಪ್ಪಿಸಿ ಶ್ರೀ ಮಾಧವನನ್ನೇ ಹೃದಯದಲ್ಲಿ ಧ್ಯಾನಿಸುತ್ತಾ ತೀರ್ಥರಾಜನಾದ ಪ್ರಯಾಗ ಕ್ಷೇತ್ರಕ್ಕೆ ಬಂದರು. ॥ ೪೧ ॥ ಇಲ್ಲಿ ಎಷ್ಟೋ ಕಾಲವಿದ್ದ ತಪಸ್ಸಿನಿಂದ ದೇಹವನ್ನು ಸವೆಸಿ ಅವರಿಬ್ಬರೂ ಗಂಗೆ-ಯಮುನೆಯರ ಸಂಗಮದಲ್ಲಿ ತಮ್ಮ ದೇಹಗಳನ್ನು ತೇಲಿಬಿಟ್ಟರು. ॥ ೪೨ ॥ ಗಂಡನು ತನ್ನ ಪುಣ್ಯದ ಪ್ರಭಾವದಿಂದ ಮುಂದಿನ ಕಲ್ಪದಲ್ಲಿ ವಸಿಷ್ಠಮುನಿಯಾದನು ಮತ್ತು ಹೆಂಡತಿಯೂ ಅವಳ ಪುಣ್ಯದ ಪ್ರಭಾವದ ದೆಶೆಯಿಂದ ಅರುಂಧತಿಯಾದಳು. (ಇವರೇ ಸಪ್ತಋಷಿಮಂಡಲದಲ್ಲಿ ಕಾಣಬರುತ್ತಿರುವ ಏಳನೇ ನಕ್ಷತ್ರ. ಅದರ ಸಮೀಪದಲ್ಲಿ ಚಿಕ್ಕದಾಗಿ ಹೊಳೆಯುತ್ತಿರುವುದೇ ಅರುಂಧತೀ ನಕ್ಷತ್ರ). ॥ ೪೩ ॥ ತೀರ್ಥರಾಜನಾಗಿರುವ ಪ್ರಯಾಗದ ಇಂತಹ ಪ್ರಭಾವವನ್ನು ಗಮನಿಸಿದ ನನ್ನ ಪತಿಯು ಅಲ್ಲಿಗೆ ನನ್ನೊಡನೆ ಹೋಗಲು ಮನಸ್ಸು ಮಾಡಿದನು. ॥ ೪೪ ॥ ಮನೆಯ ಹೊರೆಯನ್ನು ಮಗನಿಗೆ ಒಪ್ಪಿಸಿ ಅಗ್ನಿಯನ್ನು ತೆಗೆದುಕೊಂಡು ನನ್ನೊಡನೆ ಎಲ್ಲಿ ಪತಿವ್ರತೆಯರಾದ ಋಷಿಸ್ತ್ರೀಯರು ಇದ್ದಾರೆಯೋ ಅಂತಹ ಪ್ರಯಾಗಕ್ಕೆ ಬಂದರು. ॥ ೪೫ ॥ ಅಲ್ಲಿ ವೇಣಿಯ ದಡಕ್ಕೆ ಹೋಗಿ ತಾನೂ ಮುಂಡನವನ್ನು

ಮಾಡಿಸಿಕೊಂಡು, ನನ್ನಿಂದ ವೇಣೀದಾನವನ್ನು ಮಾಡಿಸಿ ನನಗೂ ಮುಂಡನವನ್ನು ಮಾಡಿಸಿದನು. ॥ ೪೬ ॥ ಇಲ್ಲಿ ಮಧ್ಯ ವೇಣೀಯಲ್ಲಿ ಇದ್ದುಕೊಂಡು ಗಂಗೆ-ಯಮುನೆಯರ ಸಂಗಮ ಸ್ಥಳದಲ್ಲಿ ನನ್ನೊಡನೆ ಅಗ್ನಿಹೋತ್ರಾದಿ ಯಜ್ಞಗಳನ್ನು ಮಾಡಿದನು. ॥ ೪೭ ॥ ಹೀಗೆ ಅಗ್ನಿಸೇವೆಯನ್ನೂ ಮತ್ತು ತೀರ್ಥಸೇವೆಯನ್ನೂ ಮಾಡಿಕೊಂಡು ಗಂಗೆ-ಯಮುನೆಯರ ಸಂಗಮದಲ್ಲಿ ಅತಿ ದುಷ್ಕರವಾದ ತಪಸ್ಸನ್ನು ಮಾಡಿದನು. ॥ ೪೮ ॥ ಈ ರೀತಿಯಾಗಿ ಬಹುದಿವಸಗಳ ವರೆಗೆ ಅಗ್ನಿಹೋತ್ರಾದಿ ಯಜ್ಞಗಳಲ್ಲಿ ಆಸಕ್ತಾಗಿದ್ದು ಗಂಗೆ-ಯಮುನೆಯರ ಸಂಗಮದಲ್ಲಿ ನನ್ನ ಜೊತೆಗೇ ತನ್ನ ದೇಹವನ್ನು ತ್ಯಾಗ ಮಾಡಿದನು. ॥ ೪೯ ॥ ಈ ಪುಣ್ಯದ ಪ್ರಭಾವದಿಂದ ದೇವತೆಗಳು ಬಂದು ನಮ್ಮಿಬ್ಬರನ್ನು ವಿಮಾನದಲ್ಲಿ ಕೂಡಿಸಿಕೊಂಡು ವೇದಗೀತಾದಿ ಘೋಷಗಳೊಡನೆ ವೈಕುಂಠಕ್ಕೆ ಕರೆದುಕೊಂಡು ಹೋದರು. ॥ ೫೦ ॥ ನನ್ನ ಪತಿಯನ್ನು ನೋಡಿ ಶ್ರೀ ಮಾಧವದೇವರು ಅವನಿಗೆ ಬ್ರಹ್ಮನಾಗುವ ಅರ್ಹತೆಯನ್ನೂ ನನ್ನ ಪಾತಿವ್ರತ್ಯಕ್ಕಾಗಿ ನನಗೆ ಬ್ರಹ್ಮದೇವರ ಪತ್ನಿಯಾದ ''ಸಾವಿತ್ರೀ'' ಎಂಬ ಪದವಿಯನ್ನೂ ಕರುಣಿಸಿದರು. ॥ ೫೧ ॥ ತೀರ್ಥರಾಜನನ್ನು ಸ್ಮರಿಸಿ ನಾವಿಬ್ಬರೂ ಪುನಃ ಈ ತೀರ್ಥರಾಜನಾದ ಪ್ರಯಾಗಕ್ಕೆ ಬಂದು ಇಲ್ಲಿ ಯಾವಾಗಲೂ ಋಷಿಗಳಿಂದಲೂ ದೇವತೆಗಳಿಂದಲೂ ಮತ್ತು ನಿಮ್ಮಿಂದಲೂ ಕೂಡಿಕೊಂಡಿದ್ದೇವೆ. ॥ ೫೨ ॥ ನಿಮಗೋಸ್ಕರ ಈ ನನ್ನ ಆಖ್ಯಾನವನ್ನು ಯಥಾಮತಿ ಹೇಳಿದ್ದೇನೆ. ಬ್ರಹ್ಮಾದಿ ಇತರ ದೇವತೆಗಳಿಂದಲೂ ಹೇಳಲಸಾಧ್ಯವಾದ ಈ ತೀರ್ಥದ ಮಹಿಮೆಯನ್ನು ಹೆಣ್ಣಾದ ನಾನು ಹೇಳಲು ಹೇಗೆ ತಾನೇ ಸಮರ್ಥಳು? ಆದರೂ ನಿಮ್ಮಲ್ಲಿರವ ಅತಿ ಹೆಚ್ಚಿನ ಪ್ರೀತಿಯಿಂದಲೂ ಲೋಕದ ಉಪಕಾರಕ್ಕಾಗಿಯೂ ಹೇಳಿದ್ದೇನೆ. ॥ ೫೩ - ೫೪ ॥

॥ ತೊಂಬತ್ತೆಂಟನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ನವನವತಿತಮೋಽಧ್ಯಾಯಃ ॥ ೯೯ ॥

ಶೇಷ ಉವಾಚ—

ಏವಂ ಮುನಿಸ್ತ್ರಿಯಃ ಶ್ರುತ್ವಾ ಸಾವಿತ್ರ್ಯಾಖ್ಯಾನಮದ್ಭುತಮ್ ।
ನಿಶ್ಚಯಂ ಪರಮಂ ಪ್ರಾಪುಃ ಪ್ರಯಾಗೇ ಫಲಗೌರವಾತ್ ॥ ೧ ॥
ಅತಿತ್ರೈಲೋಕ್ಯಮಾಹಾತ್ಮ್ಯಂ ಜ್ಞಾತ್ವಾಮುಷ್ಮಿನ್ನಜಾದಯಃ ।
ತ್ಯಕ್ತಾಶಾಃ ಸರ್ವಲೋಕೇಷು ಸುಖಂ ತತ್ರೈವ ತಸ್ಥಿರೇ ॥ ೨ ॥
ಏವಂ ಬ್ರಹ್ಮಸುತಾಸ್ತೀರ್ಥಂ ಸರ್ವಶ್ರೇಷ್ಠಂ ನಿರೂಪಿತಮ್ ।
ಯದ್ಭವದ್ಭಿಃ ಪುರಾ ಪೃಷ್ಟಂ ತದ್ಯುಷ್ಮಭ್ಯಂ ಮಯಾದರಾತ್ ॥ ೩ ॥
ಜೀವನ್ಮುಕ್ತಿಮತಾಂ ತತ್ರ ಭವತಾಂ ನ ಪ್ರಯೋಜನಮ್ ।
ತಥಾಪ್ಯಜ್ಞಜನಾರ್ಥಂ ಚ ಪೃಷ್ಟಮುಕ್ತಂ ಮಯಾನಘಾಃ ॥ ೪ ॥
ಜ್ಞಾನಂ ಯೋಗಶ್ಚ ಭಕ್ತಿಶ್ಚ ತ್ರಿವಿಧಂ ಮುಕ್ತಿಸಾಧನಮ್ ।
ಶ್ರುತಿಸ್ಮೃತಿಪುರಾಣೇಷು ನಿರ್ಣೀತಂ ಹಿ ಪುನಃ ಪುನಃ ॥ ೫ ॥
ಜ್ಞಾನಂ ತು ದುರ್ಲಭಂ ಲೋಕೇ ಯೋಗಶ್ಚ ವಿವಿಧಸ್ತಥಾ।
ಭಕ್ತಿಶ್ಚ ನವಧಾ ಬಾಹ್ಯಾ ಆಂತರೈಕವಿಧಾ ಚ ಸಾ ॥ ೬ ॥
ಯಥಾಬ್ಧೌ ಯಾತಿ ಗಂಗೌಘೋಽನವಚ್ಛಿನ್ನೋ ದಿವಾನಿಶಮ್ ।
ತಥಾ ಹರೌ ಮನೋವೃತ್ತಿರಂತರ್ಭಕ್ತಿರಿಯಂ ಮತಾ ॥ ೭ ॥
ಸರ್ವಮೇತದ್ದುರಾಸಾಧ್ಯಂ ಕಲೌ ಮಂದಾತ್ಮನಾಂ ನೃಣಾಮ್ ।
ತೇಷಾಮುದ್ಧರಣಾರ್ಥಾಯ ತೀರ್ಥಮೇತನ್ನಿರೂಪಿತಮ್ ॥ ೮ ॥
ಜ್ಞಾನಂ ಯೋಗೋಽಥವಾ ಭಕ್ತಿರ್ದೃಢಾ ಯಸ್ಯ ಪ್ರಜಾಯತೇ ।
ತೀರ್ಥಾಪೇಕ್ಷಾ ನ ತಸ್ಯಾಸ್ತಿ ಯತ್ರ ಕ್ವಾಪಿ ಸ ತಿಷ್ಠತು ॥ ೯ ॥
ಯೋಗ ಏವ ತ್ರಿಧಾ ಪ್ರೋಕ್ತಃ ಕರ್ಮಭಕ್ತಿವಿದಾತ್ಮಕಃ ।
ಪುನಶ್ಚ ದ್ವಿವಿಧೌ ಪ್ರೋಕ್ತೌ ಸೋ ರಾಜಹಠಭೇದತಃ ॥ ೧೦ ॥

## ॥ ತೊಂಬತ್ತೊಂಬತ್ತನೆಯ ಅಧ್ಯಾಯವು ॥

ಶೇಷದೇವರು ಹೇಳಿದರು—

ಈ ರೀತಿಯಾಗಿ ಮುನಿಸ್ತ್ರೀಯರು ಸಾವಿತ್ರೀದೇವಿಯ ವೃತ್ತಾಂತವನ್ನು ಕೇಳಿ ಫಲಗಳ ಬಾಹುಳ್ಯವಿರುವುದರಿಂದ ಪ್ರಯಾಗದ ವಿಷಯದಲ್ಲಿ ನಿಶ್ಚಯಾತ್ಮಕ ಭಾವನೆಯನ್ನು ಹೊಂದಿದರು. ॥ ೧ ॥ ಮೂರು ಲೋಕಗಳನ್ನು ಮೀರಿಸುವ ಈ ಪ್ರಯಾಗದ ಮಹಾತ್ಮೆಯನ್ನು ತಿಳಿದ ದೇವತೆಗಳು ತಮ್ಮ ತಮ್ಮ ಲೋಕಗಳಲ್ಲಿ ಆಸೆಬಿಟ್ಟವರಾಗಿ ಪ್ರಯಾಗದಲ್ಲಿಯೇ ಸುಖವಾಗಿ ವಾಸಮಾಡಲು ತೊಡಗಿದರು. ॥ ೨ ॥ ಹೇ ಬ್ರಹ್ಮಪುತ್ರರಾದ ಸನಕಾದಿಗಳೇ! ನೀವು ಹಿಂದೆ ಪ್ರಶ್ನಿಸಿದ್ದ ಸರ್ವಶ್ರೇಷ್ಠವಾದ ತೀರ್ಥಕ್ಷೇತ್ರದ ಬಗ್ಗೆ ನನ್ನಿಂದ ಆದರದಿಂದ ನಿರೂಪಿಸಲ್ಪಟ್ಟಿದೆ. ॥ ೩ ॥

ನೀವುಗಳು ಪಾಪರಹಿತರು, ಜೀವನ್ಮುಕ್ತರಾದವರು. ಯಾವಾಗಲೂ ಎಲ್ಲೆಲ್ಲಿಯೂ ಭಗವಂತನನ್ನು ಕಾಣತಕ್ಕವರು. ನಿಮಗೆ ನಾನು ಹೇಳುವುದರಿಂದ ಏನೂ ಪ್ರಯೋಜನವಿಲ್ಲ. ಆದರೂ ಅಜ್ಞರಿಗಾಗಿ ನೀವು ಪ್ರಶ್ನೆಮಾಡಿದಿರಿ. ಅವರಿಗಾಗಿಯೇ ನಾನು ಹೇಳಿದ್ದು ಕೂಡ. ॥ ೪ ॥ ಜ್ಞಾನ, ಯೋಗ ಮತ್ತು ಭಕ್ತಿ ಈ ಮೂರರಿಂದಲೇ ಮುಕ್ತಿಯೆಂದು ಶ್ರುತಿ ಸ್ಮೃತಿ ಪುರಾಣಗಳಲ್ಲಿ ಪುನಃ ಪುನಃ ಹೇಳಲ್ಪಟ್ಟದೆ ಮತ್ತು ನಿಶ್ಚಿತವಾಗಿದೆ. ॥ ೫ ॥ ಜ್ಞಾನವಾದರೋ ಈಗ ಲೋಕದಲ್ಲಿ ದುರ್ಲಭವಾಗಿದೆ. ಯೋಗವಾದರೂ ಅನೇಕ ಪ್ರಕಾರಗಳಲ್ಲಿವೆ. ಇನ್ನು ಬಾಹ್ಯ ಭಕ್ತಿಯು ಒಂಬತ್ತು ವಿಧವಾಗಿದ್ದು ಅಂತರಿಕ ಭಕ್ತಿಯು ಒಂದೇ ಪ್ರಕಾರದ್ದು. ॥ ೬ ॥ ಗಂಗೆಯ ಪ್ರವಾಹವು ಹೇಗೆ ಹಗಲೂ ರಾತ್ರಿಯೂ ಹರಿದು ಒಂದೇ ಸಮನಾಗಿ ಸಮುದ್ರವನ್ನು ಸೇರುತ್ತಿರುವುದೋ ಅದರಂತೆ ಯಾವಾಗಲೂ ಪರಮಾತ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಇಟ್ಟುಕೊಂಡಿರುವುದು ಅಂತರಿಕ ಭಕ್ತಿಯು. ॥ ೭ ॥ ಮಂದಬುದ್ಧಿಯುಳ್ಳ ಕಲಿಯುಗದ ಜನರಿಗೆ ಇದೆಲ್ಲವೂ ಅಸಾಧ್ಯವು. ಅಂಥವರ ಉದ್ಧಾರಕ್ಕಾಗಿಯೇ ಈ ತೀರ್ಥದ ಬಗ್ಗೆ ನಿರೂಪಿಸಿರುವದು. ॥ ೮ ॥ ಜ್ಞಾನವು, ಯೋಗವು ಮತ್ತು ಭಕ್ತಿಯು ಯಾರಲ್ಲಿ ದೃಢವಾಗಿದೆಯೋ ಅವರು ಇರುವಲ್ಲಿಯೇ ಇರಬಹುದು. ತೀರ್ಥಕ್ಷೇತ್ರಗಳಿಗೆ ಹೋಗಬೇಕಿಲ್ಲವು. ॥ ೯ ॥ ಯೋಗವು ಕರ್ಮಯೋಗ, ಭಕ್ತಿಯೋಗ ಮತ್ತು ಜ್ಞಾನ ಯೋಗಗಳೆಂದು ಮೂರು ಪ್ರಕಾರಗಳಲ್ಲಿದ್ದು , ಪುನಃ ಅದರಲ್ಲಿ ರಾಜಯೋಗ ಮತ್ತು ಹಠಯೋಗಗಳೆಂದು ಎರಡು ವಿಧಾನಗಳಿವೆ. ॥ ೧೦ ॥

ಮುನಯ ಊಚುಃ—

ಹಠಯೋಗಂ ವದಾಸ್ಮಾಕಂ ಸರ್ವಯೋಗೋಪಕಾರಕಮ್ ।
ಹಠಾದಾಕೃಷ್ಯತೇ ಚಿತ್ತಂ ಸಾಧಕೈರ್ಯತ್ರ ಚಂಚಲಮ್ ॥ ೧೧ ॥

ಸನಕಾದಿ ಮುನಿಗಳು ಹೇಳಿದರು—

ಶ್ರೀ ಶೇಷದೇವರೇ! ನಮಗೆ ಹಠಯೋಗವನ್ನು ಕುರಿತು ಹೇಳಿರಿ. ಇದರಲ್ಲಿ ಚಂಚಲವಾಗಿರುವ ಮನಸ್ಸನ್ನು ಸಾಧಕನು ಹಠದಿಂದ ತನ್ನ ಆಧೀನ್ಯಕ್ಕೆ ಸೆಳೆದುಕೊಳ್ಳುವುದರಿಂದ ಇದು ಬೇರೆ ಎಲ್ಲ ಯೋಗಗಳಿಗೂ ಉಪಕಾರಿಯಾದುದು. ॥ ೧೧ ॥

ಶೇಷ ಉವಾಚ—

ಯಸ್ಯ ಶ್ರವಣಮಾತ್ರೇಣ ಯೋಗೀ ಪರಿಚಿತಿರ್ಭವೇತ್ ।
ಷಡಂಗಸಹಿತಂ ಚೈನಂ ಹಠಯೋಗಂ ವದಾಮ್ಯಹಮ್ ॥ ೧೨ ॥
ಆಸನಂ ಪ್ರಾಣಯಮನಂ ಪ್ರತ್ಯಾಹಾರಶ್ಚ ಧಾರಣಮ್ ।
ಧ್ಯಾನಂ ಸಮಾಧಿರೇತಾನಿ ಯೋಗಾಂಗಾನಿ ಭವಂತಿ ಷಟ್ ॥ ೧೩ ॥
ಸುರಾಜ್ಯೇ ಧರ್ಮಬಾಹುಲ್ಯೇ ಸುಕ್ಷೇತ್ರೇ ನಿರುಪದ್ರವೇ ।
ಏಕಾಂತೇ ಮಠಿಕಾಮಧ್ಯೇ ಸ್ಥಾತವ್ಯಂ ಹಠಯೋಗಿನಾ ॥ ೧೪ ॥
ಅಲ್ಪದ್ವಾರಂ ಚ ನಿರ್ವಾತಂ ನಾತಿನೀಚೋಚ್ಚಮಾಪನಂ ।
ಯೋಗಾರ್ಹಮೀದೃಶಂ ಸ್ಥಾನಂ ಸಮಾಕಾರಂ ಸಮಂಡಪಮ್ ॥ ೧೫ ॥

ಏವಂ ಕೃತೇ ಮಠೇ ಸ್ಥಿತ್ವಾ ಸರ್ವಚಿಂತಾವಿವರ್ಜಿತಃ ।
ಗುರೂಪದಿಷ್ಟಮಾರ್ಗೇಣ ಯೋಗಮೇವಂ ಸಮಭ್ಯಸೇತ್ ॥ ೧೬ ॥
ಅಲ್ಪಾಹಾರೋ ನಿರಾಹಾರಶ್ಚಾಂಚಲ್ಯಂ ನಿಯಮಕ್ಷಯಃ ।
ಜನಸಂಘಶ್ಚ ಲೌಲ್ಯಂ ಚ ಯೋಗಃ ಷಡ್ಭಿರ್ವಿನಶ್ಯತಿ ॥ ೧೭ ॥
ಅಥಾಸನಾನಿ ವಕ್ಷ್ಯಾಮಿ ಕಥಿತಾನಿ ಮನೀಷಿಭಿಃ ।
ಚತುರಾಶೀತಿಲಕ್ಷಾಣಿ ಯೋಗಸಂಖ್ಯಾಸಮಾನಿ ಚ ॥ ೧೮ ॥
ತಾನಿ ವಕ್ತುಂ ನ ಶಕ್ತೋಽಸ್ತಿ ಕೋಽಪಿ ಯೋಗವಿಚಕ್ಷಣಃ ।
ತೇಷು ಯೋಗೋಪಯುಕ್ತಾನಿ ಚತುರಾಶೀತಿ ನಿಶ್ಚಿತಮ್ ॥ ೧೯ ॥
ಏಕಂ ಸಿದ್ಧಂ ತಥಾ ಪದ್ಮಂ ಸಿಂಹಂ ಭದ್ರಂ ತಥಾ ಮತಂ ।
ಚತ್ವಾರಿ ತೇಷು ಚೋಕ್ತಾನಿ ಸಿದ್ಧಾನಾಂ ಸಿದ್ಧಿದಾನಿ ಚ ॥ ೨೦ ॥
ಮೇಢ್ರಾದುಪರಿವಿನ್ಯಸ್ಯ ವಾಮಗುಲ್ಫಂ ತಥೋಪರಿ ।
ಗುಲ್ಫಾಂತರಂ ವಿನಿಕ್ಷಿಪ್ಯ ಸಿದ್ಧಾಸನಮಿದಂ ಭವೇತ್ ॥ ೨೧ ॥
ಇಂದ್ರಿಯಾಣಿ ಚ ಸಂಯಮ್ಯ ಭ್ರುವೋರ್ಮಧ್ಯೇ ದೃಶಂ ನ್ಯಸೇತ್ ।
ಸಿದ್ಧಾನಾಮಾಸನಂ ಪ್ರೋಕ್ತಂ ಮೋಕ್ಷದ್ವಾರವಿಭೇದಕೃತ್ ॥ ೨೨ ॥
ಮುಕ್ತಾಸನಂ ವದಂತ್ಯೇಕೇ ಗುಪ್ತಾಸನಮಥಾಪರಂ ।
ಏವಂ ನಾಮವಿಭೇದೇನ ಪ್ರವದಂತಿ ಮನೀಷಿಣಃ ॥ ೨೩ ॥
ವಾಮೋರೌ ದಕ್ಷಿಣಂ ಪಾದಂ ದಕ್ಷಿಣೋರೌ ತು ವಾಮಕಂ ।
ಚಿಬುಕಂ ಹೃದಯೇ ನ್ಯಸ್ಯ ನಾಸಾಗ್ರಮವಲೋಕಯೇತ್ ॥ ೨೪ ॥
ಊರ್ವೋರ್ಮಧ್ಯೇ ತಥೋತ್ತಾನೌ ಪಾಣೀ ಸಂಹೃತ್ಯ ಧಾರಯೇತ್ ।
ಏತತ್ಪದ್ಮಾಸನಂ ನಾಮ ಸರ್ವವ್ಯಾಧಿವಿಕಾರಹೃತ್ ॥ ೨೫ ॥
ದ್ವೌ ಗುಲ್ಫೌ ವೃಷಣಸ್ಯಾಧಃ ಸೀವಿನ್ಯಾಃ ಪಾರ್ಶ್ವಯೋಃ ಕ್ಷಿಪೇತ್ ।
ದಕ್ಷಿಣೇ ಸವ್ಯಗುಲ್ಫಂ ಚ ಸವ್ಯೇ ದಕ್ಷಿಣಮೇವಚ ॥ ೨೬ ॥
ಜಾನ್ವೋರ್ಹಸ್ತೌ ಚ ಸಂಸ್ಥಾಪ್ಯ ಅಂಗುಲೀಃ ಸಂಪ್ರಸಾರ್ಯ ಚ ।
ವ್ಯಾಘ್ರವಕ್ತ್ರೋ ನಿರೀಕ್ಷೇತ ನಾಸಾಗ್ರಂ ಸುಸಮಾಹಿತಃ ॥ ೨೭ ॥
ಏತತ್ಸಿಂಹಾಸನಂ ಪ್ರೋಕ್ತಂ ಸಿದ್ಧೈರ್ಲಕ್ಷಣಕೋವಿದೈಃ ।
ಬಂಧತ್ರಯಸ್ಯ ಸಂಧಾನಂ ಕುರುತೇ ಚಾಸನೋತ್ತಮಂ ॥ ೨೮ ॥
ಗುಲ್ಫೌ ದ್ವೌ ವೃಷಣಸ್ಯಾಧಃ ಸೇವಿನ್ಯಾಃ ಪಾರ್ಶ್ವಯೋಃ ಕ್ಷಿಪೇತ್ ।
ಪಾರ್ಶ್ವೌ ಪಾದೌ ಚ ಪಾಣಿಭ್ಯಾಂ ದೃಢಂ ಬಧ್ವಾ ಸುನಿಶ್ಚಲಮ್ ॥ ೨೯ ॥
ಭದ್ರಾಸನಂ ವದಂತ್ಯೇತತ್ ಸರ್ವವ್ಯಾಧಿವಿನಾಶನಮ್ ।
ಏವಮಾಸನಮಭ್ಯಸ್ಯ ಪ್ರಾಣಾಯಾಮಂ ಸಮಭ್ಯಸೇತ್ ॥ ೩೦ ॥

ಇಡಯಾ ಪೂರಕಂ ಕುರ್ಯಾತ್ ಕುಂಭಕಂ ತು ಸುಷುಮ್ಣಯಾ ।
ತ್ಯಜೇತ್ಪಿಂಗಲಯಾ ವಾಯುಮಧಿಕೋತ್ತರಮಭ್ಯಸೇತ್ ॥ ೩೧ ॥
ಆದ್ಯೋ ಷೋಡಶಸಂಖ್ಯಾ ಸ್ಯಾತ್ ಚತುಃಷಷ್ಟಿ ಚ ಕುಂಭಕೇ ।
ದ್ವಾತ್ರಿಂಶದ್ರೇಚಕೇ ಕಾರ್ಯಾ ಯಥಾಭ್ಯಾಸಂ ತತೋ ಭವೇತ್ ॥ ೩೨ ॥
ಅಧಮೇ ಜಾಯತೇ ಸ್ವೇದೋ ಮಧ್ಯಮೇ ಕಂಪಸಂಭವಃ ।
ಉತ್ತಿಷ್ಠಂತ್ಯುತ್ತಮೇ ಪ್ರಾಣಾ ಬದ್ಧೇ ಪದ್ಮಾಸನೇ ಮುಹುಃ ॥ ೩೩ ॥
ಪ್ರಥಮಾಭ್ಯಾಸಕಾಲೇ ಚ ಶಸ್ತಂ ಕ್ಷೀರಾಜ್ಯಭೋಜನಂ ।
ತತೋಽಭ್ಯಾಸೇ ದೃಢೀಭೂತೇ ನ ತಾದೃಙ್ನಿಯಮಾಗ್ರಹಃ ॥ ೩೪ ॥
ಯಥಾ ಸಿಂಹೋ ಗಜೋ ವ್ಯಾಘ್ರೋ ಭವೇದ್ವಶ್ಯಃ ಶನೈಃ ಶನೈಃ ।
ತಥೈವ ಸೇವಿತೋ ವಾಯುರನ್ಯಥಾ ಹಂತಿ ಸಾಧಕಮ್ ॥ ೩೫ ॥
ಪ್ರಾಣಾಯಾಮೇನ ಯುಕ್ತೇನ ಸರ್ವರೋಗಕ್ಷಯೋ ಭವೇತ್ ।
ಅಯುಕ್ತಾಭ್ಯಾಸಯೋಗೇನ ಸರ್ವರೋಗಸಮುದ್ಭವಃ ॥ ೩೬ ॥
ಹಿಕ್ಕಾ ಶ್ವಾಸಶ್ಚ ಕಾಸಶ್ಚ ಶಿರಃ ಕರ್ಣಾಕ್ಷಿವೇದನಾಃ ।
ಭವಂತಿ ವಿವಿಧಾ ದೋಷಾಃ ಪವನಸ್ಯ ವ್ಯತಿಕ್ರಮಾತ್ ॥ ೩೭ ॥
ಯುಕ್ತಂ ಯುಕ್ತಂ ತ್ಯಜೇದ್ವಾಯುಂ ಯುಕ್ತಂ ಯುಕ್ತಂ ಚ ಪೂರಯೇತ್ ।
ಯುಕ್ತಂ ಯುಕ್ತಂ ಚ ಬಧ್ನೀಯಾದೇವಂ ಸಿದ್ಧಿಮವಾಪ್ನುಯಾತ್ ॥ ೩೮ ॥
ಯದಾ ನಾಡೀ ವಿಶುದ್ಧಾ ಸ್ಯಾತ್ತದಾ ಚಿತ್ತಂ ನಿರಾಕುಲಂ ।
ಕಾಯಸ್ಯ ಕೃಶತಾ ಕಾಂತಿಸ್ತದಾ ಭವತಿ ನಿಶ್ಚಿತಮ್ ॥ ೩೯ ॥
ಯಥೇಷ್ಟಂ ಧಾರಣಂ ವಾಯೋರನಲಸ್ಯ ಪ್ರದೀಪನಂ ।
ನಾದಾಭಿವ್ಯಕ್ತಿರಾರೋಗ್ಯಂ ಜಾಯತೇ ನಾಡಿಶೋಧನಾತ್ ॥ ೪೦ ॥
ಏವಂ ನಾಡೀಃ ಶೋಧಯಿತ್ವಾ ಮಹಾಬಂಧಂ ಸಮಭ್ಯಸೇತ್ ।
ಮಹಾಬಂಧೇ ಸ್ಥಿತೋ ಯೋಗೀ ಕುರ್ಯಾತ್ಪ್ರಾಣಸ್ಯ ಸಂಯಮಮ್ ॥ ೪೧ ॥
ವಾಯೋರ್ಗತಿಂ ಸಮಾವೃತ್ಯ ಯೋಗಮೇವಂ ಸಮಭ್ಯಸೇತ್ ।
ಸಮಹಸ್ತಯುಗೋ ಭೂಮೌ ಸ್ಥಿತಃ ಸಂರೋಧಯನ್ಶನೈಃ ॥ ೪೨ ॥
ಪುರದ್ವಯಂ ಸಮಾಕೃಶ್ಯ ವಾಯುಂ ಸಂರೋಧಯನ್ಯದಾ ।
ಸೋಮಸೂರ್ಯಾಗ್ನಿ ಸಂಯೋಗಾಜ್ಜಾಯತೇ ದೃಢತಾ ತದಾ ॥ ೪೩ ॥
ಮೃತಾವಸ್ಥಾ ಸಮುತ್ಪನ್ನಾ ತತೋ ಮೃತ್ಯುಭಯಂ ನಹಿ ।
ಮಹಾಬಂಧೋಯಮಭ್ಯಾಸಾನ್ಮಹಾಸಿದ್ಧಿಪ್ರದಾಯಕಃ ॥ ೪೪ ॥
ಏವಂ ಬಂಧಂ ಸಮಭ್ಯಸ್ಯ ತತೋ ಮುದ್ರಾಂ ಚ ಸೇವಯೇತ್ ।
ಯದಾ ಭ್ರೂಮಧ್ಯಸಂಸ್ಪೃಷ್ಟಾ ಮುದ್ರಾ ಭವತಿ ಖೇಚರೀ ॥ ೪೫ ॥

ಚಿತ್ತಂ ಚರತಿ ಖೇ ಯಸ್ಮಾನ್ಮುದ್ರಾ ಚರತಿ ಖೇಗತಾ ।
ತೇನೈವ ಖೇಚರೀ ಮುದ್ರಾ ಸರ್ವಸಿದ್ಧೈರ್ನಮಸ್ಕೃತಾ ॥ ೪೬ ॥
ಖೇಚರ್ಯಾ ಮುದ್ರಯಾ ಯೇನ ಮುದ್ರಿತಂ ಸಚರಾಚರಂ ।
ನ ತಸ್ಯ ಕ್ಷರತೇ ಬಿಂದುಃ ಕಾಮಿನ್ಯಾಶ್ಲೇಷಿತಸ್ಯ ಚ ॥ ೪೭ ॥
ಮಾಸಾರ್ಧೇನ ಜಯೇನ್ಮೃತ್ಯುಂ ಜ್ಞಾನಸಂಧಾನಮುದ್ರಯಾ ।
ಏವಂ ಯೋಗಃ ಪಿಂಡಸಾಧ್ಯಂ ಪಿಂಡೋ ಬ್ರಹ್ಮಾಂಡಸಂಭವಃ ॥ ೪೮ ॥
ಉಭಯೋರ್ಯೋಗತಃ ಪ್ರೋಕ್ತಃ ಸರ್ವೇಭ್ಯೋ ಹ್ಯುತ್ತಮೋತ್ತಮಃ ।
ಅತೋ ನೈವ ಶ್ರಮಫಲೋ ಹಟಯೋಗೀ ವಿಧೀಯತೇ ॥ ೪೯ ॥
ಆಚಾರ್ಯಾಣಾಂ ತು ಕೇಷಾಂಚಿದೇತತ್ಕರ್ಮ ಚ ಸಂಮತಂ ।
ಶನೈರಭ್ಯಾಸಸಾಧ್ಯತ್ವಾದಸಾಧ್ಯಂ ಸಾಧ್ಯಮೇವ ಚ ॥ ೫೦ ॥
ವಿದ್ಯಮಾನೇ ಪ್ರಯಾಗೇऽಸ್ಮಿನ್ ತೀರ್ಥರಾಜೇ ನಿರಂಕುಶೇ ।
ಸರ್ವಸಿದ್ಧಿಪ್ರದೇ ಪುಂಸಾಂ ದುರ್ಲಭಂ ಸುಲಭಂ ಭವೇತ್ ॥ ೫೧ ॥
ತ್ರಿವೇಣೀಸಂಗಮೋ ಯತ್ರ ತೀರ್ಥರಾಜಃ ಸ ಉಚ್ಯತೇ ।
ತಸ್ಮಿಂಸ್ತೀರ್ಥವರೇ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೫೨ ॥
ಧೀರಾ ಅನೇನ ಮಾರ್ಗೇಣ ಯೇ ತನುಂ ವಿಸೃಜಂತಿ ವೈ ।
ಅಮೃತತ್ವಂ ಭಜಂತ್ಯೇತೇ ಯೋಗಶಾಸ್ತ್ರಬಲಾದ್ಧ್ರುವಮ್ ॥ ೫೩ ॥
ಯೇಷಾಂ ನ ಪಿಂಡಜಂ ಜ್ಞಾನಂ ನ ವಾ ಬ್ರಹ್ಮಾಂಡಸಂಭವಮ್ ।
ತೇಷಾಂ ಪ್ರಯಾಗೇ ಮರಣಂ ಯೋಗಸಿದ್ಧಿ ಫಲಪ್ರದಮ್ ॥ ೫೪ ॥
ಅತಃ ಕಲೌ ಸಮಸ್ತಾನಾಂ ಸ್ವರ್ಗಮೋಕ್ಷಪ್ರದಂ ಪರಂ ।
ಪ್ರಯಾಗಾದಪರಂ ನಾಸ್ತಿ ನಾಸ್ತಿ ಬ್ರಹ್ಮಾಂಡಮಂಡಪೇ ॥ ೫೫ ॥

॥ ಇತಿ ನವನವತಿತಮೋऽಧ್ಯಾಯಃ ॥

ಶ್ರೀ ಶೇಷದೇವರು ಹೇಳಿದರು—

ಷಡಂಗಸಹಿತವಾದ ಹಠಯೋಗವನ್ನು ಕುರಿತು ಹೇಳುವೆನು. ಇದನ್ನು ಕೇಳುವುದರಿಂದ ಯೋಗದಲ್ಲಿ ಪರಿಚಯವು ಹುಟ್ಟುವುದು. ॥ ೧೨ ॥ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ ಎಂಬ ಈ ಆರೂ ಯೋಗಾಂಗಗಳೆಂದು ಕರೆಯಲ್ಪಟ್ಟಿವೆ. ॥ ೧೩ ॥ ಧರ್ಮಪ್ರಚುರವಾದ ಒಳ್ಳೆಯ ರಾಜ್ಯದಲ್ಲಿ ಉಪದ್ರವರಹಿತವಾದ ಉತ್ತಮ ಜಾಗದಲ್ಲಿ, ಸಣ್ಣ ಕುಟೀರದಲ್ಲಿ ಹಠಯೋಗಿಯು ಇರಬೇಕು. ॥ ೧೪ ॥ ಈ ಕುಟೀರದ ಬಾಗಿಲು ಹೆಚ್ಚು ಎತ್ತರವಿರಬಾರದು. ಒಳಗೆ ಹೆಚ್ಚು ಗಾಳಿ ಬೀಸಕೂಡದು. ಹೆಚ್ಚು ಅಥವಾ ಕಮ್ಮಿ ಎತ್ತರವಿರದೆ ಸುತ್ತಲೂ ಜಾಗ ಬಿಟ್ಟಿರಬೇಕು. ಇದು ಮಂಟಪದ ಆಕಾರವನ್ನು ಹೊಂದಿದ್ದು ಉದ್ದ, ಅಗಲ ಮತ್ತು ಎತ್ತರ ಒಂದೇ ಸಮನಾಗಿರಬೇಕು. ॥ ೧೫ ॥ ಈ ರೀತಿಯಾಗಿ ನಿರ್ಮಾಣವಾಗಿರುವ ಕುಟೀರದಲ್ಲಿ ಯಾವ ಯೋಚನೆಯೂ ಇಲ್ಲದೆ ಸಾಧಕನು ಕುಳಿತುಕೊಂಡು ಗುರುವಿನಿಂದ ಉಪದಿಷ್ಟವಾದ

ಮಾರ್ಗದಲ್ಲಿ ಯೋಗವನ್ನು ಅಭ್ಯಾಸ ಮಾಡಬೇಕು. ॥ ೧೬ ॥ ಅಲ್ಪಾಹಾರವು, ನಿರಾಹಾರವು, ಚಂಚಲತೆ, ನಿಯಮಭಂಗ, ಜನರ ಗುಂಪು ಮತ್ತು ಆಸೆ ಈ ಆರೂ ಯೋಗವನ್ನು ಕೆಡಿಸುತ್ತವೆ. ॥ ೧೭ ॥ ಇನ್ನು ತಿಳಿದವರಿಂದ ಹೇಳಲ್ಪಟ್ಟಿರುವ ಆಸನಗಳನ್ನು ಕುರಿತು ಹೇಳುವೆನು. ಆಸನಗಳು ಎಂಭತ್ತನಾಲ್ಕು ಲಕ್ಷ ಸಂಖ್ಯೆಯಷ್ಟಿವೆ. ಅಥವಾ ಯೋಗದ ಸಂಖ್ಯೆಯು ಎಷ್ಟಿದೆಯೋ ಅಷ್ಟು ಸಂಖ್ಯೆಯ ಆಸನಗಳೂ ಇವೆ. ॥ ೧೮ ॥ ಅವುಗಳನ್ನೆಲ್ಲಾ ನಿರೂಪಿಸಲು ಯೋಗಶಾಸ್ತ್ರದಲ್ಲಿ ನಿಷ್ಣಾತರಾದವರಿಗೂ ಸಾಧ್ಯವಿಲ್ಲವು. ಆದರೂ ಯೋಗಕ್ಕೆ ಉಪಯುಕ್ತವಾಗಿರುವ ಆಸನಗಳು ಎಂಬತ್ತನಾಲ್ಕೇ ಎಂದು ನಿಶ್ಚಿತವಾಗಿದೆ. ॥ ೧೯ ॥ ಯೋಗಗಳಲ್ಲಿ ಸಿದ್ಧಿಯನ್ನು ಕೊಡತಕ್ಕ ನಾಲ್ಕು ಬಗೆಯ ಮುಖ್ಯವಾದ ಆಸನಗಳೆಂದರೆ ಸಿದ್ಧ, ಪದ್ಮ, ಸಿಂಹ ಮತ್ತು ಭದ್ರ ಎಂಬುದು . ॥ ೨೦ ॥ ಲಿಂಗದ ಮೇಲೆ ಎಡ ಹಿಮ್ಮಡಿಯನ್ನು ಇಟ್ಟು ಅದರ ಮೇಲೆ ಬಲ ಹಿಮ್ಮಡಿಯನ್ನಿಟ್ಟು ಕುಳಿತುಕೊಳ್ಳುವುದು ''ಸಿದ್ಧಾಸನ''ವೆಂದು ಕರೆಯಲ್ಪಡುತ್ತದೆ. ॥ ೨೧ ॥ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಹುಬ್ಬುಗಳ ಮಧ್ಯದಲ್ಲಿ ದೃಷ್ಟಿಯನ್ನಿರಿಸಬೇಕು. ಈ ಸಿದ್ಧಾಸನದಿಂದ ಮೋಕ್ಷದ ಬಾಗಿಲು ತೆರವಾಗುತ್ತದೆ. ಕೆಲವರು ಇದನ್ನು ಮುಕ್ತಾಸನವೆಂದೂ ಕರೆಯುತ್ತಾರೆ. ಕೆಲವರು ಇದನ್ನು ಗುಲ್ಫಾಸನವೆಂದೂ ಕರೆಯುತ್ತಾರೆ. ಈ ರೀತಿಯಾಗಿ ಬೇರೆ ಬೇರೆ ಹೆಸರುಗಳಿಂದ ತಿಳಿದವರು ಈ ಆಸನವನ್ನು ಕರೆಯುತ್ತಾರೆ. ॥ ೨೨ - ೨೩ ॥ ಎಡತೊಡೆಯ ಮೇಲೆ ಬಲಪಾದವನ್ನೂ ಮತ್ತು ಬಲ ತೊಡೆಯ ಮೇಲೆ ಎಡಪಾದವನ್ನೂ ಇಟ್ಟು, ಗಲ್ಲವನ್ನು ಎದೆ ಮುಟ್ಟುವಂತೆ ಇಟ್ಟು, ಮೂಗಿನ ತುದಿಯನ್ನು ನೋಡಬೇಕು. ॥ ೨೪ ॥ ಎರಡು ತೊಡೆಗಳ ಮಧ್ಯೆ ಎರಡು ಕೈಗಳನ್ನು ಸೇರಿಸಿ ಅಂಗತ್ತಾಗಿ ಮೇಲ್ಮುಖವಾಗಿ ಹಸ್ತಗಳನ್ನಿಡಬೇಕು. ಈ ಆಸನಕ್ಕೆ ''ಪದ್ಮಾಸನ''ವೆಂದು ಕರೆಯುತ್ತಾರೆ. ಇದು ಎಲ್ಲ ರೋಗಗಳನ್ನು ನಿವಾರಿಸುವ ಆಸನವು. ॥ ೨೫ ॥ ಎರಡು ಕಾಲ್ಗಂಟುಗಳನ್ನೂ ವೃಷಣದ ಕೆಳಗೆ ಒಂದರ ಪಕ್ಕದಲ್ಲಿ ಒಂದರಂತೆ ಪಕ್ಕಗಳಲ್ಲಿಡಬೇಕು. ಹೀಗೆ ಇಡುವಾಗ ಲಿಂಗದ ಬಲಪಾರ್ಶ್ವಕ್ಕೆ ಎಡ ಕಾಲ್ಗಂಟನ್ನೂ ಮತ್ತು ಎಡ ಪಾರ್ಶ್ವಕ್ಕೆ ಬಲ ಕಾಲ್ಗಂಟನ್ನೂ ಇಡಬೇಕು. ॥ ೨೬ ॥ ಮೊಣಕಾಲುಗಳ ಮೇಲೆ ಕೈಗಳನ್ನೂ ಇಟ್ಟು ಬೆರಳುಗಳನ್ನು ಹರಡಬೇಕು ಮತ್ತು ಮನಸ್ಸನ್ನು ವಶದಲ್ಲಿಟ್ಟುಕೊಂಡು ಹುಲಿಯಂತೆ ಬಾಯಿಯುಳ್ಳವವಾಗಿದ್ದು ಮೂಗಿನ ತುದಿಯಲ್ಲಿ ದೃಷ್ಟಿಯನ್ನಿಡಬೇಕು. ॥ ೨೭ ॥ ಲಕ್ಷಣಶಾಸ್ತ್ರದಲ್ಲಿ ಪರಿಣತರಾದವರು ಈ ಆಸನವನ್ನು ಸಿಂಹಾಸನವೆಂದು ಕರೆಯುತ್ತಾರೆ. ॥ ೨೮ ॥ ಕಾಲ್ಗಂಟುಗಳೆರಡನ್ನೂ ಅಂಡಕೋಶಗಳ ಕೆಳಗಿನಿಂದ ಲಿಂಗದ ಪಕ್ಕಗಳಲ್ಲಿ ಇರಿಸಿ ಎರಡು ಪಕ್ಕೆಗಳಲ್ಲಿ ಪಾದಗಳನ್ನು ಬಿಗಿಯಾಗಿ ಕೈಗಳಿಂದ ಕಟ್ಟಿಹಾಕಬೇಕು. ॥ ೨೯ ॥ ಇದನ್ನೇ ''ಭದ್ರಾಸನ''ವೆಂದು ಕರೆಯುತ್ತಾರೆ. ಇದು ಎಲ್ಲ ರೋಗಗಳ ನಿವಾರಕವು. ಈ ರೀತಿಯಾಗಿ ಆಸನಗಳನ್ನು ಅಭ್ಯಾಸ ಮಾಡಿ ನಂತರ ಪ್ರಾಣಾಯಾಮವನ್ನು ಅಭ್ಯಾಸ ಮಾಡಬೇಕು. ॥ ೩೦ ॥ ಪೂರಕವನ್ನು ಚಂದ್ರನಾಡಿಯ ಮೂಲಕವೂ, ಕುಂಭಕವನ್ನು ಸುಷುಮ್ನಾನಾಡಿಯಿಂದಲೂ ಮತ್ತು ರೇಚಕವನ್ನು ಪಿಂಗಳಾ ನಾಡಿಯ ಮೂಲಕವೂ ಮಾಡಬೇಕು. ॥ ೩೧ ॥ ಹದಿನಾರು ಮಾತ್ರಾ ಜಪಿಸುವ ಕಾಲದಷ್ಟು ಪೂರಕವನ್ನೂ, ಅರವತ್ತುನಾಲ್ಕು ಮಾತ್ರಾ ಕಾಲದಷ್ಟು ಕುಂಭಕವನ್ನೂ ಮತ್ತು ಮೂವತ್ತೆರಡು ಮಾತ್ರ ಕಾಲದಷ್ಟು ರೇಚಕವನ್ನೂ ಮಾಡಬೇಕು. ಸತತವಾದ ಅಭ್ಯಾಸದಿಂದ ಇದನ್ನು ಸಾಧಿಸಬೇಕು. (ಶರೀರದಲ್ಲಿ ಪ್ರಾಣವಾಯುವು ಇರುವವರೆಗೆ ಪ್ರಾಣಿಯ ಜೀವನವಿರುವುದು. ಇದು ಇಲ್ಲದಿರುವುದೇ ಮರಣ. ಪ್ರಾಣವಾಯುವನ್ನು ದೇಹದಲ್ಲಿ ಬಂಧಿಸಿ ನಿಲ್ಲಿಸಿಕೊಂಡಿದ್ದರೆ ಮರಣಕಾಲವನ್ನು ಮುಂದಕ್ಕೆ ದಬ್ಬಬಹುದು. ಆದ್ದರಿಂದ ಪ್ರಾಣವಾಯುವನ್ನು

ಶ್ವಾಸೋಚ್ಛ್ವಾಸಗಳಿಂದ ನಿರೋಧಿಸಿ ಪ್ರಾಣವಾಯುವನ್ನು ಸಾಧ್ಯವಾದಷ್ಟು ಮಟ್ಟಿಗೆ ನಿರೋಧಿಸಿ ಇಟ್ಟುಕೊಳ್ಳುವುದೇ ಪ್ರಾಣಾಯಾಮ. ಈ ಸಾಧನೆಯು ಅಷ್ಟಾಂಗ ಯೋಗಗಳಲ್ಲಿರುವ ಒಂದು ಅಂಗ. ದೇಹದಲ್ಲಿ ಜೀವರಸವನ್ನು ಒಯ್ದು ದೇಹದ ಸಕಲ ಅಂಗಾಂಗಗಳಿಗೂ ಹಂಚುವ ನಾಳಗಳಂತಿರುವುವುಗಳೇ ''ನಾಡಿಗಳು''. ಇವು ಏಳುನೂರು ಸಂಖ್ಯೆಗಳಲ್ಲಿವೆ. ಇವುಗಳಿಂದ ಕೈಕಾಲು ಮುಂತಾದುವುಗಳ ವ್ಯಾಪಾರಗಳು ನಡೆಯುತ್ತವೆ. ಈ ಎಲ್ಲ ನಾಡಿಗಳೂ ನಾಭಿಯ ಮೂಲಕ ಮೇಲಕ್ಕೂ, ಕೆಳಕ್ಕೂ ಮತ್ತು ಪಾರ್ಶ್ವಗಳಿಗೂ ಹರಡಿ ಕೆಲಸಮಾಡುತ್ತವೆ. ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನವೆಂಬ ಐದು ಪ್ರಾಣಗಳೂ ನಾಭಿಯಲ್ಲಿ ಸೇರಿಕೊಂಡು ನಾಭಿಯಿಂದ ಕೆಳಕ್ಕೂ ಮೇಲಕ್ಕೂ ಮತ್ತು ದೇಹದ ಪಾರ್ಶ್ವಗಳಲ್ಲಿಯೂ ಕೆಲಸಮಾಡುತ್ತವೆ. ಇದರಿಂದಲೇ ದೇಹದ ವ್ಯಾಪಾರವು ನಡೆಯುವುದು. ಈ ನಾಡಿಗಳಲ್ಲಿ ಮೂಲ ನಾಡಿಗಳು ನಲವತ್ತು. ವಾತ, ಪಿತ್ತ, ಕಫ ಮತ್ತು ರಕ್ತ ಮುಂತಾದ ಒಂದೊಂದು ಧಾತುಗಳು ಹತ್ತತ್ತು ನಾಡಿಗಳಲ್ಲಿ ಪ್ರವಹಿಸುತ್ತವೆ. ಪ್ರಾಣಾಯಾಮಕ್ಕೆ ಇಡಾ (ಚಂದ್ರನಾಡಿ)ನಾಡಿ, ಕುಂಭಕನಾಡಿ ಮತ್ತು ಪಿಂಗಲನಾಡಿಗಳು ಮುಖ್ಯವಾದುವು. ಈ ಪ್ರಾಣಾಯಾಮವನ್ನು ಮಾಡುವಾಗ ಮನಸ್ಸನ್ನು ಓಂಕಾರಾತ್ಮಕ ಶ್ರೀಮನ್ನಾರಾಯಣ ಅಥವಾ ಸವಿತೃನಾಮಕ ಗಾಯತ್ರಿಯ ಮುಖ್ಯ ದೇವತೆಯಾದ ಶ್ರೀ ಲಕ್ಷ್ಮೀನಾರಾಯಣನಲ್ಲಿ ಕೇಂದ್ರೀಕರಿಸಿ ಧ್ಯಾನಿಸುತ್ತಾ ಮಾಡಿದರೆ ಸಾಧನೆಯಾಗುವುದೆಂದೂ, ಇಲ್ಲದಿದ್ದರೆ ಖಾಲೀ ಅಂಗಸಾಧನೆಯಾಗುವುದೆಂದೂ ತಿಳಿಯುವುದು ಬಹು ಮುಖ್ಯವಾದ ಮೋಕ್ಷೋಪಯೋಗೀ ಅಂಗವು. ಮೂಲ ಮಂತ್ರವಾದ ಅಷ್ಟಾಕ್ಷರ ಮಂತ್ರವನ್ನಾಗಲಿ, ಅಥವಾ ''ಓಂ'' ಎಂಬ ಪ್ರಣವ ಮಂತ್ರವನ್ನಾಗಲಿ, ಮೂವತ್ತೆರಡು ಬಾರಿ ಜಪಿಸುತ್ತಾ ಅಥವಾ ಗಾಯತ್ರೀ ಮಂತ್ರವನ್ನಾಗಲಿ ಮನನಪೂರ್ವಕವಾಗಿ ಜಪಿಸುತ್ತಾ ಪ್ರಾಣಾಯಾಮವನ್ನು ಮಾಡಬೇಕು. ಮೇಲೆ ಉಕ್ತವಾಗಿರುವ ನಾಲ್ಕರಲ್ಲಿ ಯಾವುದಾದರೊಂದು ಆಸನವನ್ನವಲಂಬಿಸಿ ಭಗವಚ್ಚಿಂತನೆ ಮಾಡುತ್ತಾ ಶ್ವಾಸೋಚ್ಛ್ವಾಸವನ್ನು ಈ ಕೆಳಗೆ ಕಂಡಂತೆ ನಿರೋಧಿಸಬೇಕು. ಪ್ರಣವಮಂತ್ರ ಅಥವಾ ಗಾಯತ್ರೀಯನ್ನೂ ಹದಿನಾರು ಸಲ ಉಚ್ಚರಿಸಿ ಉಸಿರನ್ನು ಮೂಗಿನ ಎಡಹೊಳ್ಳೆಯಲ್ಲಿನ ಇಡಾ ನಾಡಿ ಮೂಲಕ ತೆಗೆದುಕೊಳ್ಳಬೇಕು. ಇದಕ್ಕೆ ''ಪೂರಕ''ವೆಂದು ಹೆಸರು. ನಂತರ ಸುಷುಮ್ನಾನಾಡಿಯಿಂದ ಆ ಗಾಳಿಯನ್ನು ಶ್ವಾಸಕೋಶದಲ್ಲಿ ತುಂಬಿ ಇಟ್ಟುಕೊಂಡು ಅರವತ್ತನಾಲ್ಕು ಸಲ (೬೪) ಅದೇ ಜಪವನ್ನು ಮಾಡಬೇಕು. ಇದಕ್ಕೆ ''ಕುಂಭಕ''ವೆಂದು ಹೆಸರು. ಅನಂತರ ''ಪಿಂಗಲಾ'' ನಾಡಿಯ ಮೂಲಕ ಶ್ವಾಸಕೋಶದಲ್ಲಿ ತುಂಬಿರುವ ಗಾಳಿಯನ್ನು ಬಲಮೂಗಿನ ಹೊಳ್ಳೆಯ ಮೂಲಕ ಬಿಡಬೇಕು. ಇದಕ್ಕೆ ''ರೇಚಕ''ವೆಂದು ಹೆಸರು. ಮೇಲೆ ಹೇಳಿದ ಪೂರಕ, ಕುಂಭಕ ಮತ್ತು ರೇಚಕಗಳನ್ನು ಬಲಮೂಗಿನ ಹೊಳ್ಳೆಗಳಿಂದ ಅದೇ ರೀತಿ ಜಪಗಳನ್ನು ಮಾಡುತ್ತಾ ಶ್ವಾಸಕೋಶದೊಳಕ್ಕೆ ತುಂಬಿ ಕೊನೆಗೆ ಎಡಮೂಗಿನ ಹೊಳ್ಳೆಯ ಮೂಲಕ ಬಿಡಬೇಕು. ಇವಿಷ್ಟನ್ನೂ ಮಾಡಿದರೆ ಒಂದು ಬಾರಿಯ ಪ್ರಾಣಾಯಾಮದ ಅಂಗವಾಗುತ್ತದೆ. ಪೂರಕ ರೇಚಕಗಳನ್ನು ಮಾಡುವಾಗ ಬಲ ಮತ್ತು ಎಡ ಹೊಳ್ಳೆಗಳನ್ನು ಕ್ರಮವಾಗಿ ಬೆರಳುಗಳಿಂದ ಮುಚ್ಚಿಕೊಳ್ಳಬೇಕು. ಈ ರೀತಿ ಮೂರು ಬಾರಿಯಾದರೂ ಮಾಡಿ ಪ್ರಾಣಾಯಾಮದ ಒಂದು ಮಂಡಳವನ್ನು ಪೂರೈಸಬೇಕು. ಈ ರೀತಿಯಾಗಿ ಮಾಡಿ ಅಭ್ಯಾಸ ಮಾಡಿಕೊಂಡು ಕ್ರಮ ಕ್ರಮವಾಗಿ ಹೆಚ್ಚು ಸಂಖ್ಯಾ ಪ್ರಾಣಯಾಮಗಳನ್ನು ಮಾಡಿದ್ದೇ ಆದರೆ ಅದು ಸರ್ವರೋಗ ನಿವಾರಕ, ಆಯುಷ್ಯಾಭಿವೃದ್ಧಿ ಕಾರಕ ಮತ್ತು ಮೋಕ್ಷದಾಯಕವು—ಶಬ್ದಾರ್ಥ ಕೌಸ್ತುಭ) ॥ ೩೨ ॥ ಪ್ರಾಣಾಯಾಮವು

ಕಮ್ಮಿಯಾದರೆ ಶರೀರವು ಬೆವರುವುದು, ಮಧ್ಯಮವಾದರೆ ಮೈನಡುಕವುಂಟಾಗುವುದು. ಉತ್ತಮ ದರ್ಜೆಯ ಪದ್ಮಾಸನದಲ್ಲಿ ಕುಳಿತು ಪುನಃ ಪುನಃ ಪ್ರಾಣಾಯಾಮವನ್ನು ಮಾಡಿದರೆ ಪ್ರಾಣವು ಮೇಲೇಳುವುದು. ॥ ೩೩ ॥ ಈ ಪ್ರಾಣಾಯಾಮದ ಪ್ರಾರಂಭದಲ್ಲಿ ಹಾಲು ಅನ್ನವನ್ನು ಭೋಜನ ಮಾಡುವುದು ಪ್ರಶಸ್ತವಾದುದು. ಅಭ್ಯಾಸವು ದೃಢವಾದ ಮೇಲೆ ಆಹಾರದ ನಿಯಮವೇನೂ ಅನ್ವಯಿಸುವುದಿಲ್ಲ. ॥ ೩೪ ॥ ಹೇಗೆ ಆನೆಯು, ಸಿಂಹವು ಮತ್ತು ಹುಲಿಯು ನಿಧಾನವಾಗಿ ವಶವಾಗುವುದೋ, ಹಾಗೆಯೇ ಪ್ರಾಣಾಯಾಮದ ವಾಯುವು ನಿಧಾನವಾಗಿ ವಶವಾಗುವುದು. ಹೀಗೆ ವಶವಾಗದ ಪ್ರಾಣಾಯಾಮವು ಸಾಧಕನನ್ನೇ ಕೊಲ್ಲುವುದು. ॥ ೩೫ ॥ ಯೋಗ್ಯ ರೀತಿಯಲ್ಲಿ ಅಭ್ಯಾಸ ಮಾಡಿದ ಪ್ರಾಣಾಯಾಮದಿಂದ ಎಲ್ಲ ರೋಗಗಳೂ ನಾಶವಾಗುವುವು ಮತ್ತು ಅಯೋಗ್ಯ ರೀತಿಯಲ್ಲಿ ಅಭ್ಯಾಸ ಮಾಡಲ್ಪಟ್ಟ ಪ್ರಾಣಾಯಾಮದಿಂದ ಎಲ್ಲ ರೋಗಗಳೂ ಹುಟ್ಟುವುವು. ॥ ೩೬ ॥ ದಾರಿಬಿಟ್ಟು ಅಭ್ಯಸಿಸಿದ ಪ್ರಾಣಾಯಾಮದಿಂದ ಬಿಕ್ಕಳಿಕೆ, ಉಬ್ಬಸ, ಕೆಮ್ಮು, ನೆಗಡಿ ಮತ್ತು ತಲೆನೋವು, ಕಿವಿನೋವು ಮುಂತಾದ ವೇದನೆಗಳು ಬರುತ್ತವೆ. ॥ ೩೭ ॥ ಪ್ರಾಣಾಯಾಮದಲ್ಲಿ ಮೆಲ್ಲಮೆಲ್ಲಗೆ ಉಸಿರನ್ನು ತೆಗೆದುಕೊಂಡು ಮೆಲ್ಲಮೆಲ್ಲಗೆ ಅದನ್ನು ಬಿಡಬೇಕು. ಮೆಲ್ಲಮೆಲ್ಲಗೆ ಆಸನಗಳಲ್ಲಿರುವುದನ್ನು ಅಭ್ಯಾಸ ಮಾಡಬೇಕು. ॥ ೩೮ ॥ ನಾಡಿಯು ಶುದ್ಧವಾಗಿದ್ದಾಗ ಮನಸ್ಸೂ ವ್ಯಾಕುಲವಿಲ್ಲದೆ ಇರುವುದು, ದೇಹವೂ ಕೃಶವಾಗಿರುವುದು ಮತ್ತು ದೇಹದ ಕಾಂತಿಯೂ ವೃದ್ಧಿಯಾಗುವುದು, ಇದು ನಿಶ್ಚಯವು. ॥ ೩೯ ॥ ನಾಡಿಯ ಶೋಧನೆಯಿಂದ ಯಥೇಚ್ಛವಾಗಿ ಪ್ರಾಣವಾಯುವಿನ ಧಾರಣೆಯೂ, ಜಠರಾಗ್ನಿಯ ಉಜ್ಜ್ವಲನೆಯೂ, ನಾದದ ಅಭಿವ್ಯಕ್ತಿಯೂ, ಆರೋಗ್ಯವೂ ಸಹ ಉಂಟಾಗುತ್ತದೆ. ॥ ೪೦ ॥ ಈ ರೀತಿಯಾಗಿ ನಾಡಿಗಳನ್ನು ಶೋಧಿಸಿದ ನಂತರ ''ಮಹಾಬಂಧ''ವನ್ನು ಅಭ್ಯಾಸ ಮಾಡಬೇಕು. ಮಹಾಬಂಧದಲ್ಲಿ ಇರತಕ್ಕ ಯೋಗಿಯು ಪ್ರಾಣಗಳನ್ನು ತನ್ನ ವಶದಲ್ಲಿಟ್ಟುಕೊಂಡಿರಬೇಕು. ॥ ೪೧ ॥ ಎರಡು ಕೈಗಳನ್ನು ಸಮವಾಗಿರಿಸಿ ಭೂಮಿಯಲ್ಲಿ ಕುಳಿತುಕೊಂಡು ವಾಯುವನ್ನು ಬಂಧಿಸಿ ನಂತರ ವಾಯುವಿನ ಸಂಚಾರಗತಿಯನ್ನು ನಿರೋಧಿಸುತ್ತಾ ಯೋಗವನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು. ॥ ೪೨ ॥ ಮೂಗಿನ ಎರಡು ಹೊಳ್ಳೆಗಳಿಂದ ವಾಯುವನ್ನು ಸೆಳೆದುಕೊಂಡು ನಂತರ ವಾಯುವನ್ನು ನಿರೋಧಿಸಿದರೆ ಆಗ ಚಂದ್ರ, ಸೂರ್ಯ ಮತ್ತು ಅಗ್ನಿ ಇವರುಗಳ ಸಂಯೋಗದಿಂದ ಯೋಗಕ್ಕೆ ದಾರ್ಢ್ಯತೆಯು ಲಭ್ಯವಾಗುವುದು. ॥ ೪೩ ॥ ಆಗ ಉದ್ಭವಿಸುವ ಮರಣಾವಸ್ಥೆಯನ್ನು ತಲುಪಿದವರಿಗೆ ಮೃತ್ಯುಭಯವಿಲ್ಲವು. ಇದೇ ಮಹಾಬಂಧವು. ಇದರ ಅಭ್ಯಾಸದಿಂದ ಯೋಗದ ಮಹಾಸಿದ್ಧಿಯು ದೊರಕುವುದು. ॥ ೪೪ ॥ ಈ ರೀತಿಯಾಗಿ ಆಸನಗಳನ್ನು ಶ್ವಾಸೋಚ್ಛ್ವಾಸ ಬಂಧನಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ನಂತರ ಮುದ್ರೆಗಳನ್ನು ಕಲಿಯಬೇಕು. ಹುಬ್ಬುಗಳ ಮಧ್ಯ ಪ್ರದೇಶವನ್ನು ಸ್ಪರ್ಶಮಾಡುವ ಮುದ್ರೆಯು ''ಖೇಚರೀ'' ಎಂಬುದು. ॥ ೪೫ ॥ ಈ ಮುದ್ರೆಯಲ್ಲಿದ್ದಾಗ ಮನಸ್ಸು ಆಕಾಶದಲ್ಲಿ ಸಂಚರಿಸುತ್ತದೆ. ಆದ್ದರಿಂದಲೇ ''ಖೇಚರಿ'' ಎಂದು ಈ ಮುದ್ರೆಗೆ ಹೆಸರು. ಖೇಚರಮುದ್ರೆಯು ಸರ್ವಶ್ರೇಷ್ಠವೆಂದು ಎಲ್ಲ ಸಿದ್ಧರಿಂದಲೂ ನಮಸ್ಕೃತ ವಾಗಿದೆ. ॥ ೪೬ ॥ ಯಾರಿಂದ ಜೀವಜಡಾತ್ಮಕ ಪದಾರ್ಥಗಳು ಖೇಚರ ಮುದ್ರೆಯಿಂದ ಪ್ರಭಾವಿತವಾಗಲ್ಪಡುವುದೋ, ಅಂತಹವರನ್ನು ಸ್ತ್ರೀಯರು ಆಲಿಂಗನ ಮಾಡಿದರೂ ಅವರು ವೀರ್ಯಸ್ಖಲನವನ್ನು ಹೊಂದುವುದಿಲ್ಲ. ॥ ೪೭ ॥ ಇನ್ನು ''ಜ್ಞಾನಸಂಧಾನ ಮುದ್ರೆ''ಯಿಂದ ಅರ್ಧತಿಂಗಳ ಅವಧಿಯಲ್ಲಿಯೇ ಮೃತ್ಯುವನ್ನು ಜಯಿಸಬಹುದು. ಈ ರೀತಿಯಾಗಿ ಯೋಗವು

ದೇಹಿಗಳಾದ ಮನುಷ್ಯರಿಗೆ ಸಾಧಿಸಲು ಸಾಧ್ಯವಾದ ಸಾಧನವು. ಈ ದೇಹವಾದರೂ ಬ್ರಹ್ಮಾಂಡದಲ್ಲಿಯೇ ಸೃಷ್ಟಿಯಾಗಿದೆ. ॥ ೪೮ ॥ ಈ ಖೇಚರೀ ಮುದ್ರೆಯೂ ಮತ್ತು ಜ್ಞಾನಸಂಧಾನ ಮುದ್ರೆಯೂ ಯೋಗಾಭ್ಯಾಸದ ದಶೆಯಿಂದ ಹೇಳಲ್ಪಟ್ಟಿವೆ. ಇವೆರಡೂ ಎಲ್ಲ ಯೋಗಸಾಧನೆಗಳಿಗಿಂತಲೂ ಉತ್ತಮೋತ್ತಮವು. ಹಠಯೋಗಿಗೆ ಇದನ್ನು ವಿಧಿಸಲಾಗಿದೆ. ಹಠಯೋಗಿಯು ಶ್ರಮವೇ ಫಲವಾಗಿವುಳ್ಳವನು ಆಗುವುದೇ ಇಲ್ಲ (ಹಠಯೋಗದಿಂದ ಕೇವಲ ಶ್ರಮವೇ ಉಂಟಾಗುತ್ತದೆಂದು ಭಾವಿಸಬಾರದೆಂದರ್ಥ). ॥ ೪೯ ॥ ಕೆಲವು ಯೋಗಾಚಾರ್ಯರುಗಳಿಗೆ ಇದು ಸಮ್ಮತವು. ಇದು ನಿಧಾನವಾಗಿ ಅಭ್ಯಾಸ ಮಾಡಬೇಕಾದದ್ದು. ಆದ್ದರಿಂದ ಅಸಾಧ್ಯವಾದದ್ದಾದರೂ ಸಾಧಿಸಲು ಸಾಧ್ಯವೆಂದು ಹೇಳುವುದು. ॥ ೫೦ ॥ ಯಾವ ಅಡ್ಡಿ ಆತಂಕಗಳಿಲ್ಲದ ತೀರ್ಥರಾಜನೆಂದು ಖ್ಯಾತಿ ಪಡೆದಿರುವ ಈ ಪ್ರಯಾಗಕ್ಷೇತ್ರದಲ್ಲಿ ಅಸಾಧ್ಯವಾದುದು ಸುಲಭಸಾಧ್ಯವಾಗುವುದು. (ಕಾರಣವೆಂದರೆ ಇಲ್ಲಿರುವ ಗಂಗೆಯೇ ಇಡಾ ನಾಡಿಯು (ಇಡಾ ಅಥವಾ ಚಂದ್ರನಾಡಿಯು). ಯಮುನೆಯು ಪಿಂಗಳ ನಾಡಿಯು. ಇವೆರಡರ ಮಧ್ಯೆ ಸಂಗವಾಗಿ ಗುಪ್ತವಾಹಿನಿಯಾಗಿ ಹರಿಯುತ್ತಿರುವ ಸರಸ್ವತಿಯೇ ಸುಷುಮ್ನಾನಾಡಿಯು.) ॥ ೫೧ ॥ ಈ ಮೂರು ನದಿಗಳ ಸಂಗಮವಾಗಿ ತ್ರಿವೇಣೀ ಎಂಬುದು ಇಲ್ಲಿ ಇರುವುದರಿಂದಲೇ ಈ ಪ್ರಯಾಗವನ್ನು ತೀರ್ಥರಾಜನೆಂದು ಕರೆಯುತ್ತಾರೆ. ಈ ತೀರ್ಥಶ್ರೇಷ್ಠದಲ್ಲಿ ಸ್ನಾನ ಮಾಡಿದವರು ಎಲ್ಲಾ ಪಾಪಗಳಿಂದಲೂ ಮುಕ್ತರಾಗುತ್ತಾರೆ. ॥ ೫೨ ॥ ಆದ್ದರಿಂದ ಯಾರು ಯೋಗ ಮಾರ್ಗದಿಂದ ದೇಹವನ್ನು ತ್ಯಜಿಸುತ್ತಾರೋ ಅವರೇ ಧನ್ಯರು. ಯೋಗಶಾಸ್ತ್ರದ ರೀತಿಯಿಂದ ದೇಹ ತ್ಯಾಗ ಮಾಡಿದ ಇಂತಹವರು ಮುಕ್ತಿಯನ್ನು ಹೊಂದುತ್ತಾರೆ. ಇದು ನಿಶ್ಚಯವು. ॥ ೫೩. ॥ ಯಾರಿಗೆ ಶರೀರದ ಹಾಗೂ ಬ್ರಹ್ಮಾಂಡದ ಜ್ಞಾನವಿಲ್ಲವೋ ಅಂಥವರಿಗೆ ಈ ಪ್ರಯಾಗದ ಮರಣವು ಯೋಗದ ಸಿದ್ಧಿ ಪಡೆದವರಿಗೆ ಉಂಟಾಗುವ ಮರಣಕ್ಕೆ ಸಮವು, ಅಂದರೆ ಮೋಕ್ಷವನ್ನು ಕೊಡತಕ್ಕದ್ದೆಂದು ತಿಳಿಯಬೇಕು. ॥ ೫೪ ॥ ಆದ್ದರಿಂದ ಇಡೀ ಬ್ರಹ್ಮಾಂಡದಲ್ಲಿ ಎಲ್ಲರಿಗೂ ಸ್ವರ್ಗ ಮತ್ತು ಮೋಕ್ಷರೂಪ ಫಲವನ್ನು ಕೊಡತಕ್ಕಂಥ ಈ ಪ್ರಯಾಗ ಕ್ಷೇತ್ರಕ್ಕೆ ಸರಿಸಮನಾದ ಅನ್ಯ ಕ್ಷೇತ್ರವು ಯಾವುದೂ ಇಲ್ಲವೇ ಇಲ್ಲ. ಅಂದಮೇಲೆ ಇನ್ನು ಇದನ್ನು ಮೀರಿಸತಕ್ಕ ಕ್ಷೇತ್ರವು ಇಲ್ಲವೇ ಇಲ್ಲವೆಂದು ಹೇಳಬೇಕಾದುದೇ ಇಲ್ಲ. ॥ ೫೫ ॥

॥ ತೊಂಬತ್ತೊಂಬತ್ತನೆಯ ಅಧ್ಯಾಯ ಸಮಾಪ್ತವಾಯಿತು ॥

## ॥ ಅಥ ಶತತಮೋಽಧ್ಯಾಯಃ ॥ ೧೦೦ ॥

ಸನಕಾದಯ ಊಚುಃ—

ಶೇಷರಾಜ ಮಹಾರಾಜ ತೀರ್ಥರಾಜಸ್ಯ ಗೌರವಮ್ ।
ಯದತ್ರ ಭವತಾಸ್ಮಭ್ಯಂ ವಾರಂ ವಾರಂ ನಿರೂಪಿತಮ್ ॥ ೧ ॥
ತೇನ ನಃ ಸಂಶಯೋ ನಷ್ಟಸ್ತೀರ್ಥರಾಜಸ್ಯ ನಿಶ್ಚಯಾತ್ ।
ಇದಾನೀಂ ವಿಚರಿಷ್ಯಾಮೋ ಗಾಯಂತೋ ಭುವನತ್ರಯೇ ॥ ೨ ॥

## ॥ ನೂರನೆಯ ಅಧ್ಯಾಯವು ॥

ಸನಕಾದಿಗಳು ಹೇಳಿದರು—

ರಾಜಾಧಿರಾಜರಾದ ಶೇಷರಾಜರೇ! ಈ ತೀರ್ಥನಾಯಕನಾದ ಪ್ರಯಾಗದ ಮಹಾತ್ಮೆಯನ್ನು ತಾವು ಪುನಃ ಪುನಃ ನಿರೂಪಿಸಿದ್ದೀರಿ. ಇದರಿಂದ ನಮ್ಮಗಳ ಸಂಶಯವು ನಿಶ್ಚಯವಾಗಿ ಹೋಗಿದೆ. ಇನ್ನು ನಾವು ಇದರ ಮಹಾತ್ಮೆಯನ್ನು ಕೊಂಡಾಡುತ್ತಾ ಹಾಡುತ್ತಾ ಮೂರು ಲೋಕಗಳಲ್ಲಿಯೂ ಸಂಚರಿಸುತ್ತೇವೆ. ॥ ೧-೨ ॥

ಸೂತ ಉವಾಚ—

ಏವಮುಕ್ತ್ವಾತಿಸಂಹೃಷ್ಟಾ ಪ್ರಣಮ್ಯ ಚ ಪುನಃ ಪುನಃ ।
ಸಹಸ್ರಫಣಮಾಮಂತ್ರ್ಯ ಜಗ್ಮುರ್ಬ್ರಹ್ಮಸುತಾ ದಿವಮ್ ॥ ೩ ॥
ಶೇಷೋಽಪ್ಯತ್ರ ನಿಜಸ್ಥಾನಂ ಕೃತ್ವಾ ವಾಸುಕಿಸನ್ನಿಧೌ ।
ಜಗಾಮ ಸಪರೀವಾರೋ ನಿಜಸ್ಥಾನಂ ಮುನೀಶ್ವರಾಃ ॥ ೪ ॥
ಅತೋಽತ್ರಾರ್ಥೇ ಭವದ್ಭಿಶ್ಚ ವಿದ್ವದ್ಭಿರ್ಮಮ ವಾಕ್ಯತಃ ।
ಸಂದೇಹೋ ನೈವ ಕರ್ತವ್ಯಸ್ಸಂದೇಹಾತ್ಮಾ ವಿನಶ್ಯತಿ ॥ ೫ ॥
ಯತ್ರ ವಕ್ತಾ ಸಹಸ್ರಾಕ್ಷಃ ಶ್ರೋತಾರಸ್ಸನಕಾದಯಃ ।
ತತ್ರಾಪಿ ಸಂಶಯಶ್ಚೇತ್ಸ್ಯಾದುಚ್ಛಿದ್ಯೇತೈವ ನಿಶ್ಚಯಃ ॥ ೬ ॥
ಕ್ಷೇತ್ರಮೇವ ಜಗಚ್ಛ್ರೇಷ್ಠಂ ತತೋಽಕ್ಷಯ್ಯವಟಾನ್ವಿತಮ್ ।
ಕಾಲಿಂದ್ಯಾ ಗಂಗಯಾ ವಾಣ್ಯಾ ತ್ರಿವೇಣ್ಯಾ ಖಲು ಸಂಗತಮ್ ॥ ೭ ॥
ಕಸ್ತಸ್ಯ ವರ್ಣನೇ ಶಕ್ತಸ್ತ್ರಿಲೋಕ್ಯೇಽಸ್ತಿ ಮಹರ್ಷಯಃ ।
ಶ್ರೀಗುರೋಃ ಕೃಪಯಾ ಕಿಂಚಿತ್ತಥಾಪ್ಯುಕ್ತಂ ಮಯಾತ್ರ ವಃ ॥ ೮ ॥
ಪುನಶ್ಚ ಕಥಯಾಮ್ಯೇತತ್ತೀರ್ಥರಾಜಸ್ಯ ಗೌರವಮ್ ।
ಶೃಣ್ವಂತು ಪ್ರಣಿಧಾನೇನ ಶ್ರುತ್ವಾ ಕುರ್ವಂತು ತತ್ತಥಾ ॥ ೯ ॥
ಕಿಮರ್ಥಂ ಕ್ಷುದ್ರವಿಷಯೈಃ ಕ್ಲಿಶ್ಯಂತೇ ಪಾಮರಾ ಜನಾಃ ।
ಫಲಜಾಲಪ್ರದಶ್ಚಾಯಂ ಸಂಸೇವ್ಯಸ್ತೀರ್ಥನಾಯಕಃ ॥ ೧೦ ॥

ರಾಜಾ ಯಥಾ ಕೋಶಗಜಾದಿ ದತ್ತೇ
ಸಂಸೇವ್ಯಮಾನೋ ನಿಜಸೇವಕಾನಾಮ್ ।
ತಥಾ ಪ್ರಯಾಗಃ ಕುರುತೇ ಸ್ವಸೇವಕಂ
ನೀಚಂ ಹಿ ಸರ್ವೋತ್ತಮಮಾತ್ಮತುಲ್ಯಮ್ ॥ ೧೧ ॥
ಪಿತಾ ಮಾತಾಥವಾ ಭ್ರಾತಾ ಸ್ತ್ರೀ ಪುತ್ರಾದಿಭಿರಪ್ಯಹೋ ।
ಸಾಧ್ಯತೇ ಯತ್ಪ್ರಯತ್ನೇನ ತತ್ಪ್ರಯಾಗೇನ ಸಾಧ್ಯತೇ ॥ ೧೨ ॥
ಅಹೋ ಮೂಢಾ ಗತಾ ಯಾಂತಿ ಪ್ರಭುಂ ಹಿತ್ವಾನ್ಯಮಿಚ್ಛವಃ ।
ತೀರ್ಥರಾಜಂ ತಥಾ ಹಿತ್ವಾ ಕಾಮಯಂತೇಽನ್ಯತೋ ಜನಾಃ ॥ ೧೩ ॥
ಪ್ರಯಾಗಾದಧಿಕಂ ತೀರ್ಥಮಸ್ತೀತಿ ಪ್ರವದಂತಿ ಯೇ ।
ದಂಡ್ಯಾಶ್ಯಾಸ್ಯಾಶ್ಚ ತೇ ಲೋಕಾ ಇತ್ಯೇವ ಶಾಸ್ತ್ರಡಿಂಡಿಮಃ ॥ ೧೪ ॥
ನ ಚಾತ್ರ ತಾರಕೋ ಮಂತ್ರೋ ನ ವಾ ದೀಕ್ಷಾಸ್ತಿ ಗೌರವೀ ।
ಶರೀರಪಾತಮಾತ್ರೇಣ ಮುಕ್ತೋ ಭವತಿ ದೇಹವಾನ್ ॥ ೧೫ ॥
ಆತ್ಮಹತ್ಯಾ ನ ಚಾತ್ರಾಸ್ತಿ ಯೇನ ಕೇನಾಪಿ ಕರ್ಮಣಾ ।
ದೇಹತ್ಯಾಗವತಾಂ ಪುಂಸಾಮಿಷ್ಟಂ ಕರಗತಂ ಫಲಮ್ ॥ ೧೬ ॥
ಪ್ರೌಢಪ್ರತಾಪೋಽಸ್ತಿ ನ ತೀರ್ಥನಾಯಕಾ-
ತ್ಪ್ರೌಢಪ್ರತಾಪೋ ನ ಚ ವೇಣಿಸಂಗಮಾತ್ ।
ಪ್ರೌಢಪ್ರತಾಪೋ ನ ಚ ಮಾಧವಾತ್ಪರ-
ಸ್ತತ್ಸೇವ್ಯತಾಮೇಷ ಜನೈಃ ಸುಖಾರ್ಥಿಭಿಃ ॥ ೧೭ ॥
ಪ್ರಯಾಗೇ ಕ್ರಿಯತಾಂ ವಾಸಃ ಪ್ರಯಾಗೇ ಕ್ರಿಯತಾಂ ತಪಃ ।
ಪ್ರಯಾಗೇ ಕ್ರಿಯತಾಂ ಯಜ್ಞೋ ಯತೋಽಕ್ಷಯ್ಯಫಲಪ್ರದಃ ॥ ೧೮ ॥
ಜಪ್ತಂ ತಪ್ತಂ ಹುತಂ ದತ್ತಂ ಪೂಜಿತಂ ತರ್ಪಿತಂ ಚ ಯತ್ ।
ಯಥಾವಿಧಿ ಯಥಾಕಾಲಂ ಸರ್ವಂ ಯತ್ರ ಫಲಪ್ರದಮ್ ॥ ೧೯ ॥
ಯತ್ರಾಸ್ತಿ ಮೋಕ್ಷೋಽಪಿ ವಿನೈವ ಜ್ಞಾನಾ-
ತ್ಸ್ವರ್ಗೋಽಪಿ ವಾಂಛಾಂ ಕುರುತೇಽಪ್ಯಹರ್ನಿಶಮ್ ।
ನೀಚೋಽಪಿ ಯತ್ರೋಚ್ಚಪದಂ ಪ್ರಯಾತಿ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೦ ॥
ಯಂ ಪ್ರಾಪ್ಯ ಕಾಮೋಽಖಿಲಕಾಮದಾತಾ
ಚಿಂತಾಮಣಿರ್ವಾಂಛತಿ ವಾಸಮತ್ರ ।
ಸಮೀಹತೇ ಕಲ್ಪತರುರ್ಮನೋಗತಂ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೧ ॥

ಯಂ ಸೇವಿತುಂ ಜಹ್ನುಸುತಾ ಸಮಾಗತಾ
ಕಲಿಂದಕನ್ಯಾಪಿ ತಥಾ ಯಮಸ್ವಸಾ ।
ಸರಸ್ವತೀ ಚಾಕ್ಷಯಕಲ್ಪಪಾದಪಃ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೨ ॥
ಯತ್ರಾವಗಾಹಾತ್ಸುರಲೋಕವಾಸಃ
ಕೈಲಾಸವಾಸೋ ವಿಧಿಲೋಕವಾಸಃ ।
ವೈಕುಂಠವಾಸಶ್ಚ ನಿಜೇಚ್ಛಯಾ ಭವೇತ್
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೩ ॥
ಯತ್ರೋಭಯೇ ಕೂಲಪತತ್ರಿಣೋಽಪಿ
ಭಾಗೀರಥೀಭಾನುಜಯೋರ್ವಿವಾಸಾತ್ ।
ಸಾರೂಪ್ಯಮುಕ್ತಿಂ ದಧತೇ ನರಾಃ ಕಿಂ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೪ ॥
ಯತ್ರ ಪ್ರಯಾತುಂ ವಿಧಿವಿಷ್ಣುಲೋಕಯೋಃ
ತತ್ಸೇವಕಾನಾಂ ವಿಹಿತಾ ವಿಧಾತ್ರಾ ।
ವೇಣೀಷು ನಿಃಶ್ರೇಣಿರಿವಾವಭಾತಿ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೫ ॥
ಯತ್ರಾತ್ಮಭೂಕೇಶವಶಂಕರಾದ್ಯಾ
ಹಿತ್ವಾ ಸ್ವಲೋಕಾನ್ನಿವಸಂತಿ ನಿತ್ಯಮ್ ।
ಸ್ತ್ರೀಭಿಸ್ಸಮೇತಾ ದದತೋಽರ್ಥಿಕಾಮಾನ್
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೬ ॥
ಯತ್ರ ತ್ರಿಲೋಕೀಗತಜೀವಸಂಘಾ
ವಾಂಛಂತಿ ಮಾಘಂ ಪರಮಾದರೇಣ ।
ಸ್ನಾನೇನ ಕಾಮಂ ಮರಣೇನ ಮುಕ್ತಿಂ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೭ ॥
ತಾವದ್ಗರ್ಜಂತಿ ತೀರ್ಥಾನಿ ಸರ್ವಾಣ್ಯವನಿಮಂಡಲೇ ।
ಯಾವನ್ನ ಶ್ರೂಯತೇ ವಿಪ್ರಾಃ ಪ್ರಯಾಗಸ್ತೀರ್ಥನಾಯಕಃ ॥ ೨೮ ॥
ರಾಜತೇ ಯತ್ರ ನಿಃಶ್ರೇಣೀ ವೇಣೀ ಸ್ವರ್ಗಸ್ಯ ತಾರಿಣೀ ।
ತೀರ್ಥಶ್ರೇಣೀಮಣಿಸ್ಸ್ವೈವ ಸೇವ್ಯತಾಂ ಸಕಲೈರ್ಜನೈಃ ॥ ೨೯ ॥
ದುರ್ಲಭಂ ಯತ್ಫಲಂ ಸರ್ವಂ ತ್ರೈಲೋಕ್ಯೇ ಸಚರಾಚರೇ ।
ತ್ರಿವೇಣೀ ತತ್ಫಲಂ ಸ್ವಸ್ಮಿನ್ದದಾತಿ ಸ್ನಾನಮಾತ್ರತಃ ॥ ೩೦ ॥

ಜನ್ಮಾಂತರಸಹಸ್ರೇಷು ಯನ್ನ ನಶ್ಯತಿ ಪಾತಕಮ್ ।
ತತ್ಪಾಪಂ ಸ್ನಾನಮಾತ್ರೇಣ ತ್ರಿವೇಣೀ ನಾಶಯತ್ಯಹೋ ॥ ೩೧ ॥
ಮೇರುತುಲ್ಯಂ ಚ ಯತ್ಪಾಪಂ ತದ್ಯಸ್ಯಾಂ ಸರ್ಷಪಾಯತೇ ।
ಪುಣ್ಯಂ ಸರ್ಷಪಮಾತ್ರಂ ಯತ್ತದ್ಧಿ ಮೇರೂಯತೇ ದೃಢಮ್ ॥ ೩೨ ॥
ಗೋದಾನಂ ಯತ್ರ ಯಃ ಕುರ್ಯಾತ್ಸಾಂಗಂ ಪಾತ್ರಾಯ ಭಕ್ತಿತಃ ।
ಸಪ್ತದ್ವೀಪವತೀ ಪೃಥ್ವೀ ತೇನ ದತ್ತಾ ಸಸಾಗರಾ ॥ ೩೩ ॥
ಯಸ್ತತ್ರ ಕುರುತೇ ಶ್ರಾದ್ಧಂ ಪಿತೃಸಂತುಷ್ಟಿಕಾರಕಮ್ ।
ಸ ತಾರಯತಿ ಧರ್ಮಾತ್ಮಾ ಕುಲಮೇಕೋತ್ತರಂ ಶತಮ್ ॥ ೩೪ ॥
ಯದ್ಯತ್ಕೃತ್ಯಂ ಮಯಾ ಪ್ರೋಕ್ತಂ ತತ್ತನ್ಮಾಘೇ ಕೃತಂ ಯದಿ ।
ಅನಂತಫಲದಂ ಸರ್ವಂ ಜಾಯತೇ ನಾತ್ರ ಸಂಶಯಃ ॥ ೩೫ ॥
ಇತ್ಯೇವಂ ತೀರ್ಥರಾಜಸ್ಯ ವರ್ಣನಂ ಹಿ ಮಯಾ ಕೃತಮ್ ।
ವಾರಂ ವಾರಂ ಭವತ್ಪ್ರೀತ್ಯೈ ಶೌನಕಾದ್ಯಾ ಮಹರ್ಷಯಃ ॥ ೩೬ ॥
ಅಥಾಪಿ ವಿಗತೋ ಮೋಹೋ ಭವದೀಯೋಽಥವಾ ನ ಕಿಮ್ ।
ತದುಚ್ಯತಾಂ ಪ್ರಯಾಸೋ ಮೇ ನ ಚೇದ್ವ್ಯರ್ಥೋ ಭವೇದಿಹ ॥ ೩೭ ॥

**ಸೂತರು ಹೇಳಿದರು—**

ಈ ರೀತಿಯಾಗಿ ಅರಿಕೆ ಮಾಡಿಕೊಂಡ ಸನಕಾದಿಗಳು ಸಹಸ್ರಫಣೆಯುಳ್ಳ ಆ ಶೇಷದೇವರನ್ನು ಪುನಃ ಪುನಃ ನಮಸ್ಕರಿಸಿ ಅವರಿಂದ ಅನುಜ್ಞೆ ಪಡೆದು ಸ್ವರ್ಗಮಾರ್ಗದಲ್ಲಿ ಪ್ರಯಾಣ ಮಾಡಿದರು. ॥ ೩ ॥ ಹೇ ಶೌನಕಾದಿಗಳಿರಾ!, ನಂತರ ಶೇಷದೇವರು ವಾಸುಕಿ ತೀರ್ಥದ ಸನ್ನಿಧಾನದಲ್ಲಿ ಸ್ವಂತ ವಾಸಸ್ಥಾನವನ್ನು ನಿರ್ಮಾಣ ಮಾಡಿ ಅಲ್ಲಿ ತಮ್ಮ ಪರಿವಾರದೊಡನೆ ಇರತೊಡಗಿದರು. ॥ ೪ ॥ ನೀವುಗಳೂ ಕೂಡ, ತಿಳಿದವರಾದ್ದರಿಂದ ಈ ಪ್ರಯಾಗದ ತೀರ್ಥನಾಯಕತ್ವದ ಬಗ್ಗೆ ಸಂದೇಹವನ್ನು ಬಿಡಬೇಕು. ಕಾರಣವೇನೆಂದರೆ ಸಂದೇಹದ ಮನಸ್ಸುಳ್ಳವನು ನಾಶ ಹೊಂದುವನು. ॥ ೫ ॥ ಯಾವ ವಿಷಯದಲ್ಲಿ ಸಹಸ್ರ ಕಣ್ಣುಗಳುಳ್ಳ ಶೇಷದೇವರೇ ಹೇಳುವರೋ ಮತ್ತು ಸನಕಾದಿಗಳೇ ಶ್ರೋತೃಗಳೋ ಇಂಥಹ ವಿಷಯದಲ್ಲಿ ಸಂದೇಹವನ್ನು ಬಿಡದಿದ್ದಗೆ ಅಂಥವರು ನಿಶ್ಚಿತವಾಗಿ ನಾಶವಾಗುವರು. ॥ ೬ ॥ ಅಕ್ಷಯ್ಯವಟವನ್ನುಳ್ಳ ಯಮುನೆಯೂ, ಗಂಗೆಯೂ ಮತ್ತು ಸರಸ್ವತಿಯೂ ಸೇರಿ ತ್ರಿವೇಣೀ ಸಂಗಮವಾಗಿರುವ ಈ ಕ್ಷೇತ್ರವು ಸರ್ವಶ್ರೇಷ್ಠವು. ಇದು ವೇದಗಳಿಂದ ನಿಶ್ಚಿತವಾಗಿದೆ. ॥ ೭ ॥ ಎಲೈ ಶೌನಕಾದಿ ಮಹರ್ಷಿಗಳೇ! ಮೂರು ಲೋಕಗಳಲ್ಲಿ ಯಾರು ತಾನೇ ಇದನ್ನು ವರ್ಣಿಸಲು ಶಕ್ತರು? ಆದರೂ ನಿಮಗೆ ಈವರೆಗೆ ಅಲ್ಪಸ್ವಲ್ಪವೇನನ್ನಾದರೂ ಹೇಳಿದ್ದರೆ ಅದು ನಮ್ಮ ಗುರುಗಳ ಅನುಗ್ರಹದಿಂದಲೇ. ॥ ೮ ॥ ಈ ತೀರ್ಥರಾಜನ ಮಹಾತ್ಮ್ಯೆಯ ಬಗ್ಗೆ ಪುನಃ ಹೇಳುವೆನು. ನೀವುಗಳು ಗಮನವಿಟ್ಟು ಶ್ರವಣಮಾಡಿ ಅವಶ್ಯಕ ರೀತಿಯಲ್ಲಿ ಪ್ರವೃತ್ತರಾಗಿರಿ. ॥ ೯ ॥ ಕ್ಷುದ್ರವಾದ ವಿಷಯಗಳಲ್ಲಿ ಏತಕ್ಕಾಗಿ ಪಾಮರ ಜನರು ಬಳಲುತ್ತಾರೆ? ಫಲಗಳ ಸಮೂಹವನ್ನೇ ದಯಪಾಲಿಸುವ ಈ ತೀರ್ಥನಾಯಕನನ್ನು ಎಲ್ಲರೂ ಸೇವೆಮಾಡಿದರಾಯಿತು. ॥ ೧೦ ॥ ಸಂತುಷ್ಟನಾದ ರಾಜನು ತನ್ನ

ಸೇವಕನಿಗೆ ದ್ರವ್ಯ ಮತ್ತು ಗಜಾದಿಗಳನ್ನು ಕೊಟ್ಟು ತೃಪ್ತಿಪಡಿಸುವಂತೆ ಅದೇ ರೀತಿ ತನ್ನನ್ನು ಸೇವಿಸುವವರಿಗೆ ಪ್ರಯಾಗವು ಎಷ್ಟೇ ನೀಚನಾಗಿರಲಿ ಅವರನ್ನು ಸರ್ವೋತ್ತಮರನ್ನಾಗಿ ಮಾಡುವುದು. ॥ ೧೧ ॥ ತಂದೆ, ತಾಯಿ, ಅಣ್ಣ, ಹೆಂಡತಿ ಮತ್ತು ಮಕ್ಕಳಿಂದ ಯಾವುದು ಸಾಧಿತವಾಗುವುದಿಲ್ಲವೋ ಅವೆಲ್ಲವೂ ಪ್ರಯಾಗದಲ್ಲಿ ಸಾಧಿಸಲ್ಪಡುವುದು. ಮೂರ್ಖರು ಯಾವ ರೀತಿಯಾಗಿ ಉದಾರಿಯಾದ ಯಜಮಾನನನ್ನು ಬಿಟ್ಟು ಬೇರೆಯವರನ್ನು ಹುಡುಕಿಕೊಂಡು ಹೋಗುವರೂ ಅದೇ ರೀತಿ ತೀರ್ಥರಾಜನನ್ನು ತ್ಯಜಿಸಿ ಅನ್ಯ ಕ್ಷೇತ್ರಗಳಲ್ಲಿ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಹೋಗುವವರು ಮೂರ್ಖರೇ ಸರಿ. ॥ ೧೨ - ೧೩ ॥ ಪ್ರಯಾಗಕ್ಕಿಂತ ಅಧಿಕವಾದ ತೀರ್ಥಗಳಿವೆಯೆಂದು ಹೇಳುವವರು ದಂಡಾರ್ಹರು ಮತ್ತು ಶಿಕ್ಷಾರ್ಹರು. ಈ ರೀತಿಯಾಗಿ ಶಾಸ್ತ್ರಗಳು ನಗಾರಿ ಬಾರಿಸಿ ಸಾರುತ್ತಿವೆ. ॥ ೧೪ ॥ ಮುಕ್ತಿಯನ್ನು ಹೊಂದಲು ಪ್ರಯಾಗದಲ್ಲಿ ತಾರಕಮಂತ್ರೋಪದೇಶದ ಅವಶ್ಯಕತೆಯಿಲ್ಲ ಮತ್ತು ಗುರೂಪದೇಶಗಳಿಗೆ ಸಂಬಂಧಪಟ್ಟ ದೀಕ್ಷೆಗಳೂ ಬೇಕಾಗಿಲ್ಲ. ಕೇವಲ ಸಂಗಮದಲ್ಲಿ ದೇಹತ್ಯಾಗ ಮಾಡುವುದರಿಂದಲೇ ದೇಹಿಯು ಮುಕ್ತನಾಗುವನು. ॥ ೧೫ ॥ ಯಾವ ರೀತಿಯಾದ ಕೃತ್ಯದಿಂದಲೂ ಇಲ್ಲಿ ಆತ್ಮಹತ್ಯೆಯು ದೋಷವಾಗುವುದಿಲ್ಲ. ದೇಹತ್ಯಾಗಮಾಡಿದವನ ಇಷ್ಟಾರ್ಥವೆಲ್ಲವೂ ಅವನ ಕರಗತ ಫಲವಾಗುವುದು. ॥ ೧೬ ॥ ಈ ತೀರ್ಥನಾಯಕನಿಗಿಂತ ಹೆಚ್ಚು ಪ್ರತಾಪಶಾಲಿಯಾದ ಬೇರೊಂದು ತೀರ್ಥವಿಲ್ಲ. ಈ ವೇಣೀಸಂಗಮವನ್ನು ಮೀರಿಸುವುದಿನ್ನೊಂದಿಲ್ಲ. ಮತ್ತು ಇಲ್ಲಿರುವ ಶ್ರೀ ಮಾಧವನನ್ನು ಮೀರಿಸುವ ಇನ್ನೊಂದು ದೈವವಿಲ್ಲ. ಆದ್ದರಿಂದ ಹಿತವನ್ನು ಬಯಸುವವರು ಈ ಮೂರನ್ನೂ ಸೇವಿಸಲಿ. ॥ ೧೭ ॥ ಅಕ್ಷಯ್ಯಫಲವನ್ನು ಕೊಡತಕ್ಕ ಪ್ರಯಾಗದಲ್ಲಿ ಎಲ್ಲರೂ ವಾಸಿಸಲಿ, ತಪಸ್ಸನ್ನು ಆಚರಿಸಲಿ ಮತ್ತು ಯಜ್ಞಾದಿಗಳನ್ನು ಮಾಡಲಿ. ॥ ೧೮ ॥ ಈ ಸ್ಥಳದಲ್ಲಿ ಹೇಗಾದರೂ ಮಾಡಿದ, ವಿಧಿವತ್ತಾಗಿ ಮಾಡಿದ, ಯಥಾಕಾಲ ಮಾಡಿದ ಜಪ, ತಪ, ಹೋಮ, ದಾನ, ಪೂಜೆ ಮತ್ತು ತರ್ಪಣ ಇವು ಎಲ್ಲವೂ ವಿಧಿವತ್ತಾಗಿ ಮಾಡಿದಂತೆ ಫಲದಾಯಕವು. ॥ ೧೯ ॥ ಜ್ಞಾನವಿಲ್ಲದೆಯೇ ಎಲ್ಲಿ ಮೋಕ್ಷವು ಸಿದ್ಧಿಸುವುದೋ ಮತ್ತು ಎಲ್ಲಿ ಸ್ವರ್ಗಕ್ಕಾಗಿ ಹಗಲೂ, ರಾತ್ರಿಯೂ ಅಪೇಕ್ಷಿಸಲ್ಪಡುವುದೋ, ನೀಚನಾದವನಿಗೂ ಎಲ್ಲಿ ಉಚ್ಚವಾದ ಸ್ಥಾನವು ದೊರಕುವುದೋ, ಅಂತಹ ಪ್ರಯಾಗ ಕ್ಷೇತ್ರವು ಜಯಶೀಲವಾಗಲಿ. (ಈ ಹೇಳಿಕೆಗಳು ಕೇವಲ ಪ್ರಯಾಗ ಕ್ಷೇತ್ರದ ಬಗ್ಗೆ ಪಾಮರರಿಗೆ ಆದರ ಹುಟ್ಟಿಸುವುದಕ್ಕಾಗಿಯೇ ಹೊರತು ಜ್ಞಾನವಿಲ್ಲದೆ ಮೋಕ್ಷಪ್ರಾಪ್ತಿಯು ಸಾಧ್ಯವೆಂದು ಹೇಳುವುದಕ್ಕಾಗಿಯಲ್ಲ ಮತ್ತು ತಮೋಯೋಗ್ಯನಿಗೆ ಮೋಕ್ಷ ಸಿಗುವುದೆಂದಲ್ಲ.) ॥ ೨೦ ॥ ಎಲ್ಲಾ ಅಭೀಷ್ಟಗಳನ್ನು ಕೊಡುವ ಚಿಂತಾಮಣಿಯು ತನ್ನ ಅಭೀಷ್ಟವನ್ನು ಪಡೆಯಲು ಈ ಕ್ಷೇತ್ರದಲ್ಲಿ ವಾಸವನ್ನು ಅಪೇಕ್ಷಿಸುತ್ತದೆ. ಕಲ್ಪವೃಕ್ಷವು ತನ್ನ ಮನೋಭೀಷ್ಟವನ್ನು ಹೊಂದಲು ಇಲ್ಲಿ ವಾಸವನ್ನು ಇಚ್ಛಿಸುತ್ತದೆ. ಇಂಥಾ ತೀರ್ಥರಾಜನಾದ ಪ್ರಯಾಗವು ಉತ್ಕೃಷ್ಟವಾಗಿರುತ್ತದೆ ॥ ೨೧ ॥ ಯಾವ ಪ್ರಯಾಗವನ್ನು ಸೇವಿಸಲು ಜಹ್ನುರಾಜನ ಮಗಳಾದ ಗಂಗೆಯೂ, ಯಮನ ತಂಗಿ ಹಾಗೂ, ಕಳಿಂದ ಪರ್ವತದ ಮಗಳಾದ ಯಮುನೆಯೂ ಮತ್ತು ಸರಸ್ವತಿಯೂ ಬಂದಿದ್ದಾರೆಯೋ ಮತ್ತು ಭಕ್ತರ ಅಭೀಷ್ಟಗಳನ್ನು ಕರುಣಿಸುವ ಅಕ್ಷಯವಟವೃಕ್ಷವೂ ಇರುವ ಪ್ರಯಾಗವು ಜಯಶೀಲವಾಗಿದೆ. ॥ ೨೨ ॥ ಇಲ್ಲಿ ಸ್ನಾನ ಮಾಡುವುದರಿಂದ ತಾನು ಬಯಸುವ ಸತ್ಯಲೋಕದ ವಾಸವೂ, ವೈಕುಂಠದ ವಾಸವೂ ಮತ್ತು ಕೈಲಾಸ ವಾಸವೂ ನಿಶ್ಚಯವಾಗಿ ಲಭ್ಯವಾಗುವುದು. ಇಂತಹ ಪ್ರಯಾಗಕ್ಷೇತ್ರವು ಜಯಶೀಲವಾಗಿದೆ. ॥ ೨೩ ॥ ಎಲ್ಲಿ ಹಕ್ಕಿಗಳೂ ಕೂಡ ಗಂಗೆಯ ಯಮುನೆಯ

ದಡಗಳಲ್ಲಿ ವಾಸಿಸುವುದರಿಂದ ಸಾರೂಪ್ಯಮುಕ್ತಿ ಪಡೆಯುವುವೋ, ಅಲ್ಲಿ ಇನ್ನು ನರನ ವಿಷಯ ಹೇಳಲೇನಿದೆ? ಅಂತಹ ಪ್ರಯಾಗವು ಜಯಶೀಲವಾಗಿದೆ. ॥ ೨೪ ॥ ಅಲ್ಲಿ ಬ್ರಹ್ಮನ ಭಕ್ತರು ಬ್ರಹ್ಮಲೋಕಕ್ಕೂ ಮತ್ತು ವಿಷ್ಣುವಿನ ಭಕ್ತರು ವೈಕುಂಠಕ್ಕೂ ಹೋಗಲು ಅನುಕೂಲವಾಗುವಂತೆ ಎಲ್ಲಿ ವೇಣೀಯೆಂಬ ಸೋಪಾನದಂತಿದೆಯೋ ಅಂತಹ ಪ್ರಯಾಗವು ಜಯಶೀಲವಾಗಿದೆ. ॥ ೨೫ ॥ ಶ್ರೀ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ತಮ್ಮ ತಮ್ಮ ಲೋಕಗಳನ್ನು ಬಿಟ್ಟು ತಮ್ಮ ತಮ್ಮ ಪತ್ನಿಯರ ಸಮೇತ ಎಲ್ಲಿ ವಾಸಿಸುತ್ತಾ ಬೇಡಿದವರ ಇಷ್ಟಾರ್ಥಗಳನ್ನೆಲ್ಲಾ ಈಡೇರಿಸುತ್ತಿದ್ದಾರೋ ಅಂತಹ ಪ್ರಯಾಗವು ಜಯಶೀಲವಾಗಿದೆ. ॥ ೨೬ ॥ ಎಲ್ಲಿ ಮೂರು ಲೋಕದ ಜೀವಸಂಘದ ಸರ್ವಾಪೇಕ್ಷೆಗಳೂ ಯಾವುದರ ಸ್ನಾನದಿಂದ ನೆರವೇರುವುದೋ ಮತ್ತು ಮರಣದಿಂದ ಮುಕ್ತಿಯಾಗುವುದೋ ಅಂತಹ ಮಾಘಕ್ಕಾಗಿ ಪ್ರಯಾಗಕ್ಕೆ ಬಂದು ಕಾಯುತ್ತಿರುತ್ತಾರೋ ಅಂತಹ ಪ್ರಯಾಗ ಕ್ಷೇತ್ರವು ಜಯಶೀಲವಾಗಿದೆ. ॥ ೨೭ ॥ ಎಲೌ ಶೌನಕಾದಿ ವಿಪ್ರರೇ! ಎಲ್ಲಿಯವರೆಗೆ ವಿಪ್ರರು ಭೂಮಂಡಲದಲ್ಲಿ ಪ್ರಯಾಗದ ಮಹಾತ್ಮ್ಯೆಯನ್ನು ಕೇಳಿರುವುದಿಲ್ಲವೋ ಅಲ್ಲಿಯವರೆಗೂ ಎಲ್ಲಾ ತೀರ್ಥಗಳೂ ತಾವೇ ಮೇಲೆಂದು ಘರ್ಜಿಸುತ್ತಿರುತ್ತವೆ. ॥ ೨೮ ॥ ಸಂಸಾರಸಾಗರವನ್ನು ದಾಟಿಸಲು ಎಲ್ಲಿ ಸ್ವರ್ಗಕ್ಕೆ ಮೆಟ್ಟಲಿನಂತಿರುವ, ತೀರ್ಥಸಮೂಹದಲ್ಲಿ ಶ್ರೇಷ್ಠವಾದ ತ್ರಿವೇಣಿಯು ವಿರಾಜಮಾನವಾಗಿರುವುದೋ ಅತಂಹ ಪ್ರಯಾಗವನ್ನು ಎಲ್ಲರೂ ಸೇವಿಸಲಿ. ॥ ೨೯ ॥ ಜೀವಜಡಗಳಿಂದ ತುಂಬಿರುವ ಮೂರು ಲೋಕಗಳಲ್ಲಿ ಹೊಂದಲಾರದ ಎಲ್ಲ ರೀತಿಯ ಫಲವನ್ನೂ ತನ್ನಲ್ಲಿ ಸ್ನಾನಮಾಡಿದ ಮಾತ್ರಕ್ಕೆ ತೀರ್ಥಗಳಿಗೆ ಶ್ರೇಷ್ಠವಾಗಿರತಕ್ಕ ತ್ರಿವೇಣಿಯು ಕೊಡುವುದು. ॥ ೩೦ ॥ ಸಹಸ್ರಾರು ಜನ್ಮಗಳಲ್ಲಿಯೂ ನಾಶವಾಗದೆ ಉಳಿದಿರುವ ಪಾಪಗಳನ್ನು ತ್ರಿವೇಣಿಯು ತನ್ನಲ್ಲಿ ಸ್ನಾನಮಾಡುವ ಮಾತ್ರದಿಂದ ಪರಿಹಾರಮಾಡುವುದು. ॥ ೩೧ ॥ ಈ ವೇಣಿಯಲ್ಲಿ ಮೇರುಪರ್ವತದಷ್ಟಿರುವ ಪಾಪವು ಸಾಸಿವೆಕಾಳಿನಷ್ಟು ಸಣ್ಣದಾಗುವದು. ಸಾಸಿವೆ ಕಾಳಿನ ಗಾತ್ರದಷ್ಟಿರುವ ಪುಣ್ಯವು ಮೇರುಪರ್ವತದಷ್ಟು ಬೆಳೆಯುವುದು. ॥ ೩೨ ॥ ಸತ್ಪಾತ್ರರಿಗೆ ಇಲ್ಲಿ ಯಾರು ವಿಧಿವತ್ತಾಗಿ ಗೋದಾನವನ್ನು ಮಾಡುತ್ತಾರೋ ಅವರು ಸಪ್ತಸಾಗರಗಳ ಸಹಿತವಾದ ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನೇ ದಾನಮಾಡಿದ್ದಾರೆಂದು ತಿಳಿಯಬೇಕು. ॥ ೩೩ ॥ ಪಿತೃಗಳಿಗೆ ಸಂತೃಪ್ತಿಯಾಗುವ ಶ್ರಾದ್ಧವನ್ನು ಇಲ್ಲಿ ಮಾಡಿದವರ ನೂರೊಂದು ಕುಲವು ಸಂಸಾರದಿಂದ ಮುಕ್ತವಾಗುವದು. ॥ ೩೪ ॥ ನನ್ನಿಂದ ಇದುವರೆಗೆ ಪ್ರಯಾಗದಲ್ಲಿ ಆಚರಿಸಲ್ಪಡಬೇಕಾದ ಯಾವಯಾವ ಕಾರ್ಯಗಳು ಉಕ್ತವಾಗಿಯೋ ಅವೆಲ್ಲವನ್ನೂ ಮಾಘಮಾಸದಲ್ಲಿ ಪ್ರಯಾಗದಲ್ಲಿ ಮಾಡಿದರೆ ಅವುಗಳಿಗೆಲ್ಲ ಎಣೆಯಿಲ್ಲದ ಫಲವು ಲಭ್ಯವಾಗುವುದು. ಇದರಲ್ಲಿ ಸಂದೇಹ ಬೇಡ. ॥ ೩೫ ॥ ಎಲೈ ಶೌನಕಾದಿ ಮಹರ್ಷಿಗಳೇ! ಈ ರೀತಿಯಾಗಿ ಪದೇ ಪದೇ ಈ ತೀರ್ಥರಾಜನ ವರ್ಣನೆಯನ್ನು ನಿಮ್ಮಗಳ ಪ್ರೀತಿಗೋಸ್ಕರ ಮಾಡಿದ್ದಾಯಿತು. ॥ ೩೬ ॥ ಇದರಿಂದಲಾದರೂ ನಿಮ್ಮಗಳ ಸಂಶಯವು ನಿವಾರಣೆಯಾಯಿತೋ ಇಲ್ಲವೋ ಹೇಳಿರಿ, ಇಲ್ಲದಿದ್ದರೆ ನನ್ನ ಪರಿಶ್ರಮವೆಲ್ಲವೂ ವ್ಯರ್ಥವೇ ಸರಿ ಎಂದರು. ॥ ೩೭ ॥

ಋಷಯ ಊಚುಃ—

ವಕ್ತಾ ಸ್ಮೃತಿಪುರಾಣಜ್ಞಃ ಶಾಸ್ತ್ರಸಿದ್ಧಾಂತವಿತ್ಕವಿಃ ।
ಶ್ರೋತೄಣಾಂ ಸಂಶಯಚ್ಛೇತ್ತಾ ವ್ಯಾಖ್ಯಾತಾನಲಸಃ ಕೃತೀ ॥ ೩೮ ॥

ನಿರ್ಲೋಭೋ ನಿರಹಂಕಾರೀ ಶಬ್ದಬ್ರಹ್ಮ ವಿಚಕ್ಷಣಃ ।
ಪದಚ್ಛೇದೀ ಪದಾರ್ಥಜ್ಞೋ ವಾಕ್ಯಾರ್ಥನಿಪುಣಃ ಪಟುಃ ॥ ೩೯ ॥
ಪೂರ್ವಪಕ್ಷಸಮಾಧಾನಭಾವವಕ್ತಾ ಹ್ಯಸಂಶಯಃ ।
ಭಗವದ್ಧರ್ಮವಿಚ್ಛಾಂತೋ ದ್ರವದ್ಧೃದಯ ಏವ ಚ ॥ ೪೦ ॥
ಅಹೋ ಭಾಗ್ಯಮಹೋ ಭಾಗ್ಯಂ ತಸ್ಯ ಕ್ಷೇತ್ರಸ್ಯ ವೈಭವಮ್ ।
ಏವಂ ಗುಣೋ ಯತ್ರ ವಕ್ತಾ ತತ್ರ ಶ್ರೋತುರ್ನ ಜಾಡ್ಯತಾ ॥ ೪೧ ॥
ತೇ ಧನ್ಯಾ ಬ್ರಹ್ಮಣಃ ಪುತ್ರಾ ಯೇಷಾಂ ಶೇಷಃ ಸ್ವಯಂ ಗುರುಃ ।
ಭವಾನಪಿ ಮಹಾನ್ಧನ್ಯೋ ಯಸ್ಯ ವ್ಯಾಸೋ ಹರಿರ್ಗುರುಃ ॥ ೪೨ ॥
ಅಸ್ಮಿನ್ಕಾಲೇ ವಯಂ ಧನ್ಯಾ ಯೇಷಾಂ ವಕ್ತಾ ಭವಾದೃಶಃ ।
ಯಸ್ಮಾಚ್ಛ್ರವಣಮಾತ್ರೇಣ ಮೋಹೋ ಗಚ್ಛತಿ ಮಾನಸಃ ॥ ೪೩ ॥
ಶ್ರುತಂ ಪ್ರಯಾಗಮಾಹಾತ್ಮ್ಯಂ ರಹಸ್ಯಂ ಭವತೋದಿತಮ್ ।
ಬುದ್ಧಂ ಬುದ್ಧಂ ರಹಸ್ಯಂ ಯಚ್ಛ್ರುತಿಸ್ಮೃತಿಸುನಿಶ್ಚಿತಮ್ ॥ ೪೪ ॥
ಜಗಚ್ಛ್ರೇಷ್ಠಮಿದಂ ಕ್ಷೇತ್ರಂ ಧರ್ಮಕಾಮಾರ್ಥಮೋಕ್ಷದಮ್ ।
ತಸ್ಮಾದಿಸ್ಮರಣಂ ಯಾತು ಜನ್ಮಜನ್ಮನಿ ನಿಶ್ಚಿತಮ್ ॥ ೪೫ ॥
ಪುರಾತನಕಥಾಭಿಜ್ಞ ಸೂತ ಸಂಶಯನಾಶನ ।
ಸಂಶಯಃ ಖಂಡಿತೋಽಸ್ಮಾಕಂ ತೀರ್ಥನಾಯಕವರ್ಣನಾತ್ ॥ ೪೬ ॥
ಪೂರ್ವಮೇವ ಶ್ರುತೋಽಸ್ಮಾಭಿರ್ಮಾಹಾತ್ಮ್ಯಶ್ರವಣೇ ವಿಧಿಃ ।
ಶ್ರವಣಸ್ಯ ಫಲಂ ಕಿಂ ವಾ ತದ್ವದಸ್ವ ಯಥಾಯಥಮ್ ॥ ೪೭ ॥

**ಶೌನಕಾದಿಗಳು ಹೇಳಿದರು—**

ಅಸ್ಖಲಿತವಾದ ವಾಗ್ಮಿತ್ವವಿದ್ದು ವಾಕ್‌ಪಟುವೆನಿಸಿಕೊಂಡಿರುವ, ಸ್ಮೃತಿಗಳ ಪಾಂಡಿತ್ಯವುಳ್ಳ ಪುರಾಣಗಳ ಜ್ಞಾನವುಳ್ಳ, ಶಾಸ್ತ್ರಸಿದ್ಧಾಂತಗಳನ್ನು (ಅಂತೇ ಸಿದ್ಧಸ್ತು ಸಿದ್ಧಾಂತಃ) ತಿಳಿದಿರುವ, ಕವಿಯಾಗಿರುವ, ಕೇಳುವವರ ಸಂಶಯವನ್ನು ಪರಿಹರಿಸಬಲ್ಲ, ಆಲಸ್ಯವಿಲ್ಲದೆ ವ್ಯಾಖ್ಯಾನ ಮಾಡುವ ಸಾಮರ್ಥ್ಯವುಳ್ಳ, ಬುದ್ಧಿವಂತನಾದ, ಲೋಭವಿಲ್ಲದ, ಅಹಂಕಾರವಿಲ್ಲದ, ಶಬ್ದರೂಪದಲ್ಲಿರುವ ವೇದಗಳನ್ನೂ ಅವುಗಳ ಅರ್ಥಗಳನ್ನೂ ತಿಳಿದಿರುವ, ಸರಿಯಾಗಿ ಪದಚ್ಛೇದ ಮಾಡಲು ತಿಳಿದಿರುವ, ಪದಗಳ ಅರ್ಥಗಳನ್ನು ಬಲ್ಲ, ವಾಕ್ಯಾರ್ಥ ವಾದ-ವಿವಾದದಲ್ಲಿ ಕುಶಲಿಯಾದ ಮತ್ತು ಸಮರ್ಥನಾದ, ಪೂರ್ವ ಪಕ್ಷ ಮತ್ತು ಅದರ ಉತ್ತರ ಇವೆರಡರ ಭಾವವನ್ನು ಸರಿಯಾಗಿ ಬಲ್ಲ, ಸಂಶಯವಿಲ್ಲದ ಭಗವದ್ಧರ್ಮಗಳನ್ನು ತಿಳಿದಿರುವ, ಶಾಂತರಾಗಿರುವ, ಬೇರೆಯವರಿಗಾಗಿ ಯಾರ ಹೃದಯವು ಕರಗುವುದೋ ಅಂಥಹವರ ಕ್ಷೇತ್ರವು ಧನ್ಯವು. ಅದರ ವೈಭವದಿಂದ ಕೂಡಿದ ಮಹಾತ್ಮ್ಯೆಯನ್ನು ಹೊಂದಿರುವ. ಇಂತಹಗುಣಗಳಿಂದ ಕೂಡಿದ ವ್ಯಕ್ತಿಗಳು ಎಲ್ಲಿ ಸಿಗುವರೋ ಅಂತಹ ಕ್ಷೇತ್ರವು ಧನ್ಯವು. ಇಂತಹ ವ್ಯಕ್ತಿಗಳು ಯಾರಿಗೆ ಲಭ್ಯರೋ ಅವರೂ ಧನ್ಯರು. ॥ ೩೮-೪೧ ॥ ಬ್ರಹ್ಮನ ಪುತ್ರರಾದ ಸನಕಾದಿಗಳೂ ಧನ್ಯರು ಏಕೆಂದರೆ ಅವರಿಗೆ ಸಾಕ್ಷಾತ್

ಶೇಷದೇವರೇ ಉಪದೇಶಕರಾದ ವ್ಯಕ್ತಿಗಳಾಗಿದ್ದಾರೆ. ಇನ್ನು ಶ್ರೀಮನ್ನಾರಾಯಣನ ಅವತಾರಿಗಳಾದ ಶ್ರೀ ವ್ಯಾಸಭಗವಾನರನ್ನು ಗುರುಗಳಾಗಿ ಪಡೆದಿರುವ ತಾವೂ ಧನ್ಯರು. ಈಗ ನಿಮ್ಮಂತಹ ವ್ಯಕ್ತಿಗಳು ಸಿಕ್ಕಿರುವ ನಾವೂ ಧನ್ಯರು. ನಿಮ್ಮ ಉಪದೇಶದ ಶ್ರವಣಮಾತ್ರದಿಂದಲೇ ಮನಸ್ಸಿನ ಸಂಶಯಗಳೆಲ್ಲವೂ ಪರಿಹಾರವಾಗುವುದು. ॥ ೪೨ - ೪೩ ॥ ರಹಸ್ಯಗಳೊಡನೆ ಪ್ರಯಾಗ ಮಹಾತ್ಮ್ಯೆಯನ್ನು ತಮ್ಮಿಂದ ಯಾವ ಯಾವ ರಹಸ್ಯಗಳು ನಾವು ತಿಳಿದುಕೊಂಡೆವೋ ಅವುಗಳೆಲ್ಲಾ ಶ್ರುತಿ-ಸ್ಮೃತಿಗಳ ಆಧಾರಗಳ ದಶೆಯಿಂದ ಚೆನ್ನಾಗಿ ನಿಶ್ಚಿಯಿಸಲ್ಪಟ್ಟವೆ. ॥ ೪೪ ॥ ಈ ಕ್ಷೇತ್ರವು ಜಗತ್ತಿನಲ್ಲಿಯೇ ಅತಿ ಶ್ರೇಷ್ಠವಾದುದು ಮತ್ತು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ವಿಧಗಳಾದ ಪುರುಷಾರ್ಥಗಳನ್ನೂ ಕೊಡತಕ್ಕದ್ದು. ಇದರಿಂದ ಜನ್ಮಜನ್ಮಾಂತರಗಳೂ ಸ್ಮರಣೆಗೆ ಬಾರದಂತೆ ನಶಿಸಿಹೋಗುತ್ತವೆ. ॥ ೪೫ ॥ ಹಿಂದೆ ನಡೆದಿರುವ ಕಥೆಗಳನ್ನು ಹೇಳುವದರಲ್ಲಿ ತಾವು ಮಹಾಕುಶಲರು ಮತ್ತು ಸಂಶಯಗಳನ್ನು ತೊಳೆದುಹಾಕುವವರು. ಈ ತೀರ್ಥನಾಯಕ ವರ್ಣನೆಯಿಂದ ನಮ್ಮ ಸಂಶಯವೆಲ್ಲವೂ ಪರಿಹಾರವಾಗಿದೆ. ॥ ೪೬ ॥ ನಿಮ್ಮಿಂದ ಮೊದಲೇ ಈ ಮಹಾತ್ಮ್ಯೆಯ ಶ್ರವಣದ ವಿಧಿವಿಧಾನಗಳು ಕೇಳಲ್ಪಟ್ಟಿವೆ. ಈಗ ಈ ಮಹಾತ್ಮ್ಯೆಯ ಶ್ರವಣದ ಫಲವನ್ನು ಹೇಗೆ ಇದೆಯೋ ಹಾಗೆಯೇ ಹೇಳಿರಿ ॥ ೪೭ ॥

ಸೂತ ಉವಾಚ—

ಯ ಇದಂ ಶೃಣುಯಾದ್ಭಕ್ತ್ಯಾ ತೀರ್ಥಮಾಹಾತ್ಮ್ಯಮುತ್ತಮಮ್ ।
ಸರ್ವಾನ್ಕಾಮಾನವಾಪ್ನೋತಿ ಇಹ ಲೋಕೇ ಪರತ್ರ ಚ ॥ ೪೮ ॥
ಇದಂ ಪ್ರಯಾಗಮಾಹಾತ್ಮ್ಯಮೇಕಸಂಸ್ಥೇನ ಚೇತಸಾ ।
ಅನ್ಯತ್ರ ಶೃಣುಯಾತ್ತಸ್ಯ ವೇಣೀಸ್ನಾನಫಲಂ ಭವೇತ್ ॥ ೪೯ ॥
ಮಾಘೇ ಶೃಣ್ವಂತಿ ಯೇ ಭಕ್ತ್ಯಾ ತ್ರಿವೇಣ್ಯಾಂ ಯಾತ್ರಿಕಾ ಜನಾಃ ।
ತೀರ್ಥರಾಜಸ್ಯ ಮಾಹಾತ್ಮ್ಯಂ ಮಾಘಮಾಹಾತ್ಮ್ಯಮೇವ ಚ ॥ ೫೦ ॥
ತೇಷಾಂ ಯಾತ್ರಾಫಲಂ ಪೂರ್ಣಂ ಮಾಘಸ್ನಾನಫಲಂ ತಥಾ ।
ಮಾಧವಃ ಕುರುತೇ ಪ್ರೀತ್ಯಾ ದದಾತ್ಯಂತೇ ಪದಂ ಸ್ವಕಮ್ ॥ ೫೧ ॥

ಶ್ರೀ ಸೂತರು ಹೇಳಿದರು—

ಯಾರು ಈ ಪ್ರಯಾಮಮಹಾತ್ಮ್ಯೆಯನ್ನು ಭಕ್ತಿಯಿಂದ ಕೇಳುತ್ತಾರೋ ಅವರು ಈ ಭೂಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಎಲ್ಲಾ ಅಪೇಕ್ಷೆಗಳನ್ನು ಪಡೆಯುವರು. ॥ ೪೮ ॥ ಬೇರೆ ಬೇರೆ ಜಾಗಗಳಲ್ಲಿರುವವರು ಈ ಪ್ರಯಾಗ ಮಹಾತ್ಮ್ಯೆಯನ್ನು ಒಂದೇ ರೀತಿಯಾದ ನೆಟ್ಟ ಮನಸ್ಸಿನಿಂದ ಕೇಳುವರೋ ಅಂಥವರಿಗೆ ವೇಣೀ ಸ್ನಾನದ ಫಲವು ದೊರಕುವುದು. ॥ ೪೯ ॥ ತ್ರಿವೇಣಿಯಲ್ಲಿ ಯಾವ ಯಾತ್ರಿಕನು ಈ ಮಹಾತ್ಮ್ಯೆಯನ್ನು ಶ್ರವಣಮಾಡುವನೋ, ಮತ್ತು ಇದರ ಜೊತೆಗೆ ಮಾಘಮಾಸದ ಮಹಾತ್ಮ್ಯೆಯನ್ನು ಕೇಳುವನೋ ಅಂಥವನಿಗೆ ಶ್ರೀ ಮಾಧವದೇವರು ಪರಮ ಪ್ರೀತಿಯಿಂದ ಯಾತ್ರೆಯ ಸಂಪೂರ್ಣ ಫಲವನ್ನು ಕೊಡುವರು ಮತ್ತು ಅವರಿಗೆ ತನ್ನ ವೈಕುಂಠಾದಿಲೋಕಗಳನ್ನೂ ಕೊಡುವರು ॥ ೫೦-೫೧ ॥

ವ್ಯಾಸ ಉವಾಚ—

ಇತಿ ಸೂತವಚಃ ಶ್ರುತ್ವಾ ಪ್ರಹೃಷ್ಟಾಃ ಶೌನಕಾದಯಃ ।
ಸೂತಮಾಮಂತ್ರ್ಯ ಸರ್ವೇಽಪಿ ತೀರ್ಥರಾಜೇ ಸಮಾಗತಾಃ ॥ ೫೨ ॥
ತತ್ರ ಸ್ನಾತ್ವಾ ವಿಧಾನೇನ ಸುರನದ್ಯೋಸ್ಸಮಾಗಮೇ ।
ದೃಷ್ಟ್ವಾಕ್ಷಯ್ಯವಟಂ ಕ್ಷೇತ್ರಂ ಮಾಧವಸ್ಯಾಖಿಲಾರ್ಥದಮ್ ॥ ೫೩ ॥
ಯಥಾಶ್ರುತಂ ತತೋ ಲಕ್ಷಗುಣಂ ದೃಷ್ಟ್ವಾತಿಹರ್ಷಿತಾಃ ।
ನಾನ್ಯತ್ರಿಭುವನೇಽಸ್ತ್ಯೇವಮಿತಿ ನಿಶ್ಚಿತ್ಯ ತಸ್ಥಿರೇ ॥ ೫೪ ॥
ತಸ್ಯಾಸ್ಯ ತೀರ್ಥರಾಜಸ್ಯ ಮಾಹಾತ್ಮ್ಯಂ ವರ್ಣಿತಂ ಮಯಾ ।
ಶೃಣೋತಿ ಪರಯಾ ಭಕ್ತ್ಯಾ ಯಃ ಸ ಮುಚ್ಯೇತ ಕಿಲ್ಬಿಷಾತ್ ॥ ೫೫ ॥
ಅಜ್ಞಾತ್ವಾ ತೀರ್ಥಮಾಹಾತ್ಮ್ಯಂ ನ ತೀರ್ಥಫಲಮಶ್ನುತೇ ।
ಅತಃ ಶ್ರೋತವ್ಯಮೇವೈತನ್ನರೈಃ ತೀರ್ಥಫಲೇಚ್ಛುಭಿಃ ॥ ೫೬ ॥
ಶ್ರುತ್ವಾ ಪ್ರಯಾಗಮಾಹಾತ್ಮ್ಯಂ ಬ್ರಾಹ್ಮಣಾನ್ಭೋಜಯೇಚ್ಛತಮ್ ।
ಭಕ್ತಿಮಾನಥವಾ ಶಕ್ತ್ಯಾ ಸಮಗ್ರಂ ಪ್ರಾಪ್ನುಯಾತ್ಫಲಮ್ ॥ ೫೭ ॥
ವಾಚಕಂ ಪೂಜಯೇದ್ಭಕ್ತ್ಯಾ ವಸ್ತ್ರಾಲಂಕಾರಸಾಧನೈಃ ।
ವಿತ್ತಶಾಠ್ಯಂ ನ ಕುರ್ವೀತ ನಾನ್ಯಥಾ ಫಲಭಾಗ್ಭವೇತ್ ॥ ೫೮ ॥
ಅಭಾವೇ ಫಲಮಾಪ್ನೋತಿ ಜಲೇನ ತುಲಸೀದಲೈಃ ।
ಭಕ್ತ್ಯಾ ಪ್ರಣಾಮತಶ್ಚಾಪಿ ಸರ್ವವೇತ್ತಾ ಯತೋ ಹರಿಃ ॥ ೫೯ ॥
ವಾಚಕಾಯಾಥವಾ ದೇಯಾ ಯಥಾಶಕ್ತ್ಯಾ ಪಯಸ್ವಿನೀ ।
ಗೌಸ್ತೇನ ಸಕಲಂ ದತ್ತಂ ಸಾ ಯತಃ ಸರ್ವತೋಽಧಿಕಾ ॥ ೬೦ ॥
ವಾಚಕೇ ತೋಷಮಾಪನ್ನೇ ಸಂತುಷ್ಟೋ ಮಾಧವಃ ಸ್ವಯಮ್ ।
ತಸ್ಮಿಂಸ್ತುಷ್ಟೇ ಜಗನ್ನಾಥೇ ಕಿಮಲಭ್ಯಂ ಜಗತ್ತ್ರಯೇ ॥ ೬೧ ॥
ಮಾಹಾತ್ಮ್ಯಂ ಪುಸ್ತಕಂ ಯತ್ರ ತೀರ್ಥರಾಜಸ್ಯ ತಿಷ್ಠತಿ ।
ತತ್ರ ಗಂಗಾದಯೋ ನದ್ಯೋ ದೇವತಾ ನಿವಸಂತಿ ಹಿ ॥ ೬೨ ॥
ಯ ಇದಂ ಪ್ರತ್ಯಹಂ ಭಕ್ತ್ಯಾ ಶ್ರಾವಯೇಚ್ಛೃಣುಯಾದಪಿ ।
ಮಾನವೋ ಯತ್ರ ಕುತ್ರಾಪಿ ವೇಣೀಸ್ನಾನಫಲಂ ಲಭೇತ್ ॥ ೬೩ ॥
ಆದಾವಾದಿಪರಾಶರಾತ್ಮಜವರೇಣೋಕ್ತಸ್ತಥಾ ನೈಮಿಷೇ
ಸೂತೇನೋಕ್ತ ಋಷಿಭ್ಯ ಆದರಭರಾಚ್ಛೇಷೇಣ ವಿಸ್ತಾರಿತಾ ।
ಪಶ್ಚಾದ್ಬ್ರಹ್ಮಸುತೇಭ್ಯ ಆದಿಮಹಿಮಾ ಯಸ್ತೀರ್ಥರಾಜಸ್ಯ ತಂ
ಶ್ರುತ್ವಾಪ್ನೋತಿ ನಿಜೇಪ್ಸಿತಂ ನರವರೋ ನಾನಾವಿಧಂ ನಿಶ್ಚಿತಮ್ ॥ ೬೪ ॥

**ಗಂಗಾಯೈ ಯಮುನಾಯೈವ ಸರಸ್ವತ್ಯೈ ವಟಾಯ ಚ ।**
**ಸೋಮೇಶ್ವರಾಯ ಶೇಷಾಯ ಮಾಧವಾಯ ನಮೋ ನಮಃ ॥ ೬೫ ॥**

**॥ ಇತಿ ಶತತಮೋಽಧ್ಯಾಯಃ ॥**

**ವ್ಯಾಸರು ಹೇಳಿದರು—**

ಈ ರೀತಿಯಾದ ಸೂತರ ಮಾತುಗಳನ್ನು ಕೇಳಿದ ಶೌನಕಾದಿಗಳು ಅತಿ ಸಂತಸಗೊಂಡು ಸೂತರನ್ನೂ ಆಹ್ವಾನಿಸಿ ಎಲ್ಲರೂ ಸೇರಿ ತೀರ್ಥರಾಜನಾದ ಪ್ರಯಾಗಕ್ಕೆ ಬಂದರು. ॥ ೫೨ ॥ ಅಲ್ಲಿ ದೇವನದಿಗಳೆರಡರ ಸಂಗಮದಲ್ಲಿ ವಿಧ್ಯುಕ್ತವಾಗಿ ಸ್ನಾನ ಮಾಡಿ ಎಲ್ಲ ಅಪೇಕ್ಷೆಗಳನ್ನೂ ಈಡೇರಿಸತಕ್ಕ ಶ್ರೀ ಮಾಧವನ ಕ್ಷೇತ್ರವಾದ ಅಕ್ಷಯ ವಟವನ್ನು ನೋಡಿದರು. ॥ ೫೩ ॥ ತಾವು ಶ್ರವಣ ಮಾಡಿದ್ದಕ್ಕಿಂತ ಹೆಚ್ಚಿನ ಲಕ್ಷಗುಣಗಳುಳ್ಳ ಆ ಕ್ಷೇತ್ರವನ್ನು ನೋಡಿ ಅತ್ಯಂತ ಹರ್ಷಗೊಂಡು ಈ ರೀತಿಯಾದ ತೀರ್ಥವು ಹದಿನಾಲ್ಕು ಲೋಕಗಳಲ್ಲಿ ಎಲ್ಲಿಯೂ ಇಲ್ಲವೆಂದು ನಿಶ್ಚಯಿಸಿ ಅಲ್ಲಿಯೇ ನೆಲಸಿದರು. ॥ ೫೪ ॥ ನಾನು ವರ್ಣಿಸಿರುವ ಈ ಕ್ಷೇತ್ರದ ಮಹಾತ್ಮ್ಯೆಯನ್ನು ಪರಮಭಕ್ತಿಯಿಂದ ಶ್ರವಣ ಮಾಡಿದವರು ಸಮಸ್ತ ಪಾಪಗಳಿಂದ ವಿಮುಕ್ತರಾಗುತ್ತಾರೆ. ॥ ೫೫ ॥ ತೀರ್ಥದ ಮಹಾತ್ಮ್ಯೆಯನ್ನು ತಿಳಿಯದಿದ್ದರೆ ಈ ತೀರ್ಥಯಾತ್ರೆಯ ಪೂರ್ಣಫಲವು ಲಭ್ಯವಾಗುವುದಿಲ್ಲ. ಆದ್ದರಿಂದ ಈ ತೀರ್ಥಯಾತ್ರೆಯ ಫಲದ ಅಪೇಕ್ಷೆ ಇರುವವರೆಲ್ಲರೂ ಈ ಪುರಾಣವನ್ನು ಕೇಳಬೇಕು. ॥ ೫೬ ॥ ಈ ಪ್ರಯಾಗ ಮಹಾತ್ಮ್ಯೆಯನ್ನು ಶ್ರವಣಮಾಡಿದ ನಂತರ ನೂರು ಮಂದಿ ಬ್ರಾಹ್ಮಣರುಗಳಿಗಾದರೂ ಭೋಜನವನ್ನು ಮಾಡಿಸಬೇಕು ಅಥವಾ ಮಾಧವನಲ್ಲಿ ಸಮರ್ಪಣಾಬುದ್ಧಿಯಿಂದ ಶಕ್ತ್ಯಾನುಸಾರ ಭೋಜನ ಮಾಡಿಸಿದರೂ ಪೂರ್ಣವಾದ ಫಲವು ಲಭ್ಯವಾಗುವುದು. ॥ ೫೭ ॥ ಈ ಗ್ರಂಥವನ್ನು ವಾಚಿಸುವರನ್ನು ಹಣದ ಕಾರ್ಪಣ್ಯವನ್ನು ತೋರದೇ ವಸ್ತ್ರಾದಿ ಅಲಂಕಾರಗಳಿಂದ ಪೂಜಿಸಬೇಕು. ಇಲ್ಲದಿದ್ದರೆ ಫಲವು ಲಭ್ಯವಾಗುವುದಿಲ್ಲ. ॥ ೫೮ ॥ ಧನದ ಅಭಾವವಿದ್ದವರು ಜಲದಿಂದ ಪಾದಪ್ರಕ್ಷಾಳನೆ ಮಾಡಿ ಒಂದು ತುಳಸೀದಳವನ್ನು ಭಕ್ತಿಯಿಂದ ಸಮರ್ಪಿಸಿ ನಮಿಸಿದರೂ ಸರ್ವಾಂತರ್ಯಾಮಿಯಾದ ಶ್ರೀ ಮಾಧವನು ಯಾತ್ರೆಯ ಫಲವನ್ನು ಕೊಡುವನು. ॥ ೫೯ ॥ ಅಥವಾ ವಾಚಕರಿಗೆ ಯಥಾಶಕ್ತಿ ಹಾಲುಕರೆಯುವ ಆಕಳನ್ನಾದರೂ ದಾನಮಾಡಬೇಕು. ಏತಕ್ಕೆಂದರೆ ಆಕಳ ದಾನದಿಂದ ಸರ್ವಸ್ವವನ್ನೂ ದಾನಮಾಡಿದಂತೆಯೇ ಸರಿ. ॥ ೬೦ ॥ ವಾಚಕನು ಸಂತುಷ್ಟನಾದರೆ ಮಾಧವನೇ ಸಂತುಷ್ಟನಾಗುವನು. ಜಗತ್ತಿಗೇ ಸ್ವಾಮಿಯಾದ ಅವನು ತುಷ್ಟನಾದಮೇಲೆ ಇದಕ್ಕೆ ಮಿಗಿಲಾದುದು ಈ ಮೂರು ಲೋಕವಲ್ಲಿ ಏನು ತಾನೇ ಇದೆ? ॥ ೬೧ ॥ ಈ ಪ್ರಯಾಗ ಮಹಾತ್ಮ್ಯೆಯ ಗ್ರಂಥವು ಎಲ್ಲಿ ಇದೆಯೋ ಅಲ್ಲಿ ಗಂಗಾದಿನದಿಗಳೂ ದೇವತೆಗಳೂ ಇರುವವರು. ಇದು ಖಂಡಿತವು. ॥ ೬೨ ॥ ಪ್ರತಿದಿನವೂ ಯಾರು ಈ ಗ್ರಂಥವನ್ನು ಪುರಾಣಪ್ರವಚನ ರೂಪದಲ್ಲಿ ಶ್ರವಣ ಮಾಡಿಸುವರೋ ಮತ್ತು ಯಾರು ಶ್ರವಣ ಮಾಡುವರೋ, ಅವರಿಗೆ ವೇಣೀ ಸ್ನಾನದ ಫಲವು ಲಭ್ಯವಾಗುವುದು. ॥ ೬೩ ॥ ಪ್ರಾರಂಭದಲ್ಲಿ ಪರಾಶರಪುತ್ರರಾದ ಶ್ರೀ ವೇದವ್ಯಾಸರಿಂದ ಈ ಪುರಾಣವು ಹೇಳಲ್ಪಟ್ಟಿತ್ತು. ಇದನ್ನೇ ನಂತರ ಶ್ರೀ ಆದಿಶೇಷದೇವರು ಬ್ರಹ್ಮಸುತರಾದ ಸನಕಾದಿಗಳಿಗೆ ವಿಸ್ತಾರ ಮಾಡಿ ಹೇಳಿದರು. ಅನಂತರ ಈ ಸನಕಾದಿಗಳು ಈ ಮಹಾತ್ಮ್ಯೆಯನ್ನು ಹದಿನಾಲ್ಕು ಲೋಕಗಳಲ್ಲಿಯೂ ಪ್ರಸಿದ್ಧಿಪಡಿಸಿದರು. ಶ್ರೀ ಸೂತಪುರಾಣಿಕರು ನೈಮಿಷಾರಣ್ಯದಲ್ಲಿ ಇದನ್ನು ಶ್ರೀ

ಶೌನಕಾದಿಗಳಿಗೆ ಶ್ರವಣ ಮಾಡಿಸಿದರು. ನಂತರ ಅಂತಹ ಈ ತೀರ್ಥರಾಜನ ಮಹಾತ್ಮ್ಯೆಯನ್ನು ಶ್ರವಣಮಾಡಿದವರು ನಾನಾ ವಿಧವಾದ ತಮ್ಮ ಮನೋಭೀಷ್ಟಗಳನ್ನೆಲ್ಲಾ ನಿಶ್ಚಯವಾಗಿಯೂ ಪಡೆಯುವರು. ॥ ೬೪ ॥ ಶ್ರೀ ಗಂಗಾದೇವಿಗೂ, ಶ್ರೀ ಯಮುನಾದೇವಿಗೂ, ಶ್ರೀ ಸರಸ್ವತೀ ದೇವಿಯರಿಗೂ, ಅಕ್ಷಯ ವಟವೃಕ್ಷಕ್ಕೂ, ಸೋಮೇಶ್ವರನಿಗೂ, ಶೇಷದೇವರಿಗೂ ಮತ್ತು ಶ್ರೀ ಲಕ್ಷ್ಮೀಮಾಧವನಿಗೂ ಅನಂತ ನಮಸ್ಕಾರಗಳು ಅನಂತಾನಂತ ನಮಸ್ಕಾರಗಳು. ॥ ೬೫ ॥

॥ ನೂರನೆಯ ಅಧ್ಯಾಯವು ಸಮಾಪ್ತವಾಯಿತು ॥

He is a technologist by profession but a scholar and teacher of Sanskrit by passion. His father Vidwan Shri Sarovara Bheemasenacharya, under whom the author had his initiation into the rich learning and lore of Sanskrit, was Vidwan of the Mysore palace. Shri Krishnamurthy despite his professional pre- occupations as an engineer working with well-known textile mills in India, retained his passion for the classical Sanskrit studies. He is a born and gifted teacher, as all the beneficiaries of his generosity know.

As a scholar Shri Krishnamurthy's sincerity and insistence on thoroughness, on accuracy and on pristine purity are matched only by his commitment to tradition. This work reflects his deep dedication to finer values and sentiments of a great civilization to which Indian life should owe its savor and to the unswerving faith that the gift of life on this earth is a sacred journey in the exploration of the moral and spiritual dimension of the human personality.

The beautiful words and imagery at the end of Dr. Panchamukhi's elevating foreword to this work is a fitting tribute to the enduring value of Shri Krishnamuthy's scholarly contribution.

**M. N. Venkatachalaiah**
Chief Justice of Supreme Court (Rtd.)

ಪದ್ಮ ಪುರಾಣದ ಪಾತಾಳಖಂಡದಲ್ಲಿ ಬಂದ ಪ್ರಯಾಗಮಾಹಾತ್ಮ್ಯ ಎಂಬ ಭಾಗವು ಅನೇಕ ಧರ್ಮಾಚರಣೆಗಳನ್ನು ತಿಳಿಸುವ ಒಂದು ಆಕರ ಗ್ರಂಥವಾಗಿದೆ. ಆಸ್ತಿಕ ಸಜ್ಜನರ ಉಪಯೋಗಕ್ಕಾಗಿ ಮಾಡಿರುವ ಈ ಕನ್ನಡಾನುವಾದವು ಸುಲಭವೂ, ಶಾಸ್ತ್ರಸಮ್ಮತವೂ ಆಗಿದೆ. ಅನುವಾದವು ಮೂಲಶ್ಲೋಕಗಳ ಅಭಿಪ್ರಾಯವನ್ನು ಸ್ವಲ್ಪವೂ ತಪ್ಪದೆ, ಬದಲಿಸದೆ ಎಲ್ಲ ಮುಖ್ಯವಾದ ವಿಷಯಗಳ, ವೇದಾಂತ ಪ್ರಮೇಯಗಳ ಧರ್ಮಸೂಕ್ಷ್ಮಗಳ ತಿಳುವಳಿಕೆ ಉಂಟಾಗುವಂತಿದೆ.

**- ಪ್ರೊ॥ ಕೆ.ಟಿ. ಪಾಂಡುರಂಗೀ**

ಶೃತಿ, ಸ್ಮೃತಿ, ಪುರಾಣ, ಮಹಾಭಾರತಗಳಲ್ಲಿ ವರ್ಣಿತವಾದ ಪ್ರಯಾಗದ ಮಹಿಮೆಯನ್ನು ಪದ್ಮಪುರಾಣ ಪಾತಾಳ ಖಂಡದಲ್ಲಿ ನೂರು ಅಧ್ಯಾಯಗಳಲ್ಲಿ ಸುಂದರ ಆಖ್ಯಾನೋಪಾಖ್ಯಾನಗಳೊಂದಿಗೆ ವರ್ಣಿಸಲಾಗಿದ್ದು, ಇದು ವಿಶ್ವಕೋಶದಂತೆ ಪರಮೋಪಕಾರಕವಾಗಿದೆ. ಇಂಥ ಅಪೂರ್ವವಾದ ಗ್ರಂಥವೇ ಅಲಭ್ಯವಾಗಿರುವಾಗ, ಅದನ್ನು ಸಂಪಾದಿಸಿ, ಸುಂದರವಾದ ಕನ್ನಡ ಅನುವಾದ, ವಿವರಣೆಗಳೊಂದಿಗೆ ಮುದ್ರಿಸಿ ನಮ್ಮ ಕೈಗೆ ನೀಡಿದ್ದಾರೆ ಶ್ರೀ ಸರೋವರ ಕೃಷ್ಣಮೂರ್ತಿಗಳು. ಅಲ್ಲಲ್ಲಿ ಲೇಖಕರು ನೀಡಿರುವ ವಿವರಣೆಗಳು ಅತ್ಯಾವಶ್ಯಕ ಹಾಗೂ ಮಹತ್ವಪೂರ್ಣವಾಗಿದೆ. ಈ ಗ್ರಂಥದ ಅಧ್ಯಯನದಿಂದ ಪ್ರಯಾಗಯಾತ್ರಾ ವಿಧಿ ಜ್ಞಾನಪೂರ್ವಕವಾಗಿ ನಡೆದಂತಾಗುತ್ತದೆ.

**- ಕೆ. ಹಯವದನ ಪುರಾಣಿಕ**

ಮೂರು ಲೋಕಗಳಲ್ಲೂ ಇರುವ ಮೂರೂವರೆ ಕೋಟಿ ತೀರ್ಥಗಳಲ್ಲೆಲ್ಲಾ ಪ್ರಯಾಗಕ್ಕೆ ರಾಜಮಾನ್ಯತ್ವ ಹಾಗೂ ದಾನಶೂರತ್ವವಿದೆ ಎಂಬುದು ಈ ಪ್ರಯಾಗ ಮಾಹಾತ್ಮ್ಯೆಯಿಂದ ತಿಳಿದುಬರುತ್ತದೆ. ಈ ಪುರಾಣದ ಉದ್ದಗಲಕ್ಕೂ ಸರ್ವಕೋನ ಗಳಿಂದಲೂ ಸರ್ವವಿಧದಿಂದಲೂ ವಿಷ್ಣು ಸರ್ವೋತ್ತಮತ್ವವನ್ನು ಸಾರುವ ಉದ್ದೇಶ ಸಫಲವಾಗಿದೆ. ಸರೋವರ ಕೃಷ್ಣಮೂರ್ತಿಯವರು ಆಧ್ಯಾತ್ಮಿಕದಲ್ಲಿ ಮತ್ತು ಆಚಾರ್ಯರ ಸಿದ್ಧಾಂತದಲ್ಲಿ ಅತ್ಯಂತ ಆಸಕ್ತಿ, ಶ್ರದ್ಧೆ ಮತ್ತು ನಿಷ್ಠೆಗಳೊಡನೆ ಅತಿಶಯವಾದ ಭಕ್ತಿ ಹೊಂದಿ, ಈ ಉತ್ತಮ ಅನುವಾದವನ್ನು ಮಾಡಿರುತ್ತಾರೆ. ಅವರ ಈ ಪ್ರಯತ್ನ ಶ್ಲಾಘನೀಯ.

**-ಕೂಸನೂರು ರಾಮಾಚಾರ್ಯ**

ಪ್ರಯಾಗಮಾಹಾತ್ಮ್ಯ ಗ್ರಂಥವನ್ನು ನಾನು ಆಮೂಲಾಗ್ರವಾಗಿ ಓದಿ ಸಂತೋಷ ಪಟ್ಟಿದ್ದೇನೆ. ಸಂದೇಹಾಸ್ಪದವಾದ ಸಂದರ್ಭಗಳಲ್ಲಿ ಶ್ರೀ ಕೃಷ್ಣಮೂರ್ತಿಯವರು ಸಮಾಧಾನಕರವಾದ ವಿವರಣೆಗಳನ್ನು ಒದಗಿಸಿ ಮಹೋಪಕಾರ ಮಾಡಿದ್ದಾರೆ. ಶ್ರೀ ಕೃಷ್ಣಮೂರ್ತಿಯವರ ಸಾಹಿತ್ಯ, ವ್ಯಾಕರಣ, ವೇದಾಂತಜ್ಞಾನ, ದೃಷ್ಟಿವೈಶಾಲ್ಯ ಮತ್ತು ಹೃದಯಂಗಮ ನಿರೂಪಣಾಶಕ್ತಿ ಈ ಗ್ರಂಥದ ಅನುವಾದದಿಂದ ವ್ಯಕ್ತವಾಗುತ್ತದೆ.

**- ಗೌಡಗೆರೆ ಕೃಷ್ಣಾಚಾರ್ಯ**